

# RIG-VEDA SAMHITA

# ಋಗ್ವೇದಸಂಹಿತಾ

ಭಾಗ ೮

ಪ್ರಥಮಾಷ್ಟಕದಲ್ಲಿ ೮ ನೇ ಅಧ್ಯಾಯವು

ಅನುವಾದಕರು :

ಆಸ್ಥಾನ ಮಹಾವಿದ್ವಾನ್,

ಹೆಚ್. ಪಿ. ವೆಂಕಟರಾವ್.

ಶ್ರೀ [illegible] ಪ್ರೆಸ್,

ಮೈಸೂರು


ಋಗ್ವೇದಸಂಹಿತಾ
ಭಾಗ— ೮
ಪ್ರಥಮಾಷ್ಟಕದಲ್ಲಿ ಏಳನೆಯ ಅಧ್ಯಾಯವು
ಪ್ರಥಮ ಮಂಡಲದ ಸೂಕ್ತಗಳು— ೯೫_೧೧೨

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೮



# RIG-VEDA

ಸಾ ಯ ಣ ಭಾ ಷ್ಯ ಸ ಮೇ ತಾ

# ಋಗ್ವೇದ ಸಂಹಿತಾ

(ಕರ್ಣಾಟಕ ಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ—೮

ಪ್ರಥಮಾಷ್ಟಕದಲ್ಲಿ ಏಳನೆಯ ಅಧ್ಯಾಯವು.

ಪ್ರಥಮ ಮಂಡಲದ ಸೂಕ್ತಗಳು—೯೫-೧೧೨




*Translated with Exhaustive Critical Notes*
*by*

ASTHANA MAHAVIDWAN
H. P. VENKATA RAO.
*Editor.*

*Printed at*
SREE VINAYAK PRINTING WORKS, MYSORE.
1950

Published by the gracious permission of

His Highness

Sri Jayachamarajendra Wadiyar Bahadur,

G.C.B., G.C.S.I., Maharaja of Mysore.



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ
**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ. ಸಿ. ಬಿ., ಜಿ. ಸಿ. ಎಸ್. ಐ. ರವರು.**

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನ ವಿದ್ವನ್ಮಂಡಲಿ

ಅಧ್ಯಕ್ಷರು :

ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಿಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು.**

Translator & Editor :

**ಆಸ್ಥಾನ ಮಹಾವಿದ್ವಾನ್** H. P. **ವೆಂಕಟರಾವ್**

**ಸಹಾಯಕ ವಿದ್ವನ್ಮಂಡಲಿ**

1. **ಬ್ರ॥ ಶ್ರೀ॥ ಜಿ. ವಿಷ್ಣುಮೂರ್ತಿಭಟ್ಟರು,** ವ್ಯಾಕರಣವಿದ್ವಾನ್, ಶ್ರೀಮನ್ಮಹಾರಾಜರವರ ಸಂಸ್ಕೃತಮಹಾಪಾಠಶಾಲಾ, ಮೈಸೂರು.
2. **ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥** H. **ಗಂಗಾಧರಶಾಸ್ತ್ರಿಗಳು,** ಜ್ಯೌತಿಷ ವಿದ್ವಾನ್ ಮತ್ತು ಕರ್ಣಾಟಕ ಭಾಷಾಪಂಡಿತರು,
3. **ಬ್ರ॥ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು,** ಋಗ್ವೇದ ಘನಪಾಠಿಗಳು.
4. **ಬ್ರ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು,** ಶ್ರೌತ ವಿದ್ವಾನ್.
5. **ಬ್ರ॥ ಶ್ರೀ॥ ಹಿಟ್ಟವಳ್ಳಿ ದೇವರಭಟ್ಟರು,** ಮೀಮಾಂಸಾದರ್ಶನ ಪಂಡಿತರು.
6. **ಬ್ರ॥ ಶ್ರೀ॥** G. N. **ಚಕ್ರವರ್ತಿ** M. A.
   Professor of Sanskrit. St. Philomina's College, Mysore.
7. **ಬ್ರ॥ ಶ್ರೀ॥ ವೆಂಕಟರಮಣಾಚಾರ್,** M. A., B. T., ಸಾಹಿತ್ಯವಿದ್ವಾನ್.
8. **ಬ್ರ॥ ಶ್ರೀ॥** S. **ರಂಗನಾಥನ್,** ಸಾಹಿತ್ಯವಿದ್ವಾನ್, ಅರಮನೆ ಸರಸ್ವತೀ ಭಂಡಾರ.
9. **ಬ್ರ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್,** ಸಾಹಿತ್ಯ ವಿದ್ವಾನ್,
   Govt. Oriental Research Institute, Mysore.
10. **ಬ್ರ॥ ಶ್ರೀ॥** S. **ಸೀತಾರಾಮಶಾಸ್ತ್ರಿಗಳು,** ರಿಟೈರ್ಡ್ ಪಂಡಿತರು.
    Govt. Oriental Research Institute, Mysore.



ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು**

ವೇದವಿಮರ್ಶನ ವಿದ್ವನ್ಮಂಡಲಿಯ ಅಧ್ಯಕ್ಷರು

# ಪೀಠಿಕೆ.

ಋಕ್ಸಂಹಿತೆಯ ಈ ಭಾಗದಲ್ಲಿ ಪ್ರಥಮ ಮಂಡಲದ ೯೮ ರಿಂದ ೧೧೫ ರವರೆಗೆ ಕುತ್ಸಋಷಿದೃಷ್ಟ ವಾದ ೧೮ ಸೂಕ್ತಗಳಿರುವುವು. ವೈಶ್ವಾನರಾದಿ ರೂಪಗಳಲ್ಲಿ ಆವಿರ್ಭವಿಸುವ ಅಗ್ನಿ, ಇಂದ್ರ, ವಿಶ್ವೇದೇವತೆಗಳು ಇಂದ್ರಾಗ್ನೀ, ಋಭುಗಳು ಮತ್ತು ಅಶ್ವಿನೀದೇವತೆಗಳು ಈ ಸೂಕ್ತದ ದೇವತೆಗಳು. ಸಂಪತ್ಪ್ರದರಾದ ಈ ದೇವತೆಗಳನ್ನು ಪ್ರೀತಿಸಿ ಪ್ರಾರ್ಥನೆಯನ್ನು ಮಾಡುವುದೇ ಈ ಸೂಕ್ತಗಳ ಮುಖ್ಯಲಕ್ಷಣವಾದರೂ, **ಕುತ್ಸಋಷಿಯ** ಪ್ರಾರ್ಥನೆಯಲ್ಲಿ ಒಂದು ಅತಿಶಯವಾದ ವೈಶಿಷ್ಟ್ಯವಿದೆ. ಉದಾತ್ತವಾದ ಭಾವಗಳನ್ನೊಳಗೊಂಡಿರುವುದೂ, ಉತ್ತಮವಾದ ಶೈಲಿಯಿಂದ ಕೂಡಿರುವುದೂ, ಸುಂದರವೂ ಆದ ಕುತ್ಸನ ಕಾವ್ಯಸೃಷ್ಟಿಯು ಇವೆಲ್ಲವನ್ನೂ ಇನ್ನೂ ಅಧಿಕವಾಗಿ ಪ್ರಕಾಶಿಸುವಂತೆ ಮಾಡುವ ನೈತಿಕವಾದ ಆದರ್ಶದಿಂದ ಕೂಡಿ ಅತ್ಯುತ್ತಮವಾದ ಸ್ಥಾನವನ್ನು ಪಡೆದಿದೆ. ಪಾರ್ಥಿವಜೀವನದ ಪುಷ್ಟಿಗೆ ಸಾಧಕವಾದ ಸಕಲಸಂಪತ್ತುಗಳೂ, ಶಾಂತಿಸಾಧಕವಾದ ಶತ್ರುಪರಾಜಯವೂ ಈ ಸೂಕ್ತಗಳಲ್ಲಿರುವ ಪ್ರಾರ್ಥನೆಯ ಲಕ್ಷ್ಯವಾದರೂ ಸಹ ದೈವದತ್ತವಾದ ಆ ಸಕಲಸಂಪತ್ತುಗಳೂ ನೈತಿಕವಾದ ಶುದ್ಧಿಯನ್ನು ಹೊಂದಿರಬೇಕು. ಆ ಸಂಪತ್ತನ್ನು ಪಡೆಯಲು ಯಜ್ಞಕರ್ತನು ಯಜ್ಞಯಾಗಾದಿಕರ್ಮಗಳನ್ನು ಅನುಷ್ಠಾನಮಾಡುತ್ತಾ ದೈವಾನುಗ್ರಹಕ್ಕೆ ಅರ್ಹನಾಗಿರಬೇಕು. ಈ ಅರ್ಹತೆಗೆ ಸಾಹಾಯ್ಯಕವಾದ ಸನ್ಮಾರ್ಗಪ್ರವರ್ತನೆಗೆ ದೇವತೆಗಳ ಮಾರ್ಗದರ್ಶಿತ್ವವಿರಬೇಕು ಎಂಬ ಧ್ಯೇಯಗಳು ಪ್ರತಿಯೊಂದು ಸೂಕ್ತದಲ್ಲಿಯೂ ವ್ಯಕ್ತವಾಗಿವೆ. **ಅಪ ನಃ ಶೋಶುಚದಘಂ, ವೈಶ್ವಾನರಸ್ಯ ಸುಮತೌ ಸ್ಯಾಮ, ಅಪರಿಹ್ವೃತಾ ವಾಜಂ ಸನುಯಾಮ, ವರಿವಃ ಸುಗಂ ಕೃಧಿ, ವಿಶ್ವಸ್ಮಾನ್ನೋ ಅಂಹಸೋ ನಿಷ್ಪಿಪರ್ತನ,** ಇತ್ಯಾದಿ ಪ್ರಾರ್ಥನೆಗಳಿಂದ ಪಾಪರಹಿತವಾದ ಜೀವನವನ್ನು ನಡೆಸುವುದಕ್ಕೆ ಅನುಕೂಲವಾದ ಸಂಪತ್ತನ್ನೂ ಮಾರ್ಗದರ್ಶಿತ್ವವನ್ನೂ ಕೊಡಬೇಕೆಂಬುದೇ ಪ್ರಾರ್ಥನೆಯ ಮುಖ್ಯವಾದ ಉದ್ದೇಶವಾಗಿದೆ.

ಪ್ರತಿಯೊಂದು ಸೂಕ್ತದಲ್ಲಿಯೂ ಅಂತರ್ಗತವಾಗಿರುವ ಈ ಪ್ರಾರ್ಥನೆಯೇ ಅಲ್ಲದೆ, **ಉದರ್ಕವೆಂಬ** ಪಾರಿಭಾಷಿಕವಚನದಿಂದ ಪ್ರಸಿದ್ಧವಾದ ಸೂಕ್ತಗಳ ಕೊನೆಯ ಋಕ್ಕುಗಳಲ್ಲೆಲ್ಲಾ ಇದೇ ಪ್ರಾರ್ಥನೆಯು, ಕ್ರಾಂತದರ್ಶಿಯೂ ರಸಋಷಿಯೂ ಆದ ಕುತ್ಸನ ಆಶಯವನ್ನು ವಿಶದಪಡಿಸುತ್ತದೆ. **ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ ಪೃಥಿವೀ ಉತ ದ್ಯೌಃ।** ಮಿತ್ರನೂ, ವರುಣನೂ, ಅದಿತಿಯೂ, ಸಿಂಧುವೂ, ಪೃಥಿವಿಯೂ, ದ್ಯುಲೋಕಾಧಿದೇವತೆಯೂ ಇಂದ್ರಾದಿ ದೇವತೆಗಳಿಂದ ಅನುಗ್ರಹೀತವಾದ ನಮ್ಮ ಸೌಭಾಗ್ಯಸಂಪತ್ತನ್ನು ಬೆಳೆಸಲಿ, ಅದನ್ನು ಪೂಜ್ಯವಾದುದನ್ನಾಗಿ ಮಾಡಲಿ, ಅವು ನಮ್ಮ ಭಾಗಕ್ಕೆ ಶ್ರೇಯಸ್ಸನ್ನುಂಟುಮಾಡುವಂತಾಗಲಿ ಎಂದು ಪ್ರತಿಸೂಕ್ತದ ಕೊನೆಯಲ್ಲಿಯೂ ಸಹ **ಮಿತ್ರಾದಿ** ದೇವತೆಗಳನ್ನುದ್ದೇಶಿಸಿ ಪ್ರಾರ್ಥಿಸಿದೆ. ಈ ಪ್ರಾರ್ಥನೆಯಲ್ಲಿ ಒಂದು ಅಂಶವನ್ನು ಗಮನಿಸಬೇಕಾಗಿದೆ. ಇಂದ್ರಾದಿದೇವತೆಗಳೇ ಸಕಲ ಸಂಪತ್ಪ್ರದರಾಗಿಯೂ, ಶಕ್ತಿದಾತರಾಗಿಯೂ, ಸನ್ಮಾರ್ಗಪ್ರವರ್ತಕರಾಗಿಯೂ ಇರುವುದರಿಂದ ಅವರಿಂದ ದತ್ತವಾದ ಅನ್ನಾದಿಗಳನ್ನು ಪೂಜ್ಯವಾದವನ್ನಾಗಿ ಮಾಡಬೇಕೆಂದು ಮಿತ್ರಾದಿಗಳಿಗೆ ಪುನಃ ಪ್ರಾರ್ಥನೆಯೇತಕ್ಕೆ, ಇದನ್ನು ಈಡೇರಿಸಲು **ಮಿತ್ರಾದಿಗಳ** ವಿಶೇಷಸ್ಥಾನವೇನು ಎಂಬುದನ್ನು ಗಮನಿಸಬೇಕು.

**ಕುತ್ಸೇ ನೋದರ್ಕಾ ಬಹುದೈವತೇಷು ತಥಾ ದ್ವಿದೇವೇಷು ಸಮಾನಧರ್ಮಿಣಃ।**

(ಬೃ. ದೇ. III ೧೨೮)

**ಯೆಸ್ಮೈ ಪುತ್ರಾಸೋ ಅದಿತೇಃ ಪ್ರ ಜೀವಸೇ ಮರ್ತ್ಯಾಯ । ಜ್ಯೋತಿರ್ಯಚ್ಛಂತ್ಯಜಸ್ರಂ ।**
(ಋ. ಸಂ. ೧೦-೧೮೫-೩)

ಇತ್ಯಾದಿ ಋಕ್ಕುಗಳಲ್ಲಿ ಹೇಳಿರುವಂತೆ ಅದಿತಿಪುತ್ರರಾದ ಮಿತ್ರಾದಿಗಳು ಮಾನವರಿಗೆ ಶಾಶ್ವತವಾದ ಪ್ರಕಾಶವನ್ನು ಕೊಡುತ್ತಾರೆ. ಜಗದ್ಧಾತ್ರಿಯಾದ ಅದಿತಿಯು ತನ್ನ ಪುತ್ರರಾದ ಆದಿತ್ಯರೊಡಗೂಡಿ ಬಂದು ಮಾನವರಿಗೆ ಸುಖವನ್ನು ಕೊಡಬೇಕೆಂದು **ಆದಿತ್ಯೈರ್ನೋ ಅದಿತಿಃ ಶರ್ಮ ಯಂಸತ್** । (೧-೧೦೭-೨, ೧೦-೬೬-೩), **ಆದಿತ್ಯಾಂ ಅದಿತಿಂ ಸ್ವಸ್ತಯೇ** (೧೦-೬೩-೫). **ದೇವಾಂ ಆದಿತ್ಯಾಂ ಅದಿತಿಂ ಹವಾಮಹೇ** (೧೦-೬೫-೯) ಇತ್ಯಾದಿ ವಾಕ್ಯಗಳಿಂದ ಪ್ರಾರ್ಥಿಸಿದೆ ಹೀಗೆಯೇ, (ಋ. ಸಂ. ೩-೫೪-೨೦, ೫-೬೯-೩, ೬-೫೧-೫, ೭-೩೫-೬,) ಇತ್ಯಾದ್ಯನೇಕ ಋಕ್ಕುಗಳಲ್ಲಿಯೂ ಸಹ ಇದೇ ವಿಧವಾಗಿ ಆದಿತ್ಯರೊಡಗೂಡಿದ ಅದಿತಿಯು ಪ್ರಾರ್ಥಿತಳಾಗಿದ್ದಾಳೆ. ಆದರೆ ಆದಿತ್ಯರೆಂದರೆ ಯಾವಾಗಲೂ ದ್ವಾದಶಾದಿತ್ಯರೆಂದು ತಿಳಿಯಕೂಡದು. ರಕ್ಷಣಾತ್ಮಕವಾದ ವ್ಯಾಪಾರದಲ್ಲಾಗಲಿ, ಪಾಪಶಮನ ರೂಪವಾದ ವ್ಯಾಪಾರದಲ್ಲಾಗಲಿ **ಮಿತ್ರಾವರುಣರೇ** ಯಾವಾಗಲೂ **ಅದಿತಿಗೆ** ಸಾಕ್ಷಾತ್ಸಹಾಯಕರು.

**ಅದಿತೇ ಮಿತ್ರ ವರುಣೋತ ಮೃಳ ಯದ್ವೋ ವಯಂ ಚಕೃಮಾ ಕಚ್ಚಿದಾಗಃ ।**
(ಋ. ಸಂ. ೨-೨೭-೧೪)

**ಮಿತ್ರೋ ನೋ ಅತ್ರಾದಿತಿರನಾಗಾನ್ತ್ಸವಿತಾ ದೇವೋ ವರುಣಾಯ ವೋಚತ್ ।**
(ಋ. ಸಂ. ೧೦-೧೨-೮)

ಇತ್ಯಾದಿ ಋಕ್ಕುಗಳಲ್ಲೆಲ್ಲಾ **ಮಿತ್ರಾವರುಣರಿಂದೊಡಗೂಡಿದ ಅದಿತಿಯು** ಸಮಸ್ತವಾದ ಪಾಪವನ್ನು ನಾಶಮಾಡಲಿ ಎಂದು ಪ್ರಾರ್ಥಿತಳಾಗಿದ್ದಾಳೆ. ಹೀಗೆಯೇ, **ಅಥಾ ವಯಮಾದಿತ್ಯ ವ್ರತೇ ತವಾನಾಗಸೋ ಅದಿತಯೇ ಸ್ಯಾಮ.** (ಋ. ಸಂ. ೧-೨೪-೧೫), **ಅನಾಗಃಸ್ತ್ವಮದಿತೇ ಸರ್ವತಾತಾ** । (೧-೯೪-೧೫), **ಅನಾಗಾಸ್ತ್ವಂ ನೋ ಅದಿತಿಃ ಕೃಣೋತು** (೧-೧೬೨-೨೨) ಎಂದು ಪಾಪಶಮನವನ್ನುಂಟುಮಾಡುವುದರ ಮೂಲಕ ಆತ್ಮಶುದ್ಧಿಯನ್ನೂ ದೇಹದ ಪುಷ್ಟಿಗೆ ಸಾಧಕವಾದ ಅನ್ನಾದಿಗಳ ಶುದ್ಧಿಯನ್ನೂ ಉಂಟುಮಾಡಬೇಕೆಂದು ಪ್ರಾರ್ಥಿಸಿದೆ. ಹೀಗೆ **ಋತಾವೃಧರೂ, ಧೃತವ್ರತರೂ** (೮-೨೫-೨) ಆದ ಮಿತ್ರಾವರುಣರು **ಅದಿತಿಯೊಂದಿಗೆ** ಸಾಕ್ಷಾತ್ಸಂಬಂಧವನ್ನು ಹೊಂದಿದ್ದಾರೆ. ಇದರಂತೆಯೇ ಪೃಥಿವ್ಯಂತರಿಕ್ಷಗಳಿಗೂ ಅದಿತಿಗೂ ಅನೇಕಕಡೆಗಳಲ್ಲಿ **ತಾದಾತ್ಮ್ಯವನ್ನೇ** ಹೇಳಿದೆ. ಹೀಗೆ ಮಿತ್ರ, ವರುಣ, ಅದಿತಿ, ಪೃಥಿವೀ ಮತ್ತು ದ್ಯುಲೋಕಾಧಿದೇವತೆ ಇವರ ಸ್ವರೂಪವೂ, ಕ್ರಿಯೆಯೂ ಸಮಾನವಾಗಿರುವುದರಿಂದ **ತನ್ನೋ ಮಿತ್ರೋ ವರುಣೋ ಮಾಮಹಂತಾಂ** ಎಂಬುದಾಗಿ ಶುದ್ಧಿಕಾರಕರಾದ ಈ ದೇವತೆಗಳನ್ನೆಲ್ಲಾ ಒಟ್ಟಿಗೆ ಸೇರಿಸಿ ಪ್ರಾರ್ಥಿಸಿದೆ. [ಇದೇ ಆನುಪೂರ್ವಿಯಾದ ಕುತ್ಸಋಷಿಯ ಕೃತಿಯಿಂದ ೯-೯೭-೫೮ನೇ ಋಕ್ಕಿನಲ್ಲಿಯೂ ಈ ದೇವತೆಗಳನ್ನೆಲ್ಲಾ ಒಟ್ಟಿಗೆ ಸಂಬೋಧಿಸಿದೆ.] **ರಥಂ ನ ದುರ್ಗಾದ್ವಸವಃ ಸುದಾನವೋ ವಿಶ್ವಸ್ಮಾನ್ನೋ ಅಂಹಸೋ ನಿಷ್ಪಿಪರ್ತನ** । ಇತ್ಯಾದಿ ಋಕ್ಕುಗಳಲ್ಲಿಯೂ ಕುತ್ಸನು ಪಾಪಶಮನವನ್ನೂ ಆತ್ಮಶುದ್ಧಿಯನ್ನೂ ಉಂಟುಮಾಡಬೇಕೆಂದು ದೇವತೆಗಳಿಗೆ ಮೊರೆಯಿಡುವುದು ಅವನ ಕೃತಿಗಳಲ್ಲಿ ಮುಖ್ಯವಾದ ಅಂಶವಾಗಿದೆ.

೧೦೫ ನೇ ಸೂಕ್ತದಲ್ಲಿ ವಿವರಿಸಿರುವ ತ್ರಿತನ ಸಂಬಂಧವಾದ ಕಥೆಯೂ ತತ್ಕೃತವಾದ ಪ್ರಾರ್ಥನೆಯೂ ಈ ಅಧ್ಯಾಯದಲ್ಲಿ ಮುಖ್ಯವಾದ ವಿಷಯಗಳಲ್ಲೊಂದಾಗಿವೆ. ತ್ರಿತನ ವಿಷಯವು ವಿಮರ್ಶಕರಿಗೆ ಒಂದು ಸಮಸ್ಯೆಯಾಗಿದೆ. ಈ ಹೆಸರು ಸೂಕ್ತದ್ರಷ್ಟೃವಾದ ಋಷಿಯ ಹೆಸರೇ ಅಥವಾ ತ್ರಿತನೆಂಬ ದೇವತೆಯುಂಟೇ ಎಂಬ ಪ್ರಶ್ನೆಗೂ ನಿಷ್ಕರ್ಷವಾದ ಉತ್ತರವನ್ನು ಹೇಳಲು ಸಾಧ್ಯವಿಲ್ಲ. ಕೆಲವೆಡೆಗಳಲ್ಲಿ ಇಂದ್ರ ಮತ್ತು ಅಗ್ನಿಗಳಿಗೆ ತ್ರಿತನೆಂಬ ಪದವು ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ. ಅದುದರಿಂದ ಋಕ್ಸಂಹಿತೆಯ ಮತ್ತು ಇತರ ಆಧಾರ

ಗಳಿಂದ ತ್ರಿತನ ಸ್ವರೂಪವೇನೆಂಬುದನ್ನು ಸಾಧ್ಯವಾದಷ್ಟು ತಿಳಿಯಬಹುದಾದರೆ, ಯಾಸ್ಕಾದಿವೈದಿಕವಿಮರ್ಶಕರ ಅಭಿಪ್ರಾಯಗಳನ್ನು ಮೊದಲು ಗಮನಿಸಬೇಕು.

ತ್ರಿತನ ಹೆಸರು ೨೯ ಸೂಕ್ತಗಳಲ್ಲಿ ಒಟ್ಟಿಗೆ ೪೦ ಸಲ ಉಪಯೋಗಿಸಲ್ಪಟ್ಟಿದೆ. ಆದರೆ ತ್ರಿತನಿಗೆ ಸಂಬಂಧಿಸಿದ (ಎಂದರೆ ತ್ರಿತನೆಂಬ ದೇವತೆಯನ್ನುದ್ದೇಶಿಸಿದ) ಪ್ರತ್ಯೇಕವಾದ ಸೂಕ್ತವಾವುದೂ ಇಲ್ಲ. ನಿಘಂಟುವಿನಲ್ಲಿ ಹೇಳಿರುವ ದೇವತೆಗಳ ಗುಂಪಿನಲ್ಲಿಯೂ ಈ ಹೆಸರು ಉಕ್ತವಾಗಿಲ್ಲ. ಯಾಸ್ಕರು ಮಾತ್ರ ಈ ಪದಕ್ಕೆ ಎರಡು ಕಡೆಗಳಲ್ಲಿ ನಿರ್ವಚನವನ್ನು ಮಾಡಿರುತ್ತಾರೆ. ಮೊದಲನೆಯದಾಗಿ ಇದೇ ೧೦೫ ನೇ ಸೂಕ್ತದ ೮ ನೇ ಋಕ್ಕನ್ನು ವಿವರಿಸುವಾಗ (ನಿ. ೪-೬) **ತ್ರಿತಂ ಕೂಪೇಽವಹಿತಮೇತತ್ಸೂಕ್ತಂ ಪ್ರತಿಬಭೌ। ತತ್ರ ಬ್ರಹ್ಮೇತಿಹಾಸಮಿಶ್ರಮೃಙ್ಮಿಶ್ರಂ ಗಾಥಾಮಿಶ್ರಂ ಭವತಿ । ತ್ರಿತಸ್ತೀರ್ಣತಮೋ ಮೇಧಯಾ ಬಭೂವ ಅಪಿ ವಾ ಸಂಖ್ಯಾನಾಮೈವಾಭಿಪ್ರೇತಂ ಸ್ಯಾದೇಕತೋ ದ್ವಿತಸ್ತ್ರಿತ ಇತಿ ತ್ರಯೋ ಬಭೂವುಃ ।** ಬಾವಿಯಲ್ಲಿ ಬಿದ್ದಿದ್ದ ತ್ರಿತನಿಂದ ಈ ಸೂಕ್ತವು ದೃಷ್ಟವಾಯಿತು. ಇದು ಋಗಾತ್ಮಕವಾದುದೂ, ಗಾಥಾತ್ಮಕವಾದುದೂ (**ವಿತ್ತಂ ಮೇ ಅಸ್ಯ ರೋದಸೀ**) ಆದ ಕಥೆಯಿಂದ ಕೂಡಿದ ಪ್ರಾರ್ಥನೆಯಾಗಿದೆ. ಪ್ರಜ್ಞೆಯಲ್ಲಿ ಪ್ರಾವೀಣ್ಯವನ್ನು ಹೊಂದಿರುದರಿಂದ ಇವನಿಗೆ ತ್ರಿತನೆಂಬ ಹೆಸರು ಬಂದಿತು. ಅಥವಾ **ಏಕತ, ದ್ವಿತ, ತ್ರಿತ** ಈ ಮೂವರಲ್ಲಿ ಮೂರನೆಯವನಾದ್ದರಿಂದ **ತ್ರಿತ**ನೆಂದು ಬಂದಿರಬಹುದು ಎಂದು ಮೊದಲನೆಯ ಸಲವೂ, ಎರಡನೆಯಸಲ ೧-೧೮೭-೧ ನೇ ಋಕ್ಕನ್ನು ವಿವರಿಸುವಾಗ **ತ್ರಿತಸ್ತ್ರಿಸ್ಥಾನ ಇಂದ್ರಃ** (ನಿ. ೯-೨೫) ಮೂರು ಪ್ರದೇಶಗಳನ್ನೂ ವ್ಯಾಪಿಸುವ ಇಂದ್ರನೆಂದು ಇಂದ್ರನಿಗೆ ವಿಶೇಷಣವಾಗಿಯೂ ವಿವರಿಸಿದ್ದಾರೆ.

ಋಕ್ಸಂಹಿತೆಯಲ್ಲಿ ಈ ಪದವು ಇಂದ್ರನ ಜೊತೆಯಲ್ಲಿ ಹದಿನಾರು ಸಲವೂ, ವೃತ್ರಹಂತಕನೆಂದು ಒಂದು ಸಲವೂ, ವಿಯದಕ್ಷನೆಂದು ಒಂದು ಸಲವೂ, ಮರುತ್ತುಗಳಿಗೆ ವಿಶೇಷಣವಾಗಿ ನಾಲ್ಕು ಕಡೆಗಳಲ್ಲಿಯೂ, ಅಗ್ನಿಯೊಡನೆ ಏಳು ಕಡೆಯೂ, ವರುಣನ ಜೊತೆಯಲ್ಲಿ ಒಂದು ಕಡೆಯೂ, ಸೋಮನ ಜೊತೆಯಲ್ಲಿ ನಾಲ್ಕು ಸಲವೂ ದೂರಪ್ರದೇಶದಲ್ಲಿ ಅಡಗಿರುವ ವ್ಯಕ್ತಿಯೆಂದು ಆರು ಸಲವೂ ಹೇಳಿದೆ.

ಈ ಸ್ಥಳಗಳಲ್ಲಿ ಸಾಯಣರ ವಿವರಣೆಯು ಯಾಸ್ಕರ ನಿರ್ವಚನವನ್ನೇ ಅನುಸರಿಸಿದೆ. ಇವರು ತ್ರಿತ ಎಂಬ ಪದಕ್ಕೆ ೨೦ ಋಕ್ಕುಗಳಲ್ಲಿ ಮಂತ್ರದ್ರಷ್ಟೃವಾದ ಋಷಿಯ ಹೆಸರೆಂದು ಅಂಕಿತನಾಮವಾಗಿಯೂ, ಉಳಿದೆಡೆಗಳಲ್ಲಿ ಸಂದರ್ಭಕ್ಕನುಗುಣವಾಗಿ ವಾಯು, ವರುಣ, ಇಂದ್ರ ಮತ್ತು ಅಗ್ನಿ ಈ ದೇವತೆಗಳ ಸ್ವರೂಪವನ್ನು ತಿಳಿಸುವ ವಿಶೇಷಣವೆಂದೂ ಅರ್ಥಮಾಡಿದ್ದಾರೆ.

ಏಕತ, ದ್ವಿತ, ತ್ರಿತ ಎಂಬ ಮೂರು ಋಷಿಗಳಲ್ಲಿ ಮೂರನೆಯವನಾದ ತ್ರಿತನ ಕಥೆಯನ್ನು ೧-೧೦೫ ನೇ ಸೂಕ್ತದ ಮೊದಲನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. ಅದೇ ಸೂಕ್ತದ ೯ ನೇ ಋಕ್ಕಿನಲ್ಲಿ ತ್ರಿತನಿಗೆ ಆಪ್ತ್ಯನೆಂಬ ವಿಶೇಷಣವಿದೆ. ಮತ್ತು ಅಗ್ನಿಯೊಡನೆ ತ್ರಿತನು ತನ್ನ ಸಂಬಂಧವಿದೆಯೆಂದೂ ಸೂಚಿಸಿದ್ದಾನೆ. ಇವನಿಗೆ ಆಪ್ತ್ಯನೆಂಬ ವಿಶೇಷಣವು ಹೇಗೆ ಬಂದಿತು. ಅಗ್ನಿಯೊಡನೆ ಇರುವ ಸಂಬಂಧವು ಹೇಗೆ ಎಂಬುದನ್ನು ವಿವರಿಸಲು ಶತಪಥಬ್ರಾಹ್ಮಣದಲ್ಲಿ ಒಂದು ಕಥೆಯಿದೆ.

ಚತುರ್ಧಾವಿಹಿತೋ ಹ ವಾಗ್ರೇಽಗ್ನಿರಾಸ । ಸ ಯಮಗ್ರೇಽಗ್ನಿಂ ಹೋತ್ರಾಯ ಪ್ರಾವೃಣತ ಸ ಪ್ರಾಧನ್ವದ್ಯಂ ದ್ವಿತೀಯಂ ಪ್ರಾವೃಣತ ಸ ಪ್ರೈವಾಧನ್ವದ್ಯಂ ತೃತೀಯಂ ಪ್ರಾವೃಣತ ಸ ಪ್ರೈವಾಧನ್ವದಥ ಯೋಽಯಮೇತರ್ಹ್ಯಗ್ನಿಃ ಸ ಭೀಷಾ ನಿಲಿಲ್ಯೇ ಸೋಽಪಃ ಪ್ರವಿವೇಶ

ತಂ ದೇವಾ ಅನುವಿದ್ಯ ಸಹಸೈವಾದ್ಭ್ಯ ಆನಿನ್ಯುಃ ಸೋಽಪೋಽಭಿತಿಷ್ಠೇವಾವಷ್ಠ್ಯೂತಾ ಸ್ಥ ಯಾ ಅಪ್ರಪದನಂ ಸ್ಥ ಯಾಭ್ಯೋ ವೋ ಮಾಮಕಾಮಂ ನಯಂತೀತಿ ತತ ಆಪ್ತ್ಯಾಃ ಸಂಬಭೂವುಸ್ತ್ರಿತೋ ದ್ವಿತ ಏಕತಃ ।

(ಶ. ಬ್ರಾ. ೧-೨-೩-೧)

ಅಗ್ನಿಯ ಮೂರು ಹಿರಿಯ ಸಹೋದರರೂ ದೇವತೆಗಳಿಗೆ ಹವಿಸ್ಸನ್ನು ವಹಿಸುವ ಕಾರ್ಯದಲ್ಲಿ ದಣಿದು ಕೃಶರಾಗಲು ಅಗ್ನಿಯು ತನಗೂ ಇದೇ ಸ್ಥಿತಿ ಬರಬಹುದೆಂಬ ಭಯದಿಂದ ಓಡಿಹೋಗಿ ನೀರಿನಲ್ಲಿ ಅವಿತುಕೊಂಡನು. ಆಗ ದೇವತೆಗಳು ನೀರನ್ನು ಪ್ರವೇಶಿಸಿ ಅವನನ್ನು ಹಿಡಿದು ತರಲು ಅಗ್ನಿಯು ಸುರಕ್ಷಣೆಯನ್ನು ಕೊಡಲು ಯೋಗ್ಯವಲ್ಲದ ಪದಾರ್ಥವೆಂದು ಕೋಪದಿಂದ ನೀರಿನ ಮೇಲೆ ಉಗುಳಿದನು. ಆಗ ಏಕತ, ದ್ವಿತ, ತ್ರಿತ ಎಂಬ ಮೂರು ಆಪ್ತ್ಯ ದೇವತೆಗಳು ಉದ್ಭವಿಸಿದರು. ಇದು ಆಪ್ತ್ಯನೆಂಬ ವಿಶೇಷಣವು ಬರಲು ಒಂದು ಕಾರಣ.

ಎರಡನೆಯದಾಗಿ, ತ್ರಿತಾದಿಗಳು ಅಗ್ನಿಯಿಂದ ಉತ್ಪನ್ನರಾದವರು ಎಂಬುದಕ್ಕೆ ಸಾಯಣರು ತೈತ್ತಿರೀಯ ಬ್ರಾಹ್ಮಣವಾಕ್ಯದ ಆಧಾರದಮೇಲೆ ತ್ರಿತ ಶಬ್ದದ ನಿರ್ವಚನವನ್ನು ತೋರಿಸಿದ್ದಾರೆ. (ಋ.ಸಂ. ೧-೫೨-೫ ಸಾ. ಭಾ.)

ದೇವಾನಾಂ ಹವಿರ್ಲೇಪನಿಘರ್ಷಣಾಯ ಅಗ್ನೇಃಸಕಾಶಾತ್ ಅಪ್ಸು ಏಕತೋ ದ್ವಿತಸ್ತ್ರಿತ ಇತಿ ತ್ರಯಃ ಪುರುಷಾ ಜಜ್ಞಿರೇ । ತಥಾ ಚ ತೈತ್ತಿರೀಯೈಃ ಸಮಾಮ್ನಾತಂ । ಸೋಽಂಗಾರೇಣಾಪಃ ಅಭ್ಯಪಾತಯತ್ । ತತ ಏಕತೋಽಜಾಯತ । ಸ ದ್ವಿತೀಯಮಭ್ಯಪಾತಯತ್ । ತತೋ ದ್ವಿತೋಽಜಾಯತ । ಸ ತೃತೀಯಮಭ್ಯಪಾತಯತ್ । ತತಸ್ತ್ರಿತೋಽಜಾಯತ ।

(ತೈ. ಬ್ರಾ. ೩-೨-೮-೧೦)

ದೇವತೆಗಳ ದೋಷವನ್ನು ತೊಡೆಯುವುದಕ್ಕಾಗಿ ಅಗ್ನಿಯು ಉದಕದಲ್ಲಿ ಏಕತ, ದ್ವಿತ ಮತ್ತು ತ್ರಿತ ಎಂಬ ಮೂವರು ವ್ಯಕ್ತಿಗಳನ್ನು ಉತ್ಪನ್ನವಾಗುವಂತೆ ಮಾಡಿದನೆಂದು ಈ ಬ್ರಾಹ್ಮಣವಾಕ್ಯದ ತಾತ್ಪರ್ಯ. ಈ ಕಾರಣದಿಂದಲೇ, ತ್ರಿತನು,

ಅಗ್ನಿಂ ಮನ್ಯೇ ಪಿತರಮಗ್ನಿಮಾಪಿಮಗ್ನಿಂ ಭ್ರಾತರಂ ಸದಮಿತ್ಸಖಾಯಂ ।

(ಋ. ಸಂ. ೧೦-೭-೩)

ಇತ್ಯಾದಿ ಸೂಕ್ತಗಳಲ್ಲಿ ಅಗ್ನಿಯೇ ತನಗೆ ಪಿತೃವೆಂದೂ, ಭ್ರಾತೃವೆಂದೂ, ಸಖನೆಂದೂ ಹೇಳಿ ಅಂತಹ ಅಗ್ನಿಯನ್ನು ತಾನು ಆರಾಧಿಸುವುದಾಗಿಯೂ ಮತ್ತು ದ್ಯುಲೋಕಸ್ಥನೂ ಪೂಜ್ಯನೂ ಆದ ಸೂರ್ಯನನ್ನು ಹೆಚ್ಚು ಪ್ರಕಾಶವನ್ನು ಬೀರುವುದಕ್ಕೆ ಸಹಾಯಮಾಡುವುದಾಗಿಯೂ ಅಗ್ನಿಯನ್ನು ಸ್ತುತಿಸಿದ್ದಾನೆ.

ಹೀಗೆ ತ್ರಿತನಿಗೂ ಅಗ್ನಿಗೂ ಸಾಕ್ಷಾತ್ಸಂಬಂಧವಿರುವುದಾಗಿ ತ್ರಿತನ ವಾಕ್ಯವೇ ಇರುವುದರಿಂದ ಇಂದ್ರ, ವಾಯು ಇತ್ಯಾದಿ ದೇವತೆಗಳೊಡನೆ ತಾದಾತ್ಮ್ಯವನ್ನು ಹೇಳುವ ಪಂಡಿತರ ಅಭಿಪ್ರಾಯಗಳು ತ್ರಿತನ ನಿಜವಾದ ಸ್ವರೂಪವನ್ನು ಹೇಳುವುದಿಲ್ಲವೆನ್ನಬಹುದು. ತ್ರಿತನು ವೈದ್ಯುತಾಗ್ನಿಯ ಅಂಶವೆಂದು ಅನೇಕ ಆಧಾರಗಳಿಂದ ಹೇಳಬೇಕಾಗುತ್ತದೆ. ಈ ಅಭಿಪ್ರಾಯವು ಸರಿಯೆಂದು ತೋರಿಸಲು ಸರಿಯಾದ ಕಾರಣಗಳನ್ನು ಕೊಟ್ಟು ವೈದ್ಯುತಾಗ್ನಿಯೇ ತ್ರಿತನೆಂಬ ಪರ್ಯಾಯವಾದ ಹೆಸರಿನಿಂದ ಕರೆಯಲ್ಪಟ್ಟಿದೆಯೆಂದು ನಿಸ್ಸಂದೇಹವಾಗಿ ಹೇಳುವುದಕ್ಕೆ ಮೊದಲು, ಸಕ್ರಮ ಆಸಕ್ತಿಯಿಂದಲೂ ಶಾಸ್ತ್ರೀಯವಾದ ಕ್ರಮದಿಂದಲೂ ವೈದಿಕವ್ಯಾಸಂಗವನ್ನು ನಡೆಸಿ ಇಂತಹ

ವಿಷಯಗಳಲ್ಲಿ ತಮ್ಮ ಅಭಿಪ್ರಾಯಗಳನ್ನು ತಿಳಿಯಪಡಿಸಿರುವ ಆಂಗ್ಲಪಂಡಿತರ ಮತಗಳಲ್ಲಿ ತ್ರಿತನ ವಿಷಯವಾದ ಕೆಲವು ಅಭಿಪ್ರಾಯಗಳನ್ನು ಇಲ್ಲಿ ಉದಹರಿಸಿದರೆ ಅನುಚಿತವಾಗಲಾರದು. ಇವರಲ್ಲಿ Benfey ಎಂಬ ಪಂಡಿತನು,

"Trita is a mythical personage, to whom, as to Indra and other deities, is ascribed the destruction of the demons withholding the fertilising rain from the earth. In some passages, special mention is made of the fact, that Trita owes his strength for this deed to the sacred Soma draught, and in one passage, Indra is described as drinking Soma with him." ಎಂದೂ, Bergaigne ಎಂಬುವನು, "In his warlike exploits he always preserves his part as a sacrificer, Trita, who was certainly a God, has none the less become a priest, favourite of Indra" ಎಂದೂ, Pischel ಎಂಬ ಪಂಡಿತನು "Trita was from the beginning a God of the sea and of the waters" ಎಂದೂ ಹೇಳಿದ್ದಾರೆ. Roth ಎಂಬ ಪಂಡಿತನು **ತ್ರಿತನಿಗೂ ವಾಯುವಿಗೂ** ತಾದಾತ್ಮ್ಯವನ್ನು ಹೇಳಿದ್ದಾನೆ. ಇದೇ ಮತವನ್ನು Ludwig ಎಂಬ ಪಂಡಿತನು ಅನುಮೋದಿಸಿದ್ದಾನೆ. Muir ಎಂಬುವನು ತ್ರಿತ ಎಂಬುದು ಇಂದ್ರನ ಪರ್ಯಾಯನಾಮವೆಂದು ತನ್ನ ಮತವನ್ನು ಹೇಳಿದ್ದಾನೆ. ಹೀಗೆ ಪಾಶ್ಚಾತ್ಯ ಪಂಡಿತರಲ್ಲಿ ಒಬ್ಬೊಬ್ಬರು ಒಂದೊಂದು ಅಭಿಪ್ರಾಯವನ್ನು ಹೇಳಿರುವಂತೆ ವೈದಿಕಸಂಪ್ರದಾಯದವರೂ ಸಹ ಮತಭೇದವನ್ನು ಹಿಂದೆ ಹೇಳಿರುವಂತೆ ತೋರಿಸಿದ್ದಾರೆ. ಆದರೆ, ಅಗ್ನಿಯಲ್ಲದೇ ಇತರ ದೇವತೆಗಳೊಡನೆ ತ್ರಿತನಿಗೆ ತಾದಾತ್ಮ್ಯವನ್ನು ಕಲ್ಪಿಸಲು ಸರಿಯಾದ ಆಧಾರಗಳಿಲ್ಲ. ತ್ರಿತನ ಹೆಸರು ಇಂದ್ರನೊಡನೆ ಹಲವಾರು ಸಲ ಹೇಳಲ್ಪಟ್ಟಿದ್ದರೂ ಸಹ ೨-೧೧-೨೦ ; ೮-೭-೨೪ ; ೮-೫೨-೧; ೯-೩೨-೨ ; ೯-೩೮-೨ ಇತ್ಯಾದಿ ಋಕ್ಕುಗಳಲ್ಲೆಲ್ಲಾ ಇಂದ್ರನಿಗೆ ಸಹಾಯಕನಾದವನು, ತ್ರಿತನೆಂಬ ಇಂದ್ರನ ಸಖನಾದ ಋಷಿ ಹೀಗೆಂಬುದಾಗಿ ಇಂದ್ರನ ಜೊತೆಯಲ್ಲಿರುವ ಬೇರೆ ವ್ಯಕ್ತಿಯೆಂದು ಹೇಳಿರುವುದರಿಂದ ತ್ರಿತ ಎಂಬುದು ಇಂದ್ರನ ಪರ್ಯಾಯನಾಮವಲ್ಲ. ಹೀಗೆಯೇ,

ಇಮಂ ತ್ರಿತೋ ಭೂರ್ಯವಿಂದದಿಚ್ಛನ್ವೈಭೂವಸೋ ಮೂರ್ಧನ್ಯಘ್ನ್ಯಾಯಾಃ ।
(ಋ. ಸಂ. ೧೦-೪೬-೩)

ಎಂಬ ಋಕ್ಕಿನಲ್ಲಿ **ಗೃಹಸಖನೆಂದು** ಹೇಳಿರುವುದು ಅಗ್ನಿಗೆ ಅನ್ವಯಿಸುವುದೇ ಹೊರತು ವಾಯುವು ಗೃಹಸಖನೆಂದು ಪ್ರಸಿದ್ಧನಾಗಿಲ್ಲ. ಇದರಂತೆ ೧೦-೪೬-೬ ನೇ ಋಕ್ಕಿನಲ್ಲಿಯೂ ಸಹ ಅಗ್ನಿಯನ್ನುದ್ದೇಶಿಸಿದ ಸ್ತುತಿಪರವಾಗಿದೆ. ಹೀಗೆ ಅನೇಕ ಆಧಾರಗಳಿಂದ ತ್ರಿತನೆಂಬುದು ಇತರ ದೇವತೆಗಳ ಪರ್ಯಾಯನಾಮವಾಗಿರದೆ **ಅಗ್ನಿಯ** ಅಂಶವೆಂದು ಧಾರಾಳವಾಗಿ ಹೇಳಬಹುದು. ಆಪ್ತ್ಯನೆಂಬ ಪದಕ್ಕೆ ೮-೪೭-೧೩ ರಿಂದ ೧೮ ನೇ ಋಕ್ಕುಗಳಲ್ಲಿ **ದೂರಸ್ಥನೂ ಮೇಘಾಂತಗರ್ಭಿಯೂ** ಆದವನು ಎಂಬ ವರ್ಣನೆಯಿರುವುದರಿಂದ ವೈದ್ಯುತಾಗ್ನಿಯ ರೂಪವೆಂದೂ ಹೇಳಬಹುದು. ಹೀಗೆ ಹೇಳಿದ್ದರೆ ಇಂದ್ರ, ಮರುತ್ತು ಮುಂತಾದ ದೇವತೆಗಳಿಗೂ ತ್ರಿತನ ರೂಪದಲ್ಲಿರುವ ವೈದ್ಯುತಾಗ್ನಿಗೂ ಇರತಕ್ಕ ಸಾಹಚರ್ಯವೂ ಅರ್ಥವಾಗುವುದು.

ರೂಪನಿಷ್ಪತ್ತಿಯ ದೃಷ್ಟಿಯಿಂದಲೂ ಸಹ **ತ್ರಿತನಿಗೂ ರೂಪತ್ರಯದಲ್ಲಿರುವ** ಅಗ್ನಿಗೂ ತಾದಾತ್ಮ್ಯವನ್ನು ಹೇಳಲು ಸಾಧ್ಯವಾಗುತ್ತದೆ.

**ಅಗ್ನೇ ತ್ರೀ ತೇ ವಾಜಿನಾ ತ್ರೀ ಷಧಸ್ಥಾ ತಿಸ್ರಸ್ತೇ ಜಿಹ್ವಾ ಋತಜಾತ ಪೂರ್ವೀಃ ।**
**ತಿಸ್ರ ಉ ತೇ ತನ್ವೋ ದೇವವಾತಾಸ್ತಾಭಿರ್ನಃ ಪಾಹಿ ಗಿರೋ ಅಪ್ರಯುಚ್ಛನ್ ॥**
(ಋ. ಸಂ. ೩-೨೦-೨)

ಅಗ್ನಿಗೆ ಶಕ್ತಿತ್ರಯವೂ, ಸ್ಥಾನತ್ರಯವೂ, ಜಿಹ್ವಾತ್ರಯವೂ, ತನುತ್ರಯವೂ ಇರುವುದಾಗಿ ಈ ಋಕ್ಕಿನಲ್ಲಿ ವರ್ಣಿತವಾಗಿರುವಂತೆಯೇ, ತೇಜಸ್ತ್ರಯವೂ (೬-೨೬-೭), ಜ್ವಲನತ್ರಯವೂ (೩-೨-೯) ವರ್ಣಿತವಾಗಿವೆ. ಅಲ್ಲದೆ, **ತ್ರಿರಸ್ಯ ತಾ ಪರಮಾ ಸಂತಿ ಸತ್ಯಾ ಸ್ಪಾರ್ಹಾ ದೇವಸ್ಯ ಜನಿಮಾನ್ಯಗ್ನೇಃ ।** (ಋ. ಸಂ. ೪-೧-೭) ದೇವನಾದ ಅಗ್ನಿಯ ಉತ್ಪತ್ತಿಸ್ಥಾನಗಳೂ ಮೂರು. ಅವು ಯಾವವೆಂದರೆ, **ಸ ಜಾಯತ ಪ್ರಥಮಃ ಪಸ್ತ್ಯಾಸು ಮಹೋ ಬುಧ್ನೇ ರಜಸೋ ಅಸ್ಯ ಯೋನೌ ।** (ಋ. ಸಂ. ೪-೧-೧೧) ಇತ್ಯಾದಿ ಋಕ್ಕುಗಳಲ್ಲಿ ವರ್ಣಿಸಿರುವಂತೆ ಪೃಥಿವೀ, ದ್ಯುಲೋಕ ಮತ್ತು ಅಂತರಿಕ್ಷ. ಇದೇ ರೀತಿಯಲ್ಲಿ ಅಂತರಿಕ್ಷಸ್ಥನಾದ **ವೈದ್ಯುತಾಗ್ನಿಗೂ** ದೂರದಲ್ಲಿರುವ ಮೇಘಾಂತರ್ಗತನಾದ ತ್ರಿತನಿಗೂ ಇರತಕ್ಕ ಸಾಮಾನ್ಯಧರ್ಮವೂ ಅರ್ಥವಾಗುತ್ತದೆ. ಈ ಅಂಶವನ್ನು ತ್ರಿತನೇ ಸ್ಪಷ್ಟವಾಗಿ ಹೇಳಿದ್ದಾನೆ.

**ಅಮೀ ಯೇ ಸಪ್ತ ರಶ್ಮಯಸ್ತತ್ರಾ ಮೇ ನಾಭಿರಾತತಾ ।**
**ತ್ರಿತಸ್ತದ್ವೇದಾಪ್ತ್ಯಃ ಸ ಜಾಮಿತ್ವಾಯ ರೇಭತಿ ವಿತ್ತಂ ಮೇ ಅಸ್ಯ ರೋದಸೀ ॥**
(ಋ. ಸಂ. ೧-೧೦೫-೯)

ಸಪ್ತಪ್ರಾಣರೂಪದಲ್ಲಿರುವ ಈ ಏಳು ಸೂರ್ಯಕಿರಣಗಳಲ್ಲಿ ನನ್ನ ನಾಭಿಯು ವಿಸ್ತೃತವಾಗಿ ಬೆಳೆಯಿತು. ಅಜ್ಞಾನವನ್ನು ದಾಟಿದವನೂ, ನೀರುಗಳ ಪುತ್ರನೂ ಆದ ತ್ರಿತನು ತನ್ನ ಹಿಂದಿನ ಚರಿತ್ರೆಯನ್ನು ತಿಳಿದಿದ್ದಾನೆ. ಈ ತಿಳಿವಳಿಕೆಯುಳ್ಳ ಋಷಿಯು ಬಾವಿಯಿಂದ ಹೊರಕ್ಕೆ ಬರುವುದಕ್ಕಾಗಿ ತನ್ನ ಸಂಬಂಧಿಗಳಾದ ಈ ರಶ್ಮಿಗಳನ್ನು ಕುರಿತು ಸ್ತೋತ್ರಮಾಡುತ್ತಾನೆ ಎಂದಿರುವುದರಿಂದಲೂ; ಮತ್ತು **ಯದೀಮಹ ತ್ರಿತೋ ದಿವ್ಯುಪ ಧ್ಮಾತೇವ ಧಮತಿ ಶಿಶೀತೇ ಧ್ಮಾತರೀ ಯಥಾ।** (೫-೯-೫) ಅಂತರಿಕ್ಷಸ್ಥನಾದ ತ್ರಿತನು ಈ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುತ್ತಾನೆ; **ಪ್ರ ಸಕ್ಷಣೋ ದಿವ್ಯಃ ಕಣ್ವಹೋತಾ ತ್ರಿತೋ ದಿವಃ ಸಜೋಷಾ ವಾತೋ ಅಗ್ನಿಃ ।** (೫-೪೧-೪) ಅಂತರಿಕ್ಷಸ್ಥನಾದತ್ರಿತನು ಸೂರ್ಯಾದಿಗಳೊಡನೆ ಬರುತ್ತಾನೆ ಇತ್ಯಾದಿ ವಾಕ್ಯಗಳ ಆಧಾರದ ಮೇಲೆಯೂ **ವೈದ್ಯುತಾಗ್ನಿಯು ತ್ರಿತನೆಂಬ** ಪರ್ಯಾಯನಾಮದಿಂದ ಪ್ರತೀತನಾಗಿದ್ದಾನೆಂದು ಹೇಳಬಹುದು.

**ಆಪ್ತ್ಯಃ** (ಅಪಾಂ ಪುತ್ರಃ ೧-೧೦೫-೯) **ಆಪ್ತ್ಯೇ** ಇತ್ಯಾದಿ ವಿಶೇಷಣವು ಇರುವೆಡೆಗಳಲ್ಲೆಲ್ಲಾ ತ್ರಿತಪರವಾಗಿಯೇ ಇವೆ. ಇದರಂತೆಯೇ **ಅಪಾಂ ನಪಾತ್** ಎಂಬ ವಿಶೇಷಣವು ಯಾವಾಗಲೂ ವೈದ್ಯುತಾಗ್ನಿ ಪರವಾಗಿಯೇ ಇದೆ. ಆದುದರಿಂದ **ತ್ರಿತನೂ ವೈದ್ಯುತಾಗ್ನಿಯೂ** ಮೂಲತಃ ಒಂದೇ ಎಂದು ಹೇಳಬಹುದು.

ಈ ಭಾಗದಲ್ಲಿ ೧೧೨ ನೇ ಸೂಕ್ತದ ೧೪ ನೇ ಋಕ್ಕಿನಲ್ಲಿ ಹೇಳಿರುವ **ಅತಿಥಿಗ್ವ ದಿವೋದಾಸನ** ವಿಷಯವೂ ಕೊಂಚ ಚರ್ಚಾಸ್ಪದವಾಗಿದೆ. ಅಲ್ಲಿ **ಅತಿಥಿಗ್ವನೆಂಬ** ಪದವು ದಿವೋದಾಸನಿಗೆ ವಿಶೇಷಣವಾಗಿದೆ. [ಅತಿಥಿಗ್ವ ಪದಕ್ಕೆ ಎರಡು ವಿಧವಾದ ಅರ್ಥವನ್ನೂ, ದಿವೋದಾಸನ ವಿಷಯವನ್ನೂ ಈ ಋಕ್ಕಿನ ವಿಶೇಷವಿಷಯಗಳಲ್ಲಿ ಸೂಕ್ಷ್ಮವಾಗಿ ಹೇಳಿದೆ]. ಕೆಲವು ಪಂಡಿತರು ಅತಿಥಿಗ್ವ ಮತ್ತು ದಿವೋದಾಸ ಎಂಬಿಬ್ಬರೂ ಬೇರೆ ಬೇರೆ ವ್ಯಕ್ತಿಗಳೆಂದು ಅಭಿಪ್ರಾಯವನ್ನು ಹೇಳಿರುವರು. ಇನ್ನು ಕೆಲವರು ಇಬ್ಬರೂ ಒಂದೇ ವ್ಯಕ್ತಿಯ ಹೆಸರೆಂದು ಹೇಳುವರು. ಆದರೆ **ದಿವೋದಾಸನೆಂಬ** ದೊರೆಯು ಒಬ್ಬನೇ ಆದರೂ **ಅತಿಥಿಗ್ವ** ಎಂಬ ವ್ಯಕ್ತಿಗಳು ನಾಲ್ಕು ಮಂದಿಯೆಂದು ಋಕ್ಕುಗಳ ಆಧಾರದಿಂದಲೇ ಹೇಳಬಹುದು. **ದಿವೋದಾಸನು** ಈ ನಾಲ್ಕು ಜನ **ಅತಿಥಿಗ್ವರಲ್ಲಿ** ಒಬ್ಬನು.

ಈ ನಾಲ್ಕು ಜನರಲ್ಲಿ ಮೊದಲನೆಯವನು ಭರತವಂಶದವನು. ವಧ್ರ್ಯಶ್ವಪುತ್ರನು ಶಂಬರನೊಂದಿಗೆ ಯುದ್ಧಮಾಡುವಾಗ ಇವನಿಗೆ ಅಶ್ವಿನೀದೇವತೆಗಳೂ ಇಂದ್ರನೂ ಮಾಡಿದ ಸಹಾಯವನ್ನು ೧-೧೧೨-೧೪, ೧-೧೧೬-೧೮, ೪-೨೬-೩, ೬-೪೭-೨೨ ಇತ್ಯಾದಿ ಋಕ್ಕುಗಳಲ್ಲಿ ವರ್ಣಿಸಿದೆ. ೯-೬೧-೨ ನೇ ಋಕ್ಕಿನಲ್ಲಿ ಇವನು ಶಂಬರನೊಬ್ಬನನ್ನೇ ಅಲ್ಲದೆ ತುರ್ವಶ ಮತ್ತು ಯದು ಎಂಬುವರನ್ನೂ ಇಂದ್ರನ ಸಹಾಯದಿಂದ ಗೆದ್ದ ವಿಷಯವು ಹೇಳಿದೆ. ಇವನೇ ಅತಿಥಿಗ್ವ ದಿವೋದಾಸನಿರಬೇಕು.

ಎರಡನೆಯ ಅತಿಥಿಗ್ವನು ಗಂಗುವೆಂಬ ಜನಪದಕ್ಕೆ ಒಡೆಯನಾದವನು. ಇವನೂ ಸಹ ಇಂದ್ರನ ಸಹಾಯದಿಂದ ಜಯವನ್ನು ಪಡೆಯುತ್ತಾನೆಂಬುದು ೧೦-೪೮-೮ ಮುಂತಾದ ಋಕ್ಕುಗಳಲ್ಲಿರುವ ವರ್ಣನೆಗಳಿಂದ ತಿಳಿಯುತ್ತದೆ. ಭರತವಂಶವೂ ಗುಂಗುವಂಶವೂ ಬೇರೆ ಬೇರೆಯಾದುದರಿಂದ ಪರ್ಣಯ ಮತ್ತು ಕರಂಜರನ್ನು ನಾಶಮಾಡಿದ ಅತಿಥಿಗ್ವನು ಭರತವಂಶದ ಅತಿಥಿಗ್ವದಿವೋದಾಸನಿಗಿಂತ ಬೇರೆವ್ಯಕ್ತಿಯಾಗಿರಲೇ ಬೇಕು.

ಋ. ಸಂ. ೮-೬೮-೧೫ ನೇ ಋಕ್ಕಿನಲ್ಲಿ ಹೇಳಿರುವ ಇಂದ್ರೋತನೆಂಬುವನ ತಂದೆಯಾದ ಅತಿಥಿಗ್ವನು ಮೂರನೆಯವನು. ಇವನು ಅತಿಥಿಗ್ವ ಇಂದ್ರೋತನೆಂದು ಪ್ರಸಿದ್ಧನಾಗಿದ್ದಾನೆ. (೮-೬೮-೧೬,೧೭). ಇವನಿಗೆ ಅಶ್ವಮೇಧ ಪೂತಕ್ರತುವೆಂಬ ಭರತವಂಶದ ರಾಜನು ಮಿತ್ರರಾಜನೆಂದೂ ಹೇಳಿದೆ.

ಇಂದ್ರನಿಂದ ಪರಾಜಿತನಾದ ಅತಿಥಿಗ್ವನು ಮೇಲೆ ಹೇಳಿದ ಮೂರು ಜನರಿಗಿಂತ ಬೇರೆಯಾದ ಮತ್ತೊಬ್ಬ ವ್ಯಕ್ತಿಯಾಗಿರಬೇಕು.

ತ್ವಮಸ್ಮೈ ಕುತ್ಸಮತಿಥಿಗ್ವಮಾಯುಂ ಮಹೇ ರಾಜ್ಞೇ ಯೂನೇ ಅರಂಧನಾಯಃ ।
(ಋ. ಸಂ. ೧-೫೩-೧೦)

ಯ ಆಯುಂ ಕುತ್ಸಮತಿಥಿಗ್ವಮರ್ದಯೋ ವಾವೃಧಾನೋ ದಿವೇ ದಿವೇ ।
(ಋ. ಸಂ. ೮-೫೩-೨)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನು ಅತಿಥಿಗ್ವಾದಿಗಳನ್ನು ಸೋಲಿಸಿದುದು ವರ್ಣಿತವಾಗಿದೆ. ಆದುದರಿಂದ ಇವನು ಇಂದ್ರಶತ್ರುವೆಂದು ತಿಳಿಯುತ್ತದೆ. ಸಾಯಣಾಚಾರ್ಯರು ಮಾತ್ರ ಕೇವಲ ಅತಿಥಿಗ್ವ ಎಂಬ ಪದಕ್ಕೂ ಸಹ ಎಲ್ಲಾ ಕಡೆಗಳಲ್ಲಿಯೂ ಅತಿಥಿಗ್ವದಿವೋದಾಸನೆಂದೇ ಅರ್ಥಮಾಡಿದ್ದಾರೆ. ಆದರೆ ಈ ವಿಷಯವು ಇನ್ನೂ ಹೆಚ್ಚು ವಿಮರ್ಶಾರ್ಹವಾದುದಾಗಿದೆ.

ಹೀಗೆಯೇ ವಿಚಾರಾರ್ಹವಾದ ಇನ್ನೂ ಕೆಲವು ವಿಷಯಗಳನ್ನು ಯಥೋಚಿತವಾಗಿ ಆಯಾ ಸಂದರ್ಭಗಳಲ್ಲಿ ವಿವರಿಸಿದೆ. ಕುತ್ಸನ ಭಾವವೂ, ಭಾಷೆಯೂ, ಶೈಲಿಯೂ ಪ್ರೌಢವಾದುವು. ಕುತ್ಸನು ಭಕ್ತಿಯುತವಾದ ಸ್ತೋತ್ರಗಳಲ್ಲಿಯೂ ಅಗ್ರಗಣ್ಯನೆಂದು ಪ್ರಸಿದ್ಧನಾಗಿದ್ದಾನೆ. 'ಅಗ್ನೇ ಸಖ್ಯೇ ಮಾ ರಿಷಾಮಾ ವಯಂ ತವ' 'ಅಪ ನಃ ಶೋಶುಚದಘಂ', 'ಮರುತ್ವಾನ್ನೋ ಭವತ್ವಿಂದ್ರ ಊತೀ', 'ವಿತ್ತಂ ಮೇ ಅಸ್ಯ ರೋದಸೀ' ಇತ್ಯಾದಿ ವಾಕ್ಯಗಳು ಕುತ್ಸಋಷಿಯ ಭಕ್ತಿಪೂರ್ವಕವಾದ ಭಾವಾಭಿವ್ಯಕ್ತಿಯ ಉದಾಹರಣೆಗಳು. ಈ ಋಷಿಯ ಸೂಕ್ತಗಳು ಮುಂದಿನ ಅಧ್ಯಾಯದಲ್ಲಿಯೂ ಮುಂದುವರಿಯುವುದರಿಂದ ಮುಂದಿನ ಭಾಗದಲ್ಲಿ ಕುತ್ಸನ ಕಾವ್ಯಶೈಲಿಯ ಪ್ರೌಢಿಮೆಯ ವಿಷಯವಾಗಿ ಯಥಾಮತಿ ವಿವರಿಸಲಾಗುತ್ತದೆ.

ಅತಿ ಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ ಮೂಲಭೂತವೂ ಆದ ಇಂತಹ ಋಗ್ವೇದ ಸಂಹಿತೆಯನ್ನು ಸರಳವಾದ ಕನ್ನಡಭಾಷೆಯಲ್ಲಿ ವಿಮರ್ಶಾನುವಾದ ಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರಾದಿ ಸಕಲಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ ಕರ್ನಾಟಕ ಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರು ಜಿ.ಸಿ.ಬಿ., ಜಿ.ಸಿ.ಎಸ್.ಐ** ಮಹಾಪ್ರಭುವರ್ಯರು ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟಣೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಿಸುತ್ತಿರುವುದು ಕರ್ಣಾಟಕಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ, ಅವರ ಕುಟುಂಬಕ್ಕೂ (ವೇದಮಂತ್ರಗಳಲ್ಲಿ ಅತಿಮುಖ್ಯವೆಂದು ಪರಿಗಣಿಸಲ್ಪಟ್ಟಿರುವ ಗಾಯತ್ರೀ ಎಂಬ ಮಂತ್ರ ನಾಮಾಂಕಿತರಾದ) ರಾಜಕುಮಾರಿಗೂ, ಸಮಸ್ತಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕ ಫಲಗಳಾದ ಆಯುರಾರೋಗ್ಯೈಶ್ವರ್ಯಾದಿಸಕಲಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು
ವಿಕೃತಿನಾಮ ಸಂ॥ ಚೈತ್ರ ಶುದ್ಧ ಪ್ರಥಮಾ ಭಾನುವಾರ
19—3—1950

ಅನುವಾದಕ
**ಹೆಚ್. ಪಿ. ವೆಂಕಟರಾವ್,**
ಆಸ್ಥಾನ ಮಹಾವಿದ್ವಾನ್



|| ಶ್ರೀಃ ||

# ವಿ ಷ ಯಾ ನು ಕ್ರ ಮ ಣಿ ಕೆ.

## ಪ್ರಥಮಾಷ್ಟಕೇ ಸಪ್ತಮೋಽಧ್ಯಾಯಃ


| | ಪುಟಸಂಖ್ಯೆ |
|---|---|
| ೯೫. ದ್ವೇ ವಿರೂಪೇ ಎಂಬ ತೊಂಭತ್ತೈದನೆಯ ಸೂಕ್ತವು— | |
| ಸೂಕ್ತವಿನಿಯೋಗ | 1 |
| ಋಷಿ ದೇವತಾ ಛಂದಸ್ಸುಗಳು | 3 |
| ಅಗ್ನಿಯ ಉತ್ಪತ್ತಿ ವರ್ಣನೆ ಇತ್ಯಾದಿ | 11 |
| ಅಗ್ನಿಯ ಮೂರುವಿಧವಾದ ಜನ್ಮಗಳು | 17 |
| ಅಗ್ನಿಯ ವಿದ್ಯುದಾದಿ ಸ್ವರೂಪಗಳು | 23 |
| ಭದ್ರಶಬ್ದಾರ್ಥವಿವರಣೆ ಮತ್ತು ವಾಶ್ರಾಃ ಎಂಬ ಶಬ್ದದ ವಿವರಣೆ ಇತ್ಯಾದಿ | 35 |
| ಅದಬ್ಧೇಭಿಃ ಎಂಬ ಶಬ್ದದ ಅರ್ಥವಿವರಣೆ ಇತ್ಯಾದಿ | 51 |
| ೯೬. ಸ ಪ್ರತ್ನಥಾ ಎಂಬ ತೊಂಭತ್ತಾರನೆಯ ಸೂಕ್ತವು— | |
| ಸೂಕ್ತದ ವಿನಿಯೋಗವು | 61 |
| ಋಷಿ ದೇವತಾ ಛಂದಸ್ಸುಗಳು | 62 |
| ದ್ರವಿಣೋದಾಃ ಎಂಬ ಶಬ್ದದ ವಿವರಣೆ | 64 |
| ನಿವಿತ್ ಎಂಬ ಮಂತ್ರವಿಶೇಷದ ಸ್ವರೂಪ ಇತ್ಯಾದಿ | 74 |
| ಮಾತರಿಶ್ವಾ ಎಂಬ ಶಬ್ದದ ವಿವರಣೆ | 86 |
| ಬುಧ್ನಶಬ್ದ ವಿವರಣೆ ಇತ್ಯಾದಿ | 96 |
| ನೂ ಚಿತ್ ಎಂಬ ನಿಪಾತಗಳು | 100 |
| ೯೭. ಅಪ ನಃ ಶೋಶುಚತ್ ಎಂಬ ತೊಂಭತ್ತೇಳನೆಯ ಸೂಕ್ತವು— | |
| ಸೂಕ್ತದ ವಿನಿಯೋಗವು | 110 |
| ಋಷಿ ದೇವತಾ ಛಂದಸ್ಸುಗಳು | 111 |
| ದೀರ್ಘಜಿಹ್ವೀ ಎಂಬ ರಾಕ್ಷಸಿಯ ವೃತ್ತಾಂತವು | 113 |
| ಸೂರಯಃ ಎಂಬ ಶಬ್ದದ ಅರ್ಥವಿವರಣೆ ಇತ್ಯಾದಿ | 120 |
| ಸಹಸ್ವಾನ್ ಶಬ್ದದ ವಿವರಣೆ ಇತ್ಯಾದಿ | 125 |
| ಸ್ವಸ್ತಿ ಶಬ್ದಾರ್ಥವಿವರಣೆ | 133 |

ಪುಟಸಂಖ್ಯೆ

೯೮. ವೈಶ್ವಾನರಸ್ಯ ಸುಮತೌ ಎಂಬ ತೊಂಭತ್ತೆಂಟನೆಯ ಸೂಕ್ತವು—

ಸೂಕ್ತದ ವಿನಿಯೋಗವು 134
ಋಷಿ ದೇವತಾ ಛಂದಸ್ಸುಗಳು 135
ವೈಶ್ವಾನರಾಗ್ನಿಯ ಮಹಿಮೆ 137
ವೈಶ್ವಾನರಾಗ್ನಿಯ ಸ್ವರೂಪಕಥನ—ಶತಪಥ ಬ್ರಾಹ್ಮಣದಂತೆ 140
ಪೃಷ್ಟೋ ದಿವಿ ಎಂಬ ಋಕ್ಕಿನ ವಿಶೇಷ ವಿನಿಯೋಗ 149

೯೯. ಜಾತವೇದಸೇ ಎಂಬ ತೊಂಭತೊಂಭತ್ತನೆಯ ಸೂಕ್ತವು—

ಸೂಕ್ತದ ವಿನಿಯೋಗವು 157
ಋಷಿ ದೇವತಾ ಛಂದಸ್ಸುಗಳು 158
ಜಾತವೇದಾಃ ಎಂಬ ಅಗ್ನಿಯ ಸ್ವರೂಪ ಇತ್ಯಾದಿ 160

೧೦೦. ಸ ಯೋ ವೃಷಾ ಎಂಬ ನೂರನೆಯ ಸೂಕ್ತವು—

ಸೂಕ್ತದ ವಿನಿಯೋಗ 165
ಋಷಿದೇವತಾಛಂದಸ್ಸುಗಳು 166
ವೃಷಾ, ವೃಷನ್ ಮೊದಲಾದ ಶಬ್ದಗಳ ಅರ್ಥವಿಷಯದಲ್ಲಿ ವಿಮರ್ಶನೆಯು 168
ಇಂದ್ರನಿಗೂ ಮರುತ್ತುಗಳಿಗೂ ಇರುವ ಸಖ್ಯತ್ವ ವಿಚಾರ ಇತ್ಯಾದಿ 172
ವೃತ್ರ, ವೃತ್ರಹನ್ ಶಬ್ದಾರ್ಥಗಳ ವಿವರಣೆ 179
ಅಂಗಿರಾ ಋಷಿಯ ವೃತ್ತಾಂತ 187
ಮರುತ್ತುಗಳು ರುದ್ರಪುತ್ರರೆಂಬ ವಿಚಾರ 193
ಮನ್ಯುಶಬ್ದ ನಿರ್ವಚನ 198
ವ್ರಾಧತ್ ಶಬ್ದಾರ್ಥವಿವರಣೆ ಇತ್ಯಾದಿ 212
ಜಾಮಿಶಬ್ದವಿವರಣೆ 221
ಇಂದ್ರನ ಎರಡುವಿಧವಾದ ಶಕ್ತಿಗಳು 225
ಪಂಚಜನಾ ಶಬ್ದಾರ್ಥವಿವರಣೆ ಇತ್ಯಾದಿ 227
ಇಂದ್ರನ ವಜ್ರಾಯುಧ ವಿವರಣೆ 232
ಋಜ್ರಾಶ್ವ, ನಾಹುಷ ಮೊದಲಾದವರ ವಿಷಯ 247
ಉಕ್ಥಮಂತ್ರಸ್ವರೂಪ ಮತ್ತು ವಿವರಣೆ 252

೧೦೧. ಪ್ರ ಮಂದಿನೇ ಎಂಬ ನೂರೊಂದನೆಯ ಸೂಕ್ತವು—

ಸೂಕ್ತದ ವಿನಿಯೋಗವು 265
ಋಷಿದೇವತಾಛಂದಸ್ಸುಗಳು 267

ಪುಟ


| | | |
|---|---|---|
| | ಶಂಬರನೆಂಬ ಅಸುರನ ವಿಷಯ | 271 |
| | ಪಿಪ್ರು ಶುಷ್ಣ ಇವರ ವಿಚಾರ | 275 |
| | ಬ್ರಹ್ಮವಾಹ, ನಿಯುತ್ವ ಮುಂತಾದ ಶಬ್ದಗಳ ವಿವರಣೆ | 305 |
| | ಸುಶಿಪ್ರಶಬ್ದಾರ್ಥವಿವರಣೆ | 308 |
| ೧೦೨. | ಇಮಾಂ ತೇ ಧಿಯಂ ಎಂಬ ನೂರ ಎರಡನೆಯ ಸೂಕ್ತವು— | |
| | ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು | 313 |
| | ಸಿಮಶಬ್ದಾರ್ಥವಿಚಾರ | 335 |
| | ಪುರಂದರಶಬ್ದಾರ್ಥವಿವರಣೆ ಇತ್ಯಾದಿ | 339 |
| | ಇಂದ್ರನ ಸಾಮರ್ಥ್ಯವಿಚಾರ | 344 |
| ೧೦೩. | ತತ್ತೆ ಇಂದ್ರಿಯಂ ಎಂಬ ನೂರ ಮೂರನೆಯ ಸೂಕ್ತ— | |
| | ಸೂಕ್ತದ ಅನುವಾದ ಮತ್ತು ಋಷಿದೇವತಾ ಛಂದಸ್ಸುಗಳು | 356 |
| | ಇಂದ್ರಿಯ ಶಬ್ದಾರ್ಥವಿಚಾರ | 358 |
| | ಉಹಂ, ಅಹನ್ ಶಬ್ದಾರ್ಥಗಳು ಇತ್ಯಾದಿ | 364 |
| | ಜಾತೂಭರ್ಮಾ, ಶ್ರದ್ದಧಾನಃ ಎಂಬ ಶಬ್ದಗಳ ವಿವರಣೆ | 370 |
| | ವನಶಬ್ದಾರ್ಥ ವಿವರಣೆ | 380 |
| | ಕುಯವ ಎಂಬ ಅಸುರನ ವಿಚಾರ | 392 |
| ೧೦೪. | ಯೋನಿಷ್ಟ ಇಂದ್ರ ಎಂಬ ನೂರನಾಲ್ಕನೆಯ ಸೂಕ್ತವು— | |
| | ಸೂಕ್ತದ ವಿನಿಯೋಗವು | 394 |
| | ಋಷಿದೇವತಾಛಂದಸ್ಸುಗಳು | 395 |
| | ಯೋನಿಶಬ್ದಾರ್ಥವಿಚಾರ | 397 |
| | ಆಯುಶ್ಶಬ್ದಾರ್ಥವಿಚಾರ | 411 |
| | ಜೀವಶಂಸೇ ಎಂಬ ಶಬ್ದದ ವಿಮರ್ಶೆ | 423 |
| | ಇಂದ್ರನ ಸೋಮರಸಪಾನವಿಚಾರ | 426 |
| ೧೦೫. | ಚಂದ್ರಮಾ ಅಪ್ಸು ಎಂಬ ನೂರ ಐದನೆಯ ಸೂಕ್ತವು— | |
| | ಸೂಕ್ತದ ವಿನಿಯೋಗವು | 430 |
| | ಋಷಿದೇವತಾಛಂದಸ್ಸುಗಳು | 431 |
| | ಏಕತ, ದ್ವಿತ, ತ್ರಿತ ಎಂಬ ಋಷಿಗಳ ವಿಚಾರ | 443 |
| | ತ್ರಿತನ ವಿಷಯದಲ್ಲಿ Wilson ಎಂಬ ಪಾಶ್ಚಾತ್ಯಪಂಡಿತನ ಅಭಿಪ್ರಾಯ | 445 |

ಪುಟಸಂಖ್ಯೆ

| | | |
|---|---|---|
| | **ಸ್ವಃ** ಎಂಬ ಶಬ್ದದ ಅರ್ಥಾನುವಾದ ವಿವರಣೆ | 455 |
| | **ಅವಮ** ಶಬ್ದಾರ್ಥ ಇತ್ಯಾದಿ | 459 |
| | ಮೂವತ್ತಮೂರು ದೇವತೆಗಳ ವಿಷಯ | 464 |
| | **ತ್ರಿತನ** ಸ್ತುತಿಮಹಿಮೆ | 473 |
| | ಸಪ್ತರಶ್ಮಿಗಳ ವಿಚಾರ | 482 |
| | ಯಜ್ಞಾನುಷ್ಠಾನಫಲದಾತೃಗಳಾದ ಐದುಮಂದಿ ದೇವತೆಗಳು | 486 |
| | **ಸುಪರ್ಣ** ಶಬ್ದಾರ್ಥ ವಿಚಾರ | 491 |
| | ಅಗ್ನಿಯ ದೇವಬಂಧುತ್ವವಿಚಾರ | 500 |
| | **ಗಾತುವಿತ್** ಶಬ್ದಾರ್ಥ ವಿಮರ್ಶೆ | 508 |
| | ದೇವಯಾನ, ಪಿತೃಯಾಣ ವಿಚಾರ | 512 |
| | **ಅಂಹುರ**ಶಬ್ದಾರ್ಥ ವಿಮರ್ಶೆ | 518 |
| ೧೦೬. | **ಇಂದ್ರಂ ಮಿತ್ರಂ** ಎಂಬ ನೂರ ಆರನೆಯ ಸೂಕ್ತವು— | |
| | ಸೂಕ್ತದ ವಿನಿಯೋಗವು. | 529 |
| | ಋಷಿದೇವತಾಛಂದಸ್ಸುಗಳು | 530 |
| | **ಸುದಾನು**ಶಬ್ದಾರ್ಥವಿವರಣೆ ಇತ್ಯಾದಿ | 533 |
| | **ಆದಿತ್ಯ**ಶಬ್ದಾರ್ಥವಿವರಣೆ | 536 |
| | **ಪಿತೃ**ಗಳ ಸ್ವರೂಪವರ್ಣನೆ ಇತ್ಯಾದಿ | 540 |
| | **ನರಾಶಂಸ**ಶಬ್ದಾರ್ಥವಿವರಣೆ ಇತ್ಯಾದಿ | 546 |
| | ಬೃಹಸ್ಪತಿ ಪುತ್ರನಾದ **ಶಂಯುವಿನ** ವಿಚಾರ | 553 |
| | **ಅದಿತಿ**ಶಬ್ದಾರ್ಥ ವಿಚಾರ | 559 |
| ೧೦೭ | **ಯಜ್ಞೋ ದೇವಾನಾಂ** ಎಂಬ ನೂರ ಏಳನೆಯ ಸೂಕ್ತವು— | |
| | ಸೂಕ್ತದ ವಿನಿಯೋಗವು | 561 |
| | ಋಷಿದೇವತಾಛಂದಸ್ಸುಗಳು | 562 |
| | **ಯಜ್ಞ**ಶಬ್ದಸ್ವರೂಪ | 564 |
| ೧೦೮. | **ಯೆ ಇಂದ್ರಾಗ್ನೀ** ಎಂಬ ನೂರ ಎಂಟನೆಯ ಸೂಕ್ತವು— | |
| | ಸೂಕ್ತದ ವಿನಿಯೋಗ ಮತ್ತು ಋಷಿದೇವತಾಛಂದಸ್ಸುಗಳು | 573 |
| | ಇಂದ್ರಾಗ್ನಿಗಳ ಸಾಹಚರ್ಯ ವಿಚಾರ | 575 |
| | ಇಂದ್ರನು ಅಧಿಕವಾಗಿ ಸೋಮಪಾನಮಾಡುವ ವಿಷಯ | 581 |
| | ಇಂದ್ರಾಗ್ನಿಗಳ ವೀರ್ಯಸಾಮರ್ಥ್ಯಾದಿಗಳು | 592 |

ಪುಟಸಂಖ್ಯೆ


ಅಸುರಶಬ್ದಾರ್ಥವಿಮರ್ಶೆ 569

ಯದು, ತುರ್ವಶ, ದ್ರುಹ್ಯು, ಅನು, ಪೂರು ಇವರ ವಿಚಾರ 604

೧೦೯. ವಿ ಹ್ಯಖ್ಯಂ ಮನಸಾ ಎಂಬ ನೂರೊಂಭತ್ತನೆಯ ಸೂಕ್ತವು—

ಸೂಕ್ತದ ವಿನಿಯೋಗವು 620

ಋಷಿದೇವತಾಛಂದಸ್ಸುಗಳು 621

ವಸ್ಯಶಬ್ದಾರ್ಥವಿವರಣೆ ಇತ್ಯಾದಿ 623

ಜ್ಞಾಸ ಮತ್ತು ಸಜಾತರಿಗೆ ಇರುವ ವ್ಯತ್ಯಾಸಗಳು 624

ವಿಜಾಮಾತೃಶಬ್ದಾರ್ಥ ಇತ್ಯಾದಿ 629

ಅದ್ರಿಶಬ್ದಾರ್ಥ ವಿವರಣೆ 633

ಅಶ್ವಿನಾ ಎಂಬ ಶಬ್ದದ ಅರ್ಥವಿವರಣೆ ಇತ್ಯಾದಿ 639

ಚರ್ಷಣಿ ಮತ್ತು ಸಿಂಧುಶಬ್ದಾರ್ಥಗಳ ವಿವರಣೆ 647

ಶಿಕ್ಷತಿಶಬ್ದದ ನಾನಾ ಅರ್ಥಗಳು 651

೧೧೦. ತತಂ ಮೇ ಅಪಃ ಎಂಬ ನೂರ ಹತ್ತನೆಯ ಸೂಕ್ತವು—

ಸೂಕ್ತದ ವಿನಿಯೋಗ ಮತ್ತು ಋಷಿದೇವತಾಛಂದಸ್ಸುಗಳು 657

ಸಮುದ್ರಶಬ್ದದ ನಿರ್ವಚನ ಇತ್ಯಾದಿ 660

ಋಭುಗಳು ಆದಿತ್ಯನ ಆತಿಥ್ಯವನ್ನು ಪಡೆದು ಯಜ್ಞದಲ್ಲಿ ಸೋಮಪಾನಾರ್ಹರಾದ ವಿಚಾರ 666

ಋಭುಗಳು ಚಮಸಾದಿಯಜ್ಞಪಾತ್ರೆಗಳನ್ನು ನಿರ್ಮಿಸಿದ ವಿಚಾರ 671

ಋಭುಶಬ್ದಾರ್ಥವಿವರಣೆ 685

ಋಭುಗಳು ತಾಯಿಯಿಲ್ಲದ ಕರುವನ್ನು ಕಾಪಾಡಿದ ವಿಚಾರ 693

ಋಭುಗಳೊಡನೆ ಇಂದ್ರನ ಸಾಹಚರ್ಯ ಇತ್ಯಾದಿ 699

೧೧೧. ತಕ್ಷನ್ರಥಂ ಎಂಬ ನೂರ ಹನ್ನೊಂದನೆಯ ಸೂಕ್ತವು—

ಸೂಕ್ತದ ವಿನಿಯೋಗವು 701

ಋಷಿದೇವತಾಛಂದಸ್ಸುಗಳು 702

ಋಭುಗಳ ಕಲಾಕೌಶಲ್ಯವಿವರಣೆ 704

ರಥಶಬ್ದದವಿವರಣೆ 711

ಅರ್ವನ್ ಸಕ್ಷಣಿ ಎಂಬ ಶಬ್ದಗಳ ಅರ್ಥವಿವರಣೆ ಇತ್ಯಾದಿ 712

೧೧೨. ಈಳೇ ದ್ಯಾವಾಪೃಥಿವೀ ಎಂಬ ನೂರ ಹನ್ನೆರಡನೆಯ ಸೂಕ್ತವು—

ಸೂಕ್ತದ ವಿನಿಯೋಗ ಮತ್ತು ಋಷಿದೇವತಾಛಂದಸ್ಸುಗಳು 722

ಪುಟಸಂಖ್ಯೆ

ಕಾರಶಬ್ದಾರ್ಥವಿವರಣೆ ಇತ್ಯಾದಿ 726
ಅಶ್ವಿನೀದೇವತೆಗಳ ರಥದ ವೈಶಿಷ್ಟ್ಯ ಇತ್ಯಾದಿ 732
ಅಶ್ವಿನೀದೇವತೆಗಳು ಶಯುವೆಂಬ ಋಷಿಯ ಬಂಜೆಯಾದ ಹಸುವನ್ನು ಕರುಹಾಕಿ ಹಾಲು
ಕೊಡುವಂತೆ ಮಾಡಿದ ವಿಚಾರ ಇತ್ಯಾದಿ 736
ದ್ವಿಮಾತಾಶಬ್ದಾರ್ಥವಿಚಾರ 741
ರೇಭ, ವಂದನ, ಕಣ್ವ, ಎಂಬುವರನ್ನು ಅಶ್ವಿನೀದೇವತೆಗಳು ಕಾಪಾಡಿದ ವಿಚಾರ 746
ಭುಜ್ಯು, ಕರ್ಕಂಧು, ವಯ್ಯ ಎಂಬುವರನ್ನು ರಕ್ಷಿಸಿದ ವಿಚಾರ 753
ಶುಚಂತಿ ಎಂಬ ರಾಜನನ್ನು ಅತ್ರಿ ಎಂಬ ಋಷಿಯನ್ನು ಪುರುಕುತ್ಸ ಮತ್ತು ಪೃಶ್ನಿಗು
ಎಂಬುವರನ್ನು ರಕ್ಷಿಸಿದ ವಿಚಾರ 757
ಪರಾವೃಜಶಬ್ದವಿವರಣೆ 762
ಪರಾವೃಜ, ಋಜ್ರಾಶ್ವ ಶ್ರೋಣ ಎಂಬುವರ ವಿಷಯ 763
ಅಶ್ವಿನೀದೇವತೆಗಳು ವರ್ತಿಕಾ ಎಂಬ ಪಕ್ಷಿಯನ್ನು ತೋಳನ ಬಾಯಿನಿಂದ ಬಿಡಿಸಿದ ವಿಷಯ 764
ವಸಿಷ್ಠ, ಕುತ್ಸ ಇವರನ್ನು ಕಾಪಾಡಿದ ವಿಚಾರ 768
ವಿಶ್ಪಲಾ ಎಂಬುವಳ ಕತ್ತರಿಸಿ ಹೋದ ಕಾಲನ್ನು ಅಶ್ವಿನೀದೇವತೆಗಳು ಸರಿಪಡಿಸಿದ ವಿಚಾರ 771
ವಶನೆಂಬ ರಾಜನನ್ನು ರಕ್ಷಿಸಿದ ವಿಚಾರ 772
ಪಜ್ರರಿಗೂ ಅಂಗಿರಸ್ಸುಗಳಿಗೂ ಇರುವ ಸಂಬಂಧ 775
ರಸಾ ಎಂಬ ಜಲರಹಿತವಾದ ನದಿಗೆ ನೀರು ಬರುವಂತೆ ಮಾಡಿದ ವಿಚಾರ 780
ತ್ರಿಶೋಕ ಎಂಬ ರಾಜನನ್ನು ರಕ್ಷಿಸಿದವಿಚಾರ 781
ಮಂಧಾತಾ, ಭರದ್ವಾಜ ಎಂಬ ಋಷಿಗಳನ್ನು ರಕ್ಷಿಸಿದ ವಿಚಾರ 784
ತ್ರಸದಸ್ಯುವಿನ ವಿಷಯ 789
ವಮ್ರ, ಕಲಿ ಪೃಥಿ, ವ್ಯಶ್ವ ಎಂಬುವರನ್ನು ರಕ್ಷಿಸಿದ ವಿಷಯ 792
ಶರ್ಯಾತನೆಂಬ ರಾಜನ ವೃತ್ತಾಂತ 800
ವಿಮದನೆಂಬ ರಾಜನಿಗೆ ಅವನ ಪತ್ನಿಯನ್ನು ತಂದು ಕೊಟ್ಟ ವಿಚಾರ 807
ಸುದಾಸನೆಂಬ ರಾಜನ ವಿಷಯ 808
ಸಮುದ್ರದಲ್ಲಿ ಮುಳುಗುತ್ತಿದ್ದ ಭುಜ್ಯುವೆಂಬ ರಾಜನನ್ನು ಅಶ್ವಿನೀದೇವತೆಗಳು ರಕ್ಷಿಸಿದ ವಿಚಾರ,
ಅಧ್ರಿಗುವಿನ ವಿಚಾರ 812
ಕೃಶಾನುವಿನ ವಿಷಯ 816
ಆರ್ಜುನೇಯ ಕುತ್ಸ, ತುರ್ವೀತಿ, ದಭೀತಿ, ಧ್ವಸಂತಿ, ಪುರುಷಂತಿ ಎಂಬುವರನ್ನು
ರಕ್ಷಿಸಿದ ವಿಚಾರ 821
ಪ್ರಾತರನುವಾಕಮಂತ್ರಗಳ ಸ್ವರೂಪ ಮತ್ತು ಅವುಗಳನ್ನು ಪಠಿಸುವ ವಿಧಾನ ಇತ್ಯಾದಿ 827

## ಸಂಕೇತಾಕ್ಷರಗಳ ನಿವರಣೆಯು.

---

ಅಥ. ಸಂ.—ಅಥರ್ವವೇದಸಂಹಿತಾ
ಆಪ. ಸೂ.—ಆಪಸ್ತಂಬಶ್ರೌತಸೂತ್ರ
ಆಪ. ಧ. ಸೂ.—ಆಪಸ್ತಂಬಧರ್ಮಸೂತ್ರ
ಆಪ. ಪ. ಸೂ —ಆಪಸ್ತಂಬಪರಿಭಾಷಾಸೂತ್ರ
ಆ. ಸೂ. ಅಥವಾ ಆ—ಆಶ್ವಲಾಯನ ಶ್ರೌತಸೂತ್ರ
ಉ. ಸೂ.—ಉಣಾದಿ ಸೂತ್ರ
ಋ. ಸಂ —ಋಗ್ವೇದಸಂಹಿತಾ
ಐ. ಆ.—ಐತರೇಯಾರಣ್ಯಕ
ಐ ಉ.—ಐತರೇಯೋಪನಿಷತ್
ಐ. ಬ್ರಾ.—ಐತರೇಯಬ್ರಾಹ್ಮಣ
ಛಾ ಉ.—ಛಾಂದೋಗ್ಯೋಪನಿಷತ್
ಜೈ. ಸೂ.—ಜೈಮಿನೀಯ ಪೂರ್ವಮೀಮಾಂಸಾಸೂತ್ರ
ಜೈ. ನ್ಯಾ. ವಿ.—ಜೈಮಿನಿಯ ನ್ಯಾಯಮಾಲಾವಿಸ್ತರ
ತಾ. ಬ್ರಾ —ತಾಂಡ್ಯಮಹಾಬ್ರಾಹ್ಮಣ
ತೈ. ಆ.—ತೈತ್ತಿರೀಯ ಆರಣ್ಯಕ
ತೈ. ಬ್ರಾ.—ತೈತ್ತಿರೀಯಬ್ರಾಹ್ಮಣ
ತೈ. ಸಂ.—ತೈತ್ತಿರೀಯ ಸಂಹಿತಾ
ನಿ.—ನಿರುಕ್ತ, ನಿಘಂಟು
ಪಾ. ಸೂ —ಪಾಣಿನೀಯ ಸೂತ್ರ
ಪಾ. ಶಿ.—ಪಾಣಿನೀಯ ಶಿಕ್ಷಾ
ಫಿ. ಅಥವಾ ಫಿ. ಸೂ.—ಫಿಟ್ಸೂತ್ರ
ಬ್ರ. ಸೂ.—ಬ್ರಹ್ಮಸೂತ್ರ
ಮ. ಭಾ.—ಮಹಾಭಾರತ
ಮ. ಸ್ಮೃ.—ಮನುಸ್ಮೃತಿ
ಮೈ. ಸಂ.—ಮೈತ್ರಾಯಣೀಯಸಂಹಿತಾ
ಯಾ. ಸ್ಮೃ.—ಯಾಜ್ಞವಲ್ಕ್ಯಸ್ಮೃತಿ
ವಾ. ಸಂ.—ವಾಜಸನೇಯಸಂಹಿತಾ
ವಾ. ಪು.—ವಾಯುಪುರಾಣ
ವಿ. ಪು —ವಿಷ್ಣುಪುರಾಣ
ವೇ. ಸೂ.—ವೇದಾಂತಸೂತ್ರ
ಶ. ಬ್ರಾ.—ಶತಪಥಬ್ರಾಹ್ಮಣ
ಸಾ. ಸಂ —ಸಾಮವೇದಸಂಹಿತಾ ಇತ್ಯಾದಿ
ಬೃ. ದೇ. —ಬೃಹದ್ದೇವತಾ

---



॥ ಶ್ರೀ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಸಾಯಣಭಾಷ್ಯಸಹಿತಾ

# ಋಗ್ವೇದ ಸಂಹಿತಾ

ಭಾಗ—೮

## ॥ ಪ್ರಥಮಾಷ್ಟಕೇ ಸಪ್ತಮೋಽಧ್ಯಾಯಃ ॥

ಮೊದಲನೆಯ ಅಷ್ಟಕದಲ್ಲಿ ಏಳನೆಯ ಅಧ್ಯಾಯವು

॥ ಶ್ರೀ ಗಣೇಶಾಯನಮಃ ॥

ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥

ಪ್ರಥಮೇ ಮಂಡಲೇ ಪಂಚದಶೇಽನುವಾಕೇ ಪ್ರಥಮಂ ಸೂಕ್ತಂ ವ್ಯಾಖ್ಯಾತಂ । ದ್ವೇ ವಿರೂಪೇ ಇತ್ಯೇಕಾದಶರ್ಚಂ ದ್ವಿತೀಯಂ ಸೂಕ್ತಂ । ಅತ್ರಾನುಕ್ರಮ್ಯತೇ । ದ್ವೇ ಏಕಾದಶೌಪಸಾಯ ವಾಗ್ನಯ

ಇತಿ । ಋಷಿರನ್ಯಸ್ಮಾದಿತಿ ಪರಿಭಾಷಯಾ ಕುತ್ಸಸ್ಯಾನುವೃತ್ತೇರಾಂಗಿರಸಃ ಕುತ್ಸ ಋಷಿಃ । ಅನಾದೇಶಪರಿಭಾಷಯಾ ತ್ರಿಷ್ಟುಪ್ ಛಂದಃ । ಉಷಸಿ ಪ್ರಾತಃಕಾಲೇ ಹವಿರ್ಭಾಗ್ಯೋಽಗ್ನಿರಸ್ತಿ ಸ ದೇವತಾ । ಯದ್ವಾ । ಆಗ್ನೇಯಂ ತದಿತಿ ಪೂರ್ವತ್ರೋಕ್ತತ್ವಾತ್ತುಹ್ಯಾದಿಪರಿಭಾಷಯೇದಮಾದೀನಿ ಪಂಚ ಸೂಕ್ತಾನಿ ಕೇವಲಾಗ್ನಿದೇವತ್ಯಾನಿ। ಅತೋಽಸ್ಯ ಸೂಕ್ತಸ್ಯೌಷಸಗುಣವಿಶಿಷ್ಟೋಽಗ್ನಿಃ ಶುದ್ಧೋಽಗ್ನಿರ್ವಾ ದೇವತೇತಿ ವಾಶಬ್ದಾರ್ಥಃ ॥ ಪ್ರಾತರನುವಾಕಸ್ಯಾಗ್ನೇಯೇ ಕ್ರತೌ ತ್ರೈಷ್ಟುಭೇ ಛಂದಸೀದಮಾದಿಕೇ ದ್ವೇ ಸೂಕ್ತೇ। ತಥಾ ಚ ಸೂತ್ರಿತಮಥೈತಸ್ಯಾ ಇತಿ ಖಂಡೇ । ದ್ವೇ ವಿರೂಪೇ ಇತಿ ಸೂಕ್ತೇ । ಆ. ೪-೧೩ । ಇತಿ ॥ ಆಶ್ವಿನಶಸ್ತ್ರೇ ಚೈತೇ ಪ್ರಾತರನುವಾಕನ್ಯಾಯೇನ ತಸ್ಯೈವ ಸಮಾಮ್ನಾಯಸ್ಯ ।ಆ. ೬-೫। ಇತ್ಯತಿದಿಷ್ಟತ್ವಾತ್ ॥

ಅನುವಾದವು—ಪ್ರಥಮಮಂಡಲದ ಹದಿನೈದನೆಯ ಅನುವಾಕದಲ್ಲಿ ಮೊದಲನೆಯ ಸೂಕ್ತವು ಹಿಂದಿನ ಅಧ್ಯಾಯದಲ್ಲಿಯೇ ವ್ಯಾಖ್ಯಾತವಾಗಿರುವುದು. ಈ ಅನುವಾಕದಲ್ಲಿ **ದ್ವೇ ವಿರೂಪೇ** ಎಂಬುವುದು ಎರಡನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವುವು. ಅನುಕ್ರಮಣಿಕೆಯಲ್ಲಿ—**ದ್ವೇ ಏಕಾದಶೌಷಸಾಯ ವಾಗ್ನಯ** ಇತಿ ಎಂದು ಹೇಳಿರುವುದು. ಹಿಂದೆ ಹೇಳಿರುವ ಪ್ರಕಾರ ಈ ಸೂಕ್ತಕ್ಕೂ ಕುತ್ಸ ಆಂಗಿರಸಃ ಎಂಬುವನೇ ಋಷಿಯು. ತ್ರಿಷ್ಟುಪ್‌ಛಂದಸ್ಸು. ಉಷಃಕಾಲದಲ್ಲಿ ಹವಿರ್ಯೋಗ್ಯನಾದ ಅಗ್ನಿಯೇ ದೇವತೆಯು. ಅಥವಾ ಹಿಂದೆ ಅನುಕ್ರಮಣಿಕೆಯಲ್ಲಿ ಹೇಳಿರುವಂತೆ ಈ ಸೂಕ್ತದಿಂದ ಐದುಸೂಕ್ತಗಳು ಅಗ್ನಿದೇವತಾಕವು. ಆದುದರಿಂದ ಈ ಸೂಕ್ತಕ್ಕೆ ಉಷಃಕಾಲದಲ್ಲಿ ಆರಾಧಿಸಲ್ಪಡಬೇಕಾದ ಅಗ್ನಿಯು ಅಥವಾ ಕೇವಲ ಅಗ್ನಿಯು ಇವರಲ್ಲಿ ಯಾರಾದರೂ ದೇವತೆಯಾಗಬಹುದೆಂದು ವಾ ಎಂಬ ಶಬ್ದವು ಸೂಚಿಸುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಗ್ನೇಯಕ್ರತುಸಂಬಂಧವಾದ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳನ್ನು ಪಠಿಸಬೇಕಾದಾಗ ಈ ಸೂಕ್ತದ ಮತ್ತು ಮುಂದಿನ ಸೂಕ್ತದ ವಿನಿಯೋಗವಿರುವುದು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ **ಅಥೈತಸ್ಯಾ** ಎಂಬ ಖಂಡದಲ್ಲಿ **ದ್ವೇವಿರೂಪೇ ಇತಿ ಸೂಕ್ತೇ** ಎಂಬ ಸೂತ್ರದಿಂದ ವಿವರಿಸಲ್ಪಟ್ಟಿರುವುದು. (ಆ. ೪-೧೩) ಮತ್ತು ಆಶ್ವಿನಶಸ್ತ್ರಮಂತ್ರಪಠನಕ್ಕಾಗಿಯೂ ಪ್ರಾತರನುವಾಕಮಂತ್ರಪಠನಕಾಲದಲ್ಲಿ ಈ ಎರಡು ಸೂಕ್ತಗಳನ್ನು ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದಲ್ಲಿಯೇ ವಿವರಿಸಲಾಗಿರುವುದು. (ಆ. ೬-೫)



॥ ಓಂ ॥

## ಸೂಕ್ತ—೯೫

॥ ಮಂಡಲ—೧ ॥ ಅನುವಾಕ—೧೫ ॥ ಸೂಕ್ತ—೯೫ ॥

॥ ಅಷ್ಟಕ— ೧ ॥ ಅಧ್ಯಾಯ— ೭ ॥ ವರ್ಗ— ೧, ೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ– ೧೧ ॥

ಋಷಿಃ—ಕುತ್ಸ ಆಂಗೀರಸಃ ॥

॥ ದೇವತಾ—ಅಗ್ನಿರಗ್ನಿರೌಷಸ್ಯೋವಾ ॥

॥ ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ದ್ವೇ ವಿರೂಪೇ ಚರತಃ ಸ್ವರ್ಥೇ ಅನ್ಯಾನ್ಯಾ ವತ್ಸಮುಪ ಧಾಪ-
ಯೇತೇ ।
ಹರಿರನ್ಯಸ್ಯಾಂ ಭವತಿ ಸ್ವಧಾವಾಞ್ಛುಕ್ರೋ ಅನ್ಯಸ್ಯಾಂ ದದೃಶೇ
ಸುವರ್ಚಾಃ ॥೧॥

ಪದಪಾಠಃ

ದ್ವೇ ಇತಿ । ವಿರೂಪೇ ಇತಿ ವಿಽರೂಪೇ । ಚರತಃ । ಸ್ವರ್ಥೇ ಇತಿ ಸುಽಅರ್ಥೇ ।
ಅನ್ಯಾಽಅನ್ಯಾ । ವತ್ಸಂ । ಉಪ । ಧಾಪಯೇತೇ ಇತಿ ।
ಹರಿಃ । ಅನ್ಯಸ್ಯಾಂ । ಭವತಿ । ಸ್ವಧಾಽವಾನ್ । ಶುಕ್ರಃ । ಅನ್ಯಸ್ಯಾಂ । ದದೃಶೇ ।
ಸುಽವರ್ಚಾಃ ॥ ೧ ॥

॥ ಸಾಯಣಭಾಷ್ಯಂ ॥

ಸ್ವರ್ಥೇ ಸ್ವರಣೇ ಶೋಭನಗಮನಾಗಮನೇ । ಯದ್ವಾ । ಅರ್ಥಃ ಪ್ರಯೋಜನಂ । ಶೋಭನಪ್ರಯೋಜನೋಪೇತೇ ವಿರೂಪೇ ವಿಷಮರೂಪೇ ಶುಕ್ಲಕೃಷ್ಣತಯಾ ನಾನಾರೂಪೇ ದ್ವೇ ಅಹೋರಾತ್ರೇ ಚರತಃ । ಪುನಃಪುನಃ ಪರ್ಯಾವರ್ತೇತೇ । ತೇ ಚಾಹೋರಾತ್ರೇ ಅಗ್ನೇಃ ಸೂರ್ಯಸ್ಯ ಚ ಜನನ್ಯೌ । ತತ್ರ ರಾತ್ರೇಃ ಪುತ್ರಃ ಸೂರ್ಯಃ । ಸ ಹಿ ಗರ್ಭವದ್ರಾತ್ರ್ಯಾವಂತರ್ಹಿತಃ ಸನ್ ತಸ್ಯಾಶ್ಚರಮಭಾಗಾದುತ್ಪದ್ಯತೇ । ಅಹ್ನಃ ಪುತ್ರೋಽಗ್ನಿಃ । ಸ ಹಿ ತತ್ರ ವಿದ್ಯಮಾನೋಽಪಿ ಪ್ರಕಾಶರಾಹಿತ್ಯೇನಾಸತ್ಕಲ್ಪಃ ಸನ್ ತಸ್ಮಾದಹ್ನಃ ಸಕಾಶಾನ್ನಿರ್ಮುಕ್ತಃ ಪ್ರಕಾಶಮಾನಂ ಸ್ವಾತ್ಮಾನಂ ಲಭತೇ । ಅನಯೋರೇತಯೋಃ ಪುತ್ರತ್ವಂ ಚ ತೈತ್ತಿರೀಯೈರಾಮ್ನಾಯತೇ । ತಯೋರೇತೌ ವತ್ಸೌ । ಅಗ್ನಿಶ್ಚಾದಿತ್ಯಶ್ಚ । ರಾತ್ರೇರ್ವತ್ಸಃ । ಶ್ವೇತ ಆದಿತ್ಯಃ । ಅಹ್ನೋಽಗ್ನಿಃ । ತಾಮ್ರೋ ಅರುಣ ಇತಿ । ತೇ ಚಾಹೋರಾತ್ರೇ ವತ್ಸಂ ಸ್ವಂ ಸ್ವಂ ಪುತ್ರಮನ್ಯಾನ್ಯಾ ಪರಸ್ಪರವ್ಯತಿಹಾರೇಣೋಪ ಧಾಪಯೇತೇ । ಸ್ವಕೀಯಂ ರಸಂ ಪಾಯಯತಃ । ಯದ್ರಾತ್ರ್ಯಾ ಕರ್ತವ್ಯಂ ಸ್ವಪುತ್ರಸ್ಯಾದಿತ್ಯಸ್ಯ ರಸಸ್ಯ ಪಾಯನಂ ತದಹಃ ಕರೋತಿ । ಯದಹ್ನಾ ಕರ್ತವ್ಯಂ ಸ್ವಪುತ್ರಸ್ಯಾಗ್ನೇ ರಸಸ್ಯ ಪಾಯನಂ ತದ್ರಾತ್ರಿಃ ಕರೋತಿ । ಏತಚ್ಚ ಸಾಯಂಪ್ರಾತಃಕಾಲೀನಾಹುತ್ಯಭಿಪ್ರಾಯಂ । ಶ್ರೂಯತೇ ಚ । ತಸ್ಮಾ ಅಗ್ನಯೇ ಸಾಯಂ ಹೂಯತೇ । ಸೂರ್ಯಾಯ ಪ್ರಾತರಿತಿ । ಯಸ್ಮಾದೇವಂ । ತಸ್ಮಾದನ್ಯಸ್ಯಾಂ ಸ್ವಜನನ್ಯಾ ಅನ್ಯಸ್ಯಾಮಹರಾತ್ಮಿಕಾಯಾಮಗ್ನೇರ್ಜನನ್ಯಾಂ ಹರೀ ರಸಹರಣಶೀಲ ಆದಿತ್ಯಃ ಸ್ವಧಾವಾನ್ ಹವಿರ್ಲಕ್ಷಣಾನ್ನವಾನ್ಭವತಿ । ಶುಕ್ರೋ ನಿರ್ಮಲದೀಪ್ತಿರಗ್ನಿಃ ಸ್ವಜನನ್ಯಾಂ ಅನ್ಯಸ್ಯಾಂ ರಾತ್ರ್ಯಾಮಾದಿತ್ಯಸ್ಯ ಜನನ್ಯಾಂ ಸುವರ್ಚಾಃ ಶೋಭನದೀಪ್ತಿಯುಕ್ತಃ ಸನ್ದದೃಶೇ । ದೃಶ್ಯತೇ ॥ ಸ್ವರ್ಥೇ । ಋ ಗತೌ । ಉಷಿಕುಷಿಗಾರ್ತಿಭ್ಯಸ್ಥನ್ನಿತಿ ಭಾವೇ ಕರ್ಮಣಿ ವಾ ಥನ್ಪ್ರತ್ಯಯಃ ನಿತ್ತ್ವಾದಾದ್ಯುದಾತ್ತತ್ವಂ । ಶೋಭನೋಽರ್ಥೋ ಯಯೋಸ್ತೇ । ಆದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ । ಅನ್ಯಾನ್ಯಾ । ಕರ್ಮವ್ಯತಿಹಾರೇ ಸರ್ವನಾಮ್ನೋ ದ್ವೇ ಭವತ ಇತಿ ವಕ್ತವ್ಯಂ । ಸಮಾಸವಚ್ಚ ಬಹುಲಂ । ವಾ. ೮-೧-೧೨-೧೧ । ಇತಿ ದ್ವಿರ್ಭಾವಃ । ಬಹುಲಗ್ರಹಣಾತ್ಸಮಾಸವದ್ಭಾವಾಭಾವೇ ತಸ್ಯ ಪರಮಾಮ್ರೇಡಿತಮಿತಿ ಪರಸ್ಯಾಮ್ರೇಡಿತಸಂಜ್ಞಾಯಾಮನುದಾತ್ತಂ ಚೇತ್ಯಾಮ್ರೇಡಿತಾನುದಾತ್ತತ್ವಂ । ಧಾಪಯೇತೇ । ಧೇಟ್ ಪಾನೇ । ಆದೇಚ ಇತ್ಯಾತ್ವಂ । ತತೋ ಹೇತುಮತಿ ಣಿಚ್ । ಅರ್ತಿಹ್ರೀತ್ಯಾದಿನಾ । ಪಾ. ೭-೩-೩೬ । ಧಾತೋಃ ಪುಗಾಗಮಃ । ತತ್ರ ಹಿ ಲಕ್ಷಣಪ್ರತಿಪದೋಕ್ತಪರಿಭಾಷಾ ನಾಸ್ತೀತಿ ಜ್ಞಾಪಿತಂ ಶಾಛಾಸಾಹ್ವಾವ್ಯೇತಿ ಕೃತಾತ್ವಾನಾಂ ನಿರ್ದೇಶೇನ । ಸ ಹಿ ಯುಕ್ಪ್ರಾಪ್ತಿಜ್ಞಾಪನಾರ್ಥಃ । ಯದಿ ತತ್ರ ಲಕ್ಷಣಪ್ರತಿಪದೋಕ್ತಪರಿಭಾಷಯಾ ಪುಗ್ನ ಪ್ರಾಪ್ನೋತಿ ಸೋಽನರ್ಥಕಃ ಸ್ಯಾತ್ । ತಸ್ಮಾದಧ್ಯಾಪಯತೀತ್ಯಾದಾವಿವ ಧಾಪಯೇತೇ ಇತ್ಯತ್ರಾಪಿ ಪುಗಾಗಮಃ ಸಿದ್ಧಃ । ನಿಗರಣಚಲನಾರ್ಥೇಭ್ಯಶ್ಚ । ಪಾ. ಸೂ. ೧-೩-೮೭ । ಇತಿ ಪ್ರಾಪ್ತಸ್ಯ ಪರಸ್ಮೈಪದಸ್ಯ ಪಾದಿಷು ಧೇಟ ಉಪಸಂಖ್ಯಾನಂ । ಪಾ ೧-೩-೮೯-೧ । ಇತಿ ಪ್ರತಿಷೇಧಾದಾತ್ಮನೇಪದಂ । ಹರಿಃ । ಹೃಞ್ ಹರಣೇ । ಔಣಾದಿಕ ಇನ್ಪ್ರತ್ಯಯಃ । ಞ್ನಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತತ್ವಂ । ಭವತಿ । ಏಕಾನ್ಯಾಭ್ಯಾಂ ಸಮರ್ಥಾಭ್ಯಾಂ । ಪಾ ೮-೧-೬೫ । ಇತಿ ಪ್ರಥಮಾಯಾಸ್ತಿಙ್ವಿಭಕ್ತೇರ್ನಿಘಾತಪ್ರತಿ-

**ಷೇಧಃ । ದದೃಶೇ । ದೃಶೇಶ್ಛಂದಸಿ ಲಜ್‌ಲುಜ್‌ಲಿಟ ಇತಿ ವರ್ತಮಾನೇ ಲಿಟ್ । ಸುವರ್ಚಾಃ । ಶೋಭನಂ ವರ್ಚಸ್ತೇಜೋ ಯಸ್ಯ । ಸೋರ್ಮನಸೀ ಅಲೋಮೋಷಸೀ ಇತ್ಯುತ್ತರಪದಾದ್ಯುದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಸ್ವರ್ಥೇ**—ಉತ್ತಮವಾದ ಗಮನಾಗಮನ ಸಂಚಾರವುಳ್ಳವೂ ಅಥವಾ ಶ್ರೇಷ್ಠವಾದ ಪ್ರಯೋಜನಗಳಿಂದ ಕೂಡಿದವೂ । **ವಿರೂಪೇ**—(ಶುಕ್ಲ ಕೃಷ್ಣಭೇದದಿಂದ) ಬೇರೆಬೇರೆ ರೂಪವುಳ್ಳವೂ ಆದ । **ದ್ವೇ**—ಅಹೋರಾತ್ರಗಳೆರಡೂ । **ಚರತಃ**-- ಪುನಃಪುನಃ ಆವೃತ್ತಿಯಿಂದ ಚಲಿಸುತ್ತಿವೆ. ( ಈ ಅಹೋರಾತ್ರಗಳೆರಡೂ ಸಹ ) **ಅನ್ಯಾನ್ಯಾ**—ಪರಸ್ಪರವಾದ ವಿನಿಮಯದಿಂದ । **ವತ್ಸಂ**—ತಮ್ಮ ತಮ್ಮ ಪುತ್ರರಾದ (ಅಗ್ನಿಸೂರ್ಯರನ್ನು) । **ಉಪಧಾಪಯೇತೇ**-ಆಹಾರವನ್ನು ಕೊಟ್ಟು ಪೋಷಿಸುತ್ತವೆ. ಅಹಸ್ಸಿನ ಪುತ್ರನಾದ ಅಗ್ನಿಗೆ ರಾತ್ರಿಯೂ ರಾತ್ರಿಯ ಪುತ್ರನಾದ ಸೂರ್ಯನಿಗೆ ಅಹಸ್ಸೂ ಆಹಾರವನ್ನು ಒದಗಿಸುತ್ತವೆ.(ಆದುದರಿಂದ) । **ಅನ್ಯಸ್ಯಾಂ**—ಅಗ್ನಿಯ ತಾಯಿಯಾದ ಅಹಸ್ಸಿನಲ್ಲಿ । **ಹರಿಃ**—ರಸವನ್ನು ಹೀರುವ ಸೂರ್ಯನು । **ಸ್ವಧಾವಾನ್**— ಹವಿಸ್ಸಿನ ರೂಪದ ಅನ್ನವುಳ್ಳವನಾಗಿ । **ಭವತಿ**—ಆಗುತ್ತಾನೆ । **ಶುಕ್ರಃ**—ನಿರ್ಮಲವಾದ ತೇಜಸ್ಸಿನಿಂದ ಕೂಡಿದ ಅಗ್ನಿಯು । **ಅನ್ಯಸ್ಯಾಂ**-- ಆದಿತ್ಯನ ತಾಯಿಯಾದ ರಾತ್ರಿಯಲ್ಲಿ । **ಸುವರ್ಚಾಃ**—ಶ್ರೇಷ್ಠವಾದ ಪ್ರಕಾಶವುಳ್ಳವನಾಗಿ । **ದದೃಶೇ**—ಕಾಣುತ್ತಾನೆ.

॥ ಭಾವಾರ್ಥ ॥

ಪರ್ಯಾಯರೂಪದಿಂದ ಉತ್ತಮವಾದ ಗಮನಾಗಮನ ಸಂಚಾರವುಳ್ಳವೂ ಶುಕ್ಲಕೃಷ್ಣಭೇದದಿಂದ ಬೇರೆಬೇರೆ ರೂಪವುಳ್ಳವೂ ಆದ ಅಹೋರಾತ್ರಗಳೆರಡೂ ಸಹ ಪುನಃಪುನಃ ಆವೃತ್ತಿಯಿಂದ ಚಲಿಸುತ್ತಿವೆ. ಈ ಅಹೋರಾತ್ರಗಳೆರಡೂ ಸಹ ವಿನಿಮಯದಿಂದ ಅಹಸ್ಸಿನ ಪುತ್ರನಾದ ಅಗ್ನಿಗೆ ರಾತ್ರಿಯೂ, ರಾತ್ರಿಯ ಪುತ್ರನಾದ ಸೂರ್ಯನಿಗೆ ಅಹಸ್ಸೂ ಆಹಾರವನ್ನು ಒದಗಿಸಿ ಪೋಷಿಸುತ್ತವೆ. ಅಗ್ನಿಮಾತೆಯಾದ ಅಹಸ್ಸಿನಲ್ಲಿ ರಸವನ್ನು ಹೀರುವ ಸೂರ್ಯನು ಹವಿಸ್ಸಿನ ರೂಪದ ಅನ್ನವನ್ನೂ, ಶುಭ್ರವಾದ ತೇಜಸ್ಸಿನಿಂದ ಕೂಡಿದ ಅಗ್ನಿಯು ಸೂರ್ಯಮಾತೆಯಾದ ರಾತ್ರಿಯಲ್ಲಿ ತನ್ನ ಶ್ರೇಷ್ಠವಾದ ಪ್ರಕಾಶವನ್ನೂ ಪಡೆಯುತ್ತಾರೆ.

English Translation

Two periods, of different complexions, revolve for their own purposes, and each in sucession severally nourishes a son ; in one, Hari (Sun) is the receiver of oblations, in the other, the brilliant Agni is beheld.

॥ ವಿಶೇಷವಿಷಯಗಳು ॥

**ದ್ವೇ ವಿರೂಪೇ ಸೂಕ್ತಮೌಷಸಾಯೊಗ್ನಯೇ ।**

( ಬೃ. ದೇ. ೩-೧೨೯)

ಈ ಸೂಕ್ತದ ಪ್ರಾರಂಭದಲ್ಲಿ ರಾತ್ರ್ಯುಷಸ್ಸುಗಳ ವರ್ಣನೆಯೂ, ಅಗ್ನಿಯ ಪುಷ್ಟಿಗೆ ಅವುಗಳು ಮಾಡತಕ್ಕ ಪರಿಚರಣ ಕ್ರಮವೂ ಪಠಿತವಾಗಿದೆ. ಕೊಂಚವೂ ವಿಶ್ರಾಂತಿಯಿಲ್ಲದೇ ಪುನಃಪುನಃ ಆವೃತ್ತಿಯಿಂದಲೂ, ಪರ್ಯಾಯರೂಪ

ದಿಂದಲೂ, ಒಬ್ಬರಾದಮೇಲೊಬ್ಬರು ಅವಿಚ್ಛಿನ್ನವಾಗಿ ಮಾಡುತ್ತಿರುವ ರಾತ್ರ್ಯುಷಸ್ಸುಗಳ ಲೋಕಸಂಚಾರ ಕ್ರಮವನ್ನು ಕಾವ್ಯರೂಪವಾದ ಸ್ತೋತ್ರದಿಂದ ವರ್ಣಿಸಿ ಅವರಿಬ್ಬರೂ ಲೋಕೋಪಕಾರಕನಾದ ಅಗ್ನಿಯನ್ನು ಯಾವ ರೀತಿಯ ವಾತ್ಸಲ್ಯದಿಂದ ಬೆಳೆಸಿ ಪೋಷಿಸುತ್ತಾರೆಂಬುದನ್ನು ಹೇಳಿದೆ, ಈ ಋಕ್ಕಿನಲ್ಲಿ ಗಮನಿಸಬೇಕಾದ ಇನ್ನೊಂದಂಶವೇನೆಂದರೆ, **ಉಷಸಾ ಚಾತ್ರ ತತ್ಸಮನ್ನಂತರಭಾವ್ಯಹರ್ಲಕ್ಷ್ಯತೇ ।** ಎಂದು ಸ್ಕಂದಸ್ವಾಮಿಗಳು ಹೇಳುವಂತೆ, ಈ ವಿವರಣೆಯಲ್ಲಿ ಅಹಸ್ಸೂಚಕವಾದ ಉಷಸ್ಸಿನ ವರ್ಣನೆಯಿರುವುದರಿಂದ ಇಲ್ಲಿ ಉಷಸ್ಸೆಂದು ಉಪಯೋಗಿಸಿದಾಗಲೆಲ್ಲಾ ಅಹಸ್ಸೆಂದೇ ಅರ್ಥವಾಗುತ್ತದೆ.

**ದ್ವೇ ವಿರೂಪೇ— ವಿಷಮರೂಪೇ ಶುಕ್ಲಕೃಷ್ಣತಯಾ ।** ಶುಕ್ಲಕೃಷ್ಣರೂಪಗಳಿಂದ ವ್ಯತ್ಯಾಸವಾದ ವರ್ಣಗಳುಳ್ಳ ಉಷಸ್ಸು ಮತ್ತು ರಾತ್ರಿಗಳು.

**ಅಹಶ್ಚ ಕೃಷ್ಣಮಹರರ್ಜುನಂ ಚ ವಿ ವರ್ತೇತೇ ರಜಸೀ ವೇದ್ಯಾಭಿಃ ।**
(ಋ. ಸಂ ೬-೯-೧)

ಎಂದು ಭಾರದ್ವಾಜೀಯ ಸೂಕ್ತವಲ್ಲಿ ವರ್ಣಿಸಿರುವಂತೆಯೇ ಇಲ್ಲಿಯೂ ಸಹ ಕೃಷ್ಣವರ್ಣವುಳ್ಳ ರಾತ್ರಿಯೂ ಶುಕ್ಲವರ್ಣವುಳ್ಳ ಅಹಸ್ಸೂ ಒಂದಾದ ಮೇಲೊಂದು ಪರ್ಯಾಯರೂಪದಿಂದ **ಚರತಃ** ಸಂಚರಿಸುತ್ತಿವೆಯೆಂದು ಅಹೋರಾತ್ರಗಳ ಪರಿಭ್ರಮಣವನ್ನು ವಿವರಿಸಿದೆ.

**ಸ್ವರ್ಥೇ — ಶೋಭನಗಮನಾಗಮನೇ ।** ಉತ್ತಮವಾದುದೂ ಗಮನಾಗಮನರೂಪವಾದುದೂ ಆದ ಸಂಚಾರಕ್ರಮವುಳ್ಳ ಎಂದು ಅರ್ಥಶಬ್ದಕ್ಕೆ **ಅರ್ಥಃ ಅರ್ತೇಃ** (ನಿ. ೧-೧೮) ಸಂಚರಿಸು ಎಂಬ ಅರ್ಥವನ್ನು ಕೊಡುವುದರಿಂದ **ಅರ್ಥ**ವೆಂದಾಗಿದೆಯೆಂದು ನಿರುಕ್ತಕಾರರ ನಿರ್ವಚನವನ್ನನುಸರಿಸಿ ಮಾಡಿರುವ ಒಂದರ್ಥವೂ, ಅದಲ್ಲದೇ **ಅರ್ಥಃ ಪ್ರಯೋಜನಂ । ಶೋಭನಪ್ರಯೋಜನೋಪೇತೇ ।** ಅರ್ಥ ಶಬ್ದಕ್ಕೆ ಪ್ರಯೋಜನವೆಂದಾಗಿ ಶ್ರೇಷ್ಠವಾದಪ್ರಯೋಜನವುಳ್ಳ ಎಂದರೆ ಲೋಕಯಾತ್ರೆಗೆ ಸಹಾಯವಮಾಡುವುದೇ ಪ್ರಯೋಜನವಾಗಿ ಉಳ್ಳ ಎಂದು ಇನ್ನೊಂದರ್ಥವೂ ಆಗುತ್ತದೆ.

**ಅನ್ಯಾನ್ಯಾ ವತ್ಸಮುಪಧಾಪಯೇತೇ— ತೇ ಚ ಅಹೋರಾತ್ರೇ ಸ್ವಂ ಸ್ವಂ ಪುತ್ರಂ ಪರಸ್ಪರವ್ಯತಿಹಾರೇಣ ಉಪಧಾಪಯೇತೇ ಸ್ವಕೀಯಂ ರಸಂ ಪಾಯಯತಃ ।** ಅಹೋರಾತ್ರಗಳೆರಡೂ ತಮ್ಮ ತಮ್ಮ ಪುತ್ರರನ್ನು ಎಂದರೆ ಅಹಸ್ಸಿನ ಪುತ್ರನಿಗೆ ರಾತ್ರಿಯೂ ರಾತ್ರಿಯ ಪುತ್ರನಿಗೆ ಅಹಸ್ಸೂ ಕ್ರಮವಾಗಿ ಪಾನವನ್ನು ಮಾಡಿಸುತ್ತವೆ ಎಂದು ವಾಕ್ಯಕ್ಕೆ ಮುಖ್ಯಾರ್ಥ. ಇಲ್ಲಿ **ವತ್ಸ** ಶಬ್ದವನ್ನು ಯಾವ ಸನ್ನಿವೇಶದಲ್ಲಿ ಉಪಯೋಗಿಸಿದೆ, ಪಾನಮಾಡಿಸತಕ್ಕದ್ದಾವುದು ಎಂದು ಪರಿಶೀಲಿಸಿದರೆ,

**ರುಶದ್ವತ್ಸಾ ರುಶತೀ ಶ್ವೇತ್ಯಾಗಾದಾರೈಗು ಕೃಷ್ಣಾ ಸದನಾನ್ಯಸ್ಯಾಃ ।**
(ಋ. ಸಂ. ೧-೧೧೩-೨)

ಎಂಬ ಋಕ್ಕಿನಲ್ಲಿ ಹೇಳಲಾಗಿರುವಂತೆ ಸೂರ್ಯರೂಪನಾದ ಅಗ್ನಿಯು ಉಷಸ್ಸಿನ ಪುತ್ರನೆಂದು ಪ್ರಸಿದ್ಧವಾಗಿದೆ. ಅದೂ ಅಲ್ಲದೇ,

**ಅಜೀಜನನ್ತ್ಸೂರ್ಯಂ ಯಜ್ಞಮಗ್ನಿಮಪಾಚೀನಂ ತಮೋ ಅಗಾದಜುಷ್ಟಂ ।**
(ಋ. ಸಂ. ೭-೭೮-೩)

ಎಂಬ ಋಕ್ಕಿನಲ್ಲಿ ಉಷಸ್ಸಿಗೂ ಅಗ್ನಿಗೂ ಮಾತೃಪುತ್ರಸಂಬಂಧವನ್ನು ಹೇಳಿದೆ. ಇದರಂತೆಯೇ, **ತಯೋರೇತೌ ವತ್ಸೌ । ಅಗ್ನಿಶ್ಚಾದಿತ್ಯಶ್ಚ । ರಾತ್ರೇರ್ವತ್ಸಃ । ಶ್ವೇತ ಆದಿತ್ಯಃ । ಅಹ್ನೋಽಗ್ನಿಃ ।** (ತೈ.ಆ. ೧-೧೦) ಎಂದು ತೈತ್ತಿರೀಯ ಆರಣ್ಯಕದಲ್ಲಿ ಅಗ್ನಿಯು ಅಹಸ್ಸಿನ ಪುತ್ರನೆಂದೂ ಸೂರ್ಯನು ರಾತ್ರಿಯ ಪುತ್ರನೆಂದೂ ವರ್ಣಿತವಾಗಿದೆ. ಮತ್ತು ರಾತ್ರಿಯೂ, ಅಹಸ್ಸೂಚಕವಾದ ಉಷಸ್ಸೂ ಸಹೋದರಿಯರೆಂದೂ ಅನೇಕಕಡೆ ಹೇಳಿದೆ.

**ಸ್ವಸಾ ಸ್ವಸ್ರೇ ಜ್ಯಾಯಸ್ಯೈ ಯೋನಿಮಾರೈಗಪೈತ್ಯಸ್ಯಾಃ ಪ್ರತಿಚಕ್ಷ್ಯೇವ ।**
(ಋ. ಸಂ. ೧-೧೨೪-೮)

ಇತ್ಯಾದಿ ಅನೇಕ ಸಂದರ್ಭಗಳಲ್ಲಿ ರಾತ್ರ್ಯುಷಸ್ಸುಗಳನ್ನು ಸಹೋದರಿಯರೆಂದು ಹೇಳಿರುವುದರಿಂದ ಅಹಸ್ಸಿನ ಪುತ್ರನಾದ ಅಗ್ನಿಗೆ ರಾತ್ರಿಯು ಸಾಯಂಕಾಲದಲ್ಲಿ ಅರ್ಪಿಸಿದ ಆಹುತಿಯನ್ನೂ, ರಾತ್ರಿಯ ಪುತ್ರನಾದ ಸೂರ್ಯನಿಗೆ ಅಹಸ್ಸು ಪ್ರಾತಃಕಾಲದಲ್ಲಿ ಅರ್ಪಿಸಿದ ಆಹುತಿಯನ್ನೂ ಪಾನಮಾಡಿಸುತ್ತವೆ. **ತಸ್ಮಾದಗ್ನಯೇ ಸಾಯಂ ಹೂಯತೇ । ಸೂರ್ಯಾಯ ಪ್ರಾತಃ** (ತೈ. ಬ್ರಾ. ೨-೧-೨-೬) ಎಂಬ ಪ್ರಮಾಣದಂತೆ **ಯದ್ರಾತ್ರ್ಯಾ ಕರ್ತವ್ಯಂ ಸ್ವಪುತ್ರಸ್ಯಾದಿತ್ಯಸ್ಯ ರಸಸ್ಯ ಪಾಯನಂ ತದಹಃ ಕರೋತಿ । ಯದಹ್ನಾ ಕರ್ತವ್ಯಂ ಸ್ವಪುತ್ರಸ್ಯಾಗ್ನೇಃ ರಸಸ್ಯ ಪಾಯನಂ ತದ್ರಾತ್ರಿಃ ಕರೋತಿ ।** ತನ್ನ ಪುತ್ರನಾದ ಆದಿತ್ಯನಿಗೆ ರಸಪಾನವನ್ನು ಮಾಡಿಸುವ ರಾತ್ರಿಯ ಕರ್ತವ್ಯವನ್ನು ಅಹಸ್ಸೂ, ಅಹಸ್ಸಿನ ಪುತ್ರನಾದ ಅಗ್ನಿಗೆ ರಸಪಾನವನ್ನು ಮಾಡಿಸುವ ಅಹಸ್ಸಿನ ಕರ್ತವ್ಯವನ್ನು ರಾತ್ರಿಯೂ ನೆರವೇರಿಸುತ್ತವೆ. ಮತ್ತು

**ಮೂರ್ಧಾ ಭುವೋ ಭವತಿ ನಕ್ತಮಗ್ನಿಸ್ತತಃ ಸೂರ್ಯೋ ಜಾಯತೇ ಪ್ರಾತರುದ್ಯನ್ ।**
(ಋ. ಸಂ. ೧೦-೮೮-೬)

ಎಂದು ವರ್ಣಿಸಿರುವಂತೆ ಸೂರ್ಯನೂ ಅಗ್ನಿಯ ಆವಿರ್ಭಾವವೇ ಆದುದರಿಂದ ಈ ಪ್ರಮಾಣದ ಆಧಾರದ ಮೇಲೆ ಸ್ಕಂದ ಸ್ವಾಮಿಗಳು **ಅನ್ಯೋನ್ಯಸ್ಯ ಚ ವತ್ಸಸ್ಥಾನೀಯಮಗ್ನಿಂ।** ಅವರ ವತ್ಸರೂಪನಾದ ಅಗ್ನಿಯನ್ನು ಎಂದು ಏಕವಚನ ದಲ್ಲಿಯೇ ವತ್ಸ ಶಬ್ದಕ್ಕೆ ಅಗ್ನಿಮಾತ್ರ ಪರ್ಯಾಯವೆಂದು ವಿವರಿಸಿದ್ದಾರೆ.

**ಹರಿಃ—ರಸಹರಣಶೀಲಃ ಆದಿತ್ಯಃ ।** ರಸವನ್ನು ಹೀರುವವನಾದ್ದರಿಂದ ಹರಿಯೆಂದು ಆದಿತ್ಯನಿಗೆ ಹೆಸರು.

**ಸ್ವಧಾವಾನ್—ಹವಿರ್ಲಕ್ಷಣಾನ್ನವಾನ್ ।** ಹವಿಸ್ಸಿನ ರೂಪದ ಅನ್ನವುಳ್ಳವನು.

**ದೇವಾನಾಂ ಚ ಪಿತೄಣಾಂ ಚ ನಮಸ್ಕಾರಃ ಸ್ವಧೈವ ಚ ।**
(ಬೃ. ದೇ. ೮-೧೧೨)

ಎಂಬಂತೆ ದೇವತೆಗಳಿಗೆ ಅರ್ಪಿಸತಕ್ಕ ಹವಿಸ್ಸಿನ ರೂಪದ ಅನ್ನವುಳ್ಳವನು, ಎಂದರ್ಥ.

ವ್ಯಾಕರಣಪ್ರಕ್ರಿಯಾ

**ಸ್ವರ್ಥೇ**—ಋ ಗತೌ ಧಾತು. **ಉಷಿಕುಷಿಗಾರ್ತಿಭ್ಯಃ ಸ್ಥನ್**—ಎಂಬುದರಿಂದ ಇದಕ್ಕೆ ಭಾವಾರ್ಥದಲ್ಲಿ ಅಥವಾ ಕರ್ಮಣಿಯಲ್ಲಿ ಥನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ **ಸಾರ್ವಧಾತುಕಾರ್ಧಧಾತುಕಯೋಃ**—

ಎಂಬುದರಿಂದ ಗುಣ. **ಉರಣ್ರಪರಃ**—ಸೂತ್ರದಿಂದ ರಪರವಾಗಿ ಬರುತ್ತದೆ. ಅರ್ಥ ಎಂದು ರೂಪವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಶೋಭನಃ ಅರ್ಥಃ ಯಯೋಸ್ತೇ ಸ್ವರ್ಥೇ. **ಆದ್ಯುದಾತ್ತಂ ದ್ವ್ಯಚ್ ಛಂದಸಿ**—(ಪಾ. ಸೂ. ೬-೨-೧೧೯) ಎಂಬುದರಿಂದ ದ್ವ್ಯಚ್ಕವಾದ ಉತ್ತರಪದವಿರುವುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ

**ಅನ್ಯಾನ್ಯಾ—ಕರ್ಮವ್ಯತಿಹಾರೇ ಸರ್ವನಾಮ್ನೋ ದ್ವೇ ಭವತ ಇತಿ ವಕ್ತವ್ಯಂ ಸಮಾಸವಚ್ಚ ಬಹುಲಮ್**—(ಪಾ. ವಾ. ೮-೧-೧೨-೧೧) ಕ್ರಿಯಾ ವಿನಿಮಯ ತೋರುವಾಗ ಸರ್ವನಾಮಶಬ್ದಗಳಿಗೆ ದ್ವಿತ್ವವನ್ನು ಹೇಳುವುದಲ್ಲದೆ ಸಮಾಸವದ್ಭಾವವನ್ನೂ ವಿಕಲ್ಪವಾಗಿ ಹೇಳಬೇಕು. ಎಂಬ ವಚನದಿಂದ ಇಲ್ಲಿ ಅನ್ಯ ಎಂಬ ಸರ್ವನಾಮ ಶಬ್ದಕ್ಕೆ ದ್ವಿರ್ಭಾವ ಬಂದಿದೆ. ಸಮಾಸವದ್ಭಾವದಿಂದ **ಸುಪೋಧಾತುಪ್ರಾತಿಪದಿಕಯೋಃ**—ಎಂಬುದರಿಂದ ಸುಬ್‌ಲುಕ್ ಬರುತ್ತದೆ. ಬಹುಲಗ್ರಹಣದಿಂದ ಅದು ಬಾರದಿರುವಾಗ ದ್ವಿರ್ಭಾವ ಬಂದುದರಿಂದ **ತಸ್ಯ-ಪರಮಾಮ್ರೇಡಿತಮ್**-(ಪಾ. ಸೂ. ೮-೧-೨) ಎಂಬುದರಿಂದ ಪರಕ್ಕೆ ಆಮ್ರೇಡಿತಸಂಜ್ಞೆ ಬರುವುದರಿಂದ **ಅನುದಾತ್ತಂಚ**-(ಪಾ. ಸೂ. ೮-೧-೩) ಎಂಬುದರಿಂದ ಆಮ್ರೇಡಿ ಕ್ಕೆ ಅನುದಾತ್ತಸ್ವರ ಬರುತ್ತದೆ.

**ಧಾಪಯೇತೇ**—ಧೇಟ್ ಪಾನೇ. ಧಾತು. **ಆದೇಚ ಉಪದೇಶೇಽಶಿತಿ**—(ಪಾ. ಸೂ. ೬-೧-೪೫) ಎಂಬುದರಿಂದ ಏಜಂತವಾದುದರಿಂದ ಆತ್ವ. ಇದರ ಮೇಲೆ **ಹೇತುಮತಿ ಚ**—(ಪಾ. ಸೂ. ೩-೧-೨೬) ಎಂಬುದರಿಂದ ಪ್ರಯೋಜಕವ್ಯಾಪಾರ ತೋರುವುದರಿಂದ ಣಿಚ್ ಣಿಚ್ ಪರವಾದಾಗ ಆದಂತವಾದ ಧಾತುವಾದುದರಿಂದ **ಅರ್ತಿಹ್ರೀವ್ರೀ**—(ಪಾ ಸೂ. ೭-೩-೩೬) ಎಂಬುದರಿಂದ ಧಾತುವಿಗೆ ಪುಕಾಗಮ. **ಲಕ್ಷಣಪ್ರತಿಪದೋಕ್ತಯೋಃ ಪ್ರತಿಪದೋಕ್ತಸ್ಯೈವ ಗ್ರಹಣಮ್**—(ಪರಿ-೧೫) ಸೂತ್ರನಿಷ್ಪನ್ನವಾದ ಒಂದು ರೂಪ, ಸ್ವಾಭಾವಿಕವಾಗಿರುವ ಒಂದು ರೂಪ, ಇವೆರಡರಲ್ಲಿ ಅಕೃತ್ರಿಮವಾದ ಸ್ವಾಭಾವಿಕವಾದ ರೂಪಕ್ಕೇ ಗ್ರಹಣ ಎಂದು ಹೇಳುವ ಈ ಪರಿಭಾಷೆಯಿಂದ ಯದ್ಯಪಿ ಹಿಂದಿನ ಸೂತ್ರದಲ್ಲಿ ಈ ಧಾತುವನ್ನು ತೆಗೆದುಕೊಳ್ಳಲುಕಾರಣವಿಲ್ಲ. ಇದು ಸೂತ್ರದಿಂದ ನಿಷ್ಪನ್ನವಾದುದರಿಂದ ಕೃತ್ರಿಮರೂಪ. ಆದರೆ **ಶಾಚ್ಛಾಸಾ**--(ಪಾ. ಸೂ. ೭-೩-೩೭) ಎಂಬಲ್ಲಿ ಮಾಡಲ್ಪಟ್ಟ ಆತ್ವದಿಂದ ನಿರ್ದೇಶಮಾಡಿರುವುದರಿಂದ ಈ ಸೂತ್ರದಲ್ಲಿ ಹಿಂದ ಹೇಳಿದ ಪರಿಭಾಷಾಸಂಚಾರವಿಲ್ಲವೆಂದು ಜ್ಞಾಪಿತವಾಗುತ್ತದೆ. **ಶಾಚ್ಛಾಸಾ**—ಸೂತ್ರದಲ್ಲಿ ಪುಕಿಗೆ ಅಪವಾದವಾಗಿ ಯುಕ್ ವಿಹಿತವಾಗಿದೆ. ಪರಿಭಾಷೆಯಿಂದ ಪುಕ್ ಪ್ರಾಪ್ತಿ ಇಲ್ಲವೆಂದರೆ ಅದು ವ್ಯರ್ಥವಾಗುತ್ತದೆ. ಆದುದರಿಂದ ಅಧ್ಯಾಪಯತಿ ಎಂಬೀಮುಂತಾದ ಅಕೃತ್ರಿಮ ಸ್ಥಳಗಳಲ್ಲಿ ಹೇಗೆ ಪುಕ್ ಬಂದಿದೆಯೋ ಅದರಂತೆ ಇಲ್ಲಿಯೂ ಪುಕ್ ಬರಲು ಯಾವ ಅಭ್ಯಂತರವೂ ಇಲ್ಲ. **ನಿಗರಣಚಲನಾರ್ಥೇಭ್ಯಶ್ಚ**-(ಪಾ ಸೂ. ೧-೩-೮೭) ಎಂಬುದರಿಂದ ಪರಸ್ಮೈಪದ ಪ್ರಾಪ್ತವಾದರೂ **ಪಾದಿಷು ಧೇಟ ಉಪಸಂಖ್ಯಾನಮ್** (ಪಾ. ಸೂ. ೧-೩-೮೭-೧) ಎಂಬುದರಿಂದ ಪ್ರತಿಷೇಧವಾಗಿರುವುದರಿಂದ ಆತ್ಮನೇಪದವೇ. ಆಗುತ್ತದೆ. ಲಟ್ ದ್ವಿವಚನದಲ್ಲಿ ಆತಾಮ್ ಪ್ರತ್ಯಯ. **ಟಿತ ಆತ್ಮನೇಪದಾನಾಂ**—ಎಂಬುದರಿಂದ ಟಿಗೆ (ಆಮ್) ಎತ್ವ. **ಆತೋಙಿತಃ** (ಪಾ. ಸೂ. ೭-೨-೮೧) ಎಂಬುದರಿಂದ ಆಕಾರಕ್ಕೆ ಇಯಾದೇಶ. **ಲೋಪೋವ್ಯೋರ್ವಲಿ**—ಎಂಬುದರಿಂದ ಮಕಾರಲೋಪ. ಣಿಚ್‌ನಿಮಿತ್ತವಾಗಿ ಣಿಕಿಗೆ ಗುಣ. ಅಯಾದೇಶ. ಅತಿಙಂತದ ಪದದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಹರಿಃ**—ಹೃಞ್ ಹರಣೇ ಧಾತು. **ಸರ್ವಧಾತುಭ್ಯ ಇನ್** (ಉ. ಸೂ. ೪-೫೫೭) ಎಂಬುದರಿಂದ ಇನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. **ಉರಣ್ರಪರಃ**—ಸೂತ್ರದಿಂದ ರಪರವಾಗಿ ಬರುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—ಸೂತ್ರದಿಂದ ಆದ್ಯುದಾತ್ತಸ್ವರ ಬರುತ್ತದೆ.

**ಭವತಿ**—ಭೂ ಸತ್ತಾಯಾಂ ಧಾತು. ಲಟ್‌ಪ್ರಥಮಪುರುಷಏಕವಚನರೂಪ. ಹಿಂದೆ ಅನ್ಯಾನ್ಯಾಂ ಎಂಬುದರ ಸಂಬಂಧವಿರುವುದರಿಂದ **ಏಕಾನ್ಯಾಭ್ಯಾಂ ಸಮರ್ಥಾಭ್ಯಾಮ್**—(ಪಾ. ಸೂ. ೮-೧-೬೫) ಎಂಬುದರಿಂದ ಪ್ರಥಮೋಚ್ಚರಿತ ತಿಙ್‌ವಿಭಕ್ತಿಗೆ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಶಪ್ ಪಿತ್ತಾದುದರಿಂದ ಅನುದಾತ್ತ ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್**— (ಪಾ. ಸೂ. ೬-೧-೧೮೬) ಅನುದಾತ್ತವಾಗುತ್ತದೆ. ಆಗ ಧಾತುಸ್ವರ ಉಳಿಯುತ್ತದೆ.

**ದದೃಶೇ**—ದೃಶಿರ್ ಪ್ರೇಕ್ಷಣೇ ಧಾತು. ವರ್ತಮಾನಾರ್ಥದಲ್ಲಿ **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ಲಿಟ್. ಪ್ರಥಮಪುರುಷ ಏಕವಚನದಲ್ಲಿ **ಲಿಟಸ್ತಝಯೋರೇಶಿರೇಚ್** ಸೂತ್ರದಿಂದ ಏಶಾದೇಶ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್‌ಶೇಷ. **ಉರತ್**— ಎಂಬುದರಿಂದ ಉರದತ್ವ ರಪರವಾಗಿ ಬಂದಾಗ ಪುನಃ ಆದಿಹಲ್‌ಶೇಷ. **ಅಸಂಯೋಗಾಲ್ಲಿಟ್‌ಕಿತ್**—ಸೂತ್ರದಿಂದ ಪ್ರತ್ಯಯಕ್ಕೆ ಕಿತ್ವ ಬರುವುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸುವರ್ಚಾಃ**—ಶೋಭನಂ ವರ್ಚಃ ತೇಜೋ ಯಸ್ಯ ಸಃ ಸುವರ್ಚಾಃ. **ಸೋರ್ಮನಸೀ ಅಲೋಮೋಷಸೀ**— (ಪಾ. ಸೂ. ೬-೨-೧೧೭) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ. ಸುಪರವಾದಾಗ **ಅತ್ವಸಂತಸ್ಯ**—ಸೂತ್ರದಿಂದ ಉಪಧಾದೀರ್ಘ. ॥ ೧ ॥

———:o:———

ಸಂಹಿತಾಪಾಠಃ

ದಶೇಮಂ ತ್ವಷ್ಟುರ್ಜನಯಂತ ಗರ್ಭಮತಂದ್ರಾಸೋ ಯುವ-
ತಯೋ ವಿಭೃತ್ರಂ ।
ತಿಗ್ಮಾನೀಕಂ ಸ್ವಯಶಸಂ ಜನೇಷು ವಿರೋಚಮಾನಂ ಪರಿ ಷೀಂ
ನಯಂತಿ ॥ ೨ ॥

॥ ಪದಪಾಠಃ ॥

ದಶ । ಇಮಂ । ತ್ವಷ್ಟುಃ । ಜನಯಂತ । ಗರ್ಭಂ । ಅತಂದ್ರಾಸಃ । ಯುವ-
ತಯಃ । ವಿಽಭೃತ್ರಂ ।
ತಿಗ್ಮಽಅನೀಕಂ । ಸ್ವಽಯಶಸಂ । ಜನೇಷು । ವಿಽರೋಚಮಾನಂ । ಪರಿ ।
ಸೀಂ । ನಯಂತಿ ॥ ೨ ॥

ಸಾಯಣಭಾಷ್ಯಂ

ಅತಂದ್ರಾಸಃ ಸ್ವಕಾರ್ಯೇ ಜಗತಃ ಪೋಷಣೇಽನಲಸಾ ಆಲಸ್ಯರಹಿತಾಃ। ಜಾಗರೂಕಾ ಇತ್ಯರ್ಥಃ। ಯುವತಯೋ ನಿತ್ಯತರುಣ್ಯಃ । ಜರಾಮರಣರಹಿತಾ ಇತ್ಯರ್ಥಃ। ಏವಂಭೂತಾ ದಶ ಪ್ರಾಚ್ಯಾದ್ಯಾ ದಶಸಂಖ್ಯಾಕಾ ದಿಶೋ ಗರ್ಭಂ ಮೇಘೇಷು ಗರ್ಭರೂಪೇಣಾಂತರ್ವರ್ತಮಾನಂ ತ್ವಷ್ಟುರ್ದೀಪ್ತಾನ್ಮಧ್ಯ-ಮಾದ್ವಾಯೋಃ ಸಕಾಶಾಜ್ಜನಯಂತ। ವೈದ್ಯುತಮಗ್ನಿಮುತ್ಪಾದಯಂತಿ।ಯದ್ವಾ। ದಶಸಂಖ್ಯಾಕಾ ಅಂಗು-ಲಯಸ್ತ್ವಷ್ಟುರ್ದೀಪ್ತಸ್ಯ ವಾಯೋರ್ಗರ್ಭಂ ಸ್ವಕಾರಣಭೂತೇ ವಾಯೌ ಗರ್ಭರೂಪೇಣ ವರ್ತಮಾನಂ। ಅಗ್ನೇರ್ಹಿ ವಾಯುಃ ಕಾರಣಂ ವಾಯೋರಗ್ನಿರಿತಿ ಶ್ರುತೇಃ। ಏವಂಭೂತಮಿಮಮಗ್ನಿಮರಣ್ಯೋಃ ಸಕಾಶಾ-ಜ್ಜನಯಂತ। ಉತ್ಪಾದಯಂತಿ। ಕೀದೃಶ್ಯೋಽಂಗುಲಯಃ। ಅತಂದ್ರಾಸಃ ಪುನಃಪುನಃ ಕರ್ಮಕರಣ ಆಲಸ್ಯರಹಿತಾಃ। ಯುವತಯೋಽಪೃಥಕ್ಕೃತ್ಯ ವರ್ತಮಾನಾಃ। ಏಕಸ್ಮಿನ್ಪಾಣೌ ಸಂಹತ್ಯಾವಸ್ಥಿತಾ ಇತ್ಯರ್ಥಃ। ಕೀದೃಶಮಗ್ನಿಂ। ವಿಭೃತ್ರಂ। ಸರ್ವೇಷು ಭೂತೇಷು ವಿಹೃತಂ। ಜಾಠರರೂಪೇಣ ವಿಭಜ್ಯ ವರ್ತಮಾನಮಿತ್ಯರ್ಥಃ। ತಿಗ್ಮಾನೀಕಂ ತೀಕ್ಷ್ಣಮುಖಂ ತೀಕ್ಷ್ಣತೇಜಸಂ। ಅತ ಏವ ಹಿ ವೈದ್ಯುತಾಗಿ ದರ್ಶನೇ ದೃಷ್ಟಿಃ ಪ್ರತಿಹನ್ಯತೇ। ಸ್ವಯಶಸಂ। ಸ್ವಾಯತ್ತಯಶಸ್ಕಂ। ಅತಿಶಯೇನ ಯಶಸ್ವಿನಮಿತ್ಯರ್ಥಃ। ಜನೇಷು ಜನಪದೇಷು ಸರ್ವದೇಶೇಷು ವಿರೋಚಮಾನಂ ವಿಶೇಷೇಣ ದೀಪ್ಯಮಾನಂ। ಬಹೂನಾಮುಪ-ಕಾರಕಮಿತ್ಯರ್ಥಃ। ಏವಂಭೂತಂ ಸೀಮೇನಮಗ್ನಿಂ ಪರಿ ಪರಿತಃ ಸರ್ವತೋ ನಯಂತಿ। ಸ್ವಸ್ವೋಪ-ಕಾರಾಯ ಸರ್ವೇ ಜನಾಃ ಸ್ವಕೀಯಂ ದೇಶಂ ಪ್ರಾಪಯಂತಿ ॥ ತ್ವಷ್ಟುಃ। ತ್ವಿಷ ದೀಪ್ತೌ। ನಪ್ತೃನೇಷ್ಟೃ-ತ್ವಷ್ಟೃ ಇತ್ಯಾದಿನಾ । ಉ. ೨-೯೬। ಉಣಾದಿಷು ತೃನಂತೋ ನಿಪಾತಿತಃ। ಅತೋ ನಿತ್ತ್ವಾದಾ-ದ್ಯುದಾತ್ತತ್ವಂ। ವಿಭೃತ್ರಂ। ಹೃಞ್ ಹರಣೇ। ಅಸ್ಮಾತ್ಕರ್ಮಣಿ ನಿಷ್ಠಾ। ಛಾಂದಸೋ ರೇಫೋಪಜನಃ। ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ। ಹೃಗ್ರಹೋರ್ಭ ಇತಿ ಭತ್ವಂ। ಯದ್ವಾ। ಔಣಾದಿಕಃ ಕ್ತ್ರಪ್ರತ್ಯಯಃ। ತಿಗ್ಮಾನೀಕಂ। ತಿಜ ನಿಶಾನೇ। ಯುಜಿರುಚಿತಿಜಾಂ ಕುತ್ವಂ ಚ। ಉ. ೧-೧೪೫। ಇತಿ ಮಕ್। ಅನ ಪ್ರಾಣನೇ। ಅನಿದೃಶಿಭ್ಯಾಂ ಚೇತಿ ಕೀಕನ್। ತಿಗ್ಮಂ ತೀಕ್ಷ್ಣಮನೀಕಂ ಯಸ್ಯ। ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ। ಪರಿ ಷೀಂ। ಪೂರ್ವಪದಾದಿತಿ ಷತ್ವಂ ॥

ಪ್ರತಿಪದಾರ್ಥ

**ಅತಂದ್ರಾಸಃ**— (ತಮ್ಮತಮ್ಮ ಕರ್ತವ್ಯದಲ್ಲಿ) ಆಲಸ್ಯವಿಲ್ಲದೇ ಜಾಗರೂಕರಾಗಿರುವವರೂ । **ಯುವತಯಃ**— (ಜರಾಮರಣವಿಲ್ಲದೇ) ನಿತ್ಯಯುವತಿಯರೂ ಆದ । **ದಶ**— ಪ್ರಾಚ್ಯಾದಿ ದಶದಿಕ್ಕುಗಳೂ । **ಗರ್ಭಂ**— ಮೇಘದಲ್ಲಿ ಅಂತರ್ಗತವಾಗಿ ಗರ್ಭರೂಪದಲ್ಲಿರುವವನೂ ।

**ಅಥವಾ**

[ **ಅತಂದ್ರಾಸಃ**—(ತಮ್ಮತಮ್ಮ ಕರ್ಮಗಳಲ್ಲಿ) ಆಲಸ್ಯವಿಲ್ಲದೇ ಕರ್ತವ್ಯಪರರಾಗಿರುವುವೂ **ಯುವತಯಃ**-(ಕೈಯಿನ ಒಂದೇ ಜಾಗದಲ್ಲಿ) ಒಟ್ಟಿಗೆ ಸೇರಿಕೊಂಡು ಇರುವುವೂ ಆದ। **ದಶ**— ಹತ್ತುಬೆರಳುಗಳೂ ಸಹ। **ಗರ್ಭಂ**— (ಸ್ವಕಾರಣವಾದ ವಾಯುವಿನಲ್ಲಿ) ಅಂತರ್ಗತವಾಗಿ ಗರ್ಭರೂಪದಲ್ಲಿರುವವನೂ । ]

**ವಿಭೃತ್ರಂ**—(ಸಕಲಭೂತಗಳಲ್ಲಿಯೂ ಜಾಠರಾಗ್ನಿರೂಪದಲ್ಲಿ) ವಿಭಾಗಿಸಿಕೊಂಡು ಹರಡಿರುವವನೂ। **ತಿಗ್ಮಾನೀಕಂ**— ತೀಕ್ಷ್ಣವಾದ ಮುಖವು (ತೇಜಸ್ಸು) ಳ್ಳವನೂ । **ಸ್ವಯಶಸಂ**— ಅತಿಶಯವಾದ ತನ್ನ ಯಶಸ್ಸಿನಿಂದ ಕೂಡಿದವನೂ। **ಜನೇಷು**—ಸಕಲಪ್ರದೇಶಗಳಲ್ಲಿಯೂ। **ವಿರೋಚಮಾನಂ**—ಪ್ರಕಾಶಿಸುವವನೂ ಆದ । **ಇಮಂ**— ಈ ಅಗ್ನಿಯನ್ನು । **ತ್ವಷ್ಟುಃ**— ವಾಯುವಿನ ಮೂಲಕ । **ಜನಯಂತ**—ಉತ್ಪನ್ನವಾಗುವಂತೆ ಮಾಡಿದವು (ಮತ್ತು) **ಸೀಂ**— ಇದೇ ಅಗ್ನಿಯನ್ನು । **ಪರಿ**— ಸಕಲಪ್ರದೇಶಗಳಲ್ಲಿಯೂ । **ನಯಂತಿ**— (ಜನರು ತಮ್ಮತಮ್ಮ ಸ್ವಪ್ರಯೋಜನಕ್ಕಾಗಿ) ತೆಗೆದುಕೊಂಡು ಹೋಗುತ್ತಾರೆ.

ಭಾವಾರ್ಥ

ತಮ್ಮ ತಮ್ಮ ನಿತ್ಯಕರ್ಮಗಳಲ್ಲಿ ಆಲಸ್ಯವಿಲ್ಲದೇ ಜಾಗರೂಕರಾಗಿರುವವರೂ, ನಿತ್ಯಯುವತಿಯರೂ ಆದ ಪ್ರಾಚ್ಯಾದಿ ದಶದಿಕ್ಕುಗಳೂ ಸಹ ಮೇಘದಲ್ಲಿ ಗರ್ಭರೂಪದಲ್ಲಿ ಅಂತರ್ಗತನಾಗಿರುವವನೂ, ಸಕಲ ಭೂತಗಳಲ್ಲಿಯೂ ಜಾಠರಾಗ್ನಿರೂಪದಲ್ಲಿ ಹರಡಿರುವವನೂ, ತೀಕ್ಷ್ಣವಾದ ತೇಜಸ್ಸುಳ್ಳವನೂ, ಅತಿಶಯವಾದ ಯಶಸ್ಸಿನಿಂದ ಕೂಡಿದವನೂ, ಸಕಲ ಪ್ರದೇಶಗಳಲ್ಲಿಯೂ ಪ್ರಕಾಶಿಸುವವನೂ ಆದ ಅಗ್ನಿಯನ್ನು ವಾಯುವಿನ ದ್ವಾರಾ ಉತ್ಪನ್ನವಾಗುವಂತೆ ಮಾಡಿದರು. ಇದೇ ಅಗ್ನಿಯನ್ನು ಸರ್ವದೇಶಗಳಲ್ಲೂ ಸಹ ಜನರು ತಮ್ಮ ತಮ್ಮ ಸ್ವಪ್ರಯೋಜನಕ್ಕಾಗಿ ತೆಗೆದುಕೊಂಡು ಹೋಗುತ್ತಾರೆ.

## English Translation

The vigilant and youthful Ten beget, through the wind, this embryo Agni, inherent (in all beings) sharp-visaged, universally renowned, shining among men ; him they conduct ( to every dwelling )

॥ ವಿಶೇಷವಿಷಯಗಳು ॥

ಅಗ್ನಿಯ ಉತ್ಪತ್ತಿಯನ್ನು ನಾನಾ ಕಡೆಯಲ್ಲಿ ವರ್ಣಿಸಿದೆ. ಕೆಲವು ಸಂದರ್ಭಗಳಲ್ಲಿ ಅಗ್ನಿಯ ಉತ್ಪತ್ತಿಗೆ ಮೂಲಸ್ಥಾನವು ಅಂತರಿಕ್ಷವೆಂದೂ. ಮತ್ತು ಕೆಲವು ಸಂದರ್ಭಗಳಲ್ಲಿ ಪೃಥ್ವಿಯೆಂದೂ ಹೇಳಿದೆ. ಈ ಋಕ್ಕಿನ ವರ್ಣನೆಯು ಆ ಎರಡು ವಿಧವಾದ ಅರ್ಥಗಳಿಗೂ ಅವಕಾಶವನ್ನು ಕೊಡುತ್ತದೆ. ಮೊದಲನೆಯದಾಗಿ -

**ದಶ ಇಮಂ ಜನಯಂತಿ ಪ್ರಾಚ್ಯಾದ್ಯಾ ದಶಸಂಖ್ಯಾಕಾ ದಿಶಃ ಇಮಂ ವೈದ್ಯುತಾಗ್ನಿಂ ಉತ್ಪಾದಯಂತಿ** । ಪ್ರಾಚ್ಯಾದಿ ಹತ್ತು ದಿಕ್ಕುಗಳೂ ಈತ ಅಗ್ನಿಯನ್ನು ಉತ್ಪನ್ನವಾಗುವಂತೆ ಮಾಡಿದವು; ಎರಡನೆಯದಾಗಿ, ಎರಡು **ದಶಸಂಖ್ಯಾಕಾ ಅಂಗುಲಯಃ ಉತ್ಪಾದಯಂತಿ** । ಹತ್ತು ಬೆರಳುಗಳು ಅಗ್ನಿಯನ್ನು ಸೃಷ್ಟಿಸುತ್ತವೆ ಎಂದು ಎರಡು ವಿಧವಾಗಿ ಅರ್ಥವನ್ನು ಮಾಡಬಹುದು. ಈ ಎರಡು ವಿಧವಾದ ಅರ್ಥಗಳಿಗೂ ಶ್ರುತಿಪ್ರಮಾಣಗಳಿವೆ. ಅಗ್ನಿಯ ಮೂಲಸ್ಥಾನವು ಅಂತರಿಕ್ಷವಾಗಿದ್ದು, ಸೂಕ್ಷ್ಮರೂಪನಾದ ಅಗ್ನಿಯನ್ನು ಪೃಥಿವ್ಯಂತರಿಕ್ಷಗಳೆರಡೂ ಆವಿರ್ಭವಿಸುವಂತೆ ಮಾಡಿದವು, ಎಂದು ಅಗ್ನ್ಯುತ್ಪತ್ತಿಯ ವರ್ಣನೆಯು,

**ಸ ಜಾತೋ ಗರ್ಭೋ ಅಸಿ ರೋದಸ್ಯೋರಗ್ನೇ ಚಾರುರ್ವಿಭೃತ ಓಷಧೀಷು ।**
( ಋ. ಸಂ. ೧೦-೧-೨ )

**ಯಂ ತ್ವಾ ದ್ಯಾವಾಪೃಥಿವೀ ಯಂ ತ್ವಾಪಸ್ತ್ವಷ್ಟಾ ಯಂ ತ್ವಾ ಸುಜನಿಮಾ ಜಜಾನ ।**
(ಋ. ಸಂ. ೧೦-೨-೭)

ಇತ್ಯಾದಿ ಸಂದರ್ಭಗಳಲ್ಲಿ ಅಗ್ನಿಯ ಉತ್ಪತ್ತಿಗೆ ದ್ಯಾವಾಪೃಥಿವಿಗಳ ಉಭಯವು ಮೂಲವು ಎಂದು ವಿವರಿಸಿರುತ್ತೆ. ಇನ್ನು ಕೆಲವೆಡೆಗಳಲ್ಲಿ—

**ದ್ವಿರ್ಯಂ ಪಂಚ ಜೀಜನನ್ತ್ಸಂವಸಾನಾಃ ಸ್ವಸಾರೋ ಅಗ್ನಿಂ ಮಾನುಷೀಷು ವಿಕ್ಷು ।**
(ಋಂ. ಸಂ. ೪-೬-೮)

ಎರಡು ಕೈಗಳ ಹತ್ತು ಬೆರಳುಗಳೂ ಅಗ್ನಿಯನ್ನು ಸೃಷ್ಟಿಸಿದವು ಎಂದು ಪಾರ್ಥಿವವಾದ ಅಗ್ನ್ಯುತ್ಪತ್ತಿಯ ಕ್ರಮವನ್ನು ವಿವರಿಸಿವೆ. ಆದುದರಿಂದ ಈ ಸಂದರ್ಭದಲ್ಲಿ **ದಶ** ಎಂಬ ಪದಕ್ಕೆ ಪೃಥಿವ್ಯಂತರಿಕ್ಷಗಳನ್ನು ಆವರಿಸಿರುವ ದಶದಿಕ್ಕುಗಳೆಂದಾಗಲಿ, ಅಥವಾ ಮಥನ ಕಾರ್ಯದಲ್ಲಿ ಉದ್ಯುಕ್ತವಾಗುವ ಹತ್ತು ಬೆರಳುಗಳೆಂದಾಲಿ ಅರ್ಥವನ್ನು ಮಾಡಬಹುದು. ದಶದಿಕ್ಕುಗಳೆಂದು ಅರ್ಥಮಾಡಿದರೆ **ಅತಂದ್ರಾಸಃ** ಎಂಬ ಪದಕ್ಕೆ **ಸ್ವಕಾರ್ಯೇ ಜಗತಃ ಪೋಷಣೇಽನಲಸಾಃ ಜಾಗರೂಕಾಃ** । ಜಗತ್ತನ್ನು ರಕ್ಷಿಸುವ ತಮ್ಮ ಕರ್ತವ್ಯಗಳಲ್ಲಿ ಆಲಸ್ಯವಿಲ್ಲದೇ ಜಾಗರೂಕವಾಗಿರುವ ಎಂದೂ **ಯುವತಯಃ** ಎಂಬ ವಿಶೇಷಣಕ್ಕೆ **ನಿತ್ಯತರುಣ್ಯಃ** । ಜರಾಮರಣಗಳಿಲ್ಲದ ನಿತ್ಯತರುಣರಾಗಿರುವ ಎಂದೂ ಅರ್ಥವು. ಅಥವಾ ಹತ್ತು ಬೆರಳುಗಳು ಎಂದು ಅರ್ಥಮಾಡಿದರೆ, **ಅತಂದ್ರಾಸಃ** ಎಂಬ ವಿಶೇಷಣಕ್ಕೆ **ಪುನಃಪುನಃ ಕರ್ಮಕರಣೇ ಆಲಸ್ಯರಹಿತಾಃ** ಪುನಃಪುನಃ ಕಾರ್ಯಗಳನ್ನು ನೆರವೇರಿಸುವುದಕ್ಕೆ ಆಲಸ್ಯವಿಲ್ಲದೇ ಕರ್ತವ್ಯಪರವಾಗಿರುವ ಎಂದೂ, **ಯುವತಯಃ** ಎಂಬುದಕ್ಕೆ **ಏಕಸ್ಮಿನ್ ಪಾಣೌ ಸಂಹೃತ್ಯ ಅವಸ್ಥಿತಾಃ** । ಒಂದೇ ಕೈಯಿನಲ್ಲಿ ಒಟ್ಟಿಗೆ ಸೇರಿಕೊಂಡು ಒಂದೇ ಸ್ಥಾನದಲ್ಲಿರುವ ಎಂದೂ ಅಭಿಪ್ರಾಯವು.

**ಗರ್ಭಂ**—ಮೇಘದಲ್ಲಿ ಅಂತರ್ಗತವಾಗಿ ಗರ್ಭರೂಪದಲ್ಲಿರುವ (ಮಿಂಚಿನ ರೂಪದಲ್ಲಿರುವ) ಅಗ್ನಿಯನ್ನು

**ಸ ಈಂ ವೃಷಾಜನಯತ್ತಾಸು ಗರ್ಭಂ ಸ ಈಂ ಶಿಶುರ್ಧಯತಿ ತಂ ರಿಹಂತಿ ।**
(ಋ. ಸಂ. ೨-೩೫-೧೩)

**ಗರ್ಭೋ ಯೋ ಅಪಾಂ ಗರ್ಭೋ ವನಾನಾಂ ಗರ್ಭಶ್ಚ ಸ್ಥಾತಾಂ ಗರ್ಭಶ್ಚರಥಾಂ ।** ,
(ಋ. ಸಂ. ೧-೭೦-೩)

ಎಂದು ವೈದ್ಯುತಾಗ್ನಿಯನ್ನು ವರ್ಣಿಸುವಾಗ ಮೇಘರೂಪವಾದ ಉದಕಗಳಲ್ಲಿ ಗರ್ಭರೂಪದಲ್ಲಿರುವ ಅಗ್ನಿಯೆಂದು ಹೇಳಿರುವಂತೆ ಇಲ್ಲಿಯೂ ಗರ್ಭರೂಪದ ಅಗ್ನಿಯೆಂದು ವಿಶೇಷಣವನ್ನು ಹೇಳಿದೆ.

**ವಿಭೃತ್ರಂ—ಸರ್ವೇಷು ಭೂತೇಷು ವಿಹೃತಂ। ಜಾಠರರೂಪೇಣ ವಿಭಜ್ಯ ವರ್ತಮಾನಮಿತ್ಯರ್ಥಃ** ಜಾಠರಾಗ್ನಿ ರೂಪದಲ್ಲಿ ಸಕಲ ಭೂತಗಳಲ್ಲಿ ವ್ಯಾಪಿಸಿ,

**ತಿಷ್ಠತ್ಯೇವ ಹಿ ಭೂತಾನಾಂ ಜಠರೇ ಜಠರೇ ಜ್ವಲನ್ ।**

(ಬೃ. ದೇ. ೧-೬-೫)

ಎಂದು ಬೃಹದ್ದೇವತೆಯಲ್ಲಿ ವರ್ಣಿಸುವಂತೆ ಎಲ್ಲಾ ಪ್ರಾಣಿಗಳ ಉದರಗಳಲ್ಲಿಯೂ ಹರಡಿರುವ ಅಗ್ನಿಯನ್ನು.

**ತಿಗ್ಮಾನೀಕಂ—ತಿಗ್ಮಂ ತೇಜತೇಃ** (ನಿ. ೧೦-೬) ಹರಿತವಾಗಿ ಮಾಡು, ಮೊನೆಚಾಗಿಮಾಡು ಎಂಬ ಅರ್ಥವನ್ನು ಕೊಡುವ **ತಿಜ್** ಧಾತುವಿನಿಂದ **ತಿಗ್ಮ** ಶಬ್ದವಾಗಿದೆ. **ತೀಕ್ಷ್ಣಮುಖಂ ತೀಕ್ಷ್ಣತೇಜಸಂ** ದೃಷ್ಟಿಯಿಟ್ಟು ನೋಡಲು ಸಾಧ್ಯವಿಲ್ಲದಿರುವಷ್ಟು ತೀವ್ರವಾದ ತೇಜಸ್ಸುಳ್ಳ ವೈದ್ಯುತಾಗ್ನಿಯೆಂದು ಸಾಯಣರೂ, **ಅನೀಕಮಿತ್ಯಪಿ ಲೋಕೇ ಖಡ್ಗಸ್ಯ ಮುಖಮುಚ್ಯತೇ। ಇಹ ತು ತೀಕ್ಷ್ಣಾಗ್ರತ್ವಾದೇಸ್ತತ್ಸಾದೃಶ್ಯಾತ್ ಜ್ವಾಲಾ ಉಚ್ಯಂತೇ। ತೀಕ್ಷ್ಣಜ್ವಾಲಮಿತ್ಯರ್ಥಃ ಅಥವಾ ತೀಕ್ಷ್ಣಜ್ವಾಲಾಸಮೂಹಮಿತ್ಯರ್ಥಃ।** ಅನೀಕಶಬ್ದವು ಲೋಕದಲ್ಲಿ ಸಾಧಾರಣವಾಗಿ ಖಡ್ಗದ ಮುಖಕ್ಕೆ ಪರ್ಯಾಯವಾಗಿದ್ದರೂ ಇಲ್ಲಿ ತೀಕ್ಷ್ಣವಾದ ಮುಖವಿರೋಣದರಿಂದಲೂ ಹರಿತ ಖಡ್ಗದ ಮುಖಕ್ಕೆ ಸದೃಶವಾಗಿರುವುದರಿಂದಲೂ ಜ್ವಾಲೆಗೆ ಪರ್ಯಾಯವಾಗಿ ಉಪಯೋಗಿಸಿದೆ. ತೀಕ್ಷ್ಣವಾದ ಜ್ವಾಲೆಯುಳ್ಳ ಅಥವಾ ಜ್ವಾಲಾಸಮುಹವುಳ್ಳ ಎಂದರ್ಥವಾಗುತ್ತೆಂದು ಸ್ಕಂದಸ್ವಾಮಿಗಳು ವಿವರಿಸಿರುತ್ತಾರೆ. ಅಗ್ನಿಗೆ **ತಿಗ್ಮಹೇತಿಃ, ತಿಗ್ಮಭೃಷ್ಟಿಃ, ತಿಗ್ಮಜಂಭಃ** ಎಂಬ ವಿಶೇಷಣಗಳು ಬಹಳ ಸಂದರ್ಭಗಳಲ್ಲಿ ಉಪಯೋಗಿಸಲ್ಪಟ್ಟಿವೆ.

**ಉದಗ್ನೇ ತಿಷ್ಠ ಪ್ರತ್ಯಾ ತನುಷ್ವ ನ್ಯ೧ಮಿತ್ರಾँ ಓಷತಾತ್ತಿಗ್ಮಹೇತೇ ।**

( ಋ ಸಂ. ೪-೪-೪ )

**ಸಾಮ ದ್ವಿಬರ್ಹಾ ಮಹಿ ತಿಗ್ಮಭೃಷ್ಟಿಃ ಸಹಸ್ರರೇತಾ ವೃಷಭಸ್ತುವಿಷ್ಮಾನ್ ।**

(ಋ. ಸಂ. ೪-೫-೩)

ಇತ್ಯಾದಿ ನಾನಾ ಸನ್ನಿವೇಶಗಳಲ್ಲಿ ಈ ವಿಶೇಷಣಗಳು ಅಗ್ನಿಪರವಾಗಿ ಉಪಯೋಗಿಸಲ್ಪಟ್ಟು ಅಗ್ನಿಯ ಸ್ವರೂಪವನ್ನು ವರ್ಣಿಸುತ್ತವೆ.

**ಸ್ವಯಶಸಂ—ಆತ್ಮನಿಮಿತ್ತಕೀರ್ತಿಂ।** ತನ್ನ ಮಾಹಾತ್ಮ್ಯವನ್ನು ಹೊಗಳತಕ್ಕ ಕೀರ್ತಿಯುಳ್ಳವನಾದ (ಅಗ್ನಿಯನ್ನು)

**ತ್ವಷ್ಟುಃ ಜನಯಂತ—**ತ್ವಷ್ಟೃವಿನ ಮೂಲಕ ಉತ್ಪನ್ನವಾಗುವಂತೆ ಮಾಡಿದರು. ಇಲ್ಲಿ **ತ್ವಷ್ಟೃ**ಶಬ್ದಕ್ಕೆ ಸಾಯಣರು ವಾಯುವಿನ ಮೂಲಕವಾಗಿ ಎಂದರ್ಥಮಾಡುತ್ತಾರೆ. **ತ್ವಷ್ಟೃ**ಶಬ್ದದ ಅನುಸಾರಾರ್ಥವನ್ನು ಬಿಡಿಸುತ್ತಾ **ದೀಪ್ತಾತ್ ಮಧ್ಯಮಾತ್ ವಾಯೋಃ।** ಪ್ರಕಾಶಮಾನನೂ ಮಧ್ಯಮಲೋಕವರ್ತಿಯೂ ಆದ ವಾಯುವಿನ ಮೂಲಕ ಎಂದು ವಿವರಿಸಿರುವರು. ಇಲ್ಲಿ ಧಾತ್ವರ್ಥದ ಮೇಲೆ ಪರಂಪರೆಯಾಗಿ ವಾಯುವೆಂದು ಅರ್ಥಮಾಡಬೇಕೇ ವಿನಹ

ತ್ವಷ್ಟೃ ಶಬ್ದವು ವಾಯುವಿನ ಪರ್ಯಾಯವಾಗಿ ಋಕ್ಸಂಹಿತೆಯಲ್ಲಿ ಉಪಯೋಗಿಸಿರುವಂತೆ ಕಾಣುವುದಿಲ್ಲ. ಮುಂದೆಯೂ ಸಹ ಅಗ್ನ್ಯುತ್ಪತ್ತಿಯ ಸ್ವರೂಪವನ್ನು ವಿವರಿಸುವಾಗ **ತ್ವಷ್ಟೃ** ಶಬ್ದವನ್ನು ಉಪಯೋಗಿಸಿರುವಾಗ ಸಾಯಣರು **ತ್ವಷ್ಟಾ--ಪ್ರಜಾಪತಿಃ** ಎಂದರ್ಥವನ್ನು ಹೇಳುತ್ತಾರೆ.

**ಯಂ ತ್ವಾ ದ್ಯಾವಾಪೃಥಿವೀ ಯಂ ತ್ವಾಪಸ್ತ್ವಷ್ಟಾ ಯಂ ತ್ವಾ ಸುಜನಿಮಾ ಜಜಾನ ।**
( ಋ. ಸಂ. ೧೦-೨-೭ )

ಎಂಬ ಸ್ಥಳದಲ್ಲಿ **ತ್ವಷ್ಟಾ** ಎಂಬ ಪದಕ್ಕೆ **ಪ್ರಜಾಪತಿಃ** ಎಂದು ವ್ಯಾಖ್ಯಾನವನ್ನು ಮಾಡುತ್ತಾರೆ. ಸ್ಕಂದಸ್ವಾಮಿಗಳು ಇಲ್ಲಿ ಅರ್ಥವಿವರಣೆಯನ್ನೇ ಮಾಡದೆ ಆ ಪದವನ್ನೇ ಉಪಯೋಗಿಸಿ ವಿವರಿಸುತ್ತಾ **ಅಥ ತ್ವಷ್ಟಾ ದಿಕ್ಷ್ವಗ್ನಿಮಜನಯತ್ ।** ಎಂದು ಪೂರ್ವದ ಕಥಾಸಂದರ್ಭವನ್ನು ವಿವರಿಸುತ್ತಾರೆ. **ಅತ್ರೇತಿಹಾಸಮಾಚಕ್ಷತೇ । ಸರ್ವಮಿದಮಂಧೇನ ತಮಸಾ ಕ್ಷಣೇನೈವಾವೃತಮಭವತ್ ಅಥ ತ್ವಷ್ಟಾ ದಿಕ್ಷ್ವಗ್ನಿಮಜನಯತ್ । ತಸ್ಮಿನ್ನತ್ಯರ್ಥಂ ಪ್ರವರ್ಧಮಾನೇ ಆಕಾಶೇ ಪ್ರಾಜ್ವಲನ್ । ತಂ ದಿಶಃ ದ್ಯಾವಾಪೃಥಿವ್ಯೌ ಚಾಮೃತೇನ ತರ್ಪಯಿತ್ವಾ ತತ್ರ ತತ್ರ ವಿಹೃತವತ್ಯ ಇತಿ ।** ಹಿಂದೆ ಕಗ್ಗತ್ತಲೆಯಿಂದ ಜಗತ್ತೆಲ್ಲವೂ ಆವೃತವಾದಾಗ ತ್ವಷ್ಟೃವು ದಿಕ್ಕುಗಳಲ್ಲಿ ಅಗ್ನಿಯನ್ನು ಸೃಷ್ಟಿಸಿದನು. ಆಗ ಅಗ್ನಿಯು ಪೋಷಕ ಸಾಮಗ್ರಿಗಳಿಲ್ಲದೆಯೂ ಸಹ ಆಕಾಶದಲ್ಲಿ ಬೆಳಗುತ್ತಿದ್ದಾಗ ದ್ಯಾವಾಪೃಥಿವಿಗಳೂ, ದಶದಿಕ್ಕುಗಳೂ ಅವನನ್ನು ಅಮೃತದಿಂದ ತೃಪ್ತಿಪಡಿಸಿದರು ಎಂಬ ಕಥೆಯು **ಅಗ್ನಿ—ಮಾತರಿಶ್ವರ** (ಋ. ಸಂ. ೧-೯೬-೬). ಕಥಾ ಸಂದರ್ಭಕ್ಕೆ ಸದೃಶವಾಗಿರುವುದರಿಂದ **ತ್ವಷ್ಟೃ**ವೆಂದರೆ ವಾಯುವೇ ಆಗಿರಬೇಕೆಂದು ಸ್ಕಂದಸ್ವಾಮಿಗಳು ಸೂಚಿಸಿರುವರೆಂದು ತಿಳಿಯಬೇಕಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ತ್ವಷ್ಟುಃ**—ತ್ವಿಷ ದೀಪ್ತೌ ಧಾತು. **ನಪ್ತೃನೇಷ್ಟೃತ್ವಷ್ಟೃ**— (ಉ. ಸೂ. ೨-೫೨) ಎಂಬುದರಿಂದ ತೃನಂತವಾಗಿ ಇದು ನಿಪಾತಿತವಾಗಿದೆ. ತೃನ್ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**— (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತವಾಗುತ್ತದೆ. ಇದಕ್ಕೆ ಪಂಚಮೀಏಕವಚನ ಙಸ್ ಪರವಾದಾಗ **ಋತ ಉತ್** (ಪಾ. ಸೂ. ೬-೧-೧೧೧) ಎಂಬುದರಿಂದ ಋಕಾರಕ್ಕೂ ಪ್ರತ್ಯಯಾಕಾರಕ್ಕೂ ಉತ್ತು ಏಕಾದೇಶವಾಗಿ ಬರುತ್ತದೆ. ಋಕಾರಸ್ಥಾನಕ್ಕೆ ಬರುವುದರಿಂದ **ಉರಣ್ರಪರಃ**—ಎಂಬುದರಿಂದ ರಪರವಾಗಿ ಬರುತ್ತದೆ. **ರಾತ್ಸಸ್ಯ**—(ಪಾ. ಸೂ. ೮-೨-೨೪) ಎಂಬುದರಿಂದ ರೇಫದ ಪರದಲ್ಲಿರುವ ಪ್ರತ್ಯಯಸಕಾರಕ್ಕೆ ಲೋಪ. **ಖರವಸಾನಯೋರ್ವಿ**— ಎಂಬುದರಿಂದ ರೇಫಕ್ಕೆ ಅವಸಾನದಲ್ಲಿ ವಿಸರ್ಗ.

**ಜನಯಂತ**— ಜನೀ ಪ್ರಾದುರ್ಭಾವೇ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತುಮತಿ ಚ** ಎಂಬುದರಿಂದ ಣಿಚ್. **ಅತ ಉಪಧಾಯಾಃ** ಸೂತ್ರದಿಂದ ಉಪಧಾವೃದ್ಧಿ. **ಜನೀಜೄಷ್ಕ್ನಸುರಂಜೋಽಮಂತಾಶ್ಚ** ಎಂಬುದರಿಂದ ಇದಕ್ಕೆ ಮಿತ್‌ಸಂಜ್ಞಾ ಬರುವುದರಿಂದ ಣಿಚ್ ಪರವಾದಾಗ **ಮಿತಾಂ ಹ್ರಸ್ವಃ** (ಪಾ. ೬-೪-೯೨) ಎಂಬುದರಿಂದ ಉಪಧೆಗೆ ಹ್ರಸ್ವ ಬರುತ್ತದೆ. ವರ್ತಮಾನಾರ್ಥದಲ್ಲಿ **ಛಂದಸಿ ಲುಙ್ ಲಙ್ ಲಿಟಃ** ಎಂಬುದರಿಂದ ಲಙ್. ಪ್ರಥಮಪುರುಷಬಹುವಚನದಲ್ಲಿ ಝಿಪ್ರತ್ಯಯಕ್ಕೆ **ಝೋಽಂತಃ** ಎಂಬುದರಿಂದ ಅಂತಾದೇಶ. ಶಪ್ ವಿಕರಣ. ತನ್ನಿಮಿತ್ತವಾಗಿ ಣಿಚಿಗೆ ಗುಣ ಅಯಾದೇಶ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅತಂದ್ರಾಸಃ**—ಅತಂದ್ರ ಶಬ್ದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ೭-೧-೧೦೦) ಎಂಬುದರಿಂದ ಜಸಿಗೆ ಅಸುಕಾಗಮ.

**ಯುವತಯಃ**-ಯುವನ್ ಶಬ್ದ. ಇದಕ್ಕೆ ಸ್ತ್ರೀತ್ವವಿವಕ್ಷಾವಾದಿದಾಗ **ಯೂನಸ್ತಿಃ**(ಪಾ. ಸೂ. ೪-೧-೭೭) ಎಂಬುದರಿಂದ ತಿಪ್ರತ್ಯಯ. ಪದಸಂಜ್ಞಾ ಇರುವುದರಿಂದ **ನಲೋಪಃ ಪ್ರಾತಿಪದಿಕಾಂತಸ್ಯ** ಎಂಬುದರಿಂದ ನಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವಿಭೃತ್ರಮ್**—ಹೃಞ್ ಹರಣೇ ಧಾತು. ಇದಕ್ಕೆ ಕರ್ಮಣಿಯಲ್ಲಿ **ನಿಷ್ಠಾ** (ಪಾ ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. ಛಾಂದಸವಾಗಿ ರೇಫಾಗಮ ಬಂದಿದೆ. ಪ್ರತ್ಯಯ ಕಿತ್ತಾದುದರಿಂದ ಧಾತುವಿನ ಇಕಿಗೆ ಗುಣ ಬರುವುದಿಲ್ಲ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ವಿ)ಪ್ರಕೃತಿಸ್ವರ (ಉದಾತ್ತ) ಬರುತ್ತದೆ. **ಹೃಗ್ರಹೋರ್ಭಶ್ಛಂದಸಿ** ಎಂಬ ವಾರ್ತಿಕದಿಂದ ಸಂಹಿತಾದಲ್ಲಿ ಹಕಾರಕ್ಕೆ ಭಕಾರಾದೇಶ ಬರುತ್ತದೆ. ಅಥವಾ ಹೃಞ್‌ಧಾತುವಿಗೆ ಔಣಾದಿಕವಾದ ಕ್ತ್ರಪ್ರತ್ಯಯ. ಇದರಿಂದ ಛಾಂದಸಕಾರ್ಯಕಲ್ಪನೆಮಾಡುವ ಗೌರವವಿಲ್ಲ.

**ತಿಗ್ಮಾನೀಕಂ**—ತಿಜ ನಿಶಾನೇ ಧಾತು. **ಯುಜಿರುಚಿತಿಜಾಂಕುತ್ವಂಚ** (ಉ. ಸೂ. ೧-೧೪೩) ಎಂಬುದರಿಂದ ಇದಕ್ಕೆ ಮಕ್ ಪ್ರತ್ಯಯ. ತತ್ಸಂನಿಯೋಗದಿಂದ ಕುತ್ವ. ಪ್ರತ್ಯಯ ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ತಿಗ್ಮಂ ತೀಕ್ಷ್ಣಂ ಅನೀಕಂ ಯಸ್ಯ ಸಃ. ತಿಗ್ಮಾನೀಕಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ. ಅನ ಪ್ರಾಣನೇ ಧಾತು. **ಅನಿದೃಶಿಭ್ಯಾಂ ಚ** (ಉ. ಸೂ. ೪-೩-೫೨) ಎಂಬುದರಿಂದ ಕೀಕನ್‌ಪ್ರತ್ಯಯ.

**ವಿರೋಚಮಾನಮ್**—ರುಚ ದೀಪ್ತೌ ಧಾತು. ಲಡರ್ಥದಲ್ಲಿ ಶಾನಚ್‌ಪ್ರತ್ಯಯ. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಲಘೂಪಧಗುಣ. ಶಪ್‌ವಿಕರಣ. **ಆನೇಮುಕ್** ಎಂಬುದರಿಂದ ಆನ ಎಂಬುದು ಪರವಾದಾಗ ಅಜಂತಾಂಗಕ್ಕೆ ಮುಕಾಗಮ. **ಗತಿಕಾರಕೋಪಪದಾತ್‌ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಪರಿಷೀಮ್**—ಪರಿ+ಸೀಮ್ ಎಂದಿರುವಾಗ **ಪೂರ್ವಪದಾತ್** (ಪಾ. ಸೂ. ೮-೪-೩) ಎಂಬುದರಿಂದ ಪೂರ್ವಪದದ ನಿಮಿತ್ತದ ಪರದಲ್ಲಿ ಸಕಾರ ಬಂದುದರಿಂದ ಷತ್ವ ಬರುತ್ತದೆ.

**ನಯಂತಿ**—ಣೀಞ್ ಪ್ರಾಪಣೇ ಧಾತು. **ಣೋನಃ** ಎಂಬುದರಿಂದ ಣಕಾರಕ್ಕೆ ನತ್ವ. ಲಟ್ ಪ್ರಥಮ ಪುರುಷ ಬಹುವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

———— :O: ————

ಸಂಹಿತಾಪಾಠಃ

ತ್ರೀಣಿ ಜಾನಾ ಪರಿ ಭೂಷಂತ್ಯಸ್ಯ ಸಮುದ್ರ ಏಕಂ ದಿವ್ಯೇಕ-
ಮಪ್ಸು ।
ಪೂರ್ವಾಮನು ಪ್ರ ದಿಶಂ ಪಾರ್ಥಿವಾನಾಮೃತೂನ್ಪ್ರಶಾಸದ್ವಿ
ದಧಾವನುಷ್ಠು ॥ ೩ ॥

ಪದಪಾಠಃ

ತ್ರೀಣಿ । ಜಾನಾ । ಪರಿ । ಭೂಷಂತಿ । ಅಸ್ಯ । ಸಮುದ್ರೇ । ಏಕಂ । ದಿವಿ । ಏಕಂ ।
ಅಪ್ ಽ ಸು ।
ಪೂರ್ವಾಂ । ಅನು । ಪ್ರ । ದಿಶಂ । ಪಾರ್ಥಿವಾನಾಂ । ಋತೂನ್ । ಪ್ರ ಽ ಶಾಸತ್ ।
ವಿ । ದಧೌ । ಅನುಷ್ಠು ॥ ೩ ॥

ಸಾಯಣಭಾಷ್ಯಂ

ಅಸ್ಯಾಗ್ನೇಸ್ತ್ರೀಣಿ ತ್ರಿಸಂಖ್ಯಾಕಾನಿ ಜಾನಾ ಜನನಾನಿ ಜನ್ಮಾನಿ ಪರಿ ಭೂಷಂತಿ । ಪರಿತಃ ಸರ್ವತೋಽಲಂಕುರ್ವಂತಿ । ಯದ್ವಾ । ಪರೀತ್ಯೇಷ ಸಮಿತ್ಯೇತಸ್ಯ ಸ್ಥಾನೇ । ಅಸ್ಯಾಗ್ನೇಸ್ತ್ರೀಣಿ ಜನ್ಮಾನಿ ಸಂಭವಂತಿ । ಸಮುದ್ರೇಽಬ್ಧೌ ವಡವಾನಲರೂಪೇಣೈಕಂ ಜನ್ಮ । ದಿವಿ ದ್ಯುಲೋಕ ಆದಿತ್ಯಾತ್ಮನೈಕಂ । ಅಪ್ಸು । ಆಪ ಇತ್ಯಂತರಿಕ್ಷನಾಮ । ಅಂತರಿಕ್ಷೇ ವೈದ್ಯುತಾಗ್ನಿರೂಪೇಣೈಕಂ । ಏವಮಗ್ನಿಸ್ತ್ರೇಧಾತ್ಮಾನಂ ವಿಭಜ್ಯ ತ್ರಿಷು ಸ್ಥಾನೇಷು ವರ್ತತ ಇತ್ಯರ್ಥಃ । ತತ್ರಾದಿತ್ಯಾತ್ಮನಾ ವರ್ತಮಾನಃ ಸೋಽಗ್ನಿರ್ಋತೂನ್ವಸಂತಾದ್ಯಾನ್ ಷಡೃತೂನ್ಪ್ರಶಾಸತ್ ಪ್ರಕರ್ಷೇಣ ವಿಭಕ್ತತಯಾ ಜ್ಞಾಪಯನ್ಪಾರ್ಥಿವಾನಾಂ ಪೃಥಿವ್ಯಾಃ ಸಂಬಂಧಿನಾಂ ಸರ್ವೇಷಾಂ ಪ್ರಾಣಿನಾಂ ಪೂರ್ವಾಂ ಪ್ರಾಚೀಂ ಪ್ರದಿಶಂ ಪ್ರಕೃಷ್ಟಾಂ ಕಕುಭಂ । ಅನುಷ್ಠ್ವಿತ್ಯೇತದವ್ಯಯಂ ಸಮ್ಯಕ್ಶಬ್ದಸಮಾನಾರ್ಥಂ ಸುಷ್ಟ್ವಿತಿ ಯಥಾ । ಸಮ್ಯಗನುಕ್ರಮೇಣ ವಿ ದಧೌ । ಕೃತವಾನ್ । ಸ್ವತೋ ಭೇದರಹಿತಯೋರಖಂಡಯೋರ್ದಿಕ್ಕಾಲಯೋಃ ಪ್ರಾಚ್ಯಾದಿಭೇದೋ ವಸಂತಾದಿಭೇದಶ್ಚ ಸೂರ್ಯಗತ್ಯಾ ನಿಷ್ಪಾದ್ಯತೇ । ಅತಃ ಸೂರ್ಯ ಏವ ತಯೋಃ ಕರ್ತೇತ್ಯರ್ಥಃ ॥

ಜಾನಾ । ಜನೀ ಪ್ರಾದುರ್ಭಾವೇ । ಘಞ್ । ಕರ್ಷಾತ್ವತ ಇತ್ಯಂತೋದಾತ್ತತ್ವೇ ಪ್ರಾಪ್ತೇ ವೃಷಾದೇರಾಕೃತಿಗಣತ್ವಾದಾದ್ಯುದಾತ್ತತ್ವಂ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಭೂಷಂತಿ । ಭೂಷ

ಅಲಂಕಾರೇ । ಭೌವಾದಿಕಃ । ಯದ್ವಾ । ಭವತೇರ್ಲೇಟಿ ಸಿಬ್ಬಹುಲಂ ಲೇಟೀತಿ ಸಿಪ್ । ಆಗಮಾನುಶಾಸನಸ್ಯಾನಿತ್ಯತ್ವಾದಿಡಭಾವಃ, ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದ್ಗುಣಾಭಾವಶ್ಚ । ದಿವಿ । ಅಪ್ಸು । ಉಭಯತ್ರೋಡಿದಮಿತಿ ವಿಭಕ್ತೇರುದಾತ್ತತ್ವಂ । ಪಾರ್ಥಿವಾನಾಂ । ಪೃಥಿವ್ಯಾ ಞಾಞಾವಿತಿ ಪ್ರಾಗ್ದೀವ್ಯತೀಯೋಽಞ್ಪ್ರತ್ಯಯಃ । ಪ್ರಶಾಸತ್ । ಶಾಸು ಅನುಶಿಷ್ಟೌ । ಅಸ್ಮಾಲ್ಲಟಃ ಶತೃ । ಜಕ್ಷಿತ್ಯಾದಯಃ ಷಡಿತ್ಯಭ್ಯಸ್ತಸಂಜ್ಞಾಯಾಂ ನಾಭ್ಯಸ್ತಾಚ್ಛತುರಿತಿ ನುಮ್ಪ್ರತಿಷೇಧಃ । ಕೃದುತ್ತರಪದಪ್ರಕೃತಿಸ್ವರತ್ವಂ । ಅನುಷ್ಠು । ಅಪದುಃಸುಷು ಸ್ಥಃ । ಉ. ೧-೨೬ । ಇತಿ ವಿಧೀಯಮಾನಃ ಕುಪ್ರತ್ಯಯೋ ಬಹುಲವಚನಾತ್ತಿಷ್ಠತೇರನುಪೂರ್ವಾದಪಿ ಭವತಿ ॥

॥ ಪ್ರತಿಪದಾರ್ಥ ॥

**ಅಸ್ಯ**— ಈ ಅಗ್ನಿಗೆ । **ತ್ರೀಣಿ ಜಾನಾ**— ಮೂರು ಜನ್ಮಸ್ಥಾನಗಳು । **ಪರಿ ಭೂಷಂತಿ**—ಸುತ್ತಲೂ ಅಲಂಕರಿಸುತ್ತವೆ. ಅಥವಾ ಸಂಭವಿಸುತ್ತವೆ । **ಸಮುದ್ರೇ**—ಸಮುದ್ರದಲ್ಲಿ । **ಏಕಂ**—(ಬಡಬಾನಲ ರೂಪದಲ್ಲಿ) ಒಂದು ಉತ್ಪತ್ತಿಸ್ಥಾನವು । **ದಿವಿ**—ದ್ಯುಲೋಕದಲ್ಲಿ । **ಏಕಂ**—(ಆದಿತ್ಯರೂಪದಲ್ಲಿ) ಒಂದು ಉತ್ಪತ್ತಿ ಸ್ಥಾನವು । **ಅಪ್ಸು**—ಅಂತರಿಕ್ಷದಲ್ಲಿ (ಮಿಂಚಿನ ರೂಪದಲ್ಲಿ ಮೂರನೆಯ ಜನ್ಮ ಸ್ಥಾನವು) । **ಋತೂನ್**—(ಇವುಗಳಲ್ಲಿ ಆದಿತ್ಯ ರೂಪದಲ್ಲಿರುವ ಅಗ್ನಿಯು ವಸಂತಾದಿ ಆರು) ಋತುಗಳನ್ನೂ । **ಅನು ಪ್ರಶಾಶತ್**— ಕ್ರಮವಾಗಿ ವಿಭಾಗಮಾಡಿ ತಿಳಿಸುತ್ತಾ । **ಪಾರ್ಥಿವಾನಾಂ**— ಪೃಥಿವಿಗೆ ಸಂಬಂಧಿಸಿದ ಸಕಲ ಪ್ರಾಣಿಗಳಿಗೂ । **ಪೂರ್ವಾಂ ಪ್ರದಿಶಂ**—ಶ್ರೇಷ್ಠವಾದ ಪೂರ್ವದಿಕ್ಕನ್ನು । **ಅನುಷ್ಠು**—ಅನುಕ್ರಮವಾಗಿ । **ವಿ ದಧೌ**—ಉಂಟುಮಾಡಿದನು ॥

ಭಾವಾರ್ಥ

ಈ ಅಗ್ನಿಗೆ ಬಡಬಾನಲರೂಪದಲ್ಲಿ ಸಮುದ್ರದಲ್ಲಿ ಒಂದೂ, ಆದಿತ್ಯರೂಪದಿಂದ ದ್ಯುಲೋಕದಲ್ಲಿ ಒಂದೂ, ವಿದ್ಯುದ್ರೂಪದಿಂದಲೇ ಅಂತರಿಕ್ಷದಲ್ಲಿ ಒಂದೂ, ಹೀಗೆ ಮೂರು ಜನ್ಮಸ್ಥಾನಗಳಿವೆ. ಈ ಮೂರು ರೂಪಗಳ ಪೈಕಿ ಆದಿತ್ಯರೂಪದಲ್ಲಿರುವ ಅಗ್ನಿಯು ಪೃಥ್ವಿಯ ಪ್ರಾಣಿಗಳಿಗೆ ದೇಶಕಾಲಗಳ ವಿಭಾಗವನ್ನುಂಟುಮಾಡುತ್ತಾನೆ. ವಸಂತಾದಿ ಆರುಋತುಗಳನ್ನು ಕ್ರಮವಾಗಿ ವಿಭಾಗಿಸಿ ತೋರಿಸುವುದರಿಂದ ಕಾಲವನ್ನೂ, ಪ್ರಾಚ್ಯಾದಿ ದಿಕ್ಕುಗಳನ್ನೂ ತೋರಿಸುವುದರಿಂದ ದೇಶವನ್ನೂ ಅನುಕ್ರಮವಾಗಿ ತೋರಿಸಿಕೊಡುವನು. ಇವನೇ ಕಾಲದೇಶಗಳ ಸೃಷ್ಟಿಕರ್ತನು.

English Translation

They contemplate three places of his birth ; one in the ocean, one in the heaven, one in the firmament ; and, dividing the seasons of the year for the benefit of earthly creatures, he formed, in regular sucession, the eastern quarter.

ವಿಶೇಷವಿಷಯಗಳು

**ತ್ರೀಣಿ ಜಾನಾ—ತ್ರಿಸಂಖ್ಯಾಕಾನಿ ಜನನಾನಿ** । ಮೂರು ವಿಧವಾದ ಜನ್ಮಗಳು, ಎಂದು ಆ ಮೂರು ಜನ್ಮಸ್ಥಾನಗಳನ್ನೂ ಒಂದೊಂದಾಗಿ ಹೇಳಿದೆ. ಈ ವರ್ಣನೆಯು ಅಗ್ನಿಯ ಆವಿರ್ಭಾವಕ್ಕೆ ಮೂಲಸ್ವರೂಪವನ್ನು

ತಿಳಿಸುತ್ತದೆ. ಅಗ್ನಿಯ ಮೂರು ವಿಧವಾದ ಅಸ್ತಿತ್ವವೂ, ಅವಕ್ಕೆ ಅನುಗುಣವಾಗಿ ಮೂರು ವಿಧವಾದ ಆವಿರ್ಭಾವವೂ ಜಗತ್ತಿನ ಮೂಲತತ್ತ್ವವನ್ನೇ ಪ್ರತಿಬಿಂಬಿಸುತ್ತವೆ ಎಂಬುದು ಬೃಹದ್ದೇವತೆಯ ವಿವರಣೆಯಿಂದ ತಿಳಿಯುತ್ತದೆ.

ಭವದ್ಭೂತಸ್ಯ ಭವ್ಯಸ್ಯ ಜಂಗಮಸ್ಥಾವರಸ್ಯ ಚ ।
ಅಸ್ಯೈಕೇ ಸೂರ್ಯಮೇವೈಕಂ ಪ್ರಭವಂ ಪ್ರಲಯಂ ವಿದುಃ ॥
ಏತದ್ಭೂತೇಷು ಲೋಕೇಷು ಅಗ್ನಿಭೂತಂ ಸ್ಥಿತಂ ತ್ರಿಧಾ ।
ಋಷಯೋ ಗೀರ್ಭಿರರ್ಚಂತಿ ವ್ಯಂಜಿತಂ ನಾಮಭಿಸ್ತ್ರಿಭಿಃ ॥
( ಬೃ. ದೇ. ೧-೬೧ ; ೧-೬೪ )

ಎಂಬ ಶ್ಲೋಕಗಳಲ್ಲಿ ಬೃಹದ್ದೇವತಾಕಾರರು ಅಗ್ನಿಯ ಮಹತ್ತ್ವವನ್ನು ವರ್ಣಿಸುವ ಸಂದರ್ಭದಲ್ಲಿ ಸಕಲ ಭೂತಗಳಿಗೂ ಯೋನಿಯಾದ ಪ್ರಜಾಪತಿಯು ಭೂತಭವಿಷ್ಯದ್ವರ್ತಮಾನಗಳಲ್ಲಿರುವ ಸಕಲ ಚರಾಚರವಾದ ಭೂತಗಳಿಗೂ ಸೃಷ್ಟಿಪ್ರಳಯಗಳ ಮೂಲವಾಗಿ ಅಗ್ನಿರೂಪದಿಂದ ಮೂರು ವಿಧವಾಗಿ ಮೂರು ಸ್ಥಾನಗಳಲ್ಲಿ ತನ್ನ ಅಸ್ತಿತ್ವವನ್ನು ಪಡೆದಿರುತ್ತಾನೆ. ಈ ಮೂರು ವಿಧವಾದ ಅಗ್ನಿಯ ಆವಿರ್ಭಾವವನ್ನೂ ಸಹ ಋಷಿಗಳು ಮೂರು ಹೆಸರುಗಳಿಂದ ಕೆಳಗೆ ಕಂಡಂತೆ ಹೇಳುತ್ತಾರೆ, ಎಂದು ಇದೇ ಅಗ್ನಿಯ ಪ್ರಶಂಸೆಯನ್ನು ಮುಂದುವರಿಸುತ್ತಾ—

ತ್ರಿಸ್ಥಾನಂ ಚೈನಮರ್ಚಂತಿ ಹೋತ್ರಾಯಾಂ ವೃಕ್ತಬರ್ಹಿಷಃ ॥
ಇಹೈವ ಪವಮಾನೋಽಗ್ನಿರ್ಮಧ್ಯಮೋಽಗ್ನಿರ್ವನಸ್ಪತಿಃ ।
ಅಮುಷ್ಮಿನ್ನೇವ ವಿಪ್ರೈಸ್ತು ಲೋಕೇಽಗ್ನಿಃ ಶುಚಿರುಚ್ಯತೇ ॥
ಇಹಾಗ್ನಿಭೂತಸ್ತ್ವೃಷಿಭಿರ್ಲೋಕೇ ಸ್ತುತಿಭಿರೀಳಿತಃ ।
ಜಾತವೇದಾಃ ಸ್ತುತೋ ಮಧ್ಯೇ ಸ್ತುತೋ ವೈಶ್ವಾನರೋ ದಿವಿ ॥
( ಬೃ. ದೇ. ೧-೬೫ ರಿಂದ ೬೭ )

ಈ ಮೂರು ವಿಧಗಳಲ್ಲಿ ಪೃಥ್ವಿಯಲ್ಲಿ ಆವಿರ್ಭವಿಸುವ ಅಗ್ನಿಗೆ **ಪವಮಾನಾಗ್ನಿ**ಯೆಂತಲೂ, ಮಧ್ಯಮಲೋಕವರ್ತಿಯಾದ ಅಗ್ನಿಗೆ **ವನಸ್ಪತಿ**ಯೆಂದೂ, ದ್ಯುಲೋಕಸ್ಥನಾದ ಅಗ್ನಿಗೆ **ಶುಚಿ**ಯೆಂದೂ ಪ್ರಸಿದ್ಧಿಯಿದೆ. ಈ ಮೂರು ಪ್ರಭೇದಗಳೂ ತೈತ್ತಿರೀಯ ಸಂಹಿತೆಯಲ್ಲಿ (೨-೨-೪) ಪವಮಾನ, ಶುಚಿ, ಪಾವಕ, ಎಂಬ ವಿಭಾಗದಿಂದ ಪಠಿತವಾಗಿವೆ. ಇವಲ್ಲದೇ ಅಗ್ನಿ, ಜಾತವೇದಸ್ ಮತ್ತು ವೈಶ್ವಾನರ ಎಂಬ ಹೆಸರೂ ಸಹ ಮೂರು ಸ್ಥಾನಗಳನ್ನೂ ಮೂರು ವಿಧವಾದ ಸ್ವರೂಪಗಳನ್ನೂ ತಿಳಿಸುತ್ತವೆ. ನಿರುಕ್ತಕಾರರೂ ಸಹ ಋಕ್ಸಂಹಿತೆಯ—

ಸ್ತೋಮೇನ ಹಿ ದಿವಿ ದೇವಾಸೋ ಅಗ್ನಿಮಜೀಜನಞ್ಛಕ್ತಿಭೀ ರೋದಸಿಪ್ರಾಂ ।
ತಮೂ ಅಕೃಣ್ವನ್ ತ್ರೇಧಾ ಭುವೇ ಕಂ ಸ ಓಷಧೀಃ ಪಚತಿ ವಿಶ್ವರೂಪಾಃ ॥
( ಋ. ಸಂ. ೧೦-೮೮-೧೦ )

ಎಂಬ ಋಕ್ಕನ್ನು ಉದಹರಿಸಿ ತಮಕುರ್ವಂಸ್ತ್ರೇಧಾಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ । ಶಾಕಪೂಣಿಯ ವಿವರಣೆಯನ್ನನುಸರಿಸಿ ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕಗಳೆಂಬ ಪ್ರಭೇದಗಳಲ್ಲಿ ಈ ಮೂರು ಸ್ಥಾನಗಳಲ್ಲಿ ಅಗ್ನಿಃ ಜಾತವೇದಾಃ ಮತ್ತು ವೈಶ್ವಾನರ ಎಂಬ ಮೂರು ರೂಪಗಳಲ್ಲಿ ಅಗ್ನಿಯು ಆವಿರ್ಭವಿಸಿದ್ದಾನೆ

ಎಂದು ಈ ಮೂರು ಸ್ವರೂಪಗಳನ್ನು ಸಂಹಿತಾವಾಕ್ಯಗಳ ಉದಾಹರಣೆಯಿಂದ ವಿಶದವಾಗಿ ವಿವರಿಸುತ್ತಾರೆ. (ನಿ. ೬-೧೪ ರಿಂದ ೭-೨೫).

ಇದರಂತೆಯೇ ಈ ಋಕ್ಕಿನಲ್ಲಿಯೂ ಸಹ ಮೂರು ಸ್ಥಾನಗಳನ್ನೂ ಕ್ರಮವಾಗಿ **ಸಮುದ್ರೇ, ದಿವಿ, ಅಪ್ಸು** ಎಂಬ ಹೆಸರುಗಳಿಂದ ವಿವರಿಸಿ ಸಮುದ್ರದಲ್ಲಿ **ಬಡಬಾನಲ** ರೂಪದಲ್ಲಿಯೂ, ದ್ಯುಲೋಕದಲ್ಲಿ **ಆದಿತ್ಯ** ರೂಪದಲ್ಲಿಯೂ, **ಅಪ್ಸು** ಎಂದರೆ ಅಂತರಿಕ್ಷದಲ್ಲಿ ಮಿಂಚಿನ ರೂಪದಲ್ಲಿಯೂ ಗೋಚರಿಸುತ್ತಾನೆ ಎಂದು ವಿಸ್ತರಿಸಿದೆ. ಒಂದೊಂದು ಸಲ ಈ ಸ್ಥಾನಗಳ ಹೆಸರುಗಳು ವ್ಯತ್ಯಾಸವಾದರೂ ಅಭಿಪ್ರಾಯಗಳೆಲ್ಲಾ ಒಂದೇ ಆಗಿರುವುವು. ಉದಾಹರಣೆಗೆ ಇಲ್ಲಿ ಪೃಥಿವಿಗೆ ಬದಲಾಗಿ **ಸಮುದ್ರ**ವೆಂದು ಈ ಸನ್ನಿವೇಶಕ್ಕೆ ತಕ್ಕಂತೆ ವಿಭಾಗಿಸಿದೆ. ಒಟ್ಟಿನಲ್ಲಿ ಈ ವಿಧವಾಗಿ ಮೂರು ಪ್ರಭೇದಗಳು ನಾಲ್ಕು ವೇದಗಳಲ್ಲಿಯೂ ನಾನಾಸನ್ನಿವೇಶಗಳಲ್ಲಿ ಹೇಳಲ್ಪಟ್ಟಿದೆ.

**ದಿವಸ್ಪರಿ ಪ್ರಥಮಂ ಜಜ್ಞೇ ಅಗ್ನಿರಸ್ಮದ್ ದ್ವಿತೀಯಂ ಪರಿ ಜಾತವೇದಾಃ ।**
**ತೃತೀಯಮಪ್ಸು ನೃಮಣಾ ಅಜಸ್ರಮಿಂಧಾನ ಏನಂ ಜರತೇ ಸ್ವಾಧೀಃ ॥**
( ಋ. ಸಂ. ೧೦-೪೫-೧ ; ವಾ. ಸಂ. ೧೨-೧೮ ; ತೈ. ಸ. ೧-೩-೧೪-೫ )

**ಅಗ್ನಿರಸ್ಮಿ ಜನ್ಮನಾ ಜಾತವೇದಾ ಘೃತಂ ಮೇ ಚಕ್ಷುರಮೃತಂ ಮ ಆಸನ್ ।**
**ಅರ್ಕಸ್ತ್ರಿಧಾತೂ ರಜಸೋ ವಿಮಾನೋಽಜಸ್ರೋ ಘರ್ಮೋ ಹವಿರಸ್ಮಿ ನಾಮ ॥**
(ಋ. ಸಂ. ೩-೨೬-೭ ; ವಾ. ಸಂ. ೧೮-೬೬ ; ನಿ. ೧೪-೨)

ಇತ್ಯಾದಿ ವಿವರಣೆಗಳಿಂದ **ತ್ರೀಣಿ ಜಾನಾ** ಎಂಬ ವರ್ಣನೆಯ ಸ್ವರೂಪವು ವಿಶದವಾಗಿ ತಿಳಿಯುತ್ತದೆ.

**ಅಪ್ಸು—ಆಪಃ ಇತ್ಯಂತರಿಕ್ಷನಾಮ** (ನಿ. ೨-೧೦) । **ಅಂತರಿಕ್ಷೇ ವೈದ್ಯುತಾಗ್ನಿರೂಪೇಣೈಕಂ । ಅಪ್** ಎಂಬುದು ಅಂತರಿಕ್ಷನಾಮಗಳಲ್ಲಿ ಪಠಿತವಾಗಿರುವುದರಿಂದ **ಅಪ್ಸು ಏಕಂ** ಎಂದರೆ ಅಂತರಿಕ್ಷದಲ್ಲಿ ವೈದ್ಯುತಾಗ್ನಿ ರೂಪದಲ್ಲಿರುವ ಅಗ್ನಿಯ ಒಂದು ಪ್ರಭೇದವೆಂದರ್ಥ.

**ಪೂರ್ವಾಂ ಪ್ರದಿಶಂ ಅನುಷ್ಠು ವಿದಧೌ**—ವಸಂತಾದಿ ಆರು ಋತುಗಳನ್ನೂ ಕ್ರಮವಾಗಿ ವಿಭಾಗಮಾಡಿ ತೋರಿಸುವುದರಿಂದ ಕಾಲವನ್ನೂ, ಪ್ರಾಚ್ಯಾದಿ ದಿಕ್ಕುಗಳನ್ನು ತೋರಿಸುವುದರಿಂದ ದೇಶವನ್ನೂ ಅನುಕ್ರಮವಾಗಿ ತೋರಿಸಿಕೊಟ್ಟು **ಆದಿತ್ಯನು** (ಅಗ್ನಿಯು) ಕಾಲದೇಶಗಳ ಸೃಷ್ಟಿಕರ್ತನೆಂದು ಪ್ರಸಿದ್ಧನಾಗಿ ಯಜ್ಞಯಾಗಾದಿ ಕರ್ಮಗಳ ನಿರ್ವಹಣ ಕಾಲವನ್ನೂ ನಿಯಮಿಸಿದನೆಂದಭಿಪ್ರಾಯ.

ವ್ಯಾಕರಣಪ್ರಕ್ರಿಯಾ

**ಜಾನಾ**—ಜನೀ ಪ್ರಾದುರ್ಭಾವೇ ಧಾತು. ಇದಕ್ಕೆ ಘಞ್ ಪ್ರತ್ಯಯ. ಞಿತ್ತಾದುದರಿಂದ **ಅತ ಉಪಧಾಯಾಃ** ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. **ಕರ್ಷಾತ್ವತಃ**—(ಪಾ. ಸೂ. ೬-೧-೧೯೭) ಎಂಬುದರಿಂದ ಅಂತೋದಾತ್ತಸ್ವರವು ಪ್ರಾಪ್ತವಾದರೆ ವೃಷಾದಿಯು ಆಕೃತಿಗಣವಾದುದರಿಂದ **ವೃಷಾದೀನಾಂ ಚ** (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ನಪುಂಸಕ ಬಹುವಚನದಲ್ಲಿ **ಜಶ್ಶಸೋಃ ಶಿಃ** ಸೂತ್ರ

ದಿಂದ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್**—(ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ಭೂಷಂತಿ**—ಭೂಷ ಅಲಂಕಾರೇ. ಧಾತು. ಭ್ವಾದಿ. ಅಥವಾ ಭೂ ಸತ್ತಾಯಾಂ ಧಾತು. ಇವಕ್ಕೆ ಲೇಟ್ ಪ್ರಥಮಪುರುಷ ಬಹುವಚನವಿವಕ್ಷಾಮಾಡಿದಾಗ **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. **ಆಗಮಶಾಸ್ತ್ರಮನಿತ್ಯಮ್**—ಎಂಬ ಪರಿಭಾಷೆಯಿಂದ **ಆರ್ಧಧಾತುಕಸ್ಯೇಡ್ವಲಾದೇಃ**—ಎಂಬುದರಿಂದ ಇಡಾಗಮ ಬರುವುದಿಲ್ಲ. **ಸಂಜ್ಞಾಪೂರ್ವಕೋ ವಿಧಿರನಿತ್ಯಃ**—ಎಂಬ ಪರಿಭಾಷೆಯಿಂದ ಪ್ರತ್ಯಯನಿಮಿತ್ತಕವಾದ ಗುಣವು ಧಾತುವಿಗೆ ಬರುವುದಿಲ್ಲ. **ಝೋಂತಃ** (ಪಾ. ಸೂ. ೭-೧-೩) ಎಂಬುದರಿಂದ ಪ್ರತ್ಯಯಕ್ಕೆ ಅಂತಾದೇಶ. **ಆದೇಶಪ್ರತ್ಯಯಯೋಃ**—ಸೂತ್ರದಿಂದ ಸಿಪಿನ ಸಕಾರಕ್ಕೆ ಷತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದಿವಿ ಅಪ್ಸು**—ಕ್ರಮವಾಗಿ ಸಪ್ತಮೀ ಏಕವಚನ ಬಹುವಚನರೂಪ. ಎರಡರಲ್ಲಿಯೂ **ಊಡಿದಂಪದಾದಿ**-(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪಾರ್ಥಿವಾನಾಮ್**—ಪೃಥಿವ್ಯಾಃ ಇಮೇ ಪಾರ್ಥಿವಾಃ **ಪೃಥಿವ್ಯಾ ಞಾಞೌ**—(ಪಾ. ಸೂ. ೪-೧-೮೫-೨. ಎಂಬುದರಿಂದ ಪ್ರಾಗ್ದೀವ್ಯತೀಯವಾದ ಅಞ್ ಪ್ರತ್ಯಯ. ಞಿತ್ತಾದುದರಿಂದ **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ. **ಯಸ್ಯೇತಿಚ**—ಸೂತ್ರದಿಂದ ಈಕಾರಲೋಪ. ಪಾರ್ಥಿವ ಎಂದು ರೂಪವಾಗುತ್ತದೆ. **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಷಷ್ಠೀಬಹುವಚನದಲ್ಲಿ ಆಮ್ ಪ್ರತ್ಯಯ ಬಂದಾಗ **ಹ್ರಸ್ವನದ್ಯಾಪೋನುಟ್**—ಎಂಬುದರಿಂದ ಅದಕ್ಕೆ ನುಟಾಗಮ **ನಾಮಿ** (ಪಾ. ಸೂ. ೬-೪-೩) ಎಂಬುದರಿಂದ ಅಜಂತಾಂಗಕ್ಕೆ ದೀರ್ಘ.

**ಪ್ರಶಾಸತ್**—ಶಾಸು ಅನುಶಿಷ್ಟೌ ಧಾತು. ಇವಕ್ಕೆ ಲಡರ್ಥದಲ್ಲಿ ಶತೃಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ**—ಎಂಬುದರಿಂದ ಶಪಿಗೆ ಲುಕ್. **ಜಕ್ಷಿತ್ಯಾದಯಃ ಷಟ್**—(ಪಾ. ಸೂ. ೬-೧-೬) ಎಂಬುದರಿಂದ ಅಲ್ಲಿ ಇದೂ ಪಠಿತವಾಗಿರುವುದರಿಂದ ಇದಕ್ಕೆ ಅಭ್ಯಸ್ತಸಂಜ್ಞಾ ಬರುವುದರಿಂದ ಇದಕ್ಕೆ ಸು ಪರವಾದಾಗ ನುಮಾಗಮ ಪ್ರಾಪ್ತವಾದರೆ **ನಾಭ್ಯಸ್ತಾಚ್ಛತುಃ** (ಪಾ. ಸೂ. ೭-೧-೭೮) ಎಂಬುದರಿಂದ ನುಮಾಗಮ ಪ್ರತಿಷೇಧ ಬರುತ್ತದೆ. ಶಾಸತ್ ಎಂದು ರೂಪವಾಗುತ್ತದೆ. ಪ್ರ ಎಂಬುದರಿಂದ ಗತಿ ಸಮಾಸವಾದಾಗ **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ದಧೌ**—ಡು ಧಾಞ್ ಧಾರಣಪೋಷಣಯೋಃ ಧಾತು. ಲಿಟ್ ಪ್ರಥಮಪುರುಷ ಏಕವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅನುಷ್ಠು**—ಅನು ಉಪಸರ್ಗ. ಷ್ಠಾ ಗತಿನಿವೃತ್ತೌ ಧಾತು. **ಉಣಾದಯೋ ಬಹುಲಮ್**—ಎಂಬುದರಿಂದ ಬಹುಲವಚನ ಸಾಮರ್ಥ್ಯದಿಂದ **ಅಪದುಃ ಸುಷು ಸ್ಥಃ**—(ಉ. ಸೂ. ೧-೨೫) ಎಂಬುದರಿಂದ ಸ್ಥಾ ಧಾತುವಿಗೆ ವಿಧಿಸಲ್ಪಡುವ ಕು ಪ್ರತ್ಯಯವು ಇಲ್ಲಿ ಅನು ಎಂಬುದು ಪೂರ್ವದಲ್ಲಿರುವಾಗಲೂ ಬರುತ್ತದೆ. ಇದು ಕಿತ್ತಾದುದರಿಂದ

**ಅತೋ ಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಅನುಷ್ಠಾ ಎಂದಿರುವಾಗ **ಉಪಸರ್ಗಾತ್ಸುನೋತಿ**—(ಪಾ. ಸೂ. ೮-೩-೬೫) ಎಂಬುದರಿಂದ ಧಾತುವಿನ ಸಕಾರಕ್ಕೆ ಷತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೩ ॥

—— :o: ——

ಸಂಹಿತಾಪಾಠಃ

ಕ ಇಮಂ ವೋ ನಿಣ್ಯಮಾ ಚಿಕೇತ ವತ್ಸೋ ಮಾತೄರ್ಜನ-
ಯತ ಸ್ವಧಾಭಿಃ ।
ಬಹ್ವೀನಾಂ ಗರ್ಭೋ ಅಪಸಾಮುಪಸ್ಥಾನ್ಮಹಾನ್ಕವಿರ್ನಿಶ್ಚರತಿ
ಸ್ವಧಾವಾನ್ ॥ ೪ ॥

ಪದಪಾಠಃ ॥

ಕಃ । ಇಮಂ । ವಃ । ನಿಣ್ಯಂ । ಆ । ಚಿಕೇತ । ವತ್ಸಃ । ಮಾತೄಃ । ಜನಯತ ।
ಸ್ವಧಾಭಿಃ ।
ಬಹ್ವೀನಾಂ । ಗರ್ಭಃ । ಅಪಸಾಂ । ಉಪಽಸ್ಥಾತ್ । ಮಹಾನ್ । ಕವಿಃ । ನಿಃ ।
ಚರತಿ । ಸ್ವಧಾಽವಾನ್ ॥ ೪ ॥

ಸಾಯಣಭಾಷ್ಯಂ

ಹೇ ಋತ್ವಿಗ್ಯಜಮಾನಾ ನಿಣ್ಯಂ ನಿರ್ಣೀತಂ।ಅಂತರ್ಹಿತನಾಮೈತತ್ । ಉಖಾದಿಷು ಗರ್ಭರೂಪೇಣಾಂತರ್ಹಿತಂ। ತಥಾ ಚ ಮಂತ್ರಾಂತರಂ । ಗರ್ಭೋ ಯೋ ಅಪಾಂ ಗರ್ಭೋ ವನಾನಾಂ ಗರ್ಭಶ್ಚ ಸ್ಥಾತಾಂ ಗರ್ಭಶ್ಚರಥಾಂ । ಋಗ್ವೇ. ೧-೭೦-೨ । ಇತಿ । ಏವಂಭೂತಮಿಮಮಗ್ನಿಂ ವೋ ಯುಷ್ಮಾಕಂ

ಮಧ್ಯೇ ಕ ಆಚಿಕೇತ। ಕೋ ಜಾನಾತಿ। ನ ಕೋಽಪೀತ್ಯರ್ಥಃ। ಸೋಽಯಮಗ್ನಿರ್ವತ್ಸೋ ಮೇಘಸ್ಥಾನಾಮಪಾಂ ವೈದ್ಯುತಾಗ್ನಿರೂಪೇಣ ಪುತ್ರಸ್ಥಾನೀಯಃ ಸನ್ ಮಾತೄಸ್ತಸ್ಯ ಮಾತೃಸ್ಥಾನೀಯಾನಿ ವೃಷ್ಟ್ಯುದಕಾನಿ ಸ್ವಧಾಭಿರ್ಹವಿರ್ಲಕ್ಷಣೈರನ್ನೈರ್ಜನಯತ। ಉತ್ಪಾದಯತಿ। ತಥಾ ಚ ಸ್ಮರ್ಯತೇ। ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ। ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ। ಮನು. ३-೭೬. । ಇತಿ। ಅಪಿ ಚ ಬಹ್ವೀನಾಂ ಮೇಘಸ್ಥಾನಾಮಪಾಂ ಗರ್ಭೋ ವೈದ್ಯುತರೂಪೇಣ ಗರ್ಭಸ್ಥಾನೀಯಃ ಸೋಽಗ್ನಿರಪಸಾಮುಪಸ್ಥಾತ್ ಸಮುದ್ರಾನ್ನಿಶ್ಚರತಿ। ಔಷಸಾಗ್ನಿರೂಪೇಣಾದಿತ್ಯಃ ಸನ್ನಿರ್ಗಚ್ಛತಿ। ಕೀದೃಶಃ। ಮಹಾನ್ ತೇಜಸಾ ಪ್ರೌಢಃ। ಕವಿಃ। ಕ್ರಾಂತದರ್ಶೀ। ಸ್ವಧಾವಾನ್ ಹವಿರ್ಲಕ್ಷಣಾನ್ನವಾನ್। ಏಕ ಏವಾಗ್ನಿರ್ಹೋಮನಿಷ್ಪಾದಕಲಕ್ಷಣೇನ ಪಾರ್ಥಿವರೂಪೇಣ ವೈದ್ಯುತಾತ್ಮನೌಷಸರೂಪೇಣಾದಿತ್ಯಾತ್ಮನಾ ಚ ವಿಭಜ್ಯ ವರ್ತತ ಇತ್ಯರ್ಥಃ॥ ಚಿಕೇತ। ಕಿತ ಜ್ಞಾನೇ। ಛಾಂದಸೋ ಲಿಟ್। ಜನಯತ। ಜನೀ ಜೄಷ್ಕ್ನಸುರಂಜೋಽಮಂತಾಶ್ಚ। ಧಾ. ೧೯-೬೩-೬೭। ಇತಿ ಮಿತ್ತ್ವಾನ್ಮಿತಾಂ ಹ್ರಸ್ವ ಇತಿ ಹ್ರಸ್ವತ್ವಂ। ಪೂರ್ವವಚ್ಛಾಂದಸೋ ಲಙ್। ಬಹ್ವೀನಾಂ। ನಿತ್ಯಂ ಛಂದಸಿ। ಪಾ. ೪-೧-೪೬। ಇತಿ ಬಹುಶಬ್ದಾಙ್ಙೀಷ್। ಙ್ಯಾಶ್ಛಂದಸಿ ಬಹುಲಂ। ಪಾ. ೬-೧-೧೭೮। ಇತಿ ನಾಮ ಉದಾತ್ತತ್ವಂ। ಅಪಸಾಂ। ಆಪ್ಲೃ ವ್ಯಾಪ್ತೌ। ಆಪಃ ಕರ್ಮಾಖ್ಯಾಯಾಂ ಹ್ರಸ್ವೋ ನುಟ್ಚ ವಾ। ಉ. ४-२०७। ಇತಿ ಬಹುಲವಚನಾದಕರ್ಮಾಖ್ಯಾಯಾಮಪ್ಯಾಪ್ನೋತೇರಸಿಪ್ರತ್ಯಯೋ ಹ್ರಸ್ವಶ್ಚ। ಉಪಸ್ಥಾತ್। ಉಪತಿಷ್ಠಂತ್ಯಾಪೋಽತ್ರೇತ್ಯುಪಸ್ಥಃ। ಆತಶ್ಚೋಪಸರ್ಗ ಇತಿ ಕೃತ್ಯಲ್ಯುಟೋ ಬಹುಲಮಿತಿ ಬಹುಲವಚನಾದಧಿಕರಣೇ ಕಪ್ರತ್ಯಯಃ। ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ॥

ಪ್ರತಿಪದಾರ್ಥ

**ನಿಣ್ಯಂ**—(ಎಲೈ ಋತ್ವಿಗ್ಯಜಮಾನರುಗಳೇ ಸಕಲ ವಸ್ತುಗಳಲ್ಲಿಯೂ ಒಂದೊಂದು ರೂಪದಿಂದ) ಅಡಗಿಕೊಂಡಿರುವ। **ಇಮಂ**— ಈ ಅಗ್ನಿಯನ್ನು। **ವಃ**— ನಿಮ್ಮಲ್ಲಿ। **ಕಃ**— ಯಾರು (ತಾನೇ)। **ಆ ಚಿಕೇತ** — ತಿಳಿಯುವನು. (ಯಾರಿಂದಲೂ ಶಕ್ಯವಿಲ್ಲ ಈ ಅಗ್ನಿಯು)। **ವತ್ಸಃ**— (ಮಿಂಚಿನರೂಪದಿಂದ ಮೇಘದ ನೀರುಗಳಲ್ಲಿ) ಪುತ್ರರೂಪದಲ್ಲಿದ್ದು। **ಮಾತೄಃ**—(ತನ್ನ) ಜನನಿಗಳಾದ ವೃಷ್ಟ್ಯುದಕಗಳನ್ನು। **ಸ್ವಧಾಭಿಃ**—ಹವಿಸ್ಸಿನ ರೂಪದ ಅನ್ನಗಳಿಂದ। **ಜನಯತ**— ಉತ್ಪನ್ನವಾಗುವಂತೆ ಮಾಡುತ್ತಾನೆ (ಮತ್ತು)। **ಮಹಾನ್**—ತೇಜಸ್ಸಿನ ಮಹಿಮೆಯಿಂದ ಕೂಡಿದವನೂ। **ಕವಿಃ**—ಪ್ರಾಜ್ಞನೂ। **ಸ್ವಧಾವಾನ್**—ಹವಿಸ್ಸಿನ ರೂಪದ ಅನ್ನವುಳ್ಳವನೂ। **ಬಹ್ವೀನಾಂ ಗರ್ಭಃ**— ಮೇಘರೂಪದ ನೀರುಗಳಲ್ಲಿ ಮಿಂಚಿನ ರೂಪದಿಂದ ಅಂತರ್ಹಿತನೂ ಆದ ಅಗ್ನಿಯು। **ಅಪಸಾಂ ಉಪಸ್ಥಾತ್**—ನೀರುಗಳ ನಿವಾಸಸ್ಥಾನವಾದ ಸಮುದ್ರ ಮಧ್ಯದಿಂದ। **ನಿಶ್ಚರತಿ**—(ಔಷಸಾಗ್ನಿರೂಪದಿಂದ) ಹೊರಹೊರಡುತ್ತಾನೆ

ಭಾವಾರ್ಥ

ಸಕಲ ವಸ್ತುಗಳಲ್ಲಿಯೂ ಒಂದೊಂದು ರೂಪದಿಂದ ಅಡಗಿಕೊಂಡಿರುವ ಈ ಅಗ್ನಿಯನ್ನು ತಿಳಿಯಲು ನಿಮ್ಮಲ್ಲಿ ಯಾರಿಗೂ ಶಕ್ಯವಿಲ್ಲ. ಈ ಅಗ್ನಿಯು ಮೇಘದ ನೀರುಗಳಲ್ಲಿ ಮಿಂಚಿನರೂಪದಿಂದ ಪುತ್ರನಂತಿದ್ದು ಅನಂತರ ಯಜ್ಞದ ಹವಿಸ್ಸನ್ನು ಸ್ವೀಕರಿಸಿ "ಯಜ್ಞಾದ್ಭವತಿ ಪರ್ಜನ್ಯಃ" ಎಂಬ ಶಾಸ್ತ್ರವಚನದಂತೆ ಯಜ್ಞಹವಿಸ್ಸಿನ

ಮೂಲಕ ತನ್ನ ಜನನಿಗಳಾದ ವೃಷ್ಟ್ಯುದಕಗಳನ್ನು ಉತ್ಪನ್ನವಾಗುವಂತೆ ಮಾಡುತ್ತಾನೆ. ಮತ್ತು ತನ್ನ ತೇಜಸ್ಸಿನ ಮಹಿಮೆಯಿಂದ ಕೂಡಿದವನೂ, ಪ್ರಾಜ್ಞನೂ, ಹವಿಸ್ಸಿನರೂಪದ ಅನ್ನವುಳ್ಳವನೂ, ಮಿಂಚಿನರೂಪದಲ್ಲಿ ಮೇಘೋದಕಗಳ ಮಧ್ಯೆ ಅಂತರ್ಹಿತನೂ ಆದ ಅಗ್ನಿಯು ಸಮುದ್ರಮಧ್ಯದಿಂದ ಔಷಸಾಗ್ನಿರೂಪದಲ್ಲಿ (ಆದಿತ್ಯನ) ಹೊರಹೊರಡುತ್ತಾನೆ.

## English Translation

Which of you discerns the hidden Agni? a son, he begets his mothers by oblations; the germ of many (waters), he issues from the ocean; mighty and wise, the recipient of oblations.

॥ ವಿಶೇಷವಿಷಯಗಳು ॥

ಅಗ್ನಿಯು ಬಾಹ್ಯಾವಿರ್ಭಾವದ ಸ್ವರೂಪವನ್ನು ಸ್ಥೂಲವಾಗಿ ಎಲ್ಲರೂ ತಿಳಿಯಬಹುದೇ ಹೊರತು ಅವನ ನಿಜವಾದ ಸೂಕ್ಷ್ಮರೂಪವನ್ನೂ, ಮಹತ್ತನ್ನೂ ಎಲ್ಲರೂ ಪೂರ್ಣವಾಗಿ ತಿಳಿಯಲು ಸಾಧ್ಯವಾಗಲಾರದು ಎಂಬುದನ್ನು ತೋರಿಸುವುದಕ್ಕೋಸ್ಕರವಾಗಿ ಪ್ರಶ್ನರೂಪದಲ್ಲಿ ಸೂಕ್ಷ್ಮರೂಪದ ಅಗ್ನಿವರ್ಣನೆಯನ್ನು ಪ್ರಾರಂಭಿಸಿದೆ.

**ನಿಣ್ಯಂ**— **ನಿಣ್ಯಂ, ಸಸ್ವಃ, ಸನುತಃ** ಇತ್ಯಾದಿ ೬ ಅಂತರ್ಹಿತನಾಮಗಳಲ್ಲಿ ಪಠಿತವಾಗಿರುವುದರಿಂದ ( ನಿ. ೩-೨೫ ) ಗೂಢವಾಗಿರುವುದು, ಮರೆಯಾಗಿರುವುದು ಎಂದರ್ಥ. ಸಕಲ ವಸ್ತುಗಳಲ್ಲಿಯೂ ಬೇರೆ ಬೇರೆ ರೂಪಗಳಲ್ಲಿ ಅಡಗಿಕೊಂಡಿರತಕ್ಕ ಎಂದು ಅಗ್ನಿಗೆ ವಿಶೇಷಣವಾಗಿದೆ. ರಹಸ್ಯವಾಗಿರುವುದು ಎಂದರ್ಥವನ್ನು ಕೊಡುವ ಸಂದರ್ಭಗಳಲ್ಲಿ **ನಿಣ್ಯ** ಶಬ್ದದ ಪ್ರಯೋಗವನ್ನು ಇನ್ನೂ ಕೆಲವು ಕಡೆಗಳಲ್ಲಿ ನೋಡಬಹುದು. ಉದಾಹರಣೆಗೆ—

**ಕವಿರ್ನ ನಿಣ್ಯಂ ವಿದಥಾನಿ ಸಾಧನ್ ವೃಷಾ ಯತ್ಸೇಕಂ ವಿಪಿಪಾನೋ ಅರ್ಚಾತ್ ।**
(ಋ. ಸಂ. ೪-೧೬-೩)

ಎಂಬಲ್ಲಿ ಕವಿಯ ದೃಷ್ಟಿಗೆ ಮಾತ್ರ ಗೋಚರವಾಗುವುದು ; ಸಾಧಾರಣವಾದ ಮತಿಗೆ ಗೋಚರವಾಗದೇ ರಹಸ್ಯವಾಗಿರುವುದು ಎಂದರ್ಥ. ಇನ್ನು ಕೆಲವು ಸಂದರ್ಭಗಳಲ್ಲಿ ತತ್ತ್ವಾನ್ವೇಷಣವನ್ನು ಮಾಡುವಾಗ ತತ್ತ್ವವು ಅತಿ ನಿಗೂಢವಾಗಿದ್ದು ಸಮಸ್ಯೆಯು ಬಹಳ ಜಟಿಲವಾದುದೂ, ತೊಡಕಾದುದೂ ಆದಾಗ ಮನಸ್ಸಿನ ಕ್ಷೋಭೆಯನ್ನು ಸೂಚಿಸುವಾಗ **ನಿಣ್ಯ** ಶಬ್ದದ ಪ್ರಯೋಗವಿದೆ. ಉದಾಹರಣೆಗೆ—

**ನ ವಿ ಜಾನಾಮಿ ಯದಿವೇದಮಸ್ಮಿ ನಿಣ್ಯಃ ಸಂನದ್ಧೋ ಮನಸಾ ಚರಾಮಿ ।**
(ಋ. ಸಂ. ೧-೧೬೪—೩೭)

ಇಲ್ಲಿ **ನಿಣ್ಯಃ—ಅಂತರ್ಹಿತಃ ಮೂಢಚಿತ್ತಃ ।** ಭ್ರಾಂತಚಿತ್ತನು, ಮನಃಕ್ಷೋಭೆಯುಳ್ಳವನು ಎಂದು ತಾತ್ಪರ್ಯವಾದರೂ ತತ್ತ್ವವು ಗಹನಾತೀತವಾದುದು ಎಂಬುದೇ ಕಾರಣವಾಗಿದೆ.

ಮೇಲಿನ ಉದಾಹರಣೆಗಳಂತೆ ಇಲ್ಲಿಯೂ ಸಹ ನಿಣ್ಯ ಶಬ್ದಕ್ಕೆ ರಹಸ್ಯವೆಂದರ್ಥವಾಗಿ, ಅಗ್ನಿಯ ಸೂಕ್ಷ್ಮವಾದ ಸ್ವರೂಪವು ಅತಿರಹಸ್ಯವಾಗಿರುವುದರಿಂದ ವಃ ಕಃ ಆ ಚಿಕೇತ ನಿಮ್ಮಲ್ಲಿ ಯಾರು ಅರಿಯಬಲ್ಲಿರಿ ? ಎಂಬ ಪ್ರಶ್ನೆಯಿದೆ. ಎತಕ್ಕೆಂದರೆ

**ದಿವಶ್ಚಿತ್ತೇ ಬೃಹತೋ ಜಾತವೇದೋ ವೈಶ್ವಾನರ ಪ್ರ ರಿರಿಚೇ ಮಹಿತ್ವಂ ।**
(ಋ. ಸಂ. ೧-೫೯-೫)

ಇತ್ಯಾದಿ ವರ್ಣನೆಗಳಿಂದ ಅಗ್ನಿಯ ಪ್ರಭಾವವು ದ್ಯುಲೋಕಕ್ಕಿಂತಲೂ ಮೀರಿರುವುದರಿಂದ ಮಾನವನಿಗೆ ಇವನ ಮಹತ್ತ್ವವನ್ನರಿಯಲು ಅಸಾಧ್ಯ. ಪರ್ವತಗಳಲ್ಲಿಯೂ, ಓಷಧಿಗಳಲ್ಲಿಯೂ, ಉದಕಗಳಲ್ಲಿಯೂ ಅವನ ಸತ್ತ್ವವು ವ್ಯಾಪಿಸಿ ಮಾನವನ ಸಾಧಾರಣವಾದ ದೃಷ್ಟಿಗೆ ತಿಳಿಯಲಾರದಷ್ಟು ರಹಸ್ಯವಾಗಿರುವುದು. (ಋ.ಸಂ.೧-೫೯-೩) ಎಂದು ತಿಳಿಯಬೇಕು.

**ವತ್ಸಃ ಮಾತೄಃ ಸ್ವಧಾಭಿಃ ಜನಯತ**— ಈ ವಾಕ್ಯಕ್ಕೆ ಸಾಯಣರ ವಿವರಣೆಗೂ ಸ್ಕಂದಸ್ವಾಮಿಗಳ ವಿವರಣೆಗೂ ಬಹಳ ವ್ಯತ್ಯಾಸವಿರುತ್ತೆ. ಸಾಯಣರು—

**ವತ್ಸಃ—ಮೇಘಸ್ಥಾನಾಂ ಅಪಾಂ ವೈದ್ಯುತಾಗ್ನಿರೂಪೇಣ ಪುತ್ರಸ್ಥಾನೀಯಃ ಸನ್, ಮಾತೄಃ—ತಸ್ಯ, ಮಾತೃಸ್ಥಾನೀಯಾನಿ ವೃಷ್ಟ್ಯುದಕಾನಿ ಸ್ವಧಾಭಿಃ—ಹವಿರ್ಲಕ್ಷಣೈರನ್ನೈಃ, ಜನಯತ—ಉತ್ಪಾದಯತಿ ।** ಮಿಂಚಿನ ರೂಪದಿಂದ ಮೇಘದ ನೀರುಗಳಲ್ಲಿ ಪುತ್ರರೂಪದಲ್ಲಿದ್ದು ತನ್ನ ಜನನಿಗಳಾದ ವೃಷ್ಟ್ಯುದಕಗಳನ್ನು ಹವಿಸ್ಸಿನ ರೂಪದ ಅನ್ನಗಳಿಂದ ಉತ್ಪನ್ನವಾಗುವಂತೆ ಮಾಡುತ್ತಾನೆ, ಎಂದು ವಿವರಿಸುತ್ತಾ ಮನುಸ್ಮೃತಿಯ—

**ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ ।**
**ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ ॥**
(ಮನು. ೩ ೭೬)

ಎಂಬ ಸ್ಮೃತಿವಾಕ್ಯದ ಪ್ರಮಾಣವನ್ನು ಉದಹರಿಸಿ ಯಜ್ಞದ ಮೂಲಕ ವೃಷ್ಟಿಯನ್ನು ಸುರಿಸುತ್ತಾನೆ ಎಂದರ್ಥವನ್ನು ಮಾಡುತ್ತಾರೆ. ಸ್ಕಂದಸ್ವಾಮಿಗಳು, **ಯೋಽಯಂ ವತ್ಸಸ್ಥಾನೀಯಃ । ಅಪತ್ಯಭೂತಸ್ಸನ್ ಮಾತೄಃ—ಓಷಧಿವನಸ್ಪತಯಃ ಅತ್ರ ಮಾತರ ಉಚ್ಯಂತೇ ಅಗ್ನೇರ್ಜನಕತ್ವಾತ್ । ಜನಯತ ವೈದ್ಯುತಾತ್ಮನಾ ವ್ಯವಸ್ಥಿತಃ ಸನ್ ಜನಯತಿ । ಸ್ವಧಾಭಿಃ—ಸ್ವಧೇತ್ಯುದಕನಾಮ । ವೃಷ್ಟಿಲಕ್ಷಣೈಃ ಉದಕೈಃ ।** ಓಷಧಿವನಸ್ಪತಿಗಳಿಂದ ಇವನು ಉತ್ಪನ್ನನಾಗುವುದರಿಂದ ಅವು ಅಗ್ನಿಗೆ ಮಾತೃಗಳಾಗಿರುವುವು. ಪುನಃ ತಾನು ವಿದ್ಯುದ್ರೂಪದಲ್ಲಿದ್ದು ಮಳೆಯನ್ನು ಸುರಿಸಿ ತನ್ನ ಮಾತೃಗಳಾದ ಓಷಧಿ ವನಸ್ಪತಿಗಳನ್ನು ಸ್ವಧೆಗಳಿಂದ ಎಂದರೆ ವೃಷ್ಟಿರೂಪವಾದ ಉದಕಗಳಿಂದ ಪುನಃ ಉತ್ಪನ್ನವಾಗುವಂತೆ ಮಾಡುತ್ತಾನೆ ಎಂದು ಅರ್ಥವನ್ನು ಹೇಳುತ್ತಾರೆ.

ಅತ್ರೇದಮುಕ್ತಂ ಭವತಿ—ಸತ್ಯಪಿ ಭೌತಿಕೇಽಗ್ನೌ ಪರಿಜ್ಞಾತೇ ದ್ಯುಲೋಕಾದಿಷು ತಥಾ ಅಂತರಿಕ್ಷಪ್ರದೇಶೇಷು ವರ್ತಮಾನಂ ಗೂಢಸ್ವರೂಪಮಗ್ನಿಂ ಕೋಽಪಿ ನ ಜಾನಾತಿ। ಅಗ್ನಿರೂಪೋ ವತ್ಸೋ ಹ್ಯಯಂ ಮೇಘಸ್ಥಿತೀರ್ಯಾ ಮಾತೄರ್ಜನಯತಿ। ಅಲ್ಪಾಕೃತಿರಜ್ಞೋ ಬಲಹೀನೋ ಬಾಲಕಃ ಕಥಂ ಮಾತೃಜನನೇ

**ಸಮರ್ಥಃ ಸ್ಯಾದಿತಿ ನ ಶಂಕನೀಯಂ। ಅಗ್ನಿರ್ಹಿ ನ ಸ್ವಮಾತೄಣಾಮುದರಾತ್ ಸಾಧಾರಣಬಾಲಕಾ ಯಥಾ ಅಲ್ಪಾಕೃತಿರಜ್ಞೋ ನಿರ್ಬಲಶ್ಚ ಜಜ್ಞೇ ತರ್ಹಿ ಮಹಾನ್ ಕವಿಃ ಸ್ವಧಾವಾನ್ ಸನ್ನೇವ ಉದಪದ್ಯತೇತಿ ॥** ಎಂದರೆ, ಭೂಮಿಯ ಮೇಲಿರುವ ಅಗ್ನಿಯನ್ನು ಎಲ್ಲರೂ ನೋಡಿರುವರು. ಆದರೆ ಸ್ವರ್ಗದಲ್ಲಿಯೂ ಅಂತರಿಕ್ಷದಲ್ಲಿಯೂ ಗೂಢಸ್ವರೂಪದಿಂದಿರುವ ಅಗ್ನಿಯ ಸ್ವರೂಪವನ್ನು ಯಾರೂ ತಿಳಿದಿಲ್ಲ. ಅಗ್ನಿರೂಪದಿಂದಿರುವ ವತ್ಸನು ಅಥವಾ ಬಾಲಕನು ತನಗೆ ಮಾತೃವಾದವರನ್ನೇ ಉತ್ಪನ್ನಮಾಡುವನು ಎಂದು ಹೇಳುವಾಗ ಆಗತಾನೇ ಹುಟ್ಟಿದ ಸಣ್ಣದಾದ ಆಕಾರದಿಂದ ಇರುವ ಏನೂ ತಿಳಿಯದ ನಿರ್ಬಲನಾದ ಮಗುವು ತನ್ನ ಮಾತೃಗಳನ್ನು ಉತ್ಪನ್ನಮಾಡಲು ಸಮರ್ಥನೇ ಎಂದು ಸಂದೇಹಪಡುವ ಕಾರಣವಿಲ್ಲ. ಏಕೆಂದರೆ ಅಗ್ನಿಯು ಸಾಧಾರಣಬಾಲಕರಂತೆ ಜನಿಸಿದವನಲ್ಲ. ಹುಟ್ಟುವಾಗಲೇ ದೊಡ್ಡವನೂ, ಬುದ್ಧಿವಂತನೂ ಆಗಿರುವನೆಂದು ಹೇಳಲ್ಪಡುವನು.

**ಬಹ್ವೀನಾಂ ಗರ್ಭಃ ಅಪಸಾಂ ಉಪಸ್ಥಾತ್ ನಿಶ್ಚರತಿ—** ಈ ವಾಕ್ಯಕ್ಕೂ ಸಹ ಇವರಿಬ್ಬರ ವಿವರಣೆಗೂ ಬಹಳ ವ್ಯತ್ಯಾಸವಿದೆ. ಸಾಯಣರು, **ಬಹ್ವೀನಾಂ—ಮೇಘಸ್ಥಾನಾಂ ಅಪಾಂ, ಗರ್ಭಃ—ವೈದ್ಯುತರೂಪೇಣ ಗರ್ಭಸ್ಥಾನೀಯಃ ಸೋಽಗ್ನಿಃ, ಅಪಸಾಮುಪಸ್ಥಾತ್-ಸಮುದ್ರಾತ್ ನಿಶ್ಚರತಿ—ಔಷಸಾಗ್ನಿರೂಪೇಣಾದಿತ್ಯಃ ಸನ್ನಿರ್ಗಚ್ಛತಿ।** ವಿದ್ಯುದ್ರೂಪದಲ್ಲಿ ಮೇಘಗಳ ಗರ್ಭಪ್ರಾಯನಾಗಿದ್ದು ಔಷಸಾಗ್ನಿರೂಪದಿಂದ ಆದಿತ್ಯನಾಗಿ ಪರಿವರ್ತಿಸಿ ಸಮುದ್ರಮಧ್ಯದಿಂದ ಹೊರಕ್ಕೆ ಬರುತ್ತಾನೆ. ಎಂದು ಅರ್ಥವನ್ನು ಮಾಡುತ್ತಾರೆ. ಸ್ಕಂದಸ್ವಾಮಿಗಳು, **ಬಹ್ವೀನಾಂ ಓಷಧೀನಾಂ ದಿಶಾಂ ವಾ ಗರ್ಭಃ ಅಪತ್ಯಭೂತಃ ಅಪಸಾಂ ಉಪಸ್ಥಾತ್। ಅಪಾಂಸಿ ಕರ್ಮಾಣಿ। ತಾನ್ಯುಪಗಮ್ಯ ಯತ್ರ ತಿಷ್ಠಂತಿ ಗೋಽಪಸಾಮುಪಸ್ಥೋ ಯಜ್ಞಃ ಆಹವನೀಯೋ ವಾ। ತಸ್ಮಾತ್ ಮಹಾನ್ ಕವಿಃ ಮೇಧಾಃ ಸ್ವಧಾವಾನ್ ಹವಿಂಷ್ಯಾದಾಯ ನಿಶ್ಚರತಿ ದೇವಾನ್ ಪ್ರತಿ ನಿರ್ಗಚ್ಛತಿ।** ಓಷಧಿಗಳ ಅಥವಾ ದಿಕ್ಕುಗಳ ಅಪತ್ಯಭೂತನಾದ ಅಗ್ನಿಯು ಆಹವನೀಯಾಗ್ನಿರೂಪದಲ್ಲಿದ್ದು ಯಜ್ಞಮಧ್ಯದಿಂದ ಹವಿಸ್ಸುಗಳನ್ನು ತೆಗೆದುಕೊಂಡು ದೇವತೆಗಳ ಸಮೀಪಕ್ಕೆ ಹೋಗಲು ಹೊರಡುತ್ತಾನೆ ಎಂದು ವಿವರಿಸಿರುತ್ತಾರೆ. ಈ ಎರಡು ಅರ್ಥಗಳೂ ಸಂದರ್ಭಕ್ಕೆ ಸರಿಯಾಗಿ ಹೊಂದಿಕೊಳ್ಳುತ್ತವೆ. ಹೇಗೆಂದರೆ, **ಬಹ್ವೀನಾಂ ಗರ್ಭಃ** ಎನ್ನುವುದಕ್ಕೆ—

**ಗರ್ಭೋ ಯೋ ಅಪಾಂ ಗರ್ಭೋ ವನಾನಾಂ ಗರ್ಭಶ್ಚ ಸ್ಥಾತಾಂ ಗರ್ಭಶ್ಚರಥಾಂ ।**
(ಋ. ಸಂ. ೧-೭೦-೨)

ಎಂಬ ಶ್ರುತಿಯ ಆಧಾರದ ಮೇಲೆ **ಮೇಘಸ್ಥಾನಂ ಅಪಾಂ ಗರ್ಭಃ** ಎಂದಾದರೂ ಆಗಬಹುದು ಅಥವಾ **ಓಷಧೀನಾಂ ಗರ್ಭಃ** ಎಂದಾದರೂ ಆಗಬಹುದು. **ಅಪಸಾಂ ಉಪಸ್ಥಾತ್** ಎನ್ನುವುದಕ್ಕೂ ಸಹ, ಸಾಯಣರು ವಿವರಿಸುವಂತೆ ಸಮುದ್ರಮಧ್ಯದಿಂದ ಹೊರಕ್ಕೆ ಬರುತ್ತಾನೆ ಎಂದಾಗಲಿ ಅಥವಾ, **ಅಪಃ, ಅಪ್ನಃ ದಂಸಃ** ಇತ್ಯಾದಿ ೨೬ **ಕರ್ಮ** ನಾಮಗಳಲ್ಲಿ **ಅಪಸ್** ಶಬ್ದವು ಪಠಿತವಾಗಿರುವುದರಿಂದ (ನಿ ೩-೨) **ಅಪಸಾಂ ಉಪಸಾತ್** ಎನ್ನುವುದಕ್ಕೆ ಯಜ್ಞದ ಮಧ್ಯದಿಂದ ಎಂದಾಗಲಿ ಅರ್ಥವನ್ನು ಹೇಳಬಹುದು.

॥ ವ್ಯಾಕರಣಪ್ರಕ್ರಿಯಾ ॥

**ಇಮಮ್**—ಇದಮ್ ಶಬ್ದ. ದ್ವಿತೀಯಾಏಕವಚನ ಅಮ್ ಪರವಾದಾಗ **ತ್ಯದಾದೀನಾಮಃ**—ಸೂತ್ರದಿಂದ ಅತ್ವ. ಪರರೂಪ. ದಶ್ಚ (ಪಾ. ಸೂ. ೭-೧-೧೦೯) ಎಂಬುದರಿಂದ ದಕಾರಕ್ಕೆ ಮಕಾರಾದೇಶ. ಅಮಿ·

**ಪೂರ್ವಃ**—ಎಂಬುದರಿಂದ ಪೂರ್ವರೂಪ. **ಊಡಿದಂಪದಾದಿ**—ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಚಿಕೇತ**—ಕಿತ ಜ್ಞಾನೇ ಧಾತು. ವರ್ತಮಾನಾರ್ಥದಲ್ಲಿ **ಛಂದಸಿ ಲುಙ್ಲಙ್ಲಿಟಃ**—(ಪಾ. ಸೂ. ೩-೪-೬) ಎಂಬುದರಿಂದ ಲಿಟ್. ಪ್ರಥಮಪುರುಷ ಏಕವಚನದಲ್ಲಿ **ಪರಸ್ಮೈಪದಾನಾಂ**—ಎಂಬುದರಿಂದ ತಿಪಿಗೆ ಣಲಾದೇಶ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್ ಶೇಷ. ಚುತ್ವ. **ಪುಗಂತಲಘೂಪಧಸ್ಯ ಚ**—ಎಂಬುದರಿಂದ ಲಘೂಪಧಗುಣ. ಚಿಕೇತ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಜನಯತ**—ಜನೀ ಪ್ರಾದುರ್ಭಾವೇ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. **ಜನೀಜೄಷ್ ಕ್ನಸುರಂಜೋಽಮಾಂತಾಶ್ಚ**—ಎಂಬುದರಿಂದ ಧಾತುವಿಗೆ ಮಿತ್ ಸಂಜ್ಞಾ ಬರುವುದರಿಂದ **ಮಿತಾಂ ಹ್ರಸ್ವಃ** (ಪಾ. ಸೂ. ೬-೪-೯೨) ಎಂಬುದರಿಂದ ಉಪಧೆಗೆ ಹ್ರಸ್ವ. ಜನಿ ಎಂಬ ಣಿಜಂತದ ಮೇಲೆ ಹಿಂದಿನಂತೆ ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಕರ್ತರಿ ಶಪ್**—ಸೂತ್ರದಿಂದ ಶಪ್ ವಿಕರಣ. ತನ್ನಿಮಿತ್ತವಾಗಿ ಣಿಚಿಗೆ ಗುಣ ಅಯಾದೇಶ. **ಬಹುಲಂ ಛಂದಸ್ಯಮಾಙ್ಯೋಗೇಽಪಿ**—ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ. ಜನಯತ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಬಹ್ವೀನಾಮ್**—ಬಹು ಶಬ್ದಕ್ಕೆ ಸ್ತ್ರೀತ್ವವಿವಕ್ಷಾಮಾಡಿದಾಗ **ನಿತ್ಯಂ ಛಂದಸಿ** (ಪಾ. ಸೂ. ೪-೧-೪೬) ಎಂಬುದರಿಂದ ಙೀಷ್ ಪ್ರತ್ಯಯ, ಯಣಾದೇಶ. ಬಹ್ವೀ ಎಂದು ರೂಪವಾಗುತ್ತದೆ. ಷಷ್ಠೀಬಹುವಚನದಲ್ಲಿ ಆಮ್ ಪ್ರತ್ಯಯ. ನದ್ಯಂತದ ಪರದಲ್ಲಿರುವುದರಿಂದ **ಹ್ರಸ್ವನದ್ಯಾಪೋ ನುಟ್**—ಎಂಬುದರಿಂದ ನುಡಾಗಮ. ಙ್ಯಂತದ ಪರದಲ್ಲಿ ನಾಮ್ ಬಂದುದರಿಂದ **ಙ್ಯಾಶ್ಛಂದಸಿ ಬಹುಲಮ್**—(ಪಾ. ಸೂ. ೬-೧-೧೭೮) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ಅಪಸಾಮ್**—ಆಪ್ಲೃ ವ್ಯಾಪ್ತೌ ಧಾತು. ಸ್ವಾದಿ. **ಆಪಃ ಕರ್ಮಾಖ್ಯಾಯಾಂ ಹ್ರಸ್ವೋ ನುಟ್ ಚ ವಾ** (ಉ. ಸೂ. ೪-೬೪೭) ಎಂಬುದರಿಂದ ಇಲ್ಲಿ ಕರ್ಮತ್ವವಿಲ್ಲದಿದ್ದರೂ ಬಹುಲವಚನದಿಂದ ಅಸಿಪ್ರತ್ಯಯ. ತತ್ಸನ್ನಿಯೋಗದಿಂದ ಧಾತುವಿನ ಆಕಾರಕ್ಕೆ ಹ್ರಸ್ವ. ಅಪಸ್ ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಪಕಾರೋತ್ತರಾಕಾರ ಉದಾತ್ತವಾಗುತ್ತದೆ. ಷಷ್ಠೀಬಹುವಚನಾಂತರೂಪ.

**ಉಪಸ್ಥಾತ್**—ಉಪ ಉಪಸರ್ಗ. ಷ್ಠಾ ಗತಿನಿವೃತ್ತೌ ಧಾತು. ಉಪತಿಷ್ಠಂತ್ಯಸ್ಮಿನ್ನತ್ರ ಇತಿ ಉಪಸ್ಥಃ. **ಕೃತ್ಯಲ್ಯುಟೋ ಬಹುಲಮ್** (ಪಾ. ಸೂ. ೩-೩-೧೧೩) ಎಂಬಲ್ಲಿ ಬಹುಲಗ್ರಹಣ ಸಾಮರ್ಥ್ಯದಿಂದ ಅಧಿಕರಣಾರ್ಥದಲ್ಲಿ ಆತಶ್ಚೋಪಸರ್ಗೇ (ಪಾ. ಸೂ. ೩-೧-೧೩೬) ಎಂಬುದರಿಂದ ಉಪ ಎಂಬ ಉಪಸರ್ಗ ಉಪಪದವಾಗಿರುವುದರಿಂದ ಆದಂತವಾದ ಈ ಧಾತುವಿಗೆ ಕಪ್ರತ್ಯಯ. ಕಿತ್ತಾದುದರಿಂದ ಇದು ಪರವಾದಾಗ **ಆತೋ ಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಕೃದುತ್ತರಪದಪ್ರಕೃತಿಸ್ವರವು ಪ್ರಾಪ್ತ

ವಾದರೆ ಮರುದ್ವೃಧಾದಿಯಲ್ಲಿ ಸೇರಿರುವುದರಿಂದ **ಮರುದ್ವೃಧಾದೀನಾಂ ಛಂದಸ್ಯುಪಸಂಖ್ಯಾನಮ್** (ವಾ. ಸೂ. ೬-೨-೧೦೬-೨) ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ. ಪಂಚಮೀಏಕವಚನಾಂತರೂಪ.

ಚರತಿ— ಚರ ಗತಿಭಕ್ಷಣಯೋಃ ಧಾತು. ಲಟ್‌ಪ್ರಥಮಪುರುಷಏಕವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೪ ॥



ಸಂಹಿತಾಪಾಠಃ

ಆವಿಷ್ಟ್ಯೋ ವರ್ಧತೇ ಚಾರುರಾಸು ಜಿಹ್ಮಾನಾಮೂರ್ಧ್ವಃ
ಸ್ವಯಶಾ ಉಪಸ್ಥೇ ।
ಉಭೇ ತ್ವಷ್ಟುರ್ಬಿಭ್ಯತುರ್ಜಾಯಮಾನಾತ್ಪ್ರತೀಚೀ ಸಿಂಹಂ
ಪ್ರತಿ ಜೋಷಯೇತೇ ॥ ೫ ॥

ಪದಪಾಠಃ

ಆವಿಃಽತ್ಯಃ । ವರ್ಧತೇ । ಚಾರುಃ । ಆಸು । ಜಿಹ್ಮಾನಾಂ । ಊರ್ಧ್ವಃ । ಸ್ವಽ-
ಯಶಾಃ । ಉಪಽಸ್ಥೇ ।
ಉಭೇ ಇತಿ । ತ್ವಷ್ಟುಃ । ಬಿಭ್ಯತುಃ । ಜಾಯಮಾನಾತ್ । ಪ್ರತೀಚೀ ಇತಿ ।
ಸಿಂಹಂ । ಪ್ರತಿ । ಜೋಷಯೇತೇ ಇತಿ ॥ ೫ ॥

॥ ಸಾಯಣಭಾಷ್ಯಂ ॥

ಅಸು ಮೇಘಸ್ಥಾಸ್ವಪ್ಸು ವೈದ್ಯುತಾತ್ಮನಾ ವರ್ತಮಾನೋಽಗ್ನಿಶ್ಚಾರುಃ ಶೋಭನದೀಪ್ತಿಃ ಸನ್ ಆವಿಷ್ಟ್ಯೋ ವರ್ಧತೇ । ಆವಿರ್ಭೂತಃ ಪ್ರಕಾಶಮಾನೋ ವೃದ್ಧಿಂ ಪ್ರಾಪ್ನೋತಿ । ಕಿಂ ಕುರ್ವನ್ । ಜಿಹ್ಮಾನಾಂ ಕುಟಿಲಾನಾಂ ಮೇಘೇಷು ತಿರ್ಯಗವಸ್ಥಿತಾನಾಂ ತಾಸಾಮಪಾಮುಪಸ್ಥ ಉತ್ಸಂಗೇ ಸ್ವಯಶಾಃ ಸ್ವಾಯತ್ತಯಶಸ್ಕೋಽಗ್ನಿರೂರ್ಧ್ವ ಊರ್ಧ್ವಜ್ವಲನಃ ಸನ್ । ಸ್ವಕಾರಣಭೂತಾಸ್ವಪ್ಸು ತಿರ್ಯಗವಸ್ಥಿತಾಸ್ವಪಿ ಸ್ವಯಮೂರ್ಧ್ವಂ ಜ್ವಲನ್ನಿತ್ಯರ್ಥಃ । ತದುಕ್ತಂ ವೈಶೇಷಿಕೈಃ । ಅಗ್ನೇರೂರ್ಧ್ವಜ್ವಲನಂ ವಾಯೋಸ್ತಿರ್ಯಕ್ಪವನಂ । ಅಣುಮನಸೋರಾದ್ಯಂ ಕರ್ಮೇತ್ಯದೃಷ್ಟಕಾರಿತಾನೀತಿ । ಅಪಿ ಚ । ಉಭೇ ದ್ಯಾವಾಪೃಥಿವ್ಯೌ ತ್ವಷ್ಟುರ್ದೀಪ್ತಾಜ್ಜಾಯಮಾನಾದುತ್ಪದ್ಯಮಾನಾತ್ತಸ್ಮಾದಗ್ನೇರ್ಬಿಭ್ಯತುಃ। ಭಯಂ ಪ್ರಾಪತುಃ । ತದನಂತರಮುತ್ಪನ್ನಂ ಸಿಂಹಂ ಸಹನಶೀಲಮಭಿಭವನಶೀಲಂ ತಮಗ್ನಿಂ ಪ್ರತೀಚೀ ಪ್ರತ್ಯಂಚಂತ್ಯೌ ಪ್ರತಿಗಚ್ಛಂತ್ಯಾವಾಭಿಮುಖ್ಯೇನ ಪ್ರಾಪ್ನುವಂತ್ಯೌ ಜೋಷಯೇತೇ। ಸೇವೇತೇ । ಯಾಸ್ಕಸ್ತ್ವಾಹ । ಆವಿರಾವೇದನಾತ್ತತ್ತ್ಯೋ ವರ್ಧತೇ ಚಾರುರಾಸು ಚಾರು ಚರತೇರ್ಜಿಹ್ಮಂ ಜಿಹೀತೇರೂರ್ಧ್ವ ಉಚ್ಛ್ರಿತೋ ಭವತಿ ಸ್ವಯಶಾ ಆತ್ಮಯಶಾ ಉಪಸ್ಥ ಉಪಸ್ಥಾನ ಉಭೇ ತ್ವಷ್ಟುರ್ಬಿಭ್ಯತುರ್ಜಾಯಮಾನಾತ್ಪ್ರತೀಚೀ ಸಿಂಹಂ ಪ್ರತಿ ಜೋಷಯೇತೇ ದ್ಯಾವಾಪೃಥಿವ್ಯಾವಿತಿ ವಾಹೋರಾತ್ರೇ ಇತಿ ವಾರಣೀ ಇತಿ ವಾಪಿ ಚೈತೇ ಪ್ರತ್ಯಕ್ತೇ ಸಿಂಹಂ ಸಹನಂ ಪ್ರತ್ಯಾಸೇವೇತೇ । ನಿ. ೮-೧೫ । ಇತಿ ॥ ಆವಿಷ್ಟ್ಯಃ ಆವಿಃ ಶಬ್ದಾಚ್ಛಂದಸಿ । ಪಾ. ೪-೨-೧೦೪-೧ । ಇತಿ ಶೈಷಿಕಸ್ತ್ಯಪ್ । ಹ್ರಸ್ವಾತ್ತಾದೌ ತದ್ಧಿತೇ । ಪಾ ೮-೩-೧೦೧ । ಇತಿ ಷತ್ವಂ । ಅಸು । ಇದಮೋಽನ್ವಾದೇಶ ಇತ್ಯಶಾದೇಶೋಽನುದಾತ್ತಃ। ವಿಭಕ್ತಿಶ್ಚ ಸುಪ್ತ್ವಾದನುದಾತ್ತೇತಿ ಸರ್ವಾನುದಾತ್ತತ್ವಂ। ನ ಚೋಡಿದಮಿತಿ ವಿಭಕ್ತೇರುದಾತ್ತತ್ವಂ ಶಂಕನೀಯಂ । ಅಂತೋದಾತ್ತಾದಿದಂಶಬ್ದಾದ್ಧಿ ತದ್ವಿಧೀಯತೇ । ಪ್ರತೀಚೀ । ಪ್ರತಿಪೂರ್ವಾದಂಚತೇರ್ಋತ್ವಿಗಿತ್ಯಾದಿನಾ ಕ್ವಿನ್ । ಅನಿದಿತಾಮಿತಿ ನಲೋಪಃ। ಅಂಚತೇಶ್ಚೋಪಸಂಖ್ಯಾನಮಿತಿ ಙೀಪ್ । ಅಚ ಇತ್ಯಾಕಾರಲೋಪೇ ಚಾವಿತಿ ದೀರ್ಘತ್ವಂ। ಉದಾತ್ತನಿವೃತ್ತಿಸ್ವರೇಣ ಙೀಪ ಉದಾತ್ತತ್ವಂ। ವಾ ಛಂದಸೀತಿ ಪೂರ್ವಸವರ್ಣದೀರ್ಘಃ। ಜೋಷಯೇತೇ। ಜುಷೀ ಪ್ರೀತಿಸೇವನಯೋಃ। ಸ್ವಾರ್ಥೇ ಣಿಚ್ ॥

ಪ್ರತಿಪದಾರ್ಥ

**ಅಸು**—(ಮೇಘಸ್ಥವಾದ) ನೀರುಗಳಲ್ಲಿ (ಮಿಂಚಿನರೂಪದಲ್ಲಿ ಇರತಕ್ಕ ಅಗ್ನಿಯು) । **ಚಾರುಃ**—ಮನೋಹರವಾದ ಕಾಂತಿಯುಳ್ಳವನಾಗಿಯೂ । **ಜಿಹ್ಮಾನಾಂ**—(ಅಲೆಗಳ ರೂಪದಲ್ಲಿ) ಕುಟಿಲವಾಗಿರುವ ನೀರುಗಳ । **ಉಪಸ್ಥೇ**—ಪಾರ್ಶ್ವಗಳಲ್ಲಿ । **ಸ್ವಯಶಾಃ**—ತನ್ನನ್ನು ತಾನೇ ಪ್ರಕಾಶಪಡಿಸಿಕೊಂಡು । **ಊರ್ಧ್ವಃ**—ಊರ್ಧ್ವಮುಖವಾದ ಜ್ವಾಲೆಯುಳ್ಳವನಾಗಿಯೂ । **ಆವಿಷ್ಟ್ಯಃ**—ಹೊರಗಾಣಿಸಿಕೊಂಡು (ಆವಿರ್ಭೂತನಾಗಿ) । **ವರ್ಧತೇ**—ಬೆಳೆಯುತ್ತಾನೆ. । **ಉಭೇ**—ದ್ಯಾವಾಪೃಥಿವಿಗಳೆರಡೂ ಸಹ । **ತ್ವಷ್ಟುಃ**—ಪ್ರಕಾಶಮಾನನಾಗಿಯೂ । **ಜಾಯಮಾನಾತ್**—ಜನಿಸುತ್ತಲೂ ಇರುವ ಈ ಅಗ್ನಿಯ ದರ್ಶನದಿಂದ । **ಬಿಭ್ಯತುಃ**—ಭಯಗೊಂಡವು. । (ಅನಂತರ) **ಸಿಂಹಂ ಪ್ರತಿ**—(ಎಲ್ಲಾ ಕಡೆಯೂ) ಆಕ್ರಮಿಸುವ ಸ್ವರೂಪವುಳ್ಳ ಈ ಅಗ್ನಿಯನ್ನು ಕುರಿತು । **ಪ್ರತೀಚೀ**—ಅಭಿಮುಖನಾಗಿ ಎದುರುಗೊಂಡು **ಜೋಷಯೇತೇ** – ಸೇವಿಸುತ್ತವೆ. (ಗೌರವವನ್ನು ಸಲ್ಲಿಸುತ್ತವೆ.) ।

॥ ಭಾವಾರ್ಥ ॥

ಅಗ್ನಿಯು ಮೇಘಸ್ಥವಾದ ನೀರುಗಳಲ್ಲಿ ತನ್ನ ಮನೋಹರವಾದ ಕಾಂತಿಯನ್ನು ಮಿಂಚಿನ ರೂಪದಲ್ಲಿ ಬೆಳಗುತ್ತಾನೆ. ತನ್ನನ್ನು ತಾನೇ ಪ್ರಕಾಶಪಡಿಸಿಕೊಂಡು ಊರ್ಧ್ವಮುಖವಾದ ಜ್ವಾಲೆಯಿಂದ ಆವಿರ್ಭೂತನಾಗಿ ಬೆಳೆಯುತ್ತಾನೆ ಅಗ್ನಿಯು ಈ ರೂಪದಲ್ಲಿ ಉದಯಿಸುವ ಕಾಲದಲ್ಲಿ ದ್ಯಾವಾಪೃಥಿವಿಗಳೆರಡೂ ಸಹ ಭಯಗೊಳ್ಳುತ್ತವೆ. ಅನಂತರ ಸರ್ವತ್ರವ್ಯಾಪಿಸುವ ಸ್ವರೂಪವುಳ್ಳ ಈ ಅಗ್ನಿಯನ್ನು ಎದುರುಗೊಂಡು ತಮ್ಮ ಗೌರವವನ್ನು ಸಲ್ಲಿಸುತ್ತವೆ

English Translation

Appearing amongst them ( the waters ), the bright-shining (Agni) increases, rising above the flanks of the waving waters, spreading his own renown : both (heaven and earth) are alarmed as the radiant Agni is born, and approaching the lion, they pay him honour·

॥ ವಿಶೇಷವಿಷಯಗಳು ॥

ಇದಮುಕ್ತಂ ಭವತಿ । ನ ಸಾಧಾರಣವತ್ಸವದಯಮಗ್ನಿರ್ವತ್ಸೋ ದೃಶ್ಯಮಾನೋ ಮಾತುರುದರೇ ವರ್ಧತೇ ತರ್ಹಿ ದೃಶ್ಯಮಾನ ಏವ ವರ್ಧತೇ । ಪಶುವತ್ತಿರಶ್ಚೀನಾನಾಂ ಅಬ್ರೂಪಮಾತ್ಯಾಣಾಮುದರೇ ಚ ತಿರಶ್ಚೀನೋ ನ ವರ್ಧತೇ ತರ್ಹಿ ಊರ್ಧ್ವಃ ಸನ್ ವರ್ಧತೇ । ತಾ ಇವ ಚಾಯಂ ನ ದೀಪ್ತಿಹೀನಸ್ತರ್ಹಿ ಸ್ವಯಶಾಃ ಸ್ವಾಯತ್ತದೀಪ್ತಿರ್ಭವತಿ । ತ್ವಷ್ಟುಸ್ತು ಯದಾಯಮಗ್ನಿರ್ಜಾತಸ್ತದಾ ದ್ಯಾವಾಪೃಥಿವ್ಯಾವಪಿ ತಸ್ಮಾದ್ಭೀತ್ವಾ ಪರಾಗತೇ । ಪಶ್ಚಾತ್ಪುನರಾಗತ್ಯ ತಂ ಸಿಂಹಸದೃಶಮಗ್ನಿಂ ಜಾಲವತ್ಸೇವೇತೇ ಸ್ಮೇತಿ ಭಾವಃ ॥ ಎಂದರೆ— ಸಾಧಾರಣ ಶಿಶುಗಳಂತೆ ಈ ಅಗ್ನಿಯು ತಾಯಿಯ ಉದರದಲ್ಲಿ ಯಾರಿಗೂ ಕಾಣಿಸದಂತೆ ಒಳಗೇ ಇದ್ದು ಬೆಳೆಯಲಿಲ್ಲ. ಆದರೆ ಎಲ್ಲರಿಗೂ ಕಾಣುವಂತೆಯೇ (ಕಾಷ್ಠಾದಿಗಳ ದಹನದಿಂದ) ಬೆಳೆಯುವನು. ಇದಲ್ಲದೆ ಪಶುಗಳಂತೆ ಜಲರೂಪವಾದ ಮಾತೃಗಳ ಉದರದಲ್ಲಿ ಅಡಗಿದ್ದು ಬೆಳೆಯಲಿಲ್ಲ. ಪ್ರತ್ಯಕ್ಷವಾಗಿ ಎಲ್ಲರಿಗೂ ಕಾಣಿಸುವಂತೆ ಊರ್ಧ್ವಮುಖವಾದ ಎಂದರೆ ಮೇಲಕ್ಕೇಳುವ ಜ್ವಾಲೆಗಳಿಂದ ಕೂಡಿ ಬೆಳೆಯುತ್ತಿರುವನು. ಇವನ ಮಾತೃಗಳಾದ ನೀರಿನಂತೆ ಇವನು ಪ್ರಕಾಶಹೀನನೂ ಅಲ್ಲ. ತಾನೇ ಸ್ವಯಂ ಪ್ರಕಾಶದಿಂದ ಬೆಳಗುವವನು. ಈ ರೀತಿ ಸ್ವಯಂಪ್ರಕಾಶತ್ವದಿಂದ ಜನಿಸಿದ ಅಗ್ನಿಯನ್ನು ನೋಡಿ ದ್ಯಾವಾಪೃಥಿವಿಗಳು ಭೀತರಾದರೂ ಮತ್ತೆ ಸಿಂಹಸದೃಶನಾದ ಅವನಲ್ಲಿಗೆ ಬಂದು ಅವನನ್ನು ಸೇವಿಸಿದರು ಎಂದಭಿಪ್ರಾಯವು.

ಇಲ್ಲಿ ವೈದ್ಯುತಾಗ್ನಿಯ ಸ್ವರೂಪವನ್ನು ವರ್ಣಿಸಿದೆ. ಏಕಕಾಲದಲ್ಲಿಯೇ ಚಿತ್ತಾಕರ್ಷಕವಾದ ರಮಣೀಯತೆಯಿಂದಲೂ ಭೀತಿಯನ್ನುಂಟುಮಾಡುವ ಭೀಮಗುಣಗಳಿಂದಲೂ ಕೂಡಿರುವ ವಿದ್ಯುತ್ತಿನ ಪ್ರಭಾವವನ್ನು ಹೊಗಳುತ್ತಾ ಅದರ ವಿವರಣೆಯನ್ನು ಕೊಟ್ಟಿದೆ. ತರಂಗರೂಪದಲ್ಲಿರುವ ವೃಷ್ಟ್ಯುದಕಗಳ ನಡುವೆ ಪ್ರಕಾಶಮಾನನಾಗಿಯೂ ಮನೋಹರವಾದ ಕಾಂತಿಯುಳ್ಳವನಾಗಿಯೂ ಆವಿರ್ಭವಿಸುವ ಮಿಂಚಿನರೂಪದ ಅಗ್ನಿಯು ಉತ್ಪನ್ನನಾದೊಡನೆಯೇ ಅತ್ಯಂತ ರಮ್ಯನಾಗಿರುತ್ತಾನೆ. ಅದೇ ಕಾಲದಲ್ಲಿಯೇ, ಆ ಮಿಂಚಿನ ಪ್ರಭಾವವು ಸಕಲ ಶಕ್ತಿಗಳಿಗಿಂತಲೂ ಹೆಚ್ಚಿನ

ದಾಗಿ, ಅಪ್ರತಿಹತವಾದ ವೇಗದಿಂದಲೂ ವಾಹದಿಂದಲೂ ಲೋಕವನ್ನಾಕ್ರಮಿಸುವಾಗ ಸಿಂಹದಂತೆ ಭಯಜನಕನಾಗಿರುತ್ತದೆ. ಆದುದರಿಂದಲೇ ದ್ಯಾವಾಪೃಥಿವಿಗಳೆರಡೂ ಈ ಅಗ್ನಿಗೆ ಗೌರವವನ್ನು ಸಲ್ಲಿಸಿ ಸೇವಿಸುತ್ತವೆ. ಈ ರೀತಿ ಒಂದರ್ಥವಾದರೆ, **ಉಭೇ** ಎಂಬ ಪದಕ್ಕೆ ಬೇರೆ ಅರ್ಥಗಳೂ ಸಾಧ್ಯವಾಗುತ್ತವೆ. ಆಗ ವಿದ್ಯುದ್ರೂಪದ ಅಗ್ನಿಯೇ ಆಗದೇ, ಪಾರ್ಥಿವನಾದ ಅಗ್ನಿಯೂ ಈ ಗುಣಗಳಿಂದ ಕೂಡಿ ವರ್ಣಿತನಾಗಿರಬಹುದು. ಈ ಅರ್ಥಭೇದಗಳನ್ನು ವಿವರಣೆಯಿಂದ ತಿಳಿಯಬಹುದು.

ಮೊದಲು ನಿರುಕ್ತಕಾರರ ವ್ಯಾಖ್ಯಾನವನ್ನು ಪರಿಶೀಲಿಸಿದರೆ ಈ ಎಲ್ಲಾ ಅರ್ಥಗಳಿಗೂ ಅವಕಾಶವಿದೆಯೆಂದು ತಿಳಿಯುತ್ತದೆ. ಯಾಸ್ಕರು ಈ ಋಕ್ಕನ್ನು ವಿವರಿಸುತ್ತಾ **ಆವಿರಾವೇದನಾತ್ತತ್ಯೋ ವರ್ಧತೇ ಚಾರುರಾಸು। ಚಾರು ಚರತೇರ್ಜಿಹ್ಮಂ ಜಿಹೀತೇರೂರ್ಧ್ವ ಉಚ್ಛ್ರಿತೋ ಭವತಿ। ಸ್ವಯಶಾ ಆತ್ಮಯಶಾ ಉಪಸ್ಥ ಉಪಸ್ಥಾನ ಉಭೇ ತ್ವಷ್ಟುರ್ಬಿಭ್ಯತುರ್ಜಾಯಮಾನಾತ್ಪ್ರತೀಚೀ ಸಿಂಹಂ ಪ್ರತಿ ಜೋಷಯೇತೇ। ದ್ಯಾವಾಪೃಥಿವ್ಯಾವಿತಿ ವಾಹೋರಾತ್ರೇ ಇತಿ ವಾರಿಣೀ ಇತಿ ವಾಪಿ ಚೈತೇ ಪ್ರತ್ಯಕ್ತೇ ಸಿಂಹಂ ಸಹನಂ ಪ್ರತ್ಯಾಸೇವೇತೇ** (ನಿ. ೮-೧೫) ತೇಜಸ್ಸನ್ನು ಹರಡುವವನೂ, ಆತ್ಮಪ್ರಭಾವದಿಂದ ಔನ್ನತ್ಯವನ್ನು ಪಡೆಯುವವನೂ, ಆದ ಅಗ್ನಿಯು ಜಿಹ್ಮರೂಪದ ಅವುಗಳ ನಡುವೆ ಪ್ರವೃದ್ಧನಾಗುತ್ತಾನೆ. ಈ ತ್ವಷ್ಟೃವಿಗೆ ಎರಡೂ ಹೆದರಿಕೊಂಡು, ಸಿಂಹಪ್ರಾಯನಾದ ಇವನನ್ನು ಸೇವಿಸುತ್ತವೆ ಎಂದು ಅರ್ಥವಾದರೆ, ಇದನ್ನು ಇನ್ನೂ ವಿಶದವಾಗಿ ನಿರುಕ್ತದಲ್ಲಿ ವಿವರಿಸಿದೆ.

**ಚಾರುಃ—ಚಾರು ಚರತೇಃ।** ವಿಸ್ತರಿಸು, ಪ್ರಸರಿಸು ಎಂದರ್ಥವನ್ನು ಕೊಡುವ **ಚರ್** ಧಾತುವಿನಿಂದ **ಚಾರು** ಎಂಬ ರೂಪದ ನಿಷ್ಪತ್ತಿಯಾಗಿ ಮನೋಹರವಾದ ಎಂದಾಗುತ್ತದೆ.

**ಆವಿಷ್ಟ್ಯಃ— ಆವಿಃ ತ್ಯಃ ಆವಿರಾವೇದನಾತ್ತತ್ಯೋ ವರ್ಧತೇ।** ಎಲ್ಲಾ ವಸ್ತುಗಳನ್ನೂ ಪ್ರಕಾಶವಾಗುವಂತೆ ಬೆಳಗಿಸುವುದರಿಂದಲೂ ರಮ್ಯವಾಗಿ ಪ್ರಸರಿಸುವುದರಿಂದಲೂ ಆ ಅರ್ಥಗಳನ್ನು ಕೊಡುವ ಮೇಲಿನ ವಿಶೇಷಣದಿಂದ ಅಗ್ನಿಯನ್ನು ವರ್ಣಿಸಿದೆ.

**ಜಿಹ್ಮಾನಾಂ—ಜಿಹ್ಮಂ ಜಿಹೀತೇಃ।** ಗತ್ಯರ್ಥಕವಾಗಿ ಇಲ್ಲಿ ಜಿಮ್ಮು, ಹಾರು ಎಂದರ್ಥವನ್ನು ಕೊಡುವ ಹಾ ಧಾತುವಿನಿಂದ ನಿಷ್ಪನ್ನವಾಗಿ ಕುಟಿಲವಾಗಿ, ವಕ್ರವಾಗಿ ಎಂದಾಗುತ್ತದೆ. ವಕ್ರವಾಗಿ ಚಲಿಸುವ ಅಲೆಗಳ, ತರಂಗರೂಪದ ವೃಷ್ಟ್ಯುದಕಗಳ (ನಡುವೆ) ಎಂದಭಿಪ್ರಾಯ.

**ಉಪಸ್ಥೇ—ಉಪಸ್ಥಾನೇ। ಉಪಸ್ಥಃ, ಯಜ್ಞಃ ಆಹವನೀಯೋ ವಾ, ಅಂತರಿಕ್ಷಂ ವಾ।** ಯಜ್ಞಪ್ರದೇಶದ ಮಧ್ಯಭಾಗದಲ್ಲಿ ಎಂದಾಗಲಿ, ಅಂತರಿಕ್ಷದಲ್ಲಿ ಮೇಘಗಳ ಪಾರ್ಶ್ವಗಳಲ್ಲಿ ಎಂದಾಗಲಿ ಆಗುತ್ತದೆ. ಯಜ್ಞಾಗ್ನಿಯಾದರೆ ಮೊದಲನೆಯ ಅರ್ಥವೂ, ವಿದ್ಯುತ್ತಾದರೆ ಎರಡನೆಯ ಅರ್ಥವೂ ಹೊಂದಿಕೊಳ್ಳುತ್ತವೆ,

**ತ್ವಷ್ಟುಃ—ತ್ವಷ್ಟಾ ತೂರ್ಣಮಶ್ನುತ ಇತಿ ನೈರುಕ್ತಾಃ। ತ್ವಿಷೇರ್ವಾ ಸ್ಯಾದ್ದೀಪ್ತಿಕರ್ಮಣಸ್ತ್ವಕ್ಷತೇರ್ವಾ ಸ್ಯಾತ್ ಕರೋತಿಕರ್ಮಣಃ।** (ನಿ. ೮-೧೩.) ಶೀಘ್ರವಾಗಿ ಎಲ್ಲವನ್ನೂ ವ್ಯಾಪಿಸುವುದರಿಂದಲೂ, ಅಥವಾ ಪ್ರಕಾಶ ವಾನವಾಗಿ ಬೆಳಗು ಎಂದರ್ಥದಿಂದಾಗಲಿ, ಕರ್ಮಕಾರಿ ಎಂಬುದರಿಂದಾಗಲಿ ತ್ವಷ್ಟೃಶಬ್ದದ ನಿಷ್ಪತ್ತಿಯು ಸಾಧ್ಯವಾಗುತ್ತದೆ. ಇಲ್ಲಿ ಪ್ರಕಾಶಮಾನನಾದ ಅಗ್ನಿಯಿಂದ (ಭಿಭ್ಯತುಃ) ಎಂದಾಗುತ್ತದೆ.

**ಉಭೇ—ದ್ಯಾವಾಪೃಥಿವ್ಯೌ ಇತಿ ವಾ, ಅಹೋರಾತ್ರೇ ಇತಿ ವಾ, ಅರಣೀ ಇತಿ ವಾ।** (ನಿ. ೮-೧೫) ದ್ಯಾವಾಪೃಥಿವಿಗಳೆಂದಾಗಲಿ, ಅಹೋರಾತ್ರಗಳೆಂದಾಗಲಿ ಆಗಬಹುದೆಂದು ನಿರುಕ್ತಕಾರರು ವಿವರಿಸುತ್ತಾರೆ.

ಸ್ಕಂದಸ್ವಾಮಿಗಳು **ತ್ವೇಷ್ಯಃ ಜಾಯಮಾನಾತ್** ಎಂಬುದಕ್ಕೆ **ತ್ವೇಷ್ಯಃ ಸಕಾಶಾತ್ ದಶಸ್ವಪಿ ದಿಕ್ಷು ಜಾಯಮಾನಾತ್ ।** ತ್ವಷ್ಟೃವಿನಿಂದ ದಶದಿಕ್ಕುಗಳಲ್ಲಿಯೂ ಉತ್ಪನ್ನನಾದ ಅಗ್ನಿಯೆಂದೂ, ಸಾಯಣರು **ಜಾಯಮಾನಾತ್** ಉತ್ಪನ್ನನಾದವನೂ ಪ್ರಕಾಶಮಾನನಾದವನೂ ಆದ ಅಗ್ನಿಯಿಂದ ಎಂದು ಎರಡನ್ನೂ ವಿಶೇಷಣವಿಶೇಷ್ಯವನ್ನಾಗಿ ಮಾಡುತ್ತಾರೆ. ನಿರುಕ್ತಕಾರರ ವಿವರಣೆಯನ್ನೇ ಸಾಯಣರು ಅನುಸರಿಸಿದ್ದಾರೆ.

**ಸಿಂಹಂ—ಸಹನಂ ಪ್ರತ್ಯಾಸೇವೇತೇ ।** ಅಪ್ರತಿಹತವಾದ ಶಕ್ತಿಯಿಂದ ಎಲ್ಲವನ್ನೂ ಆಕ್ರಮಿಸುವ ಶಕ್ತಿಯುಳ್ಳ ಅಗ್ನಿಯನ್ನು ಎಂದಾಗಲೀ ಅಥವಾ ಸಿಂಹದಂತೆ ಭೀಷಣಸ್ವರೂಪವುಳ್ಳ ಅಗ್ನಿಯನ್ನು ಎಂದಾಗಲೀ ಅರ್ಥವಾಗುತ್ತದೆ.

ಹೀಗೆ ಅಗ್ನಿಯ ರಮ್ಯವಾದುದೂ ಭೀಷಣವಾದುದೂ ಆದ ಸ್ವರೂಪವನ್ನು ಒಟ್ಟಿಗೆ ಪ್ರಕಾಶಪಡಿಸುವ ವೈದ್ಯುತಾಗ್ನಿಯ ಅಥವಾ ಪಾರ್ಥಿವಾಗ್ನಿಯ ಮಹಿಮೆಯು ವರ್ಣಿತವಾಗಿದೆ. ಇಲ್ಲಿ ವೈದ್ಯುತಾಗ್ನಿಯೆಂದು ಅರ್ಥ ಮಾಡಿದರೆ ಸನ್ನಿವೇಶಕ್ಕೆ ಸರಿಯಾಗಿ ಹೊಂದಿಕೊಳ್ಳುತ್ತದೆ.

ವ್ಯಾಕರಣಪ್ರಕ್ರಿಯಾ

**ಆವಿಷ್ಟ್ಯಃ**—ಆವಿಸ್ ಎಂಬುದು ಸಾಂತವಾದ ಅವ್ಯಯ. ಇದಕ್ಕೆ **ಛಂದಸಿ**— (ಪಾ. ಸೂ. ೪-೨-೧೦೪-೧) ಎಂಬುದರಿಂದ ಶೇಷಾಧಿಕಾರದಲ್ಲಿ ವಿಹಿತವಾದ ತ್ಯಪ್‌ಪ್ರತ್ಯಯ. ತಾದಿಯಾದ ತದ್ಧಿತವು ಪರದಲ್ಲಿರುವುದರಿಂದ **ಹ್ರಸ್ವಾತ್ತಾದೌ ತದ್ಧಿತೇ** (ಪಾ. ಸೂ. ೮-೩-೧೦೧) ಎಂಬುದರಿಂದ ಆವಿಸಿನ ಸಕಾರಕ್ಕೆ ಷತ್ವ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಅವ್ಯಯಪ್ರಕೃತಿಸ್ವರ ಉಳಿಯುತ್ತದೆ.

**ವರ್ಧತೇ**—ವೃಧು ವೃದ್ಧೌ ಧಾತು. ಲಟ್ ಪ್ರಥಮಪುರುಷ ಏಕವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಸು**—ಇದಮ್ ಶಬ್ದ. ಅನ್ವಾದೇಶದಲ್ಲಿ (ಕಾರ್ಯಾಂತರಕ್ಕೆ ಉಪಾತ್ತವಾದುದನ್ನು ಪುನಃ ತೆಗೆದುಕೊಂಡಾಗ **ಇದಮೋಽನ್ವಾದೇಶೇಽಶನುದಾತ್ತಸ್ತೃತೀಯಾದೌ** (ಪಾ. ಸೂ. ೨-೪-೩೨) ಎಂಬುದರಿಂದ ಅಶಾದೇಶ ಶಿತ್ತಾದುದರಿಂದ **ಅನೇಕಾಲ್‌ಶಿತ್ ಸರ್ವಸ್ಯ** ಪರಿಭಾಷೆಯಿಂದ ಸರ್ವಾದೇಶವಾಗಿ ಬರುತ್ತದೆ. ಸಪ್ತಮೀಬಹುವಚನದಲ್ಲಿ ಸುಪ್‌ಪ್ರತ್ಯಯ. ಅಶಾದೇಶ ಅನುದಾತ್ತವಾದುದರಿಂದಲೂ, ವಿಭಕ್ತಿಯೂ ಅನುದಾತ್ತವಾದುದರಿಂದ ಸರ್ವಾನುದಾತ್ತವಾಗುತ್ತದೆ. ಯದ್ಯಪಿ ಇಲ್ಲಿ **ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರಬೇಕಾಗುತ್ತದೆ. ಆದರೆ ಅಂತೋದಾತ್ತವಾದ ಇದಂ ಶಬ್ದದ ಪರದಲ್ಲಿರುವ ವಿಭಕ್ತಿಗೆ ಅದರಿಂದ ಉದಾತ್ತಸ್ವರ ಹೇಳಿರುವುದರಿಂದ ಇಲ್ಲಿ ಬರುವುದಿಲ್ಲ.

**ಸ್ವಯಶಾಃ**—ಸ್ವಂ ಯಶಃ ಯಸ್ಯ ಸಃ ಸ್ವಯಶಾಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ತ್ವೇಷ್ಯಃ**—ಇದೇ ಸೂಕ್ತದ ಎರಡನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

**ಬಿಭ್ಯತುಃ**—ಞಿಭೀ ಭಯೇ ಧಾತು. ಲಿಟ್. ದ್ವಿವಚನದಲ್ಲಿ ಅತುಸ್ ಆದೇಶ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹ್ರಸ್ವ. ಜಶ್ತ್ವ. **ಅಸಂಯೋಗಾಲ್ಲಿಟ್ ಕಿತ್**—ಸೂತ್ರದಿಂದ ಪ್ರತ್ಯಯಕ್ಕೆ ಕಿತ್ವವಿರುವುದರಿಂದ ಧಾತುವಿನ ಇಕಿಗೆ ಗುಣ ಬರುವುದಿಲ್ಲ. ಯಣಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ಜಾಯಮಾನಾತ್**—ಜನೀ ಪ್ರಾದುರ್ಭಾವೇ ಧಾತು. ದಿವಾದಿ. ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ದಿವಾದಿಭ್ಯಃ ಶ್ಯನ್**—ಎಂಬುದರಿಂದ ಶ್ಯನ್‌ವಿಕರಣ. **ಜ್ಞಾಜನೋರ್ಜಾ**—(ಪಾ. ಸೂ. ೭-೩-೭೯) ಎಂಬುದರಿಂದ ವಿಕರಣ ಪರವಾದಾಗ ಧಾತುವಿಗೆ ಜಾದೇಶ. **ಆನೇಮುಕ್**—(ಪಾ. ಸೂ. ೭-೨-೮೨) ಎಂಬುದರಿಂದ ಅನಂತಕ್ಕೆ ಮುಕಾಗಮ. ಅದುಪದೇಶದ ಪರದಲ್ಲಿರುವುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು (ಆನ) ಅನುದಾತ್ತವಾಗುವುದರಿಂದ ಶ್ಯನ್ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪ್ರತೀಚೀ**—ಅಂಚು ಗತಿಪೂಜನಯೋಃ ಧಾತು. ಇದಕ್ಕೆ ಪ್ರತಿಪೂರ್ವವಾಗಿರುವಾಗ **ಋತ್ವಿಕ್‌ದಧೃ**—(ಪಾ. ಸೂ. ೩-೨-೫೯) ಎಂಬುದರಿಂದ ಕ್ವಿನ್ ಪ್ರತ್ಯಯ. ಕಿತ್ತಾದುದರಿಂದ ಇದು ಪರವಾದಾಗ **ಅನಿದಿತಾಂ ಹಲ**—(ಪಾ. ಸೂ. ೬-೪-೨೪) ಎಂಬುದರಿಂದ ಧಾತುವಿನ ಉಪಧೆ ನಕಾರಕ್ಕೆ ಲೋಪ. ಸ್ತ್ರೀತ್ವವಿವಕ್ಷಾಮಾಡಿದಾಗ **ಅಂಚತೇಶ್ಚೋಪಸಂಖ್ಯಾನಮ್**—ಎಂಬ ವಚನದಿಂದ ಙೀಪ್. ಇದು ಪರವಾದಾಗ ಭಸಂಜ್ಞಾ ಇರುವುದರಿಂದ **ಅಚಃ** (ಪಾ. ಸೂ. ೬-೪-೧೩೮) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ಲುಪ್ತಾಕಾರವುಳ್ಳ ಅಂಚುಧಾತುವು ಪರವಾದುದರಿಂದ **ಚೌ** (ಪಾ. ಸೂ. ೬-೩-೧೩೮) ಎಂಬುದರಿಂದ ಪೂರ್ವಕ್ಕೆ ದೀರ್ಘ. ಙೀಪ್ (ಅನುದಾತ್ತ) ನಿಮಿತ್ತವಾಗಿ ಧಾತುವಿನ ಉದಾತ್ತಾಕಾರ ಲೋಪವಾದುದರಿಂದ **ಅನುದಾತ್ತಸ್ಯಚ ಯತ್ರೋದಾತ್ತಲೋಪಃ**—(ಪಾ. ಸೂ. ೬-೧-೧೬೧) ಎಂಬುದರಿಂದ ಙೀಪಿಗೆ ಉದಾತ್ತಸ್ವರ ಬರುತ್ತದೆ. ಪ್ರತೀಚೀ+ಔ ಎಂದು ದ್ವಿವಚನ ಪರವಾದಾಗ **ವಾ ಛಂದಸಿ**—ಎಂಬುದರಿಂದ ಪೂರ್ವಸವರ್ಣದೀರ್ಘ ಬರುತ್ತದೆ.

**ಸಿಂಹಮ್**—ಹಿಸಿ ಹಿಂಸಾಯಾಂ. ಧಾತು. ಪಚಾದಿಯಲ್ಲಿ ಸೇರಿರುವುದರಿಂದ ಅಚ್‌ಪ್ರತ್ಯಯ. **ಪೃಷೋದರಾದೀನಿ ಯಥೋಪದಿಷ್ಟಮ್**—(ಪಾ. ಸೂ. ೬-೩-೧೦೯) ಎಂಬುದರಿಂದ ವರ್ಣವಿಪರ್ಯಯದಿಂದ ಸಿದ್ಧವಾಗುತ್ತದೆ.

**ಜೋಷಯೇತೇ**—ಜುಷೀ ಪ್ರೀತಿಸೇವನಯೋಃ ಧಾತು. ಸ್ವಾರ್ಥದಲ್ಲಿ ಣಿಚ್. **ಪುಗಂತಲಘೂಪಧಸ್ಯಚ**—ಎಂಬುದರಿಂದ ಲಘೂಪಧಗುಣ. ದ್ವಿವಚನದಲ್ಲಿ **ಟಿತಆತ್ಮ**—ಎಂಬುದರಿಂದ ಏತ್ವ. **ಆತೋಙಿತಃ**—ಎಂಬುದರಿಂದ ಆಕಾರಕ್ಕೆ ಇಯಾದೇಶ. ಯಲೋಪ. ಶಪ್‌ವಿಕರಣ. ಣಿಚಿಗೆ ತನ್ನಿಮಿತ್ತವಾಗಿ ಗುಣ ಅಯಾದೇಶ. ತಿಙಂತನಿಘಾತಸ್ವರ ಬರುತ್ತದೆ. ॥ ೫ ॥



ಸಂಹಿತಾಪಾಠಃ

ಉಭೇ ಭದ್ರೇ ಜೋಷಯೇತೇ ನ ಮೇನೇ ಗಾವೋ ನ ವಾಶ್ರಾ

ಉಪ ತಸ್ಥುರೇವೈಃ ।

ಸ ದಕ್ಷಾಣಾಂ ದಕ್ಷಪತಿರ್ಬಭೂವಾಂಜಂತಿ ಯಂ ದಕ್ಷಿಣತೋ

ಹವಿರ್ಭಿಃ ॥ ೬ ॥

ಪದಪಾಠಃ

ಉಭೇ ಇತಿ । ಭದ್ರೇ ಇತಿ । ಜೋಷಯೇತೇ ಇತಿ।ನ।ಮೇನೇ ಇತಿ । ಗಾವಃ । ನ ।

ವಾಶ್ರಾಃ । ಉಪ । ತಸ್ಥುಃ । ಏವೈಃ ।

ಸಃ । ದಕ್ಷಾಣಾಂ । ದಕ್ಷಽಪತಿಃ । ಬಭೂವ । ಅಂಜಂತಿ । ಯಂ । ದಕ್ಷಿಣತಃ ।

ಹವಿಃಽಭಿಃ ॥ ೬ ॥

ಸಾಯಣಭಾಷ್ಯಂ

ಉಭೇ ಅಹಶ್ಚ ರಾತ್ರಿಶ್ಚ । ಯದ್ವಾ । ಉಭೇ ದ್ಯಾವಾಪೃಥಿವ್ಯೌ ಅರಣೀ ವಾ । ಭದ್ರೇ ಭಜನೀಯೇ ಶೋಭನಾಂಗ್ಯೌ ಮೇನೇ ಸ್ತ್ರಿಯೌ ಜೋಷಯೇತೇ ನ । ಸೇವೇತೇ ಇವ । ಯಥಾ ಶೋಭನೇ ಸ್ತ್ರಿಯೌ ಚಾಮರಹಸ್ತೇ ರಾಜಾನಮುಭಯತಃ ಸೇವೇತೇ । ಏವಂ ದ್ಯಾವಾಪೃಥಿವ್ಯಾವೇನಮಗ್ನಿಮುಭಯತಃ ಸೇವೇತೇ ಇತ್ಯರ್ಥಃ । ಅಪಿ ಚ ವಾಶ್ರಾ ಹಂಭಾರವಂ ಕುರ್ವತ್ಯೋ ಗಾವೋ ನ ಗಾವೋ ಯಥೈವೈಃ ಸ್ವಕೀಯೈಶ್ಚರಿತ್ರೈರಾದರಾತಿಶಯೇನ ಸ್ವಕೀಯಾನ್ವತ್ಸಾನುಪ ತಸ್ಥುಃ ಸಂಗಚ್ಛಂತೇ । ತಥೇಮಮಗ್ನಿಂ ದ್ಯಾವಾಪೃಥಿವ್ಯಾವುಪಸ್ಥಿತೇ ಭವತಃ । ಪೂರ್ವಂ ಸೇವನಮಾತ್ರಮುಕ್ತಂ । ಇದಾನೀಂ ಪುನರ್ಗೋನಿದರ್ಶನೇನ ತತ್ರೈವಾದರಾತಿಶಯೋ ದ್ಯೋತ್ಯತೇ । ಅತಃ ಸೋಽಗ್ನಿರ್ದಕ್ಷಾಣಾಂ ಸರ್ವೇಷಾಂ ಬಲಾನಾಂ ದಕ್ಷಪತಿರ್ಬಲಾಧಿಪತಿರ್ಬಭೂವ ಆಸೀತ್ । ಬಲಾನಾಂ ಮಧ್ಯೇ ಯದತಿಶಯಿತಂ ಬಲಂ ತಸ್ಯಾಧಿಪತಿರ್ಬಭೂವೇತ್ಯರ್ಥಃ । ಯಮಗ್ನಿಂ ದಕ್ಷಿಣತ ಆಹವನೀಯಸ್ಯ ದಕ್ಷಿಣಭಾಗೇಽವಸ್ಥಿತಾ

ಋತ್ವಿಜೋ ಹವಿರ್ಭಿಶ್ಚರುಪುರೋಡಾಶಾದಿಭಿರಂಜಂತಿ । ಆರ್ದ್ರೀಕುರ್ವಂತಿ ತರ್ಪಯಂತಿ । ಸೋಽಗ್ನಿರಿತಿ ಪೂರ್ವೇಣಾನ್ವಯಃ ॥ ವಾಶ್ರಾಃ । ವಾಶೃ ಶಬ್ದೇ । ಸ್ಫಾಯಿತಂಚೀತ್ಯಾದಿನಾ ರಕ್ । ಏನ್ಯೈಃ । ಇಣ್ ಗತೌ । ಇಣ್ಶೀಙ್ಭ್ಯಾಂ ವನ್ನಿತಿ ಭಾವೇ ವನ್ಪ್ರತ್ಯಯಃ ॥

॥ ಪ್ರತಿಪದಾರ್ಥ ॥

**ಭದ್ರೇ**—ಮಂಗಳಾಂಗಿಯರಾದ । **ಮೇನೇ**—ಇಬ್ಬರು ಸ್ತ್ರೀಯರು । **ಜೋಷಯೇತೇ ನ**—(ದೊರೆಯನ್ನು ಚಾಮರಾದಿಗಳಿಂದ ಎರಡು ಕಡೆಯೂ) ಸೇವಿಸುವಂತೆಯೂ । **ವಾಶ್ರಾಃ**—ವಾತ್ಸಲ್ಯದಿಂದ ಶಬ್ದವಮಾಡಿಕೊಂಡು । **ಗಾವಃ**—ಹಸುಗಳು । **ಏನ್ಯೈಃ**—ಆದರಾತಿಶಯಗಳಿಂದ । **ಉಪ ತಸ್ಥುಃ ನ**—(ತಮ್ಮ ಕರುಗಳನ್ನು) ಸಮೀಪಿಸಿ ಉಪಚರಿಸುವಂತೆಯೂ । **ಉಭೇ**—ಅಹೋರಾತ್ರಗಳೆರಡೂ ಅಥವಾ ದ್ಯಾವಾಪೃಥಿವಿಗಳೆರಡೂ ಅಥವಾ ಎರಡು ಅರಣಿಗಳೂ (ಅಗ್ನಿಯನ್ನು ಎರಡು ಪಾರ್ಶ್ವಗಳಲ್ಲಿಯೂ ಸೇವಿಸುತ್ತವೆ) । **ಯಂ**—ಯಾವ ಅಗ್ನಿಯನ್ನು । **ದಕ್ಷಿಣತಃ**-(ಆಹವನೀಯದ) ದಕ್ಷಿಣ ಭಾಗದಲ್ಲಿ (ಇರುವ ಋತ್ವಿಕ್ಕುಗಳು) । **ಹವಿರ್ಭಿಃ**—ಚರುಪುರೋಡಾಶಾದಿಗಳಿಂದ । **ಅಂಜಂತಿ**—(ಪೂಜಿಸುತ್ತಾರೋ) ಅಭಿಷೇಕ ಮಾಡುತ್ತಾರೋ । **ಸಃ**—ಆ ಅಗ್ನಿಯು । **ದಕ್ಷಾಣಾಂ**—ಸಕಲ ವಿಧವಾದ ಶಕ್ತಿಗಳಿಗೂ । **ದಕ್ಷಪತಿಃ**—ಸಮರ್ಥವಾದ ಅಧಿಪತಿಯಾಗಿ । **ಬಭೂವ**—ಆಗಿದ್ದಾನೆ.

ಭಾವಾರ್ಥ

ಮಂಗಳಾಂಗಿಯರಾದ ಇಬ್ಬರು ಸ್ತ್ರೀಯರು ದೊರೆಯ ಎರಡು ಕಡೆಗಳಲ್ಲಿಯೂ ಚಾಮರಾದಿಗಳಿಂದ ಸೇವಿಸುವಂತೆ ಭಕ್ತಿಯಿಂದಲೂ; ಹಸುಗಳು ವಾತ್ಸಲ್ಯದಿಂದ ಶಬ್ದವಮಾಡಿಕೊಂಡು ತಮ್ಮ ಕರುಗಳನ್ನು ಸಮೀಪಿಸಿ ಉಪಚರಿಸುವಂತೆ ಆದರದಿಂದಲೂ ಲೋಕಕ್ಕೆ ಮಂಗಳಕರಗಳಾದ ಅಹೋರಾತ್ರಗಳೆರಡೂ ಸಹ ಅಗ್ನಿಯನ್ನು ಎರಡು ಪಾರ್ಶ್ವಗಳಲ್ಲಿಯೂ ಸೇವಿಸುತ್ತವೆ. ಯಾವ ಅಗ್ನಿಯನ್ನು ಆಹವನೀಯದ ದಕ್ಷಿಣಭಾಗದಲ್ಲಿರುವ ಋತ್ವಿಕ್ಕುಗಳು ಚರುಪುರೋಡಾಶಾದಿಗಳಿಂದ ಅಭಿಷೇಕಮಾಡಿ ಪೂಜಿಸುತ್ತಾರೋ ಆ ಅಗ್ನಿಯು ಸಕಲವಿಧವಾದ ಶಕ್ತಿಗಳಿಗೂ ಮತ್ತು ಶಕ್ತರಿಗೂ ಸಹ ಸಮರ್ಥವಾದ ಅಧಿಪತಿಯಾಗಿ ಆಗಿದ್ದಾನೆ.

English Translation

Both the auspicious ones ( day and night ) wait upon him like two female attendants, as lowing cows (follow their calves) by the paths (that they have gone); he has been the lord of might among the mighty, whom ( the priests) on the right (of the altar) anoint.

॥ ವಿಶೇಷವಿಷಯಗಳು ॥

ಈ ವರ್ಣನೆಯಲ್ಲಿ ಸೌಂದರ್ಯವೂ, ಭಯಭಕ್ತಿಗಳೂ, ವಾತ್ಸಲ್ಯವೂ, ಕರ್ಮನಿಷ್ಠೆಯೂ ಒಟ್ಟಿಗೆ ಮಿಶ್ರಿತವಾಗಿವೆ. ಅಹೋರಾತ್ರಗಳ ಅಥವಾ ದ್ಯಾವಾಪೃಥಿವಿಗಳ ಅಗ್ನಿಸೇವೆಯನ್ನು ಮಂಗಳಾಂಗಿಯರಾದ ಸುಂದರಸ್ತ್ರೀಯರು ರಾಜನನ್ನು ಸೇವಿಸುವುದಕ್ಕೂ, ಗೋವುಗಳು ತಮ್ಮ ಕರುಗಳನ್ನು ವಾತ್ಸಲ್ಯದಿಂದ ಉಪಚರಿಸುವುದಕ್ಕೂ ಹೋಲಿಸಿದೆ. ಋತ್ವಿಕ್ಕುಗಳ ಕರ್ಮನಿಷ್ಠೆಯನ್ನು ಪ್ರಶಂಸಿಸಿ ಅಗ್ನಿಯ ಪ್ರಭಾವವನ್ನು ವರ್ಣಿಸಿದೆ.

**ಭದ್ರೇ—ಭದ್ರಂ ಭಗೇನ ವ್ಯಾಖ್ಯಾತಂ। ಭಜನೀಯಂ, ಭೂತಾನಾಮಭಿದ್ರವಣೀಯಂ ಭವದ ಮಯತೀತಿ ವಾ ಭಾಜನವದ್ವಾ।** (ನಿ. ೪-೯) ಶ್ರೇಯಸ್ಕರ ಅಥವಾ ಮಂಗಳಕರ ಎಂಬರ್ಥದಲ್ಲಿ ಭದ್ರ ಶಬ್ದವು ಉಪಯೋಗಿಸಲ್ಪಡುತ್ತದೆ. ಇನ್ನೂ ವಿವರಿಸಿದರೆ, ಭೋಗಕ್ಕೆ ಅರ್ಹವಾದುದು, ಪ್ರಾಣಿಗಳಿಗೆ ಅತ್ಯಂತ ಅಪೇಕ್ಷಿತ್ರವಾದುದು, ಅಥವಾ ಸುಖಭೋಗವನ್ನು ಉಂಟುಮಾಡತಕ್ಕದ್ದು ಅಥವಾ ಅರ್ಹತೆಯುಳ್ಳವನಿಗೆ ಮಾತ್ರ ಸೇರತಕ್ಕದ್ದು ಎಂಬ ಅರ್ಥಗಳಲ್ಲಿ ಭದ್ರ ಶಬ್ದದ ಪ್ರಯೋಗವಿದೆ. ನಿರುಕ್ತಕಾರರು ಈ ಪದವನ್ನು ವಿವರಿಸುವಾಗ ಒಂದು ಶ್ರುತಿ ವಾಕ್ಯದ ಉದಾಹರಣೆಯಿಂದ ಸನ್ನಿವೇಶಕ್ಕೆ ಅನುಗುಣವಾಗಿ ಇದರ ಅರ್ಥವನ್ನು ಹೇಳುತ್ತಾರೆ. ಋಕ್ಸಂಹಿತೆಯ—

**ಅತ್ರಾ ಸಖಾಯಃ ಸಖ್ಯಾನಿ ಜಾನತೇ ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿ ವಾಚಿ।**
(ಋ. ಸಂ. ೧೦-೭೧-೨)

ಎಂಬ ವಾಕ್ಯದಲ್ಲಿ ಭದ್ರ ಶಬ್ದವನ್ನು ವಿವರಿಸುತ್ತಾ ಮಂಗಳಾತ್ಮಕವಾದುದು ಎಂಬರ್ಥವನ್ನು ಹೇಳುತ್ತಾರೆ. ಅದರಂತೆಯೇ ಇಲ್ಲಿಯೂ ಸಹ ಭದ್ರೇ ಎಂಬ ಪದಕ್ಕೆ **ಭಜನೀಯೇ ಶೋಭನಾಂಗ್ಯೌ।** ಮಂಗಳಾಂಗಿಯರಾದ ಎಂದು ಸುಂದರ ಸ್ತ್ರೀಯರಿಗೆ ವಿಶೇಷಣವಾಗಿದೆ. ಅಥವಾ ಭದ್ರೇ ಎಂಬ ಪದವನ್ನು **ಉಭೇ** ಎನ್ನುವುದಕ್ಕೆ ವಿಶೇಷಣವನ್ನಾಗಿ ಮಾಡಿ, ಮಂಗಳಾತ್ಮಕರಾದ ಅಹೋರಾತ್ರಗಳು ಅಥವಾ ದ್ಯಾವಾಪೃಥಿವಿಗಳು ಎಂದು ಅನ್ವಯವನ್ನು ಮಾಡಬಹುದೆಂದು ಸ್ಕಂದಸ್ವಾಮಿಗಳ ಮತ. ಅವರ ವ್ಯಾಖ್ಯಾನದಲ್ಲಿ **ಉಭೇ ದ್ಯಾವಾಪೃಥಿವ್ಯೌ ಭದ್ರೇ ಕಲ್ಯಾಣ್ಯೌ ಜೋಷಯೇತೇ** ಎಂದಿದೆ.

**ಮೇನೇ—ಮೇನಾ ಗ್ನಾ ಇತಿ ಸ್ತ್ರೀಣಾಂ। ಮೇನಾ ಮಾನಯಂತ್ಯೇನಾಃ।** ಮೇನಾ, ಗ್ನಾ ಇವು ಸ್ತ್ರೀಪರ್ಯಾಯ ಶಬ್ದಗಳು. ಗಂಡಸರು ಇವರನ್ನು ಗೌರವಿಸುತ್ತಾರಾದ್ದರಿಂದ ಈ ಹೆಸರು ಪ್ರಸಿದ್ಧವಾಗಿದೆಯೆಂದು ನಿರುಕ್ತಕಾರರ ವಿವರಣೆಯಿದೆ. (ನಿ. ೩-೨೧). ಆದ್ದರಿಂದ ಇಲ್ಲಿ **ಮೇನೇ** ಎಂಬುದಕ್ಕೆ ಗೌರವಕ್ಕೆ ಅರ್ಹರಾದ ಸುಂದರ ಸ್ತ್ರೀಯರೆಂದು ಹೇಳಬಹುದು.

**ಜೋಷಯೇತೇ ನ—ಸೇವೇತೇ ಇವ। ಯಥಾ ಶೋಭನೇ ಸ್ತ್ರಿಯೌ ಚಾಮರಹಸ್ತೇ ರಾಜಾನಮುಭಯತಃ ಸೇವೇತೇ ಏವಂ ದ್ಯಾವಾಪೃಥಿವ್ಯೌ ಏನಮಗ್ನಿಮುಭಯತಃ ಸೇವೇತೇ।** ಶೋಭನಾಂಗಿಯರಾದ ಸ್ತ್ರೀಯರಿಬ್ಬರು ದೊರೆಯನ್ನು ಎರಡು ಕಡೆಯೂ ನಿಂತು ಸೇವಿಸುವಂತೆ ದ್ಯಾವಾಪೃಥಿವಿಗಳು ಅಗ್ನಿಯನ್ನು ಸೇವಿಸುತ್ತಾರೆಂದಭಿಪ್ರಾಯ.

**ವಾಶ್ರಾಃ—ವಾಶೃ ಶಬ್ದೇ।** ಶಬ್ದವನ್ನು ಮಾಡು ಎಂಬ ವಾಶೃಧಾತುವಿನಿಂದ ಹುಟ್ಟಿದೆ. ಆದರೆ ಸಾಧಾರಣವಾಗಿ **ವಾಶ್ರಾಃ** ಎಂಬ ಪದವನ್ನು ಪುತ್ರವಾತ್ಸಲ್ಯದಿಂದ ಶಬ್ದಮಾಡುವ ಗೋವುಗಳಿಗೆ ವಿಶೇಷಣವಾಗಿಯೇ ಹೆಚ್ಚು ಉಪಯೋಗಿಸಿದೆ. ಎಲ್ಲೆಲ್ಲಿ ವಾತ್ಸಲ್ಯ, ಪುತ್ರಪ್ರೇಮ ಎಂಬ ಅಭಿಪ್ರಾಯವನ್ನು ಸೂಚಿಸಬೇಕಾದರೂ ಈ ಉಪಮಾನವು ಸಾಧಾರಣವಾಗಿ ಬಂದೇ ಬರುತ್ತದೆ. ಉದಾಹರಣೆಗೆ.

**ವಾಶ್ರೇವ ವಿದ್ಯುನ್ಮಿಮಾತಿ ವತ್ಸಂ ನ ಮಾತಾ ಸಿಷಕ್ತಿ।**
(ಋ. ಸಂ. ೧-೩೮-೮).

**ಅರ್ವಾಚೀ ಸಾ ಮರುತೋ ಯಾ. ವ ಊತಿರೋ ಷು ವಾಶ್ರೇವ ಸುಮತಿರ್ಜಿಗಾತು ।**
(ಋ. ಸಂ. ೨-೩೪-೧೫).

**ಗಾವ ಇವ ಗ್ರಾಮಂ ಯೂಯುಧಿರಿವಾಶ್ವಾನ್ವಾಶ್ರೇವ ವತ್ಸಂ ಸುಮನಾ ದುಹಾನಾ ।**
(ಋ. ಸಂ. ೧೦-೧೪೯-೪).

ಇತ್ಯಾದಿ ಎಲ್ಲಾ ಸಂದರ್ಭಗಳಲ್ಲೂ ಸಹ **ವಾಶ್ರಾಃ** ಎಂಬ ಪದವನ್ನು **ಹಂಭಾರವಂ ಕುರ್ವತ್ಯಃ ಗಾವಃ** ಎಂದು ವಾತ್ಸಲ್ಯಪೂರ್ಣವಾದ ಗೋವುಗಳಿಗೆ ವಿಶೇಷಣವಾಗಿ ಉಪಯೋಗಿಸಿದೆ. ಇಲ್ಲಿಯೂ ಸಹ ಈರೀತಿ ಉಪಮಾನವನ್ನು ಕೊಟ್ಟಿರುವುದರಿಂದ ದ್ಯಾವಾಪೃಥಿವಿಗಳಿಗೆ ಅಗ್ನಿಯಲ್ಲಿರುವ ಪುತ್ರವಾತ್ಸಲ್ಯವನ್ನು ಹೇಳಿದೆ. ಉದಾಹರಣೆಗೆ—

**ಸ ರೋಚಯಜ್ಜನುಷಾ ರೋದಸೀ ಉಭೇ ಸ ಮಾತ್ರೋರಭವತ್ಪುತ್ರ ಈಡ್ಯಃ ।**
(ಋ ಸಂ. ೩-೨-೨).

**ಅಗ್ನೇ ದಿವಃಸೂನುರಸಿ ಪ್ರಚೇತಾಸ್ತನಾ ಪೃಥಿವ್ಯಾ ಉತ ವಿಶ್ವವೇದಾಃ ।**
(ಋ. ಸಂ. ೩-೨೫-೧).

ಇತ್ಯಾದಿ ಸಂದರ್ಭಗಳಲ್ಲಿ ಅಗ್ನಿಯು ದ್ಯಾವಾಪೃಥಿವಿಗಳ ಪೂಜ್ಯನೂ ವಿಶ್ವಾಸಪಾತ್ರನೂ ಆದ ಪುತ್ರನೆಂದು ಹೇಳಿರುವುದರಿಂದ ಇಲ್ಲಿ ಪುತ್ರವಾತ್ಸಲ್ಯವುಳ್ಳ ಗೋವುಗಳ ಅಭಿಮಾನಕ್ಕೆ ಹೋಲಿಸಿರುವುದು ಉಚಿತವಾಗಿದೆ.

ಅಥವಾ **ಉಭೇ** ಎನ್ನುವುದಕ್ಕೆ ಅಹೋರಾತ್ರಗಳೆಂದು ಅರ್ಥಮಾಡಿದರೂ ಸಹ.

**ದ್ವೇ ವಿರೂಪೇ ಚರತಃ ಸ್ವರ್ಥೇ ಅನ್ಯಾನ್ಯಾ ವತ್ಸಮುಪಧಾಪಯೇತೇ ।**
(ಋ. ಸಂ. ೧-೯೫-೧)

ಎಂಬ ಋಕ್ಸಂಹಿತಾವಾಕ್ಯದಿಂದಲೂ, **ತಯೋರೇತೌ ವತ್ಸೌ । ಅಗ್ನಿಶ್ಚಾದಿತ್ಯಶ್ಚ । ರಾತ್ರೇರ್ವತ್ಸಃ । ಶ್ವೇತ ಆದಿತ್ಯಃ । ಅಹ್ನೋಽಗ್ನಿಃ ।** ಎಂಬ ತೈತ್ತಿರೀಯ ಆರಣ್ಯಕದ (೧-೧೦) ವಾಕ್ಯಗಳಿಂದಲೂ ಸಹ ಅಗ್ನಿಯು ಅಹೋರಾತ್ರಗಳ ವತ್ಸನೆಂದು ಪ್ರಸಿದ್ಧವಾಗಿದೆ. ಅಥವಾ **ಉಭೇ** ಎನ್ನುವುದಕ್ಕೆ **ಅರಣೀ** ಎಂದಾದರೂ ಸಹ—

**ಉತ ಸ್ಮ ಯಂ ಶಿಶುಂ ಯಥಾ ನವಂ ಜನಿಷ್ಟಾರಣೀ ।**
(ಋ. ಸಂ. ೫-೯-೩).

**ಅತಿಥಿಂ ಮಾನುಷಾಣಾಂ ಸೂನುಂ ವನಸ್ಪತೀನಾಂ ।**
(ಋ. ಸಂ. ೮-೨೩-೨೫).

ಎಂಬ ವಾಕ್ಯಗಳಿಂದ ಅಗ್ನಿಯು ಅರಣಿಗಳಿಗೆ ಅಭಿಮಾನಕಾಲಿಯಾದ ಪುತ್ರನೆಂದು ಹೇಳಿದೆ. ಆದುದರಿಂದ **ಉಭೇ** ಎನ್ನುವ ಪದಕ್ಕೆ ದ್ಯಾವಾಪೃಥಿವಿಗಳೆಂದು ಅರ್ಥಮಾಡಿದರೂ, ಅಹೋರಾತ್ರಗಳೆಂಬ ಅರ್ಥವಾದರೂ ಅಥವಾ ಅರಣಿಗಳೆಂದಾದರೂ, ಈ ಉಪಮಾನವು ಸನ್ನಿವೇಶಕ್ಕೆ ಅತ್ಯುಚಿತವಾಗಿದೆ.

**ದಕ್ಷಪತಿಃ**—ಬಲಾಧಿಪತಿಃ । ಬಲಾನಾಂ ಮಧ್ಯೇ ಯದತಿಶಯಿತಂ ಬಲಂ ತಸ್ಯಾಧಿಪತಿರ್ಬಭೂವೇತ್ಯರ್ಥಃ । ಬಲಗಳ ನಡುವೆ ಯಾವುದು ಅತ್ಯಂತ ಅತಿಶಯವಾದ ಬಲವೋ ಅದಕ್ಕೆ ಅಧಿಪತಿಯಾಗಿ ಅತ್ಯಂತ ಪ್ರಭಾವಶಾಲಿಯಾದವನು ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ವಾಶ್ರಾಃ**—ವಾಶೃ ಶಬ್ದೇ ಧಾತು. **ಸ್ಫಾಯಿತಞ್ಚಿ**—(ಉ. ಸೂ. ೨-೧೭೦) ಎಂಬುದರಿಂದ ಇದಕ್ಕೆ ರಕ್ ಪ್ರತ್ಯಯ. ವಾಶ್ರ ಎಂದು ರೂಪವಾಗುತ್ತದೆ. ಸ್ತ್ರೀತ್ವದಲ್ಲಿ **ಅಜಾದ್ಯತಷ್ಟಾಪ್**—ಎಂಬುದರಿಂದ ಟಾಪ್ ಪ್ರತ್ಯಯ. ಪ್ರಥಮಾಬಹುವಚನಾಂತರೂಪ.

**ತಸ್ಥುಃ**—ಷ್ಠಾ ಗತಿನಿವೃತ್ತೌ ಧಾತು. **ಧಾತ್ವಾದೇಃ ಷಃ ಸಃ**—ಎಂಬುದರಿಂದ ಆದಿಗೆ ಸತ್ವ. ಲಿಟ್ ಪ್ರಥಮಪುರುಷಬಹುವಚನದಲ್ಲಿ **ಪರಸ್ಮೈಪದಾನಾಂ**—ಎಂಬುದರಿಂದ ಉಸಾದೇಶ. ಧಾತುವಿಗೆ ದ್ವಿತ್ವ. **ಶರ್ಪೂರ್ವಾಃಖಯಃ**—(ಪಾ. ಸೂ. ೭-೪-೬೧) ಎಂಬುದರಿಂದ ಅಭ್ಯಾಸದಲ್ಲಿ ತಕಾರಶೇಷ. **ಆತೋ ಲೋಪ ಇಟಿ ಚ**—(ಪಾ. ಸೂ. ೬-೪-೬೪) ಎಂಬುದರಿಂದ ಕಿತ್ವಾತಿದೇಶವನ್ನು ಹೊಂದಿದ ಉಸ್ ನಿಮಿತ್ತವಾಗಿ ಧಾತುವಿನ ಆಕಾರಕ್ಕೆ ಲೋಪ. ತಿಙಂತನಿಘಾತಸ್ವರ ಬರುತ್ತದೆ.

**ಏನೈಃ**—ಇಣ್ ಗತೌ ಧಾತು. **ಇಣ್‌ಶೀಙ್‌ಭ್ಯಾಂ ವನ್**—ಎಂಬುದರಿಂದ ಇದಕ್ಕೆ ಭಾವಾರ್ಥದಲ್ಲಿ ವನ್ ಪ್ರತ್ಯಯ. ತನ್ನಿಮಿತ್ತವಾಗಿ **ಸಾರ್ವಧಾತುಕಾರ್ಧ**—(ಉ. ಸೂ. ೭-೩-೮೪) ಎಂಬುದರಿಂದ ಧಾತುವಿನ ಇಕಿಗೆ ಗುಣ. ಏವ ಎಂದು ರೂಪವಾಗುತ್ತದೆ. **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾಬಹುವಚನಾಂತರೂಪ.

**ದಕ್ಷಪತಿಃ**—ದಕ್ಷಾಣಾಂ ಪತಿಃ ದಕ್ಷಪತಿಃ ಷಷ್ಠೀತತ್ಪುರುಷಸಮಾಸ. **ಪತ್ಯಾವೈಶ್ವರ್ಯೇ** (ಪಾ. ಸೂ. ೬-೨-೧೮) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಅಂಜಂತಿ**—ಅಞ್ಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು. ಧಾತು. ರುಧಾದಿ. ಲಟ್ ಪ್ರಥಮಪುರುಷ ಬಹುವಚನದಲ್ಲಿ **ಝೋಽಂತಃ**—ಎಂಬುದರಿಂದ ಅಂತಾದೇಶ. **ರುಧಾದಿಭ್ಯಃ ಶ್ನಮ್**—ಎಂಬುದರಿಂದ ಶ್ನಮ್ ವಿಕರಣ. ಅತಿಙಃ ಎಂದು ಪ್ರತಿಷೇಧಮಾಡಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತ ಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ.

**ದಕ್ಷಿಣತಃ**—ದಕ್ಷಿಣಸ್ಯಾತ್ ಎಂಬರ್ಥವಿವಕ್ಷಾಮಾಡಿದಾಗ **ದಕ್ಷಿಣೋತ್ತರಾಭ್ಯಾಮತಸುಚ್**—(ಪಾ. ಸೂ. ೫-೩-೨೮) ಎಂಬುದರಿಂದ ಅತಸುಚ್ ಪ್ರತ್ಯಯ. **ಯಸ್ಯೇತಿ ಚ**—ಎಂಬುದರಿಂದ ಅಕಾರಲೋಪ. **ಚಿತಃ**—(ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ॥ ೬ ॥

———— :o: ————

ಸಂಹಿತಾಪಾಠಃ

ಉದ್ಯಂಯಮೀತಿ ಸವಿತೇವ ಬಾಹೂ ಉಭೇ ಸಿಚೌ ಯತತೇ
ಭೀಮ ಋಂಜನ್ ।
ಉಚ್ಛುಕ್ರಮತ್ಕಮಜತೇ ಸಿಮಸ್ಮಾನ್ನವಾ ಮಾತೃಭ್ಯೋ ವಸನಾ
ಜಹಾತಿ ॥ ೭ ॥

॥ ಪದಪಾಠಃ ॥

ಉತ್ । ಯಂಯಮೀತಿ । ಸವಿತಾಽಇವ । ಬಾಹೂ ಇತಿ । ಉಭೇ ಇತಿ । ಸಿಚೌ ।
ಯತತೇ । ಭೀಮಃ । ಋಂಜನ್ ।
ಉತ್ । ಶುಕ್ರಂ । ಅತ್ಕಂ । ಅಜತೇ । ಸಿಮಸ್ಮಾತ್ । ನವಾ । ಮಾತೃಽಭ್ಯಃ ।
ವಸನಾ । ಜಹಾತಿ ॥ ೭ ॥

॥ ಸಾಯಣಭಾಷ್ಯಂ ॥

ಸವಿತೇವ ಸರ್ವಸ್ಯ ಪ್ರೇರಕ ಆದಿತ್ಯೋ ಯಥಾ ಬಾಹೂ ಬಾಹುಸ್ಥಾನೀಯಾನ್ರಶ್ಮೀನುದ್ಗಮಯತಿ ತಥಾಯಮೌಷಸೋಽಗ್ನಿಃ ಸ್ವಕೀಯಾನಿ ತೇಜಾಂಸ್ಯುದ್ಯಂಯಮೀತಿ । ಭೃಶಮುದ್ಯತಾನ್ಯೂರ್ಧ್ವಾಭಿಮುಖಾನಿ ಕರೋತಿ । ತದನಂತರಂ ಭೀಮಃ ಸರ್ವೇಷಾಂ ಭಯಂಕರೋಽಗ್ನಿರುಭೇ ಸಿಚಾವುಭೇ ದ್ಯಾವಾಪೃಥಿವ್ಯೌ ಋಂಜನ್ ಪ್ರಸಾಧಯನ್ ಸ್ವತೇಜಸಾಲಂಕುರ್ವನ್ಯತತೇ । ಸ್ವವ್ಯಾಪಾರೇ ಪ್ರಯತತೇ । ತದನಂತರಂ ಸಿಮಸ್ಮಾತ್ಸರ್ವಸ್ಮಾದ್ಘೃತಜಾತಾಚ್ಛುಕ್ರಂ ದೀಪ್ತಮತ್ಕಂ ಸಾರಭೂತಂ ರಸಮುದಜತೇ । ರಶ್ಮಿಭಿರೂರ್ಧ್ವಮಾದತ್ತೇ । ಅಪಿ ಚ ಮಾತೃಭ್ಯಃ ಸ್ವಮಾತೃಸ್ಥಾನೀಯೇಭ್ಯೋ ವೃಷ್ಟ್ಯುದಕೇಭ್ಯಃ ಸಕಾಶಾನ್ನವಾ ನವಾನಿ ಪ್ರತ್ಯಗ್ರಾಣಿ ವಸನಾ ಸರ್ವಸ್ಯ ಜಗತ ಆಚ್ಛಾದಕಾನಿ ತೇಜಾಂಸಿ ಜಹಾತಿ । ಉದ್ಗಮಯತಿ ॥ ಯಂಯಮೀತಿ । ಯಮ ಉಪರಮೇ । ಅಸ್ಮಾದ್ಯಙ್ಲುಕಿ ನುಗತೋಽನುನಾಸಿಕಾಂತಸ್ಯ । ಪಾ. ೭-೪-೮೫ । ಇತ್ಯಭ್ಯಾಸಸ್ಯ ನುಗಾಗಮಃ । ಏತಚ್ಚಾನುಸ್ವಾರೋಪಲಕ್ಷಣಾರ್ಥಂ । ಸಿಚೌ । ಷಿಚ ಕ್ಷರಣೇ । ಸಿಂಚತಃ ಫಲೇನ ಸಂಯೋಜಯತ ಇತಿ ಸಿಚೌ ದ್ಯಾವಾಪೃಥಿವ್ಯೌ । ಕ್ವಿಪ್ಚೇತಿ ಕ್ವಿಪ್ । ಯತತೇ । ಯತೀ ಪ್ರಯತ್ನೇ । ಅತ್ಕಂ । ಅತ ಸಾತತ್ಯಗಮನೇ । ಇಣ್ಭೀಕಾಪಾಶಲ್ಯತಿಮರ್ಚಿಭ್ಯಃ ಕನ್ । ಉ

**೩-೪೩ । ಇತಿ ಕನ್ । ನಿತ್ಸ್ವಾದಾದ್ಯುದಾತ್ತತ್ವಂ । ಸಿಮಸ್ಮಾತ್ । ಸಿಮಶಬ್ದಃ ಸರ್ವಶಬ್ದಪರ್ಯಾಯಃ । ನವಾ ವಸನಾ । ಉಭಯತ್ರ ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಜಹಾತಿ । ಓಹಾಕ್ ತ್ಯಾಗೇ । ಜೌಹೋತ್ಯಾದಿಕಃ ॥**

ಪ್ರತಿಪದಾರ್ಥ

**ಸವಿತಾ**—ಸೂರ್ಯನು । **ಬಾಹೂ ಇವ**—(ತನ್ನ) ಬಾಹುಗಳಂತಿರುವ ರಶ್ಮಿಗಳನ್ನು ಪ್ರಸಾರಮಾಡಿಸುವಂತೆ । **ಉದ್ಯಂಯಮೀತಿ**—(ಈ ಔಪಸೋಗ್ನಿಯು ತನ್ನ ತೇಜಸ್ಸನ್ನು) ಊರ್ಧ್ವಮುಖವಾಗಿ ಪ್ರಸಾರವಾಗುವಂತೆ ಮಾಡುತ್ತಾನೆ. । **ಭೀಮಃ**—ಭಯಂಕರನಾದ ಅಗ್ನಿಯು । **ಉಭೇ ಸಿಚೌ**—ದ್ಯಾವಾಪೃಥಿವಿಗಳೆರಡನ್ನೂ । **ಅಂಜನ್**—(ತನ್ನ ತೇಜಸ್ಸುಗಳಿಂದ) ಅಲಂಕರಿಸುತ್ತಾ । **ಯತತೇ**—(ಸ್ವಕರ್ತವ್ಯದಲ್ಲಿ) ನಿರತನಾಗುತ್ತಾನೆ. । (ಅನಂತರ) **ಸಿಮಸ್ಮಾತ್**—ಸಕಲಭೂತಗಳಿಂದಲೂ । **ಶುಕ್ರಂ**—ಶುಭ್ರವಾದುದೂ । **ಅತ್ಕಂ**—ಸಾರಭೂತವಾದುದೂ । ಆದ ರಸವನ್ನು । **ಉದಜತೇ**—(ತನ್ನ ಕಿರಣಗಳಿಂದ) ಮೇಲಕ್ಕೆ ಎಳೆದುಕೊಳ್ಳುತ್ತಾನೆ. (ಮತ್ತು) । **ಮಾತೃಭ್ಯಃ**—(ತನ್ನ) ಜನನಿಗಳಾದ ವೃಷ್ಟ್ಯುದಕಗಳಿಂದ । **ನವಾ**—ಹೊಸದಾದ । **ವಸನಾ**—(ಸಕಲ ಜಗತ್ತಿಗೂ) ಹೊದಿಕೆಯಂತೆ ವ್ಯಾಪಿಸುವ (ತೇಜಸ್ಸನ್ನು) । **ಜಹಾತಿ**—ಹೊರಡಿಸುತ್ತಾನೆ. ।

ಭಾವಾರ್ಥ

ಸೂರ್ಯನು ಬಾಹುಗಳಂತಿರುವ ತನ್ನ ಕಿರಣಗಳನ್ನು ಹರಡುವಂತೆ ಈ ಔಪಸೋಽಗ್ನಿಯೂ ಸಹ ತನ್ನ ತೇಜಸ್ಸನ್ನು ಊರ್ಧ್ವಮುಖವಾಗಿ ಹರಡುತ್ತಾನೆ. ಭಯಂಕರನಾದ ಅಗ್ನಿಯು ದ್ಯಾವಾಪೃಥಿವಿಗಳೆರಡನ್ನೂ ತನ್ನ ತೇಜಸ್ಸುಗಳಿಂದ ಅಲಂಕರಿಸುತ್ತಾ ಸ್ವಕರ್ತವ್ಯದಲ್ಲಿ ನಿರತನಾಗುತ್ತಾನೆ. ಅನಂತರ ಸಕಲ ಭೂತಗಳಿಂದಲೂ ಶುಭ್ರವಾದುದೂ, ಸಾರಭೂತವಾದುದೂ ಆದ ರಸವನ್ನು ತನ್ನ ಕಿರಣಗಳಿಂದ ಮೇಲಕ್ಕೆಳೆದುಕೊಂಡು ತನ್ನ ಜನನಿಗಳಾದ ವೃಷ್ಟ್ಯುದಕಗಳಿಂದ ಸಕಲ ಜಗತ್ತಿಗೂ ಹೊದಿಕೆಯಂತೆ ವ್ಯಾಪಿಸುವ ತನ್ನ ಹೊಸ ತೇಜಸ್ಸನ್ನು ಹೊರಡಿಸುತ್ತಾನೆ.

## English Translation

Like the sun, he stretches forth his arms, and the formidable Agni, decorating both heaven and earth (with brightness), labours (in his duties); he draws up from everything the essential (moisture), and clothes (the earth) with new vestments (derived) from his maternal (rains).

॥ ವಿಶೇಷವಿಷಯಗಳು ॥

ಇಲ್ಲಿ ಊರ್ಧ್ವಮುಖವಾಗಿ ಪ್ರಸರಿಸಿದ ಅಗ್ನಿಯ ತೇಜಸ್ಸನ್ನು ಸೂರ್ಯನ ರಶ್ಮಿಗಳ ಪ್ರಸಾರಕ್ಕೆ ಹೋಲಿಸಿದೆ. ಈ ತೇಜಃಪ್ರಸಾರದಲ್ಲಿ ಒಂದು ವಿಧವಾದ ಭೀಷಣರಮ್ಯತೆಯಿದೆ. ಈ ಗುಣಗಳನ್ನು ಪ್ರಕಾಶಪಡಿಸುತ್ತಾ ಅಗ್ನಿಯು ತನ್ನ ನಿತ್ಯಕರ್ತವ್ಯಗಳಲ್ಲಿ ತೊಡಗಿ ಲೋಕದ ಸಾರವನ್ನು ಒಂದು ಬಗೆಯಲ್ಲಿ ತಾನು ಹೀರಿ ಇನ್ನೊಂದು ಬಗೆಯಲ್ಲಿ ಆ ಸಾರವನ್ನು ಪುನಃ ಹರಡಿ ಸಕಲ ಜಗತ್ತಿಗೂ ಒಂದು ಹೊಸ ಕಾಂತಿಯನ್ನು ಕೊಡುತ್ತಾನೆ.

**ಸವಿತಾ—ಸರ್ವಸ್ಯ ಪ್ರೇರಕಃ ಆದಿತ್ಯಃ।** ಸಕಲಕ್ಕೂ ಪ್ರೇರಕನಾದ ಆದಿತ್ಯನೆಂದು ಸಾಯಣರು ಅರ್ಥ ಮಾಡಿ ಅಗ್ನಿಜ್ವಾಲೆಯನ್ನು ಸೂರ್ಯಕಿರಣಗಳಿಗೆ ಹೋಲಿಸುತ್ತಾರೆ. ಸೂರ್ಯನು ಯಾವ ರೀತಿ ತನ್ನ ಬಾಹುಗಳಂತಿರುವ ಕಿರಣಗಳನ್ನು ಊರ್ಧ್ವಮುಖವಾಗಿ ಹರಡಿಸುತ್ತಾನೆಯೋ ಅದರಂತೆ ಅಗ್ನಿಯೂ ಸಹ ತನ್ನ ಜ್ವಾಲೆಗಳನ್ನು,

**ಉದ್ಯಂಯಮೀತಿ—ಭೃಶಮುದ್ಯತಾನ್ಯೂರ್ಧ್ವಾಭಿಮುಖಾನಿ ಕರೋತಿ।** ಅಧಿಕವಾಗಿ ಮೇಲ್ಭಾಗಕ್ಕೆ ಪ್ರಸರಿಸುವಂತೆ ಮಾಡುತ್ತಾನೆ, ಎಂದು ಅಗ್ನಿಯನ್ನು ಆದಿತ್ಯನಿಗೆ ಹೋಲಿಸಿದೆಯೆಂದು ಹೇಳಿರುತ್ತಾರೆ. ಆದರೆ ಸ್ಕಂದಸ್ವಾಮಿಗಳು ಇದನ್ನು ಬೇರೆ ರೀತಿಯಲ್ಲಿ ವಿವರಿಸುತ್ತಾರೆ,

**ದೇವಪರಿವೇಷಣವೇಲಾಯಾಂ ಯದುದ್ಯಮನಂ ತದಿಹಾಭಿಪ್ರೇತಂ। ದೇವಾನ್ ಪರಿವೇಷ್ಟುಂ ಹವೀಂಷ್ಯಾದಾಯ ಪುನಃಪುನರುದ್ಯಚ್ಛತಿ। ಸವಿತೇವ। ಯಜಮಾನನಾಮ್ನೈತಚ್ಛಾಕಪೂಣಿನಾ ಪಠಿತಂ। ಯಜಮಾನ ಇವ। ದೇವಾನ್ ಪರಿವೇಷ್ಟುಂ ಹಸ್ತಾಭ್ಯಾಂ ಹವೀಂಷ್ಯಾದಾಯ ಯಜಮಾನವತ್ ಪುನಃಪುನರಗ್ನಿರುತ್ಕ್ಷಿಪತೀತ್ಯರ್ಥಃ।** ದೇವತೆಗಳಿಗೆ ಹವಿಸ್ಸನ್ನು ಹಂಚುವ ಕಾಲದಲ್ಲಿ ಅಗ್ನಿಯು ಪುನಃಪುನಃ ತನ್ನ ಊರ್ಧ್ವಮುಖವಾದ ಜ್ವಾಲೆಗಳನ್ನು ಮೇಲಕ್ಕೆತ್ತುವುದನ್ನು ಯಜಮಾನನು ಹವಿಸ್ಸನ್ನರ್ಪಿಸುವುದಕ್ಕೆ ಪದೇಪದೇ ಮೇಲಕ್ಕೆತ್ತುವ ತೋಳುಗಳಿಗೆ ಹೋಲಿಸಿದೆ. ಶಾಕಪೂಣಿಗಳು **ಸವಿತೃ**ಶಬ್ದವನ್ನು **ಯಜಮಾನನಾಮ**ಗಳಲ್ಲಿ ಪಠಿಸಿರುವುದರಿಂದ **ಸವಿತಾ** ಎಂದರೆ ಇಲ್ಲಿ ಹವಿಸ್ಸನ್ನರ್ಪಿಸುವ ಯಜಮಾನನೆಂದರ್ಥ ಎಂದು ಮುಖ್ಯವಾದ ಅಭಿಪ್ರಾಯವನ್ನು ತಿಳಿಸಿ ಅಥವಾ **ಸವಿತಾತ್ರ ಆದಿತ್ಯ ಏವ ವಾಭಿಪ್ರೇತಃ।** ಇಲ್ಲಿ ಸವಿತೃಶಬ್ದಕ್ಕೆ ಆದಿತ್ಯನೆಂದಾದರೂ ಅರ್ಥವಾಗಬಹುದು ಎಂದಿರುತ್ತಾರೆ.

ಉಭೇ ಸಿಚೌ ಉಭೇ ದ್ಯಾವಾಪೃಥಿವ್ಯೌ। ದ್ಯಾವಾ ಪೃಥಿವಿಗಳೆರಡನ್ನೂ, **ಅಂಜನ್—ಸ್ವತೇಜಸಾ ಅಲಂಕುರ್ವನ್** ತನ್ನ ತೇಜಸ್ಸಿನಿಂದ ಅಲಂಕರಿಸುತ್ತಾ ಎಂಬ ಅನ್ವಯವನ್ನು ಸಾಯಣರೂ ;

**ಉಭೇ ಸಿಚೌ—ಸಿಚ ಶಬ್ದಃ ಅತ್ರ ವಸ್ತ್ರಾಂಚಲವಚನಃ। ಯತತಿರಪಿ ಸನ್ನಹನಾರ್ಥಃ ಉಭೇ ಅಪಿ ವಸ್ತ್ರಾಂಚಲೇ ಗಾಢಂ ಸನ್ನಹತಿ।** ಸಿಚ್ ಶಬ್ದಕ್ಕೆ ಇಲ್ಲಿ ವಸ್ತ್ರದ ಸೆರಗೆಂದರ್ಥ. **ಯತತೇ** ಎಂದರೆ ವಸ್ತ್ರದ ಸೆರಗುಗಳನ್ನು ಸರಿಯಾಗಿ ಕಟ್ಟಿಕೊಂಡು ಹವಿಸ್ಸಿನ ಸ್ವೀಕಾರಕ್ಕೆ ಸಿದ್ಧಮಾಡಿಕೊಳ್ಳುವುದೆಂದರ್ಥ ಎಂದು ಸ್ಕಂದಸ್ವಾಮಿಗಳೂ ಅನ್ವಯವನ್ನು ಮಾಡುತ್ತಾರೆ. ಇದೂ ಸಮಂಜಸವಾಗಿಯೇ ಕಾಣುತ್ತದೆ, ಏತಕ್ಕೆಂದರೆ ಋಕ್ಸಂಹಿತೆಯಲ್ಲಿ ಸಿಚಶಬ್ದವನ್ನು ನಾಮಪದವನ್ನಾಗಿ ಉಪಯೋಗಿಸಿರುವುದು ಅಪರೂಪ. ಉಪಯೋಗಿಸಿರುವ ಒಂದೆರಡು ಕಡೆಗಳಲ್ಲಿಯೂ ವಸ್ತ್ರದ ಸೆರೆಗೆಂದೇ ಅರ್ಥವಾಗುತ್ತದೆ.

ಪಿತುರ್ನ ಪುತ್ರಃ ಸಿಚಮಾ ರಭೇ ತ ಇಂದ್ರ ಸ್ವಾದಿಷ್ಠಯಾ ಗಿರಾ ಶಚೀವಃ।
( ಋ. ಸಂ. ೩-೫೩-೨ )

**ಮಾತಾ ಪುತ್ರಂ ಯಥಾ ಸಿಚಾಭ್ಯೇನಂ ಭೂಮ ಊರ್ಣುಹಿ।**
( ಋ. ಸಂ. ೧೦-೧೮-೧೧ )

ಈ ಸ್ಥಳಗಳಲ್ಲಿ ಉಪಯೋಗಿಸಿರುವ ಸಿಚ ಶಬ್ದಕ್ಕೆ ಸಾಯಣರೂ ಸಹ ವಸ್ತ್ರಪ್ರಾಂತ, ವಸ್ತ್ರಾಂತ ಎಂದೇ ಅರ್ಥಮಾಡಿರುವರು. ಆದುದರಿಂದ ಇಲ್ಲಿ ಸ್ಕಂದಸ್ವಾಮಿಗಳ ವಿವರಣೆಯೂ ಹೊಂದಿಕೊಳ್ಳುವುದು [illegible]. ಸಹ, ಸಾಯಣರ

**ಉಭೇ ಸಿಚೌ ಅಂಜನ್ ಯತತೇ** ಎಂದು ಅನ್ವಯವನ್ನು ಮಾಡಿದರೆ ಸ್ಕಂದಸ್ವಾಮಿಗಳು **ಉಭೌ ಸಿಚೌ ಯತತೇ** ಎಂಬುದನ್ನೇ ಬೇರೆ ಮಾಡಿ, ಅನಂತರ **ಭೀಮಃ ಅಂಜನ್**—ಎಂಬುದನ್ನು ಬಿಡಿಸಿ **ಆತ್ಮಾನಂ ಯಜ್ಞಂ ವಾ ಪ್ರಸಾಧಯನ್** । ತನ್ನನ್ನು ಅಥವಾ ಯಜ್ಞವನ್ನು ಅಲಂಕರಿಸುತ್ತಾ **ಉತ್ ಶುಕ್ರಮತ್ಕಂ ಅಜತೇ** ಎಂಬುದರೊಂದಿಗೆ ಸೇರಿಸಿ ವಿವರಿಸಿದ್ದಾರೆ.

**ಅತ್ಕಂ—ಸಾರಭೂತಂ ರಸಂ** । ಸಾರಭೂತವಾದ ರಸವನ್ನು **ಉದಜತೇ** । ಮೇಲಕ್ಕೆ ಳೆದುಕೊಳ್ಳುತ್ತಾನೆ, ಎಂದು **ಅತ್ಕ** ಶಬ್ದಕ್ಕೆ ಇಲ್ಲಿ ಒಂದು ಜಾಗದಲ್ಲಿ ಮಾತ್ರ ರಸವೆಂದು ಸಾಯಣರು ಅರ್ಥಮಾಡಿರುವರು. ಉಳಿದೆಡೆಗಳಲ್ಲೆಲ್ಲಾ **ರೂಪ**ನಾಮಗಳಲ್ಲಿ ಈ ಪದವು ಸೇರಿರುವುದೆಂದು ಸ್ಪಷ್ಟವಾಗಿ ಹೇಳಿ ರೂಪವೆಂದು ಅರ್ಥಮಾಡಿರುತ್ತಾರೆ. ಕೆಲವು ಸ್ಥಳಗಳಲ್ಲಿ ಮಾತ್ರ ಆಚ್ಛಾದಕವಾದ ಕವಚವೆಂದಾಗಿದೆ. ಆಯುಧವೆಂದೂ ಒಂದೆರಡು ಕಡೆಗಳಲ್ಲಿ ಉಪಯೋಗಿಸಿದೆ. ಒಬ್ಬ ರಾಕ್ಷಸನ ಹೆಸರಾಗುವುದು

ಸ್ಕಂದಸ್ವಾಮಿಗಳು **ಅತ್ಕಶಬ್ದೋಽತ್ರ ರೂಪವಚನಃ ಅಂಜತಿರಪಿ ಕ್ಷೇಪಣಾರ್ಥಃ । ಶುಕ್ರಮಾತ್ಮೀಯಜ್ವಾಲಾಖ್ಯಂ ರೂಪಮುತ್ ಕ್ಷಿಪತಿ । ಊರ್ಧ್ವಂ ಜ್ವಲತೀತ್ಯರ್ಥಃ** । ಅತ್ಕಶಬ್ದವು ಇಲ್ಲಿ ರೂಪವೆಂಬರ್ಥವನ್ನು ಕೊಡುತ್ತದೆ. **ಉದಜತೇ** ಎನ್ನುವುದಕ್ಕೆ ಮೇಲಕ್ಕೆ ಎಸೆಯುತ್ತಾನೆ ಎಂದರೆ ಊರ್ಧ್ವಮುಖವಾಗಿ ಪ್ರಸರಿಸಿ ಹರಡುತ್ತಾನೆ; ಊರ್ಧ್ವಮುಖವಾಗಿ ಜ್ವಾಲೆಯನ್ನು ಹರಡಿ ಉರಿಯುತ್ತಾನೆ ಎಂದು ವಿವರಿಸಿ ಋಕ್ಸಂಹಿತೆಯಿಂದ–

**ಸಚಾ ಯದಾಸು ಜಹತೀಷ್ವತ್ಕಮಮಾನುಷೀಷು ಮಾನುಷೋ ನಿಷೇವೇ ।**

( ಋ. ಸಂ. ೧೦-೯೫-೮ )

ಎಂಬ ವಾಕ್ಯವನ್ನು ಉದಹರಿಸಿದ್ದಾರೆ. ಈ ವಾಕ್ಯದಲ್ಲಿ ಬರುವ ಅತ್ಕಶಬ್ದಕ್ಕೆ ಸುಂದರವಾದ ರೂಪವೆಂದರ್ಥವು.

**ಸ್ತರೀರ್ನಾತ್ಕಂ ವ್ಯುತಂ ವಸಾನಾ ಸೂರ್ಯಸ್ಯ ಶ್ರಿಯಾ ಸುದೃಶೀ ಹಿರಣ್ಯೈಃ ।**

( ಋ. ಸಂ. ೧-೧೨೨.೨ )

**ವಸಾನೋ ಅತ್ಕಂ ಸುರಭಿಂ ದೃಶೇ ಕಂ ಸ್ವ೧ ರ್ಣ ನೃತವಿಷಿರೋ ಬಭೂಥ ।**

( ಋ. ಸಂ. ೬-೨೯-೩ )

ಇತ್ಯಾದಿ ಋಕ್ಕುಗಳಲ್ಲಿ ಉಪಯೋಗಿಸಿರುವ **ಅತ್ಕ** ಶಬ್ದಕ್ಕೂ **ರೂಪ**ವೆಂದೇ ಸಾಯಣರೂ ವ್ಯಾಖ್ಯಾನವನ್ನು ಮಾಡಿದ್ದಾರೆ. ಆದರೆ ಇಲ್ಲಿ ಒಂದುಕಡೆ ಮಾತ್ರ ರಸವೆಂದು ಅರ್ಥವನ್ನು ಹೇಳಿದ್ದಾರೆ. ಈ ಸಂದರ್ಭದಲ್ಲಿ ಸ್ಕಂದಸ್ವಾಮಿಗಳ ಅರ್ಥವೇ ಸಮಂಜಸವಾಗಿ ಕಾಣುತ್ತದೆ. ಋ. ಸಂ. ೫-೭೪-೫ ; ೯-೬೯-೪ ಇತ್ಯಾದಿ ಸ್ಥಳಗಳಲ್ಲಿ ಕವಚವೆಂದೂ, ೬-೩೩-೩. ರಲ್ಲಿ ಆಯುಧವೆಂದೂ ; ೧೦-೪೯-೩. ರಲ್ಲಿ ರಾಕ್ಷಸವಿಶೇಷವೆಂದೂ ಅರ್ಥವಾಗುತ್ತದೆ.

**ಮಾತೃಭ್ಯಃ—ಸ್ವಮಾತೃಸ್ಥಾನೀಯೇಭ್ಯೋ ವೃಷ್ಟ್ಯುದಕೇಭ್ಯಃ ಸಕಾಶಾತ್** । ತನ್ನ ಮಾತೃಪ್ರಾಯವಾದ ವೃಷ್ಟ್ಯುದಕಗಳಿಂದ ಎಂದು ಸಾಯಣರೂ ; **ಮಾತರೋಽಪಿ ದಿಶಃ ಅಗ್ನೇರ್ಜನಕತ್ವಾತ್** ಅಗ್ನಿಯನ್ನು ಉತ್ಪನ್ನವಾಗುವಂತೆ ಮಾಡಿದುದರಿಂದ ಇಲ್ಲಿ **ಮಾತೃ** ಶಬ್ದಕ್ಕೆ ದಿಕ್ಕುಗಳೆಂದೂ, **ಮಾತೃಭ್ಯಃ** ಎನ್ನುವುದಕ್ಕೆ **ದಿಗ್ಭ್ಯಃ** ದಿಕ್ಕುಗಳಿಂದ ಎಂದೂ ಸ್ಕಂದಸ್ವಾಮಿಗಳೂ ವಿವರಿಸುತ್ತಾರೆ. ಹೀಗೆ ಮಾಡಿದರೆ ವಾಕ್ಯದ ಒಟ್ಟು ಅಭಿಪ್ರಾಯವೇ ವ್ಯತ್ಯಾಸವಾಗುತ್ತದೆ. ವೃಷ್ಟ್ಯುದಕಗಳಿಂದ ಎಂದರ್ಥಮಾಡಿದರೆ ಆಗ **ನವಾ ವಸನಾ ಜಹಾತಿ** । ತನ್ನ ಹೊಸದಾ

ದುದೂ, ಜಗತ್ತನ್ನೆಲ್ಲಾ ಆವರಿಸುವುದೂ ಆದ ತೇಜಸ್ಸನ್ನು ಬಿಡುತ್ತಾನೆಂದಾಗುತ್ತದೆ. ದಿಕ್ಕುಗಳಿಂದ ಎಂದಾದರೆ, ಆಗ **ಅಚಿರೋಕ್ತ್ಪನ್ನಾನಿ ತಮಾಂಸಿ ದಿಗ್ಭ್ಯಃ ತ್ವಾಷ್ಟ್ರಃ ಅಗ್ನಿರಜಹಾತ್** । ಹೊಸದಾಗಿ ಆವರಿಸಿದ ಕತ್ತಲೆಯನ್ನು ಅಗ್ನಿಯು ದಶದಿಕ್ಕುಗಳಿಂದಲೂ ಓಡಿಸಿದನು, ನಾಶಮಾಡಿದನು ಎಂದಭಿಪ್ರಾಯವಾಗುತ್ತದೆ.

ವ್ಯಾಕರಣಪ್ರಕ್ರಿಯಾ

**ಯಂಯಮೀತಿ**— ಯಮ ಉಪರಮೇ ಧಾತು. ಇದಕ್ಕೆ ಅತಿಶಯಾರ್ಥ ತೋರುವಾಗ **ಧಾತೋರೇಕಾಚಃ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್. **ಯಙೋಽಚಿ ಚ**—(ಪಾ. ಸೂ. ೨-೪-೭೪) ಸೂತ್ರದಿಂದ ಅನೈಮಿತ್ತವಾಗಿ ಲುಕ್. **ಸನ್ಯಙೋಃ**—ಎಂಬುದರಿಂದ ಏಕಾಚಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್‌ಶೇಷ ಬಂದಾಗ ಧಾತುವು ಅನುನಾಸಿಕಾಂತವಾದುದರಿಂದ **ನುಗತೋಽನುನಾಸಿಕಾಂತಸ್ಯ**—(ಪಾ. ಸೂ. ೭-೪-೮೫) ಎಂಬುದರಿಂದ ಅಭ್ಯಾಸದ ಅಕಾರಕ್ಕೆ ನುಕಾಗಮ. ನುಕ್ ಎಂಬುದು ಅನುಸ್ವಾರಕ್ಕೆ ಉಪಲಕ್ಷಣವೆಂದು ಅಲ್ಲಿ ವ್ಯಾಖ್ಯಾತವಾಗಿದೆ. ಇಲ್ಲವಾದರೆ ಅನುಸ್ವಾರಕ್ಕೆ ನಿಮಿತ್ತವಿಲ್ಲದಿರುವುದರಿಂದ ನಕಾರಶ್ರವಣವಾಗಬೇಕಾಗುತ್ತದೆ. **ಸನಾದ್ಯಂತಾ ಧಾತವಃ**—ಎಂಬ ಸೂತ್ರದಿಂದ ಯಂ ಯಮ್ ಎಂಬುದು ಧಾತುಸಂಜ್ಞೆಯನ್ನು ಹೊಂದುತ್ತದೆ. ಇದಕ್ಕೆ ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಚರ್ಕರೀತಂ ಚ**—ಎಂದು ಅದಾದಿಯಲ್ಲಿ ಪಾಠಮಾಡಿರುವುದರಿಂದ ಶಪಿಗೆ ಲುಕ್. **ಯಙೋ ವಾ**—(ಪಾ. ಸೂ. ೭-೩-೯೪) ಎಂಬುದರಿಂದ ಪಿತ್ ಸಾರ್ವಧಾತುಕಕ್ಕೆ (ತಿ) ಈಡಾಗಮ. ಯಂಯಮೀತಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸವಿತಾ**—ಪ್ರಸವಾರ್ಥಕ ಷು ಧಾತುವಿಗೆ ತೃಚ್ ಪ್ರತ್ಯಯ. **ಆರ್ಧಧಾತುಕಸ್ಯೇಡ್ವಲಾದೇಃ**—ಎಂಬುದರಿಂದ ಇಡಾಗಮ. ಪ್ರತ್ಯಯನಿಮಿತ್ತವಾಗಿ ಧಾತುವಿಗೆ ಗುಣ. ಅವಾದೇಶ, **ಚಿತ್ತಃ**— ಎಂಬುದರಿಂದ ಅಂತೋದಾತ್ತವಾಗುತ್ತದೆ.

**ಸಿಚೌ**—ಷಿಚಿರ್ ಕ್ಷರಣೇ. ಧಾತು. ಸಿಂಚತಃ ಫಲೇನ ಸಂಯೋಜಯತಃ ಇತಿ ಸಿಚೌ ದ್ಯಾವಾಪೃಥಿವ್ಯೌ. (ಫಲಾನುಭವಕ್ಕೆ ಸ್ಥಾನಗಳು) **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಇದಕ್ಕೆ ಕ್ವಿಪ್‌ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಕ್ವಿಪ್ ಸರ್ವಲೋಪವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ದ್ವಿತೀಯಾಏಕವಚನಾಂತರೂಪ.

**ಯತತೇ**—ಯತೀ ಪ್ರಯತ್ನೇ. ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಟಿತ ಆತ್ಮನೇಪದಾನಾಂ**—ಎಂಬುದರಿಂದ ಏತ್ವ. ಶಪ್ ವಿಕರಣ. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ**—ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಭೀಮಃ**—ಬಿಭೇತಿ ಅಸ್ಮಾತ್ ಇತಿ ಭೀಮಃ. ಞಿಭೀ ಭಯೇ ಧಾತು. **ಭೀಮಾದಯೋಽಪಾದಾನೇ** (ಪಾ. ಸೂ. ೩-೪-೭೪) ಎಂಬುದರಿಂದ ಮಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅತ್ಕಮ್**—ಅತ ಸಾತತ್ಯಗಮನೇ. ಧಾತು. ಭ್ವಾದಿ. **ಇಣ್ಭೀಕಾಪಾಶಲ್ಯತಿಮರ್ಚಿಭ್ಯಃ ಕನ್**—(ಉ. ಸೂ. ೩-೩೩) ಎಂಬುದರಿಂದ ಕನ್ ಪ್ರತ್ಯಯ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಜತೇ**—ಅಜ ಗತಿಕ್ಷೇಪಣಯೋಃ ಧಾತು. **ವ್ಯತ್ಯಯೋ ಬಹುಲಮ್**—ಎಂಬುದರಿಂದ ಲಟಿನಲ್ಲಿ ಆತ್ಮನೇಪದಪ್ರತ್ಯಯ ಬರುತ್ತದೆ. ಪ್ರಥಮಪುರುಷ ಏಕವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ.

**ಸಿಮಸ್ಮಾತ್**—ಸಿಮ ಎಂಬ ಶಬ್ದವು ಸರ್ವಶಬ್ದ ಪರ್ಯಾಯದಲ್ಲಿದೆ. ಆದುದರಿಂದ **ಸರ್ವಾದೀನಿ ಸರ್ವ-ನಾಮಾನಿ**—(ಪಾ. ಸೂ. ೧-೧-೨೭) ಎಂಬುದರಿಂದ ಸರ್ವನಾಮಸಂಜ್ಞೆ ಬರುತ್ತದೆ. ಇದಕ್ಕೆ ಪಂಚಮೀ ಏಕವಚನ ಪರವಾದಾಗ ಅದಕ್ಕೆ **ಙಸಿಙ್ಯೋಃ ಸ್ಮಾತ್ ಸ್ಮಿನೌ**—(ಪಾ. ಸೂ. ೭-೧-೧೫) ಎಂಬುದರಿಂದ ಸ್ಮಾತ್ ಎಂಬ ಆದೇಶ. ಅನೇಕಾಲಾದುದರಿಂದ ಸರ್ವಾದೇಶವಾಗಿ ಬರುತ್ತದೆ.

**ನವಾ**—ನಪುಂಸಕದಲ್ಲಿ ಶಿ ಆದೇಶ ಬಂದು ಕಾರ್ಯವಾದಾಗ **ಶೇಶ್ಛಂದಸಿ ಬಹುಲಮ್**—(ಪಾ. ಸೂ ೬-೧-೭೦) ಎಂಬುದರಿಂದ ಶಿಗೆ ಲೋಪ ಬರುತ್ತದೆ. ವಸನಾ ಎಂಬಲ್ಲಿಯೂ ಹೀಗೆಯೇ ಶಿಗೆ ಲೋಪ.

**ಜಹಾತಿ**—ಓಹಾಕ್ ತ್ಯಾಗೇ ಧಾತು. ಜುಹೋತ್ಯಾದಿ. ಇದಕ್ಕೆ ಲಟ್ ಪ್ರಥಮಪುರುಷ ಏಕವಚನ ದಲ್ಲಿ ತಿಪ್ ಪ್ರತ್ಯಯ. **ಜುಹೋತ್ಯಾದಿಭ್ಯಃಶ್ಲುಃ**—ಎಂಬುದರಿಂದ ಶ್ಲುವಿಕರಣ. **ಶ್ಲೌ**—ಸೂತ್ರದಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹ್ರಸ್ವ. ಚುತ್ವದಿಂದ ಜಕಾರಾದೇಶ. ಜಹಾತಿ ಎಂದು ರೂಪವಾಗುತ್ತದೆ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೭ ॥



ಸಂಹಿತಾಪಾಠಃ

ತ್ರ್ಯೇಷಂ ರೂಪಂ ಕೃಣುತ ಉತ್ತರಂ ಯತ್ಸಂಪೃಂಚಾನಃ ಸದನೇ
ಗೋಭಿರದ್ಭಿಃ ।
ಕವಿರ್ಬುಧ್ನಂ ಪರಿ ಮರ್ಮೃಜ್ಯತೇ ಧೀಃ ಸಾ ದೇವತಾತಾ ಸಮಿ-
ತಿರ್ಬಭೂವ ॥ ೮ ॥

ಪದಪಾಠಃ

ತ್ವೇಷಂ । ರೂಪಂ । ಕೃಣುತೇ । ಉತ್ಽತರಂ । ಯತ್ । ಸಂಽಪೃಂಚಾನಃ ।
ಸದನೇ । ಗೋಭಿಃ । ಅತ್ಽಭಿಃ ।
ಕವಿಃ । ಬುಧ್ನಂ । ಪರಿ । ಮರ್ಮೃಜ್ಯತೇ । ಧೀಃ । ಸಾ । ದೇವಽತಾತಾ । ಸಂಽ-
ಇತಿಃ । ಬಭೂವ ॥ ೮ ॥

॥ ಸಾಯಣಭಾಷ್ಯಂ ॥

ಸದನೇಽಂತರಿಕ್ಷೇ ಗೋಭಿರ್ಗಂತ್ರೀಭಿರದ್ಭಿರ್ಮೇಘಸ್ಥಾಭಿಃ ಸಹ ಸಂಪೃಂಚಾನೋ ವೈದ್ಯುತರೂಪೇಣ ಸಂಯುಕ್ತಃ ಸನ್ ತ್ವೇಷಂ ದೀಪ್ತಂ ಸರ್ವೈರ್ದ್ರಷ್ಟುಮಶಕ್ಯಮುತ್ತರಮುತ್ಕೃಷ್ಟತರಂ ರೂಪಂ ವೈದ್ಯುತಂ ಪ್ರಕಾಶಂ ಯದ್ಯದಾ ಕೃಣುತೇ ಕರೋತಿ । ತದಾನೀಂ ಕವಿಃ ಕ್ರಾಂತದರ್ಶೀ ಧೀಃ ಸರ್ವೇಷಾಂ ಧಾರಕಃ ಸೋಽಗ್ನಿರ್ಬುಧ್ನಂ ಸರ್ವಸ್ಯೋದಕಸ್ಯ ಮೂಲಭೂತಮಂತರಿಕ್ಷಂ ಪರಿ ಮರ್ಮೃಜ್ಯತೇ । ಪರಿತೋ ಮಾರ್ಷ್ಟಿ ಸ್ವತೇಜಸಾಚ್ಛಾದಯತಿ । ತಸ್ಯಾಗ್ನೇಃ ಸಾ ದೇವತಾತಾ ದೇವೇನ ದೇವನಶೀಲೇನಾ-ಗ್ನಿನಾ ತತಾ ವಿಸ್ತಾರಿತಾ ದೀಪ್ತಿರಸ್ಮಾಭಿಃ ಸ್ತುತಾ ಸತೀ ಸಮಿತಿರ್ಬಭೂವ । ತೇಜಸಾಂ ಸಂಹತಿರ್ಭವತಿ ॥ ಸಂಪೃಂಚಾನಃ । ಪೃಚೀ ಸಂಪರ್ಕೇ । ರೌಧಾದಿಕಃ । ಅಸ್ಮಾಲ್ಲಟಃ ಶಾನಚ್ । ಶ್ನಸೋರಲ್ಲೋಪ ಇತ್ಯ-ಕಾರಲೋಪಃ । ಸೀದಂತ್ಯಸ್ಮಿನ್ ಗಂಧರ್ವಾದಯ ಇತಿ ಸದನಮಂತರಿಕ್ಷಂ । ಅಧಿಕರಣೇ ಲ್ಯುಟ್ । ಮರ್ಮೃಜ್ಯತೇ । ಮೃಜೂಷ್ ಶುದ್ಧೌ । ಅಸ್ಮಾದ್ಯಙಿ ಮರ್ಮೃಜ್ಯತೇ ಮರ್ಮೃಜ್ಯಮಾನಾಸ ಇತಿ ಚೋಪ-ಸಂಖ್ಯಾನಂ । ಪಾ. ೭-೪-೯೧-೧ । ಇತಿ ನಿಪಾತನಾದಭ್ಯಾಸಸ್ಯ ರುಗಾಗಮಃ । ದೇವತಾತಾ । ದೇವೇನ ತತಾ ದೇವತಾತಾ । ತನೋತೇಃ ಕರ್ಮಣಿ ನಿಷ್ಠಾ । ಅನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ವ್ಯತ್ಯಯೇನಾತ್ವಂ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ ॥

ಪ್ರತಿಪದಾರ್ಥ

ಸದನೇ—ಅಂತರಿಕ್ಷದಲ್ಲಿ । ಗೋಭಿಃ—ಸಂಚರಿಸತಕ್ಕ । ಅದ್ಭಿಃ—(ಮೇಘಸ್ಥವಾದ) ನೀರುಗಳೊಡನೆ । ಸಂಪೃಂಚಾನಃ—(ಮಿಂಚಿನರೂಪದಲ್ಲಿ) ಸೇರಿಕೊಂಡು । ತ್ವೇಷಂ—ಪ್ರಕಾಶಮಾನವಾದುದೂ । ಉತ್ತರಂ—ಉತ್ಕೃಷ್ಟವಾದುದೂ ಆದ । ರೂಪಂ—(ಮಿಂಚಿನ) ತೇಜೋರೂಪವನ್ನು । ಯತ್—ಯಾವಾಗ । ಕೃಣುತೇ—ಉಂಟುಮಾಡುತ್ತಾನೆಯೋ (ಆಗ) । ಕವಿಃ—ಪ್ರಾಜ್ಞನೂ । ಧೀಃ—(ಸಕಲ ಜಗತ್ತನ್ನೂ) ಧಾರಣೆಮಾಡುವವನೂ ಆದ ಅಗ್ನಿಯು । ಬುಧ್ನಂ—ನೀರಿಗೆ ಮೂಲವಾದ ಅಂತರಿಕ್ಷವನ್ನು । ಪರಿ ಮರ್ಮೃಜ್ಯತೇ—ಸುತ್ತಲೂ (ತನ್ನ ತೇಜಸ್ಸಿನಿಂದ) ಶೋಧಿಸುತ್ತಾನೆ. । ಸಾ ದೇವತಾತಾ—ಅಗ್ನಿದೇವನಿಂದ ವಿಸ್ತೃತವಾದ ಆ ದೀಪ್ತಿಯು । ಸಮಿತಿರ್ಬಭೂವ (ನಮ್ಮಿಂದ ಸ್ತುತವಾದನಂತರ) ಸಂಘಾತರೂಪವುಳ್ಳದ್ದಾಯಿತು. (ಒಟ್ಟಿಗೆ ಸೇರಿಕೊಂಡಿತು)

॥ ಭಾವಾರ್ಥ ॥

ಅಂತರಿಕ್ಷದಲ್ಲಿ ಸಂಚರಿಸತಕ್ಕ ಮೇಘಸ್ಥವಾದ ನೀರುಗಳೊಡನೆ ಮಿಂಚಿನರೂಪದಲ್ಲಿ ಸೇರಿಕೊಂಡು ಪ್ರಕಾಶಮಾನವಾದುದೂ, ಉತ್ಕೃಷ್ಟವಾದುದೂ ಆದ ತನ್ನ ತೇಜಸ್ಸನ್ನು ಸೃಷ್ಟಿಸಿವಾಗ ಪ್ರಾಜ್ಞನೂ, ಸಕಲ ಜಗತ್ತನ್ನೂ ಧಾರಣಮಾಡುವವನೂ ಆದ ಅಗ್ನಿಯು ನೀರಿಗೆ ಮೂಲವಾದ ಅಂತರಿಕ್ಷವನ್ನೆಲ್ಲಾ ತನ್ನ ತೇಜಸ್ಸಿನಿಂದ ತುಂಬುತ್ತಾನೆ. ಅಗ್ನಿದೇವನಿಂದ ವಿಸ್ತಾರವಾಗಿ ಹರಡಲ್ಪಟ್ಟ ಆ ದೀಪ್ತಿಯು ನಾವು ಸ್ತೋತ್ರಮಾಡಿದಮೇಲೆ ಸಂಘಾತರೂಪವುಳ್ಳದ್ದಾಗಿ ಯಜ್ಞಾರ್ಹವಾಯಿತು.

English Translation

Associated in the firmament with the moving waters, he assumes an excellent and lustrous form, and the wise sustainer (of all things) sweeps over the source (of the rains with his radiance), whence a concentration of light is spread abroad by the sportive deity.

ವಿಶೇಷವಿಷಯಗಳು

**ಅತ್ರೇದಮುಕ್ತಂ ಭವತಿ । ಯದಾ ಮೇಘೋದಕರೂಪಾಭಿರ್ಗೋಭಿರ್ಯುಕ್ತಃ ಸನ್ನಗ್ನಿರ್ವೈದ್ಯುತಃ ಸ್ವಕೀಯಮುತ್ಕೃಷ್ಟತರಂ ತೇಜಸ್ತೇಜಃಪುಂಜಪೂರ್ಣೇಂತರಿಕ್ಷೇ ಪ್ರಾದುರ್ಭಾವಯತಿ ತದಾ ತತ್ಸರ್ವಮಂತರಿಕ್ಷಂ ತೇನ ತೇಜಸಾ ಪ್ರಮೃಷ್ಟಂ ಭವತಿ ಯಚ್ಚ ತತ್ಸ್ವರೂಪಪ್ರಾದುರ್ಭವನಂ ತದೇವ ದೇವಾಂತರೈಃ ಸಹಾಗ್ನೇರ್ಗಮನಂ ಭವತೀತಿ ॥** ಎಂದರೆ ಮೇಘಗಳ ಮಧ್ಯದಲ್ಲಿ ಅಗ್ನಿಯು ವಿದ್ಯುದ್ರೂಪದಿಂದ ತನ್ನ ಪೂರ್ಣ ತೇಜಸ್ಸಿನೊಡನೆ ಪ್ರಕಾಶಮಾನವಾದ ಅಂತರಿಕ್ಷದಲ್ಲಿ ಆವಿರ್ಭವಿಸುವಾಗ ಅಗ್ನಿಯ ಪ್ರಕಾಶದಿಂದ ಅಂತರಿಕ್ಷವೆಲ್ಲವೂ ತೇಜಸ್ಸಿನಿಂದ ತುಂಬಿಹೋಗುವುದು. ಎಂದರೆ ಅತಿಪ್ರಕಾಶಮಾನವಾಗಿ ಬೆಳಗುವುದು. ಈ ರೀತಿ ಅಗ್ನಿಯು ಪ್ರಾದುರ್ಭವಿಸಿ ಇತರ ದೇವತೆಗಳೊಡನೆ ಸೇರುವನೆಂದಭಿಪ್ರಾಯವು.

ಈ ಋಕ್ಕಿನ ಪೂರ್ವಾರ್ಧದ ಮತ್ತು ಉತ್ತರಾರ್ಧದ ಎರಡು ವಾಕ್ಯಗಳಿಗೂ ಎರಡು ವಿಧವಾದ ಅನ್ವಯವು ಸಾಧ್ಯವಾಗುತ್ತದೆ. ಪೂರ್ವಾರ್ಧಕ್ಕೆ, ಮೊದಲನೆಯದಾಗಿ ಅಗ್ನಿಯು ಅಂತರಿಕ್ಷದಲ್ಲಿ ವೃಷ್ಟ್ಯುದಕಗಳೊಡನೆ ಸೇರಿಕೊಂಡು ಮಿಂಚಿನರೂಪದಲ್ಲಿ ತನ್ನ ತೇಜಸ್ಸನ್ನು ಉತ್ಪನ್ನವಾಗುವಂತೆ ಮಾಡುತ್ತಾನೆ ಎಂತಲೂ, ಎರಡನೆಯದಾಗಿ, ಯಜ್ಞಗೃಹದಲ್ಲಿ ಸ್ತುತಿಗಳಿಂದಲೂ ಸೋಮರಸಗಳಿಂದಲೂ ಕೂಡಿಕೊಂಡು ತನ್ನ ಉಜ್ವಲವಾದ ಕಾಂತಿಯನ್ನು ಉಂಟುಮಾಡುತ್ತಾನೆ ಎಂತಲೂ ಅಭಿಪ್ರಾಯಗಳಾಗಬಹುದು. ಮೊದಲನೆಯ ಅನ್ವಯದ ಪ್ರಕಾರ ಸಾಯಣರ ವ್ಯಾಖ್ಯಾನದಲ್ಲಿ ;

**ಸದನೇ**— ಅಂತರಿಕ್ಷದಲ್ಲಿ. ಸೀದಂತ್ಯಸ್ಮಿನ್ ಗಂಧರ್ವಾದಯಃ ಇತಿ ಸದನಮಂತರಿಕ್ಷಂ । ಗಂಧರ್ವಾದಿಗಳು ಇಲ್ಲಿ ವಿಹರಿಸುತ್ತಾ ಕುಳಿತುಕೊಳ್ಳುವುದರಿಂದ ಅಂತರಿಕ್ಷಕ್ಕೆ ಸದನವೆಂದು ಹೆಸರು. ಈ ಅಂತರಿಕ್ಷದಲ್ಲಿ,

**ಗೋಭಿಃ ಅದ್ಭಿಃ ಸಂಪೃಂಚಾನಃ**–ಗಂತ್ರೀಭಿಃ ಮೇಘಸ್ಥಾಭಿಃ ಸಹ ವೈದ್ಯುತರೂಪೇಣ ಸಂಯುಕ್ತಃ ಸಂಚರಿಸತಕ್ಕ ಮೇಘಗಳೊಡನಿರುವ ನೀರುಗಳೊಡನೆ ಮಿಂಚಿನರೂಪದಲ್ಲಿ ಸೇರಿಕೊಂಡು ತನ್ನ ಕಾಂತಿಯನ್ನು ಸೃಷ್ಟಿಸುತ್ತಾನೆ ಎಂದು ವಿವರಿಸಿದೆ.

ಎರಡನೆಯದಾಗಿ, ಸ್ಕಂದಸ್ವಾಮಿಗಳ ವ್ಯಾಖ್ಯಾನದಲ್ಲಿ,

**ಸದನೇ—ಯಜ್ಞಗೃಹೇ ; ಗೋಭಿಃ ಅದ್ಭಿಃ, ಗೋ ಶಬ್ದಃ ಅತ್ರ ಸ್ತುತಿವಚನಃ।**

**ಗೋಭಿರ್ಯದೀ ಮನ್ಯೇ ಅಸ್ಮನ್ಮೃಗಂ ನ ವ್ರಾ ಮೃಗಯಂತೇ ॥**

(ಋ. ಸಂ. ೮-೨-೬)

**ಇತಿ ಯಥಾ। ಸ್ತುತಿಭಿಃ ಸೋಮರಸಲಕ್ಷಣಾಭಿಶ್ಚ ಅದ್ಭಿಃ ಸ್ತೂಯಮಾನಃ ಸೋಮೇನ ಚ ಹೂಯಮಾನ ಇತ್ಯರ್ಥಃ।** ಯಜ್ಞಗೃಹದಲ್ಲಿ ಸ್ತುತಿಗಳಿಂದಲೂ ಸೋಮರಸಗಳಿಂದಲೂ ಕೂಡಿಕೊಂಡು ತನ್ನ ಕಾಂತಿಯನ್ನು ಬೀರುತ್ತಾನೆ ಎಂದು ವಿವರಿಸಿದೆ. ಇಲ್ಲಿ **ಗೋ** ಶಬ್ದಕ್ಕೆ ಸ್ತುತಿಯೆಂಬ ಅರ್ಥವನ್ನು ಸಮರ್ಥಿಸುವುದಕ್ಕಾಗಿ ಮೇಲಿನ ಶ್ರುತಿವಾಕ್ಯವನ್ನು ಪ್ರಮಾಣಕ್ಕಾಗಿ ಉದಹರಿಸಿದ್ದಾರೆ.

**ಉತ್ತರಂ—ಉತ್ಕೃಷ್ಟತರಂ।** ಅತ್ಯಂತ ಉತ್ತಮವಾದ ಎಂದು **ತ್ವೇಷಂ** ಎನ್ನುವ ಪದಕ್ಕೆ ವಿಶೇಷಣವಾಗಿದೆ.

ಉತ್ತರಾರ್ಧದ ವ್ಯಾಖ್ಯಾನದಲ್ಲೂ ಇಬ್ಬರ ಅನ್ವಯಕ್ಕೂ ವಿವರಣೆಗೂ ವ್ಯತ್ಯಾಸವು ಬರುತ್ತದೆ. ಸಾಯಣಭಾಷ್ಯದಲ್ಲಿ,

**ಕವಿಃ ಕ್ರಾಂತದರ್ಶೀ, ಧೀಃ ಸರ್ವೇಷಾಂ ಧಾರಕಃ ಸಃ ಅಗ್ನಿಃ ಬುಧ್ನಂ ಅಂತರಿಕ್ಷಂ ಪರಿಮರ್ಮೃಜ್ಯತೇ ಪರಿತಃ ಸ್ವತೇಜಸಾ ಆಚ್ಛಾದಯತಿ ಸಾ ದೇವತಾತಾ ದೇವಶೀಲೇನಾಗ್ನಿನಾ ವಿಸ್ತಾರಿತಾ ದೀಪ್ತಿಃ ಅಸ್ಮಾಭಿಃ ಸ್ತುತಾ ಸಮಿತಿರ್ಬಭೂವ ತೇಜಸಾಂ ಸಂಹತಿರ್ಭವತಿ।** ಮೇಧಾವಿಯೂ ಸಕಲ ಜಗತ್ತನ್ನೂ ಧಾರಣೆಮಾಡುವವನೂ ಆದ ಅಗ್ನಿಯು ಅಂತರಿಕ್ಷವನ್ನು ತನ್ನ ಕಾಂತಿಯಿಂದ ಆವರಿಸುತ್ತಾನೆ. ದೇವತಾತ್ಮನಾದ ಅಗ್ನಿಯಿಂದ ವಿಸ್ತೃತವಾದ ಆ ತೇಜಸ್ಸನ್ನು ನಾವು ಸ್ತುತಿಸಿದಾಗ ಅಂತರಿಕ್ಷದಲ್ಲಿ ತೇಜಸ್ಸಿನ ಪುಂಜವುಂಟಾಯಿತು ಎಂದೂ, ಸ್ಕಂದಸ್ವಾಮಿಗಳ ವ್ಯಾಖ್ಯಾನದಲ್ಲಿ—

**ಬುಧ್ನಂ ಅಂತರಿಕ್ಷಂ। ತಚ್ಚ ತಮೋಽಪನಯನೇನ ಸರ್ವತಃ ಶೋಧಯತಿ। ಧೀರಿತಿ ಕರ್ಮನಾಮ। ಸಂಗಚ್ಛಂತೇ ದೇವಾಃ ಸಾ ಸಮಿತಿಃ। ಯತ್ರ ಯಜ್ಞಕರ್ಮಣಿ ದೀಪ್ತಿಮಾತ್ಮನೋ ರೂಪಮಗ್ನಿಃ ಕರೋತಿ ಅಂತರಿಕ್ಷಾಚ್ಚ ತಮೋಽಪನಯತಿ ತತ್ರೈವ ದೇವಾಃ ಸಂಗಚ್ಛಂತೇ ನಾನ್ಯತ್ರೇತ್ಯರ್ಥಃ।** ಅಂತರಿಕ್ಷದಲ್ಲಿ ಅಗ್ನಿಯು ತನ್ನ ಕಾಂತಿಯಿಂದ ತಮಸ್ಸನ್ನು ನಾಶಮಾಡುತ್ತಾನೆ. ಆದ್ದರಿಂದ ಅಲ್ಲಿ ದೇವತೆಗಳ ಸಮಿತಿಯು ಸೇರುತ್ತದೆ. ಯಾವ ಯಜ್ಞಕರ್ಮದಲ್ಲಿ ಅಗ್ನಿಯು ಬೆಳಗುತ್ತಾನೆಯೋ, ಯಾವ ಅಂತರಿಕ್ಷದಲ್ಲಿ ಕತ್ತಲನ್ನು ನಾಶಮಾಡುತ್ತಾನೆಯೋ ಅಲ್ಲಿ ಮಾತ್ರ ದೇವತೆಗಳ ಸಮೂಹವು ಸೇರಿ ವಿಹರಿಸುತ್ತದೆ. ಉಳಿದ ಸ್ಥಳಗಳಲ್ಲಿ ಒಂದಾಗಿ ದೇವತೆಗಳು ಸೇರುವುದಿಲ್ಲವೆಂದಭಿಪ್ರಾಯವಾಗುತ್ತದೆ. ಈ ವಿವರಣೆಯ ಪ್ರಕಾರ **ದೇವತಾತಾ** ಎಂಬ ಶಬ್ದವು ಯಜ್ಞಃ, ವೇನಃ, ಇತ್ಯಾದಿ ೧೫ **ಯಜ್ಞನಾಮ**ಗಳಲ್ಲಿ (ನಿ. ೩-೧೭) ಪಠಿತವಾಗಿ **ಯಜ್ಞ**ವೆಂದರ್ಥವಾದರೂ ಇಲ್ಲಿ ಮಾತ್ರ ದೇವತೆಗಳ ಗುಂಪು ಎಂದಾಗುತ್ತದೆ.

**ಬುಧ್ನಂ**—ಬುಧ್ನಮಂತರಿಕ್ಷಂ। ಬದ್ಧಾ ಅಸ್ಮಿನ್ ಧೃತಾ ಆಪ ಇತಿ ವಾ। ನೀರು ಇಲ್ಲಿ ತಡೆದು ನಿಲ್ಲಿಸಲ್ಪಡುತ್ತದೆಯಾದ್ದರಿಂದ ಅಂತರಿಕ್ಷಕ್ಕೆ ಬುಧ್ನವೆಂದು ಹೆಸರು. (ನಿ. ೧೦-೪೬)

Maurice Bloomfield ಎಂಬ ಆಂಗ್ಲವ್ಯಾಖ್ಯಾಕಾರನು ಸ್ಕಂದಸ್ವಾಮಿಗಳ ಭಾಷ್ಯಕ್ಕೆ ಅನುಗುಣವಾಗಿಯೇ ಈ ಋಕ್ಕಿಗೆ ಅರ್ಥಮಾಡಿದ್ದಾನೆ. ಆದರೂ ಈ ಋಕ್ಕಿನಲ್ಲಿ ವ್ಯಕ್ತವಾಗಿ ಆಗದೆ ಇರುವ ಋಷಿಯ ಭಾವನೆಯಲ್ಲಿಯೂ ಪ್ರಾರ್ಥನೆಯಲ್ಲಿಯೂ ಒಂದು ಗೂಢವಾದ ತತ್ತ್ವವು ಅಡಗಿದೆಯೆಂದೂ, ಇದೇ ರೀತಿ ಪ್ರಾರ್ಥನೆಯು ೯ನೇ ಮಂಡಲದಲ್ಲಿಯೂ ಒಂದು ಕಡೆ ಬರುತ್ತದೆಂದೂ ಇದೇ ಋಕ್ಕಿನ ಆನುಪೂರ್ವಿಯುಳ್ಳ ಆ ಉದಾಹರಣೆಯನ್ನೂ ಕೊಟ್ಟಿದ್ದಾನೆ.

**ತ್ವೇಷಂ ರೂಪಂ ಕೃಣುತೇ ವರ್ಣೋ ಅಸ್ಯ ಸ ಯತ್ರಾಶಯತ್ಸಮೃತಾ ಸೇಧತಿ ಸ್ರಿಧಃ ।**
**ಅಪ್ಸಾ ಯಾತಿ ಸ್ವಧಯಾ ದೈವ್ಯಂ ಜನಂ ಸಂ ಸುಷ್ಟುತೀ ನಸತೇ ಸಂ ಗೋಅಗ್ರಯಾ ।**
( ಋ. ಸಂ. ೯-೭೧-೮ )

ಎಂಬ ಈ ಋಕ್ಕಿನಲ್ಲಿರುವ ಸಮಾನವಾದ ಭಾವವನ್ನು ವಿವರಿಸುತ್ತಾ ಅವುಗಳ ಮರ್ಮವನ್ನು ಪೂರ್ಣವಾಗಿ ಅರಿಯುವುದು ಸುಲಭಸಾಧ್ಯವಲ್ಲವೆಂದು ತನ್ನ ಅಭಿಪ್ರಾಯವನ್ನು ಕೆಳಗೆ ಕಂಡಂತೆ ಹೇಳುತ್ತಾನೆ.

"We can see that they are related beyond the verbal similarity of their opening padas· In 'I· 95. 8, 'Sage Prayer' ( ಕವಿಃ .... .... .... ಧೀಃ) pnrifies Agni's foundation after his highest part has assumed brilliant colour ತ್ವೇಷಂ ರೂಪಂ ಕೃಣುತೇ so that it becomes the meeting place among the Gods. ( ದೇವತಾತಾ ) In 9-71-8, Soma assumes brilliant colour, goes to the divine folk and there associates himself with praise accompanied by cows. We may never find out what is the exact value of these mystic utterances of the Rishis but, in any case, these two stanzas which assimilate Agni and Soma must be considered in their mutual relation, before explanation of either is possible".

(-Rig-Veda Repetitions· Pt· I. P· 110.)

ಎಂಬುದಾಗಿ ಈ ಎರಡು ಋಕ್ಕುಗಳ ಭಾವವೂ ಸಮಾನವಾಗಿರುವುದೆಂದೂ ಒಂದರ ಅಭಿಪ್ರಾಯವನ್ನು ತಿಳಿಯಬೇಕಾದರೆ ಇನ್ನೊಂದನ್ನೂ ಗಹನವಾಗಿ ಪರಿಶೀಲಿಸಬೇಕೆಂದೂ ಎರಡರ ತತ್ತ್ವವನ್ನೂ ಕೂಲಂಕಷವಾಗಿ ಪರಿಶೀಲಿಸಿ ಅರ್ಥಮಾಡಬೇಕೆಂದೂ ಅಭಿಪ್ರಾಯಪಡುತ್ತಾನೆ.

ವ್ಯಾಕರಣಪ್ರಕ್ರಿಯಾ

**ತ್ವೇಷಮ್**—ತ್ವಿಷ ದೀಪ್ತೌ ಧಾತು. ಪಚಾದಿಯು ಆಕೃತಿಗಣವಾದುದರಿಂದ **ನಂದಿಗ್ರಹಪಚಾದಿಭ್ಯಃ**-(ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ತನ್ನಿಮಿತ್ತವಾಗಿ **ಪುಗಂತಲಘೂಪಧಸ್ಯಚ**—ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. **ಚಿತಃ**—ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಕೃಣುತೇ**—ಕೃವಿ ಹಿಂಸಾಕರಣಯೋಶ್ಚ. ಧಾತು. ಇದಿತ್ತಾದುದರಿಂದ ನುಮಾಗಮ. **ಧಿನ್ವಿಕೃಣ್ವ್ಯೋರಚ** (ಪಾ. ಸೂ. ೩-೧-೮೦) ಎಂಬುದರಿಂದ ಅಕಾರಾಂತಾದೇಶ. ಉವಿಕರಣ. **ಅತೋಲೋಪಃ**—ಸೂತ್ರದಿಂದ ಅಕಾರಲೋಪ. ಲಟ್ ಪ್ರಥಮಪುರುಷ ಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

**ಸಂಪೃಙ್ಞಾನಃ**—ಪೃಚೀ ಸಂಪರ್ಕೇ. ಧಾತು. ರುಧಾದಿ. ಇದಕ್ಕೆ ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ರುಧಾದಿಭ್ಯಃ ಶ್ನಮ್**—(ಪಾ. ಸೂ. ೭-೨-೪೫) ಎಂಬುದರಿಂದ ಶ್ನಮ್ ವಿಕರಣ. **ಸಾರ್ವಧಾತುಕಮಪಿತ್**—ಎಂಬುದರಿಂದ ಶಾನಚಿಗೆ ಙಿದ್ವದ್ಭಾವವಿರುವುದರಿಂದ **ಶ್ನಸೋರಲ್ಲೋಪಃ**–(ಪಾ. ಸೂ. ೬-೪-೧೧೧) ಎಂಬುದರಿಂದ ಶಾನಚನ್ನು ನಿಮಿತ್ತೀಕರಿಸಿ ಶ್ನಮಿನ ಅಕಾರಕ್ಕೆ ಲೋಪ. ನಕಾರಕ್ಕೆ **ನಶ್ಚಾಪದಾಂತಸ್ಯಝಲಿ**—ಎಂಬುದರಿಂದ ಅನುಸ್ವಾರ. **ಅನುಸ್ವಾರಸ್ಯ ಯಯಿ ಪರಸವರ್ಣಃ**—ಸೂತ್ರದಿಂದ ಪರಸವರ್ಣ. ಶಾನಚ್ ಚಿತ್ತಾದುದರಿಂದ **ಚಿತಃ**—ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಸಮ್ ಎಂಬುದರೊಡನೆ ಗತಿಸಮಾಸವಾದಾಗ **ಗತಿಕಾರಕೋಪಪದಾತ್ಕೃತ್**—ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸದನೇ**—ಸೀದಂತಿ ಅಸ್ಮಿನ್ ಗಂಧರ್ವಾದಯ ಇತಿ ಸದನಮ್. ಅಂತರಿಕ್ಷಮ್. ಷದ್ಲೃ ವಿಶರಣಗತ್ಯವಸಾದನೇಷು. ಧಾತು. ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಧಾತ್ವಾದೇಃ ಷಃ ಸಃ**—ಸೂತ್ರದಿಂದ ಧಾತುವಿನ ಆದಿಗೆ ಸತ್ವ. **ಯುವೋರನಾಕೌ**–ಎಂಬುದರಿಂದ ಪ್ರತ್ಯಯಕ್ಕೆ ಅನಾದೇಶ. ಸದನಂ ಎಂದು ರೂಪವಾಗುತ್ತದೆ. ಪ್ರತ್ಯಯ ಲಿತ್ತಾದುದರಿಂದ **ಲಿತಿ**—(ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ

**ಗೋಭಿಃ**–ಗಮ್ಲೃ ಗತೌ ಧಾತು. **ಗಮೇರ್ಡೋಸ್**—(ಉ. ಸೂ. ೨-೬೭) ಎಂಬುದರಿಂದ ಡೋಸ್ ಪ್ರತ್ಯಯ. ಡಿತ್ತಾದುದುದರಿಂದ ಭಸಂಜ್ಞಾ ಇಲ್ಲದಿದ್ದರೂ ಟಿಗೆ ಲೋಪ ಬರುತ್ತದೆ. ಗೋ ಎಂದು ಓಕಾರಾಂತ ಶಬ್ದವಾಗುತ್ತದೆ. ತೃತೀಯಾ ಏಕವಚನಾಂತರೂಪ.

**ಅದ್ಭಿಃ**—ಅಪ್ ಶಬ್ದ ಸ್ತ್ರೀಲಿಂಗ ನಿತ್ಯಬಹುವಚನಾಂತ ಶಬ್ದ. ಇದಕ್ಕೆ ಭಿಸ್ ಪರವಾದಾಗ **ಅಪೋಭಿ**—(ಪಾ. ಸೂ. ೭-೪-೪೮) ಎಂಬುದರಿಂದ ದಕಾರಾಂತಾದೇಶವಾಗಿ ಬರುತ್ತದೆ. **ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಮರ್ಮೃಜ್ಯತೇ**—ಮೃಜೂಷ್ ಶುದ್ಧೌ. ಧಾತು. ಅತಿಶಯಾರ್ಥ ತೋರುವಾಗ **ಧಾತೋರೇಕಾಚಃ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್ ಪ್ರತ್ಯಯ **ಸನ್ಯಙೋಃ**—ಎಂಬುದರಿಂದ ಯಙಂತದ ಏಕಾಚಿಗೆ. ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಉರದತ್ವ. ಪುನಃ ಆದಿಹಲ್ ಶೇಷ. ಮರ್ಮೃಜ್ಯ ಎಂದಿರುವಾಗ **ಮರ್ಮೃಜ್ಯತೇ ಮರ್ಮೃಜ್ಯಮಾನಾಸ ಉಪಸಂಖ್ಯಾನಮ್**—ಪಾ. ಸೂ. ೭-೪-೯೧-೧) ಎಂಬ ವಚನದಿಂದ ನಿಪಾತನಮಾಡಿರುವುದರಿಂದ ಅಭ್ಯಾಸಕ್ಕೆ ರುಕಾಗಮ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. ಶಪ್ ವಿಕರಣ. **ಟಿತಆತ್ಮನೇಪದಾನಾಂ**—ಎಂಬುದರಿಂದ ಏತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದೇವತಾತಾ**—ದೇವೇನ ತತಾ ದೇವತಾತಾ. ತನು ವಿಸ್ತಾರೇ ಧಾತು. ಇದಕ್ಕೆ ಕರ್ಮಣಿಯಲ್ಲಿ **ನಿಷ್ಠಾ**-(ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. ಕಿತ್ತಾದುದರಿಂದ ಇದು ಪರವಾದಾಗ **ಅನುದಾತ್ತೋಪದೇಶವನತಿ**-(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಅನುನಾಸಿಕವಾದ ನಕಾರಕ್ಕೆ ಲೋಪ. **ವ್ಯತ್ಯಯೋ ಬಹುಲಮ್**—ಎಂಬುದರಿಂದ ಆತ್ವ. ತೃತೀಯಾ ತತ್ಪುರುಷ ಸಮಾಸ. **ತೃತೀಯಾಕರ್ಮಣಿ** (ಪಾ. ಸೂ. ೬-೨-೪೮) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಬಭೂವ**—ಭೂ ಸತ್ತಾಯಾಂ ಧಾತು. ಲಿಟ್ ಪ್ರಥಮಪುರುಷ ಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೮ ॥

ಸಂಹಿತಾಪಾಠಃ

ಉರು ತೇ ಜ್ರಯಃ ಪರ್ಯೇತಿ ಬುಧ್ನಂ ವಿರೋಚಮಾನಂ
ಮಹಿಷಸ್ಯ ಧಾಮ ।
ವಿಶ್ವೇಭಿರಗ್ನೇ ಸ್ವಯಶೋಭಿರಿದ್ಧೋಽದಬ್ಧೇಭಿಃ ಪಾಯುಭಿಃ
ಪಾಹ್ಯಸ್ಮಾನ್ ॥ ೯ ॥

ಪದಪಾಠಃ

ಉರು । ತೇ । ಜ್ರಯಃ । ಪರಿ । ಏತಿ । ಬುಧ್ನಂ । ವಿಽರೋಚಮಾನಂ । ಮಹಿ-
ಷಸ್ಯ । ಧಾಮ ।
ವಿಶ್ವೇಭಿಃ । ಅಗ್ನೇ । ಸ್ವಯಶಃಽಭಿಃ । ಇದ್ಧಃ । ಅದಬ್ಧೇಭಿಃ । ಪಾಯುಽಭಿಃ ।
ಪಾಹಿ । ಅಸ್ಮಾನ್ ॥ ೯ ॥

ಸಾಯಣಭಾಷ್ಯಂ

ಮಹಿಷಸ್ಯ ಮಹತಸ್ತೇ ತವ ಜ್ರಯೋ ರಾಕ್ಷಸಾದೀನಾಮಭಿಭಾವುಕಂ ವಿರೋಚಮಾನಂ ವಿಶೇಷೇಣ ದೀಪ್ಯಮಾನಮುರು ವಿಸ್ತೀರ್ಣಂ ಧಾಮ ತೇಜೋ ಬುಧ್ನಮಪಾಂ ಮೂಲಭೂತಮಂತರಿಕ್ಷಂ ಪರ್ಯೇತಿ । ಪರಿತೋ ವ್ಯಾಪ್ನೋತಿ । ಹೇ ಅಗ್ನೇ । ಇದ್ಧೋಽಸ್ಮಾಭಿಃ ಪ್ರಜ್ವಲಿತಃ ಸನ್ ವಿಶ್ವೇಭಿಃ ಸರ್ವೈಃ ಸ್ವಯ-ಶೋಭಿಃ ಸ್ವಕೀಯೈರಾತ್ಮೀಯೈಸ್ತೇಜೋಭಿರಸ್ಮಾನ್ಪಾಹಿ । ರಕ್ಷ । ಕೀದೃಶೈಃ । ಅದಬ್ಧೇಭೀ ರಾಕ್ಷಸಾದಿಭಿ-

ರಹಿಂಸಿತೈಃ । ಪಾಯುಭಿಃ । ಪಾಲನಶಕ್ತೈಃ ॥ ಜ್ರಯಃ । ಜಿ ಜ್ರಿ ಅಭಿಭವೇ । ಅಸುನ್ । ಅದಬ್ಧೇಭಿಃ । ದನ್ಭು ದಂಭೇ । ನಿಷ್ಠಾಯಾಂ ಯಸ್ಯ ವಿಭಾಷೇತೀಟ್ಪ್ರತಿಷೇಧಃ । ಅನಿದಿತಾಮಿತಿ ನಲೋಪಃ । ಝಷಸ್ತ-ಥೋರ್ಧೋಽಧ ಇತಿ ಧತ್ವಂ । ನಞ್ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ । ಬಹುಲಂ ಛಂದಸೀತಿ ಭಿಸ ಐಸಭಾವಃ ॥ ೯

ಪ್ರತಿಪದಾರ್ಥ

ಮಹಿಷಸ್ಯ—ಪ್ರಭಾವಶಾಲಿಯಾದ । ತೇ—ನಿನ್ನ । ಜ್ರಯಃ—(ರಾಕ್ಷಸಾದಿಗಳನ್ನು ಧ್ವಂಸಮಾಡಿ) ಜಯಿಸುವ ಸಾಮರ್ಥ್ಯವುಳ್ಳದ್ದು । ವಿರೋಚಮಾನಂ—ಅಧಿಕವಾಗಿ ಪ್ರಕಾಶಿಸುವುದೂ । ಉರು—ವಿಸ್ತಾರವಾದುದೂ ಆದ । ಧಾಮ—ತೇಜಸ್ಸು । ಬುಧ್ನಂ—ನೀರುಗಳಿಗೆ ಮೂಲಸ್ಥಾನವಾದ ಅಂತರಿಕ್ಷವನ್ನು । ಪರ್ಯೇತಿ-ಸುತ್ತಲೂ ವ್ಯಾಪಿಸುತ್ತದೆ. । ಅಗ್ನೇ—ಎಲೈ ಅಗ್ನಿಯೇ, । ಇದ್ಧಃ—(ನಮ್ಮಿಂದ) ಪ್ರಜ್ವಲಿತನಾಗಿ । ಅದಬ್ಧೇಭಿಃ-(ರಾಕ್ಷಸರಿಂದ) ಅಹಿಂಸಿತವಾದುವೂ । ಪಾಯುಭಿಃ—ರಕ್ಷಿಸಲು ಸಮರ್ಥವಾದುವೂ ಆದ । ವಿಶ್ವೇಭಿಃ ಸ್ವಯಶೋಭಿಃ—ನಿನ್ನ ಸಕಲ ತೇಜಸ್ಸುಗಳೊಡನೆಯೂ । ಅಸ್ಮಾನ್—ನಮ್ಮನ್ನು । ಪಾಹಿ—ಕಾಪಾಡು. ।

॥ ಭಾವಾರ್ಥ ॥

ಎಲೈ ಅಗ್ನಿಯೇ. ರಾಕ್ಷಸಾದಿಗಳನ್ನು ನಾಶಮಾಡಿ ಜಯಿಸತಕ್ಕದ್ದೂ, ಅಧಿಕವಾಗಿ ಪ್ರಕಾಶಿಸತಕ್ಕದ್ದೂ, ವಿಸ್ತಾರವಾಗಿ ಹರಡಿರುವುದೂ ಆದ ನಿನ್ನ ತೇಜಸ್ಸು ನೀರುಗಳಿಗೆ ಮೂಲಸ್ಥಾನವಾದ ಅಂತರಿಕ್ಷವನ್ನೆಲ್ಲಾ ವ್ಯಾಪಿಸುತ್ತದೆ. ಮಹಾತ್ಮನಾದ ನೀನು ನಮ್ಮಿಂದ ಪ್ರಜ್ವಲಿತನಾಗಿ ರಾಕ್ಷಸರಿಂದ ಅಹಿಂಸಿತವಾದುವೂ ರಕ್ಷಿಸಲು ಸಮರ್ಥವಾದುವೂ ಆದ ನಿನ್ನ ಸಕಲ ತೇಜಸ್ಸುಗಳೊಡನೆಯೂ ನಮ್ಮನ್ನು ಕಾಪಾಡು.

## English Translation

The vast and victorious radiance of thee, the mighty one, pervades the firmament ; Agni, who has been kindled by us, preserve us with all your undiminished and protecting glories.

ವಿಶೇಷವಿಷಯಗಳು

ತನ್ನ ಅಪ್ರತಿಹತವಾದ ಶಕ್ತಿಯಿಂದ ದುಷ್ಟಶಿಕ್ಷಣವನ್ನೂ ಶಿಷ್ಟರಕ್ಷಣವನ್ನೂ ಮಾಡಬೇಕೆಂದು ಅಗ್ನಿಯನ್ನು ಪ್ರಾರ್ಥಿಸಿದೆ.

ಮಹಿಷಸ್ಯ—ಮಹತ್, ಬೃಹತ್, ಉಕ್ಷಿತಃ ಇತ್ಯಾದಿ ೨೫ ಮಹನ್ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ ೩-೧೩) ಮಹತ್ತಿನಿಂದ ಕೂಡಿದ, ಪ್ರಭಾವಶಾಲಿಯಾದ ಎಂದು ಅಗ್ನಿಗೆ ವಿಶೇಷಣವಾಗಿದೆ. ಪ್ರಬಲವಾದ ಶಕ್ತಿಯುಳ್ಳದ್ದು ಎಂದು ಹೇಳುವ ಸನ್ನಿವೇಶಗಳಲ್ಲೆಲ್ಲಾ ಈ ಪದದ ಪ್ರಯೋಗವಿದೆ.

ಬ್ರಹ್ಮಾ ದೇವಾನಾಂ ಪದವೀಃ ಕವೀನಾಮೃಷಿರ್ವಿಪ್ರಾಣಾಂ ಮಹಿಷೋ ಮೃಗಾಣಾಂ ।
(ಋ. ಸಂ. ೯-೯೬-೬)

ಎಂಬಲ್ಲಿ ಮೃಗಗಳಲ್ಲೆಲ್ಲಾ ಅತ್ಯಂತಶಕ್ತಿಯುಳ್ಳದ್ದು **ಮಹಿಷ** ಮೃಗವೆಂದು ಅದರ ಶಕ್ತಿಯನ್ನು ಹೊಗಳಿದೆ. ಅತ್ಯಂತ ಪೂಜ್ಯವಾದ ಎಂಬರ್ಥವನ್ನು ಕೊಡುವಾಗಲೂ ಈ ಪದದ ಪ್ರಯೋಗವಿದೆ.

ನಿರ್ಮದೀಂ ಬುಧ್ನಾನ್ಮಹಿಷಸ್ಯ ವರ್ಪಸ ಈಶಾನಾಸಃ ಶವಸಾ ಕ್ರಂತ ಸೂರಯಃ ।
(ಋ. ಸಂ. ೧-೧೪೧.೩)

ಎಂಬ ಸ್ಥಳದಲ್ಲಿ ಶ್ರೇಷ್ಠವಾದ, ಪೂಜ್ಯವಾದ ಎಂದರ್ಥ. ಅದರಂತೆಯೇ ಇಲ್ಲಿಯೂ ಅತ್ಯಂತ ಪ್ರಭಾವಶಾಲಿಯಾದ, ಶಕ್ತಿಯುತನಾದ ಮತ್ತು ಅತ್ಯಂತ ಪೂಜ್ಯನಾದ ಎಂದು ಅಗ್ನಿಗೆ ವಿಶೇಷಣವಾಗಿದೆ.

**ಜ್ರಯಃ**--**ವರ್ತತೇ, ಅಯತೇ. ಲೋಟತೇ** ಇತ್ಯಾದಿ ೧೨೨ **ಗತಿಕರ್ಮಗಳಲ್ಲಿ ಜ್ರಯತಿ** ಶಬ್ದವು ಪಠಿತವಾಗಿರುವುದರಿಂದ (ನಿ. ೨-೯) **ಗಮನ**ವೆಂದರ್ಥ. ಆದರೆ ಆ ಗಮನದಲ್ಲೂ ಒಂದು ವೈಶಿಷ್ಟ್ಯವನ್ನು ತೋರಿಸುವ ಗಮನದ ವೇಗವನ್ನು ಹೇಳಲು ಈ ಪದದ ಪ್ರಯೋಗವಿದೆ. ಉದಾಹರಣೆಗೆ—

**ಅಧೀವಾಸಂ ಪರಿ ಮಾತೂ ರಿಹನ್ನಹ ತುವಿಗ್ರೇಭಿಃ ಸತ್ವಭಿರ್ಯಾತಿ ವಿ ಜ್ರಯಃ ।**
(ಋ. ಸಂ. ೧-೧೪೦-೯)

ಇಲ್ಲಿ ದಾವಾಗ್ನಿಯು ಪ್ರಸರಿಸುವ ವೇಗವು ವರ್ಣಿತವಾಗಿದೆ. ಮತ್ತು—

**ಪ್ರತಿ ಭದ್ರಾ ಅದೃಕ್ಷತ ಗವಾಂ ಸರ್ಗಾ ನ ರಶ್ಮಯಃ । ಓಷಾ ಅಪ್ರಾ ಉರು ಜ್ರಯಃ ।**
(ಋ. ಸಂ. ೪-೫೨-೫)

ಎಂಬಲ್ಲಿ **ಜ್ರಯ** ಶಬ್ದಕ್ಕೆ ಮಹತ್ತಾದ ತೇಜಸ್ಸೆಂದು ಅರ್ಥವು ಒಟ್ಟಿನಲ್ಲಿ ಅಪ್ರತಿಹತವಾದ ವೇಗ, ಅಥವಾ ಶಕ್ತಿ ಎಂದರ್ಥವಾಗಿ ಇಲ್ಲಿ **ಜ್ರಯಃ ಧಾಮ** ಎಂದು ತೇಜಸ್ಸಿಗೆ ವಿಶೇಷಣವಾಗಿ ರಾಕ್ಷಸಾದಿಗಳನ್ನು ನಾಶಮಾಡಿ ಜಯಿಸುವ ಸಾಮರ್ಥ್ಯದಿಂದ ಕೂಡಿದ ತೇಜಸ್ಸು ಎಂದಾಗುತ್ತದೆ.

**ಬುಧ್ನಂ—ಅಂತರಿಕ್ಷಂ ।** ಈ ಶಬ್ದದ ನಿರ್ವಚನವನ್ನು ನಿರುಕ್ತದ ವಾಕ್ಯವನ್ನುದಹರಿಸಿ ಹಿಂದಿನ ಋಕ್ಕಿನ ವಿಶೇಷ ವಿಷಯಗಳಲ್ಲಿ ವಿವರಿಸಿದೆ.

**ಅದಬ್ಧೇಭಿಃ—ಅಹಿಂಸಿತೈಃ ।** ಯಾರಿಂದಲೂ ಹಿಂಸಿಸಲ್ಪಡದಿರುವ ಎಂದು **ಪಾಯುಭಿಃ** (ರಕ್ಷಣೆಗಳಿಂದ) ಎಂಬ ಪದಕ್ಕೆ ವಿಶೇಷಣವಾಗಿದೆ. ಹಿಂಸಿಸು, ನಾಶಮಾಡು ಎಂದರ್ಥವಾಗುವ **ದಭ್** ಧಾತುವಿನಿಂದ ನಿಷ್ಪನ್ನವಾದ ಪದಗಳ ಪ್ರಯೋಗಗಳು ಅಧಿಕವಾಗಿ ಛಾಂದಸವಾಗಿಯೇ ಇವೆ. ಅಹಿಂಸಿತವಾದುದು, ನಾಶಮಾಡಲ್ಪಡದಿರುವುದು ಎಂದರ್ಥವಾಗುವ **ಅದಬ್ಧ** ಶಬ್ದದ ಪ್ರಯೋಗವೂ ಹೆಚ್ಚಾಗಿ ಛಾಂದಸವಾಗಿಯೇ ಆಗಿದೆ. ಸಾಧಾರಣವಾಗಿ ಅಗ್ನಿಯನ್ನು ರಕ್ಷಣೆಗಾಗಿ ಪ್ರಾರ್ಥಿಸುವಾಗ ಅದಬ್ಧೇಭಿಃ, ಅಥವಾ ಗೋಪಾಭಿಃ ಎಂಬ ವಿಶೇಷಣ ವಿಶೇಷ್ಯಗಳು ಜೊತೆಯಲ್ಲಿಯೇ ಉಪಯೋಗಿಸಲ್ಪಟ್ಟಿವೆ. ಉದಾಹರಣೆಗೆ—

**ಅಪ್ರಯುಚ್ಛನ್ನಪ್ರಯುಚ್ಛದ್ಭಿರಗ್ನೇ ಶಿವೇಭಿರ್ನಃ ಪಾಯುಭಿಃ ಪಾಹಿ ಶಗ್ಮೈಃ ।**
**ಅದಬ್ಧೇಭಿರದೃಪಿತೇಭಿರಿಷ್ಟೇಽನಿಮಿಷದ್ಭಿಃ ಪರಿ ಪಾಹಿ ನೋ ಜಾಃ ॥**
(ಋ. ಸಂ. ೧-೧೪೩-೮).

**ಅದಬ್ಧೇಭಿಸ್ತವ ಗೋಪಾಭಿರಿಷ್ಟೇಽಸ್ಮಾಕಂ ಪಾಹಿ ತ್ರಿಷಧಸ್ಥ ಸೂರೀನ್ ।**
(ಋ. ಸಂ. ೬-೮-೭).

ಇತ್ಯಾದಿ ವಾಕ್ಯಗಳಿಂದ ಅಗ್ನಿಯ ರಕ್ಷಣೆಯು ಶತ್ರುಗಳ ಏಟನ್ನು ಸಂಪೂರ್ಣವಾಗಿ ತಡೆದು ಶತ್ರುವಿನ ಹಿಂಸೆಯಿಲ್ಲದಿರುವಂತೆ ಮಾಡುವುದು ಎಂಬ ದೃಢವಾದ ನಂಬಿಕೆಯು ಅನೇಕಕಡೆ ವ್ಯಕ್ತವಾಗಿದೆ.

**ನ ತಸ್ಯ ಮಾಯಯಾ ಚನ ರಿಪುರೀಶೀತ ಮರ್ತ್ಯಃ ।**
(ಋ. ಸಂ. ೮-೨೩-೧೫).

ಅಗ್ನಿಯ ರಕ್ಷಣೆಗೆ ಒಳಗಾದ ಯಜಮಾನನಿಗೆ ಯಾವ ಶತ್ರುವೂ ಹಿಂಸೆ ನಡೆಸಲು ಸಾಧ್ಯವಿಲ್ಲ ಎಂದು ದೃಢವಾದ ನಂಬಿಕೆಯಿದೆ.

ವ್ಯಾಕರಣಪ್ರಕ್ರಿಯಾ

**ಜ್ರಯಃ**—ಜಿ ಜ್ರಿ ಅಭಿಭವೇ ಧಾತು. **ಸರ್ವಧಾತುಭ್ಯ ಅಸುನ್**—(ಪಾ. ಸೂ. ೪-೬೨೮) ಎಂಬುದರಿಂದ ಅಸುನ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ**—ಎಂಬುದರಿಂದ ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಅಯಾದೇಶ. ಜ್ರಯಸ್ ಶಬ್ದವಾಗುತ್ತದೆ. ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಏತಿ**—ಇಣ್ ಗತೌ ಧಾತು. ಅದಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಶಪಿಗೆ ಲುಕ್. ತಿಪ್ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಿರೋಚಮಾನಮ್**—ರುಚ ದೀಪ್ತೌ ಧಾತು. ಲಡರ್ಥದಲ್ಲಿ ಇದಕ್ಕೆ ಶಾನಚ್ ಪ್ರತ್ಯಯ. ಶಪ್ ವಿಕರಣ. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. **ಆನೇಮುಕ್**—(ಪಾ. ಸೂ. ೭-೨-೮೨) ಎಂಬುದರಿಂದ ಅಜಂತಾಂಗಕ್ಕೆ ಮುಕಾಗಮ. ಇಲ್ಲಿ ಶಪ್ ಪಿತ್ತ್ವಾದುದರಿಂದ ಅನುದಾತ್ತ. ಅನುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅದೂ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ. ವಿ ಎಂಬುದರೊಡನೆ (ಗತಿ) ಸಮಾಸವಾದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ವಿಶ್ವೇಭಿಃ**—ವಿಶ್ವ+ಭಿಸ್ ಎಂದಿರುವಾಗ **ವಾ ಛಂದಸಿ**—ಎಂಬುದರಿಂದ ಭಿಸಿಗೆ ಐಸ್‌ಭಾವ ವಿಕಲ್ಪವಾಗಿ ವಿಹಿತವಾದುದರಿಂದ ಇಲ್ಲಿ ಬರುವುದಿಲ್ಲ. **ಬಹುವಚನೇ ಝಲ್ಯೇತ್**—ಎಂಬುದರಿಂದ ಏತ್ವ. ಪ್ರತ್ಯಯ ಸಕಾರಕ್ಕೆ ರುತ್ವ ವಿಸರ್ಗ.

**ಇದ್ಧಃ**—ಞಿಇಂಧೀ ದೀಪ್ತೌ ಧಾತು. ಇದಕ್ಕೆ ಕ್ತಪ್ರತ್ಯಯ ಪರವಾದಾಗ **ಅನಿದಿತಾಂ ಹಲ**—ಎಂಬುದರಿಂದ ಉಪಧಾನಕಾರಕ್ಕೆ ಲೋಪ. **ಝಷಸ್ತಥೋರ್ಧೋಽಧಃ**—ಎಂಬುದರಿಂದ ಪ್ರತ್ಯಯತಕಾರಕ್ಕೆ ಧತ್ವ. **ಝಲಾಂಜಶ್‌ಝಶಿ**—ಎಂಬುದರಿಂದ ಪೂರ್ವಧಕಾರಕ್ಕೆ ದತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅದಬ್ಧೇಭಿಃ**—ದಮ್ಭು ದಮ್ಭೇ ಧಾತು. ಇದಕ್ಕೆ ಕ್ತಪ್ರತ್ಯಯ ಪರವಾದಾಗ **ಯಸ್ಯ ವಿಭಾಷಾ**—ಎಂಬುದರಿಂದ ಇಣ್ ನಿಷೇಧ ಬರುತ್ತದೆ. ಹಿಂದಿನಂತೆ **ಅನಿದಿತಾಂ**—ಸೂತ್ರದಿಂದ ಉಪಧಾನಕಾರಕ್ಕೆ ಲೋಪ. ಪ್ರತ್ಯಯತಕಾರಕ್ಕೆ ಧತ್ವ. ಪೂರ್ವಕ್ಕೆ ಜಶ್ತ್ವ. ದಬ್ಧ ಎಂದು ರೂಪವಾಗುತ್ತದೆ. ನ ದಬ್ಧಾಃ ಅದಬ್ಧಾಃ. ನಞ್ ತತ್ಪುರುಷ ಸಮಾಸವಾದಾಗ **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯ ಪೂರ್ವಪದಪ್ರಕೃತಿಸ್ವರ ಬರುತ್ತದೆ. **ಬಹುಲಂ ಛಂದಸಿ**—ಸೂತ್ರದಿಂದ ಐಸಾದೇಶ ವಿಕಲ್ಪಿತವಾದುದರಿಂದ ತೃತೀಯಾ ಬಹುವಚನದಲ್ಲಿ ಏತ್ವದಿಂದ ಅದಬ್ಧೇಭಿಃ ಎಂದು ರೂಪವಾಗುತ್ತದೆ.

**ಪಾಹಿ**—ಪಾ ರಕ್ಷಣೇ ಧಾತು. ಅದಾದಿ. ಲೋಣ್ಮಧ್ಯಮಪುರುಷ ಏಕವಚನದಲ್ಲಿ **ಸೇರ್ಹ್ಯಪಿಚ್ಚ**—ಎಂಬುದರಿಂದ ಸಿಪಿಗೆ ಹಿ ಆದೇಶ. ಶಪಿಗೆ ಲುಕ್. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಸ್ಮಾನ್**—ಅಸ್ಮದ್ ಶಬ್ದ. ದ್ವಿತೀಯಾ ಬಹುವಚನದಲ್ಲಿ **ಶಸೋನ**—(ಪಾ. ಸೂ. ೭-೧-೨೯) ಎಂಬುದರಿಂದ ಶಸಿಗೆ ನಕಾರಾದೇಶ. **ಆದೇಃ ಪರಸ್ಯ** ಪರಿಭಾಷೆಯಿಂದ ಆದಿಗೆ ಬರುತ್ತದೆ. **ಸಂಯೋಗಾಂತಲೋಪದಿಂದ** ಸಕಾರಲೋಪ. **ದ್ವಿತೀಯಾಯಾಂಚ** (ಪಾ. ಸೂ. ೭-೨-೮೭) ಎಂಬುದರಿಂದ ಪ್ರಕೃತಿಗೆ ಆಕಾರಾಂತಾದೇಶ. ॥ ೯



॥ ಸಂಹಿತಾಪಾಠಃ ॥

ಧನ್ವನ್ತ್ಸ್ರೋತಃ ಕೃಣುತೇ ಗಾತುಮೂರ್ಮಿಂ ಶುಕ್ರೈರೂ-
ರ್ಮಿಭಿರಭಿ ನಕ್ಷತಿ ಕ್ಷಾಂ।
ವಿಶ್ವಾ ಸನಾನಿ ಜಠರೇಷು ಧತ್ತೇಽಂತರ್ನವಾಸು ಚರತಿ ಪ್ರಸೂ-
ಷು ॥೧೦॥

ಪದಪಾಠಃ ॥

ಧನ್ವನ್ । ಸ್ರೋತಃ । ಕೃಣುತೇ । ಗಾತುಂ । ಊರ್ಮಿಂ । ಶುಕ್ರೈಃ । ಊ-
ರ್ಮಿಽಭಿಃ । ಅಭಿ । ನಕ್ಷತಿ । ಕ್ಷಾಂ ।

ವಿಶ್ವಾ । ಸನಾನಿ । ಜಠರೇಷು । ಧತ್ತೇ । ಅಂತಃ । ನವಾಸು । ಚರತಿ । ಪ್ರ -
ಸೂಷು ॥ ೧೦ ॥

ಸಾಯಣಭಾಷ್ಯಂ

ಧನ್ವನ್ ನಭಸಿ ಗಾತುಂ ಗಮನಶೀಲಮೂರ್ಮಿಮುದಕಸಂಘಮುಯಮಗ್ನಿಃ ಸ್ರೋತಃ ಕೃಣುತೇ । ಸ್ರೋತಸಾ ಪ್ರವಾಹರೂಪೇಣ ಯುಕ್ತಂ ಕರೋತಿ । ಶುಕ್ರೈರ್ನಿರ್ಮಲೈರೂರ್ಮಿಭಿಸ್ತ್ರೈರ್ಜಲಸಂಘೈಃ ಕ್ಷಾಂ ಭೂಮಿಮಭಿ ನಕ್ಷತಿ । ಅಭಿವ್ಯಾಪ್ನೋತಿ । ಸ್ವತೇಜೋಭಿರಂತರಿಕ್ಷೇ ಜಲಸಂಘಮುತ್ಪಾದ್ಯ ತೇನ ಸರ್ವಾಂ ಭೂಮಿಮಭಿವರ್ಷತೀತ್ಯರ್ಥಃ । ಪಶ್ಚಾದ್ವಿಶ್ವಾ ಸರ್ವಾಣಿ ಸನಾನಿ । ಅನ್ನನಾಮೈತತ್ । ಸರ್ವಾಣ್ಯನ್ನಾನಿ ಜಠರೇಷು ಧತ್ತೇ । ಅವಸ್ಥಾಪಯತಿ । ತದರ್ಥಂ ನವಾಸು ವೃಷ್ಟ್ಯನಂತರಮುತ್ಪನ್ನಾಸು ಪ್ರಸೂಷು ಸರ್ವೇಷಾಮನ್ನಾನಾಂ ಪ್ರಸವಿತ್ರೀಷ್ವೋಷಧೀಷು ಪಾಕಾರ್ಥಮಂತಶ್ಚರತಿ । ಮಧ್ಯೇ ವರ್ತತೇ । ಅಂತರವಸ್ಥಿತೇನ ಭೌಮಾಗ್ನಿನಾ ಸರ್ವಾ ಓಷಧಯಃ ಪಚ್ಯಂತೇ ॥ ಧನ್ವನ್ । ಧಿವಿ ಧವಿ ಧನಿ ಗತ್ಯರ್ಥಾಃ । ಇದಿತ್ವಾನ್ನುಮ್ । ಕನಿನ್ಯುವೃಷೀತ್ಯಾದಿನಾ ಕನಿನ್ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ । ಧನ್ವಾಂತರಿಕ್ಷಂ ಧನ್ವಂತ್ಯಸ್ಮಾದಾಪ ಇತಿ ಯಾಸ್ಕಃ । ನಿ. ೫.೫ । ನಿತ್ತ್ವಾದಾದ್ಯುದಾತ್ತತ್ವಂ । ಗಾತುಂ । ಗಾಙ್ ಗತೌ । ಕಮಿಮನಿಜನೀತ್ಯಾದಿನಾ ತುಪ್ರತ್ಯಯಃ । ಊರ್ಮಿಂ । ಅರ್ತೇರೂಚೇತಿ ಮಿಪ್ರತ್ಯಯಃ । ನಕ್ಷತಿ । ನಕ್ಷ ಗತೌ ॥

॥ ಪ್ರತಿಪದಾರ್ಥ ॥

( ಅಗ್ನಿಃ— ಅಗ್ನಿಯು ) **ಧನ್ವನ್**— ಅಂತರಿಕ್ಷದಲ್ಲಿ । **ಗಾತುಂ**— ಸಂಚರಿಸುವ ಸ್ವಭಾವವುಳ್ಳ । **ಊರ್ಮಿಂ**— ಉದಕಸಂಘಾತವನ್ನು । **ಸ್ರೋತಃ**— ಪ್ರವಾಹ ರೂಪವುಳ್ಳದ್ದನ್ನಾಗಿ (ಹರಿಯುವಂತೆ) । **ಕೃಣುತೇ**— ಮಾಡುತ್ತಾನೆ । **ಶುಕ್ರೈಃ**— ನಿರ್ಮಲಗಳಾದ । **ಊರ್ಮಿಭಿಃ**— ಆ ಜಲಸಮೂಹಗಳಿಂದ । **ಕ್ಷಾಂ**— ಭೂಮಿಯನ್ನು । **ಅಭಿ ನಕ್ಷತಿ**— ಸಂಪೂರ್ಣವಾಗಿ (ನೀರಿನಿಂದ) ಆವರಿಸುವಂತೆ ಮಾಡುತ್ತಾನೆ. (ಅನಂತರ) । **ವಿಶ್ವಾ ಸನಾನಿ**— ಸಮಸ್ತವಾದ ಅನ್ನವನ್ನೂ । **ಜಠರೇಷು**— ಉದರಗಳಲ್ಲಿ । **ಧತ್ತೇ**— ಇರಿಸುತ್ತಾನೆ । ( ಅದಕ್ಕಾಗಿ ) **ನವಾಸು**—(ಮಳೆಯಾದನಂತರ) ಹೊಸದಾಗಿ ಹುಟ್ಟಿದ । **ಪ್ರಸೂಷು**—(ಸಕಲ) ಸಸ್ಯಗಳಲ್ಲಿಯೂ । **ಅಂತಃ ಚರತಿ**— ಒಳಗೆ ಸಂಚರಿಸುತ್ತಾನೆ ॥

ಭಾವಾರ್ಥ

ಅಗ್ನಿಯು ಅಂತರಿಕ್ಷದಲ್ಲಿ ಸಂಚರಿಸುವ ಸ್ವಭಾವವುಳ್ಳ ಜಲಸಂಘಾತವನ್ನು ಪ್ರವಾಹರೂಪದಿಂದ ಹರಿಯುವಂತೆ ಮಾಡುತ್ತಾನೆ. ನಿರ್ಮಲವಾದ ಆ ಅಲೆಯ ರೂಪದ ಜಲಸಮೂಹಗಳಿಂದ ಭೂಮಿಯನ್ನು ಸಂಪೂರ್ಣವಾಗಿ ನೀರಿನಿಂದ ತೊಯ್ಯುವಂತೆ ಮಾಡುತ್ತಾನೆ. ಅನಂತರ ಸಮಸ್ತವಾದ ಅನ್ನವನ್ನು ಪಶ್ವಾದಿಗಳ ಉದರದಲ್ಲಿ ಇರಿಸಿ ಅದರ ಪಕ್ವಕ್ಕಾಗಿ ಮಳೆಯಾದನಂತರ ಹೊಸದಾಗಿ ಹುಟ್ಟಿದ ಸಕಲ ಸಸ್ಯಗಳ ಅಂತಃ ಪ್ರದೇಶಗಳಲ್ಲಿಯೂ ಸಂಚರಿಸುತ್ತಾನೆ.

## English Translation

He causes the waters to flow in a torrent through the sky, and with those pure waves he inundates the earth ; he gathers all (articles of) food in the stomach, and for that purpose sojourns in the news-prung parents (of the grain).

॥ ವಿಶೇಷವಿಷಯಗಳು ॥

**ಧನ್ವನ್**—**ಅಂಬರಂ, ವಿಯತ್, ವ್ಯೋಮ** ಇತ್ಯಾದಿ ೧೬ ಅಂತರಿಕ್ಷ ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೧೦) **ಧನ್ವನ್** ಎಂಬ ಪದಕ್ಕೆ ಅಂತರಿಕ್ಷವೆಂದರ್ಥ. **ಧನ್ವಾಂತರಿಕ್ಷಂ ಧನ್ವಂತ್ಯಸ್ಮಾದಾಪಃ ।** ಇಲ್ಲಿಂದ ಉದಕಗಳು ಹರಿಯುವುದರಿಂದ ಧನ್ವವೆಂಬ ಹೆಸರು ಪ್ರಸಿದ್ಧವಾಗಿದೆ.

**ಯಃ ಪರಸ್ಯಾಃ ಪರಾವತಸ್ತಿರೋ ಧನ್ವಾತಿರೋಚತೇ ।**
(ಋ. ಸಂ. ೧೦-೧೮೭-೨)

ಎಂಬ ವಾಕ್ಯವನ್ನು ನಿರುಕ್ತಕಾರರು ಉದಹರಿಸಿ **ಧನ್ವ** ಶಬ್ದದ ನಿರ್ವಚನವನ್ನು ಮಾಡುತ್ತಾರೆ (ನಿ. ೫-೫).

**ಊರ್ಮಿಂ**—**ಊರ್ಮಿರೂರ್ಣೋತೇಃ ।** ಆಚ್ಛಾದನ ಮಾಡು, ಮುಚ್ಚು, ಆವರಿಸು ಎಂಬ ಅರ್ಥದ ಊರ್ಣ್ ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ನಿರುಕ್ತಕಾರರ ಮತ. (ನಿ. ೫-೨೩) (ಅರ್ತೇರುಚ್ಚ ಎಂದು ಉಣಾದಿ ಸೂತ್ರವು ಪಠಿತವಾಗಿದೆ. 484) ತರಂಗವೆಂಬ (ಅಲೆ) ಅರ್ಥದಲ್ಲಿ ಉಪಯೋಗಿಸಿರುವಂತೆಯೇ, ಜಲಸಂಘಾತ, ಜಲಸಮೂಹವೆಂಬ ಅರ್ಥದಲ್ಲಿಯೂ ಉಪಯೋಗಿಸಿದೆ. ಜಲಸಂಘಾತವೆಂದರ್ಥ.

**ಕ್ಷಾಂ**—**ಗೌಃ, ಗ್ಮಾ, ಜ್ಮಾ** ಇತ್ಯಾದಿ ೨೧ ಪೃಥಿವೀನಾಮಗಳಲ್ಲಿ ಪಠಿತವಾಗಿರುವುದರಿಂದ (೨-೫) ಪೃಥ್ವಿಯೆಂದು ಅರ್ಥ. **ಕ್ಷಿಯತೇರ್ನಿವಾಸಕರ್ಮಣಃ ।** (ನಿ. ೨-೬) ವಾಸಮಾಡು ಎಂದರ್ಥವುಳ್ಳ **ಕ್ಷಿ** ಧಾತುವಿನಿಂದ ನಿಷ್ಪನ್ನವಾಗಿ, ಅದರಮೇಲೆ ಎಲ್ಲರೂ ವಾಸಮಾಡುವುದರಿಂದ ಪೃಥ್ವಿಗೆ **ಕ್ಷಾ** ಎಂಬ ಹೆಸರು. **ಕ್ಷಾಂ**—ಪೃಥ್ವಿಯನ್ನು.

**ಅಭಿ ನಕ್ಷತಿ**—**ಇನ್ವತಿ, ನಕ್ಷತಿ, ಆಕ್ಷಾಣಃ** ಇತ್ಯಾದಿ ೧೦ ವ್ಯಾಪ್ತಿಕರ್ಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೦) **ಅಭಿನಕ್ಷತಿ**ಯೆಂಬ ಪದಕ್ಕೆ ಸುತ್ತಲೂ ವ್ಯಾಪಿಸು, ಸುತ್ತುವರಿ ಎಂದರ್ಥ.

**ಪ್ರ ಪರ್ವತಾ ಅನವಂತ ಪ್ರ ಗಾವಃ ಪ್ರ ಬ್ರಹ್ಮಾಣೋ ಅಭಿನಕ್ಷಂತ ಇಂದ್ರಂ ।**
(ಋ. ಸಂ. ೮-೯೬-೫)

**ಸರಸ್ವತೀಂ ಯಾಂ ಪಿತರೋ ಹವಂತೇ ದಕ್ಷಿಣಾ ಯಜ್ಞಮಭಿನಕ್ಷಮಾಣಾಃ ।**
( ಋ. ಸಂ. ೧೦-೧೭-೯ )

ಇತ್ಯಾದಿ ಸಂದರ್ಭಗಳಲ್ಲಿ **ಅಭಿನಕ್ಷಂತಃ, ಅಭಿನಕ್ಷಮಾಣಾಃ** ಎಂದರೆ ಸುತ್ತುವರಿದು ನಿಂತುಕೊಂಡರು ಎಂದರ್ಥ. ಇಲ್ಲಿಯೂ ಸಹ ನೀರು ಪೃಥ್ವಿಯನ್ನೆಲ್ಲಾ ಆವರಿಸುತ್ತದೆ ಎಂದಭಿಪ್ರಾಯ.

**ಸನಾನಿ**—**ಅನ್ನನಾಮೈತತ್ । ಸಕಲಾನ್ಯನ್ನಾನಿ ।** ಸಮಸ್ತವಾದ ಅನ್ನವನ್ನು ಎಂದರ್ಥವು

॥ ವ್ಯಾಕರಣಪ್ರಕಿಯಾ ॥

ಧನ್ವನ್—ಧಿವಿ, ಜವಿ, ಧನಿ, ಗತ್ಯರ್ಥಾಃ. ಇದಿತ್ತ್ವಾದುದರಿಂದ **ಇದಿತೋನುಮ್ ಧಾತೋಃ**—ಎಂಬುದರಿಂದ ನುಮಾಗಮ. **ಕನಿನ್ಯುವೃಷಿ**—ಎಂಬುದರಿಂದ ಕನಿನ್ ಪ್ರತ್ಯಯ. ಧನ್ವನ್ ಶಬ್ದವಾಗುತ್ತದೆ. ಇದಕ್ಕೆ ಸಪ್ತಮೀ ಏಕವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲುಕ್. **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ಧನ್ವಾಂತರಿಕ್ಷಂ ಧನ್ವಂತ್ಯಸ್ಮಾದಾಪಃ** (ನಿರು. ೫-೫) ಇತಿ ಯಾಸ್ಕಃ (ನೀರು ಇದರಿಂದ ಬೀಳುವುದರಿಂದ ಧನ್ವನ್ ಎಂದರೆ ಆಕಾಶ)

**ಕೃಣುತೇ** — ಕೃವಿ ಹಿಂಸಾಕರಣಯೋಶ್ಚ. ಧಾತು. ಇದೇ ಸೂಕ್ತದ ೮ ನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

**ಗಾತುಮ್**—ಗಾಙ್ ಗತೌ ಧಾತು. **ಕಮಿಮನಿಜನಿ**— ಎಂಬುದರಿಂದ ಇದಕ್ಕೆ ತುಪ್ರತ್ಯಯ. ಗಾತು ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಊರ್ಮಿಮ್** — ಋ ಗತೌ ಧಾತು. **ಅರ್ತೇರೂಚ** (ಉ. ಸೂ. ೪-೪೪) ಎಂಬುದರಿಂದ ಮಿಪ್ರತ್ಯಯ. ತತ್ಸಂನಿಯೋಗದಿಂದ ಧಾತುವಿಗೆ ಊಕಾರಾದೇಶ. **ಉರಣ್ರಪರಃ**—ಪರಿಭಾಷೆಯಿಂದ ಋಕಾರಸ್ಥಾನಕ್ಕೆ ಬರುವುದರಿಂದ ರಪರವಾಗಿ ಬರುತ್ತದೆ. ಊರ್ಮಿ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕವಚನ ಅಮ್ ಪರವಾದಾಗ **ಅಮಿಪೂರ್ವಃ**—ಎಂಬುದರಿಂದ ಪೂರ್ವರೂಪ ಏಕಾದೇಶವಾಗಿ ಬರುತ್ತದೆ.

**ನಕ್ಷತಿ**—ನಕ್ಷ ಗತೌ. ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ವಿಶ್ವಾ—ವಿಶ್ವಾನಿ ಎಂದು ನಪುಂಸಕದಲ್ಲಿ ರೂಪವಾದಾಗ ಛಂದಸ್ಸಿನಲ್ಲಿ **ಶೇಶ್ಛಂದಸಿ ಬಹುಲಮ್**—(ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ಧತ್ತೇ** ಡುಧಾಞ್ ಧಾರಣಪೋಷಣಯೋಃ ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಟಿತಆತ್ಮನೇಪದಾನಾಂ**—ಸೂತ್ರದಿಂದ ಟಿಗೆ ಏತ್ವ. **ಜುಹೋತ್ಯಾದಿಭ್ಯಃ ಶ್ಲುಃ**—ಎಂಬುದರಿಂದ ಶ್ಲು ವಿಕರಣ. **ಶ್ಲೌ**—ಸೂತ್ರದಿಂದ ಧಾತುವಿಗೆ ದ್ವಿತ್ವ. ಧಾಧಾ-ತೇ ಎಂದಿರುವಾಗ ಅಭ್ಯಾಸಕ್ಕೆ **ಹ್ರಸ್ವಃ**—**ಅಭ್ಯಾಸೇ ಚರ್ಚ**—ಸೂತ್ರದಿಂದ ಜಶ್ತ್ವ. **ಶ್ನಾಭ್ಯಸ್ತಯೋರಾತಃ**—(ಪಾ. ಸೂ. ೬-೪-೧೧೨) ಎಂಬುದರಿಂದ ಙಿತ್ಪ್ರತ್ಯಯ ಪರದಲ್ಲಿರುವುದರಿಂದ ಧಾತುವಿನ ಆಕಾರಕ್ಕೆ ಲೋಪ. **ದಧಸ್ತಥೋಶ್ಚ**—(ಪಾ. ಸೂ. ೮-೨-೩೮) ದ್ವಿರುಕ್ತವಾದ ಝಷಂತವಾದ ಧಾಧಾತುವಿನ ಬಶಿಗೆ ಭಷ್ ಭಾವವು ತಕಾರಥಕಾರ ಪರವಾದಾಗ ಬರುತ್ತದೆ. ಆಗ ಅಭ್ಯಾಸದ ದಕಾರಕ್ಕೆ ಧಕಾರಾದೇಶ. ಧಾತುವಿನ ಧಕಾರಕ್ಕೆ ಮೊದಲು **ಖರಿಚ**—ಎಂಬುದರಿಂದ ಚರ್ತ್ವ. ಧತ್ತೇ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ.

**ಪ್ರಸೂಷು** — ಷೂಙ್ ಪ್ರಾಣಿಪ್ರಸವೇ. ಧಾತು. ದಿವಾದಿ. ಪ್ರ ಉಪಪದವಾಗಿರುವಾಗ ಇದಕ್ಕೆ ಕ್ವಿಪ್ ಪ್ರತ್ಯಯ. ಆದಿಯ ಷಕಾರಕ್ಕೆ ಸತ್ವ. ಕ್ವಿಪ್ ಸರ್ವಲೋಪವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಸಮಾಸದಲ್ಲಿ **ಗತಿಕಾರಕೋಪಪದಾತ್ ಕೃತ್**—ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಸಪ್ತಮೀ ಬಹುವಚನಾಂತರೂಪ. ‖ ೧೦ ‖

———— :o: ————

ಸಂಹಿತಾಪಾಠಃ

ಏವಾ ನೋ ಅಗ್ನೇ ಸಮಿಧಾ ವೃಧಾನೋ ರೇವತ್ಪಾವಕ ಶ್ರವ-
ಸೇ ವಿ ಭಾಹಿ ।
ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ
ಪೃಥಿವೀ ಉತ ದ್ಯೌಃ ‖ ೧೧ ‖

ಪದಪಾಠಃ

ಏವ । ನಃ । ಅಗ್ನೇ । ಸಂಽಇಧಾ । ವೃಧಾನಃ । ರೇವತ್ । ಪಾವಕ । ಶ್ರವಸೇ । ವಿ । ಭಾಹಿ ।
ತತ್ । ನಃ । ಮಿತ್ರಃ । ವರುಣಃ । ಮಮಹಂತಾಂ । ಅದಿತಿಃ । ಸಿಂಧುಃ । ಪೃಥಿವೀ । ಉತ । ದ್ಯೌಃ ‖ ೧೧ ‖

ಸಾಯಣಭಾಷ್ಯಂ

ಹೇ ಪಾವಕ ಶೋಧಕಾಗ್ನೇ ಸಮಿಧಾಸ್ಮಾಭಿರ್ದತ್ತೇನ ಸಮಿದಾದಿದ್ರವ್ಯೇಣೈವಮುಕ್ತ-ಪ್ರಕಾರೇಣ ವೃಧಾನೋ ವರ್ಧಮಾನಃ ಸನ್ ರೇವತ್ ರಯಿಮತೇ ಧನಯುಕ್ತಾಯ ನೋಽಸ್ಮಾಕಂ ಶ್ರವಸೇಽನ್ನಾಯ ವಿ ಭಾಹಿ । ವಿಶೇಷೇಣ ದೀಪ್ಯಸ್ವ । ಅಸ್ಮಾಕಂ ತಾದೃಶಮನ್ನಂ ಪ್ರಯಚ್ಛೇತ್ಯರ್ಥಃ ।

ನೋಽಸ್ಮಾಕಂ ತದನ್ನಂ ಮಿತ್ರಾದಯೋ ಮಮಹಂತಾಂ । ಪೂಜಯಂತಾಂ । ರಕ್ಷಂತ್ವಿತ್ಯರ್ಥಃ । ಉತ-ಶಬ್ದಃ ಸಮುಚ್ಚಯೇ । ಪೃಥಿವೀ ಚ ದ್ಯೌಶ್ಚೇತ್ಯರ್ಥಃ ॥ ಏವ । ನಿಪಾತಸ್ಯ ಚೇತಿ ಸಂಹಿತಾಯಾಂ ದೀರ್ಘಃ । ವೃಧಾನಃ । ವೃಧೇರಂತರ್ಭಾವಿತಣ್ಯರ್ಥಾತ್ತಾಚ್ಛೀಲಿಕಶ್ಚಾನಶ್ । ಬಹುಲಂ ಛಂದಸೀತಿ ಶಪೋ ಲುಕ್ । ಚಾನಶಃ ಸಾರ್ವಧಾತುಕತ್ವೇನ ಙಿತ್ತ್ವಾಲ್ಲಘೂಪಧಗುಣಾಭಾವಃ । ಲಸಾರ್ವಧಾತುಕತ್ವಾಭಾವೇ-ನಾನುದಾತ್ತತ್ವಾಭಾವೇ ಚಿತ್ಸ್ವರ ಏವ ಶಿಷ್ಯತೇ । ರೇವತ್ । ರಯಿಶಬ್ದಾನ್ಮತುಪ್ । ರಯೇರ್ಮತೌ ಬಹು-ಲಮಿತಿ ಸಂಪ್ರಸಾರಣಂ । ಛಂದಸೀರ ಇತಿ ಮತುಪೋ ವತ್ವಂ । ರೇಶಬ್ದಾಚ್ಚ । ಕಾ. ೬ ೧-೧೭೬-೧ । ಇತಿ ಮತುಪ ಉದಾತ್ತತ್ವಂ । ಸುಪಾಂ ಸುಲುಗಿತಿ ಚತುರ್ಥ್ಯಾ ಲುಕ್ ॥

ಪ್ರತಿಪದಾರ್ಥ

**ಪಾವಕ**—(ಎಲ್ಲರನ್ನೂ) ಶುದ್ಧಿಮಾಡುವ । **ಅಗ್ನೇ**—ಎಲೈ ಅಗ್ನಿಯೇ । **ಸಮಿಧಾ**—(ನಮ್ಮಿಂದ ಅರ್ಪಿತವಾದ) ಸಮಿದಾದಿದ್ರವ್ಯಗಳಿಂದ । **ಏವ**—ಹಿಂದೆ ವರ್ಣಿಸಿದಂತೆ । **ವೃಧಾನಃ**—ವೃದ್ಧಿಯಾಗಿ ಬೆಳೆಯುತ್ತಾ । **ರೇವತ್**—ಧನದಿಂದಕೂಡಿದ । **ನಃ**—ನಮ್ಮ । **ಶ್ರವಸೇ**—ಅನ್ನಕ್ಕಾಗಿ । **ವಿ ಭಾಹಿ**—ಚೆನ್ನಾಗಿ ಪ್ರಕಾಶಿಸು । **ನಃ**—ನಮ್ಮ । **ತತ್**—ಆ ಅನ್ನವನ್ನು । **ಮಿತ್ರಃ**—ಮಿತ್ರನೂ । **ವರುಣಃ**—ವರುಣನೂ । **ಅದಿತಿಃ**—ಅದಿತಿಯೂ । **ಸಿಂಧುಃ**—ಸಾಗರವೂ । **ಪೃಥಿವೀ**—ಪೃಥಿವಿಯೂ । **ದ್ಯೌಃ**—ದ್ಯುಲೋಕವೂ । **ಮಮಹಂತಾಂ**—ರಕ್ಷಿಸಲಿ.

ಭಾವಾರ್ಥ

ಎಲ್ಲರನ್ನೂ ಶುದ್ಧಿಮಾಡುವ ಎಲೈ ಅಗ್ನಿಯೇ, ನಮ್ಮಿಂದ ಅರ್ಪಿತವಾದ ಸಮಿದಾದಿ ದ್ರವ್ಯಗಳಿಂದ ಹಿಂದೆ ವರ್ಣಿಸಿದಂತೆ ವೃದ್ಧಿಯಾಗಿ ಬೆಳೆಯುತ್ತಾ ಧನದಿಂದಕೂಡಿದ ನಮ್ಮ ಅನ್ನಕ್ಕಾಗಿ ಚೆನ್ನಾಗಿ ಪ್ರಕಾಶಿಸು. ನಮ್ಮ ಅನ್ನವನ್ನು ಮಿತ್ರನೂ, ವರುಣನೂ, ಅದಿತಿಯೂ, ಸಾಗರವೂ, ಪೃಥಿವಿಯೂ ಮತ್ತು ದ್ಯುಲೋಕವೂ ಸಹ ರಕ್ಷಿಸಲಿ

English Translation

Agni, who is the purifier, growing with the fuel we have supplied, blaze for the sake of (securing) food to us who are possessed of wealth ; and may Mitra, Varuna, Aditi—ocean, earth and heaven, preserve it to us

॥ ವಿಶೇಷವಿಷಯಗಳು ॥

**ಸಮಿಧಾ ವೃಧಾನಃ—ಅಸ್ಮಾಭಿರ್ದತ್ತೇನ ಸಮಿದಾದಿದ್ರವ್ಯೇಣ ವರ್ಧಮಾನಃ ಸನ್** । ನಮ್ಮಿಂದ ಅರ್ಪಿತವಾದ ಸಮಿದಾದಿದ್ರವ್ಯಗಳಿಂದ ವರ್ಧಿತನಾಗಿ ನಮಗೆ ಅನ್ನವನ್ನು ಅನುಗ್ರಹಿಸು ಎಂದು ಪ್ರಾರ್ಥಿಸಿದೆ. ಇದು ಸಾಯಣರ ವಿವರಣೆ. ಸ್ಕಂದಸ್ವಾಮಿಗಳು **ಸ್ತುತಿರತ್ರಾಭಿಪ್ರೇತಾ ನ ಕಾಷ್ಠಮಯೀ । ಸಮಿತ್** ಶಬ್ದಕ್ಕೆ ಇಲ್ಲಿ ಕಾಷ್ಠಗಳೆಂದಲ್ಲ, ಸ್ತುತಿಯೆಂಬರ್ಥ ಎಂದು ವ್ಯಾಖ್ಯಾನ ಮಾಡುತ್ತಾರೆ. ಇವುಗಳಲ್ಲಿ ಮೊದಲನೆಯ ಅರ್ಥವನ್ನು ಹೇಳುವುದರಲ್ಲಿ ಅನುಚಿತವೇನೂ ಕಾಣಲಿಲ್ಲ.

**ಯಸ್ತ ಇಧ್ಮಂ ಜಭರತ್ಸಿಷ್ವಿದಾನೋ ಮೂರ್ಧಾನಂ ವಾ ತತಪತೇ ತ್ವಾಯಾ ।**
**ಭುವಸ್ತಸ್ಯ ಸ್ವತವಾಁಃ ಪಾಯುರಗ್ನೇ ವಿಶ್ವಸ್ಮಾತ್ಸೀಮಘಾಯತ ಉರುಷ್ಯ ॥**
(ಋ. ಸಂ. ೪-೨-೬).

ಯಾವ ಯಜಮಾನನು ತನ್ನ ಶರೀರವನ್ನು ಶ್ರಮಪಡಿಸಿಕೊಂಡು, ತಲೆಯನ್ನೂ ಕಾಯಿಸಿಕೊಂಡು ಅಗ್ನಿಯ ಪ್ರಜ್ವಲನಕ್ಕಾಗಿ ಸಮಿದಾದಿಕಾಷ್ಠಗಳನ್ನು ತಂದು ಅಗ್ನಿಯನ್ನು ಸೇವಿಸುತ್ತಾನೆಯೋ ಅವನಿಗೆ ಶ್ರಮಯುಕ್ತವಾದ ಪೂಜೆಯ ಫಲವಾಗಿ ಅಗ್ನಿಯು ಪ್ರಭೂತವಾದ ಸಂಪತ್ತನ್ನೊದಗಿಸುವುದಲ್ಲದೇ ಹಿಂಸಾಕಾರಕರಾದ ಸಕಲ ಶತ್ರುಗಳಿಂದಲೂ ಅವನನ್ನು ರಕ್ಷಿಸುತ್ತಾನೆ, ಎಂದು ಕಾಷ್ಠಸಂಚಯನವನ್ನು ಪ್ರಶಂಸಿಸಿದೆ. ಅದೂ ಅಲ್ಲದೇ,

**ನಹಿ ಮೇ ಅಸ್ತ್ಯಘ್ನ್ಯಾ ನ ಸ್ವಧಿತಿರ್ವನನ್ವತಿ ।**
**ಅಥೈತಾದೃಗ್ಭರಾಮಿತೇ ॥**
(ಋ. ಸಂ. ೮-೧೦೨-೧೯).

**ಯದಗ್ನೇ ಕಾನಿ ಕಾನಿ ಚಿದಾ ತೇ ದಾರೂಣಿ ದಧ್ಮಸಿ ।**
**ತಾ ಜುಷಸ್ವ ಯವಿಷ್ಠ್ಯ ॥**
(ಋ. ಸಂ. ೮-೧೦೨-೨೦).

ಎಂಬುದಾಗಿ ಯಜಮಾನನು ಅಗ್ನಿಗೆ ನ್ಯಾಯವಾಗಿ ಅರ್ಪಿಸಬೇಕಾದ ಆಜ್ಯಾಹುತಿಗೆ ಪಾತ್ರವಾಗಿರತಕ್ಕ ಒಳ್ಳೆಯ ಗೋವಿಲ್ಲದಿರುವುದರಿಂದಲೂ, ಶ್ರೇಷ್ಠವಾದ ಕಾಷ್ಠಗಳನ್ನು ಕತ್ತರಿಸುವ ಆಯುಧಗಳಿಲ್ಲದಿರುವುದರಿಂದಲೂ ತನ್ನ ಶಕ್ತಿಗೆ ತಕ್ಕಂತೆ ಸಂಪಾದಿಸಿದ ಕಾಷ್ಠಗಳ ಅರ್ಪಣೆಯಿಂದಲೇ ಅಗ್ನಿಯು ತನ್ನ ತೃಪ್ತಿಯನ್ನು ಸೂಚಿಸಬೇಕೆಂದು ಪ್ರಾರ್ಥಿಸಿದೆ. ಆದುದರಿಂದ ಇಲ್ಲಿ ಸಾಯಣರು ಹೇಳುವ ಅರ್ಥವೂ ಸಮಂಜಸವಾಗಿಯೇ ಇದೆ.

**ರೇವತ್—ಧನಯುಕ್ತಮನ್ನಂ ಯಥಾ ಭವತಿ ತಥಾ ।** ಪುತ್ರಾದಿ ಸಂಪತ್ತಿನೊಡಗೂಡಿದ ಅನ್ನವನ್ನು, ಅಥವಾ ಅನ್ನಕ್ಕಾಗಿ.

**ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ ಪೃಥಿವೀ ಉತ ದ್ಯೌಃ**—ಅಗ್ನಿಯಿಂದ ಅನುಗೃಹೀತವಾದುದೂ, ಧನದಿಂದ ಕೂಡಿದುದೂ ಆದ ಅನ್ನವನ್ನು ಮಿತ್ರಾವರುಣಾದಿ ದೇವತೆಗಳೆಲ್ಲರೂ ನಮ್ಮ ಭೋಗಕ್ಕೆ ಯೋಗ್ಯವಾದದ್ದನ್ನಾಗಿಯೂ, ಹವಿರಾದ್ಯರ್ಪಣೆಗೋಸ್ಕರ ಪೂಜ್ಯವಾದದ್ದನ್ನಾಗಿಯೂ ಮಾಡಲಿ ಎಂದು ಸರ್ವದೇವತಾಕವಾದ ಪ್ರಾರ್ಥನೆ. ಸೂಕ್ತದ ಕೊನೆಯಲ್ಲಿ ಇಂತಹ ಪ್ರಾರ್ಥನೆಯು ಉದರ್ಕವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವುದಾಗಿಯೂ ಇಂತಹ ಕೃತಿಯಲ್ಲಿ ಭರದ್ವಾಜಾದಿ ಋಷಿಗಳಲ್ಲೆಲ್ಲಾ ಕುತ್ಸನ ಕೃತಿಯಲ್ಲಿಯೇ ಅಧಿಕವಾದ ವೈಶಿಷ್ಟ್ಯವಿದೆಯೆಂದೂ ಬೃಹದ್ದೇವತಾಕಾರರ ಪ್ರಶಂಸೆಯನ್ನು ಉದಹರಿಸಿ ಋ. ಸಂ. ೧-೯೪ ನೇ ಸೂಕ್ತದ ಕೊನೆಯ ಋಕ್ಕಿನ ವಿವರಣೆಯಲ್ಲಿ ಹೇಳಿದೆ.

ವ್ಯಾಕರಣಪ್ರಕ್ರಿಯಾ

**ಇವ—ಚಾದಯೋಽಸತ್ತ್ವೇ**—ಎಂಬ ಸೂತ್ರದಿಂದ ಇದು ನಿಪಾತಸಂಜ್ಞೆಯನ್ನು ಹೊಂದುತ್ತದೆ. **ನಿಪಾತಸ್ಯ ಚ**—(ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಸಮಿಧಾ**—ಞಿಇಂಧೀ ದೀಪ್ತೌ. ಧಾತು. ಸಂ ಉಪಪದವಾಗಿರುವಾಗ ಇದಕ್ಕೆ ಕ್ವಿಪ್ ಪ್ರತ್ಯಯ. ಪ್ರತ್ಯಯ ಕಿತ್ತಾದುದರಿಂದ **ಅನಿದಿತಾಂಹಲ**—ಎಂಬುದರಿಂದ ಉಪಧಾ ನಕಾರಲೋಪ. ಸಮಿಧ್ ಎಂದು ಧಕಾರಾಂತ ಶಬ್ದವಾಗುತ್ತದೆ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ತೃತೀಯಾಏಕವಚನಾಂತರೂಪ.

**ವೃಧಾನಃ**—ವೃಧು ವೃದ್ಧೌ ಧಾತು. ಪ್ರೇರಣಾ ತೋರುವುದರಿಂದ ಅಂತರ್ಭಾವಿತ ಣ್ಯರ್ಥಕವಾದ ಈ ಧಾತುವಿಗೆ **ತಾಚ್ಛೀಲ್ಯವಯೋ**—(ಪಾ. ಸೂ. ೩-೨-೧೨೯) ಎಂಬುದರಿಂದ ಚಾನಶ್ ಪ್ರತ್ಯಯ. ಶಿತ್ತಾದುದರಿಂದ ಶಪ್ ಪ್ರಾಪ್ತವಾದಾಗ **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಲುಕ್. ಆಗ **ಸಾರ್ವಧಾತುಕಮಪಿತ್**—(ಪಾ. ಸೂ. ೧-೨-೪) ಎಂಬುದರಿಂದ ಚಾನಶಿಗೆ ಙಿದ್ವದ್ಭಾವ ಬರುವುದರಿಂದ **ಕ್ಙಿತಿಚ**—(ಪಾ. ಸೂ. ೧-೧-೫) ಎಂಬುದರಿಂದ ಗುಣನಿಷೇಧ ಬರುವುದರಿಂದ ಪ್ರತ್ಯಯನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಚಾನಶ್ ಲಸ್ಥಾನಿಕವಾದ ಸಾರ್ವಧಾತುಕವಲ್ಲದ್ದರಿಂದ ಅನುದಾತ್ತೇತ್ವ ನಿಬಂಧನವಾದ ಅನುದಾತ್ತಸ್ವರ ಬರುವುದಿಲ್ಲ. ಚಿತ್ತಾದುದರಿಂದ **ಚಿತಃ**(ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ರೇವತ್**—ರಯಿಃ ಅಸ್ಯ ಅಸ್ತಿ ಇತಿ ರೇವತ್. **ತದಸ್ಯಾಸ್ತಿ**—ಸೂತ್ರದಿಂದ ಮತುಪ್ ಪ್ರತ್ಯಯ. ಮತುಪ್ ಪರವಾದಾಗ **ರಯೇರ್ಮತೌಬಹುಲಮ್**—ಎಂಬ ವಚನದಿಂದ ಛಂದಸ್ಸಿನಲ್ಲಿ ರಯಿ ಶಬ್ದಕ್ಕೆ ಸಂಪ್ರಸಾರಣ. ಇಲ್ಲಿ ಸಂಪ್ರಸಾರಣವನ್ನು ಹೊಂದುವವುಗಳು ಎರಡು ಇರುವುದರಿಂದ **ನಸಂಪ್ರಸಾರಣೇ ಸಂಪ್ರಸಾರಣಮ್**—(ಪಾ. ಸೂ. ೬-೧-೩೭) ಎಂಬ ಸೂತ್ರದಿಂದ ಪೂರ್ವಕ್ಕೆ ಸಂಪ್ರಸಾರಣ ಬರುವುದಿಲ್ಲ. ಯಕಾರಕ್ಕೆ ಇಕಾರರೂಪ ಸಂಪ್ರಸಾರಣ ಬಂದಾಗ **ಸಂಪ್ರಸಾರಣಾಚ್ಚ**—ಎಂಬುದರಿಂದ ಪರದ ಇಕಾರಕ್ಕೆ ಪೂರ್ವರೂಪ. ರೇಫೋತ್ತರಾಕಾರಕ್ಕೆ ಇಕಾರಪರವಾದುದರಿಂದ **ಆದ್ಗುಣಃ**—ಸೂತ್ರದಿಂದ ಗುಣ. **ಛಂದಸೀರಃ**—(ಪಾ. ಸೂ. ೮-೨-೧೫) ಎಂಬುದರಿಂದ ರೇ ಎಂಬುದರ ಪರದಲ್ಲಿರುವ ಮತುಪಿನ ಮಕಾರಕ್ಕೆ ವತ್ವ. ರೇವತ್ ಎಂದು ರೂಪವಾಗುತ್ತದೆ. ಮತುಪ್ ಪಿತ್ತಾದರೂ **ರೇ ಶಬ್ದಾಚ್ಚ** (ಕಾ. ೬-೧-೧೭೬-೧) ಎಂಬ ವಾರ್ತಿಕದಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ. ಇದಕ್ಕೆ ಚತುರ್ಥೀ ಏಕವಚನ ಪರವಾದಾಗ **ಸುಪಾಂ ಸುಲುಕ್**—ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಲುಕ್.

**ಪಾವಕ**—ಪೂಞ್ ಪವನೇ ಧಾತು. ಇದಕ್ಕೆ ಕರ್ತರಿಯಲ್ಲಿ ಣ್ವುಲ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಪ್ರತ್ಯಯಕ್ಕೆ ಅಕಾದೇಶ. ಣಿತ್ತಾದುದರಿಂದ **ಅಚೋಞ್ಣಿತಿ**—ಎಂಬುದರಿಂದ ಧಾತುವಿಗೆ ವೃದ್ಧಿ. ಅಕ್ ಪರದಲ್ಲಿರುವುದರಿಂದ ಆವಾದೇಶ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯಚ** (ಪಾ. ಸೂ· (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಭಾಹಿ**—ಭಾ ದೀಪ್ತೌ. ಧಾತು. ಲೋಣ್ಮಧ್ಯಮಪುರುಷ ಏಕವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಾಮಹಂತಾಮ್**—ಮಹ ಪೂಜಾಯಾಂ ಧಾತು. ಭ್ವಾದಿ. ಲೋಟ್ ಪ್ರಥಮಪುರುಷ ಬಹುವಚನದಲ್ಲಿ **ವ್ಯತ್ಯಯೋ ಬಹುಲಮ್**—ಎಂಬುದರಿಂದ ಆತ್ಮನೇಪದಪ್ರತ್ಯಯ (ಝ) ಬರುತ್ತದೆ. **ಝೋಽಂತಃ**—ಎಂಬುದರಿಂದ ಅಂತಾದೇಶ. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ**—ಎಂಬುದರಿಂದ

ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್‌ಶೇಷ. **ಅನ್ಯೇಷಾಮಪಿ ದೃಶ್ಯತೇ**—(ಪಾ. ಸೂ. ೬-೩-೧೩೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದ್ಯೌಃ**—ದಿವ್ ಶಬ್ದ. ಇದಕ್ಕೆ ಸು ಪರವಾದಾಗ **ದಿವಔತ್**—(ಪಾ. ಸೂ. ೭-೧-೮೪) ಔಕಾರಾಂತಾದೇಶ. ಯಣ್. ಪ್ರತ್ಯಯಸಕಾರಕ್ಕೆ ರುತ್ವವಿಸರ್ಗ. **ಅನಲ್ವಿಧೌ**—ಎಂದು ಅಲ್‌ವಿಧಿಯಲ್ಲಿ ಸ್ಥಾನಿವದ್ಭಾವ ನಿಷೇಧ ಮಾಡಿರುವುದರಿಂದ ಇಲ್ಲಿ ಔಕಾರಕ್ಕೆ ಸ್ಥಾನಿವದ್ಭಾವದಿಂದ ಹಲ್‌ತ್ವವನ್ನಾಶ್ರಯಿಸಿ ಸುಲೋಪ ಬರುವುದಿಲ್ಲ. ||೧೧||

———— :o: ————

# ತೊಂಭತ್ತಾರನೆಯ ಸೂಕ್ತವು

**ಸ ಪ್ರತ್ನಥೇತಿ ನವರ್ಚಂ ತೃತೀಯಂ ಸೂಕ್ತಂ ಕುತ್ಸಸ್ಯಾರ್ಷಂ ತ್ರೈಷ್ಟುಭಂ । ದ್ರವಿಣೋದಸ್ತ್ವಗುಣವಿಶಿಷ್ಟೋಽಗ್ನಿಃ ಶುದ್ಧಾಗ್ನಿರ್ವಾ ದೇವತಾ । ತಥಾ ಚಾನುಕ್ರಾಂತಂ । ಸ ಪ್ರತ್ನಥಾ ನವ ದ್ರವಿಣೋದಸ ಇತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋಃ ಪೂರ್ವಸೂಕ್ತೇನ ಸಹೋಕ್ತಃ ಸೂಕ್ತವಿನಿಯೋಗಃ ॥ ವ್ಯೂಢಸ್ಯ ದಶರಾತ್ರಸ್ಯ ಷಷ್ಠೇಽಹನ್ಯಾಗ್ನಿಮಾರುತ ಇದಂ ಸೂಕ್ತಂ ಜಾತವೇದಸ್ಯನಿವಿದ್ಧಾನಂ । ವ್ಯೂಳ್ಹೇ ಛಂದಸೀತಿ ಖಂಡೇ ಸೂತ್ರಿತಂ । ಸ ಪ್ರತ್ನಥೇತ್ಯಾಗ್ನಿಮಾರುತಂ । ಆ. ೮-೮ । ಇತಿ । ಸ ಪ್ರತ್ನಥಾ ಸಹಸಾ ಜಾಯಮಾನ ಇತಿ ಜಾತವೇದಸ್ಯಂ ಸಮಾನೋದರ್ಕಮಿತ್ಯಾದಿ ಬ್ರಾಹ್ಮಣಂ ॥ ಐ. ಬ್ರಾ. ೫-೧೫ ॥ ಮಹಾಪಿತೃಯಜ್ಞೇ ಸ್ವಿಷ್ಟಕೃತ್ಸ್ಥಾನೀಯಸ್ಯ ಕವ್ಯವಾಹನಸ್ಯ ಸ ಪ್ರತ್ನಥೇತ್ಯೇಷಾ ಯಾಜ್ಯಾ । ದಕ್ಷಿಣಾಗ್ನೇರಿತಿ ಖಂಡೇ ಸೂತ್ರಿತಂ । ಸ ಪ್ರತ್ನಥಾ ಸಹಸಾ ಜಾಯಮಾನ ಇತ್ಯಗ್ನಿಃ ಸ್ವಿಷ್ಟಕೃತ್ಕವ್ಯವಾಹನಃ । ಆ. ೨-೧೯ । ಇತಿ ॥**

ಅನುವಾದವು—**ಸ ಪ್ರತ್ನಥಾ** ಎಂಬ ಸೂಕ್ತವು ಪದಿನೈದನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕುತ್ಸ ಆಂಗಿರಸಃ ಎಂಬುವನೇ ಋಷಿಯು. ತ್ರಿಷ್ಟುಪ್ ಛಂದಸ್ಸು. ದ್ರವಿಣೋದನಾಮಕ ಅಗ್ನಿಯು ಅಥವಾ ಕೇವಲ ಅಗ್ನಿಯು ದೇವತೆಯು. ಅನುಕ್ರಮಣಿಕೆಯಲ್ಲಿ—**ಸ ಪ್ರತ್ನಥಾ ನವ ದ್ರವಿಣೋದಸ** ಇತಿ ಎಂದು ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿಯೂ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದೆಯೇ ಉಕ್ತವಾಗಿರುವುದು. ಹತ್ತು ದಿನಗಳು ಮಾಡಬೇಕಾದ ವ್ಯೂಢವೆಂಬ ಯಾಗದ ಆರನೆಯ ದಿವಸ ಆಗ್ನಿಮಾರುತಶಸ್ತ್ರಮಂತ್ರಪಠನ ಮಾಡುವಾಗ ಜಾತವೇದನಾಮಕ ಅಗ್ನಿಯ ನಿವಿತ್ ಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ವ್ಯೂಳ್ಹೇ** ಎಂಬ ಖಂಡದಲ್ಲಿ ಸ ಪ್ರತ್ನಥೇತ್ಯಾಗ್ನಿಮಾರುತಂ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೮) ಐತರೇಯ ಬ್ರಾಹ್ಮಣದಲ್ಲಿಯೂ

ಕೂಡ ಈ ವಿಷಯದಲ್ಲಿ—**ಸ ಪ್ರತ್ನಥಾ ಸಹಸಾ ಜಾಯಮಾನ ಇತಿ ಜಾತವೇದಸ್ಯಂ ಸಮಾನೋದರ್ಕಮಿತ್ಯಾದಿ ಬ್ರಾಹ್ಮಣಂ** ಎಂದು ವಿವರಣೆ ಇರುವುದು ( ಐ. ಬ್ರಾ. ೫-೧೫ ) ಮಹಾಪಿತೃಯಜ್ಞದಲ್ಲಿ ಸ್ವಿಷ್ಟಕೃತ್ ಎಂಬ ಅಗ್ನಿಯನ್ನುದ್ದೇಶಿಸಿ ಮಾಡುವ ಹೋಮಕ್ಕೆ ಬದಲಾಗಿ ಕವ್ಯವಾಹನಾಗ್ನಿಯನ್ನುದ್ದೇಶಿಸಿ **ಸ ಪ್ರತ್ನಥಾ** ಎಂಬ ಈ ಋಕ್ಕು ಯಾಜ್ಯಾಮಂತ್ರವಾಗಿ ಉಪಯೋಗಿಸಲ್ಪಡುವುದೆಂದು ಆಶ್ವಲಾಯನಶ್ರೌತಸೂತ್ರದ **ದಕ್ಷಿಣಾಗ್ನೇಃ** ಎಂಬ ಖಂಡದಲ್ಲಿ **ಸ ಪ್ರತ್ನಥಾ ಸಹಸಾ ಜಾಯಮಾನ ಇತ್ಯಗ್ನಿಃ ಸ್ವಿಷ್ಟಕೃತ್ಕವ್ಯವಾಹನಃ** ಎಂಬ ಸೂತ್ರದಿಂದ ವಿವರಿಸಲಾಗಿರುವುದು. ( ಆ. ೨-೧೯ ).

———— :o: ————

॥ ಓಂ ॥

## ಸೂಕ್ತ—೯೬

॥ ಮಂಡಲ—೧ ॥ ಅನುವಾಕ—೧೫ ॥ ಸೂಕ್ತ—೯೬ ॥

॥ ಅಷ್ಟಕ— ೧ ॥ ಅಧ್ಯಾಯ— ೭ ॥ ವರ್ಗ— ೩, ೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೯ ॥

॥ ಋಷಿಃ—ಕುತ್ಸ ಆಂಗೀರಸಃ ॥

॥ ದೇವತಾ—ಅಗ್ನಿರಗ್ನಿರ್ದ್ರವಿಣೋದಾ ವಾ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಸ ಪ್ರತ್ನಥಾ ಸಹಸಾ ಜಾಯಮಾನಃ ಸದ್ಯಃ ಕಾವ್ಯಾನಿ ಬಳಧತ್ತ
ವಿಶ್ವಾ ।
ಆಪಶ್ಚ ಮಿತ್ರಂ ಧಿಷಣಾ ಚ ಸಾಧನ್ದೇವಾ ಅಗ್ನಿಂ ಧಾರಯನ್ದ್ರ-
ವಿಣೋದಾಂ ॥ ೧ ॥

ಪದಪಾಠಃ

ಸಃ । ಪ್ರತ್ನಽಥಾ । ಸಹಸಾ । ಜಾಯಮಾನಃ । ಸದ್ಯಃ । ಕಾವ್ಯಾನಿ । ಬಟ್ ।
ಅಧತ್ತ । ವಿಶ್ವಾ ।

ಆಪಃ । ಚ । ಮಿತ್ರಂ । ಧಿಷಣಾ । ಚ । ಸಾಧನ್ । ದೇವಾಃ । ಅಗ್ನಿಂ । ಧಾರಯನ್ । ದ್ರವಿಣಃಽದಾಂ ॥ ೧ ॥

॥ ಸಾಯಣಭಾಷ್ಯಂ ॥

ಸಹಸಾ ಬಲೇನ ಜಾಯಮಾನೋ ನಿರ್ಮಥನೇನೋತ್ಪದ್ಯಮಾನಃ ಸೋಽಗ್ನಿಃ ಸದ್ಯಸ್ತದಾನೀಮುತ್ಪತ್ತ್ಯನಂತರಮೇವ ಪ್ರತ್ನಥಾ ಪ್ರತ್ನ ಇವ ಚಿರಂತನ ಇವ ವಿಶ್ವಾ ವಿಶ್ವಾನಿ ಸರ್ವಾಣಿ ಕಾವ್ಯಾನಿ ಕವೇಃ ಕ್ರಾಂತದರ್ಶಿನಃ ಪ್ರಗಲ್ಭಸ್ಯ ಕರ್ಮಾಣಿ ಬಟ್ ಸತ್ಯಮಧತ್ತ । ಅಧಾರಯತ್ । ಪೂರ್ವಂ ವಿದ್ಯಮಾನ ಇವಾಗ್ನಿರುತ್ಪತ್ತಿಸಮಕಾಲಮೇವ ಸ್ವಕೀಯಂ ಹವಿರ್ವಹನಾದಿಕಂ ಸರ್ವಂ ಕಾರ್ಯಮಕರೋದಿತ್ಯರ್ಥಃ । ಇಮಮಗ್ನಿಂ ವೈದ್ಯುತರೂಪೇಣ ವರ್ತಮಾನಂ ಮೇಘೇಷ್ವವಸ್ಥಿತಾ ಆಪಶ್ಚ ಧಿಷಣಾ ಚ ಯಾ ಮಾಧ್ಯಮಿಕಾ ವಾಕ್ ಸಾ ಚ ಮಿತ್ರಂ ಸಖಿಭೂತಂ ಸಾಧನ್ । ಸಾಧಯಂತಿ । ಕುರ್ವಂತಿ । ತಮಿಮಂ ದ್ರವಿಣೋದಾಂ ದ್ರವಿಣಸ್ಯ ಧನಸ್ಯ ದಾತಾರಮಗ್ನಿಂ ದೇವಾ ಋತ್ವಿಜೋ ಧಾರಯನ್ । ಗಾರ್ಹಪತ್ಯಾದಿರೂಪೇಣ ಧಾರಯಂತಿ । ಯದ್ವಾ ದೇವಾ ಇಂದ್ರಾದಯ ಇಮಮಗ್ನಿಂ ದ್ರವಿಣೋದಾಂ ಹವಿರ್ಲಕ್ಷಣಸ್ಯ ಧನಸ್ಯ ದಾತಾರಂ ಕೃತ್ವಾ ದೂತ್ಯೇ ಧಾರಯನ್ । ಧಾರಯಂತಿ ॥ ಪ್ರತ್ನಥಾ । ಪ್ರತ್ನಪೂರ್ವವಿಶ್ವೇಮಾತ್ಥಾಲ್ ಛಂದಸೀತೀವಾರ್ಥೇ ಥಾಲ್ಪ್ರತ್ಯಯಃ । ಕಾವ್ಯಾನಿ । ಕವೇಃ ಕರ್ಮ ಕಾವ್ಯಂ । ಗುಣವಚನಬ್ರಾಹ್ಮಣಾದಿಭ್ಯ ಇತಿ ಷ್ಯಞ್ । ಞಿತ್ತ್ವಾದಾದ್ಯುದಾತ್ತತ್ವಂ । ಸಾಧನ್ । ಷಿಧು ಸಂರಾದ್ಧೌ । ಣೌ ಸಿಧ್ಯತೇರಪಾರಲೌಕಿಕೇ । ಪಾ. ೬-೧-೪೯ । ಇತ್ಯಾತ್ವಂ । ಲೇಟ್ಯಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ಛಂದಸ್ಯುಭಯಥೇತಿ ಶಪ ಆರ್ಧಧಾತುಕತ್ವಾಣ್ಣೇರನಿಟೀತಿ ಣಿಲೋಪಃ । ದ್ರವಿಣೋದಾಂ । ದ್ರವಿಣಾನಿ ದದಾತೀತಿ ದ್ರವಿಣೋದಾಃ । ದ್ರು ಗತೌ । ದ್ರುದಕ್ಷಿಭ್ಯಾಮಿನನ್ । ಛಾಂದಸಃ ಪೂರ್ವಪದಸ್ಯ ಸುಕ್ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ದದಾತೇರ್ವಿಚ್ । ಸಕಾರಾಂತಂ ತ್ವಸುನಿ ಕೃತೇ ನಿಷ್ಪದ್ಯತೇ ॥

ಪ್ರತಿಪದಾರ್ಥ

ಸಹಸಾ—(ಘರ್ಷಣದ) ಶಕ್ತಿಯಿಂದ । ಜಾಯಮಾನಃ— ಉತ್ಪನ್ನನಾಗತಕ್ಕ । ಸಃ— ಅಗ್ನಿಯು । ಸದ್ಯಃ— ಉತ್ಪನ್ನನಾದೊಡನೆಯೇ । ಪ್ರತ್ನಥಾ—(ಬಹಳ) ಹಳಬನಂತೆ । ವಿಶ್ವಾ—ಸಕಲವಾದ । ಕಾವ್ಯಾನಿ—ಪ್ರಾಜ್ಞನ (ಹವಿರ್ವಹನಾದಿ) ಕರ್ಮಗಳನ್ನು । ಬಟ್—ನಿಜವಾಗಿಯೂ । ಅಧತ್ತ— (ತನ್ನಧೀನ

ವಾಗಿ) ಮಾಡಿಕೊಳ್ಳುತ್ತಾನೆ (ಹೊಂದುತ್ತಾನೆ) । **ಅಪಶ್ಚ** - ( ಮೇಘಸ್ಥವಾದ ) ನೀರುಗಳೂ । **ಧಿಷಣಾ ಚ**— (ಗುಡುಗುಶಬ್ದದ ರೂಪದಲ್ಲಿರುವ) ವಾಕ್ಕೂ ಸಹ । **ಮಿತ್ರಂ**—(ಮಿಂಚಿನರೂಪದ ಈ ಅಗ್ನಿಯನ್ನು) ಸ್ನೇಹಿತನನ್ನಾಗಿ । **ಸಾಧನ್**—ಸಂಪಾದಿಸಿಕೊಳ್ಳುತ್ತವೆ । **ದ್ರವಿಣೋದಾಂ**—ಧನದ ದಾತನಾದ । **ಅಗ್ನಿಂ**—ಅಗ್ನಿಯನ್ನು । **ದೇವಾಃ**— ಋತ್ವಿಕ್ಕುಗಳು । **ಧಾರಯನ್**—(ಗಾರ್ಹಪತ್ಯಾದಿರೂಪಗಳಿಂದ) ಇಟ್ಟುಕೊಂಡರು ॥

**ಅಥವಾ**

**ದೇವಾಃ**—(ಇಂದ್ರಾದಿ) ದೇವತೆಗಳು । **ಅಗ್ನಿಂ**—ಅಗ್ನಿಯನ್ನು । **ದ್ರವಿಣೋದಾಂ**—(ಹವಿಸ್ಸಿನರೂಪದ) ಧನವನ್ನು ಕೊಡತಕ್ಕವನನ್ನಾಗಿ । **ಧಾರಯನ್**—(ದೂತಕಾರ್ಯದಲ್ಲಿ ) ಇರಿಸಿಕೊಂಡರು.

॥ ಭಾವಾರ್ಥ ॥

ಅರಣಿಗಳ ಘರ್ಷಣದ ಶಕ್ತಿಯಿಂದ ಉತ್ಪನ್ನನಾಗತಕ್ಕ ಅಗ್ನಿಯು ಉತ್ಪನ್ನನಾದೊಡನೆಯೇ ಬಹಳ ಹಳಬನಂತೆ ಪ್ರಾಜ್ಞನಾದ ಯಜಮಾನನ ಯಜ್ಞಕರ್ಮಗಳನ್ನೆಲ್ಲಾ ತನ್ನಧೀನವನ್ನಾಗಿ ಮಾಡಿಕೊಳ್ಳುತ್ತಾನೆ. ಮೇಘಸ್ಥವಾದ ನೀರುಗಳೂ, ಗುಡುಗುರೂಪದ ವಾಕ್ಕೂ ಸಹ ಮಿಂಚಿನ ರೂಪದ ಈ ಅಗ್ನಿಯನ್ನು ತಮಗೆಲ್ಲಾ ಹವಿಸ್ಸಿನ ರೂಪದ ಧನವನ್ನು ಹಂಚತಕ್ಕ ದೂತನನ್ನಾಗಿ ಇರಿಸಿಕೊಂಡರು.

English Translation

Engendered by force, Agni verily appropriates, as soon as born, the offerings of the sages: the waters and voice make him their friend, and the gods retain him as the giver of (sacrificial) wealth.

ವಿಶೇಷವಿಷಯಗಳು

**ದ್ವೇ ನಿರೂಪೇ ಸೂಕ್ತಮೌಷಸಾಯಾಗ್ನಯೇ ಸ ಪ್ರತ್ನಥೇತಿ ದ್ರವಿಣೋದಸೇಽಗ್ನಯೇ ।**
(ಬೃಹದ್ದೇವತಾ. ೩-೧೨೯)

**ಸ ಪ್ರತ್ನಥಾ ನವ ದ್ರವಿಣೋದಸೇ ।**
(ಸರ್ವಾನುಕ್ರಮಣಿ.)

**ದ್ರವಿಣೋದಸ್ತ್ವಗುಣಯುಕ್ತಾಯಾಗ್ನಯ ಇದಂ ಸ್ತಾವಕಂ. (ವೇದಾರ್ಥದೀಪಿಕಾ)** ದ್ರವಿಣೋದಾಃ ಎಂಬ ವಿಶೇಷಣದಿಂದ ಅಗ್ನಿಯನ್ನು ಉದ್ದೇಶಿಸಿ ಈ ಸೂಕ್ತವು ಪಠಿತವಾಗಿದೆ.

ದ್ರವಿಣೋದಾಃ—ಈ ಶಬ್ದಕ್ಕೆ ಯಾಸ್ಕರು ವಿಸ್ತಾರವಾದ ವಿವರಣೆಯನ್ನು ಬರೆದಿರುವರು—

**ದ್ರವಿಣೋದಾಃ । ದ್ರವಿಣೋದಾಃ ಕಸ್ಮಾದ್ಧನಂ ದ್ರವಿಣಮುಚ್ಯತೇ । ಯದೇನದಭಿದ್ರವಂತಿ । ಬಲಂ ವಾ ದ್ರವಿಣಂ ಯದೇನೇನಾಭಿದ್ರವಂತಿ । ತಸ್ಯ ದಾತಾ ದ್ರವಿಣೋದಾಃ**
( ನಿ. ೮-೧ )

ಇಲ್ಲಿ ದ್ರವಿಣೋದಾಃ ಎಂಬ ಶಬ್ದದ ನಿಷ್ಪತ್ತಿಯು, ದ್ರವಿಣಂ ದದಾತೀತಿ ದ್ರವಿಣೋದಾಃ. ದ್ರವಿಣಶಬ್ದಕ್ಕೆ ಧನ, ಬಲ ಎಂದು ಎರಡು ಅರ್ಥಗಳಿರುವುವು. ಆದುದರಿಂದ ದ್ರವಿಣೋದಾಃ ಎಂದರೆ ಧನವನ್ನು ಅಥವಾ ಬಲವನ್ನು ಕೊಡುವವನು ಎಂದರ್ಥವು. ಇದು ಈ ಶಬ್ದದ ಅವಯವಾರ್ಥವು. ಇದಲ್ಲದೆ ಯಾಸ್ಕರು ಪ್ರಸಕ್ತವಾದ ಈ ಋಕ್ಕಿಗೆ ನಿರ್ವಚನವನ್ನು ಹೀಗೆ ಹೇಳಿರುವರು—

> ದ್ರವಿಣೋದಾ ಯಸ್ತ್ವಂ। ದ್ರವಿಣಸ ಇತಿ ದ್ರವಿಣಸಾದಿನ ಇತಿ ವಾ ದ್ರವಿಣಸಾನಿನ ಇತಿ
> ವಾ ದ್ರವಿಣಸಸ್ತಸ್ಮಾತ್ ಪಿಬತ್ವಿತಿ ವಾ। ಯಜ್ಞೇಷು ದೇವಮೀಳತೇ। ಯಾಚಂತಿ
> ಸ್ತುವಂತಿ, ವರ್ಧಯಂತಿ ಪೂಜಯಂತೀತಿ ವಾ॥

ಎಂದರೆ ಧನ, ಹವಿಸ್ಸು ಮುಂತಾದುವುಗಳನ್ನು ಅಪೇಕ್ಷಿಸುವ ಋತ್ವಿಜರು ದ್ರವಿಣೋದಾ ಎಂಬ ನಿನ್ನನ್ನು ಯಜ್ಞಗಳಲ್ಲಿ ಸೋಮಪಾನ ಮಾಡುವಂತೆ, ಪ್ರಾರ್ಥಿಸುತ್ತಾರೆ ಎಂದು ಮುಖ್ಯಾರ್ಥವು. ಇಲ್ಲಿ ದ್ರವಿಣೋದಾಃ ಎಂಬುದು ಪ್ರಥಮಾ ವಿಭಕ್ತಿಯ ಏಕವಚನವಾಗಿದ್ದರೂ ದೇವಂ ಎಂಬ ದ್ವಿತೀಯೈಕವಚನಕ್ಕೆ ಹೇಗೆ ವಿಶೇಷಣವಾಯಿತೆಂದರೆ— ದ್ರವಿಣೋದಾ ಯಃ ದೇವಃ ತಂ ದೇವಂ, ಯಾವ ದೇವನು ಧನದಾತನೋ ಆ ದೇವನನ್ನು ಎಂದು ಅರ್ಥವಾಗುವಂತೆ ಪದಗಳನ್ನು ಅಧ್ಯಾಹಾರಮಾಡಿಕೊಳ್ಳಬೇಕು. ದ್ರವಿಣಸಃ ಎಂದರೆ ಧನ ಅಥವಾ ಹವಿಸ್ಸನ್ನು ದೇವತಾಯಜನಾರ್ಥವಾಗಿ ದೇವನನ್ನು ಪ್ರಾರ್ಥಿಸುವವರಾದುದರಿಂದ ದ್ರವಿಣಸಃ ಎಂಬ ಶಬ್ದಕ್ಕೆ ಋತ್ವಿಜರು ಎಂದರ್ಥವು. ಮತ್ತು ಈಳತೇ ಎಂದರೆ ಯಾಚಿಸುತ್ತಾರೆ, ಸ್ತುತಿಸುತ್ತಾರೆ, ಪ್ರಶಂಸೆಮಾಡುತ್ತಾರೆ, ಪೂಜಿಸುತ್ತಾರೆ ಎಂಬ ಅನೇಕ ಅರ್ಥಗಳನ್ನು ಹೇಳಬಹುದು.

> ತತ್ಕೋ ದ್ರವಿಣೋದಾ ಇಂದ್ರ ಇತಿ ಕ್ರೌಷ್ಟುಕಿಃ।
> ಸ ಬಲಧನಯೋರ್ದಾತೃತಮಸ್ತಸ್ಯ ಚ ಸರ್ವಾ ಬಲಕೃತಿಃ॥

ದ್ರವಿಣೋದಾಃ ಎಂಬ ಶಬ್ದದ ಅವಯವಾರ್ಥವನ್ನೇನೋ ಹೇಳಿದ್ದಾಯಿತು. ಆದರೆ ಈ ದ್ರವಿಣೋದಾಃ ಎಂಬ ದೇವತೆಯು ಯಾರು? ಎಂದರೆ, ಇಂದ್ರನೇ ದ್ರವಿಣೋದಾಃ ಎಂಬುದಾಗಿ ಹೇಳಲ್ಪಡುವನು, ಏಕೆಂದರೆ ದ್ರವಿಣ ಶಬ್ದವು ಸೂಚಿಸುವ, ಬಲ, ಧನ. ಇವುಗಳನ್ನು ಅತಿಶಯವಾಗಿ ಕೊಡುವವನು ಇಂದ್ರನೇ ಆದುದರಿಂದ ಇಂದ್ರನನ್ನೇ ದ್ರವಿಣೋದಾಃ ಎಂಬದಾಗಿ ಹೇಳಬೇಕೆಂದು ಕ್ರೌಷ್ಟುಕಿ ಎಂಬುವರ ಅಭಿಪ್ರಾಯವು.

> ಅಥಾಪ್ಯಗ್ನಿಂ ದ್ರವಿಣೋದಸಮಾಹೈಷ ಪುನರೇತಸ್ಮಾಜ್ಜಾಯತೇ।
> ಯೋ ಅಶ್ಮನೋರಂತರಗ್ನಿಂ ಜಜಾನ ಇತ್ಯಪಿ ನಿಗಮೋ ಭವತಿ॥

ಮತ್ತು ಇವರು ಈ ಶಬ್ದಕ್ಕೆ ಮತ್ತೊಂದು ಅರ್ಥವನ್ನು ಹೇಳುವರು. ಇಂದ್ರನು ದ್ಯಾವಾಪೃಥಿವಿಗಳನ್ನು ಸೃಷ್ಟಿಸಿದನು ಅವುಗಳ ಮಧ್ಯದಲ್ಲಿ ಅಗ್ನಿಯನ್ನೂ ಸೃಷ್ಟಿಸಿದನು. ಆದುದರಿಂದ ದ್ರವಿಣೋದಾಃ ಶಬ್ದಕ್ಕೆ ಅಗ್ನಿಯೆಂದೂ ಹೇಳಬಹುದು ಎಂದು ಈ ಅರ್ಥವನ್ನು ಸಮರ್ಥಿಸುವುದಕ್ಕಾಗಿ "ಅಶ್ಮನೋರಂತರಗ್ನಿಂ ಜಜಾನ" ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು.

> ಅಥಾಪ್ಯೃತುಯಾಜೇಷು ದ್ರವಿಣೋದಸಾಃ ಪ್ರವಾದಾ ಭವಂತಿ। ತೇಷಾಂ ಪುನಃ ಪಾತ್ರ-
> ಸ್ಯೇಂದ್ರಪಾನಮಿತಿ ಭವತಿ॥ ಅಥಾಪ್ಯೇನಂ ಸೋಮಪಾನೇನ ಸ್ತೌತಿ। ಅಥಾಪ್ಯಾಹ
> ದ್ರವಿಣೋದಾಃ ಪಿಬತು ದ್ರವಿಣೋದಸ ಇತಿ॥

ಋತುಗಳನ್ನು ಉದ್ದೇಶಿಸಿ ಮಾಡುವ ಯಜ್ಞಗಳಲ್ಲಿ ಋತ್ವಿಜರ ಹಸ್ತದಲ್ಲಿರುವ ಪಾತ್ರೆಯಿಂದ ಇಂದ್ರನು ಸೋಮಪಾನ ಮಾಡುವನೆಂದು ಹೇಳಿರುವುದರಿಂದಲೂ ಇಂದ್ರನನ್ನು ಸೋಮಪಾನಸಂಬಂಧವಾದ ಮಂತ್ರಗಳಿಂದ ಸ್ತೋತ್ರ ಮಾಡುವುದರಿಂದಲೂ, ಋತ್ವಿಜರನ್ನು ದ್ರವಿಣೋದಸರೆಂದು ಕರೆಯುವ ರೂಢಿ ಇದೆ. ಇದೆಲ್ಲವೂ ಕ್ರೌಷ್ಟುಕಿ ಎಂಬುವರ ಮತವು.

**ಅಯಮೇವಾಗ್ನಿರ್ದ್ರವಿಣೋದಾ ಇತಿ ಶಾಕಪೂಣಿಃ ಆಗ್ನೇಯೇಷ್ವೇವ ಹಿ ಸೂಕ್ತೇಷು ದ್ರವಿಣೋದಸಃ ಪ್ರವಾದಾ ಭವಂತಿ ॥**

ಅಗ್ನಿಯೇ ದ್ರವಿಣೋದಾಃ ಎಂದು ಶಾಕಪೂಣಿಯವರ ಮತವು, ಏಕೆಂದರೆ ಅಗ್ನಿಸಂಬಂಧವಾದ ಸೂಕ್ತಗಳಲ್ಲಿ ಋತ್ವಿಜರು ಅಗ್ನಿಯನ್ನು ಸ್ತುತಿಸುವಾಗ ದ್ರವಿಣೋದಾಃ ಎಂಬ ಶಬ್ದವನ್ನು ಅಗ್ನಿಗೆ ವಿಶೇಷಣಪದವನ್ನಾಗಿ ಉಪಯೋಗಿಸುವರು.

**ಯಥೋ ಏತತ್ಸ ಬಲಧನಯೋರ್ದಾತೃತಮ ಇತಿ ಸರ್ವಾಸು ದೇವತಾಸ್ವೈಶ್ವರ್ಯಂ ವಿದ್ಯತೇ ಯಥೋ "ಏತದೋಜಸೋಜಾತಮುತಮನ್ಯ ಏನಂ" ಇತಿ ಚಾಹೇತ್ಯಯಮಪ್ಯಗ್ನಿರೋಜಸಾ ಬಲೇನ ಮಥ್ಯಮಾನೋ ಜಾಯತೇ ತಸ್ಮಾದೇನಮಾಹ ಸಹಸಸ್ಪುತ್ರಂ ಸಹಸಃ ಸೂನುಂ ಸಹಸೋ ಯಹುಂ ॥**

ಸಮಸ್ತ ದೇವತೆಗಳಲ್ಲಿಯೂ ಐಶ್ವರ್ಯವಿರುವುದು. ಆದುದರಿಂದ ಅಗ್ನಿಯೂ ಬಲ, ಧನ ಇವುಗಳನ್ನು ಕೊಡುವನು. ಬಲಧನಗಳನ್ನು ಕೊಡುವುದರಿಂದ ಅಗ್ನಿಯನ್ನು ದ್ರವಿಣೋದಾಃ ಎಂದು ಹೇಳಬಹುದು. ಇದಲ್ಲದೆ ದ್ರವಿಣಶಬ್ದಕ್ಕೆ ಬಲವೆಂದು ಅರ್ಥವಿರುವುದಷ್ಟೆ. ಅಗ್ನಿಯನ್ನು ಉತ್ಪತ್ತಿಮಾಡುವಾಗ ಬಲವನ್ನು ಉಪಯೋಗಿಸಿ (ಬಲವಾಗಿ) ಮಥನಮಾಡುವುದರಿಂದ ಅಗ್ನಿಯು ಬಲದಿಂದ ಹುಟ್ಟಿದನೆಂದು ಹೇಳುವ ಪ್ರತೀತಿ ಇದೆ. ಆದುದರಿಂದಲೇ ಅಗ್ನಿಯನ್ನು ಸಹಸಸ್ಪುತ್ರಂ, (ಸಹಸಃ-ಬಲದ, ಪುತ್ರಂ-ಪುತ್ರನಾದ ಅಗ್ನಿಯನ್ನು) ಸಹಸಃ ಸೂನುಂ ಸಹಸೋ ಯಹುಂ ಎಂಬ ಶಬ್ದಗಳಿಂದ ಸ್ತುತಿಸುವರು—

**ಘೃತಾನ್ನಃ ಸರ್ಪಿರಾಸುತಿಃ ಪ್ರತ್ನೋ ಹೋತಾ ವರೇಣ್ಯಃ ।**
**ಸಹಸಸ್ಪುತ್ರೋ ಅದ್ಭುತಃ ॥**

(ಋ. ಸಂ ೨-೭-೬)

**ತ್ವಂ ಹ ಯದ್ಯವಿಷ್ಠ್ಯ ಸಹಸಃ ಸೂನವಾಹುತಃ ।**
**ಋತಾವಾ ಯಜ್ಞಿಯೋ ಭುವಃ ॥**

(ಋ. ಸಂ. ೮-೭೫-೩)

**ಅಗ್ನೇ ವಾಜಸ್ಯ ಗೋಮತ ಈಶಾನಃ ಸಹಸೋ ಯಹೋ ।**
**ಅಸ್ಮೇ ಧೇಹಿ ಜಾತವೇದೋ ಮಹಿ ಶ್ರವಃ ॥**

(ಋ. ಸಂ. ೧-೭೯-೪)

ಎಂಬ ಋಕ್ಕುಗಳಲ್ಲಿ ಕ್ರಮವಾಗಿ ಸಹಸಸ್ಪುತ್ರ, ಸಹಸಃ ಸೂನು, ಸಹಸೋ ಯಹು ಎಂಬ ಶಬ್ದಗಳು ಅಗ್ನಿಯನ್ನು ಸ್ತುತಿಸುವಾಗ ಉಪಯೋಗಿಸಲ್ಪಟ್ಟಿರುವುವು. ಆದುದರಿಂದ ಬಲಧನಗಳನ್ನು ಇತರ ದೇವತೆಗಳು ಕೊಡುವವರಾದರೂ ಅಗ್ನಿಯೇ ವಿಶೇಷವಾಗಿ ದ್ರವಿಣೋದಾಃ ಎಂಬ ಶಬ್ದದಿಂದ ಪ್ರತಿಪಾದಿತನಾಗಿರುವನು.

ಇಲ್ಲಿ ಬೃಹದ್ದೇವತಾವಾಕ್ಯಗಳನ್ನುದಹರಿಸಿ ಈ ವಿಶೇಷಣವು ಮುಖ್ಯವಾಗಿ ಯಾವ ದೇವತೆಗೆ ಸಂಬಂಧಿಸಿದುದು, ಇದರಿಂದ ಆ ದೇವತೆಯ ಯಾವ ಯಾವ ಗುಣಗಳು ತಿಳಿಯುವುವು ಎಂದು ನೋಡೋಣ.

ಬೃಹದ್ದೇವತೆಯಲ್ಲಿ ಮೊದಲು **ಅಗ್ನಿ**ಯೆಂಬ ಶಬ್ದದ ನಿರ್ವಚನವನ್ನು ತಿಳಿಸಿ ಅನಂತರ **ದ್ರವಿಣೋದಾಃ** ಎಂಬ ವಿಶೇಷಣವು ಅಗ್ನಿಗೆ ಏತಕ್ಕೆ ಉಪಯೋಗಿಸಲ್ಪಟ್ಟಿದೆ ಎಂಬುದನ್ನು ವಿಮರ್ಶಿಸಿದೆ.

**ಜಾತೋ ಯದಗ್ರೇ ಭೂತಾನಾಂ ಅಗ್ರಣೀರಧ್ವರೇ ಚ ಯತ್ ।**
**ನಾಮ್ನಾ ಸಂನಯತೇ ವಾಂಗಂ ಸ್ತುತೋಽಗ್ನಿರಿತಿ ಸೂರಿಭಿಃ ॥**
(ಬೃ. ದೇ. ೨-೨೪)

ಸಕಲ ಭೂತಗಳಿಗೂ ಪ್ರಥಮದಲ್ಲಿ ಉತ್ಪನ್ನನಾಗಿರುವುದರಿಂದಲೂ, ಯಜ್ಞಯಾಗಾದಿಗಳಲ್ಲಿ ನೇತೃವಾಗಿರುವುದರಿಂದಲೂ, ತಾನು ಯಾವ ವಸ್ತುಗಳಲ್ಲಿ ಪ್ರವೇಶಿಸಿದರೂ ಅದನ್ನು ತನ್ನಲ್ಲಿಯೇ ಲೀನವಾಗಿ ಮಾಡಿಕೊಳ್ಳುವುದರಿಂದಲೂ ಸಹ **ಅಗ್ನಿ**ಯೆಂದು ಋಷಿಗಳಿಂದ ಸ್ತುತನಾಗಿದ್ದಾನೆ. ಈ ನಿರ್ವಚನವು ನಿರುಕ್ತದಲ್ಲಿ ಹೇಳಿರುವ **ಅಗ್ರಣೀರ್ಭವತಿ, ಅಗ್ರಂ ಯಜ್ಞೇಷು ಪ್ರಣೀಯತೇ, ಅಂಗಂ ನಯತಿ ಸನ್ನಮಮಾನಃ ।** (ನಿ. ೭-೧೪) ಎಂಬ ನಿರ್ವಚನಗಳಿಗೆ ಅನುರೂಪವಾಗಿದೆ. ಅಗ್ನಿಶಬ್ದವನ್ನು ವಿವರಿಸಿದನಂತರ, **ದ್ರವಿಣೋದಾಃ** ಎಂಬ ಶಬ್ದದ ನಿರ್ವಚನವನ್ನು ತಿಳಿಸುತ್ತಾ—

**ದ್ರವಿಣಂ ಧನಂ ಬಲಂ ವಾಪಿ ಪ್ರಾಯಚ್ಛದ್ಯೇನ ಕರ್ಮಣಾ ।**
**ತತ್ಕರ್ಮ ದೃಷ್ಟ್ವಾ ಕುತ್ಸಸ್ತು ಪ್ರಾಹೈನಂ ದ್ರವಿಣೋದಸಂ ॥**
(ಬೃ. ದೇ. ೨-೨೫)

ಉದಾರವಾಗಿ ಧನವನ್ನೂ ಬಲವನ್ನೂ ಕೊಡತಕ್ಕ ಅಗ್ನಿಯ ಕರ್ಮಗಳನ್ನು ಕುತ್ಸಋಷಿಯು ಗ್ರಹಿಸಿ ಅಗ್ನಿಯನ್ನು ಧನದ ಅಥವಾ ಬಲದ ದಾತನಾದ **ದ್ರವಿಣೋದಾಃ** ಎಂದು ಸ್ತುತಿಸಿರುವನು.

**ದ್ರವಿಣೋದಾ ದ್ರವಿಣಸಸ್ತುರಸ್ಯ ದ್ರವಿಣೋದಾಃ ಸನರಸ್ಯ ಪ್ರ ಯಂಸತ್ ।**
**ದ್ರವಿಣೋದಾ ವೀರವತೀಮಿಷಂ ನೋ ದ್ರವಿಣೋದಾ ರಾಸತೇ ದೀರ್ಘಮಾಯುಃ ।**
(ಋ. ಸಂ. ೧-೯೬-೮)

ಎಂಬ ಋಕ್ಕಿನಲ್ಲಿರುವ ಕುತ್ಸಕೃತವಾದ ಅಗ್ನಿಪ್ರಶಂಸೆಯನ್ನು ಸೂಚಿಸಿ ಪುನಃ ಈ ವಿಶೇಷಣವು ಅಗ್ನಿದೇವತಾಕವಾದದ್ದೇ ಹೊರತು ಇತರ ದೇವತೆಗಳನ್ನು ಉದ್ದೇಶಿಸಿದುದಲ್ಲ. ಎಂದು ಸಮರ್ಥಿಸಿದೆ.

**ಅಯಂ ಹಿ ದ್ರವಿಣೋದೋಽಗ್ನಿರಯಂ ದಾತಾ ಬಲಸ್ಯ ಹಿ ।**
**ಜಾಯತೇ ಚ ಬಲೇನಾಯಂ ಮಥ್ಯಕೃತ್ಯೃಷಿಭಿರಧ್ವರೇ ॥**
**ದ್ರವಿಣೋದೋಽಗ್ನಿರೇವಾಯಂ ದ್ರವಿಣೋದಾಸ್ತದೋಚ್ಯತೇ ।**
**ಆಗ್ನೇಯೇಷ್ವೇವ ದೃಶ್ಯಂತೇ ಪ್ರವಾದಾ ದ್ರವಿಣೋದಸಃ ॥**
(ಬೃ. ದೇ. ೩-೬೧ ; ೩-೬೫)

ಧನದಾತನೂ, ಬಲದಾತನೂ, ಬಲದಿಂದ ಉತ್ಪನ್ನನೂ ಆದುದರಿಂದಲೇ ಅಗ್ನಿಗೆ ದ್ರವಿಣೋದಾಃ ಎಂಬ ಪ್ರಶಂಸೆಯು ಸಲ್ಲುವುದು. ಆದುದರಿಂದ ಈ ವಿಶೇಷಣವು ಅಗ್ನಿದೇವತಾಕವೇ ಆಗಿರುವುದು ಎಂದು ಬೃಹದ್ದೇವತಾಕಾರರು ಸಮರ್ಥಿಸಿರುವರು.

ಮೇಲಿನ ಶ್ಲೋಕದಲ್ಲಿ ಹೇಳಿರುವ **ಜಾಯತೇ ಚ ಬಲೇನಾಯಂ** ಎಂಬ ಸ್ವರೂಪದ ಪ್ರಶಂಸೆಯನ್ನು ಈ ಋಕ್ಕಿನ ಪ್ರಾರಂಭದಲ್ಲಿ ನೋಡಬಹುದು.

**ಸಹಸಾ ಜಾಯಮಾನಃ—ಬಲೇನ, ನಿರ್ಮಥನೇನ ಉತ್ಪದ್ಯಮಾನಃ।** ಮಥನ ಕ್ರಿಯೆಯಿಂದ ಉತ್ಪನ್ನನಾದವನು. ಅಗ್ನಿಗೆ **ಸಹಸಸ್ಪುತ್ರಃ, ಸಹಸಃ ಸೂನುಃ** ಎಂದು ಅನೇಕ ಕಡೆ ಪ್ರಶಂಸೆ ಇದೆ. ಮಥನಶಕ್ತಿಯಿಂದ ಉತ್ಪನ್ನನಾದುದರಿಂದ ಈ ಪ್ರಶಂಸೆಯಿದೆ. ಇದೇ ರೀತಿಯ ಸಂಬೋಧನೆಯು ಅಥವಾ ವರ್ಣನೆಯು,

**ದ್ಯುನ್ನಃ ಸರ್ಪಿರಾಸುತಿಃ ಪ್ರತ್ನೋ ಹೋತಾ ವರೇಣ್ಯಃ। ಸಹಸಸ್ಪುತ್ರೋ ಅದ್ಭುತಃ।**
(ಋ. ಸಂ. ೨-೭-೬)

**ಅಗ್ನೇ ವೀಹಿ ಪುರೋಳಾಶಮಾಹುತಂ ತಿರೋ ಅಹ್ನ್ಯಂ। ಸಹಸಃ ಸೂನುರಸ್ಯಧ್ವರೇ ಹಿತಃ।**
(ಋ. ಸಂ. ೩-೨೮-೩).

**ಅಸ್ಮಾಕಮಗ್ನೇ ಅಧ್ವರಂ ಜುಷಸ್ವ ಸಹಸಃ ಸೂನೋ ತ್ರಿಷಧಸ್ಥ ಹವ್ಯಂ।**
(ಋ. ಸಂ. ೫-೪-೮).

**ಯಸ್ತೇ ಅಗ್ನೇ ಸುಮತಿಂ ಮರ್ತೋ ಅಕ್ಷತ್ಸಹಸಃ ಸೂನೋ ಅತಿ ಸ ಪ್ರ ಶೃಣ್ವೇ।**
(ಋ. ಸಂ. ೧೦-೧೧-೭).

ಇತ್ಯಾದಿ ಋಕ್ಕುಗಳಲ್ಲಿ ಶಕ್ತಿಪುತ್ರನೆಂದೇ ಅಗ್ನಿಗೆ ಸಂಬೋಧನೆಯಿದೆ. ಅದರಂತೆ ಇಲ್ಲಿಯೂ ಸಹ **ಸಹಸಾ ಜಾಯಮಾನಃ** ಎಂದು ಹೇಳಿದೆ.

**ಪ್ರತ್ನಥಾ-ಪ್ರತ್ನಂ, ಪ್ರದಿವಃ, ಪ್ರವಯಾಃ** ಇತ್ಯಾದಿ ಆರು ಪುರಾಣನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೯) **ಪ್ರತ್ನ** ಶಬ್ದಕ್ಕೆ ಹಳೆಯದು ಅಥವಾ ಹಳಬನೆಂದು ಅರ್ಥ. ಇಲ್ಲಿ ಅಗ್ನಿಯು ಉತ್ಪನ್ನನಾದೊಡನೆಯೇ ಅತ್ಯಂತ ಹಳಬನಂತೆ ತನ್ನ ಶಕ್ತಿಯನ್ನೂ ಪರಿಚಯವನ್ನೂ ತೋರಿಸಿ ಸಾಮರ್ಥ್ಯವನ್ನು ವ್ಯಕ್ತಪಡಿಸುತ್ತಾನೆಂದು ಆಶ್ಚರ್ಯವನ್ನು ವ್ಯಕ್ತಪಡಿಸಲಾಗಿದೆ.

**ತದ್ವಾಮೃತಂ ರೋದಸೀ ಪ್ರ ಬ್ರವೀಮಿ ಜಾಯಮಾನೋ ಮಾತರಾ ಗರ್ಭೋ ಅತ್ತಿ।**
**ನಾಹಂ ದೇವಸ್ಯ ಮರ್ತ್ಯಶ್ಚಿಕೇತಾಗ್ನಿರಂಗ ವಿಚೇತಾಃ ಸ ಪ್ರಚೇತಾಃ॥**
(ಋ. ಸಂ. ೧೦-೭೯-೪).

ಇತ್ಯಾದಿ ಸನ್ನಿವೇಶಗಳಲ್ಲಿ ಅಗ್ನಿಯು ಮಹಾತ್ಮ್ಯವನ್ನು ವರ್ಣಿಸುತ್ತಾ ಉತ್ಪನ್ನನಾದೊಡನೆಯೇ ಅಥವಾ ಗರ್ಭಸ್ಥಾಯಿಯಾಗಿರುವಾಗಲೇ ಅಗ್ನಿಯು ತನ್ನ ಜನನಿಯರನ್ನು ನುಂಗುವ ಶಕ್ತಿಯನ್ನು ಪಡೆಯುತ್ತಾನೆ. ಇದು ಮಾನವನ ದೃಷ್ಟಿಗೆ ಅಗೋಚರವಾದುದೂ ಅದ್ಭುತವಾದುದೂ ಆದ ಶಕ್ತಿಯಾಗಿದೆ ಎಂದು ವಿಸ್ಮಯವನ್ನು ಸೂಚಿಸಿದೆ. ಅದರಂತೆಯೇ ಇಲ್ಲಿಯೂ ಸಹ ಅಗ್ನಿಯ ಅದ್ಭುತವಾದ ಶಕ್ತಿಯನ್ನು ಪ್ರಶಂಸಿಸಿದೆ. ಈ ಶಕ್ತಿಯಿಂದ ಅಗ್ನಿಯು ಸಕಲವಿಧವಾದ ಯಜ್ಞಕರ್ಮಗಳಿಗೂ ಅಧಿಪತಿಯಾಗಿ ಮೆರೆಯುತ್ತಾನೆ.

**ಕಾವ್ಯಾನಿ—ಕವೇಃ ಕ್ರಾಂತದರ್ಶಿನಃ ಪ್ರಗಲ್ಭಸ್ಯ ಕರ್ಮಾಣಿ।** ಮೇಧಾವಿಯೂ ಶಕ್ತಿಯುತನೂ ಆದ ತನ್ನ ಪರಿಮಾಣಾದಿಕಾರ್ಯಗಳನ್ನು.

**ಬಟ್**--**ಬಟ್, ಶ್ರತ್, ಮತ್ರಾ** ಇತ್ಯಾದಿ ಆರು ಸತ್ಯನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) **ಬಟ್** ಎಂದರೆ ಖಂಡಿತವಾಗಿಯೂ ಎಂದರ್ಥ.

**ಕಾವ್ಯಾನಿ ಬಟ್ ಅಧತ್ತ**—ಹವಿರ್ವಹನಾದಿಕಾರ್ಯಗಳಿಗೆ ಇತರಾರೂ ಸಮರ್ಥರಲ್ಲದೇ ಇರುವುದರಿಂದಲೂ, ದೇವತೆಗಳಿಗೂ ಮಾನವರಿಗೂ ಪರಸ್ಪರವಾಗಿ ಸಂಬಂಧವನ್ನು ಕಲ್ಪಿಸಿ ದೇವಮಾನವಾದಿ ಸಕಲರಿಗೂ ಸೌಖ್ಯವನ್ನೂ ತೃಪ್ತಿಯನ್ನೂ ಒಟ್ಟಿಗೆ ಉಂಟುಮಾಡಲು ಅಗ್ನಿಯೊಬ್ಬನಿಗೆ ಮಾತ್ರ ಈ ಸಾಮರ್ಥ್ಯವಿರುವುದರಿಂದಲೂ ಅಗ್ನಿಯೇ ಹವಿರ್ವಹನಾದಿ ಕಾರ್ಯಗಳನ್ನು ನೆರವೇರಿಸಬೇಕೆಂದು ದೇವತೆಗಳು ಪ್ರಾರ್ಥಿಸಿದಾಗ ಅಗ್ನಿಯು (ಋ. ಸಂ. ೧೦-೫೧) ಈ ಮಹತ್ಕಾರ್ಯಕ್ಕೆ ಒಪ್ಪಿಗೆಯೀಯುತ್ತಾನೆ. ಆದರೆ ಉತ್ಪನ್ನನಾದೊಡನೆಯೇ ಈ ಮಹತ್ಕಾರ್ಯವನ್ನು ಸಾಧಿಸುವುದು ಅತ್ಯಾಶ್ಚರ್ಯಕರವಾದ ವಿಷಯವಾದುದರಿಂದ ಇತರ ಸಂದರ್ಭಗಳಲ್ಲೂ—

**ಸದ್ಯೋ ಜಾತೋ ವ್ಯಮಿಮೀತ ಯಜ್ಞಮಗ್ನಿರ್ದೇವಾನಾಮಭವತ್ಪುರೋಗಾಃ ।**

(ಋ. ಸಂ ೧೦-೧೧೦-೧೧ ; ಅ. ವೇ. ೫-೧೨-೧೧ ; ವಾ. ಸಂ. ೨೯-೩೬)

ಎಂಬುದಾಗಿ ನಾನಾ ಶ್ರುತಿಗಳಲ್ಲಿ ಈ ಮಾಹಾತ್ಮ್ಯವು ವರ್ಣಿತವಾಗಿರುವಂತೆಯೇ ಇಲ್ಲೂ ಪ್ರಶಂಸಿತವಾಗಿದೆ.

**ಧಿಷಣಾ**—**ಶ್ಲೋಕಃ, ಧಾರಾ, ಇಳಾ** ಇತ್ಯಾದಿ ಐವತ್ತೇಳು ವಾಙ್ ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೨೨) **ಧಿಷಣಾ** ಎಂದರೆ ವಾಕ್ಕು ಎಂದರ್ಥವಾಗುತ್ತದೆ. **ಧಿಷಣಾ ವಾಕ್ ಧಿಷೇರ್ದಧಾತ್ಯರ್ಥೇ। ಧೀ ಸಾದಿನೀತಿ ವಾ ।** (ನಿ. ೮-೩). ಹಿಡಿದಿರುತ್ತದೆ ಎಂದಭಿಪ್ರಾಯವನ್ನು ಕೊಡುವ **ಧಿಷ್** ಧಾತುವಿನಿಂದ ನಿಷ್ಪನ್ನವಾಗಬಹುದು. ಅಥವಾ ಬುದ್ಧಿಯನ್ನು ವಿಸ್ತರಿಸುತ್ತದೆ ಎಂದರೆ ಅರ್ಥವನ್ನು ವಿಶದವಾಗಿ ತಿಳಿಸುತ್ತದೆ ಎಂದಾದರೂ ಆಗಬಹುದೆಂದು ನಿರುಕ್ತಕಾರರ ನಿರ್ವಚನವು.

**ಅಪಶ್ಚ ಧಿಷಣಾ ಚ ಮಿತ್ರಂ ಸಾಧನ್**—ಇದು ವೈದ್ಯುತಾಗ್ನಿಯ ಪ್ರಶಂಸೆಯಾದುದರಿಂದ, ಮೇಘಸ್ಥವಾದ ಉದಕಗಳೂ ಗುಡುಗುರೂಪದ ವಾಕ್ಕೂ ಈ ಅಗ್ನಿಯನ್ನು ಮಿತ್ರನನ್ನಾಗಿ ಮಾಡಿಕೊಳ್ಳುತ್ತವೆ ಎಂಬುದಾಗಿ ಸಾಯಣರು ಅನ್ವಯವನ್ನು ಮಾಡುತ್ತಾರೆ. ಈ ರೀತಿಯ ಅರ್ಥಕ್ಕೆ ಬೇರೆಕಡೆಯ ಶ್ರುತಿವಾಕ್ಯವನ್ನೂ ಉದಹರಿಸಬಹುದು.

**ತಸ್ಯ ದೇವಾಃ ಪೃಥಿವೀ ದ್ಯೌರುತಾಪೋಽರಣಯನ್ನೋಷಧೀಃ ಸಖ್ಯೇ ಅಸ್ಯ ।**

(ಋ. ಸಂ. ೧೦-೮೮-೨)

ಎಂಬ ಸ್ಥಳಗಳಲ್ಲಿ ಉದಕಾದಿಗಳು ಅಗ್ನಿಯ ಮೈತ್ರಿಯನ್ನು ಸಂಪಾದಿಸಿ ರಮಿಸಿದವು ಎಂದು ಹೇಳಿರುವುದರಿಂದ ಇಲ್ಲಿಯೂ ಸಹ ಆ ಅರ್ಥವನ್ನು ಮಾಡಬಹುದು. ಆದರೆ ಸ್ಕಂದಸ್ವಾಮಿಗಳು **ಅಪ್ ಶಬ್ದೋಽತ್ರ ಆಪ್ನೋತೇರ್ವ್ಯಾಪ್ತಿವಚನೋ ನೋದಕವಚನಃ । ಧಿಷಣೇತಿ ವಾಙ್ನಾಮ । ಸ್ತುತಿಲಕ್ಷಣಾ ವಾಕ್, ವ್ಯಾಪ್ತ್ಯಶ್ಚಾಹುತಯಃ ಅಗ್ನಿಂ ಮಿತ್ರಂ ಸಾಧನ್ ಸಾಧಯಂತಿ । ಕುರ್ವಂತೀತ್ಯರ್ಥಃ ।** ಅಪ್ ಶಬ್ದಕ್ಕೆ ಇಲ್ಲಿ ಉದಕವೆಂದು ಅರ್ಥವಲ್ಲ. ವ್ಯಾಪಿಸು ಎಂಬ ಅರ್ಥದಲ್ಲಿ ಉಪಯೋಗಿಸಿರುವುದರಿಂದ ವ್ಯಾಪ್ತವಾದ ಆಹುತಿಗಳೂ, ಸ್ತುತಿವಾಕ್ಕುಗಳೂ ಸಹ ಅಗ್ನಿಯನ್ನು ಮಿತ್ರನನ್ನಾಗಿ ಮಾಡಿಕೊಳ್ಳುತ್ತವೆ ಎಂದಭಿಪ್ರಾಯವೆಂದು ತಮ್ಮ ವ್ಯಾಖ್ಯಾನದಲ್ಲಿ ವಿವರಿಸಿರುತ್ತಾರೆ.

**ದೇವಾ ಅಗ್ನಿಂ ಧಾರಯನ್ ದ್ರವಿಣೋದಾಂ**— ಈ ವಾಕ್ಯಕ್ಕೆ ಎರಡುವಿಧವಾದ ಅನ್ವಯವು ಸಾಧ್ಯವಾಗುತ್ತದೆ. ಮೊದಲನೆಯದಾಗಿ **ದೇವಾಃ**—ಋತ್ವಿಕ್ಕುಗಳು, **ಅಗ್ನಿಂ**—ಅಗ್ನಿಯನ್ನು, **ದ್ರವಿಣೋದಾಂ**—ಧನದಾತನನ್ನಾಗಿ, **ಧಾರಯನ್**—ಗಾರ್ಹಪತ್ಯಾದಿ ರೂಪಗಳಿಂದ ಪೂಜಿಸಿ ಇಟ್ಟುಕೊಂಡರು. ಅಥವಾ, ಎರಡನೆಯದಾಗಿ, **ದೇವಾಃ**—ಇಂದ್ರಾದಿ ದೇವತೆಗಳು, **ಅಗ್ನಿಂ**—ಅಗ್ನಿಯನ್ನು, **ದ್ರವಿಣೋದಾಂ**—ಹವಿಸ್ಸಿನ ರೂಪದ ಧನದಾತನನ್ನಾಗಿ, **ಧಾರಯನ್**—ಇರಿಸಿಕೊಂಡರು. ದ್ರವಿಣ ಶಬ್ದಕ್ಕೆ ಹವಿಸ್ಸೆಂಬ ಅರ್ಥವೂ ಪ್ರಸಿದ್ಧವಾಗಿರುವುದರಿಂದ ಎರಡನೆಯ ಅರ್ಥವೂ ಸಾಧುವಾಗುತ್ತದೆ.

**ಹವೀಂಷಿ ದ್ರವಿಣಂ ಪ್ರಾಹುರ್ಹವಿಷೋ ಯತ್ರ ಜಾಯತೇ ।**
**ದಾತಾರಶ್ಚರ್ತ್ವಿಜಸ್ತೇಷಾಂ ದ್ರವಿಣೋದಾಸ್ತತಃ ಸ್ವಯಂ ॥**
(ಬೃಹದ್ದೇವತಾ ೩-೬೩).

ಹವಿಸ್ಸಿಗೆ ದ್ರವಿಣವೆಂಬ ಹೆಸರು ಪ್ರಸಿದ್ಧವಾಗಿರುವುದರಿಂದಲೂ ಋತ್ವಿಕ್ಕುಗಳು ಹವಿಸ್ಸಿನ ದಾತರಾದ್ದರಿಂದಲೂ ಇವರಿಗೆ ದ್ರವಿಣೋದಾಃ ಎಂಬ ಕೀರ್ತಿಯು ಇರುವುದು. ಅಗ್ನಿಯು ಸಕಲಯಜ್ಞಗಳಿಗೂ ಶ್ರೇಷ್ಠನಾದ ಋತ್ವಿಕ್ಕಾದುದರಿಂದಲೂ, ದೇವತೆಗಳಿಗೆಲ್ಲಾ ಹವಿಸ್ಸನ್ನು ಹಂಚುವವನಾದುದರಿಂದಲೂ, **ದೇವಾಃ**, ಇಂದ್ರಾದಯಃ **ಅಗ್ನಿಂ ದ್ರವಿಣೋದಾಂ ಧಾರಯನ್** ಎಂಬ ಅನ್ವಯವೂ ಸಾಧುವಾಗಿರುವುದು. ಇದಕ್ಕೆ ಪ್ರಮಾಣವಾಗಿ.

**ಅಹರಹರ್ಜಾಯತೇ ಮಾಸಿ ಮಾಸ್ಯಥಾ ದೇವಾ ದಧಿರೇ ಹವ್ಯವಾಹಂ ।**
( ಋ. ಸಂ. ೧೦-೫೨-೩ )

**ಮಾಂ ದೇವಾ ದಧಿರೇ ಹವ್ಯವಾಹಮಪಮ್ಲುಕ್ತಂ ಬಹು ಕೃಚ್ಛ್ರಾ ಚರಂತಂ ।**
( ಋ. ಸಂ. ೧೦-೫೨-೪ )

ಎಂಬ ಇತರ ಶ್ರುತಿವಾಕ್ಯಗಳೂ ಪ್ರಮಾಣವಾಗಿವೆ.

॥ ವ್ಯಾಕರಣಪ್ರಕ್ರಿಯಾ ॥

**ಪ್ರತ್ನಥಾ**— ಪತ್ನ ಪುರಾಣೇ ಪ್ರಾತ್ (ಪಾ. ೪-೩-೨೩) ಪುರಾಣಾರ್ಥಕವಾದ ಪ್ರಶಬ್ದಕ್ಕೆ ನ ಪ್ರತ್ಯಯವೂ ಚಕಾರದಿಂದ ತ್ನಪ್, ತನಪ್, ಖ ಪ್ರತ್ಯಯಗಳೂ ಬರುತ್ತವೆ ಎಂಬುದರಿಂದ ಇಲ್ಲಿ ತ್ನಪ್ಪ್ರತ್ಯಯ. ಪ್ರತ್ನಮ್ ಎಂದು ರೂಪವಾಗುತ್ತದೆ. ಚಿರಂತನ ಎಂದು ಅರ್ಥವಾಗುತ್ತದೆ. ಪ್ರತ್ನ ಇವ ಎಂದು ಸಾದೃಶ್ಯ ವಿವಕ್ಷೆ ಮಾಡಿದಾಗ **ಪ್ರತ್ನಪೂರ್ವವಿಶ್ವೇಮಾತ್ಥಾಲ್ ಛಂದಸಿ**—(ಪಾ. ಸೂ. ೫-೩-೧೧೧) ಎಂಬುದರಿಂದ ಇವಾರ್ಥದಲ್ಲಿ ಥಾಲ್ ಪ್ರತ್ಯಯ. ಇದು ಲಿತ್ತಾದುದರಿಂದ ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಜಾಯಮಾನಃ**—ಜನೀ ಪ್ರಾದುರ್ಭಾವೇ ಧಾತು. ಇದಕ್ಕೆ ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ದಿವಾದಿಭ್ಯಃ ಶ್ಯನ್**—ಎಂಬ ಸೂತ್ರದಿಂದ ಶ್ಯನ್ ವಿಕರಣ. **ಜ್ಞಾಜನೋರ್ಜಾ** (ಪಾ. ಸೂ. ೭-೩-೭೯) ಎಂಬುದರಿಂದ ಧಾತುವಿಗೆ ಜಾದೇಶ. **ಆನೇಮುಕ್**—ಎಂಬುದರಿಂದ ಅದಂತವಾದ ಜಾಯ ಎಂಬ ಅಂಗಕ್ಕೆ ಮುಕಾಗಮ. **ತಾಸ್ಯನುದಾತ್ತೇತ್**—ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುತ್ತದೆ. ಶ್ಯನ್ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಕಾವ್ಯಾನಿ**—ಕವೇಃ ಕರ್ಮ ಕಾವ್ಯಮ್. **ಗುಣವಚನಬ್ರಾಹ್ಮಣಾದಿಭ್ಯಃ ಷ್ಯಞ್**—(ಪಾ. ಸೂ. ೫-೧-೧೨೪) ಎಂಬುದರಿಂದ ಭಾವಾರ್ಥದಲ್ಲಿ ಷ್ಯಞ್ ಪ್ರತ್ಯಯ. ಇದನ್ನು ನಿಮಿತ್ತೀಕರಿಸಿ **ತದ್ಧಿತೇಷ್ವಚಾಮಾದೇಃ**—ಎಂಬುದರಿಂದ ಆದಿವೃದ್ಧಿ. **ಯಸ್ಯೇತಿಚ**—ಸೂತ್ರದಿಂದ ಇಕಾರಕ್ಕೆ ಲೋಪ. ಕಾವ್ಯ ಎಂದು ರೂಪವಾಗುತ್ತದೆ. ಪ್ರತ್ಯಯ ಞಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಬಹುವಚನದಲ್ಲಿ ಶಿಆದೇಶ ಬಂದಾಗ ಅದಕ್ಕೆ ಸರ್ವನಾಮಸ್ಥಾನಸಂಜ್ಞೆ ಇರುವುದರಿಂದ ಅಂಗಕ್ಕೆ ನುಮಾಗಮ, ಉಪಧಾದೀರ್ಘ.

**ಅಧತ್ತ**—ಡುಧಾಞ್ ಧಾರಣಪೋಷಣಯೋಃ ಧಾತು. ಜುಹೋತ್ಯಾದಿ. ಇದಕ್ಕೆ ಲಙ್ ಪ್ರಥಮ ಪುರುಷ ಏಕವಚನದ ರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಿಶ್ವಾ**—**ಶೇಶ್ಛಂದಸಿ ಬಹುಲಮ್**—ಎಂಬುದರಿಂದ ನಪುಂಸಕದಲ್ಲಿ ಶಿಗೆ ಲೋಪ.

**ಅಪಃ** — ಅಪ್‌ಶಬ್ದ ಸ್ತ್ರೀಲಿಂಗ ನಿತ್ಯಬಹುವಚನಾಂತ. ಜಸ್ ಪರವಾದಾಗ **ಅಪ್‌ತೃನ್‌ತೃಚ್**—ಎಂಬುದರಿಂದ ಉಪಧಾದೀರ್ಘ.

**ಸಾಧನ್**—ಷಿಧು ಸಂರಾದ್ಧೌ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಇದಕ್ಕೆ **ಹೇತುಮತಿ ಚ**—(ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಣಿಚ್ ಪರವಾದಾಗ **ಸಿಧ್ಯತೇರಪಾರಲೌಕಿಕೇ**—(ಪಾ. ಸೂ. ೬-೧-೪೯) ಎಂಬುದರಿಂದ ಧಾತುವಿನ ಅಚಿಗೆ (ಇಕಾರಕ್ಕೆ) ಆತ್ವ. ಧಾತುವಿನ ಆದಿಗೆ ಸತ್ವ. ಸಾಧಿ ಎಂಬುದು **ಸನಾದ್ಯಂತಾ ಧಾತವಃ**—ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಇದರ ಮೇಲೆ ಲೇಟ್ ಪ್ರಥಮ ಪುರುಷ ಬಹುವಚನದಲ್ಲಿ ಝಿಪ್ರತ್ಯಯ. **ಝೋಽಂತಃ**—ಎಂಬುದರಿಂದ ಅಂತಾದೇಶ. **ಇತಶ್ಚಲೋಪಃ ಪರಸ್ಮೈಪದೇಷು** (ಪಾ. ಸೂ. ೩-೪-೯೭) ಎಂಬುದರಿಂದ ಅಂತ್ಯ ಇಕಾರಕ್ಕೆ ಲೋಪ. **ಲೇಟೋಽಡಾಟೌ**—ಎಂಬುದರಿಂದ ಅದಕ್ಕೆ ಅಡಾಗಮ. ಶಪ್‌ವಿಕರಣ. **ಛಂದಸ್ಯುಭಯಥಾ**—ಎಂಬುದರಿಂದ ಶಪಿಗೆ ಆರ್ಧಧಾತುಕ ಸಂಜ್ಞೆಯೂ ಇರುವುದರಿಂದ **ಣೇರನಿಟಿ**—(ಪಾ. ಸೂ. ೬-೪-೫೧) ಎಂಬುದರಿಂದ ಶಪ್ ನಿಮಿತ್ತವಾಗಿ ಣಿಚಿಗೆ ಲೋಪ. ಸಂಯೋಗಾಂತಲೋಪದಿಂದ ಪ್ರತ್ಯಯಾಂತ್ಯ ತಕಾರಕ್ಕೆ ಲೋಪ. ಸಾಧನ್ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಧಾರಯನ್**—ಧೃಞ್ ಧಾತುವಿಗೆ ಹಿಂದಿನಂತೆ ಣಿಜಂತದ ಮೇಲೆ ಲೇಟ್ ಪ್ರಥಮಪುರುಷ ಬಹುವಚನದಲ್ಲಿ ಝಿ ಬಂದಾಗ ರೂಪವಾಗುತ್ತದೆ, ತಿಙಂತದ ನಿಘಾತಸ್ವರ ಬರುತ್ತದೆ.

**ದ್ರವಿಣೋದಾಮ್**—ದ್ರವಿಣಾನಿ ದದಾತಿ ಇತಿ ದ್ರವಿಣೋದಾಃ ದ್ರು ಗತೌ ಧಾತು. **ದ್ರುದಕ್ಷಿಭ್ಯಾಮಿನನ್** (ಉ. ಸೂ. ೨-೨೦೮) ಎಂಬುದರಿಂದ ಇನನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. ಅವಾದೇಶ. **ಅಟ್‌ಕುಪ್ವಾಙ್**— ಸೂತ್ರದಿಂದ ಪ್ರತ್ಯಯನಕಾರಕ್ಕೆ ಣತ್ವ. ಛಾಂದಸವಾಗಿ ಪೂರ್ವಪದವಾದ ಇದಕ್ಕೆ ಸುಕಾಗಮ. ದ್ರವಿಣಸ್ ಎಂದಾಗುತ್ತದೆ. ಡುದಾಞ್ ದಾನೇ ಧಾತು. ಇದಕ್ಕೆ **ಅನ್ಯೇಭ್ಯೋಽಪಿ ದೃಶ್ಯಂತೇ**—(ಪಾ. ಸೂ. ೩-೩-೭೫) ಎಂಬುದರಿಂದ ವಿಚ್ ಪ್ರತ್ಯಯ. ವಿಚಿನಲ್ಲಿ ಸರ್ವಲೋಪವಾಗುವುದರಿಂದ ದ್ರವಿಣೋದಾ ಎಂದು ರೂಪವಾಗುತ್ತದೆ. ಇದು ಸಕಾರಾಂತಶಬ್ದವೆಂದು ಸ್ವೀಕರಿಸುವುದಾದರೆ ದಾಧಾತುವಿಗೆ ಅಸುನ್ ಪ್ರತ್ಯಯ

ಮಾಡಿದಾಗ ಪ್ರಪಿಕೋದಸ್ ಶಬ್ದವಾಗುತ್ತದೆ. ಪ್ರಥಮಾ ಸು ಪರವಾದಾಗ **ಅತ್ವಸಂತಸ್ಯ**—ಎಂಬುದರಿಂದ ಉಪಧಾದೀರ್ಘ. ಸುಲೋಪವಾದಾಗ ಸಕಾರಕ್ಕೆ ರುತ್ವವಿಸರ್ಗ. ॥೧॥

———— :o: ————

ಸಂಹಿತಾಪಾಠಃ

ಸ ಪೂರ್ವಯಾ ನಿವಿದಾ ಕವ್ಯತಾಯೋರಿಮಾಃ ಪ್ರಜಾ ಅಜನ-
ಯನ್ಮನೂನಾಂ ।
ವಿವಸ್ವತಾ ಚಕ್ಷಸಾ ದ್ಯಾಮಪಶ್ಚ ದೇವಾ ಅಗ್ನಿಂ ಧಾರಯನ್ದ್ರವಿ-
ಣೋದಾಂ ॥ ೨ ॥

॥ ಪದಪಾಠಃ ॥

ಸಃ । ಪೂರ್ವಯಾ । ನಿಽವಿದಾ । ಕವ್ಯತಾ । ಆಯೋಃ । ಇಮಾಃ । ಪ್ರಽಜಾಃ ।
ಅಜನಯತ್ । ಮನೂನಾಂ ।
ವಿವಸ್ವತಾ । ಚಕ್ಷಸಾ । ದ್ಯಾಂ । ಅಪಃ । ಚ । ದೇವಾಃ । ಅಗ್ನಿಂ । ಧಾರಯನ್ ।
ದ್ರವಿಣಃಽದಾಂ ॥ ೨ ॥

ಸಾಯಣಭಾಷ್ಯಂ

ಸೋಽಗ್ನಿಃ ಪೂರ್ವಯಾ ಪ್ರಥಮಯಾಗ್ನಿರ್ದೇವೇದ್ಧ ಇತ್ಯಾದಿಕಯಾ ನಿವಿದಾ ಕವ್ಯತಾ ಗುಣನಿಷ್ಠಗುಣಾಭಿಧಾನಲಕ್ಷಣಾಂ ಸ್ತುತಿಂ ಕುರ್ವತಾಯೋರ್ಮನೋಃ ಸಂಬಂಧಿನೋಕ್ತೇನ ಚ ಸ್ತೂಯ-

ಮಾನಃ ಸೋಽಗ್ನಿರ್ಮನೂನಾಂ ಸಂಬಂಧಿನೀರಿಮಾಃ ಪ್ರಜಾ ಅಜನಯತ್ । ಉದಪಾದಯತ್ । ಮನುನಾ ಸ್ತುತಃ ಸನ್ ಮಾನವೀಃ ಸರ್ವಾಃ ಪ್ರಜಾ ಅಜನಯದಿತ್ಯರ್ಥಃ । ತಥಾ ವಿವಸ್ವತಾ ವಿವಾಸನವತಾ ವಿಶೇಷೇಣಾಚ್ಛಾದಯತಾ ಚಕ್ಷಸಾತ್ಮೀಯೇನ ತೇಜಸಾ ದ್ಯಾಂ ದ್ಯುಲೋಕಮಪಶ್ಚಾಂತರಿಕ್ಷಂ ಚ ವ್ಯಾಪ್ನೋತೀತಿ ಶೇಷಃ । ಅನ್ಯತ್ಸಮಾನಂ ॥ ಕವ್ಯತಾ । ಕು ಶಬ್ದೇ । ಅಚೋ ಯದಿತಿ ಭಾವೇ ಯತ್ । ಕವ್ಯಂ ಕವನಂ ಸ್ತುತಿಂ ಕರೋತಿ । ತತ್ಕರೋತಿ । ಪಾ. ೩-೧-೨೬-೫ । ಇತಿ ಣಿಚ್ । ತದಂತಾತ್ ಕ್ವಿಪ್ । ಬಹುಲಮನ್ಯತ್ರಾಪಿ ಸಂಜ್ಞಾಚ್ಛಂದಸೋರಿತಿ ಣಿಲುಕ್ । ತತಸ್ತುಕ್ । ಧಾತುಸ್ವರೇಣಾಂತೋದಾತ್ತತ್ವಂ । ಆಯೋಃ । ಇಣ್ ಗತೌ । ಛಂದಸೀಣ ಇತ್ಯುಣ್‌ಪ್ರತ್ಯಯಃ ॥

॥ ಪ್ರತಿಪದಾರ್ಥ ॥

**ಸಃ**—ಅಗ್ನಿಯು । **ಪೂರ್ವಯಾ**— ಪ್ರಾಚೀನವಾದುದೂ । **ನಿವಿದಾ**— ಗುಣಗಾನಮಾಡತಕ್ಕದ್ದೂ । **ಕವ್ಯತಾ**—ಸ್ತೋತ್ರರೂಪವುಳ್ಳದ್ದೂ ಆದ । **ಆಯೋಃ**—ಮನುವಿನ (ಉಕ್ತದಿಂದ ಸ್ತುತನಾಗಿ) । **ಮನೂನಾಂ**— ಮಾನವರಿಗೆ ಸಂಬಂಧಿಸಿದ । **ಇಮಾಃ ಪ್ರಜಾಃ**—ಈ (ಮಾನವ) ಪ್ರಜೆಗಳನ್ನು । **ಅಜನಯತ್**—ಸೃಷ್ಟಿಸಿದನು (ಮತ್ತು) । **ವಿವಸ್ವತಾ**— (ಜಗತ್ತನ್ನೆಲ್ಲಾ) ಹೊದಿಸುವಂತೆ ಹರಡುವ । **ಚಕ್ಷಸಾ**— (ತನ್ನ) ತೇಜಸ್ಸಿನಿಂದ । **ದ್ಯಾಂ**—ದ್ಯುಲೋಕವನ್ನೂ । **ಅಪಶ್ಚ**—(ಅಂತರಿಕ್ಷವನ್ನೂ ವ್ಯಾಪಿಸುತ್ತಾನೆ) । **ದ್ರವಿಣೋದಾಂ**—ಧನದಾತನಾದ । **ಅಗ್ನಿಂ**— ಅಗ್ನಿಯನ್ನು । **ದೇವಾಃ**— ಋತ್ವಿಕ್ಕುಗಳು । **ಧಾರಯನ್**— ( ಗಾರ್ಹಪತ್ಯಾದಿ ರೂಪಗಳಿಂದ ) ಇಟ್ಟುಕೊಂಡರು ॥

ಅಥವಾ

**ದೇವಾಃ**—(ಇಂದ್ರಾದಿ) ದೇವತೆಗಳು । **ಅಗ್ನಿಂ**—ಅಗ್ನಿಯನ್ನು । **ದ್ರವಿಣೋದಾಂ**—(ಹವಿಸ್ಸಿನರೂಪದ) ಧನವನ್ನು ಹಂಚಿಕೊಡತಕ್ಕವನನ್ನಾಗಿ । **ಧಾರಯನ್**—(ದೂತಕಾರ್ಯವಲ್ಲಿ) ಇರಿಸಿಕೊಂಡರು ॥

ಭಾವಾರ್ಥ

ಪ್ರಾಚೀನವಾದುದೂ, ಗುಣಗಾನಮಾಡತಕ್ಕದ್ದೂ ಮತ್ತು ಸ್ತೋತ್ರರೂಪವುಳ್ಳದ್ದೂ ಆದ ಮನುವಿನ ಮಂತ್ರದಿಂದ ಸ್ತುತನಾದ ಅಗ್ನಿಯು ಮನುವಿಗೆ ಸಂಬಂಧಿಸಿದ ಈ ಸಕಲ ಮಾನವ ಪ್ರಜೆಗಳನ್ನೂ ಸೃಷ್ಟಿಸಿದನು. ಮತ್ತು ಜಗತ್ತನ್ನೆಲ್ಲಾ ಹೊದಿಸುವಂತೆ ಎಲ್ಲೆಲ್ಲೂ ಹರಡತಕ್ಕ ತನ್ನ ತೇಜಸ್ಸಿನಿಂದ ದ್ಯುಲೋಕವನ್ನೂ ಅಂತರಿಕ್ಷವನ್ನೂ ವ್ಯಾಪಿಸುತ್ತಾನೆ. ಇಂದ್ರಾದಿದೇವತೆಗಳು ಅಗ್ನಿಯನ್ನು ಹವಿಸ್ಸಿನ ರೂಪದ ಧನವನ್ನು ಹಂಚಿಕೊಡತಕ್ಕ ದೂತನನ್ನಾಗಿ ಇರಿಸಿಕೊಂಡರು.

## English Translation

Propitiated by the primitive laudatory hymn, of A'yu he created the the progeny of the Manus, and pervades, with his all-investing splendour, the heavens and the firmament: the gods retain Agni as the giver of (sacrificial) wealth.

॥ ವಿಶೇಷವಿಷಯಗಳು ॥

ಪೂರ್ವಯಾ ನಿವಿದಾ ಕವ್ಯತಾ ಆಯೋಃ ಮನೂನಾಂ ಇಮಾಃ ಪ್ರಜಾಃ ಅಜನಯತ್—ಪ್ರಥಮಯಾ 'ಅಗ್ನಿರ್ದೇವೇದ್ಧಃ' ಇತ್ಯಾದಿಕಯಾ ಗುಣಿನಿಷ್ಠಗುಣಾಭಿಧಾನಲಕ್ಷಣಾಂ ಸ್ತುತಿಂ ಕುರ್ವತಾ ಮನೋಃ ಸಂಬಂಧಿನೋಕ್ಥ್ಯೇನ ಚ ಸ್ತೂಯಮಾನಃ ಮಾನವೀಃ ಸರ್ವಾಃ ಪ್ರಜಾಃ ಅಜನಯತ್ । 'ಅಗ್ನಿರ್ದೇವೇದ್ಧಃ' ಇತ್ಯಾದಿ ಅತ್ಯಂತ ಪ್ರಾಚೀನವಾದುದೂ ಅಗ್ನಿಯ ಅಸಾಧಾರಣವಾದ ಗುಣಗಳನ್ನು ವರ್ಣಿಸತಕ್ಕವೂ ಆದ ನಿವಿತ್ ಸ್ತೋತ್ರಗಳಿಂದ ಪ್ರಶಂಸಿತನಾದ ಅಗ್ನಿಯು ಮನುಸಂಬಂಧಿಗಳಾದ ಸಕಲ ಪ್ರಜೆಗಳನ್ನು ಸೃಷ್ಟಿಸಿದನು ಎಂದು ಅಗ್ನಿಯ ಮಾಹಾತ್ಮ್ಯವನ್ನು ಸ್ತುತಿಸಿದೆ. ಅಗ್ನಿಯ ಈ ಮಾಹಾತ್ಮ್ಯವನ್ನು ತನ್ನ ದಿವ್ಯದೃಷ್ಟಿಯಿಂದ ಗ್ರಹಿಸಿ ಅವನನ್ನು ಸ್ತುತಿಸುವ ಈ ಸೂಕ್ತವನ್ನು ಪಠಿಸಿರುವ **ಕುತ್ಸ**ಋಷಿಯ ಪ್ರಶಂಸೆಯೂ, ಇದೇ ಸಂದರ್ಭದಲ್ಲಿ ನಿವಿದ್ ಮಂತ್ರಗಳ ಮಹಿಮೆಯೂ, ಜಗತ್ಸೃಷ್ಟಿಗೂ ಆ ಮಹಾಮಂತ್ರಗಳಿಗೂ ಇರುವ ಕಾರ್ಯಕಾರಣಸಂಬಂಧವೂ, ಆ ಮಂತ್ರಗಳು ಸೂಚಿಸುವ ಅಗ್ನಿಯ ಅಸಾಧಾರಣವಾದ ಗುಣಗಳೂ ಒಟ್ಟಿಗೆ **ಐತರೇಯಬ್ರಾಹ್ಮಣ**ದಲ್ಲಿ ಪಠಿತವಾಗಿವೆ.

> ಪ್ರಜಾಪತಿರ್ವಾ ಇದಮೇಕ ಏವಾಗ್ರ ಆಸ ಸೋಽಕಾಮಯತ ಪ್ರಜಾಯೇಯ ಭೂಯಾನ್ತ್ಸ್ಯಾಮಿತಿ ಸ ತಪೋಽತಪ್ಯತ ಸ ವಾಚಮಯಚ್ಛತ್ಸ ಸಂವತ್ಸರಸ್ಯ ಪರಸ್ತಾದ್ವ್ಯಾಹರದ್ದ್ವಾದಶಕೃತ್ವೋ ದ್ವಾದಶ ಪದಾ ವಾ ಏಷಾ ನಿವಿದೇತಾಂ ವಾವ ತಾಂ ನಿವಿದಂ ವ್ಯಾಹರತ್ತಾಂ ಸರ್ವಾಣಿ ಭೂತಾನ್ಯನ್ವಸೃಜ್ಯಂತ । (ಐ. ಬ್ರಾ. ೧೦-೧ ; ೧೦-೨)

ಆದಿಯಲ್ಲಿ ಪ್ರಜಾಪತಿಯು ಒಬ್ಬಂಟಿಗನಾಗಿದ್ದುದರಿಂದ ಪ್ರಜಾಸೃಷ್ಟಿಯನ್ನು ಮಾಡಿ ಬಹುಸಂಖ್ಯಾತನಾಗಬೇಕೆಂದಪೇಕ್ಷಿಸಿ ಒಂದು ವರ್ಷಕಾಲ ಮೌನವನ್ನಾಶ್ರಯಿಸುತ್ತಾ ತಪಸ್ಸನ್ನಾಚರಿಸಿದನು. ಅನಂತರ ಹನ್ನೆರಡು ಮಹಾವಾಕ್ಯಗಳನ್ನೊಳಗೊಂಡ ನಿವಿದ್ ಮಂತ್ರಗಳನ್ನು ಹನ್ನೆರಡು ಸಲ ಪಠಿಸಿದನಂತರ ಜಗತ್ತಿನಲ್ಲಿ ಭೂತಗಳೆಲ್ಲವೂ ಸೃಷ್ಟವಾದವು ಎಂದು ಈ ಮಂತ್ರಗಳ ಪ್ರಭಾವವನ್ನು ತಿಳಿಸಿ ಅನಂತರ ಇವುಗಳ ರಹಸ್ಯವನ್ನರಿತುಕೊಂಡ ಕುತ್ಸನನ್ನೂ ಅವನು ಪಠಿಸಿರುವ ಈ ಋಕ್ಕಿನ ಮಹಿಮೆಯನ್ನೂ ಪ್ರಶಂಸಿಸಿದೆ.

> ತದೇತದೃಷಿಃ ಪಶ್ಯನ್ನಭ್ಯನೂವಾಚ ಸ ಪೂರ್ವಯಾ ನಿವಿದಾ ಕವ್ಯತಾಯೋರಿಮಾಃ ಪ್ರಜಾ ಅಜನಯನ್ಮನೂನಾಮಿತಿ ।

ನಿವಿದ್ ಮಂತ್ರಗಳ ಪ್ರಭಾವದಿಂದ ಜಗತ್ತಿನ ಭೂತಗಳೆಲ್ಲವೂ ಸೃಷ್ಟವಾದವು ಎಂಬ ತತ್ತ್ವಾಂಶವನ್ನು ಕುತ್ಸಋಷಿಯು ಗ್ರಹಿಸಿ '**ಸ ಪೂರ್ವಯಾ** (ಋ. ಸಂ. ೧-೯೬-೨)' ಎಂಬ ಮಂತ್ರವನ್ನು ಪಠಿಸಿದನು.

> ತಸ್ಮಾದೇತಾಂ ಪುರಸ್ತಾತ್ ಸೂಕ್ತಸ್ಯ ನಿವಿದಂ ದಧಾತಿ ಪ್ರಜಾತ್ಯೈ । ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ ।

ಈ ಕಾರಣದಿಂದಲೇ ಹೋತೃವು ಸೂಕ್ತದ ಪ್ರಾರಂಭದಲ್ಲಿ ನಿವಿದ್ ಮಂತ್ರವನ್ನು ಪಠಿಸುವುದರ ಫಲವಾಗಿ ಸಂತಾನವನ್ನು ಪಡೆಯುತ್ತಾನೆ. ಈ ವಿಧವಾದ ತಿಳುವಳಿಕೆಯುಳ್ಳವರಿಗೆ ಸತ್ಸಂತಾನವೇ ಮೊದಲಾದ ಸಕಲ ಧನವೂ ಪ್ರಾಪ್ತವಾಗುವುದು.

ಒಂದು ದೇವತೆಯನ್ನಾಗಲಿ, ಅಥವಾ ದೇವತೆಗಳ ಒಂದು ಗುಂಪನ್ನಾಗಲಿ ಉದ್ದೇಶಿಸಿ ಅವರ ಅಸಾಧಾರಣವಾದ ಗುಣಗಳನ್ನು ವರ್ಣಿಸಿ ಅವರನ್ನು ಆಹ್ವಾನಮಾಡುವ ಮಂತ್ರಗಳಿಗೆ ನಿವಿದ್ ಮಂತ್ರವೆಂದು ಪ್ರಸಿದ್ಧವಾಗಿದೆ.

**ಕರ್ಮೈವ ತಾವತ್ಸ್ವಾವಿಶ್ಯಂ ನಿವಿದಿ ಸ್ತೌತಿ ಕರ್ಮಣಾ ।**
**ಯದ್ಧೇನುಃ ಸಪ್ತಿರನಡ್ವಾನ್ ವೋಳ್ಹಾ ದೋಗ್ಧ್ರ್ಯಾಶುರೇವ ವಾ ॥**
( ಬೃಹದ್ದೇವತಾ ೩-೫೦ )

ಉದಾಹರಣೆಗೆ ಋ. ಸಂ. ೧-೨೪-೩ನೇ ಋಕ್ಕಿನಲ್ಲಿ **ಸವಿತೃ**ದೇವತೆಯನ್ನುದ್ದೇಶಿಸಿ **ನಿವಿದ್** ಮಂತ್ರವು **ಸವಿತೃ**ವಿನ ವೈಶಿಷ್ಟ್ಯವನ್ನು ಅವನ ಅಸಾಧಾರಣವಾದ ಕರ್ಮದ ವಿವರಣೆಯಿಂದ ತಿಳಿಸುತ್ತದೆ. **ದೋಗ್ಧ್ರೀ** ಎನ್ನುವುದರಿಂದ ಹಾಲನ್ನು ಕರೆಯುವ ಹಸುವೆಂದೂ, **ಆಶು** (ವೇಗಗಾಮೀ) ಎನ್ನುವುದರಿಂದಲೂ, **ವೋಳ್ಹಾ**, ಹೊರೆಯನ್ನು ವಹಿಸು ವುದು) ಎನ್ನುವುದರಿಂದ ಎತ್ತೆಂದೂ ಅವುಗಳ ವೈಶಿಷ್ಟ್ಯವನ್ನು ತಿಳಿಯುತ್ತೇವೆ. ಅದರಂತೆಯೇ **ನಿವಿದ್** ಮಂತ್ರವೂ ಆಯಾ ದೇವತೆಯ ವೈಯಕ್ತಿಕವಾದ ಗುಣಗಳನ್ನು ಆಯಾ ಕರ್ಮಗಳ ವಿವರಣೆಯಿಂದ ತಿಳಿಸಿ ಸ್ತುತಿಸುವುದು.

ಕುತ್ಸಋಷಿಯಿಂದ ಪಠಿತವಾದ ಈ ಋಕ್ಕಿನಲ್ಲಿ **ಪೂರ್ವಯಾ ನಿವಿದಾ** ಎನ್ನುವ ವಾಕ್ಯದಿಂದ ಸೂಚಿತ ವಾಗುವ್ರವೂ, ಅಗ್ನಿಯನ್ನುದ್ದೇಶಿಸಿ ಉಕ್ತವಾದವೂ ಆದ ಹನ್ನೆರಡು ಮಹಾಮಂತ್ರಗಳನ್ನೂ **ಐತರೇಯಬ್ರಾಹ್ಮಣ** ದಲ್ಲಿ ಒಂದೊಂದನ್ನಾಗಿ ವಿವರಿಸಿದೆ. (ಐ. ಬ್ರಾ. ೧೦-೨)

೧. **ಅಗ್ನಿರ್ದೇವೇದ್ಧಃ ಇತಿ ಶಂಸತ್ಯಸೌ ವಾ ಅಗ್ನಿರ್ದೇವೇದ್ಧ ಏತಂ ಹಿ ದೇವಾ ಇಂಧತೇ ।** ದ್ಯುಲೋಕಸ್ಥನಾದ ಅಗ್ನಿಯನ್ನು ದೇವತೆಗಳು ಪ್ರಜ್ವಲಿಸುವಂತೆ ಮಾಡಿದರು.

೨. **ಅಗ್ನಿರ್ಮನ್ವಿದ್ಧಃ—ಇಮಂ ಹಿ ಮನುಷ್ಯಾ ಇಂಧತೇ ।** ಪಾರ್ಥಿವವಾದ ಅಗ್ನಿಯನ್ನು ಮಾನವರು ಪ್ರಜ್ವಲಿಸುವಂತೆ ಮಾಡುತ್ತಾರೆ.

೩. **ಅಗ್ನಿಃ ಸುಷಮಿತ್—ವಾಯುರ್ವಾ ಅಗ್ನಿಃ ಸುಷಮಿದ್ವಾಯುರ್ಹಿ ಸ್ವಯಮಾತ್ಮಾನಂ ಸಮಿಂಧೇ ।** ಅಂತರಿಕ್ಷಸ್ಥನಾದವನೂ, ವಾಯುರೂಪದಲ್ಲಿರುವವನೂ ಆದ ಅಗ್ನಿಯು ತನ್ನನ್ನು ತಾನೇ ಪ್ರಜ್ವಲಿಸು ವಂತೆ ಮಾಡಿಕೊಳ್ಳುತ್ತಾನೆ.

೪. **ಹೋತಾ ದೇವವೃತಃ—ಏಷ ಹಿ ಸರ್ವತೋ ದೇವೈರ್ವೃತಃ ।** ಸಕಲ ಪ್ರದೇಶಗಳಲ್ಲಿಯೂ ದೇವತೆಗಳಿಂದ **ಹೋತೃ**ವಾಗಿ ಆರಿಸಲ್ಪಟ್ಟವನು.

೫. **ಹೋತಾ ಮನುರ್ವೃತಃ—ಅಯಂ ಹಿ ಸರ್ವತೋ ಮನುಷ್ಯೈರ್ವೃತಃ ।** ಮಾನವರಿಂದ ಎಲ್ಲಾ ಕಡೆಯೂ **ಹೋತೃ**ವಾಗಿ ಆರಿಸಲ್ಪಟ್ಟವನು.

೬. **ಪ್ರಣೀರ್ಯಜ್ಞಾನಾಂ—ವಾಯುರ್ವೈ ಪ್ರಣೀರ್ಯಜ್ಞಾನಾಂ ಯದಾಹಿ ಪ್ರಾಣಿತ್ಯಥ ಯ- ಜ್ಞೋಽಥಾಗ್ನಿಹೋತ್ರಂ ।** ವಾಯುವಿನ ಸಂಚಾರವಿದ್ದಾಗ ಮಾತ್ರ ಯಜ್ಞವು ಸಾಧ್ಯವಾಗಿ ಅಗ್ನಿಹೋತ್ರವು ನೆರವೇರುವುದರಿಂದ ವಾಯುವೇ ಯಜ್ಞನಿರ್ವಾಹಕನು.

೭. **ರಥೀರಧ್ವರಾಣಾಂ—ಅಸೌ ವೈ ರಥೀರಧ್ವರಾಣಾಂ ಏಷ ಹಿ ಯಥೈತಚ್ಚರತಿ ರಥೀರಿವ ।** ರಥಿಕನು ತನ್ನ ಅಭೀಷ್ಟಪ್ರದೇಶಕ್ಕೆ ಹೋಗುವಂತೆ ಆದಿತ್ಯರೂಪನಾದ ಅಗ್ನಿಯೂ ಸಹ ಹಸಿನ್ನೆನ್ನೊಳಗೊಂಡ ಸುಖ್ಯರೂಪದ ರಥಕ್ಕೆ ಯಜಮಾನನಾಗಿ ತಾನು ಅಪೇಕ್ಷಿಸಿದ ಪ್ರದೇಶಗಳಿಗೆ ಹೋಗುತ್ತಾನೆ.

ಅತೂರ್ತೋ ಹೋತಾ—ಇಮಂ ಹ ನ ಕಶ್ಚನ ತಿರ್ಯಂಚಂ ತರತಿ । ಮಾರ್ಗಮಧ್ಯೇ ತಿರ್ಯಂಚಂ ಮಾರ್ಗಸ್ಯಾವರೋಧಕತ್ವೇನ ಅವಸ್ಥಿತಂ ಪ್ರೌಢಂ ದಾವಾಗ್ನಿಂ ಕಶ್ಚಿದಪಿ ತರಿತುಂ ನ ಸಮರ್ಥಃ । ದಾವಾಗ್ನಿ ರೂಪದಲ್ಲಿ ಹರಡುತ್ತಿರುವ ಈ ಅಗ್ನಿಯನ್ನು ಯಾರೂ ಪ್ರತಿಭಟಿಸಲಾರರು.

೯. ತೂರ್ಣಿರ್ಹವ್ಯವಾಟ್—ವಾಯುರ್ವೈ ತೂರ್ಣಿರ್ಹವ್ಯವಾಟ್ । ವಾಯುರ್ಹೀದಂ ಸರ್ವಂ ಸದ್ಯಸ್ತರತಿ । ಯದಿದಂ ಕಿಂಚ ವಾಯುರ್ದೇವೇಭ್ಯೋ ಹವ್ಯಂ ವಹತಿ । ವಾಯುವು ನಿಮಿಷಮಾತ್ರದಲ್ಲಿ ಸಕಲ ವಿಶ್ವವನ್ನೂ ಸಂಚರಿಸುವ ಸಾಮರ್ಥ್ಯವುಳ್ಳವನಾಗಿ ದೇವತೆಗಳಿಗೆ ಹವಿಸ್ಸನ್ನು ಒಯ್ಯುವುದರಿಂದ ವಾಯುವೇ ಹವ್ಯವಾಟ್ ಆಗಿರುವನು

೧೦. ಆ ದೇವೋ ದೇವಾನ್ವಕ್ಷತ್—ಅಸೌ ವೈ ದೇವೋ ದೇವಾನಾವಹತಿ । ಸಕಲ ದೇವತೆಗಳನ್ನೂ ಯಜ್ಞಕ್ಕೆ ಕರೆದುಕೊಂಡು ಬರುವ ದೇವತಾತ್ಮನು ಇವನೊಬ್ಬನೇ ಆಗಿದ್ದಾನೆ.

೧೧. ಯಕ್ಷದಗ್ನಿರ್ದೇವೋ ದೇವಾನ್—ಅಗ್ನಿರ್ದೇವೋ ದೇವಾನ್ಯಜತಿ । ದೇವತಾತ್ಮನಾದ ಅಗ್ನಿಯು ದೇವತೆಗಳನ್ನುದ್ದೇಶಿಸಿ ಯಾಗಮಾಡುತ್ತಾನೆ.

೧೨. ಸೋ ಅಧ್ವರಾ ಕರತಿ ಜಾತವೇದಾಃ—ವಾಯುರ್ವೈ ಜಾತವೇದಾ ವಾಯುರ್ಹೀದಂ ಸರ್ವಂ ಕರೋತಿ । ವಾಯುವೇ ಜಾತವೇದಸ್ಸಾಗಿ ಸಕಲವಿಶ್ವವನ್ನೂ ಸೃಷ್ಟಿಸುತ್ತಾದೆ. ಅವನೇ ಪೂಜ್ಯನಾದ ಅಗ್ನಿಯು.

ಈ ವಿಧವಾಗಿ ಈ ಹನ್ನೆರಡು ನಿವಿದ್‌ಮಂತ್ರಗಳನ್ನೂ ಐತರೇಯ ಬ್ರಾಹ್ಮಣದಲ್ಲಿ ವಿವರಿಸಿದೆ. ಈ ಮಂತ್ರಗಳ ಪಠನವು ಅತ್ಯಂತ ಶ್ರೇಷ್ಠವಾದ ಫಲಗಳನ್ನು ಕೊಡುವುದೆಂಬ ಶ್ರದ್ಧೆಯಿಂದ ಆಯಾ ದೇವತೆಗಳನ್ನು ಆಹ್ವಾನ ಮಾಡುವಾಗ ಪ್ರತಿದೇವತೆಯ ಸ್ವರೂಪ, ಶಕ್ತಿ, ಮಹತ್ಕಾರ್ಯಸಾಧನೆ ಇತ್ಯಾದಿಗಳನ್ನು ಕೊಂಡಾಡಿ ಇವುಗಳ ಪಠನವನ್ನು ಮಾಡುವುದು ಸಂಪ್ರದಾಯವೆಂದು ಋಕ್ಸಂಹಿತೆಯಲ್ಲಿ ನಾನಾ ಸನ್ನಿವೇಶಗಳಲ್ಲಿ ತಿಳಿಯಬರುತ್ತದೆ.

ತಾನ್ಪೂರ್ವಯಾ ನಿವಿದಾ ಹೂಮಹೇ ವಯಂ ಭಗಂ ಮಿತ್ರಮದಿತಿಂ ದಕ್ಷಮಸ್ರಿಧಂ ।
(ಋ. ಸಂ. ೧-೮೯-೩).

ಜುಷೇಥಾಂ ಯಜ್ಞಂ ಬೋಧತಂ ಹವಸ್ಯ ಮೇ ಸತ್ತೋ ಹೋತಾ ನಿವಿದಃ ಪೂರ್ವ್ಯಾ ಅನು ।
(ಋ. ಸಂ. ೨-೩೬-೬).

ಕಿಮು ಷ್ವಿದಸ್ಮೈ ನಿವಿದೋ ಭನಂತೇಂದ್ರಸ್ಯಾವದ್ಯಂ ದಿಧಿಷಂತ ಆಪಃ ।
(ಋ. ಸಂ. ೪-೧೮-೭).

ವಿ ಯದ್ವಾಚಂ ಕೀಸ್ತಾಸೋ ಭರಂತೇ ಶಂಸಂತಿ ಕೇ ಚಿನ್ನಿವಿದೋ ಮನಾನಾಃ ।
(ಋ. ಸಂ. ೬-೬೭-೧೦).

ನಿವಿದ್ ಮಂತ್ರಗಳ ಮಹಿಮೆಯು ತೈ ಬ್ರಾ ೩-೫-೬ ರಲ್ಲಿ— ದೇವೇದ್ಧೋ ಮನ್ವಿದ್ಧಃ। ಋಷಿಷ್ಟುತೋ ವಿಪ್ರಾನುಮದಿತಃ। ಕವಿಶಸ್ತೋ ಬ್ರಹ್ಮಸಗ್ಂಶಿತೋ ಘೃತಾಹವನಃ। ಪ್ರಣೀರ್ಯಜ್ಞಾನಾಂ। ರಥೀರಧ್ವರಾಣಾಂ ಅತೂರ್ತೋ ಹೋತಾ। ತೂರ್ಣಿರ್ಹವ್ಯವಾಟ್। ಆಸ್ಪಾತ್ರಂ ಜುಹೂರ್ದೇವಾನಾಂ। ಚಮಸೋ ದೇವಪಾನಃ। ಅರಾಗ್ಂ ಇವಾಗ್ನೇ ನೇಮಿರ್ದೇವಾಗ್ಸ್ತ್ವಂ ಪರಿಭೂರಸಿ । ಎಂದು ಅಗ್ನಿ ಸಂಬಂಧವಾದ ನಿವಿದ್ಮಂತ್ರವು ಉಕ್ತವಾಗಿರುವುದು.

**ಆಯೋಃ ಮನೋಃ ;—ಮನೋಃ ಸಂಬಂಧಿನೋಕ್ಥೇನ ಸ್ತೂಯಮಾನಃ ।** ಮನುವಿನಿಂದ 'ಅಗ್ನಿರ್ದೇವೇಷ್ಟುಃ' ಇತ್ಯಾದಿ ಮಂತ್ರಗಳಿಂದ ಸ್ತುತನಾಗಿ ಅಗ್ನಿಯು ಭೂತಗಳ ಸೃಷ್ಟಿಯನ್ನು ಮಾಡಿದ ಸನ್ನಿವೇಶವು ವಿವರಿಸಿದೆ. ಇಲ್ಲಿ **ಆಯೋಃ** ಎಂಬ ಪದಕ್ಕೆ **ಮನು**ವೆಂದು ಅರ್ಥಮಾಡಿರುವುದರಿಂದ ಸೃಷ್ಟಿಕರ್ತರಾದ ಪ್ರಜಾಪತಿಗಳಲ್ಲಿ ಒಬ್ಬನಾದ ಮನುವೆಂದು ತಿಳಿಯಬಹುದು. ಮನುಸ್ಮೃತಿಯಲ್ಲಿ (೧-೬೩) ಹೇಳುವ ಹದಿನಾಲ್ಕು ಪ್ರಜಾಪತಿಗಳಲ್ಲಿ ಮೊದಲನೆಯವನಾದ ಸ್ವಾಯಂಭುವಮನುವೂ ಐತರೇಯ ಬ್ರಾಹ್ಮಣದಲ್ಲಿ ಉದಹರಿಸುವ ಪ್ರಜಾಪತಿಯೂ ಒಬ್ಬನೇ ಆಗಿರುವುದಕ್ಕೆ ಸಾಧ್ಯವಿಲ್ಲ. ಏತಕ್ಕೆಂದರೆ, ಐತರೇಯಬ್ರಾಹ್ಮಣದಲ್ಲಿ **ಪ್ರಜಾಪತಿ**ಶಬ್ದಕ್ಕೆ ಸಾಯಣರೇ **ಈಶ್ವರಃ** ಎಂದರ್ಥವನ್ನು ಮಾಡುತ್ತಾರೆ.

**ಯೇನ ಜ್ಯೋತೀಂಷ್ಯಾಯವೇ ಮನವೇ ಚ ವಿವೇದಿಥ ।**
(ಋ. ಸಂ. ೮-೧೫-೫).

ಈ ಸ್ಥಳದಲ್ಲಿ ಔರ್ವಶೇಯನಾದ ಆಯವೇ, ಮನವೇ ಚ ಎಂದು ಆಯು, ಮನು ಇವರಿಬ್ಬರೂ ಬೇರೆ ಬೇರೆ ಯೆಂದು ಹೇಳಿದೆ. ಆದರೆ ಇವರಿಬ್ಬರೂ ಸಾಧಾರಣವಾದ ಮಾನವವ್ಯಕ್ತಿಗಳಿರಬಹುದು. ಒಟ್ಟಿನಲ್ಲಿ ಇಲ್ಲಿನ ಪೂರ್ವಕಥಾಸಂದರ್ಭವು ವಿಶದವಾಗಿಲ್ಲ. ಅದೂ ಅಲ್ಲದೇ ಋಕ್ಸಂಹಿತೆಯಲ್ಲಿಯೇ **ಆಯು** ವೆಂಬ ಶಬ್ದವು ಆಯಸ್ಸು, ಮನುಷ್ಯ ಇತ್ಯಾದ್ಯರ್ಥಗಳಲ್ಲಿ ಉಪಯೋಗಿಸಲ್ಪಟ್ಟಿರುವುದಲ್ಲದೇ, ಅಂಕಿತನಾಮವಾಗಿಯೂ ಸಹ ಉಪಯೋಗಿಸಲ್ಪಟ್ಟು ಬೇರೆ ಬೇರೆ ವ್ಯಕ್ತಿಗಳನ್ನು ಸೂಚಿಸುತ್ತದೆ. ಉದಾಹರಣೆಗೆ.

**ತ್ವಮಸ್ಮೈ ಕುತ್ಸಮತಿಥಿಗ್ವಮಾಯುಂ ಮಹೇ ರಾಜ್ಞೇ ಯೂನೇ ಅರಂಧನಾಯಃ ।**
(ಋ. ಸಂ. ೧-೫೩-೧೦).

**ಯ ಆಯುಂ ಕುತ್ಸಮತಿಥಿಗ್ವಮರ್ದಯೋ ವಾವೃಧಾನೋ ದಿವೇದಿವೇ.**
(ಋ. ಸಂ. ೮-೫೩-೨).

ಈ ಎರಡು ಋಕ್ಕುಗಳನ್ನೂ ಉದಹರಿಸಿ ಆಂಗ್ಲವ್ಯಾಖ್ಯಾಕಾರರು (Index of Vedic subjects and proper names by Macdonell and Keith. Vol. 1). ಆಯು ವೆಂಬುವನು ಇಲ್ಲಿ ಇಂದ್ರನಿಗೆ ಮಿತ್ರನಾಗಿರಲವಕಾಶವಿಲ್ಲ. ವಶಮಾಡಿಕೊಂಡನು, ಹಿಂಸಿಸಿದನು ಎಂದಿರುವುದರಿಂದ ಇಂದ್ರನ ವಿರೋಧಿಯಾಗಿರಬೇಕೆಂದು ಅಭಿಪ್ರಾಯಪಡುತ್ತಾರೆ. ಆದರೆ ಭಾಷ್ಯದಲ್ಲಿ **ಅರ್ದಯಃ** ಎನ್ನುವುದಕ್ಕೆ **ಆಯುಂ ಆಯುನಾಮಾನಂ ಋಷಿಂ ವರಪ್ರದಾನೇನ ಪೀಡಯಸಿ ।** ಆಯುವೇ ಮೊದಲಾದ ನಿನ್ನ ಮಿತ್ರಭೂತರಾದ ಭಕ್ತರಿಗೆ ವರಪ್ರದಾನರೂಪವಾದ ಭಾರವನ್ನು ಕೊಟ್ಟು ಹಿಂಸಿಸುವೆ ಎಂದು ವಿವರಿಸಿರುವರು. ಆದರೆ,

**ಮಾ ನೋ ಗುಹ್ಯಾ ರಿಪ ಆಯೋರಹನ್ ದಭನ್ಮಾ ನ ಆಭ್ಯೋ ರೀರಧೋ ದುಚ್ಛುನಾಭ್ಯಃ ।**
(ಋ. ಸಂ. ೨-೩೨-೨).

ಎಂಬ ಸನ್ನಿವೇಶದಲ್ಲಿ **ಆಯೋಃ** ಎನ್ನುವುದಕ್ಕೆ ಸಾಯಣರು ಶತ್ರುಭೂತಸ್ಯ ಮನುಷ್ಯಸ್ಯ ಎಂದು ವಿಶದವಾಗಿಯೇ ತಿಳಿಸುತ್ತಾರೆ. ಮತ್ತು

**ಯುಯೋಪ ನಾಭಿರುಪರಸ್ಯಾಯೋಃ ಪ್ರ ಪೂರ್ವಾಭಿಸ್ತಿರತೇ ರಾಷ್ಟಿ ಶೂರಃ ।**
(ಋ. ಸಂ. ೧-೧೦೪-೪).

ಎಂಬ ಋಕ್ಕಿನಲ್ಲಿಯೂ ಸಹ **ಆಯೋಃ ಪರೇಷಾಮುಪದ್ರವಾರ್ಥಮಿತಸ್ತತೋ ಗಚ್ಛತಃ ಕುಯವಸ್ಯಾಸುರಸ್ಯ।** ಇತರನ್ನು ಹಿಂಸಿಸಲು ಎಲ್ಲಾ ಕಡೆಯೂ ನುಗ್ಗುತ್ತಿರುವ ಕುಯವನೆಂಬ ಅಸುರನ ಎಂದು **ಆಯು** ಎಂಬುವನು ಶತ್ರು ನಾಶನಾದ ವ್ಯಕ್ತಿಯೆಂದು ಹೇಳಿದೆ.

**ಕುತ್ಸಸ್ಯಾಯೋರತಿಥಿಗ್ವಸ್ಯ ವೀರಾನ್ನ್ಯೃಣಗ್ಭರತಾ ಸೋಮಮಸ್ಮೈ ।**
(ಋ. ಸಂ. ೨-೧೪-೭)

ಇತ್ಯಾದಿ ಸ್ಥಳಗಳಲ್ಲಿ ಕುತ್ಸ, ಅತಿಥಿಗ್ವ, ಆಯು ಇವರೆಲ್ಲರೂ ಇಂದ್ರನಿಗೆ ಬೇಕಾದಮಿತ್ರರೆಂದು ಉಚಿತವಾಗಿಯೇ ಗೊತ್ತಾಗುತ್ತದೆ. **ಪೌರೂರವಸ್ಯ ರಾಜರ್ಷೇಃ ಔರ್ವಶೇಯಾಯ ಮನವೇ** ಎಂದು ಅನೇಕಕಡೆ ತಿಳಿಸಿದೆ. ಆದುದರಿಂದ **ಆಯುವೆಂಬ** ಅಂಕಿತನಾಮವು ಬೇರೆಬೇರೆ ಕಡೆಗಳಲ್ಲಿ ಬೇರೆ ಬೇರೆ ವ್ಯಕ್ತಿಗಳನ್ನು ತೋರಿಸುವುದೆಂದು ವ್ಯಕ್ತವಾಗಿದೆ.

**ದ್ಯಾಂ ಅಪಪ್ರ—ಸ್ವ ತೇಜಸಾ ದ್ಯಾಂ ಚ ಅಂತರಿಕ್ಷಂ ಚ ವ್ಯಾಪ್ನೋತಿ ।** ಎಂದರೆ—
**ಉದಸ್ತಂಭೀತ್ಸಮಿಧಾ ನಾಕಮೃಷ್ವೋ ಽಗ್ನಿರ್ಭವನ್ನುತ್ತಮೋ ರೋಚನಾನಾಂ ।**
(ಋ. ಸಂ. ೩-೫-೧೦).

ಎಂದು ವರ್ಣಿಸುವಂತೆ ಅಗ್ನಿಯು ತನ್ನ ತೇಜಸ್ಸಿನಿಂದ ದ್ಯುಲೋಕವನ್ನೂ ಅಂತರಿಕ್ಷವನ್ನೂ ಬೆಳಗಿಸಿ ತಾನೂ ಅತಿಶಯವಾಗಿ ಪ್ರಕಾಶಿಸುತ್ತಾನೆ.

ವ್ಯಾಕರಣಪ್ರಕ್ರಿಯಾ

**ಕವ್ಯತಾ**—ಕು ಶಬ್ದೇ. ಧಾತು. ಅಜಂತವಾದುದರಿಂದ ಭಾವಾರ್ಥದಲ್ಲಿ ಇದಕ್ಕೆ **ಅಚೋಯತ್**—(ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ**—ಎಂಬುದರಿಂದ ಪ್ರತ್ಯಯನಿಮಿತ್ತವಾಗಿ ಧಾತುವಿನ ಉಕಾರಕ್ಕೆ ಗುಣ. **ವಾಂತೋ ಯಿ ಪ್ರತ್ಯಯೇ**—ಎಂಬುದರಿಂದ ಅವಾದೇಶ. ಕವ್ಯ ಎಂದು ರೂಪವಾಗುತ್ತದೆ. ಕವ್ಯಂ=ಕವನಂ=ಸ್ತುತಿಂ ಕರೋತಿ ಇತಿ ಕವ್ಯತ್. **ತತ್ಕರೋತಿ ತದಾಚಷ್ಟೇ** (ಪಾ. ಸೂ. ೩-೧-೨೬-೫) ಎಂಬುದರಿಂದ ಧಾತ್ವರ್ಥವಿವಕ್ಷಾವಾದಾಗ ಕವ್ಯ ಎಂಬ ಸುಬಂತದ ಮೇಲೆ ಣಿಚ್ ಪ್ರತ್ಯಯ **ಸನಾದ್ಯಂತಾ ಧಾತವಃ**—ಎಂಬುದರಿಂದ ಣಿಜಂತಕ್ಕೆ ಧಾತುಸಂಜ್ಞಾ. ಇದರ ಮೇಲೆ **ಕ್ವಿಪ್ ಚ**—(ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. **ಬಹುಲಮನ್ಯತ್ರಾಪಿ ಸಂಜ್ಞಾಛಂದಸೋಃ**—ಎಂಬ ವಚನದಿಂದ ಣಿಚಿಗೆ ಲೋಪ. ಕೃತ್ ಪ್ರತ್ಯಯ ಪಿತ್ತಾದುದರಿಂದ **ಹ್ರಸ್ವಸ್ಯ ಪಿತಿ ಕೃತಿ ತುಕ್**—(ಪಾ. ಸೂ. ೬-೧-೭೧) ಎಂಬುದರಿಂದ ಕವ್ಯ ಎಂಬುದಕ್ಕೆ ತುಕಾಗಮ. ಕವ್ಯತ್ ಎಂದು ರೂಪವಾಗುತ್ತದೆ. ಪ್ರತ್ಯಯ ಲುಪ್ತವಾದುದರಿಂದ **ಧಾತೋಃ**—(ಪಾ. ಸೂ. ೬-೧-೧೬೨) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ಆಯೋಃ—ಇಣ್ ಗತೌ ಧಾತು. ಇದಕ್ಕೆ **ಛಂದಸೀಣಃ**—(ಉ. ಸೂ. ೧-೨) ಎಂಬುದರಿಂದ ಉಣ್ ಪ್ರತ್ಯಯ. ಣಿತ್ತಾದುದರಿಂದ **ಅಚೋಞ್ಣಿತಿ**—ಎಂಬುದರಿಂದ ಧಾತುವಿಗೆ ವೃದ್ಧಿ. ಆಯಾದೇಶ. ಆಯು ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಷಷ್ಠೀ ಏಕವಚನಾಂತರೂಪ.

**ಅಜನಯತ್**—ಜನೀ ಪ್ರಾದುರ್ಭಾವೇ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತು-ಮತಿ ಚ**—ಎಂಬುದರಿಂದ ಣಿಚ್. ಉಪಧಾವೃದ್ಧಿ. **ಜನೀಜ್ಯಾಷ್ಕ್ನಸು**—ಎಂಬುದರಿಂದ ಧಾತುವಿಗೆ ಮಿತ್ ಸಂಜ್ಞಾ ಬರುವುದರಿಂದ **ಮಿತಾಂ ಹ್ರಸ್ವಃ**—(ಪಾ. ಸೂ. ೬-೪-೯೨) ಎಂಬುದರಿಂದ ಉಪಧಾಹ್ರಸ್ವ ಬರುತ್ತದೆ. ಲಙ್ ಪ್ರಥಮಪುರುಷ ಏಕವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಪಃ**—ದ್ವಿತೀಯಾ ಬಹುವಚನಾಂತರೂಪ. **ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೨ ॥

—— :o: ——

ಸಂಹಿತಾಪಾಠಃ

ತಮೀಳತ ಪ್ರಥಮಂ ಯಜ್ಞಸಾಧಂ ವಿಶ ಆರೀರಾಹುತಮೃಂಜಸಾನಂ ।
ಊರ್ಜಃ ಪುತ್ರಂ ಭರತಂ ಸೃಪ್ರದಾನುಂ ದೇವಾ ಅಗ್ನಿಂ ಧಾರಯನ್ದ್ರವಿಣೋದಾಂ ॥ ೩ ॥

ಪದಪಾಠಃ

ತಂ । ಈಳತ । ಪ್ರಥಮಂ । ಯಜ್ಞಽಸಾಧಂ । ವಿಶಃ । ಆರೀಃ । ಆಽಹುತಂ । ಋಂಜಸಾನಂ ।
ಊರ್ಜಃ । ಪುತ್ರಂ । ಭರತಂ । ಸೃಪ್ರಽದಾನುಂ । ದೇವಾಃ । ಅಗ್ನಿಂ । ಧಾರಯನ್ । ದ್ರವಿಣಃಽದಾಂ ॥ ೩ ॥

ಸಾಯಣಭಾಷ್ಯಂ

ಹೇ ವಿಶಃ ಸರ್ವೇ ಮನುಷ್ಯಾಃ । ಆರೀರಗ್ನಿಂ ಸ್ವಾಮಿನಂ ಗಚ್ಛಂತ್ಯೋ ಯೂಯಂ ತಮಗ್ನಿಮೀಳತ । ಸ್ತುಧ್ವಂ । ಕೀದೃಶಂ । ಪ್ರಥಮಂ ಸರ್ವೇಷು ದೇವೇಷು ಮುಖ್ಯಂ । ಯಜ್ಞಸಾಧಂ

ಯಜ್ಞಸ್ಯ ದರ್ಶಪೂರ್ಣಮಾಸಾದೇಃ ಸಾಧಕಂ ನಿಷ್ಪಾದಕಂ ಆಹುತಂ ಹವಿರ್ಭಿಸ್ತರ್ಪಿತಂ ಋಂಜಸಾನಂ ಸ್ತೋತ್ರೈಃ ಪ್ರಸಾಧ್ಯಮಾನಂ ಊರ್ಜೋಽನ್ನಸ್ಯ ಪುತ್ರಂ । ಭುಕ್ತೇನಾನ್ನೇನ ಜಾಠರಾಗ್ನೇರ್ವರ್ಧನಾದಗ್ನೇರನ್ನಪುತ್ರತ್ವಂ । ಭರತಂ । ಹವಿಷಾಂ ಭರ್ತಾರಂ । ಯದ್ವಾ । ಪ್ರಾಣರೂಪೇಣ ಸರ್ವಾಸಾಂ ಪ್ರಜಾನಾಂ ಭರ್ತಾರಂ । ಶ್ರೂಯತೇ ಚ । ಸ್ವದೇಹೇ ಏಷ ಪ್ರಾಣೋ ಭೂತ್ವಾ ಪ್ರಜಾ ಬಿಭರ್ತಿ ತಸ್ಮಾದೇಷ ಭರತ ಇತಿ। ಸೃಪ್ರದಾನುಂ ಸರ್ಪಣಶೀಲದಾನಯುಕ್ತಂ । ಅವಿಚ್ಛೇದೇನ ಧನಾನಿ ಪ್ರಯಚ್ಛಂತಮಿತ್ಯರ್ಥಃ । ದೇವಾ ಇತ್ಯಾದಿ ಗತಂ ॥ ಈಳತ । ಈಡ ಸ್ತುತೌ । ಲೋಟಿ ವ್ಯತ್ಯಯೇನ ಪರಸ್ಮೈಪದಂ । ಬಹುಲಂ ಛಂದಸೀತಿ ಶಪೋ ಲುಗಭಾವಃ । ಯಜ್ಞಸಾಧಂ । ಯಜ್ಞಂ ಸಾಧಯತೀತಿ ಯಜ್ಞಸಾತ್ । ಸಾಧಯತೇಃ ಕ್ವಿಪ್ । ಣೇರನಿಟೀತಿ ಣಿಲೋಪಃ । ಆರೀಃ । ಋ ಗತೌ । ಸೂಚಿಸೂತ್ರೀತ್ಯಾದಿನಾ । ಪಾ. ೩-೧-೨೨-೩ । ಯಙ್ । ಯಙೋಽಚಿ ಚೇತಿ ಚಶಬ್ದೇನ ಬಹುಲಗ್ರಹಣಾನುಕರ್ಷಣಾದನೈಮಿತ್ತಿಕೋ ಲುಕ್ । ಪ್ರತ್ಯಯಲಕ್ಷಣೇನ ದ್ವಿರ್ಭಾವ ಉರದತ್ವಹಲಾದಿಶೇಷೌ । ರುಗ್ರಿಕೌ ಚ ಲುಕೀತಿ ರುಕ್ । ಯಙ್‌ಲುಗಂತಾದೌಣಾದಿಕಃ ಕಿಪ್ರತ್ಯಯಃ । ಯಣಾದೇಶೇ ರೋ ರೀತಿ ರೇಫಲೋಪಃ । ಢ್ರಲೋಪೇ ಪೂರ್ವಸ್ಯೇತಿ ದೀರ್ಘತ್ವಂ । ಕೃದಿಕಾರಾದಕ್ತಿನ ಇತಿ ಙೀಷ್ । ಜಸಿ ವಾ ಛಂದಸೀತಿ ಪೂರ್ವಸವರ್ಣದೀರ್ಘತ್ವಂ । ವ್ಯತ್ಯಯೇನಾದ್ಯುದಾತ್ತತ್ವಂ । ಋಂಜಸಾನಂ । ಋಂಜತಿಃ ಪ್ರಸಾಧನಕರ್ಮಾ । ಋಂಜಿವೃಧಿಮಂದಿಸಹಿಭ್ಯಃ ಕಿತ್ । ಉ. ೨-೮೭ । ಇತಿ ಕರ್ಮಣ್ಯಸಾನಚ್ । ಭರತಂ । ಭೃಞ್ ಭರಣೇ । ಭೃಮೃದೃಶೀತ್ಯಾದಿನಾತಚ್ । ಸೃಪ್ರದಾನುಂ । ಸೃಪ್ಲೃ ಗತೌ । ಸ್ಫಾಯಿತಂಚೀತ್ಯಾದಿನಾ ರಕ್ । ಸೃಪ್ರೋ ದಾನುರ್ದಾನಂ ಯಸ್ಯ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥

ಪ್ರತಿಪದಾರ್ಥ

ವಿಶಃ—ಎಲೈ ಮಾನವ ವರ್ಗವೇ । ಆರೀಃ—(ದೇವನಾದ ಅಗ್ನಿಯನ್ನು) ಸಮೀಪಿಸಿ । **ಪ್ರಥಮಂ** –(ಸಕಲ ದೇವತೆಗಳಿಗೂ) ಮುಖ್ಯನೂ । **ಯಜ್ಞಸಾಧಂ**—(ದರ್ಶಪೂರ್ಣಮಾಸಾದಿ) ಯಜ್ಞಗಳ ಸಂಪಾದಕನೂ । **ಆಹುತಂ**—ಹವಿಸ್ಸಿನಿಂದ ತೃಪ್ತನಾಗುವವನೂ । **ಋಂಜಸಾನಂ**—ಸ್ತೋತ್ರಗಳಿಂದ ಪೂಜಿತನೂ । **ಊರ್ಜಃ**—ಅನ್ನದ । **ಪುತ್ರಂ**—ಪುತ್ರನಾದವನೂ (ಅನ್ನಭೋಜನದಿಂದ ಜಾಠರಾಗ್ನಿರೂಪದಲ್ಲಿ ಬೆಳೆಯತಕ್ಕವನೂ) । **ಭರತಂ**—(ಸಕಲ ಪ್ರಜೆಗಳ) ಧಾರಕನೂ ಅಥವಾ ಹವಿಸ್ಸುಗಳ ರಕ್ಷಕನೂ । **ಸೃಪ್ರದಾನುಂ**—ವಿಚ್ಛಿತ್ತಿಯಿಲ್ಲದೇ ಧನವನ್ನು ಕೊಡತಕ್ಕವನೂ ಆದ । **ತಂ**— ಅಗ್ನಿದೇವನನ್ನು । **ಈಳತ**—ಸ್ತುತಿಸಿರಿ । **ದ್ರವಿಣೋದಾಂ**— ಧನದಾತನಾದ । **ಅಗ್ನಿಂ**— ಅಗ್ನಿಯನ್ನು । **ದೇವಾಃ**— ಋತ್ವಿಕ್ಕುಗಳು । **ಧಾರಯನ್**— ( ಗಾರ್ಹಪತ್ಯಾದಿರೂಪಗಳಿಂದ ) ಇಟ್ಟುಕೊಂಡರು.

**ಅಥವಾ**

**ದೇವಾಃ**—ಇಂದ್ರಾದಿದೇವತೆಗಳು । **ಅಗ್ನಿಂ**—ಅಗ್ನಿಯನ್ನು । **ದ್ರವಿಣೋದಾಂ**—(ಹವಿಸ್ಸಿನರೂಪದ) ಧನವನ್ನು ಹಂಚಿಕೊಡತಕ್ಕವನನ್ನಾಗಿ । **ಧಾರಯನ್**—(ದೂತಕಾರ್ಯದಲ್ಲಿ) ಇರಿಸಿಕೊಂಡರು ॥

ಭಾವಾರ್ಥ

ಎಲೈ ಮಾನವವರ್ಗವೇ, ದೇವನಾದ ಅಗ್ನಿಯನ್ನು ಸಮೀಪಿಸಿ ಸಕಲ ದೇವತೆಗಳಿಗೂ ಮುಖ್ಯನೂ ದರ್ಶಪೂರ್ಣಮಾಸಾದಿ ಯಜ್ಞಗಳ ಸಂಪಾದಕನೂ, ಹವಿಸ್ಸಿನಿಂದ ತೃಪ್ತನಾಗುವವನೂ, ಸ್ತೋತ್ರಗಳಿಂದ ಪೂಜಿತನಾಗು

ವವನೂ ಅನ್ನಭೋಜನದಿಂದ ಜಾತರಾಗ್ನಿರೂಪದಲ್ಲಿ ಬೆಳೆಯತಕ್ಕವನೂ, ಹವಿಸ್ಸುಗಳ ರಕ್ಷಕನೂ, ಅವಿಚ್ಛಿನ್ನವಾಗಿ ಧನವನ್ನು ಕೊಡತಕ್ಕವನೂ ಆದ ಅಗ್ನಿದೇವನನ್ನು ಸ್ತುತಿಸಿರಿ. ಇಂದ್ರಾದಿದೇವತೆಗಳು ಅಗ್ನಿಯನ್ನು ಹವಿಸ್ಸನ್ನು ಹಂಚತಕ್ಕ ದೂತನನ್ನಾಗಿ ಆರಿಸಿ ಇಟ್ಟುಕೊಂಡರು.

English Translation

Approaching him, let all men adore Agni, the chief (of the gods) the accomplisher of sacrifices, who is gratified by oblations and propitiated by praises—the offspring of food, the sustainer of (all men), the giver of continual gifts, the Gods retain Agni as the giver of (sacrificial) wealth.

ವಿಶೇಷವಿಷಯಗಳು

ವಿಶಃ—ಮನುಷ್ಯಾಃ, ನರಃ ಇತ್ಯಾದಿ ೨೫ ಮನುಷ್ಯನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ.೨.೩) ವಿಶಃ ಮನುಷ್ಯರೆಂದರ್ಥ. ಇಲ್ಲಿ ಎಲೈ ಮಾನವರೇ ಎಂಬ ಸಂಬೋಧನೆಯಿದೆ.

ಆರೀಃ—ಗತ್ಯರ್ಥಸ್ಯ ಅರ್ತೇರ್ವಾ, ದಾನಾರ್ಥಸ್ಯ ರಾತೇರ್ವಾ ಇದಂ ರೂಪಂ। ಗಮನಾರ್ಥಕವಾದ ಋ ಧಾತುವಿನಿಂದಾಗಲಿ, ದಾನಾರ್ಥಕವಾದ ರಾ ಧಾತುವಿನಿಂದಾಗಲೀ, ಆರೀಃ ಎಂಬ ರೂಪವು ನಿಷ್ಪನ್ನವಾಗಿ ಅಗ್ನಿಯನ್ನು ಪೂಜೆಗಾಗಿ ಸಮೀಪಿಸುವ ಅಥವಾ ಹವಿಸ್ಸನ್ನು ದಾನಮಾಡುವ ಎಂದರ್ಥವಾಗುತ್ತದೆ. ಆರೀಃ ವಿಶಃ ಎಂಬ ವಿಶೇಷಣ ವಿಶೇಷ್ಯಗಳು ಇದೇ ರೀತಿ—

ತಂ ಮೇಧೇಷು ಪ್ರಥಮಂ ದೇವಯಂತೀರ್ವಿಶ ಉಪ ಬ್ರುವತೇ ದಸ್ಮಮಾರೀಃ ।
(ಋ. ಸಂ. ೧-೭೭-೩)

ಎಂಬ ಮಂತ್ರದಲ್ಲಿಯೂ ಸಹ ಅಗ್ನ್ಯುಪಚರಣದ ಸಂದರ್ಭದಲ್ಲಿಯೇ ಉಪಯೋಗಿಸಲ್ಪಟ್ಟಿವೆ. ಅಗ್ನಿಪೂಜೆಗಾಗಿ ಸಿದ್ಧರಾಗಿ ಹೋಗುವ, ಮತ್ತು ಹವಿಸ್ಸನ್ನು ಅರ್ಪಿಸುವ ಮಾನವರನ್ನು ಕುರಿತು ಸಂಬೋಧನೆ.

ಯಜ್ಞಸಾಧಂ ಯಜ್ಞಸ್ಯ ದರ್ಶಪೂರ್ಣಮಾಸಾದೇಃ ಸಾಧಕಂ ನಿಷ್ಪಾದಕಂ। ದರ್ಶಪೂರ್ಣಮಾಸಾದಿಗಳನ್ನು ನೆರವೇರಿಸಿತಕ್ಕವನೆಂದು ಅಗ್ನಿಗೆ ವಿಶೇಷಣವಾಗಿದೆ. ಈ ವಿಶೇಷಣವು ಒಟ್ಟು ಮೂರುಸ್ಥಳಗಳಲ್ಲಿ ಉಪಯೋಗಿಸಲ್ಪಟ್ಟು ಒಂದು ಸಲ ರುದ್ರನ ಪರವಾಗಿಯೂ ಎರಡು ಸಲ ಅಗ್ನಿಪರವಾಗಿಯೂ ಇದೆ.

ತ್ವೇಷಂ ವಯಂ ರುದ್ರಂ ಯಜ್ಞಸಾಧಂ ವಂಕುಂ ಕವಿಮವಸೇ ನಿ ಹ್ವಯಾಮಹೇ।
(ಋ. ಸಂ. ೧-೧೧೪-೪)

ಎಂಬಲ್ಲಿ ರುದ್ರನನ್ನು ಯಜ್ಞಸಾಧಕನೆಂದೂ,

ತಂ ಯಜ್ಞಸಾಧಮಪಿ ವಾತಯಾಮಸ್ಯೃತಸ್ಯ ಪಥಾ ನಮಸಾ ಹವಿಷ್ಮತಾ ದೇವತಾತಾ ಹವಿಷ್ಮತಾ ।
(ಋ. ಸಂ. ೧-೧೨೮-೨)

ಎಂಬಲ್ಲಿ ಅಗ್ನಿಯನ್ನು ಯಜ್ಞಸಾಧಕನೆಂದೂ ಹೇಳಿದೆ. ಅದರಂತೆ ಇಲ್ಲಿಯೂ ಸಹ ಅಗ್ನಿಗೆ ವಿಶೇಷಣವಾಗಿದೆ.

**ಋಂಜಸಾನಂ— ಋಂಜತಿಃ ಪ್ರಸಾಧನಕರ್ಮಾ.** ( ನಿ. ೬-೨೧ ) ಅಲಂಕಾರಾರ್ಥದಲ್ಲಿ ಋಂಜ್ ಧಾತುವಿನಿಂದ ಈ ರೂಪದ ಪ್ರಯೋಗವಾಗಿದೆ. **ಸ್ತೋತ್ರೈಃ ಪ್ರಸಾಧ್ಯಮಾನಂ** ಸ್ತೋತ್ರಗಳಿಂದ ಅಲಂಕೃತನಾದವನೂ ಎಂದು ಸಾಯಣರು ಕರ್ಮಣಿಯಲ್ಲಿಯೂ, **ಯಜ್ಞಂ, ಸರ್ವಾನ್ ಅಭಿಪ್ರೇತಾನ್ ವಾ ಪ್ರಸಾಧಯಂತಂ** ಯಜ್ಞವನ್ನೂ ಅದಕ್ಕೆ ಸಂಬಂಧಿಸಿದ ಸಕಲವನ್ನೂ ಅಲಂಕರಿಸುವ ಎಂದು ಸ್ಕಂದಸ್ವಾಮಿಗಳು ಕರ್ತರಿಯಲ್ಲಿಯೂ ಅರ್ಥವನ್ನು ಹೇಳಿ ವಿವರಿಸಿರುವರು. ಈ ವಿಶೇಷಣವು ಅಗ್ನಿಗೆ ವಿಶೇಷಣವಾಗಿ ಇನ್ನೊಂದು ಕಡೆಯೂ ಇಂದ್ರನಿಗೆ ವಿಶೇಷಣವಾಗಿ ಒಂದು ಕಡೆಯೂ ಉಪಯೋಗಿಸಲ್ಪಟ್ಟಿದೆ.

**ರಥೋ ನ ವಿಕ್ಷ್ವೃಂಜಸಾನ ಆಯುಷು ವ್ಯಾನುಷಗ್ವಾರ್ಯಾ ದೇವ ಋಣ್ವತಿ ।**
(ಋ. ಸಂ. ೧-೫೮-೩)

**ಋಂಜಸಾನಃ ಪುರುವಾರ ಉಕ್ಥೈರೇಂದ್ರಂ ಕೃಣ್ವೀತ ಸದನೇಷು ಹೋತಾ ।**
(ಋ. ಸಂ. ೪-೨೧-೫)

ಇವುಗಳಲ್ಲಿ ಮೊದಲನೆಯ ಋಕ್ಕಿನ ಅಗ್ನಿವಿಶೇಷಣವಾದ **ಋಂಜಸಾನಃ** ಎಂಬ ಶಬ್ದಕ್ಕೆ **ಸ್ತೂಯಮಾನಃ** ಎಂತಲೂ ಎರಡನೆಯದರಲ್ಲಿ ಇಂದ್ರವಿಶೇಷಣವಾಗಿರುವ ಪದಕ್ಕೆ **ಪ್ರಸಾಧ್ಯಮಾನಃ** ಅಲಂಕೃತನಾಗುವ ಇಂದ್ರ ಎಂತಲೂ ಸಾಯಣರು ಅರ್ಥವನ್ನು ಮಾಡುತ್ತಾರೆ.

**ಊರ್ಜಃ ಪುತ್ರಂ**—ಊರ್ಜ ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ. **ಭುಕ್ತೇನಾನ್ನೇನ ಜಠರಾಗ್ನೇರ್ವರ್ಧನಾತ್ ಅಗ್ನೇರನ್ನಪುತ್ರತ್ವಂ ।** ಭುಜಿಸಿದ ಅನ್ನವು ಸಕಲ ಜಠರಗಳಲ್ಲೂ ಪ್ರವೇಶಿಸಿ ಜಠರಾಗ್ನಿಯನ್ನು ವೃದ್ಧಿಪಡಿಸುವುದರಿಂದ ಈ ಅಗ್ನಿಗೆ ಊರ್ಜಃ ಪುತ್ರನೆಂದು ಪ್ರಸಿದ್ಧಿಯಿದೆ. ಅಥವಾ ಸ್ಕಂದಸ್ವಾಮಿಗಳು ವಿವರಿಸುವಂತೆ **ಊರ್ಜಶಬ್ದೇನಾತ್ರ ಅನ್ನಕಾರಣತ್ವಾದ್ವೃಷ್ಟಿಲಕ್ಷಣಮುದಕಮುಚ್ಯತೇ । ತತೋ ಹ್ಯೋಷಧಿವನಸ್ಪತಯೋ ಜಾಯಂತೇ ಓಷಧಿವನಸ್ಪತಿಭ್ಯ ಏಷ ಜಾಯತೇ** ಊರ್ಜ ಶಬ್ದಕ್ಕೆ ಇಲ್ಲಿ ಅನ್ನಕಾರಣವಾದ ಉದಕವೆಂದರ್ಥ. ಉದಕದಿಂದ ಓಷಧಿವನಸ್ಪತಿಗಳು ಬೆಳೆದು ಅವುಗಳಿಂದ ಅಗ್ನಿಯು ಉತ್ಪನ್ನನಾಗುವುದರಿಂದ ಪರಂಪರೆಯಾಗಿ ಉದಕಗಳ ಪುತ್ರನಾದಂತಾಯಿತು, ಎಂದೂ ಆಗಬಹುದು. ಆದರೆ ಸಾಯಣರು ವಿವರಿಸುವಂತೆ ಜಠರಾಗ್ನಿಯೆಂದು ಹೇಳುವುದೇ ಸಹಜವಾಗಿದೆ.

**ಭರತಂ**—**ಭಾರತಾಃ, ಕುರವಃ** ಇತ್ಯಾದಿ ೮ ಋತ್ವಿಙ್ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೮) ಭರತನೆಂದರೆ ಋತ್ವಿಕ್ಕು ಎಂದರ್ಥ. ಅಗ್ನಿಯು ಯಜ್ಞಗಳಲ್ಲೆಲ್ಲಾ ಉತ್ತಮನಾದ ಋತ್ವಿಕ್ಕಾದುದರಿಂದ ಈ ವಿಶೇಷಣವಿದೆ. ಅಥವಾ **ಸರ್ವಯಜಮಾನಾನಾಂ ಭರ್ತಾರಂ; ಹವಿಷಾಂ ಭರ್ತಾರಂ ।** ಸಕಲ ಯಜ್ಞಕರ್ತರಿಗೂ, ಹವಿಸ್ಸುಗಳಿಗೂ ಒಡೆಯನಾದುದರಿಂದಲೂ ಭರತನೆಂದಾಗಬಹುದು. ಭರತಶಬ್ದವು **ರುದ್ರ, ಆದಿತ್ಯ** ಇತ್ಯಾದಿ ದೇವತೆಗಳಿಗೂ ವಿಶೇಷಣವಾಗಿ ಉಪಯೋಗಿಸಿದೆ. ಪ್ರಥಮ ಚಕ್ರವರ್ತಿಯಾದ ಭರತನೂ ಆಗಬಹುದು.

**ಆಸದ್ಯಾ ಬರ್ಹಿರ್ಭರತಸ್ಯ ಸೂನವಃ ಪೋತ್ರಾದಾ ಸೋಮಂ ಪಿಬತಾ ದಿವೋ ನರಃ ।**
(ಋ. ಸಂ. ೨-೩೬-೨).

ಇಲ್ಲಿ **ಭರತಸ್ಯ** ಎಂಬ ಪದಕ್ಕೆ ಸಕಲಜಗತ್ತನ್ನೂ ಭರಿಸತಕ್ಕ **ರುದ್ರನ** ಎಂದು ಅರ್ಥ. ೩-೫೩-೨೪ ; ೬-೧೬-೪ ಇತ್ಯಾದಿ ಸ್ಥಳಗಳಲ್ಲಿ **ದೌಷ್ಯಂತಿಪುತ್ರನಾದ ಭರತನು** ಭರತನೆಂಬ ವಿಶೇಷಣವು ಆದಿತ್ಯಪರವಾಗಿಯೂ ಇರಬಹುದು. **ಭರತಃ ಆದಿತ್ಯಃ.** (ನಿ. ೮-೧೩).

**ಸ್ವಪ್ರದಾನುಂ-ಸರ್ಪಣಶೀಲದಾನಯುಕ್ತಂ । ಅವಿಚ್ಛೇದೇನ ಧನಾನಿ ಪ್ರಯಚ್ಛಂತಮಿತ್ಯರ್ಥಃ ।** ಪ್ರವಹಿಸುವಂತೆ ಎಂದರೆ ಯಾವಾಗಲೂ ವಿಚ್ಛಿತ್ತಿಯಿಲ್ಲದೇ ಧನವನ್ನು ದಾನಮಾಡುವವನೆಂದರ್ಥ. ಈ ವಿಶೇಷಣವು ಅಗ್ನಿಗೆ ಪರವಾಗಿ ಈ ಋಕ್ಕಿನಲ್ಲಿಯೂ ಮಿತ್ರಾವರುಣರ ಪರ್ಯಾಯವಾಗಿ ಒಂದು ಕಡೆಯೂ ಒಟ್ಟು ಎರಡುಸಲ ಮಾತ್ರ ಉಪಯೋಗಿಸಲ್ಪಟ್ಟಿದೆ

**ನಪಾತಾ ಶವಸೋ ಮಹಃ ಸೂನೂ ದಕ್ಷಸ್ಯ ಸುಕ್ರತೂ । ಸೃಪ್ರದಾನೂ ಇಷೋ ವಾಸ್ತ್ವಧಿ ಕ್ಷಿತಃ ।**
(ಋ. ಸಂ. ೮-೨೫-೫).

ಎಂಬ ಋಕ್ಕಿನಲ್ಲಿ ಮಿತ್ರಾವರುಣರಿಗೆ ವಿಶೇಷಣವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಈಳತ**—ಈಡ ಸ್ತುತೌ ಧಾತು. ಅದಾದಿ. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ **ವ್ಯತ್ಯಯೋ ಬಹುಲಮ್**—ಎಂಬುದರಿಂದ ಆತ್ಮನೇಪದಕ್ಕೆ ಪರಸ್ಮೈಪದ ಪ್ರತ್ಯಯ ಬರುತ್ತದೆ. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಲುಕ್ ಬರುವುದಿಲ್ಲ. **ಲೋಟೋಲಙ್ವತ್**—ಎಂಬುದರಿಂದ ಲಙ್ವದ್ಭಾವವಿಹಿತವಾದುದರಿಂದ ಥ ಎಂಬುದಕ್ಕೆ **ತಸ್‌ಥಸ್‌ಥ**—ಸೂತ್ರದಿಂದ ತ ಆದೇಶ ಬರುತ್ತದೆ. ಈಳತ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯಜ್ಞಸಾಧಮ್**—ಯಜ್ಞಂ ಸಾಧಯತಿ ಇತಿ ಯಜ್ಞಸಾತ್‌। ಷಿಧು ಸಂರಾದ್ಧೌ. ಧಾತು ಇದಕ್ಕೆ ಣಿಚ್ ಪರವಾದಾಗ **ಸಿದ್ಧ್ಯತೇರಪಾರಲೌಕಿಕೇ**—(ಪಾ. ಸೂ. ೬-೧-೪೯) ಎಂಬುದರಿಂದ ಆತ್ವ. ಸಾಧಿ ಎಂದು ರೂಪವಾಗುತ್ತದೆ. ಣಿಜಂತದ ಮೇಲೆ **ಕ್ವಿಪ್ ಚ**—(ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಕ್ವಿಪ್‌ನಿಮಿತ್ತವಾಗಿ ಣಿಗೆ ಲೋಪ. ಕ್ವಿಪಿನಲ್ಲಿ ಸರ್ವಲೋಪ. ಯಜ್ಞಸಾಧ್ ಎಂದು ಧಕಾರಾಂತ ಶಬ್ದವಾಗುತ್ತದೆ. **ಗತಿಕಾರಕೋಪಪದಾತ್ ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

**ಆರೀಃ**—ಋ ಗತೌ. ಧಾತು. ಅತಿಶಯಾರ್ಥ ತೋರುವಾಗ **ಸೂಚಿ ಸೂತ್ರಿ**—(ಪಾ. ಮ. ೩-೧-೨೨-೩) ಎಂಬುದರಿಂದ ಯಙ್. **ಯಙೋಽಚಿ ಚ**—(ಪಾ. ಸೂ. ೨-೪-೭೪) ಎಂಬಲ್ಲಿ ಚಕಾರದಿಂದ ಬಹುಲಗ್ರಹಣಾನುಕರ್ಷಣದಿಂದ ನಿಮಿತ್ತವಿಲ್ಲದಿದ್ದರೂ ಯಙಿಗೆ ಲುಕ್ ಬರುತ್ತದೆ. **ಪ್ರತ್ಯಯಲೋಪೇ ಪ್ರತ್ಯಯಲಕ್ಷಣಮ್**—(ಪಾ. ಸೂ. ೧-೧-೬೨) ಸೂತ್ರದಿಂದ ಪ್ರತ್ಯಯ ಲಕ್ಷಣವಿರುವುದರಿಂದ **ಸನ್ಯಙೋಃ** (ಪಾ. ಸೂ. ೬-೧-೯) ಎಂಬುದರಿಂದ ಧಾತುವಿಗೆ ದ್ವಿತ್ವ. **ಅಭ್ಯಾಸಕ್ಕೆ ಉರತ್**—(ಪಾ. ಸೂ. ೭-೪.೬೬) ಎಂಬುದರಿಂದ ಅತ್ವ. ರಪರವಾಗಿ ಬರುತ್ತದೆ. **ಹಲಾದಿಃ ಶೇಷಃ**—ಸೂತ್ರದಿಂದ ಅಭಿಭಿನ್ನ ಹಲ್ ಲೋಪ. ಅರು ಎಂದು ರೂಪವಾದಾಗ

**ರುಗ್ರಿಕೌ ಚ ಲುಕಿ** (ಪಾ. ಸೂ. ೭-೪-೯೧) ಎಂಬುದರಿಂದ ಅಭ್ಯಾಸಕ್ಕೆ ರುಕಾಗಮ. ಅರ್ಋ ಎಂಬುದು **ಸನಾದ್ಯಂತಾಧಾತವಃ**—ಸೂತ್ರದಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಯಙ್ ಲುಗಂತವಾದ ಇದರ ಮೇಲೆ ಔಣಾದಿಕವಾದ ಕಿ ಪ್ರತ್ಯಯ. **ಅಶಕ್ಯತದ್ಧಿತೇ**—ಎಂಬುದರಿಂದ ಕಕಾರಲೋಪ. ಇ ಪರವಾದಾಗ ಧಾತು ಋಕಾರಕ್ಕೆ ಗುಣಾದೇಶ. ಅರ್ರ್+ಇ ಎಂದು ರೂಪವಾದಾಗ **ರೋರಿ** (ಪಾ. ಸೂ. ೮-೩-೧೪) ಎಂಬುದರಿಂದ ಪೂರ್ವರೇಫಕ್ಕೆ ಲೋಪ. ರೇಫಲೋಪನಿಮಿತ್ತವಾದುದು ಪರವಾದುದರಿಂದ **ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ**—(ಪಾ. ಸೂ. ೬-೩-೧೧೧) ಎಂಬುದರಿಂದ ಪೂರ್ವದ ಅಕಾರಕ್ಕೆ ದೀರ್ಘ. ಆರಿ ಎಂದು ರೂಪವಾಗುತ್ತದೆ. ಇದಕ್ಕೆ ಸ್ತ್ರೀತ್ವ ವಿವಕ್ಷೆಮಾಡಿದಾಗ **ಕೃದಿಕಾರಾದಕ್ತಿನ**—ಎಂಬುದರಿಂದ ಕ್ತಿನ್ ಭಿನ್ನವಾಗಿ ಇಕಾರಾಂತ ಕೃದಂತವಾದುದರಿಂದ ಙೀಷ್ ಪ್ರತ್ಯಯ ಬರುತ್ತದೆ. ಆರೀ ಎಂದು ರೂಪವಾಗುತ್ತದೆ. ಇದಕ್ಕೆ ಜಸ್ ಪರವಾದಾಗ **ವಾಛಂದಸಿ**—(ಪಾ. ಸೂ. ೬-೧-೧೦೬) ಎಂಬುದರಿಂದ ಪೂರ್ವಸವರ್ಣದೀರ್ಘ. ಸಕಾರಕ್ಕೆ ರುತ್ವ ವಿಸರ್ಗ. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

**ಋಂಜಸಾನಮ್**—ಋಂಜ ಧಾತುವು ಪ್ರಸಾಧನ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ಇದಕ್ಕೆ **ಋಂಜಿವೃಧಿಮಂದಿಸಹಿಭ್ಯಃ ಕಿತ್** (ಉ. ಸೂ. ೨-೨೪೪) ಎಂಬುದರಿಂದ ಕರ್ಮಣಿಯಲ್ಲಿ ಅಸಾನಚ್ ಪ್ರತ್ಯಯ. ಋಂಜಸಾನ ಶಬ್ದವಾಗುತ್ತದೆ. ಪ್ರತ್ಯಯ ಚಿತ್ತಾದುದರಿಂದ **ಚಿತಃ**—(ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

**ಊರ್ಜಃ**—ಊರ್ಜ ಬಲಪ್ರಾಣನಯೋಃ ಧಾತು. ಕ್ವಿಪ್‌ಪ್ರತ್ಯಯ. ಊರ್ಜ್ ಶಬ್ದವಾಗುತ್ತದೆ. ಷಷ್ಠೀ ಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ**—(ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಭರತಮ್**—ಭೃಞ್ ಭರಣೇ ಧಾತು. **ಭೃಮೃದಶಿ**—(ಪಾ. ಸೂ. ೩-೩೯೦) ಎಂಬುದರಿಂದ ಇದಕ್ಕೆ ಅತಚ್‌ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ಪ್ರತ್ಯಯ ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಸೃಪ್ರದಾನುಮ್**—ಸೃಪ್ಲೃ ಗತೌ. ಧಾತು. ಇದಕ್ಕೆ **ಸ್ಫಾಯಿತಞ್ಚಿ**—(ಉ. ಸೂ. ೨-೧೭೦) ಎಂಬುದರಿಂದ ರಕ್‌ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಸೃಪ್ರ ಎಂದು ರೂಪವಾಗುತ್ತದೆ. ಸೃಪ್ರಃ ದಾನುಃ=ದಾನಂ ಯಸ್ಯ ಸಃ ಸೃಪ್ರದಾನುಃ ಬಹುವ್ರೀಹಿಯಲ್ಲಿ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

ಸಂಹಿತಾಪಾಠಃ

ಸ ಮಾತರಿಶ್ವಾ ಪುರುವಾರಪುಷ್ಟಿರ್ವಿದದ್ಗಾತುಂ ತನಯಾಯ
ಸ್ವರ್ವಿತ್ ।
ವಿಶಾಂ ಗೋಪಾ ಜನಿತಾ ರೋದಸ್ಯೋರ್ದೇವಾ ಅಗ್ನಿಂ ಧಾರ-
ಯನ್ದ್ರವಿಣೋದಾಂ ॥ ೪ ॥

ಪದಪಾಠಃ

ಸಃ । ಮಾತರಿಶ್ವಾ । ಪುರುವಾರಽಪುಷ್ಟಿಃ । ವಿದತ್ । ಗಾತುಂ । ತನಯಾಯ ।
ಸ್ವಃಽವಿತ್ ।
ವಿಶಾಂ । ಗೋಪಾಃ । ಜನಿತಾ । ರೋದಸ್ಯೋಃ । ದೇವಾಃ । ಅಗ್ನಿಂ । ಧಾರ-
ಯನ್ । ದ್ರವಿಣಃಽದಾಂ ॥ ೪ ॥

ಸಾಯಣಭಾಷ್ಯಂ

ಸೋಽಗ್ನಿಸ್ತನಯಾಯಾಸ್ಮದೀಯಾಯ ಪುತ್ರಾಯ ಗಾತುಮನುಷ್ಠಾನಮಾರ್ಗಂ ವಿದತ್ । ಲಂಭ-
ಯತು । ಕೀದೃಶಃ । ಮಾತರಿಶ್ವಾ ಮಾತರಿ ಸರ್ವಸ್ಯ ಜಗತೋ ನಿರ್ಮಾತರ್ಯಂತರಿಕ್ಷೇ ಶ್ವಸನ್ವರ್ತಮಾನಃ
ಪುರುವಾರಪುಷ್ಟಿಃ । ಪುರುಭಿರ್ಬಹುಭಿರ್ವಾರಾ ವರಣೀಯಾ ಪುಷ್ಟಿರಭಿವೃದ್ಧಿರ್ಯಸ್ಯ ಸ ತಥೋಕ್ತಃ ।
ಸ್ವರ್ವಿತ್ । ಸ್ವಃ ಸ್ವರ್ಗಸ್ಯ ಯಾಗದ್ವಾರೇಣ ಲಂಭಯಿತಾ । ವಿಶಾಂ ಸರ್ವಾಸಾಂ ಪ್ರಜಾನಾಂ ಗೋಪಾ
ಗೋಪಾಯಿತಾ । ರಕ್ಷಿತಾ । ರೋದಸ್ಯೋರ್ದ್ಯಾವಾಪೃಥಿವ್ಯೋರ್ಜನಿತಾ ಜನಯಿತೋತ್ಪಾದಯಿತಾ ।
ದೇವಾ ಇತ್ಯಾದಿ ಗತಂ ॥ ಮಾತರಿಶ್ವಾ । ಶ್ವನ್ನುಕ್ಷನ್ನಿತ್ಯಾದೌ ಮಾತೃಶಬ್ದೋಪಪದಾತ್ ಶ್ವಸ ಪ್ರಾಣನ
ಇತ್ಯಸ್ಮಾತ್ ಕನಿನ್ಪ್ರತ್ಯಯಾಂತೋ ನಿಪಾತ್ಯತೇ । ವಿದತ್ । ವಿದ್ಲೃ ಲಾಭೇ । ಅಸ್ಮಾದಂತರ್ಭಾವಿತಣ್ಯ-
ರ್ಥಾಚ್ಛಾಂದಸೋ ಲುಙ್ । ಲೃದಿತ್ತ್ವಾತ್ ಚ್ಲೇರಙಾದೇಶಃ । ಬಹುಲಂ ಛಂದಸೀತ್ಯಡಭಾವಃ । ಜನಿತಾ ।
ಜನಿತಾ ಮಂತ್ರೇ । ಪಾ. ೬-೪-೫೩ । ಇತಿ ತೃಚಿ ಣಿಲೋಪೋ ನಿಪಾತ್ಯತೇ ॥

॥ ಪ್ರತಿಪದಾರ್ಥ ॥

**ಮಾತರಿಶ್ವಾ**—(ಸಕಲ ಜಗತ್ತಿಗೂ ನಿರ್ಮಾತೃವಾದ) ಅಂತರಿಕ್ಷದಲ್ಲಿರುವವನೂ । **ಪುರುವಾರಪುಷ್ಟಿಃ**—ಅನೇಕರಿಂದ ಅಪೇಕ್ಷಿತವಾದ ವೃದ್ಧಿಯುಳ್ಳವನೂ । **ಸ್ವರ್ವಿತ್**—(ಯಜ್ಞದ ಮೂಲಕ) ಸ್ವರ್ಗವನ್ನು ಸೇರಿಸುವವನೂ। **ವಿಶಾಂ**—ಸಕಲ ಪ್ರಜೆಗಳ । **ಗೋಪಾಃ**— ರಕ್ಷಕನೂ । **ರೋದಸ್ಯೋಃ**— ದ್ಯಾವಾಪೃಥಿವಿಗಳ । **ಜನಿತಾ**—ಉತ್ಪಾದಕನೂ ಆದ । **ಸಃ**—ಅಗ್ನಿಯು । **ತನಯಾಯ**—ನನ್ನ ಪುತ್ರನಿಗೆ । **ಗಾತುಂ**—(ಯಜ್ಞಾನುಷ್ಠಾನದ) ಮಾರ್ಗವನ್ನು । **ವಿದತ್**—ತಿಳಿಸಿಕೊಡಲಿ । **ದ್ರವಿಣೋದಾಂ**— ಧನದಾತನಾದ । **ಅಗ್ನಿಂ**— ಅಗ್ನಿಯನ್ನು । **ದೇವಾಃ**—ಋತ್ವಿಕ್ಕುಗಳು । **ಧಾರಯನ್**—(ಗಾರ್ಹಪತ್ಯಾದಿರೂಪಗಳಿಂದ) ಇಟ್ಟುಕೊಂಡರು ॥

**ಅಥವಾ**

**ದೇವಾಃ**—ಇಂದ್ರಾದಿ ದೇವತೆಗಳು । **ಅಗ್ನಿಂ**—ಅಗ್ನಿಯನ್ನು । **ದ್ರವಿಣೋದಾಂ**—(ಹವಿಸ್ಸಿನರೂಪದ) ಧನವನ್ನು ಹಂಚಿಕೊಡುವವನನ್ನಾಗಿ । **ಧಾರಯನ್**—(ದೂತಕಾರ್ಯಕ್ಕೆ) ಇರಿಸಿಕೊಂಡರು ॥

ಭಾವಾರ್ಥ

ಸಕಲ ಜಗತ್ತಿಗೂ ನಿರ್ಮಾತೃವಾದ ಅಂತರಿಕ್ಷದಲ್ಲಿರುವವನೂ, ಅನೇಕರಿಂದ ಅಪೇಕ್ಷಿತವಾದ ವೃದ್ಧಿಯುಳ್ಳವನೂ, ಯಜ್ಞದ ಮೂಲಕ ಸ್ವರ್ಗವನ್ನು ಸೇರಿಸುವವನೂ, ಸಕಲ ಪ್ರಜೆಗಳ ರಕ್ಷಕನೂ ದ್ಯಾವಾಪೃಥಿವಿಗಳ ಉತ್ಪಾದಕನೂ ಆದ ಅಗ್ನಿಯು ನನ್ನ ಪುತ್ರನಿಗೆ ಯಜ್ಞಾನುಷ್ಠಾನದ ಮಾರ್ಗವನ್ನು ತಿಳಿಸಿಕೊಡಲಿ. ಇಂದ್ರಾದಿ ದೇವತೆಗಳು ಅಗ್ನಿಯನ್ನು ಹವಿಸ್ಸಿನ ರೂಪದ ಧನವನ್ನು ಹಂಚಿಕೊಡುವ ದೂತಕಾರ್ಯದಲ್ಲಿ ಇರಿಸಿಕೊಂಡರು.

## English Translation

May Agni, the dweller in the firmament, the nourisher with abundant benefits, the bestower of Swarga, the protector of mankind, the progenitor of heaven and earth, instruct my sons in the right way; the gods retain Agni as the giver of (sacrificial) wealth.

॥ ವಿಶೇಷವಿಷಯಗಳು ॥

ಇಲ್ಲಿ ಐದು ವಿಶೇಷಣಗಳಿಂದ ಅಗ್ನಿಯ ಸ್ವರೂಪವನ್ನೂ ಸಾಮರ್ಥ್ಯವನ್ನೂ ಹೊಗಳಿ ಅಂತಹ ಅಗ್ನಿಯು ನನ್ನಂತೆ ನನ್ನ ಸಂತತಿಗೂ ಯಜ್ಞಯಾಗಾದಿ ಕರ್ಮಾನುಷ್ಠಾನಕ್ಕೆ ಸಮೃದ್ಧಿಯನ್ನು ಕೊಡಲಿ ಎಂದು ಪ್ರಾರ್ಥಿಸಿದೆ.

**ಮಾತರಿಶ್ವಾ—ಮಾತರಿ ಸರ್ವಸ್ಯ ಜಗತಃ ನಿರ್ಮಾತರಿ ಅಂತರಿಕ್ಷೇ ಶ್ವಸನ್ ವರ್ತಮಾನಃ ।** ಸಕಲ ಜಗತ್ತಿಗೂ ನಿರ್ಮಾಪಕನಾದ ಅಂತರಿಕ್ಷದಲ್ಲಿರುವ ಅಗ್ನಿಯೆಂದು ಸಾಯಣರೂ, **ಮಾತರಿಶ್ವಸಂಬಂಧಾದಗ್ನಿರೇವ ಮಾತರಿಶ್ವೇತ್ಯುಚ್ಯತೇ ।** ಮಾತರಿಶ್ವನಿಗೆ (ವಾಯು) ಸಂಬಂಧಿಸಿರುವುದರಿಂದ ಎಂದರೆ ಅಗ್ನಿಯ ಆವಿರ್ಭಾವಕ್ಕೆ ಮಾತರಿಶ್ವನೇ ಕಾರಣನಾದುದರಿಂದ ಅಗ್ನಿಗೂ ಮಾತರಿಶ್ವನೆಂದೇ ಹೆಸರು ಎಂದು ಸ್ಕಂದಸ್ವಾಮಿಗಳೂ ವಿವರಿಸಿರುತ್ತಾರೆ. ಇಲ್ಲಿ ಎರಡು ಅರ್ಥಗಳ ಯೋಜನೆಗೂ ಅವಕಾಶವಿರುವುದು.

**ಉದಸ್ತಂಭೀತ್ಸಮಿಧಾ ನಾಕಮೃಷ್ವೋ೭ ಗ್ನಿರ್ಭವನ್ನುತ್ತಮೋ ರೋಚನಾನಾಂ ।**

( ಋ. ಸಂ. ೩-೫-೧೦ )

ಅಗ್ನಿಯು ತನ್ನ ತೇಜಸ್ಸಿನಿಂದ ಅಂತರಿಕ್ಷನಲ್ಲಿ ಎಲ್ಲಾ ತೇಜೋವಾಹಿಗಳಿಗಿಂತಲೂ ಉತ್ತಮವಾಗಿ ಪ್ರಕಾಶಿಸಿದನು ಎಂಬ ವರ್ಣನೆಗಳಿಂದ ಮೊದಲನೆಯ ಅರ್ಥವು ಸಾಧ್ಯವಾಗುವುದು. ಅದೇ ಸುಕ್ತದ ಉತ್ತರಭಾಗವಾದ

**ಯದೀ ಭೃಗುಭ್ಯಃ ಪರಿ ಮಾತರಿಶ್ವಾ ಗುಹಾ ಸಂತಂ ಹವ್ಯವಾಹಂ ಸಮೀಧೇ ।**

(ಋ. ಸಂ. ೩-೫-೧೦)

ಎಂಬ ವಾಕ್ಯದಲ್ಲಿ ಮಾತರಿಶ್ವನು ಅಗ್ನಿಯ ಆವಿರ್ಭಾವಕ್ಕೆ ಕಾರಣವಾಗಿರುವುದನ್ನು ವಿವರಿಸಿರುವುದರಿಂದ ಈ ಆಧಾರದ ಮೇಲೆ ಎರಡನೇ ಅರ್ಥವನ್ನು ಹೇಳಬಹುದು.

**ಪುರುವಾರಪುಷ್ಟಿಃ**--**ಬಹುಭಿರ್ವರಣೀಯೊ ಅಭಿವೃದ್ಧಿರ್ಯಸ್ಯ ಸಃ** ದೇವಮಾನವಾದ್ಯನೇಕರು ಅಗ್ನಿಯ ವೃದ್ಧಿಯನ್ನು ಅಪೇಕ್ಷಿಸುವರಾದ್ದರಿಂದ ಈ ವಿಶೇಷಣವಿದೆ. ಹವಿಸ್ಸನ್ನು ಹಂಚಿ ದೇವತೆಗಳಿಗೆ ತೃಪ್ತಿಯನ್ನು ಕೊಡುವುದರಿಂದಲೂ,

**ಮಹಾँ ಅಸ್ಯಧ್ವರಸ್ಯ ಪ್ರಕೇತೋ ನ ಋತೇ ತ್ವದಮೃತಾ ಮಾದಯಂತೇ ।**

(ಋ. ಸಂ. ೭-೧೧-೧-)

ಅಗ್ನಿಯಿಲ್ಲದೇ ದೇವತೆಗಳಿಗೆ ತೃಪ್ತಿಯೇ ಇಲ್ಲ ಎಂಬುದು ಸ್ಪಷ್ಟವಾಗಿರುವುದರಿಂದಲೂ ದೇವತೆಗಳು ಅಗ್ನಿಯ ವೃದ್ಧಿಯನ್ನಪೇಕ್ಷಿಸುತ್ತಾರೆ, ಹಾಗೆಯೇ ಸಕಲ ಸತ್ಸಂಪತ್ತುಗಳನ್ನೂ ಪ್ರತಿಫಲವನ್ನಾಗಿ ಕೊಡತಕ್ಕ ಯಜ್ಞಾದಿ ಕರ್ಮಗಳಿಗೆ ಅಗ್ನಿಯೇ ಆತ್ಮಸ್ವರೂಪನಾದುದರಿಂದ ಮಾನವರೂ ಅಗ್ನಿಯ ವೃದ್ಧಿಯನ್ನು ಅಪೇಕ್ಷಿಸುತ್ತಾರೆ. ಆದುದರಿಂದ **ಪುರುವಾರಪುಷ್ಟಿಃ** ಎಂಬ ವಿಶೇಷಣವಿದೆ.

**ಸ್ವರ್ವಿತ್**—**ಸ್ವಃ ಸ್ವರ್ಗಸ್ಯ ಯಾಗದ್ವಾರೇಣ ಲಂಭಯಿತಾ ।** ಯಾಗಾದಿಗಳ ಮೂಲಕ ಯಜ್ಞಕರ್ತರನ್ನು ಸ್ವರ್ಗಕ್ಕೆ ಸೇರಿಸುವವನೆಂದು ಸಾಯಣರೂ ; **ಸರ್ವಸ್ಯ ವೇದಿತಾ**—ಸಕಲವನ್ನು ತಿಳಿಯುವವನೆಂದು ಸ್ಕಂದಸ್ವಾಮಿಗಳೂ ವಿವರಿಸಿರುವರು.

**ಅಗ್ನಿಷ್ಟಾ ವಿಶ್ವಾ ಭುವನಾನಿ ವೇದ ಮಹದ್ದೇವಾನಾಮಸುರತ್ವಮೇಕಂ ।**

(ಋ. ಸಂ. ೩-೫೫-೧೦)

**ಸ ಹಿ ವೇದಾ ವಸುಧಿತಿಂ ಮಹಾँ ಆರೋಧನಂ ದಿವಃ ।**

(ಋ. ಸಂ. ೪-೮-೨)

ಎಂಬುದಾಗಿ ಅಗ್ನಿಯು ಸಕಲವನ್ನೂ ತಿಳಿದವನೆಂದು ಪ್ರಶಂಸಿರುವುದರಿಂದ ಎರಡನೆಯ ಅರ್ಥವೂ ಸಾಧ್ಯವಾಗುತ್ತದೆ.

**ವಿಶಾಂ ಗೋಪಾಃ**—**ಸರ್ವಾಸಾಂ ಪ್ರಜಾನಾಂ ರಕ್ಷಿತಾ ।** ಸಕಲ ಪ್ರಜೆಗಳ ರಕ್ಷಕನು. ಋ. ಸಂ. ೧-೧೨-೨ ; ೧-೩೬-೭ ; ೧-೩೧-೧೧ ; ೨-೧-೮ ; ೩-೧೧-೫ ಇತ್ಯಾದ್ಯನೇಕ ಸ್ಥಳಗಳಲ್ಲಿ **ವಿಶ್ಪತಿಃ, ವಿಶಾಂ**

**ಗೋಪಾಃ**, **ವಿಶಾಂ ಪುರ ಏತಾ** ಎಂಬುದಾಗಿ ಅಗ್ನಿಯು ಪ್ರಜಾರಕ್ಷಕನೆಂಬ ವರ್ಣನೆಯು ಇರುವಂತೆ ಇಲ್ಲಿಯೂ **ವಿಶಾಂ ಗೋಪಾಃ** ಎಂದು ಸ್ತುತಿಸಿದೆ.

**ರೋದಸ್ಯೋಃ ಜನಿತಾ— ದ್ಯಾವಾಪೃಥಿವ್ಯೋಃ ಉತ್ಪಾದಯಿತಾ ।** ದ್ಯಾವಾಪೃಥಿವಿಗಳ ಉತ್ಪಾದಕನು. ಅಗ್ನಿಯು ದ್ಯಾವಾಪೃಥಿವಿಗಳಿಂದ ಉತ್ಪನ್ನನಾದವನೆಂದು ಹಿಂದಿನ ಋಕ್ಕುಗಳ ವಿವರಣೆಯಲ್ಲಿ ಕೆಲವುಕಡೆ ಶ್ರುತಿವಾಕ್ಯಗಳನ್ನು ಉದಹರಿಸಿ ತಿಳಿಸಿದೆ. ಅದರಂತೆಯೇ ಇನ್ನು ಕೆಲವು ಕಡೆಗಳಲ್ಲಿ ಅಗ್ನಿಯು ಅವುಗಳ ಉತ್ಪಾದಕನೆಂದು ಸ್ತುತಿಸಿದೆ.

**ವಿ ಯೋ ರಜಾಂಸ್ಯಮಿಮೀತ ಸುಕ್ರತುರ್ವೈಶ್ವಾನರೋ ವಿ ದಿವೋ ರೋಚನಾ ಕವಿಃ ।**
**ಪರಿ ಯೋ ವಿಶ್ವಾ ಭುವನಾನಿ ಪಪ್ರಥೇಽದಬ್ಧೋ ಗೋಪಾ ಅಮೃತಸ್ಯ ರಕ್ಷಿತಾ ॥**
( ಋ. ಸ. ೬-೭-೭ )

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯು ಲೋಕಗಳನ್ನೂ, ಅಂತರಿಕ್ಷದ ಸಕಲ ತೇಜೋಮಂಡಲಗಳನ್ನು ನಿರ್ಮಿಸಿದನೆಂದು ವರ್ಣಿಸಿದೆ.

**ಗಾತುಂ— ಅನುಷ್ಠಾನಮಾರ್ಗಂ ।** ಎಂದು ಸಾಯಣರೂ, **ದೇವಲೋಕಗಮನಮಾರ್ಗಂ ।** ಎಂದು ಸ್ಕಂದಸ್ವಾಮಿಗಳೂ ವಿವರಿಸಿರುವರು. ಋಂ. ಸಂ. ೧-೯೪-೯ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ **ಸುಗಂ** ಎಂಬ ಶಬ್ದಕ್ಕೆ ಇರುವಂತೆಯೇ ಈ ಪದಕ್ಕೂ ಭೌತಿಕವಾದ ಮತ್ತು ನೈತಿಕವಾದ ಅರ್ಥಗಳಿರುವುವು. ಈ ಎರಡು ಅರ್ಥಗಳಲ್ಲಿಯೂ, ಈ ಪದದ ಪ್ರಯೋಗವಿದೆ. ಋ. ಸಂ ೩-೪-೪ ; ೯-೮೫-೪ ; ೯-೯೬-೧೦ ; ೩-೩೧-೯, ಇತ್ಯಾದಿ ಋಕ್ಕುಗಳಲ್ಲಿ ಮಾರ್ಗವೆಂಬುದಾಗಿಯೂ, ೩-೫೪-೧೪ರಲ್ಲಿ ಗೃಹವೆಂದೂ, ೫-೩೨-೧೦ರಲ್ಲಿ ಭೂಮಿಯೆಂದೂ, ೪-೪-೬ರಲ್ಲಿ ಸ್ತೋತ್ರವೆಂದೂ ನಾನಾ ವಿಧವಾದ ಅರ್ಥಗಳಲ್ಲಿ **ಗಾತು** ಶಬ್ದದ ಪ್ರಯೋಗವಿದೆ. ಇಲ್ಲಿ ಯಜ್ಞಾನುಷ್ಠಾನದ ಮಾರ್ಗವನ್ನು ಅಗ್ನಿಯು ತೋರಿಸಲಿ ಎಂದರೆ ಸದ್ಬುದ್ಧಿಯನ್ನು ಕೊಡಲಿ ಎಂದರ್ಥ.

ವ್ಯಾಕರಣಪ್ರಕ್ರಿಯಾ

**ಮಾತರಿಶ್ವಾ**— ಇದು ಶ್ವನ್ನುಕ್ಷನ್—(ಉ. ಸೂ. ೧-೧೫೬) ಎಂಬುದರಿಂದ ಮಾತೃ ಶಬ್ದ ಉಪಪದವಾಗಿರುವಾಗ ಶ್ವಸ ಪ್ರಾಣನೇ ಎಂಬ ಧಾತುವಿಗೆ ಕನಿನ್‌ಪ್ರತ್ಯಯ ಬಂದು ನಿಪಾತಿತವಾಗಿದೆ. ಆದುದರಿಂದಲೇ ಪೂರ್ವಪದದಲ್ಲಿ ವಿಭಕ್ತಿಗೆ ಲುಕ್ ಬರುವುದಿಲ್ಲ. ಪ್ರಥಮಾ ಸು ಪರವಾದಾಗ ನಾಂತೋಪಧೆಗೆ ದೀರ್ಘ.

**ವಿದತ್**— ವಿದ್ಲೃ ಲಾಭೇ. ಧಾತು. ಇಲ್ಲಿ ಪ್ರೇರಣಾ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದುದೆಂದು ಸ್ವೀಕರಿಸಬೇಕು. ಇದಕ್ಕೆ ಲೋಡರ್ಥ ತೋರುವಾಗ **ಛಂದಸಿ ಲುಙ್‌ಲಙ್‌ಲಿಟಃ**—ಎಂಬುದರಿಂದ ಲುಙ್. ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ**—ಸೂತ್ರದಿಂದ ಅದರ ಇಕಾರಕ್ಕೆ ಲೋಪ. ಲೃದಿತ್ತಾದುದರಿಂದ **ಪುಷಾದಿದ್ಯುತಾದಿ**—(ಪಾ. ಸೂ. ೩-೧-೫೫) ಎಂಬುದರಿಂದ ಚ್ಲಿಗೆ ಅಙಾದೇಶ. ಙಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ**—ಎಂಬುದರಿಂದ ಅಡಾಗಮ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ **ಅಪಾದಾದೌ**—ಎಂದು ನಿಷೇಧವಾಗಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಙ್ ಪ್ರತ್ಯಯಸ್ವರ ಬರುತ್ತದೆ.

**ವಿಶಾಮ್**—ಏಕಾಚಾದುದರಿಂದ **ಸಾವೇಕಾಚಸ್ತೃತೀಯಾದಿಃ**—(ಪಾ. ಸೂ. ೬-೧-೧೬೮) ಎಂಬುದ ರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಜನಿತಾ**—ಜನೀ ಪ್ರಾದುರ್ಭಾವೇ ಧಾತು. ಇದಕ್ಕೆ ಪ್ರೇರಣಾ ತೋರುವಾಗ **ಹೇತುಮತಿಚ**—ಎಂಬುದ ರಿಂದ ಣಿಚ್. ಉಪಧಾವೃದ್ಧಿ. **ಜನೀಜ್ರ್ಯಷ್ಕ್ನಸುರಂಜೋಽಮಾಂತಾಶ್ಚ**—ಎಂಬುದರಿಂದ ಇದಕ್ಕೆ ಮಿತ್ ಸಂಜ್ಞಾ ಬರುವುದರಿಂದ **ಮಿತಾಂ ಹ್ರಸ್ವಃ**—(ಪಾ. ಸೂ. ೬-೪-೯೨) ಎಂಬುದರಿಂದ ಉಪಧಾಕ್ಕೆ ಹ್ರಸ್ವ. ಜನಿ ಎಂಬ ಣಿಜಂತಧಾತುವಿನ ಮೇಲೆ ಕರ್ತರಿಯಲ್ಲಿ ತೃಚ್ ಪ್ರತ್ಯಯ. **ಆರ್ಧಧಾತುಕಸ್ಯೇಡ್ವಲಾದೇಃ**—(ಪಾ. ಸೂ. ೭-೨-೩೫) ಎಂಬುದರಿಂದ ಅದಕ್ಕೆ ಇಡಾಗಮ. ಇಡಾದಿ ಆರ್ಧಧಾತುಕವಿರುವುದರಿಂದ ಲೋಪ ಬರದಿರುವಾಗ **ಜನಿತಾಮಂತ್ರೇ** (ಪಾ. ಸೂ. ೬-೪-೫೩) ಎಂಬುದರಿಂದ ಣಿಲೋಪವು ನಿಪಾತಿತವಾಗುತ್ತದೆ. ಜನಿತಾ ಎಂದು ರೂಪವಾಗುತ್ತದೆ. ಪ್ರತ್ಯಯ ಚಿತ್ತಾದುದರಿಂದ **ಚಿತಃ**—ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಗಾತುಮ್**—ಗೈ ಶಬ್ದೇ ಧಾತು. **ಆದೇಚ ಉಪದೇಶೇಽಶಿತಿ**—ಎಂಬುದರಿಂದ ಆತ್ವ. ಇದಕ್ಕೆ ಔಣಾದಿಕ ಅತುಚ್ ಪ್ರತ್ಯಯ. ದ್ವಿತೀಯಾ ಏಕವಚನಾಂತರೂಪ. ‖ ೪ ‖

---

ಸಂಹಿತಾಪಾಠಃ

ನಕ್ತೋಷಾಸಾ ವರ್ಣಮಾಮೇಮ್ಯಾನೇ ಧಾಪಯೇತೇ ಶಿಶುಮೇ-
ಕಂ ಸಮೀಚೀ ।
ದ್ಯಾವಾಕ್ಷಾಮಾ ರುಕ್ಮೋ ಅಂತರ್ವಿ ಭಾತಿ ದೇವಾ ಅಗ್ನಿಂ
ಧಾರಯನ್ದ್ರವಿಣೋದಾಂ ‖ ೫ ‖

‖ ಪದಪಾಠಃ ‖

ನಕ್ತೋಷಸಾ । ವರ್ಣಂ । ಆಮೇಮ್ಯಾನೇ ಇತ್ಯಾಽ ಮೇಮ್ಯಾನೇ । ಧಾಪಯೇತೇ ಇತಿ । ಶಿಶುಂ । ಏಕಂ । ಸಮೀಚೀ ಇತಿ ಸಂಽ ಈಚೀ ।

ದ್ಯಾವಾಕ್ಷಾಮಾ । ರುಕ್ಮಃ । ಅಂತಃ । ವಿ । ಭಾತಿ । ದೇವಾಃ । ಅಗ್ನಿಂ । ಧಾರಯನ್ । ದ್ರವಿಣಃಽದಾಂ ॥ ೬ ॥

ಸಾಯಣಭಾಷ್ಯಂ

ನಕ್ತೋಷಾಸಾ ರಾತ್ರಿರಹಶ್ಚ ವರ್ಣಂ ಸ್ವಕೀಯಂ ಸ್ವರೂಪಮಾಮೇಮ್ಯಾನೇ ಪರಸ್ಪರಂ ಪುನಃಪುನರ್ಹಿಂಸಂತ್ಯೌ ಸಮೀಚೀ ಸಂಗತೇ ಸಂಶ್ಲಿಷ್ಟೇ । ಏವಂಭೂತೇ ಅಹಸ್ರಿಯಾಮೇ ಏಕಂ ಶಿಶುಮುಷ್ಯಃ ಪುತ್ರಮಗ್ನಿಂ ಧಾಪಯೇತೇ ಹವೀಂಷಿ ಪಾಯಯೇತೇ । ರುಕ್ಮೋ ರೋಚಮಾನಃ ಸೋಽಗ್ನಿರ್ದ್ಯಾವಾಕ್ಷಾಮಾ ದ್ಯಾವಾಪೃಥಿವ್ಯೋರಂತರ್ಮಧ್ಯೇ ವಿ ಭಾತಿ । ವಿಶೇಷೇಣ ಪ್ರಕಾಶತೇ । ಅನ್ಯತ್ಪೂರ್ವವತ್ ॥ ನಕ್ತೋಷಸಾ । ನಕ್ತೇತಿ ರಾತ್ರಿನಾಮ । ನಕ್ತೋಷಾಶ್ಚ ನಕ್ತೋಷಸಾ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಅನ್ಯೇಷಾಮಪೀತಿ ಸಾಂಹಿತಿಕಮುಪಧಾದೀರ್ಘತ್ವಂ । ದೇವತಾದ್ವಂದ್ವೇ ಚೇತಿ ಪೂರ್ವೋತ್ತರಪದಯೋರ್ಯುಗಪತ್ಪ್ರಕೃತಿಸ್ವರತ್ವಂ । ಆಮೇಮ್ಯಾನೇ । ಮೀಞ್ ಹಿಂಸಾಯಾಂ । ಅಸ್ಮಾದ್ಯಙ್ಲುಗಂತಾದ್ವ್ಯತ್ಯಯೇನ ಶಾನಚ್ । ಅದಾದಿವಚ್ಚೇತಿ ವಚನಾಚ್ಛಪೋ ಲುಕ್ । ಏರನೇಕಾಚ ಇತಿ ಯಣ್ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ । ಧಾಪಯೇತೇ । ಧೇಟ್ ಪಾನೇ । ಅಸ್ಮಾಣ್ಣ್ಯಂತಾನ್ನಿಗರಣಚಲನೇತಿ। ಪಾ. ೧-೩-೮೭ । ಪ್ರಾಪ್ತಸ್ಯ ಪರಸ್ಮೈಪದಸ್ಯ ಪಾದಿಷು ಧೇಟ ಉಪಸಂಖ್ಯಾನಂ ।ಪಾ. ೧-೩-೮೯-೧ । ಇತಿ ವಚನಾತ್ ನ ಪಾದಮ್ಯಾಙ್ಯಮ । ಪಾ. ೧-೩-೮೯ । ಇತಿ ಪ್ರತಿಷೇಧಃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಣಿಚ ಏವ ಸ್ವರಃ ಶಿಷ್ಯತೇ । ಪಾದಾದಿತ್ವಾನ್ನಿಘಾತಾಭಾವಃ । ಸಮೀಚೀ । ಸಂಪೂರ್ವಾದಂಚತೇರೃತ್ವಿಗಿತ್ಯಾದಿನಾ ಕ್ವಿನ್ । ಅನಿದಿತಾಮಿತಿ ನಲೋಪಃ। ಸಮಃ ಸಮಿ । ಪಾ. ೬-೩-೯೩ । ಇತಿ ಸಮ್ಯಾದೇಶಃ ಅಂಚತೇಶ್ಚೋಪಸಂಖ್ಯಾನಮಿತಿ ಙೀಪ್ । ಅಚ ಇತ್ಯಕಾರಲೋಪೇ ಚಾವಿತಿ ದೀರ್ಘತ್ವಂ । ಉದಾತ್ತನಿವೃತ್ತಿಸ್ವರೇಣ ಙೀಪ ಉದಾತ್ತತ್ವಂ । ಪದಕಾರಸ್ಯ ತ್ವಯಮಭಿಪ್ರಾಯಃ । ಉದ ಈತ್ । ಪಾ. ೬-೪-೧೩೯ । ಇತಿ ವಿಧೀಯಮಾನಮೀತ್ವಂ ಸಮ ಉತ್ತರಸ್ಯಾಪ್ಯಂಚತೇರ್ವ್ಯತ್ಯಯೇನ ಭವತೀತಿ । ವಾ ಛಂದಸೀತಿ ಪೂರ್ವಸವರ್ಣದೀರ್ಘತ್ವಂ । ದ್ಯಾವಾಕ್ಷಾಮಾ । ದಿವೋ ದ್ಯಾವೇತಿ ದ್ಯಾವಾದೇಶಃ । ಸುಪಾಂ ಸುಲುಗಿತಿ ಷಷ್ಠ್ಯಾ ಡಾದೇಶಃ । ದೇವತಾದ್ವಂದ್ವೇ ಚೇತಿ ಪೂರ್ವೋತ್ತರಪದಯೋರ್ಯುಗಪತ್ಪ್ರಕೃತಿಸ್ವರತ್ವಂ ॥

ಪ್ರತಿಪದಾರ್ಥ

ನಕ್ತೋಷಸಾ—ರಾತ್ರಿ ಮತ್ತು ಉಷಸ್ಸು ಎರಡೂ ಕೂಡ । ವರ್ಣಂ—(ತಮ್ಮ ತಮ್ಮ) ಸ್ವರೂಪವನ್ನು । ಆಮೇಮ್ಯಾನೇ—ಪರಸ್ಪರವಾಗಿ ಕೆಡಿಸಿ ಅಳಿಸುತ್ತಾ । ಸಮೀಚೀ—ಒಟ್ಟಿಗೆ ಸೇರಿಕೊಂಡು । ಏಕಂ ಶಿಶುಂ—ಅಗ್ನಿರೂಪದ ಒಬ್ಬ ಪುತ್ರನನ್ನು । ಧಾಪಯೇತೇ—(ಹವಿಸ್ಸನ್ನು) ಕುಡಿಯುವಂತೆ ಮಾಡುತ್ತವೆ । ರುಕ್ಮಃ—ಪ್ರಕಾಶಮಾನನಾದ ಅಗ್ನಿಯು । ದ್ಯಾವಾಕ್ಷಾಮಾ—ದ್ಯಾವಾಪೃಥಿವಿಗಳ । ಅಂತಃ—ಮಧ್ಯಭಾಗದಲ್ಲಿ । ವಿ ಭಾತಿ—ಅತಿಶಯವಾಗಿ ಪ್ರಕಾಶಿಸುತ್ತಾನೆ.

**ದ್ರವಿಣೋದಾಂ**—ಧನದಾತನಾದ । **ಅಗ್ನಿಂ**—ಅಗ್ನಿಯನ್ನು । **ದೇವಾಃ**—ಋತ್ವಿಕ್ಕುಗಳು । **ಧಾರಯನ್**—(ಗಾರ್ಹಪತ್ಯಾದಿರೂಪಗಳಿಂದ) ಇಟ್ಟುಕೊಂಡರು. ।

ಅಥವಾ

**ದೇವಾಃ**—ಇಂದ್ರಾದಿದೇವತೆಗಳು । **ಅಗ್ನಿಂ**—ಅಗ್ನಿಯನ್ನು । **ದ್ರವಿಣೋದಾಂ**—(ಹವಿಸ್ಸಿನರೂಪದ) ಧನವನ್ನು ಹಂಚಿಕೊಡುವವನನ್ನಾಗಿ । **ಧಾರಯನ್**—(ದೂತಕಾರ್ಯದಲ್ಲಿ) ಇರಿಸಿಕೊಂಡರು.

॥ ಭಾವಾರ್ಥ ॥

ರಾತ್ರಿ ಮತ್ತು ಅಹಸ್ಸು ಎರಡೂ ಕೂಡ ತಮ್ಮ ತಮ್ಮ ಸ್ವರೂಪಗಳನ್ನು ಪರಸ್ಪರವಾಗಿ ಕೆಡಿಸಿ ಅಳಿಸುತ್ತಾ ಇದ್ದರೂ ಎರಡೂ ಒಟ್ಟಿಗೆ ಸೇರಿಕೊಂಡು ಅಗ್ನಿರೂಪದ ಪುತ್ರನಿಗೆ ಹವಿಸ್ಸನ್ನು ಕುಡಿಸುತ್ತವೆ. ಪ್ರಕಾಶಮಾನನಾದ ಅಗ್ನಿಯು ದ್ಯಾವಾಪೃಥಿವಿಗಳ ಮಧ್ಯಭಾಗದಲ್ಲಿ ಅತಿಶಯವಾಗಿ ಪ್ರಕಾಶಿಸುತ್ತಾನೆ. ಇಂದ್ರಾದಿದೇವತೆಗಳು ಅಗ್ನಿಯನ್ನು ತಮಗೆ ಹವಿಸ್ಸನ್ನು ಹಂಚಿಕೊಡುವ ದೂತಕಾರ್ಯದಲ್ಲಿ ಇರಿಸಿಕೊಂಡರು.

English Translation

The night and the day, mutually effacing each other's complexion, give nourishment, combined together, to one infant, who radiant, shines between earth and heaven : the gods retain Agni as the giver of sacrificial wealth.

ವಿಶೇಷವಿಷಯಗಳು

**ದ್ವೇ ವಿರೂಪೇ ಚರತಃ** (ಋ.ಸಂ. ೧-೯೫-೧) ಇತ್ಯಾದಿ ಋಕ್ಕುಗಳಲ್ಲಿ ವರ್ಣಿಸಿರುವ ಸನ್ನಿವೇಶವೇ ಇಲ್ಲೂ ವರ್ಣಿತವಾಗಿದೆ. ಆದರೆ ಅಲ್ಲಿ ಅಹೋರಾತ್ರಗಳ ಪರ್ಯಾಯರೂಪವಾದ ಗಮನಾಗಮನವನ್ನು ಮಾತ್ರ ವರ್ಣಿಸಿದೆ. ಇಲ್ಲಿ ವಿರೋಧಸ್ವರೂಪಗಳುಳ್ಳ ತೇಜಸ್ತಮಸ್ಸುಗಳ ಆವಿರ್ಭಾವಗಳನ್ನು ವರ್ಣಿಸಿ ಅವಕ್ಕೂ ಅಗ್ನಿಗೂ ಇರುವ ಸಂಬಂಧವನ್ನು ತಿಳಿಸಿದೆ.

**ವರ್ಣಂ ಆಮೇಮ್ಯಾನೇ**—**ಪರಸ್ಪರಂ ಪುನಃಪುನರ್ಹಿಂಸಂತ್ಯೌ** । ಪರಸ್ಪರವಾಗಿ ಕೆಡಿಸಿ ಅಳಿಸುತ್ತಾ, ರಾತ್ರಿಯ ಪ್ರಭಾವದಿಂದ ಬೆಳಕೂ, ಅಹಸ್ಸಿನ ಪ್ರಭಾವದಿಂದ ಕತ್ತಲೆಯೂ ಅಳಿಸಲ್ಪಡುವುವು. ಹಿಂಸಾರ್ಥಕವಾದ **ಮೀ** ಧಾತುವಿಗೆ ಆ ಎಂಬ ಉಪಸರ್ಗವು ಸೇರಿಸಿ ಈ ರೂಪವನ್ನು ಪ್ರಯೋಗಿಸಿದೆ. **ಆ+ಮೀ** ಎಂಬ ಮೂಲದಿಂದ ನಿಷ್ಪನ್ನವಾಗುವ ಪ್ರಯೋಗಗಳನ್ನು ಅನೇಕ ಕಡೆಗಳಲ್ಲಿ ಹಿಂಸೆಯನ್ನುಂಟುಮಾಡು, ನಾಶಮಾಡು ಎಂಬರ್ಥದಲ್ಲಿ ಉಪಯೋಗಿಸಿದ್ದರೂ ಇಲ್ಲಿ ಮಾತ್ರ ಅಹೋರಾತ್ರಗಳು ತಮ್ಮ ಅಸ್ತಿತ್ವವನ್ನು ವಿನಿಮಯ ಮಾಡಿಕೊಂಡವು ಎಂದು ಹೇಳುವುದು ಸಾಧುವಾಗಿದೆ. ಅಹೋರಾತ್ರಗಳನ್ನು ಸಹೋದರಿಯರೆಂದು ಕರೆದಿರುವುದರಿಂದಲೂ, (೧-೧೨೪-೮) ತಮ್ಮಿಬ್ಬರ ಏಕಮಾತ್ರ ಶಿಶುವಿನಲ್ಲಿ ಪ್ರೇಮವನ್ನು ತೋರಿಸುವರೆಂದು ವರ್ಣಿಸಿರುವುದರಿಂದಲೂ ಈ ಅರ್ಥವು ಹೊಂದಿಕೊಳ್ಳುವುದು. ಮೋನಿಯರ್ ವಿಲಿಯಂಸ್ ಡಿಕ್ಷನರಿಯಲ್ಲಿಯೂ ಸಹ ಈ ಸಂದರ್ಭದಲ್ಲಿ ಬರುವ **ಆ+ಮೀ** ಎಂಬ ಮೂಲಕ್ಕೆ ವಿನಿಮಯ (to change, alter ; I. 96-5) ಎಂಬ ಅರ್ಥವನ್ನು ಹೇಳಿ ಈ ಋಕ್ಕನ್ನೇ ಉದ

ಕರಿಸಿದೆ. ಮತ್ತು ೧-೭೯-೨ ; ೧-೯೩-೧೦ ; ೬-೩೦-೨ ಇತ್ಯಾದಿ ಸೂಕ್ತಗಳಲ್ಲಿ ವರ್ಣಿತವಾಗುವ ಸನ್ನಿವೇಶಗಳಲ್ಲಿ ಹಿಂಸೆ ಎನ್ನುವ ಅರ್ಥವು ಉಚಿತವಾಗಿರುವುದು. ಆದರೆ ಸಾಯಣರೂ ಸ್ಕಂದಸ್ವಾಮಿಗಳೂ ಇಬ್ಬರೂ ಸಹ **ಪರಸ್ಪರಂ ಹಿಂಸಂತ್ಯೌ** ಎಂದೇ ವಿವರಿಸಿರುತ್ತಾರೆ. ನಿರುಕ್ತಕಾರರು ಇದೇ ಭಾವವನ್ನು ವಿವರಿಸುವ—

**ಸಮಾನಬಂಧೂ ಅಮೃತೇ ಅನೂಚೀ ದ್ಯಾವಾ ವರ್ಣಂ ಚರತ ಆಮಿನಾನೇ ।**
(ಋ. ಸಂ. ೧-೧೧೩-೨).

ಎಂಬ ಋಕ್ಕಿನಲ್ಲಿ ಬರುವ ಆಮಿನಾನೇ ಎಂಬ ಪದಕ್ಕೆ **ಅನ್ಯೋನ್ಯಸ್ಯ ಅಧ್ಯಾತ್ಮಂ ಕುರ್ವಾಣೇ ।** ಪರಸ್ಪರವಾಗಿ ತಮ್ಮ ಅಂತಸ್ಸತ್ತ್ವವನ್ನು ಪ್ರಕಾಶಪಡಿಸುತ್ತಾ ಎಂದು ವಿವರಿಸಿರುತ್ತಾರೆ. ಅದರಂತೆಯೇ ಇಲ್ಲಿಯೂ ಹೇಳಬಹುದು.

**ಧಾಪಯೇತೇ ಶಿಶುಮೇಕಂ ಸಮೀಚೀ—ಅಹ್ನಃ ಪುತ್ರಮಗ್ನಿಂ ಹವೀಂಷಿ ಪಾಯಯೇತೇ ।** ಅಹಸ್ಸಿನ ಅಥವಾ ಉಷಸ್ಸಿನ ಪುತ್ರನಾದ ಅಗ್ನಿಗೆ ಹವಿಸ್ಸುಗಳನ್ನು ಪಾನಮಾಡುವಂತೆ ಅನುಕೂಲಪಡಿಸುತ್ತವೆ. ಈ ಅಭಿಪ್ರಾಯವನ್ನು ಋ. ಸಂ. ೧-೯೫-೧ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಿದೆ. ಐತರೇಯ ಬ್ರಾಹ್ಮಣದಲ್ಲಿ **ಪ್ರಜಾಪತಿರ್ವೈ ಸ್ವಾಂ ದುಹಿತರಮಭ್ಯಧ್ಯಾಯತ್ ।** (ಐ. ಬ್ರಾ. ೧೩-೯) ಎಂದು ಪ್ರಜಾಪತಿಯಿಂದ ಉಷಸ್ಸಿನಲ್ಲಿ ಆದಿತ್ಯರೂಪನಾದ ಅಗ್ನಿಯ ಉತ್ಪತ್ತಿ ಕಥೆಯನ್ನೂ ಪಠಿಸಿದೆ. ಇಂತಹ ಪುತ್ರರೂಪನಾದ ಅಗ್ನಿಗೆ ಹವಿಸ್ಸುಗಳು ಲಭಿಸುವಂತೆ ಮಾಡಿದವು ಎಂದರ್ಥ.

**ದ್ಯಾವಾಕ್ಷಾಮಾ ರುಕ್ಮೋ ಅಂತರ್ವಿಭಾತಿ—ದ್ಯಾವಾಪೃಥಿವ್ಯೋರ್ಮಧ್ಯೇ ವಿಶೇಷೇಣ ಪ್ರಕಾಶತೇ।** ದ್ಯಾವಾಪೃಥಿವಿಗಳ ನಡುವೆ ಅತ್ಯಧಿಕವಾಗಿ ಪ್ರಕಾಶಿಸುತ್ತಾನೆ. ತಾನು ಮಾತ್ರ ಅತ್ಯಧಿಕವಾಗಿ ಪ್ರಕಾಶಿಸುವುದಲ್ಲದೆ ತನ್ನ ತೇಜಸ್ಸಿನಿಂದ ದ್ಯಾವಾಪೃಥಿವಿಗಳನ್ನೂ ವಿಸ್ತಾರವಾಗುವಂತೆ ಮಾಡಿದನು ಎಂದು ಇದರಂತೆಯೇ ಇನ್ನು ಅನೇಕ ಕಡೆ ಅಗ್ನಿಯ ಮಹತ್ತಾದ ತೇಜಸ್ಸನ್ನು ವರ್ಣಿಸಿದೆ.

**ವ್ರತಾ ತೇ ಅಗ್ನೇ ಮಹತೋ ಮಹಾನಿ ತವ ಕ್ರತ್ವಾ ರೋದಸೀ ಆ ತತಂಥ ।**
(ಋ. ಸಂ. ೩-೬-೫).

**ಉದಸ್ತಂಭೀತ್ಸಮಿಧಾ ನಾಕಮೃಷ್ವೋಽಗ್ನಿರ್ಭವನ್ನುತ್ತಮೋ ರೋಚನಾನಾಂ ।**
(ಋ. ಸಂ. ೩-೫-೧೦).

ಇತ್ಯಾದಿ ನಾನಾ ಕಡೆಗಳಲ್ಲಿ ಎರಡು ಲೋಕಗಳಿಗೂ ಹರಡಿ ಸಕಲವನ್ನೂ ಪ್ರಕಾಶಪಡಿಸುವ ಅಗ್ನಿಯ ಅದ್ಭುತವಾದ ತೇಜಸ್ಸನ್ನು ಸ್ತುತಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

ನಕ್ತೋಷಸಾ—ನಕ್ತಾ ಎಂಬುದು ರಾತ್ರಿಯ ಹೆಸರು. ನಕ್ತಾ ಉಷಾಶ್ಚ ನಕ್ತೋಷಸಾ. ಇದಕ್ಕೆ ದ್ವಿವಚನ ಔ ಪರವಾದಾಗ **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಇದಕ್ಕೆ ಆಕಾರಾದೇಶ. ಅನ್ಯೇಷಾಮಪಿ ದೃಶ್ಯತೇ (ಪಾ. ಸೂ. ೬-೩-೧೩೭) ಎಂಬುದರಿಂದ ಸಂಹಿತಾದಲ್ಲಿ ಉಪಧಾದೀರ್ಘ ಬರುತ್ತದೆ.

**ದೇವತಾದ್ವಂದ್ವೇ ಚ**—(ಪಾ. ಸೂ. ೬-೨-೧೪೧) ಎಂಬುದರಿಂದ ಪೂರ್ವೋತ್ತರಪದಗಳಿಗೆ ಏಕಕಾಲದಲ್ಲಿ ಪ್ರಕೃತಿಸ್ವರ ಬರುತ್ತದೆ.

**ಆಮೇಮ್ಯಾನೇ**—ಮೀಞ್ ಹಿಂಸಾಯಾಂ ಧಾತು. ಪೌನಃಪುನ್ಯಾರ್ಥ ತೋರುವಾಗ **ಧಾತೋರೇಕಾಚಃ**—ಎಂಬುದರಿಂದ ಯಙ್ ಬಂದಾಗ ಅದಕ್ಕೆ **ಯಙೋಽಚಿ ಚ**—(ಪಾ. ಸೂ. ೨-೪-೭೪) ಎಂಬುದರಿಂದ ಲುಕ್. ಪ್ರತ್ಯಯಲಕ್ಷಣದಿಂದ **ಸನ್ಯಙೋಃ** ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ **ಹ್ರಸ್ವಃ**—ಎಂಬುದರಿಂದ ಹ್ರಸ್ವ ಬಂದಾಗ **ಗುಣೋಯಙ್‍ಲುಕೋಃ** (ಪಾ. ಸೂ. ೭-೪-೮೨) ಎಂಬುದರಿಂದ ಅದಕ್ಕೆ ಗುಣ. ಮೇಮೀ ಎಂಬುದು **ಸನಾದ್ಯಂತಾಧಾತವಃ**—ಎಂಬುದರಿಂದ ಧಾತು ಸಂಜ್ಞೆಯನ್ನು ಹೊಂದುತ್ತದೆ. **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಇದಕ್ಕೆ ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ಚರ್ಕರೀತಂ ಚ**—ಎಂದು ಯಙ್‍ಲುಗಂತವನ್ನು ಅದಾದಿಯಲ್ಲಿ ಪಾಠಮಾಡಿರುವುದರಿಂದ ಶಪ್ ಪ್ರಾಪ್ತವಾದರೆ **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. **ಏರನೇಕಾಚೋಽಸಂಯೋಗಪೂರ್ವಸ್ಯ**—(ಪಾ. ಸೂ. ೬-೪-೮೨) ಎಂಬುದರಿಂದ ಧಾತುವಿನ ಈಕಾರಕ್ಕೆ ಯಣಾದೇಶ. ಮೇಮ್ಯಾನ ಎಂದು ರೂಪವಾಗುತ್ತದೆ. **ಅಭ್ಯಸ್ತಾನಾಮಾದಿಃ**—(ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಆಙ್ ಎಂಬುದರೊಡನೆ ಸಮಾಸವಾದಾಗ **ಗತಿಕಾರಕೋಪಪದಾತ್‍ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಧಾಪಯೇತೇ**—ಧೇಟ್ ಪಾನೇ ಧಾತು. ಪ್ರಯೋಜಕವ್ಯಾಪಾರ ತೋರುವಾಗ **ಹೇತುಮತಿ ಚ**—ಎಂಬುದರಿಂದ ಇದಕ್ಕೆ ಣಿಚ್. **ಆದೇಚ ಉಪದೇಶೇಽಶಿತಿ** (ಪಾ ಸೂ. ೬-೧-೪೫) ಎಂಬುದರಿಂದ ಧಾತುವಿಗೆ ಆತ್ವ. ಆಗ **ಅರ್ತಿಹ್ರೀವ್ಲೀ**—(ಪಾ. ಸೂ. ೭-೩-೩೬) ಎಂಬುದರಿಂದ ಆದಂತನಿಬಂಧನವಾಗಿ ಧಾತುವಿಗೆ ಪುಕಾಗಮ. ಧಾಪಿ ಎಂದು ಧಾತುವಾಗುತ್ತದೆ. ಯದ್ಯಪಿ **ಣಿಚಶ್ಚ** ಪಾ. ಸೂ. ೧-೩-೭೪) ಎಂಬುದರಿಂದ ಇದರಮೇಲೆ ಉಭಯ ಪದವೂ ಬರುತ್ತವೆ; ಆದರೆ ಕ್ರಿಯಾಫಲವು ಪರಗಾಮಿಯಾದಾಗ ಪರಸ್ಮೈಪದ ಬರುವಂತೆ ಆತ್ಮಗಾಮಿಯಾದಾಗಲೂ **ನಿಗರಣ ಚಲನಾರ್ಥೇಭ್ಯಶ್ಚ** (ಪಾ. ಸೂ. ೧-೩-೮೭) ಎಂಬುದರಿಂದ ಪರಸ್ಮೈಪದವೇ ಪ್ರಾಪ್ತವಾದರೆ ಪುನಃ **ನಪಾದಮ್ಯಾಙ್ಯ**—(ಪಾ. ಸೂ. ೧-೩-೮೯) ಎಂಬುದರಿಂದ ಅದಕ್ಕೆ ಪ್ರತಿಷೇಧ. ಅಲ್ಲಿ ಪಾಸ್ವರೂಪವುಳ್ಳದ್ದು ಅನೇಕವಾದರೂ **ಪಾದಿಷು ಧೇಟ ಉಪಸಂಖ್ಯಾನಮ್** ಎಂಬ ವಚನದಿಂದ ಇದಕ್ಕೇ ಗ್ರಹಣವೆಂದು ನಿರ್ಣೀತವಾಗಿದೆ. ಲಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ ಬಂದಾಗ **ಟಿ ಆತ್ಮನೇಪದಾನಾ**—ಎಂಬುದರಿಂದ ಅದಕ್ಕೆ ಏತ್ವ. ಶಪ್ ವಿಕರಣ. ತನ್ನಿಮಿತ್ತವಾಗಿ ಣಿಚಿಗೆ ಗುಣ ಅಯಾದೇಶ. ಅದುಪದೇಶದ ಪರದಲ್ಲಿರುವುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಣಿಚ್ ಸ್ವರವೇ ಉಳಿಯುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ.

**ಸಮೀಚೀ**—ಸಮ್ ಉಪಸರ್ಗ. ಇದು ಪೂರ್ವದಲ್ಲಿರುವಾಗ ಅಂಚುಗತಿಪೂಜನಯೋಃ. ಧಾತುವಿಗೆ **ಋತ್ವಿಕ್‍ದಧೃಕ್**—(ಪಾ. ಸೂ. ೩-೨-೫೯) ಎಂಬುದರಿಂದ ಕ್ವಿನ್ ಪ್ರತ್ಯಯ. ಕಿತ್ತಾದುದರಿಂದ ಇದನ್ನು ನಿಮಿತ್ತೀಕರಿಸಿ **ಅನಿದಿತಾಂಹಲ**—(ಪಾ. ಸೂ. ೬-೪-೨೪) ಎಂಬುದರಿಂದ ಧಾತುವಿನ ಉಪಧಾ ನಕಾರಕ್ಕೆ ಲೋಪ. ಲುಪ್ತನಕಾರವುಳ್ಳ ಅಂಚುಧಾತುವು ಪರವಾದುದರಿಂದ **ಸಮಃ ಸಮಿ**—(ಪಾ. ಸೂ. ೬-೩-೯೩) ಎಂಬುದರಿಂದ ಪೂರ್ವದಲ್ಲಿರುವ ಸಮ್ ಎಂಬ ಉಪಸರ್ಗಕ್ಕೆ ಸಮಿ ಆದೇಶ. ಇದಕ್ಕೆ ಸ್ತ್ರೀತ್ವವಿವಕ್ಷಾವಾದಾಗ **ಅಂಚತೇಶ್ಚೋಪ**

**ಸಂಖ್ಯಾನಮ್** ಎಂಬ ವಚನದಿಂದ ಙೀಪ್. ಇದು ಪರವಾದಾಗ ಸಂಜ್ಞಾ ಇರುವುದರಿಂದ **ಅಚಃ** (ಪಾ. ಸೂ. ೬-೪-೧೩೮) ಎಂಬುದರಿಂದ ಪೂರ್ವಕ್ಕೆ ದೀರ್ಘ. ಇಲ್ಲಿ ಙೀಪ್ ಪಿತ್ತಾದುದರಿಂದ ಅನುದಾತ್ತ. ಇದನ್ನು ನಿಮಿತ್ತೀಕರಿಸಿ ಧಾತುವಿನ ಉದಾತ್ತವಾದ ಅಕಾರಲೋಪವಾದುದರಿಂದ **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಎಂಬುದರಿಂದ ಙೀಪಿಗೆ ಉದಾತ್ತ ಸ್ವರ ಬರುತ್ತದೆ. ಇಲ್ಲಿ ಪದಕಾರರಿಗೆ ಭಿನ್ನಾಭಿಪ್ರಾಯ ವಿದೆ. **ಉದ ಈತ್** (ಪಾ. ಸೂ. ೬-೪-೧೩೯) ಉದ್ ಎಂಬ ಉಪಸರ್ಗದ ಪರದಲ್ಲಿ ಅಂಚುಧಾತುವಿನ ಅಕಾರಕ್ಕೆ ಈತ್ವ ಬರುತ್ತದೆ. ಎಂಬುದರಿಂದ ವಿಧಿಸಲ್ಪಡುವ ಈತ್ವವು ವ್ಯತ್ಯಯದಿಂದ ಸಮಿನಪರದಲ್ಲಿರುವ ಅಂಚುಧಾತುವಿನ ಅಕಾರಕ್ಕೂ ಬರುತ್ತದೆ ಎಂದು ಅವರ ಅಭಿಪ್ರಾಯ. ದ್ವಿವಚನ ಪರವಾದಾಗ **ವಾಛಂದಸಿ** (ಪಾ. ಸೂ. ೬-೧-೧೦೬) ಎಂಬುದರಿಂದ ಪೂರ್ವಸವರ್ಣದೀರ್ಘ.

**ದ್ಯಾವಾಕ್ಷಾಮಾ—ದಿವೋ ದ್ಯಾವಾ**—(ಪಾ. ಸೂ. ೬-೩-೨೯) ಎಂಬುದರಿಂದ ದಿವ್ ಶಬ್ದಕ್ಕೆ ದ್ಯಾವಾದೇಶ. ಇದಕ್ಕೆ ಷಷ್ಠೀ ದ್ವಿವಚನ ಓಸ್ ಪರವಾದಾಗ **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಡಾದೇಶ. **ದೇವತಾದ್ವಂದ್ವೇಚ** (ಪಾ. ಸೂ. ೬-೨-೧೪೧) ಎಂಬುದರಿಂದ ಪೂರ್ವೋತ್ತರ ಪದಗಳಿಗೆ ಏಕ ಕಾಲದಲ್ಲಿ ಪ್ರಕೃತಿಸ್ವರ ಬರುತ್ತದೆ.

**ಭಾತಿ**—ಭಾ ದೀಪ್ತೌ. ಧಾತು. ಲಟ್ ಪ್ರಥಮಪುರುಷ ಏಕವಚನದರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.



ಸಂಹಿತಾಪಾಠಃ

ರಾಯೋ ಬುಧ್ನಃ ಸಂಗಮನೋ ವಸೂನಾಂ ಯಜ್ಞಸ್ಯ ಕೇತು-
ರ್ಮನ್ಮಸಾಧನೋ ವೇಃ ।
ಅಮೃತತ್ವಂ ರಕ್ಷಮಾಣಾಸ ಏನಂ ದೇವಾ ಅಗ್ನಿಂ ಧಾರಯನ್ದ್ರ-
ವಿಣೋದಾಂ ॥ ೬ ॥

ಪದಪಾಠಃ

ರಾಯಃ । ಬುಧ್ನಃ । ಸಂऽಗಮನಃ । ವಸೂನಾಂ । ಯಜ್ಞಸ್ಯ । ಕೇತುಃ ।
ಮನ್ಮऽಸಾಧನಃ । ವೇರಿತಿ ವೇಃ ।
ಅಮೃತऽತ್ವಂ । ರಕ್ಷಮಾಣಾಸಃ । ಏನಂ । ದೇವಾಃ । ಅಗ್ನಿಂ । ಧಾರ-
ಯನ್ । ದ್ರವಿಣಃऽದಾಂ ॥ ೬ ॥

॥ ಸಾಯಣಭಾಷ್ಯಂ ॥

ಯೋऽಗ್ನೀ ರಾಯೋ ಧನಸ್ಯ ಬುಧ್ನೋ ಮೂಲಭೂತಃ । ಆಹುತಿದ್ವಾರಾ ಸರ್ವೇಷಾಂ ಧನಾನಾಂ ಕಾರಣತ್ವಾತ್ । ವಸೂನಾಂ ನಿವಾಸಹೇತೂನಾಂ ಧನಾನಾಂ ಸಂಗಮನಃ ಸಂಗಮಯಿತಾ । ಸ್ತೋತೄಣಾಂ ಪ್ರಾಪಯಿತಾ । ಯಜ್ಞಸ್ಯ ದರ್ಶಪೂರ್ಣಮಾಸಾದೇಃ ಕೇತುಃ ಕೇತಯಿತಾ ಜ್ಞಾಪಯಿತಾ । ವೇರಾತ್ಮಾನಮಭಿಗಚ್ಛತೇಃ ಪುರುಷಸ್ಯ ಮನ್ಮಸಾಧನೋ ಮನನೀಯಸ್ಯಾಭಿಲಷಿತಸ್ಯ ಸಾಧಯಿತಾ । ಅಮೃತತ್ವಂ ಸ್ವಕೀಯಾಮರಣತ್ವಂ ರಕ್ಷಮಾಣಾಸಃ ಪಾಲಯಂತೋ ದೇವಾ ಏನಂ ಧನಸ್ಯ ದಾತಾರಮಗ್ನಿಂ ಧಾರಯಂತಿ ॥ ರಾಯಃ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ಸಂಗಮನಃ । ನಂದ್ಯಾದಿಲಕ್ಷಣೋ ಲ್ಯುಃ । ವೇಃ । ವೀ ಗತ್ಯಾದಿಷು । ಅಸ್ಮಾದೌಣಾದಿಕ ಇಪ್ರತ್ಯಯಃ । ಟಿಲೋಪಶ್ಚ ॥

ಪ್ರತಿಪದಾರ್ಥ

(ಅಗ್ನಿಃ—ಅಗ್ನಿಯು) । **ರಾಯಃ**—ಧನಕ್ಕೆ । **ಬುಧ್ನಃ**—ಕಾರಣಭೂತನೂ । **ವಸೂನಾಂ**—ಧನವನ್ನು । **ಸಂಗಮನಃ**—ಹೊಂದಿಸತಕ್ಕವನೂ । **ಯಜ್ಞಸ್ಯ**—ಯಜ್ಞಕ್ಕೆ । **ಕೇತುಃ**—ಜ್ಞಾಪಕನೂ (ಮಾರ್ಗದರ್ಶಕನೂ) **ವೇಃ**—(ತನ್ನನ್ನು ಸಮೀಪಿಸತಕ್ಕ ಪುರುಷನ । **ಮನ್ಮಸಾಧನಃ**—ಇಷ್ಟಾರ್ಥವನ್ನು ಹೊಂದಿಸುವವನೂ (ಆಗಿದ್ದಾನೆ.) । **ಅಮೃತತ್ವಂ**—ತಮ್ಮ ಮರಣ ರಾಹಿತ್ಯವನ್ನು । **ರಕ್ಷಮಾಣಾಸಃ**—ಕಾಪಾಡಿಕೊಳ್ಳತಕ್ಕ । **ದೇವಾಃ**—ದೇವತೆಗಳು । **ಏನಂ ಅಗ್ನಿಂ**—ಮೇಲೆ ಹೇಳಿದ ಗುಣಗಳುಳ್ಳ ಅಗ್ನಿಯನ್ನು । **ದ್ರವಿಣೋದಾಂ**—(ಹವಿಸ್ಸಿನ ರೂಪದ) ಧನವನ್ನು ಹಂಚುವವನನ್ನಾಗಿ । **ಧಾರಯನ್**—(ನೂತನನನ್ನಾಗಿ) ಇರಿಸಿಕೊಂಡರು. ।

॥ ಭಾವಾರ್ಥ ॥

ಅಗ್ನಿಯು ಯಾಗಾದಿಗಳ ಮೂಲಕ ಧನಕ್ಕೆ ಕಾರಣಭೂತನೂ, ಯಜ್ಞಕರ್ತರಿಗೆ ಧನವನ್ನು ಹೊಂದಿಸುವವನೂ, ಯಜ್ಞಕ್ಕೆ ಮಾರ್ಗದರ್ಶಕನೂ, ತನ್ನನ್ನು ಸಮೀಪಿಸಿ ಪೂಜಿಸುವವನ ಇಷ್ಟಾರ್ಥವನ್ನು ನೆರವೇರಿಸುವವನೂ

ಆಗಿದ್ದಾನೆ. ತಮ್ಮ ಅಮೃತತ್ವವನ್ನು ಕಾಪಾಡಿಕೊಳ್ಳತಕ್ಕ ದೇವತೆಗಳು ಮೇಲೆ ಹೇಳಿದ ಗುಣಗಳುಳ್ಳ ಅಗ್ನಿಯನ್ನು ತಮಗೆ ಹವಿಸ್ಸನ್ನು ಹಂಚುವ ದೂತಕಾರ್ಯಕ್ಕೆ ಇರಿಸಿಕೊಂಡಿದ್ದಾರೆ.

## English Translation

The source of opulence, the bestower of riches, the director of the sacrifice, the accomplisher of the desires (of the man) who has recourse to him ; him, the gods, preserving their immortality, retain as the giver of (sacrificial) wealth.

॥ ವಿಶೇಷವಿಷಯಗಳು ॥

**ಬುಧ್ನಃ—ಮೂಲಭೂತಃ ।** ಆಶ್ರಯಭೂತನು. ಸಾಧಾರಣವಾಗಿ **ಬುಧ್ನ**ಶಬ್ದವನ್ನು ಅಂತರಿಕ್ಷ ಪರ್ಯಾಯವಾಗಿಯೇ ಹೆಚ್ಚಾಗಿ ಉಪಯೋಗಿಸಿದೆ. ಅಂತರಿಕ್ಷವೆಂಬ ಅರ್ಥವನ್ನು ಕೊಡುವಾಗಲೂ ಸಹ **ಬದ್ಧಾ ಅಸ್ಮಿನ್, ಧೃತಾ ಆಪ ಇತಿ ವಾ** ನೀರನ್ನು ಹಿಡಿದು ನಿಲ್ಲಿಸಿಕೊಳ್ಳುವುದರಿಂದ ಎಂದರೆ ನೀರಿಗೆ ಆಧಾರವಾಗಿರುವುದರಿಂದ ಅಂತರಿಕ್ಷಕ್ಕೆ ಬುಧ್ನವೆಂದು ಹೆಸರು. (ನಿ. ೧೦-೪೪). ಅನೇಕ ಸಂದರ್ಭಗಳಲ್ಲಿ ಅಂತರಿಕ್ಷ ಪರ್ಯಾಯವಾಗಿಲ್ಲದೇ ಆಧಾರಭೂತ ಅಥವಾ ಮೂಲಭೂತವಾದದ್ದು ಎಂಬರ್ಥದಲ್ಲೂ ಉಪಯೋಗಿಸಿದೆ.

**ನಿರ್ಯದೀಂ ಬುಧ್ನಾನ್ಮಹಿಷಸ್ಯ ವರ್ಪಸ ಈಶಾನಾಸಃ ಶವಸಾ ಕ್ರಂತ ಸೂರಯಃ ।**
(ಋ. ಸಂ. ೧-೧೪೧-೩)

ಇಲ್ಲಿ **ಬುಧ್ನಾತ್** ಎಂಬ ಶಬ್ದಕ್ಕೆ **ಮಹತೋ ಯಜ್ಞಸ್ಯ ಮೂಲಾತ್ ।** ಆಧಾನಕಾಲದಿಂದಲೂ ಎಂದರೆ ಆರಂಭದಿಂದಲೂ ಎಂದರ್ಥ.

**ದ್ವಿಮಾತಾ ಹೋತಾ ವಿದಥೇಷು ಸಮ್ರಾಳನ್ವಗ್ರಂ ಚರತಿ ಕ್ಷೇತಿ ಬುಧ್ನಃ ।**
(ಋ. ಸಂ. ೩-೫೫-೭).

ಎಂಬ ಋಕ್ಕಿನಲ್ಲಿ **ಬುಧ್ನಃ** ಎಂದರೆ ಸಕಲಕರ್ಮಗಳಿಗೂ **ಮೂಲಭೂತನು** ಎಂದರ್ಥ.

**ಇಂದ್ರಾಯ ಗಿರೋ ಅನಿಶಿತಸರ್ಗಾ ಅಪಃ ಪ್ರೇರಯಂ ಸಗರಸ್ಯ ಬುಧ್ನಾತ್ ॥**
(ಋ. ಸಂ. ೧೦-೮೯-೪).

ಎಂಬಲ್ಲಿ **ಸಗರಸ್ಯ ಬುಧ್ನಾತ್** ಎಂದರೆ ಅಂತರಿಕ್ಷಕ್ಕೇ ಆಧಾರ ಭೂತನಾದದ್ದು । ಅಂತರಿಕ್ಷದ ಗಹನವಾದ ಮೂಲ ಪ್ರದೇಶದಿಂದ ಎಂದರ್ಥ.

ಹೀಗೆ ಬುಧ್ನ ಶಬ್ದವು ರೂಢಿಯಲ್ಲಿ ಅಂತರಿಕ್ಷವೆಂಬ ಅರ್ಥದಲ್ಲಿ ಉಪಯೋಗವಾಗಿದ್ದರೂ ಸಹ ಆಶ್ರಯ. ಆಧಾರ, ಕಾರಣ, ಮೂಲ ಈ ಶಬ್ದಗಳೇ ಅದರ ಮುಖ್ಯವಾದ ಅರ್ಥ. ಈ ಋಕ್ಕಿನಲ್ಲಿ **ರಾಯೋ ಬುಧ್ನಃ**—

**ಸರ್ವೇಷಾಂ ಧನಾನಾಂ ಕಾರಣತ್ವಾತ್** । ಸಕಲ ವಿಧವಾದ ಧನಗಳಿಗೂ ಎಂದರೆ, ಪಶುಪುತ್ರಾದಿ ರೂಪವಾದ, ಅನ್ನರೂಪವಾದ, ಮತ್ತು ರಕ್ಷಣಾರೂಪವಾದ ಸಕಲಸಂಪತ್ತುಗಳಿಗೂ ಆಶ್ರಯನಾದುದರಿಂದ ಅಗ್ನಿಗೆ ಈ ವಿಶೇಷಣವು ಸಹಜವಾಗಿ ಒಪ್ಪುತ್ತದೆ.

**ಸಂ ಯಸ್ಮಿನ್ ವಿಶ್ವಾ ವಸೂನಿ ಜಗ್ಮುರ್ವಾಜೇ ನಾಶ್ವಾಃ ಸಪ್ತೀವಂತ ಏವೈಃ ।**
(ಋ. ಸಂ. ೧೦-೬-೬).

**ಆ ಸೂರ್ಯೇ ನ ರಶ್ಮಯೋ ಧ್ರುವಾಸೋ ವೈಶ್ವಾನರೇ ದಧಿರೇಽಗ್ನಾ ವಸೂನಿ ।**
**ಯಾ ಪರ್ವತೇಷ್ವೋಷಧೀಷ್ವಪ್ಸು ಯಾ ಮಾನುಷೇಷ್ವಸಿ ತಸ್ಯ ರಾಜಾ ॥**
(ಋ. ಸಂ. ೧-೫೯-೩)

**ವಸುರ್ವಸೂನಾಂ ಕ್ಷಯಸಿ ತ್ವಮೇಕ ಇದ್ದ್ಯಾವಾ ಚ ಯಾನಿ ಪೃಥಿವೀ ಚ ಪುಷ್ಯತಃ ।**
(ಋ. ಸಂ. ೧೦-೯೧-೩)

ಇತ್ಯಾದಿ ನಾನಾ ಕಡೆಗಳಲ್ಲಿ ಅಗ್ನಿಯನ್ನು ಸಕಲವಿಧವಾದ ಧನಗಳಿಗೂ ಆಧಾರ ಭೂತನೆಂದೂ ಪ್ರಭುವೆಂದೂ ಹೇಳಿರುವಂತೆ ಇಲ್ಲಿಯೂ **ರಾಯೋ ಬುಧ್ನಃ** ಎಂದು ಪ್ರಶಂಸಿಸಿದೆ.

**ಸಂಗಮನೋ ವಸೂನಾಂ**—ಅಗ್ನಿಯು ಧನಗಳಿಗೆ ಆಧಾರಮಾತ್ರವಲ್ಲ. ಕರ್ಮನಿಷ್ಠರಾದ ಸಕಲ ಯಜಮಾನರಿಗೂ ಧನವನ್ನೊದಗಿಸುವವನು.

**ಸಂ ತ್ವಾ ರಾಯಃ ಶತಿನಃ ಸಂ ಸಹಸ್ರಿಣಃ ಸುವೀರಂ ಯಂತಿ ವ್ರತಪಾಮದಾಭ್ಯ ।**
(ಋ. ಸಂ. ೧-೩೧-೧೦)

**ವಿಶ್ವಂ ಸೋ ಅಗ್ನೇ ಜಯತಿ ತ್ವಯಾ ಧನಂ ಯಸ್ತೇ ದದಾಶ ಮರ್ತ್ಯಃ ।**
(ಋ. ಸಂ. ೧-೩೬-೪)

ಎಂಬುದಾಗಿ ಅಗ್ನಿಗೆ ಹವಿಸ್ಸನ್ನು ಅರ್ಪಿಸತಕ್ಕ ಯಜಮಾನನಿಗೆ ಸಕಲವಿಧವಾದ ಧನಗಳೂ ನೂರುಮಡಿಯಾಗಿಯೂ ಸಾವಿರ ಸಂಖ್ಯಾಕವಾಗಿಯೂ ಒದಗುವುವು. ಅಗ್ನಿಯು ಸಕಲ ಸಂಪತ್ತನ್ನು ಒದಗಿಸುವನು ಎಂದು ಹೇಳಿರುವಂತೆ ಇಲ್ಲಿಯೂ ಅವನ ಔದಾರ್ಯವನ್ನು ಶ್ಲಾಘಿಸಿದೆ.

**ವೇಃ**— ಗತ್ಯರ್ಥಕವಾದ ವೀ ಧಾತುವಿನ ಷಷ್ಠೀ ಏಕವಚನ. ಅಗ್ನಿಯನ್ನು ಪೂಜಾದಿಗಳಿಂದ ಸಮೀಪಿಸುವ ಯಜಮಾನನ.

**ಮನ್ಮಸಾಧನಃ—ಮನನೀಯಸ್ಯ ಅಭಿಲಷಿತಸ್ಯ ಸಾಧಯಿತಾ** ಅಪೇಕ್ಷಿತಗಳಾದ ಇಷ್ಟಾರ್ಥಗಳನ್ನು ಸಾಧಿಸಿಕೊಡುವವನು. ಮನ್ಮ ಶಬ್ದಕ್ಕೆ ಮನಸ್ಸಿನ ಇಚ್ಛೆಯೆಂದು ಅವಯವಾರ್ಥವಾದರೂ ಕೂಡ, ಋಕ್ಸಂಹಿತಾ ವಾಕ್ಯಗಳಲ್ಲಿ ಈ ಪದಪ್ರಯೋಗವು ಕೇವಲ ಸಾಧಾರಣವಾದ ಮನಸ್ಸಿನ ಅಭಿಲಾಷೆಯೆನ್ನುವುದಕ್ಕಿಂತ ಕೊಂಚ ಹೆಚ್ಚು ಅರ್ಥವನ್ನು ಕೊಡುವುದಾಗಿದೆ, ೧-೩೬-೨ ; ೧-೧೨೭-೨ ; ೧-೧೪೦-೧ ; ೧-೧೫೧-೮ ಇತ್ಯಾದಿ ಅನೇಕ ಸನ್ನಿವೇಶ

ಗಳಲ್ಲಿ ಉಪಯೋಗಿಸಿರುವ **ಮನ್ಮನಾ, ಮನ್ಮಭಿಃ** ಎಂಬ ಪದಗಳಿಗೆ ಶ್ರೇಷ್ಠವಾದ, ಪೂಜ್ಯವಾದ ಮನಃಪ್ರವೃತ್ತಿಯೆಂದರ್ಥವಿರುವಂತೆಯೇ ಇಲ್ಲಿಯೂ ಉತ್ತಮಶ್ರೇಣಿಗೆ ಸೇರಿದ ಇಷ್ಟಾರ್ಥಗಳೆಂದರ್ಥ. ಅವುಗಳನ್ನು ಸಾಧಿಸಿಕೊಡುವವನು ಅಗ್ನಿಯು.

**ಯೋ ವಾಂ ಯಜ್ಞೈಃ ಶಶಮಾನೋ ಹ ದಾಶತಿ ಕವಿರ್ಹೋತಾ ಯಜತಿ ಮನ್ಮಸಾಧನಃ ।**
(ಋ. ಸಂ. ೧-೧೫೧-೭)

ಈ ಮಂತ್ರದಲ್ಲಿ ಉಪಯೋಗಿಸಿರುವ **ಮನ್ಮಸಾಧನಃ** ಎಂಬಲ್ಲಿ **ಮನ್ಮ** ಎನ್ನುವ ಪದಕ್ಕೂ ಕೂಡ, ಶ್ರೇಷ್ಠವಾದ ಮತ್ತು ಪೂಜ್ಯವಾದ ದ್ರವ್ಯಗಳಿಂದ ಕೂಡಿದವನು ಎಂದು ಯಜ್ಞಮಾಡತಕ್ಕ **ಯಜಮಾನನಿಗೆ** ವಿಶೇಷಣವಾಗಿದೆ.

ವ್ಯಾಕರಣಪ್ರಕ್ರಿಯಾ

**ರಾಯಃ**—ರೈ ಶಬ್ದ. ಷಷ್ಠೀವಿಭಕ್ತಿ ಙಸ್ ಪರವಾದಾಗ **ಏಚೋಽಯವಾಯಾವಃ**—ಎಂಬುದರಿಂದ ಆಯಾದೇಶ. **ಊಡಿದಂಪದಾ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸಂಗಮನಃ**–ಸಂ ಉಪಸರ್ಗ. ಗಮ್ಲೃ ಗತೌ ಧಾತು. ನಂದ್ಯಾದಿಯಲ್ಲಿ ಸೇರಿರುವುದರಿಂದ ಕರ್ತರಿಯಲ್ಲಿ **ನಂದಿಗ್ರಹಪಚಾದಿಭ್ಯೋ**—(ಪಾ. ಸೂ. ೩-೧-೧೩೪) ಎಂಬುದರಿಂದ ಲ್ಯು ಪ್ರತ್ಯಯ. **ಯುವೋರನಾಕೌ**—(ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. ಪ್ರತ್ಯಯ ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಸಮ್ ಎಂಬುದರೊಡನೆ ಸಮಾಸವಾದಾಗ **ಗತಿಕಾರಕೋಪಪದಾತ್ ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಯಜ್ಞಸ್ಯ**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. **ಯಜಯಾಚಯತವಿಚ್ಛ ಪ್ರಚ್ಛರಕ್ಷೋ ನಙ್**—(ಪಾ. ಸೂ. ೩-೩-೯೦) ಎಂಬುದರಿಂದ ಇದಕ್ಕೆ ನಙ್ ಪ್ರತ್ಯಯ. ಶ್ಚುತ್ವದಿಂದ ಅದಕ್ಕೆ ಞಕಾರಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಷಷ್ಠೀ ಏಕವಚನಾಂತರೂಪ.

**ಮನ್ಮಸಾಧನಃ**—ಮನ್ಮ-ಮನಸೀಯಂ ತಸ್ಯ ಸಾಧಯಿತಾ ಮನ್ಮಸಾಧನಃ. **ಗತಿಕಾರಕೋಪಪದಾತ್-ಕೃತ್**—ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ವೇಃ**—ವೀ ಗತ್ಯಾದಿಷು. ಧಾತು. ಇದಕ್ಕೆ ಔಣಾದಿಕವಾದ ಇ ಪ್ರತ್ಯಯ. ತತ್ಸಂನಿಯೋಗದಿಂದ ಧಾತುವಿನ ಟಿಗೆ ಲೋಪ. ವಿ ಎಂದು ರೂಪವಾಗುತ್ತದೆ. ಷಷ್ಠೀ ಏಕವಚನದಲ್ಲಿ **ಘೇರ್ಙಿತಿ** ಎಂದು ಗುಣ ಬಂದಾಗ ಪೂರ್ವರೂಪ.

**ರಕ್ಷಮಾಣಾಸಃ**—ಪ್ರಥಮಾ ಬಹುವಚನದಲ್ಲಿ **ಆಜ್ಜಸೇರಸುಕ್**—(ಪಾ. ಸೂ. ೭-೧-೫೦) ಎಂಬುದರಿಂದ ಜಸಿಗೆ ಅಸುಕಾಗಮ. ಕಿತ್ತಾದುದರಿಂದ ಅಂತಾವಯವವಾಗಿ ಬರುತ್ತದೆ. ಸಕಾರಕ್ಕೆ ರುತ್ವವಿಸರ್ಗ. ಶಾನಚ್ ಚಿತ್ತಾದರೂ ಅನುಪದೇಶದ ಪರದಲ್ಲಿರುವುದರಿಂದ **ತಾಸ್ಯನು**—ಸೂತ್ರದಿಂದ ಅನುದಾತ್ತವಾಗುತ್ತದೆ. ಆಗ ಧಾತುಸ್ವರ ಉಳಿಯುತ್ತದೆ. ॥ ೬ ॥

ಸಂಹಿತಾಪಾಠಃ

ನೂ ಚ ಪುರಾ ಚ ಸದನಂ ರಯೀಣಾಂ ಜಾತಸ್ಯ ಚ ಜಾಯ-
ಮಾನಸ್ಯ ಚ ಕ್ಷಾಂ।
ಸತಶ್ಚ ಗೋಪಾಂ ಭವತಶ್ಚ ಭೂರೇರ್ದೇವಾ ಅಗ್ನಿಂ ಧಾರಯ-
ನ್ದ್ರವಿಣೋದಾಂ ॥ ೭ ॥

ಪದಪಾಠಃ

ನು । ಚ । ಪುರಾ । ಚ । ಸದನಂ । ರಯೀಣಾಂ । ಜಾತಸ್ಯ । ಚ । ಜಾಯಮಾ-
ನಸ್ಯ । ಚ । ಕ್ಷಾಂ ।
ಸತಃ । ಚ । ಗೋಪಾಂ । ಭವತಃ । ಚ । ಭೂರೇಃ । ದೇವಾಃ । ಅಗ್ನಿಂ । ಧಾರ-
ಯನ್ । ದ್ರವಿಣಃऽದಾಂ ॥ ೭ ॥

ಸಾಯಣಭಾಷ್ಯಂ

ನೂ ಚೇತಿ ನಿಪಾತಸಮುದಾಯೋಽದ್ಯೇತ್ಯಸ್ಯಾರ್ಥೇ । ನೂ ಚಿದಿತಿ ನಿಪಾತಃ ಪುರಾಣನವಯೋರ್ನೂ ಚ । ನಿ. ೪-೧೭ । ಇತಿ ಯಾಸ್ಕಃ । ನೂ ಚಾದ್ಯಾಸ್ಮಿನ್ಕಾಲೇ ಪುರಾ ಚ ರಯೀಣಾಂ ಸರ್ವೇಷಾಂ ಧನಾನಾಂ ಸದನಮಾವಾಸಸ್ಥಾನಂ ಜಾತಸ್ಯೋತ್ಪನ್ನಸ್ಯ ಕಾರ್ಯಜಾತಸ್ಯ ಜಾಯಮಾನಸ್ಯೋತ್ಪದ್ಯಮಾನಸ್ಯ ಚ ಕ್ಷಾಂ ನಿವಾಸಯಿತಾರಂ ಸತಶ್ಚ ಸರ್ವತ್ರ ವಿದ್ಯಮಾನಸ್ವಭಾವಸ್ಯ ನಿತ್ಯಸ್ಯ ಚಾಕಾಶಾದೇರ್ಭವತಶ್ಚ ಸದ್ಭಾವಂ ಪ್ರಾಪ್ನುವತೋ ಭೂರೇರಸಂಖ್ಯಾತಸ್ಯಾನ್ಯಸ್ಯ ಚ ಭೂತಜಾತಸ್ಯ ಗೋಪಾಂ ಗೋಪಾಯಿತಾರಂ ರಕ್ಷಿತಾರಂ ದ್ರವಿಣೋದಾಂ ಧನಪ್ರದಂ । ಏವಂಗುಣವಿಶಿಷ್ಟಮಗ್ನಿಂ ದೇವಾ ಧಾರಯನ್ । ಹವಿರ್ವೋಢೃತ್ವೇನ ಧಾರಯಂತಿ ॥ ನೂ ಚ । ಋಚಿ ತುನುಘೇತಿ ದೀರ್ಘಃ । ರಯೀಣಾಂ । ನಾಮನ್ಯತರಸ್ಯಾಮಿತಿ ನಾಮ ಉದಾತ್ತತ್ವಂ । ಕ್ಷಾಂ । ಕ್ಷಿ ನಿವಾಸಗತ್ಯೋಃ । ಅಸ್ಮಾಣ್ಣಿಚ್ । ವೃದ್ಧ್ಯಾಯಾದೇಶೌ । ಣ್ಯಂತಾತ್ಕ್ವಿಪ್ । ಣೇರನಿಟೀತಿ ಣಿಲೋಪಃ । ವೇರಪೃಕ್ತಲೋಪಾದ್ವಲಿ ಲೋಪೋ ಬಲೀಯಾನಿತಿ ಪೂರ್ವಂ ಲೋಪೋ ವ್ಯೋರ್ವಲೀತಿ ಯಲೋಪಃ । ನ ಚ ಣಿಲೋಪಸ್ಯ ಸ್ಥಾನಿವತ್ತ್ವಂ । ನ ಪದಾಂತದ್ವಿರ್ವಚನವರೇಯಲೋಪೇತಿ ಪ್ರತಿಷೇಧಾತ್ । ಯದ್ವಾ ಕ್ಷೈ ಜೈ ಷೈ ಕ್ಷಯೇ । ಅಸ್ಮಾತ್ಕ್ವಿಪ್ । ಆದೇಚ

ಇತ್ಯಾತ್ತ್ವಂ । ಸತಃ । ಅಸ್ತೇಃ ಶತರ್ಯದಾದಿತ್ವಾಚ್ಛಪೋ ಲುಕ್ । ಶ್ನಸೋರಲ್ಲೋಪ ಇತ್ಯಕಾರಲೋಪಃ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ ॥

ಪ್ರತಿಪದಾರ್ಥ

**ನೂ ಚ**—ವರ್ತಮಾನಕಾಲದಲ್ಲಿಯೂ । **ಪುರಾ ಚ**—ಹಿಂದಿನಕಾಲದಲ್ಲಿಯೂ (ಇರುವ ಅಥವಾ ಇದ್ದ) । **ರಯೀಣಾಂ**—ಸಕಲಧನಗಳಿಗೂ । **ಸದನಂ**—ಆವಾಸಸ್ಥಾನವಾದವನೂ ; । **ಜಾತಸ್ಯ ಚ**—ಹುಟ್ಟಿದವೂ । **ಜಾಯಮಾನಸ್ಯ ಚ**—ಮುಂದೆ ಹುಟ್ಟತಕ್ಕವೂ ಆದ ಸಕಲ ಭೂತಜಾತಕ್ಕೂ । **ಕ್ಷಾಂ**—ನಿವಾಸಸ್ಥಾನವಾಗಿರತಕ್ಕವನೂ ; । **ಸತಶ್ಚ**—ಸಕಲ ದೇಶಕಾಲಗಳಲ್ಲಿಯೂ ಇರುವ ಆಕಾಶಾದಿಗಳಿಗೂ । **ಭವತಶ್ಚ**—(ಅನಾದಿಯಲ್ಲದೇ) ಉತ್ಪತ್ತಿಯನ್ನು ಹೊಂದತಕ್ಕವುಗಳಿಗೂ । **ಭೂರೇಃ**—ಅಸಂಖ್ಯಾತವಾದ ಇತರ ಭೂತಗಳಿಗೂ । **ಗೋಪಾಂ**-ರಕ್ಷಕನಾದವನೂ । **ದ್ರವಿಣೋದಾಂ**—ಧನದಾತನೂ ಆದ । **ಅಗ್ನಿಂ**—ಅಗ್ನಿಯನ್ನು । **ದೇವಾಃ**—ದೇವತೆಗಳು । **ಧಾರಯನ್**—(ಹವಿಸ್ಸನ್ನು ಹಂಚುವವನನ್ನಾಗಿ) ಇರಿಸಿಕೊಂಡರು. ।

ಭಾವಾರ್ಥ

ವರ್ತಮಾನ ಮತ್ತು ಭೂತಕಾಲಗಳಲ್ಲಿರುವ ಮತ್ತು ಇದ್ದ ಸಕಲ ಧನಗಳಿಗೂ ಆವಾಸಸ್ಥಾನವಾದವನೂ, ಹಿಂದೆ ಹುಟ್ಟಿದವೂ ಮುಂದೆ ಹುಟ್ಟತಕ್ಕವೂ ಆದ ಸಕಲ ಭೂತಜಾತಕ್ಕೂ ನಿವಾಸಸ್ಥಾನವಾಗಿರತಕ್ಕವನೂ ; ಸಕಲ ದೇಶಕಾಲಗಳಲ್ಲಿಯೂ ಅನಾದಿಯಾಗಿರುವ ಆಕಾಶಾದಿಗಳಿಗೂ ಮತ್ತು ಇತರ ಅಸಂಖ್ಯಾತವಾದ ಭೂತಗಳಿಗೂ ರಕ್ಷಕನಾದವನೂ ಮತ್ತು ಧನಪ್ರದಾತನೂ ಆದ ಅಗ್ನಿಯನ್ನು ದೇವತೆಗಳು ಹವಿಸ್ಸನ್ನು ಹಂಚುವ ದೂತನನ್ನಾಗಿ ಇರಿಸಿಕೊಂಡರು.

## English Translation

The gods retain Agni as the giver of (sacrificial) wealth, who now is, and heretofore has been, the abode of riches, the receptacle of all that has been, and all that will be, born, and the preserver of all (that) exists, (as well as of all) that are coming into existence.

॥ ವಿಶೇಷವಿಷಯಗಳು ॥

**ನೂ ಚ**—ಇತಿ ನಿಪಾತಸಮುದಾಯಃ ಅದ್ಯ ಇತ್ಯಸ್ಯಾರ್ಥೇ । ಅಸ್ಮಿನ್ ಕಾಲೇ । ಈಗ ನೂತನ ಕಾಲದ ಎಂಬರ್ಥದಲ್ಲಿ ಈ ನಿಪಾತಗಳು ಉಪಯೋಗಿಸಲ್ಪಟ್ಟಿವೆ. ನೂತನಕಾಲದ ಎನ್ನುವಂತೆ ಪ್ರಾಚೀನ ಕಾಲದ ಎಂಬರ್ಥದಲ್ಲೂ ನೂ ಪದದ ಪ್ರಯೋಗವಿದೆ. **ನೂಚಿದಿತಿ ನಿಪಾತಃ ಪುರಾಣನವಯೋಃ ನೂರ್ಚೇತಿ** । ಹಳೆಯದು, ಹೊಸದು ; ಹಿಂದಿನದು, ಈಗಿನದು ಎಂಬ ಎರಡು ಅರ್ಥಗಳಲ್ಲಿಯೂ ಈ ನಿಪಾತಗಳು ಉಪಯೋಗದಲ್ಲಿವೆ. (ನಿ. ೪-೧೭) ಎಂದು ನಿರುಕ್ತಕಾರರು ಯುಕ್ತ್ಯುಚಿತಿಯಿಂದ ಉದಾಹರಣವಾಕ್ಯಗಳನ್ನು ಕೊಟ್ಟು ವಿವರಿಸಿದ್ದಾರೆ.

**ಅದ್ಯಾ ಚಿನ್ನೂ ಚಿತ್ತದಪೋ ನದೀನಾಂ ಯದಾಭ್ಯೋ ಅರದೋ ಗಾತುಮಿಂದ್ರ ।**

(ಋ ಸಂ. ೬-೩೦-೩)

ಈ ಋಕ್ಕಿನಲ್ಲಿ **ನೂ** ಚಿತ್ ಎಂದರೆ ಹಿಂದಿನಂತೆ ಎಂದರ್ಥ. ನದಿಗಳ ಪ್ರವಾಹವು ಈಗಲೂ, ಹಿಂದೆಯೂ ಒಂದೇ ವಿಧವಾಗಿರುವಂತೆ ಇಂದ್ರನು ನಿಯಮಿಸಿರುತ್ತಾನೆಂದು ಇಂದ್ರನ ಸಾಮರ್ಥ್ಯವನ್ನು ಪ್ರಶಂಸಿಸುವುದು. ನಿರುಕ್ತ ಕಾರರು ಇದರಂತೆಯೇ ಪ್ರಕೃತದಲ್ಲಿ ವಿವರಿಸುತ್ತಿರುವ ೧-೯೬-೨ ನೇ ಋಕ್ಕನ್ನೂ ಉದಹರಿಸಿ ಇದರಲ್ಲಿ ಪ್ರಯೋಗಿ ಸಿರುವ **ನೂ ಚ** ಎನ್ನುವುದಕ್ಕೆ **ಅದ್ಯ ಚ** ಈಗಿನದು ಎಂದು ಅರ್ಥವನ್ನು ಹೇಳಿರುತ್ತಾರೆ. ಈ ಎರಡರ್ಥಗಳಲ್ಲದೆ **ಶೀಘ್ರವಾಗಿ** ಎಂದಭಿಪ್ರಾಯವನ್ನು ಕೊಡುವಂತೆಯೂ ಅನೇಕ ಕಡೆ ಈ ಪದದ ಪ್ರಯೋಗವಿದೆ-

**ನೂ ಮರ್ತೋ ದಯತೇ ಸನಿಷ್ಯನ್ಯೋ ವಿಷ್ಣವ ಉರುಗಾಯಾಯ ದಾಶತ್ ।**

(ಋ. ಸಂ. ೭-೧೦೦-೧)

ಇಲ್ಲಿ **ನು** ಎಂದರೆ ಶೀಘ್ರವಾಗಿ ಎಂದರ್ಥ. ಹೀಗೆಯೇ ೧-೪೧-೧ ; ೧-೫೮-೧ ; ೧-೧೦೪-೨. ಇತ್ಯಾದಿ ಋಕ್ಕು ಗಳಲ್ಲಿಯೂ ಇದೇ ಅರ್ಥದಲ್ಲಿ **ನೂ** ಶಬ್ದಪ್ರಯೋಗವಿದೆ. ಇದೂ ಅಲ್ಲದೇ ಪ್ರತಿಷೇಧಾರ್ಥದಲ್ಲಿಯೂ ಸಹ **ನೂ** ಎಂಬ ಪದವನ್ನು ಪಯೋಗಿಸಿದೆ.

**ನೂ ಚಿತ್ಸ ಭ್ರೇಷತೇ ಜನೋ ನ ರೇಷನ್ಮನೋ ಯೋ ಅಸ್ಯ ಘೋರಮಾವಿವಾಸಾತ್ ।**

(ಋ. ಸಂ. ೭-೨೦-೬)

**ನೂ ಚಿದ್ಧಿ ಪರಿಮಮ್ನಾಥೇ ಅಸ್ಮಾನಾ ವಾಂ ಶಶ್ವದ್ಭಿರ್ವವೃತೀಯ ವಾಜೈಃ ।**

(ಋ. ಸಂ. ೭-೯೩-೬)

ಇಲ್ಲೆಲ್ಲಾ **ನೂಚಿತ್** ಎನ್ನುವುದಕ್ಕೆ **ನೈವ** ಎಂದು ಪ್ರತಿಷೇಧ ಅಥವಾ ನಿಷೇದಾರ್ಥವಿದೆ.

**ಕ್ಷಾಂ—ಕ್ಷಿಯತೇರ್ನಿವಾಸಕರ್ಮಣಃ ।** (ನಿ. ೨-೬) ವಾಸಮಾಡು ಎಂದರ್ಥವನ್ನು ಕೊಡುವ **ಕ್ಷಿ** ಧಾತುವಿನಿಂದ ಈ ರೂಪವಾಗಿದೆ. ನಿವಾಸಸ್ಥಾನವೆಂದರ್ಥ.

**ಜಾತಸ್ಯ ಜಾಯಮಾನಸ್ಯ ಚಕ್ಷಾಂ**—ಅಗ್ನಿಯು ನಿತ್ಯ ಯುವಕನಾದುದರಿಂದಲೂ, ಅನ್ನಕ್ಕೆ ಮೂಲ ಭೂತನಾಗಿ ಸಕಲಭೂತಗಳಿಗೂ ಸ್ಥಿತಿಸಂಪಾದಕನಾಗಿಯೂ ಇರುವುದರಿಂದಲೂ ಹಿಂದೆ ಹುಟ್ಟಿದ ಮುಂದೆ ಹುಟ್ಟುವ ಸಕಲಕ್ಕೂ ಆಶ್ರಯದಾತನು. ಅಷ್ಟೇ ಅಲ್ಲದೆ.

**ಅಜೋ ನ ಕ್ಷಾಂ ದಾಧಾರ ಪೃಥಿವೀಂ ತಸ್ತಂಭ ದ್ಯಾಂ ಮಂತ್ರೇಭಿಃ ಸತ್ಯೈಃ ।**
**ಪ್ರಿಯಾ ಪದಾನಿ ಪಶ್ವೋ ನಿ ಪಾಹಿ ವಿಶ್ವಾಯುರಗ್ನೇ ಗುಹಾ ಗುಹಂ ಗಾಃ ॥**

(ಋ. ಸಂ. ೧-೬೭-೫ ಮತ್ತು ೬)

ಪೃಥಿವ್ಯಂತರಿಕ್ಷಗಳಿಗೆಲ್ಲಾ ಆಧಾರಭೂತನಾಗಿಯೂ, ಅವುಗಳಲ್ಲಿ ಉತ್ಪನ್ನವಾಗುವ ಸಕಲಕ್ಕೂ ರಕ್ಷಕನಾಗಿಯೂ ಇರುತ್ತಾನೆಂದು ಅವನ ಮಾಹಾತ್ಮ್ಯವನ್ನು ಕೊಂಡಾಡಿರುವಂತೆ ಇಲ್ಲಿಯೂ ವರ್ಣಿಸಿದೆ.

**ಸತಶ್ಚ ಭವತಶ್ಚ ಗೋಪಾಂ**—ಸಕಲ ದೇಶಕಾಲಗಳಲ್ಲಿಯೂ ಇರತಕ್ಕ ಆಕಾಶಾದಿಗಳಿಗೂ, ಸದೇ ಸದೇ ಉತ್ಪನ್ನವಾಗುವ ಸಕಲ ಭೂತಗಳಿಗೂ ರಕ್ಷಕನು.

### ವ್ಯಾಕರಣಪ್ರಕ್ರಿಯಾ

**ನೂ ಚ—ಋಚಿ ತುನುಘ**—(ಪಾ. ಸೂ. ೬-೩-೧೩೩) ಎಂಬುದರಿಂದ ಸಂಹಿತಾದಲ್ಲಿ ನು ಎಂಬುದಕ್ಕೆ ದೀರ್ಘ ಬರುತ್ತದೆ.

**ಸದನಮ್**—ಸೀದಂತಿ ಅಸ್ಮಿನ್ ಇತಿ ಸದನಮ್. ಷದ್‌ಲೃ ವಿಶರಣಗತ್ಯವಸಾದನೇಷು. ಧಾತು. ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ**—ಸೂತ್ರದಿಂದ ಅನಾದೇಶ. **ಲಿತಿ**—ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ರಯೀಣಾಮ್**—ರಯಿ ಶಬ್ದಕ್ಕೆ ಷಷ್ಠೀಬಹುವಚನದಲ್ಲಿ ಆಮ್ ಪ್ರತ್ಯಯ. **ಹ್ರಸ್ವನದ್ಯಾಪೋನುಟ್**—ಎಂಬುದರಿಂದ ನುಡಾಗಮ. **ನಾಮಿ**—ಸೂತ್ರದಿಂದ ಅಜಂತಾಂಗಕ್ಕೆ ದೀರ್ಘ. **ನಾಮನ್ಯತರಸ್ಯಾಮ್**—(ಪಾ. ಸೂ. ೬-೧-೧೭೭) ಎಂಬುದರಿಂದ ನಾಮಿಗೆ ಉದಾತ್ತಸ್ವರ ಬರುತ್ತದೆ.

**ಕ್ಷಾಮ್**—ಕ್ಷಿ ನಿವಾಸಗತ್ಯೋಃ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತುಮತಿಚ**—(ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಣಿತ್ ಪ್ರತ್ಯಯವಾದುದರಿಂದ **ಅಚೋಞ್ಣಿತಿ**—ಎಂಬುದರಿಂದ ಇಕಾರಕ್ಕೆ ವೃದ್ಧಿ. ಅಚ್ ಪರವಾದುದರಿಂದ ಅದಕ್ಕೆ ಆಯಾದೇಶ. ಕ್ಷಾಯಿ ಎಂಬುದು **ಸನಾದ್ಯಂತಾಧಾತವಃ**—ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಇದರ ಮೇಲೆ **ಕ್ವಿಪ್ ಚ**—(ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ತನ್ನಿಮಿತ್ತವಾಗಿ **ಣೇರನಿಟಿ**—ಎಂಬುದರಿಂದ ಣಿಲೋಪ. ಆಗ **ವೇರಪೃಕ್ತಲೋಪಾದ್ವಲಿಲೋಪೋ ಬಲೀಯಾನ್**—ಎಂಬ ವಚನದಿಂದ ಕ್ವಿಪಿನಲ್ಲಿರುವ ಅಪೃಕ್ತವಕಾರಲೋಪಕ್ಕಿಂತಲೂ **ಲೋಪೋವ್ಯೋರ್ವಲಿ**—ಎಂಬುದರಿಂದ ತನ್ನಿಮಿತ್ತವಾಗಿ ಯಕಾರ ಲೋಪ. ಯದ್ಯಪಿ **ಅಚಃ ಪರಸ್ಮಿನ್ ಪೂರ್ವವಿಧೌ**—ಎಂಬುದರಿಂದ ಯಲೋಪಮಾಡುವಾಗ ಮಧ್ಯೆ ಲೋಪವಾದ ಣಿಚಿಗೆ ಸ್ಥಾನಿವದ್ಭಾವ ಬರುತ್ತದೆ. ಆದರೆ **ನಪದಾಂತದ್ವಿರ್ವಚನ ವರೇಯಲೋಪ**—(ಪಾ. ಸೂ. ೧-೧-೫೮) ಎಂಬುದರಿಂದ ಯಲೋಪ ವಿಷಯದಲ್ಲಿ ಸ್ಥಾನಿವದ್ಭಾವಪ್ರತಿಷೇಧ ಬರುವುದರಿಂದ ವಲ್‌ನಿಮಿತ್ತವಾಗಿ ಲೋಪಬರಲು ಯಾವ ಅಭ್ಯಂತರವೂ ಇಲ್ಲ. ಆಮೇಲೆ **ವೇರಪೃಕ್ತಸ್ಯ**—(ಪಾ. ಸೂ. ೬-೧-೬೭) ಎಂಬುದರಿಂದ ವಕಾರಕ್ಕೆ ಲೋಪ. ಕ್ಷಾ ಎಂದು ರೂಪವಾಗುತ್ತದೆ. ಅಥವಾ ಕ್ಷೈ ಜೈ ಷೈ ಕ್ಷಯೇ. ಧಾತು. ಇದಕ್ಕೆ **ಕ್ವಿಪ್ ಚ**—ಎಂಬುದರಿಂದ ಕ್ವಿಪ್ ಪ್ರತ್ಯಯ. **ಆದೇಚಉಪದೇಶೇಽಶಿತಿ** (ಪಾ. ಸೂ. ೬-೧-೪೫) ಎಂಬುದರಿಂದ ತನ್ನಿಮಿತ್ತವಾಗಿ ಧಾತುವಿಗೆ ಆತ್ವ. ಕ್ಷಾ ಎಂದು ರೂಪವಾಗುತ್ತದೆ.

**ಸತಃ**—ಅಸ ಭುವಿ ಧಾತು. ಅದಾದಿ. ಇದಕ್ಕೆ ಲಡರ್ಥದಲ್ಲಿ ಶತೃ ಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ**—ಎಂಬುದರಿಂದ ಶಪಿಗೆ ಲುಕ್. **ಸಾರ್ವಧಾತುಕಮಪಿತ್**—ಸೂತ್ರದಿಂದ ಶತೃವಿಗೆ ಙಿದ್ವದ್ಭಾವವಿರುವುದರಿಂದ **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ಅಸಿನ ಅಕಾರಕ್ಕೆ ಲೋಪ. ಸತ್ ಶಬ್ದವಾಗುತ್ತದೆ. ಷಷ್ಠೀಏಕವಚನಾಂತರೂಪ. ನುಮ್‌ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನುಮೋ ನದ್ಯಜಾದೀ**—(ಪಾ. ಸೂ. ೬-೧-೧೭೩) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಗೋಪಾಮ್**—ಗುಪ್ರೂ ರಕ್ಷಣೇ ಧಾತು. **ಗುಪೂಧೂಪ**—(ಪಾ. ಸೂ. ೩-೧-೨೮) ಎಂಬುದರಿಂದ ಸ್ವಾರ್ಥದಲ್ಲಿ ಆಯ ಪ್ರತ್ಯಯ. ತನ್ನಿಮಿತ್ತವಾಗಿ ಲಘೂಪಧಗುಣ. ಇದಕ್ಕೆ ಕ್ವಿಪ್ ಪ್ರತ್ಯಯ. **ಅತೋಲೋಪಃ**—ಎಂಬುದರಿಂದ ಅಕಾರಲೋಪ. ಹಿಂದೆ ಹೇಳಿದಂತೆ ವಕಾರಲೋಪಕ್ಕಿಂತಲೂ ಮೊದಲು **ಲೋಪೋವ್ಯೋರ್ವಲಿ**—ಸೂತ್ರದಿಂದ ಯಕಾರಲೋಪ. ಗೋಪಾ ಎಂದು ರೂಪವಾಗುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಆಕಾರ ಉದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ. ॥ ೭ ॥

—:o:—

ಸಂಹಿತಾಪಾಠಃ

ದ್ರವಿಣೋದಾ ದ್ರವಿಣಸಸ್ತುರಸ್ಯ ದ್ರವಿಣೋದಾಃ ಸನರಸ್ಯ ಪ್ರ
ಯಂಸತ್ ।
ದ್ರವಿಣೋದಾ ವೀರವತೀಮಿಷಂ ನೋ ದ್ರವಿಣೋದಾ ರಾಸತೇ
ದೀರ್ಘಮಾಯುಃ ॥ ೮ ॥

ಪದಪಾಠಃ

ದ್ರವಿಣಃಽದಾಃ । ದ್ರವಿಣಸಃ । ತುರಸ್ಯ । ದ್ರವಿಣಃಽದಾಃ । ಸನರಸ್ಯ । ಪ್ರ ।
ಯಂಸತ್ ।
ದ್ರವಿಣಃಽದಾಃ । ವೀರಽವತೀಂ । ಇಷಂ । ನಃ । ದ್ರವಿಣಃಽದಾಃ । ರಾಸತೇ ।
ದೀರ್ಘಂ । ಆಯುಃ ॥ ೮ ॥

॥ ಸಾಯಣಭಾಷ್ಯಂ ॥

ದ್ರವಿಣೋದಾ ದ್ರವಿಣಸ್ಯ ಧನಸ್ಯ ಬಲಸ್ಯ ವಾ ದಾತಾಗ್ನಿಸ್ತುರಸ್ಯ ತ್ವರಮಾಣಸ್ಯ ಚಲತೋ ಜಂಗಮಸ್ಯ ದ್ರವಿಣಸೋ ಧನಸ್ಯ ಬಲಸ್ಯ ವೈಕದೇಶಂ ಪ್ರ ಯಂಸತ್ । ಅಸ್ಮಭ್ಯಂ ಪ್ರಯಚ್ಛತು । ತಥಾ ದ್ರವಿಣೋದಾಃ ಸನರಸ್ಯ ಸನನೀಯಸ್ಯ ಸಂಭಜನೀಯಸ್ಯ ಸ್ಥಾವರರೂಪಸ್ಯ ಧನಸ್ಯೈಕದೇಶಂ ಪ್ರಯಚ್ಛತು । ಅಪಿ ಚ ದ್ರವಿಣೋದಾ ವೀರವತೀಂ ವೀರೈಃ ಪುತ್ರಾದಿಭಿರ್ಯುಕ್ತಮಿಷಮನ್ನಂ ನೋಽಸ್ಮಭ್ಯಂ ಪ್ರಯಚ್ಛತು । ತಥಾ ದ್ರವಿಣೋದಾ ದೀರ್ಘಮಾಯುರಸ್ಮಭ್ಯಂ ರಾಸತೇ । ಪ್ರಯಚ್ಛತು ॥ ತುರಸ್ಯ । ತುರ ತ್ವರಣೇ । ಇಗುಪಧಲಕ್ಷಣಃ ಕಃ । ಸನರಸ್ಯ । ವನ ಷಣ ಸಂಭಕ್ತೌ । ಕೃದರಾದಯಶ್ಚ । ಉ. ೫-೪೧ । ಇತ್ಯರನ್ಪ್ರತ್ಯಯಃ । ಯಂಸತ್ । ಯಮ ಉಪರಮೇ । ಲೇಟ್ಯಡಾಗಮಃ । ಸಿಬ್ಬಹುಲಂ ಲೇಟೀತಿ ಸಿಪ್ । ರಾಸತೇ । ರಾ ದಾನೇ । ಪೂರ್ವವಲ್ಲೇಟಿ ಸಿಪ್ । ವ್ಯತ್ಯಯೇನಾತ್ಮನೇಪದಂ ॥

ಪ್ರತಿಪದಾರ್ಥ

**ದ್ರವಿಣೋದಾಃ**— ಧನದ ಅಥವಾ ಬಲದ ದಾತನಾದ ಅಗ್ನಿಯು । **ತುರಸ್ಯ**—( ವ್ಯವಹಾರಕ್ಕಾಗಿ ) ಓಡಾಡತಕ್ಕ । **ದ್ರವಿಣಸಃ**—ಧನದ ಅಥವಾ ಬಲದ । **ಪ್ರ ಯಂಸತ್**— ಪ್ರದಾತನಾಗಿ ಆಗಲಿ (ಕೊಡಲಿ) । **ದ್ರವಿಣೋದಾಃ**—ಧನ ಪ್ರದನಾದ ಅಗ್ನಿಯು । **ಸನರಸ್ಯ**—ಪೂಜ್ಯವೂ ಮತ್ತು ಶಾಶ್ವತವೂ ಆದ ಧನದ ಅಥವಾ ಬಲದ ದಾತನಾಗಲಿ । **ದ್ರವಿಣೋದಾಃ**—ಧನದಾತನಾದ ಅಗ್ನಿಯು । **ವೀರವತೀಂ**—ಪುತ್ರಾದಿಗಳಿಂದ ಕೂಡಿದ । **ಇಷಂ**—ಅನ್ನವನ್ನು । **ನಃ**—ನಮಗೆ (ಕೊಡಲಿ) । **ದ್ರವಿಣೋದಾಃ**— ಧನಪ್ರದನಾದ ಅಗ್ನಿಯು । **ದೀರ್ಘಂ ಆಯುಃ**—ದೀರ್ಘವಾದ ಆಯುಸ್ಸನ್ನು । **ರಾಸತೇ**—ಕೊಡಲಿ ॥

॥ ಭಾವಾರ್ಥ ॥

ಧನಪ್ರದನಾದ ಅಗ್ನಿಯು ನಮಗೆ ವ್ಯವಹಾರಕ್ಕಾಗಿ ಸಂಚರಿಸತಕ್ಕ ಧನವನ್ನೂ, ಸ್ಥಿರವಾಗಿ ಉಳಿಯತಕ್ಕ ಧನವನ್ನೂ, (ಗೃಹಾದಿಗಳನ್ನೂ) ಪುತ್ರಾದಿಗಳಿಂದ ಕೂಡಿದ ಅನ್ನವನ್ನೂ ದೀರ್ಘವಾದ ಆಯುಸ್ಸನ್ನೂ ಅನುಗ್ರಹಿಸಿ ಕೊಡಲಿ.

## English Translation

May Dravinoda grant us (a portion) of moveable wealth ; may Dravinoda grant us (a portion) of that which is stationary ; may Dravinoda give us food attended by progeny ; may Dravinoda bestow upon us long life.

ವಿಶೇಷವಿಷಯಗಳು

ದ್ರವಿಣೋದಾಃ—ದ್ರವಿಣೋದಾಃ ಎಂಬ ಶಬ್ದದ ನಿರ್ವಚನವನ್ನೂ, ಈ ವಿಶೇಷಣವು ಅಗ್ನಿದೇವತಾಕವಾದದ್ದೇ ಎಂಬ ವಿಷಯವನ್ನೂ ಪ್ರಮಾಣಗಳನ್ನುದಹರಿಸಿ ಋಗ್ವೇದ ಸಂಹಿತೆಯ ೨ನೇ ಭಾಗದ ೬೫೨-೬೫೪ನೇ ಪುಟಗಳಲ್ಲಿಯೂ, ಮತ್ತು ಇದೇ ಭಾಗದಲ್ಲಿ ಈ ಸೂಕ್ತದ ಮೊದಲನೇ ಋಕ್ಕಿನ ವಿಶೇಷವಿಷಯಗಳಲ್ಲಿಯೂ

ವಿವರಿಸಿದೆ. ಕುತ್ಸಋಷಿಯು ಅಗ್ನಿಯನ್ನು ಈ ವಿಶೇಷಣದಿಂದ ಸಂಬೋಧಿಸಿದುದರಲ್ಲಿ ನಿಜವಾದ ಅರ್ಥವಿದೆ ಎಂದು ಬೃಹದ್ದೇವತಾಕಾರರು ಕುತ್ಸನನ್ನು ಶ್ಲಾಘಿಸಿರುವ ವಾಕ್ಯವನ್ನು ಈ ಸಂದರ್ಭಕ್ಕೆ ಉಚಿತವಾಗಿರುವುದರಿಂದ ಪುನಃ ಉದಹರಿಸಿದೆ.

**ದ್ರವಿಣಂ ಧನಂ ಬಲಂ ವಾಪಿ ಪ್ರಾಯಚ್ಛದ್ಯೇನ ಕರ್ಮಣಾ ।**
**ತತ್ಕರ್ಮ ದೃಷ್ಟ್ವಾ ಕುತ್ಸಸ್ತು ಪ್ರಾಹೈನಂ ದ್ರವಿಣೋದಸಂ ॥**

( ಬೃಹದ್ದೇವತಾ ೨-೫೫ )

ಉದಾರವಾಗಿ ಧನವನ್ನೂ ಬಲವನ್ನೂ ಕೊಡತಕ್ಕ ಅಗ್ನಿಯ ಕರ್ಮಗಳನ್ನು ಕುತ್ಸಋಷಿಯು ಗ್ರಹಿಸಿ ಅಗ್ನಿಯನ್ನು ಧನದ ಅಥವಾ ಬಲದ ದಾತನಾದ **ದ್ರವಿಣೋದಾಃ** ಎಂದು ಹೊಗಳಿದನು. ದ್ರವಿಣದ ಪ್ರಭೇದಗಳು ಅನೇಕವಿರುವುದರಿಂದ ಈ ಋಕ್ಕಿನಲ್ಲಿ ಸಕಲವಿಧವಾದ ದ್ರವಿಣಗಳನ್ನೂ ಅಗ್ನಿಯು ಅನುಗ್ರಹಿಸಲಿ ಎಂದು ಪ್ರಾರ್ಥಿಸಿದೆ.

**ತುರಸ್ಯ—ಚಲತೋ ಜಂಗಮಸ್ಯ ।** ಚರವಾದ, ವ್ಯವಹಾರಗಳಿಗೆ ಉಪಯೋಗವಾಗಿ ಓಡಾಡಿಸಲ್ಪಡುವ, ಶೀಘ್ರವಾಗಿ ಸಂಚರಿಸುವ, **ದ್ರವಿಣಸಃ**—ಧನಕ್ಕೆ. **ತುರಃ ತರತೇರ್ವಾ ತ್ವರತೇರ್ವಾ ।** ದಾಟು ಅಥವಾ ವೇಗವಾಗಿ ಚಲಿಸು ಎಂಬರ್ಥದಲ್ಲಿ ಈ ಪದವು ಉಪಯೋಗಿಸಲ್ಪಡುತ್ತದೆ. **ತ್ವರಯಾ ತೂರ್ಣಗತಿರ್ಯಮಃ ।** ವೇಗಗಾಮಿಯಾದುದರಿಂದಲೇ ಯಮನಿಗೂ ತುರನೆಂಬ ವಿಶೇಷಣವಿದೆಯೆಂದು ನಿರುಕ್ತಕಾರರು ಈ ಪದಕ್ಕೆ ನಿರ್ವಚನವನ್ನು ಮಾಡುತ್ತಾರೆ. (ನಿ. ೧೨-೧೪) ಶಕ್ತಿಪರ್ಯಾಯವಾಗಿಯೂ ಈ ಪದವನ್ನುಪಯೋಗಿಸುವುದುಂಟು. ಈ ಋಕ್ಕಿನಲ್ಲಿ ಶೀಘ್ರವಾದ ವ್ಯವಹಾರಗಳಿಗೆ ಸಾಧಕವಾದುದೂ ಒಬ್ಬನಿಂದ ಇನ್ನೊಬ್ಬನಿಗೆ ಚಲಿಸತಕ್ಕದೂ ಆದುದು ಎಂಬರ್ಥದಲ್ಲಿ ಈ ಪದದ ಪ್ರಯೋಗವಿದೆ. ಅಸ್ಥಿರವಾದ ಎಂಬ ಅಭಿಪ್ರಾಯವೂ ಅಡಗಿದೆ.

**ಪತೀ ತುರಸ್ಯ ರಾಧಸೋ ವಿದ್ವಾಂಸಾ ತರ್ವಣಸ್ತಮಾ ।**

(ಋ. ಸಂ. ೫-೮೬-೪)

ಇತ್ಯಾದಿ ಋಕ್ಕುಗಳಲ್ಲಿಯೂ ಸಹ ಹೀಗೆಯೇ **ತುರಸ್ಯ ರಾಧಸಃ ।** ಎನ್ನುವುದಕ್ಕೆ **ಜಂಗಮರೂಪಸ್ಯ ಧನಸ್ಯ ।** ಎಂದು ಅಸ್ಥಿರವಾದ, ಚಲಿಸತಕ್ಕ ಎಂಬರ್ಥದಲ್ಲಿ ಉಪಯೋಗಿಸಿದೆ. ಇದೂ ಅಲ್ಲದೇ, ವೇಗ ಅಥವಾ ಶಕ್ತಿ, ಸಾಮರ್ಥ್ಯ ಈ ಅರ್ಥಗಳಲ್ಲೂ ಈ ಪದದ ಪ್ರಯೋಗವು ಅನೇಕ ಕಡೆ ಇದೆ.

**ಸದಿದ್ಧಿ ತೇ ತುವಿಜಾತಸ್ಯ ಮನ್ಯೇ ಸಹಃ ಸಹಿಷ್ಠ ತುರತಸ್ತುರಸ್ಯ ।**

(ಋ. ಸಂ. ೬-೧೮-೪)

**ಯಂ ವರ್ಧಯಂತೀದ್ಗಿರಃ ಪತಿಂ ತುರಸ್ಯ ರಾಧಸಃ ।**

(ಋ. ಸಂ. ೬-೪೪-೫)

ಇಲ್ಲೆಲ್ಲಾ **ತುರಸ್ಯ** ಎಂದರೆ ಹಿಂಸಕಸ್ಯ ಅಥವಾ **ಬಲವತಃ ಶತ್ರೋಃ** ಎಂದು ಶಕ್ತಿಯೆಂಬ ಅರ್ಥವನ್ನು ಕೊಡುತ್ತದೆ. ೧-೬೧-೧೩ ; ೭-೪೧-೨ ಇತ್ಯಾದಿ ಸನ್ನಿವೇಶಗಳಲ್ಲಿ ಯಮನ ಪರ್ಯಾಯವಾಗಿಯೇ ಇದೆ. ಅತ್ಯಂತ ವೇಗವಾಗಿ ಸಂಚರಿಸತಕ್ಕವನೆಂದು ಯಮನಿಗೆ **ತುರಃ** ಎಂದು ಹೆಸರು ( ನಿ. ೧೨-೧೪ ) ಅತ್ಯಂತ ಶಕ್ತಿಯುಳ್ಳವನೆಂದೂ ಆಗಬಹುದು. ಈ ನಾನಾರ್ಥಗಳಲ್ಲಿ ಉಪಯೋಗಿಸಿರುವ **ತುರಸ್ಯ** ಎಂಬ ಪದಕ್ಕೆ ಪ್ರಕೃತ ಸಂದರ್ಭದಲ್ಲಿ **ಜಂಗಮರೂಪಸ್ಯ** ಧನಸ್ಯ ಎಂದರ್ಥವು.

**ಸನರಸ್ಯ**—ಸನನೀಯಸ್ಯ ಸಂಭಜನೀಯಸ್ಯ ಸ್ಥಾವರರೂಪಸ್ಯ ಧನಸ್ಯ। ಪೂಜ್ಯವೂ ಸ್ಥಿರವಾದದ್ದೂ ಆದ ಧನದ ಅಥವಾ ಬಲದ ಎಂದು ಸಾಯಣರ ವಿವರಣೆ. ಮೊದಲು ಜಂಗಮರೂಪದ ಧನವೆಂದು ಹೇಳಿದಮೇಲೆ ಆ ಅರ್ಥಕ್ಕೆ ಹೊಂದಿಕೊಳ್ಳುವಂತೆ ಇಲ್ಲಿ ಸ್ಥಿರವಾದ, ಶಾಶ್ವತವಾದ ಎಂಬರ್ಥವನ್ನು ಮಾಡುವುದು ಸಹಜವಾಗಿದೆ. ಆದರೆ ಈ ಪದಕ್ಕೆ ಸಾಯಣರು ಮಾಡುವ ಅವಯವಾರ್ಥವು ಹೊಂದಿಕೊಳ್ಳುವುದೇ ಎಂಬುದನ್ನು ವಿಮರ್ಶಿಸಬೇಕು. ಈ ಪದವು ಇದೊಂದುಕಡೆ ಹೊರತು ಋಕ್ಸಂಹಿತೆಯಲ್ಲಿ ಇನ್ನೆಲ್ಲೂ ಬಂದಿಲ್ಲ. ಸ್ಕಂದಸ್ವಾಮಿಗಳು ಈ ಪದಕ್ಕೆ **ಸನರಂ—ಪರಿಚಾರಕಮನುಷ್ಯಸಹಿತಂ।** ಭೃತ್ಯಾದಿ ಜನರೊಂದಿಗೆ ಕೂಡಿದ ಎಂದು ವಿವರಿಸಿದ್ದಾರೆ. ಅಲ್ಲಿ ಅವಯವಾರ್ಥವು ಸರಿಹೋದರೂ ಮೇಲಿನ ಅಭಿಪ್ರಾಯದೊಂದಿಗೆ ಹೊಂದಿಕೊಳ್ಳುವುದಿಲ್ಲ. ಆದುದರಿಂದ **ಷಣ್** ಧಾತುವಿಗೆ **ಅರನ್** ಪ್ರತ್ಯಯವನ್ನು ಸೇರಿಸಿದರೆ ಕೃದರಃ, ಸೃದರಃ, ಎಂದಾಗುವಂತೆ **ಸನರಃ** ಎಂಬ ರೂಪ ನಿಷ್ಪತ್ತಿಯಾಗುತ್ತದೆಂಬ ಸಾಯಣರ ನಿರ್ವಚನದ ಪ್ರಕಾರ ಅವರು ಹೇಳುವ ಅರ್ಥವೇ ಹೆಚ್ಚಾಗಿ ಹೊಂದಿಕೊಳ್ಳುತ್ತದೆ.

**ವೀರವತೀಂ—ವೀರೈಃ ಪುತ್ರಾದಿಭಿಃ ಯುಕ್ತಾಂ ।** ವೀರರಾದ ಪುತ್ರರಿಂದೊಡಗೂಡಿದ

**ಇಷಂ—ಅಂಧಃ, ವಾಜಃ, ಪಯಃ ।** ಇತ್ಯಾದಿ ೨೮ ಅನ್ನನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯) **ಇಷ** ಶಬ್ದಕ್ಕೆ ಅನ್ನವೆಂದು ಅರ್ಥ. ವೀರಪುತ್ರರೊಡಗೂಡಿದ ಅನ್ನವನ್ನು ಕೊಡು ಎಂದು ಅಗ್ನಿಯನ್ನು ಪ್ರಾರ್ಥಿಸಿದೆ—

ಹೀಗೆ ನಾನಾವಿಧವಾದ ಧನಪ್ರಭೇದಗಳಿಗೂ **ದ್ರವಿಣ**ವೆಂಬ ಪ್ರಸಿದ್ಧಿಯಿರುವುದರಿಂದಲೂ ಅಂತಹ ಎಲ್ಲಾ ವಿಧವಾದ ದ್ರವಿಣವನ್ನೂ ಕೊಡಲು ಅಗ್ನಿಗೆ ಸಾಮರ್ಥ್ಯವಿರುವುದರಿಂದಲೂ ಅಗ್ನಿಗೆ **ದ್ರವಿಣೋದಾಃ** ಎಂದು ಅವನ ಸ್ವರೂಪ ಮತ್ತು ಸಾಮರ್ಥ್ಯಗಳನ್ನು ವರ್ಣಿಸುವ ವಿಶೇಷಣವಿದೆ. ಇಂತಹ ಅಗ್ನಿಯು ತಾನು ಅಮೃತನಾಗಿರುವನು. ಭಕ್ತರಿಗೂ ದೀರ್ಘವಾದ ಆಯುಸ್ಸನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಿದೆ. ಕರ್ಮಾನುಷ್ಠಾನಪರರಿಗೆ ಅಗ್ನಿಯು ಈ ಸಕಲ ಸಂಪತ್ತುಗಳನ್ನೂ ಅನುಗ್ರಹಿಸಿ ಕೊಟ್ಟೇಕೊಡುವನೆಂದು ಅನೇಕ ಕಡೆ ಇವನನ್ನು ಕೊಂಡಾಡಿದೆ.—

**ಯಸ್ತೇ ಯಜ್ಞೇನ ಸಮಿಧಾ ಯ ಉಕ್ಥೈರರ್ಕೇಭಿಃ ಸೂನೋ ಸಹಸೋ ದದಾಶತ್ ।**
**ಸ ಮರ್ತ್ಯೇಷ್ವಮೃತ ಪ್ರಚೇತಾ ರಾಯಾ ದ್ಯುಮ್ನೇನ ಶ್ರವಸಾ ವಿ ಭಾತಿ ॥**
(ಋ. ಸಂ. ೬.೫.೫)

ವ್ಯಾಕರಣಪ್ರಕ್ರಿಯಾ

**ದ್ರವಿಣೋದಾಃ**—ಇದೇ ಸೂಕ್ತದ ಮೊದಲನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

**ದ್ರವಿಣಸಃ**—ದ್ರು ಗತೌ ಧಾತು. **ದ್ರುದಕ್ಷಿಭ್ಯಾಮಿನನ್** (ಉ. ಸೂ. ೨-೧೦೦) ಎಂಬುದರಿಂದ ಇನನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ ಅವಾದೇಶ. **ಅಟ್ ಕುಪ್ವಾಙ್**—ಎಂಬುದರಿಂದ ಪ್ರತ್ಯಯ ನಕಾರಕ್ಕೆ ಣತ್ವ. ಛಾಂದಸವಾಗಿ ಸುಕಾಗಮ. ದ್ರವಿಣಸ್ ಶಬ್ದವಾಗುತ್ತದೆ. ಷಷ್ಠೀ ಏಕವಚನಾಂತರೂಪ.

**ತುರಸ್ಯ**—ತುರ ತ್ವರಣೇ ಧಾತು. ಇಗುಪಧವಾದುದರಿಂದ **ಇಗುಪಧಜ್ಞಾಪ್ರೀಕಿರಃ ಕಃ**—(ಪಾ. ಸೂ. ೩-೧-೧೩೫) ಎಂಬುದರಿಂದ ಕ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ತುರ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಷಷ್ಠೀ ಏಕವಚನಾಂತರೂಪ.

**ಸನರಸ್ಯ**—ವನ ಷಣ ಸಂಭಕ್ತೌ ಧಾತು. **ಕೃದರಾದಯಶ್ಚ**—(ಉ. ಸೂ. ೫-೭೯) ಎಂಬುದರಿಂದ ಇದಕ್ಕೆ ಅರನ್ ಪ್ರತ್ಯಯ. **ಧಾತ್ವಾದೇಃ ಷಃ ಸಃ**—ಎಂಬುದರಿಂದ ಆದಿಗೆ ಸತ್ವ. ಸನರ ಎಂದು ರೂಪವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಯಂಸತ್**—ಯಮು ಉಪರಮೇ ಧಾತು. ಲೇಟ್‌ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ ಲೋಪಃ**—(ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ**—(ಪಾ. ಸೂ. ೩-೪-೯೪) ಎಂಬುದರಿಂದ ಅಡಾಗಮ. **ಸಿಬ್ಬಹುಲಂ ಲೇಟಿ**—(ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. ಮಕಾರಕ್ಕೆ ಅನುಸ್ವಾರ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವೀರವತೀಮ್**—ವೀರಾಃ ಅಸ್ಯ ಸಂತೀತಿ ವೀರವತೀ. **ತದಸ್ಯಾಸ್ತ್ಯ**—ಎಂಬುದರಿಂದ ಮತುಪ್ ಪ್ರತ್ಯಯ. ಸ್ತ್ರೀತ್ವದಲ್ಲಿ **ಉಗಿತಶ್ಚ**—ಎಂಬುದರಿಂದ ಙೀಪ್. ದ್ವಿತೀಯಾ ಏಕವಚನಾಂತರೂಪ.

**ರಾಸತೇ**—ರಾ ದಾನೇ ಧಾತು. ಹಿಂದಿನಂತೆ ಲೇಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ ಬಂದಾಗ ಸಿಪ್. **ಟಿತಆತ್ಮನೇ**—ಎಂಬುದರಿಂದ ಪ್ರತ್ಯಯಕ್ಕೆ ಏತ್ವ. ಇದು ಪರಸ್ಮೈಪದಿಯಾದರೂ **ವ್ಯತ್ಯಯೋಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇಪದಿಯಾಗುತ್ತದೆ ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ**—ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೮ ॥



ಸಂಹಿತಾಪಾಠಃ

ಏವಾ ನೋ ಅಗ್ನೇ ಸಮಿಧಾ ವೃಧಾನೋ ರೇವತ್ಪಾವಕ ಶ್ರವ-
ಸೇ ವಿ ಭಾಹಿ ।
ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ
ಪೃಥಿವೀ ಉತ ದ್ಯೌಃ ॥೯॥

ಪದಪಾಠಃ

ಏವ । ನಃ । ಅಗ್ನೇ । ಸಂಽಇಧಾ । ವೃಧಾನಃ । ರೇವತ್ । ಪಾವಕ । ಶ್ರ-
ವಸೇ । ವಿ । ಭಾಹಿ ।

ತತ್ । ನಃ । ಮಿತ್ರಃ । ವರುಣಃ । ಮಮಹಂತಾಂ । ಅದಿತಿಃ । ಸಿಂಧುಃ ।
ಪೃಥಿವೀ । ಉತ । ದ್ಯೌಃ ॥ ೯ ॥

ಸಾಯಣಭಾಷ್ಯಂ

ವ್ಯಾಖ್ಯಾತೇಯಂ ಪೂರ್ವಸೂಕ್ತೇ । ಅಕ್ಷರಾರ್ಥಸ್ತು ಹೇ ಶೋಧಕಾಗ್ನೇ । ಏವಮಸ್ಮಾಭಿರ್ದತ್ತೇನ ಸಮಿದಾದಿದ್ರವ್ಯೇಣ ವೃಧಾನೋ ವರ್ಧಮಾನಃ ಸನ್ ನೋಽಸ್ಮಾಕಂ ಧನಯುಕ್ತಾಯಾನ್ನಾಯ ವಿಶೇಷೇಣ ಪ್ರಕಾಶಸ್ವ । ಅಸ್ಮಾಕಂ ತದನ್ನಂ ಮಿತ್ರಾದಯೋ ಮಮಹಂತಾಂ । ಪೂಜಯಂತಾಂ । ರಕ್ಷಂತ್ವಿತ್ಯರ್ಥಃ । ತಥಾ ಸಿಂಧುರಬ್ದೇವತಾ ದ್ಯಾವಾಪೃಥಿವ್ಯೌ ಚ ಮಮಹಂತಾಂ ॥

ಪ್ರತಿಪದಾರ್ಥ

ಪಾವಕ—ಶುದ್ಧಿಮಾಡತಕ್ಕ । ಅಗ್ನೇ—ಎಲೈ ಅಗ್ನಿಯೇ । ನಃ—ನಮ್ಮ (ನಮ್ಮಿಂದ ಅರ್ಜಿತವಾದ) । ಸಮಿಧಾ ಏವ—ಸಮಿತ್ತುಗಳಿಂದಲೇ । ವೃಧಾನಃ—ವೃದ್ಧಿಯಾಗಿ ಬೆಳೆದು । ರೇವತ್—ಧನದಿಂದಕೂಡಿದ । ಶ್ರವಸೇ—ಅನ್ನಕ್ಕಾಗಿ । ವಿ ಭಾಹಿ—ಅತಿಶಯವಾಗಿ ಪ್ರಕಾಶಿಸು । ನಃ—ನಮ್ಮ । ತತ್—ಆ ಅನ್ನವನ್ನು । ಮಿತ್ರಃ—ಮಿತ್ರನೂ । ವರುಣಃ—ವರುಣನೂ । ಅದಿತಿಃ—ಅದಿತಿಯೂ । ಸಿಂಧುಃ—ಸಾಗರವೂ । ಪೃಥಿವೀ—ಪೃಥಿವಿಯೂ । ಉತ—ಮತ್ತು । ದ್ಯೌಃ – ದ್ಯುಲೋಕವೂ । ಮಮಹಂತಾಂ—ರಕ್ಷಿಸಲಿ.

ಭಾವಾರ್ಥ

ಪಾಪಗಳನ್ನು ನಾಶಮಾಡಿ ಶುದ್ಧಿಮಾಡತಕ್ಕ ಎಲೈ ಅಗ್ನಿಯೇ, ನಮ್ಮ ಸಮಿತ್ತುಗಳಿಂದ ವೃದ್ಧಿಯಾಗಿ ಬೆಳೆದು ಧನಯುಕ್ತವಾದ ನಮ್ಮ ಅನ್ನಪಾನಕ್ಕಾಗಿ ಅತಿಶಯವಾಗಿ ಪ್ರಕಾಶಿಸು. ಆ ನಮ್ಮ ಅನ್ನವನ್ನು ಮಿತ್ರನೂ ವರುಣನೂ ಅದಿತಿಯೂ ಸಾಗರವೂ ಪೃಥಿವಿಯೂ ಮತ್ತು ದ್ಯುಲೋಕವೂ ರಕ್ಷಿಸಲಿ.

English Translation

Thus, Agni, who is the purifier, growing with the fuel (we have supplied), blaze for the sake of securing food to us, who are possessed o wealth, and may Mitra, Varuna, Aditi,—ocean, earth, heaven, preserve it to us.

॥ ವಿಶೇಷವಿಷಯಗಳು ॥

೧-೫೫-೧೧ ನೇ ಋಕ್ಕನ್ನು ವಿವರಿಸುವಾಗ ಈ ಋಕ್ಕಿನ ಅಭಿಪ್ರಾಯಗಳನ್ನು ವಿಶದವಾಗಿ ತಿಳಿಸಿದೆ. **ಸಮಿಧಾ ಏವ ವೃಧಾನಃ** । ಎಂದು ಅಗ್ನಿಯ ವೃದ್ಧಿಗೆ ಸಾಧನವನ್ನು ಕುರಿತು ಹೇಳುವಾಗ **ಸಮಿತ್** ಶಬ್ದಕ್ಕೆ ಕಾಷ್ಠಗಳಲ್ಲ, ಸ್ತೋತ್ರವೆಂದೇ ಅರ್ಥ ಎಂದು ಸ್ಕಂದಸ್ವಾಮಿಗಳು ಮಾಡುವ ಅರ್ಥಕ್ಕಿಂತಲೂ ಸಾಯಣರ ವಿವರಣೆಯೇ ಹೆಚ್ಚು ಉಚಿತವಾಗಿರುವುದೆಂದು ಶ್ರುತಿವಾಕ್ಯರೂಪವಾದ ಪ್ರಮಾಣಗಳನ್ನು ಉದಹರಿಸಿ ವಿಸ್ತರಿಸಿ ಹೇಳಿದೆ.

**ಪಾವಕ—ಶೋಧಕ** । ಸಕಲವನ್ನೂ ಶುದ್ಧಿಮಾಡತಕ್ಕವನು ಎಂದು ಅಗ್ನಿಗೆ ವಿಶೇಷಣವಾಗಿದೆ. ಈ ವಿಶೇಷ ಣವು ಅಗ್ನಿ, ಸೂರ್ಯ, ಮರುತ್ತುಗಳು, ಉದಕ ಮುಂತಾದ ದೇವತೆಗಳ ಪರವಾಗಿಯೂ ಉಪಯೋಗಿಸಿದೆ. ಹೀಗೆ ಈ ಸಂದರ್ಭಕ್ಕೆ ತಕ್ಕಂತೆ ಶೋಧಕನೆಂದು ಅಗ್ನಿಯ ಸ್ವರೂಪವನ್ನು ವಿವರಿಸುವುದು ಮಾತ್ರವಲ್ಲದೇ ಅಂಕಿತನಾಮ ವಾಗಿಯೂ ಅಗ್ನಿಪರ್ಯಯವಾಗಿ ಪ್ರಸಿದ್ಧವಾಗಿದೆ. **ಪಾವಕಾಗ್ನಿ**ಯೆಂಬುದು ಅಗ್ನಿಯ ಮೂರುಜನ ಸಹೋದರರ ಹೆಸರುಗಳಲ್ಲಿ ಒಂದು ಎಂದು ಬೃಹದ್ದೇವತೆಯಲ್ಲಿ ವರ್ಣಿತವಾಗಿರುವ ಕಥೆಯಿಂದ ತಿಳಿಯಬರುತ್ತದೆ.

**ವೈಶ್ವಾನರೇ ಗೃಹಪತೌ ಯದಿಷ್ಮೇಽಗ್ನೌ ಚ ಪಾವಕೇ ।**
**ವಷಟ್ಕಾರೇಣ ವೃಕ್ಣೇಷು ಭ್ರಾತೃಷ್ವಗ್ನೌ ಸಹಃಸುತೇ ॥**
(ಬೃ. ದೇ. ೭-೬೧).

ಎಂದು ಋಕ್ಸಂಹಿತೆಯ ೧೦ನೇ ಮಂಡಲದ ೫೧ ನೇ ಸೂಕ್ತದ ಆಧಾರದಮೇಲೆ ವಿವರಿಸಿರುವ ಅಗ್ನಿಭ್ರಾತೃಗಳ ಕಥೆ ಯನ್ನು ಹೇಳುವಾಗ ಅವರ ಹೆಸರುಗಳನ್ನೂ ಹೇಳಿದೆ.

ಆದರೆ, ಪ್ರಕೃತದಲ್ಲಿ **ಪಾವಕ** ಶಬ್ದಕ್ಕೂ ಆ ಕಥೆಗೂ ಸಂಬಂಧವಿಲ್ಲ. ಇಲ್ಲಿ **ಪಾವಕ** ಎಂದರೆ ಎಲ್ಲರನ್ನೂ ಶುದ್ಧಿಗೊಳಿಸುವವನು ಎಂದರ್ಥ. ಈ ಶ್ರೇಷ್ಠವಾದ ಗುಣದಿಂದ ಮಾಡಿದ ಅಗ್ನಿಯಿಂದ ದತ್ತವಾದ ಅನ್ನವನ್ನೂ ಮಿತ್ರಾದಿ ದೇವತೆಗಳು ಪೂಜ್ಯವಾದುದನ್ನಾಗಿ ಮಾಡಲಿ ಎಂದು ಪ್ರಾರ್ಥಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಏವ — ನಿಪಾತಸ್ಯ ಚ** — (ಪಾ. ಸೂ. ೬-೩-೧೩೬)ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಸಮಿಧಾ**— ಞಿಇಂಧೀ ದೀಪ್ತೌ ಇದಕ್ಕೆ ಸಮ್ ಉಪಪದವಾದಾಗ ಕ್ವಿಪ್‌ಪ್ರತ್ಯಯ. **ಅನಿದಿತಾಂಹಲ**— ಎಂಬುದರಿಂದ ಉಪಧಾನಕಾರಲೋಪ. ಸಮಿಧ್ ಎಂದು ಧಕಾರಾಂತವಾದ ಶಬ್ದವಾಗುತ್ತದೆ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ವೃಧಾನಃ**—ವೃಧು ವೃದ್ಧೌ ಧಾತು. ಇದಕ್ಕೆ ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ಬಹುಲಂ ಛಂದಸಿ** — ಎಂಬುದರಿಂದ ಶಪಿಗೆ ಲುಕ್. ಪ್ರತ್ಯಯಕ್ಕೆ ಙಿತ್ವವಿರುವುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯ ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ರೇವತ್**— ೫೫ ನೇ ಸೂಕ್ತದ ೧೧ ನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ. ಮುಂದಿನ ಶಬ್ದಗಳೆಲ್ಲವೂ ಅಲ್ಲಿಯೇ ವ್ಯಾಖ್ಯಾತಗಳಾಗಿವೆ. ॥ ೯ ॥

# ತೊಂಭತ್ತೇಳನೆಯ ಸೂಕ್ತವು

---

ಅಪ ನ ಇತ್ಯಷ್ಟರ್ಚಂ ಚತುರ್ಥಂ ಸೂಕ್ತಂ ಕುತ್ಸಸ್ಯಾರ್ಷಂ ಗಾಯತ್ರಂ । ಶುಚಿಗುಣಕೋಽಗ್ನಿಃ ಶುದ್ಧೋಽಗ್ನಿರ್ವಾ ದೇವತಾ । ತಥಾ ಚಾನುಕ್ರಾಂತಂ । ಅಪ ನೋಽಷ್ಟೌ ಶುಚಯೇ ಗಾಯತ್ರಮಿತಿ ॥ ವಿನಿಯೋಗೋ ಲೈಂಗಿಕಃ ॥ ಅತ್ರೇದಮಾಖ್ಯಾನಂ । ದೀರ್ಘಜಿಹ್ವೀ ನಾಮ ರಾಕ್ಷಸೀ ಸರ್ವಾನ್ಯಜ್ಞಾನ್ಸ್ಪಬಾಧೇ । ತಾಂ ಹಂತುಮಿಂದ್ರೋಽಶಕ್ತಃ ಸನ್ ಸರ್ವಸ್ಯ ಮಿತ್ರಭೂತಂ ಕುತ್ಸಮಬ್ರವೀದೇಷಾ ತ್ವಯಾ ಹಂತವ್ಯೇತಿ । ಸ ಚಾವಧೀತ್ । ತಂ ವಾಗಭ್ಯವದತ್ ಅನುಚಿತಮಿದಂ ತ್ವಯಾ ಚರಿತಂ ಯತ್ತ್ವಂ ಸರ್ವೇಷಾಂ ಮಿತ್ರಭೂತಃ ಸನ್ ಕ್ರೂರಮಕಾರ್ಷೀರಿತಿ। ತಮೃಷಿಂ ಶೋಕಃ ಪ್ರಾಪ್ನೋತ್। ಸ ಋಷಿರನೇನ ಸೂಕ್ತೇನಾಗ್ನಿಂ ಸ್ತುತ್ವಾ ಶೋಕಮಪಾಗಮಯತ್ । ತಥಾ ಚ ತಾಂಡಕಂ । ದೀರ್ಘಜಿಹ್ವೀ ವಾ ಇದಂ ರಕ್ಷೋ ಯಜ್ಞಹಾ ಯಜ್ಞಾನವಲಿಹತ್ಯಚರತ್ ತಾಮಿಂದ್ರಃ ಕಯಾ ಚನ ಮಾಯಯಾ ಹಂತುಂ ನಾಶಂಸತ್ ಅಥ ಹ ಸುಮಿತ್ರಃ ಕುತ್ಸಃ ಕಲ್ಯಾಣ ಆಸ । ತಮಬ್ರವೀದಿತ್ಯಾದಿ । ತಾಂ. ೧೩-೬-೯ । ತಸ್ಮಾದೇತತ್ಸೂಕ್ತಂ ಶುಗಪನಯನಾಯ ವಿನಿಯೋಜ್ಯಂ । ಅತ ಏವ ಹಿ ಸೂತ್ರಕಾರೇಣ ಭಾರದ್ವಾಜೇನ ದಶಮೇಽಹನಿ ಕರ್ತವ್ಯೇ ಶಾಂತಿಕರ್ಮಣಿ ಯಜುರ್ವೇದೇ ಪಠಿತಮೇತತ್ಸೂಕ್ತಂ ವಿನಿಯುಜ್ಯತೇ । ನವ ಚ ಸ್ರುವಾಹುತೀರಪ ನಃ ಶೋಶುಚದಘಮಿತಿ ॥

ಅನುವಾದವು—**ಅಪ ನಃ** ಎಂಬುವುದು ಹದಿನೈದನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಕುತ್ಸನು ಋಷಿಯು. ಗಾಯತ್ರೀಛಂದಸ್ಸು. ಶುಚಿಗುಣಯುಕ್ತನಾದ ಅಗ್ನಿಯು ಅಥವಾ ಕೇವಲ ಅಗ್ನಿಯು ದೇವತೆಯು. ಅನುಕ್ರಮಣಿಕೆಯಲ್ಲಿ **ಅಪ ನೋಽಷ್ಟೌ ಶುಚಯೇ ಗಾಯತ್ರಮಿತಿ** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು. ಇಲ್ಲಿ ಒಂದು ಉಪಾಖ್ಯಾನವು ಹೇಳಲ್ಪಟ್ಟಿರುವುದು. ಹಿಂದೆ ದೀರ್ಘಜಿಹ್ವೀ ಎಂಬ ಒಬ್ಬ ರಾಕ್ಷಸಿಯು ಋಷಿಗಳು ಮಾಡುತ್ತಿದ್ದ ಯಜ್ಞಯಾಗಾದಿಗಳಿಗೆ ತೊಂದರೆಯನ್ನುಂಟುಮಾಡುತ್ತಿದ್ದಳು. ಋಷಿಗಳ ಪ್ರಾರ್ಥನೆಯಂತೆ ಇಂದ್ರನು ಆ ರಾಕ್ಷಸಿಯನ್ನು ಸಂಹಾರಮಾಡಬೇಕೆಂದು ಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ. ಆಗ ಇಂದ್ರನು ಸರ್ವರಿಗೂ ಮಿತ್ರನಾದ ಕುತ್ಸಋಷಿಯನ್ನು ಕರೆದು—ಎಲೈ ಕುತ್ಸನೇ, ನೀನು ಈ ರಾಕ್ಷಸಿಯನ್ನು ಸಂಹಾರಮಾಡು. ಈ ಕೆಲಸವು ನಿನ್ನಿಂದ ಮಾತ್ರ ಸಾಧ್ಯವೆಂದು ಹೇಳಲು ಅದರಂತೆ ಕುತ್ಸನು ರಾಕ್ಷಸಿಯನ್ನು ಸಂಹಾರಮಾಡಿದನು. ಆಗ ಅಶರೀರವಾಣಿಯು ಇಂತು ನುಡಿಯಿತು—ಎಲೈ ಋಷಿಯೇ, ನೀನು ಸರ್ವರಿಗೂ ಮಿತ್ರಭೂತನೆಂದು ಪ್ರಸಿದ್ಧನಾಗಿದ್ದರೂ ಈ ದುಷ್ಕಾರ್ಯವನ್ನು ಏಕೆ ಮಾಡಿದೆ ? ನೀನು ಮಾಡಿದ್ದು ಅನುಚಿತವೆಂದು ಹೇಳಿತು. ಆಗ ಆ ಕುತ್ಸನಿಗೆ ಶೋಕವು (ದುಃಖವು) ಬಂದು ಆವರಿಸಿತು. ಆಗ ಋಷಿಯು ಆ ಶೋಕಪರಿಹಾರಕ್ಕಾಗಿ ಅಪ ನಃ ಶೋಶುಚತ್ ಎಂಬ ಈ ಸೂಕ್ತದಿಂದ ಅಗ್ನಿಯನ್ನು ಸ್ತೋತ್ರಮಾಡಲು ಅವನ ಶೋಕವು ಪರಿಹಾರವಾಯಿತು ಎಂದು. ತಾಂಡ್ಯಬ್ರಾಹ್ಮಣದಲ್ಲಿಯೂ ಈ ವಿಷಯವಾಗಿ—**ದೀರ್ಘಜಿಹ್ವೀ ವಾ ಇದಂ ರಕ್ಷೋ ಯಜ್ಞಹಾ ಯಜ್ಞಾನವಲಿಹತ್ಯಚರತ್ ತಾಮಿಂದ್ರಃ ಕಯಾ ಚನ ಮಾಯಯಾ ಹಂತುಂ ನಾಶಂಸತ್ ಅಥ ಹ ಸುಮಿತ್ರಃ ಕುತ್ಸಃ ಕಲ್ಯಾಣ ಆಸ ತಮ-**

**ಬ್ರವೀತ್** (ತಾ. ೧೩-೬-೯) ಎಂದು ಹೇಳಿರುವುದು. ಆದುದರಿಂದ ಲೋಕಪರಿಹಾರಕ್ಕಾಗಿ ಮಾಡುವ ಶಾಂತಿ ಕರ್ಮಾದಿಗಳಲ್ಲಿ ಈ ಸೂಕ್ತವನ್ನು ಮುಖ್ಯವಾಗಿ ಉಪಯೋಗಿಸಬೇಕು. ಆದುದರಿಂದಲೇ ಭರದ್ವಾಜಮುನಿಯು ಅಪರಕರ್ಮಸಂಬಂಧವಲ್ಲಿ ಹತ್ತನೆಯ ದಿವಸ ಮಾಡಬೇಕಾದ ಶಾಂತಿಕರ್ಮದಲ್ಲಿ ಯಜುರ್ವೇದದಲ್ಲಿರುವ ಈ ಮಂತ್ರಗಳನ್ನು ಉಪಯೋಗಿಸಬೇಕೆಂದು **ನವ ಚ ಸ್ರುವಾಹುತೀರಪ ನಃ ಶೋಶುಚದಘಮಿತಿ** ಎಂಬ ಸೂಕ್ತದಿಂದ ವಿವರಿಸಿರುವರು. ಯಜುರ್ವೇದದಲ್ಲಿ ಈ ಮಂತ್ರವು ತೈತ್ತಿರೀಯ ಆರಣ್ಯಕದಲ್ಲಿ ಆರನೆಯಪ್ರಪಾಠಕದ ಹನ್ನೊಂದನೆಯ ಅನುವಾಕದಲ್ಲಿರುವುದು. (ತೈ. ಆ. ೬-೧೧)

---:o:---

॥ ಓಂ ॥

## ಸೂಕ್ತ—೯೭

॥ ಮಂಡಲ—೧ ॥ ಅನುವಾಕ—೧೫ ॥ ಸೂಕ್ತ—೯೭ ॥

॥ ಅಷ್ಟಕ— ೧ ॥ ಅಧ್ಯಾಯ— ೬ ॥ ವರ್ಗ— ೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ- ೮ ॥

॥ ಋಷಿಃ—ಕುತ್ಸ ಆಂಗಿರಸಃ ॥

॥ ದೇವತಾ—ಅಗ್ನಿರಗ್ನಿಃ ಶುಚಿರ್ವಾ ॥

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಅಪ ನಃ ಶೋಶುಚದಘಮಗ್ನೇ ಶುಶುಗ್ಧ್ಯಾ ರಯಿಂ ।
ಅಪ ನಃ ಶೋಶುಚದಘಂ ॥ ೧ ॥

॥ ಪದಪಾಠಃ ॥

ಅಪ । ನಃ । ಶೋಶುಚತ್ । ಅಘಂ । ಅಗ್ನೇ । ಶುಶುಗ್ಧಿ । ಆ । ರಯಿಂ ।
ಅಪ । ನಃ । ಶೋಶುಚತ್ । ಅಘಂ ॥ ೧ ॥

ಸಾಯಣಭಾಷ್ಯಂ

ಹೇ ಅಗ್ನೇ ನೋಽಸ್ಮಾಕಮಘಂ ಪಾಪಮಪ ಶೋಶುಚತ್ । ಅಸ್ಮತ್ತೋ ನಿರ್ಗತ್ಯಾಸ್ಮದೀಯಂ ಶತ್ರುಂ ಶೋಚಯತು । ಯದ್ವಾ । ಅಸ್ಮದೀಯಂ ಪಾಪಂ ಶೋಶುಚತ್ । ಶೋಕಗ್ರಸ್ತಂ ಸದ್ವಿನಶ್ಯತು । ಅಪಿ ಚಾಸ್ಮಾಕಂ ರಯಿಂ ಧನಮಾ ಸಮಂತಾಚ್ಛುಶುಗ್ಧಿ । ಪ್ರಕಾಶಯ । ಉಕ್ತಾರ್ಥಮಪಿ ವಾಕ್ಯಮಾದರಾತಿಶಯದ್ಯೋತನಾಯ ಪುನಃ ಪಠ್ಯತೇ । ಅವಶ್ಯಮಸ್ಮಾಕಮಘಂ ವಿನಶ್ಯತ್ವಿತಿ ॥ ಶೋಶುಚತ್ । ಶುಚ ಶೋಕೇ । ಅಸ್ಮಾದ್ಯಙ್ಲುಗಂತಾಲ್ಲೇಟ್ಯಡಾಗಮಃ । ಅದಾದಿವಚ್ಚೇತಿ ವಚನಾಚ್ಛಪೋ ಲುಕ್ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಅಘಂ ಶೋಶುಚಚ್ಚ ರಯಿಂ ಶುಶುಗ್ಧಿ ಚೇತಿ ಚಾರ್ಥಪ್ರತೀತೇಶ್ಚಾದಿಲೋಪೇ ವಿಭಾಷೇತಿ ನಿಘಾತಪ್ರತಿಷೇಧಃ । ಶುಶುಗ್ಧಿ । ಶುಚ ದೀಪ್ತೌ । ಲೋಟಿ ಬಹುಲಂ ಛಂದಸೀತಿ ಶಪಃ ಶ್ಲುಃ । ಹುಝಲ್ಭ್ಯೋ ಹೇರ್ಧಿಃ । ಚೋಃ ಕುರಿತಿ ಕುತ್ವಂ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ನಃ**—ನಮ್ಮ । **ಅಘಂ**—ಪಾಪವು । **ಅಪ ಶೋಶುಚತ್**— ನಮ್ಮಿಂದ ದೂರ ಸರಿದು ನಮ್ಮ ಶತ್ರುವನ್ನು ನೋಯಿಸಲಿ ಅಥವಾ ಶೋಕಗ್ರಸ್ತವಾದ ನಮ್ಮ ಪಾಪವು ನಾಶವಾಗಲಿ (ಅಸ್ಮಾಕಂ-ನಮಗೆ) । **ರಯಿಂ**—ಧನವನ್ನು । **ಆ**—ಸುತ್ತಲೂ । **ಶುಶುಗ್ಧಿ**—ಪ್ರಕಾಶಿಸುವಂತೆ ಮಾಡು । **ನಃ**—ನಮ್ಮ । **ಅಘಂ**—ಪಾಪವು । **ಅಪ ಶೋಶುಚತ್**—ನಾಶವಾಗಲಿ ॥

॥ ಭಾವಾರ್ಥ ॥

ಎಲೈ ಅಗ್ನಿಯೇ, ನಮ್ಮ ದುಃಖಪೂರಿತವಾದ ಪಾಪವು ನಾಶವಾಗಲಿ. ನಮ್ಮ ಸುತ್ತಲೂ ಧನವನ್ನು ಹರಡಿ ಅವು ಪ್ರಕಾಶಿಸುವಂತೆ ಮಾಡು. ನಮ್ಮ ಪಾಪವು ಖಂಡಿತವಾಗಿಯೂ ನಾಶವಾಗಲಿ.

English Translation

May our sin, Agni, be repented of ; manifest riches to us ; may our sin be repented of·

ವಿಶೇಷವಿಷಯಗಳು

ಅಪ ನೋಽಷ್ಟೌ ಶುಚಯೇ ಗಾಯತ್ರಂ । (ಸರ್ವಾನುಕ್ರಮಣೀ) ಶುಚಿಗುಣಕೋಽಗ್ನಿಃಶುದ್ಧೋಽಗ್ನಿರ್ವಾ ದೇವತಾ । ಎಂದು ಸಾಯಣರು ಈ ಸೂಕ್ತದಲ್ಲಿ ಉದ್ದೇಶಿಸಿರುವ ದೇವತಾ ವಿಷಯವನ್ನು ಹೇಳಿರುತ್ತಾರೆ. ಶುಚಿಗುಣಕೋಽಗ್ನಿಃ ಎಂದು ಅಗ್ನಿಯ ಗುಣವನ್ನು ಹೇಳುವಾಗ ಶುಚಿ ಶಬ್ದದ ಸರಿಯಾದ ಅರ್ಥವನ್ನು ತಿಳಿದುಕೊಳ್ಳಬೇಕು. ಸಾಧಾರಣವಾದ ಲೌಕಿಕಪ್ರಯೋಗದಲ್ಲಿ ಶುಚಿ ಶಬ್ದಕ್ಕೆ ಕೇವಲ ನಿರ್ಮಲವಾದದ್ದು ಎಂದು ಭೌತಿಕವಾದ ಶುದ್ಧಿಗೆ ಅನ್ವಯಿಸುತ್ತದೆ. ಆದರೆ ಇಲ್ಲಿ ಇನ್ನೂ ಹೆಚ್ಚಿನ ಅರ್ಥವಿದೆ.

ಕೇವಲ ನಿರ್ಮಲವಾದದ್ದು ಎಂದು ಭೌತಿಕವಾದ ಶುದ್ಧಿಗೆ ಅನ್ವಯಿಸುತ್ತದೆ. ಆದರೆ ಇಲ್ಲಿ ಇನ್ನೂ ಹೆಚ್ಚಿನ ಅರ್ಥವಿದೆ.

**ಶುಚಿಃ ಶೋಚತೇರ್ಜ್ವಲತಿಕರ್ಮಣಃ । ಅಯಮಪೀತರಃ ಶುಚಿರೇತಸ್ಮಾದೇವ । ನಿಷಿಕ್ತಮಸ್ಮಾತ್ಪಾಪಕಮಿತಿ ನೈರುಕ್ತಾಃ ।** ( ನಿ. ೬-೧ ). ಪ್ರಕಾಶಿಸು, ಬೆಳಗು ಎಂದರ್ಥವನ್ನು ಕೊಡುವ **ಶುಚ್** ಧಾತುವಿನಿಂದ ಈ ರೂಪವಾಗಿದೆ. ಶುದ್ಧಿಯೆಂಬ ಅರ್ಥವನ್ನು ಕೊಡುವ **ಶುಚಿ**ರೂಪವೂ ಈ ಧಾತುವಿನಿಂದಲೇ ನಿಷ್ಪನ್ನವಾಗಿದೆ. ಅವನಿಂದ ಪಾಪವು ಕಳೆಯಲ್ಪಟ್ಟಿವೆ ಎಂಬ ನೈತಿಕವಾದ ಅಥವಾ ಆಧ್ಯಾತ್ಮಿಕವಾದ ಶುದ್ಧಿಯು **ಶುಚಿ** ಶಬ್ದದಿಂದ ಸೂಚಿತವಾಗುತ್ತದೆ. ಇಂತಹ ಪಾವಕನಾದ ಅಗ್ನಿಯು ಈ ಸೂಕ್ತದ ದೇವತೆ. ಈ ಸೂಕ್ತವನ್ನು ಪಠಿಸಿರುವ ಕುತ್ಸಋಷಿಯು ತಾನು ಮಾಡಿದ ಪಾಪಕೃತ್ಯಕ್ಕಾಗಿ ಪಶ್ಚಾತ್ತಾಪ ಪಟ್ಟು ತನ್ನನ್ನು ಆ ಪಾಪದಿಂದ ಬಿಡುಗಡೆಮಾಡಿ ಶುದ್ಧನನ್ನಾಗಿ ಮಾಡಬೇಂದು ಅಗ್ನಿಯನ್ನು ಪ್ರಾರ್ಥಿಸಿದ ಪೂರ್ವಕಥೆಯಿದೆ. ಆದರೆ ಸಾಯಣರು ಹೇಳುವ ಪೂರ್ವಕಥೆಗೂ ಸ್ಕಂದಸ್ವಾಮಿಗಳು ಉದಹರಿಸುವ ಕಥೆಗೂ ಬಹಳ ವ್ಯತ್ಯಾಸವಿದೆ. ಈ ಸೂಕ್ತದ ಉಪೋದ್ಘಾತದಲ್ಲಿ ಸಾಯಣರು ಈ ಕಥೆಯನ್ನು ವಿವರಿಸುತ್ತಾ,

**ದೀರ್ಘಜಿಹ್ವೀ ನಾಮ ರಾಕ್ಷಸೀ ಸರ್ವಾನ್ ಯಜ್ಞಾನ್ ಬಬಾಧೇ । ತಾಂ ಹಂತುಮಿಂದ್ರೋಽಶಕ್ತಃ ಸನ್ ಸರ್ವಸ್ಯ ಮಿತ್ರಭೂತಂ ಕುತ್ಸಮಬ್ರವೀದೇಷಾ ತ್ವಯಾ ಹಂತವ್ಯೇತಿ । ಸ ಚಾವಧೀತ್ । ತಂ ವಾಗಭ್ಯವದತ್ ಅನುಚಿತಮಿದಂ ತ್ವಯಾ ಚರಿತಂ ಯತ್ತ್ವಂ ಸರ್ವೇಷಾಂ ಮಿತ್ರಭೂತಃ ಸನ್ ಕ್ರೂರಮಕಾರ್ಷೀರಿತಿ । ತಮೃಷಿಂ ಶೋಕಃ ಪ್ರಾಪ್ನೋತ್ । ಸ ಋಷಿರನೇನ ಸೂಕ್ತೇನಾಗ್ನಿಂ ಸ್ತುತ್ವಾ ಶೋಕಮಪಾಗಮಯತ್ । ತಥಾ ಚ ತಾಂಡಕಂ । ದೀರ್ಘಜಿಹ್ವೀ ವಾ ಇದಂ ರಕ್ಷೋ ಯಜ್ಞಹಾ ಯಜ್ಞಾನವಲಿಹತ್ಯಚರತ್ ತಾಮಿಂದ್ರಃ ಕಯಾ ಚನ ಮಾಯಯಾ ಹಂತುಂ ನಾಶಂಸತ್ ಅಥ ಹ ಸುಮಿತ್ರಃ ಕುತ್ಸಃ ಕಲ್ಯಾಣ ಆಸ ತಮಬ್ರವೀತ್ (ತಾ. ಬ್ರಾ. ೧೩-೬-೯) ಇತ್ಯಾದಿ ।**

ದೀರ್ಘಜಿಹ್ವೆಯೆಂಬ ಒಬ್ಬ ರಾಕ್ಷಸಿಯು ಸಕಲ ಯಜ್ಞಗಳಿಗೂ ವಿಘ್ನವನ್ನುಂಟುಮಾಡಿ ತೊಂದರೆಯನ್ನು ಕೊಡುತ್ತಿದ್ದಳು. ಆಗ ಇಂದ್ರನು ಅವಳನ್ನು ಕೊಲ್ಲಲು ಪ್ರಯತ್ನಿಸಿ ಅದು ಸಾಧ್ಯವಾಗದೇ ಸಕಲರಿಗೂ ಮಿತ್ರನಾದ ಕುತ್ಸನನ್ನು ಅವಳ ಹನನಕ್ಕಾಗಿ ಪ್ರಾರ್ಥಿಸಿದನು. ಕುತ್ಸನು ಅವಳನ್ನು ಕೊಂದನು. ಆಗ ವಾಗ್ದೇವತೆಯು ಕುತ್ಸನನ್ನು ಕುರಿತು ಅವನು ಮಾಡಿದ ಸ್ತ್ರೀಹತ್ಯಾರೂಪವಾದ ಕೆಲಸವು ಬಹಳ ಅನುಚಿತವೆಂದೂ ಸಕಲರಿಗೂ ಮಿತ್ರನಾಗಿದ್ದು ಇಂತಹ ಕ್ರೂರವಾದ ಕೆಲಸವನ್ನು ಮಾಡಬಾರದಾಗಿದ್ದಿತೆಂದೂ ಹೇಳಿದಳು. ಆಗ ಕುತ್ಸನು ಶೋಕಪೂರಿತನಾಗಿ ಈ ಸೂಕ್ತದಿಂದ ಅಗ್ನಿಯನ್ನು ಸ್ತುತಿಸಿ ತನ್ನ ಶೋಕವನ್ನೂ ಪಾಪವನ್ನೂ ಕಳೆದುಕೊಂಡನು. ಈ ಕಥೆಯೇ ತಾಂಡ್ಯಬ್ರಾಹ್ಮಣದಲ್ಲೂ (೧೩-೬-೯) ಪಠಿತವಾಗಿದ್ದು ಅದನ್ನು ಇಲ್ಲಿ ಸಾಯಣರು ಉದಹರಿಸಿರುತ್ತಾರೆ.

ಸ್ಕಂದಸ್ವಾಮಿಗಳು ತಮ್ಮ ಉಪೋದ್ಘಾತದಲ್ಲಿ ಬೇರೊಂದು ಕಥೆಯನ್ನು ಉದಹರಿಸಿ ಅದು ಈ ಅಗ್ನಿಸ್ತುತಿಗೂ ಪಾಪನಿವಾರಣೆಗಾಗಿ ಮಾಡುವ ಪ್ರಾರ್ಥನೆಗೂ ಮೂಲವೆಂದು ಹೇಳಿರುತ್ತಾರೆ.

**ಅತ್ರ ಛಂದೋಗಬ್ರಾಹ್ಮಣಾಧೀತಮಿತಿಹಾಸಮಾಚಕ್ಷತೇ । ಕುತ್ಸಶ್ಚ ಲುಶಶ್ಚ ಇಂದ್ರಂ ವ್ಯಹ್ವಯೇತಾಂ । ಸ ಇಂದ್ರಃ ಕುತ್ಸಮುಪಾವರ್ತತೇ ಶತಂ ಶತೇನ ವಾಧ್ರಿಭಿರಂಡಯೋರಬಧ್ನಾದಿತಿ । ತದೇತಲ್ಲುಶ ಇಂದ್ರರೂಪತಾಮಾಪನ್ನೋ ವಕ್ಷ್ಯತಿ ।**

**ಪ್ರ ಮುಂಚಸ್ವ ಪರಿ ಕುತ್ಸಾದಿಹಾ ಗಹಿ ಕಿಮು ತ್ವಾವಾನ್ಮುಷ್ಕಯೋರ್ಬದ್ಧ ಆಸತೇ ।**

( ಋ ಸಂ. ೧೦-೩೮-೫ )

**ಇತಿ । ಸ ಇಂದ್ರಾತಿಕ್ರಮಜೇನ ಪಾಪೇನಾಭಿಭೂತಮಾತ್ಮಾನಂ ಮನ್ಯಮಾನಃ ತದಪನೋದನಾರ್ಥಮಗ್ನಿಮುವಾಚ । ಅಪ ನಃ ಶೋಶುಚದಿತಿ ।**

ಈ ಸಂದರ್ಭಕ್ಕೆ ಮೂಲವಾದ ಕಥೆಯು ಛಂದೋಗಬ್ರಾಹ್ಮಣದಲ್ಲಿ ಈ ರೀತಿ ಪಠಿತವಾಗಿದೆ. ಹಿಂದೆ ಕುತ್ಸನೂ ಲುಶನೂ ಇಂದ್ರನಿಗೆ ಆಹ್ವಾನವನ್ನು ಕೊಟ್ಟಾಗ ಇಂದ್ರನು ಕುತ್ಸನಲ್ಲಿಗೆ ಬಂದನು. ಆಗ ಕುತ್ಸನು ಇಂದ್ರನನ್ನು ನಿಲ್ಲಿಸಿ ನೂರಾರು ಕಟಿಗಳಿಂದ ಅವನ ಅಂಡವನ್ನು ಬಿಗಿಮುಕಟ್ಟಿಹಾಕಿದನು. ಆ ಸಮಯದಲ್ಲಿ ಲುಶನು

**ಪ್ರ ಮುಂಚಸ್ವ ಪರಿ ಕುತ್ಸಾದಿಹಾಗಹಿ ಕಿಮು ತ್ವಾವಾನ್ಮುಷ್ಕಯೋರ್ಬದ್ಧ ಆಸತೇ ।**

(ಋ. ಸಂ. ೧೦-೩೮-೫)

ಕುತ್ಸನಿಂದ ಬಿಡಿಸಿಕೊಂಡು ನನ್ನಲ್ಲಿಗೆ ಬಂದುಬಿಡು ಎಂದು ಮೇಲಿನ ಮಂತ್ರವನ್ನುಚ್ಚರಿಸಿ ಪ್ರಾರ್ಥಿಸಿದನು. ಆಗ ಕುತ್ಸನು ಇಂದ್ರನನ್ನು ಅವಹೇಳನಮಾಡಿದುದು ಪಾಪಕೃತ್ಯವೆಂದರಿತು ಆ ಪಾಪನಿವೃತ್ತ್ಯರ್ಥವಾಗಿ ಈ ಅಗ್ನಿ ಸೂಕ್ತವನ್ನು ಪಠಿಸಿದನು. ಇದೇ ಕಥೆಯನ್ನು ಸಾಯಣರು ಋ. ಸಂ. ೧೦-೩೮-೫ ನೇ ಋಕ್ಕಿಗೆ ವ್ಯಾಖ್ಯಾನ ಮಾಡುವಾಗ ಆ ಸಂದರ್ಭಕ್ಕುಚಿತವಾಗಿ ಶಾಟ್ಯಾಯನ ಬ್ರಾಹ್ಮಣ ಮತ್ತು ಛಂದೋಗ ಬ್ರಾಹ್ಮಣ ಇವುಗಳಲ್ಲಿ ಉಕ್ತ ವಾಗಿರುವಂತೆ ಉದಹರಿಸಿದ್ದಾರೆ. ಆದರೆ ಇಲ್ಲಿ ಮಾತ್ರ ಈ ಅಗ್ನಿಸ್ತುತಿಗೆ ಮೂಲವಾದುದು ಬೇರೊಂದು ದೀರ್ಘ ಜಿಹ್ವೆಯ ಕಥೆಯೆಂದು ಹೇಳಿರುತ್ತಾರೆ. ಈ ಎರಡು ಕಡೆಗಳಲ್ಲಿ ಯಾವುದು ಮೂಲವಾದರೂ ಸಹ ಒಟ್ಟಿನಲ್ಲಿ ಕುತ್ಸನು ತನ್ನ ಪಾಪನಿವಾರಣೆಗಾಗಿ ಅಗ್ನಿಯನ್ನುದ್ದೇಶಿಸಿ ಮಾಡಿದ ಪ್ರಾರ್ಥನೆ ಎಂದು ಎರಡರ ಉದ್ದೇಶವೂ ಒಂದೇ ಆಗಿದೆ.

**ಅಪ ಶೋಶುಚತ್—ಅಸ್ಮತ್ತಃ ನಿರ್ಗತ್ಯ ಅಸ್ಮದೀಯಂ ತತ್ರುಂ ಶೋಚಯತು** ನಮ್ಮಿಂದ ನಿವೃತ್ತ ವಾಗಿ ನಮ್ಮ ಶತ್ರುಗಳನ್ನು ವ್ಯಾಪಿಸಲಿ ಎಂದು ಒಂದು ವಿಧವಾಗಿಯೂ, **ಅಸ್ಮದೀಯಂ ಪಾಪಂ ಶೋಕ-ಗ್ರಸ್ತಂ ಸದ್ವಿನಶ್ಯತು ।** ದುಃಖಪೂರಿತವಾದ ನಮ್ಮ ಪಾಪವು ನಾಶವಾಗಲಿ ಎಂದು ಇನ್ನೊಂದು ವಿಧವಾಗಿಯೂ ಸಾಯಣರು ವ್ಯಾಖ್ಯಾನಮಾಡಿರುತ್ತಾರೆ. ಸ್ಕಂದಸ್ವಾಮಿಗಳು **ಅಪಪೂರ್ವಃ ಶುಚಿರತ್ರ ಸಾಮರ್ಥ್ಯಾದಪನ-ಯನೇ । ವ್ಯತ್ಯಯೇನ ಪ್ರಥಮಪುರುಷಃ । ಅಪನಯ ಅಸ್ಮಾಕಂ ಅಘಂ ಇಂದ್ರಾತಿಕ್ರಮಜಂ ಪಾಪಂ । ಅಪ** ಎಂಬ ಉಪಸರ್ಗಪೂರ್ವಕವಾದ **ಶುಚ್** ಧಾತುವಿಗೆ ನಿವೃತ್ತಿಮಾಡು, ನಾಶಮಾಡು ಎಂದರ್ಥವಾಗುತ್ತದೆ. ಮಧ್ಯಮಪುರುಷವಾಗಿರಬೇಕಾದ ಈ ರೂಪವು ಛಾಂದಸವಾಗಿ ವ್ಯತ್ಯಯದಿಂದ ಪ್ರಥಮಪುರುಷವಾಗಿದೆ. ಇಂದ್ರ ನನ್ನು ಅವಹೇಳನಮಾಡಿದ ನನ್ನ ಈ ಪಾಪವನ್ನು ನಾಶಮಾಡು ಎಂದರ್ಥವೆಂದು ವಿವರಿಸಿದ್ದಾರೆ.

**ಶುಶುಗ್ಧಿ—ಪ್ರಕಾಶಯ** ನಮ್ಮ ಧನವನ್ನು ಸುತ್ತಲೂ ಪ್ರಕಾಶಿಸುವಂತೆ ಮಾಡು. ನಮಗೆ ಪ್ರಭೂತ ವಾಗಿ ಧನವನ್ನು ಒದಗಿಸಿ ಅವು ನಮ್ಮ ಸುತ್ತಲೂ ಬೆಳಗುವಂತೆ ಮಾಡು ಎಂದರ್ಥ.

**ಅಪ ನಃ ಶೋಶುಚದಘಂ—ಉಕ್ತಾರ್ಥಮಪಿ ವಾಕ್ಯಂ ಆದರಾತಿಶಯದ್ಯೋತನಾಯ ಪುನಃ ಪಠ್ಯತೇ । ಅವಶ್ಯಮಸ್ಮಾಕಮಘಂ ವಿನಶ್ಯತು ಇತ್ಯರ್ಥಃ ।** ಈ ವಾಕ್ಯವನ್ನು ಪುನಃ ಪಠಿಸಿದೆ. ಈ ಪುನ ರುಕ್ತಿಯಲ್ಲಿ ತನ್ನ ಪಾಪನಿವೃತ್ತಿಯಲ್ಲಿ ಇರುವ ಅತ್ಯುತ್ಕಟವಾದ ಅಭಿಲಾಷೆಯು ತೋರುತ್ತದೆ. ಖಂಡಿತವಾಗಿಯೂ ನನ್ನ ಪಾಪವನ್ನು ನಾಶಮಾಡು ಎಂದು ಪ್ರಾರ್ಥನೆಯು ಒತ್ತಿ ಹೇಳಲ್ಪಟ್ಟಿದೆ.

ಈ ವಿಧವಾದ ಪುನರುಕ್ತಿಯಲ್ಲಿ ಯಾವ ದೋಷವೂ ಇಲ್ಲ. ಇಂತಹ ಸಂದರ್ಭಗಳಲ್ಲಿ ಭಾವದ ತೀವ್ರತೆಯು ಕಾಣುತ್ತದೆ ಎಂದು ನಿರುಕ್ತಕಾರರು ಸಮರ್ಥಿಸಿರುತ್ತಾರೆ.

**ಅಭ್ಯಾಸೇ ಭೂಯಾಂಸಮರ್ಥಂ ಮನ್ಯಂತೇ ಯಥಾಹೋ ದರ್ಶನೀಯಾಹೋ ದರ್ಶನೀಯೇತಿ.**
**(ನಿ. ೧೦-೪೨)**

ಪುನರುಕ್ತಿಯಿಂದ ಭಾವದ ಅಭಿವೃದ್ಧಿಗೆ ಒಂದು ವಿಧವಾದ ಪ್ರಭಾವವೂ ಶಕ್ತಿಯೂ ತೋರುತ್ತದೆ. ಅವಳು ಸುಂದರಳಾಗಿದ್ದಾಳೆ, ಅತ್ಯಂತ ಸುಂದರಳಾಗಿದ್ದಾಳೆ ಎನ್ನುವ ಉದಾಹರಣೆಯಲ್ಲಿ ಅವಳ ಸೌಂದರ್ಯವನ್ನು ವರ್ಣಿಸುವುದರಲ್ಲಿ ಒಂದು ಅತಿಶಯವಾದ ಆದರವು ಕಾಣುತ್ತದೆ. ಇದರಂತೆಯೇ ಉತ್ತಮವಾದ ಭಾವವನ್ನು ಪ್ರಕಾಶಪಡಿಸುವಾಗ ಅದರಲ್ಲಿ ಅತಿಶಯವಾದ ಆದರವನ್ನು ತೋರಿಸಿ ವಾಕ್ಯಗಳನ್ನು ಪಠಿಸುವ ಸನ್ನಿವೇಶಗಳು ಅನೇಕ ಇವೆ. ಅವುಗಳಲ್ಲಿ **ಪರುಚ್ಛೇಪ** ಋಷಿಯ ಶೈಲಿಯನ್ನು **ತತ್ಪರುಚ್ಛೇಪಸ್ಯ ಶೀಲಂ ।** (ನಿ. ೧೦-೪೨) ಇದು ಪರುಚ್ಛೇಪರ ವೈಶಿಷ್ಟ್ಯವೆಂದು ನಿರುಕ್ತಕಾರರು ಪ್ರಶಂಸಿಸಿದ್ದಾರೆ. ಮತ್ತು—

> **ಪ್ರತದ್ವೋಚೇಯಂ ಭವ್ಯಾಯೇಂದವೇ ಹವ್ಯೋ ನ ಯ ಇಷವಾನ್ಮನ್ಮ ರೇಜತಿ ರಕ್ಷೋಹಾ ಮನ್ಮ ರೇಜತಿ ।**
>
> (ಋ. ಸಂ. ೧-೧೨೯-೬)

ಎಂಬ ಋಕ್ಕಿನಲ್ಲಿರುವ **ಅಭ್ಯಾಸ**ವನ್ನು ಉದಹರಿಸಿ ತೋರಿಸಿದ್ದಾರೆ. ಅದರಂತೆಯೇ ಇಲ್ಲಿಯೂ ಸಹ **ಅಪ ನಃ ಶೋಶುಚದಘಂ** ಎಂಬ ಪುನರುಕ್ತಿಯಲ್ಲಿ ಪಾಪನಿವಾರಣೆಯಲ್ಲಿರುವ ತೀವ್ರವಾದ ಆಸಕ್ತಿಯು - ವ್ಯಕ್ತವಾಗಿದೆ. ಇದು ಕುತ್ಸಋಷಿಯ ವೈಶಿಷ್ಟ್ಯ.

ವ್ಯಾಕರಣಪ್ರಕ್ರಿಯಾ

**ಶೋಶುಚತ್**—ಶುಚ ಶೋಕೇ. ಧಾತು. ಅತಿಶಯಾರ್ಥ ತೋರುವಾಗ **ಧಾತೋರೇಕಾಚಃ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್. **ಯಙೋಽಚಿಚ**—ಎಂಬುದರಿಂದ ಅನೈಮಿತ್ತಿಕವಾಗಿ ಲುಕ್. ಪ್ರತ್ಯಯಲಕ್ಷಣದಿಂದ **ಸನ್ಯಙೋಃ** (ಪಾ. ಸೂ. ೬-೧-೯) ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿ ಹಲ್ ಶೇಷ. **ಗುಣೋಯಙ್‌ಲುಕೋಃ**—(ಪಾ. ಸೂ. ೭-೪-೮೨) ಎಂಬುದರಿಂದ ಅದಕ್ಕೆ ಗುಣ. ಶೋಶುಚ್ ಎಂಬ ಯಙ್‌ಲುಗಂತದ ಮೇಲೆ ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚಲೋಪಃ ಪರಸ್ಮೈಪದೇಷು**—ಎಂಬುದರಿಂದ ಇಕಾರ ಲೋಪ. **ಲೇಟೋಽಡಾಟೌ**—(ಪಾ. ಸೂ. ೩-೪-೯೪) ಎಂಬುದರಿಂದ ಅಡಾಗಮ. **ಅದಾದಿವಚ್ಚ**—ಎಂದು ಯಙ್‌ಲುಗಂತವನ್ನು ಅದಾದಿಯಲ್ಲಿ ಪಾಠಮಾಡಿರುವುದರಿಂದ **ಅದಿಪ್ರಭೃತಿಭ್ಯಃ ಶಪಃ**--ಎಂಬುದರಿಂದ ಶಪಿಗೆ ಲುಕ್. ಶೋಶುಚತ್ ಎಂದು ರೂಪವಾಗುತ್ತದೆ. **ಅಭ್ಯಸ್ತಾನಾಮಾದಿಃ**—(ಪಾ. ಸೂ. ೬-೧-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಇಲ್ಲಿ ಅಘಂ ಶೋಶುಚಚ್ಚ ರಯಿಂ ಶುಶುಗ್ಧಿ ಚ ಎಂದು ಚಾರ್ಥ ತೋರುವುದರಿಂದ **ಚಾದಿಲೋಪೇ ವಿಭಾಷಾ**—(ಪಾ. ಸೂ. ೮-೧-೬೩) ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ.

**ಶುಶುಗ್ಧಿ**—ಶುಚ ದೀಪ್ತೌ ಧಾತು. ಲೋಟ್‌ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಸೇರ್ಹ್ಯಪಿಚ್ಚ**—ಎಂಬುದರಿಂದ ಅದಕ್ಕೆ ಹಿ ಆದೇಶ **ಬಹುಲಂಛಂದಸಿ**—ಎಂಬುದರಿಂದ ಶಪಿಗೆ ಶ್ಲು ಆದೇಶ. ಶ್ಲೌ—ಸೂತ್ರದಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್‌ಶೇಷ. ಶುಶುಚ್+ಹಿ ಎಂದಿರುವಾಗ ಹುಝ

**ಲ್ಭ್ಯೋ ಹೇರ್ಧಿಃ**—(ಪಾ. ಸೂ. ೬-೪-೧೦೧) ಎಂಬುದರಿಂದ ಹಿಗೆ ಧಿ ಆದೇಶ. ಇದಕ್ಕೆ ಅಪಿತ್ವ ಅತಿದೇಶವಿರುವುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. **ಚೋಃ ಕುಃ**—ಎಂಬುದರಿಂದ ಧಿಯನ್ನು ನಿಮಿತ್ತೀಕರಿಸಿ ಚಕಾರಕ್ಕೆ ಕುತ್ವ. **ಝಲಾಂ ಜಶ್ ಝಶಿ**—ಎಂಬುದರಿಂದ ಅದಕ್ಕೆ ಜಶ್ತ್ವ. ಶುಶುಗ್ಧಿ ಎಂದು ರೂಪವಾಗುತ್ತದೆ. ಹಿಂದೆ ಅಗ್ನೇ ಎಂಬುದು ಇದ್ದರೂ ಅದು ಆಮಂತ್ರಿತವಾದುದರಿಂದ **ಆಮಂತ್ರಿತಂ ಪೂರ್ವಮವಿದ್ಯಮಾನವತ್**—ಎಂಬುದರಿಂದ ಅದಕ್ಕೆ ಅವಿದ್ಯಮಾನವದ್ಭಾವ (ಇಲ್ಲದಿರುವಿಕೆ) ವಿಧಿಸುವುದರಿಂದ ಶುಶುಗ್ಧಿ ಎಂಬುದೇ ಪಾದಾದಿಯಲ್ಲಿ ಬಂದಂತಾಗುವುದರಿಂದ **ಅಪಾದಾದೌ**—ಎಂದು ಪ್ರತಿಷೇಧಿಸಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಹೀಗೆ ಅಪಿತ್ವವಿಧಾನಮಾಡಿರುವುದರಿಂದ **ಆದ್ಯುದಾತ್ತಶ್ಚ**—ಸೂತ್ರದಿಂದ ಉದಾತ್ತಸ್ವರ ಬರುತ್ತದೆ. ಇದರಿಂದ ಶುಶುಗ್ಧಿ ಎಂಬುದು ಅಂತೋದಾತ್ತವಾಗುತ್ತದೆ. ಅಗ್ನೇ ಎಂಬುದಕ್ಕೂ ಪಾದಾದಿಯಲ್ಲಿರುವುದರಿಂದಲೇ ಆಷ್ಟಮಿಕನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ**—(ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೧ ॥



॥ ಸಂಹಿತಾಪಾಠಃ ॥

ಸುಕ್ಷೇತ್ರಿಯಾ ಸುಗಾತುಯಾ ವಸೂಯಾ ಚ ಯಜಾಮಹೇ ।
ಅಪ ನಃ ಶೋಶುಚದಘಂ ॥ ೨ ॥

ಪದಪಾಠಃ

ಸುಽಕ್ಷೇತ್ರಿಯಾ । ಸುಗಾತುಽಯಾ । ವಸುಽಯಾ । ಚ । ಯಜಾಮಹೇ ।
ಅಪ । ನಃ । ಶೋಶುಚತ್ । ಅಘಂ । ॥ ೨ ॥

ಸಾಯಣಭಾಷ್ಯಂ

ಸುಕ್ಷೇತ್ರಿಯಾ ಶೋಭನಕ್ಷೇತ್ರೇಚ್ಛಯಾ ಸುಗಾತುಯಾ ಶೋಭನಮಾರ್ಗೇಚ್ಛಯಾ ವಸೂಯಾ ಚ ಧನೇಚ್ಛಯಾ ನಿಮಿತ್ತಭೂತಯಾ ಚ ಯಜಾಮಹೇ । ಅಗ್ನಿಂ ಹವಿರ್ಭಿಃ ಪೂಜಯಾಮಃ । ಯದ್ವಾ । ಸುಕ್ಷೇತ್ರಿಯಾ ದೇವಯಜನಲಕ್ಷಣಶೋಭನದೇಶಸಂಬಂಧಿನಾ ಹವಿಷಾಗ್ನಿಂ ಯಜಾಮಹೇ। ನೋಽಸ್ಮಾಕಮಘಮಪ ಶೋಶುಚತ್। ವಿನಶ್ಯತು ॥ ಸುಕ್ಷೇತ್ರಿಯಾ। ಶೋಭನಂ ಕ್ಷೇತ್ರಂ ಸುಕ್ಷೇತ್ರಂ। ತದ್ವಿಷಯೇಚ್ಛಾ

**ಸುಕ್ಷೇತ್ರಿಯಾ। ಸುಪ ಆತ್ಮನಃ ಕ್ಯಚ್ । ನ ಛಂದಸ್ಯಪುತ್ರಸ್ಯೇತೀತ್ವದೀರ್ಘಯೋರ್ನಿಷೇಧಃ । ವ್ಯತ್ಯಯೇ ನೇತ್ವಂ। ಕ್ಯಜಂತಾತ್ ಅ ಪ್ರತ್ಯಯಾದಿತಿ ಭಾವೇಽಕಾರಪ್ರತ್ಯಯಃ। ತತಷ್ಟಾಪ್ । ಸುಪಾಂ ಸುಲುಗಿತಿ ತೃತೀಯಾಯಾ ಲುಕ್ । ಏವಮುತ್ತರತ್ರಾಪಿ। ಯದ್ವಾ ಶೋಭನಂ ಕ್ಷೇತ್ರಮಸ್ಯಾಸ್ತೀತಿ ಸುಕ್ಷೇತ್ರಂ। ಇಯಾಡಿಯಾಜೀಕಾರಾಣಾಮುಪಸಂಖ್ಯಾನಂ। ಪಾ. ೭-೧-೩೯-೧ । ಇತಿ ತೃತೀಯಾಯಾ ಡಿಯಾಜಾದೇಶಃ॥**

ಪ್ರತಿಪದಾರ್ಥ

**ಸು ಕ್ಷೇತ್ರಿಯಾ**— ಶ್ರೇಷ್ಠವಾದ ವ್ಯವಸಾಯದ ಕ್ಷೇತ್ರಗಳನ್ನು ಪಡೆಯುವ ಆಸೆಯಿಂದಲೂ। **ಸುಗಾತುಯಾ** - (ಯಜ್ಞಾನುಷ್ಠಾನಕರ್ಮಗಳ) ಶ್ರೇಷ್ಠವಾದ ಮಾರ್ಗಗಳನ್ನು ತಿಳಿಯುವ ಆಸೆಯಿಂದಲೂ। **ವಸೂಯಾ**— ಧನವನ್ನು ಪಡೆಯುವ ಆಸೆಯಿಂದಲೂ ಸಹ। **ಯಜಾಮಹೇ**—(ಅಗ್ನಿಯನ್ನು) ಪೂಜಿಸುತ್ತೇವೆ। **ನಃ**—ನಮ್ಮ। **ಅಘಂ**—ಪಾಪವು। **ಅಪಶೋಶುಚತ್**—ನಾಶವಾಗಲಿ ಅಥವಾ ಪಾಪವನ್ನು ನಾಶಮಾಡು॥

॥ ಭಾವಾರ್ಥ ॥

ಶ್ರೇಷ್ಠವಾದ ವ್ಯವಸಾಯ ಕ್ಷೇತ್ರವನ್ನು ಪಡೆಯುವ ಆಸೆಯಿಂದಲೂ, ಯಜ್ಞಾನುಷ್ಠಾನ ಕರ್ಮಗಳ ಶ್ರೇಷ್ಠವಾದ ಮಾರ್ಗಗಳನ್ನು ತಿಳಿಯುವ ಆಸೆಯಿಂದಲೂ ಧನವನ್ನು ಪಡೆಯುವ ಆಸೆಯಿಂದಲೂ ನಾವು ಅಗ್ನಿಯನ್ನು ಪೂಜಿಸುತ್ತೇವೆ. ನಮ್ಮ ದುಃಖಪೂರಿತವಾದ ಪಾಪವು ನಾಶವಾಗಲಿ.

English Translation

We worship you for pleasant fields, for good roads, and for riches; may our sin be repented of.

॥ ವಿಶೇಷವಿಷಯಗಳು ॥

**ಸುಕ್ಷೇತ್ರಿಯಾ—ಕ್ಷಿಯತೇರ್ನಿವಾಸಕರ್ಮಣಃ ಕ್ಷೇತ್ರಂ। ಶೋಭನಂ ಕ್ಷೇತ್ರಂ ಸುಕ್ಷೇತ್ರಂ । ತದ್ವಿಷಯೇಚ್ಛಾ ಸುಕ್ಷೇತ್ರಿಯಾ ।** ವಾಸಮಾಡು ಎಂದರ್ಥವುಳ್ಳ ಕ್ಷಿ ಧಾತುವಿನಿಂದ **ಕ್ಷೇತ್ರ**ವೆಂಬ ರೂಪವಾಗಿ ಶ್ರೇಷ್ಠವಾದ ಅಂತಹ ಕ್ಷೇತ್ರವನ್ನು ಪಡೆಯಬೇಕೆಂಬ ಇಚ್ಛೆಯನ್ನು ತೋರಿಸುವಾಗ **ಸುಕ್ಷೇತ್ರಿಯು** ಎಂದಾಗುತ್ತದೆ. **ಕ್ಷೇತ್ರ** ಶಬ್ದದ ಮೂಲವಾದ ಧಾತುವಿಗೆ ವಾಸಮಾಡುವ ಪ್ರದೇಶವೆಂದು ಅರ್ಥವಾದರೂ ಗೃಹಾದಿ ಸಕಲವಿಧವಾದ ಭೂಸ್ವತ್ತುಗಳ ಪರ್ಯಾಯವಾಗಿಯೂ ಈ ಪದದ ಪ್ರಯೋಗವಿದೆ. ಕೇದಾರಾದಿಭೂಪ್ರದೇಶಗಳಿಗೆಲ್ಲಾ ಕ್ಷೇತ್ರವೆಂದು ಹೆಸರು. ಉತ್ಪತ್ತಿಸ್ಥಾನ, ಯಜ್ಞ ಎಂಬ ಅರ್ಥವನ್ನೂ ಕೆಲವುಕಡೆ ನೋಡಬಹುದು.

**ಕ್ಷೇತ್ರಾದಾ ವಿಪ್ರಂ ಜನಥೋ ವಿಪನ್ಯಯಾ ಪ್ರ ವಾಮತ್ರ ವಿಧತೇ ದಂಸನಾ ಭುವತ್ ।**

(ಋ. ಸಂ. ೧-೧೧೯-೭).

ಎಂಬಲ್ಲಿ **ಕ್ಷೇತ್ರಾನ್** ಎಂದರೆ **ಮಾತುರುದರಲಕ್ಷಣಾತ್ ಜನ್ಮಸ್ಥಾನಾತ್** । ತಾಯಿಯ ಉದರರೂಪವಾದ ಜನ್ಮಸ್ಥಾನ, ಎಂದರೆ ಗರ್ಭವು ವಾಸಮಾಡುವ ಸ್ಥಾನವೆಂದರ್ಥ.

**ಸಪರ್ಯಂತಃ ಪುರುಪ್ರಿಯಂ ಮಿತ್ರಂ ನ ಕ್ಷೇತ್ರಸಾಧಸಂ ।**
(ಋ. ಸಂ. ೮-೩೧-೧೪).

ಈ ಸನ್ನಿವೇಶದಲ್ಲಿ ಕ್ಷೇತ್ರ ಶಬ್ದವು ಯಜ್ಞ ಪರ್ಯಾಯವಾಗಿದೆ. ಆದರೆ ಪ್ರಕೃತದಲ್ಲಿ ಉತ್ತಮವಾದ **ಭೂಸ್ವತ್ತೆಂದು** ತಾತ್ಪರ್ಯವಾಗುತ್ತದೆ. **ಸುಕ್ಷೇತ್ರಿಯಾ**—ಅದನ್ನು ಪಡೆಯುವ ಇಚ್ಛೆಯಿಂದ.

**ಸುಗಾತುಯಾ—ಶೋಭನಮಾರ್ಗೇಚ್ಛಯಾ ।** ಶ್ರೇಷ್ಠವಾದ ಮಾರ್ಗವನ್ನು ಹಿಡಿಯಬೇಕು. ಅನುಸರಿಸ ಬೇಕೆಂಬ ಇಚ್ಛೆಯಿಂದ. **ಗಾತು** ಶಬ್ದಕ್ಕೆ **ಅನುಷ್ಠಾನಮಾರ್ಗಂ, ದೇವಲೋಕಗಮನಮಾರ್ಗಂ** ಎಂಬುದಾಗಿ **ಸುಗಂ** ಶಬ್ದಕ್ಕಾಗುವಂತೆ ಸನ್ಮಾರ್ಗವೆಂದರ್ಥವಾಗುವುದೆಂದು ಹಿಂದೆಯೇ ತಿಳಿಸಿದೆ. (೧-೯೬-೪). **ಇಹ ತಾವ ಲ್ಲೋಕೇ ಶೋಭನಕ್ಷೇತ್ರೇಚ್ಛಯಾ ಪರಲೋಕೇ ಸುಗಾತುಯಾ ।** ಎಂದು ಐಹಿಕವಾದ ಸಂಪತ್ತನ್ನು ಹೊಂದ ಬೇಕೆಂಬ ಅಪೇಕ್ಷೆಯಿಂದಲೂ, ಆಮುಷ್ಮಿಕವಾದ ಸ್ವರ್ಗಸುಖವನ್ನನುಭವಿಸಲು ಸಾಧನವಾದ ಸನ್ಮಾರ್ಗಾನುಸರಣ ವನ್ನು ಮಾಡಬೇಕೆಂಬ ಇಚ್ಛೆಯಿಂದಲೂ **ತ್ವಾಂ ಯಜಾಮಹೇ**—ನಿನ್ನನ್ನು ಆರಾಧಿಸುತ್ತೇವೆ ಎಂದು ಅಗ್ನಿಪ್ರಾಜೆಯ ಉದ್ದೇಶವನ್ನು ತಿಳಿಸಿದೆ. ಅಗ್ನಿಯ ಈ ಎರಡುವಿಧವಾದ ಅನುಗ್ರಹವೂ ಪಾಪಿಷ್ಠನಿಗೆ ಪಡೆಯಲು ಅರ್ಹತೆಯಿಲ್ಲದಿರು ವುದರಿಂದ **ಅಪ ನಃ ಶೋಶುಚದಘಂ ।** ಈ ಪಾಪವನ್ನು ನಾಶಮಾಡಿ ನಿನ್ನ ಅನುಗ್ರಹವನ್ನು ಪಡೆಯಲು ಶುದ್ಧವಾದ ಅರ್ಹತೆಯುಳ್ಳವನನ್ನಾಗಿ ಮಾಡು ಎಂದು ಪ್ರಾರ್ಥಿಸಿದೆ.

॥ ವ್ಯಾಕರಣಪ್ರಕಿಯಾ ॥

**ಸುಕ್ಷೇತ್ರಿಯಾ**—ಶೋಭನಂ ಕ್ಷೇತ್ರಂ ಸುಕ್ಷೇತ್ರಮ್. ತತ್ ಆತ್ಮನಃ ಇಚ್ಛತಿ ಎಂದು ಅರ್ಥವಿವಕ್ಷಾಮಾಡಿ ದಾಗ **ಸುಪ ಆತ್ಮನಃ ಕ್ಯಚ್**—(ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. **ನಛಂದಸ್ಯಪುತ್ರಸ್ಯ** (ಪಾ. ಸೂ. ೭-೪-೩೫) ಎಂಬುದರಿಂದ ಕ್ಯಚ್ ಪ್ರತ್ಯಯ ಪರವಾದಾಗ ಛಂದಸ್ಸಿನಲ್ಲಿ ಈತ್ವಾದಿಗಳು ಬರುವುದಿಲ್ಲ. **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಇತ್ವ ಬರುತ್ತದೆ. **ಸನಾದ್ಯಂತಾಧಾತವಃ**— ಸೂತ್ರದಿಂದ ಸುಕ್ಷತ್ರಿಯ ಎಂಬುದು ಧಾತುಸಂಜ್ಞೆಯನ್ನು ಹೊಂದುತ್ತದೆ. ಪ್ರತ್ಯಯಾಂತವಾದ ಧಾತುವಾದುದರಿಂದ —**ಅಪ್ರತ್ಯಯಾತ್**—(ಪಾ. ಸೂ. ೩-೩-೧೦೨) ಎಂಬುದರಿಂದ ಭಾವಾರ್ಥದಲ್ಲಿ ಅಕಾರರೂಪ ಪ್ರತ್ಯಯ ಬರುತ್ತದೆ. **ಅತೋಲೋಪಃ**—ಎಂಬುದರಿಂದ ಕ್ಯಚಿನ ಅಕಾರಕ್ಕೆ ಲೋಪ ಇದಕ್ಕೆ ಸ್ತ್ರೀತ್ವವಿವಕ್ಷಾಮಾಡಿದಾಗ **ಅಜಾದ್ಯತ ಷ್ಟಾಪ್**—ಎಂಬುದರಿಂದ ಟಾಪ್ ಪ್ರತ್ಯಯ. ಕ್ಯಚ್‌ಸ್ವರದಿಂದ ಅಂತೋದಾತ್ತವಾದಾಗ ಟಾಪ್ನೊಡನೆ ಏಕಾದೇಶ ಬಂದಾಗ ಅದೂ ಉದಾತ್ತವಾಗುತ್ತದೆ ಸುಕ್ಷೇತ್ರಿಯಾ ಎಂಬುದಕ್ಕೆ ತೃತೀಯಾ ಏಕವಚನಪರವಾದಾಗ **ಸುಪಾಂ ಸುಲುಕ್**—ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲುಕ್. ಹೀಗೆಯೇ ಸುಗಾತುಯಾ, ವಸೂಯಾ, ಎಂಬಲ್ಲಿಯೂ ಪ್ರಕ್ರಿಯೆ ಸಮಾನವಾಗಿದೆ. ಅಥವಾ ಶೋಭನಂ ಕ್ಷೇತ್ರಂ ಅಸ್ಯ ಅಸ್ತಿ ಇತಿ ಸುಕ್ಷೇತ್ರಮ್. ಇದಕ್ಕೆ ತೃತೀಯಾ ಏಕವಚನದಲ್ಲಿ **ಇಯಾಡಿಯಾಜೀಕಾರಾಣಾಮುಪಸಂಖ್ಯಾನಮ್**—(ಪಾ. ಸೂ. ೭-೧-೩೯-೧) ಎಂಬುದರಿಂದ ತೃತೀಯದಕ್ಕೆ ಇಯಾಜಾದೇಶ. ಡಿತ್ತಾದುದರಿಂದ ಪೂರ್ವದ ಟಿಗೆ ಲೋಪ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

ಯಜಾಮಹೇ—ಯಜದೇವಪೂಜಾಸಂಗತಿಕರಣ ದಾನೇಷು. ಧಾತು. ಲಟ್ ಉತ್ತಮಪುರುಷ ಬಹುವಚನದ ರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೨ ॥



ಸಂಹಿತಾಪಾಠಃ

ಪ್ರ ಯದ್ಭಂದಿಷ್ಠ ಏಷಾಂ ಪ್ರಾಸ್ಮಾಕಾಸಶ್ಚ ಸೂರಯಃ ।
ಅಪ ನಃ ಶೋಶುಚದಘಂ ॥ ೩ ॥

ಪದಪಾಠಃ

ಪ್ರ । ಯತ್ । ಭಂದಿಷ್ಠಃ । ಏಷಾಂ । ಪ್ರ । ಅಸ್ಮಾಕಾಸಃ । ಚ । ಸೂರಯಃ ।
ಅಪ । ನಃ । ಶೋಶುಚತ್ । ಅಘಂ ॥ ೩ ॥

॥ ಸಾಯಣಭಾಷ್ಯಂ ॥

ಯದ್ಯಥೈಷಾಂ ಸ್ತೋತೄಣಾಂ ಮಧ್ಯೇಽಯಂ ಕುತ್ಸಃ ಪ್ರ ಭಂದಿಷ್ಠಃ ಪ್ರಕರ್ಷೇಣ ಸ್ತೋತೃತಮಃ ಏವಮಸ್ಮಾಕಾಸ ಅಸ್ಮಾಕೀನಾಃ ಸೂರಯಃ ಸ್ತೋತಾರಶ್ಚ ಪ್ರಕರ್ಷೇಣ ಸ್ತೋತೃತಮಾ ಭವಂತಿ। ಅನ್ಯತ್ಸಮಾನಂ ॥ ಭಂದಿಷ್ಠಃ । ಭಂದತಿಃ ಸ್ತುತಿಕರ್ಮಾ । ಭದಿ ಕಲ್ಯಾಣೇ ಸುಖೇ ಚೇತಿ ತು ಧಾತುಃ । ಅಸ್ಮಾತ್ತೃಜಂತಾತ್ತುಶ್ಛಂದಸೀತೀಷ್ಠನ್ । ತುರಿಷ್ಠೇಮೇಯಃಸ್ವಿತಿ ತೃಲೋಪಃ । ಅಸ್ಮಾಕಾಸಃ । ಅಸ್ಮಾಕಂ ಸಂಬಂಧಿನೋಽಸ್ಮಾಕಾಃ । ತಸ್ಮಿನ್ನಣಿ ಚ ಯುಷ್ಮಾಕಾಸ್ಮಾಕೌ । ಪಾ. ೪-೩-೨ । ಇತ್ಯಸ್ಮಾಕಾದೇಶಃ । ಛಾಂದಸೋಽಣ್ಪ್ರತ್ಯಯಸ್ಯ ಲೋಪಃ । ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದ್ವೃದ್ಧ್ಯಭಾವಃ । ಆಜ್ಜಸೇರಸುಕ್ । ಸ್ಥಾನಿವದಾದೇಶೇಽಪಿ ಮಕಾರಾತ್ಪರಸ್ಯಾಕಾರಸ್ಯೋದಾತ್ತತ್ವಂ । ಯದ್ವಾ । ಷಷ್ಠೀಬಹುವಚನೇಽಸ್ಮಾಕಂಶಬ್ದಸ್ಯ ಮಧ್ಯೋದಾತ್ತಸ್ಯ ದೃಷ್ಟತ್ವಾತ್ಸ ಏವಾಚಾರ್ಯೇಣಾತಿದಿಶ್ಯತೇ ॥

॥ ಪ್ರತಿಪದಾರ್ಥ ॥

ಏಷಾಂ—(ನಿನ್ನ ಗುಣಗಾನವನ್ನು ಮಾಡತಕ್ಕ) ಈ ಸ್ತೋತೃಗಾರರ ನಡುವೆ (ಕುತ್ಸನು) । ಯತ್—ಯಾವ ರೀತಿಯಲ್ಲಿ । ಪ್ರಭಂದಿಷ್ಠಃ—ಅತ್ಯಂತ ಉತ್ತಮ ದರ್ಜೆಯ ಕೀರ್ತನಕಾರನೋ, (ಅದೇ ರೀತಿ) । ಅಸ್ಮಾ

**ಕಾಸಃ**—ನಮ್ಮ ಗುಂಪಿನಲ್ಲಿರುವ । **ಸೂರಯಃ ಚ**—ಈ ಇತರ ಕೀರ್ತನಕಾರರೂ ಸಹ । **ಪ್ರ**—ಅತ್ಯಂತ ಉತ್ತಮ ದರ್ಜೆಯ ಸ್ತೋತೃಗಳಾಗಿದ್ದಾರೆ । **ನಃ**—ನಮ್ಮ । **ಅಘಂ**—ಪಾಪವು । **ಅಪ ಶೋಶುಚತ್**—ನಾಶವಾಗಲಿ.

### ಭಾವಾರ್ಥ

ಎಲೈ ಅಗ್ನಿಯೇ, ನಿನ್ನ ಗುಣಗಾನವನ್ನು ಮಾಡತಕ್ಕ ಈ ಸ್ತೋತ್ರಗಾರರ ನಡುವೆ ಕುತ್ಸನು ಯಾವ ರೀತಿಯಲ್ಲಿ ಉತ್ತಮ ದರ್ಜೆಯವನೋ, ಅದೇ ರೀತಿ ನಮ್ಮ ಗುಂಪಿನಲ್ಲಿರುವ ಈ ಇತರ ಕೀರ್ತನಕಾರರೂ ಸಹ ಅತ್ಯಂತ ಉತ್ತಮ ದರ್ಜೆಯವರು. ಅವರ ಸ್ತೋತ್ರದಿಂದ ತೃಪ್ತನಾಗಿ ನಮ್ಮನ್ನು ಅನುಗ್ರಹಿಸು. ನಮ್ಮ ಪಾಪವು ನಾಶವಾಗಲಿ

## English Translation

(In like manner as among these your worshippers Kutsa) is the pre-eminent panegyrist, so are our encomiasts (of you ) the most distinguished : may our sin be repented of·

### ವಿಶೇಷವಿಷಯಗಳು

**ಪ್ರಭಂದಿಷ್ಠಾಃ**—**ಅರ್ಚತಿ, ಗಾಯತಿ** ಇತ್ಯಾದಿ ೪೪ **ಅರ್ಚತಿ ಕರ್ಮ** ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೪) **ಭಂದತೇ** ಎಂದರೆ ಪೂಜೆಮಾಡು, ಸ್ತೋತ್ರಮಾಡು ಎಂದರ್ಥ. **ಪ್ರಭಂದಿಷ್ಠಾಃ । ಪ್ರಕರ್ಷೇಣ ಸ್ತೋತೃತಮಾಃ ।** ಎಲ್ಲರಿಗಿಂತಲೂ ಹೆಚ್ಚು ಉತ್ಕೃಷ್ಟವಾಗಿ ಸ್ತೋತ್ರಮಾಡುವವನು. ಈ ವಿಷಯದಲ್ಲಿ—

**ಆ ವಿವೇಶ ರೋದಸೀ ಭೂರಿವರ್ಪಸಾ ಪುರುಪ್ರಿಯೋ ಭಂದತೇ ಧಾಮಭಿಃ ಕವಿಃ ।**
(ಋ. ಸಂ. ೩-೩-೪)

**ಸ ಭಂದನಾ ಉದಿಯರ್ತಿ ಪ್ರಜಾವತೀರ್ವಿಶ್ವಾಯುರ್ವಿಶ್ವಾಃ ಸುಭರಾ ಅಹರ್ದಿವಿ ।**
(ಋ. ಸಂ. ೯-೮೬-೪೧)

ಈ ಎರಡು ಋಕ್ಕುಗಳನ್ನು ನಿರುಕ್ತಕಾರರು ಉದಹರಿಸಿ ಉತ್ಕೃಷ್ಟವಾದ ಸ್ತೋತ್ರವನ್ನು ಮಾಡುವ ಸನ್ನಿವೇಶಗಳಲ್ಲಿ ಈ ಪದಪ್ರಯೋಗದ ಔಚಿತ್ಯವನ್ನು ತೋರಿಸಿರುತ್ತಾರೆ. (ನಿ. ೫-೨) ಅಂತಹ ಸ್ತೋತ್ರಕಾರರಲ್ಲೆಲ್ಲಾ ಅತ್ಯುತ್ತಮನೆಂದೂ ಇಲ್ಲಿ ಭಕ್ತ್ಯತಿಶಯವನ್ನು ಹೇಳಿದೆ.

**ಸೂರಯಃ**—**ರೇಭಃ, ಜರಿತಾ, ಕಾರುಃ** ಇತ್ಯಾದಿ ೧೩ **ಸ್ತೋತೃ**ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೬) **ಸೂರಯಃ** ಎಂದರೆ ಸ್ತುತಿಕಾರರು, ಸ್ತೋತ್ರವನ್ನು ಮಾಡತಕ್ಕ ಭಕ್ತರು ಎಂದರ್ಥ. ಪ್ರಾಜ್ಞರು, ವಿವೇಕಿಗಳು, ಮೇಧಾವಿಗಳು, ಎನ್ನುವ ಅರ್ಥವನ್ನು ಕೊಡತಕ್ಕ ಸಂದರ್ಭಗಳಲ್ಲಿ **ಸೂರಿ** ಶಬ್ದವನ್ನು ಅನೇಕ ಕಡೆ ಉಪಯೋಗಿಸಿದೆ. ವೇದಋಷಿಗಳ ತತ್ತ್ವಸ್ವರೂಪಗಳನ್ನೂ ವಿಶ್ವದ ರಹಸ್ಯತತ್ತ್ವಗಳನ್ನೂ ಗ್ರಹಿಸುವ ಅಲೌಕಿಕವಾದ ಚಾಕ್ಷುಷವೂ ಮಾನಸಿಕವೂ ಆದ ದರ್ಶನಶಕ್ತಿಯನ್ನು ಪಡೆದಿರುವ ಋಷಿಗಳ ಪರವಾಗಿ ಉಪಯೋಗಿಸಿದಾಗ ಈ ವಿಶೇಷಣವು ಒಂದು ವಿಶೇಷಾರ್ಥವನ್ನು ಕೊಡುತ್ತದೆ.

**ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ ।**
(ಋ. ಸಂ- ೧-೨೨-೨೦)

ಇತ್ಯಾದಿ ಸನ್ನಿವೇಶಗಳಲ್ಲಿ ಕೇವಲ ಸ್ತೋತ್ರಮಾಡತಕ್ಕವರೆಂದು ಮಾತ್ರವಾಗದೇ ಋಷಿಗಳ ಅಸಾಧಾರಣವಾದ ದರ್ಶನ ಶಕ್ತಿಯನ್ನೂ ಸೂಚಿಸುತ್ತದೆ. ಮತ್ತು ಋಷಿಗಳ ಪರವಾಗಿ ಮಾತ್ರವಲ್ಲದೇ ಇಂದ್ರಾದಿದೇವತೆಗಳಿಗೂ ವಿಶೇಷಣ ವಾಗಿ ಉಪಯೋಗಿಸಲ್ಪಟ್ಟಿದೆ.

**ಮಂಹಿಷ್ಠಮಚ್ಛೋಕ್ತಿಭಿರ್ಮತೀನಾಂ ಸುವೃಕ್ತಿಭಿಃ ಸೂರಿಂ ವಾವೃಧಧ್ಯೈ ।**
(ಋ. ಸಂ. ೧-೬೧-೩)

ಇತ್ಯಾದಿ ಋಕ್ಕುಗಳಲ್ಲಿ ವಿಪಶ್ಚಿತಮಿಂದ್ರಂ ಎಂದು ಇಂದ್ರಾದಿ ದೇವತೆಗಳ ಪ್ರಾಜ್ಞತ್ವವನ್ನೂ ತಿಳಿಸುತ್ತದೆ. ಇವಲ್ಲದೇ **ಪ್ರಭು, ಪ್ರೇರಕ, ಸನ್ಮಾರ್ಗಪ್ರವರ್ತಕ** ಎಂಬ ಅರ್ಥವನ್ನು ಸೂಚಿಸುವಾಗಲೂ **ಸೂರಿ** ಶಬ್ದದ ಪ್ರಯೋಗವಿದೆ.

**ಜನೋ ಯಃ ಪಜ್ರೇಭ್ಯೋ ವಾಜಿನೀವಾನಶ್ವಾವತೋ ರಥಿನೋ ಮಹ್ಯಂ ಸೂರಿಃ ।**
(ಋ. ಸಂ. ೧-೧೨೨-೮)

**ಅಸದ್ಯಥಾ ಜರಿತ್ರ ಉತ ಸೂರಿರಿಂದ್ರೋ ರಾಯೋ ವಿಶ್ವವಾರಸ್ಯ ದಾತಾ ।**
(ಋ. ಸಂ. ೬-೨೩-೧೦)

**ಮುಹ್ಯಂತ್ವನ್ಯೇ ಅಭಿತೋ ಜನಾಸ ಇಹಾಸ್ಮಾಕಂ ಮಘವಾ ಸೂರಿರಸ್ತು ।**
(ಋ. ಸಂ. ೧೦-೪೧-೬)

ಎಂಬಿವೇ ಮುಂತಾದ ಸನ್ನಿವೇಶಗಳಲ್ಲಿ ಪ್ರಭುಗಳೂ, ಸನ್ಮಾರ್ಗಪ್ರವರ್ತಕರೂ ಆದ ದೇವತೆಗಳನ್ನು ಕುರಿತು ಈ ವಿಶೇಷಣವು ಇಂದ್ರಾದಿಗಳ ಗುಣಗಳನ್ನು ವರ್ಣಿಸುತ್ತದೆ.

**ಆದಸ್ಯ ತೇ ಕೃಷ್ಣಾಸೋ ದಕ್ಷಿ ಸೂರಯಃ ಶೂರಸ್ಯೇವ ತ್ವೇಷಥಾದೀಷತೇ ವಯಃ ।**
(ಋ. ಸಂ. ೧-೧೪೧-೮)

ಇತ್ಯಾದಿ ಕಡೆಗಳಲ್ಲಿ ಬಹಳ ಅಪರೂಪವಾಗಿ **ಮಾರ್ಗವೆಂಬ** ಅರ್ಥವನ್ನೂ ಕೊಡುತ್ತದೆ.

ಪ್ರಕೃತವಾದ ಈ ಋಕ್ಕಿನಲ್ಲಿ ಕುತ್ಸನು ಉತ್ತಮವಾದ ಸ್ತೋತೃವೆಂದೂ, ಅವನ ಜೊತೆಯಲ್ಲಿರುವ ಇತರರೂ ಕೂಡ ಅವನಂತೆಯೇ ಭಕ್ತಿಯುಳ್ಳವರೆಂದೂ ಮೇಧಾವಿಗಳಾದ ಸ್ತೋತೃಗಳೆಂದೂ ಅವರ ಪ್ರಶಂಸೆಯಿದೆ. ಅದರೂ **ಪ್ರಭಂದಿಷ್ಟಃ** ಎಂಬ ವಿಶೇಷಣದಿಂದ ಕುತ್ಸನಲ್ಲಿ ಒಂದು ಅತಿಶಯವಾದ ವೈಶಿಷ್ಟ್ಯವನ್ನು ತೋರಿಸಿ ದಂತಾಯಿತು. ಈ ಸಂದರ್ಭದಲ್ಲಿ ಸೂಚಿಸಿರುವ ಕುತ್ಸನ ವೈಶಿಷ್ಟ್ಯ ವಿವರಣೆಯನ್ನು ಈ ಭಾಗದ ಪೀಠಿಕಾ ಪ್ರಕರಣದಲ್ಲಿ ನೋಡಬಹುದು. ಅದರೂ ಸಹ ಈ ಸಂದರ್ಭಕ್ಕೆ ಅನುಗುಣವಾಗಿರುವ ಅವನ ಕೃತಿಯ ಶ್ಲಾಘನೆ ಯನ್ನು ಋಕ್ಸಂಹಿತೆಯ ಕೆಲವು ಉದಾಹರಣೆಗಳಿಂದಲೇ ತಿಳಿಯಬಹುದು.

**ಆವಃ ಕುತ್ಸಮಿಂದ್ರಂ ಯಸ್ಮಿಞ್ಚಾಕನ್ ಪ್ರಾವೋ ಯುಧ್ಯಂತಂ ವೃಷಭಂ ದಶದ್ಯುಂ ।**
(ಋ. ಸಂ. ೧-೩೩-೧೪)

ವಹ ಕುತ್ಸಮಿಂದ್ರ ಯಸ್ಮಿಞ್ಚಾಕನ್ಸ್ಯೂಮನ್ಯೂ ಋಜ್ರಾ ವಾತಸ್ಯಾಶ್ವಾ ।
(ಋ. ಸಂ. ೧-೧೭೪-೫)

ಇತ್ಯಾದಿ ಸಂದರ್ಭಗಳಲ್ಲಿ ಇಂದ್ರನು ಕುತ್ಸಪಠಿತವಾದ ಸ್ತೋತ್ರವನ್ನು ಕೇಳಲು ಆಶಿಸಿದನು ಎಂದಿರುವುದರಿಂದ ಆವನ ಕೃತಿಯಲ್ಲಿ ಅತ್ಯಧಿಕವಾದ ವಿಶೇಷವಿರುವುದಾಗಿ ಶ್ರುತಿವಾಕ್ಯಗಳಿಂದಲೇ ಗೊತ್ತಾಗುತ್ತದೆ.

ವ್ಯಾಕರಣಪ್ರಕ್ರಿಯಾ

**ಭನ್ದಿಷ್ಠಃ**—ಭದಿ ಕಲ್ಯಾಣೇ ಸುಖೇ ಚ. ಧಾತು. ಇಲ್ಲಿ ಸ್ತುತಿಕರ್ಮದಲ್ಲಿ ಪ್ರಯುಕ್ತವಾಗಿದೆ. ಇದಕ್ಕೆ ಕರ್ತರಿಯಲ್ಲಿ ತೃಚ್ ಪ್ರತ್ಯಯ. **ಇದಿತೋ ನುಮ್ ಧಾತೋಃ**—ಎಂಬುದರಿಂದ ಧಾತುವಿಗೆ ನುಮಾಗಮ. ತೃಜಂತದ ಮೇಲೆ **ತುಶ್ಛಂದಸಿ**—(ಪಾ. ಸೂ. ೫-೩-೫೯) ಎಂಬುದರಿಂದ ಇಷ್ಠನ್ ಪ್ರತ್ಯಯ. **ತುರಿಷ್ಠೇಮೇಯಃಸು** (ಪಾ. ಸೂ. ೬-೪-೧೫೪) ಎಂಬುದರಿಂದ ಇಷ್ಠನ್ ಪರವಾದಾಗ ತೃಚಿಗೆ ಲೋಪ. ಭನ್ದಿಷ್ಠ ಎಂದು ರೂಪವಾಗುತ್ತದೆ. **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಇಷ್ಠನ್ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಸ್ಮಾಕಾಸಃ**—ಅಸ್ಮಾಕಂ ಸಂಬಂಧಿನಃ ಆಸ್ಮಾಕಾಃ ಅಸ್ಮದ್ ಶಬ್ದಕ್ಕೆ ಅಣ್ ಪರವಾದಾಗ **ತಸ್ಮಿನ್ನಣಿಚ ಯುಷ್ಮಾಸ್ಮಾಕೌ**—(ಪಾ. ಸೂ. ೪-೩-೨) ಎಂಬುದರಿಂದ ಅಸ್ಮಾಕ ಎಂಬ ಆದೇಶ ಬರುತ್ತದೆ. ಛಾಂದಸವಾಗಿ ಅಣ್ ಪ್ರತ್ಯಯಕ್ಕೆ ಲೋಪ. **ಸಂಜ್ಞಾಪೂರ್ವಕೋ ವಿಧಿರನಿತ್ಯಃ**—ಎಂಬ ಪರಿಭಾಷೆಯಿಂದ ಅಣ್ ನಿಮಿತ್ತವಾಗಿ ಆದಿವೃದ್ಧಿ ಬರುವುದಿಲ್ಲ. ಅಸ್ಮಾಕ ಎಂಬುದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್**—(ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ. ಸಕಾರಕ್ಕೆ ರುತ್ವವಿಸರ್ಗ. ಅಸ್ಮಾಕಾಸಃ ಎಂದು ರೂಪವಾಗುತ್ತದೆ. ಸ್ಥಾನಿಯಲ್ಲಿ ಅಕಾರ ಉದಾತ್ತವಾದಂತೆ ಆದೇಶದಲ್ಲಿಯೂ ಮಕಾರದ ಪರದ ಆಕಾರಕ್ಕೆ ಉದಾತ್ತಸ್ವರ ಬರುತ್ತದೆ. ಅಥವಾ ಷಷ್ಠೀ ಬಹುವಚನದಲ್ಲಿ ಅಸ್ಮಾಕಂ ಎಂಬಲ್ಲಿ ಮಧ್ಯೋದಾತ್ತವು ದೃಷ್ಟವಾದುದರಿಂದ ಅದೇ ಆದೇಶದಲ್ಲಿ ಅತಿದಿಷ್ಟವಾಗುತ್ತದೆ.

**ಸೂರಯಃ**—ಷೂಙ್ ಪ್ರಾಣಿಪ್ರಸವೇ ಧಾತು. ಇದಕ್ಕೆ **ಸೂಙಃ ಕ್ರಿಃ**—(ಉ. ಸೂ. ೪-೫೦೪) ಎಂಬುದರಿಂದ ಕ್ರಿ ಪ್ರತ್ಯಯ. ಕಿತ್ತಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ. ಧಾತ್ವಾದಿಗೆ ಸತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತ. ಪ್ರಥಮಾ ಬಹುವಚನರೂಪ. ॥ ೩ ॥

———:o:———

ಸಂಹಿತಾಪಾಠಃ

ಪ್ರ ಯತ್ತೇ ಅಗ್ನೇ ಸೂರಯೋ ಜಾಯೇಮಹಿ ಪ್ರ ತೇ ವಯಂ ।
ಅಪ ನಃ ಶೋಶುಚದಘಂ ॥ ೪ ॥

॥ ಪದಪಾಠಃ ॥

ಪ್ರ । ಯತ್ । ತೇ । ಅಗ್ನೇ । ಸೂರಯಃ । ಜಾಯೇಮಹಿ । ಪ್ರ । ತೇ ।
ವಯಂ ।
ಅಪ । ನಃ । ಶೋಶುಚತ್ । ಅಘಂ ॥ ೪ ॥

॥ ಸಂಹಿತಾಪಾಠಃ ॥

ಹೇ ಅಗ್ನೇ ಯದ್ಯಸ್ಮಾತ್ತೇ ತವ ಸೂರಯಃ ಸ್ತೋತಾರಃ ಪ್ರಜಾಯಂತೇ । ಪುತ್ರಪೌತ್ರಾದಿರೂಪೇಣ ಬಹುವಿಧಾ ಭವಂತಿ । ತತೋ ವಯಂ ಚ ತೇ ತವ ಸ್ತೋತಾರಃ ಸಂತಃ ಪ್ರ ಜಾಯೇಮಹಿ । ಪುತ್ರಪೌತ್ರಾದಿಭಿರುಪೇತಾ ಭವೇಮ ॥ ಜಾಯೇಮಹಿ । ಪ್ರಾರ್ಥನಾಯಾಂ ಲಿಙ್ । ಶ್ಯನಿ ಜ್ಞಾಜನೋ-ರ್ಜ್ಞೇತಿ ಜಾದೇಶಃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಶ್ಯನೋ ನಿತ್ತ್ವಾದಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

ಅಗ್ನೇ— ಎಲೈ ಅಗ್ನಿಯೇ । **ಯತ್**— ಯಾವ ಕಾರಣದಿಂದ (ಯಾವ ರೀತಿಯಲ್ಲಿ) । **ತೇ**— ನಿನ್ನ । **ಸೂರಯಃ**—ಸ್ತೋತ್ರಗಾರರಾದ ಭಕ್ತರು । **ಪ್ರ**—ಉತ್ಕೃಷ್ಟವಾದ (ಪುತ್ರಪೌತ್ರಾದಿಗಳೊಡನೆ ಬೆಳೆಯುತ್ತಾರೋ ಅದೇರೀತಿ) । **ವಯಂ**—ನಾವೂ ಕೂಡ । **ತೇ**—ನಿನ್ನ (ಭಕ್ತರಾದುದರಿಂದ) । **ಪ್ರಜಾಯೇಮಹಿ**—ಶ್ರೇಷ್ಠವಾದ ಪುತ್ರಪೌತ್ರಾದಿಗಳಿಂದ ಕೂಡಿಕೊಂಡಿರೋಣ. (ಅದರಂತೆ ಅನುಗ್ರಹಿಸು) । **ನಃ**—ನಮ್ಮ । **ಅಘಂ**—ಪಾಪವು । **ಅಪ ಶೋಶುಚತ್**—ನಾಶವಾಗಲಿ ॥

ಭಾವಾರ್ಥ

ಎಲೈ ಅಗ್ನಿಯೇ, ನಿನ್ನನ್ನು ಸ್ತೋತ್ರಮಾಡುವ ಸಕಲ ಭಕ್ತರೂ ಸಹ ಯಾವ ರೀತಿ ಪುತ್ರಪೌತ್ರಾದಿಗಳಿಂದ ಬೆಳೆಯುತ್ತಾರೆಯೋ ಅದೇರೀತಿ ನಾವೂ ಸಹ ನಿನ್ನ ಭಕ್ತರಾಗಿ ನಿನ್ನ ಸ್ತೋತ್ರಮಾಡುವವರಾದ್ದರಿಂದ ಪುತ್ರಪೌತ್ರಾದಿಗಳೊಡನೆ ವಂಶವನ್ನು ಬೆಳೆಸುವಂತೆ ಅನುಗ್ರಹಿಸು. ನಮ್ಮ ಪಾಪವು ನಾಶವಾಗಲಿ.

## English Translation

Inasmuch as your worshippers (are blessed with descendants,) so may we, (by repeating your praise,) obtain posterity : may our sin be repented of.

### ವಿಶೇಷವಿಷಯಗಳು

**ಅಗ್ನೇ ಯತ್ತೇ ಸೂರಯಃ ಪ್ರ ವಯಂ ತೇ ಪ್ರಜಾಯೇಮಹಿ** ಎಂಬ ವಚನಪ್ರಕಾರ—

**ಅತೋರ್ತಂ ಶ್ರಾವಯತ್ಪತಿಂ ಪುತ್ರಂ ದದಾತಿ ದಾಶುಷೇ ।**
( ಋ. ಸಂ. ೫-೨೫-೫ )

ವಂಶದ ಕೀರ್ತಿಯನ್ನು ಹರಡುವಂತಹವನೂ, ಶಕ್ತಿಯುತನೂ ಆದ ಪುತ್ರನನ್ನು ಅಗ್ನಿಯು ಅನುಗ್ರಹಿಸುತ್ತಾನೆಂದು ಶ್ರುತಿಯಿರುವುದರಿಂದ ವಂಶಾಭಿವೃದ್ಧಿಗಾಗಿ ಸಂತಾನವನ್ನಪೇಕ್ಷಿಸುವವರೆಲ್ಲರೂ ಸಹ ಅಗ್ನಿಯನ್ನು ಸ್ತುತಿಸಿ, ಆ ಸ್ತೋತ್ರದಿಂದ ತೃಪ್ತನಾದ ಅಗ್ನಿಯು ಇತರ ಸೂರಿಗಳಿಗೆ ಪುತ್ರಸಂಪತ್ತನ್ನು ಕೊಟ್ಟು ಅವರ ವಂಶವನ್ನು ಬೆಳೆಸಿದಂತೆಯೇ ತನ್ನ ಸಂತತಿಯನ್ನೂ ಬೆಳೆಸಬೇಕೆಂದು ಕುತ್ಸನ ಪ್ರಾರ್ಥನೆ.

**ಚಂದ್ರಂ ರಯಿಂ ಪುರುವೀರಂ ಬೃಹಂತಂ ಚಂದ್ರ ಚಂದ್ರಾಭಿರ್ಗೃಣತೇ ಯುವಸ್ವ ।**
(ಋ. ಸಂ. ೬-೬-೭)

ಇತ್ಯಾದಿ ಕಡೆಗಳಲ್ಲಿ ಪ್ರಾರ್ಥಿಸಿರುವಂತೆ ತನಗೆ ಆಹ್ಲಾದವನ್ನುಂಟುಮಾಡುವವನೂ, ವಂಶವನ್ನು ಬೆಳಗಿಸುವವನೂ, ಸನ್ಮಾರ್ಗವನ್ನನುಸರಿಸುವನೂ ಆದ ಪುತ್ರನನ್ನು ಅನುಗ್ರಹಿಸಬೇಕೆಂದೂ, ಅಂತಹ ಪುತ್ರಸಂಪತ್ತಿಗೆ ಅರ್ಹತೆಯನ್ನು ಸಂಪಾದಿಸುವುದಕ್ಕಾಗಿ ತನ್ನ ಪಾಪವನ್ನು ಪೂರ್ಣವಾಗಿ ನಾಶಮಾಡಬೇಕೆಂದೂ ಪ್ರಾರ್ಥಿಸಿದೆ.

### ವ್ಯಾಕರಣಪ್ರಕ್ರಿಯಾ

**ಜಾಯೇಮಹಿ**—ಜನೀ ಪ್ರಾದುರ್ಭಾವೇ ಧಾತು. ಪ್ರಾರ್ಥನಾರೂಪ ಅರ್ಥ ತೋರುವಾಗ ಲಿಙ್. ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. **ದಿವಾದಿಭ್ಯಃ ಶ್ಯನ್**—(ಪಾ. ಸೂ. ೩-೧-೬೯) ಎಂಬುದರಿಂದ ಶ್ಯನ್ ವಿಕರಣ. ಇದು ಪರವಾದಾಗ **ಜ್ಞಾಜನೋರ್ಜಾ** (ಪಾ. ಸೂ. ೭-೩-೭೯) ಎಂಬುದರಿಂದ ಧಾತುವಿಗೆ ಜಾದೇಶ. ಲಿಙಿಗೆ **ಯಾಸುಟ್ ಪರಸ್ಮೈಪದೇ**—ಎಂಬುದರಿಂದ ಯಾಸುಡಾಗಮ. ಅಕಾರದ ಪರದಲ್ಲಿ ಯಾಸುಟ್ ಬಂದುದರಿಂದ **ಅತೋ ಯೇಯಃ**—(ಪಾ. ಸೂ. ೭-೨-೮೦) ಎಂಬುದರಿಂದ ಅದಕ್ಕೆ ಇಯಾದೇಶ, **ಲೋಪೋ ವ್ಯೋರ್ವಲಿ**—ಎಂಬುದರಿಂದ ಅಲ್ಲಿ ಯಕಾರಕ್ಕೆ ಲೋಪ. ಇಕಾರಕ್ಕೆ ಗುಣದಿಂದ ಏಕಾರಾದೇಶ. ಜಾಯೇಮಹಿ ಎಂದು ರೂಪವಾಗುತ್ತದೆ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅದಕ್ಕೆ ಅನುದಾತ್ತಸ್ವರ ಬರುತ್ತದೆ. ಶ್ಯನ್ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಯದ್ಯೋಗವಿರುವುದರಿಂದ ಇದಕ್ಕೆ **ಯದ್ವೃತ್ತಾನ್ನಿತ್ಯಮ್**—(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ

**ತೇ**—ಯುಷ್ಮಚ್ಛಬ್ದ. ಇದಕ್ಕೆ ಷಷ್ಠ್ಯೇಕವಚನದಲ್ಲಿ ತವ ಎಂದು ರೂಪವಾದಾಗ **ತೇಮಯಾವೇಕವಚನಸ್ಯ**—(ಪಾ. ಸೂ. ೮-೧-೨೨) ಎಂಬುದರಿಂದ ಅನುದಾತ್ತ ವಿಶಿಷ್ಟವಾದ ತೇ ಎಂಬ ಆದೇಶ ಬರುತ್ತದೆ. ॥೪॥

ಸಂಹಿತಾಪಾಠಃ

ಪ್ರ ಯದ॒ಗ್ನೇಃ ಸಹ॑ಸ್ವತೋ ವಿ॒ಶ್ವ॒ತೋ॑ ಯಂತಿ॑ ಭಾ॒ನವಃ॑ ।
ಅಪ॑ ನಃ॒ ಶೋಶು॑ಚದ॒ಘಂ ॥ ೫ ॥

ಪದಪಾಠಃ

ಪ್ರ । ಯತ್ । ಅ॒ಗ್ನೇಃ । ಸಹ॑ಸ್ವತಃ । ವಿ॒ಶ್ವತಃ॑ । ಯಂತಿ॑ । ಭಾ॒ನವಃ॑ ।
ಅಪ॑ । ನಃ॒ । ಶೋಶು॑ಚತ್ । ಅ॒ಘಂ ॥ ೫ ॥

ಸಾಯಣಭಾಷ್ಯಂ

**ಸಹಸ್ವತಃ ಸಹನವತಃ ಶತ್ರೂನಭಿಭವತೋಽಗ್ನೇರ್ಭಾನವೋ ದೀಪ್ತಯೋ ವಿಶ್ವತಃ ಸರ್ವತಃ ಸರ್ವಸ್ಮಾದಪಿ ಪ್ರದೇಶಾತ್ಪ್ರ ಯಂತಿ । ಪ್ರಕರ್ಷೇಣೋದ್ಗಚ್ಛಂತಿ । ಯದ್ಯಸ್ಮಾದೇವಂ ತಸ್ಮಾತ್ತೇನಾಗ್ನಿತೇಜಸಾಸ್ಮದೀಯಮಘಂ ನಶ್ಯತು ॥ ಯಂತಿ । ಇಣೋ ಯಣ್ । ಪಾ. ೬-೪-೮೧ । ಇತಿ ಯಣಾದೇಶಃ ॥**

ಪ್ರತಿಪದಾರ್ಥ

**ಯತ್**—ಯಾವ ಬಗೆಯಿಂದ । **ಸಹಸ್ವತಃ**—(ಶತ್ರುಗಳನ್ನು) ಎದುರಿಸಿ ಸೋಲಿಸತಕ್ಕ । **ಅಗ್ನೇಃ**—ಅಗ್ನಿಯ । **ಭಾನವಃ**—ಜ್ವಾಲೆಗಳು । **ವಿಶ್ವತಃ**—ಸಕಲ ಪ್ರದೇಶಗಳಲ್ಲಿಯೂ । **ಪ್ರಯಂತಿ**—ಮುನ್ನುಗ್ಗಿ ಪ್ರವೇಶಿಸುತ್ತವೆಯೋ (ಆದ್ದರಿಂದ) ।**ನಃ**—ನಮ್ಮ । **ಅಘಂ**—ಪಾಪವು । **ಅಪ ಶೋಶುಚತ್**—ನಾಶವಾಗಲಿ ।

ಭಾವಾರ್ಥ

ಶತ್ರುಗಳನ್ನು ಎದುರಿಸಿ ಸೋಲಿಸುವ ಸಾಮರ್ಥ್ಯವುಳ್ಳ ಅಗ್ನಿಯ ಜ್ವಾಲೆಗಳು ಸಕಲ ಪ್ರದೇಶಗಳಲ್ಲಿಯೂ ಮುನ್ನುಗ್ಗಿಹರಡುವುದರಿಂದ ನಮ್ಮ ಪಾಪವು ಸುಟ್ಟು ಭಸ್ಮವಾಗಲಿ.

English Translation

Since the victorious flames of Agni penetrate universally, may our sin be repented of.

॥ ವಿಶೇಷವಿಷಯಗಳು ॥

**ಸಹಸ್ವತಃ**—ಓಜಃ ಪಾಜಃ ಇತ್ಯಾದಿ ೨೮ ಬಲನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೯) ಸಹಸ್ ಶಬ್ದಕ್ಕೆ ಬಲವೆಂದರ್ಥ. ಸಹಃ ಅಸ್ಮಿನ್ ಅಸ್ತೀತಿ ಸಹಸ್ವಾನ್ । ತಸ್ಯ । ಬಲವುಳ್ಳ ಅಗ್ನಿಯು, ಎಂದು

ಸಹಸಸ್ಪುತ್ರಃ ಸಹಸಾ ಜಾಯಮಾನಃ ಇತ್ಯಾದಿ ಅಗ್ನಿಗೂ ಶಕ್ತಿಗೂ ಇರುವ ನಿತ್ಯಸಂಬಂಧವನ್ನು ತೋರಿಸುವ ವಿಶೇಷಣಗಳಿರುವಂತೆ ಸಹಸ್ವಾನ್ ಎನ್ನುವುದೂ ಒಂದು ವಿಶೇಷಣ-

**ಪ್ರವೋ ಮಹೇ ಸಹಸಾ ಸಹಸ್ವತ ಉಷರ್ಬುಧೇ ಪಶುಷೇ ನಾಗ್ನಯೇ ಸ್ತೋಮೋ ಬಭೂತ್ವಗ್ನಯೇ ।**

(ಋ. ಸಂ. ೧-೧೨೭-೧೦)

**ಸ ತತ್ಕೃಧೀಷಿತಸ್ತೂಯಮಗ್ನೇ ಸ್ಪೃಧೋ ಬಾಧಸ್ವ ಸಹಸಾ ಸಹಸ್ವಾನ್ ॥**

(ಋ. ಸಂ. ೬-೫-೬)

**ಅಗ್ನಿಂ ವೋ ವೃಧಂತಮಧ್ವರಾಣಾಂ ಪುರೂತಮಂ । ಅಚ್ಛಾ ನಪ್ತ್ರೇ ಸಹಸ್ವತೇ ॥**

(ಋ. ಸಂ. ೮-೧೦೨-೭)

ಇತ್ಯಾದಿ ಅನೇಕ ಕಡೆಗಳಲ್ಲಿ ಶತ್ರುವನ್ನು ಪ್ರತಿಭಟಿಸಿ ಸೋಲಿಸುವ ಶಕ್ತಿಯುಳ್ಳವನೆಂದು ಅಗ್ನಿಯ ಸ್ವರೂಪವನ್ನು ವರ್ಣಿಸುತ್ತದೆ.

**ವಿಶ್ವತೋ ಯಂತಿ ಭಾನವಃ**—ಅಗ್ನಿಯ ಪ್ರಕಾಶನಸಾಧನವಾದ ಜ್ವಾಲೆಗಳು ಸಕಲ ಪ್ರದೇಶಗಳಿಗೂ ಹರಡಿ ವ್ಯಾಪಿಸುತ್ತವೆ-

**ಜಾತ ಆಪೃಣೋ ಭುವನಾನಿ ರೋದಸೀ ಅಗ್ನೇ ತಾ ವಿಶ್ವಾ ಪರಿಭೂರಸಿ ತ್ಮನಾ ।**

(ಋ. ಸಂ. ೩-೩-೧೦)

**ಇತೋ ಜಾತೋ ವಿಶ್ವಮಿದಂ ವಿ ಚಷ್ಟೇ ವೈಶ್ವಾನರೋ ಯತತೇ ಸೂರ್ಯೇಣ ।**

(ಋ. ಸಂ. ೧-೯೮-೧)

ಇವೇ ಮುಂತಾದ ನಾನಾಋಕ್ಕುಗಳಲ್ಲಿ ಅಗ್ನಿಯು ಉತ್ಪನ್ನನಾದೊಡನೆಯೇ ದ್ಯಾವಾಪೃಥಿವಿಗಳನ್ನೂ ವಿಶ್ವದ ಇತರ ಎಲ್ಲಾ ಭಾಗಗಳನ್ನೂ ತನ್ನ ಜ್ವಾಲಾರೂಪದಿಂದ ವ್ಯಾಪಿಸುತ್ತಾನೆ ಎಂದು ವರ್ಣಿಸಿರುವಂತೆ ಇಲ್ಲಿಯೂ ಅಗ್ನಿಯ ದೀಪ್ತಿಪ್ರಸರಣದ ವರ್ಣನೆಯಿದೆ. " ಶತ್ರುಗಳನ್ನೆಲ್ಲಾ ನಾಶಮಾಡತಕ್ಕ ಶಕ್ತಿಯುಳ್ಳ ಆ ಜ್ವಾಲೆಗಳು ನಮ್ಮ ಪಾಪರೂಪವಾದ ಶತ್ರುಗಳನ್ನೂ ನಾಶಮಾಡಿ ನಮ್ಮನ್ನು ಶುದ್ಧರನ್ನಾಗಿ ಮಾಡಲಿ " ಎಂದು ಪ್ರಾರ್ಥಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಸಹಸ್ವತಃ**—ಸಹಃ ಅಸ್ಯ ಅಸ್ತಿ ಇತಿ ಸಹಸ್ವಾನ್. **ತದಸ್ಯಾಸ್ತಿ**—ಎಂಬುದರಿಂದ ಮತುಪ್ ಪ್ರತ್ಯಯ. ಅಸುಸಂತವಾಗಿರುವುದರಿಂದ **ಮಾದುಪಧಾಯಾಶ್ಚ**—ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ಮತುಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಷಷ್ಠ್ಯೇಕವಚನಾಂತರೂಪ.

**ವಿಶ್ವತಃ**—ಪಂಚಮ್ಯರ್ಥದಲ್ಲಿ **ಪಂಚಮ್ಯಾಸ್ತಸಿಲ್**—(ಪಾ. ಸೂ. ೫-೩-೭) ಎಂಬುದರಿಂದ ತಸಿಲ್ ಪ್ರತ್ಯಯ. ಲಿತ್ತಾದುದರಿಂದ **ಲಿತಿ**—(೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಯಂತಿ**—ಇಣ್ ಗತೌ ಧಾತು. ಅದಾದಿ. ಲಟ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. **ಝೋಽಂತಃ**—ಎಂಬುದರಿಂದ ಅದಕ್ಕೆ ಅಂತಾದೇಶ. **ಇಣೋ ಯಣ್**—(ಪಾ. ಸೂ. ೬-೪-೮೧) ಎಂಬುದರಿಂದ

ಅಜಾದಿಪ್ರತ್ಯಯ ಪರವಾದುದರಿಂದ ಧಾತುವಿಗೆ ಯಣಾದೇಶ. ಯದ್ಯೋಗವಿರುವುದರಿಂದ **ಯದ್ವೃತ್ತಾನ್ನಿತ್ಯಮ್**—(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಪ್ರತ್ಯಯದ ಆದ್ಯುದಾತ್ತಸ್ವರದಿಂದ ಆದ್ಯುದಾತ್ತವಾದ ಪದವಾಗುತ್ತದೆ.

ಭಾನವಃ—ಭಾ ದೀಪ್ತೌ ಧಾತು. ಇದಕ್ಕೆ **ದಾಭಾಭ್ಯಾಂ ನುಃ**—(ಉ. ಸೂ. ೩-೩೧) ಎಂಬುದರಿಂದ ನುಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಜಸ್ ಪರವಾದ **ಜಸಿಚ**—ಎಂಬುದರಿಂದ ಗುಣ, ಅವಾದೇಶ. ॥ ೫ ॥

———— :O: ————

॥ ಸಂಹಿತಾಪಾಠಃ ॥

ತ್ವಂ ಹಿ ವಿಶ್ವತೋಮುಖ ವಿಶ್ವತಃ ಪರಿಭೂರಸಿ ।
ಅಪ ನಃ ಶೋಶುಚದಘಂ ॥ ೬ ॥

ಪದಪಾಠಃ

ತ್ವಂ । ಹಿ । ವಿಶ್ವತಃಽಮುಖ । ವಿಶ್ವತಃ । ಪರಿಽಭೂಃ । ಅಸಿ ।
ಅಪ । ನಃ । ಶೋಶುಚತ್ । ಅಘಂ ॥ ೬ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ಹಿ ತ್ವಂ ಖಲು ವಿಶ್ವತೋಮುಖಃ ಸರ್ವತೋಜ್ವಾಲಃ । ತವ ಮುಖಸ್ಥಾನೀಯಾನಾಂ ಜ್ವಾಲಾನಾಂ ನ ಕುತ್ರಾಪಿ ಪ್ರತಿಹತಿರಸ್ತಿ । ಅತೋ ಹೇ ವಿಶ್ವತೋಮುಖಾಗ್ನೇ ವಿಶ್ವತಃ ಸರ್ವತಃ ಸರ್ವಸ್ಮಾದಪ್ಯುಪದ್ರವಜಾತಾತ್ಪರಿಭೂರಸಿ । ಅಸ್ಮಾಕಂ ಪರಿಗ್ರಹೀತಾ ಭವ । ರಕ್ಷಕೋ ಭವೇತ್ಯರ್ಥಃ । ಅನ್ಯತ್ಸಮಾನಂ ॥

ಪ್ರತಿಪದಾರ್ಥ

( **ಅಗ್ನೇ**—ಎಲೈ ಅಗ್ನಿಯೇ) । **ತ್ವಂ ಹಿ**—ನೀನಾದರೋ। **ವಿಶ್ವತೋ ಮುಖಃ**-ನಾನಾ ದಿಕ್ಕುಗಳಲ್ಲಿಯೂ (ತಡೆಯಿಲ್ಲದೇ), ಹರಡುವ ಜ್ವಾಲೆಗಳುಳ್ಳವನು, (ಅಂತಹ ನೀನು) । **ವಿಶ್ವತಃ**—(ನಮಗೆ ತೊಂದರೆ ಸಂಭವಿಸುವ) ಸಕಲ ದಿಕ್ಕುಗಳಲ್ಲಿಯೂ । **ಪರಿಭೂಃ ಅಸಿ**—(ನಮ್ಮ) ರಕ್ಷಕನಾಗಿರು । **ನಃ**—ನಮ್ಮ । **ಅಘಂ**—ಪಾಪವು । **ಅಪ ಶೋಶುಚತ್**—ನಾಶವಾಗಲಿ.

ಭಾವಾರ್ಥ

ಎಲೈ ಅಗ್ನಿಯೇ, ನಿನ್ನ ಜ್ವಾಲೆಯು ತಡೆಯಿಲ್ಲದೇ ಸಕಲ ದಿಕ್ಕುಗಳಲ್ಲಿಯೂ ಮುನ್ನುಗ್ಗಿ ಪ್ರಸರಿಸುವುದರಿಂದ ನೀನು ವಿಶ್ವತೋಮುಖನಾಗಿದ್ದೀಯೆ. ಆದುದರಿಂದ ನಮಗೆ ಯಾವ ದಿಕ್ಕಿನಿಂದ ತೊಂದರೆಯು ಸಂಭವಿಸಿದರೂ ಸಹ ನಮ್ಮ ರಕ್ಷಕನಾಗಿದ್ದುಕೊಂಡು ನಮ್ಮನ್ನು ಕಾಪಾಡು. ನಮ್ಮ ಪಾಪವು ನಾಶವಾಗಲಿ.

## English Translation

You, whose countenance is turned to all sides, are our defender ; may ur sin be repented of·

॥ ವಿಶೇಷವಿಷಯಗಳು ॥

**ವಿಶ್ವತೋಮುಖಃ**—ಸರ್ವತೋಜ್ವಾಲಃ । ತವ ಮುಖಸ್ಥಾನೀಯಾನಾಂ ಜ್ವಾಲಾನಾಂ ನ ಕುತ್ರಾಪಿ ಪ್ರತಿಹತಿರಸ್ತಿ । ಅಗ್ನಿಯ ಜ್ವಾಲೆಯು ಅಪ್ರತಿಹತವಾದ ಪ್ರಸರಣವುಳ್ಳದ್ದಾಗಿ ಸುತ್ತಲೂ ವ್ಯಾಪಿಸುವುದರಿಂದ **ವಿಶ್ವತೋಮುಖಃ** ಎಂಬ ವಿಶೇಷಣವಿದೆ. ಇದೇ ರೀತಿ ಸರ್ವತ್ರ ವ್ಯಾಪಕನಾದುದರಿಂದ **ವಿಶ್ವಕರ್ಮನಿಗೂ** ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ. (ಋ. ಸಂ. ೧೦-೪೧-೩).

**ಪರಿಭೂಃ**—**ಅಸ್ಮಾಕಂ ಪರಿಗ್ರಹೀತಾ ರಕ್ಷಕಃ**। ನಮ್ಮ ರಕ್ಷಕನಾಗಿರು ಎಂದು ತಾತ್ಪರ್ಯ. **ಪರಿಪೂರ್ವೋ ಭವತಿಃ ಸರ್ವತ್ರ ಪರಿಗ್ರಹಾರ್ಥೇ** । ಪರಿ ಎಂಬ ಉಪಸರ್ಗದೊಡನೆ ಕೂಡಿದ **ಭೂ** ಧಾತುವಿಗೆ ಎಲ್ಲಾ ಕಡೆಯಲ್ಲಿಯೂ **ಪರಿಗ್ರಹ ಸ್ವೀಕಾರ** ಎಂಬ ಅರ್ಥವು ನಿಯತವಾಗಿರುತ್ತದೆ ಎಂದು ಸ್ಕಂದ ಸ್ವಾಮಿಗಳು ಒಂದು ಸಾಮಾನ್ಯ ನಿಯಮವನ್ನು ಸೂಚಿಸಿದ್ದಾರೆ. ಆದರೂ ಸಹ ಬೇರೆ ಬೇರೆ ಅರ್ಥಗಳಲ್ಲಿ **ಪರಿಭೂಃ** ಎಂಬ ಪದದ ಪ್ರಯೋಗವನ್ನು ನೋಡಬಹುದು. ಉದಾಹರಣೆಗೆ—

**ಅಗ್ನೇ ಯಂ ಯಜ್ಞಮಧ್ವರಂ ವಿಶ್ವತಃ ಪರಿಭೂರಸಿ ।**

(ಋ. ಸಂ. ೧-೧-೪).

ಸಂಬಂಧಿ **ಪ್ರಾಚ್ಯಾದಿಚತುರ್ದಿಗಂತ್ರೇಷು ಆಹವನೀಯಮಾರ್ಜಾಲೀಯಗಾರ್ಹಪತ್ಯಾಗ್ನೀಧ್ರೀಯಸ್ಥಾನೇಷು ಅಗ್ನಿರಸ್ತಿ** । ಪ್ರಾಚ್ಯಾದಿ ನಾಲ್ಕು ದಿಕ್ಕುಗಳಲ್ಲಿಯೂ **ಆಹವನೀಯ, ಮಾರ್ಜಾಲೀಯ, ಗಾರ್ಹಪತ್ಯ, ಆಗ್ನೀಧ್ರೀಯ** ಎಂಬ ಸ್ಥಾನಗಳಲ್ಲಿರತಕ್ಕವನು, ಎಂದರ್ಥ. ಸಕಲ ಪ್ರದೇಶಗಳನ್ನೂ ವ್ಯಾಪಿಸು ಎನ್ನುವ ಅರ್ಥ ಬರುವಾಗಲೆಲ್ಲಾ ಸ್ವೀಕರಿಸು ಎಂದು ತಾತ್ಪರ್ಯವನ್ನು ಹೇಳಲು ಸಾಧ್ಯವಿಲ್ಲ. ಉದಾಹರಣೆಗೆ —

**ಸ ದೇವೋ ದೇವಾನ್ಪ್ರತಿ ಪಪ್ರಥೇ ಪೃಥು ವಿಶ್ವೇದು ತಾ ಪರಿಭೂರ್ಬ್ರಹ್ಮಣಸ್ಪತಿಃ ।**
(ಋ. ಸಂ. ೨-೨೪-೧೧)

ಎಂಬ ಋಕ್ಕಿನಲ್ಲಿ **ಪರಿಭೂ** ಶಬ್ದಕ್ಕೆ ಎಲ್ಲವನ್ನೂ ತನ್ನಧೀನದಲ್ಲಿಟ್ಟುಕೊಂಡು ತಾನು ಸರ್ವತ್ರ ವ್ಯಾಪಕನಾಗಿದ್ದರೂ ಎಲ್ಲಕ್ಕೂ ಪ್ರಭುವಾಗಿಯೂ ಸ್ವಾಮಿಯಾಗಿಯೂ ಅತ್ಯಂತ ಉನ್ನತವಾದ ಸ್ಥಾನದಲ್ಲಿರುವವನೆಂದು ತಾತ್ಪರ್ಯವಾಗುತ್ತದೆ. ಹೀಗೆ ಬೇರೆಬೇರೆ ತಾತ್ಪರ್ಯಗಳಿದ್ದು ಪ್ರಕೃತ ಸಂದರ್ಭದಲ್ಲಿ ನಮ್ಮನ್ನು ಪರಿಗ್ರಹಿಸು ಎಂದರೆ ನಿನ್ನವರನ್ನಾಗಿ ಸ್ವೀಕರಿಸಿ ನಮ್ಮನ್ನು ರಕ್ಷಿಸು ಎಂದಾಗುತ್ತದೆ.

|| ವ್ಯಾಕರಣಪ್ರಕ್ರಿಯಾ ||

**ವಿಶ್ವತೋಮುಖ**— ವಿಶ್ವತಃ ಸರ್ವತಃ ಮುಖಂ ಯಸ್ಯ ಸಃ ಸಂಬುದ್ಧಿ ಏಕವಚನದಲ್ಲಿ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಪರಿಭೂಃ**— ಪರಿ ಎಂಬ ಉಪಸರ್ಗ ಪೂರ್ವವಾದಾಗ ಭೂ ಸತ್ತಾಯಾಂ ಧಾತುವಿಗೆ **ಕ್ವಿಪ್ ಚ**—ಎಂಬುದರಿಂದ ಕ್ವಿಪ್ ಪ್ರತ್ಯಯ. **ಗತಿಕಾರಕೋಪಪದಾತ್ ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ.

**ಅಸಿ**—ಅಸ ಭುವಿ. ಧಾತು. ಲಟ್ ಮಧ್ಯಮಪುರುಷಏಕವಚನದಲ್ಲಿ ಸಿಪ್ ಪ್ರತ್ಯಯ. ಸಕಾರಾದಿ ಪ್ರತ್ಯಯ ಪರವಾದುದರಿಂದ **ತಾಸಸ್ತ್ಯೋರ್ಲೋಪಃ**—(ಪಾ. ಸೂ. ೭-೪-೫೦) ಎಂಬುದರಿಂದ ಧಾತುವಿನ ಸಕಾರಕ್ಕೆ ಲೋಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಸಿಪ್ ಪಿತ್ತಾದುದರಿಂದ ಧಾತುಸ್ವರ ಬರುತ್ತದೆ. || ೬ ||



॥ ಸಂಹಿತಾಪಾಠಃ ॥

ದ್ವಿಷೋ ನೋ ವಿಶ್ವತೋಮುಖಾತಿ ನಾವೇವ ಪಾರಯ ।
ಅಪ ನಃ ಶೋಶುಚದಘಂ ॥ ೭ ॥

ಪದಪಾಠಃ

ದ್ವಿಷಃ । ನಃ । ವಿಶ್ವತಃ ऽ ಮುಖ । ಅತಿ । ನಾವಾ ऽ ಇವ । ಪಾರಯ ।
ಅಪ । ನಃ । ಶೋಶುಚತ್ । ಅಘಂ ॥ ೭ ॥

ಸಾಯಣಭಾಷ್ಯಂ

ಹೇ ವಿಶ್ವತೋಮುಖ ಸರ್ವತೋಮುಖಾಗ್ನೇ ನಾವೇವ ನಾವಾ ನದೀಮಿವ ದ್ವಿಷಃ ಶತ್ರೂನ್ನೋಽಸ್ಮಾನತಿ ಪಾರಯ। ಅತಿಕ್ರಮಯ್ಯ ಶತ್ರುರಹಿತಂ ಪ್ರದೇಶಂ ಪ್ರಾಪಯ॥ ನಾವೇವ। ನಾವೇಕಾಚೆ ಇತಿ ವಿಭಕ್ತೇರುದಾತ್ತತ್ವಂ। ಪಾರಯ। ಪಾರ ತೀರ ಕರ್ಮಸಮಾಪ್ತೌ॥

॥ ಪ್ರತಿಪದಾರ್ಥ ॥

**ವಿಶ್ವತೋಮುಖ**—ನಾನಾಕಡೆಗಳಲ್ಲಿಯೂ (ಜ್ವಾಲಾರೂಪದ) ಮುಖಗಳುಳ್ಳ ಅಗ್ನಿಯೇ। **ನಾವೇವ** ಅಂಬಿಗನು ಪ್ರಯಾಣಿಕರನ್ನು) ದೋಣಿಯ ಮೂಲಕ ಸಾಗಿಸುವಂತೆ। **ನಃ**—ನಮ್ಮನ್ನು। **ದ್ವಿಷಃ**—ಶತ್ರುಗಳಿಂದ। **ಅತಿ ಪಾರಯ**—ದಾಟಿಸಿ (ಶತ್ರುರಹಿತವಾದ ದೂರಪ್ರದೇಶಕ್ಕೆ) ಕರೆದುಕೊಂಡುಹೋಗಿ ಸೇರಿಸು.।

**ಅಥವಾ**

[**ವಿಶ್ವತೋಮುಖ**—ನಾನಾಕಡೆಗಳಲ್ಲಿಯೂ (ಜ್ವಾಲಾರೂಪದ) ಮುಖವುಳ್ಳ ಅಗ್ನಿಯೇ। **ದ್ವಿಷಃ**—(ನಮ್ಮ) ಶತ್ರುಗಳನ್ನು। **ನಃ**—ನಮ್ಮಿಂದ। **ನಾವೇವ**—ದೋಣಿಗಳ ಮೂಲಕ ಸಾಗಿಸುವಂತೆ। **ಅತಿ-ಪಾರಯ**—(ದೂರದೇಶಕ್ಕೆ) ಕರೆದುಕೊಂಡುಹೋಗಿ ಸೇರಿಸು.।]

**ನಃ**—ನಮ್ಮ। **ಅಘಂ**—ಪಾಪವು। **ಅಪಶೋಶುಚತ್**—ನಾಶವಾಗಲಿ.।

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನ ಜ್ವಾಲೆಯು ನಾನಾದಿಕ್ಕುಗಳಲ್ಲಿಯೂ ಹರಡುವುದರಿಂದ ನೀನು ವಿಶ್ವತೋಮುಖನು. ನಮ್ಮ ಶತ್ರುಗಳನ್ನು ನಮ್ಮಿಂದ ದೂರವಾಗಿ ಕರೆದುಕೊಂಡುಹೋಗಿ ಸೇರಿಸು. ನದಿಗಳನ್ನು ಅಂಬಿಗನು ದೋಣಿಯಿಂದ ಸುಲಭವಾಗಿ ದಾಟಿಸುವಂತೆ ನಮ್ಮನ್ನು ಅವರ ಉಪದ್ರವಗಳಿಂದ ದಾಟಿಸು. ನಮ್ಮ ಪಾಪವು ನಾಶವಾಗಲಿ.

English Translation

Your countenance is turned to all sides, send off our adversaries, as if in a ship, (to the opposite shore) : may our sin be repented of.

ವಿಶೇಷವಿಷಯಗಳು

**ದ್ವಿಷೋ ನೋ ನಾವೇವ ಅತಿಪಾರಯ**—ಎಂಬ ವಾಕ್ಯಕ್ಕೆ ಮೇಲೆ ಹೇಳಿರುವ ಎರಡು ವಿಧವಾದ ಅನ್ವಯಗಳಲ್ಲಿ ಮೊದಲನೆಯದೇ ಸಂದರ್ಭಕ್ಕೆ ಹೆಚ್ಚು ಹೊಂದಿಕೊಳ್ಳುತ್ತದೆ. ಆಳವಾದುದೂ, ಪ್ರವಾಹದಿಂದ ಕೂಡಿದುದೂ, ದುಷ್ಟವಾದ ಜಲಚರಗಳಿಂದ ತುಂಬಿದುದೂ ಆದ ನದಿಯನ್ನು ಅಂಬಿಗನ ಸಹಾಯವಿಲ್ಲದೇ ಯಾವ ರೀತಿ ದಾಟಲು ಸಾಧ್ಯವಿಲ್ಲವೋ ಅದೇರೀತಿ ಶತ್ರುಗಳ ಗುಂಪಿನಿಂದ ತಪ್ಪಿಸಿಕೊಂಡು ದೂರವಾಗಿರಬೇಕಾದರೆ ಅಗ್ನಿಯ ಸಹಾಯವು ಅತ್ಯವಶ್ಯಕವಾಗಿರುವುದರಿಂದ ಈ ಉಪಮಾನವನ್ನು ಕೊಟ್ಟು ಅಂಬಿಗನು ಪ್ರಯಾಣಿಕರನ್ನು ನದಿಯ ಮೇಲೆ ದೋಣಿಯ ಮೂಲಕ ಸಾಗಿಸುವಂತೆ ನಮ್ಮನ್ನು ನೀನು ಶತ್ರುಗಳಿಂದ ದಾಟಿಸಿ ಶತ್ರುರಹಿತವಾದ ದೂರದೇಶಕ್ಕೆ ಕರೆದುಕೊಂಡು ಹೋಗು ಎಂದು ಪ್ರಾರ್ಥಿಸಿದೆ.

ವ್ಯಾಕರಣಪ್ರಕ್ರಿಯಾ

**ದ್ವಿಷಃ**—ದ್ವಿಷ ಅಪ್ರೀತೌ ಧಾತು. **ಕ್ವಿಪ್ ಚ**—ಎಂಬುದರಿಂದ ಇದಕ್ಕೆ ಕ್ವಿಪ್ ಪ್ರತ್ಯಯ. ಕ್ವಿಪಿನಲ್ಲಿ ಸರ್ವಲೋಪ. ದ್ವಿಷ್ ಶಬ್ದವಾಗುತ್ತದೆ. ದ್ವಿತೀಯಾಬಹುವಚನಾಂತರೂಪ.

**ನಾವಾ**—ನೌ ಶಬ್ದ ಔಕಾರಾಂತಸ್ತ್ರೀಲಿಂಗ. ಇದಕ್ಕೆ ತೃತೀಯಾವಿಭಕ್ತಿ ಟಾ ಪರವಾದಾಗ ಆವಾದೇಶ. ಏಕಾಚಾದ ಶಬ್ದವಾದುದರಿಂದ **ಸಾವೇಕಾಚಸ್ತೃತೀಯಾದಿಃ**—(ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪಾರಯ**—ಪಾರ ತೀರ ಕರ್ಮಸಮಾಪ್ತೌ. ಧಾತು. ಚುರಾದಿ. **ಸತ್ಯಾಪಪಾಶ**—(ಪಾ. ಸೂ. ೩-೧-೨೫) ಎಂಬುದರಿಂದ ಇದಕ್ಕೆ ಸ್ವಾರ್ಥದಲ್ಲಿ ಣಿಚ್ ಬರುತ್ತದೆ. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. ಶಪ್ ವಿಕರಣ. ತನ್ನಿಮಿತ್ತವಾಗಿ ಣಿಚಿಗೆ ಗುಣ ಅಯಾದೇಶ. **ಅತೋಹೇಃ**—(ಪಾ. ಸೂ. ೬-೪-೧೦೫) ಎಂಬುದರಿಂದ ಹಿಗೆ ಲುಕ್. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ**— ಸೂತ್ರದಿಂದ ನಿಘಾತ ಸ್ವರ ಬರುತ್ತದೆ. ॥ ೭ ॥



ಸಂಹಿತಾಪಾಠಃ

ಸ ನಃ ಸಿಂಧುಮಿವ ನಾವಯಾತಿ ಪರ್ಷಾ ಸ್ವಸ್ತಯೇ ।
ಅಪ ನಃ ಶೋಶುಚದಘಂ ॥ ೮ ॥

ಪದಪಾಠಃ

ಸಃ । ನಃ । ಸಿಂಧುಂಽ ಇವ । ನಾವಯಾ । ಅತಿ । ಪರ್ಷ । ಸ್ವಸ್ತಯೇ ।

ಅಪ । ನಃ । ಶೋಶುಚತ್ । ಅಘಂ । ॥ ೮ ॥

ಸಾಯಣಭಾಷ್ಯಂ

ಪೂರ್ವೋಕ್ತ ಏವಾರ್ಥಃ ಪುನರಪಿ ದಾರ್ಢ್ಯಾಯ ಪ್ರಾರ್ಥ್ಯತೇ । ಹೇ ಅಗ್ನೇ ಸ ತ್ವಂ ನೋಽಸ್ಮಾನ್ನಾವಯಾ ನಾವಾ ಸಿಂಧುಮಿವ ನದೀಮಿವ ಸ್ವಸ್ತಯೇ ಕ್ಷೇಮಾರ್ಥಮತಿಪರ್ಷ । ಶತ್ರೂನತಿಕ್ರಮಯ್ಯ ಪಾಲಯ । ಶತ್ರುರಹಿತಂ ಪ್ರದೇಶಮಸ್ಮಾನ್ಪ್ರಾಪಯೇತ್ಯರ್ಥಃ । ತ್ವತ್ಪ್ರಸಾದಾನ್ನೋಽಸ್ಮಾಕಮಘಂ ಪಾಪಂ ಚಾಪ ಶೋಶುಚತ್ । ಅಸ್ಮತ್ತೋಽಪಕ್ರಮ್ಯಾಸ್ಮಚ್ಛತ್ರುಃ ಶೋಕಯುಕ್ತೋ ಭವತು॥ ನಾವಯಾ । ಆಜಯೋಜಯೋರಾವಂ ಚೋಪಸಂಖ್ಯಾನಂ । ಮ. ೭-೧-೩೯-೧ । ಇತಿ ತೃತೀಯಾಯಾ ಅಯಾರಾದೇಶಃ । ಉಪೋತ್ತಮಂ ರಿತಿ । ಪಾ. ೬-೧-೨೧೭। ಇತ್ಯಕಾರಸ್ಯೋದಾತ್ತತ್ವಂ। ಪರ್ಷ । ಪೄ ಪಾಲನಪೂರಣಯೋಃ। ಲೋಟಿ ಬಹುಲಂ ಛಂದಸೀತಿ ಶಪಃ ಶ್ಲೋರಭಾವಃ । ಸಿಬ್ಬಹುಲಂ ಲೇಟೀತಿ ಬಹುಲವಚನಾತ್ಸಿಪ್ । ಗುಣಃ ದ್ವ್ಯಚೋಽತಸ್ತಿಙ ಇತಿ ದೀರ್ಘತ್ವಂ ॥

ಪ್ರತಿಪದಾರ್ಥ

**ಸಃ**—(ಎಲೈ ಅಗ್ನಿಯೇ) ಅಂತಹ ನೀನು । **ನಃ**—ನಮ್ಮನ್ನು। **ನಾವಯಾ**—ದೋಣಿಯಿಂದ (ಅಂಬಿಗನು) **ಸಿಂಧುಂ ಇವ**—ನದಿಯನ್ನು (ದಾಟಿಸುವಂತೆ) । **ಸ್ವಸ್ತಯೇ**—( ನಮ್ಮ ) ಕ್ಷೇಮಕ್ಕಾಗಿ । **ಅತಿ ಪರ್ಷ**—(ನಮ್ಮ ಶತ್ರುಗಳನ್ನುದಾಟಿಸಿ) ಶತ್ರುರಹಿತವಾದ ದೇಶಕ್ಕೆ ಕರೆದುಕೊಂಡುಹೋಗಿ ಸೇರಿಸು। **ನಃ**—ನಮ್ಮ। **ಅಘಂ**—ಪಾಪವು। **ಅಪ ಶೋಶುಚತ್**—ನಾಶವಾಗಲಿ. ಅಥವಾ ನಮ್ಮಿಂದ ದೂರಸರಿದು ನಮ್ಮ ಶತ್ರುವಿಗೆ ದುಃಖವನ್ನುಂಟುಮಾಡಲಿ।

ಭಾವಾರ್ಥ

ಎಲೈ ಅಗ್ನಿಯೇ, ನೀನು ಸಕಲ ಕಲ್ಯಾಣಗುಣವುಳ್ಳವನು. ನಮ್ಮನ್ನು ನಮ್ಮ ಶತ್ರುಗಳಿಂದ ರಕ್ಷಿಸು. ನದಿಯನ್ನು ಅಂಬಿಗನು ದೋಣಿಯಿಂದ ಸುಲಭವಾಗಿ ದಾಟಿಸುವಂತೆ ನಮ್ಮನ್ನು ಸುಲಭವಾಗಿ ಶತ್ರುರಹಿತವಾದ ಪ್ರದೇಶಕ್ಕೆ ಕರೆದುಕೊಂಡುಹೋಗಿ ಸೇರಿಸು. ನಮ್ಮ ಪಾಪವು ನಾಶವಾಗಲಿ.

## English Translation

Convey us in a ship across the sea, for our welfare : may our sin be repented of.

॥ ವಿಶೇಷವಿಷಯಗಳು ॥

ಹಿಂದಿನ ಋಕ್ಕಿನಲ್ಲಿರುವ ಅಭಿಪ್ರಾಯವನ್ನೇ ಈ ಋಕ್ಕಿನಲ್ಲಿಯೂ ಹೇಳಿದೆ.

**ಅತಿ ಪರ್ಷ—ಅತಿಪಾರಯ.** ದಾಟಿಸು, ಸುರಕ್ಷಿತವಾದ ಪ್ರದೇಶಕ್ಕೆ ಕರೆದುಕೊಂಡುಹೋಗು. ಪಾಪದಿಂದಲೂ, ದುಃಖದಿಂದಲೂ, ಶತ್ರುಗಳಿಂದಲೂ ಬಿಡಿಸಿ ದೂರವಾಗಿಯೂ ಸುರಕ್ಷಿತವಾಗಿಯೂ ಇರುವ ಪ್ರದೇಶಕ್ಕೆ ಕರೆದುಕೊಂಡು ಹೋಗು ಎಂದು ಪ್ರಾರ್ಥಿಸುವ ಕಾಲಗಳಲ್ಲೆಲ್ಲಾ ದೇವತೆಗಳ ರಕ್ಷಣೆಯನ್ನು ದೋಣಿಗೆ ಹೋಲಿಸಿರುವುದು ಎಲ್ಲಾ ಋಷಿಗಳ ಕೃತಿಗಳಲ್ಲೂ ಇರುವ ಒಂದು ಸಮಾನವಾದ ಅಂಶವಾಗಿದೆ.

**ಸ ನಃ ಪರ್ಷದತಿ ದುರ್ಗಾಣಿ ವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ ।**
(ಋ. ಸಂ. ೧-೯೯-೧)

**ಸ ನೋ ವಿಶ್ವಾ ಅತಿ ದ್ವಿಷಃ ಪರ್ಷನ್ನಾವೇವ ಸುಕ್ರತುಃ**
(ಋ. ಸಂ. ೫-೨೫-೯)

**ಇತ್ಥಾ ಗೃಣಂತೋ ಮಹಿನಸ್ಯ ಶರ್ಧೋಽಪೋ ನ ನಾವಾ ದುರಿತಾ ತರೇಮ ।**
(ಋ. ಸಂ. ೬-೬೮-೮)

**ಋತಸ್ಯ ಮಿತ್ರಾವರುಣಾ ಪಥಾ ವಾಮಪೋ ನ ನಾವಾ ದುರಿತಾ ತರೇಮ ।**
(ಋ. ಸಂ. ೭-೬೫-೩)

ಇತ್ಯಾದಿ ಅನೇಕ ಕಡೆಗಳಲ್ಲಿ ದುರಿತವನ್ನೂ ಶತ್ರುವನ್ನೂ ಆಳವಾದ ಜಲಪ್ರವಾಹಕ್ಕೂ, ದೇವತೆಗಳ ಸಹಾಯವನ್ನು ದೋಣಿಗೂ ಹೋಲಿಸಿರುವುದು ಅತ್ಯುಚಿತವಾದ ಉಪಮಾನವಾಗಿದೆ. ಪ್ರಕೃತದಲ್ಲಿ **ಅಘವೂ** ಶತ್ರುಪ್ರಾಯವಾಗಿರುವುದರಿಂದ ಅಂತಹ **ಅಘವನ್ನು** ನಾಶಮಾಡಿ ಅಗ್ನಿಯ ರಕ್ಷಣೆಗೆ ಅರ್ಹರಾಗುವಂತೆ ಶುದ್ಧರನ್ನಾಗಿ ಮಾಡಬೇಕೆಂದೂ ಅದಕ್ಕೆ ಅಗ್ನಿಯ **ನೌಕಾರೂಪವಾದ** ಅನುಗ್ರಹವೂ ಸಹಾಯವೂ ಅತ್ಯವಶ್ಯವೆಂದೂ ಪ್ರಾರ್ಥಿಸಿದೆ.

**ಸ್ವಸ್ತಯೇ—ಸ್ವಸ್ತೀತ್ಯವಿನಾಶಿನಾಮ । ಅಸ್ತಿರಭಿಪೂಜಿತಃ ಸು ಅಸ್ತೀತಿ ।** ನಾಶರಹಿತವಾಗಿರುವುದಕ್ಕೆ **ಸ್ವಸ್ತಿ**ಯೆಂದು ಪ್ರಸಿದ್ಧವಾಗಿದೆ. ಶ್ರೇಷ್ಠವಾದುದೂ, ಗೌರವಯುತವಾದುದೂ, ಶಾಶ್ವತವಾದುದೂ ಆದ **ಅಸ್ತಿತ್ವ** ಎಂದರೆ ಜೀವನವೆಂದು ತಾತ್ಪರ್ಯ (ನಿ. ೩-೨೧). ಸೌಭಾಗ್ಯದಿಂದ ಕೂಡಿದ ಜೀವನ ಎಂದು ನಿರುಕ್ತಕಾರರು ವಿವರಿಸಿ,

**ಸ್ವಸ್ತಿರಿದ್ಧಿ ಪ್ರಪಥೇ ಶ್ರೇಷ್ಠಾ ರೇಕ್ಣಸ್ವತ್ಯಭಿ ಯಾ ವಾಮಮೇತಿ ।**
(ಋ. ಸಂ. ೧೦-೬೩-೧೬)

ಎಂಬ ಋಕ್ಕನ್ನು ಉದಹರಿಸಿ ಇಲ್ಲಿ **ಸ್ವಸ್ತಿ**ಯೆಂಬ ಪದದ ಸ್ವಾರಸ್ಯವನ್ನು ತಿಳಿಸುತ್ತಾರೆ.

**ಸ್ವಸ್ತಿ ನಃ ಪಥ್ಯಾಸು ಧನ್ವಸು ಸ್ವಸ್ತ್ಯ೧ಪ್ಸು ವೃಜನೇ ಸ್ವರ್ವತಿ ।**
**ಸ್ವಸ್ತಿ ನಃ ಪುತ್ರಕೃಥೇಷು ಯೋನಿಷು ಸ್ವಸ್ತಿ ರಾಯೇ ಮರುತೋ ದಧಾತನ ।**
(ಋ. ಸಂ. ೧೦-೬೩-೧೫)

ಎಂಬ ಸನ್ನಿವೇಶದಲ್ಲಿ ಜೀವನದ ಸಮಸ್ತವಿಧವಾದ ಕಲ್ಯಾಣವನ್ನೂ ಅಪೇಕ್ಷಿಸಿ ಪ್ರಾರ್ಥಿಸುವಂತೆ ಪ್ರಕೃತದಲ್ಲಿಯೂ ಸಹ ಸಮಸ್ತವಿಧವಾದ ಕಲ್ಯಾಣಕ್ಕಾಗಿ ನಮ್ಮನ್ನು **ಅಘರಹಿತರನ್ನಾಗಿ** ಮಾಡು ಎಂದು ಅಗ್ನಿಯನ್ನು ಪ್ರಾರ್ಥಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ನಾವಯಾ—**ನೌ ಶಬ್ದಕ್ಕೆ ತೃತೀಯಾ ಏಕವಚನ ಪರವಾದಾಗ **ಅಜ್ಯಾಜಯೋರಾಂ ಚೋಪಸಂಖ್ಯಾನಮ್—**(ಪಾ. ಮ. ೭-೧-೩೯-೧) ಎಂಬ ವಚನದಿಂದ ಅದಕ್ಕೆ ಆಯಾದಾದೇಶ. ಔಕಾರಕ್ಕೆ ಆವಾದೇಶ. **ಉಪೋತ್ತಮಂ ರಿತಿ—**(ಪಾ. ಸೂ. ೬-೧-೨೧೭) ಎಂಬುದರಿಂದ ಆಕಾರಕ್ಕೆ ಉದಾತ್ತಸ್ವರ ಬರುತ್ತದೆ.

**ಪರ್ಷ—**ಪೄ ಪಾಲನಪೂರಣಯೋಃ ಧಾತು. ಜುಹೋತ್ಯಾದಿ. ಲೋಟ್ ಮಧ್ಯಮಪುರುಷ ಏಕವಚನ ದಲ್ಲಿ **ಸೇರ್ಹ್ಯಪಿಚ್ಚ—**ಎಂಬುದರಿಂದ ಹಿ ಆದೇಶ. **ಬಹುಲಂ ಛಂದಸಿ—**ಎಂಬುದರಿಂದ ಶಪಿಗೆ ಶ್ಲು ಆದೇಶ ಬರುವದಿಲ್ಲ. **ಸಿಬ್ಬಹುಲಂ ಲೇಟಿ—**(ಪಾ. ಸೂ. ೩-೧-೩೪) ಎಂಬಲ್ಲಿ ಬಹುಲಗ್ರಹಣ ಸಾಮರ್ಥ್ಯದಿಂದ ಇಲ್ಲಿಯೂ

ಶಪ್ ಬರುತ್ತದೆ. ಶಪ್‌ನಿಮಿತ್ತವಾಗಿ **ಸಾರ್ವಧಾತುಕಾರ್ಧಧಾತುಕಯೋಃ**—(ಪಾ. ಸೂ. ೭-೩-೮೪) ಎಂಬುದರಿಂದ ಧಾತುವಿನ ಇಕಿಗೆ ಗುಣ. **ಉರಣ್ರಪರಃ**—ಎಂಬುದರಿಂದ ರಪರವಾಗಿ ಬರುತ್ತದೆ. **ಅತೋ ಹೇಃ**—ಎಂಬುದರಿಂದ ಹಿಗೆ ಲುಕ್. **ದ್ವ್ಯಚೋಽತಸ್ತಿಙಃ**—(ಪಾ. ಸೂ. ೬-೩-೧೩೫) ಎಂಬುದರಿಂದ ಧಾತುವು ದ್ವ್ಯಚ್ಕವಾಗಿರುವುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ. ॥ ೮ ॥

---:o:---

# ತೊಂಭತ್ತೆಂಟನೆಯ ಸೂಕ್ತವು

**ವೈಶ್ವಾನರಸ್ಯೇತಿ ತೃಚಂ ಪಂಚಮಂ ಸೂಕ್ತಂ ಕುತ್ಸಸ್ಯಾರ್ಷಂ ತ್ರೈಷ್ಟುಭಂ । ವೈಶ್ವಾನರಗುಣಕೋಽಗ್ನಿಃ ಶುದ್ಧಾಗ್ನಿರ್ವಾ ದೇವತಾ । ತಥಾ ಚಾನುಕ್ರಾಂತಂ ॥ ವೈಶ್ವಾನರಸ್ಯ ತೃಚಂ ವೈಶ್ವಾನರೀಯಮಿತಿ । ವ್ಯೂಢಸ್ಯ ಚತುರ್ಥೇಽಹನ್ಯಾಗ್ನಿಮಾರುತ ಇದಂ ಸೂಕ್ತಂ ವೈಶ್ವಾನರೀಯನಿವಿದ್ಧಾನಂ । ವ್ಯೂಳ್ಹಶ್ಚೇದಿತಿ ಖಂಡೇ ಸೂತ್ರಿತಂ । ವೈಶ್ವಾನರಸ್ಯ ಸುಮತೌ ಕ ಈಂ ವ್ಯಕ್ತಾಃ ॥ ಆ. ೮-೮ । ಇತಿ ॥**

ಅನುವಾದವು—ವೈಶ್ವಾನರಸ್ಯ ಎಂಬ ಈ ಸೂಕ್ತವು ಹದಿನೈದನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಕುತ್ಸನು ಋಷಿಯು. ತ್ರಿಷ್ಟುಪ್ ಛಂದಸ್ಸು. ವೈಶ್ವಾನರನಾಮಕನಾದ ಅಗ್ನಿಯು ಅಥವಾ ಕೇವಲಾಗ್ನಿಯು ದೇವತೆಯು. ಅನುಕ್ರಮಣಿಕೆಯಲ್ಲಿ—**ವೈಶ್ವಾನರಸ್ಯ ತೃಚಂ ವೈಶ್ವಾನರೀಯಮಿತಿ** ಎಂದು ಹೇಳಿರುವುದು. ವ್ಯೂಢವೆಂಬ ಯಾಗದ ನಾಲ್ಕನೆಯ ದಿವಸದಲ್ಲಿ ವೈಶ್ವಾನರೀಯ ನಿವಿದ್ಧಾನಮಂತ್ರಗಳನ್ನು ಪಠಿಸುವಾಗ ಅಗ್ನಿಮಾರುತಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ವ್ಯೂಳ್ಹಶ್ಚ** ಎಂಬ ಖಂಡದಲ್ಲಿ **ವೈಶ್ವಾನರಸ್ಯ ಸುಮತೌ ಕ ಈಂ ವ್ಯಕ್ತಾಃ** ಎಂಬ ಸೂತ್ರದಿಂದ ನಿರ್ದಿಷ್ಟವಾಗಿರುವುದು. (ಆ. ೮-೮)

---:o:---

॥ ಓಂ ॥

## ಸೂಕ್ತ—೯೮

॥ ಮಂಡಲ—೧ ॥ ಅನುವಾಕ—೧೫ ॥ ಸೂಕ್ತ—೯೮ ॥

॥ ಅಷ್ಟಕ— ೧ ॥ ಅಧ್ಯಾಯ— ೭ ॥ ವರ್ಗ— ೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ– ೩ ॥

॥ ಋಷಿಃ—ಕುತ್ಸ ಆಂಗಿರಸಃ ॥

॥ ದೇವತಾ—ಅಗ್ನಿರ್ವೈಶ್ವಾನರೋ ವಾ॥

॥ ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ವೈಶ್ವಾನರಸ್ಯ ಸುಮತೌ ಸ್ಯಾಮ ರಾಜಾ ಹಿ ಕಂ ಭುವನಾನಾ-
ಮಭಿಶ್ರೀಃ।
ಇತೋ ಜಾತೋ ವಿಶ್ವಮಿದಂ ವಿ ಚಷ್ಟೇ ವೈಶ್ವಾನರೋ ಯತ-
ತೇ ಸೂರ್ಯೇಣ ॥೧॥

ಪದಪಾಠಃ

ವೈಶ್ವಾನರಸ್ಯ । ಸುऽಮತೌ । ಸ್ಯಾಮ । ರಾಜಾ । ಹಿ । ಕಂ । ಭುವನಾನಾಂ ।
ಅಭಿऽಶ್ರೀಃ ।
ಇತಃ । ಜಾತಃ । ವಿಶ್ವಂ । ಇದಂ । ವಿ । ಚಷ್ಟೇ । ವೈಶ್ವಾನರಃ । ಯತತೇ ।
ಸೂರ್ಯೇಣ ॥ ೧ ॥

॥ ಸಂಹಿತಾಪಾಠಃ ॥

ವೈಶ್ವಾನರಸ್ಯ ವಿಶ್ವೇಷಾಂ ನರಾಣಾಂ ಲೋಕಾಂತರನೇತೃತ್ವೇನ ಸ್ವಾಮಿತ್ವೇನ ವಾ ಸಂಬಂಧಿನೋಽಗ್ನೇಃ ಸುಮತೌ ಶೋಭನಾಯಾಮನುಗ್ರಹಾತ್ಮಿಕಾಯಾಂ ಬುದ್ಧೌ ಸ್ಯಾಮ । ಅನುಗ್ರಾಹ್ಯತ್ವೇನ ವರ್ತಮಾನಾ ಭವೇಮ । ಹಿ ಕಮಿತ್ಯೇತದ್ದ್ವಿಶಬ್ದಾರ್ಥೇ । ಸ ಹಿ ವೈಶ್ವಾನರೋಽಭಿಶ್ರೀರಭಿಶ್ರಯಣೀಯ ಆಭಿಮುಖ್ಯೇನ ಸೇವಿತವ್ಯಃ ಸನ್ಭುವನಾನಾಂ ಸರ್ವೇಷಾಂ ಭೂತಜಾತಾನಾಂ ರಾಜಾ ಸ್ವಾಮೀ ಭವತಿ ಯೋ ವೈಶ್ವಾನರೋಽಗ್ನಿರಿತೋಽಸ್ಮಾದರಣಿದ್ವಯಾಜ್ಜಾತಮಾತ್ರ ಏವೇದಂ ಸರ್ವಂ ಜಗದ್ವಿ ಚಷ್ಟೇ ವಿಶೇಷೇಣ ಪಶ್ಯತಿ ಪ್ರಾತರುದ್ಯತಾ ಸೂರ್ಯೇಣ ಚ ಯತತೇ ಸಂಯತತೇ ಸಂಗಚ್ಛತೇ । ಉದ್ಯಂತಂ ವಾವಾದಿತ್ಯಮಗ್ನಿರನುಸಮಾರೋಹತಿ। ತೈ. ಬ್ರಾ. ೨-೧-೩-೧೦ । ಇತಿ ತೈತ್ತಿರೀಯಕಂ। ಯದ್ವಾ ಪಾರ್ಥಿವಸ್ಯಾಗ್ನೇಸ್ತೇಜಾಂಸ್ಯುದ್ಗಚ್ಛಂತಿ । ಸೂರ್ಯಕಿರಣಾಶ್ಚಾಧೋಮುಖಂ ಪ್ರಸರಂತಿ । ತಯೋಃ ಸಂಗಮನಂ ದೃಷ್ಟ್ವಾ ವೈಶ್ವಾನರೋ ಯತತೇ ಸೂರ್ಯೇಣೇತ್ಯೃಷಿರ್ಬ್ರೂತೇ । ತಥಾ ಚ ಯಾಸ್ಕಃ । ಅಮುತೋಽಮುಷ್ಯ ರಶ್ಮಯಃ ಪ್ರಾದುರ್ಭವಂತೀತೋಽಸ್ಯಾರ್ಚಿಷಸ್ತಯೋರ್ಭಾಸೋಃ ಸಂಸಂಗಂ ದೃಷ್ಟ್ವೈವಮವಕ್ಷ್ಯತ್ । ನಿ. ೭-೨೩ । ಇತಿ । ಏವಂಭೂತಸ್ಯ ಮಹಾನುಭಾವಸ್ಯ ವೈಶ್ವಾನರಸ್ಯ ಸುಮತೌ ಸ್ಯಾಮೇತಿ ಸಂಬಂಧಃ ॥ ವೈಶ್ವಾನರಸ್ಯ ವಿಶ್ವೇಷಾಂ ನರಾಣಾಂ ಸಂಬಂಧೀ । ನರೇ ಸಂಜ್ಞಾಯಾಂ । ಪಾ. ೬-೩-೧೨೯ । ಇತಿ ಪೂರ್ವಪದಸ್ಯ ದೀರ್ಘತ್ವಂ । ತಸ್ಯೇದಮಿತ್ಯಣ್ । ಸುಮತೌ । ಶೋಭನಾ ಮತಿಃ ಸುಮತಿಃ । ತಾದೌ ಚೇತಿ ಗತೇಃ ಪ್ರಕೃತಿಸ್ವರೇ ಪ್ರಾಪ್ತೇ ಮನ್ಕ್ತಿನ್ನಿತ್ಯಾದಿನೋತ್ತರಪದಾಂತೋದಾತ್ತತ್ವಂ । ನನು ತತ್ರ ಕಾರಕಾದಿತ್ಯನುವೃತ್ತೇರ್ಗತೇರುತ್ತರಸ್ಯ ಕ್ತಿನೋ ನ ಪ್ರಾಪ್ನೋತಿ । ಏವಂ ತರ್ಹಿ ಮತಿರ್ಮನನಂ । ಭಾವೇ ಕ್ತಿನ್ । ಶೋಭನಂ ಮನನಂ ಯಸ್ಯಾಂ ಬುದ್ಧೌ ಸಾ ಸುಮತಿಃ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಚಷ್ಟೇ । ಚಕ್ಷಿಙ್ ವ್ಯಕ್ತಾಯಾಂ ವಾಚಿ । ಅಯಂ ಪಶ್ಯತಿಕರ್ಮಾ ಚ । ಅದಾದಿತ್ವಾಚ್ಛಪೋ ಲುಕ್ । ಸ್ಕೋಃ ಸಂಯೋಗಾದ್ಯೋರಿತಿ ಕಲೋಪಃ । ಯತತೇ । ಯತೀ ಪ್ರಯತ್ನೇ ॥

ಪ್ರತಿಪದಾರ್ಥ

**ವೈಶ್ವಾನರಸ್ಯ** – ಸಕಲಮಾನವರಿಗೂ ಒಡೆಯನಾದ ಅಗ್ನಿಯ । **ಸುಮತೌ**—ಅನುಗ್ರಹಾತ್ಮಕವಾದ ಬುದ್ಧಿಯಲ್ಲಿ । **ಸ್ಯಾಮ**—(ಅವನ ಅನುಗ್ರಹಕ್ಕೆ ಯೋಗ್ಯರಾಗಿ) ಇರೋಣ. । **ಹಿ ಕಂ**—ಏತಕ್ಕೆಂದರೆ (ಅವನು) । **ಅಭಿಶ್ರೀಃ**—ಪ್ರತ್ಯಕ್ಷವಾಗಿಯೂ ಪೂಜ್ಯನಾಗಿ । **ಭುವನಾನಾಂ**—ಸಕಲ ಭೂತಜಾತಗಳಿಗೂ । **ರಾಜಾ**—ಪ್ರಭುವಾಗಿದ್ದಾನೆ. । **ವೈಶ್ವಾನರಃ**—ಅಗ್ನಿಯು । **ಇತಃ**—ಈ ಅರಣಿಗಳಿಂದ । **ಜಾತಃ**—ಹುಟ್ಟಿದೊಡನೆಯೇ । **ಇದಂ ವಿಶ್ವಂ**— ಈ ಸಕಲಜಗತ್ತನ್ನು । **ವಿಚಷ್ಟೇ**— ವಿಶೇಷದೃಷ್ಟಿಯಿಂದ ಅವಲೋಕಿಸುತ್ತಾನೆ. । **ಸೂರ್ಯೇಣ (ಚ)**—ಸೂರ್ಯನೊಂದಿಗೂ । **ಯತತೇ**—ಸೇರಿಕೊಳ್ಳುತ್ತಾನೆ.

ಭಾವಾರ್ಥ

ಸಕಲಮಾನವರಿಗೂ ಒಡೆಯನಾದ ಅಗ್ನಿಯನ್ನು ಪೂಜಿಸಿ ಯಾವಾಗಲೂ ಅವನ ಬುದ್ಧಿಯು ಅನುಗ್ರಹಾತ್ಮಕವಾಗಿರುವಂತೆಯೂ ನಾವು ಆ ಅನುಗ್ರಹಕ್ಕೆ ಯೋಗ್ಯರಾಗಿರುವಂತೆಯೂ ವರ್ತಿಸೋಣ. ಆ ಅಗ್ನಿಯು ಪ್ರತ್ಯಕ್ಷವಾಗಿ ಸಕಲಭೂತಜಾತಗಳಿಗೂ ಪೂಜ್ಯನಾದ ಪ್ರಭುವಾಗಿದ್ದಾನೆ. ಅಗ್ನಿಯು ಅರಣಿಗಳಿಂದ ಉತ್ಪನ್ನನಾದೊಡ

ನೆಯೇ, ಸಕಲ ಜಗತ್ತನ್ನೂ ಸಹ ವಿಶೇಷದೃಷ್ಟಿಯಿಂದ ಅವಲೋಕಿಸುತ್ತಾನೆ. ಮತ್ತು ತನ್ನ ಜ್ವಾಲೆಯಪ್ರಸರಣದಿಂದ ಸೂರ್ಯನ ಕಿರಣಗಳೊಂದಿಗೆ ಸೇರಿಕೊಳ್ಳುತ್ತಾನೆ.

English Translation

May we continue in the favour of Vaiswanara, for verily he is the august sovereign of all beings ; as soon as generated from this (wood), he surveys the universe ; he accompanies the rising sun.

ವಿಶೇಷವಿಷಯಗಳು

|| ವೈಶ್ವಾನರಾಗ್ನಿಯಮಹಿಮೆ ||

**ಇದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ ।**
**ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ||**
(ಋ. ಸಂ. ೧-೧೬೪-೪೬).

**ಇಮಮೇವಾಗ್ನಿಂ ಮಹಾಂತಮಾತ್ಮಾನಮೇಕಮಾತ್ಮಾನಂ ಬಹುಧಾ ಮೇಧಾವಿನೋ ವದಂತಿ । ಅಗ್ನಿಃ ಸರ್ವಾ ದೇವತಾಃ ಇತಿ ಬ್ರಾಹ್ಮಣಮಪಿ ಭವತಿ.** (ನಿ. ೭-೧೮) ಮಹಾತ್ಮನೂ ವಿಶ್ವಾತ್ಮನೂ ಆದ ಈ ಅಗ್ನಿಯನ್ನೇ ಇಂದ್ರಾದಿ ಬೇರೆ ಬೇರೆ ಹೆಸರುಗಳಿಂದ ಉದ್ದೇಶಿಸಿ ಎಲ್ಲರೂ ಪೂಜಿಸುತ್ತಾರೆ. ಮತ್ತು ಬೇರೆ ಬೇರೆ ಸನ್ನಿವೇಶಗಳಲ್ಲಿ ರೂಪಾಂತರಗಳಿಂದ ಆವಿರ್ಭಸುವ ಎಲ್ಲಾ ಅಗ್ನ್ಯಂಶಗಳಿಗೂ ಈ ವೈಶ್ವಾನರಾಗ್ನಿಯೇ ಮೂಲ, ಉಳಿದ ರೂಪಗಳೆಲ್ಲಾ ಈ ವೈಶ್ವಾನರಾಗ್ನಿಯ ಶಾಖೆಗಳು ಎಂದೂ ಸಹ ಶ್ರುತಿವಾಕ್ಯಗಳಿವೆ.

**ವಯಾ ಇದಗ್ನೇ ಅಗ್ನಯಸ್ತೇ ಅನ್ಯೇ ತ್ವೇ ವಿಶ್ವೇ ಅಮೃತಾ ಮಾದಯಂತೇ ।**
**ವೈಶ್ವಾನರ ನಾಭಿರಸಿ ಕ್ಷಿತೀನಾಂ ಸ್ಥೂಣೇವ ಜನಾ॒ ಉಪಮಿದ್ಯಯಂಥ ||**
(ಋ. ಸಂ. ೧-೫೯-೧).

ವೈಶ್ವಾನರಾಗ್ನಿಯೇ ಜೀವನಮಾನವಾದಿ ಸಕಲ ಜಗತ್ತಿನ ಸ್ಥಿತಿಗತಿಗಳಿಗೂ ಹೇತುಭೂತನಾಗಿ ವಿಶ್ವದ ವ್ಯವಹಾರಗಳಿಗೆಲ್ಲಾ ನೇತೃವಾಗಿರುತ್ತಾನೆ ಆದುದರಿಂದ ಆತ್ಮಕಲ್ಯಾಣವನ್ನೂ ಜಗತ್ಕಲ್ಯಾಣವನ್ನೂ ಅಪೇಕ್ಷಿಸುವ ಸಕಲ ಭೂತಗಳೂ ವಿಶ್ವಾತ್ಮನಾದ ಈ ವೈಶ್ವಾನರಾಗ್ನಿಯ ಸ್ವರೂಪವನ್ನು ಅರಿತು ಉಪಾಸನೆಯನ್ನು ಮಾಡಬೇಕು ಎಂಬುದಾಗಿ ಕರ್ಮಾನುಷ್ಠಾನಗಳನ್ನು ಬೋಧಿಸತಕ್ಕ ಶ್ರುತಿಗಳೂ ಆಧ್ಯಾತ್ಮಿಕವಾದ ಜ್ಞಾನವನ್ನು ಪದೇಶಿಸತಕ್ಕ ಶ್ರುತಿಗಳೂ ಒಂದೇ ವಿಧವಾಗಿ ವೈಶ್ವಾನರಾಗ್ನಿಯ ಉಪಾಸನೆಯ ಆವಶ್ಯಕತೆಯನ್ನು ತಿಳಿಸುತ್ತವೆ. **ವೈಶ್ವಾನರಸ್ಯ ಸುಮತೌ ಸ್ಯಾಮ** (ಋ.ಸಂ ೧-೯೮-೧) ಎಂದು ಋಗಾದಿ ಸಂಹಿತೆಗಳೂ, **ಸ ಯೋ ಹ್ಯೇತಮೇವಮಗ್ನಿಂ ವೈಶ್ವಾನರಂ ಪುರುಷವಿಧಂ ಪುರುಷೇಽಂತಃ ಪ್ರತಿಷ್ಠಿತಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ।** ಪುರುಷಾಂತರ್ಗತನೂ ಪುರುಷರೂಪನೂ ಆಗಿರುವ ಈ ವೈಶ್ವಾನರಾಗ್ನಿಯ ಸ್ವರೂಪವನ್ನು ತಿಳಿಯುವ ಸಕಲರೂ ಮೃತ್ಯುವನ್ನು ಜಯಿಸಿ ಪೂರ್ಣವಾದ ಆಯುಸ್ಸನ್ನು ಪಡೆಯುತ್ತಾರೆ (ಶ.ಬ್ರಾ.೧೦-೬-೧-೧೧) ಎಂದು ಶತಪಥಾದಿ ಬ್ರಾಹ್ಮಣಗಳೂ, **ಅಥ ಯ ಏತದೇವಂ ವಿದ್ವಾನಗ್ನಿಹೋತ್ರಂ ಜುಹೋತಿ ತಸ್ಯ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸು ಹುತಂ ಭವತಿ ।** ಹೀಗೆ ವೈಶ್ವಾನರಾಗ್ನಿಯ ಸ್ವರೂಪವನ್ನು ತಿಳಿದು ಯಾವ

ಪುರುಷನು ಅಗ್ನಿಹೋತ್ರವನ್ನು ನೆರವೇರಿಸುತ್ತಾನೆಯೋ ಅವನು ಸಕಲ ಭೂತಗಳಲ್ಲಿಯೂ ಸಕಲಲೋಕಗಳಲ್ಲಿಯೂ ಸಕಲವಾದ ಆತ್ಮಗಳಲ್ಲಿಯೂ ಹುತಮಾಡಿದಂತೆಯೇ (ಛಾ. ಉ. ೫.೨೪-೨) ಎಂಬುದಾಗಿ ಛಾಂದೋಗ್ಯಾದಿ ಉಪನಿಷತ್ತುಗಳೂ ವೈಶ್ವಾನರಾಗ್ನಿಯ ಉಪಾಸನೆಯ ಮಹತ್ತ್ವವನ್ನು ಹೇಳಿವೆ. ಆದುದರಿಂದ ಈ ದೇವತೆಯ ಸ್ವರೂಪವೇನು, ಕರ್ಮಾನುಷ್ಠಾನಕ್ಕೂ ಆಧ್ಯಾತ್ಮಿಕವಾದ ಜ್ಞಾನಸಂಪಾದನೆಗೂ ಈ ದೇವತೆಗೂ ಇರತಕ್ಕ ಸಂಬಂಧವೇನು ಎಂಬುದನ್ನು ಈ ಸಂದರ್ಭದಲ್ಲಿ ತಿಳಿಯಬೇಕಾದುದು ಅತ್ಯವಶ್ಯವಾಗಿರುತ್ತದೆ. ಪ್ರಕೃತವಾದ ಈ ಋಕ್ಕಿನಲ್ಲಿ **ರಾಜಾ ಹಿ ಕಂ ಭುವನಾನಾಮಭಿಶ್ರೀಃ ।** ವೈಶ್ವಾನರನು ಸಕಲಭೂತಗಳಿಗೂ ಪೂಜ್ಯನಾದ ಪ್ರಭುವಾಗಿದ್ದಾನೆಂದು ವರ್ಣಿಸಿದೆ. ಆದರೆ ಆ ವೈಶ್ವಾನರನು ಯಾರು ಎಂಬ ಪ್ರಶ್ನೆಯೂ ಜೊತೆಯಲ್ಲಿಯೇ ಹುಟ್ಟಿ ನಿರುಕ್ತಕಾರರು ಈ ಋಕ್ಕನ್ನೇ ವಿವರಿಸುವಾಗ ಅನೇಕ ಉದಾಹರಣೆಗಳನ್ನು ತೆಗೆದುಕೊಂಡು ವೈಶ್ವಾನರನು ಪಾರ್ಥಿವಾಗ್ನಿಯೆಂದು ನಿಷ್ಕರ್ಷೆಮಾಡಿರುತ್ತಾರೆ. ಅವರ ವಿವರಣೆಯು ಈ ರೀತಿಯಿದೆ.

**ವೈಶ್ವಾನರಃ ಕಸ್ಮಾದ್ವಿಶ್ವಾನ್ನರಾನ್ನಯತಿ ।**
**ವಿಶ್ವ ಏನಂ ನರಾ ನಯಂತೀತಿ ವಾ ।**
**ಅಪಿ ವಾ ವಿಶ್ವಾನರ ಏವ ಸ್ಯಾತ್ ಪ್ರತ್ಯೃತಃ ಸರ್ವಾಣಿ ಭೂತಾನಿ ತಸ್ಯ ವೈಶ್ವಾನರಃ ।**
(ನಿ. ೭-೨೧).

ಇವನು ಎಲ್ಲರಿಗೂ ನೇತೃವಾಗಿ ಮಾರ್ಗದರ್ಶಕನಾದುದರಿಂದಲೂ, ಅಥವಾ ಇವನನ್ನು ಎಲ್ಲರೂ ಯಜ್ಞದಲ್ಲಿ ಪ್ರಧಾನ ದೇವತೆಯಾಗಿ ಕರೆದೊಯ್ಯುವುದರಿಂದಲೂ ಅಥವಾ ಸರ್ವತ್ರ ವ್ಯಾಪಿಸಿ ಸಕಲ ಭೂತಗಳಲ್ಲಿಯೂ ಪ್ರವೇಶಿಸಿರುವುದರಿಂದಲೂ **ವೈಶ್ವಾನರಸ್ಯ ಸುಮತೌ ಸ್ಯಾಮ** ಎಂಬ ಪ್ರಕೃತವಾದ ಋಕ್ಕನ್ನು ವಿವರಿಸಿ ಈ ದೇವತೆಯ ಸ್ವರೂಪವನ್ನು ತಿಳಿಸಿದ್ದಾರೆ. **ಇತೋ ಜಾತಃ ಸರ್ವಮಿದಮಭಿಪಶ್ಯತಿ ವೈಶ್ವಾನರಃ ಸಂಯತತೇ ಸೂರ್ಯೇಣ ರಾಜಾ ಯಃ ಸರ್ವೇಷಾಂ ಭೂತಾನಾಮಭಿಶ್ರಯಣೀಯಸ್ತಸ್ಯ ವಯಂ ವೈಶ್ವಾನರಸ್ಯ ಕಲ್ಯಾಣ್ಯಾಂ ಮತೌ ಸ್ಯಾಮೇತಿ ।** ಸಕಲರಿಗೂ ಪ್ರಭುವಾಗಿರುವುದರಿಂದಲೂ, ಸರ್ವರಿಗೂ ಆಶ್ರಯನಾಗಿರುವುದರಿಂದಲೂ ನಾವೆಲ್ಲರೂ ಈ ವೈಶ್ವಾನರನ ಅನುಗ್ರಹಾತ್ಮಕವಾದ ದೃಷ್ಟಿಗೆ ಯೋಗ್ಯರಾಗಿರೋಣ. ಪಾರ್ಥಿವಾಗ್ನಿಯ ರೂಪದಲ್ಲಿ ಉತ್ಪನ್ನನಾಗಿ ಇವನು ವಿಶ್ವವನ್ನೆಲ್ಲಾ ವೀಕ್ಷಿಸುತ್ತಾನೆ ಮತ್ತು ಸೂರ್ಯನೊಡನೆ ಒಂದಾಗುತ್ತಾನೆ ಎಂದು ಋಕ್ಕಿನ ಅರ್ಥವನ್ನು ವಿವರಿಸಿ,

**ತತ್ಕೋ ವೈಶ್ವಾನರಃ ।** ಈ ವೈಶ್ವಾನರನು ಯಾರು (ನಿ.೭-೨೨) ಎಂಬ ಪ್ರಶ್ನೆಯನ್ನು ಹಾಕಿ ಆಗಮಗಳ ವಿಪ್ರತಿಪತ್ತಿಯನ್ನು ಚರ್ಚಿಸಿ ತಾವು ಕೊನೆಯಲ್ಲಿ ನಿಷ್ಕರ್ಷವಾದ ಅಭಿಪ್ರಾಯವನ್ನು ತಿಳಿಸುತ್ತಾರೆ. ತಮ್ಮ ಚರ್ಚೆಯಲ್ಲಿ ಮೊದಲನೆಯದಾಗಿ ವೈಶ್ವಾನರನು ಅಂತರಿಕ್ಷಸ್ಥನಾದ ದೇವತೆಯೆಂದು ನಿರ್ದೇಶಿಸುವ ಅಭಿಪ್ರಾಯಗಳಲ್ಲಿರುವ ದೋಷವನ್ನು ತಿಳಿಸುತ್ತಾರೆ.

**ಮಧ್ಯಮ ಇತ್ಯಾಚಾರ್ಯಾಃ । ವರ್ಷಕರ್ಮಣಾ ಹ್ಯೇನಂ ಸ್ತೌತಿ । ಪ್ರ ನೂ ಮಹಿತ್ವಂ ವೃಷಭಸ್ಯ ವೋಚಂ ।** (ಋ. ಸಂ. ೧-೫೯-೬) ಎಂಬ ಋಕ್ಕಿನಲ್ಲಿ ವರ್ಣಿಸುವಂತೆ ವೃಷ್ಟಿಕರ್ಮಕ್ಕೆ ಹೇತುಭೂತನೆಂದು ಪ್ರಶಂಸಿಸಿರುವುದರಿಂದ ಅಂತರಿಕ್ಷಸ್ಥನಾದ ದೇವತೆಯೆಂದು ಆಚಾರ್ಯರು ಅಭಿಪ್ರಾಯಪಡುವರು. ಅಲ್ಲದೇ,

ಏಷಾಂ ಲೋಕಾನಾಂ ರೋಹೇಣ ಸವನಾನಾಂ ರೋಹ ಆಮ್ನಾತೋ ರೋಹಾತ್ ಪ್ರತ್ಯ**ವರೋಹಶ್ಚಿಕೀರ್ಷಿತಸ್ತಾಮನುಕೃತಿಂ ಹೋತಾಗ್ನಿಮಾರುತೇ ಶಸ್ತ್ರೇ ವೈಶ್ವಾನರೀಯೇಣ ಸೂಕ್ತೇನ ಪ್ರತಿಪದ್ಯತೇ ।**

**ಸೂರ್ಯಪ್ರಸೂತಾವಗ್ನೀ ತು ದೃಷ್ಟ್ವಾ ಪಾರ್ಥಿವಮಧ್ಯಮೌ ।**
**ಏತೇಷಾಮೇವ ಲೋಕಾನಾಂ ತ್ರಯಾಣಾಮಧ್ವರೇಽಧ್ವರೇ ॥**
**ರೋಹಾತ್ಪ್ರತ್ಯವರೋಹೇಣ ಚಿಕೀರ್ಷನ್ನಗ್ನಿಮಾರುತಂ ।**
**ಶಸ್ತ್ರಂ ವೈಶ್ವಾನರೀಯೇಣ ಸೂಕ್ತೇನ ಪ್ರತಿಪದ್ಯತೇ ॥**

( ಬೃ. ದೇ. ೧-೧೧೧ ; ೧-೧೧೨ )

ಆಹುತಿಗಳ ಆಧಿಕ್ಯವು ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕ ಎಂಬ ಆರೋಹಣಕ್ರಮವನ್ನನುಸರಿಸಬೇಕೆಂಬ ವಿಧಿವಾಕ್ಯವಿದೆ. ಆರೋಹಣಕ್ರಮವಾದಮೇಲೆ ಅವರೋಹಣ ಕ್ರಮವನ್ನು ನಿರ್ವಹಿಸಬೇಕು. ಈ ಸರಣಿಯನ್ನನುಸರಿಸಿ ಯಜ್ಞಕರ್ತನು ಅಗ್ನಿಯನ್ನೂ ಮರುತ್ತುಗಳನ್ನೂ ಉದ್ದೇಶಿಸಿ ಪಠಿಸಿರುವ ಈ ವೈಶ್ವಾನರೀಯಸೂಕ್ತದಲ್ಲಿ ಅವರೋಹಣಕ್ರಮದಿಂದ ಮೊದಲು ವೈಶ್ವಾನರನನ್ನು ಸ್ತುತಿಸಿದ್ದಾನೆ. ಈ ಅಭಿಪ್ರಾಯದಿಂದಲೇ ಇಲ್ಲಿ ನಿರ್ದೇಶಿಸಿರುವ ವೈಶ್ವಾನರನನ್ನು **ಅಥಾಸಾವಾದಿತ್ಯ ಇತಿ ಪೂರ್ವೇ ಯಜ್ಞಿಕಾಃ ।** ಆದಿತ್ಯನೆಂದು ಪ್ರಾಚೀನರಾದ ಯಜ್ಞಕರ್ತರು ಅಭಿಪ್ರಾಯಪಡುತ್ತಾರೆ ಎಂದು ಪೂರ್ವಪಕ್ಷವನ್ನು ವಿವರಿಸಿ ನಂತರ,

**ಸೋಽಪಿ ನ ಸ್ತೋತ್ರಿಯಮಾದ್ರಿಯತಾಗ್ನೇಯೋ ಹಿ ಭವತಿ । ತತ ಆಗಚ್ಛತಿ ಮಧ್ಯಸ್ಥಾನಾ ದೇವತಾ ರುದ್ರಂ ಚ ಮರುತಶ್ಚ ತತೋಽಗ್ನಿಮಿಹಸ್ಥಾನಮತ್ರ ನೈ ಸ್ತೋತ್ರಿಯಂ ಶಂಸತಿ ॥**

ಈ ಸೂಕ್ತವು ಮುಖ್ಯವಾಗಿ ಅಗ್ನಿಯನ್ನೇ ಉದ್ದೇಶಿಸಿರುವುದರಿಂದಲೂ, ಅನಂತರ ರುದ್ರನನ್ನೂ ಮರುತ್ತುಗಳನ್ನೂ ನಿರ್ದೇಶಿಸಿ ಪುನಃ ಯಜ್ಞಕರ್ತನು ಯಾವ ಪಾರ್ಥಿವವಾದ ಯಜ್ಞಶಾಲೆಯಲ್ಲಿ ಈ ಸೂಕ್ತವನ್ನು ಪಠಿಸುತ್ತಾನೆಯೋ ಆ ಪಾರ್ಥಿವಲೋಕಕ್ಕೇ ಸೇರಿದ ಅಗ್ನಿಯನ್ನೇ ಪುನಃ ಉದ್ದೇಶಿಸಿ ಸ್ತುತಿಸಿರುತ್ತಾನೆ. ಆದುದರಿಂದ ಇಲ್ಲಿ ನಿರ್ದೇಶಿಸಿರುವ ವೈಶ್ವಾನರಾಗ್ನಿಯು ಪಾರ್ಥಿವಸ್ಥವಾದ ದೇವತೆಯೇ ಹೊರತು ಅಂತರಿಕ್ಷಸ್ಥವಾದುದಲ್ಲ ಎಂದು ಮೇಲಿನ ಅಭಿಪ್ರಾಯವನ್ನು ನಿರಾಕರಿಸಿರುವರು. ಮತ್ತು ಈ ವೈಶ್ವಾನರಾಗ್ನಿಯು ಪಾರ್ಥಿವಸ್ಥವಾದ ದೇವತೆ ಎಂದು ತಮ್ಮ ವಾದವನ್ನು ಸಮರ್ಥಿಸುತ್ತಾ ಅದಕ್ಕೆ ತಕ್ಕ ಶ್ರುತಿವಾಕ್ಯಗಳನ್ನೂ ಉದಹರಿಸಿದ್ದಾರೆ.

**ಅಥಾಸ್ಯಾಹ—ಇತೋ ಜಾತೋ ವಿಶ್ವಮಿದಂ ವಿ ಚಷ್ಟೇ ವೈಶ್ವಾನರೋ ಯತತೇ ಸೂರ್ಯೇಣ ।**
(ಋ. ಸಂ. ೧-೯೮-೧). ಇತಿ

**ನ ಚ ಪುನರಾತ್ಮನಾತ್ಮಾ ಸಂಯತತೇಽನ್ಯೇನೈವಾನ್ಯಃ ಸಂಯತತ ಇತ ಇಮಮಾದಧಾತ್ಯಮುತೋಽಮುಷ್ಯ ರಶ್ಮಯಃ ಪ್ರಾದುರ್ಭವಂತೀತೋಽಸ್ಯಾರ್ಚಿಷಸ್ತಯೋರ್ಭಾಸೋಃ ಸಂಸಂಗಂ ದೃಷ್ಟ್ವೈವಮವಕ್ಷ್ಯತ್ ॥**

ವೈಶ್ವಾನರನು ತಾನು ವಿಸ್ತಾರವಾಗಿ ಪ್ರಸರಿಸಿ ಸೂರ್ಯನೊಡನೆ ಸೇರಿಕೊಳ್ಳುತ್ತಾನೆ ಎಂದು ಸಂಹಿತಾವಾಕ್ಯವಿರುವುದೂ ಈ ಸಮರ್ಥನೆಗೆ ಸಹಾಯಮಾಡುತ್ತದೆ. ವೈಶ್ವಾನರನೂ ಸೂರ್ಯನೇ ಆದರೆ ತಾನೇ ಪ್ರಸರಿಸಿ ತನ್ನಲ್ಲೇ ಸೇರಿಕೊಳ್ಳುವನೆಂಬುದು ಅಸಂಭವ. ಒಂದು ವಸ್ತುವು ತಾನು ವಿಸ್ತರಿಸಿಕೊಂಡು ಇನ್ನೊಂದರೊಂದಿಗೆ ಸೇರಿಕೊಳ್ಳುತ್ತದೆ ಎಂದು ಹೇಳುವುದು ಸಹಜವಾಗಿದೆ. ಯಜ್ಞಕರ್ತನು ಪೃಥ್ವಿಯಲ್ಲಿ ಅಗ್ನಿಯನ್ನು ಪ್ರಜ್ವಲಿತನನ್ನಾಗಿ ಮಾಡಿದಮೇಲೆ ಅದರ ಕಿರಣಗಳು ಮೇಲಿನ ಲೋಕಕ್ಕೆ ಹರಡಿ ಅಲ್ಲೂ ಆವಿರ್ಭವಿಸುತ್ತವೆ ಅಂತರಿಕ್ಷಲೋಕದಲ್ಲಿ ವ್ಯಾಪಿಸಿರುವ ಆದಿತ್ಯನ

ಕಿರಣಗಳೊಂದಿಗೆ ಸೇರಿಕೊಂಡು ಎರಡೂ ಒಂದಾಗುವುದನ್ನು ನೋಡಿ **ಯತತೇ ಸೂರ್ಯೇಣ** ಎಂದು ವರ್ಣಿಸಲ್ಪಟ್ಟಿದೆ. ಅದೂ ಅಲ್ಲದೆ,

> **ಅಥ ಯಾನ್ಯೇತಾನ್ಯೌತ್ತಮಿಕಾನಿ ಸೂಕ್ತಾನಿ ಭಾಗಾನಿ ವಾ ಸಾವಿತ್ರಾಣಿ ವಾ ಸೌರ್ಯಾಣಿ ವಾ ಪೌಷ್ಣಾನಿ ವಾ ವೈಷ್ಣವಾನಿ ವಾ ವೈಶ್ವದೇವ್ಯಾನಿ ವಾ ತೇಷು ವೈಶ್ವಾನರೀಯಾಃ ಪ್ರವಾದಾ ಅಭವಿಷ್ಯನ್ನಾದಿತ್ಯಕರ್ಮಣಾ ಚೈನಮಸ್ತೋಷ್ಯನ್ನಿತ್ಯುದೇಷೀತ್ಯಸ್ತಮೇಷೀತಿ ವಿಪರ್ಯೇಷೀತಿ ।**

ವೈಶ್ವಾನರನು ಸೂರ್ಯನೇ ಆಗಿದ್ದರೆ ಆಗ **ಸವಿತೃ, ಪೂಷ, ವಿಷ್ಣು, ವಿಶ್ವೇದೇವ** ಇತ್ಯಾದಿ ಅಂತರಿಕ್ಷಸ್ಥನಾದ ದೇವತೆಗಳ ಸ್ವರೂಪವೂ, ಕ್ರಿಯೆಯೂ ಇವನಲ್ಲಿ ಅಧ್ಯಾಹೃತವಾಗಿ ವರ್ಣಿಸಲ್ಪಡಬೇಕಾಗಿದ್ದಿತು, ಮತ್ತು ಉದಯಿಸುತ್ತಾನೆ, ಅಸ್ತಮಿಸುತ್ತಾನೆ, ಪರಿಭ್ರಮಣವನ್ನು ಹೊಂದುತ್ತಾನೆ ಇತ್ಯಾದಿ ವರ್ಣನೆಗಳೂ ಇರಬೇಕಾದ್ದಿತು. ಆದರೆ ಇಲ್ಲಿ ಅಗ್ನಿದೇವತಾಕವಾದ ವರ್ಣನೆಗಳು ಮಾತ್ರವಿರುವುದರಿಂದ ಪಾರ್ಥಿವನಾದ ಅಗ್ನಿಪರ್ಯಾಯನೆಂಬುದು ದೃಢವಾಗಿ ಗೊತ್ತಾಗುತ್ತದೆ. ಇವೇ ಮೊದಲಾದ ಆಧಾರಗಳಿಂದ,

> **ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರೂಪ್ಯತೇಽಯಮೇವ ಸೋಽಗ್ನಿರ್ವೈಶ್ವಾನರಃ ।**

ಸೂಕ್ತದಲ್ಲಿ ಪಠಿತವಾದ ಸ್ತೋತ್ರವೂ, ಹವಿಸ್ಸಿನ ಅರ್ಪಣೆಯೂ ವೈಶ್ವಾನರರೂಪನ ಅಗ್ನಿಯನ್ನೇ ಉದ್ದೇಶಿಸಿ ಅರ್ಪಿಸಲ್ಪಟ್ಟಿವೆಯೆಂದು ಖಚಿತವಾಗಿ ಹೇಳಬಹುದು. (ನಿ. ೭-೨೨ ರಿಂದ ೭-೩೧) ಈ ವೈಶ್ವಾನರಾಗ್ನಿಯ ಆವಿರ್ಭಾವವು ಪೃಥ್ವಿಯಲ್ಲಾದರೂ ಸಹ ಇವನೇ, **ರಾಜಾ ಹಿ ಕಂ ಭುವನಾನಾಮಭಿಶ್ರೀಃ ।** ಸಕಲಭೂತಜಾತಗಳಿಗೂ ಪ್ರಭುವಾಗಿಯೂ ಆಶ್ರಯನಾಗಿಯೂ ಇದ್ದಾನೆ. ಆದುದರಿಂದಲೇ ದೇವಮಾನವಾದಿಸಕಲರೂ ಇವನ ಉಪಾಸನೆಯಿಂದಲೇ ಶ್ರೇಯಸ್ಸನ್ನು ಹೊಂದಲು ಸಾಧ್ಯವೆಂದು ಸ್ಪಷ್ಟವಾಗಿ ಅನೇಕಕಡೆ ತಿಳಿಸಿದ್ದಾರೆ. ಕರ್ಮಾನುಷ್ಠಾನಗಳಿಂದ ಇವನ ಪಾರ್ಥಿವಸ್ವರೂಪವನ್ನರಿತು ಉಪಾಸನೆಯನ್ನು ಮಾಡುವುದು ಒಂದು ಕ್ರಮವಾದರೆ, ಇವನು ವಿಶ್ವವ್ಯಾಪಿಯಾದುದೂ, ಸರ್ವಜಗತ್ತಿನ ಚೇತನಾಚೇತನಗಳಲ್ಲಿಯೂ ಅಂತರ್ಗತನಾಗಿರುವುದೂ ಆದ ಮಾಹಾತ್ಮ್ಯವನ್ನರಿಯುವ ಅಧ್ಯಾತ್ಮರೂಪವಾದ ಜ್ಞಾನದಿಂದ ಮಾಡತಕ್ಕ ಉಪಾಸನೆಯು ಇನ್ನೊಂದು ವಿಧವಾಗಿರುವುದು. ಕರ್ಮಾನುಷ್ಠಾನಕ್ಕೂ ಜ್ಞಾನೋಪಾಸನೆಗೂ ಇರುವ ಸಂಬಂಧವನ್ನು ತಿಳಿಸಿ ವಿಶ್ವಾತ್ಮನಾದ ವೈಶ್ವಾನರಾಗ್ನಿಯ ಮಹಿಮೆಯನ್ನು ಶತಪಥಾದಿಬ್ರಾಹ್ಮಣಗಳಲ್ಲಿಯೂ ಛಾಂದೋಗ್ಯಾದಿ ಉಪನಿಷತ್ತುಗಳಲ್ಲಿಯೂ ವಿವರಿಸಿದೆ. ಇವನ ನಿಜವಾದ ಸ್ವರೂಪವನ್ನರಿಯಲು ಉತ್ತಮನಾದ ಗುರುವನ್ನು ಆರಿಸಿಕೊಂಡು ಹೋದ ಋಷಿಗಳ ಕಥೆಯನ್ನು **ಶತಪಥ ಬ್ರಾಹ್ಮಣದಲ್ಲಿ ವಿವರಿಸಿದೆ.** (೧೦-೬-೧-೧ ರಿಂದ ೧೧)

> **ಅಪಿ ವಾ ವಿಶ್ವಾನರ ಏವ ಸ್ಯಾತ್ ಪ್ರತ್ಯೃತಃ ಸರ್ವಾಣಿ ಭೂತಾನಿ ತಸ್ಯ ವೈಶ್ವಾನರಃ ।**

(ನಿ. ೭-೨೧) ಸರ್ವತ್ರ ವ್ಯಾಪಿಸಿ ಸಕಲ ಭೂತಗಳಲ್ಲಿಯೂ ಅಂತರ್ಗತನಾಗಿರುವವನು ಎಂಬ ನಿರುಕ್ತಕಾರರ ನಿರ್ವಚನದಂತೆ ಸರ್ವಾಂತರ್ಯಾಮಿಯಾದ ವಿಶ್ವಾನರನ ಸ್ವರೂಪವನ್ನು ಈ ಕಥೆಯು ತಿಳಿಸುತ್ತದೆ.—

> ಅಥ ಹೈತೇಽರುಣೇ ಔಪವೇಶೌ ಸಮಾಜಗ್ಮುಃ ಸತ್ಯಯಜ್ಞಃ ಪೌಲುಷಿರ್ಮಹಾಶಾಲೋ ಜಾಬಾಲೋ ಬುಡಿಲ ಆಶ್ವತರಾಶ್ವಿರಿಂದ್ರದ್ಯುಮ್ನೋ ಭಾಲ್ಲವೇಯೋ ಜನಃ ಶಾರ್ಕರಾಕ್ಷ್ಯಸ್ತೇ ಹ

ಸಮಾಸತ ತೇಷಾಂ ಹ ವೈಶ್ವಾನರೇ ನ ಸಮಿಯಾಯ ||೧|| ತೇ ಹೋಚುಃ । ಅಶ್ವಪತಿರ್ವಾಯಂ ಕೈಕೇಯಃ ಸಂಪ್ರತಿ ವೈಶ್ವಾನರಂ ವೇದ ತಂ ಗಚ್ಛಾಮೇತಿ ತೇ ಹಾಶ್ವಪತಿಂ ಕೈಕೇಯಮಾಜಗ್ಮುಸ್ತೇಭ್ಯೋ ಹ ಪೃಥಗಾವಸಥಾನ್ಪೃಥಗಪಚಿತೀಃ ಪೃಥಕ್ಸಾಹಸ್ರಾನ್ತ್ಸೋಮಾನ್ತ್ಸೋವಾಚ ತೇ ಹ ಪ್ರಾತರಸಂವಿದಾನಾ ಏವ ಸಮಿತ್ಪಾಣಯಃ ಪ್ರತಿಚಕ್ರಮಿರ ಉಪತ್ವಾಯಾಮೇತಿ ||೨|| ಸ ಹೋವಾಚ । ಯನ್ನು ಭಗವಂತೋಽನೂಚಾನಾ ಅನೂಚಾನಪುತ್ರಾಃ ಕಿಮಿದಮಿತಿ ತೇ ಹೋಚುರ್ವೈಶ್ವಾನರಂ ಹ ಭಗವಾನ್ತ್ಸಂಪ್ರತಿ ವೇದ ತಂ ನೋ ಬ್ರೂಹೀತಿ ಸ ಹೋವಾಚ ಸಂಪ್ರತಿ ಖಲು ನ್ವಾ ಅಹಂ ವೈಶ್ವಾನರಂ ವೇದಾಭ್ಯಾಧತ್ತ ಸಮಿಧ ಉಪೇತಾ ಸ್ಥೇತಿ ||೩|| ಸ ಹೋವಾಚಾರುಣಮೌಪವೇಶಿಂ । ಗೌತಮ ಕಂ ತ್ವಂ ವೈಶ್ವಾನರಂ ವೇತ್ಥೇತಿ ಪೃಥಿವೀಮೇವ ರಾಜನ್ನಿತಿ ಹೋವಾಚೋಮಿತಿ ಹೋವಾಚೈಷ ವೈ ಪ್ರತಿಷ್ಠಾ ಏತಂ ರಯಿಂ ವೈಶ್ವಾನರ ಏತಂ ಹಿ ವೈ ತ್ವಂ ಪ್ರತಿಷ್ಠಾ ವೈಶ್ವಾನರಂ ವೇತ್ಥ ತಸ್ಮಾತ್ತ್ವಂ ಪ್ರ ತಿಷ್ಠಿತಃ ಪ್ರಜ್ಞಯಾ ಪಶುಭಿರಸಿ ಯೋ ವಾ ಏತಂ ಪ್ರತಿಷ್ಠಾಂ ವೈಶ್ವಾನರಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ಪಾದೌ ತ್ವಾ ಏತೌ ವೈಶ್ವಾನರಸ್ಯ ಪಾದೌ ಶ್ಲೇಽಮ್ಲಾಸ್ಯತಾಂ ಯದಿ ಹ ನಾಗಮಿಷ್ಯ ಇತಿ ಪಾದೌ ತೇಽವಿದಿತಾವಭವಿಷ್ಯತಾಂ ಯದಿ ಹ ನಾಗಮಿಷ್ಯ ಇತಿ ವಾ ||೪|| ಅಥ ಹೋವಾಚ ಸತ್ಯಯಜ್ಞಂ ಪೌಲುಷಿಂ । ಪ್ರಾಚೀನಯೋಗ್ಯ, ಕಂ ತ್ವಂ ವೈಶ್ವಾನರಂ ವೇತ್ಥೇತ್ಯಪ ಏವ ರಾಜನ್ನಿತಿ ಹೋವಾಚೋಮಿತಿ ಹೋವಾಚೈಷ ವೈ ರಯಿರ್ವೈಶ್ವಾನರ ಏತಂ ಹಿ ವೈ ತ್ವಂ ರಯಿಂ ವೈಶ್ವಾನರಂ ವೇತ್ಥ ತಸ್ಮಾತ್ತ್ವಂ ರಯಿಮಾನ್ಪುಷ್ಟಿಮಾನಸಿ ಯೋ ವಾ ಏತಂ ರಯಿಂ ವೈಶ್ವಾನರಂ ವೇದಾಪಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ವಸ್ತಿಸ್ತ್ವಾ ಏಷ ವೈಶ್ವಾನರಸ್ಯವಸ್ತಿಸ್ತ್ವಾಹಾಸ್ಯದ್ಯದಿ ಹ ನಾಗಮಿಷ್ಯ ಇತಿ ವಸ್ತಿಸ್ತೇಽವಿದಿತೋಽಭವಿಷ್ಯದ್ಯದಿ ಹ ನಾಗಮಿಷ್ಯ ಇತಿ ವಾ ||೫|| ಅಥ ಹೋವಾಚ ಮಹಾಶಾಲಂ ಜಾಬಾಲಂ । ಔಪಮನ್ಯವ ಕಂ ತ್ವಂ ವೈಶ್ವಾನರಂ ವೇತ್ಥೇತ್ಯಾಕಾಶಮೇವ ರಾಜನ್ನಿತಿ ಹೋವಾಚೋಮಿತಿ ಹೋವಾಚೈಷ ವೈ ಬಹುಲೋ ವೈಶ್ವಾನರ ಏತಂ ಹಿ ವೈ ತ್ವಂ ಬಹುಲಂ ವೈಶ್ವಾನರಂ ವೇತ್ಥ ತಸ್ಮಾತ್ತ್ವಂ ಬಹು ಪ್ರಜಯಾ ಪಶುಭಿರಸಿ ಯೋ ವಾ ಏತಂ ಬಹುಲಂ ವೈಶ್ವಾನರಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತ್ಯಾತ್ಮಾ ತ್ವಾ ಏಷ ವೈಶ್ವಾನರಸ್ಯಾತ್ಮಾ ತ್ವಾಹಾಸ್ಯದ್ಯದಿ ಹ ನಾಗಮಿಷ್ಯ ಇತ್ಯಾತ್ಮಾ ತೇಽವಿದಿತೋಽಭವಿಷ್ಯದ್ಯದಿ ಹ ನಾಗಮಿಷ್ಯ ಇತಿ ವಾ ||೬|| ಅಥ ಹೋವಾಚ ಬುಡಿಲಮಾಶ್ವತರಾಶ್ವಿಂ । ವೈಯಾಘ್ರಪದ್ಯ ಕಂ ತ್ವಂ ವೈಶ್ವಾನರಂ ವೇತ್ಥೇತಿ ವಾಯುಮೇವ ರಾಜನ್ನಿತಿ ಹೋವಾಚೋಮಿತಿ ಹೋವಾಚೈಷ ವೈ ಪೃಥಗ್ವರ್ತ್ಮಾ. ವೈಶ್ವಾನರ ಏತಂ ಹಿ ವೈ ತ್ವಂ ಪೃಥಗ್ವರ್ತ್ಮಾನಂ ವೈಶ್ವಾನರಂ ವೇತ್ಥ ತಸ್ಮಾತ್ತ್ವಾಂ ಪೃಥಗ್ರಥಶ್ರೇಣಯೋಽನುಯಾಂತಿ ಯೋ ವಾ ಏತಂ ಪೃಥಗ್ವರ್ತ್ಮಾನಂ ವೈಶ್ವಾನರಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ಪ್ರಾಣಸ್ತ್ವಾ ಏಷ ವೈಶ್ವಾನರಸ್ಯ ಪ್ರಾಣಸ್ತ್ವಾಹಾಸ್ಯದ್ಯದಿ ಹ ನಾಗಮಿಷ್ಯ ಇತಿ ಪ್ರಾಣಸ್ತೇಽವಿದಿತೋಽಭವಿಷ್ಯದ್ಯದಿ ಹ ನಾಗಮಿಷ್ಯ ಇತಿ ವಾ ||೭|| ಅಥ ಹೋವಾಚೇಂದ್ರದ್ಯುಮ್ನಂ ಭಾಲ್ಲವೇಯಂ । ವೈಯಾಘ್ರಪದ್ಯ ಕಂ ತ್ವಂ ವೈಶ್ವಾನರಂ ವೇತ್ಥೇತ್ಯಾದಿತ್ಯ

ಮೇವ ರಾಜನ್ನಿತಿ ಹೋವಾಚೋಮಿತಿ ಹೋವಾಚೈಷ ವೈ ಸುತತೇಜಾ ವೈಶ್ವಾನರ ಏತಂ ಹಿ ವೈ ತ್ವಾಂ ಸುತತೇಜಸಂ ವೈಶ್ವಾನರಂ ವೇತ್ಥ ತಸ್ಮಾತ್ತವೈಷ ಸುತೋಽದ್ಯಮಾನಃ ಪಚ್ಯಮಾನೋಽಕ್ಷೀಯಮಾಣೋ ಗೃಹೇಷು ತಿಷ್ಠತಿ ಯೋ ವಾ ಏತಂ ಸುತತೇಜಸಂ ವೈಶ್ವಾನರಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ಚಕ್ಷುಸ್ತ್ವೇತದ್ವೈಶ್ವಾನರಸ್ಯ ಚಕ್ಷುಸ್ತ್ವಹಾಸ್ಯದ್ಯದಿ ಹ ನಾಗಮಿಷ್ಯ ಇತಿ ಚಕ್ಷುಸ್ತೇಽವಿದಿತಮಭವಿಷ್ಯದ್ಯದಿ ಹ ನಾಗಮಿಷ್ಯ ಇತಿ ವಾ ॥೮॥ ಅಥ ಹೋವಾಚ ಜನಂ ಶಾರ್ಕರಾಕ್ಷ್ಯಂ। ಸಾಯವಸ ಕಂ ತ್ವಂ ವೈಶ್ವಾನರಂ ವೇತ್ಥೇತಿ ದಿವಮೇವ ರಾಜನ್ನಿತಿ ಹೋವಾಚ ಓಮಿತಿ ಹೋವಾಚೈಷ ವಾಽಅತಿಷ್ಠಾ ವೈಶ್ವಾನರ ಏತಂ ಹಿ ವೈ ತ್ವಮತಿಷ್ಠಾ ವೈಶ್ವಾನರಂ ವೇತ್ಥ ತಸ್ಮಾತ್ತ್ವಂ ಸಮಾನಾನತಿತಿಷ್ಠಸಿ ಯೋ ವಾ ಏತಮತಿಷ್ಠಾಂ ವೈಶ್ವಾನರಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ಮೂರ್ಧಾ ತ್ವಾ ಏಷ ವೈಶ್ವಾನರಸ್ಯ ಮೂರ್ಧಾ ತ್ವಾಹಾಸ್ಯದ್ಯದಿ ಹ ನಾಗಮಿಷ್ಯ ಇತಿ ಮೂರ್ಧಾ ತೇಽವಿದಿತೋಽಭವಿಷ್ಯದ್ಯದಿ ಹ ನಾಗಮಿಷ್ಯ ಇತಿ ವಾ॥೯॥ ತಾನ್ ಹೋವಾಚ ಏತೇ ವೈ ಯೂಯಂ ಪೃಥಗ್ವೈಶ್ವಾನರಾನ್ವಿದ್ವಾಂಸಃ ಪೃಥಗನ್ನಮಘಸ್ತ ಪ್ರಾದೇಶಮಾತ್ರಮಿವ ಹ ವೈ ದೇವಾಃ ಸುವಿದಿತಾ ಅಭಿಸಂಪನ್ನಾಸ್ತಥಾ ತು ವ ಏನಾನ್ವಕ್ಷ್ಯಾಮಿ ಯಥಾ ಪ್ರಾದೇಶಮಾತ್ರಮೇವಾಭಿಸಂಪಾದಯಿಷ್ಯಾಮೀತಿ ॥೧೦॥ ಸ ಹೋವಾಚ। ಮೂರ್ಧಾನಮುಪದಿಶನ್ನೇಷ ವಾ ಅತಿಷ್ಠಾ ವೈಶ್ವಾನರ ಇತಿ ಚಕ್ಷುಷೀ ಉಪದಿಶನ್ನುವಾಚೈಷ ವೈ ಸುತತೇಜಾ ವೈಶ್ವಾನರ ಇತಿ ನಾಸಿಕೇಽಉಪದಿಶನ್ನುವಾಚೈಷ ವೈ ಪೃಥಗ್ವರ್ತ್ಮಾ ವೈಶ್ವಾನರ ಇತಿ ಮುಖ್ಯಮಾಕಾಶಮುಪದಿಶನ್ನುವಾಚೈಷ ವೈ ಬಹುಲೋ ವೈಶ್ವಾನರ ಇತಿ ಮುಖ್ಯಾ ಅಪ ಉಪದಿಶನ್ನುವಾಚೈಷ ವೈ ರಯಿರ್ವೈಶ್ವಾನರ ಇತಿ ಚುಬುಕಮುಪದಿಶನ್ನುವಾಚೈಷ ವೈ ಪ್ರತಿಷ್ಠಾ ವೈಶ್ವಾನರ ಇತಿ ಸ ಏಷೋಽಗ್ನಿರ್ವೈಶ್ವಾನರೋ ಯತ್ಪುರುಷಃ ಸ ಯೋ ಹೈತಮೇವಮಗ್ನಿಂ ವೈಶ್ವಾನರಂ ಪುರುಷವಿಧಂ ಪುರುಷೇಽಂತಃ ಪ್ರತಿಷ್ಠಿತಂ ವೇದಾಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ನ ಹಾಸ್ಯ ಬ್ರುವಾಣಂ ಚ ನ ವೈಶ್ವಾನರೋ ಹಿನಸ್ತಿ ॥೧೧॥

ಸತ್ಯಯಜ್ಞಪೌಲೂಷಿಯೂ, ಮಹಾಶಾಲಜಾಬಾಲನೂ, ಬುಡಿಲ, ಆಶ್ವತರ ಅಶ್ವಿ, ಇಂದ್ರದ್ಯುಮ್ನ, ಭಾಲ್ಲವೇಯನೂ, ಜನಶಾರ್ಕರಾಕ್ಷ್ಯನೂ ಒಟ್ಟಿಗೆ ಅರುಣಔಪವೇಶಿಯ ಗೃಹದಲ್ಲಿ ಸೇರಿ ವೈಶ್ವಾನರಾಗ್ನಿಯ ಸ್ವರೂಪವನ್ನು ತಿಳಿಯಲು ಎಲ್ಲರೂ ಕಲೆತು ಚರ್ಚಿಸಿದರೂ ಸಹ ಅವರಿಗೆ ನಿಸ್ಸ್ಪಷ್ಟವಾದ ತಿಳುವಳಿಕೆಯುಂಟಾಗದೆ ಪರಸ್ಪರ ಅಭಿಪ್ರಾಯದಲ್ಲಿ ಭೇದವುಂಟಾಯಿತು. ವಿಪ್ರತಿಪತ್ತಿಯುಂಟಾಯಿತು. ॥ ೧ ॥ ಆಗ ಅವರೆಲ್ಲರೂ ಸೇರಿ ವೈಶ್ವಾನರಾಗ್ನಿಯ ಸ್ವರೂಪವನ್ನು ಸಂಪೂರ್ಣವಾಗಿ ತಿಳಿದುಕೊಂಡಿರುವ ಅಶ್ವಪತಿಕೈಕೇಯನಲ್ಲಿಗೆ ಹೋದರು. ಅವನು ತನ್ನಲ್ಲಿಗೆ ಬಂದ ಈ ಅತಿಥಿಗಳಿಗೆಲ್ಲಾ ಪ್ರತ್ಯೇಕವಾದ ವಾಸಸ್ಥಾನಗಳನ್ನೂ, ವೈಯಕ್ತಿಕವಾದ ಗೌರವಗಳನ್ನೂ, ಸಹಸ್ರಾರು ದಾನಗಳನ್ನೂ ಅರ್ಪಿಸಿ ಅವರನ್ನು ಸತ್ಕರಿಸಿದನು. ಮರುದಿನ ಪ್ರಾತಃಕಾಲ ಅವರೆಲ್ಲರೂ ತಮ್ಮ ಅಭಿಪ್ರಾಯಭೇದಗಳನ್ನೇ ಇಟ್ಟುಕೊಂಡು ತಮ್ಮ ಕೈಯಲ್ಲಿ ಸಮಿತ್ತುಗಳನ್ನು ಹಿಡಿದು ‘ನಾವು ನಿಮ್ಮ ಶಿಷ್ಯರಾಗಬೇಕೆಂದಿದ್ದೇವೆ.’ ಎಂದು ವಿಜ್ಞಾಪಿಸಿಕೊಂಡರು ॥ ೨ ॥ ಆಗ ಅವನು ನೀವೆಲ್ಲರೂ ಸಕಲಶಾಸ್ತ್ರಪಾರಂಗತ

ರಾವವರ ಪುತ್ರರಾಗಿಯೂ ನೀವೂ ಅಧ್ಯಯನವನ್ನು ಮಾಡಿದವರಾಗಿಯೂ ಇದ್ದುಕೊಂಡು ನನ್ನಲ್ಲಿಗೆ ಶಿಷ್ಯವೃತ್ತಿಗೆ ಬಂದಿರುವುದೇನು ? ಎಂದು ಆಶ್ಚರ್ಯಪಟ್ಟು ಅವರನ್ನು ಪ್ರಶ್ನಿಸಿದನು.. ಆಗ ಅವರು- ನೀವು ವೈಶ್ವಾನರಾಗ್ನಿಯ ಸ್ವರೂಪವನ್ನು ಚೆನ್ನಾಗಿ ತಿಳಿದಿದ್ದೀರಿ. ನಮಗೂ ಅದರ ರಹಸ್ಯವನ್ನು ಉಪದೇಶಿಸಿ ' ಎಂದು ವಿಜ್ಞಾಪಿಸಿಕೊಂಡಾಗ ಅವನು ' ನನಗೆ ಆ ರಹಸ್ಯವು ಗೊತ್ತಿದೆ. ನಿಮಗೂ ಅದನ್ನು ತಿಳಿಸುತ್ತೇನೆ. ಅಗ್ನಿಗೆ ಸಮಿತ್ತುಗಳನ್ನು ಅರ್ಪಿಸಿ ಇಂದಿನಿಂದ ನೀವು ನನ್ನ ಶಿಷ್ಯರಾಗಿದ್ದೀರಿ ' ಎಂದನು. ॥ ೩ ॥ ಅನಂತರ ಅರುಣಔಪವೇಶಿಯನ್ನು ಕುರಿತು ' ಗೌತಮನೇ, ನಿನಗೆ ಗೊತ್ತಿರುವಂತೆ ವೈಶ್ವಾನರನಾರು ? ' ಎಂದು ಪ್ರಶ್ನಿಸಲಾಗಿ ' ಪೃಥ್ವಿಯೇ ವೈಶ್ವಾನರನೆಂದು ' ಅವನು ಹೇಳಿದನು. ಆಗ ದೊರೆಯು ' ಹೌದು, ಸರ್ವಾಧಾರನಾದ ವೈಶ್ವಾನರನೇ ಅದು. ನೀನು ಈ ರಹಸ್ಯವನ್ನು ತಿಳಿದಿರುವುದರಿಂದ ಪಶುಪುತ್ರಾದಿಗಳೊಂದಿಗೆ ಸ್ಥಿರನಾಗಿ ಪ್ರತಿಷ್ಠಿತನಾಗಿದ್ದೀಯೆ ! ಇದನ್ನು ತಿಳಿದವನು ಮೃತ್ಯುವನ್ನು ಜಯಿಸಿ ಪೂರ್ಣಾಯುಸ್ಸನ್ನು ಪಡೆಯುತ್ತಾನೆ- ಆದರೆ ಸತ್ಯವಾಗಿಯೂ ಇವು ವೈಶ್ವಾನರನ **ಪಾದಗಳು** ಮಾತ್ರ. ನೀನು (ವೈಶ್ವಾನರನ ಪೂರ್ಣವಾದ ಸ್ವರೂಪವನ್ನು ತಿಳಿಯಲು) ಇಲ್ಲಿಗೆ ಬರದೇ ಇದ್ದಿದ್ದರೆ ನಿನ್ನ ಪಾದಗಳು ಸಡಿಲವಾಗಿ ಕ್ಷೀಣಿಸಿಬಿಡುತ್ತಿದ್ದವು. ಅಥವಾ ನಿನ್ನ ಗೋಚರಕ್ಕೇ ಬೀಳುತ್ತಿರಲಿಲ್ಲ. ' ಎಂದನು. ॥ ೪ ॥ ಆಮೇಲೆ ಸತ್ಯಜ್ಞಪೌಲೂಷಿಯನ್ನು ಕುರಿತು ಎಲೈ ಪ್ರಾಚೀನಯೋಗ್ಯನೇ, ವೈಶ್ವಾನರನಾರೆಂಬುದಾಗಿ ನೀನು ತಿಳಿದಿದ್ದೀಯೇ ಎಂದು ಪ್ರಶ್ನಿಸಲು ಅವನು **ಅಪ್ಪೇ** (ಉದಕ) ವೈಶ್ವಾನರನೆಂದನು. ಅದನ್ನೂ ಅನುಮೋದಿಸಿ ದೊರೆಯು ಅದು ವೈಶ್ವಾನರೀಯವಾದ ಧನವು. ನೀನು ಆ ಧನದ ಸ್ವರೂಪವನ್ನು ತಿಳಿದುದರಿಂದ ನೀನು ಧನಿಕನಾಗಿಯೂ ಉಚ್ಚಾಶ್ರಯಸ್ಥಿತಿಯನ್ನು ಹೊಂದಿದವನಾಗಿಯೂ ಇದ್ದೀಯೇ. ಅದನ್ನು ತಿಳಿದವನು ಮೃತ್ಯುವನ್ನು ಜಯಿಸಿ ಪೂರ್ಣವಾದ ಆಯುಸ್ಸನ್ನು ಖಂಡಿತವಾಗಿಯೂ ಪಡೆಯುತ್ತಾನೆ. ಆದರೆ ಇದು ವೈಶ್ವಾನರನ ಅಂತಃಕೋಶಮಾತ್ರವಾಗಿದೆ. ನೀನು ಇಲ್ಲಿಗೆ ಬರದೇ ಇದ್ದಿದ್ದರೆ ನಿನ್ನ ಕೋಶವೂ ಅಪ್ರಯೋಜಕವಾಗುತ್ತಿತ್ತು ಅಥವಾ ನಿನ್ನ ಗೋಚರಕ್ಕೆ ಅದು ಬೀಳುತ್ತಿರಲೇ ಇಲ್ಲ ಎಂದನು ॥೫॥ ಅನಂತರ ಮಹಾಶಾಲಜಾಬಾಲನನ್ನು ಕುರಿತು ಎಲೈ ಔಪಮನ್ಯವನೇ, ವೈಶ್ವಾನರನಾರೆಂಬುದಾಗಿ ನೀನು ತಿಳಿದಿದ್ದೀಯೆ ಎಂದನು. **ಆಕಾಶವೆಂದು** ಅವನು ಉತ್ತರವನ್ನು ಕೊಡಲು ಅದನ್ನೂ ಒಪ್ಪಿ ಅದು ವೈಶ್ವಾನರಬಹುಲ (ಸಮೃದ್ಧ) ವೇ‌ನೂ ಇದನ್ನು ತಿಳಿದುಕೊಂಡಿರುವುದರಿಂದಲೇ ನೀನು ಪಶುಪುತ್ರಾದಿಗಳ ಬಾಹುಳ್ಯವನ್ನು ಹೊಂದಿರುವೆ. ಇದನ್ನು ತಿಳಿದವನು ಮೃತ್ಯುವನ್ನು ಜಯಿಸಿ ಪೂರ್ಣವಾದ ಆಯುಸ್ಸನ್ನು ಪಡೆಯುತ್ತಾನೆ. ಆದರೆ ಇದು ವೈಶ್ವಾನರನ ಪ್ರಧಾನ ಕಾಂಡಮಾತ್ರವಾಗಿರುವುದು. ನೀನು ಇಲ್ಲಿಗೆ ಬರದಿದ್ದರೆ ನಿನ್ನ ದೇಹದ ಮುಖ್ಯತತ್ತ್ವವೇ ಅಪ್ರಯೋಜಕವಾಗುತ್ತಿತ್ತು. ಅಥವಾ ನಿನಗೆ ಅದು ತಿಳಿಯುತ್ತಲೇ ಇರಲಿಲ್ಲ ಎಂದನು. ॥ ೬ ॥ ಪುನಃ ಬುಡಿಲ ಆಶ್ವತರಾಶ್ವಿಯನ್ನು ಕುರಿತು ಎಲೈ ವೈಯಾಘ್ರಪದ್ಯನೇ. ವೈಶ್ವಾನರನಾರೆಂಬುದಾಗಿ ನೀನು ತಿಳಿದಿದ್ದೀಯೆ ಎನ್ನಲು ಅವನು **ವಾಯುವೇ** ವೈಶ್ವಾನರನೆಂದನು. ಅದನ್ನೂ ಒಪ್ಪಿಕೊಂಡು ಆ ರಾಜರ್ಷಿಯು ವಾಯುವು ವೈಶ್ವಾನರನ ಮಾರ್ಗವೈವಿಧ್ಯವು. ನೀನು ಇದನ್ನು ತಿಳಿದುದರಿಂದಲೇ ನಾನಾಮಾರ್ಗಗಳಲ್ಲಿ ಸಂಚರಿಸತಕ್ಕ ರಥಗಳು ನಿನ್ನನ್ನು ಹಿಂಬಾಲಿಸುತ್ತವೆ. ಇದನ್ನು ತಿಳಿದವನು ಖಂಡಿತವಾಗಿಯೂ ಮೃತ್ಯುವನ್ನು ಜಯಿಸಿ ಪೂರ್ಣಾಯುಸ್ಸನ್ನು ಪಡೆಯುತ್ತಾನೆ. ಆದರೆ ಇದು ವೈಶ್ವಾನರನ **ಉಸಿರು** ಮಾತ್ರವಾಗಿದೆ. ನೀನು ನನ್ನಲ್ಲಿಗೆ ಬರದಿದ್ದರೆ ನಿನಗೆ ನಿನ್ನ **ಉಸಿರೂ** ಅಪ್ರಯೋಜಕವಾಗುತ್ತಿತ್ತು ಅಥವಾ ನಿನಗೆ ಅದರ ಅರಿವೇ ಇರುತ್ತಿರಲಿಲ್ಲ ಎಂದನು ॥೭॥ ಅನಂತರ ಇಂದ್ರದ್ಯುಮ್ನ ಭಾಲ್ಲವೇಯನನ್ನು ಕುರಿತು ವೈಶ್ವಾನರನಾರೆಂದು ನೀನು ತಿಳಿದಿದ್ದೀಯೆ ಎಂದು ಪ್ರಶ್ನಿಸಲಾಗಿ ಅವನು **ಆದಿತ್ಯನೇ** ವೈಶ್ವಾನರನೆಂದನು. ಅದನ್ನೂ ಅನುಮೋದಿಸಿ ನಿಜವಾಗಿಯೂ, ಸೋಮನ

ತೇಜಸ್ಸೇ ವೈಶ್ವಾನರನು. ನೀನು ಇದನ್ನು ತಿಳಿದಿರುವುದರಿಂದಲೇ ನಿನ್ನ ಗೃಹದಲ್ಲಿ ಯಾವಾಗಲೂ ಸೋಮರಸವೂ ಅದರ ಪಾಕವೂ ಇಲ್ಲದೇ ಇರುವುದೇ ಇಲ್ಲ ಇದನ್ನು ತಿಳಿದವನು ಮೃತ್ಯುವನ್ನು ಜಯಿಸಿ ಪೂರ್ಣಾಯುಸ್ಸನ್ನು ಪಡೆಯುತ್ತಾನೆ. ಆದರೆ ಇದು ವೈಶ್ವಾನರನ **ನೇತ್ರ**ಮಾತ್ರವಾಗಿದೆ. ನೀನು ನನ್ನಲ್ಲಿಗೆ ಬರದಿದ್ದರೆ ನಿನ್ನ ನೇತ್ರವೂ ಅಪ್ರಯೋಜಕವಾಗುತ್ತಿತ್ತು. ಅಥವಾ ನಿನಗೆ ಅದರ ಅರಿವೇ ಇರುತ್ತಿರಲಿಲ್ಲ ಎಂದನು ||೮|| ಅಮೇಲೆ, ಜನಶರ್ಕ-ರಾಕ್ಷ್ಯನನ್ನು ಕುರಿತು ಎಲೈ ಸ್ವಾಯುವಸಸೇ, ವೈಶ್ವಾನರನಾರೆಂಬುದಾಗಿ ನೀನು ತಿಳಿದಿದ್ದೀಯೆ ಎಂದು ಪ್ರಶ್ನಿಸಲು ಪ್ರಾಸ್ಯ ಅವನು **ಅಂತರಿಕ್ಷ**ವೆಂದು ಹೇಳಿದನು. ಅದನ್ನೂ ಅನುಮೋದಿಸುತ್ತ ಅಂತರಿಕ್ಷವೇ ವೈಶ್ವಾನರನ ಸರ್ವೋತ್ಕೃಷ್ಟವಾದ ಅಂಶ. ನೀನು ಇದನ್ನು ತಿಳಿದಿರುವುದರಿಂದಲೇ ನೀನು ನಿನ್ನ ಸಮಾನರಾದವರಲ್ಲೆಲ್ಲಾ ಅತ್ಯುತ್ಕೃಷ್ಟನಾಗಿದ್ದೀಯೆ. ಇದನ್ನು ತಿಳಿದವನು ಮೃತ್ಯುವನ್ನು ಜಯಿಸಿ ಪೂರ್ಣಾಯುಸ್ಸನ್ನು ಪಡೆಯುತ್ತಾನೆ. ಆದರೆ ಇದು ವೈಶ್ವಾನರ **ಶಿರೋ**ಭಾಗ ಮಾತ್ರವಾಗಿದೆ. ನೀನು ನನ್ನಲ್ಲಿಗೆ ಬರದಿದ್ದರೆ ನಿನ್ನ ಶಿರಸ್ಸೂ ಅಪ್ರಯೋಜಕವಾಗುತ್ತಿತ್ತು. ಅಥವಾ ನಿನಗೆ ಅದರ ತಿಳಿವಳಿಕೆಯೇ ಇರುತ್ತಿರಲಿಲ್ಲ ಎಂದನು. ||೯|| **ಕೊನೆಯಲ್ಲಿ** ಅವರೆಲ್ಲರನ್ನೂ ಒಟ್ಟಿಗೆ ಉದ್ದೇಶಿಸಿ ನಿಮ್ಮಲ್ಲಿ ಪ್ರತಿಯೊಬ್ಬರೂ ವೈಶ್ವಾನರನ ಬೇರೆ ಬೇರೆ ಅಂಶಗಳನ್ನು ಗ್ರಹಿಸಿದ್ದೀರಿ. ಆದುದರಿಂದಲೇ ಬೇರೆ ಬೇರೆ ಅನ್ನವನ್ನು ಭುಜಿಸುತ್ತಿದ್ದೀರಿ. ಸುವಿದಿತರಾದ ಈ ದೇವತೆಗಳು ಪ್ರಾದೇಶವರ್ತಿಗಳಾಗಿ (Measure of a span) ಮಾತ್ರವಿರುವುದರಿಂದ ನಿಮಗೆ ಆಯಾ ದೇವತೆಗಳು ಪ್ರಾದೇಶ ವರ್ತಿಗಳಾಗಿ ಮಾತ್ರವಿರುವಂತೆ ನಿಮಗೆ ವಿವರಿಸುತ್ತೇನೆ ಎಂದನು. ||೧೦|| ಕೊನೆಯಲ್ಲಿ **ತಲೆ**ಯನ್ನು ನಿರ್ದೇಶಿಸಿ ಇದು ವೈಶ್ವಾನರನ ಉತ್ಕೃಷ್ಟವಾದ ಅಂಶವೆಂದೂ ಕಣ್ಣುಗಳನ್ನು ತೋರಿಸಿ ಅದು ವೈಶ್ವಾನರನ ಅಂಶವಾದ **ಸೋಮ ತೇಜಸ್ಸೆಂದೂ, ನಾಸಿಕದ** ಕಡೆ ತೋರಿಸಿ ಅದು ವೈಶ್ವಾನರನ **ಮಾರ್ಗಗಳ ವೈವಿಧ್ಯ**ವೆಂದೂ, **ಆಕಾಶವನ್ನು** ನಿರ್ದೇಶಿಸಿ ಅದು **ಸಮೃದ್ಧವೈಶ್ವಾನರ**ನೆಂದೂ, **ಮುಖೋದಕ**ದ ಕಡೆ ತೋರಿಸಿ ಅದು **ವೈಶ್ವಾನರಧನ**ವೆಂದೂ **ಗಡ್ಡವನ್ನು** ತೋರಿಸಿ, ಅದು **ವೈಶ್ವಾನರನ ಆಧಾರ**ವೆಂದೂ ಹೇಳಿದನು. ಈ ವೈಶ್ವಾನರಾಗ್ನಿಯು **ಪುರುಷಶ್ರೇಷ್ಠ**ನಲ್ಲದೆ ಬೇರೆ ಯಾರೂ ಅಲ್ಲವೆಂದೂ, ಮತ್ತು **ಪುರುಷರೂಪನೂ, ಪುರುಷನ ಅಂತಸ್ಥನಾಗಿ ಪ್ರತಿಷ್ಠಿತನಾಗಿರುವವನೂ** ಆದ ಈ **ವೈಶ್ವಾನರಾಗ್ನಿ**ಯನ್ನು ತಿಳಿದವನು ಮರಣವನ್ನು ಜಯಿಸಿ ಪೂರ್ಣಾಯುಸ್ಸನ್ನು ಪಡೆಯುವನೆಂದೂ, ಇವನ ಪ್ರಶಂಸೆಯನ್ನು ಯಾವಾಗಲೂ ಮಾಡುವವನಿಗೆ ಯಾವ ತೊಂದರೆಯೂ ಆಗಲಾರದೆಂದೂ ವಿವರಿಸಿದನು. ||೧೧||

( ಶ. ಬ್ರಾ. ೧೦, ೬-೧-೧ರಿಂದ ೧೧ ).

ಹೀಗೆ ಕರ್ಮಾನುಷ್ಠಾನಕ್ಕೂ ಆಧ್ಯಾತ್ಮಿಕವಾದ ಜ್ಞಾನಸಂಪಾದನೆಗೂ ಇರತಕ್ಕ ಸಂಬಂಧವನ್ನು ತೋರಿಸಿ ವೈಶ್ವಾನರಾಗ್ನಿಯ ಸ್ವರೂಪವನ್ನು ವಿವರಿಸುವ ಕ್ರಮವನ್ನು ಛಾಂದೋಗ್ಯಾದಿ ಉಪನಿಷತ್ತುಗಳಲ್ಲಿಯೂ ನೋಡಬಹುದು. ಛಾಂದೋಗ್ಯೋಪನಿಷತ್ತಿನಲ್ಲಿಯೂ (೫-೧೧ರಿಂದ ೫-೧೮) ಶತಪಥಬ್ರಾಹ್ಮಣದಲ್ಲಿ ಹೇಳಿರುವಂತೆಯೇ ವೈಶ್ವಾನರಾಗ್ನಿ ಸಂಬಂಧವಾದ ಕಥೆಯನ್ನೂ ವಿವರಿಸಿದೆ. ಆದರೆ ಹೆಸರುಗಳಲ್ಲಿಯೂ, ವಿವರಣೆಯಲ್ಲಿಯೂ ಅಲ್ಲಲ್ಲಿ ಕೊಂಚ ವ್ಯತ್ಯಾಸಗಳಿರುತ್ತವೆ. ಆದರೂ ಸಹ ಅಶ್ವಪತಿ ಕೈಕೇಯನು ತನ್ನಲ್ಲಿ ಉಪದೇಶಕ್ಕಾಗಿ ಬಂದ ಎಲ್ಲಾ ಋಷಿಗಳ ಅಭಿಪ್ರಾಯಗಳನ್ನೂ ತಿಳಿದು, ಅವುಗಳನ್ನೆಲ್ಲಾ ಅನುಮೋದಿಸಿ ಕೊನೆಯಲ್ಲಿ ಅವೆಲ್ಲವೂ ವೈಶ್ವಾನರಾಗ್ನಿಯ ಬೇರೆಬೇರೆ ಅಂಶಗಳೆಂದೂ ಪೂರ್ಣವಾದ ವೈಶ್ವಾನರನಲ್ಲಿ ಆ ಎಲ್ಲಾ ಅಂಶಗಳ ಸಾಮರಸ್ಯವೂ ಒಟ್ಟಾಗಿದೆಯೆಂದೂ ವೈಶ್ವಾನರನ ಸರ್ವತೋಮುಖವಾದ ಸ್ವರೂಪವನ್ನು ಶತಪಥ ಬ್ರಾಹ್ಮಣದಲ್ಲಿರುವಂತೆಯೇ ವಿವರಿಸಿದ್ದಾನೆ.

ತಸ್ಯ ಹ ವಾ ಏತಸ್ಯಾತ್ಮನೋ ವೈಶ್ವಾನರಸ್ಯ ಮೂರ್ಧೈವ ಸುತೇಜಾಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾತ್ಮಾ ಸಂದೇಹೋ ಬಹುಲೋ ಬಸ್ತಿರೇವ ರಯಿಃ ಪೃಥಿವ್ಯೇವ ಪಾದಾವುರ ಏವ ವೇದಿರ್ಲೋಮಾನಿ ಬರ್ಹಿರ್ಹೃದಯಂ ಗಾರ್ಹಪತ್ಯೋ ಮನೋಽನ್ವಾ-ಹಾರ್ಯ ಪಚನ ಆಸ್ಯಮಾಹವನೀಯಃ ॥

( ಛಾಂದೋಗ್ಯೋಪನಿಷತ್ ೫-೧೮-೨ ).

ಅತ್ಯಧಿಕವಾಗಿ ಬೆಳಗುತ್ತಿರುವ ಈ ಅಂತರಿಕ್ಷವೇ ವಿಶ್ವಾತ್ಮನಾದ ಈ ವೈಶ್ವಾನರನ ಶಿರಸ್ಸು. ವಿಶ್ವರೂಪನಾದ ಈ ಆದಿತ್ಯನೇ ಅವನ ನೇತ್ರವು, ಮಾರ್ಗವೈವಿಧ್ಯವನ್ನು ಹೊಂದಿರುವ ವಾಯುವೇ ಉಸಿರು ; ವಿಸ್ತೃತವಾಗಿರುವ ದಿಕ್ಕೇ ಅವನ ದೇಹ, ಅಬ್ರೂಪನ ಧನವೇ ಅವನ ಅಂತಃಕೋಶ ; ಸರ್ವಾಧಾರಳಾಗಿರುವ ಪೃಥ್ವಿಯೇ ಅವನ ಪಾದ ; ಯಜ್ಞವೇದಿಕೆಯೇ ಅವನ ಎದೆ. ದರ್ಭೆಗಳೇ ಅವನ ರೋಮಗಳು, ಗಾರ್ಹಪತ್ಯಾಗ್ನಿಯೇ ಅವನ ಹೃದಯ, ಅನ್ವಾಹಾರ್ಯಪಚನಾಗ್ನಿಯೇ ಅವನ ಮನಸ್ಸು, ಆಹವನೀಯಾಗ್ನಿಯೇ ಅವನ ಮುಖ.

ಸ ಯ ಇದಮವಿದ್ವಾನಗ್ನಿಹೋತ್ರಂ ಜುಹೋತಿ ಯಥಾಂಗಾರಾನಪೋಹ್ಯ ಭಸ್ಮನಿ ಜುಹು-ಯಾತ್ತಾದೃಕ್ತತ್ಸ್ಯಾತ್ ।

( ಛಾ. ಉ. ೫-೨೪-೧ )

ಈ ವೈಶ್ವಾನರಾಗ್ನಿಯ ಸ್ವರೂಪವನ್ನು ತಿಳಿಯದೇ ಅಗ್ನಿಹೋತ್ರವನ್ನು ನೇರವೇರಿಸುವವನು ಬೆಂಕಿಯಿಲ್ಲದ ಭಸ್ಮದಲ್ಲಿ ಹೋಮಮಾಡಿದಂತಾಗುತ್ತದೆಂದು ಜ್ಞಾನದ ಆವಶ್ಯಕತೆಯನ್ನು ತೋರಿಸಿದೆ.

ಅಥ ಯ ಏತದೇವಂ ವಿದ್ವಾನಗ್ನಿಹೋತ್ರಂ ಜುಹೋತಿ ತಸ್ಯ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸು ಹುತಂ ಭವತಿ ।

(ಛಾ. ಉ ೫-೨೪-೨)

ವಿಶ್ವಾತ್ಮನಾದ ಈ ವೈಶ್ವಾನರಾಗ್ನಿಯ ಮಹಿಮೆಯನ್ನು ತಿಳಿದುಕೊಂಡು ಅಗ್ನಿಹೋತ್ರವನ್ನು ನೆರವೇರಿಸುವವನು ಸಕಲ ಲೋಕಗಳಲ್ಲಿಯೂ ಸಕಲ ಭೂತಗಳಲ್ಲಿಯೂ ಸಕಲವಾದ ಆತ್ಮಗಳಲ್ಲಿಯೂ ಹೋಮಮಾಡಿದಂತಾಗುತ್ತದೆ. ಎಂದು ವೈಶ್ವಾನರಾಗ್ನಿಯ ವ್ಯಾಪಕತ್ವವನ್ನು ತೋರಿಸಿದೆ.

ಅಪಿ ವಾ ವಿಶ್ವಾನರ ಏವ ಸ್ಯಾತ್ ಪ್ರತ್ಯೃತಃ ಸರ್ವಾಣಿ ಭೂತಾನಿ ತಸ್ಯ ವೈಶ್ವಾನರಃ ।

(ನಿ. ೭-೨೧)

ಎಂದು ಮೇಲೆ ಉದಹರಿಸಿರುವ ನಿರುಕ್ತಕಾರರ ನಿರ್ವಚನವೂ ಸಹ ಈ ಎಲ್ಲಾ ಶ್ರುತಿವಾಕ್ಯಗಳನ್ನೇ ಆಧಾರವಾಗಿಟ್ಟು ಕೊಂಡಿರುತ್ತದೆ. ಈ ನಿರ್ವಚನವನ್ನೇ ಅನುಸರಿಸಿ ಶಂಕರಾಚಾರ್ಯರೂ ಸಹ,

ವಿಶ್ವಾನ್ನರಾನ್ನಯತಿ ಪುಣ್ಯಪಾಪಾನುರೂಪಾಂ ಗತಿಂ ಸರ್ವಾತ್ಮೈಷ ಈಶ್ವರೋ ವೈಶ್ವಾನರೋ ವಿಶ್ವೋ ನರ ಏವ ವಾ ಸರ್ವಾತ್ಮತ್ವಾತ್ । ವಿಶ್ವೈರ್ವಾ ನರೈಃ ಪ್ರತ್ಯಗಾತ್ಮತಯಾ ಪ್ರವಿಭಜ್ಯ ನೀಯತ ಇತಿ ವೈಶ್ವಾನರಸ್ತಮೇವಮುಪಾಸ್ತೇ । .... .... .... .... .... ವೈಶ್ವಾನರವಿತ್ಸ-ರ್ವಾತ್ಮಾ ಸನ್ನನ್ನಮತ್ತಿ ।

( ಛಾಂದೋಗ್ಯೋಪನಿಷದ್ಭಾಷ್ಯ. ೫-೧೮-೧ )

ಉಂಟುದಾಗಿ ನಿರುಕ್ತಕಾರರ ನಿರ್ವಚನದಂತೆಯೇ ವಿಶ್ವಾತ್ಮನಾದ ವೈಶ್ವಾನರಾಗ್ನಿಯ ಸ್ವರೂಪವನ್ನು ವಿವರಿಸಿದ್ದಾರೆ.

**ಅಭಿಶ್ರೀಃ**—ಅಭಿಶ್ರಯಣೀಯಃ (ನಿ. ೭-೨೨) ಪೂಜ್ಯನೂ, ಆಶ್ರಯನೂ ಆದವನು, ಮೇಲೆ ವಿವರಿಸಿರುವ ಕಾರಣಗಳಿಂದ ವೈಶ್ವಾನರನು ಸರ್ವಲೋಕಕ್ಕೂ ಆಶ್ರಯನು. ಪೂಜ್ಯವಾದ ಆಧಾರ ಅಥವಾ ಆಶ್ರಯ ಎನ್ನುವ ಅರ್ಥದಲ್ಲಿ ಈ ವಿಶೇಷಣವು ಮುಖ್ಯವಾಗಿ ಉಪಯೋಗಿಸಲ್ಪಟ್ಟಿದೆ. ಸರ್ವಲೋಕಕ್ಕೂ ಆಧಾರವಾಗಿರುವ ಮಹತ್ತುಳ್ಳ ಎಂದರ್ಥ.

**ವಿನೀ ತ ವಿತೇ ಬೃಹತೀ ಅಭಿಶ್ರಿಯಾ ಹಿರಣ್ಯಯೀ ವಕ್ವರೀ ಬರ್ಹಿರಾಶಾತೇ ।**
(ಋ. ಸಂ. ೧-೧೪೪-೬)

**ಘೃತವತೀ ಭುವನಾನಾಮಭಿಶ್ರಿಯೋರ್ವೀ ಪೃಥ್ವೀ ಮಧುದುಘೇ ಸುಪೇಶಸಾ ।**
(ಋ. ಸಂ. ೬-೭೦-೧)

**ಪ್ರತ್ನಂ ಹೋತಾರಮೀಡ್ಯಂ ಜುಷ್ಟಮಗ್ನಿಂ ಕವಿಕ್ರತುಂ । ಅಧ್ವರಾಣಾಮಭಿಶ್ರಿಯಂ ।**
(ಋ. ಸಂ. ೮-೪೪-೭)

**ವಿರಾಣ್ಮಿತ್ರಾವರುಣಯೋರಭಿಶ್ರೀರಿಂದ್ರಸ್ಯ ತ್ರಿಷ್ಟುಬಿಹ ಭಾಗೋ ಅಹ್ನಃ ।**
(ಋ. ಸಂ. ೧೦-೧೩೦-೫)

ಇತ್ಯಾದಿ ಸನ್ನಿವೇಶಗಳಲ್ಲೆಲ್ಲಾ ಅಭಿಶ್ರೀ ಎಂಬ ವಿಶೇಷಣಕ್ಕೆ **ವಂದ್ಯವಾದ, ಸ್ತುತ್ಯವಾದ** ಎಂಬರ್ಥವಾಗುವಂತೆ ಇಲ್ಲಿಯೂ ಸಹ ಪೂಜ್ಯನಾದ ಆಶ್ರಯನು ಎಂದು ವೈಶ್ವಾನರನ ಮಹತ್ತ್ವವನ್ನು ತಿಳಿಸಿದೆ.

**ವಿಚಷ್ಟೇ**—**ಚಿಕ್ಯತ್, ಚಾಕನತ್, ಆಚಕ್ಷ್ವ** ಇತ್ಯಾದಿ **ಪಶ್ಯತಿಕರ್ಮ**ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) **ವಿಚಷ್ಟೇ** ಎಂದರೆ ನೋಡುತ್ತಾನೆ ಎಂದರ್ಥವು. ಪೃಥ್ವಿಯಲ್ಲಿ ಉತ್ಪನ್ನನಾದರೂ ಸಹ,

**ಜಾತ ಆಪೃಣೋ ಭುವನಾನಿ ರೋದಸೀ ಅಗ್ನೇ ತಾ ವಿಶ್ವಾ ಪರಿಭೂರಸಿ ತ್ಮನಾ ।**
(ಋ. ಸಂ. ೩-೩-೧೦)

ಎಂದು ವರ್ಣಿಸಿರುವಂತೆ ದ್ಯಾವಾಪೃಥಿವ್ಯಾದಿ ಸಕಲ ಲೋಕಗಳನ್ನೂ ವ್ಯಾಪಿಸುವುದರಿಂದ ಸಕಲ ವಸ್ತುವೂ ಇವನ ಗೋಚರಕ್ಕೆ ಬೀಳುತ್ತದೆಯೆಂದರ್ಥ, ಸಕಲ ಭುವನಗಳಿಗೂ ಪ್ರಭುವಾಗಿರುವುದರಿಂದಲೂ, ಇವನ ಅನುಗ್ರಹದಿಂದಲೇ ಜಗತ್ಕಲ್ಯಾಣವೂ ಆಗಬೇಕಾಗಿರುವುದರಿಂದಲೂ ಇಂತಹ **ವೈಶಾನರಸ್ಯ ಸುಮತೌ ಸ್ಯಾಮ**—**ವಯಂ ವೈಶ್ವಾನರಸ್ಯ ಕಲ್ಯಾಣ್ಯಾಂ ಮತೌ ಸ್ಯಾಮ** (ನಿ. ೭-೨೨) ಇವನ ಕಲ್ಯಾಣಾತ್ಮಕವಾದ ಅನುಗ್ರಹವನ್ನು ಸಂಪಾದಿಸುವುದಕ್ಕೆ ಯೋಗ್ಯರಾಗಿರೋಣ ಎಂದು ಮುಖ್ಯಾಭಿಪ್ರಾಯವು.

ವ್ಯಾಕರಣಪ್ರಕ್ರಿಯಾ

**ವೈಶ್ವಾನರಸ್ಯ**—ವಿಶ್ವೇಷಾಂ ನರಾಣಾಂ ಸಂಬಂಧೀ ವೈಶ್ವಾನರಃ. **ತಸ್ಯೇದಮ್**—ಎಂಬುದರಿಂದ ಅಣ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ**—ಎಂಬುದರಿಂದ ಆದಿವೃದ್ಧಿ. **ನರೇ ಸಂಜ್ಞಾಯಾಮ್**—(ಪಾ. ಸೂ.

೬-೩-೧೩೯) ಎಂಬುದರಿಂದ ಪೂರ್ವಪದಕ್ಕೆ ದೀರ್ಘ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಷಷ್ಠೀ ಏಕವಚನಾಂತರೂಪ

**ಸುಮತೌ**—ಮನ ಜ್ಞಾನೇ ಧಾತು. **ಸ್ತ್ರಿಯಾಂಕ್ತಿನ್**—ಎಂಬುದರಿಂದ ಕ್ತಿನ್ ಪ್ರತ್ಯಯ. **ಅನುದಾತ್ತೋಪದೇಶ**—ಎಂಬುದರಿಂದ ಧಾತುವಿನ ನಕಾರಕ್ಕೆ ಲೋಪ. ಶೋಭನಾ ಮತಿಃ ಸುಮತಿಃ. ಇಲ್ಲಿ **ತಾದೌಚನಿತಿ**—(ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ಸು) ಪ್ರಕೃತಿಸ್ವರವು ಪ್ರಾಪ್ತವಾದರೆ ಮನ್‌ಕ್ತಿನ್—(ಪಾ. ಸೂ. ೬-೨-೧೫೧) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಆದರೆ ಅದರಿಂದ ಅಂತೋದಾತ್ತಸ್ವರ ಬರಲು ನಿಮಿತ್ತವಿಲ್ಲ. **ಕಾರಕಾತ್**—ಎಂದು ಹಿಂದಿನ ಸೂತ್ರದಿಂದ ಅನುವೃತ್ತವಾಗುವುದರಿಂದ ಕಾರಕದ ಪರದಲ್ಲಿರುವ ಮತಿ ಎಂಬುದಕ್ಕೇ ಆ ಸ್ವರ ಬರುವುದರಿಂದ, ಇಲ್ಲಿ ಗತಿಪೂರ್ವಕವಾದುದರಿಂದ ಬರಲು ಅವಕಾಶವಿಲ್ಲ. ಆದುದರಿಂದ ಬೇರೆ ರೀತಿಯಿಂದ ನಿರ್ವಚನಮಾಡಬೇಕು. ಮತಿರ್ಮನನಮ್. **ಸ್ತ್ರಿಯಾಂಕ್ತಿನ್**—(ಪಾ. ಸೂ. ೩-೩-೯೪) ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. ಶೋಭನಂ ಮನನಂ ಯಸ್ಯಾಂ ಬುದ್ಧೌ ಸಾ ಸುಮತಿಃ. ಬಹುವ್ರೀಹಿಸಮಾಸ. **ನಞ್‌ಸುಭ್ಯಾಮ್**—(ಪಾ ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಸ್ಯಾಮ**—ಅಸ ಭುವಿ. ಧಾತು. ಅದಾದಿ. ಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂಙಿತಃ**—ಎಂಬುದರಿಂದ ಸಕಾರಲೋಪ. ಯಾಸುಟಾಗಮ. ಙಿತ್ತ್ವವಿರುವುದರಿಂದ **ಶ್ನಸೋರಲ್ಲೋಪಃ**—(ಪಾ. ಸೂ. ೬-೪-೧೧೧) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ತಿಙಂತ ನಿಘಾತಸ್ವರ ಬರುತ್ತದೆ.

**ಚಷ್ಟೇ**—ಚಕ್ಷಿಙ್ ವ್ಯಕ್ತಾಯಾಂ ವಾಚಿ. ಧಾತು. ಅದಾದಿ. ಇದು ಪ್ರೇಕ್ಷಣಾರ್ಥದಲ್ಲಿಯೂ ಇದೆ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ **ಟಿತಆತ್ಮನೇಪದಾನಾಂ**—ಎಂಬುದರಿಂದ ಟಿಗೆ ಏತ್ವ **ಅದಿಪ್ರಭೃತಿಭ್ಯಃ ಶಪಃ**—(ಪಾ. ಸೂ. ೨-೪-೭೨) ಎಂಬುದರಿಂದ ಶಪಿಗೆ ಲುಕ್. ಷತ್ವ ಅಸಿದ್ಧವಾದುದರಿಂದ ಝಲ್ ಪರವಾದುದರಿಂದ **ಸ್ಕೋಃಸಂಯೋಗಾದ್ಯೋರಂತೇಚ**—ಎಂಬುದರಿಂದ ಧಾತುವಿನ ಕಕಾರಕ್ಕೆ ಲೋಪ. ಷ್ಟುತ್ವದಿಂದ ಪ್ರತ್ಯಯತಕಾರಕ್ಕೆ ಟಕಾರಾದೇಶ. ಚಷ್ಟೇ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯತತೇ**—ಯತೀ ಪ್ರಯತ್ನೇ ಧಾತು. ಅನುದಾತ್ತೇತ್ ಲಟ್ ಪ್ರಥಮಪುರುಷ ಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

**ಸೂರ್ಯೇಣ**—ಸರತಿ ಆಕಾಶೇ ಇತಿ ಸೂರ್ಯಃ. ಸೃ ಗತೌ ಧಾತು. **ರಾಜಸೂಯ ಸೂರ್ಯ**—(ಪಾ. ಸೂ. ೩-೧-೧೧೪) ಎಂಬುದರಿಂದ ಕ್ಯಬಂತವಾಗಿ ನಿಪಾತಿತವಾಗಿದೆ. ಅಥವಾ ಷೂ ಪ್ರೇರಣೇ ಧಾತು. ಸುವತಿ ಕರ್ಮಣಿ ಲೋಕಂ ಪ್ರೇರಯತಿ ಇತಿ ಸೂರ್ಯಃ. ಕ್ಯಪಿಗೆ ರುಟ್ ನಿಪಾತಿತವಾಗಿದೆ. ಕ್ಯಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ತೃತೀಯಾ ಏಕವಚನಾಂತರೂಪ. ‖ ೧ ‖

———— :o: ————

॥ ಸಂಹಿತಾಪಾಠಃ ॥

ಪೃಷ್ಟೋ ದಿವಿ ಪೃಷ್ಟೋ ಅಗ್ನಿಃ ಪೃಥಿವ್ಯಾಂ ಪೃಷ್ಟೋ ವಿಶ್ವಾ
ಓಷಧೀರಾ ವಿವೇಶ।
ವೈಶ್ವಾನರಃ ಸಹಸಾ ಪೃಷ್ಟೋ ಅಗ್ನಿಃ ಸ ನೋ ದಿವಾ ಸ ರಿಷಃ
ಪಾತು ನಕ್ತಂ ॥ ೨ ॥

ಪದಪಾಠಃ

ಪೃಷ್ಟಃ । ದಿವಿ । ಪೃಷ್ಟಃ । ಅಗ್ನಿಃ । ಪೃಥಿವ್ಯಾಂ । ಪೃಷ್ಟಃ । ವಿಶ್ವಾಃ । ಓಷಧೀಃ ।
ಆ । ವಿವೇಶ ।
ವೈಶ್ವಾನರಃ । ಸಹಸಾ । ಪೃಷ್ಟಃ । ಅಗ್ನಿಃ । ಸಃ । ನಃ । ದಿವಾ । ಸಃ । ರಿಷಃ ।
ಪಾತು । ನಕ್ತಂ ॥ ೨ ॥

॥ ಸಾಯಣಭಾಷ್ಯಂ ॥

ಚಾತುರ್ಮಾಸ್ಯಾನ್ವಾರಂಭಣೀಯಾ ವೈಶ್ವಾನರಪಾರ್ಜನ್ಯಾ । ತಸ್ಯಾಂ ವೈಶ್ವಾನರಸ್ಯ ಹವಿಷಃ ಪೃಷ್ಟೋ ದಿವೀತಿ ಯಾಜ್ಯಾ । ಚಾತುರ್ಮಾಸ್ಯಾನೀತಿ ಖಂಡೇ ಸೂತ್ರಿತಂ। ಪೃಷ್ಟೋ ದಿವಿ ಪೃಷ್ಟೋ ಅಗ್ನಿಃ ಪೃಥಿವ್ಯಾಂ ಪರ್ಜನ್ಯಾಯ ಪ್ರ ಗಾಯತ । ಆ. ೨-೧೫ । ಇತಿ ॥

ಅಯಂ ವೈಶ್ವಾನರೋಽಗ್ನಿರ್ದಿವಿ ದ್ಯುಲೋಕ ಆದಿತ್ಯಾತ್ಮನಾ ಪೃಷ್ಟಃ ಸಂಸ್ಪೃಷ್ಟಃ ಯದ್ವಾ ನಿಷಿಕ್ತೋ ನಿಹಿತೋ ವರ್ತತೇ । ತಥಾ ಪೃಥಿವ್ಯಾಂ ಭೂಮೌ ಗಾರ್ಹಪತ್ಯಾದಿರೂಪೇಣ ಪೃಷ್ಟಃ ಸಂಸ್ಪೃಷ್ಟೋ ನಿಹಿತೋ ವಾ । ತಥಾ ವಿಶ್ವಾಃ ಸರ್ವಾ ಓಷಧೀಃ ಪೃಷ್ಟಃ ಸಂಸ್ಪೃಷ್ಟಃ ಸೋಽಗ್ನಿರಾವಿವೇಶ । ಪಾಕಾರ್ಥಮಂತಃಪ್ರವಿಷ್ಟವಾನ್ । ಅಂತಃಪ್ರವಿಷ್ಟೇನ ಪಾರ್ಥಿವೇನಾಗ್ನಿನಾ ಹಿ ಸರ್ವಾ ಓಷಧಯಃ ಪಚ್ಯಂತೇ । ಸಹಸಾ ಪರೇಷಾಮಸಾಧಾರಣೇನ ಬಲೇನ ಪೃಷ್ಟಃ ಸಂಸ್ಪೃಷ್ಟೋ ವೈಶ್ವಾನರೋ ನೋಽಸ್ಮಾನ್ದಿವಾಹ್ನಿ ರಿಷೋ ಹಿಂಸತಃ ಶತ್ರೋಃ ಪಾತು । ರಕ್ಷತು । ತಥಾ ಸ ವೈಶ್ವಾನರೋ ನಕ್ತಂ ರಾತ್ರಾವಪ್ಯಸ್ಮಾನ್ಹಿಂಸಕಾತ್ಪಾತು ॥

ಪೃಷ್ಟಃ । ಸ್ಪೃಶ ಸಂಸ್ಪರ್ಶನೇ । ಛಾಂದಸಃ ಸಕಾರಲೋಪಃ । ಯದ್ವಾ ಪೃಷು ಸೇಚನೇ । ನಿಷ್ಠಾಯಾಂ ಯಸ್ಯ ವಿಭಾಷೇತೀಟ್ಪ್ರತಿಷೇಧಃ । ದಿವಿ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ಪೃಥಿವ್ಯಾಂ । ಉದಾತ್ತಯಣ ಇತಿ ವಿಭಕ್ತಿರುದಾತ್ತಾ । ರಿಷಃ । ರಿಷ ಹಿಂಸಾಯಾಂ । ಕ್ವಿಪ್ಚೇತಿ ಕ್ವಿಪ್ । ಸಾವೇಕಾಚ ಇತಿ ಪಂಚಮ್ಯಾ ಉದಾತ್ತತ್ವಂ ॥

ಪ್ರತಿಪದಾರ್ಥ

ಅಗ್ನಿಃ—ಅಗ್ನಿಯು । **ದಿವಿ**—ದ್ಯುಲೋಕದಲ್ಲಿ । **ಪೃಷ್ಟಃ**—(ಆದಿತ್ಯರೂಪದಲ್ಲಿ) ಸಂಪರ್ಕವನ್ನು ಹೊಂದಿದ್ದಾನೆ । **ಪೃಥಿವ್ಯಾಂ**— ಭೂಮಿಯಮೇಲೆ । **ಪೃಷ್ಟಃ**— ( ಗಾರ್ಹಪತ್ಯಾದಿರೂಪದಿಂದ ) ಸಂಪರ್ಕವನ್ನು ಹೊಂದಿದ್ದಾನೆ ( ಹಾಗೆಯೇ ) । **ವಿಶ್ವಾಃ**— ಸಮಸ್ತವಾದ । **ಓಷಧೀಃ**— ಸಸ್ಯ ಮತ್ತು ಮೂಲಿಕಾದಿಗಳನ್ನು । **ಪೃಷ್ಟಃ**—ಸೇರಿಕೊಂಡು (ವ್ಯಾಪಿಸಿ) । **ಆ ವಿವೇಶ**—(ಅವುಗಳ ಪಾಕಾರ್ಥವಾಗಿ) ಅವುಗಳೊಳಗೆ ಪ್ರವೇಶಿಸಿದ್ದಾನೆ । **ಸಹಸಾ**—(ಅಸಾಧಾರಣವಾದ) ಶಕ್ತಿಯಿಂದ । **ಪೃಷ್ಟಃ ಸಃ**—ಕೂಡಿಕೊಂಡು ಇರುವ ಅಗ್ನಿಯು । **ನಃ**—ನಮ್ಮನ್ನು । **ದಿವಾ**—ಹಗಲು ಕಾಲದಲ್ಲಿ । **ರಿಷಃ**—ಹಿಂಸಿಸುವ ಶತ್ರುವಿನಿಂದ । **ಪಾತು**—ಕಾಪಾಡಲಿ (ಹಾಗೆಯೇ) ) **ಸಃ**—ಆ ಅಗ್ನಿಯು । **ನಕ್ತಂ**—ರಾತ್ರಿಯಲ್ಲಿಯೂ ಸಹ (ಶತ್ರುವಿನಿಂದ ರಕ್ಷಿಸಲಿ) ॥

ಭಾವಾರ್ಥ

ಸಕಲ ಜಗತ್ತಿಗೂ ಪ್ರಭುವಾದ ಅಗ್ನಿಯು ಜಗತ್ತಿನಲ್ಲೆಲ್ಲಾ ವ್ಯಾಪಿಸಿದ್ದಾನೆ. ದ್ಯುಲೋಕದಲ್ಲಿ ಆದಿತ್ಯರೂಪದಿಂದಲೂ, ಭೂಮಿಯಮೇಲೆ ಗಾರ್ಹಪತ್ಯಾದಿ ರೂಪದಿಂದಲೂ ಶಾಶ್ವತವಾದ ಸಂಪರ್ಕವನ್ನು ಹೊಂದಿ ಸಕಲವಾದ ಸಸ್ಯ ಮೂಲಿಕಾದಿಗಳನ್ನೂ ವ್ಯಾಪಿಸಿ ಅವುಗಳ ಪಾಕಾರ್ಥವಾಗಿ ಅವುಗಳೊಳಗೆ ಪ್ರವೇಶಿಸಿದ್ದಾನೆ. ಇಂತಹ ಅಸಾಧಾರಣವಾದ ಶಕ್ತಿಯಿಂದ ಕೂಡಿಕೊಂಡಿರುವ ಅಗ್ನಿಯು ನಮ್ಮನ್ನು ಹಗಲೂ ರಾತ್ರಿಯೂ ನಮ್ಮನ್ನು ಹಿಂಸೆ ಮಾಡುವ ಶತ್ರುವಿನಿಂದ ರಕ್ಷಿಸಲಿ.

English Translation

Agni, who is present in the sky, and present upon earth, and who, present, has pervaded all herbs : may the Agni Vaiswanara, who is present in vigour, guard us night and day against our enemies.

॥ ವಿಶೇಷವಿಷಯಗಳು ॥

ಚಾತುರ್ಮಾಸ್ಯವೆಂಬ ಯಾಗದಲ್ಲಿ ವೈಶ್ವಾನರ ಮತ್ತು ಪರ್ಜನ್ಯ ಎಂಬ ದೇವತೆಗಳಿಗೆ ಅನ್ವಾರಂಭಣೀಯವೆಂಬ ಹೋಮವನ್ನು ಮಾಡಬೇಕಾಗಿರುವುದು. ಆಗ ವೈಶ್ವಾನರದೇವತೆಗೆ ಹವಿರ್ನಿರ್ವಪನಕ್ಕಾಗಿ **ಪೃಷ್ಟೋ ದಿವಿ** ಎಂಬ ಈ ಸೂಕ್ತವನ್ನು ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಚಾತುರ್ಮಾಸ್ಯಾನಿ** ಎಂಬ ಖಂಡದ **ಪೃಷ್ಟೋ** ದಿವಿ **ಪೃಷ್ಟೋ** ಅಗ್ನಿಃ ಪೃಥಿವ್ಯಾಂ ಪರ್ಜನ್ಯಾಯ ಪ್ರ ಗಾಯತ ಎಂಬ ಸೂತ್ರದಿಂದ ವಿಶದವಾಗಿರುವುದು (ಆ. ೨-೧೫).

**ದಿವಿ ಪೃಷ್ಟಃ**— ದ್ಯುಲೋಕೇ ಆದಿತ್ಯಾತ್ಮನಾ ಸಂಸ್ಪೃಷ್ಟಃ ಯದ್ವಾ ನಿಹಿತಃ ವರ್ತತೇ । **ಪೃಥಿವ್ಯಾಂ** ಗಾರ್ಹಪತ್ಯಾದಿರೂಪೇಣ ವರ್ತತೇ । **ವಿಶ್ವಾಃ ಓಷಧೀಃ** ಪಾರ್ಥಿವಾಗ್ನಿರೂಪೇಣ ಪಾಕಾರ್ಥ- ಮಂತಃ **ಪ್ರವಿಷ್ಟವಾನ್**— ಅಗ್ನಿಯು ಆದಿತ್ಯರೂಪದಿಂದ ದ್ಯುಲೋಕದ ಸಂಪರ್ಕವನ್ನೂ, ಗಾರ್ಹಪತ್ಯಾದಿರೂಪ ದಿಂದ ಪೃಥಿವಿಯ ಸಂಪರ್ಕವನ್ನೂ ಪಾರ್ಥಿವಾಗ್ನಿರೂಪದಿಂದ ಸಮಸ್ತ ಓಷಧಿಗಳ ಸಂಪರ್ಕವನ್ನೂ ಹೊಂದಿದ್ದಾನೆ. ಅಥವಾ ಈ ಎಲ್ಲಾ ಪ್ರದೇಶಗಳಲ್ಲೂ ನಿಹಿತನಾಗಿದ್ದಾನೆ, ಎಂಬುದಾಗಿ ಸಾಯಣರು **ಪೃಷ್ಟಃ** ಎಂಬ ಶಬ್ದಕ್ಕೆ ಸ್ಪರ್ಶ ಮಾಡು ಎಂದರ್ಥವನ್ನು ಹೇಳಿದ್ದಾರೆ. ಸ್ಕಂದಸ್ವಾಮಿಗಳು **ಪೃಷ್ಟಃ ಸ್ತುತಃ ಅಗ್ನಿಃ । ಸಾಮರ್ಥ್ಯಾತ್ ದೇವೈಃ ।** ದೇವತೆಗಳಿಂದ ಸ್ತುತನಾಗಿ ದ್ಯುಲೋಕದಲ್ಲಿಯೂ, ಮಾನವರಿಂದ ಸ್ತುತನಾಗಿ ಪೃಥ್ವಿಯಲ್ಲಿಯೂ, ದೇವತೆಗಳಿಂದಲೂ ಮತ್ತು ಮಾನವರಿಂದಲೂ ಸ್ತುತನಾಗಿ ಓಷಧಿಗಳಲ್ಲಿಯೂ ವ್ಯಾಪಿಸಿದ್ದಾನೆಂದು ವಿವರಿಸಿದ್ದಾರೆ. ಈ ಎರಡು ಅರ್ಥ ಗಳಲ್ಲಿ ಯಾವುದನ್ನು ಬೇಕಾದರೂ ಹೇಳಬಹುದು. ಏತಕ್ಕೆಂದರೆ ಈ ಎಲ್ಲಾ ಲೋಕಗಳನ್ನೂ ವ್ಯಾಪಿಸಿಕೊಳ್ಳಬೇಕಾ ದರೆ ಅತ್ಯಧಿಕವಾದ ಮಹತ್ವವಿದ್ದೇ ಇರಬೇಕು ಆಗ ಎಲ್ಲರೂ ಈ ಮಹತ್ತ್ವವನ್ನು ಖಂಡಿತವಾಗಿಯೂ ಸ್ತುತಿಸು ತ್ತಾರೆ. ಸರ್ವವ್ಯಾಪಿಯಾದ ಈ ವೈಶ್ವಾನರಾಗ್ನಿಯ ಮಾಹಾತ್ಮ್ಯವನ್ನು ಸಕಲ ಶ್ರುತಿಗಳೂ ಅತ್ಯಧಿಕವಾಗಿ ಸ್ತುತಿಸಿವೆ.

**ಅಗ್ನೇ ಯತ್ತೇ ದಿವಿ ವರ್ಚಃ ಪೃಥಿವ್ಯಾಂ ಯದೋಷಧೀಷ್ವಪ್ಸ್ವಾ ಯಜತ್ರ ।**
**ಯೇನಾಂತರಿಕ್ಷಮುರ್ವಾತತಂಥ ತ್ವೇಷಃ ಸ ಭಾನುರರ್ಣವೋ ನೃಚಕ್ಷಾಃ ।**

(ಋ. ಸಂ. ೩-೨೨-೨)

**ಆ ಸೂರ್ಯೇ ನ ರಶ್ಮಯೋ ಧ್ರುವಾಸೋ ವೈಶ್ವಾನರೇ ದಧಿರೇಽಗ್ನಾ ವಸೂನಿ ।**
**ಯಾ ಪರ್ವತೇಷ್ವೋಷಧೀಷ್ವಪ್ಸು ಯಾ ಮಾನುಷೇಷ್ವಸಿ ತಸ್ಯ ರಾಜಾ ॥**

(ಋ. ಸಂ. ೧-೫೯-೩)

**ವಿ ಯೋ ವೀರುತ್ಸು ರೋಧನ್ಮಹಿತ್ವೋತ ಪ್ರಜಾ ಉತ ಪ್ರಸೂಷ್ವಂತಃ ।**

(ಋ. ಸಂ. ೧-೬೭-೯)

ಎಂಬುದಾಗಿ ಋಕ್ಸಂಹಿತೆಯ ನಾನಾ ಸನ್ನಿವೇಶಗಳಲ್ಲಿ ಸ್ತುತಿಸಿರುವಂತೆಯೇ ಶತಪಥಾದಿ ಬ್ರಾಹ್ಮಣಗಳಲ್ಲಿಯೂ ಅನೇಕ ಕಡೆ ಈ ವಿಧವಾದ ವೈಶ್ವಾನರಾಗ್ನಿಯ ಪ್ರಶಂಸೆ ಇರುವುದು.

ನೃಷದೇ ವೇಡಿತಿ । ಪ್ರಾಣೋ ವೈ ನೃಷನ್ಮನುಷ್ಯಾ ನರಸ್ತದ್ಯೋಽಯಂ ಮನುಷ್ಯೇಷು ಪ್ರಾಣೋಽಗ್ನಿಸ್ತಮೇತತ್ಪ್ರೀಣಾತ್ಯಪ್ಸುಷದೇ ವೇಡಿತಿ ಯೋಽಪ್ಸ್ವಗ್ನಿಸ್ತಮೇತತ್ಪ್ರೀಣಾತಿ ಬರ್ಹಿಷದೇ ವೇಡಿತಿ ಯ ಓಷಧಿಷ್ವಗ್ನಿಸ್ತಮೇತತ್ಪ್ರೀಣಾತಿ ವನಸದೇ ವೇಡಿತಿ ಯೋ ವನ- ಸ್ಪತಿಷ್ವಗ್ನಿಸ್ತಮೇತತ್ಪ್ರೀಣಾತಿ ಸ್ವರ್ವಿದೇ ವೇಡಿತ್ಯಯಮಗ್ನಿಃ ಸ್ವರ್ವಿದಿಮಮೇವೈತದಗ್ನಿಂ ಪ್ರೀಣಾತಿ ॥

(ಶತಪಥಬ್ರಾಹ್ಮಣ ೯-[illegible]-೧-೨)

ಸರಿದ್ವಸ್ತ್ರಿ ಅಂತಸ್ಥನಾಗಿರತಕ್ಕ ಅಗ್ನಿಗೆ **ವೇಟ್** ಎಂದರ್ಥವು. ಮನುಷ್ಯರಲ್ಲೆಲ್ಲಾ ಅಂತಸ್ಥವಾಗಿರತಕ್ಕ ಪ್ರಾಣವೇ ಅಗ್ನಿಯು. ಈ ಪ್ರಾಣವನ್ನುದ್ದೇಶಿಸಿ ಆಹುತಿಯನ್ನು ಕೊಡತಕ್ಕ ಪುರುಷನು ಸಕಲ ಮನುಷ್ಯರಲ್ಲಿಯೂ ವ್ಯಾಪಿಸಿರುವ ಪ್ರಾಣರೂಪನಾದ ಅಗ್ನಿಯನ್ನು ತೃಪ್ತಿಪಡಿಸುತ್ತಾನೆ. ಜಲಸ್ಥವಾದ ಅಗ್ನಿಗೆ ಈ ಆಹುತಿಯಿಂದ ಜಲದಲ್ಲಿ ಅಡಗಿರುವ ಅಗ್ನಿಯನ್ನು ತೃಪ್ತಿಪಡಿಸುತ್ತಾನೆ. ಬರ್ಹಿಯ ಮೇಲೆ ಕುಳಿತಿರುವ ಅಗ್ನಿಗೆ ಈ ಆಹುತಿಯಿಂದ ಸಸ್ಯಗಳಲ್ಲಿ ವ್ಯಾಪಿಸಿರುವ ಅಗ್ನಿಯನ್ನು ತೃಪ್ತಿಪಡಿಸುತ್ತಾನೆ. ವೃಕ್ಷಗಳಲ್ಲಿ ಅಡಗಿರುವ ಅಗ್ನಿಗೆ ಕೊಡುವ ಆಹುತಿಯಿಂದ ವೃಕ್ಷಗಳಲ್ಲಿರತಕ್ಕ ಅಗ್ನಿಯನ್ನು ತೃಪ್ತಿಪಡಿಸುತ್ತಾನೆ. ಸ್ವರ್ಲೋಕವನ್ನು ಆಕ್ರಮಿಸುವ ಅಗ್ನಿಗೆ ಕೊಡುವ ಆಹುತಿಯಿಂದ ಸ್ವರ್ಲೋಕವನ್ನು ಆಕ್ರಮಿಸಿರುವ ಅಗ್ನಿಯನ್ನು ತೃಪ್ತಿಪಡಿಸುತ್ತಾನೆ ಎಂದು ಸಮಸ್ತ ಪ್ರದೇಶಗಳಲ್ಲಿಯೂ ವ್ಯಾಪಿಸಿರುವ ಅಗ್ನಿಯ ಪ್ರಶಂಸೆಯು ನಾನಾ ಕಡೆಗಳಲ್ಲಿವೆ. ಶ. ಬ್ರಾ. ೯-೨-೩ ರಲ್ಲಿ ಈ ವಿಷಯವನ್ನು ಇನ್ನೂ ವಿವರವಾಗಿ ವಿಸ್ತರಿಸಿದೆ.

**ಸಹಸಾ ಪೃಷ್ಟಃ**—ಓಜಃ, ಪಾಜಃ, ಶವಃ, ಇತ್ಯಾದಿ ೨೮ ಬಲನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೯) **ಸಹಸ್** ಶಬ್ದಕ್ಕೆ ಬಲವೆಂದರ್ಥ. **ಸ್ವಗತಯಾ ಬಲವತ್ತಯಾ ಸ್ತುತ ಇತ್ಯರ್ಥಃ** । ತನ್ನಲ್ಲಿರತಕ್ಕ ಸ್ವಶಕ್ತಿಯ ಮಾಹಾತ್ಮ್ಯಕ್ಕಾಗಿ ಸ್ತುತನಾದವನು. ಶಕ್ತಿಪುತ್ರನು, ಶಕ್ತ್ಯಧಿದೇವತೆ ಇತ್ಯಾದಿ ನಾನಾ ವಿಶೇಷಣಗಳಿಂದ ಅಗ್ನಿಯನ್ನು ಅನೇಕ ಸನ್ನಿವೇಶಗಳಲ್ಲಿ ಸ್ತುತಿಸಿದೆ.

**ತಸ್ಮಿನ್ತ್ಸಂತಿ ಪ್ರಶಿಷಸ್ತಸ್ಮಿನ್ನಿಷ್ಟಯಃ ಸ ವಾಜಸ್ಯ ಶವಸಃ ಶುಷ್ಮಿಣಸ್ಪತಿಃ ।**
(ಋ. ಸಂ. ೧-೧೪೫-೧).

**ತ್ವಂ ನೋ ಅಗ್ನೇ ಅದ್ಭುತ ಕ್ರತ್ವಾ ದಕ್ಷಸ್ಯ ಮಂಹನಾ ।**
**ತ್ವೇ ಅಸುರ್ಯ೧ ಮಾರುಹತ್ಕ್ರಾಣಾ ಮಿತ್ರೋ ನ ಯಜ್ಞಿಯಃ ॥**
(ಋ. ಸಂ. ೫-೧೦-೨).

ಎಂಬುದಾಗಿ ಅಗ್ನಿಯೇ ಶಕ್ತಿಯ ರೂಪಕ್ಕೆಲ್ಲಾ ಅಧಿಪತಿಯಾಗಿದ್ದು ಸಮಸ್ತವಾದ ಬೇಡಿಕೆಗೆಲ್ಲಾ ಅವನು ಆಶ್ರಯನಾಗಿರುತ್ತಾನೆ. ಈ ವಿಧವಾಗಿ ಅಸಾಧಾರಣವಾದ ಶಕ್ತಿಯಿರುವುದರಿಂದಲೇ ಹಿಂಸಕರಾದ ಶತ್ರುಗಳಿಂದ ರಕ್ಷಿಸು ಎಂದು ಪ್ರಾರ್ಥಿತನಾಗಿದ್ದಾನೆ.

**ರಿಷಃ—ಹಿಂಸತಃ ಶತ್ರೋಃ** । ಹಿಂಸಕನಾದ ಶತ್ರುವಿನಿಂದ, ರಕ್ಷಿಸು ಎಂದು ಪ್ರಾರ್ಥಿಸಿದೆ. ಅಗ್ನಿಯ ಶತ್ರುನಾಶಕವಾದ ಶಕ್ತಿಯು—

**ಸ ಹಿ ಪುರೂ ಚಿದೋಜಸಾ ವಿರುಕ್ಮತಾ ದೀದ್ಯಾನೋ ಭವತಿ ದ್ರುಹಂತರಃ ಪರಶುರ್ನ ದ್ರುಹಂತರಃ ।**
(ಋ. ಸಂ. ೧-೧೨೭-೩).

**ಸ ಪುರಸ್ತಾದುಪದಧಾತಿ । ಅಗ್ನೇ ಜಾತಾನ್ಪ್ರಣುದಾ ನಃ ಸಪತ್ನಾನಿತಿ ಯಥೈವ ಯಜುಸ್ತಥಾ ಬಂಧುರಥ ಪಶ್ಚಾತ್ಸಹಸಾ ಜಾತಾನ್ಪ್ರಣುದಾ ನಃ ಸಪತ್ನಾನಿತಿ ಯಥೈವ ಯಜುಸ್ತಥಾ ಬಂಧುಃ ।**
(ಶ. ಬ್ರಾ. ೮-೫-೧೮).

ಈಗ ಹುಟ್ಟಿರುವ ಮತ್ತು ಮುಂದಕ್ಕೆ ಹುಟ್ಟತಕ್ಕ ಸಮಸ್ತಶತ್ರುಗಳನ್ನೂ ನಾಶಮಾಡಿ ಯಾವಾಗಲೂ ನಾವು ನಿನ್ನ ಶಕ್ತಿಯನ್ನೇ ನಂಬಿ ನಿನ್ನ ರಕ್ಷಣೆಯಲ್ಲಿರುವಂತೆ ಅನುಗ್ರಹಿಸು ಎಂದು ಋಗಾದಿಸಂಹಿತೆಗಳಲ್ಲಿಯೂ ಶತಪಥಾದಿ ಬ್ರಾಹ್ಮಣಗಳಲ್ಲಿಯೂ ಅಗ್ನಿಶಕ್ತಿಯ ಮಾಹಾತ್ಮ್ಯವು ಪ್ರಶಂಸಿಸಲ್ಪಟ್ಟಿದೆ.

॥ ವ್ಯಾಕರಣಪ್ರಕ್ರಿಯಾ ॥

**ಪೃಷ್ಟಃ**—ಸ್ಪೃಶ ಸಂಸ್ಪರ್ಶನೇ ಧಾತು. ಇದಕ್ಕೆ ಕ್ತಪ್ರತ್ಯಯ. **ವ್ರಶ್ಚ ಭ್ರಸ್ಜ**—ಎಂಬುದರಿಂದ ಶಕಾರಕ್ಕೆ ಷಕಾರಾದೇಶ. ಷ್ಟುತ್ವದಿಂದ ತಕಾರಕ್ಕೆ ಟಕಾರಾದೇಶ. ಛಾಂದಸವಾಗಿ ಧಾತುವಿನ ಆದಿಸಕಾರಕ್ಕೆ ಲೋಪ. ಪೃಷ್ಟಃ ಎಂದು ರೂಪವಾಗುತ್ತದೆ. ಅಥವಾ ಪೃಷು ಸೇಚನೇ ಧಾತು. ಇದಕ್ಕೆ **ನಿಷ್ಠಾ**—(ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. **ಯಸ್ಯ ವಿಭಾಷಾ**—(ಪಾ. ಸೂ. ೭-೨.೧೫) ಎಂಬುದರಿಂದ ಇಟ್ ನಿಷೇಧ ಬರುತ್ತದೆ. ಕಿತ್ತಾದುದರಿಂದ ಲಘೂಪಧೆಗೆ ಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ದಿವಿ**—ದಿವ್ ಶಬ್ದ. ಸಪ್ತಮೀ ಏಕವಚನಾಂತರೂಪ **ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪೃಥಿವ್ಯಾಮ್**—ಪೃಥಿವೀ ಶಬ್ದಕ್ಕೆ ಸಪ್ತಮೀ ಙಿಪರವಾದಾಗ **ಙೇರಾಂನದ್ಯಾ**-ಎಂಬುದರಿಂದ ಅದಕ್ಕೆ ಆಮಾದೇಶ. ಯಣ್. ಉದಾತ್ತಸ್ಥಾನದಲ್ಲಿ ಯಣಾದೇಶ ಬಂದುದರಿಂದ ಅದರ ಪರದಲ್ಲಿ ವಿಭಕ್ತಿ ಬಂದುದರಿಂದ **ಉದಾತ್ತಯಣೋ ಹಲ್‌ಪೂರ್ವಾತ್**—(ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವಿವೇಶ**—ವಿಶ ಪ್ರವೇಶನೇ ಧಾತು. ಲಿಟ್‌ಪ್ರಥಮಪುರುಷ ಏಕವಚನದಲ್ಲಿ ತಿಪಿಗೆ ಣಲಾದೇಶ. ಧಾತುವಿಗೆ ದ್ವಿತ್ವಾದಿ. ಲಘೂಪಧಗುಣ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ರಿಷಃ**—ರಿಷ ಹಿಂಸಾಯಾಮ್. ಧಾತು. ಇದಕ್ಕೆ **ಕ್ವಿಪ್ ಚ**—(ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ರಿಷ್ ಶಬ್ದವಾಗುತ್ತದೆ. ಪಂಚಮೀ ಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ**—(ಪಾ. ಸೂ. ೬-೧-೧೬೮) ಎಂಬುದರಿಂದ ಏಕಾಚಿನಪರದಲ್ಲಿ ವಿಭಕ್ತಿ ಬಂದುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪಾತು**—ಪಾ ರಕ್ಷಣೇ ಧಾತು ಲೋಟ್ ಪ್ರಥಮಪುರುಷ ಏಕವಚನರೂಪ. ನಿಙಂತನಿಘಾತಸ್ವರ ಬರುತ್ತದೆ.



ಸಂಹಿತಾಪಾಠಃ

ವೈಶ್ವಾನರ ತವ ತತ್ಸತ್ಯಮಸ್ತ್ವಸ್ಮಾನ್ರಾಯೋ ಮಘವಾನಃ ಸಚಂತಾಂ ।
ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ ಪೃಥಿವೀ ಉತ ದ್ಯೌಃ ॥ ೩ ॥

॥ ಪದಪಾಠಃ ॥

ವೈಶ್ವಾನರ । ತವ । ತತ್ । ಸತ್ಯಂ । ಅಸ್ತು । ಅಸ್ಮಾನ್ । ರಾಯಃ । ಮಘಽವಾನಃ । ಸಚಂತಾಂ ।
ತತ್ । ನಃ । ಮಿತ್ರಃ । ವರುಣಃ । ಮಮಹಂತಾಂ । ಅದಿತಿಃ । ಸಿಂಧುಃ । ಪೃಥಿವೀ । ಉತ । ದ್ಯೌಃ ॥ ೩ ॥

ಸಾಯಣಭಾಷ್ಯಂ

ಹೇ ವೈಶ್ವಾನರ ತವ ತತ್ತ್ವದೀಯಂ ತದಸ್ಮಾಭಿಃ ಕ್ರಿಯಮಾಣಂ ಕರ್ಮ ಸತ್ಯಮಸ್ತು । ಅವಿತಥಫಲಂ ಭವತು । ತತೋಽಸ್ಮಾನ್ಮಘವಾನೋ ಮಘವಂತೋ ಧನವಂತೋ ರಾಯೋ ಧನವದತಿಪ್ರಿಯಾಃ ಪುತ್ರಾಃ ಸಚಂತಾಂ । ಸೇವಂತಾಂ । ಏವಂ ಯದಸ್ಮಾಭಿಃ ಪ್ರಾರ್ಥಿತಂ ನೋಽಸ್ಮದೀಯಂ ತತ್ ಮಿತ್ರೋಽಹರಭಿಮಾನೀ ದೇವೋ ವರುಣೋ ರಾತ್ರ್ಯಭಿಮಾನೀ । ಅದಿತಿರದೀನಾ ದೇವಮಾತಾ ಸಿಂಧುಃ ಸ್ಯಂದನಶೀಲೋದಕಾಭಿಮಾನೀ ದೇವಃ । ಉತಶಬ್ದಃ ಸಮುಚ್ಚಯೇ । ಏತೇ ಸರ್ವೇ ಮಿತ್ರಾದಯೋ ಮಮಹಂತಾಂ । ಪೂಜಯಂತಾಂ । ಪಾಲಯಂತಾಮಿತ್ಯರ್ಥಃ ॥ ೩

॥ ಪ್ರತಿಪದಾರ್ಥ ॥

**ವೈಶ್ವಾನರ**—ಸಕಲ ಮಾನವರಿಗೂ ಪ್ರಭುವಾದ ಎಲೈ ಅಗ್ನಿಯೇ । **ತವ**—ನಿನ್ನ (ನಿನ್ನನ್ನು ಉದ್ದೇಶಿಸಿ) । **ತತ್**—(ನಾವು ನೆರವೇರಿಸುವ) ಆ ಕರ್ಮವೆಲ್ಲವೂ । **ಸತ್ಯಂ ಅಸ್ತು**—ಸತ್ಯವಾದ (ಉದ್ದೇಶಕ್ಕೆ ಅನುಗುಣವಾದ) ಫಲವನ್ನು ಕೊಡುವುದಾಗಲಿ. **ಅಸ್ಮಾನ್**—ನಮ್ಮನ್ನು । **ಮಘವಾನಃ**—ಸಂಪದ್ಯುಕ್ತವಾದ । **ರಾಯಃ**—

ಧನಗಳು ಅಥವಾ ಸಂಪತ್ತುಗಳಿಂದ ಕೂಡಿದ ಪುತ್ರರು । **ಸಚಂತಾಂ**—ಸೇವಿಸಲಿ । **ನಃ**—ನಮ್ಮ (ನಮ್ಮಿಂದ ಪ್ರಾರ್ಥಿತವಾದ) **ತತ್**—ಆ ಸಂಪತ್ತನ್ನು । **ಮಿತ್ರಃ**—ಮಿತ್ರನೂ । **ವರುಣಃ**—ವರುಣನೂ । **ಅದಿತಿಃ**—ಅದಿತಿಯೂ । **ಸಿಂಧುಃ**—ಪ್ರವಾಹಗಳ ಅಭಿಮಾನಿದೇವತೆಯೂ । **ಪೃಥಿವೀ**—ಪೃಥ್ವಿಯೂ । **ಉತ**—ಮತ್ತು । **ದ್ಯೌಃ**—ದ್ಯುಲೋಕವೂ । **ಮಮಹಂತಾಂ**—ರಕ್ಷಿಸಲಿ. ।

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನನ್ನು ಉದ್ದೇಶಿಸಿ ನಾವು ಮಾಡುವ ಸಕಲಕರ್ಮಗಳೂ ನಾವು ಇಷ್ಟಪಟ್ಟ ಅರ್ಥವನ್ನು ಸತ್ಯವಾಗಿಯೂ ಒದಗಿಸಿ ಕೊಡುವ ಶಕ್ತಿಯುಳ್ಳವುಗಳಾಗಲಿ. ನಮ್ಮನ್ನು ಸಂಪತ್ತುಗಳೂ, ಸಂಪದ್ಯುಕ್ತರಾದ ಪುತ್ರರೂ ಯಾವಾಗಲೂ ಸೇವಿಸಲಿ. ನಮ್ಮಿಂದ ಪ್ರಾರ್ಥಿತವಾದ ಆ ಸಂಪತ್ತನ್ನು ಮಿತ್ರನೂ, ವರಣನೂ, ಅದಿತಿಯೂ, ಸಾಗರಾಧಿದೇವತೆಯೂ. ಪೃಥ್ವಿಯೂ ಮತ್ತು ದ್ಯುಲೋಕವೂ ರಕ್ಷಿಸಲಿ.

## English Translation

Vais'wanara, may this (your adoration be attended) by real (fruit); may precious treasures wait us, and may Mitra, Varuna, Aditi—ocean, earth, and heaven, preserve them to us.

॥ ವಿಶೇಷವಿಷಯಗಳು ॥

**ತತ್ಸತ್ಯಮಸ್ತು—ಅಸ್ಮಾಭಿಃ ಕ್ರಿಯಮಾಣಂ ಕರ್ಮ ಅವಿತಥಫಲಂ ಭವತು ।** ನಾವು ನೆರವೇರಿಸುವ ಕರ್ಮವೆಲ್ಲವೂ ಸತ್ಯವಾದ ಫಲವನ್ನು ಕೊಡುವುದಾಗಲಿ ಎಂದು ಪ್ರಾರ್ಥನೆ. ಈ ಫಲಗಳು ನಾನಾ ರೂಪಗಳಲ್ಲಿರಬಹುದು. ಪಶುಪುತ್ರಾದಿ ರೂಪಗಳಲ್ಲಿಯಾಗಲಿ, ಅಸುರರನ್ನು ನಾಶಮಾಡುವ ರೂಪದಲ್ಲಿಯಾಗಲಿ, ವೃಷ್ಟಿಯನ್ನು ಸುರಿಸುವ ರೂಪದಲ್ಲಿಯಾಗಲಿ ಫಲಗಳನ್ನು ಇಚ್ಛಿಸಿ ಕರ್ಮಾನುಷ್ಠಾನವನ್ನು ಆಚರಿಸುವಾಗ ಆಯಾಕಾಲದಲ್ಲಿ ಇಚ್ಛಿಸಿದ ಫಲಗಳನ್ನು ಕೊಡತಕ್ಕ ಶಕ್ತಿಯುಳ್ಳವಾಗಿ ಕರ್ಮಾಚರಣೆಯೂ ಇರಬೇಕು. ಕರ್ಮವು ಸತ್ಯಾತ್ಮಕವಾಗಿದ್ದರೆ ಫಲವೂ ಸತ್ಯಾತ್ಮಕವಾಗಿದ್ದೇ ಇರುತ್ತದೆಯೆಂಬ ಶ್ರದ್ಧೆಯೂ ಯಜ್ಞಕರ್ತರಲ್ಲಿ ಅಭಿವ್ಯಕ್ತವಾಗಿರುವುದು. ಇಂತಹ ಫಲಗಳು ಲಭಿಸಬೇಕಾದರೆ ಉತ್ತಮವಾದ ಅರ್ಹತೆಯೂ ಇದ್ದೇ ಇರಬೇಕು. **ಸತ್ಯ** ಶಬ್ದವು ಋಕ್ಸಂಹಿತೆಯಲ್ಲೆಲ್ಲಾ ಈ ಶ್ರೇಷ್ಠವಾದುದೂ ನೈತಿಕವಾದುದು ಆದ ಅರ್ಹತೆಯನ್ನೂ ಶಕ್ತಿಯನ್ನೂ ತೋರಿಸುವ ಅರ್ಥವನ್ನು ಮುಂದಿಟ್ಟು ಕೊಂಡೇ ಉಪಯೋಗಿಸಲ್ಪಟ್ಟಿದೆ ಇಂತಹ ಉತ್ತಮವಾದ ಅರ್ಹತೆಯುಳ್ಳವರು ನೆರವೇರಿಸುವ ಕರ್ಮಗಳೂ ಸತ್ಯರೂಪವಾಗಿಯೇ ಇರುವವು ಈ ಅರ್ಥವನ್ನೇ ವ್ಯಕ್ತಪಡಿಸಿ ನಿರುಕ್ತಕಾರರೂ ಸಹ **ಸತ್ಯ**ಶಬ್ದದ ನಿರ್ವಚನವನ್ನು ಮಾಡಿರುತ್ತಾರೆ.

**ಸತ್ಯಂ ಕಸ್ಮಾತ್, ಸತ್ಸು ತಾಯತೇ ಸತ್ಪ್ರಭವಂ ಭವತೀತಿ ವಾ ।**

(ನಿ. ೩-೧೩).

ಸಜ್ಜನರಲ್ಲಿ ಹರಡಿರುತ್ತದೆ ಅಥವಾ ಸಜ್ಜನರಲ್ಲಿ ಉತ್ಪನ್ನವಾಗುತ್ತದೆ. ಆದುದರಿಂದ **ಸತ್ಯ**ವೆಂದು ಕರೆಯಲ್ಪಟ್ಟಿದೆ ಎಂದು ನಿರುಕ್ತಕಾರರು ವಿವರಿಸಿದ್ದಾರೆ. ಈ ನಿರ್ವಚನದ ಪ್ರಕಾರ ಸತ್ಯಾತ್ಮಕವಾದ ಫಲವೂ ಸಹ ಸಜ್ಜನರಿಗೇ

ಲಭಿಸಬೇಕಾಗಿರುವುದರಿಂದ, ಸದ್ಗುಣಿಗಳ ಸತ್ಯಕರ್ಮಕ್ಕೆ ತಕ್ಕ ಸತ್ಯರೂಪವಾದ ಫಲ ಎಂದಭಿಪ್ರಾಯವಾಗುತ್ತದೆ. ಹೀಗೆ ಕರ್ಮಪರವಾಗಿಯೂ, ಫಲಪರವಾಗಿಯೂ ಸತ್ಯಶಬ್ದವು ಉಪಯೋಗಿಸಲ್ಪಡುವುದರಿಂದ ಈ ಎರಡು ಸನ್ನಿವೇಶಗಳಲ್ಲಿಯೂ ಸಹ ಈ ಭಾವವು ಯಾವ ವಿಶ್ವತತ್ತ್ವವನ್ನು ಪ್ರತಿಬಿಂಬಿಸುತ್ತದೆಯೆಂದು ವಿವರಿಸಬೇಕಾಗಿದೆ.

**ತೇ ದೇವಾ ಉತ್ಸೃಜ್ಯಾನೃತಂ । ಸತ್ಯಮನ್ವಾಲೇಭಿರೇ ।**

(ಶ. ಬ್ರಾ. ೯-೫-೧-೧೩)

**ತದ್ಯತ್ತತ್ಸತ್ಯಂ । ತ್ರಯೀ ಸಾ ವಿದ್ಯಾ ತೇ ದೇವಾ ಅಬ್ರುವನ್ ಯಜ್ಞಂ ಕೃತ್ವೇದಂ ಸತ್ಯಂ ತನವಾಮಹಾ ಇತಿ ।**

(ಶ. ಬ್ರಾ. ೯-೫-೧-೧೮)

ದೇವತೆಗಳು ಅಸತ್ಯವನ್ನು ತ್ಯಾಗಮಾಡಿ ಸತ್ಯವನ್ನೇ ದೃಢವಾಗಿ ಅವಲಂಬಿಸಿದರು. **ತ್ರಯೀ** ಎಂದು ಕರೆಸಿಕೊಳ್ಳುವ ಮೂರು ವೇದಗಳೇ ಈ ಸತ್ಯಸ್ವರೂಪಗಳಾಗಿವೆಯಾದ್ದರಿಂದ ನಾವು ಈಗ ಯಜ್ಞವನ್ನು ನಿರ್ವಹಿಸಿ ಈ ಸತ್ಯವನ್ನು ಹರಡೋಣ ಎಂದು ದೇವತೆಗಳು ಆಶಿಸಿದರು. ಇತ್ಯಾದಿಯಾಗಿ ಸತ್ಯಕ್ಕೂ ಯಜ್ಞಕರ್ಮಕ್ಕೂ ಇರತಕ್ಕ ತಾತ್ತ್ವಿಕವಾದ ಸಂಬಂಧವನ್ನು ತೋರಿಸುವುದಲ್ಲದೆ ಇಂತಹ ಸತ್ಯಾತ್ಮಕವಾದ ಯಜ್ಞಕರ್ಮದಿಂದ ಪೂರ್ಣವಾದದ್ದೂ ಸಕಲ ಸಂಪದ್ಯುಕ್ತವಾದುದೂ ಆದ ಆಯುಸ್ಸನ್ನು ಪಡೆಯಬಹುದೆಂದೂ ಆಶಿಸಿದೆ.

**ನಾಭಿರ್ಋತಸ್ಯ ಸಪ್ರಥಾ ಇತಿ । ಸತ್ಯಂ ವಾ ಋತಂ ಸತ್ಯಸ್ಯ ನಾಭಿಃ ಸಪ್ರಥಾ ಇತ್ಯೇವೈತದಾಹ ಸ ನೋ ವಿಶ್ವಾಯುಃ ಸಪ್ರಥಾ ಇತಿ ಸ ನಃ ಸರ್ವಾಯುಃ ಇತ್ಯೇವೈತದಾಹ ।**

(ಶ. ಬ್ರಾ. ೧೪-೩-೧-೧೮)

ಇತ್ಯಾದಿ ವಿವರಣೆಗಳಿಂದ ವಿಶ್ವನಿಯಮಕ್ಕೂ ಸತ್ಯಕ್ಕೂ ಇರುವ ತಾದಾತ್ಮ್ಯವನ್ನು ತೋರಿಸಿ ಇಂತಹ ಸತ್ಯವನ್ನು ಅನುಸರಿಸುವುದರಿಂದಲೂ ಸತ್ಯಕರ್ಮಗಳನ್ನು ಆಚರಿಸುವುದರಿಂದಲೂ ಪೂರ್ಣಾಯುಸ್ಸು ಫಲರೂಪವಾಗಿ ದೊರಕುವುದೆಂದೂ ಸತ್ಫಲಕ್ಕೂ ಸತ್ಕರ್ಮಕ್ಕೂ ಇರುವ ಕಾರ್ಯಕಾರಣಸಂಬಂಧವನ್ನು ತೋರಿಸಿದೆ.

ಸತ್ಯಾತ್ಮಕವಾದ ಕರ್ಮಾಚರಣೆಗೂ ಸಹ ವಿಶ್ವನಿಯಮವನ್ನೂ ಅವಕ್ಕೆ ಕಾರಣರಾದ ದೇವತೆಗಳ ಸ್ವರೂಪವನ್ನೂ ತಿಳಿಯಬೇಕಾದುದು ಅತ್ಯವಶ್ಯಕವಾದ್ದರಿಂದ ಆ ಜ್ಞಾನವೂ ಸಹ ಸತ್ಯದಿಂದಲೇ ಸಾಧ್ಯವೆಂಬುದನ್ನೂ ಸಹ ಅನೇಕ ಸನ್ನಿವೇಶಗಳಲ್ಲಿ ವಿಶದವಾಗಿ ತಿಳಿಸಿದೆ.

**ಗೂಹ್ಯಂ ಜ್ಯೋತಿಃ ಪಿತರೋ ಅನ್ವವಿಂದನ್ತ್ಸತ್ಯಮಂತ್ರಾ ಅಜನಯನ್ನುಷಾಸಂ ।**

(ಋ. ಸಂ- ೭-೭೬-೪)

**ಸತ್ಯಂ ತದಿಂದ್ರೋ ದಶಭಿರ್ದಶಗ್ವೈಃ ಸೂರ್ಯಂ ವಿವೇದ ತಮಸಿ ಕ್ಷಿಯಂತಂ ।**

(ಋ. ಸಂ. ೩-೩೯-೫).

ಇದಲ್ಲದೆ, ಸತ್ಯಾತ್ಮಕರಾದ ದೇವತೆಗಳ ಸ್ವರೂಪವನ್ನು ತಿಳಿದು ಕರ್ಮವನ್ನು ಆಚರಿಸಿದುವರ ಫಲವಾಗಿ ಸಂಪತ್ತನ್ನು ಪಡೆದರೆಂಬ ಹಿಂದಿನ ಸಂದರ್ಭಗಳನ್ನು ಸೂಚಿಸುವ ವಾಕ್ಯಗಳು ಬಹಳವಾಗಿವೆ. ಮತ್ತು ಸತ್ಯದಿಂದಲೇ ನಮಗೆ ಶುಭವಾಗಲಿ ಎಂಬ ಪ್ರಾರ್ಥನೆಯೂ ಜೊತೆಯಲ್ಲಿಯೇ ಇದೆ.

**ಸಾ ಮಾ ಸತ್ಯೋಕ್ತಿಃ ಪರಿ ಪಾತು ವಿಶ್ವತೋ ದ್ಯಾವಾ ಚ ಯತ್ರ ತತನನ್ನಹಾನಿ ಚ ।**

(ಋ. ಸಂ. ೧೦-೩೭-೨).

ಇತ್ಯಾದಿ ವಾಕ್ಯಗಳಲ್ಲಿ **ಸತ್ಯದಿಂದಲೇ** ಸಕಲವಿಧವಾದ ರಕ್ಷಣೆಯೂ ಲಭಿಸಲಿ ಎಂದು ಪ್ರಾರ್ಥಿಸಿದೆ.

ಪ್ರಕೃತವಾದ ಈ ಋಕ್ಕಿನಲ್ಲೂ ಸಹ ಇದೇ ಭಾವವನ್ನು ವ್ಯಕ್ತಪಡಿಸಿದೆ. ಅಗ್ನಿಯೂ ಸಹ ಸತ್ಯದಿಂದಲೇ ತನ್ನ ಲೋಕರಕ್ಷಣಾಕಾರ್ಯವನ್ನು ನಿರ್ವಹಿಸಿದನೆಂದೂ, ಅಂತಹ **ಸತ್ಯಧರ್ಮನಾದ** ಅಗ್ನಿಯನ್ನು ಪೂಜಿಸು ಎಂದೂ,

**ಅಜೋ ನ ಕ್ಷಾಂ ದಾಧಾರ ಪೃಥಿವೀಂ ತಸ್ತಂಭ ದ್ಯಾಂ ಮಂತ್ರೇಭಿಃ ಸತ್ಯೈಃ ।**

(ಋ. ಸಂ. ೧-೬೭-೫).

**ಕವಿಮಗ್ನಿಮುಪಸ್ತುಹಿ ಸತ್ಯಧರ್ಮಾಣಮಧ್ವರೇ ।**

((ಋ. ಸಂ. ೧-೧೨-೭).

**ದೇವೋ ನ ಯಃ ಸವಿತಾ ಸತ್ಯಮನ್ಮಾ ಕ್ರತ್ವಾ ನಿಪಾತಿ ವೃಜನಾನಿ ವಿಶ್ವಾ ।**

(ಋ. ಸಂ. ೧-೭೩-೨).

ಮುಂತಾದ ಕಡೆಗಳಲ್ಲಿ ಅಗ್ನಿಯು **ಸತ್ಯದಿಂದಲೇ** ಪೃಥಿವ್ಯಾದಿ ಲೋಕಗಳನ್ನು ಧರಿಸಿದುದನ್ನೂ, ಲೋಕರಕ್ಷಣೆಯನ್ನು ನಿರ್ವಹಿಸಿದುದನ್ನೂ ಅಂತಹ ಸತ್ಯಧರ್ಮನಾದ ಅಗ್ನಿಯನ್ನು ಪೂಜಿಸಬೇಕಾದ ಆವಶ್ಯಕತೆಯನ್ನೂ ತಿಳಿಸಿದೆ.

**ಅಧಾ ಯಥಾ ನಃ ಪಿತರಃ ಪರಾಸಃ ಪ್ರತ್ನಾಸೋ ಅಗ್ನ ಋತಮಾಶುಷಾಣಾಃ ।**
**ಶುಚೀದಯನ್ದೀಧಿತಿಮುಕ್ಥಶಾಸಃ ಕ್ಷಾಮಾ ಭಿಂದಂತೋ ಅರುಣೀರಪ ವ್ರನ್ ।**

(ಋ. ಸಂ. ೪-೨-೧೬)

ಎಂಬುದಾಗಿ ಹಿಂದಿನ ಸಂದರ್ಭವನ್ನು ಸೂಚಿಸಿ ಹಿಂದೆ ನಮ್ಮ ಪಿತೃಗಳು ಸತ್ಯಾತ್ಮಕವಾದ ಯಜ್ಞಾಚರಣೆಯಿಂದ ಯಾವ ಒಳ್ಳೆಯ ಫಲಗಳನ್ನು ಪಡೆದರೋ, ಅದೇ ರೀತಿ ಈಗಲೂ ನಮಗೂ ಸಹ ನಮ್ಮ ಕರ್ಮಗಳೆಲ್ಲವೂ **ತತ್ಸತ್ಯಮಸ್ತು**—ಸತ್ಯವಾದ ಫಲವನ್ನು ಕೊಡುವುವಾಗಲಿ ಎಂದು ವೈಶ್ವಾನರಾಗ್ನಿಯನ್ನು ಪ್ರಾರ್ಥಿಸಿದೆ.

**ಮಘವಾನಃ ರಾಯಃ**—ಇಲ್ಲಿ ಧನ ನಾಮಗಳಲ್ಲಿ ಪಠಿತವಾಗಿರುವ **ಮಘ, ರೈ** ಎಂಬ ಎರಡು ಶಬ್ದಗಳನ್ನೂ ಪ್ರಯೋಗಿಸಿರುವುದರಿಂದ **ಮಘವಾನಃ** ಎಂಬ ಪದಕ್ಕೆ ಧನದೊಂದಿಗೆ ಕೂಡಿಕೊಂಡಿರುವ ಎಂದೂ, **ರಾಯಃ** ಎಂಬ ಪದಕ್ಕೆ **ಧನವದತಿಪ್ರಿಯಾಃ**—ಧನದಂತೆ ಪ್ರಿಯರಾದ ಪುತ್ರರೆಂದೂ ಅರ್ಥವಾದಿ ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

**ಅಸ್ತು**—ಅಸ ಭುವಿ. ಧಾತು. ಅದಾದಿ. ಲೋಟ್ ಪ್ರಥಮಪುರುಷ ಏಕವಚನದಲ್ಲಿ **ಏರುಃ**—ಎಂಬುದರಿಂದ ತಿಪಿಗೆ ತು ಆದೇಶ. **ಅದಿಪ್ರಭೃತಿಭ್ಯಃ ಶಪಃ**—ಎಂಬುದರಿಂದ ಶಪಿಗೆ ಲುಕ್. ಅತಿಙಂತದ ಪರವಲ್ಲರುವುದರಿಂದ ನಿಘಾತಸ್ವರ ಬರುತ್ತದೆ.

ರಾಯಃ—ರೈ ಶಬ್ದ. ಜಸ್ ಪರವಾದಾಗ **ಏಚೋಽಯವಾಯಾವಃ**—ಎಂಬುದರಿಂದ ಆಯಾದೇಶ ಪ್ರತ್ಯಯ ಸ್ವರದಿಂದ ಉದಾತ್ತ.

**ಮಘವಾನಃ**—ಮಘಃ ಅಸ್ಯ ಅಸ್ತಿ ಎಂದು ಮತ್ವರ್ಥವಿವಕ್ಷಾ ಮಾಡಿದಾಗ **ಛಂದಸೀವನಿಪೌ ಚ ವಕ್ತವ್ಯೌ**—(ಪಾ ಸೂ. ೫-೨-೧೨೨-೨) ಎಂಬುದರಿಂದ ವನಿಪ್ ಪ್ರತ್ಯಯ. ಮಘವನ್ ಎಂದು ನಾಂತವಾದ ಶಬ್ದವಾಗುತ್ತದೆ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಜಸ್ ಪರವಾದಾಗ **ಸರ್ವನಾಮಸ್ಥಾನೇ ಚಾಽಸಂಬುದ್ಧೌ**—ಎಂಬುದರಿಂದ ನಾಂತದ ಉಪಧೆಗೆ ದೀರ್ಘ.

**ಸಚಂತಾಮ್**—ಷ ಚ ಸೇವನೇ ಸೇಚನೇ ಚ ಧಾತು. ಭ್ವಾದಿ. ಲೋಟ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯಕ್ಕೆ ಅಂತಾದೇಶ. **ಆಮೇತಃ**—(ಪಾ. ಸೂ. ೩-೪-೯೦) ಎಂಬುದರಿಂದ ಏತ್ವಕ್ಕೆ ಆಮಾದೇಶ ಶಪ್ ವಿಕರಣ. ಪರರೂಪ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಮಹಂತಾಮ್**—ಮಹ ಪೂಜಾಯಾಂ ಧಾತು. ಲೋಟ್ ಪ್ರಥಮಪುರುಷ ಬಹುವಚನದಲ್ಲಿ ಅಂತಾದೇಶ. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ**—ಎಂಬುದರಿಂದ ಧಾತುವಿಗೆ ದ್ವಿತ್ವ. **ಅನ್ಯೇಷಾಮಪಿ ದೃಶ್ಯತೇ**—ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥೩॥

ತೊಂಭತ್ತೆಂಟನೆಯ ಸೂಕ್ತವು ಸಮಾಪ್ತವು

—————— ಃ೦ಃ ——————

# ತೊಂಭತ್ತೊಂಭತ್ತನೆಯ ಸೂಕ್ತವು

---

**ಜಾತವೇದಸ ಇತ್ಯೇಕರ್ಚಂ ಷಷ್ಠಂ ಸೂಕ್ತಂ ಮರೀಚಿಪುತ್ರಸ್ಯ ಕಶ್ಯಪಸ್ಯಾರ್ಷಂ ತ್ರೈಷ್ಟುಭಂ । ಜಾತವೇದೋಗುಣಕೋಽಗ್ನಿಃ ಶುದ್ಧಾಗ್ನಿರ್ವಾ ದೇವತಾ । ತಥಾ ಚಾನುಕ್ರಾಂತಂ । ಜಾತವೇದಸ ಏಕಾ ಜಾತವೇದಸ್ಯಮೇತದಾದೀನ್ಯೇಕಭೂಯಾಂಸಿ ಸೂಕ್ತಸಹಸ್ರಮೇತತ್ತು ಕಶ್ಯಪಾರ್ಷಮಿತಿ ॥ ಆಹರ್ಗಣೇಷು ದ್ವಿತೀಯಾದಿಷ್ವಹಃಸ್ವಾಗ್ನಿಮಾರುತೇ ಜಾತವೇದಸ್ಯನಿವಿದ್ಧಾನಾತ್ಪೂರ್ವಮೇಷಾ ಶಂಸನೀಯಾ । ಸೂತ್ರಿತಂ ಚ । ಜಾತವೇದಸೇ ಸುನವಾಮ ಸೋಮಮಿತ್ಯಾಗ್ನಿಮಾರುತೇ ಜಾತವೇದಸ್ಯಾನಾಂ । ಆ. ೭-೧ । ಇತಿ ॥**

ಅನುವಾದವು—**ಜಾತವೇದಸೇ** ಎಂಬ ಈ ಸೂಕ್ತವು ಹದಿನೈದನೆಯ ಅನುವಾಕದಲ್ಲಿ ಆರನೆಯ ಸೂಕ್ತವು ಇದರಲ್ಲಿ ಒಂದೇ ಒಂದು ಋಕ್ಕಿರುವುದು. ಈ ಸೂಕ್ತಕ್ಕೆ ಮರೀಚಿಪುತ್ರನಾದ ಕಶ್ಯಪನು ಋಷಿಯು, ತ್ರಿಷ್ಟುಪ್ ಛಂದಸ್ಸು, ಜಾತವೇದನಾಮಕನಾದ ಅಗ್ನಿಯು ಅಥವಾ ಕೇವಲ ಅಗ್ನಿಯು ದೇವತೆಯು. ಅನುಕ್ರಮಣಿಕೆಯಲ್ಲಿ-- **ಜಾತವೇದಸ ಏಕಾ ಜಾತವೇದಸ್ಯಮೇ ತದಾದೀನ್ಯೇಕಭೂಯಾಂಸಿ ಸೂಕ್ತಸಹಸ್ರಮೇತತ್ತು ಕಶ್ಯಪಾರ್ಷಮಿತಿ** ಎಂದು ಹೇಳಿರುವುದು. ಆಹರ್ಗಣವೆಂಬ ಯಾಗದಲ್ಲಿ ಮೊದಲನೆಯ ದಿವಸವನ್ನು ಬಿಟ್ಟು ಉಳಿದ

ದಿನಗಳಲ್ಲಿ ಅಗ್ನಿಮಾರುತಶಸ್ತ್ರ ಮಂತ್ರಗಳನ್ನು ಪಠಿಸುವುದಕ್ಕೆ ಪೂರ್ವದಲ್ಲಿ ಜಾತವೇದಸ್ಸಂಬಂಧವಾದ ನಿವಿತ್ ಮಂತ್ರಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ— **ಜಾತವೇದಸೇ ಸುನವಾಮ ಸೋಮಮಿತ್ಯಾಗ್ನಿಮಾರುತೇ ಜಾತವೇದಸ್ಯಾನಾಂ** ಎಂಬ ಸೂತ್ರದಿಂದ ವಿಸ್ತೃತವಾಗಿರುವುದು. (ಅ. ೭-೧).

———:o:———

॥ ಓಂ ॥

## ಸೂಕ್ತ—೯೯

॥ ಮಂಡಲ—೧ ॥ ಅನುವಾಕ—೧೫ ॥ ಸೂಕ್ತ—೯೯ ॥

॥ ಅಷ್ಟಕ— ೧ ॥ ಅಧ್ಯಾಯ— ೭ ॥ ವರ್ಗ—೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ– ೧

॥ ಋಷಿಃ—ಕಶ್ಯಪೋ ಮಾರೀಚಃ ॥

॥ ದೇವತಾ—ಅಗ್ನಿರಗ್ನಿರ್ಜಾತವೇದಾ ವಾ ॥

॥ ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಜಾ॒ತವೇ॑ದಸೇ ಸುನವಾಮ॒ ಸೋಮ॑ಮರಾತೀಯ॒ತೋ ನಿ ದ॑-
ಹಾತಿ॒ ವೇದಃ॑ ।
ಸ ನಃ॑ ಪರ್ಷ॒ದತಿ॑ ದು॒ರ್ಗಾಣಿ॒ ವಿಶ್ವಾ॑ ನಾ॒ವೇವ॒ ಸಿಂಧುಂ॑ ದುರಿ॒-
ತಾತ್ಯ॒ಗ್ನಿಃ ॥೧॥

॥ ಪದಪಾಠಃ ॥

ಜಾತಽವೇದಸೇ । ಸುನವಾಮ । ಸೋಮಂ । ಅರಾತಿಽಯತಃ । ನಿ । ದ-
ಹಾತಿ । ವೇದಃ ।

ಸಃ । ನಃ । ಪರ್ಷತ್ । ಅತಿ । ದುಃಽಗಾನಿ । ವಿಶ್ವಾ । ನಾವಾಽಇವ । ಸಿಂ-
ಧುಂ । ದುಃಽಇತಾ । ಅತಿ । ಅಗ್ನಿಃ ॥ ೧ ॥

ಸಾಯಣಭಾಷ್ಯಂ

ಜಾತವೇದಸೇ ಜಾತಾನಾಮುತ್ಪತ್ತಿಮತಾಂ ಸರ್ವೇಷಾಂ ವೇದಿತ್ರೇ ಯದ್ವಾ ಜಾತೈಃ ಸರ್ವೈಃ ಪ್ರಾಣಿಭಿರ್ಜ್ಞಾಯಮಾನಾಯ ಜಾತಧನಾಯ ಜಾತಪ್ರಜ್ಞಾಯ ವಾಗ್ನಯೇ ಲತಾರೂಪಂ ಸೋಮಂ ಸುನವಾಮ । ಅಭಿಷುಣುಯಾಮ । ಜಾತವೇದೋಗುಣಕಮಗ್ನಿಂ ಯಷ್ಟುಂ ಸೋಮಾಭಿಷವಂ ಕರವಾಮೇತ್ಯರ್ಥಃ । ಸೋಽಗ್ನಿರರಾತೀಯತೋಽರಾತಿಂ ಶತ್ರುಮಿವಾಸ್ಮಾನಾಚರತಃ ಶತ್ರೋರ್ವೇದೋ ಧನಂ ನಿದಹಾತಿ । ನಿತರಾಂ ದಹತು । ಭಸ್ಮೀಕರೋತು। ಅಪಿ ಚ ಸೋಽಗ್ನಿರ್ನೋಽಸ್ಮಾನ್ವಿಶ್ವಾ ವಿಶ್ವಾನಿ ಸರ್ವಾಣಿ ದುರ್ಗಾಣಿ ದುರ್ಗಮನಾನಿ ಭೋಕ್ತುಮಶಕ್ಯಾನಿ ದುಃಖಾನ್ಯತಿ ಪರ್ಷತ್। ಅತಿಪಾರಯತು। ಅತಿಕ್ರಮಯ್ಯ ದುಃಖರಹಿತಂ ಸುಖಂ ಪ್ರಾಪಯತು। ತತ್ರ ದೃಷ್ಟಾಂತಃ। ನಾವೇವ ಸಿಂಧುಂ। ಯಥಾ ಕಶ್ಚಿತ್ಕರ್ಣಧಾರೋ ಗ್ರಾಹಾದಿಭಿರ್ದುಷ್ಟಸತ್ತ್ವೈರಾಕುಲಿತಾಂ ನದೀಂ ನಾವಾ ತಾರಯತಿ । ತದ್ವತ್ । ತಥಾ ದುರಿತಾ ದುರಿತಾನಿ ದುಃಖಹೇತುಭೂತಾನಿ ಪಾಪಾನ್ಯಸ್ಮಾನಗ್ನಿರತಿ ಪಾರಯತು । ದುಃಖನಿಮಿತ್ತಾತ್ಪಾಪಾದಸ್ಮಾನುತ್ತಾರಯತ್ವಿತ್ಯರ್ಥಃ । ಅತ್ರ ನಿರುಕ್ತಂ । ಜಾತವೇದಾಃ ಕಸ್ಮಾತ್ ಜಾತಾನಿ ವೇದ ಜಾತಾನಿ ವೈನಂ ವಿದುರ್ಜಾತೇ ಜಾತೇ ವಿದ್ಯತ ಇತಿ ವಾ ಜಾತವಿತ್ತೋ ವಾ ಜಾತಧನೋ ವಾ ಜಾತವಿದ್ಯೋ ವಾ ಜಾತಪ್ರಜ್ಞಾನೋ ವಾ ಯತ್ತಜ್ಜಾತಃ ಪಶೂನವಿಂದತೇತಿ ತಜ್ಜಾತವೇದಸೋ ಜಾತವೇದಸ್ತ್ವಮಿತಿ ಹಿ ಬ್ರಾಹ್ಮಣಮಿತ್ಯಾದಿ । ನಿ. ೭-೧೯ ॥ ಜಾತವೇದಸೇ । ಜಾತಾನಿ ವೇತ್ತೀತಿ ಜಾತವೇದಾಃ । ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂ ಚೇತಿ ವಚನಾತ್ಕಾರಕಪೂರ್ವಾದ್ವೇತ್ತೇರಸುನ್ ಪೂರ್ವಪದಪ್ರಕೃತಿಸ್ವರತ್ವಂ ಚ । ಅರಾತೀಯತಃ । ನ ವಿದ್ಯತೇ ರಾತಿರ್ದಾನಮಸ್ಮಿನ್ನಿತ್ಯರಾತಿಃ ಶತ್ರುಃ । ತಮಿವಾಸ್ಮಾನಾಚರತಿ । ಉಪಮಾನಾದಾಚಾರೇ ।ಪಾ. ೩-೧-೧೦। ಇತ್ಯುಪಮಾನಭೂತಾತ್ಕರ್ಮಣಃ ಕ್ಯಚ್ । ಕ್ಯಜಂತಾಲ್ಲಟಃ ಶತೃ । ಶತುರನುಮ ಇತಿ ಜಸ ಉದಾತ್ತತ್ವಂ । ದಹಾತಿ । ದಹ ಭಸ್ಮೀಕರಣೇ । ಲೇಟ್ಯಾಡಾಗಮಃ । ವಿದ್ಯತೇ ಲಭ್ಯತ ಇತಿ ವೇದೋ ಧನಂ । ವಿದ್ಲೃ ಲಾಭೇ। ಔಣಾದಿಕಃ ಕರ್ಮಣ್ಯಸುನ್ । ಪರ್ಷತ್ । ಪೄ ಪಾಲನಪೂರಣಯೋಃ। ಅಸ್ಮಾದಂತರ್ಭಾವಿತಣ್ಯರ್ಥಾಲ್ಲೇಟ್ಯಡಾಗಮಃ । ಸಿಬ್ಬಹುಲಂ ಲೇಟೀತಿ ಸಿಪ್ । ದುರ್ಗಾಣಿ । ದುಃಖೇನ ಗಮ್ಯಂತ ಏಷ್ವಿತಿ ಸುದುರೋರಧಿಕರಣ ಇತಿ ಗಮೇರ್ಡಃ ॥

### ಪ್ರತಿಪದಾರ್ಥ

**ಜಾತವೇದಸೇ**—ಉತ್ಪನ್ನವಾದ ಸಕಲವನ್ನೂ ತಿಳಿಯುವವನೂ ಅಥವಾ ಸಕಲ ಭೂತಗಳಿಂದಲೂ ತಿಳಿಯಲ್ಪಡುವವನೂ ಆದ ಅಗ್ನಿಗೆ (ಅಗ್ನಿಯನ್ನು ಉದ್ದೇಶಿಸಿದ ಯಾಗಕ್ಕಾಗಿ)। **ಸೋಮಂ**—ಸೋಮರಸವನ್ನು। **ಸುನವಾಮ**—ಹಿಂಡೋಣ. (ಆ ಅಗ್ನಿಯು)। **ಅರಾತೀಯತಃ**- ನಮಗೆ ಕೇಡನ್ನು ಬಯಸುವ ಶತ್ರುವಿನ। **ವೇದಃ**—ಧನವನ್ನು। **ನಿ ದಹಾತಿ**—ಭಸ್ಮಮಾಡಲಿ। **ಸಃ**—ಆ ಅಗ್ನಿಯು। **ನಃ**—ನಮ್ಮನ್ನು। **ವಿಶ್ವಾ ದುರ್ಗಾಣಿ**—ಸಹಿಸಲಶಕ್ಯವಾದ ಸಕಲ ಕಷ್ಟಗಳನ್ನೂ। **ಸಿಂಧುಂ**—(ಮೊಸಳೆಗಳೇ ಮುಂತಾದ ದುಷ್ಟಪ್ರಾಣಿಗಳಿಂದ ಕೂಡಿದ) ನದಿಯನ್ನು। **ನಾವಾ ಇವ**—(ಅಂಬಿಗನು) ದೋಣಿಯ ಮೂಲಕ ಸುರಕ್ಷಿತವಾಗಿ ಸಾಗಿಸುವಂತೆ। **ಅತಿ ಪರ್ಷತ್**—ದಾಟಿಸಿ ಕರೆದುಕೊಂಡು ಹೋಗಲಿ.। **ಅಗ್ನಿಃ**—ಅಗ್ನಿಯು। **ದುರಿತಾ**—(ನಮಗೆ ದುಃಖವನ್ನುಂಟುಮಾಡುವ) ಪಾಪಗಳನ್ನು। **ಅತಿ**—ದಾಟಿಸಲಿ. (ಪರಿಹಾರಮಾಡಲಿ).

### ಭಾವಾರ್ಥ

ಸರ್ವಜ್ಞನಾದ ಅಗ್ನಿಗೆ ನಾವು ಯಜ್ಞದಲ್ಲಿ ಸೋಮರಸವನ್ನು ಹಿಂಡೋಣ. ಅಗ್ನಿಯು ನಮಗೆ ಕೇಡನ್ನು ಬಯಸುವ ಶತ್ರುವಿನ ಧನವನ್ನು ಭಸ್ಮಮಾಡಲಿ. ಮೊಸಳೆಗಳೇ ಮುಂತಾದ ದುಷ್ಟಪ್ರಾಣಿಗಳಿಂದ ತುಂಬಿದ ನದಿಯನ್ನು ಅಂಬಿಗನು ದೋಣಿಯ ಮೂಲಕ ಸುಲಭವಾಗಿ ದಾಟಿಸುವಂತೆ ಅಗ್ನಿಯೂ ನಮ್ಮನ್ನು ಕಷ್ಟಗಳ ಮೂಲಕ ಅವುಗಳ ಅನುಭವವು ನಮಗಿಲ್ಲದಿರುವಂತೆಯೂ ಮತ್ತು ನಮ್ಮ ದುಃಖ ಹೇತುಗಳಾದ ಪಾಪಕೃತ್ಯಗಳನ್ನು ನಾವು ಮಾಡದಿರುವಂತೆಯೂ ತಮ್ಮನ್ನು ದಾಟಿಸಿ ಕರೆದುಕೊಂಡು ಹೋಗಲಿ.

### English Translation

We offer oblations of Soma to Jatavedas; may he consume the wealth of those who feel enmity against us; may be transport us over all difficulties; may Agni 'convey us, as in a boat over a river, accross all wickedness.

### ॥ ವಿಶೇಷವಿಷಯಗಳು ॥

**ಜಾತವೇದಸೇ**—**ಜಾತಾನಿ ವೇದ। ಜಾತಾನಿ ವೈನಂ ವಿದುಃ, ಜಾತೇ ಜಾತೇ ವಿದ್ಯತ ಇತಿ ವಾ; ಜಾತವಿತ್ತೋ ವಾ ಜಾತಧನೋ ವಾ ಜಾತವಿದ್ಯೋ ವಾ ಜಾತಪ್ರಜ್ಞಾನಃ।** ಉತ್ಪನ್ನವಾದ ಸಕಲವನ್ನೂ ತಿಳಿಯುವವನೆಂದಾಗಲಿ, ಅಥವಾ ಉತ್ಪನ್ನವಾದ ಸಕಲರೂ ಇವನನ್ನು ತಿಳಿಯುವರು ಎಂದಾಗಲಿ, ಅಥವಾ ಉತ್ಪನ್ನವಾದ ಸಕಲ ವಸ್ತುಗಳಲ್ಲಿಯೂ ಅವನಿಸಿಕೊಂಡಿರುತ್ತಾನೆಂದಾಗಲಿ, ಅಥವಾ ಉತ್ಪನ್ನವಾದ ಸಕಲ ಧನವುಳ್ಳವನೆಂದಾಗಲಿ, ಅಥವಾ ಸಮಸ್ತವನ್ನೂ ತಿಳಿಯುವ ಪ್ರಜ್ಞೆಯುಳ್ಳವನೆಂದಾಗಲಿ ಅರ್ಥಮಾಡಬಹುದೆಂದು ನಿರುಕ್ತಕಾರರು ವಿವರಿಸ್ತಾರೆ. (೭. ೬-೧೯) ಬೃಹದ್ದೇವತೆಯಲ್ಲಿಯೂ ಈ ಜಾತವೇದಸ್ಸಿನ ಸ್ವರೂಪ ಮತ್ತು ಸ್ಥಾನಗಳನ್ನು ವಿವರವಾಗಿ ತಿಳಿಸಿದ್ದಾರೆ—

**ಇಹಾಗ್ನಿಭೂತಸ್ತ್ವೃಷಿಭಿರ್ಲೋಕೇ ಸ್ತುತಿಭಿರೀಳಿತಃ ।**
**ಜಾತವೇದಾಃ ಸ್ತುತೋ ಮಧ್ಯೇ ಸ್ತುತೋ ವೈಶ್ವಾನರೋ ದಿವಿ ।**

(ಬೃ. ದೇ. ೧-೬೭)

ಋಷಿಗಳು ಪೃಥ್ವಿಯ ಮೇಲಿರುವ ಅಗ್ನಿಯನ್ನು **ಅಗ್ನಿ**ಯೆಂದೂ, ಮಧ್ಯಲೋಕದಲ್ಲಿರುವ ಅಗ್ನಿಯನ್ನು **ಜಾತವೇದ**ಸ್ಸೆಂದೂ ದ್ಯುಲೋಕದಲ್ಲಿರುವವನನ್ನು **ವೈಶ್ವಾನರ**ನೆಂದೂ ಕರೆಯುತ್ತಾರೆಂದು ಈ ಶ್ಲೋಕದಲ್ಲಿ ಹೇಳಿ ಇದೇ ಭಾವವನ್ನು ಮುಂದುವರಿಸುತ್ತಾ

**ವೈಶ್ವಾನರಂ ಶ್ರಿತೋಽಹ್ಯಗ್ನಿರಗ್ನಿಂ ವೈಶ್ವಾನರಃ ಶ್ರಿತಃ ।**
**ಅನಯೋರ್ಜಾತವೇದಾಸ್ತು ತಥೈತೇ ಜಾತವೇದಸಿ ।**

(ಬೃ. ದೇ. ೧-೯೭)

ಅಗ್ನಿಯು ವೈಶ್ವಾನರನಲ್ಲಿಯೂ ವೈಶ್ವಾನರನು ಅಗ್ನಿಯಲ್ಲಿಯೂ ಅಡಕವಾಗಿ **ಜಾತವೇದಸ್ಸು** ಇವೆರಡರಲ್ಲಿಯೂ ಅಡಕವಾಗಿದ್ದಾನೆಂದೂ ಇವೆರಡೂ **ಜಾತವೇದಸ್ಸಿನ** ಎರಡು ಅಂಶಗಳೆಂದೂ ವಿವರಿಸಿದೆ. ಹೀಗೆ ಮೊದಲನೇ ಅಧ್ಯಾಯದಲ್ಲಿ **ಜಾತವೇದಸ್ಸಿನ** ಸ್ಥಾನಗಳನ್ನು ಹೇಳಿ ಎರಡನೇ ಅಧ್ಯಾಯದಲ್ಲಿ ಸ್ವರೂಪನಿರ್ವಚನವನ್ನು ಮಾಡಿದೆ.

**ಭೂತಾನಿ ವೇದ ಯಜ್ಜಾತೋ ಜಾತವೇದಾಥ ಕಥ್ಯತೇ ।**
**ಯಜ್ಜೈಷ ಜಾತವಿದ್ಯೋಽಭೂತ್ ವಿತ್ತಂ ಜಾತೋಽಧಿವೇತ್ತಿ ವಾ ।**

(ಬೃ. ದೇ. ೨-೩೦)

**ವಿದ್ಯತೇ ಸರ್ವಭೂತೈರ್ಹಿ ಯದ್ವಾ ಜಾತಃ ಪುನಃ ಪುನಃ ।**
**ತೇನೈಷ ಮಧ್ಯಭಾಗೇಂದ್ರೋ ಜಾತವೇದಾ ಇತಿ ಸ್ತುತಃ ।**

(ಬೃ. ದೇ- ೨-೩೧)

ಉತ್ಪನ್ನವಾಗುವಾಗಲೇ ಸಕಲವನ್ನೂ ತಿಳಿಯುವುದರಿಂದಲೂ ಅಥವಾ ಜ್ಞಾನವು ಅವನಲ್ಲೇ ಉತ್ಪನ್ನವಾದುದರಿಂದಲೂ, ಅಥವಾ ಉತ್ಪನ್ನನಾದಾಗಲೇ ಸಕಲ ಧನವನ್ನೂ ತಿಳಿದು ಹೊಂದುವುದರಿಂದಲೂ, ಅಥವಾ ಪುನಃ ಪುನಃ ಉತ್ಪನ್ನನಾದನಾಗಲೆಲ್ಲಾ ಸಕಲ ಭೂತಗಳಿಂದಲೂ ತಿಳಿಯಲ್ಪಡುವನಾದುದರಿಂದಲೂ, ಮಧ್ಯಲೋಕವಾಸಿಯಾದ **ಇಂದ್ರನಂತೆ ಜಾತವೇದಸ್ಸೆಂದು ಅಗ್ನಿಯು** ಸ್ತುತನಾಗಿದ್ದಾನೆಂದು **ಬೃಹದ್ದೇವತೆಯು** ನಿರ್ವಚನವಿದೆ. ಇದರಂತೆಯೇ**ಶತಪಥಬ್ರಾಹ್ಮಣ**ದಲ್ಲಿಯೂ ಸಹ

**ಯಃ ಸಂವತ್ಸರಂ ಜಾತಃ ಸ್ಯಾತ್ಪ್ರಾಣೋ ವಾ ಅಗ್ನಿಸ್ತನೋತದ್ವಿಭರ್ತ್ಯಥ ಹ ವೈ ರೇತಃ ಸಿಕ್ತಂ ಪ್ರಾಣೋಽನ್ವವರೋಹತಿ ತದ್ವಿಂದತೇ ತದ್ಯಜ್ಜಾತಂ ಜಾತಂ ವಿಂದತೇ ತಸ್ಮಾಜ್ಜಾತವೇದಾಃ ।**

(ಶ. ಬ್ರಾ. ೯-೫-೧೬೮)

ಪ್ರಾಣರೂಪಿಯಾದ ಅಗ್ನಿಯು ಉತ್ಪನ್ನವಾದ ಸಕಲ ಭೂತಗಳನ್ನೂ ತನ್ನ ಶಕ್ತಿಯಿಂದ ವ್ಯಾಪಿಸಿಕೊಳ್ಳುವುದರಿಂದ ಜಾತವೇದಸ್ಸೆಂದು ಕರೆಯಲ್ಪಟ್ಟಿದೆ ಎಂದು ಹೇಳಿದೆ. ಯಜ್ಞಗೃಹದಲ್ಲಿ ಪೂಜಿಸಲ್ಪಡತಕ್ಕ ಈ ಜಾತವೇದಸ್ಸೇ ವಿಶ್ವಾತ್ಮನಾದ ಬ್ರಹ್ಮನೆಂದೂ ಉಪನಿಷತ್ತುಗಳಲ್ಲಿ ವರ್ಣಿಸಿದೆ.

**ವಿಶ್ವರೂಪಂ ಹರಿಣಂ ಜಾತವೇದಸಂ ಪರಾಯಣಂ ಜ್ಯೋತಿರೇಕಂ ತಪಂತಂ ।**

(ಪ್ರಶ್ನೋಪನಿಷತ್. ೧-೮).

ವಿಶ್ವರೂಪನೂ, ಸಹಸ್ರ ರಶ್ಮಿಗಳುಳ್ಳವನೂ, ಸರ್ವಜ್ಞನೂ, ಲೋಕಕ್ಕೆಲ್ಲಾ ಆಶ್ರಯನೂ ಆದವನೂ ಮತ್ತು ಜ್ಞಾನಿಗಳಿಂದ ಅರಿಯಲ್ಪಟ್ಟವನೂ ಸಕಲಭೂತಗಳಿಗೂ ಅಂತರಾತ್ಮನಾಗಿರುವವನೂ ಆದ ಸೂರ್ಯನು ಉದಯಿಸುತ್ತಾನೆಂದು ಪ್ರಶ್ನೋಪನಿಷತ್ತಿನಲ್ಲಿಯೂ,

**ಅರಣ್ಯೋರ್ನಿಹಿತೋ ಜಾತವೇದಾ ಗರ್ಭ ಇವ ಸುಭೃತೋ ಗರ್ಭಿಣೀಭಿಃ ।**
**ದಿವೇ ದಿವ ಈಡ್ಯೋ ಜಾಗೃವದ್ಭಿರ್ಹವಿಷ್ಮದ್ಭಿರ್ಮನುಷ್ಯೇಭಿರಗ್ನಿಃ ॥**

(ಕಠೋಪನಿಷತ್. ೧-೪-೮).

ಯಾವ ಜಾತವೇದಸ್ಸು ಅರಣಿಗಳ ನಡುವೆ ಅಧಿಯಜ್ಞದಲ್ಲಿದ್ದುಕೊಂಡು ಎಲ್ಲಾ ಹವಿಸ್ಸುಗಳನ್ನೂ ಭೋಗಿಸುವನೋ, ಗರ್ಭಿಣೀ ಸ್ತ್ರೀಯರು ಮಮತೆಯಿಂದ ತಮ್ಮ ಗರ್ಭಗಳನ್ನು ಪೋಷಿಸಿ ಬೆಳೆಸುವಂತೆ ಯಾವ ಪರಮಪುರುಷನನ್ನು ಯೋಗಿಗಳು ತಮ್ಮ ಹೃದಯದಲ್ಲಿಟ್ಟುಕೊಂಡು ಧ್ಯಾನಮಾಡುವರೋ, ಮತ್ತು ಯಾವ ಪೂಜ್ಯನಾದ ಅಗ್ನಿಯನ್ನು ಪ್ರೀತಿಸಿ ಯಜ್ಞಕರ್ತರು ಹವಿಸ್ಸುಗಳನ್ನರ್ಪಿಸುವರೋ ಆ ಜಾತವೇದಸ್ಸೇ ವಿಶ್ವಾತ್ಮನಾದ ಪರಬ್ರಹ್ಮ ಎಂದು ಕಠೋಪನಿಷತ್ತಿನಲ್ಲಿಯೂ ವರ್ಣಿಸಿದೆ.

**ಅರಣ್ಯೋರ್ನಿಹಿತೋ ಜಾತವೇದಾ ಗರ್ಭ ಇವ ಸುಧಿತೋ ಗರ್ಭಿಣೀಷು ।**
**ದಿವೇದಿವ ಈಡ್ಯೋ ಜಾಗೃವದ್ಭಿರ್ಹವಿಷ್ಮದ್ಭಿರ್ಮನುಷ್ಯೇಭಿರಗ್ನಿಃ ॥**

(ಋ. ಸಂ. ೩-೨೯-೨).

ಎಂದು ಋಕ್ಸಂಹಿತೆಯಲ್ಲಿ ವರ್ಣಿಸಿರುವಂತೆಯೇ ಕಠೋಪನಿಷತ್ತಿನಲ್ಲಿಯೂ ವರ್ಣಿಸಿದೆ. ಹೀಗೆ ಸರ್ವಜ್ಞನೂ, ಸರ್ವವ್ಯಾಪಿಯೂ, ಸರ್ವಧನವುಳ್ಳವನೂ, ಸರ್ವೋತ್ಕೃಷ್ಟನೂ ಆದುದರಿಂದ **ಜಾತವೇದಸ್ಸೆಂದು** ಕರೆಯಲ್ಪಡುತ್ತಾನೆಂದು ಎಲ್ಲಾ ಶ್ರುತಿಗಳೂ ಸ್ತುತಿಸಿವೆ.

**ಅರಾತೀಯತಃ**—ನಮಗೆ ಕೇಡನ್ನು ಬಯಸುವ ಶತ್ರುವಿನಿಂದ. ಕರ್ಮನಿಷ್ಠನಾದ ಯಜ್ಞಕರ್ತರಿಗೆ ಅಸುರರಿಂದ ಉಂಟಾಗತಕ್ಕ ಸಹಜವಾದ ಹಿಂಸೆಯನ್ನು ತಪ್ಪಿಸಲು ಯಜ್ಞಾಧ್ಯಕ್ಷನಾದ ಅಗ್ನಿಯೇ ಸಮರ್ಥನಾದುದರಿಂದ ಅಂತಹ ಅಸುರರಿಂದ ಸಂಭವಿಸುವ ಹಿಂಸೆಯನ್ನು ತಪ್ಪಿಸಬೇಕೆಂದು ಪದೇ ಪದೇ ಅಗ್ನಿಯು ಪ್ರಾರ್ಥಿತನಾಗಿದ್ದಾನೆ.

**ಮಾ ನೋ ಅರಾತಿರೀಶತ ದೇವಸ್ಯ ಮರ್ತ್ಯಸ್ಯ ಚ ।**

(ಋ. ಸಂ. ೨-೭-೨)

**ಪುರುದ್ರುಹೋ ಹಿ ಕ್ಷಿತಯೋ ಜನಾನಾಂ ಪ್ರತಿ ಪ್ರತೀಚೀರ್ದಹತಾದರಾತೀಃ ॥**

(ಋ. ಸಂ. ೩-೧೮-೧)

**ಯೋ ನೋ ಅರಾತಿಂ ಸಮಿಧಾನ ಚಕ್ರೇ ನೀಚಾ ತಂ ಧಕ್ಷ್ಯತಸಂ ನ ಶುಷ್ಕಂ ।**

(ಋ. ಸಂ. ೪-೪-೪)

ಇತ್ಯಾದಿಯಾಗಿ ನಾನಾ ಕಡೆಗಳಲ್ಲಿ ಶತ್ರುಗಳಿಂದ ರಕ್ಷಿಸಬೇಕೆಂದು ಪ್ರಾರ್ಥನೆಯಿರುವಂತೆ ಇಲ್ಲಿಯೂ ಅಗ್ನಿಯು ಪ್ರಾರ್ಥಿತನಾಗಿದ್ದಾನೆ.

**ಸಿಂಧುಂ ನಾವಾ ಇವ ವಿಶ್ವಾ ದುರ್ಗಾಣಿ ಅತಿ ಪರ್ಷತ್**—ಮೊಸಳೆಗಳೇ ಮುಂತಾದ ದುಷ್ಟಪ್ರಾಣಿಗಳಿಂದ ಕೂಡಿದ ನದಿಯನ್ನು ದೋಣಿಯ ಮೂಲಕ ಸುರಕ್ಷಿತವಾಗಿ ಸಾಗಿಸುವಂತೆ ದುಃಖಹೇತುಗಳಿಂದ ನಮ್ಮ ಪ್ರತಿಬಂಧಕಗಳನ್ನು ತಪ್ಪಿಸಿ ನಮ್ಮನ್ನು ಕಷ್ಟದಿಂದ ದಾಟಿಸಲಿ ಎಂದು ಪ್ರಾರ್ಥಿಸುವಾಗ ರಕ್ಷಣೆಯನ್ನು ನಾವೆಗೂ, ಕ್ಲೇಶಗಳನ್ನು ಮೊಸಳೆಗಳೇ ಮುಂತಾದ ಕ್ರೂರವಾದ ಜಲಜಂತುಗಳಿಗೂ ಹೋಲಿಸುವುದು ಋಕ್ಸಂಹಿತೆಯಲ್ಲೆಲ್ಲಾ ಸಾಧಾರಣವಾಗಿ ಅನೇಕಕಡೆ ಬರುವ ಉಪಮಾನವಾಗಿದೆ. ಈ ಉಪಮಾನದಲ್ಲಿರುವ ಔಚಿತ್ಯವನ್ನು ಋ. ಸಂ. ೧-೯೭-೮ನೇ ಋಕ್ಕನ್ನು ವಿವರಿಸುವಾಗ ಉದಾಹರಣೆಗಳೊಡನೆ ತಿಳಿಸಿದೆ.

**ದುರಿತಾ ಅತಿ**—ನಮಗೆ ದುಃಖಹೇತುಗಳಾದ ಪಾಪಕೃತ್ಯಗಳನ್ನೂ ಸಹ ನಾವು ಮಾಡದಿರುವಂತೆ ನಮ್ಮನ್ನು ದಾಟಿಸಿ ಕರೆದುಕೊಂಡುಹೋಗಲಿ. ಎಷ್ಟೇ ಶ್ರದ್ಧೆಯಿದ್ದರೂ ಸಹ ಕರ್ಮಾನುಷ್ಠಾನಗಳಲ್ಲಿ ನ್ಯೂನತೆಯು ಕಂಡುಬರುವುದು ಸಹಜವಾದುದರಿಂದ ಅಂತಹ ತಿಳುವಳಿಕೆಗೆ ಬರದೇ ಇರತಕ್ಕ ಪಾಪವು ನಡೆಯದಿರುವಂತೆ ಸನ್ಮಾರ್ಗಪ್ರವರ್ತಕನಾಗಿರಬೇಕೆಂದೂ, ಅಥವಾ ಅಂತಹ ನ್ಯೂನತೆಯು ಕಂಡುಬಂದರೂ ಅದನ್ನು ಕ್ಷಮಿಸಬೇಕೆಂದೂ ಅನೇಕಕಡೆ ಪಶ್ಚಾತ್ತಾಪ ಪೂರಿತವಾದ ಬೇಡಿಕೆಯಿದೆ.

**ಯಚ್ಚಿದ್ಧಿ ತೇ ಪುರುಷತ್ರಾ ಯವಿಷ್ಠಾಚಿತ್ತಿಭಿಶ್ಚಕೃಮಾ ಕಚ್ಚಿದಾಗಃ ।**
**ಕೃಧೀ ಷ್ವಸ್ಮಾँ ಅದಿತೇರನಾಗಾನ್ವ್ಯೇನಾಂಸಿ ಶಿಶ್ರಥೋ ವಿಷ್ವಗಗ್ನೇ ॥**

(ಯ. ಸಂ. ೪-೧೨-೪).

**ಸೋ ಅಗ್ನ ಏನಾ ನಮಸಾ ಸಮಿದ್ಧೋಽಚ್ಛಾ ಮಿತ್ರಂ ವರುಣಮಿಂದ್ರಂ ವೋಚೇಃ ।**
**ಯತ್ಸೀಮಾಗಶ್ಚಕೃಮಾ ತತ್ಸು ಮೃಳ ತದರ್ಯಮಾದಿತಿಃ ಶಿಶ್ರಥಂತು ॥**

(ಋ. ಸಂ. ೭-೯೩-೭).

ಹೀಗೆ ಎಲ್ಲಾ ವಿಧವಾದ ದೋಷಗಳಿಂದಲೂ ತಪ್ಪಿಸಬೇಕೆಂದೂ, ಮತ್ತು ಅಂತಹ ದೋಷಗಳು ಸಂಭವಿಸಿದರೆ ಕ್ಷಮಿಸಬೇಕೆಂದೂ ಪ್ರಾರ್ಥಿಸಿರುವಂತೆ ಇಲ್ಲಿಯೂ ಸಹ ಅದೇ ಬೇಡಿಕೆಯಿದೆ.

॥ ವ್ಯಾಕರಣಪ್ರಕ್ರಿಯಾ ॥

**ಜಾತವೇದಸೇ**—ಜಾತಾನಿ ವೇತ್ತೀತಿ ಜಾತವೇದಾಃ ವಿದ ಜ್ಞಾನೇ ಧಾತು. ಗತಿಕಾರಕಯೋರಪಿಪೂರ್ವಪದಪ್ರಕೃತಿಸ್ವರತ್ವಂಚ—(ಉ. ಸೂ. ೪-೬೬೬) ಎಂಬುದರಿಂದ ಕಾರಕಪೂರ್ವಪದವಾಗಿರುವಾಗ ಇದಕ್ಕೆ ಅಸುನ್ ಪ್ರತ್ಯಯ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಜಾತವೇದಸ್ ಶಬ್ದವಾಗುತ್ತದೆ. ಪೂರ್ವಪದಪ್ರಕೃತಿಸ್ವರವೂ ಸೂತ್ರದಿಂದಲೇ ವಿಹಿತವಾಗಿದೆ. ಚತುರ್ಥೀಏಕವಚನಾಂತರೂಪ.

**ಸುನವಾಮ**—ಷುಞ್ ಅಭಿಷವೇ ಧಾತು. **ಧಾತ್ವಾದೇಃ ಷಃ ಸಃ** ಎಂಬುದರಿಂದ ಸತ್ವ. ಲೋಟ್ ಉತ್ತಮಪುರುಷಬಹುವಚನದಲ್ಲಿ ಛಾಂದಸವಾಗಿರುವುದರಿಂದ ಸಕಾರಲೋಪ. **ಸ್ವಾದಿಭ್ಯಃ ಶ್ನುಃ** ಎಂಬುದರಿಂದ ಶ್ನು ವಿಕರಣ. **ಆಡುತ್ತಮಸ್ಯ ಪಿಚ್ಚ** (ಪಾ. ಸೂ. ೩-೪-೯೨) ಎಂಬುದರಿಂದ ಪ್ರತ್ಯಯಕ್ಕೆ ಆಡಾಗಮ. ಪಿತ್ತಾದುದರಿಂದ ತನ್ನಿಮಿತ್ತವಾಗಿ ವಿಕರಣಕ್ಕೆ ಗುಣ. ಅವಾದೇಶ. ವಿಕರಣಕ್ಕೆ ಙಿದ್ವದ್ಭಾವವಿರುವುದರಿಂದ ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅರಾತೀಯತಃ** ನ ವಿದ್ಯತೇ ರಾತಿಃ ದಾನಂ ಅಸ್ಮಿನ್ ಇತಿ ಅರಾತಿಃ ಶತ್ರುಃ ಅರಾತಿಮಿವ ಆಚರತಿ (ಅಸ್ಮಾನ್) ಇತಿ ಅರಾತೀಯತಿ **ಉಪಮಾನಾದಾಚಾರೇ** (ಪಾ. ಸೂ. ೩-೧-೧೦) ಎಂಬುದರಿಂದ ಉಪಮಾನವಾಚಕವಾದ ಕರ್ಮವಾಚಕವಾದ ಸುಬಂತದ ಮೇಲೆ ಆಚಾರಾರ್ಥದಲ್ಲಿ ಕ್ಯಚ್. **ಅಕೃತ್ ಸಾರ್ವಧಾತು-ಕಯೋರ್ದೀರ್ಘಃ** ಎಂಬುದರಿಂದ ಕ್ಯಚ್ ನಿಮಿತ್ತವಾಗಿ ಪೂರ್ವಕ್ಕೆ ದೀರ್ಘ. ಅರಾತೀಯ ಎಂಬ ಕ್ಯಜಂತವು **ಸನಾದ್ಯಂತಾ ಧಾತವಃ** ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಇದಕ್ಕೆ ಲಡರ್ಥದಲ್ಲಿ ಶತೃ ಪ್ರತ್ಯಯ. ಅರಾತೀಯತ್ ಶಬ್ದವಾಗುತ್ತದೆ. ಷಷ್ಠ್ಯೇಕವಚನಾಂತರೂಪ. ನುಮ್‌ರಹಿತವಾದ ಶತೃವಿನ ಪರದಲ್ಲಿ ಅಜಾದಿ ವಿಭಕ್ತಿ ಬಂದುದರಿಂದ **ಶತುರನುಮೋನದ್ಯಜಾದೀ**— (ಪಾ. ಸೂ. ೬-೧-೧೭೩) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ದಹಾತಿ**—ದಹ ಭಸ್ಮೀಕರಣೇ ಧಾತು ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಆಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವೇದಃ**—ವಿದ್ಯತೇ ಲಭ್ಯತೇ ಇತಿ ವೇದಃ (ಹೊಂದಲ್ಪಡುವುದು.) ಧನವು. ವಿದ್‌ಲೃ ಲಾಭೇ ಧಾತು. **ಸರ್ವಧಾತುಭ್ಯ ಅಸುನ್** (ಉ. ಸೂ ೪-೬-೨೮) ಎಂಬುದರಿಂದ ಇದಕ್ಕೆ ಕರ್ಮಣಿಯಲ್ಲಿ ಅಸುನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ವೇದಸ್ ಶಬ್ದವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

**ಪರ್ಷತ್**—ಪೄ ಪಾಲನಪೂರಣಯೋಃ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಈ ಧಾತುವಿಗೆ ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚಲೋಪಃ** (ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ** ಎಂಬುದರಿಂದ ಅಡಾಗಮ. **ಸಿಬ್ಬಹುಲಂ-ಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ತಿಙಂತ ನಿಘಾತಸ್ವರ ಬರುತ್ತದೆ.

ದುರ್ಗಾಣಿ—ದುಃಖೇನ ಗಮ್ಯತೇ ಏಷು ಇತಿ ದುರ್ಗಾಣಿ ಗಮ್‌ಲೃ ಗತೌ ಧಾತು. **ಸುದುರೋರಧಿಕರಣೇ** (ಪಾ. ಸೂ. ೩-೨-೪೮-೩) ಎಂಬುದರಿಂದ ಅಧಿಕರಣಾರ್ಥದಲ್ಲಿ ಇದಕ್ಕೆ ಡ ಪ್ರತ್ಯಯ. ಡಿತ್ವಸಾಮರ್ಥ್ಯದಿಂದ ಭಸಂಜ್ಞಾಭಾವವಿದ್ದರೂ ಧಾತುವಿನ ಟಿಗೆ (ಅಮ್) ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ವಿಶ್ವಾ—ನಪುಂಸಕ ಬಹುವಚನದಲ್ಲಿ ಶಿ ಆದೇಶ ಬಂದು ಕಾರ್ಯವಾದಾಗ ಶೇಶ್ಛಂದಸಿ ಬಹುಲಂ(ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

೯೯ ನೇ ಸೂಕ್ತವು ಸಮಾಪ್ತವಾಗಿದೆ.



# ನೂರನೆಯ ಸೂಕ್ತವು

ಸ ಯೋ ವೃಷೇತ್ಯೇಕೋನವಿಂಶತ್ಯೃಚಂ ಸಪ್ತಮಂ ಸೂಕ್ತಂ । ಅತ್ರಾನುಕ್ರಮ್ಯತೇ । ಸ ಯೋ ವೃಷೈಕೋನಾ ವಾರ್ಷಾಗಿರಾ ಋಜ್ರಾಶ್ವಾಂಬರೀಷಸಹದೇವಭಯಮಾನಸುರಾಧಸ ಇತಿ । ವೃಷಾಗಿರೋ ಮಹಾರಾಜಸ್ಯ ಪುತ್ರಭೂತಾ ಋಜ್ರಾಶ್ವಾದಯಃ ಪಂಚ ರಾಜರ್ಷಯಃ ಸಹೇದಂ ಸೂಕ್ತಂ ದದೃಶುಃ । ಅತಸ್ತೇಽಸ್ಯ ಸೂಕ್ತಸ್ಯ ಋಷಯಃ । ಉಕ್ತಂ ಹ್ಯಾರ್ಷಾನುಕ್ರಮಣ್ಯಾಂ । ಸೂಕ್ತಂ ಸ ಯೋ ವೃಷೇತ್ಯೇತತ್ಪಂಚ ವಾರ್ಷಾಗಿರಾ ವಿದುಃ । ನಿಯುಕ್ತಾ ನಾಮಧೇಯೈಃ ಸ್ವೈರಪಿ ಚೈತತ್ತ್ವದಿತ್ಯೃಚೀತಿ । ಅನಾದೇಶಪರಿಭಾಷಯಾ ತ್ರಿಷ್ಟುಪ್ । ಇಂದ್ರೋ ದೇವತಾ ॥ ದಶರಾತ್ರಸ್ಯ ಷಷ್ಠೇಽಹನಿ ಮರುತ್ವತೀಯ ಇದಂ ಸೂಕ್ತಂ । ತಥಾ ಚ ಸೂತ್ರಿತಂ । ಯಂ ತ್ವಂ ರಥಮಿಂದ್ರ ಸ ಯೋ ವೃಷೇಂದ್ರ ಮರುತ್ವ ಇತಿ ತಿಸ್ರ ಇತಿ ಮರುತ್ವತೀಯಂ । ಆ. ೮-೧ । ಇತಿ ॥

ಅನುವಾದವು—ಸ ಯೋ ವೃಷಾ ಎಂಬ ಸೂಕ್ತವು ಹದಿನೈದನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಹತ್ತೊಂಭತ್ತು ಋಕ್ಕುಗಳಿರುವುವು. ಅನುಕ್ರಮಣಿಕೆಯಲ್ಲಿ—ಸ ಯೋ ವೃಷೈಕೋನಾ ವಾರ್ಷಾಗಿರಾ ಋಜ್ರಾಶ್ವಾಂಬರೀಷಸಹದೇವಭಯಮಾನಸುರಾಧಸ ಇತಿ ಎಂದು ಹೇಳಿರುವುದು. ವೃಷಾಗಿರನೆಂಬ ಮಹಾರಾಜನ ಪುತ್ರರಾದ ಋಜ್ರಾಶ್ವ, ಅಂಬರೀಷ, ಸಹದೇವ, ಭಯಮಾನ, ಸುರಾಧಸ್ ಎಂಬ ಐದು ಮಂದಿ ರಾಜರ್ಷಿಗಳು ಈ ಸೂಕ್ತದ ದ್ರಷ್ಟೃಗಳಾಗಿರುವರು. ಆರ್ಷಾನುಕ್ರಮಣಿಕೆಯಲ್ಲಿ—

ಸೂಕ್ತಂ ಸ ಯೋ ವೃಷೇತ್ಯೇತತ್ಪಂಚ ವಾರ್ಷಾಗಿರಾ ವಿದುಃ ।
ನಿಯುಕ್ತಾ ನಾಮಧೇಯೈಃ ಸ್ವೈರಪಿ ಚೈತತ್ತ್ವದಿದೃಚಿ ॥ (ಇತಿ)

ಎಂದು ಹೇಳಿರುವುದು. ತ್ರಿಷ್ಟುಪ್ ಛಂದಸ್ಸು, ಇಂದ್ರನು ದೇವತೆಯು. ದಶರಾತ್ರವೆಂಬ ಯಾಗದ ಆರನೆಯ ದಿವಸದಲ್ಲಿ ಮರುತ್ವತೀಯಶಸ್ತ್ರಮಂತ್ರಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಅಶ್ವಲಾಯನಶ್ರೌತ ಸೂತ್ರದ—ಯಂ ತ್ವಂ ರಥಮಿಂದ್ರ ಸ ಯೋ ವೃಷೇಂದ್ರ ಮರುತ್ವ ಇತಿ ತಿಸ್ರ ಇತಿ ಮರುತ್ವತೀಯಂ ಎಂಬ ಸೂತ್ರದಿಂದ ನಿರ್ದಿಷ್ಟವಾಗಿರುವುದು. (ಆ. ೮-೧)

## ಸೂಕ್ತ—೧೦೦

ಮಂಡಲ—೧ ॥ ಅನುವಾಕ—೧೫ ॥ ಸೂಕ್ತ— ೧೦೦॥

ಅಷ್ಟಕ—೧ ॥ ಅಧ್ಯಾಯ—೭ ॥ ವರ್ಗ— ೮, ೯, ೧೦, ೧೧ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ— ೧೯

॥ ಋಷಿಃ— ಋಜ್ರಾಶ್ವ, ಅಂಬರೀಷ, ಸಹದೇವ, ಭಯಮಾನ, ಸುರಾಧಾಃ ॥

॥ ದೇವತಾ— ಇಂದ್ರಃ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಸ ಯೋ ವೃಷಾ ವೃಷ್ಣ್ಯೇಭಿಃ ಸಮೋಕಾ ಮಹೋ ದಿವಃ
ಪೃಥಿವ್ಯಾಶ್ಚ ಸಮ್ರಾಟ್ ।
ಸತೀನಸತ್ವಾ ಹವ್ಯೋ ಭರೇಷು ಮರುತ್ವಾನ್ನೋ ಭವತ್ವಿಂದ್ರ
ಊತೀ ॥೧॥

ಪದಪಾಠಃ

ಸಃ । ಯಃ । ವೃಷಾ । ವೃಷ್ಣ್ಯೇಭಿಃ । ಸಂऽಓಕಾಃ । ಮಹಃ । ದಿವಃ । ಪೃಥಿವ್ಯಾಃ ।
ಚ । ಸಂऽರಾಟ್ ।
ಸತೀನऽಸತ್ವಾ । ಹವ್ಯಃ । ಭರೇಷು । ಮರುತ್ವಾನ್ । ನಃ । ಭವತು । ಇಂದ್ರಃ ।
ಊತೀ ॥ ೧ ॥

॥ ಸಾಯಣಭಾಷ್ಯಂ ॥

ಯ ಇಂದ್ರೋ ವೃಷಾ ಕಾಮಾನಾಂ ವರ್ಷಿತಾ ವೃಷ್ಣ್ಯೇಭಿರ್ವೃಷ್ಣಿ ಭವೈರ್ವೀರ್ಯೈಃ ಸಮೋಕಾಃ ಸಮ್ಯಕ್ ಸಮವೇತಃ ಸಂಗತೋ ಮಹೋ ಮಹತೋ ದಿವೋ ದ್ಯುಲೋಕಸ್ಯ ಪೃಥಿವ್ಯಾಃ ಪ್ರಥಿತಾಯಾ ಭೂಮೇಶ್ಚ ಸಮ್ರಾಡೀಶ್ವರಃ ಸತೀನಸತ್ವಾ । ಸತೀನಮಿತ್ಯುದಕನಾಮ । ಉದಕಸ್ಯ ಸತ್ವಾ ಸಾದಯಿತಾ ಗಮಯಿತಾ । ಭರೇಷು ಸಂಗ್ರಾಮೇಷು ಹವ್ಯಃ ಸರ್ವೈಃ ಸ್ತೋತೃಭಿರಾಹ್ವಾತವ್ಯಃ ಏವಂಭೂತೋ ಮರುತ್ವಾನ್ಮರುದ್ಭಿರ್ಯುಕ್ತಃ ಸ ಇಂದ್ರೋ ನೋಽಸ್ಮಾಕಮೂತೀ ಊತಯೇ ರಕ್ಷಣಾಯ ಭವತು ॥ ವೃಷ್ಣ್ಯೇಭಿಃ । ವೃಷಣ್ಯಬ್ದಾದ್ಭವೇ ಛಂದಸೀತಿ ಯತ್ । ಅಲ್ಲೋಪೋಽನ ಇತ್ಯಕಾರಲೋಪಃ । ಯೇ ಚಾಭಾವಕರ್ಮಣೋರಿತಿ ಪ್ರಕೃತಿಭಾವಸ್ತು ವ್ಯತ್ಯಯೇನ ನ ಭವತಿ । ಮಹಃ । ಮಹ ಪೂಜಾಯಾಂ ಕ್ವಿಪ್ । ಯದ್ವಾ। ಮಹಚ್ಛಬ್ದೇಽಚ್ಛಬ್ದಲೋಪಃ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಸಮ್ರಾಟ್ । ಮೋ ರಾಜಿ ಸಮಃ ಕ್ವೌ । ಪಾ. ೮-೩-೨೫ । ಇತಿ ರಾಜತೌ ಕ್ವಿಬಂತೆ ಉತ್ತರಪದೇ ಸಮೋ ಮಕಾರಸ್ಯ ಮಕಾರಾದೇಶಃ । ಮಕಾರಸ್ಯ ಚ ಮಕಾರವಚನಮನುಸ್ವಾರಬಾಧನಾರ್ಥಂ । ಸತೀನಸತ್ವಾ । ಷದ್ಲೃ ವಿಶರಣಗತ್ಯವಸಾದನೇಷು । ಮೇಘೇಷು ನಿಷೀದತೀತಿ ಸತೀನಂ ವೃಷ್ಟ್ಯುದಕಂ । ಔಣಾದಿಕ ಈನಪ್ರತ್ಯಯಸ್ತಕಾರಾಂತಾದೇಶಶ್ಚ । ಯದ್ವಾ। ಸತೀ ಮಾಧ್ಯಮಿಕಾ ವಾಕ್ । ಸಾ ಇನಾ ಈಶ್ವರಾ ಯಸ್ಯ ತತ್ಸತೀನಂ । ವ್ಯತ್ಯಯೇನ ಪುಂವದ್ಭಾವಾಭಾವಃ । ತತ್ಸತ್ವಾ । ಸದೇರಂತರ್ಭಾವಿತಣ್ಯರ್ಥಾತ್ಸ್ನಾ ಊರಸದ್ಯೋಽಸ್ತುಟ್ಚ । ಉ. ೪-೧೧೬ । ಇತ್ಯೌಣಾದಿಕೋ ವನಿಪ್ ತುಡಾಗಮಶ್ಚ । ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ । ಮರುತ್ವಾನ್ । ಝಯ ಇತಿ ಮತುಪೋ ವತ್ವಂ । ಊತೀ । ಊತಿಯೂತೀತ್ಯಾದಿನಾ ಕ್ತಿನ ಉದಾತ್ತತ್ವಂ । ಸುಪಾಂ ಸುಲುಗಿತಿ ಚತುರ್ಥ್ಯಾಃ ಪೂರ್ವಸವರ್ಣದೀರ್ಘಃ ॥

ಪ್ರತಿಪದಾರ್ಥ

**ಯಃ**—ಯಾವ ಇಂದ್ರನು ॥ **ವೃಷಾ**—ಇಷ್ಟಾರ್ಥಗಳನ್ನು ಸುರಿಸುವವನೂ, । **ವೃಷ್ಣ್ಯೇಭಿಃ**—(ಸಮಸ್ತ। ಶಕ್ತಿಗಳೊಡನೆಯೂ । **ಸಮೋಕಾಃ**—ಕೂಡಿಕೊಂಡಿರುವವನೂ- । **ಮಹಃ**—ಅತಿ ವಿಸ್ತಾರವಾದ । **ದಿವಃ**—ದ್ಯುಲೋಕಕ್ಕೂ । **ಪೃಥಿವ್ಯಾಃ ಚ**—ಪೃಥಿವಿಗೂ ಕೂಡ । **ಸಮ್ರಾಟ್**—ಏಕಮಾತ್ರಪ್ರಭುವಾಗಿರುವವನೂ । **ಸತೀನ ಸತ್ವಾ**—ನೀರನ್ನು ಹರಿಸುವವನೂ । **ಭರೇಷು**—ಯುದ್ಧಗಳಲ್ಲಿ । **ಹವ್ಯಃ**—(ಎಲ್ಲರಿಂದಲೂ ಸಹಾಯಕ್ಕಾಗಿ) ಕರೆಯಲ್ಪಡುವವನೂ ಆಗಿ । **ಮರುತ್ವಾನ್**—ಮರುತ್ತುಗಳೊಡನೆ ಕೂಡಿಕೊಂಡಿರುವನೋ । **ಸಃ ಇಂದ್ರಃ**-ಆ ಇಂದ್ರನು । **ನಃ**—ನಮ್ಮ । **ಊತೀ**—ರಕ್ಷಣೆಗಾಗಿ । **ಭವತು**—ಇರಲಿ ।

ಭಾವಾರ್ಥ

ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸಿಕೊಡುವವನೂ, ಸಮಸ್ತಶಕ್ತಿಗಳೊಡನೆಯೂ ಕೂಡಿರುವವನೂ, ಅತಿ ವಿಸ್ತಾರವಾದ ದ್ಯುಲೋಕಕ್ಕೂ ಮತ್ತು ಪೃಥಿವಿಗೂ ಏಕಮಾತ್ರಪ್ರಭುವಾಗಿರುವವನೂ, ನೀರನ್ನು ಹರಿಸುವವನೂ ಮತ್ತು ಯುದ್ಧಗಳಲ್ಲಿ ಎಲ್ಲರಿಂದಲೂ ಸಹಾಯಕ್ಕಾಗಿ ಕರೆಯಲ್ಪಡುವವನೂ ಆಗಿರುವ ಇಂದ್ರನು ಮರುತ್ತುಗಳೊಡನೆ ಕೂಡಿಕೊಂಡು ನಮ್ಮ ರಕ್ಷಣೆಗಾಗಿ ಇರಲಿ.

## English Translation

May he who is the showerer of desires, who is co-dweller with (all) energies, the supreme ruler over the vast heaven and earth, the sender of water and to be invoked in battles; may Indra, associated with the Maruts be our protection.

॥ ವಿಶೇಷವಿಷಯಗಳು ॥

**ವೃಷಾ—ಕಾಮಾನಾಂ ವರ್ಷಿತಾ।** ಇಷ್ಟಾರ್ಥಗಳನ್ನು ಸುರಿಸುವವನು.

**ವೃಷ್ಣ್ಯೇಭಿಃ—ವೃಷ್ಣಿಭವೈರ್ವೀರ್ಯೈಃ।** ವೃಷ್ಣಿಯಲ್ಲಿರುವ ವೀರ್ಯಗಳೊಡನೆ. **ವೃಷಾ, ವೃಷ್ಣ್ಯೇಭಿಃ** ಎಂಬ ಎರಡು ಪದಗಳೂ **ವೃಷ** ಧಾತುವಿನಿಂದ ಉತ್ಪನ್ನವಾದವುಗಳಾಗಿವೆ. **ವೃಷು ಸೇಚನೇ**; ವೃಷ—ಶಕ್ತಿಬಂಧನೆ; ಎಂಬ ಎರಡು ಧಾತುಗಳಲ್ಲಿ ಸುರಿಸು, ಚಿಮುಕಿಸು ಎಂಬರ್ಥವನ್ನು ಕೊಡುವ **ವೃಷ** ಧಾತುವಿನಿಂದ **ವೃಷಾ** ಎಂಬ ಮೊದಲನೆಯ ಪದವೂ; ಶಕ್ತಿ ಮತ್ತು ಸಾಮರ್ಥ್ಯ ಎಂಬರ್ಥವನ್ನು ಕೊಡುವ ಎರಡನೆಯ ಧಾತುವಿನಿಂದ **ವೃಷ್ಣ್ಯೇಭಿಃ** ಎಂಬ ಎರಡನೆಯ ಪದವೂ ನಿಷ್ಪನ್ನವಾಗಿವೆಯೆಂದು ಭಾಷ್ಯಕಾರರು ಈ ಸಂದರ್ಭದಲ್ಲಿ ಮಾಡತಕ್ಕ ವಿವರಣೆಗಳಿಂದ ತಿಳಿಯಬೇಕು. ಆದರೆ **ವೃಷನ್** ಎಂಬ ವಿಶೇಷಣವೂ ಈ ಮೂಲದಿಂದ ವ್ಯುತ್ಪನ್ನವಾಗುವ ಇತರ ವಿಶೇಷಣಗಳೂ ಋಕ್ಸಂಹಿತೆಯಲ್ಲಿ ಪದೇಪದೇ ಉಪಯೋಗಿಸಲ್ಪಟ್ಟಿರುವುದರಿಂದ ಈ ಪದಗಳಿಗೆ ನಿಯತವಾದ ಒಂದೇ ಅರ್ಥವನ್ನು ಹೇಳುವುದಕ್ಕಾಗುವುದಿಲ್ಲ. ಆಯಾ ಸಂದರ್ಭಗಳಿಗೆ ತಕ್ಕಂತೆ ಅರ್ಥವನ್ನು ಹೇಳಬೇಕಾಗುತ್ತದೆ. ಆದುದರಿಂದ **ವೃಷನ್** ಶಬ್ದವನ್ನು ಮುಖ್ಯವಾಗಿ ಯಾವ ಯಾವ ಅರ್ಥಗಳಲ್ಲಿ ಉಪಯೋಗಿಸಿದೆಯೆಂದು ಸೂಕ್ಷ್ಮವಾಗಿ ತಿಳಿಸಿ ಅನಂತರ ಈ ಋಕ್ಕಿನಲ್ಲಿ ಇಂದ್ರನಿಗೆ ವಿಶೇಷಣವಾಗಿ ಉಪಯೋಗಿಸಿರುವಾಗ ಅದರ ವಿಶೇಷಾರ್ಥವೇನು ಎಂಬುದನ್ನು ಪರಿಶೀಲಿಸೋಣ.

ಸೇಚನಸಾಮರ್ಥ್ಯವುಳ್ಳ **ಪುಮಾನ್** ಎಂಬ ಅರ್ಥದಲ್ಲಿ **ವೃಷನ್** ಶಬ್ದವನ್ನು ಅನೇಕಕಡೆ ಉಪಯೋಗಿಸಿದೆ. **ಪುಮಾನ್** ಎಂಬ **ಪುಲ್ಲಿಂಗ** ಸೂಚಕವಾಗಿ ಪುರುಷಪರ್ಯಾಯವಾಗಿಯಾಗಲಿ ಅಥವಾ ಅಶ್ವಾದಿ ಇತರ ಪ್ರಾಣಿಗಳ ಪರ್ಯಾಯವಾಗಿಯೂ ಈ ಪದದ ಪ್ರಯೋಗವಿರುವುದು.

**ಯೇ ತ ಇಂದ್ರ ದದುಷೋ ವರ್ಧಯಂತಿ ಮಹಿ ಕ್ಷತ್ರಂ ಸ್ಥವಿರಂ ವೃಷ್ಣ್ಯಂ ಚ ।**
(ಋ. ಸಂ. ೧-೫೪-೮)

ಎಂಬಲ್ಲಿ **ವೃಷ್ಣ್ಯಂ** ಎಂಬ ಪದಕ್ಕೆ **ವೃಷತ್ವಂ। ಪುಂಸ್ತ್ವಂ** ಎಂದೂ,

**ಸ್ತುತಃ ಶ್ರವಸ್ಯನ್ನವಸೋಪ ಮದ್ರಿಗ್ಯುಕ್ತ್ವಾ ಹರೀ ವೃಷಣಾ ಯಾಹ್ಯರ್ವಾಙ್ ।**
(ಋ. ಸಂ. ೧-೧೭೭-೧)

ಇಲ್ಲಿ **ವೃಷಣಾ** ಎಂದರೆ **ಯುವಾನಾ** ಎಂದೂ,

**ಭೂಷನ್ನ ಯೋಧಿ ಬಭ್ರೂಷು ನಮ್ನತೇ ವೃಷೇವ ಪತ್ನೀರಭ್ಯೇತಿ ರೋರುವತ್ ।**
(ಋ. ಸಂ. ೧-೧೪೦-೬)

ಇಲ್ಲಿ **ವೃಷಾ ಇವ** ಎನ್ನುವದಕ್ಕೆ **ಸೇಕ್ತಾ ವೃಷಭ ಇವ** । ಸೇಚನೆ ಮಾಡುವ ವೃಷಭನಂತೆ ಎಂದೂ,

**ಮಿನಾತಿ ಶ್ರಿಯಂ ಜರಿಮಾ ತನೂನಾಮಪ್ಯೂ ನು ಪತ್ನೀರ್ವೃಷಣೋ ಜಗಮ್ಯುಃ ।**
(ಋ. ಸಂ. ೧-೧೭೯-೧)

ಇಲ್ಲಿ **ವೃಷಣಃ** ಎಂಬುದಕ್ಕೆ **ಸೇಕ್ತಾರಃ ಪುರುಷಾಃ** । ಎಂದೂ, ಇನ್ನೂ ಹೀಗೆಯೇ ಅನೇಕ ಕಡೆಗಳಲ್ಲಿ ಇದರಂತೆಯೇ ಪುಲ್ಲಿಂಗ ಸೂಚಕವಾದುದೂ, ಪುರುಷಪ್ರಾಣಿಯ ಶಕ್ತಿಯನ್ನು ತೋರಿಸತಕ್ಕದ್ದೂ ಆದ ಅರ್ಥಗಳಲ್ಲಿ ಈ ಪದದ ಪ್ರಯೋಗವಿದೆ. ಮತ್ತು,

**ವೃಷಾ ವಾಂ ಮೇಘೋ ವೃಷಣಾ ಪೀಪಾಯ ಗೋರ್ನ ಸೇಕೇ ಮನುಷೋ ದಶಸ್ಯನ್ ।**
( ಋ. ಸಂ. ೧-೧೮೧-೮ )

**ದಸ್ಮೋ ಹಿ ಷ್ಮಾ ವೃಷಣಂ ಪಿನ್ವಸಿ ತ್ವಚಂ ಕಂ ಚಿದ್ಯಾವೀರರರುಂ ಶೂರ ಮರ್ತ್ಯಂ ಪರಿವೃಣಕ್ಷಿ ಮರ್ತ್ಯಂ ।**
( ಋ. ಸಂ. ೧-೧೨೯-೩ )

**ತಾ ತೂ ತೇ ಸತ್ಯಾ ತುವಿನೃಮ್ಣ ವಿಶ್ವಾ ಪ್ರ ಧೇನವಃ ಸಿಸ್ರತೇ ವೃಷ್ಣ ಊಧ್ನಃ ।**
(ಋ. ಸಂ. ೪-೨೨-೬)

ಇತ್ಯಾದಿ ಸ್ಥಳಗಳಲ್ಲಿ **ವರ್ಷಕಃ, ವರ್ಷಣಪರಮನಸ್ಕಃ** । ನೀರನ್ನು ಸುರಿಸುವುದು, ಇಷ್ಟಾರ್ಥಗಳನ್ನು ಸುರಿಸುವವನ ಎಂದು **ಸೇಚನಾರ್ಥ**ದಲ್ಲಿ ಉಪಯೋಗಿಸಿದೆ. ಇದರೊಂದಿಗೆ ಇನ್ನೂ ಇತರ ಅರ್ಥಗಳೂ ಅಪರೂಪವಾಗಿ ಅಲ್ಲಲ್ಲಿ ತೋರಿದರೂ ಸಹ **ವೃಷ್ಣ್ಯ** ಶಬ್ದಕ್ಕೆ ಅಸಾಧಾರಣವಾದ ಶಕ್ತಿ, ವೀರ್ಯ ಎಂಬರ್ಥವೇ ಮುಖ್ಯವಾಗಿ ನಾನಾ ಕಡೆಗಳಲ್ಲಿ ತೋರುತ್ತದೆ.

**ಆ ಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣ್ಯಂ ।**
( ಋ. ಸು. ೧-೯೧-೧೬ )

**ಮಹಾँ ಅಸಿ ಮಹಿಷ ವೃಷ್ಣ್ಯೇಭಿರ್ಧನಸ್ಪೃದುಗ್ರ ಸಹಮಾನೋ ಅನ್ಯಾನ್ ।**
( ಋ. ಸಂ. ೩-೪೬-೨ )

**ವಿ ಚರ್ಮಣೀವ ಧಿಷಣೇ ಅವರ್ತಯದ್ವೈಶ್ವಾನರೋ ವಿಶ್ವಮಧತ್ತ ವೃಷ್ಣ್ಯಂ ।**
(ಋ. ಸಂ. ೬-೮-೩)

ಇತ್ಯಾದಿ ನಾನಾಸುಕ್ತಗಳಲ್ಲಿ **ವೃಷ್ಣ್ಯ**ಶಬ್ದಕ್ಕೆ ವೀರ್ಯ ಮತ್ತು ಪರಾಕ್ರಮ ಎಂಬ ಅರ್ಥವು ಸಾಧಾರಣವಾಗಿದೆ. ಇದೂ ಅಲ್ಲದೇ ಅನೇಕ ಸಂದರ್ಭಗಳಲ್ಲಿ **ಇಂದ್ರಾದಿ ದೇವತೆಗಳ** ಪರ್ಯಾಯನಾಗಿಯೇ **ವೃಷನ್** ಶಬ್ದವನ್ನು ಉಪಯೋಗಿ

ಸಿರುವುದರಿಂದ ಅಂತಹ ಕಡೆಗಳಲ್ಲಿ ಸಂದರ್ಭಕ್ಕೆ ಅನುಗುಣವಾಗಿ ಆಯಾ ದೇವತೆಗಳನ್ನುದ್ದೇಶಿಸಿದೆಯೆಂದು ಊಹಿಸಿ ಕೊಳ್ಳಬೇಕಾಗುತ್ತದೆ.

**ಅಪೋಷಾ ಅನಸಃ ಸರತ್ಸಂಪಿಷ್ಟಾದಹ ಬಿಭ್ಯುಷೀ । ನಿ ಯತ್ಸೀಂ ಶಿಶ್ನಥದ್ವೃಷಾ ।**
(ಋ. ಸಂ. ೪-೩೦-೧೦)

ಎಂಬಲ್ಲಿ ಇಂದ್ರನ ಪರ್ಯಾಯವಾಗಿದೆಯೆಂದು ಊಹಿಸಬಹುದು. ಆದರೆ ಅನೇಕಕಡೆಗಳಲ್ಲಿ ಯಾವ ದೇವತೆಯನ್ನುದ್ದೇಶಿಸಿದೆಯೆಂಬ ಸಂಶಯಕ್ಕೂ ಕಾರಣವಾಗುತ್ತದೆ. ಒಂದೊಂದುಸಲ ಸಾಯಣಾಚಾರ್ಯರೂ ಸಹ ಈ ವಿಶೇಷಣಕ್ಕೆ ಅರ್ಥಮಾಡುವಾಗ ಅಷ್ಟುನಿಷ್ಕರ್ಷವಾಗಿರುವುದಕ್ಕಾಗಿಲ್ಲ.

**ವೃಷಾ ಛಂದುರ್ಭವತಿ ಹರ್ಯತೋ ವೃಷಾ ಕ್ಷೇಮೇಣ ಧೇನಾಂ ಮಘವಾ ಯದಿನ್ವತಿ ।**
( ಋ. ಸಂ. ೧-೫೫-೪ )

ಈ ಋಕ್ಕಿನಲ್ಲಿ **ವೃಷಾ** ಎಂಬ ಪದಕ್ಕೆ ಮೊದಲು **ವೃಷಾ—ಹವಿಷಾಂ ವರ್ಷಯಿತಾ ಯಜಮಾನಃ** ಎಂದೂ, ಅನಂತರ **ಯದ್ವಾ ವೃಷಾ—ಇಂದ್ರಃ** ಎಂದೂ ಹೇಳಿರುವಾಗ ಸಂಶಯಕ್ಕೆ ಅವಕಾಶವನ್ನು ಕೊಟ್ಟಿರುತ್ತಾರೆ. ಹೀಗೆ ನಾನಾ ಅರ್ಥಗಳಲ್ಲಿ ಉಪಯೋಗಿಸಿರುವುದರಿಂದ ಒಂದೊಂದು ಸನ್ನಿವೇಶದಲ್ಲೂ ಅದಕ್ಕನುಗುಣವಾದ ಭಾವವನ್ನು ತಿಳಿದು ಅರ್ಥಮಾಡಬೇಕಾಗುತ್ತದೆ. ಭಾವಗರ್ಭಿತವಾದ ಈ ಪದದ ವಿವರಣೆಯನ್ನು ಮಾಡುವಾಗ Max Muller (ಮಾಕ್ಸ್-ಮುಲ್ಲರ್) ಎಂಬ ಆಂಗ್ಲವ್ಯಾಖ್ಯಾಕಾರನು ಈ ಪದದಿಂದ ವ್ಯಕ್ತವಾಗುವ ಭಾವಗಳ ಗಭೀರತೆಯನ್ನು ಕೆಳಗೆ ಕಂಡಂತೆ ತಿಳಿಸಿದ್ದಾನೆ.

In Vrishan we have one of those words which it is almost impossible to translate accurately· It occurs over and over again in the Vedic hymns and if we once know the various ideas which it either expresses or implies, we have litte difficulty in understanding its import in a vague and general way, though we look in vain for corresponding terms in any modern language ... .... .... and we shall see how difficult it would be to translate such terms without losing either the key-note that was still sounding, or the harmonies which were set vibrating by it in the minds of the poets and their listeners.

( F. Max Muller, The Sacred Books of the East, Vol· XXXII P. 138—139 )

ವೀರ್ಯ, ಪರಾಕ್ರಮ ಎಂಬ ಅರ್ಥಗಳಲ್ಲೇ ಹೆಚ್ಚಾಗಿ ವೃಷನ್ ಶಬ್ದವನ್ನುಪಯೋಗಿಸಿರುವುದರಿಂದ ಪ್ರಕೃತವಾದ ಈ ಈ ಋಕ್ಕಿನಲ್ಲಿಯೂ **ವೃಷ್ಣ್ಯೇಭಿಃ** ಎಂದರೆ ಪರಾಕ್ರಮದಿಂದ ಕೂಡಿದ ಇಂದ್ರನೆಂದು ನಿರ್ದೇಶಿಸಿದೆ. ದೇವತೆಗಳಿಗಾಗಲಿ ಮಾನವರಿಗಾಗಲಿ ವೀರ್ಯದಲ್ಲಿ ಇಂದ್ರನಿಗೆ ಸಮನಾಗಿರಲು ಸಾಧ್ಯವೇ ಇಲ್ಲ ಎಂಬ ಅಂಶವನ್ನೂ ಇಂದ್ರನ ವೀರ್ಯಕರ್ಮಗಳನ್ನು ನೋಡಿ ಸಕಲರೂ ಆಶ್ಚರ್ಯಪಡುವರೆಂದೂ ಅನೇಕ ಕಡೆಗಳಲ್ಲಿ ವರ್ಣಿಸಿದೆ. ಉದಾಹರಣೆಗೆ—

**ಅಸ್ಯೇದು ಭಿಯಾ ಗಿರಯಶ್ಚ ದೃಳ್ಹಾ ದ್ಯಾವಾ ಚ ಭೂಮಾ ಜನುಷಸ್ತುಜೇತೇ ।**
( ಋ. ಸಂ. ೧-೬೧-೧೪ )

ಅನುತ್ತಮಾ ತೇ ಮಘವನ್ನಕಿರ್ನು ನ ತ್ವಾವಾँ ಅಸ್ತಿ ದೇವತಾ ವಿದಾನಃ ।
ನ ಜಾಯಮಾನೋ ನಶತೇ ನ ಜಾತೋ ಯಾನಿ ಕರಿಷ್ಯಾ ಕೃಣುಹಿ ಪ್ರವೃದ್ಧ ॥
(ಋ. ಸಂ ೧-೧೬೫-೯ )

ನ ದ್ಯಾವ ಇಂದ್ರಮೋಜಸಾ ನಾಂತರಿಕ್ಷಾಣಿ ವಜ್ರಿಣಂ ।
ನ ವಿವ್ಯಚಂತ ಭೂಮಯಃ ॥
( ಋ. ಸಂ. ೮-೬-೧೫ )

ನಹೀ ನ್ವಸ್ಯ ಪ್ರತಿಮಾನಮಸ್ತ್ಯಂತರ್ಜಾತೇಷೂತ ಯೇ ಜನಿತ್ವಾಃ ।
( ಋ. ಸಂ. ೪-೧೮-೪ )

ಇತ್ಯಾದಿ ಋಕ್ಕುಗಳಲ್ಲಿ ವರ್ಣಿತವಾಗಿರುವಂತೆ ಅಸಾಧಾರಣವಾದ ಶಕ್ತಿಗಳಿಂದ ಕೂಡಿದ **ಇಂದ್ರನು** ಸಮಸ್ತ ಲೋಕಕ್ಕೂ ಪ್ರಭುವಾಗಿದ್ದಾನೆಂದು ಸ್ತುತಿಸಿವೆ. **ಸಮ್ರಾಟ್, ಸ್ವರಾಟ್** ಎಂಬ ವಿಶೇಷಣಗಳು ಇಂದ್ರನಿಗಿರುವ ಅತ್ಯುತ್ತಮವಾದ ಪದವಿಯನ್ನು ತೋರಿಸುತ್ತವೆ.

ಅವಾಸೃಜಂತ ಜಿವ್ರಯೋ ನ ದೇವಾ ಭುವಃ ಸಮ್ರಾಳಿಂದ್ರ ಸತ್ಯಯೋನಿಃ ।
(ಋ. ಸಂ. ೪-೧೯-೨)

ಏವಾ ವಸ್ವ ಇಂದ್ರಃ ಸತ್ಯಃ ಸಮ್ರಾಡ್ಢಂತಾ ವೃತ್ರಂ ವರಿವಃ ಪೂರವೇಕಃ ।
(ಋ. ಸಂ. ೪-೨೧.೧೦)

ರಾಜಾಭವೋ ಜಗತಶ್ಚರ್ಷಣೀನಾಂ ಸಾಕಂ ಸೂರ್ಯಂ ಜನಯನ್ದ್ಯಾಮುಷಾಸಂ ।
(ಋ. ಸಂ. ೬-೩೦-೫)

ಇತ್ಯಾದಿ ನಾನಾ ಋಕ್ಕುಗಳಲ್ಲಿ ಸಂಬೋಧಿಸಿರುವಂತೆ ಇಲ್ಲಿಯೂ ಸಹ ಇಂದ್ರನನ್ನು ಸರ್ವಲೋಕಕ್ಕೂ ಪ್ರಭುವೆಂದು ಸಂಬೋಧಿಸಿ ವರ್ಣಿಸಿದೆ.

**ಸತೀನಸತ್ವಾ—ಅರ್ಣಃ, ಕ್ಷೋದಃ, ಕ್ಷದ್ಮ** ಇತ್ಯಾದಿ ೧೦೧ ಉದಕನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೨೬) **ಸತೀನಶಬ್ದಕ್ಕೆ ಉದಕವೆಂದರ್ಥ. ಸತೀನಸ್ಯ ಸತ್ವಾ-ಸಾದಯಿತಾ, ಗಮಯಿತಾ,** ಲೋಕಕ್ಕೆಲ್ಲಾ ನೀರನ್ನು ಹರಿಯುವಂತೆ ಮಾಡುವವನು. ವೃತ್ರನು ಆವರಿಸಿದ ಕಡೆಯನ್ನು ಬಿಡಿಸಿ ನೀರನ್ನು ಹರಿಯುವಂತೆ ಮಾಡಿದುದು, ಇಂದ್ರನ ಪರಾಕ್ರಮಗಳಲ್ಲಿ ಒಂದು. **ಇಂದ್ರಸ್ಯ ನು ವೀರ್ಯಾಣಿ ಪ್ರವೋಚಂ** ಎಂದು ಋ. ಸಂ. ಒಂದನೇ ಮಂಡಲದ ಮೂವತ್ತೆರಡನೆಯ ಸೂಕ್ತದಲ್ಲಿ ಇಂದ್ರನ ಪರಾಕ್ರಮಕಾರ್ಯಗಳನ್ನು ವರ್ಣಿಸಿರುವಂತೆ

ಪ್ರ ತ ಇಂದ್ರ ಪೂರ್ವ್ಯಾಣಿ ಪ್ರ ನೂನಂ ವೀರ್ಯಾ ವೋಚಂ ಪ್ರಥಮಾ ಕೃತಾನಿ ।
ಸತೀನಮನ್ಯುರಶ್ರಥಾಯೋ ಅದ್ರಿಂ ಸುವೇದನಾಮಕೃಣೋರ್ಬ್ರಹ್ಮಣೇ ಗಾಂ ।
(ಋ- ಸಂ. ೧೦-೧೧೨-೮)

ಎಂಬ ಋಕ್ಕಿನಲ್ಲೂ ಸಹ ಇಂದ್ರನ ವೀರ್ಯಕರ್ಮಗಳನ್ನು ಶ್ಲಾಘಿಸುತ್ತಾ **ಸತೀನಮನ್ಯುಃ** ಎಂಬ ವಿಶೇಷಣವನ್ನು ಸೇರಿಸಿ **ಸತೀನಸತ್ವಾ** ಎಂದು ಈ ಋಕ್ಕಿನಲ್ಲಿ ಉಪಯೋಗಿಸಿರುವಂತೆ ಉದಕವನ್ನು ಸುರಿಸತಕ್ಕ ಇಂದ್ರನ ಗುಣ

ವನ್ನು ಹೇಳಿದೆ. **ಸತೀನಸತ್ವಾ, ಸತೀನಮನ್ಯುಃ** ಎಂದರೆ **ಉದಕಾಭಿವರ್ಷಣಬುದ್ಧಿಯುಕ್ತಃ** ವೃಷ್ಟಿರೂಪದ ಉದಕವನ್ನು ಸುರಿಸುವ ಮನಸ್ಸುಳ್ಳವನು ಎಂದರ್ಥ.

**ಭರೇಷು ಹವ್ಯಃ**—**ಭರ ಇತಿ ಸಂಗ್ರಾಮನಾಮ । ಭರತೇರ್ವಾ, ಹರತೇರ್ವಾ ।** (ನಿ. ೪-೨೪) ವಹಿಸು ಎಂಬ ಅರ್ಥವನ್ನು ಕೊಡುವ ಭೃಧಾತುವಿನಿಂದಾಗಲೀ, ಅಪಹರಿಸು ಎಂಬ ಅರ್ಥವನ್ನು ಕೊಡುವ ಹೃ ಎಂಬ ಧಾತು ವಿನಿಂದಾಗಲೀ ನಿಷ್ಪನ್ನವಾಗಿದೆಯೆಂದು ನಿರುಕ್ತಕಾರರು ಭರ ಶಬ್ದದ ನಿರ್ವಚನವನ್ನು ತೋರಿಸಿದ್ದಾರೆ. **ಭರೇಷು-ಸಂಗ್ರಾಮೇಷು ; ಹವ್ಯಃ—ಸ್ತೋತೃಭಿರಾಹ್ವಾತವ್ಯಃ ಇಂದ್ರಃ** ಯುದ್ಧಕಾಲಗಳಲ್ಲಿ ಎಲ್ಲ ಭಕ್ತರಿಂದಲೂ ಸಹಾಯಕ್ಕಾಗಿ ಕರೆಯಲ್ಪಡುವವನು. ಇಂದ್ರನು ಯುದ್ಧದೇವತೆಯೆಂದು ಅವನ ಜನನ ಕಾಲದಲ್ಲಿಯೇ ಸೂಚಿತ ವಾಗಿದೆ.

**ಉಪಸ್ಥಾಯ ಮಾತರಮನ್ನಮೈಟ್ಟ ತಿಗ್ಮಮಪಶ್ಯದಭಿ ಸೋಮಮೂಧಃ ।**
**ಪ್ರಯಾವಯನ್ನಚರದ್ಗೃತ್ಸೋ ಅನ್ಯಾನ್ಮಹಾನಿ ಚಕ್ರೇ ಪುರುಧಪ್ರತೀಕಃ ।**
(ಋ. ಸಂ. ೩-೪೮-೩)

**ಜಜ್ಞಾನಃ ಸೋಮಂ ಸಹಸೇ ಪಪಾಥ ಪ್ರ ತೇ ಮಾತಾ ಮಹಿಮಾನಮುವಾಚ ।**
**ಏಂದ್ರ ಪಪ್ರಾಥೋರ್ವಂತರಿಕ್ಷಂ ಯುಧಾ ದೇವೇಭ್ಯೋ ವರಿವಶ್ಚಕರ್ಥ ।**
(ಋ. ಸಂ. ೭-೯೮-೩)

ಎಂಬುದಾಗಿ ಅನೇಕ ಕಡೆಗಳಲ್ಲಿ ಉತ್ಪನ್ನನಾದೊಡನೆಯೇ ಇಂದ್ರನು ತನ್ನ ಬಲಾಭಿವೃದ್ಧಿಗೂ, ಯುದ್ಧದ ಸನ್ನಾಹ ಕ್ಕಾಗಿಯೂ ಸಹಕಾರಿಯಾದ ಸೋಮರಸವನ್ನು ಪಾನಮಾಡಿದನು. ಮತ್ತು ಯುದ್ಧದಲ್ಲಿ ಜಯಿಸಿ ದೇವತೆಗಳ ಸಂಚಾರಕ್ಕೆ ಅನುಕೂಲಮಾಡಿಕೊಟ್ಟನು ಎಂದು ಸ್ತುತಿಸಿದೆ. ಆದುದರಿಂದಲೇ ಇವನ ಭಕ್ತರೂ ಕೂಡ ಯುದ್ಧ ಕಾಲಗಳಲ್ಲೆಲ್ಲಾ ಸಹಾಯಕ್ಕಾಗಿ ಇಂದ್ರನಿಗೇ ಮೊರೆಯಿಡುತ್ತಾರೆ.

**ಯಂ ಕ್ರಂದಸೀ ಸಂಯತೀ ವಿಹ್ವಯೇತೇ ಪರೇವರ ಉಭಯಾ ಅಮಿತ್ರಾಃ ।**
(ಋ. ಸಂ. ೨-೧೨-೮)

**ತ್ವಾಂ ವೃತ್ರೇಷ್ವಿಂದ್ರ ಸತ್ಪತಿಂ ತರುತ್ರಂ ತ್ವಾಂ ಚಷ್ಟೇ ಮುಷ್ಟಿಹಾ ಗೋಷು ಯುಧ್ಯನ್ ।**
(ಋ. ಸಂ. ೬-೨೬-೨)

ಇತ್ಯಾದಿಯಾಗಿ ಯುದ್ಧಕಾಲದಲ್ಲಿ ಕರೆದಿರುವುದರಿಂದ **ಭರೇಷು ಹವ್ಯಃ** ಎಂಬ ವಿಶೇಷಣವಿದೆ.

**ಮರುತ್ವಾನ್**—ಇಂದ್ರನಿಗೂ ಮರುತ್ತುಗಳಿಗೂ ಇರುವ ಶಾಶ್ವತವಾದ ಸಾಹಚರ್ಯವು ಪ್ರಸಿದ್ಧ ವಾದುದು. ಇಂದ್ರನಿಗೂ ಮರುತ್ತುಗಳಿಗೂ ಇರುವ ರಾಜಪ್ರಜಾಸಂಬಂಧವೂ, ಮರುತ್ತುಗಳೊಡಗೂಡಿದ ಇಂದ್ರನಿಗೆ ಮುಖ್ಯವಾದ ಯಜ್ಞಕ್ರಿಯೆಗಳಲ್ಲಿ ಹವಿಸ್ಸಿನ ಅರ್ಪಣೆಯೂ, ಮತ್ತು ವೃತ್ರಾಸುರನೊಡನೆ ಯುದ್ಧವನ್ನು ನಡೆಸುವಾಗ ಇಂದ್ರನಿಗೆ ಮರುತ್ತುಗಳು ಸಹಾಯಕರಾಗುವುದೂ ಸಂಹಿತೆಗಳಲ್ಲಿಯೂ ಬ್ರಾಹ್ಮಣಗಳಲ್ಲಿಯೂ ಅನೇಕಕಡೆ ಸ್ತುತಿಸ ಲ್ಪಟ್ಟಿದೆ. ಇಂದ್ರನು ಮರುತ್ತುಗಳೊಡನೆ ಸೇರಿಕೊಂಡು ಉಳಿದ ದೇವತೆಗಳಿಂದ ಪ್ರತ್ಯೇಕವಾಗಿದ್ದುದನ್ನು ಹೇಳುವ ಪೂರ್ವಕಥೆಯೊಂದನ್ನು ಶತಪಥ ಬ್ರಾಹ್ಮಣದಲ್ಲಿ ನೋಡಬಹುದು.

**ಆತಿಥ್ಯೇನ ವೈ ದೇವಾ ಇಷ್ಟ್ವಾ । ತಾನ್ತ್ಸಮುದವಿಂದತ್ತೇ ಚತುರ್ಧಾ ವ್ಯದ್ರವನ್ನನ್ಯೋಽನ್ಯಸ್ಯ ಶ್ರಿಯಾ ಅತಿಷ್ಠಮಾನಾ ಅಗ್ನಿರ್ವಸುಭಿಃ, ಸೋಮೋ ರುದ್ರೈರ್ವರುಣ ಆದಿತ್ಯೈರಿಂದ್ರೋ ಮರುದ್ಭಿರ್ಬೃಹಸ್ಪತಿರ್ವಿಶ್ವೇದೇವೈಃ ।**

(ಶ. ಬ್ರಾ. ೩-೪-೨-೧).

ಹಿಂದೆ ದೇವತೆಗಳು ಆತಿಥ್ಯಕ್ರಿಯೆಯನ್ನು ನೆರವೇರಿಸಿದಾಗ ಅವರವರಲ್ಲೇ ವೈಮನಸ್ಯವುಂಟಾಗಿ ಒಬ್ಬರಿಗೊಬ್ಬರು ಸೋಲಲಿಷ್ಟಪಡದೇ ನಾಲ್ಕು ಗುಂಪುಮಾಡಿಕೊಂಡು ಬೇರೆ ಬೇರೆಯಾದರು. ಅಗ್ನಿಯು ವಸುಗಳೊಂದಿಗೂ, ಸೋಮನು ರುದ್ರರೊಂದಿಗೂ, ವರುಣನು ಆದಿತ್ಯರೊಂದಿಗೂ, ಇಂದ್ರನು ಮರುತ್ತುಗಳೊಂದಿಗೂ ಮತ್ತು ಬೃಹಸ್ಪತಿಯು ವಿಶ್ವೇದೇವತೆಗಳೊಂದಿಗೂ ಕೂಡಿಕೊಂಡು ಪ್ರತ್ಯೇಕವಾಗಿ ಗುಂಪುಮಾಡಿಕೊಂಡರು, ಎಂಬ ಈ ಕಥೆಯಲ್ಲಿ ಇಂದ್ರನು ಮರುತ್ತುಗಳೊಡನೆ ಸಾಹಚರ್ಯವನ್ನು ಬೆಳೆಸಿ ಅವರೊಡನೆ ಇಟ್ಟುಕೊಂಡಿರುವ ನಿಕಟವಾದ ಸಂಬಂಧವನ್ನು ಹೇಳಿರುವುದು. ಇದೂ ಅಲ್ಲದೇ, ಇಂದ್ರನೇ ದೊರೆಯೆಂದೂ ಮರುತ್ತಗಳೇ ಪ್ರಜೆಗಳೆಂದೂ ಅನೇಕಕಡೆ ಹೇಳಿದೆ. ಉದಾಹರಣೆಗೆ—

**ಕ್ಷತ್ರಂ ವಾ ಇಂದ್ರೋ ವಿಶೋ ಮರುತೋ ವಿಶಾ ವೈ ಕ್ಷತ್ರಿಯೋ ಬಲವಾನ್ ಭವತಿ ।**

(ಶ. ಬ್ರಾ. ೪-೩-೩-೬).

ಇಂದ್ರನು ಕ್ಷಾತ್ರತೇಜಸ್ಸುಳ್ಳ ರಾಜನು, ಮರುತ್ತುಗಳೇ ಪ್ರಜೆಗಳು. ಪ್ರಜೆಗಳ ಸಹಕಾರದಿಂದಲೇ ರಾಜನು ಶಕ್ತಿಯುಳ್ಳವನಾಗಿ ಆಗುತ್ತಾನೆಂದು ಮರುತ್ತುಗಳ ಸಹಾಯದಿಂದ ಇಂದ್ರನ ಪರಾಕ್ರಮವು ವೃದ್ಧಿಯಾಯಿತೆಂದೂ ಸೂಚಿಸಿದೆ. ಈ ರೀತಿಯಾದ ನಿಕಟವಾದ ಸಂಬಂಧವೂ, ಸಾಹಚರ್ಯವೂ ಇರುವುದರಿಂದಲೇ ಇಂದ್ರನನ್ನೂ ಮರುತ್ತುಗಳನ್ನೂ ಒಟ್ಟಿಗೆ ಉದ್ದೇಶಿಸಿ ಹವಿಸ್ಸುಗಳನ್ನು ಅರ್ಪಿಸುವ ಕ್ರಮವೂ ಶ್ರುತಿಗಳಲ್ಲಿ ಕಂಡುಬರುತ್ತದೆ.

**ಅನವದ್ಯೈರಭಿದ್ಯುಭಿರ್ಮಖಃ ಸಹಸ್ವದರ್ಚತಿ ।**
**ಗಣೈರಿಂದ್ರಸ್ಯ ಕಾಮ್ಯೈಃ ॥**

(ಋ. ಸಂ. ೧-೬-೮).

**ಮಂದ್ರಾಃ ಸುಜಿಹ್ವಾಃ ಸ್ವರಿತಾರ ಆಸಭಿಃ ಸಂಮಿಶ್ಲಾ ಇಂದ್ರೇ ಮರುತಃ ಪರಿಷ್ಟುಭಃ ।**

(ಋ. ಸಂ. ೧-೧೬೬-೧೧).

**ಸ ನೋ ಮರುದ್ಭಿರ್ವೃಷಭ ಶ್ರವೋ ಧಾ ಉಗ್ರ ಉಗ್ರೇಭಿಃ ಸ್ಥವಿರಃ ಸಹೋದಾಃ ।**

(ಋ. ಸಂ, ೧-೧೭೧-೫).

ಎಂಬವೇ ಮುಂತಾದ ಋಕ್ಕುಗಳಿಂದ ಇಂದ್ರನಿಗೂ ಮರುತ್ತುಗಳಿಗೂ ಒಟ್ಟಿಗೆ ಸೇರಿಸಿ ಆಹ್ವಾನವೂ ಹವಿಸ್ಸಿನ ಅರ್ಪಣೆಯೂ ಇದೆ. ಈ ರೀತಿಯ ಸಾಹಚರ್ಯವಿರುವುದರಿಂದಲೇ ಇಲ್ಲಿಯೂ ಸಹ **ಮರುತ್ವಾನ್** ಎಂಬ ವಿಶೇಷಣವಿದೆ. ಮರುತ್ತುಗಳೊಡಗೂಡಿರುವ ಇಂದ್ರನನ್ನು ಉದ್ದೇಶಿಸಿರುವ ಸಮಯಗಳಲ್ಲೆಲ್ಲಾ **ಮರುತ್ವಾನ್** ಎಂದು ಕರೆದಿದೆ ಯೆಂದು ಬೃಹದ್ದೇವತೆಯಲ್ಲಿ ಈ ದೇವತೆಗಳ ಸಂಬಂಧಸೂಚಕವಾದ ವಿಶೇಷಣವನ್ನು ವಿವರಿಸಿದೆ.

**ಮರುದ್ಭಿಃ ಸಹ ಯತ್ರೇಂದ್ರೋ ಮರುತ್ವಾಂಸ್ತತ್ರ ಸೋಽಭವತ್ ।**

(ಬೃ. ದೇ. ೪-೫೬)

**ಊತಯೇ—ಊತಿರವನಾತ್** (ನಿ. ೫-೩) ರಕ್ಷಣಾರ್ಥವಾಗಿ ಎಂದು ನಿರುಕ್ತಕಾರರ ವಚನವು.

**ಆ ತ್ವಾ ರಥಂ ಯಥೋತಯೇ ಸುಮ್ನಾಯ ವರ್ತಯಾಮಸಿ ।**

(ಋ. ಸಂ. ೮-೬೮-೧).

ಎಂಬ ಋಕ್ಕನ್ನು ಉದಹರಿಸಿ ಈ ಪದದ ಪ್ರಯೋಜನವನ್ನೂ ಅರ್ಥವನ್ನೂ ವಿವರಿಸಿದ್ದಾರೆ

ವ್ಯಾಕರಣಪ್ರಕ್ರಿಯಾ

**ವೃಷ್ಣ್ಯೇಭಿಃ**—ವೃಷನ್‌ಶಬ್ದ. ಇದಕ್ಕೆ **ಭವೇಛಂದಸಿ**—(ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. **ಯಚಿ ಭಮ್**—ಎಂಬುದರಿಂದ ಭಸಂಜ್ಞಾ ಇರುವುದರಿಂದ **ಅಲ್ಲೋಪೋಽನಃ**—(ಪಾ. ಸೂ. ೬-೪-೧೩೪) ಎಂಬುದರಿಂದ ಅನಿನ ಅಕಾರಕ್ಕೆ ಲೋಪ. ಯದ್ಯಪಿ ಇಲ್ಲಿ **ಯೇಚಾಭಾವಕರ್ಮಣೋಃ**—(ಪಾ. ಸೂ. ೬-೪-೧೬೪) ಎಂಬುದರಿಂದ ಅನಿಗೆ ಪ್ರಕೃತಿಭಾವವು ಪ್ರಾಪ್ತವಾಗುತ್ತದೆ. ಆದರೆ ವ್ಯತ್ಯಯದಿಂದ ಇಲ್ಲಿ ಬರುವುದಿಲ್ಲವೆಂದು ಸ್ವೀಕರಿಸಬೇಕು. ವೃಷ್ಣ್ಯ ಎಂದು ರೂಪವಾಗುತ್ತದೆ. ಇದಕ್ಕೆ ತೃತೀಯಾಬಹುವಚನ ಭಿಸ್ ಪರವಾದಾಗ **ಬಹುಲಂ ಛಂದಸಿ**—(ಪಾ. ಸೂ. ೭-೧-೧೦) ಎಂಬುದರಿಂದ ಭಿಸಿಗೆ ಐಸ್‌ಭಾವ ಬರುವುದಿಲ್ಲ. **ಬಹುವಚನೇ ಝಲ್ಯೇತ್**—ಎಂಬುದರಿಂದ ಏತ್ವ. **ಯತೋಽನಾವಃ**—(ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ಮಹಃ**—ಮಹ ಪೂಜಾಯಾಮ್. ಧಾತು. **ಕ್ವಿಪ್ ಚ**—ಎಂಬುದರಿಂದ ಕ್ವಿಪ್ ಪ್ರತ್ಯಯ. ಮಹ್. ಎಂದು ರೂಪವಾಗುತ್ತದೆ. ಬಹುವಚನಾಂತರೂಪ, ಅಥವಾ ಮಹತ್‌ಶಬ್ದದಲ್ಲಿ ಅತ್ ಎಂಬುದಕ್ಕೆ ಛಾಂದಸವಾಗಿ ಲೋಪ. ಏಕಾಚಾಗಿ ಅದರಪರದಲ್ಲಿ ವಿಭಕ್ತಿ ಬಂದುದರಿಂದ **ಸಾವೇಕಾಚಸ್ತೃತೀಯಾದಿಃ**—(ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ದಿವಃ**—**ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪೃಥಿವ್ಯಾಃ—ಉದಾತ್ತಯಣೋ ಹಲ್‌ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸಮ್ರಾಟ್**—ರಾಜೃ ದೀಪ್ತೌ ಧಾತು. **ಕ್ವಿಪ್ ಚ**—ಎಂಬುದರಿಂದ ಇದಕ್ಕೆ ಕ್ವಿಪ್ ಪ್ರತ್ಯಯ. ಅದಕ್ಕೆ ಸರ್ವಲೋಪ. ಕ್ವಿಬಂತವಾದ ರಾಜೃಧಾತುವು ಪರದಲ್ಲಿರುವುದರಿಂದ ಸಮಿನ ಮಕಾರಕ್ಕೆ ಅನುಸ್ವಾರಕ್ಕೆ ಅಪವಾದವಾಗಿ **ಮೋರಾಜಿ ಸಮಃ ಕ್ವೌ**—(ಪಾ. ಸೂ. ೮-೩-೨೫) ಎಂಬುದರಿಂದ ಮಕಾರವೇ ಆದೇಶವಾಗಿ ಬರುತ್ತದೆ **ಗತಿಕಾರಕೋಪಪದಾತ್‌ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಸು ಪರವಾದಾಗ **ವ್ರಶ್ಚಭ್ರಸ್ಜ**—ಸೂತ್ರದಿಂದ ಜಕಾರಕ್ಕೆ ಷತ್ವ. ಪದಾಂತದಲ್ಲಿ ಜಸ್ತ್ವದಿಂದ ಡಕಾರಾದೇಶ. ಅವಸಾನನಿಬಂಧನವಾಗಿ ವಿಕಲ್ಪವಾಗಿ **ಚರ್ತ್ವ.**

**ಸತೀನಸತ್ವಾ**—ಷದ್ಲೃ ವಿಶರಣಗತ್ಯವಸಾದನೇಷು. ಧಾತು. ಮೇಘೇಷು ನಿಷೀದತಿ ಇತಿ ಸತೀನಂ ವೃಷ್ಟ್ಯುದಕಮ್ (ಮಳೆ ನೀರು) ಇದಕ್ಕೆ ಔಣಾದಿಕವಾದ ಈನ ಪ್ರತ್ಯಯ. ದಕಾರಕ್ಕೆ ತಕಾರಾದೇಶ. ಅಥವಾ

ಸತೀ ಮಾಧ್ಯಮಿಕಾ ವಾಕ್. (ಶಬ್ದದ ಅವಸ್ಥಾಭೇದ) ಸತೀ ಇನಾ ಈಶ್ವರಾ ಯಸ್ಯ ತತ್ ಸತೀನಮ್. **ವ್ಯತ್ಯಯೋ ಬಹುಲಮ್**—ಎಂಬುದರಿಂದ ಪುಂವದ್ಭಾವ. ತತ್ ಸತ್ವಾ ಸತೀನಸತ್ವಾ. ಪುನಃ ಅದೇ ಧಾತುವಿಗೆ ಅಂತರ್ಭಾವಿತಣ್ಯರ್ಥ ವಿವಕ್ಷಾಮಾಡಿದಾಗ **ಪ್ರೆ ಈರಸದ್ಭ್ಯೋಸ್ತುಟ್ ಚ** (ಉ. ಸೂ. ೪-೫೫೬) ಎಂಬುದರಿಂದ ಔಣಾದಿಕವಾದ ವನಿಪ್ ಪ್ರತ್ಯಯ. ತತ್ಸನ್ನಿಯೋಗದಿಂದ ತುಟಾಗಮ. ಸತೀನಸತ್ವನ್ ಶಬ್ದವಾಗುತ್ತದೆ. ಮರುದ್ವೃಧಾದಿಯಲ್ಲಿ ಸೇರಿರುವುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ. ಪ್ರಥಮಾ ಸು ಪರವಾದಾಗ ಉಪಧಾದೀರ್ಘ. ನಲೋಪ.

**ಮರುತ್ವಾನ್**—ಮರುತಃ ಅಸ್ಯ ಸಂತಿ ಇತಿ ಮರುತ್ವಾನ್. **ತದಸ್ಯಾಸ್ತ್ಯ**—ಎಂಬುದರಿಂದ ಮತುಪ್ ಪ್ರತ್ಯಯ. ಝಯಿನ ಪರದಲ್ಲಿ ಬಂದುದರಿಂದ **ಝಯಃ**—(ಪಾ. ಸೂ. ೮-೨-೧೦) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ಪ್ರಥಮಾ ಸು ಪರವಾದಾಗ **ಅತ್ವಸಂತಸ್ಯ**—ಸೂತ್ರದಿಂದ ಉಪಧಾದೀರ್ಘ. ಉಗಿತ್ತಾದುದರಿಂದ ನುಮಾಗಮ. ಸಂಯೋಗಾಂತಲೋಪವು ಅಸಿದ್ಧವಾದುದರಿಂದ ನಲೋಪ ಬರುವುದಿಲ್ಲ.

**ಊತೀ**—**ಊತಿಯೂತಿ ಜೂತಿ**—(ಪಾ. ಸೂ. ೩-೩-೯೭) ಎಂಬುದರಿಂದ ಉದಾತ್ತಸ್ವರ ವಿಶಿಷ್ಟ ಕ್ತಿನ್ನಂತವಾಗಿ ನಿಪಾತಿತವಾಗಿದೆ. ಚತುರ್ಥೀವಿಭಕ್ತಿ ಪರವಾದಾಗ ಅದಕ್ಕೆ **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ ಏಕಾದೇಶವಾಗಿ ಬರುತ್ತದೆ. ॥ ೧ ॥

———— ːoː ————

ಸಂಹಿತಾಪಾಠಃ

ಯಸ್ಯಾನಾಪ್ತಃ ಸೂರ್ಯಸ್ಯೇವ ಯಾಮೋ ಭರೇಭರೇ ವೃತ್ರ-
ಹಾ ಶುಷ್ಮೋ ಅಸ್ತಿ ।
ವೃಷಂತಮಃ ಸಖಿಭಿಃ ಸ್ವೇಭಿರೇವೈರ್ಮರುತ್ವಾನ್ನೋ ಭವತ್ವಿಂದ್ರ
ಊತೀ ॥ ೨ ॥

ಪದಪಾಠಃ

ಯಸ್ಯ । ಅನಾಪ್ತಃ । ಸೂರ್ಯಸ್ಯಽಇವ । ಯಾಮಃ । ಭರೇಽಭರೇ । ವೃತ್ರಽ-
ಹಾ । ಶುಷ್ಮಃ । ಅಸ್ತಿ ।

ವೃಷನ್ಽತಮಃ । ಸಖಿಽಭಿಃ । ಸ್ವೇಭಿಃ । ಏವೈಃ । ಮರುತ್ವಾನ್ । ನಃ । ಭವತು ।
ಇಂದ್ರಃ । ಊತೀ ॥ ೨ ॥

॥ ಸಾಯಣಭಾಷ್ಯಂ ॥

ಯಸ್ಯೇಂದ್ರಸ್ಯ ಯಾಮೋ ಗತಿರನಾಪ್ತಃ ಪರೈರಪ್ರಾಪ್ತಾ ಸೂರ್ಯಸ್ಯೇವ । ಯಥಾ ಸೂರ್ಯಸ್ಯ ಗತಿರನ್ಯೈರ್ನ ಪ್ರಾಪ್ತುಂ ಶಕ್ಯತೇ ತದ್ವತ್ । ಸ್ವೇಭಿರಾತ್ಮೀಯೈರೇವೈರ್ಗಮನಶೀಲೈಃ ಸಖಿಭಿರ್ಮಿತ್ರಭೂತೈರ್ಮರುದ್ಭಿಃ ಸಹ ವೃಷಂತಮೋಽತಿಶಯೇನ ಕಾಮಾನಾಂ ವರ್ಷಿತಾ । ಭರೇ ಭರೇ ಸರ್ವೇಷು ಸಂಗ್ರಾಮೇಷು ವೃತ್ರಹಾ ಶತ್ರೂಣಾಂ ಹಂತಾ ಶುಷ್ಮಃ ಸರ್ವೇಷಾಮಸುರಾಣಾಂ ಶೋಷಕಃ ಏವಂಭೂತೋ ಯ ಇಂದ್ರೋಽಸ್ತಿ ವಿದ್ಯತೇ ಸ ಮರುತ್ವಾನಿಂದ್ರೋ ನೋಽಸ್ಮಾಕಂ ರಕ್ಷಣಾಯ ಭವತು ॥ ಯಾಮಃ । ಯಾ ಪ್ರಾಪಣೇ । ಅರ್ತಿಸ್ತುಸ್ಸಿತ್ಯಾದಿನಾ ಭಾವೇ ಮನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ಶುಷ್ಮಃ । ಶುಷ ಶೋಷಣೇ ಅವಿಸಿವಿಸಿಶುಷಿಭ್ಯಃ ಕಿತ್ । ಉ. ೧-೧೪೩- । ಇತಿ ಮನ್‌ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ಅಸ್ತಿ । ಯದ್ವೃತ್ತಯೋಗಾದನಿಘಾತಃ । ವೃಷಂತಮಃ । ವೃಷಣ್ವತಜ್ವಾದುತ್ತರಸ್ಯ ತಮಪೋ ನಾದ್ಯಸ್ಯ । ಪಾ. ೮-೨-೧೭ । ಇತಿ ನುಟ್ । ಏವೈಃ । ಇಣ್ ಗತೌ । ಇಣ್‌ಶೀಙ್‌ಭ್ಯಾಂ ವನ್ ॥

ಪ್ರತಿಪದಾರ್ಥ

**ಯಸ್ಯ**—ಯಾವ ಇಂದ್ರನ । **ಯಾಮಃ**—ಸಂಚಾರದ ವೇಗವು (ತ್ವರಿತಗತಿಯು) । **ಸೂರ್ಯಸ್ಯ ಇವ**—ಸೂರ್ಯನ ಸಂಚಾರದ ವೇಗದಂತೆ । **ಅನಾಪ್ತಃ**—ಮೀರಿಸಲಶಕ್ಯವೋ, (ಮತ್ತು ಯಾವ ಇಂದ್ರನು) । **ಸ್ವೇಭಿಃ**—ತನ್ನವರೂ । **ಏವೈಃ**—ಗಮನಶೀಲರೂ । **ಸಖಿಭಿಃ**—ಮಿತ್ರಭೂತರೂ ಆದ ಮರುತ್ತುಗಳೊಡನೆ । **ವೃಷಂತಮಃ**—ಅತಿಶಯವಾಗಿ ಇಷ್ಟಾರ್ಥಗಳನ್ನು ಸುರಿಸುವವನೂ । **ಭರೇ ಭರೇ**—ಸಕಲ ಸಂಗ್ರಾಮಗಳಲ್ಲಿಯೂ । **ವೃತ್ರಹಾ**—ಶತ್ರುನಾಶಕನೂ । **ಶುಷ್ಮಃ**—(ರಾಕ್ಷಸರನ್ನು) ಕ್ಷೀಣಿಸುವಂತೆ ಮಾಡುವ ಶಕ್ತಿಯುಳ್ಳವನೂ ಆಗಿ । **ಅಸ್ತಿ**—ಇದ್ದಾನೆಯೋ । **ಮರುತ್ವಾನ್**—ಮರುತ್ತುಗಳೊಡನೆ ಕೂಡಿರುವ । **ಇಂದ್ರಃ**—ಆ ಇಂದ್ರನು । **ನಃ**—ನಮ್ಮ । **ಊತೀ**—ರಕ್ಷಣಾರ್ಥವಾಗಿ । **ಭವತು**—ಇರಲಿ.

ಭಾವಾರ್ಥ

ಯಾವ ಇಂದ್ರನ ಸಂಚಾರದ ವೇಗವು ಸೂರ್ಯನ ವೇಗದಂತೆ ಯಾರಿಂದಲೂ ಮೀರಿಸಲಸಾಧ್ಯವಾಗಿರುವದೋ. ಮತ್ತು ಯಾವ ಇಂದ್ರನು ಗಮನಶೀಲರೂ. ತನ್ನ ಮಿತ್ರಭೂತರೂ ಆದ ಮರುತ್ತುಗಳೊಡನೆ ಅತಿಶಯವಾದ

ಇಷ್ಟಾರ್ಥಗಳನ್ನು ಸುರಿಸುವವನೂ, ಸಕಲಸಂಗ್ರಾಮಗಳಲ್ಲಿಯೂ ಶತ್ರುನಾಶಕನೂ, ರಾಕ್ಷಸರನ್ನು ಕ್ಷೀಣವಾಗುವಂತೆ ಮಾಡುವವನೂ ಆಗಿ ಇದ್ದಾನೆಯೋ ಆ ಇಂದ್ರನು ಮರುತ್ತುಗಳೊಡನೆ ಕೂಡಿಕೊಂಡು ನಮ್ಮ ರಕ್ಷಣಾರ್ಥವಾಗಿರಲಿ-

## English Translation

May he whose course, like that of the sun, is not to be overtaken, who in every battle is the slayer of his foes, the witherer ( of opponents ), who with his swift-moving friends (the winds) is the most bountiful (of givers) ; may Indra, associated with the Maruts, be our protection.

॥ ವಿಶೇಷವಿಷಯಗಳು ॥

**ಯಸ್ಯ ಯಾಮಃ ಸೂರ್ಯಸ್ಯ ಇವ ಅನಾಪ್ತಃ**—ಇಂದ್ರನ ಸಂಚಾರದ ವೇಗವು ಸೂರ್ಯನ ಸಂಚಾರ ವೇಗದಂತೆ ಅತ್ಯತಿಶಯವಾದುದು ಮತ್ತು ಯಾರಿಂದಲೂ ಮೀರಿಸಲಸಾಧ್ಯವಾದುದು. ಇಂದ್ರನ ರಥವೂ, ಅಶ್ವಗಳೂ ಅತ್ಯಂತ ಉತ್ಕೃಷ್ಟವಾದುದರಿಂದ ಅವಕ್ಕೂ ಮತ್ತು ಇಂದ್ರನ ವೈಯಕ್ತಿಕವಾದ ಶಕ್ತಿಗೂ ಅನುಗುಣವಾಗಿ ಅವನ ಸಂಚಾರದ ವೇಗವೂ ಇರುತ್ತದೆ.

**ನ ಕ್ಷೋಣೀಭ್ಯಾಂ ಪರಿಭ್ವೇ ತ ಇಂದ್ರಿಯಂ ನ ಸಮುದ್ರೈಃ ಪರ್ವತೈರಿಂದ್ರ ತೇ ರಥಃ ।**
(ಋ. ಸಂ. ೨-೧೬-೩).

**ಆ ತ್ವಾ ಸಹಸ್ರಮಾ ಶತಂ ಯುಕ್ತಾ ರಥೇ ಹಿರಣ್ಯಯೇ ।**
(ಋ. ಸಂ ೮-೧-೨೪).

**ಯಸ್ತೇ ರಥೋ ಮನಸೋ ಜವೀಯಾನೇಂದ್ರ ತೇನ ಸೋಮಪೇಯಾಯ ಯಾಹಿ ।**
(ಋ. ಸಂ. ೧೦-೧೧೨-೨).

ಎಂಬುದಾಗಿ ಅನೇಕ ಕಡೆಗಳಲ್ಲಿ ಇಂದ್ರನ ರಥವೂ ಮನೋವೇಗಕ್ಕಿಂತಲೂ ಅಧಿಕವಾದ ಆ ರಥದ ವೇಗವೂ ವರ್ಣಿತ ವಾಗಿರುವುದರಿಂದ ಅಂತಹ ವಾಹನದಲ್ಲಿ ಸಂಚರಿಸತಕ್ಕವನೂ ಪೃಥಿವ್ಯಂತರಿಕ್ಷಗಳಿಗೆಲ್ಲಾ ಪ್ರಭುವಾಗಿರತಕ್ಕವನೂ ಆದ ಇಂದ್ರನ ಗತಿಯ ವೇಗವು ಅತ್ಯಧಿಕವಾಗಿರುವುದೆಂದು ಹೇಳಿದೆ. ಕೆಲವು ಸಮಯಗಳಲ್ಲಿ ಸೂರ್ಯನ ರಥದ ಅಶ್ವಗಳೇ ಇಂದ್ರನ ರಥವನ್ನೂ ವಹಿಸಿ ಅದರ ವೇಗವನ್ನು ಅಧಿಕವಾದುದನ್ನಾಗಿ ಮಾಡುತ್ತವೆಯೆಂದೂ ವರ್ಣಿಸಿವೆ.

**ಅಹಂ ಸೂರ್ಯಸ್ಯ ಪರಿ ಯಾಮ್ಯಾಶುಭಿಃ ಪ್ರೈತಶೇಭಿರ್ವಹಮಾನ ಓಜಸಾ ।**
(ಋ. ಸಂ. ೧೦-೪೯-೭).

ಎಂಬುದಾಗಿ ತಾನು ಸೂರ್ಯನ ವೇಗಗಾಮಿಗಳಾದ ಅಶ್ವಗಳ ಸಹಾಯದಿಂದ ಸಂಚರಿಸುವುದಾಗಿ ಇಂದ್ರನೇ ಹೇಳಿ ಕೊಳ್ಳುತ್ತಾನೆ. ಇನ್ನು ಕೆಲವು ಕಡೆಗಳಲ್ಲಿ ವಾಯುವಿನ ವೇಗಕ್ಕಿಂತಲೂ ಮೀರಿದ ವೇಗವುಳ್ಳ ಅಶ್ವಗಳು ಇಂದ್ರನ ರಥವನ್ನು ವಹಿಸುವುದೆಂದು ಹೇಳಿದೆ.

**ಯುಜಾನೋ ಅಶ್ವಾ ವಾತಸ್ಯ ಧುನೀ ದೇವೋ ದೇವಸ್ಯ ವಜ್ರಿವಃ ।**
(ಋ. ಸಂ. ೧೦-೨೨-೪).

**ತ್ವಂ ತ್ಯಾ ಚಿದ್ವಾತಸ್ಯಾಶ್ವಾಗಾ ಋಜ್ರಾ ತ್ಮನಾ ವಹಧ್ಯೈ ।**

(ಋ. ಸಂ. ೧೦-೨೨-೫).

ಇದೇ ಮುಂತಾದ ಋಕ್ಕುಗಳಲ್ಲಿರುವ ವರ್ಣನೆಗಳಿಂದ ಇಂದ್ರನ ಸಂಚಾರದ ವೇಗವು ಅಸಾಧಾರಣವಾದ ಶಕ್ತಿಯುಳ್ಳದ್ದೆಂದು ತಿಳಿಯಬರುತ್ತದೆ.

**ಏವೈಃ ಸಖಿಭಿಃ—ಗಮನಶೀಲೈರ್ಮಿತ್ರಭೂತೈರ್ಮರುದ್ಭಿಃ ಸಹ ।** ಯಾವಾಗಲೂ ಸಂಚಾರ ಸ್ವಭಾವವುಳ್ಳವರೂ ಇಂದ್ರನಿಗೆ ಮಿತ್ರಭೂತರೂ ಆದ ಮರುತ್ತುಗಳೊಂದಿಗೆ; ಇಂದ್ರನಿಗೂ ಮರುತ್ತುಗಳಿಗೂ ಇವರ ಮೈತ್ರಿಯನ್ನೂ ಸಾಹಚರ್ಯವನ್ನೂ ಹಿಂದಿನ ಋಕ್ಕಿನ ವಿವರಣೆಯಲ್ಲಿ ಹೇಳಿದೆ. ಈ ಮರುತ್ತುಗಳ ಸಹಜವಾದ ಸ್ವರೂಪವು ಇಲ್ಲಿ **ಏವೈಃ, ಏವಾಸಃ,** ಎಂಬ ವಿಶೇಷಣಗಳಿಂದ ತಿಳಿಯುತ್ತದೆ. ಉದಾಹರಣೆಗೆ—

**ಅ ಯೇ ರಜಾಂಸಿ ತವಿಷೀಭಿರವ್ಯತ ಪ್ರ ವ ಏವಾಸಃ ಸ್ವಯತಾಸೋ ಅಧ್ರಜನ್ ।**

(ಋ. ಸಂ. ೧-೧೬೬-೪).

ಎಂಬ ಋಕ್ಕಿನಲ್ಲಿ ಏವಾಸಃ ಎಂಬ ಪದಕ್ಕೆ **ಮರುತ್ಸಂಬಂಧಿನಃ ಅಶ್ವವಿಶೇಷಾಃ** ಮರುತ್ತುಗಳಿಗೆ ಸಂಬಂಧಿಸಿದ ಅಶ್ವವಿಶೇಷಗಳು ಎಂದು ಅರ್ಥವಾಗುತ್ತದೆಂದು ಹೇಳಿದೆ. ಶೀಘ್ರಗಾಮಿಗಳಾದ ಅಶ್ವಗಳೆಂದಭಿಪ್ರಾಯವು. ಅಲ್ಲದೆ—

**ಪ್ರ ವೋ ಮಹೇ ಮತಯೋ ಯಂತು ವಿಷ್ಣವೇ ಮರುತ್ವತೇ ಗಿರಿಜಾ ಏವಯಾಮರುತ್ ।**

(ಋ. ಸಂ. ೫-೮೭-೧).

ಎಂಬ ಋಕ್ಕಿನಲ್ಲಿಯೂ ಮತ್ತು ೫-೮೭ ನೇ ಸೂಕ್ತದ ಪೂರ್ತಿಯಾಗಿ ಉಳಿದ ಎಲ್ಲಾ ಋಕ್ಕುಗಳಲ್ಲಿಯೂ ಸಹ **ಏವಯಾಮರುತ್ತೆಂಬ** ವಿಶೇಷಣದಿಂದಲೂ ಮರುತ್ತುಗಳ ಸ್ವರೂಪವನ್ನು ತಿಳಿಯಬಹುದು. (ಆದರೆ ಇಲ್ಲಿ ಏವಯಾಮರುತ್ತೆಂಬುದು ಋಷಿಯ ಹೆಸರೆಂದೂ ಒಂದು ಮತ). ಐತರೇಯ ಬ್ರಾಹ್ಮಣದ ೩ನೇ ಅಧ್ಯಾಯದ ನಾಲ್ಕನೇ ಖಂಡದಲ್ಲಿ **ಅಚ್ಛಾವಾಕಶಸ್ತ್ರ**ನೆಂದು ಪ್ರಸಿದ್ಧವಾದ **ಏವಯಾಮರುತ್ತೆಂಬ** ಮಂತ್ರವು ಮರುತ್ತುಗಳನ್ನುದ್ದೇಶಿಸಿ ಪಠಿತವಾದುದಾಗಿಯೂ, ಇಂದ್ರನನ್ನು ಉದ್ದೇಶಿಸಿ ಯಾಗಮಾಡುವಾಗ ಈ ಮರುತ್ಸಂಬಂಧವಾದ ಮಂತ್ರದಿಂದ ಇಂದ್ರನನ್ನು ಅಲಕ್ಷ್ಯಮಾಡಿದಂತಾಗುತ್ತದೆಂದೂ **ಬುಲಿಲ**ನೆಂಬುವನು **ಅಚ್ಛಾವಾಕ**ನನ್ನು ಆಕ್ಷೇಪಿಸಿದುದೂ ಅದಕ್ಕೆ ಅಚ್ಛಾವಾಕನ ಸಮಾಧಾನವೂ ವರ್ಣಿತವಾಗಿದೆ. ಇಲ್ಲಿ ಆ ಕಥೆಯ ವಿವರಣೆಯು ಅನವಶ್ಯಕ. ಮುಖ್ಯವಾಗಿ **ಮರುತ್ತು**ಗಳನ್ನುದ್ದೇಶಿಸಿ ಹವಿರಾದಿಗಳನ್ನು ಅರ್ಪಣೆಮಾಡುವ ಕಾಲದಲ್ಲಾಗಲಿ, ಸ್ತುತಿಯನ್ನು ಮಾಡುವ ಕಾಲಗಳಲ್ಲಾಗಲಿ **ಏವಾಸಃ, ಏವೈಃ, ಏವಯಾಮರುತ್** ಇತ್ಯಾದಿ ವಿಶೇಷಣಗಳು ಮುಖ್ಯವಾಗಿ ಉಪಯೋಗಿಸಲ್ಪಡುತ್ತದೆ. ಯಾವಾಗಲೂ ಸಂಚಾರಮಾಡುವ ಸ್ವಭಾವವುಳ್ಳ ಮರುತ್ತುಗಳೆಂದು ಅಭಿಪ್ರಾಯ. ಈ ಅರ್ಥದಲ್ಲಿಯೇ,

**ಕಥಾ ದಾಶೇಮ ನಮಸಾ ಸುದಾನೂನೇವಯಾ ಮರುತೋ ಅಚ್ಛೋಕ್ತೌ ಪ್ರಶ್ರವಸೋ**
**ಮರುತೋ ಅಚ್ಛೋಕ್ತೌ ।**

(ಋ. ಸಂ. ೫-೪೧-೧೬).

ಎಂಬ ಋಕ್ಕಿನಲ್ಲಿಯೂ ಸಹ **ಏವಯಾಮರುತಃ** ಎಂದು ವರ್ಣಿಸಿದೆ.

**ವೃಷಂತಮಃ—ಅತಿಶಯೇನ ಕಾಮಾನಾಂ ವರ್ಷಿತಾ ।** ಅತಿಶಯವಾಗಿ ಇಷ್ಟಾರ್ಥಗಳನ್ನು ಸುರಿಸುವವನು. **ವೃಷನ್** ಶಬ್ದದ ವಿಶೇಷಾರ್ಥಗಳನ್ನು ಹಿಂದಿನ ಋಕ್ಕಿನ ವಿವರಣೆಯಲ್ಲಿ ತಿಳಿಸಿದೆ.

**ಭರೇಭರೇ ವೃತ್ರಹಾ—ಸರ್ವೇಷು ಸಂಗ್ರಾಮೇಷು ಶತ್ರೂಣಾಂ ಹಂತಾ।** ಸಕಲ ಸಂಗ್ರಾಮಗಳಲ್ಲಿಯೂ ಶತ್ರುನಾಶಕನಾದವನೆಂದು **ವೃತ್ರ** ಶಬ್ದಕ್ಕೆ ಇಲ್ಲಿ ಶತ್ರುವೆಂದರ್ಥಮಾಡಿದ್ದಾರೆ. **ವೃತ್ರಹನ್** ಎಂಬ ಪದವನ್ನು ಸ್ಥೂಲವಾಗಿ ನೋಡಿದರೆ ವೃತ್ರನೆಂಬ ಹೆಸರುಳ್ಳ ಶತ್ರುವನ್ನು ಕೊಂದವನೆಂದಾಗುತ್ತದೆ. ಪೌರಾಣಿಕವಾದ ಸಂಪ್ರದಾಯದ ಪ್ರಕಾರ **ವೃತ್ರ** ಶಬ್ದವು ಒಬ್ಬ ರಾಕ್ಷಸನ ಅಂಕಿತನಾಮವೆಂದು ಪ್ರಸಿದ್ಧವಾಗಿದೆ. ಆದರೆ ಋಕ್ಸಂಹಿತೆಯಲ್ಲಿ ಈ ಪದಕ್ಕೆ ನಾನಾರ್ಥಗಳಿವೆ. ಅವುಗಳಲ್ಲಿ ಮುಖ್ಯವಾಗಿ ರಾಕ್ಷಸ ಶತ್ರು. ಇತ್ಯಾದಿ. ಋಕ್ಸಂಹಿತೆಯಲ್ಲಿ ಈ ಎರಡು ಅರ್ಥಗಳೂ ಇರುವ ಬೇರೆ ಬೇರೆ ಸನ್ನಿವೇಶಗಳು ಅನೇಕವಾಗಿವೆ. ಆದರೆ ಒಟ್ಟಿನಲ್ಲಿ ನೋಡಿದರೆ ಶತ್ರುವೆಂಬ ಅರ್ಥವೇ ಪ್ರಾಚೀನವಾದುದೆಂದು ಹೇಳಬಹುದು. ಈ ಶತ್ರುವು ನಾನಾ ರೂಪದಲ್ಲಿರಬಹುದು. ಇಂದ್ರನ ಯುದ್ಧಸಂದರ್ಭಗಳಲ್ಲಿ ನೋಡಿದರೆ ಈ ಶಬ್ದವು ಆರ್ಯವೃತ್ರ, **ದಾಸವೃತ್ರ** ಎಂಬ ಎರಡು ಅರ್ಥಗಳಲ್ಲಿ ಉಪಯೋಗಿಸಲ್ಪಟ್ಟಿವೆ.

**ಯಯಾ ದಾಸಾನ್ಯಾರ್ಯಾಣಿ ವೃತ್ರಾ ಕರೋ ವಜ್ರಿನ್ತ್ಸುತುಕಾ ನಾಹುಷಾಣಿ ।**
(ಋ. ಸಂ. ೬-೨೨-೧೦)

**ತ್ವಂ ತಾಁ ಇಂದ್ರೋಭಯಾಁ ಅಮಿತ್ರಾನ್ ದಾಸಾ ವೃತ್ರಾಣ್ಯಾರ್ಯಾ ಚ ಶೂರ ।**
( ೬-೩೩-೩ )

**ಹತೋ ವೃತ್ರಾಣ್ಯಾರ್ಯಾ ಹತೋ ದಾಸಾನಿ ಸತ್ಪತೀ ।**
( ೬-೬೦-೬ )

ಇತ್ಯಾದಿ ನಾನಾ ಸಂದರ್ಭಗಳಲ್ಲಿ **ವೃತ್ರ** ಎಂದರೆ ಶತ್ರುವು ಆರ್ಯರ ಗುಂಪಿನಲ್ಲಾಗಲೀ ಅನಾರ್ಯಗುಂಪಿನಲ್ಲಾಗಲಿ ಇದ್ದು ಯಜ್ಞಕರ್ತನಿಗೆ ತೊಂದರೆಯನ್ನು ಕೊಡುತ್ತಿದ್ದುದರಿಂದ ಅವನೊಡನೆ ಯುದ್ಧಮಾಡಿ ನಾಶಮಾಡಬೇಕೆಂದು ಇಂದ್ರನಿಗೆ ಮೊರೆ ಇದೆ. ಇದೇ ರೀತಿ ಜನಜೀವನಕ್ಕೆ ತೊಂದರೆ ಬಂದಕಾಲದಲ್ಲೆಲ್ಲಾ ಇಂದ್ರನು ರಾಷ್ಟ್ರದೇವತೆಯ ರಕ್ಷಣೆಯನ್ನೇ ಪಡೆಯುವುದು ಸ್ವಭಾವ. ಇಂದ್ರನ ಅತ್ಯಂತ ಪರಾಕ್ರಮ ಕಾರ್ಯಗಳಲ್ಲೆಲ್ಲಾ ಅತಿಮುಖ್ಯವಾಗಿ ಈ ದುಷ್ಟಶಕ್ತಿಯನ್ನು ನಾಶಪಡಿಸುವುದೆಂದು ಸಂಹಿತೆಯಲ್ಲಿ ವರ್ಣಿಸಿದೆ. ಈ ದುಷ್ಟಶಕ್ತಿಗಳು ನಾನಾ ರೂಪದಲ್ಲಿವೆ. ಅವುಗಳಲ್ಲಿ ಎಲ್ಲಕ್ಕಿಂತಲೂ ಹೆಚ್ಚು ಹಿಂಸಾತ್ಮಕವಾದುದು **ವೃತ್ರ**ನೆಂದು ತಿಳಿಯುತ್ತದೆ.

ಈ **ವೃತ್ರ** ಶಬ್ದವು **ವೃ** ಎಂಬ ಧಾತುವಿನಿಂದ ಹುಟ್ಟಿದೆ. **ವೃ** ಎನ್ನುವುದಕ್ಕೆ ತಡೆಯುವುದು, ಆವರಿಸುವುದು, ಮುಚ್ಚುವುದು ಎಂಬ ಅರ್ಥಗಳಿವೆ. ಈ ಅಂಶವನ್ನು ಋ. ಸಂ. ಭಾಗ ೨ ಪೇಜು 123 ರಲ್ಲಿ ವಿಶದವಾಗಿ ವಿವರಿಸಿದೆ. ಇಂತಹ ಪ್ರತಿಬಂಧಕರೂಪಿಯಾದ ಶತ್ರುನಾಶಕನಾದುದರಿಂದ ಇಂದ್ರನಿಗೆ **ವೃತ್ರಹನ್** ಎಂಬ ವಿಶೇಷಣವು ಅತ್ಯಂತ ಪ್ರಸಿದ್ಧವಾಗಿದೆ.

**ಶುಷ್ಮಃ—ಓಜಃ, ಪಾಜಃ,** ಇತ್ಯಾದಿ ಬಲನಾಮಗಳಲ್ಲಿ ಪಠಿತವಾಗಿರುವುದರಿಂದ **ಶುಷ್ಮ**ವೆಂದರೆ ಬಲವೆಂದರ್ಥ (ನಿ.೩-೯)**ಶುಷ್ಮಮಿತಿ ಬಲನಾಮ ಶೋಷಯತೀತಿ ಸತಃ।** (ನಿ.೨-೨೩) ಇಲ್ಲಿ **ಬಲಶಾಲಿ**ಯೆಂದು **ಇಂದ್ರ**ನಿಗೆ ವಿಶೇಷಣವಾಗಿದೆ. **ಸರ್ವೇಷಾಂ ಅಸುರಾಣಾಂ ಶೋಷಕಃ ।** ಸಕಲ ಶತ್ರುಗಳನ್ನೂ ಕ್ಷೀಣಿಸುವಂತೆ ಮಾಡುವ ಬಲವುಳ್ಳವನೆಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಅನಾಪ್ತಃ**—ಆಪ್ಲೃ ವ್ಯಾಪ್ತೌ ಧಾತು. ಇದಕ್ಕೆ ಕರ್ಮಣಿಯಲ್ಲಿ **ನಿಷ್ಠಾ**—ಎಂಬುದರಿಂದ ಕ್ತಪ್ರತ್ಯಯ. ನ ಆಪ್ತಃ ಅನಾಪ್ತಃ ನಞ್‌ತತ್ಪುರುಷ ಸಮಾಸವಾದಾಗ **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಸೂರ್ಯಸ್ಯ**—ಸೃ ಗತೌ ಧಾತು. **ರಾಜಸೂಯ**—(ಪಾ. ಸೂ. ೩-೧-೧೧೪) ಎಂಬುದರಿಂದ ಕ್ಯಬಂತವಾಗಿ ನಿಪಾತಿತವಾಗಿದೆ. ಷಷ್ಠೀಏಕವಚನಾಂತರೂಪ.

**ಯಾಮಃ**—ಯಾ ಪ್ರಾಪಣೇ ಧಾತು. ಇದಕ್ಕೆ ಭಾವಾರ್ಥದಲ್ಲಿ **ಅರ್ತಿಸ್ತುಸು**—(ಉ. ಸೂ. ೧-೧೩೯) ಎಂಬುದರಿಂದ ಮನ್‌ಪ್ರತ್ಯಯ. ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಗಮನವೆಂದರ್ಥ.

**ವೃತ್ರಹಾ**—ವೃತ್ರಂ ಹತವಾನ್ ವೃತ್ರಹಾ. **ಬ್ರಹ್ಮಭ್ರೂಣ**—(ಪಾ. ಸೂ. ೩-೨-೮೭) ಎಂಬುದರಿಂದ ವೃತ್ರಶಬ್ದ ಉಪಪದವಾಗಿರುವಾಗ ಹನ್ ಧಾತುವಿಗೆ ಕ್ವಿಪ್ ಪ್ರತ್ಯಯ ಬರುತ್ತದೆ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಸು ಪರವಾಗ ಉಪಧಾದೀರ್ಘ.

**ಅಸ್ತಿ**—ಅಸ ಭುವಿ ಧಾತು. ಅದಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್‌ಪ್ರತ್ಯಯ. ಶಪಿಗೆ ಲುಕ್. ಯಸ್ಯ ಎಂದು ಹಿಂದೆ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್**—(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ತಿಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ವೃಷಂತಮಃ**—ಅತಿಶಯೇನ ವೃಷಾ. ವೃಷಂತಮಃ. ಅತಿಶಯಾರ್ಥದಲ್ಲಿ **ಅತಿಶಾಯನೇ ತಮಬಿಷ್ಠನೌ**—ಎಂಬುದರಿಂದ ತಮಪ್ ಪ್ರತ್ಯಯ. **ಸ್ವಾದಿಷ್ವಸರ್ವನಾಮಸ್ಥಾನೇ**—ಎಂಬುದರಿಂದ ಪದಸಂಜ್ಞಾ ಇರುವುದರಿಂದ **ನಲೋಪಃ ಪ್ರಾತಿಪದಿಕಾಂತಸ್ಯ**—ಎಂಬುದರಿಂದ ನಲೋಪ. **ನಾದ್ಘಸ್ಯ**—(ಪಾ. ಸೂ. ೮-೨-೧೭) ಎಂಬುದರಿಂದ ತಮಪಿಗೆ ನುಟಾಗಮ. ತಮಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಸ್ವೇಭಿಃ**—ತೃತೀಯಾ ಬಹುವಚನದಲ್ಲಿ ಭಿಸ್ ಪರವಾದಾಗ **ಬಹುಲಂ ಛಂದಸಿ**—(ಪಾ. ಸೂ. ೭-೧-೧೦) ಎಂಬುದರಿಂದ ಐಸ್‌ವಿಕಲ್ಪವಾಗಿ ಬರುತ್ತದೆ. **ಬಹುವಚನೇಝಲ್ಯೇತ್**—ಸೂತ್ರದಿಂದ ಏತ್ವ.

**ಏವೈಃ**—ಇಣ್ ಗತೌ ಧಾತು. **ಇಣ್‌ಶೀಙ್ಭ್ಯಾಂ ವನ್**—(ಉ. ಸೂ. ೧-೧೫೦) ಎಂಬುದರಿಂದ ಇದಕ್ಕೆ ವನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೨ ॥

——— :೦: ———

ಸಂಹಿತಾಪಾಠಃ

ದಿವೋ ನ ಯಸ್ಯ ರೇತಸೋ ದುಘಾನಾಃ ಪಂಥಾಸೋ ಯಂತಿ
ಶವಸಾಪರೀತಾಃ ।
ತರದ್ದ್ವೇಷಾಃ ಸಾಸಹಿಃ ಪೌಂಸ್ಯೇಭಿರ್ಮರುತ್ವಾನ್ನೋ ಭವತ್ವಿಂದ್ರ
ಊತೀ ॥ ೩ ॥

ಪದಪಾಠಃ

ದಿವಃ । ನ । ಯಸ್ಯ । ರೇತಸಃ । ದುಘಾನಾಃ । ಪಂಥಾಸಃ । ಯಂತಿ । ಶವಸಾ ।
ಅಪರಿಽಇತಾಃ ।
ತರತ್ಽದ್ವೇಷಾಃ । ಸಸಹಿಃ । ಪೌಂಸ್ಯೇಭಿಃ । ಮರುತ್ವಾನ್ । ನಃ । ಭವತು ।
ಇಂದ್ರಃ । ಊತೀ ॥ ೩ ॥

ಸಾಯಣಭಾಷ್ಯಂ

ಯಸ್ಯೇಂದ್ರಸ್ಯ ಪಂಥಾಸೋ ರಶ್ಮಯೋ ರೇತಸೋ ವೃಷ್ಟ್ಯುದಕಾನಿ ದುಘಾನಾ ದುಹಂತಃ ಪ್ರವರ್ಷಂತೋ ಯಂತಿ ನಿರ್ಗಚ್ಛಂತಿ ದ್ಯುಲೋಕಾದಿತಸ್ತತಃ ಪ್ರಸರಂತಿ । ತತ್ರ ದೃಷ್ಟಾಂತಃ । ದಿವೋ ನ। ಯಥಾ ದ್ಯೋತಮಾನಸ್ಯ ಸೂರ್ಯಸ್ಯ ಕಿರಣಾ ವೃಷ್ಟಿಂ ಕುರ್ವಂತೋ ನಭಃಸ್ಥಲಾನ್ನಿರ್ಗಚ್ಛಂತಿ ತದ್ವತ್। ಕೀದೃಶಾ ರಶ್ಮಯಃ। ಶವಸಾ ಬಲೇನ ಸಹಿತಾಃ। ಅಪರೀತಾಃ। ಪರೈರನಭಿಗತಾಃ। ದುಃಷ್ಪ್ರಾಪಾ ಇತ್ಯರ್ಥಃ। ಸೋಽಯಮಿಂದ್ರಸ್ತರದ್ದ್ವೇಷಾ ದ್ವೇಷಾಂಸಿ ಶತ್ರೂಂಸ್ತರನ್ । ಜಿತಶತ್ರುಕ ಇತ್ಯರ್ಥಃ । ಪೌಂಸ್ಯೇಭಿರ್ಬಲೈಃ ಸಸಹಿಃ ಶತ್ರೂಣಾಮಭಿಭವಿತಾ ಏವಂಭೂತೋ ಮರುತ್ವಾನಿಂದ್ರೋ ನೋಽಸ್ಮಾಕಂ ರಕ್ಷಣಾಯ ಭವತು ॥ ರೇತಸಃ । ರೇತ ಇತ್ಯುದಕನಾಮ । ರೀಯತೇ ಗಚ್ಛತೀತಿ ರೇತಃ । ರೀಗತಿರೇಷಣಯೋಃ। ಸ್ರುರೀಭ್ಯಾಂ ತುಟ್ ಚ । ಉ. ೪-೨೦೧ । ಇತ್ಯಸುನ್ ತುಡಾಗಮಶ್ಚ । ಶಸೋ ವ್ಯತ್ಯಯೇನ ಜಸಾದೇಶಃ । ದುಘಾನಾಃ । ದುಹ ಪ್ರಪೂರಣೇ । ಕರ್ತರಿ ಲಟಃ ಶಾನಚ್ । ಅದಾದಿತ್ವಾಚ್ಛಪೋ ಲುಕ್ । ವ್ಯತ್ಯಯೇನ ಘತ್ವಂ । ವೃಷಾದೇರಾಕೃತಿಗಣತ್ವಾದಾದ್ಯುದಾತ್ತತ್ವಂ । ಪಂಥಾಸಃ । ಪತಂತೀತಿ ಪಂಥಾನೋ ರಶ್ಮಯಃ ।

ಪತೇಃಸ್ಥ ಚ । ಉ. ೪-೧೨ । ಇತೀನಿಪ್ರತ್ಯಯಸ್ಥಕಾರಾಂತಾದೇಶಶ್ಚ । ಜಸಿ ಪಥಿಮಥ್ಯೃಭುಕ್ಷಾಮಾದಿತಿ ವ್ಯತ್ಯಯೇನಾತ್ವಂ। ಆಜ್ಜಸೇರಸುಕ್ । ಯದ್ವಾ। ಪಂಥಾನ ಇತ್ಯತ್ರ ವರ್ಣವ್ಯಾಪತ್ತ್ಯಾ ನಕಾರಸ್ಯ ಸಕಾರಃ। ಪಥಿಮಥೋಃ ಸರ್ವನಾಮಸ್ಥಾನ ಇತ್ಯಾದ್ಯುದಾತ್ತತ್ವಂ । ಸಸಹಿಃ । ಷಹ ಅಭಿಭವೇ । ಉತ್ಸರ್ಗಶ್ಛಂದ- ಸೀತಿ ವಚನಾದಾದೃಗಮಹನ ಇತಿ ಕಿಪ್ರತ್ಯಯಃ । ಲಿಡ್ವದ್ಭಾವಾದ್ದ್ವಿರ್ವಚನಂ ॥

ಪ್ರತಿಪದಾರ್ಥ

ಯಸ್ಯ—ಯಾವ ಇಂದ್ರನ । ಶವಸಾ—ಬಲದೊಡನೆ ಕೂಡಿರುವೂ । ಅಪರೀತಾಃ—(ಶತ್ರುಗಳಿಂದ) ಸಮೀಪಿಸಲು ಸಾಧ್ಯವಿಲ್ಲದುವೂ ಆದ । ಪಂಥಾಸಃ—ತೇಜಸ್ಸಿನ ಕಿರಣಗಳು । ದಿವೋ ನ—ಪ್ರಕಾಶಮಾನನಾದ ಸೂರ್ಯನ ಕಿರಣಗಳು (ಮಳೆಯನ್ನು ಸುರಿಸಿ) ಅಂತರಿಕ್ಷದಿಂದ ಹೊರಹೊರಡುವಂತೆ । ರೇತಸಃ—ಮಳೆಯನೀರು ಗಳನ್ನು । ದುಘಾನಾಃ—ಸುರಿಸುತ್ತಾ । ಯಂತಿ—(ದ್ಯುಲೋಕದಿಂದ ಎಲ್ಲಾ ಕಡೆಗಳಿಗೂ)ಪ್ರಸರಿಸುತ್ತವೆಯೋ । (ಅಂತಹ) ತರದ್ದ್ವೇಷಾಃ—ಶತ್ರುಗಳನ್ನು ಸೋಲಿಸತಕ್ಕವನೂ (ಮತ್ತು) । ಪೌಂಸ್ಯೇಭಿಃ—(ತನ್ನ)ಪರಾಕ್ರಮ ಗಳೊಡನೆ । ಸಸಹಿಃ—(ಶತ್ರುಗಳೊಡನೆ ಹೊಡೆದಾಡಿ) ವಿಜಯಿಯಾಗುವವನೂ । ಮರುತ್ವಾನ್—ಮರುತ್ತು ಗಳೊಡನೆ ಕೂಡಿಕೊಂಡಿರುವನೂ ಆದ । ಇಂದ್ರಃ—ಇಂದ್ರನು । ನಃ—ನಮ್ಮ । ಊತೀ—ರಕ್ಷಣಾರ್ಥವಾಗಿ । ಭವತು—ಆಗಲಿ ।

ಭಾವಾರ್ಥ

ಯಾವ ಇಂದ್ರನ ಬಲದೊಡನೆ ಕೂಡಿರುವೂ, ಶತ್ರುಗಳಿಂದ ಸಮೀಪಿಸಲು ಸಾಧ್ಯವಿಲ್ಲದುವೂ ಆದ ತೇಜಸ್ಸಿನ ಕಿರಣಗಳು ಪ್ರಕಾಶಮಾನನಾದ ಸೂರ್ಯನ ಕಿರಣಗಳಂತೆ ಮಳೆಯ ನೀರುಗಳನ್ನು ಸುರಿಸುತ್ತಾ ದ್ಯುಲೋಕ ದಿಂದ ಎಲ್ಲಾ ಕಡೆಗಳಿಗೂ ಪ್ರಸರಿಸುತ್ತವೆಯೋ, ಅಂತಹ ಶತ್ರುಗಳನ್ನು ಸೋಲಿಸತಕ್ಕವನೂ ಮತ್ತು ತನ್ನ ಪರಾಕ್ರಮ ಗಳೊಡನೆ ಶತ್ರುಗಳೊಡನೆ ಹೊಡೆದಾಡಿ ವಿಜಯಿಯಾಗುವವನೂ ಮರುತ್ತುಗಳೊಡನೆ ಕೂಡಿಕೊಂಡಿರುವವನೂ ಆದ ಇಂದ್ರನು ನಮಗೆ ರಕ್ಷಣೆಯನ್ನು ಕೊಡುವವನಾಗಲಿ.

## English Translation

May he, whose rays, powerful and unattainable, issue forth like those of the sun, milking (the clioulds) ; he who is victorious over is adversaries triumphant by his manly energies ; may Indra, associated with the Muruts be our protection.

॥ ವಿಶೇಷವಿಷಯಗಳು ॥

ಈ ಋಕ್ಕನ್ನು ವಿವರಿಸುವಾಗ ಸಾಯಣರ ಭಾಷ್ಯಕ್ಕೂ ಸ್ಕಂದಸ್ವಾಮಿಗಳ ಭಾಷ್ಯಕ್ಕೂ ಅನ್ವಯಕ್ರಮ ದಲ್ಲಿ ಪದವಿವರಣೆಯಲ್ಲೂ ವ್ಯತ್ಯಾಸವಿದ್ದರೂ ಮುಖ್ಯವಾದ ತಾತ್ಪರ್ಯವು ಒಂದೇ ಆಗಿದೆ. ಸಾಯಣಭಾಷ್ಯ ದಲ್ಲಿ ಪಂಥಾಸಃ ಎನ್ನುವುದಕ್ಕೆ ರಶ್ಮಯಃ—ಕಿರಣಗಳು ಎಂದಿದೆ ಸ್ಕಂದಸ್ವಾಮಿಗಳು ಮಾರ್ಗಾಃ-ಮಾರ್ಗ

ಗಳೆಂದು ಅರ್ಥಮಾಡಿದ್ದಾರೆ. ಈ ಅರ್ಥವ್ಯತ್ಯಾಸದಿಂದ ಅನ್ವಯದಲ್ಲೂ ವ್ಯತ್ಯಾಸವಿದೆ. ಮೊದಲನೆಯ ವಿವರಣೆಯಂತೆ,

**ಯಸ್ಯ—ಇಂದ್ರಸ್ಯ** । ಯಾವ ಇಂದ್ರನ; **ಪಂಥಾಸಃ—ರಶ್ಮಯಃ** । ಕಿರಣಗಳು; **ರೇತಸಃ ವೃಷ್ಟ್ಯುದಕಾನಿ**—ಮಳೆಯ ನೀರುಗಳನ್ನು; **ದುಕ್ಷಾನಾಃ ಪ್ರವರ್ಷಂತಃ**—ಸುರಿಸುತ್ತಾ; **ಯಂತಿ ನಿರ್ಗಚ್ಛಂತಿ ದ್ಯುಲೋಕಾದಿತಸ್ತತಃ ಪ್ರಸರಂತಿ**—ದ್ಯುಲೋಕದಿಂದ ಎಲ್ಲಾ ಕಡೆಗೂ ಪ್ರಸರಿಸುತ್ತವೆಯೆಂದು ಅರ್ಥವಾಗಿ **ದಿವೋನ** ಎಂಬುದು **ಯಥಾ ದ್ಯೋತಮಾನಸ್ಯ ಸೂರ್ಯಸ್ಯ ಕಿರಣಾ ವೃಷ್ಟಿಂ ಕುರ್ವಂತಃ ನಭಃಸ್ಥಲಾನ್ನಿರ್ಗಚ್ಛಂತಿ ತದ್ವತ್** ಪ್ರಕಾಶಮಾನನಾದ ಸೂರ್ಯನ ಕಿರಣಗಳು ಮಳೆಯನ್ನು ಸುರಿಸುತ್ತಾ ಅಂತರಿಕ್ಷದಿಂದ ಹೊರಟು ಲೋಕಕ್ಕೆಲ್ಲಾ ಪ್ರಸರಿಸುವಂತೆ ಎಂದು ಇಂದ್ರನ ಪ್ರಭೆಗೂ ಸೂರ್ಯನಪ್ರಭೆಗೂ ಇರುವ ಸಾದೃಶ್ಯವನ್ನು ತೋರಿಸುವ ಉಪಮಾನವೆಂದೂ ಹೇಳಿದೆ. ಆಗ **ಶವಸಾ, ಅಪರೀತಾಃ** ಎಂಬ ಎರಡು ಪದಗಳೂ **ಪಂಥಾಸಃ** ಎಂಬುದಕ್ಕೆ ವಿಶೇಷಣವಾಗಿ, **ಶವಸಾ** ಎಂದರೆ ಬಲವೊಡನೆ ಕೂಡಿದುದು ಎಂದೂ, **ಅಪರೀತಾಃ** ಎಂದರೆ ಶತ್ರುಗಳಿಂದ ಸಮೀಪಿಸಲು ಸಾಧ್ಯವಿಲ್ಲದುದು ಎಂದೂ ಅರ್ಥವಾಗುತ್ತದೆ.

ಎರಡನೆಯ ವಿವರಣೆಯಂತೆ, **ದಿವ ಇತಿ ಪಂಚಮೀ । ನ ಶಬ್ದಃ ಉಪರಿಷ್ಟಾದುಪಚಾರಃ । ದ್ಯುಲೋಕಾತ್ ಯಸ್ಯೇಂದ್ರಸ್ಯ ಬಲೇನ ರೇತಸಃ ವೃಷ್ಟಿಲಕ್ಷಣಾನ್ಯುದಕಾನಿ । ದುಕ್ಷಾನಾಃ ಕ್ಷರಂತಃ । ಪಂಥಾಸಃ ವೃಷ್ಟಿಪತನಮಾರ್ಗಾಃ । ಯಂತಿ ಪೃಥಿವೀಂ ಪ್ರತಿ ಗಚ್ಛಂತಿ ।** ಇಂದ್ರನ ಪ್ರಭಾವದಿಂದ ವೃಷ್ಟಿಪತನಮಾರ್ಗಗಳು ದೇವಲೋಕದಿಂದ ಪೃಥಿವಿಗೆ ಅಭಿಮುಖವಾಗಿ ಪ್ರಸರಿಸುತ್ತವೆ ಎಂದು **ದಿವಃ** ಎನ್ನುವುದಕ್ಕೆ ದೇವಲೋಕದಿಂದ ಎಂದು ಪಂಚಮ್ಯರ್ಥದಲ್ಲಿಯೂ, ನ ಎನ್ನುವುದಕ್ಕೆ ಉಪಮಾನಸೂಚಕವಾಗಿಲ್ಲದೇ **ಸಂಪ್ರತಿ** ಎಂದರೆ ಪ್ರಕೃತದಲ್ಲಿ ಎಂಬರ್ಥದಲ್ಲಿಯೂ ಪ್ರಯೋಗವಿದೆಯೆಂದು ತಿಳಿಸಿದೆ. ಈ ಅನ್ವಯದಪ್ರಕಾರ, **ಶವಸಾ** ಎಂದರೆ ಇಂದ್ರಸ್ಯ ಬಲೇನ ಎಂದು ಕ್ರಿಯಾವಿಶೇಷಣವಾಗಿಯೂ, **ಅಪರೀತಾಃ** ಎಂದರೆ **ವೃಷ್ಟಿಪ್ರತಿಬಂಧಕರೈರಸುರಾದಿಭಿರಪ್ರಾಪ್ತಾಃ** । ಮಳೆಯನ್ನು ತಡೆಯುತಕ್ಕ ಅಸುರರಿಂದ ಸಮೀಪಿಸಲ್ಪಡದೆ ಎಂದು **ಪಂಥಾಸಃ** ಎನ್ನುವುದಕ್ಕೆ ವಿಶೇಷಣವಾಗಿಯೂ ಇರುತ್ತದೆ.

**ರೇತಸಃ—ಅರ್ಣಃ, ಕ್ಷೋದಃ, ಕ್ಷದ್ಮ** ಇತ್ಯಾದಿ **ಉದಕನಾಮ**ಗಳಲ್ಲಿ ಪಠಿತವಾಗಿರುವುದರಿಂದ (ನಿ ೧-೧೨) **ರೇತಸಃ** ಎಂದರೆ ವೃಷ್ಟ್ಯುದಕಗಳೆಂದು ಅರ್ಥ.

**ತರದ್ದ್ವೇಷಾಃ—ದ್ವೇಷಾಂಸಿ ಶತ್ರೂನ್ ತರನ್ ಜಿತಶತ್ರುಕ ಇತ್ಯರ್ಥಃ** । ಶತ್ರುಗಳನ್ನು ಜಯಿಸಿದವನೆಂದರ್ಥ.

**ಪೌಂಸ್ಯೇಭಿಃ**-ಓಜಃ, ಪಾಜಃ ಇತ್ಯಾದಿ ಇಪ್ಪತ್ತೆಂಟು ಬಲನಾಮಗಳಲ್ಲಿಯೂ (ನಿ. ೩-೯) ಮತ್ತು **ರಣಃ**-ವಿವಾಕ್ ವಿಖಾದಃ ಎಂಬ ೪೬ **ಸಂಗ್ರಾಮನಾಮ**ಗಳಲ್ಲಿಯೂ ಪಠಿತವಾಗಿರುವುದರಿಂದ ಬಲ, **ಯುದ್ಧ** ಎಂಬ ಎರಡು ಅರ್ಥವೂ ಉಂಟು. ಇಲ್ಲಿ ಬಲಗಳಿಂದ ಎಂದರ್ಥ. ಪುರುಷಸಾಮರ್ಥ್ಯದಿಂದ ಕೂಡಿದ ಪರಾಕ್ರಮವೆಂದು ಇಂದ್ರನ ಪರವಾಗಿ ಈ ವಿಶೇಷಣವು ಅನೇಕಕಡೆ ಉಪಯೋಗಿಸಲ್ಪಟ್ಟಿದೆ—

**ವಿ ವೃತ್ರಂ ಪರ್ವಶೋ ಯಯುರ್ವಿ ಪರ್ವತಾಁ ಅರಾಜಿನಃ। ಚಕ್ರಾಣಾ ವೃಷ್ಣಿ ಪೌಂಸ್ಯಂ।**
(ಋ. ಸಂ. ೮-೭-೨೩.)

**ಭೂರಿ ಚಕರ್ಥ ಯುಜ್ಯೇಭಿರಸ್ಮೇ ಸಮಾನೇಭಿರ್ವೃಷಭ ಪೌಂಸ್ಯೇಭಿಃ।**
(ಋ. ಸಂ. ೧-೧೬೫-೭)

ಎಂದು ಇಂದ್ರನ ಪರಾಕ್ರಮಕಾರ್ಯಗಳನ್ನು ವರ್ಣಿಸುವಾಗ ಸಾಮರ್ಥ್ಯಸೂಚಕವಾದ ಈ ವಿಶೇಷಣವು ಇಂದ್ರನ ನಿಜವಾದ ಶಕ್ತಿಯನ್ನು ತೋರಿಸುತ್ತದೆ. ಹೀಗೆಯೇ, ೫-೫೯-೪ ; ೬-೬೬-೨ ಇತ್ಯಾದಿ ಋಕ್ಕುಗಳಲ್ಲಿ ಮರುತ್ತುಗಳ ಮತ್ತು ಇತರ ದೇವತೆಗಳ ಪರವಾಗಿಯೂ ಉಪಯೋಗಿಸಲ್ಪಟ್ಟಿದೆ.

**ಸಸಹಿಃ—ಶತ್ರೂಣಾಂ ಅಭಿಭವಿತಾ।** ಶತ್ರುಗಳನ್ನು ಸೋಲಿಸುವ ಸಾಮರ್ಥ್ಯವುಳ್ಳವನು, ಎಂದು ಈ ವಿಶೇಷಣವೂ ಸಹ ಹೆಚ್ಚಾಗಿ ಇಂದ್ರನ ಪರವಾಗಿಯೇ ಪ್ರಯೋಗಿಸಲ್ಪಟ್ಟಿದೆ.

**ತಮುತ್ಸವೇ ಚ ಪ್ರಸವೇ ಚ ಸಾಸಹಿಮಿಂದ್ರಂ ದೇವಾಸಃ ಶವಸಾಮದನ್ನನು।**
(ಋ. ಸಂ. ೧-೧೦೨-೧)

**ತ್ವಾಂ ದೇವೇಷು ಪ್ರಥಮಂ ಹವಾಮಹೇ ತ್ವಂ ಬಭೂಥ ಪೃತನಾಸು ಸಾಸಹಿಃ।**
(ಋ. ಸಂ. ೧-೧೦೨-೯)

**ಸುಪ್ರಕೇತೇಭಿಃ ಸಾಸಹಿರ್ದಧಾನೋ ವಿದ್ಯಾಮೇಷಂ ವೃಜನಂ ಜೀರದಾನುಂ।**
(ಋ. ಸಂ. ೧-೧೭೧-೬)

ಇತ್ಯಾದಿ ಕಡೆಗಳಲ್ಲಿ ಈ ವಿಶೇಷಣವು ಇಂದ್ರನ ಸಾಮರ್ಥ್ಯವನ್ನು ತೋರಿಸುತ್ತದೆ.

ವ್ಯಾಕರಣಪ್ರಕ್ರಿಯಾ

**ದಿವಃ—ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ರೇತಸಃ**—ರೇತ ಎಂಬುದು ನೀರಿನ ಹೆಸರು. ರೀಯತೇ ಗಚ್ಛತಿ ಇತಿ ರೇತಃ. ರೀ ಗತಿರೇಷಣಯೋಃ ಧಾತು. **ಸ್ರುರೀಭ್ಯಾಂ ತುಟ್ ಚ**—(ಉ. ಸೂ. ೪-೬೪೧) ಎಂಬುದರಿಂದ ಇದಕ್ಕೆ ಅಸುನ್ ಪ್ರತ್ಯಯ. ತತ್ಸಂನಿಯೋಗದಿಂದ ತುಟಾಗಮ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರೇತಸ್ ಶಬ್ದವಾಗುತ್ತದೆ. **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಇದಕ್ಕೆ ಶಸ್ ಪರವಾದಾಗ **ಸುಪಾಂ ಸುಪೋ ಭವಂತಿ**—ಎಂಬ ವಾಕ್ಯದಿಂದ ಜಸಾದೇಶ ಬರುತ್ತದೆ.

**ದುಘಾನಾಃ**—ದುಹ ಪ್ರಪೂರಣೇ ಧಾತು. ಇದಕ್ಕೆ ಕರ್ತರಿಯಲ್ಲಿ ಲಟಿಗೆ ಶಾನಚಾದೇಶ. **ಅದಿಪ್ರಭೃತಿಭ್ಯಃ ಶಪಃ**—ಎಂಬುದರಿಂದ ಶಪಿಗೆ ಲುಕ್. **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದ

ರಿಂದ ನಿಮಿತ್ತವಿಲ್ಲದಿದ್ದರೂ ಧಾತುವಿನ ಹಕಾರಕ್ಕೆ ಘತ್ವ. ಚಿತ್ತ್ವಾದುದರಿಂದ ಅಂತೋದಾತ್ತಸ್ವರವು ಪ್ರಾಪ್ತವಾದರೆ ವೃಷಾದಿಯು ಆಕೃತಿಗಣವಾದುದರಿಂದ ಅದರಲ್ಲಿ ಇದನ್ನು ಸೇರಿಸುವುದರಿಂದ **ವೃಷಾದೀನಾಂ ಚ** (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪನ್ಥಾಸಃ**—ಪತಂತಿ ಇತಿ ಪನ್ಥಾನೋ ರಶ್ಮಯಃ. ಪತ್ಲೃ ಗತೌ ಧಾತು. ಇದಕ್ಕೆ **ಪತೇಸ್ಥ ಚ**—(ಉ. ಸೂ. ೪-೪೫೨) ಎಂಬುದರಿಂದ ಇನಿಪ್ರತ್ಯಯ ತತ್ಸನ್ನಿಯೋಗದಿಂದ ಥಕಾರಾಂತಾದೇಶ. ಪಥಿನ್ ಶಬ್ದವಾಗುತ್ತದೆ ಇದಕ್ಕೆ ಜಸ್ ಪರವಾದಾಗ **ಪಥಿಮಥ್ಯೃಭುಕ್ಷಾಮಾತ್**—(ಪಾ. ಸೂ. ೭-೧-೮೫) ಎಂಬುದರಿಂದ ವ್ಯತ್ಯಯದಿಂದ ಆತ್ವ. **ಆಜ್ಜಸೇರಸುಕ್**—(ಪಾ. ಸೂ. ೭-೧-೫೦) ಎಂಬುದರಿಂದ ಜಸಿಗೆ ಅಸುಕಾಗಮ. ಅಥವಾ ಛಂದಸ್ಸಿನಲ್ಲಿ ವರ್ಣವ್ಯತ್ಯಯದಿಂದ ಅಂತ್ಯ ನಕಾರಕ್ಕೆ ಸಕಾರಾದೇಶ. **ಥೋನ್ಥ**—(ಪಾ. ಸೂ. ೭-೧-೮೭) ಎಂಬುದರಿಂದ ಥಕಾರಕ್ಕೆ ನ್ಥಾದೇಶ. ಪನ್ಥಾಸಸ್ ಎಂದಾದಾಗ ಸಕಾರಕ್ಕೆ ರುತ್ವ ವಿಸರ್ಗ. **ಪಥಿಮಥೋಃ ಸರ್ವನಾಮಸ್ಥಾನೇ**—(ಪಾ. ಸೂ. ೬-೧-೧೯೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಯನ್ತಿ**—ಇಣ್ ಗತೌ ಧಾತು. ಅದಾದಿ. ಲಟ್ ಪ್ರಥಮಪುರುಷಬಹುವಚನದಲ್ಲಿ **ಝೋಽಂತಃ**—ಸೂತ್ರದಿಂದ ಝಿಗೆ ಅಂತಾದೇಶ. ಅಜಾದಿಪ್ರತ್ಯಯ ಪರವಾದುದರಿಂದ **ಇಣೋ ಯಣ್**—(ಪಾ. ಸೂ. ೬-೪-೮೧) ಎಂಬುದರಿಂದ ಧಾತುವಿನ ಇಕಾರಕ್ಕೆ ಯಣ್. ಯಣ್ಣಾದೇಶವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ತರದ್ದ್ವೇಷಾಃ**—ದ್ವಿಷ ಅಪ್ರೀತೌ ಧಾತು. ಇದಕ್ಕೆ ಔಣಾದಿಕವಾದ ಅಸುನ್ ಪ್ರತ್ಯಯ. ದ್ವೇಷಾಂಸಿ ತರನ್ ಯಃ ಸಃ ತರದ್ದ್ವೇಷಾಃ. ರಾಜದಂತಾದಿಯಲ್ಲಿ ಸೇರಿರುವುದರಿಂದ ಪರನಿಪಾತ ಬರುತ್ತದೆ.

**ಸಾಸಹಿಃ**—ಷಹ ಅಭಿಭವೇ. ಧಾತು. **ಉತ್ಸಗಶ್ಛಂದಸಿ**—ಎಂಬ ವಚನದಿಂದ ಆದಂತಾದಿ ನಿಮಿತ್ತವಿಲ್ಲದಿದ್ದರೂ **ಆದೃಗಮಹನ**—(ಪಾ. ಸೂ. ೩-೨-೧೭೧) ಎಂಬದರಿಂದ ಕಿ ಪ್ರತ್ಯಯ ಬರುತ್ತದೆ. ಇದಕ್ಕೆ ಲಿಡ್ವದ್ಭಾವವಿರುವುದರಿಂದ ಇದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಆದಿಹಲ್‌ಶೇಷ. **ಅನ್ಯೇಷಾಮಪಿ ದೃಶ್ಯತೇ**—(ಪಾ. ಸೂ. ೬-೩-೧೩೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಪೌಂಸ್ಯೇಭಿಃ**—ಪುಂಸಃ ಭಾವಃ ಪೌಂಸ್ಯಮ್. **ಸ್ತ್ರೀಪುಂಸಾಭ್ಯಾಂ**—(ಪಾ. ಸೂ. ೪-೧-೮೭) ಎಂಬ ಅಧಿಕಾರದಿಂದ ಇದಕ್ಕೆ ಭಾವಾರ್ಥದಲ್ಲಿ ಷ್ಯಞ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ**—ಎಂಬುದರಿಂದ ಆದಿವೃದ್ಧಿ. ಞಿತ್‌ಪ್ರತ್ಯಯವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಭಿಸ್ ಪರವಾದಾಗ **ಬಹುಲಂ ಛಂದಸಿ**—ಎಂಬುದರಿಂದ ಐಸ್ ಬರುವುದಿಲ್ಲ. ॥ ೩ ॥

——— :o: ———

ಸಂಹಿತಾಪಾಠಃ

ಸೋ ಅಂಗಿರೋಭಿರಂಗಿರಸ್ತಮೋ ಭೂದ್ವೃಷಾ ವೃಷಭಿಃ ಸಖಿಭಿಃ
ಸಖಾ ಸನ್ ।
ಋಗ್ಮಿಭಿರ್ಋಗ್ಮೀ ಗಾತುಭಿರ್ಜ್ಯೇಷ್ಠೋ ಮರುತ್ವಾನ್ನೋ ಭವ-
ತ್ವಿಂದ್ರ ಊತೀ ॥ ೪ ॥

ಪದಪಾಠಃ

ಸಃ । ಅಂಗಿರಃಽಭಿಃ । ಅಂಗಿರಃಽತಮಃ । ಭೂತ್ । ವೃಷಾ । ವೃಷಽಭಿಃ ।
ಸಖಿಽಭಿಃ । ಸಖಾ । ಸನ್ ।
ಋಗ್ಮಿಽಭಿಃ । ಋಗ್ಮೀ । ಗಾತುಽಭಿಃ । ಜ್ಯೇಷ್ಠಃ । ಮರುತ್ವಾನ್ । ನಃ । ಭವತು ।
ಇಂದ್ರ । ಊತೀ ॥ ೪ ॥

ಸಾಯಣಭಾಷ್ಯಂ

ಸ ಇಂದ್ರೋಽಂಗಿರೋಭಿಃ । ಅಂಗಂತಿ ಗಚ್ಛಂತೀತ್ಯಂಗಿರಸೋ ಗಂತಾರಃ । ತೇಭ್ಯೋಽಪ್ಯಂಗಿರಸ್ತಮೋಽಭೂತ್ । ಅತಿಶಯೇನ ಗಂತಾ ಭವತಿ । ವೃಷಭಿರ್ವೃಷಾ ವರ್ಷಿತೃಭ್ಯೋಽಪ್ಯತಿಶಯೇನ ವರ್ಷಿತಾ ಸಖಿಭಿಃ ಸಮಾನಖ್ಯಾನೇಭ್ಯೋ ಮಿತ್ರಭೂತೇಭ್ಯೋಽಪಿ ಸಖಾತಿಽಶಯೇನ ಹಿತಕಾರೀ ಏವಂಭೂತಃ ಸನ್ ಋಗ್ಮಿಭಿರರ್ಚನೀಯೇಭ್ಯೋಽಪಿ ಋಗ್ಮ್ಯರ್ಚನೀಯೋ ಭವತಿ ಗಾತುಭಿರ್ಗಾತವ್ಯೇಭ್ಯಃ ಸ್ತೋತವ್ಯೇಭ್ಯೋಽಪಿ ಜ್ಯೇಷ್ಠೋಽತಿಶಯೇನ ಸ್ತೋತವ್ಯಃ ಏವಂಗುಣವಿಶಿಷ್ಟೋ ಮರುತ್ವಾನಿಂದ್ರೋ ರಕ್ಷಣಾಯ ಭವತು ॥ ಅಂಗಿರೋಭಿಃ । ಅಗಿ ರಗಿ ಲಗಿ ಗತ್ಯರ್ಥಾಃ । ಅಂಗಿರಾ ಅಪ್ಸರಾಃ । ಉ. ಸೂ. ೪-೨೩೫, ೨೩೬ । ಇತ್ಯೌಣಾದಿಕೋಽಸುನ್ಪ್ರತ್ಯಯೋ ನಿಪಾತ್ಯತೇ । ಇದಮಾದಿಷು ಸರ್ವತ್ರ ಪಂಚಮ್ಯರ್ಥೇ ತೃತೀಯಾ । ಋಗ್ಮಿಭಿಃ । ಋಚ ಸ್ತುತೌ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಮತ್ವರ್ಥೀಯೋ ಮಿನಿಃ । ಪದತ್ವಾತ್ಕುತ್ವಂ ಜಶ್ತ್ವಂ ಚ । ಗಾತುಭಿಃ । ಗಾ ಸ್ತುತೌ । ಕಮಿಮನಿಜನೀತ್ಯಾದಿನಾ ಕರ್ಮಣಿ ತುಪ್ರತ್ಯಯಃ ॥

ಪ್ರತಿಪದಾರ್ಥ

**ಸಃ**—ಇಂದ್ರನು । **ಅಂಗಿರೋಭಿಃ**—(ವೇಗವಾಗಿ) ಸಂಚರಿಸುವವರಲ್ಲೆಲ್ಲಾ । **ಅಂಗಿರಸ್ತಮಃ**—ಅತ್ಯಂತ ವೇಗವಾಗಿ ಸಂಚರಿಸುವವನಾಗಿ । **ಭೂತ್**—ಆಗಿರುತ್ತಾನೆ । **ವೃಷಭಿಃ**—ಇಷ್ಟಾರ್ಥಗಳನ್ನು ಸುರಿಸುವವರಲ್ಲೆಲ್ಲಾ **ವೃಷಾ**—(ಅತ್ಯಂತ ಉದಾರವಾದ) ಇಷ್ಟಾರ್ಥಪ್ರದನೂ । **ಸಖಿಭಿಃ**—ಸ್ನೇಹಿತರುಗಳಲ್ಲೆಲ್ಲಾ । **ಸಖಾ ಸ್ಸ**— (ಅತ್ಯಂತ ಹಿತಕಾರಿಯಾದ) ಸ್ನೇಹಿತನೂ ಆಗಿ । **ಋಗ್ಮಿಭಿಃ**—ಪೂಜ್ಯರಲ್ಲೆಲ್ಲಾ । **ಋಗ್ಮೀ**—(ಅತ್ಯಂತ ಶ್ರೇಷ್ಠನಾದ) ಪೂಜ್ಯತಮನಾಗಿಯೂ । **ಗಾತುಭಿಃ**— ಸ್ತೋತ್ರಕ್ಕೆ ಅರ್ಹರಾದವರಲ್ಲೆಲ್ಲಾ । **ಜ್ಯೇಷ್ಠಃ** — ಅತ್ಯಂತ ಉತ್ತಮನಾದವನೂ ಆಗಿ । **ಮರುತ್ವಾನ್**—ಮರುತ್ತುಗಳೊಡನೆ ಕೂಡಿಕೊಂಡಿರುವ। **ಇಂದ್ರಃ**—ಇಂದ್ರನು **ನಃ**—ನಮ್ಮ । **ಊತೀ**—ರಕ್ಷಣಾರ್ಥವಾಗಿ । **ಭವತು**—ಆಗಿರಲಿ ॥

ಭಾವಾರ್ಥ

ವೇಗವಾಗಿ ಸಂಚರಿಸುವವರಲ್ಲೆಲ್ಲಾ ಅತ್ಯಂತ ವೇಗವಾಗಿ ಸಂಚರಿಸುವವನೂ, ಇಷ್ಟಾರ್ಥಗಳನ್ನು ಸುರಿಸುವವರಲ್ಲಿ ಅತ್ಯಂತ ಉದಾರಿಯಾದ ಇಷ್ಟಾರ್ಥಪ್ರದನೂ, ಸ್ನೇಹಿತರುಗಳಲ್ಲೆಲ್ಲಾ ಅತ್ಯಂತ ಹಿತಕಾರಿಯಾದ ಸ್ನೇಹಿತನೂ ಪೂಜ್ಯರಲ್ಲೆಲ್ಲಾ ಪೂಜ್ಯತಮನೂ, ಸ್ತೋತ್ರಕ್ಕೆ ಅರ್ಹರಾದವರಲ್ಲೆಲ್ಲಾ ಅತ್ಯಂತ ಉತ್ತಮನಾದವನೂ ಆಗಿ ಮರುತ್ತುಗಳೊಡನೆ ಕೂಡಿಕೊಂಡಿರುವ ಇಂದ್ರನು ನಮ್ಮ ರಕ್ಷಣಾರ್ಥವಾಗಿ ಆಗಿರಲಿ.

English Translation

He is the swiftest among the swift, most bountiful amongst the bountiful, a friend with friends, venerable among those who claim veneration, and pre-eminent among those deserving of praise : may Indra associated with the Maruts, be our protection.

॥ ವಿಶೇಷವಿಷಯಗಳು ॥

**ಅಂಗಿರೋಭಿಃ ಅಂಗಿರಸ್ತಮಃ—ಅಂಗಂತಿ ಗಚ್ಛಂತೀತಿ ಅಂಗಿರಸೋ ಗಂತಾರಃ, ತೇಭ್ಯೋಽಪಿ ಅಂಗಿರಸ್ತಮಃ—ಅತಿಶಯೇನ ಗಂತಾ** । ಸಂಚರಿಸುವವರೆಲ್ಲಾ ಅತ್ಯಂತ ವೇಗವಾಗಿ ಸಂಚರಿಸುವವನು, ಎಂದು ಸಾಯಣರು ಅರ್ಥಮಾಡಿದ್ದಾರೆ. ಈ ರೀತಿ ಅರ್ಥಮಾಡುವುದೂ ಒಂದು ವಿಧದಲ್ಲಿ ಒಪ್ಪುತ್ತದೆ. ಏತಕ್ಕೆಂದರೆ, ಹಿಂದೆ ಇದೇ ಸೂಕ್ತದ ಎರಡನೇ ಋಕ್ಕಿನ ವಿವರಣೆಯಲ್ಲಿ ಇಂದ್ರನ ಸಂಚಾರದ ವೇಗದ ವಿಷಯದಲ್ಲಿ ಪ್ರಶಂಸಾರೂಪವಾದ ಶ್ರುತಿವಾಕ್ಯಗಳನ್ನು ಉದಹರಿಸಿ ಯಾವ ರೀತಿ ಮನೋವೇಗಕ್ಕಿಂತಲೂ ವೇಗವಾದ ಗಮನವುಳ್ಳ ಅಶ್ವಗಳು ಆತನ ರಥವನ್ನು ವಹಿಸಿ ಒಯ್ಯುತ್ತವೆ ಎಂಬುದನ್ನು ತಿಳಿಸಿದೆ. ಇಂದ್ರನ ಅಂತಹ ತೀವ್ರಗತಿಯನ್ನು ವರ್ಣಿಸುವಂತೆ ಮಾಡುವ ಮೇಲಿನ ಅರ್ಥವೂ ಆ ದೃಷ್ಟಿಯಿಂದ ಸಾಧುವಾಗಿದೆ. ಆದರೆ ಸ್ಕಂದಸ್ವಾಮಿಗಳು **ಸ ಇಂದ್ರಃ ಅಂಗಿರೋಭಿಃ ಋಷಿಭಿಃ ಅಂಗಿರಸ್ತಮಃ । ಸೋಽಯಮಿತ್ಯಭಿಸಂಬಂಧಾದಂಗಿರಃಸಂಬಂಧಿನ್ಯಯಮಂಗಿರಃ** ಶಬ್ದೋಽತ್ರ ದ್ರಷ್ಟವ್ಯಃ । ಅತಿಶಯೇನ ಅಂಗಿರಸಾಂ ಸ್ತುತ್ಯತಯಾ ಸಂಬಂಧೀ ಭವತಿ ॥ ಮೊದಲನೆಯ

**ಅಂಗಿರಸ್** ಶಬ್ದಕ್ಕೆ ಅಂಗಿರಾ ಋಷಿಗಳೆಂದೂ, ಎರಡನೆಯ **ಅಂಗಿರಸ್** ಶಬ್ದಕ್ಕೆ ಅವನೇ ಇವನು ಎಂದು ಅತ್ಯಂತ ಸಮೀಪವಾದ ಸಂಬಂಧವನ್ನು ತೋರಿಸುವಾಗ ತಾದಾತ್ಮ್ಯವನ್ನು ಹೇಳುವಂತೆ ಇಲ್ಲಿಯೂ ಸಹ ಅತ್ಯಂತ ಸಾಜಾತ್ಯತೆಯಿರುವುದರಿಂದ ಅಂಗಿರಸ್ಸುಗಳಿಗೆ ಸಮೀಪದ ಸಂಬಂಧಿಯಾಗಿರುತ್ತಾನೆ ಎಂದು ಅರ್ಥವನ್ನು ಮಾಡಿರುತ್ತಾರೆ. ಅಂಗಿರಸ್ ಋಷಿಗಳು ಯಾರು, ಅವರ ಮಹಿಮೆಯೇನು, ಅಗ್ನಿಗೂ ಅಂಗಿರಸ್ಸುಗಳಿಗೂ ಇರುವ ಸಂಬಂಧವೇನು ಎಂಬ ವಿಷಯಗಳನ್ನೆಲ್ಲಾ ಋಗ್ವೇದ ಸಂಹಿತೆಯ ಮೊದಲನೆಯ ಭಾಗದ 641—642 ಪೇಜುಗಳಲ್ಲಿ ವಿವರಿಸಿದೆ. ಆ ವಿವರಣೆಯನ್ನು ಮುಂದುವರಿಸಿ ಇಲ್ಲಿ ಇಂದ್ರನಿಗೂ ಅಂಗಿರಸ್ಸುಗಳಿಗೂ ಇರತಕ್ಕ ಸಂಬಂಧವೇನು ? ಅಥವಾ ಇಂದ್ರನಿಗೆ ಅಂಗಿರಸ್ಸೆಂದೂ ಸಂಬೋಧನೆಯುಂಟೇ ಎಂಬ ವಿಷಯವನ್ನು ತಿಳಿಸಲಾಗುತ್ತೆ.

ಅಂಗಿರಸ್ ಎಂಬುದು ಒಂದು ಅಂಕಿತನಾಮವಾಗಿಯೂ, ಒಂದು ಋಷಿಸಂತತಿಯ ನಾಮಧೇಯವಾಗಿಯೂ ಒಂದು ದೇವತೆಗಳ ಗುಂಪಿಗೆ ಸಂಬಂಧಿಸಿದ ಹೆಸರಾಗಿಯೂ ಮೂರು ಕಡೆಗಳಲ್ಲಿ ಈ ಪದಕ್ಕೆ ಅನ್ವಯವಿದೆ.

ಮೊದಲನೆಯದಾಗಿ, **ಅಂಗಿರಸ್** ಎಂಬ ಅಂಕಿತನಾಮವು ಒಬ್ಬ ವ್ಯಕ್ತಿಯ ಹೆಸರಾಗಿ ಅನೇಕಕಡೆ ಅವನ ಪ್ರಭಾವವನ್ನು ವರ್ಣಿಸಿದೆ. ಉದಾಹರಣೆಗೆ --

**ಅಂಗಿರಸ್ವನ್ಮಹಿವ್ರತ ಪ್ರಸ್ಕಣ್ವಸ್ಯ ಶ್ರುಧೀ ಹವಂ ।**
(ಋ. ಸಂ. ೧-೪೫-೩)

**ತಮು ತ್ವಾ ವಾಜಸಾತಮಮಂಗಿರಸ್ವದ್ಧವಾಮಹೇ ।**
(ಋ. ಸಂ. ೧-೭೮-೩)

ಇತ್ಯಾದಿ ಋಕ್ಸಂಹಿತಾವಾಕ್ಯಗಳಲ್ಲಿ **ಅಂಗಿರಸ್ಸಿನ** ಮಹಿಮೆಯನ್ನು ತೋರಿಸಿ ಅವನಂತೆಯೇ ನಾವೂ ಪ್ರಾರ್ಥಿಸುತ್ತೇವೆ, ನಮ್ಮ ಪ್ರಾರ್ಥನೆಯನ್ನು ಕೇಳು ಎಂಬ ಬೇಡಿಕೆಯಿದೆ. ಇದರಂತೆಯೇ ಉಪನಿಷತ್ತುಗಳಲ್ಲಿಯೂ ಸಹ **ಅಂಗಿರಸ್ಸನು** ಒಬ್ಬ ತತ್ತ್ವಜ್ಞಾನಿಯಾದ ಋಷಿಯೆಂದೂ, ಅವನು **ಶೌನಕನಿಗೆ** ಅಗ್ನಿವಿದ್ಯೆಯನ್ನು ಉಪದೇಶಿಸಿದನೆಂದೂ ಕಥೆಯಿದೆ.

**ಶೌನಕೋ ಹ ವೈ ಮಹಾಶಾಲೋಽಂಗಿರಸಂ ವಿಧಿವದುಪಸನ್ನಃ ಪಪ್ರಚ್ಛ ।**
**ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ ॥**
(ಮುಂಡಕೋಪನಿಷತ್ ೧-೧-೩)

ಆದರೆ ಈ ಅಂಗಿರಸ್ಸೆಂಬ ಮಹಾವ್ಯಕ್ತಿಯಾರು ಎಂಬುದನ್ನು ಮುಂದೆ ವಿವರಿಸಲಾಗುತ್ತೆ.

ಎರಡನೆಯದಾಗಿ, ಇದು ಒಂದು ಋಷಿಸಂತತಿಯ ಹೆಸರು. ಆ ಸಂತತಿಗೆ ಮೂಲಪುರುಷನೇ ಅಗ್ನಿಯು. ಅವನಿಂದಲೇ ಅಂಗಿರಸ್ಸೆಂಬ ಋಷಿಯೂ ಉತ್ಪನ್ನನಾದನು, ಮತ್ತು ಆ ಸಂತತಿಯು ಬೆಳೆಯಿತು ಎಂಬ ಕಥೆಯನ್ನು ಋಕ್ಸಂಹಿತೆಯಲ್ಲಿಯೂ ಸೂಚಿಸಿದೆ.

**ತ್ವಮಗ್ನೇ ಪ್ರಥಮೋ ಅಂಗಿರಾ ಋಷಿರ್ದೇವೋ ದೇವಾನಾಮಭವಃ ಶಿವಃ ಸಖಾ ।**
(ಋ. ಸಂ. ೧-೩೧-೧)

ಈ ಕಥೆಯನ್ನೇ ಶತಪಥಬ್ರಾಹ್ಮಣದಲ್ಲಿಯೂ ವರ್ಣಿಸಿದೆ.

**ಯೇಽಂಗಿರಾ ಆಸಂಸ್ತೇಽಂಗಿರಸೋಽಭವನ್ ।**
( ಐ. ಬ್ರಾ. ೩-೩೪ )

ಇದರಂತೆಯೇ ಇನ್ನು ಕೆಲವು ಕಡೆಗಳಲ್ಲಿ ಅಂಗಿರಸ್ಸೆಂಬ ಋಷಿಗಳು ಗುಹೆಯಲ್ಲಿ ಅಡಗಿದ್ದ ಅಗ್ನಿಯನ್ನು ಹುಡುಕಿ ಅವನನ್ನು ಸಂಪಾದಿಸಿಕೊಂಡರು ಎಂಬ ಕಥೆಯು ಋಕ್ಸಂಹಿತೆಯಲ್ಲಿಯೂ ಬ್ರಾಹ್ಮಣಗಳಲ್ಲಿಯೂ ಹೇಳಲ್ಪಟ್ಟಿದೆ.

**ತ್ವಾಮಗ್ನೇ ಅಂಗಿರಸೋ ಗುಹಾ ಹಿತಮನ್ವವಿಂದಞ್ಛಿಶ್ರಿಯಾಣಂ ವನೇವನೇ ।**
(ಋ. ಸಂ. ೫-೧೧-೬)

ಎಂದು ಋಗ್ವೇದದಲ್ಲಿಯೂ,

**ಸಮಿದ್ಭಿರ್ಹ್ಯೇತಮಂಗಿರಸ ಐಂಧತ ।**
(ಶ. ಬ್ರಾ. ೧-೪-೧-೨೫)

ಎಂದು ಶತಪಥಬ್ರಾಹ್ಮಣದಲ್ಲಿಯೂ ಅಂಗಿರಸ್ಸುಗಳು ಅಗ್ನಿಯನ್ನು ಪಡೆದುದನ್ನೂ ಅವರು ಅಗ್ನಿಯನ್ನು ಪೂಜಿಸಿದುದನ್ನೂ ವರ್ಣಿಸಿದೆ. ಇದರಂತೆಯೇ,

**ಅಂಗಿರಸೋ ನಃ ಪಿತರೋ ನವಗ್ವಾ ಅಥರ್ವಾಣೋ ಭೃಗವಃ ಸೋಮ್ಯಾಸಃ ।**
(ಋ. ಸಂ. ೧೦-೧೪-೬)

ಇತ್ಯಾದಿ ಋಕ್ಕುಗಳಲ್ಲಿಯೂ ಸಹ ಪೂಜ್ಯರಾದ ಅಂಗಿರಸ್ಸುಗಳು ಪ್ರಶಂಸಿಸಲ್ಪಟ್ಟಿದ್ದಾರೆ.

ಇಲ್ಲಿ ನಮಗೆ ಪ್ರಕೃತವಾಗಿ ಇಂದ್ರನಿಗೂ ಅಂಗಿರಸ್ಸುಗಳಿಗೂ ಯಾವ ವಿಧವಾದ ಸಂಬಂಧವಿದೆ, ಅದು ಹೇಗೆ ಬೆಳೆಯಿತು, ಇಂದ್ರನಿಗೆ **ಅಂಗಿರೋಭಿಃ ಅಂಗಿರಸ್ತಮಃ** ಎಂಬ ವಿಶೇಷಣವು ಹೇಗೆ ಎಂಬುದನ್ನು ತಿಳಿಯಬೇಕಾದ ಆವಶ್ಯಕತೆಯಿರುವುದರಿಂದ ಆ ವಿಷಯವನ್ನು ಶ್ರುತ್ಯುದಾಹರಣೆಗಳಿಂದ ಸಂಕ್ಷೇಪವಾಗಿ ವಿವರಿಸಿದೆ. ಹಿಂದೆ ಅಂಗಿರಸ್ಸೆಂಬ ಹೆಸರಿನ ಸಪ್ತರ್ಷಿಗಳು ಪರ್ವತದ ಗುಹೆಯಲ್ಲಿ ಅಡಗಿದ್ದ ಗೋವುಗಳನ್ನು ಅನ್ವೇಷಣಮಾಡುವುದಕ್ಕಾಗಿ ಹೋದುದೂ ಆಗ ಇಂದ್ರನನ್ನು ಭಕ್ತಿಯಿಂದ ಧ್ಯಾನಿಸಿದುದೂ ಆ ಕಾಲದಲ್ಲಿ ಇಂದ್ರನು ಇವರ ಆರಾಧ್ಯದೇವತೆಯಾದುದೂ ಋಕ್ಸಂಹಿತೆಯಲ್ಲಿ ವಿವರಿಸಲ್ಪಟ್ಟಿದೆ.

**ವೀಳೌ ಸತೀರಭಿ ಧೀರಾ ಅತೃಂದನ್ಪ್ರಾಚಾಹಿನ್ವನ್ಮನಸಾ ಸಪ್ತ ವಿಪ್ರಾಃ ।**
**ವಿಶ್ವಾಮವಿಂದನ್ಪಥ್ಯಾಮೃತಸ್ಯ ಪ್ರಜಾನನ್ನಿತ್ತಾ ನಮಸಾ ವಿವೇಶ ।**
**ವಿದದ್ಯದೀ ಸರಮಾ ರುಗ್ಣಮದ್ರೇರ್ಮಹಿ ಪಾಥಃ ಪೂರ್ವ್ಯಂ ಸಧ್ರ್ಯಕ್ಕಃ ।**
**ಅಗ್ರಂ ನಯತ್ಸುಪದ್ಯಕ್ಷರಾಣಾಮಚ್ಛಾ ರವಂ ಪ್ರಥಮಾ ಜಾನತೀ ಗಾತ್ ।**
**ಅಗಚ್ಛದು ವಿಪ್ರತಮಃ ಸಖೀಯನ್ನಸೂದಯತ್ಸುಕೃತೇ ಗರ್ಭಮದ್ರಿಃ ।**
**ಸಸಾನ ಮರ್ಯೋ ಯುವಭಿರ್ಮಖಸ್ಯನ್ನಥಾಭವದಂಗಿರಾಃ ಸದ್ಯೋ ಅರ್ಚನ್ ।**
(ಋ. ಸಂ. ೩-೩೧-೫ ರಿಂದ ೭).

ಎಂದು ವಿವರಿಸಿರುವ ಕಥೆಯಲ್ಲಿ ಇಂದ್ರನು ಅಂಗಿರಸ್ಸುಗಳೊಂದಿಗೆ ಸಖ್ಯವನ್ನು ಬೆಳೆಸಲು ಹೋದುದಾಗಿಯೂ ಆಗ ಅವರ ಸ್ನೇಹವು ಬೆಳೆದುದಾಗಿಯೂ ಅನಂತರ ಇಂದ್ರನೂ ಅಂಗಿರಸ್ಸುಗಳಲ್ಲಿ ಮುಖ್ಯತಮನಾಗಿ ಯುದ್ಧಮಾಡಿದಾಗ

ಪರ್ವತವು ಬಿರಿದು ಗೋವುಗಳೂ ಉದಕಗಳೂ ಮುಕ್ತವಾದವು ಎಂದು ಇಂದ್ರನು ಅಂಗಿರಸ್ಸುಗಳಿಗೆಲ್ಲಾ ಅತ್ಯಂತ ಪೂಜ್ಯನಾದ ಮುಂದಾಳಾಗಿದ್ದುದು ಕಥಾರೂಪದಲ್ಲಿ ವರ್ಣಿಸಿದೆ. ಆದುದರಿಂದ **ಅಂಗಿರೋಭಿಃ ಅಂಗಿರಸ್ತಮಃ** ಎಂಬ ವರ್ಣನೆಯು ಉಚಿತವಾಗಿದೆ.

ಋಗ್ಮಿಭಿ: ಋಗ್ಮೀ—ಅರ್ಚನೀಯೇಭ್ಯೋಽಪಿ ಅರ್ಚನೀಯೋ ಭವತಿ । ಪೂಜ್ಯರಾದವರಲ್ಲೆಲ್ಲಾ ಅತ್ಯಂತ ಶ್ರೇಷ್ಠನಾದ ಪೂಜ್ಯನು ಎಂದರ್ಥ.

। ವ್ಯಾಕರಣಪ್ರಕ್ರಿಯಾ ॥

**ಅಙ್ಗಿರೋಭಿಃ**—ಅಂಗಂತಿ ಗಚ್ಛಂತಿ ಇತಿ ಅಂಗಿರಸಃ. **ಅಗಿ ರಗಿ ಲಗಿ, ಗತ್ಯರ್ಥಾಃ ಅಂಗಿರಾಃ ಅಪ್ಸರಾಃ**—(ಉ ಸೂ ೬೭೫-೬೭೬) ಎಂಬುದರಿಂದ ಇದಕ್ಕೆ ಔಣಾದಿಕವಾದ ಅಸುನ್ ಪ್ರತ್ಯಯವು ನಿಪಾತಿತ ವಾಗಿದೆ. ಅಂಗಿರಸ್ ಶಬ್ದ. ಭಿಸ್ ಪರವಾದಾಗ ಸಕಾರಕ್ಕೆ ರುತ್ವ. ಉತ್ವಗುಣ. ಅಂಗಿರೋಭಿಃ ಎಂದು ರೂಪ ವಾಗುತ್ತದೆ. ಪ್ರತ್ಯಯನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಇದೇ ಮೊದಲಾದ ತೃತೀಯಾಂತ ಶಬ್ದ ಗಳು ಈ ಮಂತ್ರದಲ್ಲಿ ಪಂಚಮ್ಯರ್ಥದಲ್ಲಿ ಪ್ರಯುಕ್ತಗಳಾಗಿವೆ.

**ಅಂಗಿರಸ್ತಮಃ**—ಅತಿಶಯೇನ ಅಂಗಿರಾಃ ಅಂಗಿರಸ್ತಮಃ **ಅತಿಶಾಯನೇ ತಮಬಿಷ್ಠನೌ**—(ಪಾ. ಸೂ. ೫-೩-೫೫) ಎಂಬುದರಿಂದ ಅತಿಶಯಾರ್ಥ ತೋರುವಾಗ ತಮಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತ ವಾಗುತ್ತದೆ.

**ಭೂತ್—ಛಂದಸಿ ಲುಙ್‌ಲಙ್‌ಲಿಟಃ**—(ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್. **ಇತಶ್ಚ**—ಸೂತ್ರದಿಂದ ತಿಪಿನ ಇಕಾರಕ್ಕೆ ಲೋಪ. **ಗಾತಿಸ್ಥಾಘುಪಾಭೂಭ್ಯಃ**—(ಪಾ. ಸೂ. ೨-೪-೭೭) ಎಂಬುದರಿಂದ ಸಿಚಿಗೆ ಲುಕ್. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ**—ಎಂಬುದರಿಂದ ಅಡಾಗಮ ಬರು ವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ವೃಷಾ**—ವೃಷು ಸೇಚನೇ ಧಾತು. ಔಣಾದಿಕ ಕನಿನ್‌ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತ ವಾಗುತ್ತದೆ.

**ಋಗ್ಮಿಭಿಃ**—ಋಚ ಸ್ತುತೌ ಧಾತು. ಸಂಪದಾದಿಯಲ್ಲಿ ಸೇರಿರುವುದರಿಂದ **ಸಂಪದಾದಿಭ್ಯಃ ಕ್ವಿಪ್** (ವಾ. ೩೨೩೩) ಎಂಬುದರಿಂದ ಕ್ವಿಪ್ ಪ್ರತ್ಯಯ. ಋಚ್ ಎಂದು ರೂಪವಾಗುತ್ತದೆ. ಇದಕ್ಕೆ ಮತ್ವರ್ಥದಲ್ಲಿ ಮಿನಿ ಪ್ರತ್ಯಯ. ಪದಸಂಜ್ಞಾ ಇರುವುದರಿಂದ **ಚೋಃ ಕುಃ**—ಎಂಬುದರಿಂದ ಚಕಾರಕ್ಕೆ ಕುತ್ವದಿಂದ ಕಕಾರಾ ದೇಶ. **ಝಲಾಂ ಜಶೋಂತೇ**—ಎಂಬುದರಿಂದ ಜಶ್ತ್ವ. ಋಗ್ಮಿನ್ ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತ. ತೃತೀಯಾ ಏಕವಚನಾಂತರೂಪ.

ಗಾತುಭಿಃ—ಗಾ ಸ್ತುತೌ. ಧಾತು. ಇದಕ್ಕೆ **ಕಮಿಮನಿಜನಿ**—(ಉ. ಸೂ. ೧-೭೩) ಎಂಬುದರಿಂದ ಕರ್ಮಣಿಯಲ್ಲಿ ತು ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ತೃತೀಯಾಏಕವಚ ನಾಂತರೂಪ.

**ಜ್ಯೇಷ್ಠಃ**—ಅತಿಶಯೇನ ಪ್ರಶಸ್ಯಃ ಜ್ಯೇಷ್ಠಃ । **ಅತಿಶಾಯನೇ ತಮಬಿಷ್ಠನೌ**—(ಪಾ. ಸೂ. ೫-೩-೫೫) ಎಂಬುದರಿಂದ ಪ್ರಶಸ್ಯ ಶಬ್ದಕ್ಕೆ ಇಷ್ಠನ್ ಪ್ರತ್ಯಯ. ಇದು ಪರವಾದಾಗ **ಜ್ಯಚ**—(ಪಾ. ಸೂ. ೫-೩-೬೧) ಎಂಬುದರಿಂದ ಪ್ರಶಸ್ಯಶಬ್ದಕ್ಕೆ ಜ್ಯಾದೇಶ. ಅಲೋಪಪ್ರಾಪ್ತವಾದರೆ **ಪ್ರಕೃತ್ಯೈಕಾಚ್**—(ಪಾ. ಸೂ. ೬-೪-೧೬೩) ಎಂಬುದರಿಂದ ಏಕಾಚಾದುದರಿಂದ ಪ್ರಕೃತಿಭಾವ ಬರುತ್ತದೆ. ಗುಣ. ಜ್ಯೇಷ್ಠಃ ಎಂದು ರೂಪವಾಗುತ್ತದೆ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೪ ॥



ಸಂಹಿತಾಪಾಠಃ

ಸ ಸೂನುಭಿರ್ನ ರುದ್ರೇಭಿರ್ಋಭ್ವಾ ನೃಷಾಹ್ಯೇ ಸಾಸಹ್ವಾಁ ಅಮಿ-
ತ್ರಾನ್ ।
ಸನೀಳೇಭಿಃ ಶ್ರವಸ್ಯಾನಿ ತೂರ್ವನ್ಮರುತ್ವಾನ್ನೋ ಭವತ್ವಿಂದ್ರ
ಊತೀ ॥ ೫ ॥

ಪದಪಾಠಃ

ಸಃ । ಸೂನುಽಭಿಃ । ನ । ರುದ್ರೇಭಿಃ । ಋಭ್ವಾ । ನೃಽಸಹ್ಯೇ । ಸಸಹ್ವಾನ್ ।
ಅಮಿತ್ರಾನ್ ।
ಸಽನೀಳೇಭಿಃ । ಶ್ರವಸ್ಯಾನಿ । ತೂರ್ವನ್ । ಮರುತ್ವಾನ್ । ನಃ । ಭವತು ।
ಇಂದ್ರಃ । ಊತೀ ॥ ೫ ॥

॥ ಸಾಯಣಭಾಷ್ಯಂ ॥

ಸೂನುಭಿರ್ನ ಪುತ್ರೈರಿವ ರುದ್ರೇಭೀ ರುದ್ರಪುತ್ರೈರ್ಮರುದ್ಭಿರ್ಯುಕ್ತ ಋಭ್ವಾ ಮಹಾನ್ ಏವಂಭೂತಃ ಸ ಇಂದ್ರೋ ನೃಷಾಹ್ಯೇ ನೃಭಿಃ ಪುರುಷೈಃ ಸೋಢವ್ಯೇ ಸಂಗ್ರಾಮೇಽಮಿತ್ರಾನ್ ಶತ್ರೂನ್ ಸಸಹ್ವಾನಭಿಭೂತವಾನ್ । ಅಪಿ ಚ ಸನೀಳೇಭಿಃ ಸಮಾನನಿಲಯೈರ್ಮರುದ್ಭಿಃ ಸಹ ಶ್ರವಸ್ಯಾನಿ । ಶ್ರವ ಇತ್ಯನ್ನನಾಮ । ತದ್ಧೇತುಭೂತಾನ್ಯುದಕಾನಿ ತೂರ್ವನ್ ಮೇಘಾತ್ಪ್ರಚ್ಯಾವಯನ್ ಮರುತ್ವಾನಿಂದ್ರೋಽಸ್ಮಾಕಂ ರಕ್ಷಣಾಯ ಭವತು ॥ ನೃಷಾಹ್ಯೇ । ಷಹ ಮರ್ಷಣೇ । ಶಕಿಸಹೋಶ್ಚ । ಪಾ. ೩-೧-೯೯ । ಇತಿ ಕರ್ಮಣಿ ಯತ್ । ಅನ್ಯೇಷಾಮಪಿ ದೃಶ್ಯತ ಇತಿ ಸಂಹಿತಾಯಾಂ ಧಾತ್ವಕಾರಸ್ಯ ದೀರ್ಘತ್ವಂ । ಯತೋಽನಾವ ಇತ್ಯಾದ್ಯುದಾತ್ತತ್ವೇ ಕೃದುತ್ತರಪದಪ್ರಕೃತಿಸ್ವರತ್ವಂ । ಸಸಹ್ವಾನ್ । ಷಹ ಅಭಿಭವೇ । ಲಿಟಃ ಕ್ವಸುಃ । ಅಭ್ಯಾಸದೀರ್ಘತ್ವಂ ಛಾಂದಸಂ । ಅಮಿತ್ರಾನ್ । ಮಿತ್ರಾಣ್ಯೇಷು ನ ಸಂತೀತ್ಯಮಿತ್ರಾಃ । ನಞೋ ಜರಮರಮಿತ್ರಮೃತಾ ಇತ್ಯುತ್ತರಪದಾದ್ಯುದಾತ್ತತ್ವಂ । ಸನೀಳೇಭಿಃ । ಸಮಾನಂ ನೀಳಂ ಯೇಷಾಂ ತೇ ಸನೀಳಾಃ । ಸಮಾನಸ್ಯ ಛಂದಸೀತಿ ಸಭಾವಃ ॥

ಪ್ರತಿಪದಾರ್ಥ

**ಸೂನುಭಿರ್ನ**—(ತನ್ನ) ಮಕ್ಕಳೊಡನೆ ಕೂಡಿಕೊಂಡಿರುವಂತೆ । **ರುದ್ರೇಭಿಃ**—ರುದ್ರಪುತ್ರರಾದ ಮರುತ್ತುಗಳೊಡಗೂಡಿ । **ಋಭ್ವಾ**—ಮಹಾತ್ಮನಾದ । **ಸಃ**—ಇಂದ್ರನು । **ನೃಷಾಹ್ಯೇ**—ಮಾನವರಿಂದ ಎದುರಿಸಬೇಕಾದ ಯುದ್ಧದಲ್ಲಿ । **ಅಮಿತ್ರಾನ್**—ಶತ್ರುಗಳನ್ನು । **ಸಸಹ್ವಾನ್**—ಸೋಲಿಸಿದನು (ಮತ್ತು) । **ಸನೀಳೇಭಿಃ** - ತನ್ನ ನಿಲಯದಲ್ಲೇ (ಜೊತೆಯಲ್ಲಿ) ವಾಸಮಾಡುವ ಮರುತ್ತುಗಳೊಡಗೂಡಿ । **ಶ್ರವಸ್ಯಾನಿ**—ಅನ್ನಕ್ಕೆ ಮೂಲ ಕಾರಣವಾದ ನೀರುಗಳನ್ನು । **ತೂರ್ವನ್**—(ಮೇಘಗಳಿಂದ) ಸುರಿಸುತ್ತಾ । **ಮರುತ್ವಾನ್**—ಮರುತ್ತುಗಳೊಡಗೂಡಿರುವ । **ಇಂದ್ರಃ**—ಇಂದ್ರನು । **ನಃ**—ನಮ್ಮ । **ಊತೀ**—ರಕ್ಷಣಾರ್ಥವಾಗಿ । **ಭವತು**—ಆಗಿರಲಿ.

॥ ಭಾವಾರ್ಥ ॥

ತನ್ನ ಮಕ್ಕಳೊಡನೆ ಕೂಡಿಕೊಂಡಿರುವಂತೆ ಅಭಿಮಾನದಿಂದ ರುದ್ರಪುತ್ರರಾದ ಮರುತ್ತುಗಳೊಡಗೂಡಿ ಮಹಾತ್ಮನಾದ ಇಂದ್ರನು ಮಾನವರಿಂದ ಎದುರಿಸಬೇಕಾದ ಯುದ್ಧದಲ್ಲಿ ಶತ್ರುಗಳನ್ನು ಸೋಲಿಸಿ ತನ್ನ ಭಕ್ತರಾದ ಮಾನವರನ್ನು ಕಾಪಾಡಿದನು. ಮತ್ತು ತನ್ನ ನಿಲಯದಲ್ಲಿಯೇ ತನ್ನ ಜೊತೆಯಲ್ಲಿ ವಾಸಮಾಡುವ ಮರುತ್ತುಗಳೊಡಗೂಡಿ ಅನ್ನಕ್ಕೆ ಮೂಲಭೂತವಾದ ನೀರುಗಳನ್ನು ಮೇಘಗಳಿಂದ ಸುರಿಸುತ್ತಾ ಮರುತ್ತುಗಳೊಡಗೂಡಿದ ಆ ಇಂದ್ರನು ನಮ್ಮ ರಕ್ಷಣೆಯನ್ನುಂಟುಮಾಡುವವನಾಗಿರಲಿ.

English Translation

Mighty with the Rudras, as if with his sons, victorious in battle over his enemies, and sending down with his co-dwellers (the waters which are productive of) food : Indra, associated with the Maruts, be our protection.

ವಿಶೇಷವಿಷಯಗಳು

**ರುದ್ರೇಭಿಃ—ರುದ್ರಪುತ್ರೈರ್ಮರುದ್ಭಿಃ ।** ರುದ್ರಪುತ್ರರಾದ ಮರುತ್ತುಗಳೊಡನೆ. ಮರುತ್ತುಗಳು ರುದ್ರಪುತ್ರರೆಂದು ಶ್ರುತಿಪ್ರಸಿದ್ಧವಾಗಿದೆ.

**ರುದ್ರೋ ಯದ್ವೋ ಮರುತೋ ರುಕ್ಮವಕ್ಷಸೋ ವೃಷಾಜನಿ ಪೃಶ್ನ್ಯಾಃ ಶುಕ್ರ ಊಧನಿ ।**
(ಋ. ಸಂ. ೨-೩೪-೨)

ಎಂಬ ಋಕ್ಕಿನಲ್ಲಿ ಹೇಳುವಂತೆ ಮರುತ್ತುಗಳು ರುದ್ರಪುತ್ರರಾಗಿ ಪೃಶ್ನಿಯಲ್ಲಿ ಹುಟ್ಟಿದವರೆಂದು ಪ್ರಸಿದ್ಧವಾದ ಕಥೆಯಿರುವುದರಿಂದ ಇವರನ್ನು ಸಂಬೋಧಿಸುವಾಗಲೆಲ್ಲಾ ಈ ವಿಶೇಷಣವನ್ನೇ ಹೆಚ್ಚಾಗಿ ಉಪಯೋಗಿಸಿದೆ. ಈ ಋಕ್ಕನ್ನು ವಿವರಿಸುವಾಗ ಸಾಯಣಾಚಾರ್ಯರು ಇನ್ನೊಂದು ಕಥೆಯನ್ನೂ ಹೇಳುತ್ತಾರೆ.

**ಪೃಶ್ನಿರ್ನಾನಾವರ್ಣಾ ಇಯಂ ಭೂಮಿಃ ಪುರಾ ಗೋರೂಪಧರಾಸೀತ್ । ತಸ್ಯಾಂ ಮಹೇಶೋ ವೃಷೋ ಭೂತ್ವಾ ಮರುತ ಉತ್ಪಾದಯಾಮಾಸೇತ್ಯಾಚಕ್ಷತೇ ।**
(ಸಾಯಣಭಾಷ್ಯ ಋ. ಸಂ. ೨-೩೪-೨)

ನಾನಾವರ್ಣವುಳ್ಳ ಪೃಥ್ವಿಯು ಹಿಂದೆ ಗೋರೂಪವನ್ನು ಧರಿಸಿದ್ದಾಗ ಮಹೇಶನು ಎತ್ತಿನ ರೂಪದಿಂದ ಮರುತ್ತುಗಳನ್ನು ಉತ್ಪನ್ನಮಾಡಿದನು ಎಂಬ ಕಥೆಯಿದೆ ಎಂದು ಸಾಯಣರು ರುದ್ರನ ಮತ್ತು ಮರುತ್ತುಗಳ ಪಿತಾಪುತ್ರ ಸಂಬಂಧವನ್ನು ತಿಳಿಸಿದ್ದಾರೆ. ಮತ್ತು, ಮೇಲಿನ ೨-೩೪-೨ ನೇ ಋಕ್ಕಿನಲ್ಲಿ ಹೇಳಿರುವ ಕಥೆಯು ತೈತ್ತಿರೀಯ ಸಂಹಿತೆಯಲ್ಲಿಯೂ ಉಕ್ತವಾಗಿರುವುದರಿಂದ ಅಲ್ಲಿನ ವಾಕ್ಯವನ್ನೂ ಉದಹರಿಸಿದ್ದಾರೆ.

**ಪೃಶ್ನಿಯೈ ವೈ ಪಯಸೋ ಮರುತೋ ಜಾತಾಃ ।**
(ತೈ. ಸಂ. ೨-೨-೧೧-೪).

ಆದುದರಿಂದಲೇ ಅನೇಕ ಕಡೆಗಳಲ್ಲಿ ಮರುತ್ತುಗಳಿಗೆ ರುದ್ರಪುತ್ರರೆಂದೇ ಸಂಬೋಧನೆಯಿದೆ. ಉದಾಹರಣೆಗೆ—

**ಪ್ರ ಯೇ ಶುಂಭಂತೇ ಜನಯೋ ನ ಸಪ್ತಯೋ ಯಾಮನ್ರುದ್ರಸ್ಯ ಸೂನವಃ ಸುದಂಸಸಃ ।**
(ಋ. ಸಂ. ೧-೮೫-೧).

**ಇದಂ ಪಿತ್ರೇ ಮರುತಾಮುಚ್ಯತೇ ವಚಃ ಸ್ವಾದೋಃ ಸ್ವಾದೀಯೋ ರುದ್ರಾಯ ವರ್ಧನಂ ।**
**ರಾಸ್ವಾ ಚ ನೋ ಅಮೃತ ಮರ್ತಭೋಜನಂ ತ್ಮನೇ ತೋಕಾಯ ತನಯಾಯ ಮೃಳ ।**
(ಋ. ಸಂ. ೧-೧೧೪-೬)

ಎಂಬ ಋಕ್ಕುಗಳಲ್ಲಿಯೂ ಹೀಗೆಯೇ, ೧-೧೬೮-೯ ; ೨-೩೩-೧ ; ಮುಂತಾದ ಅನೇಕಕಡೆಗಳಲ್ಲಿಯೂ ಮರುತ್ತುಗಳಿಗೆ ರುದ್ರಪುತ್ರರೆಂಬ ವಿಶೇಷಣವಿದೆ. ಮೇಲೆ ಉದಹರಿಸಿರುವ ೧-೧೧೪-೬ ನೇ ಋಕ್ಕನ್ನು ವಿವರಿಸುವಾಗ ಸಾಯಣರು ಇನ್ನೊಂದು ಕಥೆಯನ್ನು ಹೇಳಿದ್ದಾರೆ.

**ರುದ್ರಸ್ಯ ಚ ಮರುತಾಂ ಪಿತೃತ್ವಮೇವಮಾಖ್ಯಾಯತೇ । ಪುರಾ ಕದಾಚಿದಿಂದ್ರೋಽಸುರಾನ್ ಜಿಗಾಯ । ತದಾನೀಂ ದಿತಿರಸುರಮಾತಾ ಇಂದ್ರಹನನಸಮರ್ಥಂ ಪುತ್ರಂ ಕಾಮಯ-**

ಮಾನಾ ತಪಸಾ ಭರ್ತುಃ ಸಕಾಶಾದ್ಗರ್ಭಂ ಲೇಭೇ। ಇಮಂ ವೃತ್ತಾಂತಮವಗಚ್ಛನ್ನಿಂದ್ರೋ ವಜ್ರಹಸ್ತಃ ಸನ್ ಸೂಕ್ಷ್ಮರೂಪೋ ಭೂತ್ವಾ ತಸ್ಯಾ ಉದರಂ ಪ್ರವಿಶ್ಯ ತಂ ಗರ್ಭಂ ಸಪ್ತಧಾ ಬಿಭೇದ। ಪುನರಪ್ಯೇಕೈಕಂ ಸಪ್ತಖಂಡಮಕರೋತ್। ತೇ ಸರ್ವೇ ಗರ್ಭೈಕದೇಶಾಯೋನೇರ್ನಿರ್ಗತ್ಯ ಅರುದನ್। ಏತಸ್ಮಿನವಸರೇ ಲೀಲಾರ್ಥಂ ಗಚ್ಛಂತೌ ಪಾರ್ವತೀಪರಮೇಶ್ವರೌ ಇಮಾನ್ ದದೃಶತುಃ। ಮಹೇಶಂ ಪ್ರತಿ ಪಾರ್ವತೀ ಏವಮುವೋಚತ್। ಇಮೇ ಮಾಂಸಖಂಡಾ ಯಥಾ ಪ್ರತ್ಯೇಕಂ ಪುತ್ರಾಃ ಸಂಪದ್ಯಂತಾಮೇವಂ ತ್ವಯಾ ಕಾರ್ಯಂ ಮಯಿಚೇತ್ಪ್ರೀತಿರಸ್ತೀತಿ। ಸ ಚ ಮಹೇಶ್ವರಸ್ತಾನ್ ಸಮಾನರೂಪಾನ್ ಸಮಾನವಯಸಃ ಸಮಾನಾಲಂಕಾರಾನ್ ಪುತ್ರಾನ್ ಕೃತ್ವಾ ಗೌರ್ಯೈ ಪ್ರದದೌ ತವೇಮೇ ಪುತ್ರಾಃ ಸಂತ್ವಿತಿ। ಅತಃ ಸರ್ವೇಷು ಮಾರುತೇಷು ಸೂಕ್ತೇಷು ಮರುತೋ ರುದ್ರಪುತ್ರಾ ಇತಿ ಸ್ತೂಯಂತೇ। ರೌದ್ರೇಷು ಚ ಮರುತಾಂ ಪಿತಾ ರುದ್ರ ಇತಿ।

(ಸಾಯಣಭಾಷ್ಯ ಋ. ಸಂ. ೧-೧೧೪-೬)

ಪೂರ್ವದಲ್ಲಿ ಒಂದುಸಲ ಇಂದ್ರನು ಅಸುರರನ್ನು ಜಯಿಸಿದನು. ಆಗ ಅಸುರಮಾತೆಯಾದ ದಿತಿಯು ಇಂದ್ರನನ್ನು ಕೊಲ್ಲಲು ಸಮರ್ಥನಾದ ಒಬ್ಬ ಪುತ್ರನನ್ನು ಪಡೆಯಬೇಕೆಂಬ ಆಸೆಯಿಂದ ತಪಸ್ಸನ್ನಾಚರಿಸಿ ತನ್ನ ಪತಿಯ ಅನುಗ್ರಹದಿಂದ ಗರ್ಭವನ್ನು ಹೊಂದಿದಳು. ಇಂದ್ರನು ಈ ಸಮಾಚಾರವನ್ನು ತಿಳಿದು ವಜ್ರಾಯುಧವನ್ನು ಹಿಡಿದು ಕೊಂಡು ಸೂಕ್ಷ್ಮರೂಪಿಯಾಗಿ ಬಂದು ಅವಳ ಹೊಟ್ಟೆಯನ್ನು ಪ್ರವೇಶಿಸಿ ಆ ಗರ್ಭವನ್ನು ಏಳುಭಾಗವಾಗಿ ಸೀಳಿದನು. ಪುನಃ ಏಳೇಳು ತುಂಡುಗಳನ್ನಾಗಿ ಮಾಡಿದನು. ಆಗ ಅವೆಲ್ಲವೂ ಹೊರಕ್ಕೆ ಬಂದು ಅಳುತ್ತಿದ್ದವು. ಆಗ ಲೀಲಾರ್ಥವಾಗಿ ಪಾರ್ವತೀ ಪರಮೇಶ್ವರರಿಬ್ಬರೂ ಸಂಚರಿಸುತ್ತಿದ್ದಾಗ ಇವನ್ನು ನೋಡಿ, ಪಾರ್ವತಿಯು ಮರುಕಗೊಂಡು ಮಹೇಶ್ವರನನ್ನು ಕುರಿತು ಅವೆಲ್ಲವನ್ನೂ ಮಕ್ಕಳನ್ನಾಗಿ ಪರಿವರ್ತಿಸಬೇಕೆಂದು ಬೇಡಿದಳು. ಆಗ ಈಶ್ವರನು ಅವೆಲ್ಲವನ್ನೂ ಒಂದೇ ರೂಪವುಳ್ಳವರನ್ನಾಗಿಯೂ, ಒಂದೇ ವಯಸ್ಸಿನವರನ್ನಾಗಿಯೂ, ಒಂದೇ ಅಲಂಕಾರವುಳ್ಳವರನ್ನಾಗಿಯೂ ಮಾಡಿ ಪುತ್ರರೂಪರಾದ ಅವರನ್ನು ಇವು ನಿನ್ನ ಪುತ್ರರಾಗಿರಲಿ ಎಂದು ಗೌರಿಗೆ ಕೊಟ್ಟನು. ಆದುದರಿಂದ ಮರುತ್ಸೂಕ್ತಗಳಲ್ಲೆಲ್ಲಾ ಮರುತ್ತುಗಳಿಗೆ ರುದ್ರಪುತ್ರರೆಂದೂ, ರುದ್ರಸೂಕ್ತಗಳಲ್ಲಿ ರುದ್ರನಿಗೆ ಮರುತ್ತುಗಳ ಪಿತೃವೆಂದೂ ಹೇಳುವ ಕ್ರಮವಿದೆಯೆಂದು ಸಾಯಣರು ಈ ಕಥೆಯನ್ನು ಹೇಳಿರುತ್ತಾರೆ.

ಸೂನುಭಿರ್ನ—ತನ್ನ ಮಕ್ಕಳೊಡನೆ ಕೂಡಿಕೊಂಡಿರುವಂತೆ, ಎಂದು ಇಂದ್ರನಿಗೂ ಮರುತ್ತುಗಳಿಗೂ ಇರುವ ಪ್ರೇಮವನ್ನು ಸೂಚಿಸಿದೆ. ಇಂದ್ರನಿಗೂ ಮರುತ್ತುಗಳಿಗೂ ಇರುವ ನಿಯತವಾದ ಸಾಹಚರ್ಯದ ಸ್ವರೂಪವನ್ನು ಈ ಸೂಕ್ತದ ಮೊದಲನೇ ಋಕ್ಕಿನ ವಿವರಣೆಯಲ್ಲಿ ವಿಶದವಾಗಿ ಹೇಳಿದೆ.

ಋಭ್ವಾ—ಋಭ್ವ ಶಬ್ದಕ್ಕೆ ನಿರುಕ್ತಕಾರರು ಉರುಭೂತಂ ಮಹತ್ತಾದ ಸ್ವರೂಪವುಳ್ಳ ಎಂದು ಋ. ಸಂ. ೧೦-೧೩೦-೬ ನೇ ಋಕ್ಕನ್ನು ವಿವರಿಸುವಾಗ ಹೇಳಿರುವಂತೆ (ನಿ. ೧೧-೨೧) ಸಾಯಣರೂ ಸಹ ಮಹಾನ್ ಎಂದು ಅರ್ಥಮಾಡಿದ್ದಾರೆ. ಮಹಾನ್ ಆದ ಇಂದ್ರನೆಂದರ್ಥ. ಅತ್ಯಂತ ಪ್ರಕಾಶಮಾನನಾದ ಎಂಬರ್ಥವನ್ನು ಕೊಡುವಾಗಲೂ ಈ ಪದವು ಉಪಯೋಗಿಸಲ್ಪಟ್ಟಿದೆ. ಉದಾಹರಣೆಗೆ—

**ದಕ್ಷಂ ಮಹೇ ಪಾಯಯತೇ ಹಿರಣ್ಯಯಂ ರಥಮಾವೃತ್ಯಾ ಹರಿಯೋಗಮೃಭ್ವಸಂ ।**

(ಋ ಸಂ. ೧-೫೬-೧)

ಇತ್ಯಾದಿ ಸನ್ನಿವೇಶಗಳಲ್ಲಿ **ಋಭ್ವಸಂ** ಎಂಬ ಪದಕ್ಕೆ **ಉರುಭಾಸಮಾನಂ** ಅತ್ಯಧಿಕವಾಗಿ ಪ್ರಕಾಶಿಸುವವನು ಎಂದರ್ಥ. ಒಟ್ಟಿನಲ್ಲಿ ಮಹಾತ್ಮನು ಎಂದೇ ತಾತ್ಪರ್ಯ.

**ನೃಷಾಹ್ಯೇ—ಪುರುಷೈಃ ಸೋಢವ್ಯೇ ಸಂಗ್ರಾಮೇ ।** ಪುರುಷರು ಶತ್ರುಗಳ ಏಟುಗಳನ್ನು ತಡೆದುಕೊಳ್ಳುವ ಶಕ್ತಿಯನ್ನು ಪ್ರದರ್ಶಿಸುವ ಯುದ್ಧದಲ್ಲಿ.

**ಸನೀಳೇಭಿಃ—ಗಯಃ, ಕೃದರಃ, ಗರ್ತಃ** ಇತ್ಯಾದಿ ೨೨ ಗೃಹನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) **ನೀಳ** ಶಬ್ದಕ್ಕೆ ಗೃಹವೆಂದು ಅರ್ಥ. ಮರುತ್ತುಗಳು ಯಾವಾಗಲೂ ಒಟ್ಟಿಗೆ ವಾಸಮಾಡುವುದರಿಂದ ಒಂದೇ ನಿಲಯವುಳ್ಳವರೆಂದು ಅಭಿಪ್ರಾಯ. ಮರುತ್ತುಗಳನ್ನು ಉದ್ದೇಶಿಸುವಾಗ ಈ ವಿಶೇಷಣವು ಸಾಧಾರಣವಾಗಿ ಉಪಯೋಗಿಸಲ್ಪಟ್ಟಿದೆ. ಉದಾಹರಣೆಗೆ—

**ಕಯಾ ಶುಭಾ ಸವಯಸಃ ಸನೀಳಾಃ ಸಮಾನ್ಯಾ ಮರುತಃ ಸಂ ಮಿಮಿಕ್ಷುಃ ।**

(ಋ. ಸಂ. ೧-೧೬೫-೧)

**ಕ ಈಂ ವ್ಯಕ್ತಾ ನರಃ ಸನೀಳಾ ರುದ್ರಸ್ಯ ಮರ್ಯಾ ಅಧಾ ಸ್ವಶ್ವಾಃ ।**

(ಋ. ಸಂ. ೭-೫೬-೧)

ಇತ್ಯಾದಿ ಋಕ್ಕುಗಳಲ್ಲೆಲ್ಲಾ **ಸನೀಳಾಃ** ಎಂದು ಮರುತ್ತುಗಳ ಏಕನಿಲಯದ ವಾಸವನ್ನು ವರ್ಣಿಸಿದೆ. **ಸನೀಳೇಭಿಃ** ಎಂದರೆ ಒಂದೇ ನಿಲಯದಲ್ಲಿ ವಾಸಿಸುವ ಮರುತ್ತುಗಳೊಡನೆ ಎಂದರ್ಥ.

**ಶ್ರವಸ್ಯಾನಿ—ಶ್ರವ ಇತ್ಯನ್ನನಾಮ । ತದ್ಧೇತುಭೂತಾನ್ಯುದಕಾನಿ ।** ಅನ್ನಕ್ಕೆ ಕಾರಣವಾದುದೂ ವೃಷ್ಟಿರೂಪವಾದುದೂ ಆದ ಉದಕಗಳೆಂದರ್ಥ.

**ತೂರ್ವನ್—ಮೇಘಾತ್ ಪ್ರಚ್ಯಾವಯನ್ ।** ಮೇಘದಿಂದ ಉದಕವನ್ನು ಸುರಿಸುತ್ತಾ ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ರುದ್ರೇಭಿಃ**—ರುದ್ರ+ಭಿಸ್ ಎಂದಿರುವಾಗ **ಬಹುಲಂ ಛಂದಸಿ**—(ಪಾ. ಸೂ. ೭-೧-೧೦) ಎಂಬುದರಿಂದ ಭಿಸಿಗೆ ಐಸಾದೇಶ ಬರುವುದಿಲ್ಲ. **ಬಹುವಚನೇ ಝಲ್ಯೇತ್**—ಎಂಬುದರಿಂದ ಏತ್ವ. ಸಕಾರಕ್ಕೆ ರುತ್ವವಿಸರ್ಗ.

**ನೃಷಾಹ್ಯೇ**—ಷಹ ಮರ್ಷಣೇ ಧಾತು. **ಧಾತ್ವಾದೇಃ ಷಃ ಸಃ**—(ಪಾ. ಸೂ. ೬-೧-೬೪) ಎಂಬುದರಿಂದ ಆದಿಗೆ ಸತ್ವ. **ಶಕಿಸಹೋಶ್ಚ**—(ಪಾ. ಸೂ. ೩-೧-೯೯) ಎಂಬುದರಿಂದ ಕರ್ಮಣಿಯಲ್ಲಿ ಯತ್ ಪ್ರತ್ಯಯ. **ಅನ್ಯೇಷಾಮಪಿ ದೃಶ್ಯತೇ**—(ಪಾ. ಸೂ. ೬-೩-೧೩೭) ಎಂಬುದರಿಂದ ಯತ್ ಪರವಾದಾಗ ಧಾತುವಿನ ಅಕಾರಕ್ಕೆ ಸಂಹಿತಾದಲ್ಲಿ ದೀರ್ಘ ಬರುತ್ತದೆ. ನೃಭಿಃ ಸಾಹ್ಯಃ ನೃಷಾಹ್ಯಃ **ಯತೋನಾವಃ**—(ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಪ್ರಾಪ್ತವಾದರೆ **ಗತಿಕಾರಕೋಪಪದಾತ್ಕೃತ್**—(ಪಾ. ಸೂ. ೬-೧-೧೩೯) ಎಂಬುದರಿಂದ ಕಾರಕಪೂರ್ವಪದವಾಗಿರುವುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ.

**ಸಾಸಹ್ವಾನ್**—ಷಹ ಅಭಿಭವೇ ಧಾತು. **ಕ್ವಸುಶ್ಚ**—(ಪಾ. ಸೂ. ೩-೨-೧೦೭) ಎಂಬುದರಿಂದ ಲಿಟಿಗೆ ಕ್ವಸು ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್‌ಶೇಷ. ಛಾಂದಸವಾಗಿ ಧಾತುವಿನ ಅಭ್ಯಾಸಕ್ಕೆ ದೀರ್ಘ. ಸಾಸಹ್ವಸ್ ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಥಮಾ ಸು ಪರವಾದಾಗ **ಅತ್ವಸಂತಸ್ಯ**—ಎಂಬುದರಿಂದ ಉಪಧಾದೀರ್ಘ. ಪ್ರತ್ಯಯದಲ್ಲಿ ಉಗಿತ್ತಾದುದರಿಂದ **ಉಗಿದಚಾಂ ಸರ್ವನಾಮಸ್ಥಾನೇಚಾಽಧಾತೋಃ**— ಎಂಬುದರಿಂದ ನುಮಾಗಮ. ಸಂಯೋಗಾಂತಲೋಪ ಅಸಿದ್ಧವಾದುದರಿಂದ ನಲೋಪ ಬರುವುದಿಲ್ಲ

**ಅಮಿತ್ರಾನ್**—ಮಿತ್ರಾಣಿ ಏಷು ನ ಸಂತಿ ಇತಿ ಅಮಿತ್ರಾಃ **ನಞೋ ಜರಮರ ಮಿತ್ರಮೃತಾಃ**—(ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಸನೀಳೇಭಿಃ**—ಸಮಾನಂ ನೀಳಂ ಯೇಷಾಂ ತೇ ಸನೀಳಾಃ **ಸಮಾನಸ್ಯಚ್ಛಂದಸಿ**—(ಪಾ. ಸೂ. ೬-೩-೮೪) ಎಂಬುದರಿಂದ ಸಮಾನ ಎಂಬುದಕ್ಕೆ ಸಭಾವ ಬರುತ್ತದೆ. **ಬಹುಲಂ ಛಂದಸಿ**—(ಪಾ. ಸೂ. ೭-೧-೧೦) ಎಂಬುದರಿಂದ ಭಿಸಿಗೆ ಐಸ್‌ಭಾವ ಬರುವುದಿಲ್ಲ. ಏತ್ವ ಬರುತ್ತದೆ.

**ತೂರ್ವನ್**—ತುರ್ವೀ ಹಿಂಸಾರ್ಥಃ ಧಾತು. ಭ್ವಾದಿ. ಇದಕ್ಕೆ ಲಡರ್ಥದಲ್ಲಿ ಶತೃಪ್ರತ್ಯಯ. ರೇಫಾಂತವಾದುದರಿಂದ ಉಪಧಾದೀರ್ಘ. ಶಪ್ ವಿಕರಣ. **ಅತೋಗುಣೇ**—ಎಂಬುದರಿಂದ ಪರರೂಪ. ತೂರ್ವತ್ ಶಬ್ದವಾಗುತ್ತದೆ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಪ್ರಥಮಾ ಏಕವಚನದಲ್ಲಿ ಸುಪರವಾದಾಗ ಉಗಿತ್ತಾದುದರಿಂದ ನುಮಾಗಮ. ಹಿಂದಿನಂತೆ ತಲೋಪ ಅಸಿದ್ಧವಾದುದರಿಂದ ನಲೋಪ ಬರುವುದಿಲ್ಲ. ತೂರ್ವನ್ ಎಂದು ರೂಪವಾಗುತ್ತದೆ. ॥ ೫ ॥

———:o:———

॥ ಸಂಹಿತಾಪಾಠಃ ॥

ಸ ಮನ್ಯುಮೀಃ ಸಮದನಸ್ಯ ಕರ್ತಾಸ್ಮಾಕೇಭಿರ್ನೃಭಿಃ ಸೂರ್ಯಂ
ಸನತ್ ।
ಅಸ್ಮಿನ್ನಹನ್ತ್ಸತ್ಪತಿಃ ಪುರುಹೂತೋ ಮರುತ್ವಾನ್ನೋ ಭವತ್ವಿಂದ್ರ
ಊತೀ ॥ ೬ ॥

ಪದಪಾಠಃ

ಸಃ । ಮನ್ಯುಽಮೀಃ । ಸಽಮದನಸ್ಯ । ಕರ್ತಾ । ಅಸ್ಮಾಕೇಭಿಃ । ನೃಽಭಿಃ ।
ಸೂರ್ಯಂ । ಸನತ್ ।

ಅಸ್ಮಿನ್ । ಅಹನ್ । ಸತ್ಽಪತಿಃ । ಪುರುಽಹೂತಃ । ಮರುತ್ವಾನ್ । ನಃ । ಭವ-
ತು । ಇಂದ್ರಃ । ಊತೀ ॥ ೬ ॥

॥ ಸಾಯಣಭಾಷ್ಯಂ ॥

ಶತ್ರುಭಿರಪಹೃತಾಸು ಗೋಷು ತೈಃ ಸಹ ಯುದ್ಧಾರ್ಥಂ ವಿನಿರ್ಗತಾ ಋಜ್ರಾಶ್ವಾದಯೋಽನೇನ ಸೂಕ್ತೇನೇಂದ್ರಮಸ್ತುವನ್ । ಸ ಇಂದ್ರೋ ಮನ್ಯುಮೀರ್ಮನ್ಯೋಃ ಕೋಪಸ್ಯ ನಿರ್ಮಾತಾ । ಯದ್ವಾ । ಅಭಿಮನ್ಯಮಾನಸ್ಯ ಶತ್ರೋರ್ಹಿಂಸಕಃ । ಅಪಿ ಚ ಸಮದನಸ್ಯ ಸಂಗ್ರಾಮಸ್ಯ ಕರ್ತಾ । ಸತ್ಪತಿಃ ಸತಾಂ ಪಾಲಯಿತಾ । ಪುರುಹೂತೋ ಬಹುಭಿರ್ಯಜಮಾನೈರಾಹೂತಃ ಏವಂಗುಣವಿಶಿಷ್ಟಃ ಸ ಅಸ್ಮಿನ್ನಹನ್ ಅಸ್ಮಿನ್ದಿವಸೇಽಸ್ಮಾಕೇಭಿರಸ್ಮಾಕೈರಸ್ಮದೀಯೈರ್ನೃಭಿಃ ಪುರುಷೈಃ ಸೂರ್ಯಂ ಸೂರ್ಯಪ್ರಕಾಶಂ ಸನತ್ ಸಂಭಕ್ತಂ ಕರೋತು । ಶತ್ರುಪುರುಷೈಸ್ತು ದೃಷ್ಟಿನಿರೋಧಕಮಂಧಕಾರಂ ಸಂಯೋಜಯತು । ಸ ಚ ಮರುತ್ವಾನಿಂದ್ರೋಽಸ್ಮಾಕಂ ರಕ್ಷಣಾಯ ಭವತು ॥ ಮನ್ಯುಮೀಃ । ಮನ್ಯುಂ ಮಿನಾತೀತಿ ಮನ್ಯುಮೀಃ । ಮೀಞ್ ಹಿಂಸಾಯಾಂ । ಕ್ವಿಪ್ । ಸಮದನಸ್ಯ । ಸಹ ಮಾದ್ಯಂತ್ಯಸ್ಮಿನ್ನಿತಿ ಸಮದನಃ ಸಂಗ್ರಾಮಃ । ಮದೀ ಹರ್ಷೇ । ಅಧಿಕರಣೇ ಲ್ಯುಟ್ । ಸಹಸ್ಯ ಸಃ ಸಂಜ್ಞಾಯಾಂ । ಪಾ. ೬-೩-೭೮ । ಇತಿ ಸಭಾವಃ । ಅಸ್ಮಾ-ಕೇಭಿಃ । ತಸ್ಮಿನ್ನಣಿ ಚ ಯುಷ್ಮಾಕಾಸ್ಮಾಕಾವಿತ್ಯಣ್ಯಸ್ಮಚ್ಛಬ್ದಸ್ಯಾಸ್ಮಾಕಾದೇಶಃ । ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದ್ವೃದ್ಧ್ಯಭಾವಃ । ಬಹುಲಂ ಛಂದಸೀತಿ ಭಿಸ ಐಸಭಾವಃ । ಸ್ವಸಸ್ತು ಪ್ರಾಸ್ಮಾಕಾಸಶ್ಚ ಸೂರಯಃ । ಋ. ೧-೯೭-೩ । ಇತ್ಯತ್ರೋಕ್ತಃ । ಸನತ್ । ವನ ಷಣ ಸಂಭಕ್ತೌ । ಲೇಟ್ಯಡಾಗಮಃ । ಅಹನ್ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ ಸತ್ಪತಿಃ । ಪತ್ಯಾವೈಶ್ವರ್ಯ ಇತಿ ಪೂರ್ವಪದಪ್ರಕೃತಿ-ಸ್ವರತ್ವಂ ॥

। ಪ್ರತಿಪದಾರ್ಥ ।

ಮನ್ಯುಮೀಃ—ಕ್ರೋಧವನ್ನು ಪ್ರಕಟಿಸುವವನೂ ಅಥವಾ ಕ್ರುದ್ಧನಾದ ಶತ್ರುವನ್ನು ಹಿಂಸಿಸುವವನೂ । **ಸಮದನಸ್ಯ**—ಯುದ್ಧದ । **ಕರ್ತಾ**—ನಿರ್ಮಾಪಕನೂ । **ಸತ್ಪತಿಃ**—ಸಜ್ಜನರ ಪಾಲಕನೂ । **ಪುರುಹೂತಃ**-ಅನೇಕ ಯಜ್ಞಕರ್ತರಿಂದ (ಸಹಾಯಕ್ಕಾಗಿ) ಕರೆಯಲ್ಪಡುವವನೂ, ಆದ । ಸಃ—ಇಂದ್ರನು । **ಅಸ್ಮಿನ್ ಅಹನ್**-ಈದಿನ ಅಪಸ್ಸಿನಲ್ಲಿ । **ಅಸ್ಮಾಕೇಭಿಃ ನೃಭಿಃ**—ನಮ್ಮ ಸಂಬಂಧಿಗಳಾದ ಪುರುಷರೊಡನೆ । **ಸೂರ್ಯಂ**—ಸೂರ್ಯನ

(ಪ್ರಕಾಶವ)ನ್ನು । **ಸನತ್**—ಸೇರಿಸಲಿ. (ನಮಗೆ ಬೆಳಕನ್ನು ಕೊಟ್ಟು ಶತ್ರುಗಳ ಭಾಗಕ್ಕೆ ಕತ್ತಲನ್ನುಂಟುಮಾಡಲಿ) । **ಮರುತ್ವಾನ್**—ಮರುತ್ತುಗಳೊಡನೆ ಕೂಡಿಕೊಂಡು । **ಇಂದ್ರಃ**—ಇಂದ್ರನು । **ನಃ**—ನಮ್ಮ । **ಊತೀ**—ರಕ್ಷಣಾರ್ಥವಾಗಿ । **ಭವತು**—ಆಗಿರಲಿ. ।

॥ ಭಾವಾರ್ಥ ॥

ತೀವ್ರವಾದ ಕ್ರೋಧವನ್ನು ಪ್ರಕಟಿಸಿ ಶತ್ರುವನ್ನು ಹಿಂಸಿಸುವವನೂ, ಯುದ್ಧದ ನಿರ್ಮಾಪಕನೂ, ಸಜ್ಜನರ ಪಾಲಕನೂ, ಅನೇಕ ಯಜ್ಞಕರ್ತರಿಂದ ಸಹಾಯಕ್ಕಾಗಿ ಕರೆಯಲ್ಪಡುವವನೂ ಆದ ಇಂದ್ರನು ಈ ದಿನ ನಮಗೆ ಸೇರಿದ ಎಲ್ಲರಿಗೂ ಸೂರ್ಯನ ಪ್ರಕಾಶವನ್ನು ಕೊಟ್ಟು ನಮ್ಮ ಶತ್ರುಗಳ ಭಾಗಕ್ಕೆ ಕತ್ತಲನ್ನುಂಟುಮಾಡಲಿ ಮರುತ್ತುಗಳೊಡನೆ ಕೂಡಿಕೊಂಡು ಆ ಇಂದ್ರನು ನಮ್ಮ ರಕ್ಷಣಾರ್ಥವಾಗಿ ಇರಲಿ.

English Translation

May he, the represser of (hostile) wrath, the author of war, the protector of the good, the invoked of many, share with our people on this day the (light of the) sun : may Indra, associated with the Maruts, be our protection.

ವಿಶೇಷವಿಷಯಗಳು

**ಮನ್ಯುಮೀಃ— ಮನ್ಯುರ್ಮನ್ಯತೇರ್ದೀಪ್ತಿಕರ್ಮಣಃ ಕ್ರೋಧಕರ್ಮಣೋ ವಧಕರ್ಮಣೋ ವಾ** । (ನಿ. ೧೦-೨೯) **ಮನ್** ಧಾತುವಿನಿಂದ ನಿಷ್ಪನ್ನವಾದ **ಮನ್ಯು** ಶಬ್ದಕ್ಕೆ ಪ್ರಕಾಶಿಸು, ಕೋಪಮಾಡು, ಅಥವಾ ವಧಮಾಡು ಎಂಬ ಅರ್ಥಗಳಾಗುತ್ತವೆ. **ಮನ್ಯುಮೀಃ** ಎನ್ನುವುದಕ್ಕೆ **ಮನೋಃ ಕೋಪಸ್ಯ ನಿರ್ಮಾತಾ ಅಭಿಮನ್ಯಮಾನಸ್ಯ ಶತ್ರೋರ್ಹಿಂಸಕಃ** । ಕ್ರೋಧವನ್ನು ಪ್ರಕಟಿಸುವವನು ಅಥವಾ ಕ್ರುದ್ಧನಾದ ಶತ್ರುವನ್ನು ನಾಶಮಾಡುವವನು ಎಂದು ಸಾಯಣರು ಅರ್ಥಮಾಡುತ್ತಾರೆ. ಸ್ಕಂದಸ್ವಾಮಿಗಳು **ಅತ್ರೇತಿಹಾಸಮಾಚಕ್ಷತೇ । ಪ್ರಜಾಪತೇಃ ಪುತ್ರೋ ಮನ್ಯುರ್ನಾಮ । ತಂ ಪ್ರಜಾಪತಿಃ ಸೇನಾಪತ್ಯೇ ನಿಯುಕ್ತವಾನ್ । ತೇನ ಸಹೇಂದ್ರೋ ನಿಜಘಾನ ಇತಿ** । ಮನ್ಯುವೆಂಬುವನು ಪ್ರಜಾಪತಿಯ ಪುತ್ರನೆಂದೂ, ಅವನನ್ನು ಪ್ರಜಾಪತಿಯು ಸೇನಾಪತಿಯನ್ನಾಗಿ ನಿಯಮಿಸಲು ಅವನ ಸಹಾಯದಿಂದ ಇಂದ್ರನು ಶತ್ರುಗಳನ್ನು ಕೊಂದನೆಂದೂ ಕಥೆಯನ್ನು ಹೇಳಿ, ಮನ್ಯುವಿನ ಸಹಾಯದಿಂದ ಕೊಂದುದಕ್ಕಾಗಿ **ಮನ್ಯುಮೀಃ** ಎಂದು ಅನ್ವರ್ಥನಾಮವಾಗಿದೆಯೆಂದು ವಿವರಿಸಿದ್ದಾರೆ. ಪ್ರಜಾಪತಿ ಪುತ್ರನಾದ ಮನ್ಯುವಿಗೂ ಇಂದ್ರನಿಗೂ ಅತ್ಯಂತ ಸಮೀಪವಾದ ಸಂಬಂಧವಿದೆಯೆಂದು ಶ್ರುತಿಯಿಂದಲೇ ಗೊತ್ತಾಗುತ್ತದೆ ಮನ್ಯುವಿನ ಕಥೆಯೂ ಅವನು ರುದ್ರನಾಗಿ ಪರಿವರ್ತನವನ್ನು ಹೊಂದಿದುದೂ **ಶತಪಥಬ್ರಾಹ್ಮಣ**ದಲ್ಲಿ ಹೇಳಿದೆ.

> **ಪ್ರಜಾಪತೇರ್ವಿಸ್ರಸ್ತಾದ್ದೇವತಾ ಉದಕ್ರಾಮಂಸ್ತಮೇಕ ಏವ ದೇವೋ ನಾಜಹಾನ್ಮನ್ಯುರೇವ ಸೋಽಸ್ಮಿನ್ನಂತರ್ವಿತತೋಽತಿಷ್ಠತ್ಸೋಽರೋದೀತ್ತಸ್ಯ ಯಾನ್ಯಶ್ರೂಣಿ ಪ್ರಾಸ್ಕಂದಂಸ್ತಾನ್ಯಸ್ಮಿನ್ಮನ್ಯೌ ಪ್ರತ್ಯತಿಷ್ಠಂತ್ಸ ಏವ ಶತಶೀರ್ಷಾ ರುದ್ರಃ ಸಮಭವತ್ ಸಹಸ್ರಾಕ್ಷಃ ಶತೇಷುಧಿಃ** ।
>
> (ಶ. ಬ್ರಾ. ೯-೧-೧-೬)

ಪ್ರಜಾಪತಿಯು ದುರ್ಬಲನಾದಾಗ ಅವನನ್ನು ಇತರ ದೇವತೆಗಳೆಲ್ಲರೂ ತ್ಯಾಗಮಾಡಿದರು ಆದರೆ **ಮನ್ಯು**ವೆಂಬ ದೇವತೆಯು ಮಾತ್ರ ಅವನನ್ನು ಬಿಡದೇ ಅವನೊಂದಿಗೇ ಇದ್ದನು, ಆಗ ಪ್ರಜಾಪತಿಯು ಅತ್ತನು. ಆ ಕಣ್ಣೀರುಗಳು ಮನ್ಯುವಿನಮೇಲೆ ಬಿದ್ದಾಗ ಅವನೇ ನೂರು ತಲೆಯುಳ್ಳವನೂ, ಸಹಸ್ರಕಣ್ಣುಳ್ಳವನೂ ಮತ್ತು ನೂರು ಬತ್ತಳಿಕೆಯುಳ್ಳವನೂ ಆದ ರುದ್ರನಾದನು ಎಂಬ ಕಥೆಯಿದೆ. ಮನ್ಯುವು ಸಾಹಸಿಯೂ, ಯುದ್ಧವೀರ್ಯವುಳ್ಳವನೆಂದೂ ಇದರಿಂದ ಗೊತ್ತಾಗುತ್ತದೆ. (ಆದರೆ ಪ್ರಜಾಪತಿಯ ಪುತ್ರನೆಂಬುದನ್ನು ಹೇಳಿಲ್ಲ) ಈ **ಮನ್ಯು**ವೆಂಬ ದೇವತೆಗೂ ಇಂದ್ರನಿಗೂ ಇರುವನಿಕಟವಾದ ಸಂಬಂಧವು ಬೃಹದ್ದೇವತಾವಾಕ್ಯದಿಂದ ತಿಳಿಯುತ್ತದೆ.

**ಇಂದ್ರಾಶ್ರಯಸ್ತು ಪರ್ಜನ್ಯೋ ರುದ್ರೋ ವಾಯುರ್ಬೃಹಸ್ಪತಿಃ ।**
**ವರುಣಃ ಕಶ್ಚ ಮೃತ್ಯುಶ್ಚ ದೇವಶ್ಚ ಬ್ರಹ್ಮಣಸ್ಪತಿಃ ॥**
**ಮನ್ಯುಶ್ಚ ವಿಶ್ವಕರ್ಮಾ ಚ ಮಿತ್ರಃ ಕ್ಷೇತ್ರಪತಿರ್ಯಮಃ ।**

(ಬೃ. ದೆ. ೧-೧೨೨—೩)

ಎಂಬುದಾಗಿ **ಮನ್ಯುವೇ** ಮುಂತಾದ ದೇವತೆಗಳು ಇಂದ್ರಾಶ್ರಯರೆಂದು ಬೃಹದ್ದೇವತೆಯಲ್ಲಿ ಹೇಳಿದೆ. ಇದು ಋಕ್ಸಂಹಿತಾವಾಕ್ಯವನ್ನುದಹರಿಸಿ **ಮನ್ಯು**ಶಬ್ದಕ್ಕೆ ನಿರ್ವಚನವನ್ನು ಹೇಳುವ ನಿರುಕ್ತಕಾರರ (೧೦-೨೯) ವಾಕ್ಯವನ್ನನುಸರಿಸಿದೆ. ನಿರುಕ್ತಕಾರರು,

**ತ್ವಯಾ ಮನ್ಯೋ ಸರಥಮಾರುಜಂತೋ ಹರ್ಷಮಾಣಾಸೋ ಧೃಷಿತಾ ಮರುತ್ವಃ ।**
**ತಿಗ್ಮೇಷವ ಆಯುಧಾ ಸಂಶಿಶಾನಾ ಅಭಿ ಪ್ರ ಯಂತು ನರೋ ಅಗ್ನಿರೂಪಾಃ ।**

(ಋ. ಸಂ. ೧೦-೮೪-೧).

ಎಂಬ ಋಕ್ಕನ್ನು ಉದಹರಿಸಿ ಇಂದ್ರಾದಿದೇವತೆಗಳು ಮನ್ಯುವಿನ ಸಹಾಯದಿಂದ ಶತ್ರುಗಳನ್ನು ಜಯಿಸಿದ್ದನ್ನು ಸೂಚಿಸಿದ್ದಾರೆ. ಪ್ರಕೃತ ಸಂದರ್ಭದಲ್ಲೂ ಸಹ **ಮನ್ಯುಮೀಃ** ಎಂದರೆ **ಮನ್ಯುವಿನ** ಸಹಾಯದಿಂದ ಶತ್ರುನಾಶವನ್ನು ಮಾಡಿದವನು ಎಂದರ್ಥ.

**ಸಮದನಸ್ಯ—ರಣಃ, ವಿವಾಕ್, ವಿಖಾದಃ** ಇತ್ಯಾದಿ ೪೬ ಸಂಗ್ರಾಮನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯) ಯುದ್ಧವೆಂದರ್ಥ. ನಿರುಕ್ತಕಾರರು **ಸಮತ್** ಶಬ್ದದ ನಿರ್ವಚನವನ್ನು ಮಾಡುವಾಗ,

**ಚಿತ್ರೋ ಯದಭ್ರಾಟ್ಛ್ವೇತೋ ನ ವಿಕ್ಷು ರಥೋ ನ ರುಕ್ಮೀ ತ್ವೇಷಃ ಸಮತ್ಸು ।**

(ಋ. ಸಂ. ೧-೬೬-೬,)

ಎಂಬ ಋಕ್ಕನ್ನು ಉದಹರಿಸಿ **ಸಮತ್** ಶಬ್ದಕ್ಕೆ ಯುದ್ಧವೆಂಬ ಅರ್ಥವೆಂದು ಹೇಳಿದ್ದಾರೆ. **ಸಮದನ** ಶಬ್ದವು **ಸಮತ್** ಶಬ್ದದ ಪರ್ಯಾಯರೂಪವಾಗಿದೆ. ಇಂದ್ರನು ಹುಟ್ಟುವಾಗಲೇ ಯುದ್ಧದೇವತೆಯ ಅಂಶಗಳನ್ನು ಪ್ರಕಟಪಡಿಸಿದುದರಿಂದಲೂ, ಅನಂತರ ಯುದ್ಧಮಾಡಿ ಸಮಸ್ತಅಸುರರನ್ನು ನಾಶಮಾಡಿದುದರಿಂದಲೂ ಯುದ್ಧದ ಕರ್ತನೆಂದು ಸ್ತುತಿಸಿದೆ.

**ಸೂರ್ಯಂ ಸನತ್—ಸೂರ್ಯಸ್ಯ ಹಿ ಯಾಗಾದಿಕರ್ಮನಿವೃತ್ತಿಃ ಫಲಂ । ಅಸ್ಮದೀಯೈಃ ಋತ್ವಿಗ್ಭಿಃ ಸಹ ದೇವತಾತ್ವಮಾಪನ್ನ ಇಂದ್ರಃ ಸೂರ್ಯೋದಯಫಲಭೂತಮಸ್ಮದೀಯಂ ಯಾಗಂ ನಿರ್ವರ್ತಯತ್ವಿತ್ಯರ್ಥಃ ।** ಯಾಗಾದಿಕರ್ಮಾಚರಣೆಯೇ ಸೂರ್ಯೋದಯದ ಫಲವಾದುದರಿಂದ ಆ ಕರ್ಮನಿವೃತ್ತ್ಯರ್ಥವಾಗಿ ಇಂದ್ರನು ನಮಗೆ ಸೂರ್ಯನ ಪ್ರಕಾಶವನ್ನು ಕೊಟ್ಟು ನಮ್ಮ ಕರ್ಮವು ಸಾಂಗವಾಗಿ ನೆರವೇರುವಂತೆ ಮಾಡಲಿ ಎಂದು ಪ್ರಾರ್ಥಿಸಿದೆ.

ವ್ಯಾಕರಣಪ್ರಕ್ರಿಯಾ

**ಮನ್ಯುಮೀಃ**—ಮನ್ಯುಂ ಮಿನಾತಿ ಇತಿ ಮನ್ಯುಮೀಃ । ಮೀಞ್ ಹಿಂಸಾಯಾಮ್. ಧಾತು. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಕಾರಕೋಪಪದವಾಗಿರುವುದರಿಂದ **ಗತಿಕಾರಕೋಪಪದಾತ್‌ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾಏಕವಚನಾಂತರೂಪ.

**ಸಮದನಸ್ಯ**—ಸಹ ಮಾದ್ಯಂತಿ ಅಸ್ಮಿನ್ ಇತಿ ಸಮದನಃ ಸಂಗ್ರಾಮಃ (ಯುದ್ಧ) ಮದೀ ಹರ್ಷೇ ಧಾತು. ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ**—(ಪಾ. ಸೂ. ೭-೧-೧) ಎಂಬುದರಿಂದ ಅನಾದೇಶ. **ಸಹಸ್ಯ ಸಃ ಸಂಜ್ಞಾಯಾಮ್**—(ಪಾ. ಸೂ. ೬-೩-೭೮) ಎಂಬುದರಿಂದ ಸಹ ಎಂಬುದಕ್ಕೆ ಸಭಾವ. ಪ್ರತ್ಯಯ ಲಿತ್ತಾದುದರಿಂದ **ಲಿತಿ**—(ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ಕರ್ತಾ**—ಡುಕೃಞ್ ಕರಣೇ ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. **ಚಿತಃ**—ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಅಸ್ಮಾಕೇಭಿಃ**—ಅಸ್ಮಾಕಂ ಸಂಬಂಧಿನಃ ಆಸ್ಮಾಕಾಃ ಸಂಬಂಧ್ಯರ್ಥದಲ್ಲಿ ಅಣ್ ಪ್ರತ್ಯಯ ಬಂದಾಗ **ತಸ್ಮಿನ್ ಅಣಿಚ ಯುಷ್ಮಾಕಾಸ್ಮಾಕೌ**—(ಪಾ. ಸೂ. ೪-೩-೨) ಎಂಬುದರಿಂದ ಅಸ್ಮದ್ ಶಬ್ದಕ್ಕೆ ಅಸ್ಮಾಕ ಎಂಬ ಆದೇಶ. **ಸಂಜ್ಞಾಪೂರ್ವಕೋ ವಿಧಿರನಿತ್ಯಃ**—(ಪರಿ. ೯೫) ಎಂಬುದರಿಂದ ಅಣ್ ನಿಮಿತ್ತವಾಗಿ ಆದಿವೃದ್ಧಿ ಬರುವುದಿಲ್ಲ. ಅಸ್ಮಾಕ+ಭಿಸ್ ಎಂದಿರುವಾಗ **ಬಹುಲಂ ಛಂದಸಿ**—(ಪಾ. ಸೂ. ೭-೧-೧೦) ಎಂಬುದರಿಂದ ಭಿಸಿಗೆ ಐಸ್‌ಭಾವ ಬರುವುದಿಲ್ಲ. ಇದಕ್ಕೆ ಸ್ವರವಿಧಾನವು **ಪ್ರಾಸ್ಮಾಕಾಸಶ್ಚ ಸೂರಯಃ**—(ಋ. ಸ. ೧-೯೭-೩) ಎಂಬಲ್ಲಿ ಹೇಳಲ್ಪಟ್ಟಿದೆ.

**ಸನತ್**—ವನ ಷಣ ಸಂಭಕ್ತೌ. ಧಾತು. ಇದಕ್ಕೆ ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚಲೋಪಃ**—(ಪಾ. ಸೂ. ೩-೪-೯೭) ಎಂಬುದರಿಂದ ಅಂತ್ಯ ಇಕಾರಲೋಪ. **ಲೇಟೋಽಡಾಟೌ**—(ಪಾ. ಸೂ. ೩-೪-೯೪) ಎಂಬುದರಿಂದ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಅಹನ್—ಅಹನ್ ಶಬ್ದಕ್ಕೆ ಸಪ್ತಮೀ ಏಕವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲುಕ್.

**ಸತ್ಪತಿಃ**—ಸತಾಂ ಪತಿಃ ಸತ್ಪತಿಃ. **ಸಮಾಸಸ್ಯ**—ಸೂತ್ರದಿಂದ ಅಂತೋದಾತ್ತಸ್ವರ ಪ್ರಾಪ್ತವಾದರೆ **ಪತ್ಯಾವೈಶ್ವರ್ಯೇ**—(ಪಾ. ಸೂ. ೬-೨-೧೮) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಪುರುಹೂತಃ**—ಪುರುಭಿಃ ಹೂತಃ ಪುರುಹೂತಃ. ಹು ದಾನಾದನಯೋಃ ಧಾತು. ಕ್ತ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಸಮಾಸದಲ್ಲಿ ಕಾರಕಪೂರ್ವಪದವಾಗಿರುವುದರಿಂದ **ಗತಿಕಾರಕೋಪಪದಾತ್ ಕೃತ್**— ( ಪಾ. ಸೂ. ೬-೨-೧೩೯ ) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೬ ॥



ಸಂಹಿತಾಪಾಠಃ

ತಮೂತಯೋ ರಣಯಞ್ಛೂರಸಾತೌ ತಂ ಕ್ಷೇಮಸ್ಯ ಕ್ಷಿತಯಃ
　　ಕೃಣ್ವತ ತ್ರಾಂ ।
ಸ ವಿಶ್ವಸ್ಯ ಕರುಣಸ್ಯೇಶ ಏಕೋ ಮರುತ್ವಾನ್ನೋ ಭವತ್ವಿಂದ್ರ
　　ಊತೀ ॥ ೭॥

ಪದಪಾಠಃ

ತಂ । ಊತಯಃ । ರಣಯನ್ । ಶೂರಽಸಾತೌ । ತಂ । ಕ್ಷೇಮಸ್ಯ । ಕ್ಷಿತ-
　　ಯಃ । ಕೃಣ್ವತ । ತ್ರಾಂ ।
ಸಃ । ವಿಶ್ವಸ್ಯ । ಕರುಣಸ್ಯ । ಈಶೇ । ಏಕಃ । ಮರುತ್ವಾನ್ । ನಃ । ಭವತು ।
　　ಇಂದ್ರಃ । ಊತೀ ॥ ೭ ॥

ಸಾಯಣಭಾಷ್ಯಂ

ತಮಿಂದ್ರಂ ಶೂರಸಾತೌ ಶೂರೈರ್ವೀರಪುರುಷೈಃ ಸಂಭಜನೀಯೇ ಸಂಗ್ರಾಮ ಊತಯೋ ಗಂತಾರೋ ಮರುತೋ ರಣಯನ್ । ರಮಯಂತಿ । ಯದ್ವಾ ಪ್ರಹರ ಭಗವೋ ಜಹಿ ವೀರಯಸ್ವೇತ್ಯೇವಂ-ರೂಪಂ ಶಬ್ದಮಿಂದ್ರಮುದ್ದಿಶ್ಯ ಕುರ್ವಂತಿ । ಅಪಿ ಚ ಕ್ಷಿತಯೋ ಮನುಷ್ಯಾಸ್ತಮಿಂದ್ರಂ ಕ್ಷೇಮಸ್ಯ ರಕ್ಷಣೀಯಸ್ಯ ಸರ್ವಸ್ಯ ಧನಸ್ಯ ತ್ರಾಂ ತ್ರಾತಾರಂ ರಕ್ಷಿತಾರಂ ಕೃಣ್ವತ । ಕುರ್ವಂತಿ । ದೇವತಾಂತರಾದಸ್ಯ ಕೋಽತಿಶಯ ಇತಿ ಚೇತ್ ಉಚ್ಯತೇ । ಸ ಇಂದ್ರೋ ವಿಶ್ವಸ್ಯ ಸರ್ವಸ್ಯ ಕರುಣಸ್ಯಾಭಿಮತಫಲನಿಷ್ಪಾ-ದನರೂಪಸ್ಯ ಕರ್ಮಣ ಏಕೋಽಸಹಾಯ ಏವೇಶೇ । ಈಷ್ಟೇ । ಅನ್ಯತ್ಪೂರ್ವವತ್ ॥ ಊತಯಃ । ಅವತೇರ್ಗತ್ಯರ್ಥಾತ್ ಕೃತ್ಯಲ್ಯುಟೋ ಬಹುಲಮಿತಿ ಕರ್ತರಿ ಕ್ತಿನ್ । ತಿತುತ್ರೇತೀಟ್ಪ್ರತಿಷೇಧಃ । ಜ್ವರತ್ವರೇತ್ಯಾದಿನಾ ವಕಾರಸ್ಯೋಪಧಾಯಾಶ್ಚ ಊಟ್ । ಊತಿಯೂತೀತ್ಯಾದಿನಾ ಕ್ತಿನ ಉದಾತ್ತತ್ವಂ । ಯದ್ವಾ । ಕರ್ತರಿ ಕ್ತಿಚ್ । ರಣಯನ್ । ರಮತೇರ್ಹೇತುಮಣ್ಣಿಜಂತಾದ್ವರ್ತಮಾನೇ ಛಾಂದಸೋ ಲಙ್ । ಅಂತ್ಯವಿಕಾರಶ್ಛಾಂದಸಃ । ಯದ್ವಾ । ರಣ ಶಬ್ದಾರ್ಥಃ । ಅಸ್ಮಾಣ್ಣಿಜಂತಾತ್ಪೂರ್ವವಲ್ಲಙ್ । ತ್ರಾಂ । ತ್ರೈಙ್ ಪಾಲನೇ । ತ್ರಾಯತ ಇತಿ ತ್ರಾಃ । ಕ್ವಿಪ್ಚೇತಿ ಚಶಬ್ದೇನ ದೃಶಿಗ್ರಹಣಾನುಕರ್ಷಣಾನ್ನಿ-ರುಪಪದಾದಪಿ ಕ್ವಿಪ್ । ಕರುಣಸ್ಯ । ಡುಕೃಞ್ ಕರಣೇ । ಕೃವೃ ತೃದಾರಿಭ್ಯ ಉನನ್ । ಉ. ೩-೫೩ । ಇತಿ ಭಾವೇ ಉನನ್ । ವ್ಯತ್ಯಯೇನ ಪ್ರತ್ಯಯಾದ್ಯುದಾತ್ತತ್ವಂ । ಈಶೇ । ಈಶ ಐಶ್ವರ್ಯೇ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ ॥

ಪ್ರತಿಪದಾರ್ಥ

**ತಂ**—ಆ ಇಂದ್ರನನ್ನು । **ಶೂರಸಾತೌ**—ವೀರರೊಡನೆ ಮಾಡುವ ಯುದ್ಧಕಾಲದಲ್ಲಿ । **ಊತಯಃ**-ಸಹಾಯಕ್ಕಾಗಿ ಸಂಚರಿಸುವ ಮರುತ್ತುಗಳು । **ರಣಯನ್**—ಜಯಸೂಚಕ ಶಬ್ದಗಳಿಂದ ಹರ್ಷಗೊಳಿಸುತ್ತಾರೆ । **ಕ್ಷಿತಯಃ**—ಮಾನವರು । **ತಂ**—ಆ ಇಂದ್ರನನ್ನು । **ಕ್ಷೇಮಸ್ಯ**—ರಕ್ಷಣಾರ್ಹವಾದ ತಮ್ಮ ಧನದ । **ತ್ರಾಂ**—ರಕ್ಷಕನನ್ನಾಗಿ । **ಕೃಣ್ವತ**—ಮಾಡಿಕೊಂಡರು. । **ಸಃ**—ಆ ಇಂದ್ರನು । **ವಿಶ್ವಸ್ಯ ಕರುಣಸ್ಯ**—(ಇಷ್ಟಾರ್ಥವನ್ನು ನೆರವೇರಿಸಿ ಕೊಡತಕ್ಕ) ಸಕಲ ಕರ್ಮಗಳಿಗೂ । **ಏಕಃ**—ತಾನೊಬ್ಬನೇ । **ಈಶೇ**—ಪ್ರಭುವಾಗಿದ್ದಾನೆ. । **ಮರುತ್ವಾನ್**—ಮರುತ್ತುಗಳೊಡನೆ ಕೂಡಿಕೊಂಡು । **ಇಂದ್ರಃ**—ಇಂದ್ರನು । **ನಃ**—ನಮ್ಮ । **ಊತೀ**—ರಕ್ಷಣಾರ್ಥವಾಗಿ । **ಭವತು**—ಆಗಿರಲಿ.

ಭಾವಾರ್ಥ

ವೀರರೊಡನೆ ಯುದ್ಧಮಾಡುವ ಕಾಲದಲ್ಲಿ ಆ ಇಂದ್ರನನ್ನು ಅವನ ಸಹಾಯಕ್ಕಾಗಿ ಜೊತೆಯಲ್ಲಿಯೇ ಸಂಚರಿಸತಕ್ಕ ಮರುತ್ತುಗಳು ಜಯಸೂಚಕವಾದ ಶಬ್ದಗಳನ್ನು ಮಾಡಿಕೊಂಡು ಹರ್ಷಗೊಳಿಸುತ್ತಾರೆ. ಮಾನವರು ಆ ಇಂದ್ರನನ್ನು ತಮ್ಮ ಧನದ ರಕ್ಷಕನನ್ನಾಗಿ ಮಾಡಿಕೊಳ್ಳುತ್ತಾರೆ. ಇಷ್ಟಾರ್ಥಗಳನ್ನು ನೆರವೇರಿಸತಕ್ಕ ಸಕಲ ಕರ್ಮಗಳಿಗೂ ಆ ಇಂದ್ರನೊಬ್ಬನೇ ಪ್ರಭುವಾಗಿದ್ದಾನೆ. ಅಂತಹ ಇಂದ್ರನು ಮರುತ್ತುಗಳೊಡನೆ ಕೂಡಿಕೊಂಡು ನಮ್ಮ ರಕ್ಷಕನಾಗಿರಲಿ

## English Translation

Him, his allies, the Maruts, animate in battle ; him, men regard as the preserver of their property ; he alone presides over every act of worship : may Indra, associated with the Maruts be our protection.

|| ವಿಶೇಷವಿಷಯಗಳು ||

**ಶೂರಸಾತೌ**— **ಶೂರೈರ್ವೀರಪುರುಷೈಃ ಸಂಭಜನೀಯೇ ಸಂಗ್ರಾಮೇ** | ವೀರಪುರುಷರು ಉತ್ಸಾಹದಿಂದ ಮುನ್ನುಗ್ಗುವ ಯುದ್ಧವೆಂದರ್ಥ.

**ಊತಯಃ**—ಸಹಾಯಕ್ಕಾಗಿ ಬಂದಿರತಕ್ಕ ಮರುತ್ತುಗಳು.

**ರಣಯನ್**—**ರಮಯಂತಿ**-ಹರ್ಷಿಸುತ್ತಾರೆ. ಅಥವಾ ಹರ್ಷಸೂಚಕವಾದ ನಾದವನ್ನು ಮಾಡುತ್ತಾರೆ. ರಮಣೀಯವಾದುದು ಎಂಬ ಮೂಲಾರ್ಥದ ಮೇಲೆಯೇ **ರಣ** ಶಬ್ದವು ಯುದ್ಧಪರ್ಯಾಯವಾಗಿಯೂ ಇದೆ. ಅದರಲ್ಲೂ ಇಂದ್ರನೂ ಮತ್ತು ಮರುತ್ತುಗಳೂ ಒಟ್ಟಿಗೆ ಪರಸ್ಪರಸಹಾಯವನ್ನು ಮಾಡುತ್ತಾ ಯುದ್ಧಭೂಮಿಯಲ್ಲಿ ಸೇರಿದಾಗ ಅದು ರಮಣೀಯವಾಗಿಯೇ ಇರಬೇಕೆಂಬ ಅಭಿಪ್ರಾಯವನ್ನು ಸೂಚಿಸುವ

**ಮರುತ್ವಾँ ಇಂದ್ರ ವೃಷಭೋ ರಣಾಯ ಪಿಬಾ ಸೋಮಮನುಷ್ವಧಂ ಮದಾಯ |**
(ಋ. ಸಂ ೩-೪೭-೧.)

ಎಂಬ ಋಕ್ಕನ್ನು ಉದಹರಿಸಿ **ರಣಾಯ** ಎಂಬ ಪದಕ್ಕೆ **ರಮಣೀಯಾಯ ಸಂಗ್ರಾಮಾಯ** | ರಮಣೀಯವಾದ ಸಂಗ್ರಾಮಕ್ಕಾಗಿ ಎಂದು ಈ ಶಬ್ದಕ್ಕೆ ಉಚಿತವಾದ ಅರ್ಥವನ್ನು ಹೇಳಿದ್ದಾರೆ. ಮರುತ್ತುಗಳು ಯಜ್ಞಗೃಹದಲ್ಲಿರಲಿ, ಯುದ್ಧರಂಗದಲ್ಲಿರಲಿ, ತಮ್ಮ ರಮಣೀಯವಾದ ಶಬ್ದವನ್ನು ಮಾಡುತ್ತಿರುತ್ತಾರೆಂದು ಅನೇಕಕಡೆಗಳಲ್ಲಿ ವರ್ಣಿತವಾಗಿದೆ. ಉದಾಹರಣೆಗೆ—

**ರರಾಣತಾ ಮರುತೋ ವೇದ್ಯಾಭಿರ್ನಿ ಹೇಳೋ ಧತ್ತ ವಿ ಮುಚಧ್ವಮಶ್ವಾನ್ |**
(ಋ. ಸಂ. ೧-೧೭೧-೧.)

**ಕೃತೇ ಚಿದತ್ರ ಮರುತೋ ರಣಂತಾನವದ್ಯಾಸಃ ಶುಚಯಃ ಪಾವಕಾಃ |**
(ಋ. ಸಂ ೭-೫೭-೫.)

ಇತ್ಯಾದಿ ನಾನಾ ಋಕ್ಕುಗಳಲ್ಲಿ ಮರುತ್ತುಗಳು ಯಜ್ಞಗೃಹದಲ್ಲಿ ತಮ್ಮ ರಮ್ಯವಾದ ಧ್ವನಿಯಿಂದ ಹರ್ಷವನ್ನು ಸೂಚಿಸಿದುದು ವರ್ಣಿತವಾಗಿದೆ. ಇದೇ ರೀತಿಯಲ್ಲಿ,

**ಮರುತೋ ಹ ವೈ ಕ್ರೀಡಿನೋ ವೃತ್ರಂ ಹನಿಷ್ಯಂತಮಿಂದ್ರಮಾಗತಂ ತಮಭಿತಃ ಪರಿಚಿಕ್ರೀಡುರ್ಮಹಯಂತಸ್ತಥೋ ಏವೈತಂ ಪಾಪ್ಮಾನಂ ದ್ವಿಷಂತಂ ಭ್ರಾತೃವ್ಯಂ ಹನಿಷ್ಯಂತಮಭಿತಃ ಪರಿಕ್ರೀಡಂತೇ ||**
(.ಶ. ಬ್ರಾ. ೨-೫-೩-೨೦.)

ಎಂದು ಮರುತ್ತುಗಳು ವೃತ್ರವಧನಕಾಲದಲ್ಲಿ ಇಂದ್ರನ ಸುತ್ತಲೂ ಇದ್ದು ತಮ್ಮ ಸಂತೋಷವನ್ನು ಸೂಚಿಸುತ್ತಾ ನಲಿದುದನ್ನೂ ಅದೇ ರೀತಿ ಯಜ್ಞಗೃಹದಲ್ಲಿ ನಲಿದುದನ್ನೂ ವರ್ಣಿಸಿದೆ. ಈ ವಿಧವಾದ ರಣನವು ಮರುತ್ತುಗಳಿಗೆ ಸಹಜವಾದುದರಿಂದ ಇಲ್ಲಿಯೂ ಸಹ ಅದೇ ವರ್ಣನೆಯಿದೆ.

**ಕ್ಷಿತಯಃ**—ಮನುಷ್ಯಾಃ, ನರಃ ಇತ್ಯಾದಿ ೨೫ ಮನುಷ್ಯನಾಮಗಳಲ್ಲಿ ಪಠಿತವಾಗಿರುವುದರಿಂದ ಮನುಷ್ಯರೆಂದರ್ಥ. (ನಿ. ೨-೩.)

**ಅಗ್ನಿರ್ನೇತಾ ಭಗ ಇವ ಕ್ಷಿತೀನಾಂ ದೈವೀನಾಂ ದೇವ ಋತುಪಾ ಋತಾವಾ ।**
(ಋ ಸಂ. ೩-೨೦-೪.)

ಇತ್ಯಾದಿ ಕಡೆಗಳಲ್ಲಿ ಮಾನವರಿಗೂ ದೇವಸಂಬಂಧಿಗಳಾದ ಪ್ರಜೆಗಳಿಗೂ ವ್ಯತ್ಯಾಸವನ್ನು ತೋರಿಸುವಾಗ ಕ್ಷಿತಿ ಶಬ್ದದಿಂದ ಪೃಥ್ವಿಯ ಪ್ರಜೆಗಳಾದ ಮಾನವರೆಂದು ಸೂಚಿಸಿದೆ.

**ಕರುಣಸ್ಯ**—**ಅಪಃ, ಅಪ್ನಃ, ದಂಸಃ** ಇತ್ಯಾದಿ ೨೬ ಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೧) ಕರ್ಮವೆಂದರ್ಥ. ಸಕಲ ಕರ್ಮಗಳಿಗೂ ಇಂದ್ರನೇ ಪ್ರಭುವಾಗಿರುವುದರಿಂದ ಕರ್ಮಕ್ಕೆ ಅವನ ರಕ್ಷಣೆಯನ್ನು ಬೇಡಿದೆ. ಅಸುರಾದಿಗಳಿಂದ ಪದೇ ಪದೇ ಕರ್ಮವು ವಿಘ್ನವಾಗುತ್ತಿರುವುದರಿಂದಲೂ, ಆ ಅಸುರರನ್ನು ನಾಶಮಾಡುವುದರಿಂದ ಅವನೇ ಕರ್ಮನಿರ್ವಹಣಕ್ಕೆ ಮುಖ್ಯನಾದ ರಕ್ಷಕನಾಗಿದ್ದಾನೆ.

**ಇಂದ್ರೋ ವೈ ಯಜ್ಞಸ್ಯ ದೇವತಾ ।**
(ಶ. ಬ್ರಾ. ೧-೪-೧-೩೩.)

**ಇಂದ್ರಾಯ ವಿಮೃಧೇಽನುನಿರ್ವಪತಿ ಸೇಂದ್ರೋ ಮೇ ಯಜ್ಞೋಽಸದಿತಿ ಸರ್ವೋ ವೈ ಯಜ್ಞ ಇಂದ್ರಸ್ಯೈವ,** (ಶ- ಬ್ರಾ. ೧೧-೧-೩-೪).

ಇತ್ಯಾದ್ಯನೇಕ ಕಡೆಗಳಲ್ಲಿ ಇಂದ್ರನೇ ಯಜ್ಞದ ಮುಖ್ಯವಾದ ಪ್ರಭುವೆಂದು ಇಂದ್ರನನ್ನು ಸ್ತುತಿಸಿದೆ. ಅಸುರರ ನಾಶವಲ್ಲದೇ ಯಜ್ಞಕ್ಕೆ ಅತ್ಯಂತ ಅವಶ್ಯವಾದ ವೃಷ್ಟಿಯನ್ನು ಇಂದ್ರನ ಅನುಗ್ರಹದಿಂದಲೇ ಪಡೆಯಬೇಕಾದುದರಿಂದಲೂ ಸಹ ಇಂದ್ರನೇ ಯಜ್ಞಕ್ಕೆ ಮುಖ್ಯವಾದ ಈಶನಾಗಿದ್ದಾನೆ. ಈ ಅಂಶವನ್ನು ಸ್ಕಂದಸ್ವಾಮಿಗಳು **ಸರ್ವಕರ್ಮಣಾಂ ವೃಷ್ಟಿನಿಬಂಧನತ್ವಾತ್ ವೃಷ್ಟೇಶ್ಚ ಕೇವಲೇಂದ್ರಾಯತ್ತತ್ವಾತ್ ।** ವೃಷ್ಟಿಯಿಂದಲೇ ಸಕಲ ಕರ್ಮಗಳ ನಿರ್ವಹಣೆಯೂ ಆಗಬೇಕಾಗಿರುವುದರಿಂದಲೂ ಇಂದ್ರನೇ ವೃಷ್ಟಿಕಾರಕನಾಗಿರುವುದರಿಂದಲೂ ಸಹ ಅವನೇ ಕರ್ಮಗಳಿಗೆ ಈಶನು ಎಂದು ವಿವರಿಸಿದ್ದಾರೆ

ವ್ಯಾಕರಣಪ್ರಕ್ರಿಯಾ

**ಊತಯಃ**—**ಊತಿಯೂತಿಜೂತಿ**—(ಪಾ. ಸೂ. ೩-೩-೯೭) ಎಂಬುದರಿಂದ ಉದಾತ್ತಸ್ವರವಿಶಿಷ್ಟ ಕ್ತಿನ್ ಪ್ರತ್ಯಯದಿಂದ ನಿಪಾತಿತವಾಗಿದೆ. ಅವ ರಕ್ಷಣೇ ಧಾತು. ಇಲ್ಲಿ ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. **ಕೃತ್ಯಲ್ಯುಟೋ ಬಹುಲಮ್** (ಪಾ. ಸೂ. ೩-೩-೧೧೩) ಎಂಬಲ್ಲಿ ಬಹುಲಗ್ರಹಣದಿಂದ ಕರ್ತೃವಿನಲ್ಲಿ ಕ್ತಿನ್ ಪ್ರತ್ಯಯ. **ತಿತುತ್ರತಥ** (ಪಾ. ಸೂ. ೭-೨-೯) ಎಂಬುದರಿಂದ ವಲಾದಿಲಕ್ಷಣ ಇಡಾಗಮಕ್ಕೆ ಪ್ರತಿಷೇಧ. ಜ್ವರತ್ವರಸ್ರಿ-

(ಪಾ. ಸೂ. ೬-೪-೨೦) ಎಂಬುದರಿಂದ ಧಾತುವಿನ ವಕಾರ ಮತ್ತು ಉಪಧೆಗೆ ಊಠಾದೇಶ. ಊತಿ ಎಂದು ರೂಪವಾಗುತ್ತದೆ. ಅಥವಾ **ಕ್ತಿಚ್ ಕ್ತೌ ಚ ಸಂಜ್ಞಾಯಾಮ್** ಎಂಬುದರಿಂದ ಕರ್ತರಿಯಲ್ಲಿ ಕ್ತಿಚ್ ಪ್ರತ್ಯಯ. ಆಗ ನಿಪಾತನಾದ್ಯಾಶ್ರಯಣದ ಆವಶ್ಯಕತೆ ಇರುವುದಿಲ್ಲ. ಪ್ರತ್ಯಯವೇ ಚಿತ್ತಾಗುವುದರಿಂದ ಅಂತೋದಾತ್ತಸ್ವರ ಬರುತ್ತದೆ. ಪ್ರಥಮಾಬಹುವಚನಾಂತರೂಪ.

**ರಣಯನ್**—ರಮು ಕ್ರೀಡಾಯಾಂ ಧಾತು. ಪ್ರಯೋಜಕವ್ಯಾಪಾರತೋರುವಾಗ **ಹೇತುಮತಿಚ** ಪಾ. ಸೂ. ೩-೧-೨೬) ಎಂಬುದರಿಂದ ಣಿಜ್-ಆಮಂತವಾದುದರಿಂದ ಮಿತ್‌ಸಂಜ್ಞಾ ಬರುವುದರಿಂದ **ಮಿತಾಂ-ಹ್ರಸ್ವಃ** (ಪಾ. ಸೂ. ೬-೪-೯೨) ಎಂಬುದರಿಂದ ಉಪಧಾಹ್ರಸ್ವ ಬರುತ್ತದೆ. ಣಿಜಂತದ ಮೇಲೆ ವರ್ತಮಾನಾರ್ಥ ದಲ್ಲಿ **ಛಂದಸಿಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ಲಙ್ ಪ್ರಥಮಪುರುಷಬಹುವಚನದಲ್ಲಿ ಝಿಗೆ ಅಂತಾದೇಶ. **ಇತಶ್ಚ** ಎಂಬುದರಿಂದ ಇಕಾರ ಲೋಪ. ಶಪ್ ವಿಕರಣ. ತನ್ನಿಮಿತ್ತವಾಗಿ ಣಿಚಿಗೆ ಗುಣ. ಅಯಾದೇಶ. **ಸಂಯೋಗಾಂತಸ್ಯ ಲೋಪಃ** (ಪಾ. ಸೂ. ೮-೨-೨೩) ಎಂಬುದರಿಂದ ಪ್ರತ್ಯಯಾಂತ ತಕಾರಕ್ಕೆ ಲೋಪ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಧಾತುವಿನ ಅಂತ್ಯಮಕಾರಕ್ಕೆ ಣಕಾರಾದೇಶವು ಛಾಂದಸವಾಗಿ ಬರುತ್ತದೆ. ಅಥವಾ ರಣಶಬ್ದೇ ಧಾತು. ಇದಕ್ಕೆ ಹಿಂದಿನಂತೆ ಣಿಜಂತದ ಮೇಲೆ ಲಙ್. ಆಗ ಸ್ವಾಭಾವಿಕವಾಗಿ ರೂಪಸಿದ್ಧಿಯಾಗುತ್ತದೆ. ಅತಿಙಂತದ ಪರ ದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಶೂರಸಾತೌ**— ಶೂರೈಃ ಸಾತಿಃ ಶೂರಸಾತಿಃ ತಸ್ಯಾಮ್. **ತೃತೀಯಾಕರ್ಮಣಿ** (ಪಾ. ಸೂ. ೬-೨-೪೮) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಸಪ್ತಮೀಏಕವಚನಾಂತರೂಪ

**ಕ್ಷಿತಯಃ**—ಕ್ಷಿ ನಿವಾಸಗತ್ಯೋಃ ಧಾತು. ಸಂಜ್ಞಾತೋರುವಾಗ **ಕ್ತಿಚ್‌ಕ್ತೌಚ ಸಂಜ್ಞಾಯಾಂ** (ಪಾ. ಸೂ. ೩-೩-೧೭೪) ಎಂಬುದರಿಂದ ಕ್ತಿಚ್ ಪ್ರತ್ಯಯ. **ಚಿತಃ** (ಪಾ. ಸೂ ೩-೩-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಪ್ರಥಮಾಬಹುವಚನಾಂತರೂಪ.

**ಕೃಣ್ವತ**—ಕೃವಿ ಹಿಂಸಾಕರಣಯೋಶ್ಚ ಧಾತು. ವರ್ತಮಾನಾರ್ಥದಲ್ಲಿ ಛಾಂದಸವಾದ ಲಙ್. ಪ್ರಥಮ ಪುರುಷ ಬಹುವಚನದಲ್ಲಿ ಝುಕ್ಕೆ **ಆತ್ಮನೇಪದೇಷ್ವನತಃ** (ಪಾ. ಸೂ. ೭-೧-೫) ಎಂಬುದರಿಂದ ಅತಾದೇಶ. **ಧಿನ್ವಿ-ಕೃಣ್ವ್ಯೋರಚ** (ಪಾ. ೩-೧-೮೦) ಎಂಬುದರಿಂದ ಶಪಿಗೆ ಉವಿಕರಣ. ಧಾತುವಿಗೆ ಅಕಾರಾಂತಾದೇಶ. **ಅತೋ ಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಉನಿಮಿತ್ತವಾಗಿ ಅಕಾರಲೋಪ. ಉಪ್ರತ್ಯಯಕ್ಕೆ ಯಣಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ **ಬಹುಲಂ ಛಂದಸಿ**— ಎಂಬುದರಿಂದ ಅಡಾಗಮ ಬರುವುದಿಲ್ಲ.

**ತ್ರಾಮ್**—ತ್ರೈಙ್ ಪಾಲನೇ ಧಾತು. ತ್ರಾಯತೇ ಇತಿ ತ್ರಾಃ **ಕ್ವಿಪ್‌ಚ** (ಪಾ. ಸೂ. ೩-೨-೭೬) ಎಂಬುದರಿಂದ ಇದಕ್ಕೆ ಕ್ವಿಪ್ ಪ್ರತ್ಯಯ. ಯದ್ಯಪಿ ಉಪಪದವಾಗಿರುವಾಗಲೇ ಧಾತುವಿಗೆ ಈ ಸೂತ್ರದಿಂದ ಕ್ವಿಪ್ ವಿಹಿತವಾಗುತ್ತದೆ. ಆದರೆ ಇಲ್ಲಿ ಚಕಾರದಿಂದ ಪ್ರತಿಗ್ರಹಣವು ಅನುಕೃಷ್ಟವಾಗುವುದರಿಂದ ನಿರುಪಪದ ವಾಗಿದ್ದಾಗಲೂ ಕ್ವಿಪ್ ಬರುತ್ತದೆ. ಕ್ವಿಪಿನಲ್ಲಿ ಸರ್ವಲೋಪವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಆದೇಚ-

ಉಪದೇಶೇಽಶಿತಿ (ಪಾ. ಸೂ. ೬-೧-೪೫) ಎಂಬುದರಿಂದ ಧಾತುವಿನ ಏಚಿಗೆ ಆತ್ವ. ದ್ವಿತೀಯಾಏಕವಚನಾಂತರೂಪ.

**ಕರುಣಸ್ಯ**—ಡುಕೃಞ್ ಕರಣೇ ಧಾತು. **ಕೃವೃತ್ಯದಾರಿಭ್ಯ ಉನನ್** (ಉ. ಸೂ. ೩-೫೩) ಎಂಬುದರಿಂದ ಇದಕ್ಕೆ ಭಾವಾರ್ಥದಲ್ಲಿ ಉನನ್ ಪ್ರತ್ಯಯ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. **ಉರಣ್ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ. **ಅಟ್‌ಕುಪ್ವಾಙ್**—ಸೂತ್ರದಿಂದ ಪ್ರತ್ಯಯನಕಾರಕ್ಕೆ ಣತ್ವ. ನಿತ್ತಾದುದರಿಂದ ಆದ್ಯುದಾತ್ತಸ್ವರ ಪ್ರಾಪ್ತವಾದರೆ **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಈಶೇ**—ಈಶ ಐಶ್ವರ್ಯೇ ಧಾತು. ಅದಾದಿ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ **ಟಿತ ಆತ್ಮನೇ**—(ಪಾ. ಸೂ. ೩-೪-೭೯) ಎಂಬುದರಿಂದ ಏತ್ವ. **ಲೋಪಸ್ತ ಆತ್ಮನೇಪದೇಷು** (ಪಾ. ಸೂ. ೭-೧-೪೧) ಎಂಬುದರಿಂದ ಛಂದಸ್ಸಿನಲ್ಲಿ ಪ್ರತ್ಯಯ ತಕಾರಕ್ಕೆ ಲೋಪ. ಈಶೇ ಎಂದು ರೂಪವಾಗುತ್ತದೆ. ಅತಿಙಂತದ ಪದದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

—:o:—

ಸಂಹಿತಾಪಾಠಃ

ತಮಪ್ಸಂತ ಶವಸ ಉತ್ಸವೇಷು ನರೋ ನರಮವಸೇ.ತಂ ಧ-
ನಾಯ ।
ಸೋ ಅಂಧೇ ಚಿತ್ತಮಸಿ ಜ್ಯೋತಿರ್ವಿದನ್ಮರುತ್ವಾನ್ನೋ ಭವ-
ತ್ವಿಂದ್ರ ಊತೀ ॥ ೮ ॥

ಪದಪಾಠಃ

ತಂ । ಅಪ್ಸಂತ । ಶವಸಃ । ಉತ್ಽಸವೇಷು । ನರಃ । ನರಂ । ಅವಸೇ । ತಂ । ಧನಾಯ ।

ಸಃ । ಅಂಧೇ । ಚಿತ್ । ತಮಸಿ । ಜ್ಯೋತಿಃ । ವಿದತ್ । ಮರುತ್ವಾನ್ । ನಃ ।

ಭವತು । ಇಂದ್ರಃ । ಊತೀ ॥ ೮ ॥

ಸಾಯಣಭಾಷ್ಯಂ

ನರೋ ನೇತಾರಃ ಸ್ತೋತಾರಃ ಶವಸೋ ಬಲಸ್ಯ ಸಂಬಂಧಿಷೂತ್ಸವೇಷು ಸಂಗ್ರಾಮೇಷು ನರಂ ಜಯಸ್ಯ ನೇತಾರಂ ತಮಿಂದ್ರಮಪ್ಸಂತ । ಆಪ್ನುವಂತಿ । ಕಿಮರ್ಥಂ । ಅವಸೇಽನ್ನಾರ್ಥಂ ರಕ್ಷಣಾರ್ಥಂ ವಾ । ತಥಾ ಧನಾಯ ಧನಾರ್ಥಂ ಚ ತಮಿಂದ್ರಂ ಪ್ರಾಪ್ನುವಂತಿ । ಯಸ್ಮಾತ್ಸ ಇಂದ್ರಸ್ತಮಸಿ ದೃಷ್ಟಿಪ್ರತಿಬಂಧಕೇಽಂಧೇ ಚಿತ್ ಆಧ್ಯಾನರಹಿತೇ ಚಿತ್ತವ್ಯಾಮೋಹಕರೇಽಪಿ ಸಂಗ್ರಾಮೇ ಜ್ಯೋತಿರ್ಜಯಲಕ್ಷಣಂ ಪ್ರಕಾಶಂ ವಿದತ್ । ಲಂಭಯತಿ । ತಸ್ಮಾತ್ತಮೇವ ಪ್ರಾಪ್ನುವಂತೀತ್ಯರ್ಥಃ । ಅನ್ಯತ್ಸಮಾನಂ ॥ ಅಪ್ಸಂತ । ಆಪ್ಲೃ ವ್ಯಾಪ್ತೌ । ಲಙಿ ವ್ಯತ್ಯಯೇನಾತ್ಮನೇಪದಂ । ವ್ಯತ್ಯಯೇನ ಕ್ಸಪ್ರತ್ಯಯಃ । ವ್ಯತ್ಯಯೇನ ಧಾತೋರ್ಹ್ರಸ್ವತ್ವಂ । ವಿದತ್ । ವಿದ್ಲೃ ಲಾಭೇ । ಛಂದಸಿ ಲುಙ್ಲಙ್ಲಿಟ ಇತಿ ವರ್ತಮಾನೇ ಛಾಂದಸೋ ಲುಙ್ । ಲೃದಿತ್ವಾಚ್ಚ್ಲೇರಙಾದೇಶಃ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ ॥

ಪ್ರತಿಪದಾರ್ಥ

**ಸಃ**—ಇಂದ್ರನು । **ತಮಸಿ**— ಕಗ್ಗತ್ತಲೆಯನ್ನುಂಟುಮಾಡುವುದೂ । **ಅಂಧೇ ಚಿತ್**— ಚಿತ್ತಭ್ರಾಂತಿಯನ್ನುಂಟುಮಾಡುವುದೂ ಆದ ( ಘೋರವಾದ ) ಯುದ್ಧದಲ್ಲೂ ಸಹ । **ಜ್ಯೋತಿಃ**— ಜಯರೂಪವಾದ ಪ್ರಕಾಶವನ್ನು । **ವಿದತ್**—ಹೊಂದಿಸುತ್ತಾನೆ. ( ಆದ್ದರಿಂದ ) । **ನರಃ**—ಭಕ್ತರಾದ ಪ್ರಜೆಗಳು । **ಶವಸಃ**—ಪರಾಕ್ರಮವನ್ನು ತೋರಿಸಬೇಕಾದ । **ಉತ್ಸವೇಷು**—ಯುದ್ಧಗಳಲ್ಲಿ । **ನರಂ**—ಜಯವನ್ನು ತರತಕ್ಕ । **ತಂ**—ಆ ಇಂದ್ರನನ್ನು । **ಅಪ್ಸಂತ**—ಸಮೀಪಿಸುತ್ತಾರೆ. ( ಮರೆಹೊಗುತ್ತಾರೆ ) । **ಅವಸೇ**—ಅನ್ನಕ್ಕಾಗಿಯೂ ಅಥವಾ ರಕ್ಷಣೆಗಾಗಿಯೂ । **ಧನಾಯ**—ಧನಕ್ಕಾಗಿಯೂ ಸಹ । **ತಂ**—ಇಂದ್ರನನ್ನು (ಮರೆಹೋಗುತ್ತಾರೆ)। **ಮರುತ್ವಾನ್**—ಮರುತ್ತುಗಳೊಡನೆ ಕೂಡಿಕೊಂಡಿರುವ । **ಇಂದ್ರಃ**—ಇಂದ್ರನು । **ನಃ**—ನಮ್ಮ । **ಊತೀ**—ರಕ್ಷಣಾರ್ಥನಾಗಿ । **ಭವತು**—ಆಗಿರಲಿ ।

ಭಾವಾರ್ಥ

ಇಂದ್ರನು ಕಗ್ಗತ್ತಲೆಯನ್ನುಂಟುಮಾಡುವುದೂ, ಚಿತ್ತಭ್ರಾಂತಿಯನ್ನುಂಟುಮಾಡುವುದೂ ಆದ ಘೋರವಾದ ಯುದ್ಧದಲ್ಲೂ ಸಹ ಜಯರೂಪವಾದ ಪ್ರಕಾಶವನ್ನುಂಟುಮಾಡುತ್ತಾನೆ. ಅತ್ಯಂತ ಬಲವನ್ನು ಉಪಯೋಗಿಸಬೇಕಾದ ಯುದ್ಧದಲ್ಲೂ ಜಯವನ್ನು ತರತಕ್ಕ ಆ ಇಂದ್ರನನ್ನು ಮರೆಹೋಗುತ್ತಾರೆ. ಮತ್ತು ರಕ್ಷಣೆಗಾಗಿಯೂ, ಧನಕ್ಕಾಗಿಯೂ ಸಹ ಅವನನ್ನು ಮರೆಹೊಗುತ್ತಾರೆ. ಮರುತ್ತುಗಳೊಡನೆ ಕೂಡಿಕೊಂಡಿರುವ ಇಂದ್ರನು ನಮಗೆ ರಕ್ಷಕನಾಗಿರಲಿ.

## English Translation

To him, a leader (to victory) his worshippers apply in contests of strength for protection and for wealth, as he grants them the light (of conquest) in the bewildering darknes (of battle): may Indra, associated with the Maruts be our protection.

॥ ವಿಶೇಷವಿಷಯಗಳು ॥

ಮಾನವರಾದ ಯಜ್ಞಕರ್ತರಿಂದ ತಡೆಯಲು ಸಾಧ್ಯವಾಗದಂತಹ ಎರಡು ವಿಧವಾದ ಉಪದ್ರವನ್ನು ಅಸುರರು ಪದೇ ಪದೇ ಉಂಟುಮಾಡುತ್ತಿದ್ದರು. ಮೊದಲನೆಯದಾಗಿ ಭೌತಿಕವಾದ ಬೆಳಕನ್ನು ಮರೆಸಿ ಕಗ್ಗತ್ತಲೆಯನ್ನುಂಟುಮಾಡುವುದೂ, ಎರಡನೆಯದಾಗಿ ಮೋಸದ ಯುದ್ಧವನ್ನು ಮಾಡಿ ಇವರಿಗೆ ಚಿತ್ತಭ್ರಾಂತಿಯನ್ನುಂಟುಮಾಡುವುದೂ ಮುಖ್ಯವಾಗಿದ್ದವು. ಇಂತಹ ಸನ್ನಿವೇಶಗಳಲ್ಲಿ ಇಂದ್ರನು ಭಕ್ತರಾದ ಇವರಿಗೆ ಸಹಾಯಮಾಡುವುದಕ್ಕೆ ಇವರ ನೆರವಾಗಿ ನಿಂತು ಮೋಸಮಾಡತಕ್ಕ ಆ ವಂಚಕರನ್ನು ತಾನೂ ಯುಕ್ತಿಯಿಂದಲೇ ವಂಚಿಸಿ ಅವರನ್ನು ನಾಶಮಾಡಿ ಬೆಳಕನ್ನು ಹರಡುವುದರ ಮೂಲಕ ಲೋಕಕ್ಕೆ ಉಪಕಾರವನ್ನು ಮಾಡುತ್ತಿದ್ದುದರಿಂದ ಆ ಪರಾಕ್ರಮಕಾರ್ಯವನ್ನು ಕೃತಜ್ಞತಾ ಸೂಚನೆಯೊಂದಿಗೆ ಇಲ್ಲಿ ವರ್ಣಿಸಿದೆ.

**ಅಂಧೇ ಚಿತ್—ಚಿತ್ತವ್ಯಾಮೋಹಕರೇಽಪಿ ಸಂಗ್ರಾಮೇ ।** ಚಿತ್ತಭ್ರಾಂತಿಯನ್ನುಂಟುಮಾಡತಕ್ಕ ಯುದ್ಧದಲ್ಲಿಯೂ ಕೂಡ, **ಜ್ಯೋತಿರ್ವಿದತ್**-ವಿಜಯಪರವಾದ ಪ್ರಕಾಶವನ್ನು ಹೊಂದಿಸುತ್ತಾನೆ. ಅಸುರರ ಮಾಯೆಯು ಅತ್ಯಂತ ಪ್ರಬಲವಾದುದರಿಂದ ಎಂತಹ ಶೂರನಾದ ಯೋಧನಾದರೂ ಮನೋವೈಕಲ್ಯವನ್ನು ಹೊಂದುವುದು ಸಹಜ. ಅಂತಹ ಸಂದರ್ಭಗಳಲ್ಲಿ ಇಂದ್ರನು ಆ ಅಸುರರನ್ನು ನಾಶಮಾಡಿದುದೂ ಅವರ ವಂಚನೆಯನ್ನೂ ಮೀರಿಸುವಂತೆ ತಾನೂ ಅವರನ್ನು ವಂಚಿಸಿದುದೂ ಸ್ವಾರಸ್ಯವಾಗಿ ವರ್ಣಿತವಾಗಿದೆ.

**ಅಹಿಂ ಮೋಹಾನಮುಪ ಆಶಯಾನಂ ಪ್ರ ಮಾಯಾಭಿರ್ಮಾಯಿನಂ ಸಕ್ಷದಿಂದ್ರಃ ।**
(ಋ. ಸಂ. ೫-೩೦-೬)

ದೇವತೆಗಳನ್ನು ಬಾಧಿಸುವವನೂ ಅತ್ಯಂತ ಕಪಟಿಯೂ ಆದ ವೃತ್ರನನ್ನು ತನ್ನ ಮಾಯಾ ಶಕ್ತಿಗಳಿಂದ ಸೋಲಿಸಿ ಕೊಂದಾಗ ಅವನ ದೇಹದಿಂದ ಒಬ್ಬನಾದಮೇಲೊಬ್ಬನು ಹುಟ್ಟಿ ಇಂದ್ರನನ್ನು ಪ್ರತಿಭಟಿಸುವ ಆವೇಶವನ್ನು ತೋರಿಸುತ್ತಿರುವ ಸನ್ನಿವೇಶವನ್ನೂ ವರ್ಣಿಸಿ ಅಂತಹ ಕಠಿಣವಾದ ಪ್ರಸಂಗದಲ್ಲಿಯೂ ಸುಲಭವಾಗಿ ಅವರನ್ನೆಲ್ಲಾ ನಿರ್ಮೂಲಮಾಡಿದನೆಂದೂ ಹೇಳಿದೆ—

**ತ್ಯಸ್ಯ ಚಿನ್ಮಹತೋ ನಿರ್ಮೃಗಸ್ಯ ವಧರ್ಜಘಾನ ತವಿಷೀಭಿರಿಂದ್ರಃ ।**
**ಯ ಏಕ ಇದಪ್ರತಿರ್ಮನ್ಯಮಾನ ಆದಸ್ಮಾದನ್ಯೋ ಅಜನಿಷ್ಟ ತವ್ಯಾನ್ ॥**
(ಋ. ಸಂ. ೫-೩೨-೩)

**ನಿರ್ಜಘಾನಾಯುಧಂ ಶಕ್ರೋ ವೃತ್ರೇಣ ಕ್ಷಿಪ್ತಮೋಜಸಾ ।**
**ವೃತ್ರಸ್ಯ ಗಾತ್ರಾದನ್ಯೋ ಯಃ ಪ್ರಾದುರ್ಭೂತೋ ಮಹಾಸುರಃ ॥**

**ವೃತ್ರಂ ಪೂರ್ವಂ ನಿಹತ್ಯೇಂದ್ರೋ ದ್ವಿತೀಯಂ ಶುಷ್ಣಸಂಜ್ಞಕಂ।**
**ಪುನರ್ಜಘಾನೇಂದ್ರ ಇತಿ ಪರಾಭಿಃ ಕೀರ್ತಯತ್ಯೃಷಿಃ ॥**

ಎಂಬುದಾಗಿ ಮೇಲಿನ ಋಕ್ಕಿಗೆ ವ್ಯಾಖ್ಯಾನವನ್ನು ಮಾಡುವಾಗ ಸಾಯಣರು ಉಪೋದ್ಘಾತಶ್ಲೋಕವನ್ನು ಹೇಳಿರುವರು. ಇದರಂತೆಯೇ ಅಸುರರು ಮುಚ್ಚಿಕೊಂಡಿದ್ದ ಸೂರ್ಯನನ್ನು ಬಿಡಿಸಿ ತಮಸ್ಸಿನಿಂದ ಆವೃತವಾಗಿದ್ದ ಲೋಕಕ್ಕೆಲ್ಲಾ ಬೆಳಕನ್ನು ಹರಡಿದನು ಎಂದು ಹೇಳುವಾಗಲೂ,

**ತಮಸಿ ಜ್ಯೋತಿಃ ವಿದತ್**—ಕಗ್ಗತ್ತಲೆಯನ್ನುಂಟುಮಾಡುವ ಯುದ್ಧದಲ್ಲೂ ಸಹ ಜ್ಯೋತೀರೂಪವಾದ ಜಯವನ್ನು ಸಂಪಾದಿಸಿಕೊಟ್ಟನು ಎಂದಿದೆ. ಇದರಂತೆಯೇ ಇತರ ಕಡೆಗಳಲ್ಲಿಯೂ ಸಹ

**ಯಃ ಸೂರ್ಯಂ ಯ ಉಷಸಂ ಜಜಾನ ಯೋ ಅಪಾಂ ನೇತಾ ಸ ಜನಾಸ ಇಂದ್ರಃ ।**
(ಋ. ಸಂ. ೨-೧೨-೭).

**ಇಂದ್ರಃ ಸ್ವರ್ಷಾ ಜನಯನ್ನಹಾನಿ ಜಿಗಾಯೋಶಿಗ್ಭಿಃ ಪೃತನಾ ಅಭಿಷ್ಟಿಃ ।**
**ಪ್ರಾರೋಚಯನ್ಮನವೇ ಕೇತುಮಹ್ನಾಮವಿಂದಜ್ಜ್ಯೋತಿರ್ಬೃಹತೇ ರಣಾಯ ॥**
(ಋ. ಸಂ. ೩-೩೪-೪).

**ಸ್ವರ್ಭಾನೋರಧ ಯದಿಂದ್ರ ಮಾಯಾ ಅವೋ ದಿವೋ ವರ್ತಮಾನಾ ಅವಾಹನ್ ।**
**ಗೂಳ್ಹಂ ಸೂರ್ಯಂ ತಮಸಾಪವ್ರತೇನ ತುರೀಯೇಣ ಬ್ರಹ್ಮಣಾವಿಂದದತ್ರಿಃ ॥**
(ಋ. ಸಂ. ೫-೪೦-೬)

ಅಸುರಾದಿಗಳಿಂದ ಆವೃತನಾಗಿದ್ದ ಸೂರ್ಯನ ತೇಜಸ್ಸನ್ನು ಇಂದ್ರನು ಬಿಡಿಸಿಪೃಥಿವ್ಯಂತರಿಕ್ಷಗಳಿಗೆಲ್ಲಾ ತೇಜಸ್ಸನ್ನು ಹರಡಿದನೆಂದು ಇಂದ್ರನ ಮಹಿಮೆಯನ್ನು ಸ್ತುತಿಸಿದೆ.

**ಉತ್ಸವೇಷು—ಸಂಗ್ರಾಮೇಷು** । ಯುದ್ಧಗಳಲ್ಲಿ **ಬಲವತಾಮುತ್ಸವಭೂತೇಷು ಸಂಗ್ರಾಮೇಷು । ಬಲವತಾಂ ಸಂಗ್ರಾಮ ಉತ್ಸವ ಏವ ।** ಶಕ್ತಿವಂತರಿಗೆ ಸಂಗ್ರಾಮವೂ ಸಹ ಉತ್ಸಾಹಜನಕವಾದುದರಿಂದ ಉತ್ಸವದಂತೆಯೇ ಪರಿಗಣಿಸಲ್ಪಡುತ್ತದೆ ಎಂದು ಒಂದು ಅರ್ಥವನ್ನೂ ಇದರೊಂದಿಗೆ **ಅಭಿಷವೇಷು** ಎಂದು ಇನ್ನೊಂದು ಅರ್ಥವನ್ನೂ ಸ್ಕಂದಸ್ವಾಮಿಗಳು ಮಾಡುತ್ತಾರೆ. ಎರಡನೆಯ ಅರ್ಥವನ್ನು ವಿವರಿಸುತ್ತಾ **ಅಥವಾ ಉತ್ಸವೇಷ್ವಿತ್ಯುಚ್ಛಬ್ದಃ ಅಭೀತ್ಯೇತಸ್ಯ ಸ್ಥಾನೇ । ಬಲಸ್ಯ ಸಂಬಂಧಿಷ್ವಭಿಷವೇಷು । ಬಲೇನ ಯೇಷು ಯಜ್ಞೇಷ್ವಭಿಷೂಯಂತೇ ಸೋಮಸ್ತತ್ರೇತ್ಯರ್ಥಃ ।** ಉತ್ಸವೇಷು ಎಂಬ ಪದದಲ್ಲಿ **ಉತ್** ಶಬ್ದವು **ಅಭಿ** ಎನ್ನುವುದರ ಪರ್ಯಾಯವಾಗಿದೆ. ಶಕ್ತಿಯಿಂದ ನೆರವೇರಿಸಿದ **ಅಭಿಷವ** ಎಂದರೆ ಯಾವ ಯಜ್ಞದಲ್ಲಿ ಶಕ್ತಿಪೂರ್ವಕವಾಗಿ ಸೋಮರಸವನ್ನು ಹಿಂಡುವರೋ ಆ ಯಜ್ಞಗಳಲ್ಲಿ ಎಂದಭಿಪ್ರಾಯ.

॥ ವ್ಯಾಕರಣಪ್ರಕ್ರಿಯಾ ॥

**ಆಪ್ಸಂತ** - ಆಪ್ಲೃ ವ್ಯಾಪ್ತೌ ಧಾತು. ಲಜ್ ಪ್ರಥಮಪುರುಷಬಹುವಚನದಲ್ಲಿ **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ಝ ಪ್ರತ್ಯಯ ಬರುತ್ತದೆ. **ಝೋಂತಃ**—(ಪಾ. ಸೂ. ೭-೧-೩)

ಎಂಬುದರಿಂದ ಅದಕ್ಕೆ ಅಂತಾದೇಶ. ಹಿಂದಿನ ಸೂತ್ರದಿಂದಲೇ ವ್ಯತ್ಯಯದಿಂದ ಕ್ಸ ಪ್ರತ್ಯಯ ಬರುತ್ತದೆ. **ಲಶಕ್ವ-ತದ್ಧಿತೇ**—ಎಂಬುದರಿಂದ ಕಕಾರಲೋಪ. **ಅತೋ ಗುಣೇ**—ಎಂಬುದರಿಂದ ಪರರೂಪ. ವ್ಯತ್ಯಯದಿಂದಲೇ ಧಾತುವಿನ ಆಕಾರಕ್ಕೆ ಹ್ರಸ್ವ. ಅಪ್ಸಂತ ಎಂದು ರೂಪವಾಗುತ್ತದೆ. **ತಿಙ್ಙತಿಙಃ**—(ಪಾ. ಸೂ. ೮-೧-೨೮) ಎಂಬುದ ರಿಂದ ನಿಘಾತಸ್ವರ ಬರುತ್ತದೆ.

**ಉತ್ಸವೇಷು**—ಉತ್ಸೂಯತೇ ಹರ್ಷಂ (ಯೋಷ್ಟೃಣಾಂ) ಇತಿ ಉತ್ಸವಃ. ಷು ಪ್ರಸವೈಶ್ವರ್ಯಯೋಃ ಧಾತು. **ನಂದಿಗ್ರಹಪಚಾದಿಭ್ಯಃ**—ಎಂಬುದರಿಂದ ಅಚ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ ಅವಾದೇಶ. **ಚಿತಃ**—ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಸಮಾಸವಾದಾಗ **ಗತಿಕಾರಕೋಪ-ಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಸಪ್ತಮೀ ಬಹುವಚನಾಂತರೂಪ.

**ಅವಸೇ**—ಅವ ರಕ್ಷಣೇ ಧಾತು. **ಸರ್ವಧಾತುಭ್ಯ ಅಸುನ್**—(ಉ. ಸೂ. ೪-೬೨೮) ಎಂಬುದರಿಂದ ಅಸುನ್ ಪ್ರತ್ಯಯ. ಅವಸ್ ಶಬ್ದವಾಗುತ್ತದೆ. **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದ ರಿಂದ ಆದ್ಯುದಾತ್ತ ಬರುತ್ತದೆ. ಚತುರ್ಥೀ ಏಕವಚನಾಂತರೂಪ

**ವಿದತ್**—ವಿದ್ಲೃ ಲಾಭೇ ಧಾತು. **ಛಂದಸಿ ಲುಙ್ಲಙ್ಲಿಟಃ**—(ಪಾ. ಸೂ. ೩-೪-೬) ಎಂಬುದ ರಿಂದ ವರ್ತಮಾನಾರ್ಥದಲ್ಲಿ ಛಾಂದಸವಾದ ಲುಙ್. ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ**—ಎಂಬುದರಿಂದ ಇಕಾರಲೋಪ. **ಚ್ಲಿ ಲುಙಿ**—ಸೂತ್ರದಿಂದ ಚ್ಲಿ ಪ್ರಾಪ್ತವಾದಾಗ ಧಾತುವು ಲೃದಿತ್ತಾದುದರಿಂದ **ಪುಷಾದಿದ್ಯುತಾದಿ**—(ಪಾ. ಸೂ. ೩-೧.೫೫) ಎಂಬುದರಿಂದ ಅದಕ್ಕೆ ಅಙಾದೇಶ. ಙಿತ್ತಾದುದರಿಂದ ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. **ಬಹುಲಂ ಛಂದಸ್ಯಮಾಙ್ಯೋಗೇಽಪಿ**—(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ‖ ೮ ‖



ಸಂಹಿತಾಪಾಠಃ

ಸ ಸವ್ಯೇನ ಯಮತಿ ವ್ರಾಧತಶ್ಚಿತ್ಸ ದಕ್ಷಿಣೇ ಸಂಗೃಭೀತಾ ಕೃ-

ತಾನಿ ।

ಸ ಕೀರಿಣಾ ಚಿತ್ಸನಿತಾ ಧನಾನಿ ಮರುತ್ವಾನ್ನೋ ಭವತ್ವಿಂದ್ರ

ಊತೀ ॥ ೯ ॥

ಪದಪಾಠಃ

ಸಃ । ಸವ್ಯೇನ । ಯಮತಿ । ವ್ರಾಧತಃ । ಚಿತ್ । ಸಃ । ದಕ್ಷಿಣೇ । ಸಂऽಗೃಭೀತಾ । ಕೃತಾನಿ ।

ಸಃ । ಕೀರಿಣಾ । ಚಿತ್ । ಸನಿತಾ । ಧನಾನಿ । ಮರುತ್ವಾನ್ । ನಃ । ಭವತು । ಇಂದ್ರಃ । ಊತೀ ॥ ೯ ॥

ಸಾಯಣಭಾಷ್ಯಂ

ಸ ಇಂದ್ರಃ ಸವ್ಯೇನ ವಾಮಹಸ್ತೇನೈಕಹಸ್ತೇನ ವ್ರಾಧತಶ್ಚಿತ್ ಹಿಂಸತೋ ಮಹತಃ ಶತ್ರೂನಪಿ ಯಮತಿ । ನಿಯಮಯತಿ । ತಥಾ ಸ ಇಂದ್ರೋ ದಕ್ಷಿಣೇ ದಕ್ಷಿಣಪಾರ್ಶ್ವಸ್ಥೇನ ಹಸ್ತೇನೈಕೇನ ಯಜಮಾನೈಃ ಕೃತಾನಿ ಹವೀಂಷಿ ಸಂಗೃಭೀತಾ । ಸಂಗೃಹ್ಣಾತಿ । ಅಪಿ ಚ ಸ ಇಂದ್ರಃ ಕೀರಿಣಾ ಚಿತ್ ಕೀರ್ತಯಿತ್ರಾ ಸ್ತೋತ್ರಾ ಚ ಸ್ತುತಃ ಸನ್ಧನಾನಿ ಸನಿತಾ ಪ್ರದಾನಶೀಲೋ ಭವತಿ । ಹವಿಃಪ್ರದಾತೄಣಾಮಿವ ಸ್ತೋತೄಣಾಮಪಿ ಧನಂ ಪ್ರಯಚ್ಛತೀತ್ಯರ್ಥಃ । ಶಿಷ್ಟಂ ಸ್ಪಷ್ಟಂ ॥ ಯಮತಿ । ಯಮ ಉಪರಮೇ । ಣಿಚ್ಯಮಂತತ್ವಾನ್ಮಿತ್ತ್ವೇ ಮಿತಾಂ ಹ್ರಸ್ವ ಇತಿ ಹ್ರಸ್ವತ್ವಂ । ಛಂದಸ್ಯುಭಯಥೇತಿ ಶಪ ಆರ್ಧಧಾತುಕತ್ವಾಣ್ಣೇರನಿಟೀತಿ ಣಿಲೋಪಃ । ವ್ರಾಧತಃ । ವೃಧು ವೃದ್ಧೌ । ಅಸ್ಮಾದತಿಪ್ರತ್ಯಯೆ ಔಣಾದಿಕ ಆಮಾಗಮಶ್ಚ । ವೃಷಾದಿತ್ವಾದಾದ್ಯುದಾತ್ತತ್ವಂ । ಸಂಗೃಭೀತಾ । ಗ್ರಹ ಉಪಾದಾನೇ । ಲಿಜಾ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಲಿಜಃ ಸಲೋಪ ಇತಿ ಸಲೋಪಃ । ಗ್ರಹಿಜ್ಯಾದಿನಾ ಸಂಪ್ರಸಾರಣಂ । ಹೃಗ್ರಹೋರ್ಭ ಇತಿ ಭತ್ವಂ । ದ್ವ್ಯಚೋಽತಸ್ತಿಙ ಇತಿ ದೀರ್ಘಃ । ಸನಿತಾ । ಷಣು ದಾನೇ । ತಾಚ್ಛೀಲಿಕಸ್ತೃನ್ । ಧನಾನಿ । ನ ಲೋಕಾವ್ಯಯೇತಿ ಷಷ್ಠೀಪ್ರತಿಷೇಧಃ ॥

ಪ್ರತಿಪದಾರ್ಥ

ಸಃ—ಆ ಇಂದ್ರನು । ಸವ್ಯೇನ—ಎಡಗೈಯಿಂದ । ವ್ರಾಧತಶ್ಚಿತ್—ಹಿಂಸೆಮಾಡತಕ್ಕವನು ಪ್ರಬಲ ರಾದ ಶತ್ರುಗಳನ್ನೂ ಸಹ । ಯಮತಿ—ತಡೆದು ನಿಗ್ರಹಿಸುತ್ತಾನೆ. । ಸಃ—ಅದೇ ಇಂದ್ರನು । ದಕ್ಷಿಣೇ—ಬಲ

ಗೈಯಿಂದ । **ಕೃತಾನಿ**—(ಯಜಮಾನರಿಂದ) ಅರ್ಪಿತಗಳಾದ ಹವಿಸ್ಸುಗಳನ್ನು । **ಸಂಗೃಭೀತಾ**—ಸ್ವೀಕರಿಸುತ್ತಾನೆ. (ಮತ್ತು) । **ಸಃ**—ಇಂದ್ರನು । **ಕೀರಿಣಾ ಚಿತ್**—ಕೀರ್ತನಕಾರನಾದ ಭಕ್ತನಿಂದ ಸ್ತುತನಾಗಿ । **ಧನಾನಿ**—ಧನಗಳನ್ನು । **ಸನಿತಾ**—ದಾನಮಾಡುವವನಾಗುತ್ತಾನೆ । **ಮರುತ್ವಾನ್**—ಮರುತ್ತುಗಳೊಡನೆ ಕೂಡಿಕೊಂಡಿರುವ । **ಇಂದ್ರಃ**—ಇಂದ್ರನು । **ನಃ**—ನಮ್ಮ । **ಊತೀ**—ರಕ್ಷಣಾರ್ಥವಾಗಿ । **ಭವತು**—ಆಗಲಿ ।

ಭಾವಾರ್ಥ

ಹಿಂಸೆ ಮಾಡತಕ್ಕ ಶತ್ರುವು ಎಷ್ಟು ಪ್ರಬಲನಾಗಿದ್ದಾಗ್ಯೂ ಸಹ ಇಂದ್ರನು ಎಡಗೈಯೊಂದರಿಂದಲೇ ಅವನನ್ನು ತಡೆದು ನಿಲ್ಲಿಸುತ್ತಾನೆ. ಮತ್ತು ಬಲಗೈಯಿಂದ ಯಜಮಾನರಿಂದ ಅರ್ಪಿತಗಳಾದ ಹವಿಸ್ಸುಗಳನ್ನು ಸ್ವೀಕರಿಸುತ್ತಾನೆ. ಭಕ್ತರಿಂದ ಸ್ತುತನಾದೊಡನೆಯೇ ಅವರಿಗೆ ಧನಗಳನ್ನು ದಾನಮಾಡುತ್ತಾನೆ. ಇಂತಹ ಇಂದ್ರನು ಮರುತ್ತುಗಳೊಡನೆ ಕೂಡಿಕೊಂಡು ನಮ್ಮ ರಕ್ಷಕನಾಗಿರಲಿ.

English Translation

With his left hand he restrains the malignant, with his right he receives the (sacrificial) offerings; he is the giver of riches, (when propitiated) by one who celebrates his praise: may Indra, associated with the Maruts, be our protection.

॥ ವಿಶೇಷವಿಷಯಗಳು ॥

**ತನೂತಯೋ ರಣಯುಞ್ಝೂರಸಾತೌ ತಂ ಕ್ಷೇಮಸ್ಯ ಕ್ಷಿತಯಃ ಕೃಣ್ವತ ತ್ರಾಂ ।**
**ಸ ವಿಶ್ವಸ್ಯ ಕರುಣಸ್ಯೇಶ ಏಕೋ ಮರುತ್ವಾನ್ನೋ ಭವತ್ವಿಂದ್ರ ಊತೀ ॥**
(ಋ. ಸಂ. ೧-೧೦೦-೭)

ಎಂದು ಹಿಂದಿನ ಋಕ್ಕಿನಲ್ಲಿ ವರ್ಣಿಸಿರುವಂತೆ ಏಕಕಾಲದಲ್ಲಿ ಯುದ್ಧದೇವತೆಯೂ ಯಜ್ಞದೇವತೆಯೂ ಆದ ಇಂದ್ರನ ಮಹತ್ವವನ್ನು ಇಲ್ಲಿಯೂ ಸ್ತುತಿಸಿದೆ. ಇಂದ್ರನು ಒಂದು ಕೈಯಲ್ಲಿ ಶತ್ರುವನ್ನು ತಡೆದು ನಿಲ್ಲಿಸಿ ಆ ಶತ್ರುವು ಎಷ್ಟೇ ಪ್ರಬಲನಾದರೂ ಸಹ ಅವನನ್ನು ಸೋಲಿಸಬಲ್ಲನು. ಇನ್ನೊಂದು ಕೈಯಿಂದ ಯಜ್ಞಗಳಲ್ಲಿ ಅರ್ಪಿತಗಳಾದ ಹವಿಸ್ಸುಗಳನ್ನು ಸ್ವೀಕರಿಸುತ್ತಾನೆ. ಅನಂತರ ಭಕ್ತರಿಗೆ ಉದಾರವಾಗಿ ಧನಗಳನ್ನು ದಾನಮಾಡುತ್ತಾನೆ, ಎಂದು ಇಂದ್ರನ ನಾನಾವಿಧವಾದ ಶಕ್ತಿಯನ್ನು ವರ್ಣಿಸಿದೆ.

**ವ್ರಾಧತಶ್ಚಿತ್**—ವ್ರಾಧನ್ನಿತಿ ಮಹನ್ನಾಮ । ಮಹತೋಽಪಿ ಶತ್ರೂನ್ । ವ್ರಾಧನ್ ಎಂಬುದು ಮಹನ್ನಾಮಗಳಲ್ಲಿ ಪಠಿತವಾಗಿದೆಯೆಂದು ಭಾಷ್ಯಕಾರರು ಹೇಳಿದ್ದಾರೆ. ಸಾಧಾರಣವಾಗಿ ಮಹತ್ ಶಬ್ದವನ್ನು ಶ್ರೇಷ್ಠವಾದ ಎಂಬ ಅರ್ಥದಲ್ಲಿ ಉಪಯೋಗಿಸುವ ರೂಢಿಯಿದೆ. ಆದರೆ ವ್ರಾಧನ್ ಎಂಬ ವಿಶೇಷಣವನ್ನು ಶತ್ರುಗಳ ಪರವಾಗಿಯೇ ಹೆಚ್ಚು ಉಪಯೋಗಿಸಿರುವುದರಿಂದ ಅತ್ಯಂತ ಪ್ರಬಲವಾದ ಶಕ್ತಿಯುಳ್ಳವರೆಂದು ಅರ್ಥವಾಗುತ್ತದೆ. ದೇವತೆಗಳ ಪರವಾಗಿ ಈ ವಿಶೇಷಣವಿರುವುದು ಅಪರೂಪ.

**ಇಮೇ ಯೇ ತೇ ಸು ವಾಯೋ ಬಾಹ್ವೋಜಸೋಽಂತರ್ನದೀ ತೇ ಪತಯಂತ್ಯುಕ್ಷಣೋ ಮಹಿ ವ್ರಾಧಂತ ಉಕ್ಷಣಃ ।**

(ಋ. ಸಂ. ೧-೧೩೫-೯)

ಇಲ್ಲಿ **ವ್ರಾಧಂತಃ** ಎಂಬ ಪದವು ವಾಯುವಿನ ಕುಮರೆಗಳಿಗೆ ವಿಶೇಷಣವಾಗಿ **ಮಹಿ ವ್ರಾಧಂತಃ-ಅತಿಪ್ರಭೂತಂ ವರ್ಧಮಾನಾಃ ।** ಅತಿ ಪ್ರಭೂತವಾಗಿ ವೃದ್ಧಿಯಾಗತಕ್ಕ ಎಂಬರ್ಥವನ್ನು ಕೊಡುತ್ತದೆ. ಮತ್ತು—

**ಸ ಚಂದ್ರೋ ವಿಪ್ರ ಮರ್ತ್ಯೋ ಮಹೋ ವ್ರಾಧಂತಮೋ ದಿವಿ ।**

(ಋ. ಸಂ. ೧-೧೫೦-೩)

ಎಂಬ ಋಕ್ಕಿನಲ್ಲಿ ಅಗ್ನಿಯನ್ನು ಪೂಜಿಸತಕ್ಕ ಮಾನವನ ಮಹತ್ವವನ್ನು ಪ್ರಶಂಸಿಸತಕ್ಕ ವಿಶೇಷಣವಾಗಿದೆ. **ವ್ರಾಧಂತಮಃ-ಪ್ರವೃದ್ಧತಮಃ । ಇತರದೇವಾನಾಮಪಿ ಶ್ರೇಷ್ಠಃ** ಇತರ ಎಲ್ಲಾ ದೇವತೆಗಳಿಗಿಂತಲೂ ಅತ್ಯಂತ ಶ್ರೇಷ್ಠನು ಎಂಬರ್ಥ. ಹೀಗೆ ಇನ್ನೂ ಒಂದೆರಡು ಋಕ್ಕುಗಳನ್ನು ಬಿಟ್ಟರೆ ಉಳಿದೆಡೆಗಳಲ್ಲೆಲ್ಲಾ ಶತ್ರುಪರ್ಯಾಯವಾಗಿಯೇ ಉಪಯೋಗಿಸಲ್ಪಟ್ಟಿದೆ.

**ಸ ವ್ರಾಧತೋ ನಹುಷೋ ದಂಸುಜೂತಃ ಶರ್ಧಸ್ತರೋ ನರಾಂ ಗೂರ್ತಶ್ರವಾಃ ।**

(ಋ. ಸಂ. ೧-೧೨೨-೧೦)

ಈ ಋಕ್ಕಿನಲ್ಲಿ **ಹಿಂಸಕಾನ್ ಮಹತೋಽಪಿ ।** ಹಿಂಸಕರು ಅತ್ಯಂತಪ್ರಬಲರಾಗಿದ್ದಾಗ್ಯೂ ಅವರನ್ನು ಎಂದರ್ಥ. ಮತ್ತು,

**ಶತ್ರೂಯಂತೋ ಅಭಿ ಯೇ ನಸ್ತತಸ್ರೇ ಮಹಿ ವ್ರಾಧಂತ ಓಗಣಾಸ ಇಂದ್ರ ।**

(ಋ. ಸಂ. ೧೦-೮೯-೧೫)

ಎಂಬಲ್ಲಿ **ವ್ರಾಧಂತಃ-ಅಸ್ಮಾನ್ ಬಾಧಮಾನಾಃ ।** ನಮ್ಮನ್ನು ಅತಿಯಾಗಿ ಹಿಂಸಿಸುವ ಎಂದರ್ಥವಾಗಿದೆ. ಹೀಗೆಯೇ ಇನ್ನು ಕೆಲವು ಕಡೆಗಳಲ್ಲಿ ಅತ್ಯಂತಪ್ರಬಲನೂ, ತಡೆಯಲಾರದಷ್ಟು ಹಿಂಸೆಯನ್ನುಂಟುಮಾಡುವವನೂ ಆದ ಶತ್ರುವು ಎಂದು ಅರ್ಥವಿರುವಂತೆಯೇ ಪ್ರಕೃತವಾದ ಈ ಋಕ್ಕಿನಲ್ಲಿಯೂ ಸಹ ಶತ್ರುವು ಎಷ್ಟೇ ಮಹತ್ತಾದ ಪ್ರಾಬಲ್ಯವುಳ್ಳವನಾದರೂ ಸಹ ಅವನನ್ನು ತನ್ನ ಎಡಗೈಯಿನಲ್ಲೇ ತಡೆದು ನಿಲ್ಲಿಸಬಲ್ಲನು ಎಂದರ್ಥ.

**ಕೀರಿಣಾ—ಕೀರ್ತಯಿತ್ರಾ ಸ್ತೋತ್ರಾ ।** ಕೀರ್ತನಕಾರನಾದ ಭಕ್ತನಿಂದ । **ರೇಭಃ, ಜರಿತಾ, ಕಾರುಃ** ಇತ್ಯಾದಿ ೧೩ ಸ್ತೋತೃನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೯) ಕೀರಿ ಎಂದರೆ ಸ್ತೋತೃವೆಂಬರ್ಥ. **ಸೂರಯಃ ಕೀರಯೋ ರುದ್ರಾಃ,**

**ಯೋ ರಾತಹವ್ಯೋಽವೃಕಾಯ ಧಾಯಸೇ ಕೀರೇಶ್ಚಿನ್ಮಂತ್ರಂ ಮನಸಾ ವನೋಷಿ ತಂ ।**

(ಋ. ಸಂ. ೧-೩೧-೧೩)

ಎಂಬ ಋಕ್ಕಿನಲ್ಲಿರುವ **ಕೀರೇಃ ಚಿತ್** ಎಂಬ ಪದಗಳಿಗೆ ಸಾಯಣರು **ಸ್ತೋತುಃ** ಏವ-ಸ್ತುತಿಕಾರನದೇ ಆದ ಎಂದು ಅರ್ಥಮಾಡಿದ್ದಾರೆ ಸ್ಕಂದಸ್ವಾಮಿಗಳೂ ಸಹ ಈ ಅರ್ಥವನ್ನೇ ಹೇಳಿದ್ದರೂ **ಯೋ ದಾರಿದ್ರ್ಯೇಣ ಯಜತೇ,**

**ಸ್ತ್ರೈತ್ಯೇವ** ಎಂದು ದಾರಿದ್ರ್ಯಸೂಚಕವಾದ ಅರ್ಥವನ್ನೂ ಹೇಳಿದ್ದಾರೆ. Oldenberg ಎಂಬ ಆಂಗ್ಲವ್ಯಾಖ್ಯಾನ ಕಾರನೂ ಸಹ ಈ ಅರ್ಥವನ್ನೇ ಸಮರ್ಥಿಸಿ Thou acceptest in thy mind the hymn even of the poor ಎಂದು ಪರಿವರ್ತಿಸಿದ್ದಾನೆ. ದರಿದ್ರನೆಂದು ಕೀರಿಶಬ್ದಕ್ಕೆ ಅರ್ಥವಿಲ್ಲದಿದ್ದರೂ ಸಹ ಪ್ರಾಯಶಃ ಯಜ್ಞ ಮಾಡಲಪೇಕ್ಷೆಯಿಲ್ಲದ ಸ್ತೋತೃಗಳು ದರಿದ್ರರಾಗಿಯೇ ಇದ್ದು, ಈ ದೈನ್ಯಸೂಚಕವಾದ ಪ್ರಾರ್ಥನೆಯನ್ನು ಮಾಡಿರ ಬಹುದು. ಪ್ರಕೃತವಾದ ಈ ಋಕ್ಕಿನಲ್ಲಿಯೂ ಸಹ **ಕೀರ್ತನಕಾರನಿಂದ** ಎಂದರ್ಥವಾಗಿ ಅವನಿಗೆ ಧನಾದಿಗಳನ್ನು ದಾನಮಾಡುತ್ತಾನೆ ಎಂದು ಇಂದ್ರನನ್ನು ಸ್ತುತಿಸಿದೆ.

ವ್ಯಾಕರಣಪ್ರಕ್ರಿಯಾ

**ಯಮತಿ**—ಯಮು ಉಪರಮೇ. ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತುಮತಿ ಚ** —(ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದ ರಿಂದ ಉಪಧಾವೃದ್ಧಿ. **ಜನೀಜ್ರ್ಯಷ್ಕ್ನಸುರಂಜೋಮಂತಾಶ್ಚ**—ಎಂಬುದರಿಂದ ಧಾತುವು ಅಮಂತವಾದುದರಿಂದ ಮಿತ್‌ಸಂಜ್ಞೆಯನ್ನು ಹೊಂದುತ್ತದೆ. ಇದರಿಂದ **ಮಿತಾಂ ಹ್ರಸ್ವಃ**—(ಪಾ. ಸೂ. ೬-೪-೯೨) ಎಂಬುದರಿಂದ ಉಪಧಾಹ್ರಸ್ವ ಬರುತ್ತದೆ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಲಟಿನಲ್ಲಿ ಪ್ರಾಪ್ತವಾದ ಶಪ್ ವಿಕರಣಕ್ಕೆ ಆರ್ಧಧಾತುಕಸಂಜ್ಞೆಯೂ ಇರುವುದರಿಂದ **ಣೇರನಿಟಿ**—(ಪಾ. ಸೂ. ೬-೪-೫೧) ಎಂಬುದರಿಂದ ಶಪನ್ನು ನಿಮಿತ್ತೀಕರಿಸಿ ಣಿಚಿಗೆ ಲೋಪ. ಯಮತಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವ್ರಾಧತಃ**—ವೃಧು ವೃದ್ಧೌ ಧಾತು. ಇದಕ್ಕೆ ಔಣಾದಿಕವಾದ ಅತಿ ಪ್ರತ್ಯಯ. ಧಾತುವಿಗೆ ಆಮಾಗಮ. **ಮಿದಚೋಂತ್ಯಾತ್ಪರಃ**—ಸೂತ್ರದಿಂದ ಅಂತ್ಯಾಚಿನ ಪರವಾಗಿ ಬಂದಾಗ ಯಣಾದೇಶ. ವ್ರಾಧತ್ ಶಬ್ದವಾಗು ತ್ತದೆ. ಪ್ರತ್ಯಯಸ್ವರವು ಪ್ರಾಪ್ತವಾದರೆ ವೃಷಾದಿಯಲ್ಲಿ ಸೇರಿರುವುದರಿಂದ **ವೃಷಾದೀನಾಂ ಚ** (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಸಂಗೃಭೀತಾ**—ಗ್ರಹ ಉಪಾದಾನೇ ಧಾತು. ಲಿಙ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಬಹುಲಂ ಛಂದಸಿ**—ಎಂಬುದರಿಂದ ವಿಕರಣಕ್ಕೆ ಲುಕ್. **ಸುಟ್ ತಿಥೋಃ**—(ಪಾ. ಸೂ. ೩-೪-೧೦೭) ಎಂಬುದರಿಂದ ಪ್ರತ್ಯಯಕ್ಕೆ ಸುಟಾಗಮ. **ಲಿಙಃ ಸೀಯುಟ್**—(ಪಾ. ಸೂ. ೩-೪-೧೦೨) ಎಂಬುದರಿಂದ ಸೀಯುಟಾಗಮ. **ಲಿಙಃ ಸಲೋಪೋನಂತ್ಯಸ್ಯ**—(ಪಾ. ಸೂ. ೭-೨-೭೯) ಎಂಬುದರಿಂದ ಸಾರ್ವಧಾತುಕ ಸಂಜ್ಞೆಯುಳ್ಳ ಲಿಙಿನ ಅನಂತ್ಯಸಕಾರಕ್ಕೆ ಲೋಪ. **ಲೋಪೋವ್ಯೋರ್ವಲಿ**—ಸೂತ್ರದಿಂದ ಸೀಯುಟಿನ ಯಕಾರಕ್ಕೆ ಲೋಪ. **ಸಾರ್ವಧಾತುಕಮಪಿತ್**—ಎಂಬುದರಿಂದ ಪ್ರತ್ಯಯಕ್ಕೆ ಙಿತ್ವವಿರುವುದರಿಂದ ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ ಬರುವುದಿಲ್ಲ. **ಗ್ರಹಿಜ್ಯಾವಯಿ**—(ಪಾ. ಸೂ. ೬-೧-೧೬) ಎಂಬುದರಿಂದ ಸಂಪ್ರಸಾರಣ ಬರುತ್ತದೆ. ಗೃಹೀತ ಎಂದು ರೂಪವಾಗುತ್ತದೆ. **ಹೃಗ್ರಹೋರ್ಭಶ್ಛಂದಸಿ**—ಎಂಬ ವಚನದಿಂದ ಧಾತುವಿನ ಹಕಾರಕ್ಕೆ ಭಕಾರಾದೇಶ. **ದ್ವ್ಯಚೋತಸ್ತಿಙಃ**—(ಪಾ. ಸೂ. ೬-೩-೧೩೫) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ. ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ.

**ಕೃತಾನಿ**—ಡುಕೃಞ್ ಕರಣೇ ಧಾತು. ಕರ್ಮಣಿಯಲ್ಲಿ **ನಿಷ್ಠಾ**—(ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಸನಿತಾ**—ಷಣು ದಾನೇ ಧಾತು. **ಧಾತ್ವಾದೇಃ ಷಃ ಸಃ**—(ಪಾ. ಸೂ. ೬-೪-೬೪) ಎಂಬುದರಿಂದ ಆದಿಗೆ ಸತ್ವ. ಇದಕ್ಕೆ ತಾಚ್ಛೀಲ್ಯಾರ್ಥದಲ್ಲಿ ತೃನ್ ಪ್ರತ್ಯಯ. **ಅರ್ಧಧಾತುಕಸ್ಯೇಡ್ವಲಾದೇಃ**—(ಪಾ. ಸೂ. ೭-೩-೩೫) ಎಂಬುದರಿಂದ ಇಡಾಗಮ. ಸನಿತೃ ಶಬ್ದ ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ. ಪ್ರಥಮಾ ಏಕವಚನಾಂತರೂಪ.

**ಧನಾನಿ**—ಧನಾನಿ ಸನಿತಾ ಎಂದಿರುವುದರಿಂದ **ಕರ್ತೃಕರ್ಮಣೋಃ ಕೃತಿ**—ಸೂತ್ರದಿಂದ ಷಷ್ಠಿಯು ಪ್ರಾಪ್ತವಾದರೆ ತೃನ್‌ರೂಪಕೃದಂತದ ಯೋಗವಿರುವುದರಿಂದ **ನ ಲೋಕಾವ್ಯಯ**—(ಪಾ. ಸೂ. ೨-೩-೬೯) ಎಂಬುದರಿಂದ ಷಷ್ಠೀನಿಷೇಧ ಬರುತ್ತದೆ. ॥ ೯ ॥

---

॥ ಸಂಹಿತಾಪಾಠಃ ॥

ಸ ಗ್ರಾಮೇಭಿಃ ಸನಿತಾ ಸ ರಥೇಭಿರ್ವಿದೇ ವಿಶ್ವಾಭಿಃ ಕೃಷ್ಟಿಭಿರ್ನ್ವ೧ದ್ಯ ।

ಸ ಪೌಂಸ್ಯೇಭಿರಭಿಭೂರಶಸ್ತೀರ್ಮರುತ್ವಾನ್ನೋ ಭವತ್ವಿಂದ್ರ ಊತೀ ॥ ೧೦ ॥

॥ ಪದಪಾಠಃ ॥

ಸಃ । ಗ್ರಾಮೇಭಿಃ । ಸನಿತಾ । ಸಃ । ರಥೇಭಿಃ । ವಿದೇ । ವಿಶ್ವಾಭಿಃ । ಕೃಷ್ಟಿಽಭಿಃ । ನು । ಅದ್ಯ ।

ಸಃ । ಪೌಂಸ್ಯೇಭಿಃ । ಅಭಿऽಭೂಃ । ಅಶಸ್ತೀಃ । ಮರುತ್ವಾನ್ । ನಃ । ಭವತು ।
ಇಂದ್ರಃ । ಊತೀ ॥೧೦॥

ಸಾಯಣಭಾಷ್ಯಂ

ಸ ಇಂದ್ರೋ ಗ್ರಾಮೇಭಿರ್ಮರುತ್ಸಂಘೈಃ ಸಹ ಸನಿತಾ ಫಲಾನಾಂ ಪ್ರದಾತಾ ಭವತಿ । ಸ ಚಾದ್ಯಾಸ್ಮಿನ್ನಹನಿ ನು ಕ್ಷಿಪ್ರಂ ವಿಶ್ವಾಭಿಃ ಕೃಷ್ಟಿಭಿಃ ಸರ್ವೈರ್ಮನುಷ್ಯೈ ರಥೇಭಿರಿಂದ್ರಸಂಬಂಧಿಭೀ ರಥೈಃ ಕಾರಣಭೂತೈರ್ವಿದೇ । ವಿಜ್ಞಾಯತೇ । ಅಪಿ ಚ ಸ ಇಂದ್ರಃ ಪೌಂಸ್ಯೇಭಿಃ ಸ್ವಕೀಯೈರ್ಬಲೈರಶಸ್ತೀರಶಂಸನೀಯಾನ್ ಶತ್ರೂನಭಿಭೂಃ । ಅಭಿಭವನ್ವರ್ತತೇ । ಮರುತ್ವಾನ್ಸ ಇಂದ್ರೋ ನೋಽಸ್ಮಾಕಂ ರಕ್ಷಣಾಯ ಭವತು ॥ ಗ್ರಾಮೇಭಿಃ । ಬಹುಲಂ ಛಂದಸೀತಿ ಭಿಸ ಐಸಭಾವಃ । ಗ್ರಾಮಾದೀನಾಂ ಚ । ಫಿ. ೨-೧೫ । ಇತ್ಯಾದ್ಯುದಾತ್ತತ್ವಂ । ವಿದೇ । ವಿದ ಜ್ಞಾನೇ । ಕರ್ಮಣಿ ಲಟ್ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ ॥

ಪ್ರತಿಪದಾರ್ಥ

**ಸಃ**—ಆ ಇಂದ್ರನು । **ಗ್ರಾಮೇಭಿಃ**—ತನ್ನ ಸಹಚರರಾದ ಮರುತ್ತುಗಳೊಡನೆ । **ಸನಿತಾ**—ಧನಪ್ರದನಾಗಿ (ಉಪಕಾರಿಯಾಗಿ)ರುತ್ತಾನೆ । **ಸಃ**—ಅವನು । **ಅದ್ಯ**—ಇಂದು । **ನು**—ಜಾಗ್ರತೆಯಾಗಿಯೇ । **ವಿಶ್ವಾಭಿಃ ಕೃಷ್ಟಿಭಿಃ**— ಸಕಲ ಮಾನವರಿಂದಲೂ । **ರಥೇಭಿಃ**— (ತನ್ನ) ರಥಗಳೊಡನೆ (ರಥಾರೂಢನಾಗಿ) । **ವಿದೇ**—ತಿಳಿಯಲ್ಪಡುತ್ತಾನೆ । **ಸಃ**—ಆ ಇಂದ್ರನು । **ಪೌಂಸ್ಯೇಭಿಃ**—(ತನ್ನ) ಬಲಗಳಿಂದ । **ಅಶಸ್ತೀಃ**—ಅಯೋಗ್ಯರಾದ ಶತ್ರುಗಳನ್ನು । **ಅಭಿಭೂಃ**—ಸೋಲಿಸುತ್ತಾನೆ । **ಮರುತ್ವಾನ್**—ಮರುತ್ತುಗಳೊಡಗೂಡಿದ । **ಇಂದ್ರಃ**—ಇಂದ್ರನು । **ನಃ**—ನಮ್ಮ । **ಊತೀ**—ರಕ್ಷಣಾರ್ಥವಾಗಿ । **ಭವತು**—ಆಗಿರಲಿ ॥

ಭಾವಾರ್ಥ

ಇಂದ್ರನು ತನ್ನ ಸಹಚರರಾದ ಮರುತ್ತುಗಳೊಡನೆ ಎಲ್ಲರಿಗೂ ಧನಪ್ರದನಾಗಿ ಅತ್ಯಂತ ಉಪಕಾರಿಯಾಗುತ್ತಾನೆ. ಎಲ್ಲಾ ಮಾನವರೂ ಸಹ ರಥಾರೂಢನಾದ ಇಂದ್ರನನ್ನು ಇಂದು ತಿಳಿದು ಗುರ್ತಿಸುತ್ತಾರೆ. ಆ ಇಂದ್ರನು ತನ್ನ ಪರಾಕ್ರಮದಿಂದ ಅಯೋಗ್ಯರಾದ ಶತ್ರುಗಳನ್ನು ಸೋಲಿಸುತ್ತಾನೆ. ಮರುತ್ತುಗಳೊಡಗೂಡಿದ ಆ ಇಂದ್ರನು ನಮ್ಮ ರಕ್ಷಕನಾಗಿರಲಿ.

## English Translation

He, along with his attendants, in a benefactor ; he is quickly recognized by all men to-day, through his chariots ; by his manly energies he is victor over unruly (adversaries) : may Indra, associated with the Maruts, be our protection.

ವಿಶೇಷವಿಷಯಗಳು

**ಗ್ರಾಮೇಭಿಃ—ಮರುತ್ಸಂಘೈಃ ।** ಮರುತ್ತುಗಳ ಸಂಘದೊಡನೆ ಕೂಡಿ ಎಂದು ಇಲ್ಲಿ **ಗ್ರಾಮ**ಶಬ್ದಕ್ಕೆ ಸಂಘವೆಂದು ಅರ್ಥಮಾಡಿದ್ದಾರೆ. ಈ ಶಬ್ದವು ಹಳ್ಳಿ ಎಂಬ ರೂಢಿಯಾದ ಅರ್ಥದಲ್ಲಿ ೧-೪೪-೧೦ ; ೧-೧೧೪-೧ ; ೧೦-೯೦-೮ ಇತ್ಯಾದಿ ಅನೇಕ ಋಕ್ಕುಗಳಲ್ಲಿ ಉಪಯೋಗದಲ್ಲಿರುವಂತೆ **ಸಂಘ** ಎಂಬ ಅರ್ಥದಲ್ಲೂ ಸಹ ಅನೇಕಕಡೆ ಉಪಯೋಗಿಸಲ್ಪಟ್ಟಿದೆ.

**ಯದಂಗ ತ್ವಾ ಭರತಾಃ ಸಂತರೇಯುರ್ಗವ್ಯನ್ಗ್ರಾಮ ಇಷಿತ ಇಂದ್ರಜೂತಃ ।**

(ಋ. ಸಂ. ೩-೩೩-೧೧)

**ನಿಯುತ್ವಂತೋ ಗ್ರಾಮಜಿತೋ ಯಥಾ ನರೋಽರ್ಯಮಣೋ ನ ಮರುತಃ ಕವಂಧಿನಃ ।**

(ಋ. ಸಂ. ೫-೫೪-೮)

ಎಂಬಲ್ಲಿ **ಗ್ರಾಮಜಿತಃ** ಎಂದರೆ **ಸಂಘಾತ್ಮಕಸ್ಯ ಪದಾರ್ಥಸ್ಯ ವಿಶ್ಲೇಷಯಿತಾರಃ** ಒಟ್ಟಿಗೆ ಕೂಡಿಕೊಂಡಿರುವ ವಸ್ತುಗಳನ್ನು ಬಿಡಿಸಿ ಬೇರೆಮಾಡುವುದು ಎಂದೂ, ಇದರಂತೆಯೇ

**ಅಪಶ್ಯಂ ಗ್ರಾಮಂ ವಹಮಾನಮಾರಾದಚಕ್ರಯಾ ಸ್ವಧಯಾ ವರ್ತಮಾನಂ ।**

(ಋ. ಸಂ. ೧೦-೨೭-೧೯)

ಇತ್ಯಾದಿ ಋಕ್ಕುಗಳಲ್ಲಿಯೂ ಸಂಘವೆಂದೇ ಅರ್ಥವಾಗುತ್ತದೆ. ಪ್ರಕೃತವಾದ ಈ ಋಕ್ಕಿನಲ್ಲಿಯೂ ಸಹ **ಗ್ರಾಮೇಭಿಃ** ಎಂದರೆ **ಸಂಘರೂಪ**ವಾದ ಮರುತ್ತುಗಳೊಡನೆ ಎಂದರ್ಥ.

**ರಥೇಭಿಃ ವಿದೇ**—ರಥಗಳೊಡನೆ ತಿಳಿಯಲ್ಪಡುತ್ತಾನೆ. ಅಂತರಿಕ್ಷದಲ್ಲಿ ಅತ್ಯಂತ ವೇಗವಾಗಿ ಸಂಚರಿಸ ತಕ್ಕದ್ದಾಗಿಯೂ ಸಹಸ್ರಾರು ಆಸರೆಗಳಿಂದ ಕೂಡಿದ್ದಾಗಿಯೂ ಸಕಲರನ್ನೂ ಆಕರ್ಷಿಸತಕ್ಕದ್ದಾಗಿಯೂ ಇರುವ ರಥಾ ರೂಢನಾಗಿರುವುದರಿಂದ ಇವನ ರಥದ ವೈಶಿಷ್ಟ್ಯವನ್ನು ತಿಳಿದೊಡನೆಯೇ ಇವನನ್ನು ಗುರ್ತಿಸುತ್ತಾರೆಂದರ್ಥವು.

**ಆ ಯಸ್ಮಿನ್ ಹಸ್ತೇ ನರ್ಯಾ ಮಿಮಿಕ್ಷುರಾ ರಥೇ ಹಿರಣ್ಯಯೇ ರಥೇಷ್ಠಾಃ ।**
**ಆ ರಶ್ಮಯೋ ಗಭಸ್ತ್ಯೋಃ ಸ್ಥೂರಯೋರಾಧ್ವನ್ನಶ್ವಾಸೋ ವೃಷಣೋ ಯುಜಾನಾಃ ।**

(ಋ- ಸಂ. ೬-೨೯-೨)

**ಯಸ್ತೇ ರಥೋ ಮನಸೋ ಜವೀಯಾನೇಂದ್ರ ತೇನ ಸೋಮಪೇಯಾಯ ಯಾಹಿ ।**

(ಋ- ಸಂ- ೧೦-೧೧೨-೨)

ಇತ್ಯಾದಿ ನಾನಾ ಋಕ್ಕುಗಳಲ್ಲಿ ವರ್ಣಿಸಿರುವಂತೆ ಅತ್ಯಾಕರ್ಷಕವಾದ ರಥಾರೂಢನಾಗಿರುವುದರಿಂದ ಸಕಲರಿಂದಲೂ ಗುರ್ತಿಸಲ್ಪಡುತ್ತಾನೆಂದರ್ಥ.

**ವಿಶ್ವಾಭಿಃ ಕೃಷ್ಟಿಭಿಃ**—ಕೃಷ್ಟಿ ಶಬ್ದಕ್ಕೆ ಮನುಷ್ಯಜಾತರೆಂದರ್ಥ. ನಿರುಕ್ತಕಾರರು ಋ. ಸಂ. ೪-೩೯-೧೦ನೇ ಋಕ್ಕಿನಲ್ಲಿರುವ **ಪಂಚಕೃಷ್ಟೀಃ** ಎಂಬುದಕ್ಕೆ **ಪಂಚಜನಾನ್** ಎಂದು (ನಿ. ೧೦-೩೧) ಸಕಲ ಮನುಷ್ಯಜಾತರನ್ನೂ ಸೇರಿಸಿ ಅರ್ಥಮಾಡಿರುವಂತೆ ಇಲ್ಲಿಯೂ ಸಹ ಸಕಲಜನರಿಂದ ಎಂದರ್ಥವಾಗುತ್ತದೆ. ( **ಪಂಚಜನ** ಎಂಬ

ಪದದಿಂದ ಸೂಚಿತವಾಗುವ ಐದು ಗುಂಪುಗಳು ಯಾವವೆಂದು ಇದೇ ಸೂಕ್ತದ ೧೨ನೇ ಋಕ್ಕಿನ ವಿವರಣೆಯಲ್ಲಿ ಮುಂದೆ ತಿಳಿಸಲಾಗುತ್ತೆ). ಇಂತಹ ಸಕಲಮಾನವರೂ ರಥಾರೂಢನಾದ ಇಂದ್ರನನ್ನು ಗುರ್ತಿಸುತ್ತಾರೆಂದು ಸಾಯಣರ ವ್ಯಾಖ್ಯಾನವಿದೆ. ಸ್ಕಂದಸ್ವಾಮಿಗಳು ಬೇರೆ ಅರ್ಥವನ್ನು ಕೊಡುವಂತೆ ವ್ಯಾಖ್ಯಾನವನ್ನು ಮಾಡಿದ್ದಾರೆ

**ಗ್ರಾಮೇಭಿಃ ರಥೇಭಿರಿತಿ ದ್ವಿತೀಯಾರ್ಥೇ ತೃತೀಯಾ । ಸ ಗ್ರಾಮಾನ್ ಸನಿತಾ ದಾತಾ । ಸ ಏವ ರಥಾನ್ । ಇತ್ಯೇವಮಹಂ ವಿದೇ ಜಾನಾಮಿ । ಗ್ರಾಮೇಭಿಃ ರಥೇಭಿಃ** ಎಂಬ ಪದಗಳು ತೃತೀಯಾ ವಿಭಕ್ತಿಯಲ್ಲಿದ್ದರೂ ಸಹ ಅವುಗಳಿಗೆ ದ್ವಿತೀಯಾ ವಿಭಕ್ತಿಯ ಅರ್ಥವನ್ನೇ ಹೇಳಬೇಕು. ಇಂದ್ರನು ಗ್ರಾಮಗಳನ್ನೂ ರಥಗಳನ್ನೂ ಕೊಡುತ್ತಾನೆಂದು ನಾನು ತಿಳಿಯುತ್ತೇನೆ ಎಂದರ್ಥವನ್ನು ಕೊಡುತ್ತವೆಂದು ಹೇಳಿದ್ದಾರೆ. ಆಗ **ಗ್ರಾಮ**ಶಬ್ದಕ್ಕೆ ಸಂಘವೆಂದರ್ಥವಾಗದೇ, ಹಳ್ಳಿಯೆಂಬ ಅರ್ಥವೇ ಆಗುತ್ತದೆ. ಆದರೆ ಈ ಸನ್ನಿವೇಶದಲ್ಲಿ ಸಾಯಣರ ವಿವರಣೆಯೇ ಉಚಿತವಾಗಿ ಕಾಣುತ್ತದೆ.

**ಪೌಂಸ್ಯೇಭಿಃ**—ಪೌಂಸ್ಯ ಶಬ್ದವು ಬಲನಾಮಗಳಲ್ಲಿಯೂ **ಯುದ್ಧ**ನಾಮಗಳಲ್ಲಿಯೂ ಪಠಿತವಾಗಿದೆ. ( ನಿ. ೩-೯ ; ) ಇಲ್ಲಿ ಬಲಗಳಿಂದ ಎಂದರ್ಥ.

**ಅಶಸ್ತೀಃ**—ಅಶಸಃ, ಅಶಸ್ತೀಃ ಇವೆಲ್ಲಾ ಶತ್ರುಪರ್ಯಾಯರೂಪವಾದ ಪದಗಳು. **ಶಂಸಂತಿ ಸ್ತುವಂತೀತಿ ಶಸಃ ಸ್ತೋತಾರಃ । ತೇ ನ ಭವಂತೀತ್ಯಶಸಃ ನೃಶಂಸಾಃ ।** ಕರ್ಮಭ್ರಷ್ಟರಾದ ಶತ್ರುಗಳು. ಇವರು ಅಸುರರಾಗಬಹುದು. ಅಥವಾ ಕರ್ಮಭ್ರಷ್ಟರಾದ ಮಾನವರೇ ಆಗಬಹುದು. ಇಂತಹ ಅಯೋಗ್ಯರಾದ ಶತ್ರುಗಳನ್ನು ಇಂದ್ರನು **ಅಭಿಭೂಃ**—ಸೋಲಿಸುತ್ತಾನೆ ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಗ್ರಾಮೇಭಿಃ**— ಗ್ರಾಮಶಬ್ದಕ್ಕೆ ತೃತೀಯಾಬಹುವಚನ ಭಿಸ್ ಪರವಾದಾಗ **ಬಹುಲಂ ಛಂದಸಿ** (ಪಾ. ಸೂ. ೭-೧-೧೦) ಎಂಬುದರಿಂದ ಭಿಸಿಗೆ ಐಸ್‌ಭಾವ ಬರುವುದಿಲ್ಲ. **ಬಹುವಚನೇ ಝಲ್ಯೇತ್** ಎಂಬುದರಿಂದ ಏತ್ವ. ಪ್ರತ್ಯಯ ಸಕಾರಕ್ಕೆ ರುತ್ವವಿಸರ್ಗ. **ಗ್ರಾಮಾದೀನಾಂ ಚ** (ಫಿ. ಸೂ. ೩೮) ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ. ಹೀಗೆಯೇ ರಥೇಭಿಃ ಎಂಬಲ್ಲಿಯೂ ಐಸ್‌ಭಾವ ಬರುವುದಿಲ್ಲ.

**ವಿದೇ**—ವಿದ ಜ್ಞಾನೇ. ಧಾತು. ಕರ್ಮಣಿಯಲ್ಲಿ ಲಟ್. ಪ್ರಥಮಪುರುಷಏಕವಚನದಲ್ಲಿ ತಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಟಿತ ಆತ್ಮನೇ**—ಎಂಬುದರಿಂದ ಪ್ರತ್ಯಯದ ಟಿಗೆ ಏತ್ವ. **ಲೋಪಸ್ತ ಆತ್ಮನೇಪದೇಷು** (ಪಾ. ಸೂ. ೭-೧-೪೧ ) ಎಂಬುದರಿಂದ ಪ್ರತ್ಯಯ ತಕಾರಕ್ಕೆ ಲೋಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಕೃಷ್ಟಿಭಿಃ**—ಕೃಷ ವಿಲೇಖನೇ ಧಾತು. **ಕ್ತಿಚ್‌ಕ್ತೌ ಚ ಸಂಜ್ಞಾಯಾಂ** (ಪಾ. ಸೂ. ೩-೩ ೧೭೪) ಎಂಬುದರಿಂದ ಕ್ತಿಚ್ ಪ್ರತ್ಯಯ. **ಚಿತಃ** (ಪಾ ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಷ್ಟುತ್ವದಿಂದ ಪ್ರತ್ಯಯ ತಕಾರಕ್ಕೆ ಷ್ಟುತ್ವ. ತೃತೀಯಾಬಹುವಚನಾಂತರೂಪ.

ಪೌಂಸ್ಯೇಭಿಃ— ಹಿಂದಿನಂತೆ ಭಿಸ್ ಪರವಾದಾಗ ಛಂದಸ್ಸಿನಲ್ಲಿ ಐಸ್ ಭಾವ ಬರುವುದಿಲ್ಲ. ಏತ್ವ.

**ಅಶಸ್ತೀಃ**—ಶಂಸು ಸ್ತುತೌ ಧಾತು. ಕರ್ಮಣಿಯಲ್ಲಿ **ಸ್ತ್ರಿಯಾಂ ಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ಕ್ತಿನ್ ಪ್ರತ್ಯಯ. ಕಿತ್ತಾದುದರಿಂದ **ಅನಿದಿತಾಂ ಹಲ**—ಎಂಬುದರಿಂದ ಉಪಧಾನಕಾರಲೋಪ ಶಸ್ತಿ ಎಂದು ರೂಪವಾಗುತ್ತದೆ. ನ ಶಸ್ತಿಃ ಅಶಸ್ತಿಃ ನಞ್‌ತತ್ಪುರುಷಸಮಾಸ. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ ದ್ವಿತೀಯಾ ಬಹುವಚನಾಂತರೂಪ.

**ಅಭಿ ಭೂಃ**—ಅಭಿ ಭವತಿ ಇತಿ ಅಭಿಭೂಃ **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

ಸಂಹಿತಾಪಾಠಃ

ಸ ಜಾಮಿಭಿರ್ಯತ್ಸಮಜಾತಿ ಮೀಳ್ಹೇಽಜಾಮಿಭಿರ್ವಾ ಪುರು-
ಹೂತ ಏವೈಃ ।
ಅಪಾಂ ತೋಕಸ್ಯ ತನಯಸ್ಯ ಜೇಷೇ ಮರುತ್ವಾನ್ನೋ ಭವ-
ತ್ವಿಂದ್ರ ಊತೀ ॥೧೧॥

ಪದಪಾಠಃ

ಸಃ । ಜಾಮಿಽಭಿಃ । ಯತ್ । ಸಂಽಅಜಾತಿ । ಮೀಳ್ಹೇ । ಅಜಾಮಿಽಭಿಃ ।
ವಾ । ಪುರುಽಹೂತಃ । ಏವೈಃ ।
ಅಪಾಂ । ತೋಕಸ್ಯ । ತನಯಸ್ಯ । ಜೇಷೇ । ಮರುತ್ವಾನ್ । ನಃ । ಭವತು ।
ಇಂದ್ರಃ । ಊತೀ ॥ ೧೧ ॥

### ಸಾಯಣಭಾಷ್ಯಂ

ಪುರುಹೂತೋ ಬಹುಭಿರ್ಯಜಮಾನೈರಾಹೂತಃ ಸ ಇಂದ್ರೋ ಮೀಳ್ಹೇ ಸಂಗ್ರಾಮೇ । ಮೀಳ್ಹಮಿತಿ ಧನನಾಮ । ತದ್ಧೇತುತ್ವಾತ್ಸಂಗ್ರಾಮೋಽಪಿ ಮೀಳ್ಹಶಬ್ದೇನೋಚ್ಯತೇ । ಜಾಮಿಭಿರ್ಬಂಧುಭಿರಜಾಮಿಭಿರ್ವಾ ಬಾಂಧವರಹಿತೈರ್ನೃಭಿರ್ನೈರ್ಯುದ್ಧಾರ್ಥಂ ಮರುದ್ಭಿಃ ಸಹ ಯದ್ಯದಾ ಸಮಜಾತಿ ಸಂಗಚ್ಛತೇ । ತೇಷಾಮುಭಯವಿಧಾನಾಮುಪಾಮಿಂದ್ರಂ ಪ್ರಾಪ್ನುವತಾಂ ಪುರುಷಾಣಾಂ ತೋಕಸ್ಯ ಪುತ್ರಸ್ಯ ತನಯಸ್ಯ ತತ್ಪುತ್ರಸ್ಯ ಚ ಜೇಷೇ ಜಯಪ್ರಾಪ್ತಯೇ ಸ ಇಂದ್ರೋ ಭವತಿ । ಕಿಮು ವಕ್ತವ್ಯಮಸ್ಮಾಕಂ ಸ್ತೋತೄಣಾಂ ಜಯೋ ಭವತೀತಿ । ಅನ್ಯತ್ಸಮಾನಂ ॥ ಸಮಜಾತಿ । ಅಜ ಗತಿಕ್ಷೇಪಣಯೋಃ । ಲೇಟ್ಯಾಡಾಗಮಃ। ಜೇಷೇ । ಜಿ ಜಯೇ । ಔಣಾದಿಕಃ ಸಪ್ರತ್ಯಯಃ । ಚತುರ್ಥ್ಯರ್ಥೇ ಸಪ್ತಮೀ । ಯದ್ವಾ । ಜೇಷ್ಯ ಣೇಷ್ಯ ಪ್ರೇಷ್ಯ ಗತೌ । ಕ್ವಿಪ್ಚೇತಿ ಕ್ವಿಪ್ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ ॥

### ಪ್ರತಿಪದಾರ್ಥ

**ಪುರುಹೂತಃ**—ಅನೇಕ ಯಜಮಾನರಿಂದ ಕರೆಯಲ್ಪಡುವ । **ಸಃ**—ಇಂದ್ರನು । **ಮೀಳ್ಹೇ**—(ಧನಕ್ಕೆ ಮೂಲಕಾರಣವಾದ) ಯುದ್ಧದಲ್ಲಿ । **ಜಾಮಿಭಿಃ**—ಬಂಧುಗಳೊಡನಾಗಲಿ । **ಅಜಾಮಿಭಿಃ ವಾ**—ಬಂಧುಗಳಲ್ಲದವರೊಡನಾಗಲಿ । **ನೃಭಿಃ**—(ಯುದ್ಧಕ್ಕೆ) ಹೋಗತಕ್ಕ ಮರುತ್ತುಗಳೊಡನೆ । **ಯತ್**—ಯಾವಾಗ । **ಸಮಜಾತಿ**—ಸೇರಿಕೊಳ್ಳುತ್ತಾನೆಯೋ (ಆಗ) । **ಅಪಾಂ**—(ಇಂದ್ರನನ್ನು) ಸೇರಿಕೊಂಡು ರಕ್ಷಣೆಯನ್ನು ಪಡೆಯತಕ್ಕ ಅವರೆಲ್ಲರಿಗೂ । **ತೋಕಸ್ಯ**—ಅವರ ಪುತ್ರರಿಗೂ । **ತನಯಸ್ಯ**—ಪೌತ್ರರಿಗೂ । **ಜೇಷೇ**—ಜಯಸಂಪಾದಕನಾಗಿ (ಆಗುತ್ತಾನೆ) । **ಮರುತ್ವಾನ್**—ಮರುತ್ತುಗಳೊಡಗೂಡಿದ । **ಇಂದ್ರಃ**—ಇಂದ್ರನು । **ನಃ**—ನಮ್ಮ । **ಊತೀ**—ರಕ್ಷಕನಾಗಿ । **ಭವತು**—ಆಗಿರಲಿ.

### ॥ ಭಾವಾರ್ಥ ॥

ಸಹಾಯಕ್ಕಾಗಿ ಅನೇಕ ಯಜಮಾನರಿಂದ ಕರೆಯಲ್ಪಡುವ ಇಂದ್ರನು ಧನಕ್ಕೆ ಮೂಲಕಾರಣವಾದ ಯುದ್ಧದಲ್ಲಿ ತನ್ನ ಬಂಧುಗಳೊಡನಾಗಲಿ, ಬಂಧುಗಳಲ್ಲದವರೊಡನಾಗಲಿ, ಯುದ್ಧಕ್ಕೆ ಹೋಗತಕ್ಕ ಮರುತ್ತುಗಳೊಡನೆ ಯಾವಾಗ ಸೇರಿಕೊಳ್ಳುತ್ತಾನೆಯೋ ಆಗ ಇಂದ್ರನ ರಕ್ಷಣೆಯನ್ನು ಪಡೆಯುತಕ್ಕ ಅವರೆಲ್ಲರಿಗೂ, ಅವರ ಪುತ್ರರಿಗೂ ಮತ್ತು ಪೌತ್ರರಿಗೂ ಸಹ ಜಯಸಂಪಾದಕನಾಗಿ ಆಗುತ್ತಾನೆ. ಮರುತ್ತುಗಳೊಡಗೂಡಿದ ಇಂದ್ರನು ನಮ್ಮ ರಕ್ಷಕನಾಗಿರಲಿ.

### English Translation

Invoked by many, he goes to battle with his kinsmen, or with (followers) not of his kindred; he secures the (triumph) of those who trust in him, and of their sons and grandsons: may Indra associated with the Maruts, be our protection.

ವಿಶೇಷವಿಷಯಗಳು

ಇಂದ್ರನ ರಕ್ಷಣೆಯನ್ನು ಪಡೆಯತಕ್ಕವರು ರಕ್ಷಣೆಗೆ ಅರ್ಹರಾಗಿದ್ದರೆ ಅಂತಹವರು ಬಂಧುಗಳಾಗಿರಲಿ, ಬಂಧುಗಳಲ್ಲದಿರಲಿ ಅವರಿಗೆ ಯುದ್ಧದಲ್ಲಿ ಜಯವು ಸಿದ್ಧ ಎಂಬ ಭಾವವು ಈ ಋಕ್ಕಿನಲ್ಲಿ ವ್ಯಕ್ತವಾಗಿದೆ.

**ಮೀಳ್ಹೇ**—**ರಣಃ ವಿವಾಕ್** ಇತ್ಯಾದಿ ೪೬ ಸಂಗ್ರಾಮನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯) ಯುದ್ಧದಲ್ಲಿ ಎಂದರ್ಥ.

**ಬಾಧಸೇ ಜನಾನ್ವೃಷಭೇವ ಮನ್ಯುನಾ ಘೃಷೌ ಮೀಳ್ಹ ಋಚೀಷಮ ।**
(ಋ. ಸಂ. ೬-೪೬-೪.)

**ಅಸರ್ಜಿ ಕಲಶಾ ಅಭಿ ಮೀಳ್ಹೇ ಸಪ್ತಿರ್ನ ವಾಜಯುಃ ।**
(ಋ. ಸಂ. ೯-೧೦೬-೧೨.)

ಇತ್ಯಾದಿ ಋಕ್ಕುಗಳಲ್ಲಿ **ಮೀಳ್ಹೇ** ಎಂಬ ಪದಕ್ಕೆ **ಸಂಗ್ರಾಮೇ** ಎಂದರ್ಥವಾಗುವಂತೆ ಇಲ್ಲಿಯೂ ಯುದ್ಧದಲ್ಲಿ ಎಂದರ್ಥ. ನಿರುಕ್ತದಲ್ಲಿರುವ ವರ್ಗೀಕರಣದಂತೆ ಈ ಶಬ್ದಕ್ಕೆ **ಯುದ್ಧವೆಂಬ** ಅರ್ಥವು ಸಾಕ್ಷಾತ್ತಾಗಿಯೇ ಆಗುತ್ತದೆ. ಆದರೂ ಸಹ ಸಾಯಣರು ಪರಂಪರಾಪ್ರಾಪ್ತವಾದ ಅರ್ಥವೆಂದು ತೋರಿಸುವ ವಿವರಣೆಯನ್ನು ಹೇಳಿದ್ದಾರೆ. **ಮೀಳ್ಹ ಇತಿ ಧನನಾಮ । ತದ್ಧೇತುತ್ವಾತ್ ಸಂಗ್ರಾಮೋಽಪಿ ಮೀಳ್ಹಶಬ್ದೇನೋಚ್ಯತೇ । ಧನನಾಮ**ವಾದ ಮೀಳ್ಹಶಬ್ದಕ್ಕೆ ಧನಹೇತುವಾದ ಯುದ್ಧದಲ್ಲಿಯೂ ಪ್ರಯೋಗವಿದೆ ಎಂದು ಹೇಳಿದ್ದಾರೆ. ನಿರುಕ್ತದಲ್ಲಿ ಈ ಶಬ್ದವನ್ನು **ಧನನಾಮ** ಮತ್ತು **ಸಂಗ್ರಾಮನಾಮ**ಗಳೆರಡರಲ್ಲಿಯೂ ಸೇರಿಸಿದ್ದಾರೆ. (ನಿ- ೩-೯)

**ಜಾಮಿಭಿಃ**—**ಜಾಮಿರನ್ಯೇಽಸ್ಯಾಂ ಜನಯಂತಿ ಜಾಮಪತ್ಯಂ ।** ಜಮತೇರ್ವಾ ಸ್ಯಾದ್ಗತಿಕರ್ಮಣೋ ನಿರ್ಗಮನಪ್ರಾಯಾ ಭವತಿ (ನಿ. ೩-೯) ಇತರನು ಇವಳಲ್ಲಿ ಮಕ್ಕಳನ್ನು ಉತ್ಪನ್ನವಾಗುವಂತೆ ಮಾಡುತ್ತಾನೆ. ಎಂಬ ಅಭಿಪ್ರಾಯವನ್ನು ಹೇಳುವುದೂ, ಹುಟ್ಟು ಎಂದರ್ಥವನ್ನು ಕೊಡುವ **ಜನ್** ಧಾತುವಿನಿಂದ ನಿಷ್ಪನ್ನವಾದುದೂ ಆಗಿ **ಜಾಮಿ** ಎಂಬ ವ್ಯುತ್ಪತ್ತಿಯು ಒಂದು ವಿಧ, ಅಥವಾ, ಭರ್ತೃವಿನ ಮನೆಗೆ ಹೋಗುವವಳು ಎಂದು ಅಭಿಪ್ರಾಯವನ್ನು ಕೊಡುವುದೂ ಹೋಗು ಎಂದರ್ಥವನ್ನು ಕೊಡುವ **ಜಮ್** ಧಾತುವಿನಿಂದ ನಿಷ್ಪನ್ನವಾದುದೂ ಆಗಿ **ಜಾಮಿ** ಎಂಬ ವ್ಯುತ್ಪತ್ತಿಯು ಇನ್ನೊಂದು ವಿಧ. ಈ ಎರಡು ವಿವರಣೆಯ ಪ್ರಕಾರವೂ **ಜಾಮಿ** ಎನ್ನುವ ಪದಕ್ಕೆ **ಸಹೋದರಿ** ಎಂದರ್ಥವೆಂದು ನಿರುಕ್ತಕಾರರ ನಿರ್ವಚನದಿಂದ ತಿಳಿಯುತ್ತದೆ. ಈ ಅರ್ಥವನ್ನು ಸಮರ್ಥಿಸುವಂತೆ,

**ನ ಜಾಮಯೇ ತಾನ್ವೋ ರಿಕ್ಥಮಾರೈಕ್ಚಕಾರ ಗರ್ಭಂ ಸನಿತುರ್ನಿಧಾನಂ ।**
(ಋ. ಸಂ. ೩-೩೧-೨).

ಎಂಬ ಋಕ್ಕನ್ನು ಉದಹರಿಸಿ **ಜಾಮಿ** ಶಬ್ದಕ್ಕೆ ಸಹೋದರಿಯೆಂದರ್ಥಮಾಡಿರುವರು. ಇದರಂತೆಯೇ,

**ಭಗಸ್ಯ ಸ್ವಸಾ ವರುಣಸ್ಯ ಜಾಮಿರುಷಃ ಸೂನೃತೇ ಪ್ರಥಮಾ ಜರಸ್ವ ।**
(ಋ. ಸಂ. ೧-೧೨೩-೫.)

ಇತ್ಯಾದಿ ಋಕ್ಕುಗಳಲ್ಲಿಯೂ ಸಹ ಜಾಮಿ ಶಬ್ದಕ್ಕೆ ಸಹೋದರಿಯೆಂಬ ಅರ್ಥವೇ ಇದೆ.

ಆದರೆ ಪ್ರಕೃತವಾದ ಈ ಋಕ್ಕಿನಲ್ಲಿ **ಜಾಮಿ** ಶಬ್ದದ ಅರ್ಥವೂ ಹೆಚ್ಚು ವಿಸ್ತೃತವಾಗಿ ಬಂಧುಗಳು ಎಂದಾಗಿದೆ. **ಜಾಮಿಭಿಃ, ಅಜಾಮಿಭಿರ್ವಾ,** ಬಂಧುಗಳೊಡನಾಗಲಿ, ಬಂಧುಗಳಲ್ಲದವರೊಡನಾಗಲಿ ಎಂದರ್ಥ. ಇದರಂತೆಯೇ ಇನ್ನೂ ಅನೇಕ ಋಕ್ಕುಗಳಲ್ಲಿಯೂ ಈ ವಿಸ್ತೃತವಾದ ಅರ್ಥವು ಕಂಡುಬರುತ್ತದೆ. ಉದಾಹರಣೆಗೆ—

**ಜಾಮಿಃ ಸಿಂಧೂನಾಂ ಭ್ರಾತೇವ ಸ್ವಸ್ರಾಮಿಭ್ಯಾನ್ನ ರಾಜಾ ವನಾನ್ಯತ್ತಿ ।**
(ಋ. ಸಂ. ೧-೬೫-೭.)

**ಕಸ್ತೇ ಜಾಮಿರ್ಜನಾನಾಮಗ್ನೇ ಕೋ ದಾಶ್ವಧ್ವರಃ ।**
(ಋ. ಸಂ. ೧-೭೫-೩.)

ಇತ್ಯಾದಿ ಋಕ್ಕುಗಳಲ್ಲಿಯೂ ಸಹ ಈ ಋಕ್ಕಿನಲ್ಲಿರುವಂತೆಯೇ **ಬಂಧುಗಳು** ಎಂದರ್ಥ.

ಮೇಲಿನ ಎರಡು ಅರ್ಥಗಳಲ್ಲದೇ, **ಜಾಮಿ**ಶಬ್ದವು ಕೈಬೆರಳುಗಳ ಪರ್ಯಾಯವಾಗಿಯೂ ಉಪಯೋಗಿಸಲ್ಪಟ್ಟಿದೆ. ಉದಾಹರಣೆಗೆ—

**ಏಷ ವೃಷಾ ಕನಿಕ್ರದದ್ದಶಭಿರ್ಜಾಮಿಭಿರ್ಯತಃ ।**
(ಋ. ಸಂ. ೯-೨೮-೪.)

ಅಂಶುರ್ನಯೇನ ಪಿಪಿಶೇ ಯತೋ ನೃಭಿಃ ಸಂ ಜಾಮಿಭಿರ್ನಸತೇ ರಕ್ಷತೇ ಶಿರಃ ।
(ಋ. ಸಂ. ೯-೬೮-೪.)

ಇತ್ಯಾದಿ ಋಕ್ಕುಗಳಲ್ಲಿ **ಜಾಮಿ** ಶಬ್ದಕ್ಕೆ ಬೆರಳುಗಳೆಂದರ್ಥವು.

**ಏನ್ಯೈಃ—ಯುದ್ಧಾರ್ಥಂ ಗಚ್ಛದ್ಭಿಃ ಮರುದ್ಭಿಃ ಸಹ ।** ಯುದ್ಧಾರ್ಥವಾಗಿ ಹೋಗುತ್ತಿರುವ ಮರುತ್ತುಗಳೊಡನೆ. **ಮರುತ್ತು**ಗಳಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿರುವ **ಏನ್ಯೈಃ** ಎಂಬ ಪದದ ವೈಶಿಷ್ಟ್ಯವನ್ನು ಇದೇ ಸೂಕ್ತದ ೨ ನೇ ಋಕ್ಕಿನ ವಿವರಣೆಯಲ್ಲಿ ಹೇಳಿದೆ.

**ಯತ್ ಏನ್ಯೈಃ ಸಮಜಾತಿ**—ಯುದ್ಧಾರ್ಥವಾಗಿ ಹೋಗತಕ್ಕ ಮರುತ್ತುಗಳೊಡನೆ ಯಾವಾಗ ಸೇರಿಕೊಳ್ಳುತ್ತಾನೆಯೋ ಆಗ ಎಂದು ಹೇಳಿರುವುದರಿಂದ ಯುದ್ಧದಲ್ಲಿ ಇಂದ್ರನಿಗೆ ಮರುತ್ತುಗಳ ಸಹಾಯವಿದ್ದಾಗ ಜಯವು ಖಂಡಿತವಾದುದರಿಂದ ಇಂದ್ರನ ರಕ್ಷಣೆಯನ್ನು ಪಡೆಯುವವರಿಗೆಲ್ಲಾ ಜಯವು ಸಹಜವಾಗಿ ಲಭಿಸುತ್ತದೆಯೆಂದರ್ಥ.

ವ್ಯಾಕರಣಪ್ರಕ್ರಿಯಾ

**ಸಮಜಾತಿ**—ಸಮ್ ಉಪಸರ್ಗ. ಅಜ ಗತಿಕ್ಷೇಪಣಯೋಃ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಆಡಾಗಮ. ಅಜಾತಿ ಎಂದು ರೂಪವಾಗುತ್ತದೆ. ಯತ್ ಎಂದು ಹಿಂದೆ ಯಚ್ಛಬ್ದಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ. ಸೂ.

೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ತಿಪ್ ಪಿತ್ತಾದುದರಿಂದ ಅನುದಾತ್ತ. ಆಗ ಧಾತು ಸ್ವರ ಉಳಿಯುತ್ತದೆ. **ತಿಙಿಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಉದಾತ್ತವಿಶಿಷ್ಟ ತಿಙಂತಪರ ವಾದುದರಿಂದ ಗತಿಗೆ (ಸಮ್) ನಿಘಾತಸ್ವರ ಬರುತ್ತದೆ.

**ಏವೈಃ**—ಇಣ್ ಗತೌ ಧಾತು. **ಇಣ್ ಶೀಙ್ ಭ್ಯಾಂ ವನ್** ( ಪಾ. ಸೂ. ೧-೧೫೦ ) ಎಂಬದರಿಂದ ವನ್ ಪ್ರತ್ಯಯ. ತನ್ನಿಮಿತ್ತವಾಗಿ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿಗೆ ಗುಣ. ಪ್ರತ್ಯಯ ನಿತ್ತಾದುದರಿಂದ ಏವಶಬ್ದವು ಆದ್ಯುದಾತ್ತವಾಗುತ್ತದೆ. ತೃತೀಯಾ ಬಹುವಚನಾಂತರೂಪ.

**ಅಪಾಮ್**—ಅಪ್ ಶಬ್ದ ನಿತ್ಯಸ್ತ್ರೀಲಿಂಗ. ಬಹುವಚನಾಂತವಾಗಿರುತ್ತದೆ. ಷಷ್ಠೀಬಹುವಚನಾಂತರೂಪ. **ಊಡಿದಂ ಪದಾದಿ** (ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಜೇಷೇ**—ಜಿ ಜಯೇ ಧಾತು- ಇದಕ್ಕೆ ಔಣಾದಿಕವಾದ ಸಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತು ವಿನ ಇಕಿಗೆ ಗುಣ. **ಆದೇಶಪ್ರತ್ಯಯಯೋಃ** (ಪಾ. ಸೂ. ೮-೩-೫೯) ಎಂಬುದರಿಂದ ಏಕಾರನಿಮಿತ್ತತಾಗಿ ಪ್ರತ್ಯಯಸಕಾರಕ್ಕೆ ಷತ್ವ. **ವಿವಕ್ಷಾತಃ ಕಾರಕಾಣಿ ಭವಂತಿ** ಎಂಬ ವಚನದಿಂದ ಚತುರ್ಥ್ಯರ್ಥದಲ್ಲಿ ಸಪ್ತಮೀ ಅಥವಾ **ಜೇಷೃ** ಣೇಷೃ ಪ್ರೇಷೃ ಗತೌ ಧಾತು. **ಕ್ವಿಪ್ ಚ**(ಪಾ. ಸೂ. ೩-೨-೭೬) ಎಂಬುದರಿಂದ ಇದಕ್ಕೆ ಕ್ವಿಪ್ ಪ್ರತ್ಯಯ. ಕ್ವಿಪ್ಪಿನಲ್ಲಿ ಸರ್ವಲೋಪವಾಗುವುದರಿಂದ ಜ್ಯೇಷ್ ಶಬ್ದವಾಗುತ್ತದೆ. **ಚತುರ್ಥೀ**ಏಕವಚನದಲ್ಲಿ ಙ್ ಪ್ರತ್ಯಯ ಬಂತಾಗ ಜೇಷೇ ಎಂದು ರೂಪವಾಗುತ್ತದೆ. ಸು ಪರವಾದಾಗ ಏಕಾಚಾದುದರಿಂದ **ಸಾವೇಕಾಚ ಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

———:o:———

॥ ಸಂಹಿತಾಪಾಠಃ ॥

ಸ ವಜ್ರಭೃದ್ದಸ್ಯುಹಾ ಭೀಮ ಉಗ್ರಃ ಸಹಸ್ರಚೇತಾಃ ಶತ-
ನೀಥ ಋಭ್ವಾ ।
ಚಮ್ರೀಷೋ ನ ಶವಸಾ ಪಾಂಚಜನ್ಯೋ ಮರುತ್ವಾನ್ನೋ ಭ-
ವತ್ವಿಂದ್ರ ಊತೀ ॥೧೨॥

॥ ಪದಪಾಠಃ ॥

ಸಃ । ವಜ್ರಽಭೃತ್ । ದಸ್ಯುಽಹಾ । ಭೀಮಃ । ಉಗ್ರಃ । ಸಹಸ್ರಽಚೇತಾಃ ।
ಶತಽನೀಥಃ । ಋಭ್ವಾ ।
ಚಮ್ರೀಷಃ । ನ । ಶವಸಾ । ಪಾಂಚಽಜನ್ಯಃ । ಮರುತ್ವಾನ್ । ನಃ ।
ಭವತು । ಇಂದ್ರಃ । ಊತೀ ॥೧೨॥

ಸಾಯಣಭಾಷ್ಯಂ

ಸ ಇಂದ್ರೋ ವಜ್ರಭೃತ್ ಅನ್ಯೈರ್ಭರ್ತುಮಶಕ್ಯಸ್ಯ ವಜ್ರಸ್ಯ ಭರ್ತಾ । ದಸ್ಯುಹಾ ದಸ್ಯೂನಾಮುಪಕ್ಷಪಯಿತೄಣಾಮಸುರಾಣಾಂ ಹಂತಾ । ಭೀಮಃ ಸರ್ವೇಷಾಂ ಭಯಹೇತುಃ ಉಗ್ರ ಉದ್ಗೂರ್ಣತೇಜಾಃ ಸಹಸ್ರಚೇತಾ ಬಹುವಿಧಜ್ಞಾನಃ । ಸರ್ವಜ್ಞ ಇತ್ಯರ್ಥಃ । ಶತನೀಥೋ ಬಹುಸ್ತುತಿರ್ಬಹುವಿಧಪ್ರಾಪಣೋ ವಾ ಋಭ್ವಾ ಉರು ಭಾಸಮಾನೋ ಮಹಾನ್ವಾ । ಚಮ್ರೀಷೋ ನ ಚಮ್ವಾ ಚಮಸೇ ರಸಾತ್ಮನಾವಸ್ಥಿತಃ ಸೋಮ ಇವ ಶವಸಾ ಬಲೇನ ಪಾಂಚಜನ್ಯಃ । ಗಂಧರ್ವಾ ಅಪ್ಸರಸೋ ದೇವಾ ಅಸುರಾ ರಕ್ಷಾಂಸಿ ಪಂಚ ಜನಾಃ । ನಿಷಾದಪಂಚಮಾಶ್ಚತ್ವಾರೋ ವರ್ಣಾ ವಾ । ತೇಷು ರಕ್ಷಕತ್ವೇನ ಭವಃ । ಏವಂಭೂತಃ ಸ ಮರುತ್ವಾನಿಂದ್ರೋ ನೋಽಸ್ಮಾಕಂ ರಕ್ಷಣಾಯ ಭವತು ॥ ದಸ್ಯುಹಾ । ಬಹುಲಂ ಛಂದಸೀತಿ ಹಂತೇಃ ಕ್ವಿಪ್ । ಭೀಮಃ । ಞಿಭೀ ಭಯೇ । ಭೀಮಾದಯೋಽಪಾದಾನೇ । ಪಾ. ೩-೪-೭೪ । ಇತ್ಯಪಾದಾನೇ ಭಿಯಃ ಷುಗ್ವಾ । ಉ ೧-೧೪೭ । ಇತಿ ಮಕ್ । ಶತನೀಥಃ । ಣೀಞ್ ಪ್ರಾಪಣೇ । ಹನಿಕುಷಿನೀರಮಿಕಾಶಿಭ್ಯಃ ಕ್ಥನ್ । ಉ. ೨-೨ । ಇತಿ ಕ್ಥನ್ಪ್ರತ್ಯಯಃ । ಚಮ್ರೀಷಃ । ಇಷ ಗತೌ । ಚಮ್ವಾಮಿಷ್ಯತಿ ಗಚ್ಛತೀತಿ ಚಮ್ರೀಷಃ । ಇಗುಪಧಲಕ್ಷಣಃ ಕಪ್ರತ್ಯಯಃ । ವರ್ಣವ್ಯಾಪತ್ತ್ಯಾ ರೇಫೋ ದೀರ್ಘಶ್ಚ । ಯದ್ವಾ ಚಮೇರೌಣಾದಿಕ ಈಷನ್ಪ್ರತ್ಯಯಃ । ಪೂರ್ವವದ್ರೇಫಃ । ಪಾಂಚಜನ್ಯಃ । ಭವಾರ್ಥೇ ಬಹಿರ್ದೇವಪಂಚಜನೇಭ್ಯಶ್ಚೇತಿ ವಕ್ತವ್ಯಂ । ಕಾ. ೪-೩-೫೮-೧ । ಇತಿ ಞ್ಯಪ್ರತ್ಯಯಃ । ಞಿತ್ತ್ವಾದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಸಃ**—ಆ ಇಂದ್ರನು । **ವಜ್ರಭೃತ್**—(ಇತರರಿಂದ ವಹಿಸಲಸಾಧ್ಯವಾದ) ವಜ್ರಾಯುಧದ ಧಾರಕನೂ । **ದಸ್ಯುಹಾ**—ಚೋರರೂಪರಾದ ರಾಕ್ಷಸರ ನಾಶಕನೂ । **ಭೀಮಃ**—ಭಯಂಕರನೂ । **ಉಗ್ರಃ**—ಪ್ರಚಂಡವಾದ ತೇಜಸ್ಸುಳ್ಳವನೂ । **ಸಹಸ್ರಚೇತಾಃ**— ಬಹುವಿಧವಾದ ಜ್ಞಾನವುಳ್ಳವನೂ ( ಸರ್ವಜ್ಞನೂ ) । **ಶತನೀಥಃ**—ನಾನಾವಿಧವಾಗಿ ಸ್ತೋತ್ರಮಾಡಲ್ಪಡುವವನೂ ಅಥವಾ ನಾನಾ ವಸ್ತುಗಳನ್ನು ಹೊಂದಿಸುವವನೂ । **ಋಭ್ವಾ**—

ಅತ್ಯಂತ ಪ್ರಭಾವಶಾಲಿಯೂ । **ಚಮ್ರೀಷೋ ನ**—ಚಮುಸ್ಸಿನಲ್ಲಿರತಕ್ಕ ಸೋಮರಸವಂತೆ । **ಶವಸಾ**—ಬಲದಿಂದ । **ಪಾಂಚಜನ್ಯಃ**—ಗಂಧರ್ವರಾದಿಯಾಗಿ ಐದು ಗುಂಪಿಗೂ ಅಥವಾ ನಿಷಾದರೊಡನೆ ಕೂಡಿಕೊಂಡಿರುವ ನಾಲ್ಕು ವರ್ಣದ ಜನರಿಗೂ ರಕ್ಷಕನಾಗಿಯೂ ಇರುವವನು । **ಮರುತ್ವಾನ್**— ಮರುತ್ತುಗಳೊಡಗೂಡಿ । **ಇಂದ್ರಃ**—ಇಂದ್ರನು । **ನಃ**—ನಮ್ಮ । **ಊತೀ**—ರಕ್ಷಣಾರ್ಥವಾಗಿ । **ಭವತು**—ಆಗಿರಲಿ ॥

॥ ಭಾವಾರ್ಥ ॥

ಆ ಇಂದ್ರನು ಅತ್ಯಂತ ಮಹತ್ತಾದ ವಜ್ರಾಯುಧವನ್ನು ಹಿಡಿದಿರುವವನೂ, ಚೋರರೂಪರಾದ ರಾಕ್ಷಸರ ನಾಶಕನೂ, ಭಯಂಕರನೂ, ಪ್ರಚಂಡವಾದ ತೇಜಸ್ಸುಳ್ಳವನೂ ಬಹುವಿಧವಾದ ಜ್ಞಾನವುಳ್ಳವನೂ, ನಾನಾವಿಧವಾದ ಸ್ತೋತ್ರಗಳನ್ನು ಸ್ವೀಕರಿಸುವವನೂ ಅತ್ಯಂತ ಪ್ರಭಾವಶಾಲಿಯೂ, ಮತ್ತು ಚಮುಸ್ಸಿನಲ್ಲಿರುವ ಸೋಮರಸದಂತೆ ಅತ್ಯಂತ ಶ್ರೇಷ್ಠವಾದ ಬಲದೊಡನೆ ಕೂಡಿಕೊಂಡು ಗಂಧರ್ವಾದಿಯಾಗಿ ಸಕಲ ಸುರಾಸುರರಿಗೂ ಮತ್ತು ಬ್ರಾಹ್ಮಣಾದಿಪಂಚಜಾತಿಯ ಜನರಿಗೂ ರಕ್ಷಕನಾಗಿರುವನು. ಮರುತ್ತುಗಳೊಡಗೂಡಿದ ಅಂತಹ ಇಂದ್ರನು ನಮ್ಮ ರಕ್ಷಕನಾಗಿರಲಿ.

## English Translation

He is the wielder of the thunderbolt, the slayer of robbers, fearful and fierce, knowing many things, much eulogized, and mighty, and, like the Soma juice, inspiring the five classes of beings with vigour : may Indra, associated with the Maruts, be our protection.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಇಂದ್ರನ ಎರಡು ವಿಧವಾದ ಶಕ್ತಿಯನ್ನೂ ಒಟ್ಟಿಗೆ ವರ್ಣಿಸಿದೆ. ಮೊದಲನೆಯದಾಗಿ ಭಯಂಕರವಾದುದೂ, ಪ್ರಚಂಡವಾದ ತೇಜಸ್ಸುಳ್ಳದ್ದೂ. ಮತ್ತು ದಸ್ಯುಗಳನ್ನು ನಾಶಮಾಡತಕ್ಕದ್ದೂ ಆದ ಶಕ್ತಿ; ಎರಡನೆಯದಾಗಿ ಅತ್ಯಂತ ಪ್ರಭಾವಶಾಲಿಯಾದುದೂ, ಪಾಂಚಜನ್ಯರಕ್ಷಕವಾದುದೂ ಆದ ಶಕ್ತಿ. ಈ ಅಸಾಧಾರಣವಾದ ಮಹತ್ವವಿರುವುದರಿಂದಲೇ ಇಂದ್ರನನ್ನು **ಸಹಸ್ರಚೇತಾಃ, ಶತನೀಥಃ, ಋಭ್ವಾ** ಇತ್ಯಾದಿ ವಿಶೇಷಣಗಳಿಂದ ಸ್ತುತಿಸಿದೆ. ದುಷ್ಟಶಿಕ್ಷಕವಾದುದೂ, ಶಿಷ್ಟರಕ್ಷಕವಾದುದೂ, ತಮಸ್ಸಿನ ನಿವಾರಣೆಯನ್ನು ಮಾಡುವುದರ ಮೂಲಕ ಜ್ಞಾನವನ್ನು ಪ್ರಸರಿಸುವಂತೆ ಮಾಡುವುದೂ ಆದ ಈ ದ್ವಿಮುಖವಾದ ಶಕ್ತಿಯು ಶ್ರುತಿಸ್ಮೃತ್ಯಾದಿಗಳಲ್ಲೆಲ್ಲಾ ಆಯಾ ಸನ್ನಿವೇಶಗಳಿಗೆ ಅನುರೂಪಗಳಾದ ಭಾಷೆಗಳಿಂದಲೂ ಭಾವಗಳಿಂದಲೂ ವರ್ಣಿತವಾಗಿದೆ. ಈ ದ್ವಿಮುಖವಾದ ಮಹತ್ವವೂ ತೇಜಸ್ಸೂ ಇಂದ್ರನಲ್ಲಿಯೇ ಆವಿರ್ಭಾವವಾಗುವುದೆಂದು ಋಕ್ಸಂಹಿತೆಯ ಬಹುಭಾಗದಲ್ಲಿ ವರ್ಣಿತವಾಗಿರುವಂತೆ ಈ ಋಕ್ಕಿನಲ್ಲಿಯೂ ಆ ಅಂಶವನ್ನು ವಿವರಿಸಿದೆ.

**ದಸ್ಯುಹಾ**—ದಸ್ಯುವಿನ ನಾಶಕನಾದ ಇಂದ್ರನು ದಸ್ಯುವೆಂದರೆ ಉಪಕ್ಷಯಕಾರಿಗಳಾದ ಅಸುರ ಪಿಶಾಚಾದಿಗಳು. ದೇವಶಬ್ದದಿಂದ ವಿಕಾಸಾತ್ಮಕವಾದುದೂ, ದ್ಯೋತನಾತ್ಮಕವಾದುದೂ, ದಾನಾತ್ಮಕವಾದುದೂ (ನಿ. ೭-೧೫) ಆದ ಯಾವ ಅರ್ಥವು ತೋರುವುದೋ, ಅದಕ್ಕೆಲ್ಲಾ ವಿರುದ್ಧವಾದ ಕ್ಷಯಾತ್ಮಕವಾದುದೂ, ಅಂಥ

ಕಾರಮಯವಾದುದೂ, ಹಿಂಸಾತ್ಮಕವಾದುದೂ ಆದ ಅರ್ಥವನ್ನು **ದಸ್ಯುಶಬ್ದವು** ತೋರಿಸುತ್ತದೆ. **ದಸ್ಯುರ್ದಸ್ಯತೇಃ ಕ್ಷಯಾರ್ಥಾದುಪದಸ್ಯಂತ್ಯಸ್ಮಿನ್ರಸಾ ಉಪದಾಸಯತಿ ಕರ್ಮಾಣಿ** (ನಿ. ೭-೨೩) ಕ್ಷಯಿಸುವಂತೆ ಮಾಡು ಎಂಬರ್ಥವನ್ನು ಕೊಡುವ **ದಸ್** (ಉಪಕ್ಷಯೇ) ಎಂಬ ಧಾತುವಿನಿಂದ ನಿಷ್ಪನ್ನವಾಗಿ, ಉದಕಾದಿರಸಗಳನ್ನು ಇಂಗುವಂತೆ ಮಾಡುವವನೂ, ಕೃಷ್ಯಾದಿಕರ್ಮಗಳನ್ನು ನಾಶವಾಗುವಂತೆ ಮಾಡುವವನೂ **ದಸ್ಯುವೆಂದು** ಪ್ರಸಿದ್ಧನಾಗಿದ್ದಾನೆ. ವೃತ್ರಾದಿ ಅಸುರರೆಲ್ಲರೂ ಈ ದಸ್ಯುವಿನ ಗುಂಪಿಗೆ ಸೇರಿದವರು. ನೀರನ್ನು ಪ್ರವಹಿಸದಂತೆ ತಡೆಯುವುದೂ ಬೆಳಕನ್ನು ಮುಚ್ಚುವುದೂ ಇವರ ಕೃತ್ಯಗಳಾದ್ದರಿಂದ ಇವರ ನಾಶವನ್ನು ಮಾಡಿ ನೀರನ್ನು ಹರಿಸಿ ಬೆಳಕನ್ನು ಹರಡುವಂತೆ ಮಾಡಿದನು. ಆದ್ದರಿಂದ ಇಂದ್ರನಿಗೆ **ದಸ್ಯುಹಾ** ಎಂಬುದಾಗಿ ಅನೇಕ ಕಡೆ ಸ್ತುತಿಸಿದೆ. **ದಸ್ಯುಶಬ್ದವು** ಅಸುರರ ಪರ್ಯಾಯವಾಗಿ ಅನೇಕ ಕಡೆ ಉಪಯೋಗಿಸಿದ್ದರೂ ಸಹ, ಕರ್ಮಹೀನರಾದ ಮಾನವರ ವಿಷಯದಲ್ಲೂ ಕೆಲವು ಕಡೆ ಈ ಪದದ ಪ್ರಯೋಗವಿದೆ. ಉದಾಹರಣೆಗಾಗಿ—

**ತ್ವಂ ಹ ನು ತ್ಯದದಮಾಯೋ ದಸ್ಯೂँರೇಕಃ ಕೃಷ್ಟೀರವನೋರಾರ್ಯಾಯ ।**

(ಋ. ಸಂ. ೬-೧೮-೩)

ಇತ್ಯಾದಿ ಋಕ್ಕುಗಳಲ್ಲಿ **ದಸ್ಯೂನ್** ಎಂದರೆ **ಕರ್ಮಹೀನಾನ್ ಜನಾನ್** ಎಂದರ್ಥ. ಇಂತಹ ವೃತ್ರಾದಿರೂಪರಾದ ದಸ್ಯುಗಳನ್ನೂ ಕರ್ಮಹೀನರಾದ ದಸ್ಯುಗಳನ್ನೂ ಕೊಂದದ್ದರಿಂದ, ಇಂದ್ರನಿಗೆ, **ದಸ್ಯುಹಾ** ಎಂಬ ವಿಶೇಷಣವು.

**ಕುವಿತ್ಸಸ್ಯ ಪ್ರ ಹಿ ವ್ರಜಂ ಗೋಮಂತಂ ದಸ್ಯುಹಾ ಗಮತ್ ।**

(ಋ. ಸಂ. ೬-೪೫-೨೪)

**ಅನು ತ್ವಾ ರೋದಸೀ ಉಭೇ ಕ್ರಕ್ಷಮಾಣಮಕೃಪೇತಾಂ ।**
**ಇಂದ್ರ ಯದ್ದಸ್ಯುಹಾಭವಃ ।**

(ಋ. ಸಂ. ೮-೭೬-೧೧)

**ದಸ್ಯುಹನಂ ಪೂರ್ಭಿದಮಿಂದ್ರ ಸತ್ಯಮಸ್ಮಭ್ಯಂ ಚಿತ್ರಂ ವೃಷಣಂ ರಯಿಂ ದಾಃ ।**

(ಋ. ಸ. ೧೦-೪೭-೪)

ಇತ್ಯಾದಿ ಅನೇಕಋಕ್ಕುಗಳಲ್ಲಿ ಇಂದ್ರನ ಶಕ್ತಿಯನ್ನೂ ದಸ್ಯುಹನನದಿಂದ ಆದ ಲೋಕರಕ್ಷಣೆಯನ್ನೂ ತಿಳಿಸುತ್ತದೆ.

**ಭೀಮಃ, ಉಗ್ರಃ**—ಇಂದ್ರನು ಉತ್ಪನ್ನನಾಗುವಾಗಲೇ ಯುದ್ಧದೇವತಾಸ್ವರೂಪವನ್ನು ಹೊಂದಿ ತನ್ನ ಅಸಾಧಾರಣವಾದ ಪರಾಕ್ರಮವನ್ನು ಪ್ರಕಟಿಸಿದ್ದರಿಂದ ಪರ್ವತಾದಿಗಳೊಡನೆ ಪೃಥ್ವಿಯೂ ಅಂತರಿಕ್ಷವೂ ನಡುಗಿದವು ಎಂಬ ವರ್ಣನೆಯು ಇಂದ್ರನ ಮಹತ್ವವನ್ನು ತೋರಿಸುತ್ತದೆ.

**ಅಸ್ಯೇದು ಭಿಯಾ ಗಿರಯಶ್ಚ ದೃಳ್ಹಾ ದ್ಯಾವಾ ಚ ಭೂಮಾ ಜನುಷಸ್ತುಜೇತೇ ।**

(ಋ ಸಂ. ೧-೬೧-೧೪)

**ತವ ತ್ವಿಷೋ ಜನಿಮನ್ರೇಜತ ದ್ಯೌ ರೇಜದ್ಭೂಮಿರ್ಭಿಯಸಾ ಸ್ವಸ್ಯ ಮನ್ಯೋಃ ।**

(ಋ. ಸಂ. ೪-೧೭-೨)

**ತ್ವದ್ವಿಶ್ವಾನಿ ಭುವನಾನಿ ವಜ್ರಿನ್ ದ್ಯಾವಾ ರೇಜೇತೇ ಪೃಥಿವೀ ಚ ಭೀಷಾ ।**
(ಋ. ಸಂ. ೮-೯೭-೧೪)

ಇತ್ಯಾದಿಋಕ್ಕುಗಳು ಇಂದ್ರನ ಭಯಂಕರಸ್ವರೂಪವನ್ನೂ ಉಗ್ರತ್ವವನ್ನೂ ವರ್ಣಿಸುವುವು.

**ಸಹಸ್ರಚೇತಾಃ—ಬಹುವಿಧಜ್ಞಾನಃ, ಸರ್ವಜ್ಞ ಇತ್ಯರ್ಥಃ ।** ನಾನಾವಿಧವಾದ ಜ್ಞಾನವುಳ್ಳವನು, ಸರ್ವಜ್ಞನು ಎಂದರ್ಥ.

**ತ್ವಂ ವಿಶ್ವಸ್ಯ ಜಗತಶ್ಚಕ್ಷುರಿಂದ್ರಾಸಿ ಚಕ್ಷುಷಃ ।**
(ಋ. ಸಂ. ೧೦-೧೦೨-೧೨)

ಇತ್ಯಾದಿಋಕ್ಕುಗಳಲ್ಲಿ ವರ್ಣಿಸಿರುವಂತೆ ಇಂದ್ರನೇ ಸಕಲಜಗತ್ತಿಗೂ ಕಣ್ಣಾಗಿರುವುದರಿಂದ ಅವನನ್ನು ಸರ್ವಜ್ಞನೆಂದು ಸ್ತುತಿಸಿದೆ.

**ಶತನೀಥಃ— ಬಹುಸ್ತುತಿರ್ಬಹುವಿಧಪ್ರಾಪಣೋ ವಾ ।** ನಾನಾವಿಧವಾಗಿ ಸ್ತುತಿಸಲ್ಪಡುವವನು. ಅಥವಾ ನಾನಾವಿಧವಾದ ಅಪೇಕ್ಷಿತಪದಾರ್ಥಗಳನ್ನು ಹೊಂದಿಸುವವನು.

**ಋಭ್ವಾ— ಉರು ಭಾಸಮಾನಃ ಮಹಾನ್‌ವಾ ।** ಅತ್ಯಧಿಕವಾಗಿ ಪ್ರಕಾಶಿಸುವವನು ಅಥವಾ ಮಹಾತ್ಮನು ಎಂದರ್ಥ.

**ಪಾಂಚಜನ್ಯಃ—ಗಂಧರ್ವಾ ಅಪ್ಸರಸೋ ದೇವಾ ಅಸುರಾ ರಕ್ಷಾಂಸಿ ಪಂಚಜನಾಃ । ನಿಷಾದಪಂಚಮಾಶ್ಚತ್ವಾರೋ ವರ್ಣಾ ವಾ ।** ಗಂಧರ್ವರೂ, ಅಪ್ಸರಸ್ಸುಗಳೂ, ದೇವತೆಗಳೂ, ಅಸುರರೂ ಮತ್ತು ರಾಕ್ಷಸರೂ ಸೇರಿ ಐದು ಗುಂಪುಗಳು ಅಥವಾ ಐದನೆಯದಾದ ನಿಷಾದರ ಎಂದರೆ ಬೇಡರ ಗುಂಪಿನೊಂದಿಗೆ ಸೇರಿದ ನಾಲ್ಕು ವರ್ಣದ ಜನರು ಎಂದು ಸಾಯಣರ ವಿವರಣೆಯಿದೆ. ಈ ವರ್ಗೀಕರಣದಲ್ಲಿ ಅಭಿಪ್ರಾಯಭೇದಗಳಿವೆ. ನಿರುಕ್ತಕಾರರು ತಮ್ಮ ಮತವೇನೆಂದು ಹೇಳದೇ ಇತರರ ಅಭಿಪ್ರಾಯಗಳನ್ನು ಮಾತ್ರ ಉದಹರಿಸಿರುವರು.

> **ಪಂಚಜನಾ ( ಮಮ ಹೋತ್ರಂ ಜುಷಧ್ವಂ ) ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸೀತ್ಯೇಕೇ । ಚತ್ವಾರೋ ವರ್ಣಾ ನಿಷಾದಃ ಪಂಚಮ ಇತ್ಯೌಪಮನ್ಯವಃ ।**
> (ನಿ. ૩-೮).

ಗಂಧರ್ವರು, ಪಿತೃಗಳು, ದೇವತೆಗಳು, ಅಸುರರು, ರಾಕ್ಷಸರು ಎಂದು ಐದುವಿಧವಾದ ಜನರೆಂದು ಕೆಲವರೂ ಬ್ರಾಹ್ಮಣಾದಿ ನಾಲ್ಕು ವರ್ಣದವರೊಂದಿಗೆ ನಿಷಾದರೆಂಬ ಐದನೆಯ ಗುಂಪೂ ಸೇರಿ ಪಂಚಜನರೆಂದು ಉಪಮನ್ಯುವೇ ಮುಂತಾದವರೂ ಅಭಿಪ್ರಾಯಪಡುವರೆಂದು ಇತರರ ಅಭಿಪ್ರಾಯಗಳನ್ನು ಮಾತ್ರ ಹೇಳಿರುವರು.

ಹಿಂದೆ ದೇವತೆಗಳೆಲ್ಲರೂ ಅಗ್ನಿಯನ್ನು ಕುರಿತು ತಮಗಾಗಿ ಯಜ್ಞದಲ್ಲಿ ಅರ್ಪಿತವಾದ ಹವಿಸ್ಸನ್ನು ಸ್ವೀಕರಿಸಿ ಎಲ್ಲರಿಗೂ ಹಂಚಬೇಕೆಂದು ಪ್ರಾರ್ಥಿಸಿದಾಗ ಅಗ್ನಿಯು ಅದಕ್ಕೆ ಒಪ್ಪಿಕೊಂಡು,

**ತದದ್ಯ ವಾಚಃ ಪ್ರಥಮಂ ಮಸೀಯ ಯೇನಾಸುರಾँ ಅಭಿ ದೇವಾ ಅಸಾಮ ।**
**ಊರ್ಜಾದ ಉತ ಯಜ್ಞಿಯಾಸಃ ಪಂಚ ಜನಾ ಮಮ ಹೋತ್ರಂ ಜುಷಧ್ವಂ ।**
(ಋ. ಸಂ. ೧೦-೫೩-೪).

ಪಂಚಜನರೂ ಈ ಹವಿಸ್ಸನ್ನು ಭೋಗಿಸಲಿ ಎಂದು ಉತ್ತರವನ್ನು ಕೊಟ್ಟಿರುವ ಈ ವಾಕ್ಯವನ್ನು ಬೃಹದ್ದೇವತಾಕಾರರು ಉದಹರಿಸಿ ಪಂಚಜನರು ಯಾರು ಎಂದು ಅಭಿಪ್ರಾಯಭೇದಗಳನ್ನು ತೋರಿಸಿ ಚರ್ಚಿಸಿದ್ದಾರೆ.

**ಪ್ರತ್ಯುವಾಚಾಥ ತಾನಗ್ನಿರ್ವಿಶ್ವೇದೇವಾ ಯದೂಚ ಮಾಂ ।**
**ತತ್ಕರಿಷ್ಯೇ ಜುಷಂತಾಂ ತು ಹೋತ್ರಂ ಪಂಚಜನಾ ಮಮ ॥**

(ಬೃ. ದೇ. ೭-೬೬)

ಎಂಬ ಶ್ಲೋಕದಲ್ಲಿ ಅಗ್ನಿಯು ದೇವತೆಗಳಿಗೆ ಕೊಟ್ಟ ಉತ್ತರವನ್ನು ತಿಳಿಸಿ ಅನಂತರ **ಪಂಚಜನಶಬ್ದವನ್ನು** ವಿವರಿಸಿದ್ದಾರೆ.

**ಶಾಲಾಮುಖ್ಯಃ ಪ್ರಣೀತಶ್ಚ ಪುತ್ರೋ ಗೃಹಪತೇಶ್ಚ ಯಃ ।**
**ಉತ್ತರೋ ದಕ್ಷಿಣಶ್ಚಾಗ್ನಿರೇತೇ ಪಂಚಜನಾಃ ಸ್ಮೃತಾಃ ॥**

( ಬೃ. ದೇ. ೭-೬೭)

ಎಂದರೆ, ಶಾಲೆಯ ಪ್ರವೇಶಭಾಗದಲ್ಲಿರುವ ಅಗ್ನಿಯೂ, ಪ್ರಣೀತವಾದ ಆಹವನೀಯಾಗ್ನಿಯೂ ಯಜಮಾನನ ಪುತ್ರಭೂತನಾದ ಗಾರ್ಹಪತ್ಯಾಗ್ನಿಯೂ, ದಕ್ಷಿಣೋತ್ತರಾಗ್ನಿಗಳೂ ಸೇರಿ ಈ ಐದು ವಿಧವಾದ ಅಗ್ನಿಗಳೂ ಐದು ಬಗೆಯ ವರ್ಗಗಳೆಂದು ಸಾಂಪ್ರದಾಯಿಕವಾದ ವ್ಯವಹಾರ. ಇದೊಂದು ಮತ. ಅಲ್ಲದೆ,

**ಮನುಷ್ಯಾಃ ಪಿತರೋ ದೇವಾ ಗಂಧರ್ವೋರಗರಾಕ್ಷಸಾಃ ।**
**ಗಂಧರ್ವಾಃ ಪಿತರೋ ದೇವಾ ಅಸುರಾ ಯಕ್ಷರಾಕ್ಷಸಾಃ ॥**

(ಬೃ. ದೇ. ೭-೬೮)

ಮೊದಲನೆಯ ಅಭಿಪ್ರಾಯದಂತೆ **ಉರಗ ರಾಕ್ಷಸರು** ಒಂದು ಗುಂಪು ; ಎರಡನೆಯದರಲ್ಲಿ **ಯಕ್ಷರಾಕ್ಷಸರು** ಒಂದು ಗುಂಪು.

**ಯಾಸ್ಕೌಪಮನ್ಯವಾವೇತಾನಾಹತುಃ ಪಂಚ ವೈ ಜನಾನ್ ।**
**ನಿಷಾದಪಂಚಮಾನ್ವರ್ಣಾ ಮನ್ಯತೇ ಶಾಕಟಾಯನಃ ॥**

(ಬೃ. ದೇ. ೭-೬೯).

ಯಾಸ್ಕರ ಮತವು ಮೊದಲನೆಯದೆಂದು ಬೃಹದ್ದೇವತಾಕಾರರು ಈ ವಾಕ್ಯದಲ್ಲಿ ಹೇಳಿರುವರು. ಆದರೆ ನಿರುಕ್ತದಲ್ಲಿ ಇತರರ ಮತಗಳನ್ನು ಹೇಳಿದರೇ ಹೊರತು ಯಾಸ್ಕರ ಮತವನ್ನು ನಿಷ್ಕರ್ಷವಾಗಿ ತಿಳಿಸಿಲ್ಲ. ಪ್ರಾಯಃ ಅದನ್ನೇ ಅವರೂ ಅಂಗೀಕರಿಸಿರಬಹುದು.

**ಋತ್ವಿಜೋ ಯಜಮಾನಂ ಚ ಶಾಕಪೂಣಿಸ್ತು ಮನ್ಯತೇ ।**

(ಬೃ. ದೇ. ೭-೭೦)

ಹೋತ್ರಾದಿ ಮುಖ್ಯ ಋತ್ವಿಕ್ಕುಗಳೂ, ಯಜಮಾನನೂ ಸೇರಿ ಐದು ಗುಂಪೆಂದು ಶಾಕಪೂಣಿಯವರ ಮತ.

**ಚಕ್ಷುಃ ಶ್ರೋತ್ರಂ ಮನೋ ವಾಕ್ ಚ ಪ್ರಾಣಶ್ಚೇತ್ಯಾತ್ಮವಾದಿನಃ ।**

**ಗಂಧರ್ವಾಪ್ಸರಸೋ ದೇವಾ ಮನುಷ್ಯಾಃ ಪಿತರಸ್ತಥಾ ॥**

**ಸರ್ಪಾಶ್ಚ ಬ್ರಾಹ್ಮಣೇ ಚೈವ ಶ್ರೂಯಂತೇ ಹ್ಯೈತರೇಯಕೇ ।**

ಚಕ್ಷುಸ್ಸು, ಶ್ರೋತ್ರ, ಮನಸ್ಸು, ವಾಕ್ಕು ಮತ್ತು ಪ್ರಾಣ ಈ ಐದೂ **ಪಂಚಜನರೆಂದು** ಆಧ್ಯಾತ್ಮಿಕವಾದಿಗಳ ಮತ. ಗಂಧರ್ವಾದಿಗಳೆಂದು ಐತರೇಯ ಬ್ರಾಹ್ಮಣದಲ್ಲಿ ವಿವರಿಸಿದೆ. (ಐ. ಬ್ರಾ. ೩-೩೧-೫) ಇಂತಹ **ಪಂಚಜನರೂ** ಹವಿಸ್ಸನ್ನು ಭೋಗಿಸಲಿ ಎಂದು ಅಗ್ನಿಯು ದೇವತೆಗಳಿಗೆ ಉತ್ತರವನ್ನು ಕೊಟ್ಟಿದ್ದಾನೆ, ಎಂದು ಬೃಹದ್ದೇವತೆಯ ವಿವರಣೆಯಲ್ಲಿಯೂ ಅಭಿಪ್ರಾಯ ಭೇದಗಳು ಉದಹರಿಸಲ್ಪಟ್ಟಿವೆ.

ಇಂದ್ರನು **ಪಾಂಚಜನ್ಯ** ರಕ್ಷಕನು ಎಂದು ಪ್ರಕೃತವಾದ ಈ ಋಕ್ಕಿನಲ್ಲಿ ಇಂದ್ರನ ಮಹತ್ವವನ್ನು ವರ್ಣಿಸಿದೆ. ಸಕಲಲೋಕವೂ ಇಂದ್ರನ ರಕ್ಷಣೆಗೇ ಒಳಪಟ್ಟಿದುದರಿಂದ **ಪಾಂಚಜನ್ಯ** ಶಬ್ದಕ್ಕೆ ಮೇಲಿನ ಅಭಿಪ್ರಾಯಗಳಲ್ಲಿ ಎಲ್ಲವೂ ಹೊಂದಿಕೊಳ್ಳುವುವು.

॥ ವ್ಯಾಕರಣಪ್ರಕಿಯಾ ॥

**ವಜ್ರಭೃತ್**—ವಜ್ರಂ ಬಿಭರ್ತಿ ಇತಿ ವಜ್ರಭೃತ್. ಡುಭೃಞ್ ಭರಣೇ. ಧಾತು. ವಜ್ರಶಬ್ದ ಉಪಪದವಾಗಿರುವಾಗ ಇದಕ್ಕೆ ಕ್ವಿಪ್ ಪ್ರತ್ಯಯ **ಹ್ರಸ್ವಸ್ಯ ಪಿತಿ ಕೃತಿ ತುಕ್**—(ಪಾ. ಸೂ. ೬-೧-೭೧) ಎಂಬುದರಿಂದ ಪಿತ್ತಾದ ಕೃತ್ ಪ್ರತ್ಯಯ ಪರವಾದುದರಿಂದ ಧಾತುವಿನ ಹ್ರಸ್ವವಾದ ಋಕಾರಕ್ಕೆ ತುಕಾಗಮ. ವಜ್ರಭೃತ್ ಎಂದು ರೂಪವಾಗುತ್ತದೆ. **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ದಸ್ಯುಹಾ**—ಹನ ಹಿಂಸಾಗತ್ಯೋಃ ಧಾತು. ಅದಾದಿ **ಬಹುಲಂ ಛಂದಸಿ**—ಎಂಬುದರಿಂದ ಇದಕ್ಕೆ ಕ್ವಿಪ್‌ಪ್ರತ್ಯಯ. ದಸ್ಯುಹನ್ ಶಬ್ದವಾಗುತ್ತದೆ. ಕಾರಕಪೂರ್ವಪದವಾದುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಭೀಮಃ**—ಞಿಭೀ ಭಯೇ ಧಾತು. ಬಿಭೇತಿ ಅಸ್ಮಾತ್ ಇತಿ ಭೀಮಃ **ಭೀಮಾದಯೋಽಪಾದಾನೇ** (ಪಾ. ಸೂ. ೩-೪-೭೪) ಎಂಬುದರಿಂದ ಅಪಾದಾನಾರ್ಥದಲ್ಲಿ **ಭಿಯಃ ಷುಕ್ ವಾ**—(ಉ. ಸೂ. ೧-೧೪೫) ಎಂಬುದರಿಂದ ಈ ಧಾತುವಿಗೆ ಮಕ್ ಪ್ರತ್ಯಯ. ಕಿತ್ತಾದುದರಿಂದ ಧಾತುವಿನ ಇಕಿಗೆ ಗುಣ ಬರುವುದಿಲ್ಲ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಸಹಸ್ರಚೇತಾಃ**—ಸಹಸ್ರಾಣಿ ಚೇತಾಂಸಿ ಯಸ್ಯ ಸಃ ಸಹಸ್ರಚೇತಾಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಏಕವಚನಾಂತರೂಪ.

**ಶತನೀಥಃ**—ಣೀಞ್ ಪ್ರಾಪಣೇ ಧಾತು. **ಹನಿಕುಷಿನೀರಮಿಕಾಶಿಭ್ಯಕ್ಥನ್**—(ಉ. ಸೂ. ೨-೧೫೯) ಎಂಬುದರಿಂದ ಇದಕ್ಕೆ ಕ್ಥನ್ ಪ್ರತ್ಯಯ. ಕಿತ್ತಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ. ಶತಶಬ್ದದೊಡನೆ ಹಿಂದಿನಂತೆ ಬಹುವ್ರೀಹಿ ಸಮಾಸ. ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಚರ್ಮ್ರೀಷಃ**—ಇಷ ಗತೌ ಧಾತು. ಚರ್ಮ್ರಾಣಿಸ್ಯತಿ ಗಚ್ಛತಿ ಇತಿ ಚರ್ಮ್ರೀಷಃ. ಇಕ್ ಉಪಧವಾದ ಧಾತುವಾದುದರಿಂದ **ಇಗುಪಧಜ್ಞಾಪ್ರೀಕಿರಃ ಕಃ**—(ಪಾ. ಸೂ. ೩-೧-೧೩೫) ಎಂಬುದರಿಂದ ಕ ಪ್ರತ್ಯಯ. ಛಂದಸ್ಸಿನಲ್ಲಿ ವರ್ಣವ್ಯತ್ಯಯದಿಂದ ರೇಫಾದೇಶ. ದೀರ್ಘ. ಚರ್ಮ್ರೀಷಃ ಎಂದು ರೂಪವಾಗುತ್ತದೆ. ಕಾರಕ ಪೂರ್ವಪದವಾಗಿರುವುದರಿಂದ **ಗತಿಕಾರಕೋಪಪದಾತ್ ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಅಥವಾ ಚಮು ಅದನೇ ಧಾತು. ಇದಕ್ಕೆ ಔಣಾದಿಕವಾದ ಈಷನ್ ಪ್ರತ್ಯಯ. ಹಿಂದಿನಂತೆಯೇ ಛಾಂದಸವಾಗಿ ರೇಫಾಗಮ. ವ್ಯತ್ಯಯದಿಂದ ಅಂತೋದಾತ್ತಸ್ವರ ಬರುತ್ತದೆ.

**ಪಾಂಚಜನ್ಯಃ**—ತತ್ರಭವಃ ಎಂಬರ್ಥದಲ್ಲಿ **ಬಹಿರ್ದೇವಪಂಚಜನೇಭ್ಯಶ್ಚೇತಿ ವಕ್ತವ್ಯಮ್**—(ಕಾ. ೪-೩-೫೮-೧) ಎಂಬ ವಚನದಿಂದ ಞ್ಯ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ**—(ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ. **ಯಸ್ಯೇತಿ ಚ**—ಸೂತ್ರದಿಂದ ಅಂತ್ಯ ಅಕಾರಕ್ಕೆ ಲೋಪ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ||೧೨||



ಸಂಹಿತಾಪಾಠಃ

ತಸ್ಯ ವಜ್ರಃ ಕ್ರಂದತಿ ಸ್ಮತ್ಸ್ವರ್ಷಾ ದಿವೋ ನ ತ್ವೇಷೋ ರ-
ವಥಃ ಶಿಮೀವಾನ್ ।
ತಂ ಸಚಂತೇ ಸನಯಸ್ತಂ ಧನಾನಿ ಮರುತ್ವಾನ್ನೋ ಭವತ್ವಿಂ-
ದ್ರ ಊತೀ ॥ ೧೩ ॥

॥ ಪದಪಾಠಃ ॥

ತಸ್ಯ । ವಜ್ರಃ । ಕ್ರಂದತಿ । ಸ್ಮತ್ । ಸ್ವಃऽಸಾಃ । ದಿವಃ । ನ । ತ್ವೇಷಃ ।
ರವಥಃ । ಶಿಮೀऽವಾನ್ ।
ತಂ । ಸಚಂತೇ । ಸನಯಃ । ತಂ । ಧನಾನಿ । ಮರುತ್ವಾನ್ । ನಃ । ಭವ-
ತು । ಇಂದ್ರಃ । ಊತೀ ॥೧೩॥

॥ ಸಾಯಣಭಾಷ್ಯಂ ॥

ತಸ್ಯೇಂದ್ರಸ್ಯ ವಜ್ರಃ ಕುಲಿಶಃ ಸ್ಮತ್ ಭೃಶಂ ಕ್ರಂದತಿ । ಶತ್ರೂನಾಕ್ರಂದಯತಿ । ರೋದಯತೀ-ತ್ಯರ್ಥಃ । ಯ ಇಂದ್ರಃ ಸ್ವರ್ಷಾಃ ಶೋಭನಸ್ಯೋದಕಸ್ಯ ದಾತಾ ದಿವೋ ನ ದಿವಃ ಸಂಬಂಧೀ ಸೂರ್ಯ ಇವ ತ್ವೇಷೋ ದೀಪ್ತಃ ರವಥಃ ಶಬ್ದಸ್ಯ ಗರ್ಜನಲಕ್ಷಣಸ್ಯ ಕರ್ತಾ ಶಿಮೀವಾನ್ । ಶಿಮೀತಿ ಕರ್ಮ-ನಾಮ । ಲೋಕಾನುಗ್ರಾಹಕೇಣ ಕರ್ಮಣಾ ಯುಕ್ತಸ್ತಮಿಂದ್ರಂ ಸನಯೋ ಧನಸ್ಯ ದಾನಾನಿ ಸಚಂತೇ । ಸೇವಂತೇ । ತಥಾ ತಂ ಧನಾನಿ ಚ ಸೇವಂತೇ । ಸ ಮರುತ್ವಾನಿಂದ್ರೋ ನೋಽಸ್ಮಾಕಂ ರಕ್ಷಣಾಯ ಭವತು ॥ ಕ್ರಂಪತಿ । ಕದಿ ಕ್ರದಿ ಕ್ಲದಿ ಆಹ್ವಾನೇ ರೋದನೇ ಚ । ಛಂದಸ್ಯುಭಯಥೇತಿ ಶಪ ಆರ್ಧ-ಧಾತುಕತ್ವಾಣ್ಣೇರನಿಟೀತಿ ಣಿಲೋಪಃ । ಸ್ವರ್ಷಾಃ । ಸುಪೂರ್ವಾದರ್ತೇರ್ವಿಚ್ । ಸುಷ್ಠು ಋರ್ತಿ ಗಚ್ಛತೀತಿ ಸ್ವರುದಕಂ । ತತ್ಸನೋತೀತಿ ಸ್ವರ್ಷಾಃ । ಷಣು ದಾನೇ । ಜನಸನಖನಕ್ರಮುಗಮೋ ವಿಟ್ । ವಿಡ್ವನೋ-ರನುನಾಸಿಕಸ್ಯಾದಿತ್ಯಾತ್ವಂ । ಸನೋತೇರನಃ । ಪಾ. ೮-೩-೧೦೮ । ಇತಿ ಷತ್ವಂ । ತ್ವೇಷಃ । ತ್ವಿಷ ದೀಪ್ತೌ । ಪಚಾದ್ಯಚ್ । ರವಥಃ । ರು ಶಬ್ದೇ । ಶೀಙ್ಶಪಿರುಗಮಿವಂಚಿಜೀವಿಪ್ರಾಣಿಭ್ಯೋಽಥಃ । ಉ. ೩-೧೧೩ । ಇತ್ಯಥಪ್ರತ್ಯಯಃ । ಗುಣಾವಾದೇಶೌ । ಸನಯಃ । ಸನೋತೇರ್ಭಾವ ಔಣಾದಿಕ ಇಪ್ರತ್ಯಯಃ ॥

ಪ್ರತಿಪದಾರ್ಥ

**ತಸ್ಯ**—ಆ ಇಂದ್ರನ । **ವಜ್ರಃ**—ವಜ್ರಾಯುಧವು । **ಸ್ಮತ್**—ಬಹಳವಾಗಿ । **ಕ್ರಂದತಿ**—(ಶತ್ರುಗಳನ್ನು) ಅಳಿಸುತ್ತದೆ. (ಅಳುವಂತೆ ಮಾಡುತ್ತದೆ) । (**ಯಃ**—ಯಾವ ಇಂದ್ರನು) । **ಸ್ವರ್ಷಾಃ**—ಶ್ರೇಷ್ಠವಾದ ಉದಕಗಳ ಪ್ರದಾತನೂ । **ದಿವೋ ನ**—ದ್ಯುಲೋಕದಲ್ಲಿ ಪ್ರಕಾಶಿಸುವ ಸೂರ್ಯನಂತೆ । **ತ್ವೇಷಃ**—ಪ್ರಕಾಶಮಾನನೂ । **ರವಥಃ**—ಗರ್ಜನರೂಪವಾದ ಶಬ್ದವನ್ನು ಮಾಡುವವನೂ । **ಶಿಮೀವಾನ್**—(ಲೋಕಾನುಗ್ರಹಕ್ಕೆ ಕಾರಣವಾದ) ಕರ್ಮದಿಂದ ಕೂಡಿಕೊಂಡಿರುವವನೂ (ಆಗಿರುವನೋ) । **ತಂ**—ಆ ಇಂದ್ರನನ್ನು । **ಸನಯಃ**—ಉದಾರವಾದ ದಾನಗಳು । **ಸಚಂತೇ**— ಸೇವಿಸುತ್ತವೆ । **ತಂ**—ಅವನನ್ನು । **ಧನಾನಿ**—ಧನಗಳೂ (ಸೇವಿಸುತ್ತವೆ) । **ಮರು-ತ್ವಾನ್**—ಮರುತ್ತುಗಳೊಡನೆ ಕೂಡಿಕೊಂಡಿರುವ । **ಇಂದ್ರಃ**—ಇಂದ್ರನು । **ನಃ**—ನಮ್ಮ । **ಊತೀ**—ರಕ್ಷಣಾರ್ಥ ವಾಗಿ । **ಭವತು**—ಆಗಿರಲಿ.

ಭಾವಾರ್ಥ

ಇಂದ್ರನ ವಜ್ರಾಯುಧವು ಶತ್ರುಗಳನ್ನು ಹಿಂಸಿಸಿ ಅವರು ಬಹಳವಾಗಿ ರೋದಿಸುವಂತೆ ಮಾಡುತ್ತದೆ. ಯಾರ ಇಂದ್ರನು ಉದಕಗಳ ಪ್ರದಾತನೂ, ದ್ಯುಲೋಕದಲ್ಲಿ ಪ್ರಕಾಶಿಸುವ ಸೂರ್ಯನಂತೆ ಪ್ರಕಾಶಮಾನನೂ ಗರ್ಜನ ರೂಪವಾದ ಶಬ್ದವನ್ನು ಮಾಡುವವನೂ ಲೋಕಾನುಗ್ರಹಕ್ಕೆ ಕಾರಣವಾದ ಕರ್ಮದಿಂದ ಕೂಡಿರುವವನೂ ಆಗಿರುವನೋ ಅಂತಹ ಇಂದ್ರನನ್ನು ಧನಗಳೂ ಉದಾರವಾದ ದಾನಗಳೂ ಸೇವಿಸುತ್ತವೆ. (ಆಶ್ರಯಿಸಿರುತ್ತವೆ) ಮರುತ್ತುಗಳೊಡನೆ ಕೂಡಿಕೊಂಡಿರುವ ಅಂತಹ ಇಂದ್ರನು ನಮ್ಮ ರಕ್ಷಣಾರ್ಥವಾಗಿ ಆಗಿರಲಿ.

## English Translation

His thunderbolt draws cries (from his enemies), he is the sender of good waters, brilliant as ( the luminary ) of heaven, the thunderer, the promoter of beneficent acts, upon him do donations and riches attend : may Indra, associated with the Maruts, be our protection.

॥ ವಿಶೇಷವಿಷಯಗಳು ॥

ವಜ್ರಃ—ವಜ್ರಃ ಕಸ್ಮಾತ್, ವರ್ಜಯತೀತಿ ಸತಃ । ಜೀವಿಗಳಿಂದ ಪ್ರಾಣಗಳನ್ನು ಬಿಡಿಸಿ ಬೇರೆ ಮಾಡುವುದರಿಂದ ವಜ್ರವೆಂದು ಹೆಸರು. ಅತ್ಯಂತ ಪ್ರಬಲರಾದ ಅಸುರರನ್ನೂ ಕೊಲ್ಲತಕ್ಕ ಶಕ್ತಿಯುಳ್ಳದ್ದು. ವಜ್ರಾಯುಧದ ಮಹತ್ವವೂ, ಇಂದ್ರನು ಇದನ್ನು ಪಡೆದುದೂ ಒಂದೊಂದುಕಡೆ ಒಂದೊಂದು ವಿಧವಾಗಿ ವರ್ಣಿಸಲ್ಪಟ್ಟಿದೆ.

ಅಸ್ಮಾ ಇದು ತ್ವಷ್ಟಾ ತಕ್ಷದ್ವಜ್ರಂ ಸ್ವಪಸ್ತಮಂ ಸ್ವರ್ಯಂ೧ ರಣಾಯ ।

(ಋ. ಸಂ ೧-೬೧-೬.)

ಅನವಸ್ತೇ ರಥಮಶ್ವಾಯ ತಕ್ಷನ್ತ್ವಷ್ಟಾ ವಜ್ರಂ ಪುರುಹೂತ ದ್ಯುಮಂತಂ ।

(ಋ. ಸಂ. ೫-೩೧-೪)

ಇತ್ಯಾದ್ಯನೇಕ ಋಕ್ಕುಗಳಲ್ಲಿ ತ್ವಷ್ಟೃವು ಇಂದ್ರನಿಗೆ ದೀಪ್ತಿಯುತವಾದ ವಜ್ರಾಯುಧವನ್ನು ನಿರ್ಮಿಸಿಕೊಟ್ಟನೆಂದೂ ಅಲ್ಲದೇ,

ಯಂ ತೇ ಕಾವ್ಯ ಉಶನಾ ಮಂದಿನಂ ದಾದ್ವೃತ್ರಹಣಂ ಪಾರ್ಯಂ ತತಕ್ಷ ವಜ್ರಂ ।

(ಋ. ಸಂ. ೧-೧೨೧-೧೨.)

ಇತ್ಯಾದಿ ಋಕ್ಕುಗಳಲ್ಲಿ ಕಾವ್ಯ ಉಶನಸ್ಸಿನಿಂದ ದತ್ತವಾಗಿದೆಯೆಂದೂ ಹೇಳಲ್ಪಟ್ಟಿದೆ.

ಸಮುದ್ರೇ ಅಂತಃ ಶಯತ ಉದ್ನಾ ವಜ್ರೋ ಅಭೀವೃತಃ ।
ಭರಂತ್ಯಸ್ಮೈ ಸಂಯತಃ ಪುರಃಪ್ರಸ್ರವಣಾ ಬಲಿಂ ।

(ಋ. ಸಂ. ೮-೧೦೦-೯)

ಎಂಬವೇ ಮುಂತಾದಕಡೆಗಳಲ್ಲಿ ವಜ್ರಾಯುಧದ ಸ್ವರೂಪವನ್ನೂ ಶಕ್ತಿಯನ್ನೂ ವರ್ಣಿಸಿದೆ. ವಜ್ರಾಯುಧವು ಸಮುದ್ರದಲ್ಲಿ ನೀರಿನಿಂದ ಆವೃತವಾಗಿಯೂ ಸುಪ್ತವಾಗಿಯೂ ಇದ್ದು ಯುದ್ಧರಂಗಕ್ಕೆ ಬಂದೊಡನೆಯೇ ಶತ್ರುಗಳು ರಣರಂಗದಲ್ಲಿ ಇದಕ್ಕೆ ತಮ್ಮ ಪ್ರಾಣಗಳನ್ನೇ ಬಲಿಯಾಗಿ ಕೊಡುತ್ತಾರೆಂದು ವಜ್ರಾಯುಧದ ಶಕ್ತಿಯನ್ನು ಹೇಳಿದೆ. ಇಂತಹ ಆಯುಧದಿಂದ ಇಂದ್ರನು ಸಕಲ ರಾಕ್ಷಸರನ್ನೂ ನಾಶಮಾಡಿದನು. ಮತ್ತು ಅವರನ್ನು ಕೊಲ್ಲುವುದಕ್ಕೆ ಮೊದಲು ಅವರನ್ನು **ಸ್ಮತ್ ಕ್ರಂದತಿ**—ಅಧಿಕವಾಗಿ ಅಳುವಂತೆ ಮಾಡಿದನು. **ಸ್ಮತ್** ಶಬ್ದವು ಸಾಧಾರಣವಾಗಿ ಶೋಭನ, ಕಲ್ಯಾಣ, ಪ್ರಶಸ್ತ ಎಂಬ ಅರ್ಥವುಳ್ಳದ್ದೆಂದು ಸಾಯಣರು ಅನೇಕಕಡೆ ಹೇಳಿದ್ದಾರೆ. ಕೆಲವೆಡೆಗಳಲ್ಲಿ **ಸಹ** (ಜೊತೆಯಲ್ಲಿ) ಎಂಬ ಶಬ್ದದ ಪರ್ಯಾಯವೆಂದು ತೋರಿಸಿದ್ದಾರೆ. ಇಲ್ಲಿ **ಭೃಶಂ** ಎಂದು ಅರ್ಥಮಾಡುತ್ತಾರೆ.

**ಅಸ್ಮಿನ್ನಿಂದ್ರ ವೃಜನೇ ಸರ್ವವೀರಾಃ ಸ್ಮತ್ಸೂರಿಭಿಸ್ತವ ಶರ್ಮನ್ತ್ಸ್ಯಾಮ ।**
(ಋ. ಸಂ. ೧-೫೧-೧೫)

**ಸಿಷಕ್ತು ಮಾತಾ ಮಹೀ ರಸಾ ನಃ ಸ್ಮತ್ಸೂರಿಭಿರೃಜುಹಸ್ತ ಋಜುವನಿಃ ।**
(ಋ. ಸಂ. ೫-೪೧-೧೫)

ಈ ಋಕ್ಕುಗಳಲ್ಲಿಯೂ ಮತ್ತು ಹೀಗೆಯೇ ೫-೪೧-೧೯ ೫-೮೭-೮, ೭-೩-೮, ೮-೧೮-೪ ಇತ್ಯಾದಿ ಋಕ್ಕುಗಳಲ್ಲೂ ಉಪಯೋಗಿಸಿರತಕ್ಕ **ಸ್ಮತ್** ಶಬ್ದಕ್ಕೆ **ಸುಪ್ರಶಸ್ತ** ಅಥವಾ ಶೋಭನ ಎಂಬ ಅರ್ಥವನ್ನು ಹೇಳಿದ್ದಾರೆ. ಮತ್ತು

**ಉತ ನ ಈಂ ಮರುತೋ ವೃದ್ಧಸೇನಾಃ ಸ್ಮದ್ರೋದಸೀ ಸಮನಸಃ ಸದಂತು ।**
(ಋ. ಸಂ. ೧-೧೮೬-೮)

ಇತ್ಯಾದಿ ಋಕ್ಕುಗಳಲ್ಲಿ ಸಹ ಎಂಬ ಅರ್ಥವನ್ನೂ ಹೇಳಿ, ಋ. ಸಂ. ೧-೭೩-೬ ನೇ ಋಕ್ಕಿನಲ್ಲಿ ಉಪಯೋಗಿಸಿರುವ **ಸ್ಮತ್** ಶಬ್ದಕ್ಕೆ **ಸ್ಮಚ್ಛಬ್ದೋ ನಿತ್ಯಶಬ್ದಸಮಾನಾರ್ಥಃ ನಿತ್ಯಮೂಧಸಾ ಯುಕ್ತಾಃ** ಎಂದು **ನಿತ್ಯ** ಎಂಬ ಅರ್ಥವನ್ನು ಮಾಡಿರುತ್ತಾರೆ.

ಪ್ರಕೃತವಾದ ಈ ಋಕ್ಕಿನಲ್ಲೂ ಇದರಂತೆಯೇ ೨-೪-೯ ನೆಯದರಲ್ಲೂ ಸಹ **ಭೃಶಂ, ಅತಿಪ್ರಭೂತಂ** ಎಂದು ವ್ಯಾಖ್ಯಾನ ಮಾಡಿದ್ದಾರೆ. ಶತ್ರುಗಳನ್ನು ಅತ್ಯಧಿಕವಾಗಿ ಅಳಿಸಿದನು ಎಂದಭಿಪ್ರಾಯ.

**ಸ್ವರ್ಷಾಃ—ಶೋಭನಸ್ಯ ಉದಕಸ್ಯ ದಾತಾ ।** ಶ್ರೇಷ್ಠವಾದ ಉದಕಗಳನ್ನು ಕೊಡತಕ್ಕವನು.

**ಶಿಮೀವಾನ್—ಶಿಮೀತಿ ಕರ್ಮನಾಮ । ಶಮಯತೇರ್ವಾ ಶಕ್ನೋತೇರ್ವಾ** (ನಿ. ೫-೧೨) ಪ್ರಯಾಸಪಡು ಅಥವಾ ಶ್ರಮಪಡು ಎಂದರ್ಥವನ್ನು ಕೊಡುವ **ಶಮ್** ಧಾತುವಿನಿಂದಾಗಲಿ ಅಥವಾ ಶಕ್ಯವೆಂಬರ್ಥವನ್ನು ಕೊಡುವ **ಶಕ್** ಧಾತುವಿನಿಂದಾಗಲಿ ನಿಷ್ಪನ್ನವಾಗಿ **ಕರ್ಮ** ಎಂದಾಗುತ್ತದೆ.

**ಆಪಾಂತಮನ್ಯುಸ್ತೃಪಲಪ್ರಭರ್ಮಾ ಧುನಿಃ ಶಿಮೀವಾಞ್ಛರುಮಾಁ ಋಜೀಷೀ ।**
(ಋ. ಸಂ. ೧೦-೮೯-೫)

ಇತ್ಯಾದಿ ಋಕ್ಕುಗಳಲ್ಲಿ ಅರ್ಥವಾಗುವಂತೆ ಇಲ್ಲಿಯೂ ಕರ್ಮಯುಕ್ತನಾದ ಎಂದರ್ಥ. ವೃತ್ರಹನನಾದಿಕರ್ಮಗಳಿಂದಲೂ ವೃಷ್ಟಿವರ್ಷಣರೂಪವಾದ ಕರ್ಮಗಳಿಂದಲೂ, ಲೋಕರಕ್ಷಣಕ್ಕೆ ಸಾಧನಗಳಾದ ಇತರಕರ್ಮಗಳಿಂದ ಕೂಡಿರುವುದರಿಂದಲೂ ಇಂದ್ರನಿಗೆ **ಶಿಮೀವಾನ್** ಎಂಬ ವಿಶೇಷಣವು ಉಚಿತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಕ್ರನ್ದತಿ**—ಕದಿ **ಕ್ರದಿ,** ಕ್ಲದಿ ಆಹ್ವಾನೇ ರೋದನೇ ಚ. ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಧಾತುವು ಇದಿತ್ತಾದುದರಿಂದ **ಇದಿತೋ ನುಮ್ ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. **ಸನಾದ್ಯಂತಾ ಧಾತವಃ**—ಸೂತ್ರದಿಂದ ಕ್ರಂದಿ ಎಂಬುದು ಧಾತುಸಂಜ್ಞೆಯನ್ನು ಹೊಂದುತ್ತದೆ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್‌ಪ್ರತ್ಯಯ. ಶಪ್ ವಿಕರಣ. **ಛಂದಸ್ಯುಭಯಥಾ**—(ಪಾ. ಸೂ. ೩-೪-೧೧೭) ಎಂಬುದರಿಂದ ಛಂದಸ್ಸಿನಲ್ಲಿ ಶಪಿಗೆ ಆರ್ಧಧಾತುಕ ಸಂಜ್ಞೆ ಇರುವುದರಿಂದ ಇದನ್ನು ನಿಮಿತ್ತೀಕರಿಸಿ **ಣೇರನಿಟಿ**—(ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. ಕ್ರನ್ದತಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ತಿಙಂತನಿಘಾತಸ್ವರ ಬರುತ್ತದೆ

**ಸ್ವರ್ಷಾಃ**—ಸೃ ಗತೌ ಧಾತು. ಇದಕ್ಕೆ ಸು ಪೂರ್ವದಲ್ಲಿರುವಾಗ **ಅನ್ಯೇಭ್ಯೋಽಪಿ ದೃಶ್ಯತೇ**—ಎಂಬುದರಿಂದ ವಿಚ್ ಪ್ರತ್ಯಯ. ವಿಚಿನಲ್ಲಿ ಸರ್ವವೂ ಲೋಪವಾಗುತ್ತದೆ. ಸುಷ್ಠು ಅರ್ತಿ ಗಚ್ಛತಿ ಇತಿ ಸ್ವರ್ ಉದಕಮ್ (ಚೆನ್ನಾಗಿ ಹೋಗುವುದು ನೀರು ಎಂದರ್ಥ) ಸ್ವರ್ ಸನೋತಿ ಇತಿ ಸ್ವರ್ಷಾಃ. ಷಣು ದಾನೇ ಧಾತು. **ಜನಸನಖನಕ್ರಮಗಮೋ ವಿಟ್**—(ಪಾ. ಸೂ. ೩-೨-೬೭) ಎಂಬುದರಿಂದ ಇದಕ್ಕೆ ವಿಟ್ ಪ್ರತ್ಯಯ **ಧಾತ್ವಾದೇಃ ಷಃ ಸಃ**—ಸೂತ್ರದಿಂದ ಧಾತ್ವಾದಿಗೆ ಸತ್ವ. **ವಿಡ್ವನೋರನುನಾಸಿಕಸ್ಯಾತ್**—(ಪಾ. ಸೂ. ೬-೪-೪೧) ಎಂಬುದರಿಂದ ವಿಟ್ ಪರವಾದಾಗ ಅನುನಾಸಿಕಾಂತವಾದ ಈ ಧಾತುವಿನ ಅನುನಾಸಿಕಕ್ಕೆ ಆತ್ವ. ಸ್ವರ್‌ಸಾ ಎಂದಿರುವಾಗ **ಸನೋತೇರನಃ**—(ಪಾ. ಸೂ. ೮-೩-೧೦೮) ಎಂಬುದರಿಂದ ಷತ್ವ. ಸ್ವರ್ಷಾ ಎಂದು ಆಕಾರಾಂತವಾದ ಶಬ್ದವಾಗುತ್ತದೆ. **ಗತಿಕಾರಕೋಪಪದಾತ್ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ದಿವಃ**—**ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ತ್ವೇಷಃ**—ತ್ವಿಷ ದೀಪ್ತೌ. ಧಾತು. ಪಚಾದಿಯಲ್ಲಿ ಸೇರಿರುವುದರಿಂದ **ನಂದಿಗ್ರಹಪಚಾದಿಭ್ಯಃ**—(ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ರವಥಃ**—ರು ಶಬ್ದೇ ಧಾತು. ಶೀಙ್ ಶಪಿ ರುಗಮಿ ವಂಚಿ **ಜೀವಿಪ್ರಾಣಿಭ್ಯೋಽಥಃ**—(ಉ. ಸೂ. ೩-೫೯೩) ಎಂಬುದರಿಂದ ಈ ಧಾತುವಿಗೆ ಅಥ ಪ್ರತ್ಯಯ ತನ್ನಿಮಿತ್ತವಾಗಿ **ಸಾರ್ವಧಾತುಕಾರ್ಧಧಾತುಕಯೋಃ**—ಎಂಬುದರಿಂದ ಧಾತುವಿನ ಇಕಿಗೆ ಗುಣ. ಅವಾದೇಶ. ರವಥ ಎಂದು ರೂಪವಾಗುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ.

**ಸಚಂತೇ**—ಷಚ ಸೇಚನೇ ಸೇವನೇ ಚ ಧಾತು. ಭ್ವಾದಿ. ಲಟ್ ಪ್ರಥಮಪುರುಷ ಬಹುವಚನರೂಪ ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ.

**ಸನಯಃ**—ಷಣುದಾನೇ ಧಾತು. **ಧಾತ್ವಾದೇಃಷಃ ಸಃ**—ಎಂಬುದರಿಂದ ಆದಿಗೆ ಸತ್ವ. ಇದಕ್ಕೇ ಭಾವಾರ್ಥದಲ್ಲಿ ಔಣಾದಿಕ ಇ ಪ್ರತ್ಯಯ. ಸನಿ ಎಂದು ರೂಪವಾಗುತ್ತದೆ. ಪ್ರಥಮಾಬಹುವಚನಾಂತರೂಪ. ಪ್ರತ್ಯಯಸ್ವರದಿಂದ ಸನಯಃ ಎಂಬುದು ಮಧ್ಯೋದಾತ್ತವಾಗುತ್ತದೆ. ॥ ೧೩ ॥

—— ಃ೦ಃ ——

॥ ಸಂಹಿತಾಪಾಠಃ ॥

ಯಸ್ಯಾಜಸ್ರಂ ಶವಸಾ ಮಾನಮುಕ್ಥಂ ಪರಿಭುಜದ್ರೋದಸೀ
ವಿಶ್ವತಃ ಸೀಂ।
ಸ ಪಾರಿಷತ್ಕ್ರತುಭಿರ್ಮಂದಸಾನೋ ಮರುತ್ವಾನ್ನೋ ಭವ-
ತ್ವಿಂದ್ರ ಊತೀ ॥೧೪॥

ಪದಪಾಠಃ

ಯಸ್ಯ । ಅಜಸ್ರಂ । ಶವಸಾ । ಮಾನಂ । ಉಕ್ಥಂ । ಪರಿಽಭುಜತ್ । ರೋ-
ದಸೀ ಇತಿ । ವಿಶ್ವತಃ । ಸೀಂ ।
ಸಃ । ಪಾರಿಷತ್ । ಕ್ರತುಽಭಿಃ । ಮಂದಸಾನಃ । ಮರುತ್ವಾನ್ । ನಃ । ಭವತು ।
ಇಂದ್ರಃ । ಊತೀ ॥ ೧೪ ॥

ಯಸ್ಯೇಂದ್ರಸ್ಯೋಕ್ಥಂ ಪ್ರಶಸ್ಯಂ ಶವಸಾ ಮಾನಂ ಬಲೇನ ಸರ್ವಸ್ಯ ಪರಿಚ್ಛೇದಕಂ ಸರ್ವೇಷಾಂ ಬಲಸ್ಯೋಪಮಾನಭೂತಂ ವಾ ರೋದಸೀ ದ್ಯಾವಾಪೃಥಿವ್ಯೌ ವಿಶ್ವತಃ ಸೀಂ ಸರ್ವತೋಽಜಸ್ರಮನವರತಂ ಪರಿಭುಜತ್ ಪರಿತಃ ಸರ್ವತೋ ಭುನಕ್ತಿ ಪಾಲಯತಿ ಸ ಇಂದ್ರಃ ಕ್ರತುಭಿರಸ್ಮಾಭಿಃ ಕೃತೈರ್ಯಾಗೈರ್ಮಂದ-ಸಾನೋಽಮೋದಮಾನಃ ಸನ್ಪಾರಿಷತ್। ಅಸ್ಮಾನ್ಪುರಿತಾತ್ಪಾರಯತು॥ ಉಕ್ಥಂ। ವಚ ಪರಿಭಾಷಣೇ। ಪಾತೃ್ಯತು-ದಿವಚೀತ್ಯಾದಿನಾ ಕರ್ಮಣಿ ಥಕ್ । ವಚಿಸ್ವಪೀತ್ಯಾದಿನಾ ಸಂಪ್ರಸಾರಣಂ । ಪರಿಭುಜತ್ । ಭುಜ ಪಾಲ-ನಾಭ್ಯವಹಾರಯೋಃ । ಲೇಟ್ಯಡಾಗಮಃ । ವ್ಯತ್ಯಯೇನ ಶಃ । ಪಾರಿಷತ್ । ಪಾರ ತೀರ ಕರ್ಮಸಮಾಪ್ತೌ। ಲೇಟ್ಯಡಾಗಮಃ । ಸಿಬ್ಬಹುಲಂ ಲೇಟೀತಿ ಸಿಪ್ । ತಸ್ಯಾರ್ಧಧಾತುಕತ್ವಾದಿಟ್ । ವ್ಯತ್ಯಯೇನ ಣಿಲೋಪಃ । ಮಂದಸಾನಃ । ಮದಿ ಸ್ತುತಿಮೋದಮದಸ್ವಪ್ನಕಾಂತಿಗತಿಷು । ಋಂಜಿವೃಧಿಮಂದಿಸಹಿಭ್ಯಃ ಕಿತ್ । ಉ. ೨-೮೭ । ಇತ್ಯಸಾನಚ್ ಪ್ರತ್ಯಯಃ ॥

ಪ್ರತಿಪದಾರ್ಥ

**ಶವಸಾ**—ಬಲದಿಂದ । **ಯಸ್ಯ**—ಯಾವ ಇಂದ್ರನ । **ಉಕ್ಥಂ**—ಪ್ರಶಸ್ಯವಾದ । **ಮಾನಂ**—ಪ್ರಮಾಣವು (ಅಥವಾ ಇತರರ ಬಲಕ್ಕೆ) ಮಾದರಿಯು । **ರೋದಸೀ**—ದ್ಯಾವಾಪೃಥಿವಿಗಳನ್ನು । **ವಿಶ್ವತಃ ಸೀಂ**—ಸಕಲಪ್ರದೇಶಗಳಲ್ಲಿಯೂ । **ಅಜಸ್ರಂ**—ಯಾವಾಗಲೂ । **ಪರಿಭುಜತ್**—ಸಂಪೂರ್ಣವಾಗಿ ಪಾಲಿಸುತ್ತದೆಯೋ । **ಸಃ**—ಆ ಇಂದ್ರನು । **ಕ್ರತುಭಿಃ**—(ನಾವು ನೆರವೇರಿಸಿದ) ಯಜ್ಞಗಳಿಂದ । **ಮಂದಸಾನಃ**—ಹರ್ಷಿತನಾಗಿ । **ಪಾರಿಷತ್**—(ನಮ್ಮನ್ನು ಪಾಪದಿಂದ) ಮುಕ್ತರನ್ನಾಗಿ ಮಾಡಲಿ । **ಮರುತ್ವಾನ್**—ಮರುತ್ತುಗಳೊಡನೆ ಕೂಡಿಕೊಂಡಿರುವ **ಇಂದ್ರಃ**—ಇಂದ್ರನು । **ನಃ**—ನಮ್ಮ । **ಊತೀ**—ರಕ್ಷಣಾರ್ಥವಾಗಿ । **ಭವತು**—ಆಗಿರಲಿ.

॥ ಭಾವಾರ್ಥ ॥

ಇಂದ್ರನ ಪ್ರಶಸ್ಯವಾದ ಬಲವು ಲೋಕದಲ್ಲಿ ಇತರರೆಲ್ಲರ ಬಲಕ್ಕಿಂತಲೂ ಅಧಿಕವಾಗಿ ಅವೆಲ್ಲಕ್ಕೂ ಪ್ರಮಾಣವಾಗಿಯೂ ಮತ್ತು ಮಾದರಿಯಾಗಿಯೂ ಇದ್ದು ಅದು ಸದಾಕಾಲದಲ್ಲಿಯೂ ಸಹ ದ್ಯಾವಾಪೃಥ್ವಿಗಳ ಸಕಲಪ್ರದೇಶಗಳನ್ನೂ ಸಂಪೂರ್ಣವಾಗಿ ಪಾಲಿಸುತ್ತದೆ. ಅಂತಹ ಶಕ್ತಿಯಿಂದ ಕೂಡಿದ ಇಂದ್ರನು ನಾವು ನೆರವೇರಿಸಿದ ಯಜ್ಞಗಳಿಂದ ಹರ್ಷಿತನಾಗಿ ನಮ್ಮನ್ನು ಪಾಪದಿಂದ ಮುಕ್ತರನ್ನಾಗಿ ಮಾಡಲಿ. ಮರುತ್ತುಗಳೊಡನೆ ಕೂಡಿಕೊಂಡಿರುವ ಆ ಇಂದ್ರನು ನಮ್ಮ ರಕ್ಷಕನಾಗಿರಲಿ.

## English Translation

May he, of whom the excellent measure (of all things), through strength, eternally and everywhere cherishes heaven and earth, propitiated by our acts, convey us beyond (evil): may Indra, associated with the Maruts, be our protection.

ವಿಶೇಷವಿಷಯಗಳು

ಪೃಥಿವ್ಯಂತರಿಕ್ಷಗಳೆರಡರಲ್ಲೂ ಸಹ ಇಂದ್ರನ ಶಕ್ತಿಯನ್ನು ಮೀರಿಸಿದವರಾರೂ ಇಲ್ಲ. ಇವನ ಬಲವು ಪೃಥಿವ್ಯಂತರಿಕ್ಷಗಳ ಬಲವೆಲ್ಲವನ್ನೂ ಮೀರಿಸಿ ಎಲ್ಲಾ ವಿಧವಾದ ಬಲಕ್ಕೂ ಮಾದರಿಯಾಗಿದೆ. ಆದುದರಿಂದಲೇ ಅತ್ಯಂತ ಪ್ರಶಸ್ಯನಾದುದು ಎಂದೂ, ಈ ವಿಧವಾದ ದಿವ್ಯಶಕ್ತಿಯಿಂದ ಪೃಥಿವ್ಯಂತರಿಕ್ಷಗಳೆರಡನ್ನೂ ಇಂದ್ರನು ರಕ್ಷಿಸುತ್ತಾನೆ ಎಂದೂ ಇಂದ್ರನ ಮಹಿಮೆಯನ್ನು ತೋರಿಸುವ ಈ ಎರಡು ಅಂಶಗಳನ್ನು ವಿವರಿಸಿದೆ. ಮೊದಲನೆಯದಾಗಿ, ಪ್ರಶಸ್ಯವಾದುದೂ ಎಲ್ಲಕ್ಕೂ ಮಾದರಿಯಾದುದೂ ಆದ ಅವನ ಶಕ್ತಿ. ಆ ಶಕ್ತಿಯ ವೈಶಿಷ್ಟ್ಯವನ್ನು ಸಂಹಿತಾ ವಾಕ್ಯಗಳ ವರ್ಣನೆಯಿಂದ ತಿಳಿಯಬಹುದು.

**ನಹಿ ನು ಯಾದಧೀಮಸೀಂದ್ರಂ ಕೋ ವೀರ್ಯಾ ಪರಃ ।**
**ತಸ್ಮಿನ್ನೃಮ್ಣಮುತ ಕ್ರತುಂ ದೇವಾ ಓಜಾಂಸಿ ಸಂ ದಧುರರ್ಚನ್ನನು ಸ್ವರಾಜ್ಯಂ ।**

(ಋ. ಸಂ. ೧-೮೦-೧೫).

ಸರ್ವತ್ರ ವ್ಯಾಪಕನೂ, ಮಾನವರಿಂದ ತಿಳಿಯಲಾರದಷ್ಟು ಗಹನವಾದ ಸ್ಥಾನದಲ್ಲಿರುವವನೂ, ಸಾಮರ್ಥ್ಯದಿಂದ ಕೂಡಿದವನೂ ಆದ ಇಂದ್ರನನ್ನು ಯಾವನು ತಾನೇ ತಿಳಿಯಬಲ್ಲನು ? ಈ ವೀರ್ಯವಿರುವುದರಿಂದಲೇ ದೇವತೆಗಳೆಲ್ಲರೂ ವೀರ್ಯಕರ್ಮಗಳನ್ನು ನೆರವೇರಿಸುವುದಕ್ಕೂ, ಬಲಕ್ಕೆ ಆಶ್ರಯನಾಗಿರುವುದಕ್ಕೂ ಇಂದ್ರನನ್ನು ಮಾದರಿಯನ್ನಾಗಿ ಮಾಡಿಕೊಂಡರು.

**ನಿ ಷು ಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಂ ।**

(ಋ. ಸಂ. ೧೦-೧೧೨-೯.)

ಮೇಧಾವಿಗಳೂ, ಕ್ರಾಂತಪ್ರಜ್ಞರೂ ಆದ ಕವಿಗಳಲ್ಲೆಲ್ಲಾ ಅತ್ಯಂತಶ್ರೇಷ್ಠನಾದ ಕವಿಯೆಂದು ಪರಿಗಣಿತನಾಗಿದ್ದೀಯೆ.

ಇತ್ಯಾದಿಯಾಗಿ ದೈಹಿಕಶಕ್ತಿ ಮಾತ್ರವಲ್ಲದೇ, ಆತ್ಮಶಕ್ತಿಯಲ್ಲಿಯೂ ಇಂದ್ರನು ಎಲ್ಲರಿಗೂ ಮಾದರಿಯಾಗಿರುವನೆಂದು ನೂರಾರು ಸನ್ನಿವೇಶಗಳಲ್ಲಿ ಇದೇ ರೀತಿ ಅವನ ಮಾಹಾತ್ಮ್ಯವನ್ನು ವರ್ಣಿಸಿದೆ. ಇಂತಹ ಅಸಾಧಾರಣವಾದ ಪರಾಕ್ರಮವೂ ಪ್ರಜ್ಞೆಯೂ ಇರತಕ್ಕ ಇಂದ್ರನು ಸಕಲ ವಿಶ್ವಕ್ಕೂ ಪ್ರಭುವೆಂದೂ, ರಕ್ಷಕನೆಂದೂ ಸಹ ಈ ಋಕ್ಕಿನಲ್ಲಿ ಸ್ತುತವಾಗಿರುವ ಎರಡನೆಯ ಅಂಶವನ್ನೂ ವರ್ಣಿಸಿರುವುದನ್ನು ನಾನಾ ಕಡೆಗಳಲ್ಲಿ ನೋಡಬಹುದು.

**ಏಕೋ ವಿಶ್ವಸ್ಯ ಭುವನಸ್ಯ ರಾಜಾ ಸ ಯೋಧಯಾ ಚ ಕ್ಷಯಯಾ ಚ ಜನಾನ್ ।**

(ಋ. ಸಂ. ೩-೪೬-೨)

ಸಕಲ ವಿಶ್ವಕ್ಕೂ ಇಂದ್ರನೊಬ್ಬನೇ ಶಕ್ತನಾದ ಪ್ರಭುವು. ಆದ್ದರಿಂದಲೇ,

**ಯಸ್ಯ ದ್ವಿಬರ್ಹಸೋ ಬೃಹತ್ಸಹೋ ದಾಧಾರ ರೋದಸೀ ।**
**ಗಿರೀಂರಜ್ರಾಂ ಅಪಃ ಸ್ವರ್ವೃಷತ್ವನಾ ।**

(ಋ. ಸಂ. ೮-೧೫-೨)

ಇಂದ್ರನು ದ್ಯಾವಾಪೃಥಿವಿಗಳೆರಡನ್ನೂ ತನ್ನ ಶಕ್ತಿಯಿಂದ ಧರಿಸಿದನು ಮತ್ತು ಸ್ಥಾಪಿಸಿ ಅವುಗಳನ್ನು ಶಾಶ್ವತಗಳಾಗಿಯೂ ಸುರಕ್ಷಿತಗಳಾಗಿಯೂ ಇರುವಂತೆ ಮಾಡಿದನು. ಇತ್ಯಾದಿಯಾಗಿ ಇಂದ್ರನ ಶಕ್ತಿಯೂ, ಪ್ರಭುತ್ವವೂ, ರಕ್ಷಣಾಕಾರ್ಯವೂ ಅನ್ಯಾದೃಶವಾದುದರಿಂದಲೇ,

**ನಹೀ ನ್ವಸ್ಯ ಪ್ರತಿಮಾನಮಸ್ತ್ಯಂತರ್ಜಾತೇಷೂತ ಯೇ ಜನಿತ್ವಾಃ ।**

(ಋ. ಸಂ. ೪-೧೮-೪)

ಎಂಬುದಾಗಿ, ಉತ್ಪನ್ನರಾದವರಲ್ಲಾಗಲಿ, ಮುಂದಕ್ಕೆ ಉತ್ಪನ್ನರಾಗತಕ್ಕವರಾಗಲಿ ಯಾರೂ ಸಹ ಇಂದ್ರನಿಗೆ ಸಮಾನರಾಗಲಾರರು ಎಂದು ಘೋಷಿಸಿದೆ. ಈ ಎರಡು ಅಂಶಗಳನ್ನೇ ಪ್ರಕೃತವಾದ ಋಕ್ಕಿನಲ್ಲಿ **ಶವಸಾ ಯಸ್ಯ ಉಕ್ಥಂ ಮಾನಂ ರೋದಸೀ ವಿಶ್ವತಃ ಸೀಂ ಅಜಸ್ರಂ ಪರಿಭುಜತ್** ಎಂದು ವರ್ಣಿಸಿದೆ.

**ಮಂದಸಾನಃ—ಮೋದಮಾನಃ । ಮಂದತೇಸ್ತೃಪ್ತಿಕರ್ಮಣಃ ।** ( ನಿ. ೨-೫ ) ತೃಪ್ತಿಯನ್ನು ಹೊಂದು ಎಂದು ಅರ್ಥವಾಗುವ **ಮಂದ್** ಧಾತುವಿನಿಂದ ನಿಷ್ಪನ್ನವಾಗಿದೆ. **ಕ್ರತುಭಿಃ ಮಂದಸಾನಃ ।** ನಮ್ಮ ಯಾಗಾದಿಗಳಿಂದ ತೃಪ್ತನಾಗು ಮತ್ತು ಆ ತೃಪ್ತಿಯನ್ನು ಹೊಂದಿ ನಮ್ಮನ್ನು,

**ಪಾರಿಷತ್—ದುರಿತಾತ್ ಪಾರಯತು ।** ಪಾಪದಿಂದ ಮುಕ್ತರನ್ನಾಗಿ ಮಾಡು ಎಂದು ಸಾಯಣರ ವ್ಯಾಖ್ಯಾನವು.

ಸ್ಕಂದಸ್ವಾಮಿಗಳು ಬೇರೆ ವಿಧವಾದ ಅನ್ವಯವನ್ನು ಮಾಡಿದ್ದಾರೆ. **ಸ ಪಾರಿಷತ್—ಪ್ರ ಪಾಲನಪೂರಣಯೋಃ । ಪೂರಯತ್ಯಸ್ಮಾನ್ । ಕ್ರತುಭಿಃ ಪ್ರಜ್ಞಾಭಿಃ । ಅತ್ಯಂತಪ್ರಜ್ಞಾನ್ ಅಸ್ಮಾನ್ ಕರೋತೀತ್ಯರ್ಥಃ । ಮಂದಸಾನಃ । ಮಂದತಿರರ್ಚತಿಕರ್ಮಾ । ಸ್ತೂಯಮಾನೋಽಸ್ಮಾಭಿಃ ।** ೪೪ ಅರ್ಚತಿಕರ್ಮಗಳ ನಾಮಗಳಲ್ಲಿ ಪಠಿತವಾಗಿರುವುದರಿಂದ **ಮಂದಸಾನಃ** ಎಂದರೆ ನಮ್ಮಿಂದ ಸ್ತುತಿಸಲ್ಪಡುವ ಇಂದ್ರನು ಎಂದರ್ಥ. ಅಂತಹ ಇಂದ್ರನು ನಮಗೆ ಪೂರ್ಣವಾದ ಪ್ರಜ್ಞೆಯನ್ನು ಕೊಡಲಿ ಎಂದು ತಾತ್ಪರ್ಯವೆಂದು ಸ್ಕಂದಸ್ವಾಮಿಗಳು ವಿವರಿಸಿದ್ದಾರೆ. ಇಲ್ಲಿ ಸಾಯಣರ ಅರ್ಥವೇ ಸಾಧುವಾಗಿ ಕಾಣುತ್ತದೆ.

### ವ್ಯಾಕರಣಪ್ರಕ್ರಿಯಾ

**ಮಾನಮ್**—ಮಾಙ್ ಮಾನೇ ಧಾತು. ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಉಕ್ಥಮ್**—ವಚ ಪರಿಭಾಷಣೇ ಧಾತು. **ಪಾತೃತುದಿವಚಿ** (ಪಾ. ಸೂ. ೨-೧೬೪) ಎಂಬುದರಿಂದ ಇದಕ್ಕೆ ಕರ್ಮಣಿಯಲ್ಲಿ ಥಕ್ ಪ್ರತ್ಯಯ. ಇದು ಕಿತ್ತಾದುದರಿಂದ **ವಚಿಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಧಾತುವಿಗೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. **ಚೋಃ ಕುಃ** ಎಂಬುದರಿಂದ ಧಾತುವಿನ ಚಕಾರಕ್ಕೆ ಝಲ್ ಪರವಾದುದರಿಂದ ಕುತ್ವದಿಂದ ಕಕಾರಾದೇಶ. ಉಕ್ಥ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾಏಕವಚನಾಂತರೂಪ

**ಪರಿಭುಜತ್**—ಭುಜ ಪಾಲನಾಭ್ಯವಹಾರಯೋಃ ಧಾತು. ಪರಿ ಉಪಸರ್ಗ. ಧಾತುವಿಗೆ ಲೇಟಿನಲ್ಲಿ ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ ಲೋಪಃ ಪರಸ್ಮೈಪದೇಷು** (ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. **ವ್ಯತ್ಯಯೋ ಬಹುಲಂ** (ಪಾ ಸೂ ೩-೧-೮೫) ಎಂಬುದರಿಂದ ಶ್ನಮಿಗೆ ಶ ವಿಕರಣ ಬರುತ್ತದೆ. ಯಸ್ಯ ಎಂದು ಹಿಂದೆ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ.ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಆಗ ವಿಕರಣಸ್ವರ ಉಳಿಯುತ್ತದೆ. **ತಿಙಿಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಪರಿ) ನಿಘಾತಸ್ವರ ಬರುತ್ತದೆ.

**ವಿಶ್ವತಃ**—ವಿಶ್ವಸ್ಮಾತ್ ಎಂದು ಅರ್ಥ ತೋರುವಾಗ **ಪಂಚಮ್ಯಾಃತಸಿಲ್** ಎಂಬುದರಿಂದ ತಸಿಲ್ ಪ್ರತ್ಯಯ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಪಾರಿಷತ್**—ಪಾರ ತೀರ ಕರ್ಮಪರಿಸಮಾಪ್ತೌ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ ಲೋಪಃ**—ಸೂತ್ರದಿಂದ ಅದರ ಇಕಾರಕ್ಕೆ ಲೋಪ. **ಲೇಟೋಽಡಾಟೌ** (ಪಾ.ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಸೂತ್ರದಿಂದ ಸಿಪ್. **ಆರ್ಧ-ಧಾತುಕಂ ಶೇಷಃ** ಸೂತ್ರದಿಂದ ಅದಕ್ಕೆ ಆರ್ಧಧಾತುಕಸಂಜ್ಞೆ ಇರುವುದರಿಂದ **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂಬುದರಿಂದ ಅದಕ್ಕೆ ಇಡಾಗಮ. ಚುರಾದಿಯಲ್ಲಿ ಸೇರಿರುವುದರಿಂದ ಸ್ವಾರ್ಥದಲ್ಲಿ ಣಿಚ್ ಬರುತ್ತದೆ. ಇಡಾದಿಪ್ರತ್ಯಯ ಪರವಾದರೂ ವ್ಯತ್ಯಯದಿಂದ ತನ್ನಿಮಿತ್ತವಾಗಿ ಣಿಚಿಗೆ ಲೋಪ ಪಾರಿಷತ್ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಂದಸಾನಃ**—ಮದಿ ಸ್ತುತಿಮೋದಮದಸ್ವಪ್ನಕಾಂತಿಗತಿಷುಧಾತು. ಇದಕ್ಕೆ ಋಞ್ಜಿವೃಧಿಮಂದಿ-ಸಹಿಭ್ಯಃ ಕಿತ್ (ಉ. ಸೂ. ೨-೨೪೪) ಎಂಬುದರಿಂದ ಅಸಾನಚ್ ಪ್ರತ್ಯಯ. **ಇದಿತೋ ನುಮ್ ಧಾತೋಃ** ಎಂಬುದರಿಂದ ಧಾತುವಿಗೆ ನುಮಾಗಮ. ಮಂದಸಾನ ಎಂದು ರೂಪವಾಗುತ್ತದೆ ಪ್ರತ್ಯಯ ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

——— :o: ———

ಸಂಹಿತಾಪಾಠಃ

ನ ಯಸ್ಯ ದೇವಾ ದೇವತಾ ನ ಮರ್ತಾ ಆಪಶ್ಚನ ಶವಸೋ ಅಂತಮಾಪುಃ ।
ಸ ಪ್ರರಿಕ್ವಾ ತ್ವಕ್ಷಸಾ ಕ್ಷ್ಮೋ ದಿವಶ್ಚ ಮರುತ್ವಾನ್ನೋ ಭವತ್ವಿಂದ್ರ ಊತೀ ॥೧೫॥

ಪದಪಾಠಃ

ನ । ಯಸ್ಯ । ದೇವಾಃ । ದೇವತಾ । ನ । ಮರ್ತಾಃ । ಆಪಃ । ಚನ । ಶವಸಃ । ಅಂತಂ । ಆಪುಃ ।
ಸಃ । ಪ್ರಽರಿಕ್ವಾ । ತ್ವಕ್ಷಸಾ । ಕ್ಷ್ಮಃ । ದಿವಃ । ಚ । ಮರುತ್ವಾನ್ । ನಃ । ಭವತು । ಇಂದ್ರಃ । ಊತೀ ॥ ೧೫ ॥

ಸಾಯಣಭಾಷ್ಯಂ

ದೇವತಾ ದೇವಸ್ಯ ದಾನಾದಿಗುಣಯುಕ್ತಸ್ಯ ಯಸ್ಯೇಂದ್ರಸ್ಯ ಶವಸೋ ಬಲಸ್ಯಾಂತಮವಸಾನಂ ದೇವಾ ವಸ್ವಾದ್ಯಾ ದೇವಗಣಾ ನಾಪುಃ ನಾನಶಿರೇ ತಥಾ ಮರ್ತಾ ಮನುಷ್ಯಾ ಆಪಶ್ಚನಾಪೋಽಪಿ ನ ಪ್ರಾಪುಃ ಸ ತಾದೃಶ ಇಂದ್ರಸ್ತ್ವಕ್ಷಸಾ ಶತ್ರೂಣಾಂ ತನೂಕರ್ತ್ರಾತ್ಮೀಯೇನ ಬಲೇನ ಕ್ಷ್ಮಃ ಪೃಥಿವ್ಯಾ ದಿವಶ್ಚ ಸ್ವರ್ಗಸ್ಯ ಚ ಪ್ರರಿಕ್ವಾ ಪ್ರಕರ್ಷೇಣ ರೇಚಕೋ ಭವತಿ । ಲೋಕದ್ವಯಾದಪ್ಯಸ್ಯ ಬಲಮತಿರಿಚ್ಯತ ಇತ್ಯರ್ಥಃ । ಮರುದ್ಭಿರ್ಯುಕ್ತಃ ಸ ಇಂದ್ರೋ ನೋಽಸ್ಮಾಕಮೂತೀ ಊತಯೇ ರಕ್ಷಣಾಯ ಭವತು ॥ ದೇವತಾ । ದೇವ ಏವ ದೇವತಾ । ದೇವಾತ್ತಲಿತಿ ಸ್ವಾರ್ಥೇ ತಲ್ । ಸುಪಾಂ ಸುಲುಗಿತಿ ಷಷ್ಠ್ಯಾ ಲುಕ್ । ಮರ್ತಾಃ । ಮೃಙ್ ಪ್ರಾಣತ್ಯಾಗೇ । ಅಸಿಹಸೀತ್ಯಾದಿನಾ ತನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ಪ್ರರಿಕ್ವಾ । ರಿಚಿರ್ ವಿರೇಚನೇ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ಕ್ವನಿಪ್ । ಅಂತ್ಯವಿಕಾರಶ್ಛಾಂದಸಃ । ತ್ವಕ್ಷಸಾ । ತಕ್ಷೂ ತ್ವಕ್ಷೂ ತನೂಕರಣೇ । ಅಸುನ್ । ನಿತ್ತ್ವಾದಾದ್ಯುದಾತ್ತತ್ವಂ । ಕ್ಷ್ಮಃ । ಕ್ಷ್ಮೇತಿ

**ಪೃಥಿವೀನಾಮ । ಆತೋ ಧಾತೋರಿತ್ಯತ್ರಾತ ಇತಿ ಯೋಗವಿಭಾಗಾದಿಷ್ಟಸಿದ್ಧಿರಿತ್ಯಭಿಧಾನಾತ್ ಜಸಿ ಭಸಂಜ್ಞಾಯಾಮಾಕಾರಲೋಪಃ । ಯದ್ವಾ । ಕ್ಷ್ಮಾಯೀ ವಿಧೂನನೇ । ಅಸ್ಮಾತ್ಕ್ವಿಪ್ಚೇತಿ ಕ್ವಿಪ್ । ವೇರಪೃಕ್ತಲೋಪಾತ್ಪೂರ್ವಂ ವಲಿ ಲೋಪಃ । ಅನ್ಯತ್ಸಮಾನಂ । ಉದಾತ್ತನಿವೃತ್ತಿಸ್ವರೇಣ ವಿಭಕ್ತೇ-ರುದಾತ್ತತ್ವಂ ॥**

ಪ್ರತಿಪದಾರ್ಥ

**ದೇವತಾ**—ದಾನಾದಿಗುಣಗಳಿಂದ ಕೂಡಿ ದೇವತಾತ್ಮಕನಾದ । **ಯಸ್ಯ**—ಯಾವ ಇಂದ್ರನ । **ಶವಸಃ**-ಪರಾಕ್ರಮದ । **ಅಂತಂ**—ಅವಧಿಯನ್ನು । **ದೇವಾಃ**—ದೇವತೆಗಳು । **ನ ಆಪುಃ**—ಸಮಾಪಿಸಲಿಲ್ಲವೋ, (ಹಾಗೆಯೇ ಪಡೆಯಲಿಲ್ಲವೋ) । **ಮರ್ತಾಃ**—ಮಾನವರೂ । **ಆಪಶ್ಚ ನ**—ಅಬ್ದೇವತೆಗಳೂ । **ನ**—ಸಮೀಪಿಸಲಿಲ್ಲವೋ (ಪಡೆಯಲಿಲ್ಲವೋ) । **ಸಃ**—ಅಂತಹ ಇಂದ್ರನು । **ತ್ವಕ್ಷಸಾ**—(ಶತ್ರುಗಳನ್ನು)ಕ್ಷೀಣರನ್ನಾಗಿಮಾಡುವ ಬಲದಿಂದ । **ಕ್ಷ್ಮಃ**—ಪೃಥಿವಿಯ । **ದಿವಶ್ಚ**—ಮತ್ತು ಸ್ವರ್ಗದ । **ಪರಿಕ್ಷ್ಮಾ**—ಶ್ರೇಷ್ಠವಾದ ಪ್ರಕಾಶಕನಾಗಿ ಆಗುತ್ತಾನೆ. । **ಮರುತ್ವಾನ್**—ಮರುತ್ತುಗಳೊಡಗೂಡಿದ । **ಇಂದ್ರಃ**—ಇಂದ್ರನು ! **ನಃ**—ನಮ್ಮ । **ಊತೀ**-ರಕ್ಷಣಾರ್ಥವಾಗಿ । **ಭವತು**—ಆಗಿರಲಿ. ।

ಭಾವಾರ್ಥ

ದಾನಾದಿಗುಣಗಳಿಂದ ಕೂಡಿ ದೇವತಾತ್ಮನಾದ ಇಂದ್ರನ ಶಕ್ತಿಯು ಲೋಕದ ಇತರ ಎಲ್ಲರ ಶಕ್ತಿಗಿಂತಲೂ ಮೀರಿದುದು. ಅದರ ಅಂತವನ್ನು ದೇವತೆಗಳಾಗಲಿ, ಮಾನವರಾಗಲಿ, ಅಬ್ದೇವತೆಗಳಾಗಲಿ ಪಡೆಯಲಾಗಲಿಲ್ಲ. ಆ ಇಂದ್ರನು ಶತ್ರುನಾಶಕವಾದ ತನ್ನ ಪ್ರಭಾವಯುತವಾದ ಶಕ್ತಿಯಿಂದ ಪೃಥಿವೀ ಮತ್ತು ಸ್ವರ್ಗಗಳೆರಡನ್ನೂ ಒಟ್ಟಿಗೆ ಪ್ರಕಾಶಿಸುವಂತೆ ಮಾಡುತ್ತಾನೆ. ಅಂತಹ ಇಂದ್ರನು ಮರುತ್ತುಗಳೊಡಗೂಡಿಕೊಂಡು ನಮ್ಮ ರಕ್ಷಕನಾಗಿರಲಿ.

## English Translation

Nor gods, nor men, nor waters, have reached the limit of the strength of that beneficent (divinity), for he surpasses both earth and heaven by his foe-consuming (might) : may Indra, associated with the Maruts, be our protection.

ವಿಶೇಷವಿಷಯಗಳು

ಹಿಂದಿನ ಋಕ್ಕಿನಲ್ಲಿ ಇಂದ್ರನ ಶಕ್ತಿಯೂ, ಪ್ರಭುತ್ವವೂ ಸಮಸ್ತವಾದ ವಿಶ್ವಕ್ಕೂ ಮಾದರಿಯಾಗಿದೆಯೆಂದು ವರ್ಣಿಸಿ ಈ ಋಕ್ಕಿನಲ್ಲಿ ಅವನ ಆ ಶಕ್ತಿಯು ಪೃಥಿವ್ಯಂತರಿಕ್ಷಗಳಿಗಿಂತಲೂ, ದೇವಮಾನವರ ಶಕ್ತಿಗಿಂತಲೂ ಅತಿಶಯವಾಗಿ ಮೀರಿದುದು, ಆ ಶಕ್ತಿಯನ್ನು ಹೊಂದಲು ವಿಶ್ವದಲ್ಲಿ ಯಾರಿಂದಲೂ ಸಾಧ್ಯವಿಲ್ಲ ಎಂಬ ಅಂಶವನ್ನು ವಿವರಿಸಿದೆ. ಈ ಅಂಶವನ್ನು ಋಕ್ಸಂಹಿತೆಯಲ್ಲಿ ಅನೇಕ ಕಡೆಯಲ್ಲಿ ವರ್ಣಿಸಿದೆ.

ದಿವಶ್ಚಿದಸ್ಯ ವರಿಮಾ ವಿ ಪಪ್ರಥ ಇಂದ್ರಂ ನ ಮಹ್ನಾ ಪೃಥಿವೀ ಚನ ಪ್ರತಿ ।
(ಋ. ಸಂ. ೧-೫೫-೧.)

ಅಸ್ಯೇದೇವ ಪ್ರ ರಿರಿಚೇ ಮಹಿತ್ವಂ ದಿವಸ್ಪೃಥಿವ್ಯಾಃ ಪರ್ಯಂತರಿಕ್ಷಾತ್ ।
(ಋ. ಸಂ. ೧-೬೧-೯.)

ಪವಕ್ಷ ಇಂದ್ರೋ ಅಮಿತಮೃಜೀಷ್ಯು ೧ ಭೇ ಆ ಪಪ್ರೌ ರೋದಸೀ ಮಹಿತ್ವಾ ।

ಅತಶ್ಚಿದಸ್ಯ ಮಹಿಮಾ ವಿ ರೇಚ್ಯಭಿ ಯೋ ವಿಶ್ವಾ ಭುವನಾ ಬಭೂವ ॥
(ಋ. ಸಂ. ೪-೧೬-೫)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನ ಮಹಿಮೆಯು ಪೃಥಿವ್ಯಂತರಿಕ್ಷಗಳೆರಡನ್ನೂ ಮೀರಿದ್ದಿತು. ಪೃಥ್ವಿಯಾಗಲಿ, ಅಂತರಿಕ್ಷವಾಗಲಿ ಈ ಮಹಿಮೆಯನ್ನು ಹೊಂದಲಾಗಲಿಲ್ಲ. ಇಂದ್ರನ ಪ್ರಭಾವವು ಅತ್ಯತಿಶಯವಾಗಿ ವಿಶ್ವವನ್ನೆಲ್ಲಾ ವ್ಯಾಪಿಸಿ, ವಿಶ್ವಕ್ಕಿಂತಲೂ ಮೀರಿ ಬೆಳೆಯಿತು ಇತ್ಯಾದಿ ವರ್ಣನೆಗಳಿರುವಂತೆಯೇ ಅವನ ಪ್ರಭಾವವು ದೇವತೆಗಳಿಂದಲೂ ಪಡೆಯಲು ಸಾಧ್ಯವಿಲ್ಲದಷ್ಟು ಬೆಳೆಯಿತು ಎಂದು ಪ್ರತಿಜ್ಞಾ ಪೂರ್ವಕವಾಗಿ ಘೋಷಿಸಿದಂತಿರುವ

ಸತ್ಯಮಿತ್ತನ್ನ ತ್ವಾವಾँ ಅನ್ಯೋ ಅಸ್ತೀಂದ್ರ ದೇವೋ ನ ಮರ್ತ್ಯೋ ಜ್ಯಾಯಾನ್ ।
(ಋ. ಸಂ. ೬-೩೦-೪)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನ ಮಹತ್ವವನ್ನು ವರ್ಣಿಸಿದೆ. ಈ ವರ್ಣನೆಗಳಂತೆಯೇ ಪ್ರಕೃತವಾದ ಈ ಋಕ್ಕಿನಲ್ಲಿಯೂ ಸಹ,

ಯಸ್ಯ ಶವಸಃ ಅಂತಂ ದೇವಾಃ ನ ಆಪುಃ—ಯಾವ ಇಂದ್ರನ ಪರಾಕ್ರಮದ ಅವಧಿಯನ್ನು ದೇವತೆಗಳೂ ಸಮೀಪಿಸಲಾಗಲಿಲ್ಲ.

ಮರ್ತಾಃ ಆಪಶ್ಚ ನ—ಮಾನವರೂ ಅಪ್ದೇವತೆಗಳೂ ಸಮೀಪಿಸಲಾಗಲಿಲ್ಲ. ಮತ್ತು

ಕ್ಷ್ಮಃ ದಿವಶ್ಚ ಪ್ರರಿಕ್ವಾ—ಪೃಥ್ವಿಗೂ ಅಂತರಿಕ್ಷಕ್ಕೂ ಪ್ರಕಾಶಕನಾಗಿ ಆದನು ; ಎಂದು ಅತಿಶಯನಾದ ಇಂದ್ರನ ಮಹತ್ವವನ್ನು ಸ್ತುತಿಸಿದೆ.

ತ್ವಕ್ಷಸಾ— ಓಜಃ, ಪಾಜಃ, ಇತ್ಯಾದಿ ೨೮ ಬಲನಾಮಗಳಲ್ಲಿ ಪಠಿತವಾಗಿರುವುದರಿಂದ ತ್ವಕ್ಷಃ ಎಂದರೆ ಬಲ: ತ್ವಕ್ಷಸಾ ಎಂದರೆ ಬಲದಿಂದ ಎಂದರ್ಥ.

ಪ್ರರಿಕ್ವಾ—ಪ್ರಕರ್ಷೇಣ ರೇಚಕೋ ಭವತಿ । ಲೋಕದ್ವಯಾದಸ್ಯ ಬಲಮತಿರಿಚ್ಯತ ಇತ್ಯರ್ಥಃ । ತನ್ನ ಬಲದಿಂದ ಪೃಥಿವ್ಯಂತರಿಕ್ಷಗಳೆರಡನ್ನೂ ಪ್ರಕಾಶಿಸುವಂತೆ ಮಾಡುತ್ತಾನೆ. ಎಂದರೆ ಎರಡು ಲೋಕಗಳನ್ನು ತನ್ನ ಬಲದಿಂದ ಮೀರಿಸುತ್ತಾನೆ ಎಂದರ್ಥ.

ವ್ಯಾಕರಣಪ್ರಕ್ರಿಯಾ

**ದೇವತಾ**—ದೇವ ಏವ ದೇವತಾ. **ದೇವಾತ್ತಲ್**—(ಪಾ. ಸೂ. ೫-೪-೨೭) ಎಂಬುದರಿಂದ ಸ್ವಾರ್ಥದಲ್ಲಿ ತಲ್ ಪ್ರತ್ಯಯ. **ತಲಂತಂಸ್ತ್ರಿಯಾಮ್**—ಎಂಬ ವಚನದಿಂದ ಸ್ತ್ರೀಲಿಂಗವಾಗುತ್ತದೆ. ಇದಕ್ಕೆ ಷಷ್ಠೀವಿಭಕ್ತಿ ಪರವಾದಾಗ ಅದಕ್ಕೆ **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಲುಕ್ ಬರುತ್ತದೆ.

**ಮರ್ತಾಃ**—ಮೃಜ್ ಪ್ರಾಣತ್ಯಾಗೇ ಧಾತು. ಇದಕ್ಕೆ **ಅಸಿ ಹಸಿ**—ಎಂಬುದರಿಂದ ತನ್ ಪ್ರತ್ಯಯ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. **ಉರಣ್ರಪರಃ**—ಎಂಬುದರಿಂದ ತಪರವಾಗಿ ಬರುತ್ತದೆ. ಮರ್ತ ಎಂದು ರೂಪವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—ಸೂತ್ರದಿಂದ ಆದ್ಯುದಾತ್ತ ಸ್ವರ ಬರುತ್ತದೆ.

**ಆಪುಃ**—ಆಪ್ಲೃ ವ್ಯಾಪ್ತೌ ಧಾತು. ಲಿಟ್ ಪ್ರಥಮಪುರುಷ ಬಹುವಚನರೂಪ. ಯದ್ಯೋಗವಿರುವುದರಿಂದ **ಯದ್ವೃತ್ತಾನ್ನಿತ್ಯಮ್**—ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಪ್ರರಿಕ್ವಾ**—ರಿಚಿರ್ ವಿರೇಚನೇ ಧಾತು. **ಅನ್ಯೇಭ್ಯೋಽಪಿದೃಶ್ಯಂತೇ**—(ಪಾ. ಸೂ. ೩-೨-೭೫) ಎಂಬುದರಿಂದ ಕ್ವನಿಪ್ಪ್ರತ್ಯಯ. ಪ್ರ ಉಪಸರ್ಗ. ರಿಚ್ವನ್ ಎಂದಾಗುತ್ತದೆ. ಛಾಂದಸವಾಗಿ ಧಾತುವಿನ ಚಕಾರಕ್ಕೆ ಕುತ್ವದಿಂದ ಕಕಾರಾದೇಶ ಬರುತ್ತದೆ. ಪ್ರರಿಕ್ವನ್ ಶಬ್ದವಾಗುತ್ತದೆ. ವನಿಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಆಗ ಧಾತುಸ್ವರ ಉಳಿಯುತ್ತದೆ. ಪ್ರಥಮಾ ಏಕವಚನಾಂತರೂಪ.

**ತ್ವಕ್ಷಸಾ**—ತಕ್ಷೂ ತ್ವಕ್ಷೂ ತನೂಕರಣೇ. ಧಾತು. **ಸರ್ವಧಾತುಭ್ಯ ಅಸುನ್** (ಉ. ಸೂ. ೪-೬೨೮) ಎಂಬುದರಿಂದ ಅಸುನ್ ಪ್ರತ್ಯಯ. ತ್ವಕ್ಷಸ್ ಶಬ್ದವಾಗುತ್ತದೆ. **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾಏಕವಚನಾಂತರೂಪ.

**ಕ್ಷ್ಮಃ**—ಕ್ಷ್ಮಾ ಎಂಬುದು ಭೂಮಿಯ ಹೆಸರು. ಇಷ್ಟಸಿದ್ಧಿಗೋಸ್ಕರ ಯೋಗವಿಭಾಗವು ಸ್ವೀಕೃತವಾದುದರಿಂದ **ಆತೋಧಾತೋಃ**—(ಪಾ. ಸೂ. ೬-೪-೧೪೦) ಎಂಬಲ್ಲಿ **ಆತಃ** ಎಂದು ಯೋಗವಿಭಾಗಮಾಡುವುದರಿಂದ ಭಸಂಜ್ಞಾ ಇರುವಾಗ ಆದಂತವಾದವುಗಳಿಗೆ ಲೋಪವು ಸಿದ್ಧವಾಗುತ್ತದೆ. ಇಲ್ಲಿ ಜಸ್ ಪರವಾದಾಗ ಭಸಂಜ್ಞಾ ಇರುವುದರಿಂದ ಆಕಾರಕ್ಕೆ ಲೋಪ ಬರುತ್ತದೆ. ಅಥವಾ ಕ್ಷ್ಮಾಯೀ ವಿಧೂನನೇ. ಧಾತು. ಇದಕ್ಕೆ **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. **ವೇರಪೃಕ್ತಲೋಪಾತ್ ವಲಿಲೋಪೋ ಬಲೀಯಾನ್**—ಎಂಬ ವಚನದಿಂದ ಕ್ವಿಪಿನಲ್ಲಿ ವಲೋಪವಾಗಬೇಕಾದರೆ ಮೊದಲು **ಲೋಪೋವ್ಯೋರ್ವಲಿ**—ಸೂತ್ರದಿಂದ ವಕಾರ ನಿಮಿತ್ತವಾಗಿ ಧಾತುವಿನ ಯಕಾರಕ್ಕೆ ಲೋಪ ಬರುತ್ತದೆ. ಕ್ಷ್ಮಾ ಎಂದು ಉಳಿಯುತ್ತದೆ. **ಕೃತ್ತದ್ಧಿತ-ಸಮಾಸಾಶ್ಚ**—ಸೂತ್ರದಿಂದ ಪ್ರಾತಿಪದಿಕಸಂಜ್ಞೆ ಬರುವುದರಿಂದ ಇಲ್ಲಿ **ಆತೋ ಧಾತೋಃ**—ಎಂಬುದರಿಂದ ಜಸ್ ಪರವಾದಾಗ ಲೋಪವು ಸ್ವಾರಸಿಕವಾಗಿ ಬರುತ್ತದೆ. ಇಲ್ಲಿ ಅನುದಾತ್ತವಿಭಕ್ತಿನಿಮಿತ್ತವಾಗಿ ಉದಾತ್ತವಾದ ಧಾತುವಿನ ಆಕಾರಕ್ಕೆ ಲೋಪ ಬಂದುದರಿಂದ **ಅನುದಾತ್ತಸ್ಯಚ ಯತ್ರೋದಾತ್ತಲೋಪಃ**—(ಪಾ. ಸೂ. ೬-೧-೧೬೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. || ೧೫ ||

ಸಂಹಿತಾಪಾಠಃ

ರೋಹಿಚ್ಛ್ಯಾವಾ ಸುಮದಂಶುರ್ಲಲಾಮೀರ್ದ್ಯುಕ್ಷಾ ರಾಯ ಋ-
ಜ್ರಾಶ್ವಸ್ಯ ।
ವೃಷಣ್ವಂತಂ ಬಿಭ್ರತೀ ಧೂರ್ಷು ರಥಂ ಮಂದ್ರಾ ಚಿಕೇತ ನಾ-
ಹುಷೀಷು ವಿಕ್ಷು ॥ ೧೬ ॥

ಪದಪಾಠಃ

ರೋಹಿತ್ । ಶ್ಯಾವಾ । ಸುಮತ್ಽಅಂಶುಃ । ಲಲಾಮೀಃ । ದ್ಯುಕ್ಷಾ । ರಾಯೇ ।
ಋಜ್ರಽಅಶ್ವಸ್ಯ ।
ವೃಷಣ್ಽವಂತಂ । ಬಿಭ್ರತೀ । ಧೂಃಽಸು । ರಥಂ । ಮಂದ್ರಾ । ಚಿಕೇತ ।
ನಾಹುಷೀಷು । ವಿಕ್ಷು ॥ ೧೬ ॥

ಸಾಯಣಭಾಷ್ಯಂ

ರೋಹಿತ್ ರೋಹಿತವರ್ಣಾ ಶ್ಯಾವಾ ಶ್ಯಾಮವರ್ಣಾ । ಉಭಯೋಃ ಪಾರ್ಶ್ವಯೋರುಭಯವಿಧವರ್ಣಯುಕ್ತೇತ್ಯರ್ಥಃ । ಸುಮದಂಶುಃ । ಸುಮತ್ ಸ್ವತಃ ಪ್ರಾಂಶುಃ । ಉಕ್ತಂ ಚ ಯಾಸ್ಕೇನ । ಸುಮತ್ ಸ್ವಯಮಿತ್ಯರ್ಥಃ । ನಿ. ೬-೨೨ । ಇತಿ । ಅತಿದೀರ್ಘಾವಯವಾ ಲಲಾಮೀಃ ಪುಂಡ್ರವತೀ ಅಶ್ವಭೂಷಣಯುಕ್ತಾ ವಾ । ದ್ಯುಕ್ಷಾ ದಿವಿ ದ್ಯುಲೋಕೇ ಕೃತನಿವಾಸಾ ಋಜ್ರಾಶ್ವಸ್ಯೈತತ್ಸಂಜ್ಞಸ್ಯ ರಾಜರ್ಷೇಃ ರಾಯೇ ಧನಾರ್ಥಂ ವೃಷಣ್ವಂತಂ ವೃಷ್ಣಾ ಸೇಕ್ತ್ರೇಂದ್ರೇಣ ಯುಕ್ತಂ ರಥಂ ಧೂರ್ಷು ಯುಗಸಂಬಂಧಿಷು ವಹನಪ್ರದೇಶೇಷು ಬಿಭ್ರತೀ ವಹಂತೀ ಮಂದ್ರಾ ಸರ್ವೇಷಾಮಾಹ್ಲಾದಕರ್ಯಶ್ವಪಂಕ್ತಿರ್ನಾಹುಷೀಷು । ನಹುಷಾ ಮನುಷ್ಯಾಃ । ತತ್ಸಂಬಂಧಿನೀಷು ವಿಕ್ಷು ಸೇನಾಲಕ್ಷಣಾಸು ಪ್ರಜಾಸು ಚಿಕೇತ । ಜ್ಞಾಯತೇ । ಈದೃಶ್ಯಾಶ್ವಪಂಕ್ತ್ಯಾ ಯುಕ್ತ ಇಂದ್ರಃ ಸಂಗ್ರಾಮೇಷ್ವನುಗ್ರಾಹಕತಯಾ ಪ್ರಾದುರ್ಭವತೀತ್ಯರ್ಥಃ ॥ ಲಲಾಮೀಃ ಲಲಾಮಶಬ್ದಾತ್ಪಂಚಮ್ಯಂತೀಕರಣಂ ಲಲಾಮಶಬ್ದಾ ತ್ಪಂದಸೀವನಿಪೌ । ಪಾ ೫-೨-೧೦೯-೨ । ಇತಿ ಮತ್ವರ್ಥೀಯ

ಇಕಾರಃ । ಅಜ್ಯಂತೆಶ್ಛಾಶ್ಚಸಲೋಪಾಭಾವಃ । ದ್ಯುಕ್ಷಾ । ಕ್ಷಿ ನಿವಾಸಗತ್ಯೋಃ । ಔಣಾದಿಕೋ ಡಪ್ರತ್ಯಯಃ । ತತಷ್ಟಾಪ್ । ಋಜ್ರಾಶ್ವಸ್ಯ । ಋಜ ಗತಿಸ್ಥಾನಾರ್ಜನೋಪಾರ್ಜನೇಷು ಋಜ್ರೇಂದ್ರೇತ್ಯಾದಿನಾ ರಕ್ಪ್ರತ್ಯ-ಯಾಂತೋ ನಿಪಾತಿತಃ । ಋಜ್ರಾ ಗತಿಮಂತೋಽಶ್ವಾ ಯಸ್ಯ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ವೃಷಣ್ವಂತಂ । ಆನೋ ನುಟ್ । ಪಾ. ೮-೨-೧೬ । ಇತಿ ಮತುಪೋ ನುಟ್ । ಚಿಕೇತೆ । ಕಿತ ಜ್ಞಾನೇ । ಛಂದಸಿ ಲುಙ್‌ಲಙ್‌ಲಿಟ ಇತಿ ವರ್ತಮಾನೇ ಕರ್ಮಣಿ ಲಿಟ್ । ವ್ಯತ್ಯಯೇನ ತಿಪ್ ॥

॥ ಪ್ರತಿಪದಾರ್ಥ ॥

**ರೋಹಿತ್**— ಕೆಂಪುಬಣ್ಣವುಳ್ಳದ್ದೂ । **ಶ್ಯಾವಾ**— ಶ್ಯಾಮಬಣ್ಣವುಳ್ಳದ್ದೂ । **ಸುಮದಂಶುಃ**— ದೀರ್ಘವಾದ ಅವಯವಗಳುಳ್ಳದ್ದೂ । **ಲಲಾಮೀಃ**—ಅಂದವಾದ ಅಲಂಕಾರಗಳುಳ್ಳದ್ದೂ । **ದ್ಯುಕ್ಷಾ**—ದ್ಯುಲೋಕದಲ್ಲಿ ವಾಸಮಾಡತಕ್ಕದ್ದೂ ಮತ್ತು । **ಋಜ್ರಾಶ್ವಸ್ಯ**— ಋಜ್ರಾಶ್ವನೆಂಬ ದೊರೆಗೆ । **ರಾಯೇ**—ಧನ (ದಾನ)ಕ್ಕಾಗಿ । **ವೃಷಣ್ವಂತಂ**—ಇಷ್ಟಾರ್ಥಗಳನ್ನು ಸುರಿಸುವ ಇಂದ್ರನೊಡಗೂಡಿದ । **ರಥಂ**—ರಥವನ್ನು । **ಧೂರ್ಷು**—ನೊಗವನ್ನು ಇಡುವ ಕತ್ತುಗಳಿಂದ । **ಬಿಭ್ರತೀ**—ಹೊರುತ್ತಿರುವುದೂ । **ಮಂದ್ರಾ**—(ಸಕಲರಿಗೂ) ಹರ್ಷದಾಯಕವಾಗಿರುವುದೂ ಆದ ಅಶ್ವಗಳ ಪಂಕ್ತಿಯು **ನಾಹುಷೀಷು**—ಮಾನವರಿಗೆ ಸಂಬಂಧಿಸಿದ । **ವಿಕ್ಷು**—ಸೇನಾರೂಪವಾದ ಪ್ರಜೆಗಳಲ್ಲಿ (ಪ್ರಜೆಗಳಿಂದ) । **ಚಿಕೇತೆ**—ಗುರ್ತಿಸಲ್ಪಡುತ್ತದೆ ॥

ಭಾವಾರ್ಥ

ಇಂದ್ರನ ರಥದ ಎರಡು ಭಾಗಗಳಲ್ಲಿಯೂ ಕಟ್ಟಿರುವ ಕೆಂಪು ಮತ್ತು ಶ್ಯಾಮವರ್ಣಗಳುಳ್ಳದ್ದೂ, ಅಂದವಾದ ಅಲಂಕಾರಗಳುಳ್ಳದ್ದೂ ದ್ಯುಲೋಕದಲ್ಲಿ ವಾಸಮಾಡತಕ್ಕದ್ದೂ ಮತ್ತು ಋಜ್ರಾಶ್ವನೆಂಬ ದೊರೆಗೆ ಧನದ ದಾನವನ್ನು ಮಾಡುವುದಕ್ಕಾಗಿ ಇಂದ್ರನನ್ನು ಕೂಡಿಸಿ ಕರೆದುಕೊಂಡು ಬರುತ್ತಿರುವ ರಥವನ್ನು ಕತ್ತುಗಳಮೇಲೆ ಹೊತ್ತುಕೊಂಡಿರುವುದೂ, ಸಕಲರಿಗೂ ಹರ್ಷದಾಯಕವಾಗಿರುವುದೂ ಆದ ಅಶ್ವಗಳ ಪಂಕ್ತಿಯನ್ನು ಮಾನವರಿಗೆ ಸಂಬಂಧಿಸಿದ ಸಕಲ ಸೇನೆಗಳೂ ಗುರ್ತಿಸುತ್ತವೆ.

English Translation

The red and black coursers, long-limbed, well-caparisoned, and celestial and harnessed, well-pleased, to the yoke of the chariot in which the showerer of benefits is conveyed, for the enrichment of Rijraswa, and is recognized amongst human hosts.

ವಿಶೇಷವಿಷಯಗಳು

**ಸುಮದಂಶುಃ**— ಇಲ್ಲಿ **ಸುಮತ್** ಮತ್ತು **ಅಂಶುಃ** ಎಂಬ ಎರಡು ಪದಗಳಿವೆ. **ಸುಮತ್ಸ್ವಯಮಿತ್ಯ-ರ್ಥಃ** (ನಿ. ೬. ೨೨) ಎಂದು ನಿರುಕ್ತಕಾರರು **ಸುಮತ್** ಶಬ್ದಕ್ಕೆ **ಸ್ವಯಂ** ಎಂದರೆ ತಾನಾಗಿಯೇ ಎಂದು ಅರ್ಥ ಮಾಡಿದ್ದಾರೆ. ಇಲ್ಲಿ **ಸುಮದಂಶುಃ** ಎನ್ನುವಾಗಲೂ ಸಹ **ಸುಮತ್** ಶಬ್ದಕ್ಕೆ **ಸ್ವಯಂ** ಎಂದಾಗಿ, **ಸ್ವತಃಪ್ರಾಂಶುಃ** ।

**ಅತಿದೀರ್ಘಾವಯವಾಃ** । ಅತ್ಯಂತ ದೀರ್ಘವಾದ ಅವಯವಗಳುಳ್ಳದ್ದೆಂದು ಒಟ್ಟಿನಲ್ಲಿ ತಾತ್ಪರ್ಯವಾಗುವಂತಾಗಿ ಸಾಯಣರು ನಿರುಕ್ತ ವಾಕ್ಯವನ್ನುದಹರಿಸಿ ವಿವರಿಸಿದ್ದಾರೆ.

ಹಿಂದೆ ಇದೇ ಸೂಕ್ತದ ೧೩ನೇ ಋಕ್ಕನ್ನು ವಿವರಿಸುವಾಗ ಅಲ್ಲಿ ಉಪಯೋಗಿಸಿರುವ **ಸ್ಮತ್** ಎಂಬ ಶಬ್ದಕ್ಕೆ ಬೇರೆ ಬೇರೆ ಸನ್ನಿವೇಶಗಳಲ್ಲಿ ಸಾಯಣರು ಬೇರೆ ಬೇರೆ ಅರ್ಥವನ್ನು ಮಾಡಿರುವುದನ್ನು ತೋರಿಸಿ ಒಟ್ಟಿನಲ್ಲಿ **ಸ್ಮತ್** ಶಬ್ದವು **ಕಲ್ಯಾಣ, ಶೋಭನ** ಅಥವಾ **ಭದ್ರ** ಈ ಪದಗಳ ಪರ್ಯಾಯ ಶಬ್ದವಾಗಿದೆಯೆಂದೂ ಸೂಚಿಸಿದೆ. ಅದೇ ರೀತಿಯಲ್ಲಿ **ಸುಮತ್** ಶಬ್ದವೂ ಸಹ **ಕಲ್ಯಾಣ, ಶೋಭನ** ಅಥವಾ **ಭದ್ರ** ಎಂಬ ಪದಗಳ ಪರ್ಯಾಯ ಶಬ್ದವಾಗಿರುವುದೆಂದು ಹೇಳಿದರೆ ತಪ್ಪಾಗಲಾರದು. **ಸುಮದಂಶು** ಎಂದಿರುವಂತೆ **ಸುಮದ್ರಥಃ, ಸುಮದ್ಗಣಃ** ಇತ್ಯಾದಿ ಇನ್ನೂ ಅನೇಕ ಪದಗಳು ಉಪಯೋಗದಲ್ಲಿವೆಯಾದ್ದರಿಂದ, ಋಕ್ಸಂಹಿತೆಯಲ್ಲಿ ಉಪಯೋಗಿಸಿರುವ ಆ ಪದಗಳಿಗೆ ಸಾಯಣರು ಯಾವ ವಿಧವಾಗಿ ಅರ್ಥವನ್ನು ಮಾಡುತ್ತಾರೆಂಬುದನ್ನು ನೋಡಿದರೆ,

**ಅಥಾ ಮಂದಸ್ವ ಜುಜುಷಾಣೋ ಅಂಧಸಸ್ತ್ವಷ್ಟರ್ದೇವೇಭಿರ್ಜನಿಭಿಃ ಸುಮದ್ಗಣಃ ।**
(ಋ. ಸಂ. ೨-೩೬-೩)

ಎಂಬ ಋಕ್ಕಿನಲ್ಲಿರುವ **ಸುಮದ್ಗಣಃ** ಎಂಬ ಪದಕ್ಕೆ **ಶೋಭನಗಣಃ** ಎಂದು ಅರ್ಥವನ್ನು ಮಾಡಿದ್ದಾರೆ. **ಸುಮತ್** ಶಬ್ದವು ಶೋಭನಶಬ್ದದ ಪರ್ಯಾಯವಾಗಿದೆಯೆಂದು ಅರ್ಥ.

**ವಿಭಾವಾ ದೇವಃ ಸುರಣಃ ಪರಿ ಕ್ಷಿತೀರಗ್ನಿರ್ಬಭೂವ ಶವಸಾ ಸುಮದ್ರಥಃ ।**
(ಋ. ಸಂ. ೩-೩-೯)

ಎಂಬಲ್ಲಿ **ಸುಮದ್ರಥಃ** ಎಂದರೆ **ಶೋಭನರಥಃ** ಎಂದೂ ಅಲ್ಲದೇ,

**ಆ ತೇ ಏತಾ ವಚೋಯುಜಾ ಹರೀ ಗೃಭ್ಣೇ ಸುಮದ್ರಥಾ ।**
(ಋ. ಸಂ. ೮-೪೫-೩೯)

ಈ ಋಕ್ಕಿನಲ್ಲಿಯೂ ಸಹ **ಕಲ್ಯಾಣರಥೌ** ಎಂದೂ ವಿವರಿಸಿದ್ದಾರೆ. ಇದೇ ರೀತಿಯಲ್ಲಿ ಪ್ರಕೃತವಾದ ಋಕ್ಕಿನಲ್ಲಿ ಬರುವ **ಸುಮದಂಶುಃ** ಎಂಬ ಶಬ್ದಕ್ಕೂ ಸಹ **ಶೋಭನಾತ್ಮಕವಾದ ಅಂಶು** ಎಂದರೆ ಶ್ರೇಷ್ಠವಾದ ಪ್ರಭೆಯುಳ್ಳದ್ದು ಎಂದಾಗಲಿ, ಶ್ರೇಷ್ಠವಾದ ಕಡಿವಾಣವುಳ್ಳದ್ದು ಎಂದಾಗಲಿ ಅರ್ಥವಾಗಬಹುದು. (ಸಮದಂಶು)— To-gether with reins or harness : Monier Williams ; (Sanskrit-English Dictionary)-

ಸ್ಕಂದಸ್ವಾಮಿಗಳೂ ಸಹ **ಸುಮಚ್ಛಬ್ದೋಽತ್ರ ಸ್ಮಚ್ಛಬ್ದೇನ ಸಮಾನಾರ್ಥಃ ಪ್ರಶಸ್ತವಚನಃ । ಅಂಶುಶಬ್ದೋ ರಶ್ಮಿವಚನಃ । ಪ್ರಶಸ್ತರಶ್ಮಿಃ । ಸ್ಮತ್** ಶಬ್ದಕ್ಕಿರುವಂತೆ ಸುಮತ್‌ಶಬ್ದಕ್ಕೂ ಪ್ರಶಸ್ತವಾದುದು ಎಂದರ್ಥ. **ಅಂಶು**ವೆಂದರೆ ಕಡಿವಾಣ. ಶ್ರೇಷ್ಠವಾದ ಕಡಿವಾಣವುಳ್ಳದ್ದೆಂದರ್ಥ ಎಂದು ವಿವರಿಸಿದ್ದಾರೆ.

**ದ್ಯುಕ್ಷಾ**—ದಿವಿ ದ್ಯುಲೋಕೇ ಕೃತನಿವಾಸಾ । ದ್ಯುಲೋಕದಲ್ಲಿ ವಾಸವಾದತಕ್ಕದ್ದು.

**ಋಜ್ರಾಶ್ವಸ್ಯ—ಏತತ್ಸಂಜ್ಞಸ್ಯ ರಾಜರ್ಷೇಃ ।** ಋಜ್ರಾಶ್ವನೆಂಬ ರಾಜರ್ಷಿಗೆ; ಅಥವಾ **ಋಜ್ರಾಶ್ವ-ಗ್ರಹಣೇನ ತತ್ಪ್ರಭೃತಯಃ ಪಂಚಾಪಿ ವಾರ್ಷಾಗಿರಾ ಲಕ್ಷ್ಯಂತೇ ।** ಋಜ್ರಾಶ್ವನು ವೃಷಾಗಿರನ ಪುತ್ರನು. ಅಂಬರೀಷಾದಿಗಳು ಇವನ ಸಹೋದರರು. ಮುಂದಿನ ಋಕ್ಕಿನಲ್ಲಿ ಅವರ ಹೆಸರುಗಳು ಹೇಳಲ್ಪಟ್ಟಿವೆ. ಇವರೇ ಈ ಸೂಕ್ತದ ಋಷಿಗಳು. ಋಜ್ರಾಶ್ವನ ಜೀವನದಲ್ಲಿ ಒಂದು ಸ್ವಾರಸ್ಯವಾದ ಸನ್ನಿವೇಶವನ್ನು ವಿವರಿಸುವ ಕಥೆಯು ಋಕ್ಸಂಹಿತೆಯಲ್ಲಿಯೇ ಉಕ್ತವಾಗಿದೆ.

**ಶತಂ ಮೇಷಾನ್ವೃಕ್ಯೇ ಚಕ್ಷದಾನಮೃಜ್ರಾಶ್ವಂ ತಂ ಪಿತಾಂಧಂ ಚಕಾರ ।**
**ತಸ್ಮಾ ಅಕ್ಷೀ ನಾಸತ್ಯಾ ವಿಚಕ್ಷ ಆಧತ್ತಂ ದಸ್ರಾ ಭಿಷಜಾವನರ್ವನ್ ॥**

(ಋ. ಸಂ. ೧-೧೧೬-೧೬.)

ಋಜ್ರಾಶ್ವನು ಒಂದುಸಲ ಒಂದು ಹೆಣ್ಣು ತೋಳನಿಗಾಗಿ ನೂರು ಆಡಿನಮರಿಗಳನ್ನು ಕೊಂದು ಆ ತೋಳನಿಗೆ ಕೊಟ್ಟಿದ್ದಕ್ಕಾಗಿ ಅವನ ತಂದೆಯು ಕೋಪಗೊಂಡು ಇವನಿಗೆ ಕಣ್ಣು ಕಾಣಿಸದೇ ಹೋಗಲಿ ಎಂದು ಶಪಿಸಿದನು. ಒಡನೆ ಮಗನು ಅಂಧನಾದನು. ಆಗ ದೇವವೈದ್ಯರಾದ ಅಶ್ವಿನೀದೇವತೆಗಳ ಅನುಗ್ರಹದಿಂದ ಇವನಿಗೆ ಕಣ್ಣು ಬಂದಿತು. ಈ ರೀತಿ ದೇವತಾನುಗ್ರಹಕ್ಕೆ ಪಾತ್ರನಾದ ಋಜ್ರಾಶ್ವನಿಗೆ ಇಂದ್ರನೂ ಪ್ರತ್ಯಕ್ಷನಾಗಿ ಬಹಳವಾಗಿ ಧನಗಳನ್ನು ಕೊಟ್ಟನು. ಋಜ್ರಾಶ್ವನಿಗೆ ಧನವನ್ನು ಕೊಡುವುದಕ್ಕಾಗಿ ತನ್ನ ಅತ್ಯುತ್ತಮವಾದ ಕುದುರೆಗಳನ್ನು ಕಟ್ಟಿಕೊಂಡು ರಥದಲ್ಲಿ ಬರುತ್ತಿರುವಾಗ ಸಮಸ್ತ ಮಾನವರೂ ಇಂದ್ರನನ್ನು ಗುರ್ತಿಸಿದರು ಎಂದು ಋಕ್ಕಿನ ಭಾವ.

**ನಾಹುಷೀಷು—ಮನುಷ್ಯಾಃ, ನರಃ** ಇತ್ಯಾದಿ ೨೫ ಮನುಷ್ಯನಾಮಗಳಲ್ಲಿ ಪಠಿತವಾಗಿದೆ. (೩-೭) ಆದ್ದರಿಂದ ನಹುಷವೆಂದರೆ ಮನುಷ್ಯ, ನಾಹುಷವೆಂದರೆ ಮಾನವರಿಗೆ ಸಂಬಂಧಿಸಿದ್ದು.

ವಿಕ್ಷು—**ಮನುಷ್ಯಜಾತಿಷು** ಎಂದು **ಸ್ಕಂದಸ್ವಾಮಿಗಳೂ, ಸೇನಾರೂಪಾಸು ಪ್ರಜಾಸು** ಎಂದು ಸಾಯಣರೂ ವ್ಯಾಖ್ಯಾನ ಮಾಡಿದ್ದಾರೆ. ಯುದ್ಧದಲ್ಲಿ ಸಹಾಯಕ್ಕಾಗಿ ಬರುತ್ತಿದ್ದ ಇಂದ್ರನನ್ನು ಗುರ್ತಿಸಿದರು. ಇಲ್ಲಿ ನಾಹುಷೀಷು ವಿಕ್ಷು, ಎನ್ನುವಾಗ, **ನಹುಷ ಇತಿ ಮನುಷ್ಯನಾಮ, ತೇಷು ಭವಾಸು ।** ಮನುಷ್ಯರಲ್ಲಿ ಇರತಕ್ಕ ಸೇನಾರೂಪವಾದ ಪ್ರಜೆಗಳಲ್ಲಿ ಎಂದು ಒಂದು ವಿಧವಾಗಿಯೂ ಅಥವಾ, **ನಹುಷನಾಮ್ನೋ ನಾ ರಾಜ್ಞಃ ಸ್ವಭೂತಾಸು ವಿಕ್ಷು ಮನುಷ್ಯಜಾತಿಷು ಬ್ರಾಹ್ಮಣಾದಿಕಾಸು ।** ನಹುಷನೆಂಬ ಒಬ್ಬ ರಾಜನ ಪ್ರಜೆಗಳಲ್ಲಿ ಎಂದು ಇನ್ನೊಂದು ವಿಧವಾಗಿಯೂ ಆಗಬಹುದು. ಸಾಯಣರು ಇಲ್ಲಿ ಮಾತ್ರ ಒಂದೇ ಅರ್ಥವನ್ನು ಮಾಡಿ ಇದೇ **ನಾಹುಷೀಷು ವಿಕ್ಷು** ಎಂಬ ಪದಗಳು ಎಂಟನೆಯ ಮಂಡಲದಲ್ಲಿ—

**ಉತ ತ್ಯದಾಶ್ವಶ್ವ್ಯಂ ಯದಿಂದ್ರ ನಾಹುಷೀಷ್ವಾ ।**
**ಅಗ್ರೇ ವಿಕ್ಷು ಪ್ರದೀದಯತ್ ॥**

(ಋ. ಸಂ. ೮-೬-೨೪)

ಎಂಬ ಋಕ್ಕಿನಲ್ಲಿ **ನಾಹುಷೀಷು** ವಿಕ್ಷು ಎನ್ನುವುದಕ್ಕೆ **ನಹುಷಾ ಇತಿ ಮನುಷ್ಯನಾಮ ತತ್ಸಂಬಂಧಿನೀಷು ವಿಕ್ಷು । ಯದ್ವಾ । ನಾಹುಷೋ ನಾಮ ಕಶ್ಚಿದ್ರಾಜಾ । ತದೀಯಾಸು ವಿಕ್ಷು । ಪ್ರಜಾಸು ।** ಎಂದು ಎರಡು

ವಿಧವಾದ ಅರ್ಥವನ್ನೂ ಹೇಳಿದ್ದಾರೆ. ನಾಹುಷ ಎಂಬ ದೊರೆಯ ವಿಷಯದಲ್ಲಿ ಒಂದು ಉಪಾಖ್ಯಾನವು ಋಕ್ಸಂಹಿತೆಯಲ್ಲಿಯೇ ಸೂಕ್ಷ್ಮವಾಗಿ ಸೂಚಿಸಲ್ಪಟ್ಟಿದೆ.

ಏಕಾಚೇತತ್ಸರಸ್ವತೀ ನದೀನಾಂ ಶುಚಿರ್ಯತೀ ಗಿರಿಭ್ಯ ಆ ಸಮುದ್ರಾತ್ ।
ರಾಯಶ್ಚೇತಂತೀ ಭುವನಸ್ಯ ಭೂರೇರ್ಘೃತಂ ಪಯೋ ದುದುಹೇ ನಾಹುಷಾಯ ॥
(ಋ. ಸಂ. ೭-೯೫-೨)

ನಹುಷನೆಂಬ ರಾಜನು ಸಾವಿರವರ್ಷಗಳಕಾಲ ಯಜ್ಞವನ್ನು ನೆರವೇರಿಸಬೇಕೆಂದು ಇಚ್ಛಿಸಿ ಸರಸ್ವತೀ ನದಿಯನ್ನು ಪ್ರಾರ್ಥಿಸಿದಾಗ ಅವಳು ಪ್ರಸನ್ನಳಾಗಿ ಇವನಿಗೆ ಸಹಸ್ರವರ್ಷಗಳಿಗೆ ಸಾಕಾಗುವಂತೆ ಪಯಸ್ಸನ್ನೂ ಘೃತವನ್ನೂ ಕೊಟ್ಟಳು ಎಂಬ ಪೂರ್ವಪೀಠಿಕೆಯೊಂದಿಗೆ ಸಾಯಣರು ಈ ಋಕ್ಕಿಗೆ ವ್ಯಾಖ್ಯಾನವನ್ನು ಮಾಡುತ್ತಾರೆ. ಈ ಋಕ್ಕಿನಲ್ಲಿ ಸೂಕ್ಷ್ಮವಾಗಿ ಸೂಚಿಸಿರುವ ಕಥೆಯನ್ನು ಬೃಹದ್ದೇವತೆಯಲ್ಲಿ ಕೊಂಚ ವಿಸ್ತಾರವಾಗಿ ಹೇಳಿದೆ.

ರಾಜಾ ವರ್ಷಸಹಸ್ರಾಯ ದೀಕ್ಷಿಷ್ಯನ್ನಾಹುಷಃ ಪುರಾ ।
ಚಚಾರೈಕರಥೇನೇಮಾಂ ಬ್ರುವನ್ ಸರ್ವಾಃ ಸಮುದ್ರಗಾಃ ॥
(ಬೃ. ದೇ. ೬-೨೦)

ನಾಹುಷನೆಂಬ ದೊರೆಯು ಒಂದು ಸಹಸ್ರವರ್ಷಗಳ ಕಾಲ ದೀಕ್ಷೆಯನ್ನುವಹಿಸಿ ಯಜ್ಞಮಾಡಬೇಕೆಂದು ತನ್ನ ರಥದಲ್ಲಿ ಕುಳಿತು ಭೂಮಿಯನ್ನೆಲ್ಲಾ ಸುತ್ತುತ್ತಾ ಸಕಲ ನದಿಗಳನ್ನೂ ಉದ್ದೇಶಿಸಿ ಈ ರೀತಿ ವಿಜ್ಞಾಪಿಸಿಕೊಂಡನು.

ಯಜ್ಞೇ ವಹತ ಭಾಗಾನ್ಮೇ ದ್ವಂದ್ವಶೋ ವಾಥ ವೈಕಶಃ ।
ಪ್ರತ್ಯೂಚುಸ್ತಂ ನೃಪಂ ನದ್ಯಃ ಸ್ವಲ್ಪವೀರ್ಯಾಃ ಕಥಂ ವಯಂ ॥
ವಹೇಮ ಭಾಗಾನ್ಸರ್ವಾಂಸ್ತೇ ಸತ್ರೇ ವಾರ್ಷಸಹಸ್ರಕೇ ।
ಸರಸ್ವತೀಂ ಪ್ರಪದ್ಯಸ್ವ ಸಾ ತೇ ವಕ್ಷ್ಯತಿ ನಾಹುಷ ॥
(ಬೃ. ದೇ. ೬-೨೧ ಮತ್ತು ೨೨)

ಸಹಸ್ರವರ್ಷಗಳ ಕಾಲ ನಾನು ಯಜ್ಞಮಾಡಬೇಕಾಗಿರುವುದರಿಂದ ಅದಕ್ಕೆ ಬೇಕಾದ ಉಪಕರಣಗಳನ್ನು ನೀವು ಇಬ್ಬಿಬ್ಬರು ಸೇರಿಕೊಂಡಾಗಲಿ, ಪ್ರತ್ಯೇಕವಾಗಿಯಾಗಲಿ ಒದಗಿಸಿಕೊಡಿ ಎಂದು ಪ್ರಾರ್ಥಿಸಿದಾಗ, ನದಿಗಳು ನಾವೆಲ್ಲಾ ಅಲ್ಪವೀರ್ಯವತಿಯರು ನಮ್ಮಿಂದ ಆ ಕಾರ್ಯವು ಹೇಗೆ ಸಾಧ್ಯ; ನೀನು ಸರಸ್ವತೀನದಿಯನ್ನು ಪ್ರಾರ್ಥಿಸಿಕೊಂಡರೆ ಆಗ ನಿನ್ನ ಕೆಲಸವಾಗಬಹುದೆಂದು ಹೇಳಿದವು. ಆಗ ದೊರೆಯು,

ತಥೇತ್ಯುಕ್ತ್ವಾ ಜಗಮಾಶು ಆಪಗಾಂ ಸ ಸರಸ್ವತೀಂ ।
ಸಾ ಚೈನಂ ಪ್ರತಿಜಗ್ರಾಹ ದುದುಹೇ ಚ ಪಯೋ ಘೃತಂ ॥
(ಬೃ. ದೇ. ೬-೨೩)

ಹಾಗೆಯೇ ಆಗಲೆಂದು ಸರಸ್ವತೀ ನದಿಯನ್ನು ಪ್ರಾರ್ಥಿಸಲು ಅವನ ಇಷ್ಟಾರ್ಥವು ನೆರವೇರುವಂತೆ ಪಯಸ್ಸನ್ನೂ ಘೃತವನ್ನೂ ಕೊಟ್ಟಳು.

ಹೀಗೆ ನಾಹುಷನೆಂಬ ದೊರೆಯ ಕಥೆಯು ಋಕ್ಸಂಹಿತೆಯಲ್ಲಿಯೇ ಪ್ರಸಿದ್ಧವಾಗಿರುವುದರಿಂದ ಪ್ರಕೃತವಾದ ಈ ಋಕ್ಕಿನಲ್ಲಿ ಸ್ಕಂದಸ್ವಾಮಿಗಳು ವಿವರಿಸಿರುವಂತೆಯೇ ಅರ್ಥವನ್ನು ಮಾಡಬಹುದು.

**ಮಂದ್ರಾ—ಸರ್ವೇಷಾಂ ಆಹ್ಲಾದಕರೀ ಅಶ್ವಪಂಕ್ತಿಃ** | ಸಕಲರಿಗೂ ಹರ್ಷದಾಯಕವಾಗಿರುವ ಅಶ್ವ ಪಂಕ್ತಿಯೆಂದರ್ಥ. ಇಂದ್ರನ ರಥದ ಕುದುರೆಗಳು ಸ್ವಭಾವವಾಗಿಯೇ ಆಕರ್ಷಕವಾಗಿರುವುದರಿಂದಲೂ, ಈ ಸನ್ನಿವೇಶದಲ್ಲಿ ಧನವನ್ನೂ ಇತರ ಇಷ್ಟಾರ್ಥಗಳನ್ನೂ ಕೊಡುವ ಇಂದ್ರನನ್ನು ಕರೆದುಕೊಂಡು ಬರುತ್ತಿರುವುದರಿಂದಲೂ ಅತ್ಯತಿಶಯವಾದ ಹರ್ಷದಾಯಕವಾಗಿದ್ದವು ಎಂದಭಿಪ್ರಾಯ.

॥ ವ್ಯಾಕರಣಪ್ರಕ್ರಿಯಾ ॥

**ಸುಮದಂಶುಃ**—ಸುಮತ್ ಅಂಶುಃ ಯಸ್ಯ ಸಃ ಸುಮದಂಶುಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಲಲಾಮೀಃ**—ಲಲಾಮಃ ಅಸ್ಯಾ ಅಸ್ತಿ ಇತಿ ಲಲಾಮೀಃ ಲಲಾಮ ಶಬ್ದದ ಮೇಲೆ ಮತ್ವರ್ಥದಲ್ಲಿ **ಛಂದಸೀವನಿಪೌ**—(ಪಾ. ಸೂ. ೫-೨-೧೦೯-೨) ಎಂಬುದರಿಂದ ಈಕಾರ ಬರುತ್ತದೆ. **ಯಸ್ಯೇತಿ ಚ**—ಸೂತ್ರದಿಂದ ತನ್ನಿಮಿತ್ತವಾಗಿ ಅಕಾರಲೋಪ ಲಲಾಮೀ ಎಂದು ಶಬ್ದವಾಗುತ್ತದೆ. ಇದಕ್ಕೆ ಸು ಪರವಾದಾಗ ಙ್ಯಂತದ ಪದದಲ್ಲಿ ಬಾರದಿರುವುದರಿಂದ **ಹಲ್ ಙ್ಯಾಭ್ಯೋ**—ಸೂತ್ರದಿಂದ ಸುಲೋಪ ಬರುವುದಿಲ್ಲ. ರುತ್ವ ವಿಸರ್ಗ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ದ್ಯುಕ್ಷಾ**—ಕ್ಷಿ ನಿವಾಸಗತ್ಯೋಃ ಧಾತು. ಇದಕ್ಕೆ ಔಣಾದಿಕವಾದ ಡ ಪ್ರತ್ಯಯ. ಡಿತ್ವಸಾಮರ್ಥ್ಯದಿಂದ ಧಾತುವಿನ ಟಿಗೆ (ಇ) ಲೋಪ ಬರುತ್ತದೆ. ಸ್ತ್ರೀತ್ವ ವಿವಕ್ಷಾಮಾಡಿದಾಗ **ಅಜಾದ್ಯತಷ್ಟಾಪ್**—ಎಂಬುದರಿಂದ ಟಾಪ್. ಕಾರಕಪೂರ್ವಪದವಾಗಿರುವುದರಿಂದ **ಗತಿಕಾರಕೋಪಪದಾತ್ ಕೃತ್**—(ಪಾ. ಸೂ. ೬-೨-೧೩೯)—ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಏಕವಚನಾಂತರೂಪ.

**ಋಜ್ರಾಶ್ವಸ್ಯ**—ಋಜ ಗತಿಸ್ಥಾನಾರ್ಜನೋಪಾರ್ಜನೇಷು ಧಾತು. **ಋಜ್ರೇಂದ್ರ**—(ಉ. ಸೂ. ೨-೧೮೬) ಎಂಬುದರಿಂದ ರಕ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಋಜ್ರಾಃ ಗತಿಮಂತಃ (ವೇಗಶಾಲಿಗಳಾದ) ಅಶ್ವಾಃ ಯಸ್ಯ ಸಃ ಋಜ್ರಾಶ್ವಃ. **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

• **ವೃಷಣ್ವಂತಮ್**—ವೃಷಾ ಅಸ್ಯ ಅಸ್ತಿ ವೃಷಣ್ವಾನ್. **ತದಸ್ಯಾಸ್ತ್ಯ**—ಎಂಬುದರಿಂದ ಮತುಪ್ ಪ್ರತ್ಯಯ. ಅದುಪಧೆಯ ಪದವಾದುದರಿಂದ **ಮಾದುಪಧಾಯಾಶ್ಚ**—ಸೂತ್ರದಿಂದ ಮತುಪಿನ ಮಕಾರಕ್ಕೆ ವತ್ವ. **ನಲೋಪಃ ಪ್ರಾತಿಪದಿಕಾಂತಸ್ಯ**—ಸೂತ್ರದಿಂದ ನಲೋಪ. **ಅನೋನುಟ್**—(ಪಾ. ಸೂ. ೮-೨-೧೬) ಎಂಬುದರಿಂದ ಅನ್ನಂತದ ಪದದಲ್ಲಿರುವುದರಿಂದ ಮತುಪಿಗೆ ನುಟಾಗಮ. **ಅಟ್ ಕುಪ್ವಾಙ್**—ಸೂತ್ರದಿಂದ ಅದಕ್ಕೆ ಣತ್ವ. ವೃಷಣ್ವತ್ ಶಬ್ದವಾಗುತ್ತದೆ. ದ್ವಿತೀಯಾ ಏಕವಚನದಲ್ಲಿ ಉಗಿತ್ತಾದುದರಿಂದ ನುಮಾಗಮ. ಅದಕ್ಕೆ ಅನುಸ್ವಾರ ಪರಸವರ್ಣ.

ಬಿಭ್ರತೀ—ಡುಭೃಞ್ ಭರಣೇ ಧಾತು. ಇದಕ್ಕೆ ಲಡರ್ಥದಲ್ಲಿ ಶತೃಪ್ರತ್ಯಯ. ಶ್ಲು ವಿಕರಣ. ಧಾತುವಿಗೆ **ಶ್ಲೌ**—ಎಂಬುದರಿಂದ ದ್ವಿತ್ವ. ಅಭ್ಯಾಸಕ್ಕೆ ಉರದತ್ವ. ಹಲಾದಿಶೇಷ. **ಭೃಞಾಮಿತ್**—ಎಂಬುದರಿಂದ ಇತ್ವ. ಜಶ್ತ್ವ. ಬಿಭ್ರತ್ ಎಂದಾಗುತ್ತದೆ. ಸ್ತ್ರೀತ್ವದಲ್ಲಿ ಉಗಿತಶ್ಚ—(ಪಾ. ಸೂ ೪-೧-೬) ಎಂಬುದರಿಂದ ಙೀಪ್.

**ಚಿಕೇತ**—ಕಿತ ಜ್ಞಾನೇ ಧಾತು. ವರ್ತಮಾನಾರ್ಥದಲ್ಲಿ **ಛಂದಸಿಲುಙ್‌ಲಙ್‌ಲಿಟಃ**— ಎಂಬುದರಿಂದ ಲಿಟ್ **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫)—ಎಂಬುದರಿಂದ ಪರಸ್ಮೈಪದ ತಿಪ್ ಪ್ರತ್ಯಯ ಬರುತ್ತದೆ. **ಪರಸ್ಮೈಪದಾನಾಂ**—(ಪಾ. ಸೂ. ೩-೪-೮೨) ಎಂಬುದರಿಂದ ಅದಕ್ಕೆ ಣಲಾದೇಶ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. **ಕುಹೋಶ್ಚುಃ**—ಎಂಬುದರಿಂದ ಚುತ್ವದಿಂದ ಚಕಾರಾದೇಶ. ಧಾತುವಿನ ಲಘೂಪಧೆಗೆ ಗುಣ. ಚಿಕೇತ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ. ॥ ೧೬ ॥

———— :o: ————

॥ ಸಂಹಿತಾಪಾಠಃ ॥

ಏತತ್ತ್ಯತ್ತ ಇಂದ್ರ ವೃಷ್ಣ ಉಕ್ಥಂ ವಾರ್ಷಾಗಿರಾ ಅಭಿಗೃಣಂತಿ
ರಾಧಃ ।
ಋಜ್ರಾಶ್ವಃ ಪ್ರಷ್ಟಿಭಿರಂಬರೀಷಃ ಸಹದೇವೋ ಭಯಮಾನಃ
ಸುರಾಧಾಃ ॥ ೧೭ ॥

॥ ಪದಪಾಠಃ ॥

ಏತತ್ । ತ್ಯತ್ । ತೇ । ಇಂದ್ರ । ವೃಷ್ಣೇ । ಉಕ್ಥಂ । ವಾರ್ಷಾಗಿರಾಃ । ಅಭಿ ।
ಗೃಣಂತಿ । ರಾಧಃ ।
ಋಜ್ರಽಅಶ್ವಃ । ಪ್ರಷ್ಟಿಽಭಿಃ । ಅಂಬರೀಷಃ । ಸಹಽದೇವಃ । ಭಯಮಾನಃ ।
ಸುಽರಾಧಾಃ ॥ ೧೭ ॥

ಸಾಯಣಭಾಷ್ಯಂ

ಹೇ ಇಂದ್ರ ವೃಷ್ಣೇ ಕಾಮಾನಾಂ ವರ್ಷಿತುಸ್ತೇ ತವ ತ್ಯತ್ತದೇತದುಕ್ಥಂ ಸ್ತೋತ್ರಂ ರಾಧಃ ಸಂರಾಧಕಂ ತ್ವತ್ಪ್ರೀತಿಹೇತು ವಾರ್ಷಾಗಿರಾ ವೃಷಾಗಿರೋ ರಾಜ್ಞಃ ಪುತ್ರಾ ಋಜ್ರಾಶ್ವಾದಯೋಽಭಿಗೃಣಂತಿ । ಆಭಿಮುಖ್ಯೇನ ವದಂತಿ । ವಾರ್ಷಾಗಿರಾ ಇತ್ಯೇತದ್ವಿವೃಣೋತಿ । ಋಜ್ರಾಶ್ವ ಏತತ್ಸಂಜ್ಞೋ ರಾಜರ್ಷಿಃ ಪ್ರಷ್ಟಿಭಿಃ ಪಾರ್ಶ್ವಸ್ಥೈರನ್ಯೈರ್ಋಷಿಭಿಃ ಸಹೇಂದ್ರಮಸ್ತೌತ್ । ಕೇ ತೇ ಪಾರ್ಶ್ವಸ್ಥಾಃ । ಅಂಬರೀಷಾದಯಶ್ಚತ್ವಾರೋ ರಾಜರ್ಷಯಃ ॥ ವಾರ್ಷಾಗಿರಾಃ । ತಸ್ಯಾಪತ್ಯಂ । ಪಾ. ೪-೧-೯೨ । ಇತ್ಯಣ್ಪ್ರತ್ಯಯಃ । ಗೃಣಂತಿ । ಗೄ ಶಬ್ದೇ । ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವತ್ವಂ । ರಾಧಃ । ರಾಧ ಸಾಧ ಸಂಸಿದ್ಧೌ । ರಾಧ್ನೋತಿ ಸಮೃದ್ಧೋ ಭವತ್ಯನೇನೇತಿ ರಾಧಃ । ಕರಣೇಽಸುನ್ । ಋಜ್ರಾಶ್ವಃ । ಋಜ್ರಾ ಗತಿಮಂತೋಽಶ್ವಾ ಯಸ್ಯ ಸ ತಥೋಕ್ತಃ । ಅಂಬರೀಷಃ । ಅಬಿ ಶಬ್ದೇ । ಔಣಾದಿಕ ಈಷನ್ಪ್ರತ್ಯಯಃ । ಉ. ೪-೨೯ । ಸಹದೇವಃ । ದೇವೈಃ ಸಹ ವರ್ತತ ಇತಿ ಸಹದೇವಃ । ವೋಪಸರ್ಜನಸ್ಯೇತಿ ವಿಕಲ್ಪನಾತ್ಸಭಾವಾಭಾವಃ । ಭಯಮಾನಃ । ಞಿಭೀ ಭಯೇ । ಅಸ್ಮಾದಂತರ್ಭಾವಿತಣ್ಯರ್ಥಾದ್ವ್ಯತ್ಯಯೇನ ಶಾನಚ್ । ಬಹುಲಂ ಛಂದಸೀತಿ ಶಪಃ ಶ್ಲೋರಭಾವಃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರ ಏವ ಶಿಷ್ಯತೇ । ಸುರಾಧಾಃ । ರಾಧ ಇತಿ ಧನನಾಮ । ಶೋಭನಂ ರಾಧೋ ಯಸ್ಯ । ಸೋರ್ಮನಸೀ ಅಲೋಮೋಷಸೀ ಇತ್ಯುತ್ತರಪದಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

ವೃಷ್ಣೇ—ಇಷ್ಟಾರ್ಥಗಳನ್ನು ಸುರಿಸುವ । ಇಂದ್ರ—ಎಲೈ ಇಂದ್ರನೇ, ತೇ—ನಿನ್ನ । ತ್ಯತ್—ಪ್ರಸಿದ್ಧವಾದ । ಏತತ್ ಉಕ್ಥಂ—ಈ ಸ್ತೋತ್ರವನ್ನು । ರಾಧಃ—ಶ್ರೇಷ್ಠವಾದ ಧನಯುಕ್ತನಾದ ನಿನ್ನ ತೃಪ್ತಿಗಾಗಿ । ವಾರ್ಷಾಗಿರಾಃ—ವೃಷಾಗಿರನೆಂಬ ದೊರೆಯ ಮಕ್ಕಳಾದ । ಋಜ್ರಾಶ್ವಃ—ಋಜ್ರಾಶ್ವನೆಂಬ ರಾಜರ್ಷಿಯೂ । ಪ್ರಷ್ಟಿಭಿಃ—(ಅವನ) ಪಾರ್ಶ್ವಸ್ಥರಾದ । ಅಂಬರೀಷಃ—ಅಂಬರೀಷನೂ । ಸಹದೇವಃ—ಸಹದೇವನೂ । ಭಯಮಾನಃ—ಭಯಮಾನನೂ । ಸುರಾಧಾಃ—ಸುರಾಧಸ್ಸೂ । ಅಭಿ ಗೃಣಂತಿ—(ನಿನ್ನ) ಅಭಿಮುಖವಾಗಿ ನಿಂತು ಪಠಿಸುತ್ತಾರೆ.

ಭಾವಾರ್ಥ

ಇಷ್ಟಾರ್ಥ ಪ್ರದನಾದ ಇಂದ್ರನೇ, ವೃಷಾಗಿರನೆಂಬ ದೊರೆಯ ಮಕ್ಕಳಾದ ಋಜ್ರಾಶ್ವನೆಂಬ ರಾಜರ್ಷಿಯೂ, ಅವನ ಜೊತೆಯಲ್ಲಿರುವ ಅಂಬರೀಷನೂ ಸಹದೇವನೂ ಭಯಮಾನನೂ ಮತ್ತು ಸುರಾಧಸ್ಸೂ ಸಹ ಪ್ರಸಿದ್ಧವಾದ ನಿನ್ನ ಈ ಸ್ತೋತ್ರವನ್ನು ನಿನಗೆ ಅಭಿಮುಖವಾಗಿ ನಿಂತು ಪಠಿಸುತ್ತಾರೆ.

English Translation

Indra, showerer ( of benefits ) the Varshagiras, Rijraswa and his companions Ambarisha, Sahadeva, Bhayamana and Surdhas, address to you this propitiatory praise.

॥ ವಿಶೇಷವಿಷಯಗಳು ॥

ಉಕ್ಥಂ—ಸ್ತೋತ್ರಂ । ಸ್ತೋತ್ರವನ್ನು ಎಂದು ಸಾಧಾರಣವಾದ ಅರ್ಥವನ್ನು ಮಾತ್ರ ವ್ಯಾಖ್ಯಾನದಲ್ಲಿ ಹೇಳಿದೆ. ಆದರೆ, ತ್ಯತ್ ತೇ ಉಕ್ಥಂ । ಪ್ರಸಿದ್ಧವಾದುದೂ ನಿನ್ನನ್ನು ಉದ್ದೇಶಿಸಿದುದೂ ಆದ ಉಕ್ಥವನ್ನು ಎಂದು ಹೇಳಿರುವುದರಿಂದ ಇಂದ್ರಪರವಾದುದೂ ಯಾಗಕಾಲದಲ್ಲಿ ಹಿಂದಿನಿಂದಲೂ ಪಠಿಸಲ್ಪಡುತ್ತಿರುವುದೂ ಆದ ಉಕ್ಥ ನೆಂದು ಸೂಚಿಸಿದೆ. ಇಂದ್ರ ಪರವಾದ ಈ ಉಕ್ಥಕ್ಕೆ ಒಂದು ಅಸಾಧಾರಣವಾದ ವೈಶಿಷ್ಟ್ಯವಿದೆ.

ಉಕ್ಥದ ಸ್ವರೂಪವನ್ನೂ, ಅದರ ಮಹಿಮೆಯನ್ನೂ, ಶಸ್ತ್ರ, ಉಕ್ಥ, ಸಾಮ ಇವುಗಳಿಗಿರುವ ಸಂಬಂಧ ಮತ್ತು ಸೂಕ್ಷ್ಮವಾದ ವ್ಯತ್ಯಾಸಗಳನ್ನೂ, ಹೋತೃವೂ ಅವನ ಸಹಾಯಕರಾದ ಋತ್ವಿಕ್ಕುಗಳೂ ಇದನ್ನು ಸವನಕಾಲದಲ್ಲಿ ಪಠಿಸಬೇಕಾದ ಕ್ರಮವನ್ನೂ ಹಿಂದಿನ ಸಂಪುಟದಲ್ಲಿ ವಿಶದವಾಗಿ ವಿವರಿಸಿದೆ. ( ) ಇಲ್ಲಿ ಇಂದ್ರನ ಮಹಿಮೆಯನ್ನು ಉಕ್ಥದ ಮೂಲಕ ಪ್ರಶಂಸಿಸಿರುವುದರಿಂದ ಅದಕ್ಕೆ ಸಂಬಂಧಿಸಿದ ಪೂರ್ವಕಥಾಸಂದರ್ಭವೊಂದಿಗೆ ಉಕ್ಥದ ಪ್ರಭಾವವೂ ತನ್ಮೂಲಕ ಇಂದ್ರನ ಮಹಿಮೆಯೂ ಸೂಕ್ಷ್ಮವಾಗಿ ತಿಳಿಸಲ್ಪಡುತ್ತದೆ. ಉಕ್ಥದ ಶಕ್ತಿಯು ಅತ್ಯಧಿಕವಾದುದೆಂದೂ ಅಸುರರು ಅದರ ಮರೆಹೊಕ್ಕಿದುದರಿಂದ ಅವರ ಶಕ್ತಿಯೂ ವೃದ್ಧಿಯಾಯಿತೆಂದೂ ಆಗ ಇಂದ್ರನು ಸ್ತುತನಾಗಿ ಬಂದು ಇವರನ್ನು ಓಡಿಸಿದನೆಂದೂ ಐತರೇಯ ಬ್ರಾಹ್ಮಣದಲ್ಲಿ ಒಂದು ಕಥೆಯಿದೆ.

**ತೇ ವಾ ಅಸುರಾ ಮೈತ್ರಾವರುಣಸ್ಯೋಕ್ಥಮುಶ್ರಯಂತ ಸೋಽಬ್ರವೀದಿಂದ್ರಃ ಕಶ್ಚಾಹಂ ಚೇಮಾನಿತೋಽಸುರಾನ್ನೋತ್ಸ್ಯಾವಹಾ ಇತ್ಯಹಂ ಚೇತ್ಯಬ್ರವೀದ್ವರುಣಸ್ತಸ್ಮಾದೈಂದ್ರಾವರುಣಂ ಮೈತ್ರಾವರುಣಸ್ತೃತೀಯಸವನೇ ಶಂಸತೀಂದ್ರಶ್ಚ ಹಿ ತಾನ್ವರುಣಶ್ಚ ತತೋ ನುದೇತಾಂ ॥**

ಅಸುರರು ಮೈತ್ರಾವರುಣ ಉಕ್ಥವನ್ನು ಪ್ರವೇಶಿಸಿದರು. ಆಗ ಇಂದ್ರನು ಈ ಅಸುರರನ್ನು ಈ ಉಕ್ಥದಿಂದ ಓಡಿಸಲು ನನಗೆ ನಿಮ್ಮಲ್ಲಿ ಯಾರು ಸಹಾಯಮಾಡುತ್ತೀರಿ ಎಂದಾಗ ವರುಣನು ತಾನು ಸಹಾಯಮಾಡುವುದಾಗಿ ಹೇಳಿದನು. ಆ ಕಾಲದಲ್ಲಿ ಹೋತೃವಿಗೆ ಸಹಾಯಕನಾದ ಮೈತ್ರಾವರುಣನು ತೃತೀಯಸವನಕಾಲದಲ್ಲಿ,

**ಇಂದ್ರಾವರುಣಾ ಯುವಮಧ್ವರಾಯ ನೋ ವಿಶೇ ಜನಾಯ ಮಹಿ ಶರ್ಮ ಯಚ್ಛತಂ ।**
(ಋ. ಸಂ. ೭-೮೨-೧.)

ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವನ್ನು ಪಠಿಸಿ ಇಂದ್ರನನ್ನೂ ವರುಣನನ್ನೂ ಸ್ತುತಿಸಿದನು. ಆಗ ಇಂದ್ರಾವರುಣರು ಆ ಅಸುರರನ್ನು ಮಿತ್ರಾವರುಣ ಶಸ್ತ್ರದಿಂದ ಓಡಿಸಿದರು.

**ತೇ ವೈ ತತೋಽಪಹತಾ ಅಸುರಾ ಬ್ರಾಹ್ಮಣಾಚ್ಛಂಸಿನ ಉಕ್ಥಮುಶ್ರಯಂತ ಸೋಽಬ್ರವೀದಿಂದ್ರಃ ಕಶ್ಚಾಹಂ ಚೇಮಾನಿತೋಽಸುರಾನ್ನೋತ್ಸ್ಯಾವಹಾ ಇತ್ಯಹಂ ಚೇತ್ಯಬ್ರವೀದ್ಬೃಹಸ್ಪತಿಸ್ತಸ್ಮಾದೈಂದ್ರಾಬಾರ್ಹಸ್ಪತ್ಯಂ ಬ್ರಾಹ್ಮಣಾಚ್ಛಂಸೀ ತೃತೀಯಸವನೇ ಶಂಸತೀಂದ್ರಶ್ಚ ಹಿ ತಾನ್ಬೃಹಸ್ಪತಿಶ್ಚ ಹಿ ತತೋ ನುದೇತಾಂ ॥**

ಅಲ್ಲಿಂದ ಓಡಿಸಲ್ಪಟ್ಟ ಅಸುರರು ಬ್ರಾಹ್ಮಣಾಚ್ಛಂಸಿಯ ಉಕ್ಥದಲ್ಲಿ ಪ್ರವೇಶಿಸಿದರು.

ಆಗ ಇಂದ್ರನು ಎದ್ದು ಈ ಅಸುರರನ್ನು ಇಲ್ಲಿಂದ ಓಡಿಸಲು ಯಾರು ಸಹಾಯಮಾಡುತ್ತೀರಿ ಎಂದಾಗ ಬೃಹಸ್ಪತಿಯು ಎದ್ದು ತಾನು ಸಹಾಯಮಾಡುವುದಾಗಿ ಹೇಳಿದನು. ಆಗ ಬ್ರಾಹ್ಮಣಾಚ್ಛಂಸಿಯು ತೃತೀಯಸವನ ಕಾಲದಲ್ಲಿ,

**ಉದಪ್ರುತೋ ನ ವಯೋ ರಕ್ಷಮಾಣಾ ವಾವದತೋ ಅಭ್ರಿಯಸ್ಯೇವ ಘೋಷಾಃ ।**
(ಋ. ಸಂ. ೧೦-೬೮-೧)

ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವನ್ನು ಪಠಿಸಿ ಇಂದ್ರನನ್ನೂ ಬೃಹಸ್ಪತಿಯನ್ನೂ ಸ್ತುತಿಸಿದನು ಆಗ ಇಂದ್ರನೂ ಬೃಹಸ್ಪತಿಯೂ ಸಹ ಅಸುರರನ್ನು ಅಲ್ಲಿಂದ ಓಡಿಸಿದರು.

**ತೇ ವೈ ತತೋಽಪಹತಾ ಅಸುರಾ ಅಚ್ಛಾವಾಕಸ್ಯೋಕ್ಥಮಶ್ರಯಂತ ಸೋಽಬ್ರವೀದಿಂದ್ರಃ ಕಶ್ಚಾಹಂ ಚೇಮಾನಿತೋಽಸುರಾನ್ನೋತ್ಸ್ಯಾವಹಾ ಇತ್ಯಹಂ ಚೇತ್ಯಬ್ರವೀದ್ವಿಷ್ಣುಸ್ತಸ್ಮಾದೈಂದ್ರಾವೈಷ್ಣವಮಚ್ಛಾವಾಕಸ್ತೃತೀಯಸವನೇ ಶಂಸತೀಂದ್ರಶ್ಚ ಹಿ ತಾನ್ವಿಷ್ಣುಶ್ಚ ತತೋ ನುದೇತಾಂ ॥**
(ಐ. ಬ್ರಾ. ೧೫-೬.)

ಬ್ರಾಹ್ಮಣಾಚ್ಛಂಸಿಯ ಉಕ್ಥದಿಂದ ಓಡಿಸಲ್ಪಟ್ಟ ಅಸುರರು ಅಚ್ಛಾವಾಕನ ಉಕ್ಥದಲ್ಲಿ ಸೇರಿಕೊಂಡರು. ಆಗ ಇಂದ್ರನು ಎದ್ದು ಇವರನ್ನು ಇಲ್ಲಿಂದ ಓಡಿಸಲು ನಿಮ್ಮಲ್ಲಿ ಯಾರು ಸಹಾಯಮಾಡುತ್ತೀರೆಂದು ಕೇಳಿದನು. ಆಗ ವಿಷ್ಣುವು ತಾನು ಸಹಾಯಮಾಡುತ್ತೇನೆಂದು ಹೇಳಿದನು. ಆ ಕಾಲದಲ್ಲಿ ಅಚ್ಛಾವಾಕನು,

**ಸಂ ವಾಂ ಕರ್ಮಣಾ ಸಮಿಷಾ ಹಿನೋಮೀಂದ್ರಾವಿಷ್ಣೂ ಅಪಸಸ್ಪಾರೇ ಅಸ್ಯ ।**
(ಋ. ಸಂ. ೬-೬೯-೧.)

ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವನ್ನು ಪಠಿಸಿ ಇಂದ್ರನನ್ನೂ ವಿಷ್ಣುವನ್ನೂ ಸ್ತುತಿಸಿದನು. ಆಗ ಅವರು ಅಸುರರನ್ನು ಅಲ್ಲಿಂದಲೂ ಓಡಿಸಿದರು ಎಂಬ ಕಥೆಯು ಐತರೇಯಬ್ರಾಹ್ಮಣದಲ್ಲಿ (೧೫-೬) ಪಠಿತವಾಗಿದೆ. ಇದರಿಂದ **ಉಕ್ಥದ** ಶಕ್ತಿಯೂ, ಇಂದ್ರನ ಮಹಿಮೆಯೂ ತಿಳಿಯುತ್ತದೆ. **ತತ್ ತ್ಯೇ ಉಕ್ಥಂ** ಎಂದರೆ ಈ ಪ್ರಭಾವವುಳ್ಳ ಉಕ್ಥವನ್ನು ಎಂದರ್ಥವು.

ಆದುದರಿಂದಲೇ ಶತಪಥಬ್ರಾಹ್ಮಣದಲ್ಲಿಯೂ ಸಹ,

**ಇಂದ್ರೋ ವೈ ಯಜ್ಞಸ್ಯ ದೇವತಾ ತಸ್ಮಾದಾಹೇಂದ್ರಾಯ ತ್ವೇತಿ ಬೃಹದ್ವತೇ ವಯಸ್ವತ ಇತಿ ವೀರ್ಯವತ ಇತ್ಯೇವೈತದಾಹ ಯದಾಹ ಬೃಹದ್ವತೇ ವಯಸ್ವತ ಇತ್ಯುಕ್ಥಾಯುಂ ಗೃಹ್ಣಾಮೀತ್ಯುಕ್ಥೇಭ್ಯೋ ಹ್ಯೇನಂ ಗೃಹ್ಣಾತಿ ।**
(ಶ. ಬ್ರಾ. ೪-೨-೩-೧೦)

ಇಂದ್ರನೇ ಯಜ್ಞಕ್ಕೆಲ್ಲಾ ದೇವತೆ. ಆದುದರಿಂದಲೇ "**ಬೃಹದುಕ್ಥದಿಂದ ಕೂಡಿದವನೂ, ವೀರ್ಯವಂತನೂ ಆದ ಇಂದ್ರನಿಗೆ**" ಎಂದು ಇಂದ್ರನ ವೀರ್ಯಕ್ಕೂ ತೃಪ್ತಿಗೂ ಕಾರಣವಾದ ಉಕ್ಥವನ್ನು ತನ್ಮೂಲಕ ಇಂದ್ರನನ್ನು ಸ್ತುತಿಸಿದೆ.

ಯಾಗಾದಿ ಕರ್ಮಗಳ ಕಾಲದಲ್ಲಿ ಯಾವ ರೀತಿ **ಉಕ್ಥದ** ಪ್ರಭಾವವನ್ನು ವರ್ಣಿಸಿದೆಯೋ ಅದೇ ರೀತಿ ಆಧ್ಯಾತ್ಮಿಕವಾದ ಜ್ಞಾನವನ್ನು ಉಪದೇಶಿಸುವ ಕಾಲದಲ್ಲೂ ಸಹ ಸ್ತೋತ್ರಾತ್ಮಕವಾದ ಈ ಉಕ್ಥದ ಮಹಿಮೆಯನ್ನು ಪ್ರಶಂಸಿಸಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ—

**ಉಕ್ಥಂ ಪ್ರಾಣೋ ವಾ ಉಕ್ಥಂ ಪ್ರಾಣೋ ಹೀದಂ ಸರ್ವಮುತ್ಥಾಪಯತ್ಯುದ್ಧಾಸ್ಮಾದುಕ್ಥವಿ-ದ್ವೀರಸ್ತಿಷ್ಠತ್ಯುಕ್ಥಸ್ಯ ಸಾಯುಜ್ಯಂ ಸಲೋಕತಾಂ ಜಯತಿ ಯ ಏವಂ ವೇದ ।**

(ಬೃ. ಉ. ೫-೧೩-೧)

**ಉಕ್ಥಂ ತಥೋಪಾಸನಾಂತರಂ । ಉಕ್ಥಂ ಶಸ್ತ್ರಂ । ತದ್ಧಿ ಪ್ರಧಾನಂ ಮಹಾವ್ರತೇ ಕ್ರತೌ ।**

(ಶಾಂಕರಭಾಷ್ಯ)

ಮಹಾವ್ರತರೂಪವಾದ ಯಾಗದಲ್ಲಿ ಪ್ರಧಾನಶಸ್ತ್ರವಾದ ಉಕ್ಥವೇ ಪ್ರಾಣವು. ಇದರಿಂದಲೇ ಉತ್ಥಾನವಾಗುತ್ತದೆ. ಆದರಿಂದ **ಉಕ್ಥಜ್ಞ**ನಾದ ಪುತ್ರನು ಉತ್ಪನ್ನನಾಗಿ ತತ್ಸಮಾನತೆಯನ್ನೂ ಸಮಾನವಾದ ಮಾನ್ಯತೆಯನ್ನೂ ಪಡೆಯುತ್ತಾನೆ, ಎಂದು **ಉಕ್ಥದ** ಮಹತ್ವವನ್ನು ಹೇಳಿದೆ.

**ಋಜ್ರಾಶ್ವಃ**—ಋಜ್ರಾಶ್ವನ ಉಪಾಖ್ಯಾನವನ್ನು ಹಿಂದಿನ ಋಕ್ಕಿನ ವಿವರಣೆಯಲ್ಲಿ ತಿಳಿಸಿದೆ.

**ಅಂಬರೀಷಃ**—ಅಂಬರೀಷನ ಹೆಸರು ಈ ಒಂದು ಸ್ಥಳದಲ್ಲಿ ಮಾತ್ರ ಬಂದಿರುವಂತೆ ಕಾಣುತ್ತದೆ. ಅವನ ಹೆಸರು ಪುರಾಣಗಳಲ್ಲಿ ಪ್ರಸಿದ್ಧವಾಗಿರುವಷ್ಟು ವೇದಗಳಲ್ಲಿ ಪ್ರಸಿದ್ಧವಾಗಿಲ್ಲ.

**ಸಹದೇವಃ**—ಸಹದೇವನ ವಿಷಯವನ್ನು ಅನೇಕಕಡೆಗಳಲ್ಲಿ ಹೇಳಿದೆ. ಋಕ್ಸಂಹಿತೆಯಲ್ಲಿಯೇ ೪-೧೫-೭ ನೆಯ ಋಕ್ಕಿನಲ್ಲಿಯೂ, ಶತಪಥ ಬ್ರಾಹ್ಮಣದಲ್ಲಿಯೂ (೨-೪೪-೩-೪) ಐತರೇಯಬ್ರಾಹ್ಮಣದಲ್ಲಿಯೂ ಸಹದೇವನ ವಿಷಯವನ್ನು ತಿಳಿಸಿದೆ.

**ಪ್ರಷ್ಟಿಭಿಃ**—ಪಾರ್ಶ್ವಸ್ಥೈಃ ಅನ್ಯೈರ್ಋಷಿಭಿಃ । ತನ್ನ ಜೊತೆಯಲ್ಲಿರುವ ಇತರ ಅಂಬರೀಷಾದಿರಾಜರುಗಳೊಡನೆ.

**ಸ ಯೋ ವೃಷೈಕೋನಾ ವಾರ್ಷಾಗಿರಾ ಋಜ್ರಾಶ್ವಾಂಬರೀಷಸಹದೇವಭಯಮಾನಸುರಾಧಸಃ ।**
ವೃಷಾಗಿರನ ಮಕ್ಕಳಾದ ಋಜ್ರಾಶ್ವಾದಿಗಳು **ಸ ಯೋ ವೃಷಾ** ಎಂಬುವರಿಂದ ಪ್ರಾರಂಭಿಸಿ ೧೯ ಋಕ್ಕುಗಳುಳ್ಳ ಈ ಸೂಕ್ತದ ದರ್ಶನವನ್ನು ಪಡೆದರು ಎಂದು ಅನುಕ್ರಮಣಿಯಲ್ಲಿ ಉಕ್ತವಾಗಿದೆ. ಆರ್ಷಾನುಕ್ರಮಣಿಯಲ್ಲಿಯೂ ಸಹ,

**ಸೂಕ್ತಂ ಸ ಯೋ ವೃಷೇತ್ಯೇತತ್ ಪಂಚ ವಾರ್ಷಾಗಿರಾ ವಿದುಃ ।**
**ನಿಯುಕ್ತಾ ನಾಮಧೇಯೈಃ ಸ್ವೈರಪಿ ಚೈತತ್ತ್ಯದಿತ್ಯೃಚಿ ॥**

ಎಂದು ಈ ಐದು ಋಷಿಗಳೂ ಈ ಸೂಕ್ತದ ದರ್ಶನವನ್ನು ಪಡೆದರು ಎಂದಿದೆ.

॥ ವ್ಯಾಕರಣಪ್ರಕ್ರಿಯಾ ॥

ಉಕ್ಥಂ—೧೪ ನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

**ವಾರ್ಷಾಗಿರಾಃ**—ವೃಷಾಗಿರಃ ಅಪತ್ಯಂ ಪುಮಾನ್ ವಾರ್ಷಾಗಿರಃ **ತಸ್ಯಾಪತ್ಯಮ್**—(ಪಾ. ಸೂ. ೪-೧-೯೨) ಎಂಬುದರಿಂದ ಪುತ್ರ ಎಂಬರ್ಥದಲ್ಲಿ ವೃಷಾಗಿರ್ ಶಬ್ದಕ್ಕೆ ಅಣ್‌ಪ್ರತ್ಯಯ. ಣಿತ್ತಾದುದರಿಂದ **ತದ್ಧಿತೇಷ್ವಚಾಮಾದೇಃ**—(ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ. **ಉರಣ್ರಪರಃ**—ಎಂಬುದರಿಂದ ರಪರವಾಗಿ ಬರುತ್ತದೆ. ವಾರ್ಷಾಗಿರಃ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಥಮಾಬಹುವಚನಾಂತರೂಪ.

**ಗೃಣನ್ತಿ**—ಗೄ ಶಬ್ದೇ. ಧಾತು. ಕ್ರ್ಯಾದಿ. ಪ್ವಾದಿಯಲ್ಲಿ ಸೇರಿರುವುದರಿಂದ **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಎಂಬುದರಿಂದ ಹ್ರಸ್ವ. ಲಟ್ ಪ್ರಥಮಪುರುಷ ಬಹುವಚನದಲ್ಲಿ ಝಿಗೆ ಅಂತಾದೇಶ **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾ ವಿಕರಣ. ಪ್ರತ್ಯಯಕ್ಕೆ ಙಿತ್ವಾತಿದೇಶವಿರುವುದರಿಂದ **ಶ್ನಾಭ್ಯಸ್ತಯೋರಾತಃ**—(ಪಾ. ಸೂ ೬-೪-೧೧೨) ಎಂಬುದರಿಂದ ಅದನ್ನು ನಿಮಿತ್ತೀಕರಿಸಿ ಶ್ನಾಪ್ರತ್ಯಯದ ಆಕಾರಕ್ಕೆ ಲೋಪ. ಋಕಾರದ ಪರದಲ್ಲಿರುವುದರಿಂದ ಣತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ರಾಧಃ**—ರಾಧ ಸಾಧ ಸಂಸಿದ್ಧೌ. ಧಾತು. ರಾಧ್ನೋತಿ-ಸಮೃದ್ಧೋ ಭವತಿ ಅನೇನ ಇತಿ ರಾಧಃ. ಕರಣಾರ್ಥದಲ್ಲಿ ಸರ್ವಧಾತುನಿಬಂಧನವಾದ ಅಸುನ್ ಪ್ರತ್ಯಯ. ರಾಧಸ್ ಶಬ್ದವಾಗುತ್ತದೆ. **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಋಜ್ರಾಶ್ವಃ**—ಋಜ್ರಾಃ ಗತಿಮಂತಃ ಅಶ್ವಾಃ ಯಸ್ಯ ಸಃ ಋಜ್ರಾಶ್ವಃ ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಅಮ್ಬರೀಷಃ**—ಅಬಿ ಶಬ್ದೇ. ಧಾತು. ಇದಕ್ಕೆ ಔಣಾದಿಕವಾದ ಈಷನ್ ಪ್ರತ್ಯಯ. (ಉ. ಸೂ. ೪-೬೪೯)—**ಇದಿತೋ ನುಮ್ ಧಾತೋಃ**—ಎಂಬುದರಿಂದ ನುಮಾಗಮ. ಛಾಂದಸವಾಗಿ ರೇಫಾಗಮ. ವ್ಯತ್ಯಯದಿಂದ ಪ್ರತ್ಯಯಸ್ವರ ಉಳಿಯುತ್ತದೆ.

**ಸಹದೇವಃ**—ದೇವೈಃ ಸಹ ವರ್ತತೇ ಇತಿ ಸಹದೇವಃ. **ವೋಪಸರ್ಜನಸ್ಯ**—(ಪಾ. ಸೂ. ೬-೩-೮೨) ಎಂಬುದರಿಂದ ಸಹ ಎಂಬುದಕ್ಕೆ ಅಪ್ರಾಧಾನ್ಯತೆಯಲ್ಲಿ ಸಭಾವವು ವಿಕಲ್ಪಿತವಾದುದರಿಂದ ಇಲ್ಲಿ ಸಭಾವವು ಬಂದಿಲ್ಲ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಭಯಮಾನಃ**—ಞಿಭೀ ಭಯೇ. ಧಾತು. ಪ್ರಯೋಜಕವ್ಯಾಪಾರವು ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಈಧಾತುವಿಗೆ ಲಡರ್ಥದಲ್ಲಿ **ವ್ಯತ್ಯಯೋ ಬಹುಲಮ್**—ಎಂಬುದರಿಂದ ಶಾನಚ್‌ಪ್ರತ್ಯಯ. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಶ್ಲು ಆದೇಶ ಬರುವುದಿಲ್ಲ. ಶಪ್ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಅಯಾದೇಶ. **ಆನೇಮುಕ್**—(ಪಾ. ಸೂ. ೮-೨-೮೨) ಎಂಬುದರಿಂದ ಅಜಂತಾಂಗಕ್ಕೆ ಮುಕಾಗಮ. ಭಯಮಾನ ಎಂದು ರೂಪವಾಗುತ್ತದೆ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ (ಆನ) ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅದು ಅನುದಾತ್ತವಾಗುತ್ತದೆ. ಆಗ ಧಾತುಸ್ವರವೇ ಉಳಿಯುತ್ತದೆ.

**ಸುರಾಧಾಃ**—ರಾಧಃ ಎಂಬುದು ಧನದ ಹೆಸರು. ಶೋಭನಂ ರಾಧಃ ಯಸ್ಯ ಸಃ. **ಸೋರ್ಮನಸೀ ಅಲೋಮೋಷಸೀ**—(ಪಾ. ಸೂ ೬-೨-೧೧೭) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ. ॥ ೧೭ ॥

—— :o: ——

ಸಂಹಿತಾಪಾಠಃ

ದಸ್ಯೂಞ್ಛಿಮ್ಯೂಂಶ್ಚ ಪುರುಹೂತ ಏವೈರ್ಹತ್ವಾ ಪೃಥಿವ್ಯಾಂ ।
ಶರ್ವಾ ನಿ ಬರ್ಹೀತ್ ।
ಸನತ್ಕ್ಷೇತ್ರಂ ಸಖಿಭಿಃ ಶ್ವಿತ್ನ್ಯೇಭಿಃ ಸನತ್ಸೂರ್ಯಂ ಸನದಪಃ
ಸುವಜ್ರಃ ॥ ೧೮ ॥

॥ ಪದಪಾಠಃ ॥

ದಸ್ಯೂನ್ । ಶಿಮ್ಯೂನ್ । ಚ । ಪುರುಽಹೂತಃ । ಏವೈಃ । ಹತ್ವಾ । ಪೃಥಿವ್ಯಾಂ ।
ಶರ್ವಾ । ನಿ । ಬರ್ಹೀತ್ ।
ಸನತ್ । ಕ್ಷೇತ್ರಂ । ಸಖಿಽಭಿಃ । ಶ್ವಿತ್ನ್ಯೇಭಿಃ । ಸನತ್ । ಸೂರ್ಯಂ । ಸನತ್ ।
ಅಪಃ । ಸುಽವಜ್ರಃ ॥ ೧೮ ॥

ಸಾಯಣಭಾಷ್ಯಂ

ಪುರುಹೂತೋ ಬಹುಭಿರ್ಯಜಮಾನೈರಾಹೂತ ಇಂದ್ರ ಏವೈರ್ಗಮನಶೀಲೈರ್ಮರುದ್ಭಿರ್ಯುಕ್ತಃ ಸನ್ ಪೃಥಿವ್ಯಾಂ ಭೂಮೌ ವರ್ತಮಾನಾನ್ದಸ್ಯೂನುಪಕ್ಷಪಯಿತೄನ್ ಇ್ಛತ್ರೂನ್ ಶಿಮ್ಯೂಂಶ್ಚ ಶಮಯಿತ್ನೂನ್-

ಧಕಾರಿಣೋ ರಾಕ್ಷಸಾಂದೀಕ್ಷ್ಯ ಹತ್ವಾ ಪ್ರಹೃತ್ಯ ತದನಂತರಂ ಶರ್ವಾ ಹಿಂಸಕೇನ ವಜ್ರೇಣ ನಿ ಬರ್ಹೀತ್ । ಅವಧೀತ್ । ನಿಬರ್ಹಯತಿ ವಧಕರ್ಮಾ । ಏವಂ ಶತ್ರೂನ್ನಿರಸ್ಯ ಶ್ವಿತ್ನ್ಯೇಭಿಃ ಶ್ವೇತವರ್ಣೈರಲಂಕಾರೇಣ ದೀಪ್ತಾಂಗೈಃ ಸಖಿಭಿರ್ಮಿತ್ರಭೂತೈರ್ಮರುದ್ಭಿಃ ಸಹ ಕ್ಷೇತ್ರಂ ಶತ್ರೂಣಾಂ ಸ್ವಭೂತಾಂ ಭೂಮಿಂ ಸನತ್ । ಸಮಭಾಕ್ಷೀತ್ । ತಥಾ ವೃತ್ರೇಣ ತಿರೋಹಿತಂ ಸೂರ್ಯಂ ತಸ್ಯ ವೃತ್ರಸ್ಯ ಹನನೇನ ಸನತ್ । ಅಭಜತ । ಪ್ರಾಪ್ತವಾನಿತ್ಯರ್ಥಃ । ತಥಾ ಸುವಜ್ರಃ ಶೋಭನವಜ್ರಯುಕ್ತ ಇಂದ್ರೋ ವೃತ್ರೇಣ ನಿರುದ್ಧಾ ಅಪೋ ವೃಷ್ಟ್ಯುದಕಾನಿ ಸನತ್ । ಸಮಭಜತ ॥ ದಸ್ಯೂನ್ । ದಸು ಉಪಕ್ಷಯೇ । ಯಜಿಮನಿಶುಂಧಿದಸಿಜ-ನಿಭ್ಯೋ ಯುಃ । ವೃಷಾದಿತ್ವಾದಾದ್ಯುದಾತ್ತತ್ವಂ । ಶಿಮ್ಯೂನ್ । ಶಮು ಉಪಶಮೇ । ಶಮಯತಿ ಸರ್ವಂ ತಿರಸ್ಕರೋತೀತಿ ರಾಕ್ಷಸಾದಿಃ ಶಿಮ್ಯುಃ । ಔಣಾದಿಕೋ ಯುಪ್ರತ್ಯಯಃ । ವರ್ಣವ್ಯಾಪತ್ತ್ಯಾಕಾರಸ್ಯೇ-ತ್ವಂ । ಶರ್ವಾ । ಶೄ ಹಿಂಸಾಯಾಂ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ವನಿಪ್ । ಸುಪಾಂ ಸುಲುಗಿತಿ ತೃತೀಯಾಯಾ ಡಾದೇಶಃ । ಸನತ್ । ವನ ಷಣ ಸಂಭಕ್ತೌ । ಲಙಿ ಬಹುಲಂ ಛಂದಸ್ಯಮಾಙ್ಯೋಗೇಽ-ಪೀತ್ಯಡಭಾವಃ । ಶ್ವಿತ್ನ್ಯೇಭಿಃ । ಶ್ವಿತಾ ವರ್ಣೇ । ಔಣಾದಿಕೋ ನಕ್ಪ್ರತ್ಯಯಃ । ಶ್ವಿತ್ನಂ ಶುಕ್ಲವರ್ಣ-ಮರ್ಹಂತೀತಿ ಶ್ವಿತ್ನ್ಯಾಃ । ಛಂದಸಿ ಚೇತಿ ಯಃ । ಸುವಜ್ರಃ । ಆದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪ-ದಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

ಪುರುಹೂತಃ—ಅನೇಕರಿಂದ ಕರೆಯಲ್ಪಡುವ ಇಂದ್ರನು । ಶಿವ್ನೈಃ— ಸಂಚಾರಶೀಲರಾದ ಮರುತ್ತುಗಳೊಡನೆ ಕೂಡಿ । ಪೃಥಿವ್ಯಾಂ—ಭೂಮಿಯಮೇಲೆ ( ಇರತಕ್ಕ ) । ದಸ್ಯೂನ್—ಹಿಂಸಕರಾದ ಶತ್ರುಗಳನ್ನೂ (ದಸ್ಯುಗಳನ್ನೂ) । ಶಿಮ್ಯೂಂಶ್ಚ— ವಧಕಾರಿಗಳಾದ ರಾಕ್ಷಸರನ್ನೂ । ಹತ್ವಾ— ಹೊಡೆದು । ಶರ್ವಾ— ಹಿಂಸೆಯನ್ನುಂಟುಮಾಡುವ ವಜ್ರಾಯುಧದಿಂದ । ನಿಬರ್ಹೀತ್—ಕೊಂದನು. (ಅನಂತರ) । ಶ್ವಿತ್ನ್ಯೇಭಿಃ—ಬಿಳಿಯ ಅಲಂಕಾರಗಳಿಂದ ಪ್ರಕಾಶಿಸುವ ಅವಯವಗಳುಳ್ಳ । ಸಖಿಭಿಃ —.ಮಿತ್ರಭೂತರಾದ ಮರುತ್ತುಗಳೊಡನೆ । ಕ್ಷೇತ್ರಂ—(ಶತ್ರುಗಳ) ಕ್ಷೇತ್ರಗಳನ್ನು । ಸನತ್—ವಿಭಾಗಮಾಡಿದನು । ಸೂರ್ಯಂ—(ವೃತ್ರನಿಂದ ಅಂತರ್ಹಿತನಾದ) ಸೂರ್ಯನನ್ನು । ಸನತ್— ಬಿಡಿಸಿದನು । ಸುವಜ್ರಃ— ಶ್ರೇಷ್ಠವಾದ ವಜ್ರಾಯುಧದಿಂದ ಕೂಡಿದ ಇಂದ್ರನು । ಅಪಃ—ವೃಷ್ಟ್ಯುದಕಗಳನ್ನು । ಸನತ್—ಬಿಡಿಸಿ ಹರಿಸಿದನು ॥

ಭಾವಾರ್ಥ

ಅನೇಕರಿಂದ ಸಹಾಯಕ್ಕಾಗಿ ಕರೆಯಲ್ಪಡುವ ಇಂದ್ರನು ಸಂಚಾರಶೀಲರಾದ ಮರುತ್ತುಗಳೊಡನೆ ಕೂಡಿಕೊಂಡು ಭೂಮಿಯಮೇಲಿರತಕ್ಕ ಸಕಲ ದಸ್ಯುಗಳನ್ನೂ ರಾಕ್ಷಸರನ್ನೂ ಸದೆಬಡಿದು ವಜ್ರಾಯುಧದಿಂದ ಕೊಂದನು. ಮತ್ತು ಬಿಳಿಯ ಅಲಂಕಾರಗಳಿಂದ ಪ್ರಕಾಶಿಸುವ ಅವಯವಗಳುಳ್ಳ ತನ್ನ ಮಿತ್ರರಾದ ಮರುತ್ತುಗಳೊಡನೆ ಶತ್ರುಗಳ ಕ್ಷೇತ್ರವನ್ನು ವಿಭಾಗಮಾಡಿದನು. ವೃತ್ರನಿಂದ ಅಂತರ್ಹಿತನಾದ ಸೂರ್ಯನನ್ನು ಬಿಡಿಸಿದನು. ಮತ್ತು ಶ್ರೇಷ್ಠವಾದ ವಜ್ರಾಯುಧದಿಂದ ಕೂಡಿದ ಇಂದ್ರನು ವೃಷ್ಟ್ಯುದಕಗಳನ್ನು ಬಿಡಿಸಿ ಹರಿಸಿದನು.

## English Translation

Indra, who is invoked by many, attended by the moving (Maruts), having attacked the Dasyus and the Simyus, slew them with his thunderbolt ;

the thunderer then divided the fields with his white-complexioned friends, and rescued the sun and set free the water.

॥ ವಿಶೇಷವಿಷಯಗಳು ॥

**ಪುರುಹೂತಃ—ಬಹುಭಿರ್ಯಜಮಾನೈರಾಹೂತಃ ।** ಅನೇಕ ಯಜ್ಞಕರ್ತರಿಂದ ಕರೆಯಲ್ಪಡುವ ಇಂದ್ರನು.

**ಏವೈಃ**— ಗತ್ಯರ್ಥಕವಾದ ಇಣ್ ಧಾತುವಿನಿಂದ ನಿಷ್ಪನ್ನವಾಗಿ **ಏವ** ಎಂಬ ರೂಪವಾಗುತ್ತದೆ. ಗಮನ ಅಥವಾ ಸಂಚಾರಸ್ವಭಾವವುಳ್ಳ, ಅವರಲ್ಲೂ ಶೀಘ್ರವಾದ ಸಂಚಾರಸ್ವಭಾವವುಳ್ಳ ಎಂದು ಹೇಳುವ ಸಂದರ್ಭದಲ್ಲಿ ಈ ವಿಶೇಷಣವನ್ನು ಅನೇಕ ಕಡೆ ಉಪಯೋಗಿಸಿದೆ. ಮುಖ್ಯವಾಗಿ ಮರುತ್ತುಗಳಿಗೆ ವಿಶೇಷಣವಾಗಿ ಉಪಯೋಗಿಸಿರುವುದನ್ನೂ ಈ ವಿಶೇಷಣವು ಮರುತ್ತುಗಳ ವೈಶಿಷ್ಟ್ಯವನ್ನು ಯಾವ ರೀತಿ ತಿಳಿಸುತ್ತದೆಂಬುದನ್ನೂ ಇದೇ ಸೂಕ್ತದ ಎರಡನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. ಇಲ್ಲಿಯೂ ಸಹ ಏವೈಃ ಎಂದರೆ **ಗಮನಶೀಲೈರ್ಮರುದ್ಭಿಃ** ಎಂದರ್ಥ. ಸ್ತೋತ್ರಪರ್ಯಾಯವಾಗಿಯೂ, ಅಶ್ವಪರ್ಯಾಯವಾಗಿಯೂ, ಕ್ರತುಪರ್ಯಾಯವಾಗಿಯೂ ಹೀಗೆಯೇ ಗಮನಾರ್ಥವನ್ನು ತೋರಿಸುವ ಸಂದರ್ಭಗಳಲ್ಲೆಲ್ಲಾ, ಉಪಯೋಗಿಸಿರುವುದರಿಂದ ಈ ಪದಕ್ಕೆ ಸಂದರ್ಭಾನುಸಾರವಾಗಿಯೇ ಅರ್ಥವನ್ನು ಮಾಡಬೇಕು. ಉದಾಹರಣೆಗೆ—

**ಸನಾದ್ದಿವಂ ಪರಿ ಭೂಮಾ ವಿರೂಪೇ ಪುನರ್ಭುವಾ ಯುವತೀ ಸ್ವೇಭಿರೇವೈಃ ।**
(ಋ. ಸಂ. ೧-೬೨-೮.)

ಎಂಬ ಋಕ್ಕಿನಲ್ಲಿ **ಏವೈಃ ಗಮನೈಃ ।** ತಮ್ಮ ಸಂಚಾರಗಳಿಂದ ಎಂದು ಸಾಧಾರಣವಾದ ಕ್ರಿಯಾವಿಶೇಷಣವಾಗಿ ರಾತ್ರ್ಯುಷಸ್ಸುಗಳ ನಿತ್ಯಸಂಚಾರವನ್ನು ತಿಳಿಸುತ್ತದೆ.

**ಭಜಂತ ವಿಶ್ವೇ ದೇವತ್ವಂ ನಾಮ ಋತಂ ಸಪಂತೋ ಅಮೃತಮೇವೈಃ ।**
(ಋ. ಸಂ. ೧-೬೮-೪)

ಈ ಋಕ್ಕಿನಲ್ಲಿ ಏವೈಃ ಎನ್ನುವುದಕ್ಕೆ **ತ್ವಾಂ ಗಂತೃಭಿಸ್ತೋತ್ರೈಃ** ಎಂದ ಸ್ತೋತ್ರಪರ್ಯಾಯವಾಗಿದೆ.

**ಉಪ ಯಾಮುವಃ ಶರಣಂ ಗಮೇಯಂ ಶೂರೋ ನಾಜ್ಮ ಪತಯದ್ಭಿರೇವೈಃ ।**
(ಋ. ಸಂ. ೧-೧೫೮-೩)

ಎಂಬ ಋಕ್ಕಿನಲ್ಲಿ ಏವೈಃ **ಅಶ್ವೈಃ** ಎಂದು ಅಶ್ವಪರ್ಯಾಯವಾಗಿದೆ.

**ಸ ಸೂರ್ಯ ಪ್ರತಿ ಪುರೋ ನ ಉದ್ಗಾ ಏಭಿಃ ಸ್ತೋಮೇಭಿರೇತಶೇಭಿರೇವೈಃ ।**
( ಋ. ಸಂ. ೭-೬೨-೨ )

ಇಲ್ಲಿ ಏವೈಃ ಎಂಬುದಕ್ಕೆ ಸಾಯಣರು ಅಶ್ವೈಃ ಎಂದು ವ್ಯಾಖ್ಯಾನಮಾಡಿದರೂ ಸಹ, ಅಲ್ಲಿ ಅನಿಶ್ಚಿತವಾದ ಮನಸ್ಸನ್ನು ತೋರಿಸಿದ್ದಾರೆ. ಇಲ್ಲಿ ಸ್ತೋಮೇಭಿಃ ಎಂಬುದಕ್ಕೆ ವಿಶೇಷಣವಾಗುವುದು ಸಹಜವಾಗಿರುವುದರಿಂದ

ಸ್ತೋತ್ರಪರ್ಯಾಯವಾಗಿಯೇ ಇದೆ. ಪ್ರಕೃತವಾದ ಈ ಋಕ್ಕಿನಲ್ಲಿ ಮಾತ್ರ ಯಾವಾಗಲೂ ಸಂಚಾರಸ್ವಭಾವವುಳ್ಳವರೂ, ಇಂದ್ರನ ಸಖರೂ ಆದ **ಮರುತ್ತುಗಳೊಡನೆ** ಎಂದರ್ಥ.

**ದಸ್ಯೂನ್—ದಸ್ಯು**ಶಬ್ದಕ್ಕೆ ಉಪಕ್ಷಯಕಾರಿಗಳಾದ ರಾಕ್ಷಸರೆಂದೂ, ಕರ್ಮಹೀನರಾದ ಮಾನವರೆಂದೂ ಬೇರೆ ಬೇರೆ ಅರ್ಥಗಳಾಗುತ್ತದೆಂದು ಈ ಪದದ ನಿರ್ವಚನವನ್ನು ಹಿಂದೆ ಈ ಸೂಕ್ತದ ೧೨ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ತಿಳಿಸಿದೆ. ಇಲ್ಲಿ **ಉಪಕ್ಷಪಯಿತೄನ್ ಶತ್ರೂನ್ ।** ಉಪಕ್ಷಯಕಾರಿಗಳಾದ ಶತ್ರುಗಳನ್ನು ಎಂದರ್ಥ.

**ಶಿಮ್ಯೂನ್ಶ್ಚ—ಶಮಯಿತೄನ್, ವಧಕಾರಿಣಃ ರಾಕ್ಷಸಾಂಶ್ಚ ।** ವಧಕಾರಿಗಳಾದ ರಾಕ್ಷಸರನ್ನು, ಎಂದು **ದಸ್ಯು ಶಿಮ್ಯು** ಎಂಬ ಎರಡು ವಿಧವಾದ ಹಿಂಸಕರಿಗೂ ವ್ಯತ್ಯಾಸವನ್ನು ತೋರಿಸಿದೆ. ಎರಡು ಪದಗಳಿಗೂ ಶತ್ರುಗಳೆಂಬ ಒಟ್ಟಿನ ಅರ್ಥವು ಬಂದರೂ ಸಹ ಇಲ್ಲಿ ಸೂಕ್ಷ್ಮವಾದ ವ್ಯತ್ಯಾಸವನ್ನು ಹೇಳಿದೆ. ಶಕ್ತ್ಯರ್ಥವನ್ನು ಕೊಡುವ **ಶಿಮ್** ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ ಮೇಲೆ ಬಿದ್ದು ಹಿಂಸಿಸುವ ಶಕ್ತಿಯುಳ್ಳ ಶತ್ರುಗಳೆಂದು ಅರ್ಥ. ಈ ಎರಡು ವಿಧವಾದ ಹಿಂಸಕರನ್ನೂ ನಾಶಮಾಡು ಎಂದು ಇಂದ್ರನನ್ನು ಪ್ರಾರ್ಥಿಸಿದೆ. ಈ ಪದವನ್ನು ಇಲ್ಲಿ ಉಪಯೋಗಿಸಿರುವಂತೆಯೇ,

**ಶರ್ಧಂತಂ ಶಿಮ್ಯುಮುಚಥಸ್ಯ ನವ್ಯಃ ಶಾಪಂ ಸಿಂಧೂನಾಮಕೃಣೋದಶಸ್ತೀಃ ।**
(ಋ. ಸಂ. ೭-೧೮-೫)

ಎಂಬ ಋಕ್ಕಿನಲ್ಲಿಯೂ **ಬಾಧಮಾನ** ಎಂಬರ್ಥದಲ್ಲಿಯೇ ಉಪಯೋಗಿಸಿದೆ.

**ಶರ್ವಾ—ಶೃಣಾತಿ ಶತ್ರೂನನೇತಿ ಶರುರ್ವಜ್ರಃ ।** ಇದರಿಂದ ಶತ್ರುಗಳನ್ನು ಹಿಂಸಿಸಿ ನಾಶಮಾಡುತ್ತಾನಾದ್ದರಿಂದ **ವಜ್ರಕ್ಕೆ** ಶರುವೆಂದು ಹೆಸರು **ಶರ್ವಾ** ಎಂದರೆ ವಜ್ರಾಯುಧದಿಂದ ಎಂದು ಸಾಮಾನ್ಯವಾಗಿ ಆದರೂ ಸಹ **ಶರು**ವೆಂದರೆ ವಜ್ರಾಯುಧವೇ ಆಗಬೇಕೆಂಬ ನಿಯಮವಿಲ್ಲ.

**ಯಃ ಶಶ್ವತೋ ಮಹ್ಯೇನೋ ದಧಾನಾನಮನ್ಯಮಾನಾಞ್ಛರ್ವಾ ಜಘಾನ ।**
(ಋ. ಸಂ. ೨-೧೨-೧೦)

**ಯುವಂ ತಾ ಇಂದ್ರಾವರುಣಾವಮಿತ್ರಾನ್ ಹತಂ ಪರಾಚಃ ಶರ್ವಾ ವಿಷೂಚಃ ।**
(ಋ. ಸಂ. ೭-೮೩-೨)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನಿಗೆ ಸಂಬಂಧವಾದ ಆಯುಧವಾದ್ದರಿಂದ **ಶರು**ವೆಂದರೆ ವಜ್ರಾಯುಧವೆಂದಾಗುತ್ತದೆ. ಆದರೆ,

**ಆರೇ ಸಾ ವಃ ಸುದಾನವೋ ಮರುತ ಋಂಜತೀ ಶರುಃ ।**
(ಋ. ಸಂ. ೧-೧೭೨-೨)

ಇತ್ಯಾದಿ ಸ್ಥಳಗಳಲ್ಲಿ ಮರುತ್ತುಗಳಿಗೂ ಇತರ ದೇವತೆಗಳಿಗೂ ಸಂಬಂಧಿಸಿರುವುದರಿಂದ ಶತ್ರುಹಿಂಸಕವಾದ ಆಯುಧವೆಂದು ಮಾತ್ರ ಅರ್ಥ.

**ಶ್ವಿತ್ನ್ಯೇಭಿಃ**—ಶ್ವೇತವರ್ಣೈರಲಂಕಾರೇಣ ದೀಪ್ತಾಂಗೈಃ। ಬಿಳಿಯ ಅಲಂಕಾರಗಳಿಂದ ಪ್ರಕಾಶಿಸುವ ಅವಯವಗಳಿಂದ ಕೂಡಿದ ಮರುತ್ತುಗಳೊಡನೆ ಎಂದರ್ಥ.

ಇಂತಹ ಸಖಿಗಳಾದ ಮರುತ್ತುಗಳೊಡನೆ ಕೂಡಿದ ಇಂದ್ರನು ಸೂರ್ಯನನ್ನು ಆವರಕನಾದ ಶತ್ರುವಿನಿಂದ ಬಿಡಿಸಿ ತೇಜಸ್ಸನ್ನು ಹರಡುವಂತೆ ಮಾಡಿದನು. ವೃಷ್ಟಿಯನ್ನು ಸುರಿಸಿ ಲೋಕಕ್ಕೆ ಉದಕವು ದೊರೆಯುವಂತೆ ಮಾಡಿದನು.

ವ್ಯಾಕರಣಪ್ರಕ್ರಿಯಾ

**ದಸ್ಯೂನ್**—ದಸು ಉಪಕ್ಷಯೇ ಧಾತು. **ಯಜಿ ಮನಿ ಶುನ್ಧಿ ದಸಿ ಜನಿಭ್ಯೋ ಯುಃ**—(ಉ. ಸೂ. ೩-೨೦) ಎಂಬುದರಿಂದ ಇದಕ್ಕೆ ಯು ಪ್ರತ್ಯಯ. ದಸ್ಯು ಎಂದು ರೂಪವಾಗುತ್ತದೆ. ಪ್ರತ್ಯಯಸ್ವರವು ಪ್ರಾಪ್ತವಾದರೆ **ವೃಷಾದೀನಾಂ ಚ**—(ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಶಿಮ್ಯೂನ್**—ಶಮು ಉಪಶಮೇ ಧಾತು. ಶಮಯತಿ ಸರ್ವಂ ತಿರಸ್ಕರೋತಿ ಇತಿ ರಾಕ್ಷಸಾದಿಃ ಶಿಮ್ಯುಃ ಇದಕ್ಕೆ ಉಣಾದಿಸಿದ್ಧವಾದ ಯುನ್ ಪ್ರತ್ಯಯ. ಛಂದಸ್ಸಿನಲ್ಲಿ ವರ್ಣವ್ಯತ್ಯಯದಿಂದ ಧಾತುವಿನ ಅಕಾರಕ್ಕೆ ಇಕಾರಾದೇಶ ಬರುತ್ತದೆ. **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಹತ್ವಾ**—ಹನ ಹಿಂಸಾಗತ್ಯೋಃ ಧಾತು. **ಸಮಾನಕರ್ತೃಕಯೋಃ ಪೂರ್ವಕಾಲೇ ಕ್ತ್ವಾ**—(ಪಾ. ಸೂ. ೩-೪-೨೧) ಎಂಬುದರಿಂದ ಇದಕ್ಕೆ ಕ್ತ್ವಾ ಪ್ರತ್ಯಯ. ಕಿತ್ತಾದುದರಿಂದ ಇದನ್ನು ನಿಮಿತ್ತೀಕರಿಸಿ **ಅನುದಾತ್ತೋಪದೇಶ**—(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ನಕಾರಕ್ಕೆ ಲೋಪ.

**ಪೃಥಿವ್ಯಾಮ್**—**ಉದಾತ್ತಯಣೋ ಹಲ್ಪೂರ್ವಾತ್**—(ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಶರ್ವಾ**—ಶೄ ಹಿಂಸಾಯಾಮ್. ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ**—(ಪಾ. ಸೂ. ೩-೨-೭೫) ಎಂಬುದರಿಂದ ವನಿಪ್ ಪ್ರತ್ಯಯ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಶರ್ವನ್ ಶಬ್ದವಾಗುತ್ತದೆ. ಇದಕ್ಕೆ ತೃತೀಯಾವಿಭಕ್ತಿ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಇದಕ್ಕೆ ಡಾದೇಶ. ಡಿತ್ತಾದುದರಿಂದ ಪ್ರಾತಿಪದಿಕದ ಟಿಗೆ (ಅನ್) ಲೋಪ. ಶರ್ವಾ ಎಂದು ರೂಪವಾಗುತ್ತದೆ. ವನಿಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ಸನತ್**—ವನ ಷಣ ಸಂಭಕ್ತೌ ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಇತಶ್ಚ—ಎಂಬುದರಿಂದ ಇಕಾರಲೋಪ. ಶಪ್ ವಿಕರಣ. ಧಾತ್ವಾದಿಗೆ ಸತ್ವ. **ಬಹುಲಂ ಛಂದಸ್ಯಮಾಙ್ಯೋಗೇಽಪಿ**—(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಶ್ವಿತ್ನ್ಯೇಭಿಃ**—ಶ್ವಿತಾ ವರ್ಣೇ. ಧಾತು. ಇದಕ್ಕೆ ಉಣಾದಿಸಿದ್ಧವಾದ ನಕ್ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಶ್ವಿತ್ನ ಎಂದು ರೂಪವಾಗುತ್ತದೆ. ಶ್ವಿತ್ನಂ ಶುಕ್ಲವರ್ಣಮರ್ಹಂತೀತಿ ಶ್ವಿತ್ನ್ಯಾಃ ಅರ್ಹಾರ್ಥದಲ್ಲಿ **ಛಂದಸಿ ಚ**—(ಪಾ. ಸೂ ೫-೧-೬೭) ಎಂಬುದರಿಂದ ಯ ಪ್ರತ್ಯಯ. **ಯಸ್ಯೇತಿ ಚ**—ಸೂತ್ರದಿಂದ ಯ ನಿಮಿತ್ತವಾಗಿ ಅಕಾರಲೋಪ ಶ್ವಿತ್ನ್ಯ ಎಂದು ರೂಪವಾಗುತ್ತದೆ. ಇದಕ್ಕೆ ಭಿಸ್ ಪರವಾದಾಗ **ಬಹುಲಂ ಛಂದಸಿ** (ಪಾ. ಸೂ. ೭-೧-೧೦) ಎಂಬುದರಿಂದ ಅದಕ್ಕೆ ಐಸ್ ಬರುವುದಿಲ್ಲ. **ಬಹುವಚನೇ ಝಲ್ಯೇತ್**—ಎಂಬುದರಿಂದ ಏತ್ವ.

**ಸುವಜ್ರಃ**—ಶೋಭನಃ ವಜ್ರಃ ಯಸ್ಯ ಸಃ ಸುವಜ್ರಃ. ಸುಸ್ವರವು ಪ್ರಾಪ್ತವಾದರೆ **ಆದ್ಯುದಾತ್ತಂ ದ್ವ್ಯಚ್ ಛಂದಸಿ**—(ಪಾ. ಸೂ. ೬-೨-೧೧೯) ಎಂಬುದರಿಂದ ಉತ್ತರಪದವು ಎರಡು ಅಚ್‌ಗಳಿಂದ ಕೂಡಿರುವುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ. ಪ್ರಥಮಾಏಕವಚನಾಂತರೂಪ. ॥ ೧೮ ॥



ಸಂಹಿತಾಪಾಠಃ

ವಿಶ್ವಾಹೇಂದ್ರೋ ಅಧಿವಕ್ತಾ ನೋ ಅಸ್ತ್ವಪರಿಹ್ವೃತಾಃ ಸನು-
ಯಾಮ ವಾಜಂ ।
ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ
ಪೃಥಿವೀ ಉತ ದ್ಯೌಃ ॥ ೧೯ ॥

ಪದಪಾಠಃ

ವಿಶ್ವಾಹಾ । ಇಂದ್ರಃ । ಅಧಿಽವಕ್ತಾ । ನಃ । ಅಸ್ತು । ಅಪರಿಽಹ್ವೃತಾಃ । ಸನು-
ಯಾಮ । ವಾಜಂ ।

ತತ್ । ನಃ । ಮಿತ್ರಃ । ವರುಣಃ । ಮಮಹಂತಾಂ । ಅದಿತಿಃ । ಸಿಂಧುಃ । ಪೃಥಿ-

ವೀ । ಉತ । ದ್ಯೌಃ ॥ ೧೯ ॥

ಸಾಯಣಭಾಷ್ಯಂ

ವಿಶ್ವಾಹಾ ಸರ್ವಕಾಲಂ ನೋಽಸ್ಮಾಕಮಿಂದ್ರೋಽಧಿವಕ್ತಾಸ್ತು । ಅಧಿವಚನಂ ಪಕ್ಷಪಾತೇನ ವಚನಂ । ಯಥೋಕ್ತಂ । ಬ್ರಾಹ್ಮಣಾಯಾಧಿಬ್ರೂಯಾತ್ । ತೈ. ಸಂ. ೨-೫-೧೧-೯ । ಇತಿ । ಸರ್ವದಾಸ್ಮಾಕಮಿಂದ್ರಃ ಪಕ್ಷಪಾತವಚನಯುಕ್ತೋ ಭವತು । ವಯಂ ಚಾಪರಿಹ್ವೃತಾ ಅಕುಟಿಲಗತಯಃ ಸಂತೋ ವಾಜಂ ಹವಿರ್ಲಕ್ಷಣಮನ್ನಂ ಸನುಯಾಮ । ಸಂಭಜಾಮಹೇ । ಯದನೇನ ಸೂಕ್ತೇನಾಸ್ಮಾಭಿಃ ಪ್ರಾರ್ಥಿತಂ ತನ್ಮಿತ್ರಾದಯೋ ಮಮಹಂತಾಂ । ಪೂಜಿತಂ ಕುರ್ವಂತು ॥ ವಿಶ್ವಾಹಾ । ವಿಶ್ವಾನ್ಯಹಾನಿ ವಿಶ್ವಾಹಾನಿ । ಅತ್ಯಂತಸಂಯೋಗೇ ದ್ವಿತೀಯಾ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಉಪಧಾದೀರ್ಘತ್ವಂ ನಲೋಪಃ । ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ । ಅಪರಿಹ್ವೃತಾಃ । ಹ್ವೃ ಕೌಟಿಲ್ಯೇ । ನಿಷ್ಠಾಯಾಮಪರಿಹ್ವೃತಾಶ್ಚ । ಪಾ. ೭-೨-೩೨ । ಇತಿ ನಿಪಾತನಾತ್ ಹ್ವ್ರುಭಾವಾಭಾವಃ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ । ಸನುಯಾಮ । ಷಣು ದಾನೇ । ಲಿಙಿ ತನಾದಿತ್ವಾದುಪ್ರತ್ಯಯಃ । ವನ ಷಣ ಸಂಭಕ್ತಾವಿತ್ಯಸ್ಮಾದ್ವಾ ವ್ಯತ್ಯಯೇನೋಪ್ರತ್ಯಯಃ ॥

ಪ್ರತಿಪದಾರ್ಥ

ವಿಶ್ವಾಹಾ—ಸರ್ವಕಾಲದಲ್ಲಿಯೂ । ನಃ—ನಮಗೆ । ಇಂದ್ರಃ—ಇಂದ್ರನು । ಅಧಿವಕ್ತಾ—ಅಭಿಮಾನ ವಚನವುಳ್ಳವನಾಗಿ । ಅಸ್ತು—ಆಗಿರಲಿ (ನಾವೂ ಕೂಡ) । ಅಪರಿಹ್ವೃತಾಃ—ವಕ್ರವಾದ ಮಾರ್ಗವನ್ನು ಬಿಟ್ಟವರಾಗಿ (ಋಜುವಾದ ಮಾರ್ಗದಲ್ಲಿದ್ದುಕೊಂಡು) ವಾಜಂ—(ಪ್ರಭೂತವಾದ) ಅನ್ನವನ್ನು । ಸನುಯಾಮ—ಅನುಭವಿಸೋಣ । ನಃ—ನಮ್ಮ । ತತ್—ಪ್ರಾರ್ಥಿತವಾದ ಇಷ್ಟಾರ್ಥವನ್ನು । ಮಿತ್ರಃ—ಮಿತ್ರನೂ । ವರುಣಃ—ವರುಣನೂ । ಅದಿತಿಃ—ಅದಿತಿಯೂ । ಸಿಂಧುಃ—ಸಾಗರಾಧಿದೇವಿಯೂ । ಪೃಥಿವೀ—ಪೃಥ್ವಿಯೂ । ಉತ—ಮತ್ತು । ದ್ಯೌಃ—ದ್ಯುಲೋಕವೂ ಸಹ । ಮಮಹಂತಾಂ—ಸಂರಕ್ಷಿಸಲಿ.

ಭಾವಾರ್ಥ

ಇಂದ್ರನು ನಮಗೆ ಸರ್ವಕಾಲದಲ್ಲಿಯೂ ಅಭಿಮಾನ ವಚನವುಳ್ಳವನಾಗಲಿ. ನಾವೂ ಕೂಡ ಯಾವಾಗಲೂ ಋಜುಮಾರ್ಗದಲ್ಲಿದ್ದುಕೊಂಡು ಪ್ರಭೂತವಾದ ಅನ್ನವನ್ನು ಅನುಭವಿಸೋಣ. ನಮ್ಮ ಪ್ರಾರ್ಥಿತವಾದ ಇಷ್ಟಾರ್ಥವನ್ನು ಮಿತ್ರನೂ, ವರುಣನೂ, ಅದಿತಿಯೂ, ಸಾಗರಾಧಿದೇವತೆಯೂ, ಪೃಥ್ವಿಯೂ ಮತ್ತು ದ್ಯುಲೋಕವೂ ಸಹ ಸಂರಕ್ಷಿಸಲಿ.

English Translation

May Indra be daily our vindicator, and may we, with undiverted course, enjoy (abundant) food ; and may Mitra, Varuna, Aditi,—ocean, earth, and heaven, preserve it to us.

ವಿಶೇಷವಿಷಯಗಳು

**ಅಧಿವಕ್ತಾ—ಅಧಿವಚನಂ ಪಕ್ಷಪಾತೇನ ವಚನಂ** । ಅಭಿಮಾನದಿಂದ ಕೂಡಿದ ಮಾತುಳ್ಳವನಾಗಿ ಎಂದು ಇಂದ್ರನ ಅಭಿಮಾನವನ್ನು ಅಪೇಕ್ಷಿಸಿದೆ. ಆದರೆ ಇಂದ್ರನ ಈ ಪಕ್ಷಪಾತವನ್ನೂ ಅಭಿಮಾನವನ್ನೂ ಸಂಪಾದಿಸಬೇಕಾದರೆ, ನೈತಿಕವಾದ ಋಜುಮಾರ್ಗದಲ್ಲಿದ್ದವರಿಗೆ ಮಾತ್ರ ಸಾಧ್ಯವೆಂದರಿತು, **ಅಪರಿಹ್ವೃತಾಃ** ಎಂಬ ವಿಶೇಷಣದಿಂದ ವ್ಯವಹಾರ ಶುದ್ಧಿಯನ್ನೂ ತೋರಿಸಿದೆ.

**ಅಪರಿಹ್ವೃತಾಃ—ಅಕುಟಿಲಗತಯಃ ಸಂತಃ** । ವಕ್ರವಾದ ಮಾರ್ಗವನ್ನು ಬಿಟ್ಟವರಾಗಿ ಎಂದರೆ ಋಜುವಾದ ಮಾರ್ಗದಲ್ಲಿದ್ದುಕೊಂಡವರಾಗಿ ಎಂದರ್ಥ. ಅಥವಾ ಸ್ಕಂದಸ್ವಾಂದಸ್ವಾಮಿಗಳು ವಿವರಿಸುವಂತೆ **ಸಾಮರ್ಥ್ಯಾದ್ಧಿಂಸಾರ್ಥಃ । ಅಹಿಂಸಿತಾಃ ಕೇನಚಿತ್** ಯಾರಿಂದಲೂ ಹಿಂಸಿಸಲ್ಪಡದವರಾಗಿ ಎಂದೂ ಆಗಬಹುದು. ಶತ್ರುಪೀಡೆಯು ಅತ್ಯಧಿಕವಾಗಿದ್ದುದರಿಂದ, ಅನ್ನಾದಿಗಳು ಇಂದ್ರದತ್ತವಾದರೂ ಸಹ ಶತ್ರುಗಳು ಅಪಹರಿಸುವ ಸಂಭವವಿದ್ದುದರಿಂದ ಶತ್ರುಗಳಿಂದ ಅಹಿಂಸಿತರಾಗಿ ಎಂದೂ ಪ್ರಾರ್ಥನೆಯಿರಬಹುದು. ಈ ಪದಕ್ಕೆ ಬೇರೆ ಕಡೆಗಳಲ್ಲಿ ಸಾಯಣರೂ ಸಹ ಈ ಎರಡನೆಯ ಅರ್ಥವನ್ನೇ ಮಾಡಿದ್ದಾರೆ. ಉದಾಹರಣೆಗೆ—

**ಆ ಯೋ ವಿವಾಯ ಸಖ್ಯಾ ಸಖಿಭ್ಯೋऽಪರಿಹ್ವೃತೋ ಅತ್ಯೋ ನ ಸಪ್ತಿಃ ।**
(ಋ. ಸಂ. ೧೦-೬-೨)

**ಸಮ್ರಾಜೋ ಯೇ ಸುವೃಧೋ ಯಜ್ಞಮಾಯಯುರಪರಿಹ್ವೃತಾ ದಧಿರೇ ದಿವಿ ಕ್ಷಯಂ ।**
(ಋ. ಸಂ. ೧೦-೬೩-೫

ಇತ್ಯಾದಿ ಋಕ್ಕುಗಳಲ್ಲಿ ಉಪಯೋಗಿಸುವ **ಅಪರಿಹ್ವೃತ** ಶಬ್ದಕ್ಕೆ **ಕೇನಚಿದಪ್ಯಹಿಂಸಿತಾಃ** । ಯಾರಿಂದಲೂ ಹಿಂಸಸಲ್ಪಡದವರಾಗಿ ಎಂದೇ ಸಾಯಣರೂ ಅರ್ಥಮಾಡಿದ್ದಾರೆ. ಹಾಗೆಯೇ ಈ ಋಕ್ಕಿನಲ್ಲಿಯೂ ಅರ್ಥವಾಗಬಹುದು.

**ವಾಜಂ ಸನುಯಾಮ**—ಅನ್ನವನ್ನು ಅನುಭವಿಸೋಣ ; ಹಿಂಸೆಯಿಲ್ಲದೇ ಅನ್ನವನ್ನು ಅನುಭವಿಸುವಂತೆ ಮಾಡಬೇಕೆಂದು ಇಂದ್ರನನ್ನು ಪ್ರಾರ್ಥಿಸಿದೆ.

**ತನ್ನೋ ಮಿತ್ರೋ ವರುಣಃ**—ಸೂಕ್ತದ ಕೊನೆಯ ಬಹುದೇವತಾಕವಾದ ಈ ಪ್ರಾರ್ಥನೆಯು ಉಪಸಂಹಾರರೂಪದಲ್ಲಿ ಕುತ್ಸಋಷಿಯ ಕೃತಿವೈಶಿಷ್ಟ್ಯವನ್ನು ತೋರಿಸುತ್ತದೆಂದು ಹಿಂದೆ ೯೪ನೇ ಸೂಕ್ತದ ಕೊನೆಯ ಋಕ್ಕಿನ ವಿವರಣೆಯಲ್ಲಿ ಹೇಳಿದೆ. ಈ ಶೈಲಿಯು ಇತರ ಋಷಿಗಳ ಕೃತಿಗಳಲ್ಲಿ ಕಂಡುಬಂದರೂ ಸಹ ಕುತ್ಸಋಷಿಯ

ವೈಶಿಷ್ಟ್ಯವು ಭರದ್ವಾಜಾದಿ ಇತರ ಋಷಿಗಳಲ್ಲಿಲ್ಲ ಎಂಬ ವಿಷಯವನ್ನು ಸಹ ಬೃಹದ್ದೇವತಾವಾಕ್ಯವನ್ನುದಹರಿಸಿ ಹಿಂದೆ ತಿಳಿಸಿದೆ. (ಬೃ. ದೇ. ೩-೧೨೮).

### ವ್ಯಾಕರಣಪ್ರಕ್ರಿಯಾ

**ವಿಶ್ವಾಹಾ**—ವಿಶ್ವಾನಿ ಸರ್ವಾಣಿ ಅಹಾನಿ ವಿಶ್ವಾಹಾನಿ. ಕ್ರಿಯಾವಲ್ಲಿ ಅತ್ಯಂತ ಸಂಯೋಗವು ತೋರುವುದರಿಂದ **ಕಾಲಾಧ್ವನೋರತ್ಯಂತಸಂಯೋಗೇ** (ಪಾ. ಸೂ. ೨-೩-೫) ಎಂಬುದರಿಂದ ದ್ವಿತೀಯಾ ಬರುತ್ತದೆ. ದ್ವಿತೀಯಾವಲ್ಲಿಯೂ ವಿಶ್ವಾಹಾನಿ ಎಂದು ರೂಪವಾದಾಗ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦)ಎಂಬುದರಿಂದ ಶಿಗೆ ಲೋಪ. **ಸರ್ವನಾಮಸ್ಥಾನೇಚಾಸಂಬುದ್ಧೌ** ಎಂಬುದರಿಂದ ಉಪಧಾದೀರ್ಘ. **ನಲೋಪಃ ಪ್ರಾತಿಪದಿಕಾಂತಸ್ಯ**—ಎಂಬುದರಿಂದ ನಕಾರಲೋಪ. ಮರುದ್ವೃಧಾದಿಯಲ್ಲಿ ಸೇರಿರುವುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ.

**ಅಧಿವಕ್ತಾ**—ವಚ ಪರಿಭಾಷಣೇ ಧಾತು. ಇದಕ್ಕೆ ಕರ್ತರಿಯಲ್ಲಿ ತೃಚ್ ಪ್ರತ್ಯಯ. **ಚೋಃ ಕುಃ** ಎಂಬುದರಿಂದ ಧಾತುವಿನ ಚಕಾರಕ್ಕೆ ಕುತ್ವ. **ಗತಿಕಾರಕೋಪಪದಾತ್ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಪ್ರಥಮಾಏಕವಚನಾಂತರೂಪ.

**ಅಸ್ತು**—ಅಸ ಭುವಿ ಧಾತು. ಲೋಟ್ ಪ್ರಥಮಪುರುಷ ಏಕವಚನರೂಪ. ಅತಿಜಂತಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಪರಿಹ್ವೃತಾಃ**—ಹ್ವೃ ಕೌಟಿಲ್ಯೇ ಧಾತು. ಇದಕ್ಕೆ **ನಿಷ್ಠಾ**—(ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. ಇದು ಪರವಾದಾಗ **ಅಪರಿಹ್ವೃತಾಶ್ಚ**—(ಪಾ. ಸೂ. ೭-೨-೩೨) ಎಂಬುದರಿಂದ ನಿಪಾತವಾಗಿರುವುದರಿಂದ ಹ್ರುಭಾವ ಬರುವುದಿಲ್ಲ. ಸಮಾಸದಲ್ಲಿ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಸನುಯಾಮ**—ಷಣು ದಾನೇ ಧಾತು. **ಧಾತ್ವಾದೇಃ ಷಃ ಸಃ**—(ಪಾ. ಸೂ. ೬-೧-೬೪) ಎಂಬುದರಿಂದ ಆದಿಗೆ ಸತ್ವ. ಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂಙಿತಃ**—(ಪಾ. ಸೂ. ೩-೪-೯೯) ಎಂಬುದರಿಂದ ಸಕಾರಲೋಪ. ಲಿಙಿಗೆ ಯಾಸುಟಾಗಮ. **ತನಾದಿಕೃಞ್ಭ್ಯ ಉಃ**—(ಪಾ. ಸೂ. ೩-೧-೭೯) ಎಂಬುದರಿಂದ ಉ ವಿಕರಣ. ಸನುಯಾಮ ಎಂದು ರೂಪವಾಗುತ್ತದೆ. ಅಥವಾ ವನ ಷಣ ಸಂಭಕ್ತೌ ಧಾತು. **ವ್ಯತ್ಯಯೋ ಬಹುಲಮ್**—ಎಂಬುದರಿಂದ ಶಪಿಗೆ ಉ ವಿಕರಣ ಬರುತ್ತದೆ. ಹಿಂದಿನಂತೆಯೇ ರೂಪಸಿದ್ಧಿಯಾಗುತ್ತದೆ. ಅತಿಜಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ.

**ಮಮಹಂತಾಮ್**—೯೯ ನೇ ಸೂಕ್ತದಲ್ಲಿ ವ್ಯಾಖ್ಯಾತವಾಗಿದೆ.

೧೦೦ ನೇ ಸೂಕ್ತವು ಸಮಾಪ್ತವು.



# ನೂರೊಂದನೆಯ ಸೂಕ್ತವು

---

**ಪ್ರ ಮಂದಿನ ಇತ್ಯೇಕಾದಶರ್ಚಮಷ್ಟಮಂ ಸೂಕ್ತಮಾಂಗಿರಸಸ್ಯ ಕುತ್ಸಸ್ಯಾರ್ಷಂ । ಅಷ್ಟಮ್ಯಾದ್ಯಾಶ್ಚತಸ್ರಸ್ತ್ರಿಷ್ಟುಭಃ ಶಿಷ್ಟಾಃ ಸಪ್ತ ಜಗತ್ಯಃ । ಇಂದ್ರೋ ದೇವತಾ । ತಥಾ ಚಾನುಕ್ರಾಂತಂ । ಪ್ರ ಮಂದಿನ ಏಕಾದಶ ಕುತ್ಸಶ್ಚತುಸ್ತ್ರಿಷ್ಟುಬಂತಮಾದ್ಯಾ ಗರ್ಭಸ್ರಾವಿಣ್ಯುಪನಿಷತ್ ॥ ದಶರಾತ್ರಸ್ಯ ನವಮೇಽಹನಿ ಮರುತ್ವತೀಯ ಏತತ್ಸೂಕ್ತಂ । ವಿಶ್ವಜಿತ ಇತಿ ಖಂಡೇ ಸೂತ್ರಿತಂ । ಪ್ರ ಮಂದಿನ ಇಮಾ ಉ ತ್ವೇತಿ ಮರುತ್ವತೀಯಂ । ಆ. ೮-೭ । ಇತಿ ।**

ಅನುವಾದವು— **ಪ್ರ ಮಂದಿನೇ** ಎಂಬ ಈ ಸೂಕ್ತವು ಹದಿನೈದನೆಯ ಅನುವಾಕವಲ್ಲಿ ಎಂಟನೆಯ ಸೂಕ್ತವು. ಇವರಲ್ಲಿ ಹನ್ನೊಂದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಆಂಗಿರಸ ಪುತ್ರನಾದ ಕುತ್ಸನು ಋಷಿಯು. ಎಂಟರಿಂದ ನಾಲ್ಕು ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು. ಉಳಿದ ಏಳು ಋಕ್ಕುಗಳು ಜಗತೀಛಂದಸ್ಸಿನವು. ಇಂದ್ರನು ದೇವತೆಯು. ಅನುಕ್ರಮಣಿಕೆಯಲ್ಲಿ **ಪ್ರ ಮಂದಿನ ಏಕಾದಶ ಕುತ್ಸ ಆದ್ಯಾ ಗರ್ಭಸ್ರಾವಿಣ್ಯುಪನಿಷಚ್ಚತುಸ್ತ್ರಿಷ್ಟುಬಂತಮಿತಿ** ಎಂದು ಹೇಳಿರುವುದು. ದಶರಾತ್ರವೆಂಬ ಯಾಗದ ಒಂಭತ್ತನೆಯ ದಿನದಲ್ಲಿ ಮರುತ್ವತೀಯ ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶೌತ್ರಸೂತ್ರದ **ವಿಶ್ವಜಿತ್** ಎಂಬ ಖಂಡದ **ಪ್ರ ಮಂದಿನ ಇಮಾ ಉ ತ್ವೇತಿ ಮರುತ್ವತೀಯಂ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ.೮-೭)

———— :o: ————

॥ ಓಂ ॥

## ಸೂಕ್ತ—೧೦೧

॥ ಮಂಡಲ—೧ ॥ ಅನುವಾಕ—೧೫ ॥ ಸೂಕ್ತ—೧೦೧ ॥

॥ ಅಷ್ಟಕ— ೧ ॥ ಅಧ್ಯಾಯ— ೭ ॥ ವರ್ಗ—೧೨, ೧೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ- ೧೧

॥ ಋಷಿಃ—ಕುತ್ಸ ಆಂಗಿರಸಃ ॥

॥ ದೇವತಾ—ಇಂದ್ರಃ ॥

॥ ಛಂದಃ—೧-೭ ಜಗತೀ । ೮-೧೧. ತ್ರಿಷ್ಟುಪ್ ॥

ಸಂಹಿತಾಪಾಠಃ

ಪ್ರ ಮಂದಿನೇ ಪಿತುಮದರ್ಚತಾ ವಚೋ ಯಃ ಕೃಷ್ಣಗರ್ಭಾ
ನಿರಹನ್ನೃಜಿಶ್ವನಾ ।
ಅವಸ್ಯವೋ ವೃಷಣಂ ವಜ್ರದಕ್ಷಿಣಂ ಮರುತ್ವಂತಂ ಸಖ್ಯಾಯ
ಹವಾಮಹೇ ॥ ೧ ॥

ಪದಪಾಠಃ

ಪ್ರ । ಮಂದಿನೇ । ಪಿತುಽಮತ್ । ಅರ್ಚತ । ವಚಃ । ಯಃ । ಕೃಷ್ಣಽಗರ್ಭಾಃ ।
ನಿಃಽಅಹನ್ । ಋಜಿಶ್ವನಾ ।

ಅವಸ್ಯವಃ । ವೃಷಣಂ । ವಜ್ರ ऽ ದಕ್ಷಿಣಂ । ಮರುತ್ವಂತಂ । ಸಖ್ಯಾಯ । ಹವಾಮಹೇ ॥ ೧ ॥

ಸಾಯಣಭಾಷ್ಯಂ

ಹೇ ಋತ್ವಿಜೋ । ಮಂದಿನೇ ಸ್ತುತಿಮತೇ ಸ್ತೋತವ್ಯಾಯೇಂದ್ರಾಯ ಪಿತುಮದ್ಧವಿರ್ಲಕ್ಷಣೇನಾನ್ನೇನೋಪೇತಂ ವಚಃ ಸ್ತುತಿಲಕ್ಷಣಂ ವಚನಂ ಪ್ರಾರ್ಚತ । ಪ್ರಕರ್ಷೇಣೋಚ್ಚಾರಯತ । ಯ ಇಂದ್ರ ಋಜಿಶ್ವನೈತತ್ಸಂಜ್ಞಕೇನ ರಾಜ್ಞಾ ಸಖ್ಯಾ ಸಹಿತಃ ಸನ್ ಕೃಷ್ಣಗರ್ಭಾಃ । ಕೃಷ್ಣೋ ನಾಮ ಕಶ್ಚಿದಸುರಃ । ತೇನ ನಿಷಿಕ್ತಗರ್ಭಾಸ್ತದೀಯಾ ಭಾರ್ಯಾ ನಿರಹನ್ । ಅವಧೀತ್ । ಕೃಷ್ಣಮಸುರಂ ಹತ್ವಾ ಪುತ್ರಾಣಾಮಪ್ಯನುತ್ಪತ್ತ್ಯರ್ಥಂ ಗರ್ಭಿಣೀಸ್ತಸ್ಯ ಭಾರ್ಯಾ ಅಪ್ಯವಧೀದಿತ್ಯರ್ಥಃ । ಅವಸ್ಯವೋ ರಕ್ಷಣೇಚ್ಛವೋ ವಯಂ ವೃಷಣಂ ಕಾಮಾನಾಂ ವರ್ಷಿತಾರಂ ವಜ್ರದಕ್ಷಿಣಂ ವಜ್ರಯುಕ್ತೇನ ದಕ್ಷಿಣಹಸ್ತೇನೋಪೇತಂ ತಂ ಮರುತ್ವಂತಮಿಂದ್ರಂ ಸಖ್ಯಾಯ ಸಖ್ಯುಃ ಕರ್ಮಣೇ ಹವಾಮಹೇ । ಆಹ್ವಯಾಮಹೇ ॥ ಮಂದಿನೇ । ಮದಿ ಸ್ತುತಿಮೋದಮದಸ್ವಪ್ನಕಾಂತಿಗತಿಷು । ಔಣಾದಿಕ ಇನಿಪ್ರತ್ಯಯಃ । ತದುಕ್ತಂ ಯಾಸ್ಕೇನ । ಮಂದೀ ಮಂದತೇಃ ಸ್ತುತಿಕರ್ಮಣಃ । ನಿ. ೪-೨೪ । ಇತಿ । ಪಿತುಮತ್ । ಹ್ರಸ್ವನುಡ್ಭ್ಯಾಂ ಮತುಬಿತಿ ಮತುಪ ಉದಾತ್ತತ್ವಂ । ಕೃಷ್ಣಗರ್ಭಾಃ । ಕೃಷ್ಣೇನ ನಿಷಿಕ್ತಾ ಗರ್ಭಾ ಯಾಸು ತಾಸ್ತಥೋಕ್ತಾಃ । ಪರಾದಿಶ್ಛಂದಸಿ ಬಹುಲಮಿತಿ ಪೂರ್ವಪದಾಂತೋದಾತ್ತತ್ವಂ । ಅವಸ್ಯವಃ । ಅವೇರೌಣಾದಿಕೋ ಭಾವೇಽಸುನ್ । ಅವ ಇಚ್ಛತ್ಯವಸ್ಯತಿ । ಸುಪ ಆತ್ಮನಃ ಕ್ಯಚ್ । ಕ್ಯಾಚ್ಛಂದಸೀತ್ಯುಪ್ರತ್ಯಯಃ । ವೃಷಣಂ । ವಾ ಷಪೂರ್ವಸ್ಯ ನಿಗಮ ಇತಿ ವಿಕಲ್ಪನಾದುಪಧಾದೀರ್ಘಾಭಾವಃ । ಸಖ್ಯಾಯ । ಸಖ್ಯುಃ ಕರ್ಮ ಸಖ್ಯಂ । ಸಖ್ಯುರ್ಯ ಇತಿ ಯಪ್ರತ್ಯಯಃ । ಹವಾಮಹೇ । ಹ್ವೇಞಃ ಲಟಿ ಬಹುಲಂ ಛಂದಸೀತಿ ಸಂಪ್ರಸಾರಣಂ ॥

ಪ್ರತಿಪದಾರ್ಥ

**ಮಂದಿನೇ**—(ಎಲೈ ಋತ್ವಿಕ್ಕುಗಳೇ) ಸ್ತುತ್ಯರ್ಹನಾದ ಇಂದ್ರನಿಗೆ । **ಪಿತುಮತ್**—ಹವಿಸ್ಸಿನ ರೂಪದ ಅನ್ನದಿಂದ ಕೂಡಿದ । **ವಚಃ**—ಸ್ತೋತ್ರರೂಪವಾದ ವಾಕ್ಕನ್ನು । । **ಪ್ರ ಅರ್ಚತ**—ಅತಿಶಯವಾಗಿ ಪಠಿಸಿರಿ. । **ಯಃ**—ಯಾವ (ಆವೇ) ಇಂದ್ರನು । **ಋಜಿಶ್ವನಾ**—(ಸಖನಾದ) ಋಜಿಶ್ವನೆಂಬ ದೊರೆಯೊಡನೆ ಕೂಡಿಕೊಂಡು । **ಕೃಷ್ಣಗರ್ಭಾಃ**—ಗರ್ಭಿಣಿಯರಾದ ಕೃಷ್ಣನೆಂಬ ಅಸುರನ ಪತ್ನಿಯರನ್ನು । **ನಿರಹನ್**—ಕೊಂದನು । **ಅವಸ್ಯವಃ**—ರಕ್ಷಣೆಯನ್ನು ಅಪೇಕ್ಷಿಸುವ ನಾವು । **ವೃಷಣಂ**—ಇಷ್ಟಾರ್ಥಗಳನ್ನು ಸುರಿಸುವವನೂ । **ವಜ್ರದಕ್ಷಿಣಂ**—ಬಲಗೈಯಿನಲ್ಲಿ ವಜ್ರಾಯುಧವನ್ನು ಹಿಡಿದಿರುವವನೂ । **ಮರುತ್ವಂತಂ**—ಮರುತ್ತುಗಳೊಡನೆ ಕೂಡಿದವನೂ ಆದ ಇಂದ್ರನನ್ನು । **ಸಖ್ಯಾಯ**—(ನಮ್ಮೊಡನೆ) ಸಖ್ಯವನ್ನು ಬೆಳೆಸಲು । **ಹವಾಮಹೇ**--ಕರೆಯುತ್ತೇವೆ. ।

॥ ಭಾವಾರ್ಥ ॥

ಎಲೈ ಋತ್ವಿಕ್ಕುಗಳೇ, ಇಂದ್ರನು ಸ್ತೋತ್ರಗಳಿಂದ ಹರ್ಷಪಡತಕ್ಕವನು. ಅವನಿಗೆ ಹವಿಸ್ಸುಗಳಿಂದ ಕೂಡಿದ ಸ್ತೋತ್ರವಾಕ್ಕನ್ನು ಅತಿಶಯವಾಗಿ ಪಠಿಸಿರಿ. ಆ ಇಂದ್ರನು ತನ್ನ ಸಖನಾದ ಋಜಿಶ್ವನೆಂಬ ದೊರೆ

ನೊಡನೆ ಕೂಡಿಕೊಂಡು ಕೃಷ್ಣನೆಂಬ ಅಸುರನನ್ನು ಕೊಂದದ್ದಲ್ಲದೇ ಗರ್ಭಿಣಿಯರಾದ ಅವನ ಪತ್ನಿಯರನ್ನೂ ಕೊಂದು ಅಸುರ ಸಂತಾನವೇ ಇಲ್ಲದಂತೆ ಮಾಡಿದನು. ನಾವೂ ಸಹ ರಕ್ಷಣೆಯನ್ನು ಅಪೇಕ್ಷಿಸಿ ಇಷ್ಟಾರ್ಥಗಳನ್ನು ಸುರಿಸುವವನೂ, ಬಲಗೈಯಲ್ಲಿ ವಜ್ರಾಯುಧವನ್ನು ಹಿಡಿದಿರುವವನೂ, ಮರುತ್ತುಗಳೊಡನೆ ಕೂಡಿದವನೂ ಆದ ಇಂದ್ರನನ್ನು ನಮ್ಮೊಡನೆ ಸಖ್ಯವನ್ನು ಬೆಳೆಸಲು ಕರೆಯುತ್ತೇವೆ.

## English Translation

Offer adoration with oblations to him who is delighted (with praise), who, with Rijis'wan, destroyed the pregnant wives of Krishna : desirous of protection, we invoke, to become our friend, him, who is the showerer (of benefits), who holds the thunderbolt in his right hand, attended by the Maruts.

॥ ವಿಶೇಷವಿಷಯಗಳು ॥

ಇಂದ್ರನ ಸಖ್ಯವನ್ನು ಪಡೆದವರಿಗೆ ಜಯವೂ ಸೌಖ್ಯವೂ ಲಭಿಸುವುದು ಖಂಡಿತವೆಂದು ಋಜಿಶ್ವನೆಂಬ ದೊರೆಯ ಉದಾಹರಣೆಯಿಂದ ಸೂಚಿಸಿ, ಅದೇ ವಿಧವಾದ ಸಖ್ಯವನ್ನೂ ರಕ್ಷಣೆಯನ್ನೂ ಅಪೇಕ್ಷಿಸಿ ಇಂದ್ರನನ್ನು ಪ್ರಾರ್ಥಿಸಿದೆ.

**ಮಂದಿನೇ—ಮಂದೀ ಮಂದತೇಃ ಸ್ತುತಿಕರ್ಮಣಃ ।** (ನಿ. ೪-೨೪) ಸ್ತುತಿಸು ಎಂದರ್ಥವನ್ನುಕೊಡುವ **ಮಂದ್** ಧಾತುವಿನಿಂದ ನಿಷ್ಪನ್ನವಾಗಿ ಸ್ತುತ್ಯರ್ಹನಾದ ಎಂದು ಪೂಜ್ಯತೆಯನ್ನು ತೋರಿಸುತ್ತದೆ. ಮಂದಿನೇ ಎಂದರೆ ಪೂಜ್ಯನಾದ, ಸ್ತುತಿಗೆ ಅರ್ಹನಾದ ಇಂದ್ರನಿಗೆ.

**ಮಂದಿನೇ** ಎಂಬ ಪದದ ನಿರ್ವಚನವನ್ನು ಮೇಲೆ ಹೇಳಿರುವ ರೀತಿಯಲ್ಲಿ ತೋರಿಸಿ ನಿರುಕ್ತಕಾರರು ಪ್ರಕೃತವಾದ ಈ ಋಕ್ಕನ್ನೇ ಉದಹರಿಸಿದ್ದಾರೆ. (೪-೨೪) **ಪ್ರಾರ್ಚತ ಮಂದಿನೇ ಪಿತುಮದ್ವಚಃ ।** ಸ್ತುತ್ಯರ್ಹನಾದ ಇಂದ್ರನಿಗೆ ಅನ್ನಸಂಯುಕ್ತವಾದ ಸ್ತೋತ್ರವಾಕ್ಕನ್ನು ಅರ್ಪಿಸಿ ಪೂಜಿಸಿ ಎಂದರ್ಥ.

**ಪಿತುಮತ್**—ಅಂಧಃ ವಾಜಃ, ಇತ್ಯಾದಿ ೨೮ ಅನ್ನನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯) **ಪಿತು** ಶಬ್ದಕ್ಕೆ ಅನ್ನವೆಂದರ್ಥ. ಇಲ್ಲಿ ಹವಿಸ್ಸಿನರೂಪವಾದ ಅನ್ನದೊಂದಿಗೆ ಸಂಯುಕ್ತವಾದ ಎಂದಭಿಪ್ರಾಯ, **ಪಿತುರಿತ್ಯನ್ನನಾಮ ಪಾತೇರ್ವಾ, ಪಿಬತೇರ್ವಾ, ಪ್ಯಾಯತೇರ್ವಾ ।** (ನಿ. ೯-೨೪) ರಕ್ಷಿಸು ಎಂಬರ್ಥವನ್ನು ಕೊಡುವ **ಪಾ** ಎಂಬ ಧಾತುವಿನಿಂದಾಗಲಿ ಅಥವಾ ವೃದ್ಧಿಯಾಗು, ಪುಷ್ಟವಾಗು ಎಂದು ಅರ್ಥವನ್ನು ಕೊಡತಕ್ಕ **ಪ್ಯೈ** ಧಾತುವಿನಿಂದಾಗಲಿ **ಪಿತು** ಶಬ್ದವು ನಿಷ್ಪನ್ನವಾಗಿ **ಅನ್ನಕ್ಕೆ** ಪರ್ಯಾಯವಾದ ಪದವಾಗಬಹುದೆಂದು ನಿರುಕ್ತಕಾರರ ನಿರ್ವಚನವಿದೆ. ಅನಂತರ ಸರಿಯಾದ ಅರ್ಥವನ್ನು ಹೇಳುವುದಕ್ಕಾಗಿ ಪುನಃ ಈ ಪದವನ್ನು ಪ್ರಯೋಗಿಸಿರುವ-

**ಪಿತುಂ ನು ಸ್ತೋಷಂ ಮಹೋ ಧರ್ಮಾಣಂ ತವಿಷೀಂ ।**

(ಋ. ಸಂ. ೧-೧೮೭-೧)

ಎಂಬ ಋಕ್ಕನ್ನು ಉದಹರಿಸಿ ಶಕ್ತಿಧಾರಕವೂ ಪಾಲಕವೂ ಆದ ಅನ್ನವನ್ನು ಸ್ತುತಿಸುತ್ತೇನೆ ಎಂದು ಪಿತು ಶಬ್ದದ ಅರ್ಥವನ್ನು ತೋರಿಸಿದ್ದಾರೆ. ಅದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಪಿತು ಶಬ್ದಕ್ಕೆ ಹವಿಸ್ಸಿನ ರೂಪವಾದ ಅನ್ನವೆಂದರ್ಥ.

**ಋಜಿಶ್ವನಾ ಕೃಷ್ಣಗರ್ಭಾಃ ನಿರಹನ್**— ತನ್ನ ಸಖನಾದ ಋಜಿಶ್ವನೆಂಬ ದೊರೆಯೊಡನೆ ಸೇರಿಕೊಂಡು; ಇಂದ್ರನು ಕೃಷ್ಣನೆಂಬ ಅಸುರನನ್ನು ಸಂಹರಿಸಿದನೆಂದು ಇಲ್ಲಿ ಇಂದ್ರನಿಗೂ ಋಜಿಶ್ವನಿಗೂ ಇರತಕ್ಕ ಸಖ್ಯವನ್ನೂ ಸೂಚಿಸಿದೆ. **ಋಜಿಶ್ವನೆಂಬ** ರಾಜನ ವಿಷಯವನ್ನು ಹಿಂದೆ ೧-೫೧ ಮತ್ತು ೧-೫೩ನೇ ಸೂಕ್ತಗಳನ್ನು ವಿವರಿಸುವಾಗ ವಿಶೇಷವಿಷಯಗಳಲ್ಲಿ ತಿಳಿಸಿದೆ. ಈ ರಾಜನ ಹೆಸರು ಋಕ್ಸಂಹಿತೆಯಲ್ಲಿ ಅನೇಕ ಕಡೆಗಳಲ್ಲಿ ಬಂದಿದೆ. ಹಿಂದೆ ೧-೫೧-೫ ಮತ್ತು ೧-೫೩-೮ನೇ ಋಕ್ಕುಗಳಲ್ಲಲ್ಲದೇ,

**ತ್ವಂ ಪಿಪ್ರುಂ ಮೃಗಯಂ ಶೂಶುವಾಂಸಮೃಜಿಶ್ವನೇ ವೈದಥಿನಾಯ ರಂಧೀಃ ।**
(ಋ. ಸಂ. ೪-೧೬-೧೩)

ಎಂಬ ಋಕ್ಕಿನಲ್ಲಿ ಇಂದ್ರನು ಪಿಪ್ರು, ಮೃಗಯ ಇತ್ಯಾದ್ಯಸುರರನ್ನು ನಾಶಮಾಡಿ **ವಿದಥಿಯ** ಪುತ್ರನಾದ ಋಜಿಶ್ವನೆಂಬ ರಾಜನಿಗೆ ಸಹಾಯಮಾಡಿದನೆಂದು ಹೇಳಿದೆ. ಹೀಗೆಯೇ,

**ಆ ತ್ವಾಮೃಜಿಶ್ವಾ ಸಖ್ಯಾಯ ಚಕ್ರೇ ಪಚನ್ಪಕ್ತೀರಪಿಬಃ ಸೋಮಮಸ್ಯ ।**
(ಋ. ಸಂ. ೫-೨೯-೧೧)

ಎಂಬ ಋಕ್ಕಿನಲ್ಲಿಯೂ ಇಂದ್ರನ ಮತ್ತು ಋಜಿಶ್ವನ ಸಖ್ಯವು ಪ್ರಶಂಸಿಸಲ್ಪಟ್ಟಿದೆ. ಆದರೆ ೪-೧೬-೧೩ನೇ ಋಕ್ಕಿನಲ್ಲಿ ಋಜಿಶ್ವನೆಂಬ ರಾಜನೆಂದೂ, ೫-೨೯-೧೧ನೇ ಋಕ್ಕಿನಲ್ಲಿ ಋಜಿಶ್ವನೆಂಬ ಋಷಿಯೆಂದೂ ಸಾಯಣರು ಅರ್ಥಮಾಡಿರುತ್ತಾರೆ. ಇವೆರಡನ್ನೂ ಸೇರಿಸಿ.

**ಸುದಾಮನ್ತದ್ರೇಕ್ಣೋ ಅಪ್ರಮೃಷ್ಯಮೃಜಿಶ್ವನೇ ದಾತ್ರಂ ದಾಶುಷೇ ದಾಃ ।**
(ಋ. ಸಂ. ೬-೨೦-೭).

ಎಂಬ ಋಕ್ಕಿನಲ್ಲಿ ರಾಜರ್ಷಿಯೆಂದು ಸೇರಿಸಿ ಹೇಳಿರುತ್ತಾರೆ. ಹೀಗೆಯೇ, ೮-೪೯-೧೦ ; ೧೦-೧೩೮-೩ ; ಇತ್ಯಾದಿ ಋಕ್ಕುಗಳಲ್ಲೂ ಸಹ **ಋಜಿಶ್ವನ** ಹೆಸರೂ, ಇಂದ್ರನಿಗೂ ಅವನಿಗೂ ಇರತಕ್ಕ ಸಖ್ಯವೂ ವರ್ಣಿತವಾಗಿದೆ.

**ಕೃಷ್ಣಗರ್ಭಾಃ—ಕೃಷ್ಣೋ ನಾಮಾಸುರಃ । ಸ ಗರ್ಭಭೂತೋಽನ್ತರ್ಗತೋ ಯಾಸಾಂ ಸೇನಾನಾಂ ತಾಃ ಕೃಷ್ಣಗರ್ಭಾಃ । ಕೃಷ್ಣಸಹಿತಾ ಇತ್ಯರ್ಥಃ ।** ಕೃಷ್ಣನೆಂಬ ಅಸುರನು ಯಾವ ಸೈನ್ಯವನ್ನು ಪ್ರವೇಶಿಸಿ, ತಾನು ಆ ಸೈನ್ಯಕ್ಕೆ ಬಲವನ್ನೂ ಉತ್ತೇಜನವನ್ನೂ ಕೊಟ್ಟು ಯುದ್ಧ ಮಾಡುತ್ತಿದ್ದನೋ ಆ ಸೇನೆಯನ್ನು ಎಂದು ಒಂದರ್ಥವನ್ನೂ, ಅಲ್ಲದೇ- **ಅಥವಾ ವೃಷ್ಟಿಲಕ್ಷಣಾ ಅಪಃ ಕೃಷ್ಣಗರ್ಭಾಃ ಕೃಷ್ಣವರ್ಣಸ್ಯ ಮೇಘಸ್ಯ ಗರ್ಭಭೂತತ್ವಾತ್। ತಾಃ ನಿರಹನ್ । ಋಜಶ್ವಿನಾ ಋಜುಗಾಮಿನಾ** ವಜ್ರೇಣ ಅಥವಾ ವೃಷ್ಟಿರೂಪವಾದ ಉದಕಗಳು ಕೃಷ್ಣವರ್ಣದ ಮೇಘಗಳಲ್ಲಿರುವುದರಿಂದ ನೇರವಾಗಿ ಶತ್ರುವಿನ ಕಡೆಗೆ ಹೋಗತಕ್ಕ ವಜ್ರಾಯುಧದಿಂದ ಮೇಘವನ್ನು ಸೀಳಿ ಮಳೆಯನ್ನು ಸುರಿಸಿದನು ಎಂದು ಇನ್ನೊಂದು ಅರ್ಥವನ್ನೂ ಸ್ಕಂದಸ್ವಾಮಿಗಳು ಹೇಳಿರುವರು. ಸಾಯಣರು,

ಕೃಷ್ಣನೆಂಬ ಅಸುರನನ್ನು ಕೊಂದು ಗರ್ಭಿಣಿಯರಾದ ಅವನ ಪತ್ನಿಯರನ್ನೂ ಕೊಂದು ಅಸುರ ವಂಶವನ್ನೇ ನಿರ್ಮೂಲಮಾಡಿದನೆಂದು ಅರ್ಥಮಾಡಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಮಂದಿನೇ**—ಮದಿ ಸ್ತುತಿಮೋದಮದಸ್ವಪ್ನಕಾಂತಿಗತಿಷು ಧಾತು. **ಇದಿತೋನುಮ್ ಧಾತೋಃ**—(ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. ಇದಕ್ಕೆ ಔಣಾದಿಕವಾದ ಇನಿ ಪ್ರತ್ಯಯ. ಮಂದಿನ್ ಶಬ್ದ ವಾಗುತ್ತದೆ. ಪ್ರತ್ಯಯಸ್ವರದಿಂದ ಇಕಾರ ಉದಾತ್ತವಾಗುತ್ತದೆ. ಚತುರ್ಥೀ ಏಕವಚನಾಂತರೂಪ. ಇದನ್ನು ಯಾಸ್ಕರೂ ಹೇಳಿರುತ್ತಾರೆ. ಮಂದೀ ಮಂದತೇಃ ಸ್ತುತಿಕರ್ಮಣಃ (ನಿರು. ೪-೨೪) ಇತಿ.

**ಪಿತುಮತ್**—ಪಿತುಃ ಅಸ್ಯ ಅಸ್ತಿ ಇತಿ ಪಿತುಮತ್. **ಹ್ರಸ್ವನುಡ್ಭ್ಯಾಂ ಮತುಪ್**—೬-೧-೧೭೬) ಎಂಬುದರಿಂದ ಛಂದಸ್ಸಿನಲ್ಲಿ ಹ್ರಸ್ವದ ಪರದಲ್ಲಿರುವುದರಿಂದ ಮತುಪಿಗೆ ಉದಾತ್ತಸ್ವರ ಬರುತ್ತದೆ.

**ಅರ್ಚತ**—ಅರ್ಚ ಪೂಜಾಯಾಂ ಧಾತು. ಲೋಟ್ ಮಧ್ಯಮಪುರುಷಬಹುವಚನದಲ್ಲಿ ಲಙ್ವದ್ಭಾವವಿರು ವುದರಿಂದ **ತಸ್ಥಸ್ಥ**—(ಪಾ. ಸೂ. ೩-೪-೧೦೧) ಎಂಬುದರಿಂದ ತಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಚಃ**—ವಚ ಪರಿಭಾಷಣೇ ಧಾತು. ಸರ್ವಧಾತು ನಿಬಂಧನವಾದ ಅಸುನ್ ಪ್ರತ್ಯಯ. ವಚಸ್ ಶಬ್ದವಾಗುತ್ತದೆ. ನಿತ್‌ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಕೃಷ್ಣಗರ್ಭಾಃ**—ಕೃಷ್ಣೇನ ನಿಷಿಕ್ತಾಃ ಗರ್ಭಾಃ ಯಾಸು ತಾಃ ಕೃಷ್ಣಗರ್ಭಾಃ. **ಪರಾದಿಶ್ಛಂದಸಿ ಬಹುಲಮ್**—(ಪಾ. ಸೂ. ೬-೨-೧೯೯) ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ,

**ಅಹನ್**—ಹನ ಹಿಂಸಾಗತ್ಯೋಃ ಧಾತು. ಲಙ್ ಪ್ರಥಮಪುರುಷ ಏಕವಚನ ಪ್ರತ್ಯಯಾಂತರೂಪ. ಯಃ ಎಂದು ಯಚ್ಛಬ್ದಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯು ದಾತ್ತವಾದ ಪದವಾಗುತ್ತದೆ.

**ಅವಸ್ಯವಃ**—ಅವ ರಕ್ಷಣೇ ಧಾತು. ಸರ್ವಧಾತುನಿಬಂಧನವಾದ ಔಣಾದಿಕಅಸುನ್ ಪ್ರತ್ಯಯ. ಅವಸ್ ಎಂದು ರೂಪವಾಗುತ್ತದೆ. ಅವಃ ಆತ್ಮನಃ ಇಚ್ಛತಿ ಎಂದು ಅರ್ಥವಿವಕ್ಷಾಮಾಡಿದಾಗ **ಸುಪ ಆತ್ಮನಃ ಕ್ಯಚ್**—(ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್‌ಪ್ರತ್ಯಯ. **ಸನಾದ್ಯಂತಾ ಧಾತವಃ**—ಎಂಬುದರಿಂದ ಅವಸ್ಯ ಎಂಬುದು ಧಾತುಸಂಜ್ಞೆಯನ್ನು ಹೊಂದುತ್ತದೆ. **ಕ್ಯಾಚ್ಛಂದಸಿ**—(ಪಾ. ಸೂ. ೩-೨-೧೭೦) ಎಂಬುದ ರಿಂದ ಇದರ ಮೇಲೆ ಉಪ್ರತ್ಯಯ. **ಅತೋ ಲೋಪಃ**—(ಪಾ. ಸೂ. ೬-೪-೪೮) ಎಂಬುದರಿಂದ ಅಕಾರಲೋಪ. ಅವಸ್ಯು ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಜಸ್ ಪರವಾದಾಗ **ಜಸಿಚ**— ಎಂಬುದರಿಂದ ಗುಣ. ಅವಾದೇಶ. ಅವಸ್ಯವಃ ಎಂದು ರೂಪವಾಗುತ್ತದೆ.

**ವೃಷಣವ್**—ವೃಷು ಸೇಚನೇ ಧಾತು. ಔಣಾದಿಕಕನಿನ್ ಪ್ರತ್ಯಯ. ದ್ವಿತೀಯಾ ಏಕವಚನದಲ್ಲಿ ಉಪಧಾದೀರ್ಘವು ಪ್ರಾಪ್ತವಾದರೆ **ವಾ ಷಪೂರ್ವಸ್ಯ ನಿಗಮೇ**—(ಪಾ. ಸೂ. ೬-೪-೯) ಎಂಬುದರಿಂದ ವಿಕಲ್ಪವೆಂದುದರಿಂದ ಇಲ್ಲಿ ದೀರ್ಘ ಬರುವುದಿಲ್ಲ.

**ಸಖ್ಯಾಯ**--ಸಖ್ಯುಃ ಕರ್ಮ ಸಖ್ಯಮ್. **ಸಖ್ಯುರ್ಯಃ**—(ಪಾ. ಸೂ. ೫-೧-೧೨೬) ಎಂಬುದರಿಂದ ಸಖಿ ಶಬ್ದಕ್ಕೆ ಯಪ್ರತ್ಯಯ. **ಯಸ್ಯೇತಿ ಚ**—(ಪಾ. ಸೂ. ೬-೪-೧೪೮) ಎಂಬುದರಿಂದ ಇಕಾರಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಚತುರ್ಥೀಏಕವಚನಾಂತರೂಪ.

**ಹವಾಮಹೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇಚ. ಧಾತು. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. **ಟಿತ ಆತ್ಮನೇ ಪದಾನಾಂ**—(ಪಾ. ಸೂ. ೩-೪-೭೯) ಎಂಬುದರಿಂದ ಟಿಗೆ ಏತ್ವ. **ಬಹುಲಂ ಛಂದಸಿ**—ಎಂಬುದರಿಂದ ಧಾತುವಿಗೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ**—ಎಂಬುದರಿಂದ ಪೂರ್ವರೂಪ. ಶಪ್ ವಿಕರಣ. ಅದನ್ನು ನಿಮಿತ್ತೀಕರಿಸಿ ಧಾತುವಿನ ಉಕಾರಕ್ಕೆ ಗುಣ. ಅವಾದೇಶ. **ಅತೋ ದೀರ್ಘೋ ಯಞಿ**—ಎಂಬುದರಿಂದ ಮಹಿಙ್ ನಿಮಿತ್ತವಾಗಿ ಅದಂತಾಂಗಕ್ಕೆ ದೀರ್ಘ. ಹವಾಮಹೇ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧ ॥

———:o:———

ಸಂಹಿತಾಪಾಠಃ

ಯೋ ವ್ಯಂಸಂ ಜಾಹೃಷಾಣೇನ ಮನ್ಯುನಾ ಯಃ ಶಂಬರಂ
ಯೋ ಅಹನ್ಪಿಪ್ರುಮವ್ರತಂ ।
ಇಂದ್ರೋ ಯಃ ಶುಷ್ಣಮಶುಷಂ ನ್ಯಾವೃಣಙ್ಮರುತ್ವಂತಂ ಸಖ್ಯಾ-
ಯ ಹವಾಮಹೇ ॥ ೨ ॥

ಪದಪಾಠಃ

ಯಃ । ವಿಽಅಂಸಂ । ಜಹೃಷಾಣೇನ । ಮನ್ಯುನಾ । ಯಃ । ಶಂಬರಂ । ಯಃ ।
ಅಹನ್ । ಪಿಪ್ರುಂ । ಅವ್ರತಂ ।
ಇಂದ್ರಃ । ಯಃ । ಶುಷ್ಣಂ । ಅಶುಷಂ । ನಿ । ಅವೃಣಕ್ । ಮರುತ್ವಂತಂ ।
ಸಖ್ಯಾಯ । ಹವಾಮಹೇ ॥ ೨ ॥

ಸಾಯಣಭಾಷ್ಯಂ

ಯ ಇಂದ್ರೋ ಜಹೃಷಾಣೇನ ಪ್ರವೃದ್ಧೇನ ಮನ್ಯುನಾ ಕ್ರೋಧೇನ ವ್ಯಂಸಂ ವಿಗತಭುಜಂ ವೃತ್ರಮಹನ್ । ಅವಧೀತ್ । ಅಪಿ ಚ ಯ ಇಂದ್ರಃ ಶಂಬರಮೇತತ್ಸಂಜ್ಞಮಸುರಂ ಚಾವಧೀತ್ । ತಥಾವ್ರತಂ ವ್ರತಸ್ಯ ಯಾಗಾದೇಃ ಕರ್ಮಣೋ ವಿರೋಧಿನಂ ಪಿಪ್ರುಮೇತತ್ಸಂಜ್ಞಮಸುರಂ ಚ ಯ ಇಂದ್ರೋಽವಧೀತ್ । ಕಿಂಚ ಯ ಇಂದ್ರೋಽಶುಷಂ ಶೋಷಕರಹಿತಂ ಶುಷ್ಣಂ ಸರ್ವಸ್ಯ ಜಗತಃ ಶೋಷಕಮೇತತ್ಸಂಜ್ಞಮಸುರಂ ನ್ಯವೃಣಕ್ । ನ್ಯವರ್ಜಯತ್ । ಸಮೂಲಂ ಹತವಾನಿತ್ಯರ್ಥಃ । ತಂ ಮರುತ್ವಂತಮಿಂದ್ರಂ ಸಖ್ಯಾಯಾಹ್ವಯಾಮಹೇ ॥ ವ್ಯಂಸಂ । ವಿಗತೋಽಂಸೋ ಯಸ್ಮಾತ್ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಯಣ ಉದಾತ್ತಸ್ವರಿತಯೋರ್ಯಣ ಇತಿ ಪರಸ್ಯಾನುದಾತ್ತಸ್ಯ ಸ್ವರಿತತ್ವಂ । ಜಹೃಷಾಣೇನ । ಹೃಷ ತುಷ್ಟೌ । ಅತ್ರ ವೃದ್ಧ್ಯರ್ಥಃ । ಛಂದಸಿ ಲಿಟ್ । ಲಿಟಃ ಕಾನಜ್ವೇತಿ ತಸ್ಯ ಕಾನಜಾದೇಶಃ । ಅನ್ಯೇಷಾಮಪಿ ದೃಶ್ಯತ ಇತಿ ಸಂಹಿತಾಯಾಮಭ್ಯಾಸಸ್ಯ ದೀರ್ಘತ್ವಂ । ಚಿತ್ವಾದಂತೋದಾತ್ತತ್ವಂ । ಅಶುಷಂ । ಶುಷ ಶೋಷಣೇ । ಇಗುಪಧಲಕ್ಷಣಃ ಕಃ । ಶುಷಾಃ ಶೋಷಕಾ ನ ಸಂತ್ಯಸ್ಯೇತ್ಯಶುಷಃ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ಅವೃಣಕ್ । ವೃಜೀ ವರ್ಜನೇ । ರೌಧಾದಿಕಃ ॥

॥ ಪ್ರತಿಪದಾರ್ಥ ॥

ಯಃ—ಯಾವ ಇಂದ್ರನು । ಜಹೃಷಾಣೇನ—ಪ್ರವರ್ಧಮಾನವಾದ । ಮನ್ಯುನಾ—ಕ್ರೋಧದಿಂದ । ವ್ಯಂಸಂ—ಭುಜಹೀನನಾದ ವೃತ್ರನನ್ನು । ಅಹನ್—ಕೊಂದನೋ, । ಯಃ—ಯಾವ ಇಂದ್ರನು । ಶಂಬರಂ—ಶಂಬರನೆಂಬ ರಾಕ್ಷಸನನ್ನು (ಕೊಂದನೋ ಹಾಗೆಯೇ) । ಯಃ—ಯಾವ ಇಂದ್ರನು । ಅವ್ರತಂ—ಯಾಗಾದಿ ವ್ರತಗಳ ವಿರೋಧಿಯಾದ । ಪಿಪ್ರುಂ—ಪಿಪ್ರುವೆಂಬ ಅಸುರನನ್ನು (ಕೊಂದನೋ ಅಲ್ಲದೇ) । ಯಃ ಇಂದ್ರಃ—ಯಾವ ಇಂದ್ರನು । ಅಶುಷಂ—(ಇತರರಿಂದ) ಕೊಲ್ಲಲು, ಒಣಗಿಸಲು ಸಾಧ್ಯವಾಗದವನೂ । ಶುಷ್ಣಂ—(ಜಗತ್ತನ್ನು ಶೋಷಣೆಮಾಡುವವನೂ ಆದ) ಶುಷ್ಣನೆಂಬ ಅಸುರನನ್ನು । ನಿ ಅವೃಣಕ್—ನಿರ್ಮೂಲನಮಾಡಿದನೋ ।

**ಮರುತ್ವಂತಂ**—ಮರುತ್ತುಗಳೊಗೂಡಿದ ಆ ಇಂದ್ರನನ್ನು । **ಸಖ್ಯಾಯ**—(ನಮ್ಮೊಡನೆ) ಸ್ನೇಹವನ್ನು ಬೆಳೆಸಲು । **ಹವಾಮಹೇ**—ಕರೆಯುತ್ತೇವೆ. ।

ಭಾವಾರ್ಥ

ಯಾವ ಇಂದ್ರನು ಅತ್ಯಧಿಕವಾಗಿ ಬೆಳೆಯುತ್ತಿರುವ ಕ್ರೋಧದಿಂದ ಭುಜಹೀನನಾದ ವೃತ್ರನನ್ನು ಕೊಂದನೋ ಮತ್ತು ಯಾವ ಇಂದ್ರನು ಶಂಬರನೆಂಬ ರಾಕ್ಷಸನನ್ನೂ, ಯಾಗಾದಿವ್ರತಗಳ ವಿರೋಧಿಯಾದ ಪಿಪ್ರುವೆಂಬ ಅಸುರನನ್ನೂ ಕೊಂದನೋ, ಮತ್ತು ಯಾವ ಇಂದ್ರನು ಇತರರಿಂದ ಹಿಂಡಲುಸಾಧ್ಯವಿಲ್ಲದ ಮತ್ತು ಲೋಕವನ್ನೆಲ್ಲಾ ಹಿಂಡುವ ಸಾಮರ್ಥ್ಯವುಳ್ಳ ಶುಷ್ಣನೆಂಬ ಅಸುರನನ್ನು ನಿರ್ಮೂಲವಮಾಡಿದನೋ, ಅಂತಹ ಮರುತ್ತುಗಳೊಡಗೂಡಿದ ಇಂದ್ರನನ್ನು ನಮಗೆ ಸ್ನೇಹಬೆಳಸಿ ಸಹಾಯಮಾಡುವುದಕ್ಕಾಗಿ ಕರೆಯುತ್ತೇವೆ.

## English Translation

We invoke to be our friend, Indra, who is attended by the Maruts ; he who, with increasing wrath, slew the mutilated Vritra, and Sambara, and unrighteous Pipru, and who extirpated the unabsorbable S'ushna.

ವಿಶೇಷವಿಷಯಗಳು

ಈ ಋಕ್ಕಿನ ಅರ್ಥವನ್ನು ವಿವರಿಸುವಾಗ ಸಾಯಣರ ಭಾಷ್ಯಕ್ಕೂ ಸ್ಕಂದಸ್ವಾಮಿಗಳ ಭಾಷ್ಯಕ್ಕೂ ಕೆಲವು ಕಡೆಗಳಲ್ಲಿ ವ್ಯತ್ಯಾಸವಿದೆ.

**ಜಹೃಷಾಣೇನ ಮನ್ಯುನಾ ವ್ಯಂಸಂ ಅಹನ್**—ಎಂಬ ವಾಕ್ಯಕ್ಕೆ ಸಾಯಣರು ಪ್ರವೃದ್ಧೇನ ಕ್ರೋಧೇನ ವಿಗತಭುಜಂ ವೃತ್ರಂ ಅವಧೀತ್ । ಪ್ರವರ್ಧಮಾನವಾದ ಕ್ರೋಧದಿಂದ ಭುಜಹೀನನಾದ ವೃತ್ರನನ್ನು ಕೊಂದನು ಎಂದು ವ್ಯಾಖ್ಯಾನವನ್ನು ಮಾಡಿದ್ದಾರೆ.

ಸ್ಕಂದಸ್ವಾಮಿಗಳು ವ್ಯಂಸನೆಂಬ ಒಬ್ಬ ರಾಕ್ಷಸನೆಂದು ಅಂಕಿತನಾಮವಾಗಿ ಅರ್ಥಮಾಡಿ, **ಜಹೃಷಾಣೇನ ಅತ್ಯರ್ಥಂ ಹೃಷ್ಯತಾ ಮನ್ಯುನಾ ಮನ್ಯುನಾಮ್ನಾ ಪ್ರಜಾಪತಿಪುತ್ರೇಣ ಸಹ ಅಹನ್** । ಅತಿಶಯವಾಗಿ ಸಂತೋಷವನ್ನು ಸೂಚಿಸುತ್ತಿದ್ದವನೂ ಪ್ರಜಾಪತಿ ಪುತ್ರನೂ ಆದ ಮನ್ಯುವಿನೊಡನೆ ಸೇರಿಕೊಂಡು ವ್ಯಂಸನೆಂಬ ಅಸುರನನ್ನು ಕೊಂದನು ಎಂದು ಒಂದುವಿಧವಾಗಿಯೂ ; **ಅಥವಾ ಮನ್ಯುರಿತಿ ಕ್ರೋಧನಾಮ** । **ಅತ್ಯರ್ಥಂ ಹೃಷ್ಯತಾ ಕ್ರೋಧೇನ** । **ಪ್ರವಿಕಸತಾ ಕ್ರೋಧೇನ ಇತ್ಯರ್ಥಃ** । ಅತಿಶಯವಾಗಿ ಬೆಳೆಯುತ್ತಿರುವ ಕ್ರೋಧದಿಂದ ಎಂದು ಇನ್ನೊಂದುವಿಧವಾಗಿಯೂ ಅರ್ಥಮಾಡಿದ್ದಾರೆ. ಈ ಎರಡನೆಯ ಅರ್ಥದ ಪ್ರಕಾರ **ವ್ಯಂಸ**ಪದವು ಅಂಕಿತನಾಮವಾಗಿಯೇ ಇದ್ದು **ಮನ್ಯು**ಪದಕ್ಕೆ ಮಾತ್ರ ಕ್ರೋಧವೆಂದು ಅರ್ಥವಾಗಿದೆ. ಆದರೆ ಇಲ್ಲಿ ಸ್ಕಂದಸ್ವಾಮಿಗಳ ಅನ್ವಯಕ್ಕೂ ಅರ್ಥಕ್ಕೂ ಆಧಾರಗಳು ಇರುವಂತೆ ಕಾಣುವುದಿಲ್ಲ. ಸಾಯಣರ ವಿವರಣೆಯೇ ಸಹಜವಾಗಿದೆ. **ವ್ಯಂಸ**ಶಬ್ದವು ವಿಗತವಾದ ಭುಜನೆಂಬ ಅರ್ಥದಲ್ಲಿ ಅನೇಕ ಋಕ್ಕುಗಳಲ್ಲಿ ಇದ್ದು ವೃತ್ರನಿಗೂ ಇತರ ಅಸುರರಿಗೂ ವಿಶೇಷಣವಾಗಿದೆ.

ಅಹನ್ವೃತ್ರಂ ವೃತ್ರತರಂ ವ್ಯಂಸಮಿಂದ್ರೋ ವಜ್ರೇಣ ಮಹತಾ ವಧೇನ ।
(ಋ. ಸಂ. ೧-೩೨-೫)

ಅಹನ್ನಹಿಮಭಿನದ್ರೌಹಿಣಂ ವ್ಯಹನ್ವ್ಯಂಸಂ ಮಘವಾ ಶಚೀಭಿಃ ।
(ಋ. ಸಂ. ೧-೧೦೩-೨)

ಇತ್ಯಾದಿ ಋಕ್ಕುಗಳಲ್ಲಿ ವಿಗತವಾದ ಅಂಸವುಳ್ಳವನೆಂದು ವೃತ್ರನಿಗೆ ವಿಶೇಷಣವಾಗಿದೆ ಮತ್ತು

ಅಧ್ವರ್ಯವೋ ಯಃ ಸ್ವಶ್ನಂ ಜಘಾನ ಯಃ ಶುಷ್ಣಮಶುಷಂ ಯೋ ವ್ಯಂಸಂ ।
(ಋ ಸಂ. ೨-೧೪-೫)

ಈ ಋಕ್ಕಿನಲ್ಲಿ ವಿಗತವಾದ ಅಂಸವುಳ್ಳವನೆಂದು ಶುಷ್ಣನಿಗೆ ವಿಶೇಷಣವಾಗಿದೆ. ಹೀಗೆ ಭುಜಹೀನವೆಂಬ ಅರ್ಥದಲ್ಲಿ ವ್ಯಂಸ ಶಬ್ದವಿದೆಯೇ ಹೊರತು ಅಂಕಿತನಾಮವಾಗಿ ಉಪಯೋಗಿಸಿರುವಂತೆ ಎಲ್ಲಿಯೂ ಕಂಡುಬರುವುದಿಲ್ಲ.

ಶಂಬರಂ (ಅಹನ್)—ಇಂದ್ರ ಶತ್ರುವಾದ ಶಂಬರನ ವಿಷಯವನ್ನು ಋಕ್ಸಂಹಿತೆಯ ೧-೫೧-೬, ೧-೫೪-೪, ೧-೫೯-೬, ೧-೧೦೩-೮, ೧-೧೧೨-೧೪, ೧-೧೩೦-೭ ಇತ್ಯಾದಿ ಋಕ್ಕುಗಳಲ್ಲಿ ಹೇಳಿದೆ. ಸಾಧಾರಣವಾಗಿ ಶುಷ್ಣ, ಪಿಪ್ರು, ವರ್ಚಿ ಎಂಬ ಅಸುರರ ಜೊತೆಯಲ್ಲಿ ಇವನ ಹೆಸರು ಬರುವುದು ವಾಡಿಕೆ.

ಅವ ಗಿರೇರ್ದಾಸಂ ಶಂಬರಂ ಹನ್ಪ್ರಾವೋ ದಿವೋದಾಸಂ ಚಿತ್ರಾಭಿರೂತೀ ।
(ಋ ಸಂ. ೬-೨೬.೫)

ಎಂಬ ಋಕ್ಕಿನಲ್ಲಿ ಇವನನ್ನು ದಾಸನೆಂದು ಕರೆದಿದೆ.

ದಿವೋದಾಸಾಯ ನವತಿಂ ಚ ನವೇಂದ್ರಃ ಪುರೋ ವ್ಯೈರಚ್ಛಂಬರಸ್ಯ ।
(ಋ. ಸಂ. ೨-೧೯-೬)

ಅಧ್ವರ್ಯವೋ ಯಃ ಶತಂ ಶಂಬರಸ್ಯ ಪುರೋ ಬಿಭೇದಾಶ್ಮನೇವ ಪೂರ್ವೀಃ ।
(ಋ. ಸಂ. ೨-೧೪-೬)

ಇತ್ಯಾದಿ ಋಕ್ಕುಗಳಲ್ಲಿ ದಿವೋದಾಸನೆಂಬುವನು ಇಂದ್ರನ ಆಪ್ತಮಿತ್ರನೂ, ಶಂಬರನ ಶಾಶ್ವತವಾದ ಶತ್ರುವೂ ಆಗಿದ್ದು ಆ ದಿವೋದಾಸನೆಂಬ ರಾಜನಿಗಾಗಿ ಇಂದ್ರನು ಶಂಬರನ ತೊಂಭತ್ತೊಂಭತ್ತು, ನೂರು (ಎಂದರೆ ಅಸಂಖ್ಯಾಕವಾದ) ಕೋಟೆಗಳನ್ನೆಲ್ಲಾ ಉರುಳಿಸಿ ಅವನ ಸ್ವತ್ತನ್ನು ಸ್ವಾಧೀನಪಡಿಸಿಕೊಂಡನು ಎಂಬ ವರ್ಣನೆಯಿದೆ. ಹೀಗೆಯೇ,

ಅತಿಥಿಗ್ವಾಯ ಶಂಬರಂ ಗಿರೇರುಗ್ರೋ ಅವಾಭರತ್ ।
(ಋ. ಸಂ. ೧-೧೩೦-೭)

ಉತ ದಾಸಂ ಕೌಲಿತರಂ ಬೃಹತಃ ಪರ್ವತಾದಧಿ ।
ಅವಾಹನ್ನಿಂದ್ರ ಶಂಬರಂ ॥
(ಋ. ಸಂ ೪-೩೦-೧೪)

**ಅವ ಗಿರೇರ್ದಾಸಂ ಶಂಬರಂ ಹನ್ಪ್ರಾವೋ ದಿವೋದಾಸಂ ಚಿತ್ರಾಭಿರೂತೀ ॥**
(ಋ. ಸಂ. ೬-೨೬-೫)

ಇತ್ಯಾದಿ ಋಕ್ಕುಗಳಿಂದ ಶಂಬರನು ಬೆಟ್ಟಗುಡ್ಡಗಳಲ್ಲಿ ಅವಿತುಕೊಂಡು ಅತಿಥಿಗ್ವನಿಗೂ ದಿವೋದಾಸನಿಗೂ ಅತ್ಯಂತವಾಗಿ ಹಿಂಸೆಯನ್ನು ಕೊಡುತ್ತಿದ್ದುದರಿಂದ ಅವನನ್ನು ಇಂದ್ರನು ನಾಶಮಾಡಿ ಇವರಿಬ್ಬರಿಗೂ ತನ್ನ ರಕ್ಷಣೆಯನ್ನು ನೀಡಿದನು ಎಂದು ತಿಳಿಸಿದೆ. ಹೀಗೆಯೇ ಇನ್ನೂ ಅನೇಕಕಡೆಗಳಲ್ಲಿ ಶಂಬರನ ವಧದ ವಿಷಯವನ್ನು ತಿಳಿಸಿದೆ.

**ಅವ್ರತಂ ಪಿಪ್ರುಂ**—ಶಂಬರನಂತೆಯೇ ಪಿಪ್ರುವೂ ಸಹ ಇಂದ್ರನಿಂದ ಅನೇಕಾವರ್ತಿ ಸೋಲಿಸಲ್ಪಟ್ಟಿರುವುದಾಗಿ ಅನೇಕ ಋಕ್ಕುಗಳಲ್ಲಿ ಹೇಳಿದೆ. ದಿವೋದಾಸ ಮತ್ತು ಅತಿಥಿಗ್ವನಿಗಾಗಿ ಶಂಬರನೊಡನೆ ಯುದ್ಧಮಾಡಿದಂತೆಯೇ, ಇಂದ್ರನು ರಿಜಿಶ್ವನಿಗಾಗಿ ಪಿಪ್ರುವಿನೊಡನೆ ಯುದ್ಧಮಾಡಿದನು. ಋ. ಸಂ. ೪-೧೬-೧೩, ೫-೨೯-೧೧, ೬-೨೦-೭, ೮-೪೯-೧೦, ೧೦-೯೯-೧೧, ೧೦-೧೩೮-೩ ಇತ್ಯಾದಿ ಋಕ್ಕುಗಳಲ್ಲೆಲ್ಲಾ ಪಿಪ್ರುವಿನ ವಿಷಯವನ್ನು ಹೇಳಿದೆ.

**ವಿ ಪಿಪ್ರೋರಹಿಮಾಯಸ್ಯ ದೃಳ್ಹಾಃ ಪುರೋ ವಜ್ರಿಞ್ಛವಸಾ ನ ದರ್ದಃ ।**
(ಋ. ಸಂ. ೬-೨೦.೭)

ಇತ್ಯಾದಿ ಋಕ್ಕುಗಳಲ್ಲಿ ಪಿಪ್ರುವಿನ ದೃಢವಾದ ಪ್ರಾಕಾರಾದಿಗಳನ್ನು ಇಂದ್ರನು ನಾಶಮಾಡಿದನೆಂತಲೂ,

**ಯಃ ಸೃಬಿಂದಮನರ಼್ನಿಂ ಪಿಪ್ರುಂ ದಾಸಮಹೀಶುವಂ ।**
(ಋ. ಸಂ. ೮-೩೨-೨)

ಇತ್ಯಾದಿ ಋಕ್ಕುಗಳಲ್ಲಿ ಪಿಪ್ರುವು ದಾಸನೆಂಬ ಗುಂಪಿಗೆ ಸೇರಿದವನೆಂದೂ, ಇನ್ನೂ ಹೀಗೆಯೇ ಅನೇಕ ಕಡೆಗಳಲ್ಲಿ ಅವನ ಸ್ವರೂಪ ವರ್ಣನೆಯೂ ಶಕ್ತಿವರ್ಣನೆಯೂ ಕಂಡುಬರುತ್ತದೆ. ಪಿಪ್ರುವು ಅಸುರನೇ ಅಥವಾ ವ್ರತಹೀನನಾದ ಮಾನವನೇ ಎಂದು ಕೆಲವರು ಸಂಶಯವನ್ನು ತೋರಿರುವರು.

"It is uncertain whether he was a demon. According to Roth's view, which is favoured by the use of the word Asura, or a human foe, as Ludwig, Oldenberg and Hillebrandt believe".

(Vide Vedic Index on Names and Subjects by Keith and Macdonell. Vol. I. P. 532).

ಆದರೆ ಭಾಷ್ಯಕಾರರು ಅವನನ್ನು ಅಸುರನೆಂದೇ ಹೇಳಿರುವರು.

**ಅಶುಷಂ ಶುಷ್ಣಂ**—ಕೊಲ್ಲಲು ಸಾಧ್ಯವಿಲ್ಲದ ಶುಷ್ಣನನ್ನು ಎಂದರೆ ಇಂದ್ರನಲ್ಲದೇ ಬೇರೊಬ್ಬರಿಂದ ಅವನನ್ನು ಕೊಲ್ಲಲು ಸಾಧ್ಯವಿಲ್ಲವೆಂದರ್ಥ. ಶುಷ್ಣನೆಂಬ ಅಸುರನು ಸಮಸ್ತ ಉದಕವನ್ನೂ ಹೀರುತ್ತಲೂ ಅತ್ಯಂತ ಬಲಯುತನಾಗಿಯೂ ಇದ್ದು ಕೊನೆಗೆ ಇಂದ್ರನಿಂದ ಹತನಾದನು. ವೃತ್ರನನ್ನು ಬಿಟ್ಟರೆ ಇವನೇ ಅತ್ಯಂತ ಅಪಾಯಕರನಾದ ಶತ್ರುವು, ಅನಾವೃಷ್ಟಿಕಾರಕನಾದ ಅಸುರನು. ಅವನ ಹನನಾಂತರ ಪೃಥ್ವಿಯು ಸಸ್ಯಸಮೃದ್ಧಿಯುಳ್ಳದ್ದಾಗಿಯೂ ಫಲಭರಿತವಾಗಿಯೂ ಆಯಿತು.

ತ್ವಂ ಚಿದೇಷಾಂ ಸ್ವಧಯಾ ಮದಂತಂ ಮಿಹೋ ನಪಾತಂ ಸುವೃಧಂ ತಮೋಗಾಂ ।
ವೃಷಪ್ರಭರ್ಮಾ ದಾನವಸ್ಯ ಭಾಮಂ ವಜ್ರೇಣ ವಜ್ರೀ ನಿ ಜಘಾನ ಶುಷ್ಣಂ ॥
(ಋ. ಸಂ. ೫-೩೨-೪)

ಹೀಗೆಯೇ, ಶುಷ್ಣನ ವಿಕಾರವಾದ ಸ್ವರೂಪವರ್ಣನೆಯೂ ಸಹ ಅನೇಕ ಕಡೆಗಳಲ್ಲಿ ಇವನ ಭೀಷಣವಾದ ಆಕೃತಿಯನ್ನು ತಿಳಿಸುತ್ತದೆ.

ನ್ಯಾವಿಧ್ಯದಿಲೀಬಿಶಸ್ಯ ದೃಳ್ಹಾ ವಿ ಶೃಂಗಿಣಮಭಿನಚ್ಛುಷ್ಣಮಿಂದ್ರಃ ।
(ಋ. ಸಂ. ೧-೩೩-೧೨)

ತತ್ತ್ವಾ ಯಾಚಾಮಹೇಽವಃ ಶುಷ್ಣಂ ಯದ್ಧನ್ನಮಾನುಷಂ ।
(ಋ. ಸಂ. ೧೦-೨೨-೭)

ಇಂತಹ ಶೋಷಕನಾದ ಶುಷ್ಣನ ವಂಶವನ್ನೇ ನಿರ್ಮೂಲನಮಾಡಬೇಕೆಂಬ ಇಂದ್ರನ ಪ್ರಯತ್ನವು.

ಉತೋ ನು ಚಿದ್ಯ ಓಜಸಾ ಶುಷ್ಣಸ್ಯಾಂಡಾನಿ ಭೇದತಿ ಜೇಷತ್ಸ್ವರ್ವತೀರಪೋ ನಭಂತಾಮನ್ಯಕೇ ಸಮೇ ।
(ಋ. ಸಂ. ೮-೪೦-೧೦)

ಉತೋ ಚಿದ್ಯ ಓಹತ ಅಂಡಾ ಶುಷ್ಣಸ್ಯ ಭೇದತ್ಯಜೈಃ ಸ್ವರ್ವತೀರಪೋ ನಭಂತಾಮನ್ಯಕೇ ಸಮೇ ।
(ಋ. ಸಂ ೮-೪೦-೧೧)

ಇತ್ಯಾದಿ ಋಕ್ಕುಗಳಲ್ಲಿ ಶುಷ್ಣನ ಸಂತತಿಯನ್ನೂ ನಾಶಮಾಡತಕ್ಕ ಇಂದ್ರನ ಪ್ರಯತ್ನವನ್ನು ವರ್ಣಿಸಿದೆ.

ಶುಷ್ಣಹನನವು ಇಂದ್ರನ ಮಿತ್ರನಾದ ಕುತ್ಸ ಆರ್ಜುನೇಯನಿಗೆ ಅತ್ಯಂತ ಪ್ರಿಯವಾದುದೂ ಅಪೇಕ್ಷಿತವಾದುದೂ ಆದ ಕಾರ್ಯವೆಂದು,

ತ್ವಂ ಸತ್ಯ ಇಂದ್ರ ಧೃಷ್ಣುರೇತಾನ್ತ್ವಮೃಭುಕ್ಷಾ ನರ್ಯಸ್ತ್ವಂ ಷಾಟ್ ।
ತ್ವಂ ಶುಷ್ಣಂ ವೃಜನೇ ಪೃಕ್ಷ ಆಣೌ ಯೂನೇ ಕುತ್ಸಾಯ ದ್ಯುಮತೇ ಸಚಾಹನ್ ॥
(ಋ. ಸಂ. ೧-೬೩-೩)

ಮುಂತಾದ (೪-೧೬-೧೨, ೬-೨೬-೩, ೭-೧೯-೨) ಋಕ್ಕುಗಳಲ್ಲಿ ಶುಷ್ಣವಧವನ್ನು ವರ್ಣಿಸಿದೆ.

ವ್ಯಾಕರಣಪ್ರಕ್ರಿಯಾ

ವ್ಯಂಸಮ್ ವಿಗತಃ ಅಂಸಃ ಯಸ್ಮಾತ್ ವ್ಯಂಸಃ ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ವಿ ಎಂಬಲ್ಲಿರುವ ಇಕಾರ ಉದಾತ್ತವಾಗುತ್ತದೆ. ಇದಕ್ಕೆ ಯಣಾದೇಶ ಬಂದುದರಿಂದ ಇದರ ಪರದಲ್ಲಿರುವ ಅನುದಾತ್ತವಾದ ಅಕಾರಕ್ಕೆ ಉದಾತ್ತಸ್ವರಿತಯೋರ್ಯಣಃ—(ಪಾ. ಸೂ. ೮-೨-೪) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ಜಹೃಷಾಣೇನ**—ಹೃಷ ತುಷ್ಟೌ. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ವೃದ್ಧ್ಯರ್ಥದಲ್ಲಿ ಪ್ರಯುಕ್ತವಾಗಿದೆ. **ಛಂದಸಿ ಲಿಟ್**(ಪಾ. ಸೂ. ೩-೨-೧೦೫) ಎಂದು ಲಿಟ್ ಪ್ರಾಪ್ತವಾದಾಗ **ಲಿಟಃ ಕಾನಜ್ವಾ**—(ಪಾ. ಸೂ. ೩-೨-೧೦೬) ಎಂಬುದರಿಂದ ಅದಕ್ಕೆ ಕಾನಜಾದೇಶ. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. **ಉರತ್**—ಎಂಬುದರಿಂದ ಅತ್ವ. ರಪರವಾಗಿ ಬರುವುದರಿಂದ ಪುನಃ ಹಲಾದಿಶೇಷ ಪ್ರತ್ಯಯ ಕಿತ್ತಾದುದರಿಂದ ಧಾತುವಿನ ಉಪಧೆಗೆ ಗುಣ ಬರುವುದಿಲ್ಲ. **ಅಟ್ಕುಪ್ವಾಙ್**—ಸೂತ್ರದಿಂದ ಷಕಾರನಿಮಿತ್ತವಾಗಿ ಪ್ರತ್ಯಯನಕಾರಕ್ಕೆ ಣತ್ವ ಜಹೃಷಾಣ ಎಂದು ರೂಪವಾಗುತ್ತದೆ. **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ಸಂಹಿತಾದಲ್ಲಿ ಅಭ್ಯಾಸಕ್ಕೆ ದೀರ್ಘ ಬರುತ್ತದೆ. ಕಾನಚ್ ಚಿತ್ತಾದುದರಿಂದ **ಚಿತಃ**—ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ಮನ್ಯುನಾ**—ಮನು ಅವಬೋಧನೇ ಧಾತು. ಇದಕ್ಕೆ ಔಣಾದಿಕ ಯು ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ತೃತೀಯಾಂತರೂಪ.

**ಅಹನ್**—ಹನ ಹಿಂಸಾಗತ್ಯೋಃ ಧಾತು. ಅದಾದಿ. ಲಙ್ ಪ್ರಥಮಪುರುಷ ಏಕವಚನರೂಪ. ಯಚ್ಛಬ್ದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್**—(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಅಡಾಗಮ ಉದಾತ್ತವೆಂದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಅಶುಷಮ್**—ಶುಷ ಶೋಷಣೇ ಧಾತು. ಇಗುಪಧವಾಗಿರುವುದರಿಂದ **ಇಗುಪಧಜ್ಞಾ ಪ್ರೀಕಿರಃ ಕಃ**—(ಪಾ. ಸೂ. ೩-೧-೧೩೫) ಎಂಬುದರಿಂದ ಕಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಶುಷಾಃ ಶೋಷಕಾಃ ನ ಸಂತ್ಯಸ್ಯ ಇತಿ ಅಶುಷಃ **ಪರಾದಿಶ್ಛಂದಸಿ ಬಹುಲಮ್**—(ಪಾ. ಸೂ. ೬-೧-೧೯೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

**ಅವೃಣಕ್**—ವೃಜೀ ವರ್ಜನೇ ಧಾತು. ರುಧಾದಿ. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ**—ಎಂಬುದರಿಂದ ಇಕಾರಲೋಪ. **ರುಧಾದಿಭ್ಯಃ ಶ್ನಮ್**—(ಪಾ. ಸೂ. ೩-೧-೭೮) ಎಂಬುದರಿಂದ ಶ್ನಮ್ ವಿಕರಣ. **ಮಿದಚೋಂತ್ಯಾತ್ಪರಃ**—ಎಂಬುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. **ಹಲ್ಙ್ಯಾಭ್ಯೋ**—ಸೂತ್ರದಿಂದ ಹಲಿನ ಪರದಲ್ಲಿ ಬಂದುದರಿಂದ ತಿಪಿಗೆ ಲೋಪ. **ವಾವಸಾನೇ**—ಸೂತ್ರದಿಂದ ಚರ್ತ್ವದಿಂದ ಜಕಾರಕ್ಕೆ ಕಕಾರಾದೇಶ. ಋಕಾರದ ಪರದಲ್ಲಿರುವುದರಿಂದ ವಿಕರಣಕ್ಕೆ ಣತ್ವ. ಯಃ ಎಂದು ಯಚ್ಛಬ್ದಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್**—(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ. ॥ ೨ ॥



॥ ಸಂಹಿತಾಪಾಠಃ ॥

ಯಸ್ಯ ದ್ಯಾವಾಪೃಥಿವೀ ಪೌಂಸ್ಯಂ ಮಹದ್ಯಸ್ಯ ವ್ರತೇ ವರುಣೋ
ಯಸ್ಯ ಸೂರ್ಯಃ ।
ಯಸ್ಯೇಂದ್ರಸ್ಯ ಸಿಂಧವಃ ಸಶ್ಚತಿ ವ್ರತಂ ಮರುತ್ವಂತಂ ಸಖ್ಯಾಯ
ಹವಾಮಹೇ ॥ ೩ ॥

॥ ಪದಪಾಠಃ ॥

ಯಸ್ಯ । ದ್ಯಾವಾಪೃಥಿವೀ ಇತಿ । ಪೌಂಸ್ಯಂ । ಮಹತ್ । ಯಸ್ಯ । ವ್ರತೇ । ವರುಣಃ । ಯಸ್ಯ । ಸೂರ್ಯಃ ।
ಯಸ್ಯ । ಇಂದ್ರಸ್ಯ । ಸಿಂಧವಃ । ಸಶ್ಚತಿ । ವ್ರತಂ । ಮರುತ್ವಂತಂ । ಸಖ್ಯಾಯ । ಹವಾಮಹೇ ॥ ೩ ॥

ಸಾಯಣಭಾಷ್ಯಂ

ಯಸ್ಯೇಂದ್ರಸ್ಯ ಮಹದ್ವಿಪುಲಂ ಪೌಂಸ್ಯಂ ಬಲಂ ದ್ಯಾವಾಪೃಥಿವೀ ದ್ಯಾವಾಪೃಥಿವ್ಯಾವನುವರ್ತತೇ । ಯಸ್ಯ ಚೇಂದ್ರಸ್ಯ ವ್ರತೇ ನಿಯಮರೂಪೇ ಕರ್ಮಣಿ ವರುಣೋ ವರ್ತತೇ । ವರುಣೋಽಪೀಂದ್ರಸ್ಯ ನಿಯಮನಂ ನಾತಿಕ್ರಾಮತೀತ್ಯರ್ಥಃ । ಅಪಿ ಚ ಸೂರ್ಯೋಽಪಿ ಯಸ್ಯೇಂದ್ರಸ್ಯ ವ್ರತೇ ವರ್ತತೇ । ತಥಾ ಯಸ್ಯೇಂದ್ರಸ್ಯ ವ್ರತಂ ಕರ್ಮ ಸಿಂಧವೋ ನದ್ಯಃ ಸಶ್ಚತಿ । ವಚನವ್ಯತ್ಯಯಃ । ಗಚ್ಛಂತಿ । ಸಶ್ಚತಿರ್ಗಚ್ಛತಿಕರ್ಮಾ । ಇಂದ್ರೇಣಾನುಶಿಷ್ಟಾಃ ಪ್ರವಹಂತೀತ್ಯರ್ಥಃ । ತಂ ಮರುತ್ವಂತಮಿಂದ್ರಂ ಸಖ್ಯಾಯಾಹ್ವಯಾಮಹೇ ॥ ದ್ಯಾವಾಪೃಥಿವೀ । ದ್ಯೌಶ್ಚ ಪೃಥಿವೀ ಚ ದ್ಯಾವಾಪೃಥಿವ್ಯೌ । ದಿವೋ ದ್ಯಾವೇತಿ ದ್ಯಾವಾದೇಶಃ । ಸ ಚಾದ್ಯುದಾತ್ತೋ ನಿಪಾತಿತಃ । ಪೃಥಿವೀಶಬ್ದೋ ಙೀಷ್ಪ್ರತ್ಯಯಾಂತೋಽಂತೋದಾತ್ತಃ । ದೇವತಾದ್ವಂದ್ವೇ ಚೇತ್ಯುಭಯಪದಪ್ರಕೃತಿಸ್ವರತ್ವಂ । ವಾ ಛಂದಸೀತಿ ಪೂರ್ವಸವರ್ಣದೀರ್ಘಃ ॥

### ಪ್ರತಿಪದಾರ್ಥ

**ಯಸ್ಯ**—ಯಾವ ಇಂದ್ರನ । **ಮಹತ್**—ಅತ್ಯಧಿಕವಾದ । **ಪೌಂಸ್ಯಂ**—ಬಲವು । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳೆರಡನ್ನೂ (ವ್ಯಾಪಿಸಿವೆಯೋ) । **ಯಸ್ಯ**— ಯಾವ ಇಂದ್ರನ । **ವ್ರತೇ**—ಆಜ್ಞಾರೂಪವಾದ ಕರ್ಮವಲ್ಲಿ । **ವರುಣಃ**—ವರಣನು (ದೃಢವಾಗಿ ಕರ್ತವ್ಯಪರನಾಗಿರುವನೋ) ಮತ್ತು । **ಸೂರ್ಯಃ**—ಸೂರ್ಯನೂ ಕೂಡ । **ಯಸ್ಯ**—ಯಾವ ಇಂದ್ರನ ಆಜ್ಞಾನುವರ್ತಿಯಾಗಿ ಕರ್ತವ್ಯಪರನಾಗಿರುವನೋ । **ಯಸ್ಯ ಇಂದ್ರಸ್ಯ**—ಯಾವ ಇಂದ್ರನ । **ವ್ರತಂ**—ಆಜ್ಞಾಕರ್ಮವನ್ನು । **ಸಿಂಧವಃ**—ನದಿಗಳೂ । **ಸಶ್ಚತಿ**—ನಿರ್ವಹಿಸಿ ಪ್ರವಹಿಸುತ್ತವೆಯೋ । **ಮರುತ್ವಂತಂ**—ಮರುತ್ತುಗಳಿಂದ ಕೂಡಿದ ಅಂತಹ ಇಂದ್ರನನ್ನು । **ಸಖ್ಯಾಯ**—(ನಮ್ಮೊಡನೆ) ಸ್ನೇಹವನ್ನು ಬೆಳೆಸುವುದಕ್ಕಾಗಿ । **ಹವಾಮಹೇ**—ಕರೆಯುತ್ತೇವೆ ॥

### ಭಾವಾರ್ಥ

ಯಾವ ಇಂದ್ರನ ಅತ್ಯಧಿಕವಾದ ಬಲವು ದ್ಯಾವಾಪೃಥಿವಿಗಳೆರಡನ್ನೂ ವ್ಯಾಪಿಸಿವೆಯೋ, ಯಾವ ಇಂದ್ರನ ಆಜ್ಞಾನುವರ್ತಿಗಳಾಗಿ ವರುಣನೂ ಮತ್ತು ಸೂರ್ಯನೂ ದೃಢವಾದ ಕರ್ತವ್ಯಪರರಾಗಿರುವರೋ ಮತ್ತು ಯಾವ ಇಂದ್ರನ ಆಜ್ಞೆಯಂತೆ ನದಿಗಳೂ ಪ್ರವಹಿಸುವುವೋ ಅಂತಹ ಮರುತ್ತುಗಳೊಡಗೂಡಿದ ಇಂದ್ರನನ್ನು ನಾವೂ ಸಹ ನಮ್ಮೊಡನೆ ಸ್ನೇಹವನ್ನು ಬೆಳೆಸುವುದಕ್ಕಾಗಿ ಕರೆಯುತ್ತೇವೆ.

### English Translation

We invoke to become our friend, Indra who is attended by the Maruts ; whose great power (pervades) heaven and earth, in whose service Varuna and Surya are steadfast, and whose command the rivers obey.

### ವಿಶೇಷವಿಷಯಗಳು

**ಅವಾಸೃಜಂತ ಜಿವ್ರಯೋ ನ ದೇವಾ ಭುವಃ ಸಮ್ರಾಳಿಂದ್ರ ಸತ್ಯಯೋನಿಃ ।**
(ಋ. ಸಂ. ೪-೧೯-೨).

**ಏವಾ ವಸ್ವ ಇಂದ್ರಃ ಸತ್ಯಃ ಸಮ್ರಾಢ್ಢಂತಾ ವೃತ್ರಂ ವರಿವಃ ಪೂರವೇ ಕಃ ।**
(ಋ. ಸಂ. ೪-೨೧-೧೦)

ಇತ್ಯಾದಿ ಅನೇಕ ಕಡೆಗಳಲ್ಲಿ ಇಂದ್ರನನ್ನು ವಿಶ್ವಕ್ಕೆಲ್ಲಾ ಈಶ್ವರನೆಂದು ಸ್ತುತಿಸಿರುವುದರಿಂದ ಸಕಲ ವಿಶ್ವ ವ್ಯವಹಾರಗಳೂ ಇಂದ್ರನ ಆಜ್ಞೆಯಂತೆಯೇ ನಡೆಯತಕ್ಕದ್ದು. ಆದ್ದರಿಂದಲೇ ವರುಣನೂ, ಸೂರ್ಯನೂ, ಸಕಲ ನದಿಗಳೂ ಇಂದ್ರನ ಆಜ್ಞಾವರ್ತಿಗಳಾಗಿಯೇ ತಮ್ಮ ಕರ್ತವ್ಯವನ್ನು ನೆರವೇರಿಸುತ್ತಿರುವರು. ಮತ್ತು ಇಂದ್ರನ ಬಲವು ದ್ಯಾವಾಪೃಥಿವಿಗಳೆರಡನ್ನೂ ವ್ಯಾಪಿಸಿ ಅವನ್ನೂ ಮೀರಿದೆ.—

ಉತಾಭಯೇ ಪುರುಹೂತ ಶ್ರವೋಭಿರೇಕೋ ದೃಳ್ಹಮವದೋ ವೃತ್ರಹಾ ಸನ್ ।
ಇಮೇ ಚಿದಿಂದ್ರ ರೋದಸೀ ಅಪಾರೇ ಯತ್ಸಂಗೃಭ್ಣಾ ಮಘವನ್ ಕಾಶಿರಿತ್ತೇ ॥
(ಋ. ಸಂ. ೩-೩೦-೫)

ಎಂಬುದಾಗಿ, ಅಳೆಯಲಸಾಧ್ಯವಾದ ವಿಸ್ತೃತಿಗಳುಳ್ಳ ದ್ಯಾವಾಪೃಥಿವಿಗಳೆರಡನ್ನೂ ವ್ಯಾಪಿಸಿ ತನ್ನ ಬಲವನ್ನು ಪ್ರಕಟಿಸಿರುವುದರಿಂದ ಈ ಋಕ್ಕಿನಲ್ಲಿಯೂ ಸಹ **ಯಸ್ಯ ಮಹತ್ ಪೌಂಸ್ಯಂ ದ್ಯಾವಾಪೃಥಿವೀ (ಸಶ್ಚತಿ)** ಎಂದು ವರ್ಣಿಸಿದೆ. ಈ ವಿಧವಾದ ಬಲವೂ ಪ್ರಭುತ್ವವೂ ಇರುವುದರಿಂದಲೇ ವರುಣಾದಿಗಳೂ ಇವನ ಆಜ್ಞಾವರ್ತಿಗಳಾಗಿದ್ದಾರೆ.

**ವಿಶ್ವೇ ತೇ ಇಂದ್ರ ವೀರ್ಯಂ ದೇವಾ ಅನು ಕ್ರತುಂ ದದುಃ ।**

(ಋ. ಸಂ. ೮-೬೨-೭)

ಸಕಲ ದೇವತೆಗಳೂ ಇಂದ್ರನ ವೀರ್ಯಕ್ಕೂ ಪರಾಕ್ರಮಕ್ಕೂ ತಲೆಬಾಗಿದರು ಎಂದೂ,

**ಯದಾ ಸೂರ್ಯಮಮುಂ ದಿವಿ ಶುಕ್ರಂ ಜ್ಯೋತಿರಧಾರಯಃ ।**
**ಆದಿತ್ತೇ ವಿಶ್ವಾ ಭುವನಾನಿ ಯೇಮಿರೇ ।**

(ಋ. ಸಂ. ೮-೧೨-೩೦)

ಇಂದ್ರನು ಪ್ರಕಾಶಮಾನನಾದ ಸೂರ್ಯನನ್ನು ಅಂತರಿಕ್ಷದಲ್ಲಿ ಸ್ಥಾಪಿಸಿದಾಗ ಸಕಲ ವಿಶ್ವಗಳೂ ಇವನಿಗೆ ಅಧೀನವಾದವು ಎಂದೂ ಅನೇಕ ಕಡೆ ಸ್ತುತಿಸಿದೆ. ಆ ಅಂಶಗಳನ್ನೇ ಇಲ್ಲಿಯೂ ವರ್ಣಿಸಿದೆ.

**ವ್ರತಂ**—ವ್ರತವೆಂದರೆ ಇಲ್ಲಿ ಕರ್ಮವೆಂದರ್ಥ. ವೃಷ್ಟಿರೂಪವಾದುದೂ ಯಜ್ಞರೂಪವಾದುದೂ ಇವೇ ಮೊದಲಾದ ಇತರಕರ್ಮಗಳೂ ಇಂದ್ರನ ಆಜ್ಞೆಯಂತೆ ನೆರವೇರಿಸಲ್ಪಡುತ್ತವೆ.

**ಸಶ್ಚತಿ**—ವರ್ತತೇ, ಅಯತೇ ಇತ್ಯಾದಿ ೧೨೨ ಗತಿ ಕರ್ಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೯) ಸಶ್ಚತಿ ಎಂದರೆ ಗಚ್ಛತಿ—ನಿರ್ವಹಿಸುತ್ತದೆಯೆಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ದ್ಯಾವಾಪೃಥಿವೀ**— ದ್ಯೌಶ್ಚ ಪೃಥಿವೀ ಚ ದ್ಯಾವಾಪೃಥಿವ್ಯೌ. **ದಿವೋದ್ಯಾವಾ**—(ಪಾ.ಸೂ. ೬-೩-೨೯) ಎಂಬುದರಿಂದ ಸಮಾಸದಲ್ಲಿ ದಿವ್ ಶಬ್ದಕ್ಕೆ ದ್ಯಾವಾದೇಶ. ಈ ಆದೇಶವು ಆದ್ಯುದಾತ್ತವಾಗಿ ನಿಪಾತಿತವಾಗಿದೆ. ಪೃಥಿವೀಶಬ್ದವು ಙೀಷ್‌ಪ್ರತ್ಯಯಾಂತವಾದುದರಿಂದ ಅಂತೋದಾತ್ತವಾಗುತ್ತದೆ. ಆಗ ಸಮಾಸದಲ್ಲಿ **ದೇವತಾದ್ವಂದ್ವೇ ಚ**—(ಪಾ. ಸೂ. ೬-೨-೧೪೧) ಎಂಬುದರಿಂದ ಉಭಯಪದಪ್ರಕೃತಿಸ್ವರ ಬರುತ್ತದೆ. ಇದಕ್ಕೆ ದ್ವಿತೀಯಾ ದ್ವಿವಚನವು ಪರವಾದಾಗ **ವಾಛಂದಸಿ**—(ಪಾ. ಸೂ. ೬-೧-೧೦೬) ಎಂಬುದರಿಂದ ಪೂರ್ವಸವರ್ಣದೀರ್ಘ ಏಕಾದೇಶವಾಗಿ ಬರುತ್ತದೆ.

**ಪೌಂಸ್ಯಮ್**—ಪುಂಸಃ ಭಾವಃ ಪೌಂಸ್ಯಮ್. ಷ್ಯಞ್ ಪ್ರತ್ಯಯ. ಞಿತ್ತಾದುದರಿಂದ **ತದ್ಧಿತೇಷ್ವಚಾಮಾದೇಃ**—ಎಂಬುದರಿಂದ ಆದಿವೃದ್ಧಿ. **ಞ್ನಿತ್ಯಾದಿರ್ನಿತ್ಯಮ್** — ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸೂರ್ಯಃ**—ಸರತಿ ಆಕಾಶೇ ಇತಿ ಸೂರ್ಯಃ ಸೃ ಗತೌ ಧಾತು. **ರಾಜಸೂಯ**—(ಪಾ. ಸೂ. ೩-೧-೧೧೪) ಎಂಬುದರಿಂದ ಕ್ಯಬಂತವಾಗಿ ನಿಪಾತಿತವಾಗಿದೆ. ಪ್ರತ್ಯಯಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸಿಂಧವಃ**—ಸ್ಯಂದೂ ಪ್ರಸ್ರವಣೇ. ಧಾತು. ಇದಕ್ಕೆ **ಸ್ಯಂದೇಃ ಸಂಪ್ರಸಾರಣಂ ಧಶ್ಚ**—(ಉ. ಸೂ. ೧-೧೧) ಎಂಬುದರಿಂದ ಉಣ್ ಪ್ರತ್ಯಯ. ಧಾತುವಿಗೆ ಸಂಪ್ರಸಾರಣ, ದಕಾರಕ್ಕೆ ಧಕಾರಾದೇಶ. ಸಿಂಧು ಎಂದು ರೂಪವಾಗುತ್ತದೆ. ಪ್ರಥಮಾಬಹುವಚನದಲ್ಲಿ ಜಸ್ ಬಂದಾಗ **ಜಸಿಚ**—ಎಂಬುದರಿಂದ ಗುಣ. ಅವಾದೇಶ.

**ಸಶ್ಚತಿ**—ಸಶ್ಚ ಗತೌ ಧಾತು. ಲಟ್ ಪ್ರಥಮಪುರುಷ ಬಹುವಚನದಲ್ಲಿ **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ತಿಪ್‌ಪ್ರತ್ಯಯ. ಶಪ್ ವಿಕರಣ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ತಿಪ್ ಪಿತ್ತಾಗುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ॥ ೩ ॥

---

ಸಂಹಿತಾಪಾಠಃ

ಯೋ ಅಶ್ವಾನಾಂ ಯೋ ಗವಾಂ ಗೋಪತಿರ್ವಶೀ ಯ ಆರಿತಃ
ಕರ್ಮಣಿಕರ್ಮಣಿ ಸ್ಥಿರಃ ।
ವೀಳೋಶ್ಚಿದಿಂದ್ರೋ ಯೋ ಅಸುನ್ವತೋ ವಧೋ ಮರುತ್ವಂ-
ತಂ ಸಖ್ಯಾಯ ಹವಾಮಹೇ ॥ ೪ ॥

ಪದಪಾಠಃ

ಯಃ । ಅಶ್ವಾನಾಂ । ಯಃ । ಗವಾಂ । ಗೋಽಪತಿಃ । ವಶೀ । ಯಃ । ಆರಿತಃ ।
ಕರ್ಮಣಿಽಕರ್ಮಣಿ । ಸ್ಥಿರಃ ।
ವೀಳೋಃ । ಚಿತ್ । ಇಂದ್ರಃ । ಯಃ । ಅಸುನ್ವತಃ । ವಧಃ । ಮರುತ್ವಂತಂ ।
ಸಖ್ಯಾಯ । ಹವಾಮಹೇ ॥ ೪ ॥

ಸಾಯಣಭಾಷ್ಯಂ

ಯ ಇಂದ್ರೋಽಶ್ವಾನಾಂ ಪತಿರಧಿಪತಿಃ । ತಥಾ ಯ ಇಂದ್ರೋ ಗೋಪತಿಃ । ನ ಕೇವಲಮೇಕಸ್ಯಾ ಗೋಃ ಕಿಂತು ಸರ್ವಾಸಾಮಿತ್ಯಾಹ ಗವಾಮಿತಿ । ಸರ್ವಾಸಾಂ ಗವಾಮಧಿಪತಿರ್ಭವತಿ । ವಶೀ ಅಪರಾಧೀನಃ । ಸ್ವತಂತ್ರ ಇತ್ಯರ್ಥಃ । ಅಪಿ ಚ ಯ ಇಂದ್ರಃ ಕರ್ಮಣಿ ಕರ್ಮಣಿ ಸರ್ವೇಷು ಕರ್ಮಸು ಸ್ಥಿರೋ ನೈಶ್ಚಲ್ಯೇನಾವತಿಷ್ಠಮಾನ ಆರಿತಃ ಸ್ತುತಿಭಿಃ ಪ್ರತ್ಯೃತಃ ಪ್ರಾಪ್ತೋ ಭವತಿ । ಆರಿತಃ ಪ್ರತ್ಯೃತಃ ಸ್ತೋಮಾನೀತಿ ನಿರುಕ್ತಂ । ನಿ- ೫-೧೫ । ಯಶ್ಚೇಂದ್ರೋಽಸುನ್ವತಃ ಸುನ್ವತಾಂ ಯಾಗಾನುಷ್ಠಾತ್ರೂಣಾಂ ವಿರೋಧಿನೋ ವೀಳೋಶ್ಚಿತ್ ದೃಢಸ್ಯಾಪಿ ಶತ್ರೋರ್ವಧೋ ಹಂತಾ ತಂ ಮರುತ್ವಂತಮಿಂದ್ರಂ ಸಖ್ಯಾಯ ಹ್ವಯಾಮಹೇ ॥ ಗವಾಂ । ನ ಗೋಶ್ವನ್ಸಾವವರ್ಣೇತಿ ವಿಭಕ್ತೇರುದಾತ್ತತ್ವಸ್ಯ ಪ್ರತಿಷೇಧಃ ಗೋಪತಿಃ । ಪತ್ಯಾವೈಶ್ವರ್ಯ ಇತಿ ಪೂರ್ವಪದಪ್ರಕೃತಿಸ್ವರತ್ವಂ । ಆರಿತಃ । ಋ ಗತೌ । ಅಸ್ಮಾಣ್ಣ್ಯಂತಾನ್ನಿಷ್ಠಾ । ಆಗಮಾನುಶಾಸನಸ್ಯಾನಿತ್ಯತ್ವಾತ್ಪುಗಾಗಮಾಭಾವಃ । ಯದ್ವಾ । ಸೂಚಿಸೂತ್ರಿಮೂತ್ರ್ಯಟ್ಯರ್ತ್ಯಶೂರ್ಣೋತೀನಾಂ । ಪಾ. ೩-೧-೨೨-೩ । ಇತಿ ವಿಹಿತಸ್ಯ ಯಙೋ ಯಙೋಽಚಿ ಚೇತ್ಯತ್ರ ಚಶಬ್ದೇನ ಬಹುಲಗ್ರಹಣಾನುಕರ್ಷಣಾದನೈಮಿತ್ತಿಕೇ ಲುಕಿ ಪ್ರತ್ಯಯಲಕ್ಷಣೇನ ಸನ್ಯಙೋರಿತಿ ಋ ಇತ್ಯೇತಸ್ಯ ದ್ವಿರ್ವಚನ ಉರದತ್ವಹಲಾದಿಶೇಷಯೋಃ ಸತೋ ರುಗ್ರಿಕೌ ಚ ಲುಕೀತಿ ರುಕ್ । ತತೋ ನಿಷ್ಠಾಯಾಂ ಛಾಂದಸ ಇಡಾಗಮಃ । ಋಕಾರಸ್ಯ ಯಣಾದೇಶಃ ರೋ ರೀತ್ಯಭ್ಯಾಸರೇಫಲೋಪಃ । ಢ್ರಲೋಪೇ ಪೂರ್ವಸ್ಯ ದೀರ್ಘೋಽಣ ಇತಿ ದೀರ್ಘತ್ವಂ । ವಧಃ । ಕೃತ್ಯಲುಟೋ ಬಹುಲಮಿತಿ ಬಹುಲವಚನಾತ್ ಹನಶ್ಚ ವಧ ಇತಿ ಕರ್ತರ್ಯಪ್ ವಧಾದೇಶಶ್ಚ । ಸ ಚಾದಂತಃ । ಅತೋ ಲೋಪ ಉದಾತ್ತನಿವೃತ್ತಿಸ್ವರೇಣ ಪ್ರತ್ಯಯಸ್ಯೋದಾತ್ತತ್ವಂ ॥

ಪ್ರತಿಪದಾರ್ಥ

**ಯಃ**—ಯಾವ ಇಂದ್ರನು । **ಅಶ್ವಾನಾಂ**— ಅಶ್ವಗಳಿಗೆ ಅಧಿಪತಿಯೋ । **ಯಃ**— ಯಾವ ಇಂದ್ರನು । **ಗವಾಂ**—ಸಕಲ ಗೋವುಗಳಿಗೂ । **ಗೋಪತಿಃ**—ಗೋಪಾಲಕನೋ, (ಮತ್ತು) । **ವಶೀ**—(ಪರಾಧೀನನಿಲ್ಲದೆ) ಸ್ವತಂತ್ರನೋ, (ಅಲ್ಲದೇ) । **ಯಃ**—ಯಾವ ಇಂದ್ರನು । **ಕರ್ಮಣಿ ಕರ್ಮಣಿ**—ಪ್ರತಿಯೊಂದು ಯಜ್ಞಕರ್ಮದಲ್ಲಿಯೂ । **ಸ್ಥಿರಃ**— ಸ್ಥಿರನಾಗಿನಿಂತುಕೊಂಡು । **ಆರಿತಃ**— ಸ್ತೋತ್ರಗಳಿಂದ ಹೊಗಳಲ್ಪಡುವನೋ ಅಥವಾ ಸಮೀಪಿಸಲ್ಪಡುವನೋ (ಎಲ್ಲರಿಗೂ ಸೇರಿದವನಾಗುವನು) । **ಯಃ ಇಂದ್ರಃ**—(ಅನೂ ಅಲ್ಲದೇ) ಯಾವ ಇಂದ್ರನು । **ಅಸುನ್ವತಃ**—ಯಜ್ಞಾನುಷ್ಠಾನಮಾಡುವವರನ್ನುದ್ವೇಷಿಸುವ । **ವೀಳೋಶ್ಚಿತ್**—ಪ್ರಬಲನಾದ ಶತ್ರುವನ್ನೂ ಸಹ **ವಧಃ**—ಕೊಲ್ಲುತ್ತಾನೆಯೋ । **ಮರುತ್ವಂತಂ**—ಮರುತ್ತುಗಳೊಡನೆ ಕೂಡಿದ ಆ ಇಂದ್ರನನ್ನು । **ಸಖ್ಯಾಯ**—(ನಮ್ಮೊಡನೆ) ಸ್ನೇಹವನ್ನು ಬೆಳೆಸುವುದಕ್ಕಾಗಿ । **ಹವಾಮಹೇ**—ಕರೆಯುತ್ತೇವೆ ॥

ಭಾವಾರ್ಥ

ಯಾವ ಇಂದ್ರನು ಸಕಲ ಅಶ್ವಗಳಿಗೂ ಮತ್ತು ಗೋವುಗಳಿಗೂ ಅಧಿಪತಿಯೋ, ಯಾವನು ಸ್ವತಂತ್ರನೋ ಯಾವ ಇಂದ್ರನು ಪ್ರತಿಯೊಂದು ಯಜ್ಞಕರ್ಮದಲ್ಲಿ ಸ್ಥಿರನಾಗಿನಿಂತುಕೊಂಡು ಸ್ತೋತ್ರಗಳಿಂದ ಹೊಗಳಲ್ಪಡುವನೋ,

ಮತ್ತು ಯಾವನು ಯಜ್ಞರಹಿತನಾಗಿರತಕ್ಕ ಶತ್ರುವು ಪ್ರಬಲನಾದರೂ ಸಹ ಅವನನ್ನು ಸಂಹರಿಸುವನೋ ಮತ್ತು ಯಾವನು ಮರುತ್ತುಗಳೊಡನೆ ಕೂಡಿಕೊಂಡಿರುವನೋ ಆ ಇಂದ್ರನನ್ನು ನಮ್ಮೊಡನೆಯೂ ಸಖ್ಯವನ್ನು ಬೆಳೆಸುವುದಕ್ಕಾಗಿ ಕರೆಯುತ್ತೇವೆ.

English Translation

Who is the lord over all horses and cattle, who is independent, who, propitiated by praise, is constant in every act, and who is the slayer of the obstinate abstainer from libations: we invoke to become our friend, Indra, attended by the Maruts.

ವಿಶೇಷವಿಷಯಗಳು.

**ಗವಾಂ ಗೋಪತಿಃ**—ನ ಕೇವಲಮೇಕಸ್ಯಾ ಗೋಃ ಕಿಂತು ಸರ್ವಾಸಾಂ ಇತ್ಯಾಹ ಗವಾಂ ಇತಿ । ಸರ್ವಾಸಾಂ ಗವಾಂ ಅಧಿಪತಿರ್ಭವತಿ। ಸಕಲ ಗೋವುಗಳಿಗೂ ಅಧಿಪತಿಯಾದುದರಿಂದ **ಗವಾಂ ಗೋಪತಿಃ** ಎಂಬ ದ್ವಿರುಕ್ತಿಯಿದೆಯೆಂದು ಸಾಯಣರು ಅರ್ಥಮಾಡಿದ್ದಾರೆ. ಆದರೆ ಸ್ಕಂದಸ್ವಾಮಿಗಳು,

> **ಗೋಶಬ್ದೋಽತ್ರಾಬ್ವಚನಃ ಸೋಮವಚನೋ ವಾ ಸ್ತುತಿವಚನೋ ವಾ ಸ್ತೋತೃವಚನೋ ವಾ । ಪತಿಶಬ್ದೋಽಪ್ಯಧಿಪತಿವಚನಃ ಪಾಲಯಿತೃವಚನೋ ವಾ । ಅಪಾಂ ವಾ ಸೋಮಸ್ಯ ವಾ ಸ್ತುತೀನಾಂ ವಾ ಸ್ತೋತೄಣಾಂ ವಾ ಅಧಿಪತಿಃ ಪಾಲಯಿತಾ ವೇತ್ಯರ್ಥಃ ।**

ಗೋ ಶಬ್ದಕ್ಕೆ ಇಲ್ಲಿ ಅಪ್, ಸೋಮ, ಸ್ತುತಿ, ಸ್ತುತಿಕಾರ ಇವುಗಳಲ್ಲಿ ಯಾವ ಅರ್ಥವನ್ನು ಬೇಕಾದರೂ ಹೇಳಬಹುದು. ನೀರು ಅಥವಾ ಸೋಮ, ಅಥವಾ ಸ್ತುತಿ ಅಥವಾ ಸ್ತುತಿಕಾರ ಇವುಗಳ ಅಧಿಪತಿಯೆಂದರ್ಥವಾಗುತ್ತದೆಂದು ವಿವರಿಸಿದ್ದಾರೆ.

**ವಶೀ** – ಸ್ಕಂದಸ್ವಾಮಿಗಳು **ಯಶ್ಚಾಶ್ವಾನಾಂ ಗವಾಂ ಚ ವಶೀ** ಎಂದು ಅನ್ವಯವನ್ನು ಮಾಡಿ ಅಶ್ವಗಳಿಗೂ ಗೋವುಗಳಿಗೂ ಪ್ರಭುವೆಂದು ಅರ್ಥಮಾಡಿ, ಪುನಃ **ಗೋಪತಿಃ** ಎಂಬ ಪದಕ್ಕೆ ಮೇಲಿನಂತೆ ಅರ್ಥಮಾಡಿದ್ದಾರೆ. ಆದರೆ ಸಾಯಣರು **ವಶೀ** ಎಂಬ ಪದಕ್ಕೆ **ಅಪರಾಧೀನಃ ಸ್ವತಂತ್ರಃ** ಎಂದರ್ಥಮಾಡಿದ್ದಾರೆ.

> **ಯಸ್ಯ ತೇ ನೂ ಚಿದಾದಿಶಂ ನ ಮಿನಂತಿ ಸ್ವರಾಜ್ಯಂ ।**
> **ನ ದೇವೋ ನಾಧ್ರಿಗುರ್ಜನಃ ॥**
> (ಋ ಸಂ. ೮-೯೩-೧೧)

> **ತ್ವಮಿಂದ್ರಾಭಿಭೂರಸಿ ತ್ವಂ ಸೂರ್ಯಮರೋಚಯಃ ।**
> ವಿಶ್ವಕರ್ಮಾ ವಿಶ್ವದೇವೋ ಮಹಾಂ ಅಸಿ ॥
> (ಋ. ಸಂ. ೮-೯೮-೨)

ಎಂಬುದಾಗಿ ಇಂದ್ರನೇ ಸಕಲ ವಿಶ್ವಕ್ಕೂ ಆಜ್ಞಾಕರ್ತನಾದುದರಿಂದ ಅವನೇ ಸ್ವತಂತ್ರನು. ಈ ಸೂಕ್ತದ ೩ನೇ ಋಕ್ಕಿನಲ್ಲಿಯೇ ಹೇಳುವಂತೆ,

ಯಸ್ಯ ದ್ಯಾವಾಪೃಥಿವೀ ಪೌಂಸ್ಯಂ ಮಹದ್ಯಸ್ಯ ವ್ರತೇ ವರುಣೋ ಯಸ್ಯ ಸೂರ್ಯಃ ।
ಯಸ್ಯೇಂದ್ರಸ್ಯ ಸಿಂಧವಃ ಸಶ್ಚತಿ ವ್ರತಂ ಮರುತ್ವಂತಂ ಸಖ್ಯಾಯ ಹವಾಮಹೇ ॥
(ಋ. ಸಂ. ೧-೧೦೧-೩)

ಯಾವ ಇಂದ್ರನ ಆಜ್ಞೆಯನ್ನು ವರುಣನೂ, ಸೂರ್ಯನೂ, ಸಕಲನದಿಗಳೂ ಪಾಲಿಸುತ್ತವೆಯೋ, ಅವನ ಅಧೀನವಾಗಿ ವಿಶ್ವವ್ಯವಹಾರವೆಲ್ಲವೂ ನಡೆಯುತ್ತವೆ. ಅವನಿಗೆ ಎಲ್ಲವೂ ಅಧೀನ, ಅವನು ಯಾವುದಕ್ಕೂ ಅಧೀನನಲ್ಲ. ಪೂರ್ಣವಾಗಿಯೂ ಸ್ವತಂತ್ರನು.

**ಆರಿತಃ**— ಆಗತ ಇತ್ಯರ್ಥಃ । **ಪುನಃ ಪುನಃ ಸರ್ವಯಜ್ಞೇಷ್ವಾಗತಸ್ಸನ್ ಆಯಜ್ಞಪರಿಸಮಾಪ್ತೇರವಿಚಾಲೀ ।** ಸಕಲ ಯಜ್ಞಗಳಿಗೂ ಪದೇ ಪದೇ ಬಂದು ಯಜ್ಞಪರಿಸಮಾಪ್ತಿಯವರೆಗೂ ನಿಲ್ಲುವವನು ಎಂದು ಸ್ಕಂದಸ್ವಾಮಿಗಳ ವಿವರಣೆ. ಸಾಯಣರು **ಆರಿತಃ ಪ್ರತ್ಯೃತಃ ಸ್ತೋಮಾನ್** (ನಿ. ೫-೧೫) ಎಂಬ ನಿರುಕ್ತದ ವಾಕ್ಯವನ್ನು ಉದಹರಿಸಿ **ಸ್ತುತಿಭಿಃ ಪ್ರತ್ಯೃತಃ ಪ್ರಾಪ್ತೋ ಭವತಿ ।** ಸ್ತುತಿಗಳಿಂದ ಸಮೀಪಿಸಲ್ಪಡುತ್ತಾನೆ ಎಂದರ್ಥವನ್ನು ಮಾಡಿದ್ದಾರೆ. ಈ ಅರ್ಥವೇ ಹೆಚ್ಚು ಹೊಂದಿಕೊಳ್ಳುತ್ತದೆ. ಇದರಂತೆಯೇ,

**ವೃತಂಚಯಃ ಸಹುರಿರ್ವಿಕ್ಷ್ವಾರಿತ ಇಂದ್ರಸ್ಯ ವೋಚಂ ಪ್ರ ಕೃತಾನಿ ವೀರ್ಯಾ ।**
(ಋ. ಸಂ. ೨-೨೧-೩)

ಎಂಬ ಋಕ್ಕಿನಲ್ಲಿ ಉಪಯೋಗಿಸಿರುವ **ಆರಿತಃ** ಎಂಬ ಪದಕ್ಕೂ ಸಹ **ಪಾಲಕತ್ವೇನ ಪ್ರಾಪಿತಃ ।** ಪಾಲಕನಾಗಿ ಸಮೀಪಿಸಲ್ಪಟ್ಟನು. ಎಲ್ಲರಿಗೂ ಸೇರಿದವನಾದನು ಎಂದರ್ಥ.

**ಅಸುನ್ವತಃ**— ಸೋಮರಸವನ್ನು ಹಿಂಡಿ ಯಜ್ಞಾದಿಗಳನ್ನು ಮಾಡದಿರುವ ಅಥವಾ ಯಜ್ಞಕರ್ತರನ್ನು ದ್ವೇಷಿಸುವ.

**ವೀಳೋಶ್ಚಿತ್**— **ವೀಳಯತಿಶ್ಚ ವ್ರೀಳಯತಿಶ್ಚ ಸಂಸ್ತಂಭಕರ್ಮಾಣೌ ।** (ನಿ. ೫-೧೬) ವೀಳ ಮತ್ತು ವ್ರೀಳ ಶಬ್ದಗಳು, ಕಠಿಣ ಅಥವಾ ದೃಢ ಎಂಬರ್ಥದಲ್ಲಿ ಉಪಯೋಗಿಸಲ್ಪಟ್ಟಿವೆ ಎಂದು ನಿರುಕ್ತಕಾರರು ಹೇಳಿ,

**ತದ್ದೇವಾನಾಂ ದೇವತಮಾಯ ಕರ್ತ್ವಮಶ್ರಥ್ನನ್ದೃಳ್ಹಾವ್ರದಂತ ವೀಳಿತಾ ।**
(ಋ. ಸಂ. ೨-೨೪-೩)

ಎಂಬ ಋಕ್ಕನ್ನು ಉದಾಹರಿಸಿದ್ದಾರೆ. ಇಲ್ಲಿ **ವೀಳಿತಾ** ಎನ್ನುವ ಪದಕ್ಕೆ **ದೃಢೀಕೃತಾ** ಎಂದಾಗುವಂತೆ ಇಲ್ಲಿಯೂ ಸಹ **ವೀಳೋಃ** ಎಂದರೆ **ದೃಢಸ್ಯ ।** ಅತ್ಯಂತ ಕಠಿಣನಾದ ಅಥವಾ ದೃಢನಾದ ಎಂದು ಶತ್ರುಪರವಾಗಿ ಅನ್ವಯವಾಗುತ್ತದೆ. ಶತ್ರುವು ಎಷ್ಟೇ ಶಕ್ತಿಯುಳ್ಳವನಾದರೂ, ಎಷ್ಟೇ ಕಠಿಣನಾದರೂ ಅವನನ್ನು ನಾಶಮಾಡುತ್ತಾನೆಂದರ್ಥ. ವೀಳ ಶಬ್ದದ ಪೂರ್ಣವಾದ ಅರ್ಥವನ್ನು ಆ ಪದಪ್ರಯೋಗದ ಉಚಿತವಾದ ಸನ್ನಿವೇಶವನ್ನೂ ಸಹ—

**ಅಕ್ಷ ನೀಳೋ ನೀಳಿತ ನೀಳಯಸ್ವ ಮಾ ಯೊಮಾದಸ್ಮಾದವ ಜೀಹಿಪೋ ನಃ ।**
(ಋ. ಸಂ. ೩-೫೩-೧೯)

ಎಂಬ ಋಕ್ಕಿನಲ್ಲಿ ನೋಡಬಹುದು.

ವ್ಯಾಕರಣಪ್ರಕ್ರಿಯಾ

**ಗವಾಮ್**—ಗೋ ಶಬ್ದ. ಷಷ್ಠೀ ಬಹುವಚನಾಂತರೂಪ. **ಸಾವೇಕಾಚಃ**—(ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಪ್ರಾಪ್ತವಾದರೆ **ನ ಗೋಶ್ವನ್‌ಸಾವವರ್ಣ**—(ಪಾ. ಸೂ. ೬-೧-೧೮೨) ಎಂಬುದರಿಂದ ಉದಾತ್ತಪ್ರತಿಷೇಧ ಬರುತ್ತದೆ.

**ಗೋಪತಿಃ**—ಗವಾಂ ಪತಿಃ ಗೋಪತಿಃ **ಪತ್ಯಾವೈಶ್ವರ್ಯೇ** (ಪಾ. ಸೂ. ೬-೨-೧೮) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ವಶೀ**—ವಶಮಸ್ಯಾಸ್ತೀತಿ ವಶೀ. **ಅತಇನಿಠನೌ**—(ಪಾ. ಸೂ. ೫-೨-೧೧೫) ಎಂಬುದರಿಂದ ಮತ್ವರ್ಥ ದಲ್ಲಿ ಇನಿ ಪ್ರತ್ಯಯ. ಪ್ರತ್ಯಯಸ್ವರ ಬರುತ್ತದೆ.

**ಆರಿತಃ**—ಋ ಗತೌ ಧಾತು. ಣ್ಯಂತದ ಮೇಲೆ ಇದಕ್ಕೆ **ನಿಷ್ಠಾ**—(ಪಾ. ಸೂ. ೩-೨-೧೦೨) ಎಂಬುದ ರಿಂದ ಕ್ತಪ್ರತ್ಯಯ. ಯದ್ಯಪಿ ಣಿಚ್ ಪರವಾದಾಗ **ಅರ್ತಿಹ್ರೀವ್ಲೀ**—(ಪಾ. ಸೂ. ೭-೩-೩೬) ಎಂಬುದರಿಂದ ಇದಕ್ಕೆ ಪುಕಾಗಮ ಬರುತ್ತದೆ. ಆದರೆ **ಆಗಮಶಾಸ್ತ್ರಮನಿತ್ಯಮ್**—ಎಂಬ ವಚನದಿಂದ ಇಲ್ಲಿ ಪುಕಾಗಮ ಬರು ವುದಿಲ್ಲ. ಣಿಚ್ ನಿಮಿತ್ತವಾಗಿ ಧಾತುವಿಗೆ ವೃದ್ಧಿ. ರಪರವಾಗಿ ಬರುತ್ತದೆ. ಪ್ರತ್ಯಯಕ್ಕೆ **ಆರ್ಧಧಾತುಕ- ಸ್ಯೇಡ್ವಲಾದೇಃ**—ಎಂಬುದರಿಂದ ಇಡಾಗಮ. ಅಥವಾ **ಸೂಚಿಸೂತ್ರಿಮೂತ್ರ್ಯಟ್ಯರ್ತ್ಯಶೂರ್ಣೋತಿಭ್ಯಶ್ಚ**—(ಪಾ. ಸೂ. ೩-೧-೨೨-೩) ಎಂಬ ವಚನದಿಂದ ಯಙ್ ಪ್ರತ್ಯಯ. ಅದಕ್ಕೆ **ಯಙೋಽಚಿ ಚ**—(ಪಾ.ಸೂ. ೨-೪-೭೪) ಎಂಬುದ ರಿಂದ ಅನೈಮಿತ್ತವಾಗಿ ಲುಕ್. **ಪ್ರತ್ಯಯಲೋಪೇಪ್ರತ್ಯಯಲಕ್ಷಣಮ್**—ಎಂಬುದರಿಂದ ಪ್ರತ್ಯಯಲಕ್ಷಣ ವಿರುವುದರಿಂದ **ಸನ್ಯಙೋಃ**—(ಪಾ. ಸೂ. ೬-೧-೯) ಎಂಬುದರಿಂದ ದ್ವಿತ್ವ. ಅಭ್ಯಾಸಕ್ಕೆ **ಉರತ್**—ಎಂಬುದ ರಿಂದ ಅತ್ವ. ಹಲಾದಿಶೇಷ. **ರುಕ್‌ರಿಕೌ ಚ ಲುಕಿ**—(ಪಾ.ಸೂ. ೭-೪-೯೧) ಎಂಬುದರಿಂದ ಅಭ್ಯಾಸಕ್ಕೆ ರುಕ್. ಛಾಂದಸವಾಗಿ ತಪ್ರತ್ಯಯಕ್ಕೆ ಇಡಾಗಮ. ಧಾತು ಋಕಾರಕ್ಕೆ ಯಣಾದೇಶ. ಅರ್+ರ್+ಇತ ಎಂದಿರುವಾಗ **ರೋರಿ**—(ಪಾ. ಸೂ. ೮-೩-೧೪) ಎಂಬುದರಿಂದ ಪೂರ್ವದ ರೇಫಕ್ಕೆ ಲೋಪ. ರೇಫಲೋಪನಿಮಿತ್ತ ಪರವಾದುದ ರಿಂದ **ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ**—(ಪಾ. ಸೂ. ೬-೩-೧೧೧) ಎಂಬುದರಿಂದ ಪೂರ್ವದ ಅಕಾರಕ್ಕೆ ದೀರ್ಘ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಕರ್ಮಣಿಕರ್ಮಣಿ**—**ನಿತ್ಯವೀಪ್ಸಯೋಃ**—ಎಂಬುದರಿಂದ ದ್ವಿರ್ವಚನ ಬರುತ್ತದೆ.

**ಅಸುನ್ವತಃ**—ಷುಞ್ ಅಭಿಷವೇ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಶ್ನುವಿಕರಣ. ಸುನ್ವತ್ ಶಬ್ದ ವಾಗುತ್ತದೆ ನ ಸುನ್ವನ್ ಅಸುನ್ವನ್ ತಸ್ಯ. ಅಸುನ್ವತಃ **ತತ್ಪುರುಷೇಂತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ವಧಃ—ಕೃತ್ಯಲ್ಯುಟೋ ಬಹುಲಮ್**—ಎಂಬಲ್ಲಿ ಬಹುಲಗ್ರಹಣವಿರುವುದರಿಂದ **ಹನಶ್ಚ ವಧಃ**—(ಪಾ. ಸೂ. ೩-೩-೭೬) ಎಂಬುದರಿಂದ ಕರ್ತರಿಯಲ್ಲಿ ಅಪ್‌ಪ್ರತ್ಯಯ. ತತ್ಸನ್ನಿಯೋಗದಿಂದ ಧಾತುವಿಗೆ ವಧಾದೇಶ. ಅದು ಅದಂತವಾಗಿದೆ. **ಅತೋಲೋಪಃ**—(ಪಾ. ಸೂ. ೬-೪-೪೮) ಎಂಬುದರಿಂದ ಅಕಾರಲೋಪ. ಅನುದಾತ್ತವಾದ ಅಪ್‌ನಿಮಿತ್ತವಾಗಿ ಉದಾತ್ತ ಅಕಾರಲೋಪವಾದುದರಿಂದ **ಅನುದಾತ್ತಸ್ಯಚ**—(ಪಾ. ಸೂ. ೬-೧-೧೬೧) ಎಂಬುದರಿಂದ ಪ್ರತ್ಯಯಕ್ಕೆ ಉದಾತ್ತಸ್ವರ ಬರುತ್ತದೆ. ॥ ೪ ॥

—:O:—

ಸಂಹಿತಾಪಾಠಃ

ಯೋ ವಿಶ್ವಸ್ಯ ಜಗತಃ ಪ್ರಾಣತಸ್ಪತಿರ್ಯೋ ಬ್ರಹ್ಮಣೇ ಪ್ರಥಮೋ ಗಾ ಅವಿಂದತ್ ।
ಇಂದ್ರೋ ಯೋ ದಸ್ಯೂಁರಧರಾಁ ಅವಾತಿರನ್ಮರುತ್ವಂತಂ ಸಖ್ಯಾಯ ಹವಾಮಹೇ ॥ ೫ ॥

॥ ಪದಪಾಠಃ ॥

ಯಃ । ವಿಶ್ವಸ್ಯ । ಜಗತಃ । ಪ್ರಾಣತಃ । ಪತಿಃ । ಯಃ । ಬ್ರಹ್ಮಣೇ । ಪ್ರಥಮಃ । ಗಾ । ಅವಿಂದತ್ ।
ಇಂದ್ರಃ । ಯಃ । ದಸ್ಯೂನ್ । ಅಧರಾನ್ । ಅವಽಅತಿರತ್ । ಮರುತ್ವಂತಂ । ಸಖ್ಯಾಯ । ಹವಾಮಹೇ ॥ ೫ ॥

॥ ಸಾಯಣಭಾಷ್ಯಂ ॥

ಯ ಇಂದ್ರೋ ವಿಶ್ವಸ್ಯ ಜಗತೋ ಗಚ್ಛತಃ ಪ್ರಾಣತಃ ಪ್ರಶ್ವಸತಃ ಪ್ರಾಣಿಜಾತಸ್ಯ ಪತಿಃ ಸ್ವಾಮೀ ಯಶ್ಚ ಬ್ರಹ್ಮಣೇ ಬ್ರಾಹ್ಮಣಜಾತಿಭ್ಯೋಽಂಗಿರೋಭ್ಯಃ ಪ್ರಥಮೋಽನ್ಯೇಭ್ಯೋ ದೇವೇಭ್ಯಃ ಪೂರ್ವಭಾವೀ ಸನ್ ಪಣಿಭಿರಪಹೃತಾ ಗಾ ಅವಿಂದತ್ । ಅಲಭತ । ಅನ್ಯೇಭ್ಯೋ ದೇವೇಭ್ಯಃ ಪೂರ್ವಮೇವ ತೈರಸುರೈರ್ಯುದ್ಧ್ವಾ ಗಾಃ ಸ್ವಯಮುಲಭತೇತ್ಯರ್ಥಃ । ಅಪಿ ಚ ಯ ಇಂದ್ರೋ ದಸ್ಯೂನುಪಕ್ಷಪಯಿತ್ವಾನಸುರಾನಧರಾನ್ನಿಕೃಷ್ಟಾನ್ಕೃತ್ವಾವಾತಿರತ್ ಅವಧೀತ್ । ಅವತಿರತಿರ್ವಧಕರ್ಮಾ । ತಂ ಮರುತ್ವಂತಮಿಂದ್ರಂ ಸಖ್ಯಾಯಾಹ್ವಯಾಮಹೇ ॥ ಜಗತಃ । ಗಮ್ಲೃ ಸೃಪ್ಲೃ ಗತೌ । ವರ್ತಮಾನೇ ಪೃಷದ್ಬೃಹನ್ಮಹಜ್ಜಗಚ್ಛತೃವಚ್ಚ । ಉ. ೨-೮೪ । ಇತ್ಯತಿಪ್ರತ್ಯಯಾಂತೋ ನಿಪಾತಿತೋ ಜಗಚ್ಛಬ್ದ ಆದ್ಯುದಾತ್ತಃ । ಪ್ರಾಣತಃ । ಶ್ವಸ ಪ್ರಾಣನೇ ಅನ ಚ । ಅಸ್ಮಾಲ್ಲಟಃ ಶತೃ । ಅದಾದಿತ್ವಾಚ್ಛಪೋ ಲುಕ್ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಷಷ್ಠ್ಯಾಃ ಪತಿಪುತ್ರೇತಿ ವಿಸರ್ಜನೀಯಸ್ಯ ಸತ್ವಂ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಇಂದ್ರನು । **ವಿಶ್ವಸ್ಯ**—ಸಮಸ್ತವಾದ । **ಜಗತಃ**—ಜಂಗಮಾತ್ಮಕವಾದ ಭೂತಗಳಿಗೂ, । **ಪ್ರಾಣತಃ**—ಉಸಿರಾಡತಕ್ಕ ಪ್ರಾಣಿಜಾತಗಳಿಗೂ । **ಪತಿಃ**—ಪ್ರಭುವಾಗಿರುವನೋ ; । **ಯಃ**—ಯಾವ ಇಂದ್ರನು । **ಬ್ರಹ್ಮಣೇ**—ಬ್ರಾಹ್ಮಣಜಾತಿಯ ಅಂಗಿರಸ್ಸುಗಳಿಗೆ । **ಪ್ರಥಮಃ**—(ಇತರ ದೇವತೆಗಳಿಗಿಂತಲೂ) ಮೊದಲೇನೇ । **ಗಾಃ**—((ಪಣಿಗಳಿಂದ ಅಪಹೃತಗಳಾದ) ಗೋವುಗಳನ್ನು । **ಅವಿಂದತ್**—ಹೊಂದಿಸಿಕೊಟ್ಟನೋ, (ಅಲ್ಲದೇ) । **ಯಃ ಇಂದ್ರಃ**—ಯಾವ ಇಂದ್ರನು । **ದಸ್ಯೂನ್**—ಹಿಂಸಕರಾದ ಅಸುರರನ್ನು । **ಅಧರಾನ್**—ಕೆಳಕ್ಕಿಳಿಸಿ (ಕೊಬ್ಬಡಗಿಸಿ) । **ಅವಾತಿರತ್**—ಕೊಂದನೋ (ಅಂತಹ) । **ಮರುತ್ವಂತಂ**—ಮರುತ್ತುಗಳೊಡಗೂಡಿದ ಇಂದ್ರನನ್ನು ! **ಸಖ್ಯಾಯ**—ನಮ್ಮೊಡನೆ ಸ್ನೇಹವನ್ನು ಬೆಳೆಸುವುದಕ್ಕಾಗಿ । **ಹವಾಮಹೇ**—ಕರೆಯುತ್ತೇವೆ. ।

ಭಾವಾರ್ಥ

ಯಾವ ಇಂದ್ರನು ಜಂಗಮಾತ್ಮಕವಾದುದೂ ಮತ್ತು ಉಸಿರಾಡತಕ್ಕದ್ದೂ ಆದ ಸಮಸ್ತ ಭೂತಜಾತಗಳಿಗೂ ಪ್ರಭುವಾಗಿರುವನೋ, ಯಾವ ಇಂದ್ರನು ಇತರ ದೇವತೆಗಳಿಗಿಂತಲೂ ಪೂರ್ವಭಾವಿಯಾಗಿಯೇ ಪಣಿಗಳೊಡನೆ ಯುದ್ಧಮಾಡಿ ಅವರು ಅಪಹರಿಸಿದ ಗೋವುಗಳನ್ನು ಮೊದಲು ಅಂಗಿರಸ್ಸುಗಳಿಗೆ ಒದಗಿಸಿಕೊಟ್ಟನೋ ಮತ್ತು ಯಾವ ಇಂದ್ರನು ದಸ್ಯುರೂಪರಾದ ಅಸುರರ ಕೊಬ್ಬನ್ನಡಗಿಸಿ ಅವರನ್ನು ಕೊಂದನೋ ಅಂತಹ ಮರುತ್ತುಗಳೊಡಗೂಡಿದ ಇಂದ್ರನನ್ನು ನಮ್ಮೊಡನೆಯೂ ಸ್ನೇಹವನ್ನು ಬೆಳಸುವುದಕ್ಕಾಗಿ ಕರೆಯುತ್ತೇವೆ.

English Translation

Who is the lord of all moving and breathing creatures, who first recovered the (stolen) cows for the Brahman and who slew the humbled Dasyus : we invoke to become our friend. Indra, attended by the Maruts.

॥ ವಿಶೇಷವಿಷಯಗಳು ॥

ಜಗತಃ ಪ್ರಾಣತಃ ಪತಿಃ—ಜಂಗಮಾತ್ಮಕವಾದ ಭೂತಗಳಿಗೂ ಮತ್ತು ಉಸಿರಾಡತಕ್ಕ ಸಕಲ ಪ್ರಾಣಿಗಳಿಗೂ ಪ್ರಭುವು ಅಥವಾ ಪಾಲಕನು.

ಇಂದ್ರೋ ಮಹ್ನಾ ರೋದಸೀ ಪಪ್ರಥಚ್ಛವ ಇಂದ್ರಃ ಸೂರ್ಯಮರೋಚಯತ್ ।
ಇಂದ್ರೇ ಹ ವಿಶ್ವಾ ಭುವನಾನಿ ಯೇಮಿರ ಇಂದ್ರೇ ಸುವಾನಾಸ ಇಂದವಃ ॥
(ಋ. ಸಂ. ೮-೩-೬)

ಎಂದು ಇಂದ್ರನ ವಿಶ್ವಪ್ರಭುತ್ವವನ್ನು ಪ್ರಶಂಸಿಸಿದೆ.

ಬ್ರಹ್ಮಣೇ ಪ್ರಥಮಾಃ ಗಾಃ ಅವಿಂದತ್—ಬ್ರಹ್ಮಣೇ ಎನ್ನುವುದಕ್ಕೆ ಸ್ಕಂದಸ್ವಾಮಿಗಳು ಬ್ರಾಹ್ಮಣಾದೀನಾಂ ಚತುರ್ಣಾಮಪಿ ವರ್ಣಾನಾಂ । ಬ್ರಾಹ್ಮಣಾದಿ ನಾಲ್ಕು ವರ್ಣದ ಜನರಿಗೂ ಅಸುರರಿಂದ ಅಪಹರಿಸಿದ ಗೋವುಗಳನ್ನು ಪಡೆಯುವಂತೆ ಮಾಡಿದನು ಎಂದು ಅರ್ಥಮಾಡಿದ್ದಾರೆ. ಆದರೆ ಸಾಯಣರು ಬ್ರಹ್ಮಣೇ ಎನ್ನುವ ಪದಕ್ಕೆ ಅಂಗಿರೋಭ್ಯಃ ಎಂದು ಅರ್ಥಮಾಡಿದ್ದಾರೆ. ಈ ಅರ್ಥವೂ ಹೊಂದಿಕೊಳ್ಳುತ್ತದೆ. ಹೇಗೆಂದರೆ ಇಂದ್ರನಿಗೂ ಅಂಗಿರಸ್ಸುಗಳಿಗೂ ಇರತಕ್ಕ ಸಂಬಂಧವು ಬಹಳ ನಿಕಟವಾದುದು. ಅಂಗಿರಸ್ಸುಗಳ ಮೇಲೆ ಇಂದ್ರನ ಅಭಿಮಾನವೂ ಅತ್ಯಧಿಕವಾದುದು. ಈ ಅಂಶವನ್ನು ಋಕ್ಸಂಹಿತೆಯಲ್ಲಿಯೇ ಉಕ್ತವಾಗಿರುವುದು—

ವೀಳೌ ಸತೀರಭಿಧೀರಾ ಅತೃಂದನ್ಪ್ರಾಚಾಹಿನ್ವನ್ಮನಸಾ ಸಪ್ತ ವಿಪ್ರಾಃ ।
ವಿಶ್ವಾಮವಿಂದನ್ಪಥ್ಯಾಮೃತಸ್ಯ ಪ್ರಜಾನನ್ನಿತ್ತಾ ನಮಸಾ ವಿವೇಶ ॥
ವಿದದ್ಯದೀ ಸರಮಾ ರುಗ್ಣಮದ್ರೇರ್ಮಹಿ ಪಾಥಃ ಪೂರ್ವ್ಯಂ ಸಧ್ರ್ಯಕ್ಕಃ ।
ಅಗ್ರಂ ನಯತ್ಸುಪದ್ಯಕ್ಷರಾಣಾಮಚ್ಛಾ ರವಂ ಪ್ರಥಮಾ ಜಾನತೀ ಗಾತ್ ॥
ಅಗಚ್ಛದು ವಿಪ್ರತಮಃ ಸಖೀಯನ್ನಸೂದಯತ್ಸುಕೃತೇ ಗರ್ಭಮದ್ರಿಃ ।
ಸಸಾನ ಮರ್ಯೋ ಯುವಭಿರ್ಮಖಸ್ಯನ್ನಥಾಭವದಂಗಿರಾಃ ಸದ್ಯೋ ಅರ್ಚನ್ ॥
(ಋ. ಸಂ. ೩-೩೧-೫ ರಿಂದ ೭)

ಪುರಾ ಕಿಲಾಂಗಿರಸಾಂ ಗಾವಃ ಪಣಿನಾಮಕೈರಸುರೈರಪಹೃತ್ಯ ನಿಗೂಢೇ ಕಸ್ಮಿಂಶ್ಚಿತ್ಪರ್ವತೇ ಸ್ಥಾಪಿತಾಃ । ತೇ ಚಾಂಗಿರಸಸ್ತತ್ಪ್ರಾಪ್ತ್ಯರ್ಥಮಿಂದ್ರಂ ತುಷ್ಟುವುಃ । ಸ್ತುತಶ್ಚ ಸ ಇಂದ್ರೋ ಗವಾನ್ವೇಷಣಾಯ ದೇವಶುನೀಂ ಪ್ರಾಹಿಣೋತ್ । ಸಾ ಚ ಗವಾಂ ಗವೇಷಣಪರಾ ಸತೀ ತತ್ ಸ್ಥಾನಮುಲಭತ । ತಯಾ ವಿಜ್ಞಾಪಿತ ಇಂದ್ರಸ್ತಾ ಗಾಃ ಆನೀಯಾಂಗಿರೋಭ್ಯಃ ಪ್ರಾದಾದಿತ್ಯೈತಿಹಾಸಿಕೀ ಕಥಾ । ತಥಾ ಚಾಸ್ಯಾ ಋಚೋಽಯಮರ್ಥಃ ।

ಹಿಂದೆ ಅಂಗಿರಸ್ಸುಗಳ ಗೋವುಗಳನ್ನು ಪಣಿಯೆಂಬ ಅಸುರರು ಅಪಹರಿಸಿ ಪರ್ವತದಲ್ಲಿ ಗುಪ್ತವಾದ ಪ್ರದೇಶದಲ್ಲಿ ಮರೆಸಿಟ್ಟಿದ್ದರು. ಆಗ ಅಂಗಿರಸ್ಸುಗಳು ಆ ಗೋವುಗಳನ್ನು ಪಡೆಯಬೇಕೆಂದು ಇಂದ್ರನನ್ನು ಪ್ರಾರ್ಥಿಸಿದರು. ಇಂದ್ರನು ಅವುಗಳನ್ನು ಹುಡುಕುವುದಕ್ಕಾಗಿ ದೇವಶುನಿಯಾದ ಸರಮೆಯನ್ನು ಕಳುಹಿಸಿದನು.

ಆಗ ಅವಳು ಗೋವುಗಳನ್ನು ಹುಡಿಕಿ ಅವುಗಳು ಇರುವ ಸ್ಥಾನವನ್ನು ಇಂದ್ರನಿಗೆ ತಿಳಿಸಿದಾಗ ಇಂದ್ರನು ಹೋಗಿ ಗೋವುಗಳನ್ನು ತಂದು ಅಂಗಿರಸ್ಸುಗಳಿಗೆ ತಲುಪಿಸಿದನೆಂದೂ ಇಂದ್ರನು ಅವರಿಗೆ ಆರಾಧ್ಯದೇವತೆಯಾದನೆಂದೂ ಕಥೆಯು ಋ. ಸಂ. ೧೦-೧೦೮ ರಲ್ಲಿ ಹೇಳಲ್ಪಟ್ಟಿದೆ. ಆದುದರಿಂದ ಇಲ್ಲಿ ಸಾಯಣರ ಅರ್ಥವೂ ಸರಿಯಾಗಿರುತ್ತದೆ

**ಯಃ ದಸ್ಯೂನ್ ಅಧರಾನ್ ಅವಾತಿರತ್**—ದಸ್ಯುಶಬ್ದದ ವಿವರಣೆಯನ್ನು ಹಿಂದಿನ ಸೂಕ್ತದ ೧೨ನೇ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಿದೆ. ಸಮಸ್ತವಾದ ದಸ್ಯುಗಳನ್ನೂ ಕೊಬ್ಬಡಗಿಸಿ ಕೊಂದನೆಂದರ್ಥ.

**ಅವಾತಿರತ್—ದಭ್ನೋತಿ, ಶ್ನಥತಿ** ಇತ್ಯಾದಿ ೩೩ ವಧಕರ್ಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೦) ವಧಮಾಡಿದನೆಂದರ್ಥ.

**ವಿದುಷ್ಟೇ ಅಸ್ಯ ವೀರ್ಯಸ್ಯ ಪೂರವಃ ಪುರೋ ಯದಿಂದ್ರ ಶಾರದೀರವಾತಿರಃ ಸಾಸಹಾನೋ ಅವಾತಿರಃ ।**

(ಋ. ಸಂ. ೧-೧೩೧-೪)

ಎಂಬ ಋಕ್ಕಿನಲ್ಲಿ ಹೇಳಿರುವಂತೆ ಇಲ್ಲಿಯೂ ಸಹ **ಅವಾತಿರತ್** ಎಂದರೆ ನಾಶಮಾಡಿದನು ಎಂದರ್ಥ.

ವ್ಯಾಕರಣಪ್ರಕ್ರಿಯಾ

**ಜಗತಃ**—ಗಮ್ೢ ಸೃಪ್ೢ ಗತೌ ಧಾತು. **ವರ್ತಮಾನೇ ಪೃಷದ್ ಬೃಹನ್ ಮಹತ್ ಜಗತ್ ಶತೃವಚ್ಚ**—(ಉ. ಸೂ. ೨-೨೪೧) ಎಂಬುದರಿಂದ ಅತಿಪ್ರತ್ಯಯಾಂತವಾಗಿ ನಿಪಾತಿತವಾಗಿ ಜಗಚ್ಛಬ್ದವು ಆದ್ಯುದಾತ್ತವಾಗುತ್ತದೆ.

**ಪ್ರಾಣತಃ**—ಶ್ವಸ ಪ್ರಾಣನೇ ಅನ ಚ. ಇದಕ್ಕೆ ಲಡರ್ಥದಲ್ಲಿ ಶತೃ ಪ್ರತ್ಯಯ. ಪ್ರ ಉಪಸರ್ಗ ಅನ್+ಅತ್ ಎಂದಿರುವಾಗ ಪ್ರಾಪ್ತವಾದ ಶಪಿಗೆ **ಅದಿಪ್ರಭೃತಿಭ್ಯಃ ಶಪಃ**—(ಪಾ. ಸದ. ೨-೪-೭೨) ಎಂಬುದರಿಂದ ಲುಕ್. ಪ್ರ+ಅನತ್ ಎಂದಿರುವಾಗ **ಅನಿತೇಃ**—(ಪಾ. ಸೂ. ೮-೪-೧೯) ಎಂಬುದರಿಂದ ಧಾತುವಿನ ನಕಾರಕ್ಕೆ ಣತ್ವ. ನುಮ್‌ರಹಿತ ಶತೃವಿನ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನುಮೋ ನದ್ಯಜಾದೀ**—(ಪಾ. ಸೂ. ೬-೧-೧೭೩) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ. ಪ್ರಾಣತಃ+ಪತಿಃ ಎಂದಿರುವಾಗ **ಷಷ್ಠ್ಯಾಃ ಪತಿಪುತ್ರ**—(ಪಾ. ಸೂ. ೮-೩-೫೩) ಎಂಬುದರಿಂದ ವಿಸರ್ಗಕ್ಕೆ ಸತ್ವ ಬರುತ್ತದೆ.

**ಗಾಃ** — ಗೋಶಬ್ದ. ದ್ವಿತೀಯಾಬಹುವಚನಾಂತರೂಪ. **ಔತೋಽಮ್‌ಶಸೋಃ** — (ಪಾ. ಸೂ. ೬-೧-೯೩) ಎಂಬುದರಿಂದ ಆಕಾರ ಏಕಾದೇಶವಾಗಿ ಬರುತ್ತದೆ. ಪ್ರತ್ಯಯಸಕಾರಕ್ಕೆ ರುತ್ವ ವಿಸರ್ಗ.

**ಅವಿಂದತ್**—ವಿದ್ೢ ಲಾಭೇ. ಧಾತು. ಲಙ್. ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ**—ಎಂಬುದರಿಂದ ಇಕಾರಲೋಪ. **ತುದಾದಿಭ್ಯಃ ಶಃ**—(ಪಾ. ಸೂ. ೩-೧-೭೭) ಎಂಬುದರಿಂದ ಶವಿಕರಣ. ಅದು ಪರವಾದಾಗ **ಶೇಮುಚಾದೀನಾಮ್**—(ಪಾ. ಸೂ. ೭-೧-೫೯) ಎಂಬುದರಿಂದ ನುಮಾಗಮ. ಧಾತುವಿನ ಅಂತ್ಯಾಚಿನ ಪರವಾಗಿ ಬರುತ್ತದೆ. ಅಂಗಕ್ಕೆ ಅಡಾಗಮ ಅವಿಂದತ್ ಎಂದು ರೂಪವಾಗುತ್ತದೆ. **ಯದ್ವೃತ್ತಾ-**

**ನ್ನಿತ್ಯಮ್**—ಎಂಬುದರಿಂದ ಹಿಂದೆ ಯಚ್ಛಬ್ದಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತಪದವಾಗುತ್ತದೆ.

**ದಸ್ಯೂನ್**—ದಸು ಉಪಕ್ಷಯೇ. ಧಾತು. **ಯಜಿಮನಿ ಶುಂಧಿದಸಿಜನಿಭ್ಯೋ ಯುಃ**—(ಉ. ಸೂ. ೩.೩೦೦) ಎಂಬುದರಿಂದ ಯುಪ್ರತ್ಯಯ. ವೃಷಾದಿಯಲ್ಲಿ ಸೇರಿರುವುದರಿಂದ **ವೃಷಾದೀನಾಂ ಚ**—(ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾಬಹುವಚನಾಂತರೂಪ.

**ಅಧರಾನ್—ಅವ—ದೀರ್ಘಾದಟಿ ಸಮಾನಪಾದೇ**—(ಪಾ. ಸೂ. ೮-೩-೯) ಎಂಬುದರಿಂದ ರುತ್ವ. **ಆತೋಽಟಿನಿತ್ಯಮ್**—(ಪಾ. ಸೂ. ೮-೩-೩) ಎಂಬುದರಿಂದ ಪೂರ್ವಕ್ಕೆ ನಿತ್ಯಾನುನಾಸಿಕತ್ವ.

**ಅವಾತಿರತ್**—ಅವ ಉಪಸರ್ಗಪೂರ್ವಕವಾದ ತಿರಧಾತುವು ವಧ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ಲಙ್ ಪ್ರಥಮಪುರುಷ ಏಕವಚನರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ. ಉದಾತ್ತವುಳ್ಳ ತಿಙಂತಪರದಲ್ಲಿರುವುದರಿಂದ ಗತಿಗೆ (ಅವ) **ತಿಙಿ ಚೋದಾತ್ತವತಿ**—(ಪಾ. ಸೂ. ೮-೧-೭೧) ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೫ ॥



ಸಂಹಿತಾಪಾಠಃ

ಯಃ ಶೂರೇಭಿರ್ಹವ್ಯೋ ಯಶ್ಚ ಭೀರುಭಿರ್ಯೋ ಧಾವದ್ಭಿ-
ರ್ಹೂಯತೇ ಯಶ್ಚ ಜಿಗ್ಯುಭಿಃ ।
ಇಂದ್ರಂ ಯಂ ವಿಶ್ವಾ ಭುವನಾಭಿ ಸಂದಧುರ್ಮರುತ್ವಂತಂ
ಸಖ್ಯಾಯ ಹವಾಮಹೇ ॥ ೬ ॥

ಪದಪಾಠಃ

ಯಃ । ಶೂರೇಭಿಃ । ಹವ್ಯಃ । ಯಃ । ಚ । ಭೀರು ऽ ಭಿಃ । ಯಃ । ಧಾವತ್ ऽ-
ಭಿಃ । ಹೂಯತೇ । ಯಃ । ಚ । ಜಿಗ್ಯು ऽ ಭಿಃ ।
ಇಂದ್ರಂ । ಯಂ । ವಿಶ್ವಾ । ಭುವನಾ । ಅಭಿ । ಸಂ ऽ ದಧುಃ । ಮರುತ್ವಂತಂ ।
ಸಖ್ಯಾಯ । ಹವಾಮಹೇ ॥ ೬ ॥

ಸಾಯಣಭಾಷ್ಯಂ

ಯ ಇಂದ್ರಃ ಶೂರೇಭಿಃ ಶೌರ್ಯೋಪೇತೈಃ ಪುರುಷೈರ್ಹವ್ಯೋ ಯೋದ್ಧುಮಾಹ್ವಾತವ್ಯಃ । ಯಶ್ಚ ಭೀರುಭಿರ್ಭಯಶೀಲೈಃ ಕಾತರೈಃ ಪುರುಷೈಃ ಸಹಾಯಾರ್ಥಮಾಹ್ವಾತವ್ಯಃ । ಅಪಿ ಚ ಯ ಇಂದ್ರೋ ಧಾವದ್ಭಿಃ ಪರಾಜಯೇನ ಪಲಾಯಮಾನೈರ್ಹೂಯತೇ ರಕ್ಷಾರ್ಥಮಾಹೂಯತೇ । ಯಶ್ಚ ಜಿಗ್ಯುಭಿಃ ಪ್ರಾಪ್ತಜಯೈರಾಹೂಯತೇ । ಯಂ ಚೇಂದ್ರಂ ವಿಶ್ವಾ ಭುವನಾ ಸರ್ವಾಣಿ ಭೂತಜಾತಾನಿ ಸ್ವೇಷು ಸ್ವೇಷು ಕಾರ್ಯೇಷ್ವಭಿ ಸಂದಧುಃ । ಆಭಿಮುಖ್ಯೇನ ಸ್ಥಾಪಯಂತಿ । ತಂ ಮರುತ್ವಂತಮಿಂದ್ರಂ ಸಖ್ಯಾಯಾಹ್ವಯಾಮಹೇ ॥ ಶೂರೇಭಿಃ । ಬಹುಲಂ ಛಂದಸೀತಿ ಭಿಸ ಐಸಭಾವಃ । ಹವ್ಯಃ । ಹ್ವಯತೇರಚೋ ಯದಿತಿ ಯತ್। ಹ್ವ ಇತ್ಯನುವೃತ್ತಾ ಬಹುಲಂ ಛಂದಸೀತಿ ಸಂಪ್ರಸಾರಣಂ। ಗುಣೇ ಧಾತೋಸ್ತನ್ನಿಮಿತ್ತಸ್ಯೈವೇತ್ಯವಾದೇಶಃ। ಭೀರುಭಿಃ । ಭಿಯಃ ಕ್ರುಕ್ಲುಕನೌ । ಉ ೨-೩೧ । ಇತಿ ಕ್ರುಪ್ರತ್ಯಯಃ। ಧಾವದ್ಭಿಃ। ಸೃ ಗತೌ । ಸರ್ತೇರ್ವೇಗಿತಾಯಾಂ ಶಪಿ ಪಾಘ್ರೇತ್ಯಾದಿನಾ ಧಾವಾದೇಶಃ । ಶಪಃ ಪಿತ್ತ್ವಾದನುದಾತ್ತತ್ವಂ । ಶತುಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರಃ ಶಿಷ್ಯತೇ । ಜಿಗ್ಯುಭಿಃ । ಜಿ ಜಯೇ । ಲಿಟಃ ಕ್ವಸುಃ । ದ್ವಿರ್ವಚನೇ ಸನ್ಲಿಟೋರ್ಜೇರಿತ್ಯಭ್ಯಾಸಾದುತ್ತರಸ್ಯ ಜಕಾರಸ್ಯ ಕುತ್ವಂ । ಭಿಸ್ಯಯಸ್ಮಯಾದಿತ್ವೇನ ಭತ್ವಾದ್ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ । ಛಾಂದಸೋಽಂತ್ಯಲೋಪಃ ।

ಪ್ರತಿಪದಾರ್ಥ

ಯಃ—ಯಾವ ಇಂದ್ರನು । ಶೂರೇಭಿಃ—ಪರಾಕ್ರಮಶಾಲಿಗಳಿಂದಲೂ । ಹವ್ಯಃ—(ಯುದ್ಧದಲ್ಲಿ ಸಹಾಯಾರ್ಥವಾಗಿ) ಕರೆಯಲ್ಪಡುವನೋ । ಯಶ್ಚ—ಯಾವ ಅದೇ ಇಂದ್ರನು । ಭೀರುಭಿಃ—ಭಯಶಾಲಿಗಳಿಂದಲೂ (ಕರೆಯಲ್ಪಡುವನೋ) । ಯಃ—ಯಾವನು । ಧಾವದ್ಭಿಃ—(ಅಪಜಯವನ್ನು ಹೊಂದಿ) ಓಡತಕ್ಕವರಿಂದಲೂ । ಹೂಯತೇ—(ರಕ್ಷಣಾರ್ಥವಾಗಿ) ಕರೆಯಲ್ಪಡುವನೋ । ಯಶ್ಚ—ಯಾವ ಅದೇ ಇಂದ್ರನು । ಜಿಗ್ಯುಭಿಃ—ಜಯವನ್ನು ಪಡೆದವರಿಂದಲೂ (ಕರೆಯಲ್ಪಡುವನೋ) (ಮತ್ತು) । ಯಂ ಇಂದ್ರಂ—ಯಾವ ಇಂದ್ರನನ್ನು । ವಿಶ್ವಾ ಭುವನಾ—ಸಕಲ ಭೂತಜಾತಗಳೂ । ಅಭಿ ಸಂದಧುಃ—(ತಮ್ಮ ತಮ್ಮ ಕರ್ಮಕಾಲಗಳಲ್ಲಿ) ತಮಗೆ ಅಭಿ

ಮುಖವಾಗಿ ಇರಿಸಿಕೊಳ್ಳುವರೋ | **ಮರುತ್ವಂತಂ**—ಮರುತ್ತುಗಳೊಡಗೂಡಿದ ಆ ಇಂದ್ರನನ್ನು | **ಸಖ್ಯಾಯ**—(ನಮ್ಮೊಡನೆಯೂ) ಸ್ನೇಹವನ್ನು ಬೆಳೆಸುವುದಕ್ಕಾಗಿ | **ಹವಾಮಹೇ**—ಕರೆಯುತ್ತೇವೆ.

॥ ಭಾವಾರ್ಥ ॥

ಯಾವ ಇಂದ್ರನನ್ನು ಯುದ್ಧದಲ್ಲಿ ಸಹಾಯಕ್ಕಾಗಿ ಪರಾಕ್ರಮಶಾಲಿಗಳೂ, ಭಯಶಾಲಿಗಳೂ, ಅಪಜಯವನ್ನು ಹೊಂದಿ ಓಡತಕ್ಕವರೂ, ಜಯವನ್ನು ಪಡೆದಿರುವವರೂ ಸಹ ಒಂದೇ ರೀತಿಯಾಗಿ ಸಹಾಯಕ್ಕೂ, ರಕ್ಷಣಾರ್ಥವಾಗಿಯೂ ಕರೆಯುವರೋ, ಮತ್ತು ಯಾವ ಇಂದ್ರನನ್ನು ಸಕಲಭೂತಜಾತಗಳೂ ತಮ್ಮ ತಮ್ಮ ಕರ್ಮಕಾಲಗಳಲ್ಲಿ ತಮಗೆ ಅಭಿಮುಖವಾಗಿ ಇರಿಸಿಕೊಳ್ಳುವರೋ ಮರುತ್ತುಗಳೊಡಗೂಡಿದ ಆ ಇಂದ್ರನನ್ನು ನಮ್ಮೊಡನೆಯೂ ಸ್ನೇಹವನ್ನು ಬೆಳೆಸುವುದಕ್ಕಾಗಿ ಕರೆಯುತ್ತೇವೆ.

English Translation

Who is to be invoked by the brave and by the timid, by the vanquished and by victors, and whom all beings place before them (in their rites) : we invoke to become our friend, Indra, attended by the Maruts.

॥ ವಿಶೇಷವಿಷಯಗಳು ॥

ಇಂದ್ರನನ್ನು—ಯುದ್ಧಮಾಡಲು ತಕ್ಕ ಪರಾಕ್ರಮವುಳ್ಳ ವೀರರು ಯುದ್ಧದಲ್ಲಿ ಸಹಾಯವನ್ನು ಮಾಡುವುದಕ್ಕಾಗಿಯೂ, ಯುದ್ಧವನ್ನು ಮಾಡಲು ಕೈಲಾಗದ ಭೀರುಗಳು ತಮಗೆ ತಕ್ಕ ಸಹಾಯವನ್ನು ಮಾಡುವುದಕ್ಕಾಗಿಯೂ, ಆರ್ತರು ತಮಗೆ ರಕ್ಷಣೆಯನ್ನು ಕೊಡಬೇಕೆಂತಲೂ ಮತ್ತು ಯುದ್ಧಮಾಡಿ ಜಯವನ್ನು ಪಡೆದ ಜಯಶಾಲಿಗಳು ಸಂತೋಷದಿಂದ ತಮ್ಮ ಪೂಜೆಯನ್ನು ಅರ್ಪಿಸುವುದಕ್ಕಾಗಿಯೂ ಒಬ್ಬೊಬ್ಬರೂ ಒಂದೊಂದು ವಿಧದಲ್ಲಿ ಇಂದ್ರನನ್ನು ಪ್ರಾರ್ಥಿಸಿ ಕರೆಯುತ್ತಾರೆ. ಈರೀತಿ ಸಕಲವಿಧವಾದ ಸಹಾಯಗಳನ್ನೂ ಮಾಡಲು ಶಕ್ತಿಯುಳ್ಳ ಇಂದ್ರನು ನಮಗೂ ಸಖನಾಗಲಿ ಎಂದು ಪ್ರಾರ್ಥಿಸಿದೆ. ಇಂದ್ರನ ಈ ನಾನಾವಿಧ ಶಕ್ತಿಯೂ, ಸರ್ವತೋಮುಖವಾದ ಸಂಪತ್ತೂ ಲೋಕಪ್ರಸಿದ್ಧವಾಗಿರುವುದರಿಂದ ಶಕ್ತರು ಸಹಾಯಕ್ಕಾಗಿಯೂ ಅಶಕ್ತರು ರಕ್ಷಣೆಗಾಗಿಯೂ ಅವನನ್ನು ಕರೆಯುತ್ತಾರೆ.

**ತದಸ್ಯೇದಂ ಪಶ್ಯತಾ ಭೂರಿ ಪುಷ್ಟಂ ಶ್ರದಿಂದ್ರಸ್ಯ ಧತ್ತನ ವೀರ್ಯಾಯ |**

(ಋ. ಸಂ. ೧-೧೦೩-೫)

**ವೃಕ್ಷಸ್ಯ ನು ತೇ ಪುರುಹೂತ ವಯಾ ವ್ಯೂತಯೋ ರುರುಹುರಿಂದ್ರ ಪೂರ್ವೀಃ |**

(ಋ. ಸಂ. ೬-೨೪-೩)

ಇತ್ಯಾದಿಋಕ್ಕುಗಳಲ್ಲಿ ಇಂದ್ರನ ವೀರ್ಯವು ಅತ್ಯಂತ ಪುಷ್ಟವಾದುದು, ವೃದ್ಧವಾದುದು, ಬಹುಮುಖವಾದುದು ಆದುದರಿಂದ ಆ ವೀರ್ಯಕ್ಕನುಗುಣವಾದ ರಕ್ಷಣೆಯೂ ನಾನಾ ವಿಧವಾದುದು. ವೃಕ್ಷದ ಕೊಂಬೆಗಳು ಯಾವರೀತಿ ನಾನಾ ಮುಖಗಳಾಗಿ ಹರಡುತ್ತವೆಯೋ ಅದೇ ರೀತಿ ಇಂದ್ರನ ರಕ್ಷಣೆಗಳೂ ಸಹ ನಾನಾ ಮುಖಗಳಾಗಿ ಹರಡುತ್ತವೆ

ಈ ವಿಧವಾದ ರಕ್ಷಣಾಶಕ್ತಿಯುಳ್ಳ ಇಂದ್ರನು, ತನ್ನ ಭಕ್ತರ ಸಖನಾಗಿ ಮಾತ್ರವಲ್ಲ, ಅತ್ಯಂತ ಪ್ರೀತಿಪಾತ್ರವಾದ ತಂದೆಯಂತೆ ಭಕ್ತರನ್ನು ಸಲಹುತ್ತಾನೆ ಎಂಬುದೂ ಕೂಡ ಲೋಕವಿಧಿತವಾಗಿದೆ.

**ಸಖಾ ಪಿತಾ ಪಿತೃತಮಃ ಪಿತೄಣಾಂ ಕರ್ತೇಮು ಲೋಕಮುಶತೇ ವಯೋಧಾಃ ।**
(ಋ. ಸಂ. ೪-೧೭-೧೭)

ಇಂತಹ ಆದರ ಪೂರ್ವಕವಾದುದೂ, ಶಕ್ತಿಯುತವಾದುದೂ ಆದ ಸಹಾಯವಿರುವುದರಿಂದಲೇ.

**ಇಂದ್ರ ಪ್ರ ಣಃ ಪುರಏತೇವ ಪಶ್ಯ ಪ್ರ ನೋ ನಯ ಪ್ರತರಂ ವಸ್ಯೋ ಅಚ್ಛ ।**
**ಭವಾ ಸುಪಾರೋ ಅತಿಪಾರಯೋ ನೋ ಭವಾ ಸುನೀತಿರುತ ವಾಮನೀತಿಃ ॥**
(ಋ. ಸಂ. ೬-೪೭-೭)

ಮಾರ್ಗದಲ್ಲಿ ಪ್ರಯಾಣವನ್ನು ಮಾಡುವವರಿಗೆ ಮಾರ್ಗದರ್ಶಕನು ಯಾವ ವಿಧದಲ್ಲಿ ರಕ್ಷಕನಾಗಿರುವನೋ ಅದರಂತೆ ನೀನೂ ಸಹ ನಮಗೆ ರಕ್ಷಕನಾಗಿದ್ದುಕೊಂಡು ನಮ್ಮನ್ನು ಅಪಾಯಗಳಿಂದ ರಕ್ಷಿಸಿ ನಮಗೆ ಸೌಖ್ಯವನ್ನು ಕೊಡು ಎಂದು ಅನೇಕಕಡೆ ಅನೇಕವಿಧವಾದ ಪ್ರಾರ್ಥನೆಯಿರುವುದನ್ನು ಪ್ರಕೃತವಾದ ಈ ಋಕ್ಕಿನಲ್ಲಿ **ಯಃ ಶೂರೇಭಿಃ, ಭೀರುಭಿಃ ಧಾವದ್ಭಿಃ, ಜಿಗ್ಯುಭಿಃ ಹೂಯತೇ** ಎಂದು ವರ್ಣಿಸಿದೆ.

**ಜಿಗ್ಯುಭಿಃ—ಪ್ರಾಪ್ತಜಯೈಃ**—ಜಯವನ್ನು ಹೊಂದಿದವರೂ ಸಹ ಪೂಜೆಮಾಡುವುದಕ್ಕಾಗಿ ಇಂದ್ರನನ್ನು ಪ್ರಾರ್ಥಿಸಿ ಕರೆಯುತ್ತಾರೆ.

**ಅಭಿ ಸಂದಧುಃ—ಅಭಿಮುಖ್ಯೇನ ಸ್ಥಾಪಯಂತಿ । ತಸ್ಯ ತಸ್ಯ ಅಭಿಲಷಿತಸ್ಯ ದಾನಾರ್ಥಂ ಧ್ಯಾಯಂತಿ ।** ತಮ್ಮ ತಮ್ಮ ವೈಯಕ್ತಿಕವಾದ ಇಷ್ಟಾರ್ಥವು ನೆರವೇರುವುದಕ್ಕಾಗಿ ಇಂದ್ರನನ್ನು ತಮ್ಮ ತಮ್ಮ ಅಭಿಮುಖವಾಗಿ ಇಟ್ಟುಕೊಂಡು ಧ್ಯಾನವನ್ನೂ ಪೂಜೆಯನ್ನೂ ಮಾಡುತ್ತಾರೆ. ಒಬ್ಬೊಬ್ಬರಿಗೆ ಒಂದೊಂದು ಅಭಿಲಷಿತವಿರುವುದರಿಂದ **ವಿಶ್ವಾ ಭುವನಾ**—ಸಕಲಭೂತಜಾತಗಳೂ ಇಂದ್ರನನ್ನು ಆರಾಧಿಸುತ್ತವೆ.

ವ್ಯಾಕರಣಪ್ರಕ್ರಿಯಾ

**ಶೂರೇಭಿಃ**—ಶೂರ ಶಬ್ದಕ್ಕೆ ಭಿಸ್ ಪರವಾದಾಗ ಬಹುಲಂ ಛಂದಸಿ—(ಪಾ. ಸೂ. ೭-೧-೧೦) ಎಂಬುದರಿಂದ ಅದಕ್ಕೆ ಐಸ್ ವಿಕಲ್ಪವಾಗುತ್ತದೆ ಎಂಬುದರಿಂದ ಇಲ್ಲಿ ಐಸ್ ಬರುವುದಿಲ್ಲ. **ಬಹುವಚನೇ ಝಲ್ಯೇತ್**—ಎಂಬುದರಿಂದ ಏತ್ವ.

**ಹವ್ಯಃ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಅಜಂತವಾದುದರಿಂದ **ಅಚೋ ಯತ್**—(ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ. **ಹ್ವಃ ಸಂಪ್ರಸಾರಣಮ್**—(ಪಾ. ಸೂ. ೬-೧-೩೨) ಎಂಬ ಸೂತ್ರದಿಂದ ಹ್ವಃ ಎಂದು ಅನುವೃತ್ತವಾಗುವಾಗ ಬಹುಲಂ ಛಂದಸಿ—(ಪಾ. ಸೂ. ೬-೧-೩೪) ಎಂಬುದರಿಂದ ಇಲ್ಲಿಯೂ ಸಂಪ್ರಸಾರಣ ಬರುತ್ತದೆ. **ಸಂಪ್ರಸಾರಣಾಚ್ಚ**—ಎಂಬುದರಿಂದ ಪೂರ್ವರೂಪ. ಹು-ಯ ಎಂದಿರುವಾಗ **ಸಾರ್ವಧಾತುಕಾರ್ಧಧಾತುಕಯೋಃ**—ಎಂಬುದರಿಂದ ಉಕಾರಕ್ಕೆ ಗುಣ. ಇಲ್ಲಿ ಯ ನಿಮಿತ್ತವಾಗಿಯೇ

ಗುಣ ಬಂದುದರಿಂದ **ಧಾತೋಸ್ತನ್ನಿಮಿತ್ತಸ್ಯೈವ**—(ಪಾ. ಸೂ. ೬-೧-೮೦) ಎಂಬುದರಿಂದ ವಾಂತಾದೇಶ. ಹವ್ಯ ಎಂದು ರೂಪವಾಗುತ್ತದೆ. **ಯತೋಽನಾವಃ**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಭೀರುಭಿಃ—ಞಿಭೀ ಭಯೇ ಧಾತು. **ಭಿಯಃಕ್ರುಕ್ಲುಕನೌ**—(ಪಾ. ಸೂ. ೩-೨-೧೭೪) ಎಂಬುದ ಕ್ರುಪ್ರತ್ಯಯ. **ಅಶಕ್ಯತದ್ಧಿತೇ**—ಎಂಬುದರಿಂದ ಆದಿಯಕಕಾರ ಇತ್ತಾಗುತ್ತದೆ. ಭೀರು ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ತೃತೀಯಾಬಹುವಚನಾಂತರೂಪ.

**ಧಾವದ್ಭಿಃ**—ಸೃ ಗತೌ ಧಾತು. ಇದಕ್ಕೆ ಲಡರ್ಥದಲ್ಲಿ ಶತೃಪ್ರತ್ಯಯ. ಗತ್ಯರ್ಥವು ತೋರುವಾಗ **ಪಾಘ್ರಾಧ್ಮಾ**—(ಪಾ. ಸೂ. ೭-೩-೭೮) ಎಂಬುದರಿಂದ ಧಾತುವಿಗೆ ಶಪ್ ಪರವಾದಾಗ ಧೌ ಆದೇಶ ಬರುತ್ತದೆ. ಧೌ+ಅ+ಅತ್—ಎಂದಿರುವಾಗ ಔಕಾರಕ್ಕೆ ಆವಾದೇಶ. **ಅತೋ ಗುಣೇ**—ಸೂತ್ರದಿಂದ ಪರರೂಪ. ಧಾವತ್ ಶಬ್ದವಾಗುತ್ತದೆ. ಶಪ್ ಪಿತ್ತಾದುದರಿಂದ ಅನುದಾತ್ತ. ಅದುಪದೇಶದ ಪರದಲ್ಲಿ ಲಸಾರ್ವಧಾತುಕವು (ಅತ್) ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುತ್ತದೆ. ಆಗ ಧಾತುವಿನ ಅಂತೋದಾತ್ತಸ್ವರ ಉಳಿಯುತ್ತದೆ.

**ಜಿಗ್ಯುಭಿಃ**—ಜಿ ಜಯೇ ಧಾತು. ಇದಕ್ಕೆ ಲಿಟ್ವಿವಕ್ಷಾ ಮಾಡಿದಾಗ **ಕ್ವಸುಶ್ಚ**—(ಪಾ. ಸೂ. ೩-೨-೧೦೭) ಎಂಬುದರಿಂದ ಅದಕ್ಕೆ ಕ್ವಸುಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. ಜಿಜಿ+ವಸ್ ಎಂದಿರುವಾಗ **ಸನ್ಲಿಟೋರ್ಜೇಃ**—(ಪಾ. ಸೂ. ೭-೩-೫೭) ಎಂಬುದರಿಂದ ಅಭ್ಯಾಸದ ಪರದಲ್ಲಿರುವ ಧಾತುವಿನ ಜಕಾರಕ್ಕೆ ಕುತ್ವದಿಂದ ಗಕಾರಾದೇಶ. ಜಿಗ್ವಸ್ ಶಬ್ದವಾಗುತ್ತದೆ. ಇದಕ್ಕೆ ಭಿಸ್ ಪರವಾಗ **ಅಯಸ್ಮಯಾದೀನಿ ಛಂದಸಿ**—(ಪಾ. ಸೂ. ೧-೪-೨೦) ಎಂಬುದರಿಂದ ಭಸಂಜ್ಞಾ ಬರುವುದರಿಂದ **ವಸೋಃ ಸಂಪ್ರಸಾರಣಮ್**—(ಪಾ. ಸೂ. ೬-೪-೧೩೧) ಎಂಬುದರಿಂದ ವಸುವಿನ ವಕಾರಕ್ಕೆ ಸಂಪ್ರಸಾರಣ ಬರುತ್ತದೆ. ಛಾಂದಸವಾಗಿ ಸಕಾರಕ್ಕೆ ಲೋಪ ಬರುತ್ತದೆ. ಜಿಗ್ಯುಭಿಃ ಎಂದು ರೂಪವಾಗುತ್ತದೆ.

**ವಿಶ್ವಾ ಭುವನಾ**—ನಪುಂಸಕದಲ್ಲಿ **ಶೇಶ್ಛಂದಸಿ ಬಹುಲಮ್**—ಎಂಬುದರಿಂದ ಶಿಗೆ ಲೋಪ.

**ಸಂದಧುಃ**—ಡುಧಾಞ್ ಧಾರಣಪೋಷಣಯೋಃ ಧಾತು. ಲಿಟ್ಪ್ರಥಮಪುರುಷ ಬಹುವಚನರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. **ತಿಙಂ ಚೋದಾತ್ತವತಿ**—(ಪಾ. ಸೂ. ೮-೧-೭೧) ಎಂಬುದರಿಂದ ಸಮ್ ಎಂಬುದಕ್ಕೆ ಅನುದಾತ್ತಸ್ವರ ಬರುತ್ತದೆ. ॥ ೬ ॥

——— ೩೦: ———

ಸಂಹಿತಾಪಾಠಃ

ರುದ್ರಾಣಾಮೇತಿ ಪ್ರದಿಶಾ ವಿಚಕ್ಷಣೋ ರುದ್ರೇಭಿರ್ಯೋಷಾ
ತನುತೇ ಪೃಥು ಜ್ರಯಃ।
ಇಂದ್ರಂ ಮನೀಷಾ ಅಭ್ಯರ್ಚತಿ ಶ್ರುತಂ ಮರುತ್ವಂತಂ ಸಖ್ಯಾ-
ಯ ಹವಾಮಹೇ ॥ ೭ ॥

ಪದಪಾಠಃ

ರುದ್ರಾಣಾಂ । ಏತಿ । ಪ್ರಽದಿಶಾ । ವಿಽಚಕ್ಷಣಃ । ರುದ್ರೇಭಿಃ । ಯೋಷಾ ।
ತನುತೇ। ಪೃಥು। ಜ್ರಯಃ ।
ಇಂದ್ರಂ । ಮನೀಷಾ । ಅಭಿ । ಅರ್ಚತಿ । ಶ್ರುತಂ । ಮರುತ್ವಂತಂ । ಸಖ್ಯಾಯ ।
ಹವಾಮಹೇ ॥ ೭ ॥

ಸಾಯಣಭಾಷ್ಯಂ

ವಿಚಕ್ಷಣಃ ಸೂರ್ಯಾತ್ಮನಾ ಪ್ರಕಾಶಮಾನ ಇಂದ್ರೋ ರುದ್ರಾಣಾಂ ರುದ್ರಪುತ್ರಾಣಾಮಧ್ಯಾತ್ಮಂ ಪ್ರಾಣರೂಪೇಣ ವರ್ತಮಾನಾನಾಂ ಮರುತಾಂ । ಯದ್ವಾ। ರೋದಯಿತೄಣಾಂ ಪ್ರಾಣಾನಾಂ । ಪ್ರಾಣಾ ಹಿ ಶರೀರಾನ್ನಿರ್ಗತಾಃ ಸಂತೋ ಬಂಧುಜನಾನ್ರೋದಯಂತಿ । ಪ್ರದಿಶಾ ಪ್ರದೇಶನೇನ ಮನುಷ್ಯೇಭ್ಯಃ ಪ್ರದಾನೇನ ಸಹೈತಿ । ಅಂತರಿಕ್ಷೇ ಗಚ್ಛತಿ। ತಥಾ ಚಾಮ್ನಾಯತೇ । ಯೋಽಸೌ ತಪನ್ನುದೇತಿ । ಸ ಸರ್ವೇಷಾಂ ಭೂತಾನಾಂ ಪ್ರಾಣಾನಾದಾಯೋದೇತಿ । ತೈ. ಆ. ೧-೧೪-೧ । ಇತಿ । ಅಪಿ ಚ ರುದ್ರೇಭಿರಧಿಭೂತಂ ವರ್ತಮಾನೈ ರುದ್ರಪುತ್ರೈರ್ಮರುದ್ಭಿರ್ಯೋಷಾ ಮಾಧ್ಯಮಿಕಾ ವಾಕ್ ಪೃಥು ವಿಸ್ತೀರ್ಣಂ ಜ್ರಯೋ ವೇಗಂ ತನುತೇ । ವಿಸ್ತಾರಯತಿ। ಪ್ರಸಂಗಾದತ್ರ ಮರುತಾಂ ಸ್ತುತಿಃ। ತೈರ್ಮರುದ್ಭಿಃ ಸಹ ವರ್ತಮಾನಂ ಶ್ರುತಂ ಪ್ರಖ್ಯಾತಂ ಸೂರ್ಯಾತ್ಮಾನಮಿಂದ್ರಂ ಮನೀಷಾ ಸ್ತುತಿಲಕ್ಷಣಾ ವಾಕ್ ಅಭ್ಯರ್ಚತಿ। ಅಭಿಮುಖ್ಯೇನ ಸ್ತೌತಿ । ತಂ ಮರುತ್ವಂತಮಿಂದ್ರಂ ಸಖ್ಯಾಯಾಹ್ವಯಾಮಹೇ ॥ ಪ್ರದಿಶಾ । ದಿಶ ಅತಿಸರ್ಜನೇ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಜ್ರಯಃ । ಜಿ ಜ್ರಿ ಅಭಿಭವೇ। ಜ್ರೀಯತೇಽಭಿಭೂಯತೇಽನೇನೇತಿ ಜ್ರಯೋ ವೇಗಃ । ಕರಣೇಽಸುನ್ । ಮನೀಷಾ । ಈಷಾಅಕ್ಷಾದಿತ್ವಾತ್ಪ್ರಕೃತಿಭಾವಃ ॥

ಪ್ರತಿಪದಾರ್ಥ

**ವಿಚಕ್ಷಣಃ**—(ಸೂರ್ಯರೂಪದಿಂದ) ಪ್ರಕಾಶಮಾನನಾದ ಇಂದ್ರನು । **ರುದ್ರಾಣಾಂ**—(ಸಮಸ್ತ ಪ್ರಾಣಿಗಳಲ್ಲಿಯೂ ಪ್ರಾಣರೂಪದಿಂದ ಇರುವ) ರುದ್ರಪುತ್ರರಾದ ಮರುತ್ತುಗಳ (ನ್ನು) ಅಥವಾ ರೋದನಕಾರಿಗಳಾದ ಪ್ರಾಣಗಳ(ನ್ನು) । **ಪ್ರದಿಶಾ**—(ಸಕಲ ಪ್ರಾಣಿಗಳಿಗೂ) ಒದಗಿಸಿಕೊಡುವುದರ ಮೂಲಕ । **ಏತಿ**—(ಅಂತರಿಕ್ಷದಲ್ಲಿ) ಸಂಚರಿಸುತ್ತಾನೆ । **ರುದ್ರೇಭಿಃ**—(ಪ್ರಾಣರೂಪದ) ಮರುತ್ತುಗಳಿಂದ (ಸಹಾಯದಿಂದ) । **ಯೋಷಾ**—ಮಾನುಷ ವಾಕ್ಕು । **ಪೃಥು**—ವಿಸ್ತೃತವಾಗಿಯೂ । **ಜ್ರಯಂ**—ವೇಗವಾಗಿಯೂ । **ತನುತೇ**—ಹರಡುತ್ತದೆ । **ಶ್ರುತಂ**—ಪ್ರಸಿದ್ಧನಾದ । **ಇಂದ್ರಂ**—ಇಂದ್ರನನ್ನು । **ಮನೀಷಾ**—ಸ್ತುತಿರೂಪವಾದ ವಾಕ್ಕು । **ಅಭ್ಯರ್ಚತಿ**—ಅಭಿಮುಖವಾಗಿ ಸ್ತೋತ್ರಮಾಡುತ್ತದೆ । **ಮರುತ್ವಂತಂ**—ಮರುತ್ತುಗಳೊಡನೆ ಕೂಡಿದ (ಅಂತಹ) ಇಂದ್ರನನ್ನು । **ಸಖ್ಯಾಯ**—(ನಮ್ಮೊಡನೆ) ಸ್ನೇಹವನ್ನು ಬೆಳೆಸುವುದಕ್ಕಾಗಿ **ಹವಾಮಹೇ**—ಕರೆಯುತ್ತೇವೆ ॥

ಭಾವಾರ್ಥ

ಪ್ರಕಾಶಮಾನನಾದ ಇಂದ್ರನು ಸಕಲ ಪ್ರಾಣಿಗಳಿಗೂ ಪ್ರಾಣರೂಪರಾದ ಮರುತ್ತುಗಳನ್ನು ಒದಗಿಸಿಕೊಡುವುದರ ಮೂಲಕ ಸೂರ್ಯರೂಪದಿಂದ ಅಂತರಿಕ್ಷದಲ್ಲಿ ಸಂಚರಿಸುತ್ತಾನೆ. ಮರುತ್ತುಗಳ ಸಹಾಯದಿಂದ ಮನುಷ್ಯರ ವಾಕ್ಕು ವಿಸ್ತೃತವಾಗಿಯೂ ವೇಗವಾಗಿಯೂ ಹರಡುತ್ತದೆ. ಸ್ತುತಿರೂಪವಾದ ವಾಕ್ಕು ಪ್ರಸಿದ್ಧನಾದ ಇಂದ್ರನ ಅಭಿಮುಖವಾಗಿ ನಿಂತು ಸ್ತೋತ್ರಮಾಡುತ್ತಿದೆ. ಮರುತ್ತುಗಳೊಡಗೂಡಿದ ಇಂತಹ ಇಂದ್ರನನ್ನು ನಮ್ಮೊಡನೆ ಸ್ನೇಹವನ್ನು ಬೆಳೆಸುವುದಕ್ಕಾಗಿ ಕರೆಯುತ್ತೇವೆ.

English Translation

The radiant Indra proceeds (along the firmament) with the manifestation of the Rudras: through the Rudras, speech spreads with more expansive celerity, and praise glorifies the renowned Indra ; him, attended by the Maruts, we invoke to be come our friend.

॥ ವಿಶೇಷವಿಷಯಗಳು ॥

ವಿಚಕ್ಷಣಃ ರುದ್ರಾಣಾಂ ಪ್ರದಿಶಾ ಏತಿ—ಸೂರ್ಯಾತ್ಮನಾ ಪ್ರಕಾಶಮಾನಃ ಇಂದ್ರಃ ರುದ್ರಪುತ್ರಾಣಾಂ ಅಧ್ಯಾತ್ಮಂ ಪ್ರಾಣರೂಪೇಣ ವರ್ತಮಾನಾನಾಂ ಮರುತಾಂ ಮನುಷ್ಯೇಭ್ಯಃ ಪ್ರದಾನೇನ ಸಹ ಅಂತರಿಕ್ಷೇ ಆಗಚ್ಛತಿ । ಸೂರ್ಯರೂಪದಿಂದ ಪ್ರಕಾಶಮಾನನಾದ ಇಂದ್ರನು ಸಮಸ್ತಪ್ರಾಣಿಗಳಲ್ಲಿಯೂ ಪ್ರಾಣರೂಪದಿಂದ ಇರುವ ರುದ್ರಪುತ್ರರಾದ ಮರುತ್ತುಗಳನ್ನು ಸಕಲಪ್ರಾಣಿಗಳಿಗೂ ಒದಗಿಸಿಕೊಡುವುದರ ಮೂಲಕ ಅಂತರಿಕ್ಷದಲ್ಲಿ ಸಂಚರಿಸುತ್ತಾನೆ. ಎಂದು ಸಾಯಣರ ವ್ಯಾಖ್ಯಾನ. ಸ್ಕಂದಸ್ವಾಮಿಗಳು ;

ಪ್ರದಿಶಾ—ಎನ್ನುವುದಕ್ಕೆ ಆದೇಶೇನ, ವಚನೇನ, ಏತಿ ಗಚ್ಛತಿ ಅಥವಾ ರುದ್ರ ಇತಿ ಸ್ತೋತೄಣಾಂ ಸ್ತೋತೄಣಾಂ ಆದೇಶೇನ ಗಚ್ಛತಿ । ಅಥವಾ ಸ್ತೋತೃಗಳ ಪ್ರಾರ್ಥನಾ ವಾಕ್ಯಗಳಂತೆ ಅಲ್ಲಲ್ಲಿ ಹೋಗುತ್ತಾನೆ. ಎಂದು ಅರ್ಥವನ್ನು ಮಾಡಿದ್ದಾರೆ. ಇದಕ್ಕೆ ಹಿಂದಿನ ಸೂಕ್ತದ ಭಾವವನ್ನು ನೋಡಿದರೆ, ಪ್ರತಿಯೊಬ್ಬನೂ ಇಂದ್ರನನ್ನು

ಪ್ರಾರ್ಥಿಸಿ ಕರೆಯುವುದರಿಂದ ಎಲ್ಲರಿಗೂ ಸಖನಾದ ಇಂದ್ರನು ಅವನವನ ಪ್ರಾರ್ಥನೆಯನ್ನು ಅಂಗೀಕರಿಸಿ ಹೋಗಲೇ ಬೇಕಾಗುತ್ತದೆ. ಮತ್ತು **ರೇಭಃ, ಜರಿತಾ, ಕಾರುಃ** ಇತ್ಯಾದಿ ೧೩ ಸ್ತೋತೃನಾಮಗಳಲ್ಲಿ **ರುದ್ರ**ಶಬ್ದವು ಪಠಿತವಾಗಿರುವುದರಿಂದಲೂ, ಹಿಂದಿನ ಋಕ್ಕಿನ ಭಾವವು ಇಲ್ಲಿಯೂ ಇರುವುದರಿಂದಲೂ ಈ ಅರ್ಥವೂ ಹೊಂದಿಕೊಳ್ಳುವುದು. ಆದರೆ, **ರುದ್ರ**ಶಬ್ದಕ್ಕೆ ಮರುತ್ತುಗಳೆಂದು ಅರ್ಥಮಾಡಿದರೇನೆ ಸಹಜವಾಗಿರುತ್ತದೆ. ಇಂದ್ರನಿಗೂ ಮರುತ್ತುಗಳಿಗೂ ನಿಯತವಾದ ಸಾಹಚರ್ಯವಿರುವುದರಿಂದಲೂ, (೧೭೨-೩ನೇ ಪುಟವನ್ನು ನೋಡಿ) ನಿಕಟವಾದ ಸಂಬಂಧವಿರುವುದರಿಂದಲೂ ಮರುತ್ತುಗಳ ಇಷ್ಟದಂತೆ ಅಂತರಿಕ್ಷದಲ್ಲಿ ಸಂಚರಿಸುತ್ತಾನೆ ಎಂದು ಮೊದಲನೆಯ ಅರ್ಥವೂ ಸರಿಯಾಗಿದೆ. ಸೂರ್ಯರೂಪದಲ್ಲಿ ಇಂದ್ರನು ಸಕಲಪ್ರಾಣಿಗಳಿಗೂ ಪ್ರಾಣರೂಪವಾದ ವಾಯುವನ್ನು ಒದಗಿಸಿಕೊಡುವ ವಿಷಯವನ್ನು ಮುಂದೆ ಚರ್ಚಿಸಲಾಗುತ್ತೆ.

ವಿಚಕ್ಷಣಃ— **ಪಂಡಿತಃ** ಎಂದು ಸ್ಕಂದಸ್ವಾಮಿಗಳೂ, **ಸೂರ್ಯಾತ್ಮನಾ ಪ್ರಕಾಶಮಾನಃ** ಎಂದು ಸಾಯಣರೂ ಅರ್ಥಮಾಡಿದ್ದಾರೆ. ಮೊದಲನೆಯ ಅರ್ಥದಲ್ಲಿಯೇ **ವಿಚಕ್ಷಣ** ಶಬ್ದವು ಸಂಹಿತಾವಾಕ್ಯಗಳಲ್ಲೆಲ್ಲಾ, ಇರುವುದರಿಂದಲೂ, ಸಾಯಣರೂ ಸಹ ಈ ಪದಕ್ಕೆ ಪ್ರಾಜ್ಞ. **ಸರ್ವಜ್ಞಃ,** ಎಂದು ಉಳಿದ ಕಡೆಗಳಲ್ಲಿಯೂ, ಎಂದರೆ—

**ತ್ವಂ ನೋ ಗೋಪಾಃ ಪಥಿಕೃದ್ವಿಚಕ್ಷಣಸ್ತವ ವ್ರತಾಯ ಮತಿಭಿರ್ಜರಾಮಹೇ ।**

(ಋ. ಸಂ. ೨-೨೩-೬)

**ವೈಶ್ವಾನರ ತವ ಧಾಮಾನ್ಯಾ ಚಕೇ ಯೇಭಿಃ ಸ್ವರ್ವಿದಭವೋ ವಿಚಕ್ಷಣ ।**

(ಋ. ಸಂ. ೩-೩-೧೦)

**ಪ್ರ ತೇ ಬಭ್ರೂ ವಿಚಕ್ಷಣ ಶಂಸಾಮಿ ಗೋಷಣೋ ನಪಾತ್ ।**

( ಋ. ಸಂ. ೪-೩೨-೨೨ )

ಇತ್ಯಾದಿ ಅನೇಕ ಋಕ್ಕುಗಳಲ್ಲಿ **ವಿಚಕ್ಷಣ** ಶಬ್ದಕ್ಕೆ ಪ್ರಾಜ್ಞನೆಂದೇ ಅರ್ಥಮಾಡಿರುವುದರಿಂದಲೂ ಇಲ್ಲಿಯೂ ಅದೇ ಅರ್ಥವು ಹೊಂದಿಕೊಳ್ಳುವುದರಿಂದಲೂ ಸ್ಕಂದಸ್ವಾಮಿಗಳು ಮಾಡಿರುವ ಅರ್ಥವೇ ಸರಿಯಾಗಿರುವುದು.

**ಯೋಷಾ—ಮಾಧ್ಯಮಿಕಾ ವಾಕ್** ಎಂದು ಸಾಯಣರೂ, **ಸೋಮಾಹುತಿಲಕ್ಷಣಾ** ಎಂದು ಸ್ಕಂದಸ್ವಾಮಿಗಳೂ ಅರ್ಥಮಾಡಿರುತ್ತಾರೆ.

**ಜ್ರಯಃ—ವರ್ತತೇ ಅಯತೇ** ಇತ್ಯಾದಿ ೧೨೨ **ಗತಿಕರ್ಮ**ನಾಮಗಳಲ್ಲಿ ಪಠಿತವಾಗಿರುವುದರಿಂದ **ಜ್ರಯ** ಶಬ್ದಕ್ಕೆ ಗತಿಯೆಂದರ್ಥ. ಇಲ್ಲಿ ವೇಗವಾದ ಗತಿಯೆಂದಭಿಪ್ರಾಯ. ಗಮನದಲ್ಲೂ ಒಂದು ವೈಶಿಷ್ಟ್ಯವನ್ನು ತೋರಿಸುವ ಗಮನದ ವೇಗವನ್ನು ಹೇಳಲು **ಜ್ರಯ** ಶಬ್ದವನ್ನು ಅನೇಕ ಕಡೆಗಳಲ್ಲಿ ಉಪಯೋಗಿಸಿದೆ ಉದಾಹರಣೆಗೆ

**ಅಧೀವಾಸಂ ಪರಿ ಮಾತೂ ರಿಹನ್ನಹ ತುವಿಗ್ರೇಭಿಃ ಸತ್ವಭಿರ್ಯಾತಿ ವಿ ಜ್ರಯಃ ।**

(ಋ. ಸಂ. ೧-೧೪೦-೯.)

ಇಲ್ಲಿ ದಾವಾಗ್ನಿಯು ಪ್ರಸರಿಸುವ ವೇಗವು ವರ್ಣಿತವಾಗಿದೆ.

**ಪ್ರತಿ ಭದ್ರಾ ಅದೃಕ್ಷತ ಗವಾಂ ಸರ್ಗಾ ನ ರಶ್ಮಯಃ ।**
**ಓಷಾ ಅಪ್ರಾ ಉರು ಜ್ರಯಃ ।**

(ಋ. ಸಂ. ೪-೫೨-೫)

ಎಂಬಲ್ಲಿ ಜ್ರಯ ಶಬ್ದಕ್ಕೆ ಮಹತ್ತಾದ ತೇಜಸ್ಸೆಂದು ಅರ್ಥವಾದರೂ ರಾಕ್ಷಸಾದಿಗಳನ್ನು ನಾಶಮಾಡುವ ವೇಗವುಳ್ಳ ತೇಜಸ್ಸೆಂದಭಿಪ್ರಾಯ. ಅದರಂತೆಯೇ ಇಲ್ಲಿಯೂ ಸಹ ವೇಗವಾದ ಗಮನವೆಂದು ಹೇಳಬಹುದು.

**ಯೋಷಾ ಪೃಥು ಜ್ರಯಂ ತನುತೇ— (ಮರುದ್ಭಿಃ ಸಹ ಯಜ್ಞಂ ಪ್ರತಿ ಗಚ್ಛತ ಇಂದ್ರಸ್ಯ) ಪಿಪಾಸಿತಾ ಸೋಮಾಹುತಿಃ ವಿಸ್ತೀರ್ಣಮಪಿ ವೇಗಂ ವಿಸ್ತಾರಯತೀತ್ಯರ್ಥಃ ।** ಇಂದ್ರನಿಂದ ಅಪೇಕ್ಷಿತವಾದ ಸೋಮಾಹುತಿಯು ವಿಸ್ತಾರವಾಗಿ ಹರಡಿದರೂ, ಅತ್ಯಂತ ವೇಗವಾಗಿ ಹರಡಿತು ಎಂದಭಿಪ್ರಾಯ.

**ಯೋಷಾ**ಶಬ್ದಕ್ಕೆ **ಮಾಧ್ಯಮಿಕಾ ವಾಕ್** ಎಂದರ್ಥಮಾಡಿದರೆ, ಇಲ್ಲಿ **ಪ್ರಸಂಗಾತ್** ಮರುತ್ತುಗಳ ಸ್ತುತಿಯೂ ಆಗುತ್ತದೆಂದು ಸಾಯಣರ ಅಭಿಪ್ರಾಯ.

**ಮನೀಷಾ**—ಸ್ತುತಿರೂಪವಾದ ವಾಕ್ಕು.

॥ ವ್ಯಾಕರಣಪ್ರಕ್ರಿಯಾ ॥

**ಏತಿ**—ಇಣ್ ಗತೌ ಧಾತು. ಅದಾದಿ. ಲಟ್‌ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ **ಅದಿಪ್ರಭೃತಿಭ್ಯಃ ಶಪಃ**—ಎಂಬುದರಿಂದ ಶಪಿಗೆ ಲುಕ್. ತಿಪ್ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಏತಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪ್ರದಿಶಾ**—ದಿಶ ಅತಿಸರ್ಜನೇ ಧಾತು. ಸಂಪದಾದಿಯಲ್ಲಿ ಸೇರಿರುವುದರಿಂದ **ಸಂಪದಾದಿಭ್ಯಃ ಕ್ವಿಪ್**—(ವಾ. ೨೨೩೩) ಎಂಬುದರಿಂದ ಭಾವಾರ್ಥದಲ್ಲಿ ಕ್ವಿಪ್‌ಪ್ರತ್ಯಯ. ಕ್ವಿಪಿನಲ್ಲಿ ಸರ್ವಲೋಪ. ದಿಶ್ ಎಂದು ಶಬ್ದವಾಗುತ್ತದೆ . ಪ್ರ ಎಂಬುದರೊಡನೆ ಸಮಾಸವಾದಾಗ **ಗತಿಕಾರಕೋಪಪದಾತ್ ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ತೃತೀಯಾಏಕವಚನಾಂತರೂಪ.

**ವಿಚಕ್ಷಣಃ**—ಚಕ್ಷಿಙ್ ವ್ಯಕ್ತಾಯಾಂ ವಾಚಿ. ಧಾತು. ಇದಕ್ಕೆ ಯುಚ್ ಪ್ರತ್ಯಯ. **ಯುವೋರನಾಕೌ**—ಎಂಬುದರಿಂದ ಅನಾದೇಶ. **ಅಟ್‌ಕುಪ್ವಾಙ್**—ಸೂತ್ರದಿಂದ ಪ್ರತ್ಯಯ ನಕಾರಕ್ಕೆ ಣತ್ವ **ಚಿತಃ**—ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಗತಿ (ವಿ) ಪೂರ್ವಪದವಾಗಿರುವುದರಿಂದ ಹಿಂದಿನಂತೆ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ರುದ್ರೇಭಿಃ**—**ಬಹುಲಂ ಛಂದಸಿ**—(ಪಾ. ಸೂ. ೭-೧-೧೦) ಎಂಬುದರಿಂದ ಭಿಸಿಗೆ ಐಸ್ ವಿಕಲ್ಪವಾದುದರಿಂದ ಇಲ್ಲಿ ಬರುವುದಿಲ್ಲ. ಏತ್ವ.

**ತನುತೇ**—ತನು ವಿಸ್ತಾರೇ ಧಾತು. ಲಟ್ ಪ್ರಥಮಪುರುಷ ಏಕವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಜ್ರಯಃ**—ಜಿ ಜ್ರಿ ಅಭಿಭವೇ. ಧಾತು. ಜ್ರೀಯತೇ ಅಭಿಭೂಯತೇ ಅನೇನ ಇತಿ ಜ್ರಯಃ ವೇಗಃ ಕರಣಾರ್ಥದಲ್ಲಿ ಅಸುನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಅಯಾದೇಶ. ಜ್ರಯಸ್ ಶಬ್ದವಾಗುತ್ತದೆ. ನಿತ್ತಾಗುವದರಿಂದ **ಞ್ನಿತ್ಯಾದಿರ್ನಿತ್ಯಮ್** - (ಪಾ. ಸೂ. ೬-೧-೧೯೭) ಎಂಬುವದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಮನೀಷಾ+ಅಭಿ**—ಇಲ್ಲಿ ಸವರ್ಣದೀರ್ಘ ಪ್ರಾಪ್ತವಾಗುತ್ತದೆ. ಆದರೆ ಈಷಾ ಅಕ್ಷಾದಿಯಲ್ಲಿ ಸೇರಿರುವುದರಿಂದ ಸಂಹಿತಾದಲ್ಲಿ ಪ್ರಕೃತಿಭಾವ ಬರುತ್ತದೆ. ॥ ೭ ॥

---:o:---

ಸಂಹಿತಾಪಾಠಃ

ಯದ್ವಾ ಮರುತ್ವಃ ಪರಮೇ ಸಧಸ್ಥೇ ಯದ್ವಾವಮೇ ವೃಜನೇ-
ಮಾದಯಾಸೇ ।
ಅತ ಆ ಯಾಹ್ಯಧ್ವರಂ ನೋ ಅಚ್ಛಾ ತ್ವಾಯಾ ಹವಿಶ್ಚಕೃಮಾ-
ಸತ್ಯರಾಧಃ ॥ ೮ ॥

ಪದಪಾಠಃ

ಯತ್ । ವಾ । ಮರುತ್ವಃ । ಪರಮೇ । ಸಧಽಸ್ಥೇ । ಯತ್ । ವಾ । ಅವಮೇ ।
ವೃಜನೇ । ಮಾದಯಾಸೇ ।
ಅತಃ । ಆ । ಯಾಹಿ । ಅಧ್ವರಂ । ನಃ । ಅಚ್ಛ । ತ್ವಾಽಯಾ । ಹವಿಃ । ಚಕೃ-
ಮ । ಸತ್ಯಽರಾಧಃ ॥ ೮ ॥

ಸಾಯಣಭಾಷ್ಯಂ

ಹೇ ಮರುತ್ವೋ ಮರುದ್ಭಿರ್ಯುಕ್ತೇಂದ್ರ ಪರಮ ಉತ್ಕೃಷ್ಟೇ ಸಧಸ್ಥೇ ಸಹಸ್ಥಾನೇ ಗೃಹೇ ಯದ್ವಾ ಯದಿ ವಾ ಮಾದಯಾಸೇ ತೃಪ್ತೋ ವರ್ತಸೇ। ಯದ್ವಾ ಯದಿ ವಾವಮೇಽರ್ವಾಚೀನೇ ವೃಜನೇ। ವೃಜ್ಯತೇ ರಿಕ್ತೀಕ್ರಿಯತೇಽಸ್ಮಿನ್ನನಮಿತಿ ವೃಜನಂ ಗೃಹಂ। ತಸ್ಮಿನ್ಮಾದಯಾಸೇ। ಅತೋಽಸ್ಮಾದುಭಯವಿಧಾತ್ಸ್ಥಾನಾನ್ನೋಽಸ್ಮಾಕಮಧ್ವರಂ ಯಜ್ಞಮಚ್ಛಾಭಿಮುಖ್ಯೇನಾ ಯಾಹಿ। ಆಗಚ್ಛ। ಹೇ ಸತ್ಯರಾಧಃ ಸತ್ಯಧನ ತ್ವಾಯಾ ತ್ವತ್ಕಾಮನಯಾ ವಯಂ ಹವಿಶ್ಚಕೃಮ। ಕೃತವಂತಃ ॥ ಮರುತ್ವಃ। ಮತುವಸೋ ರುರಿತಿ ಸಂಬುದ್ಧೌ ನಕಾರಸ್ಯ ರುತ್ವಂ। ಸಧಸ್ಥೇ। ಸುಪಿ ಸ್ಥ ಇತಿ ಕಪ್ರತ್ಯಯಃ। ಸಧ ಮಾದಸ್ಥಯೋಶ್ಛಂದಸೀತಿ ಸಹಸ್ಯ ಸಧಾದೇಶಃ। ಮಾದಯಾಸೇ। ಮದ ತೃಪ್ತಿಯೋಗೇ। ಚುರಾದಿರಾತ್ಮನೇಪದೀ। ಲೇಟ್ಯಾಡಾಗಮಃ। ತ್ವಾಯಾ। ತ್ವಾಮಾತ್ಮನ ಇಚ್ಛತಿ। ಸುಪ ಆತ್ಮನಃ ಕ್ಯಚ್। ಪ್ರತ್ಯಯೋತ್ತರಪದಯೋಶ್ಚೇತಿ ಮಪರ್ಯಂತಸ್ಯ ತ್ವಾದೇಶಃ। ವ್ಯತ್ಯಯೇನ ದಕಾರಸ್ಯಾತ್ವಂ। ಅ ಪ್ರತ್ಯಯಾದಿತ್ಯಕಾರಪ್ರತ್ಯಯಃ। ಸುಪಾಂ ಸುಲುಗಿತಿ ತೃತೀಯಾಯಾ ಲುಕ್ ॥

॥ ಪ್ರತಿಪದಾರ್ಥ ॥

**ಮರುತ್ವಃ**—ಮರುತ್ತುಗಳೊಡನೆ ಕೂಡಿದ ಎಲೈ ಇಂದ್ರನೇ,। **ಪರಮೇ**—ಶ್ರೇಷ್ಠವಾದ (ಉತ್ಕೃಷ್ಟವಾದ)। **ಸ್ವಧಸ್ಥೇ**—ವಾಸಸ್ಥಾನವಾದ ಮನೆಯಲ್ಲಿ। **ಯದ್ವಾ**—ಒಂದುವೇಳೆ। **ಮಾದಯಾಸೇ**—(ವಾಸಮಾಡಿಕೊಂಡು) ಸಂತೋಷಪಡುತ್ತಿದ್ದರೂ,। **ಯದ್ವಾ**—ಅಥವಾ। **ಅವಮೇ**—ಉತ್ಕೃಷ್ಟವಲ್ಲದ। **ವೃಜನೇ**—ಮನೆಯಲ್ಲಿ (ವಾಸಮಾಡುತ್ತಾ ತೃಪ್ತನಾಗಿದ್ದರೂ ಸರಿ)। **ಅತಃ**—ಆ ಎರಡು ವಿಧವಾದ ನಿವಾಸಗಳಿಂದಲೂ। **ನಃ**—ನಮ್ಮ। **ಅಧ್ವರಂ**—ಯಜ್ಞವನ್ನು (ಉದ್ದೇಶಿಸಿ)। **ಅಚ್ಛ**—ಅಭಿಮುಖವಾಗಿ। **ಆ ಯಾಹಿ**—ದಯಮಾಡು। **ಸತ್ಯರಾಧಃ**—ನಿಜವಾದ ಐಶ್ವರ್ಯವನ್ನು ಕೊಡತಕ್ಕ ಎಲೈ ಇಂದ್ರನೇ। **ತ್ವಾಯಾ**—ನಿನ್ನ ಆಗಮನವನ್ನು ಆಶಿಸಿ। ಹವಿಸ್ಸನ್ನು। **ಚಕೃಮ**—ಅರ್ಪಿಸಿದ್ದೇವೆ.।

ಭಾವಾರ್ಥ

ಮರುತ್ತುಗಳೊಡಗೂಡಿದ ಎಲೈ ಇಂದ್ರನೇ, ನೀನು ಉತ್ಕೃಷ್ಟವಾದ ವಾಸಸ್ಥಾನದಲ್ಲಿದ್ದು ಸಂತೋಷಪಡುತ್ತಿದ್ದರೂ ಸರಿ ಅಥವಾ ಉತ್ಕೃಷ್ಟವಲ್ಲದ ವಾಸಸ್ಥಾನದಲ್ಲಿದ್ದು ತೃಪ್ತನಾಗಿದ್ದರೂ ಸರಿ, ಆ ಎರಡು ವಿಧವಾದ ನಿವಾಸಗಳಿಂದಲೂ ನಮ್ಮ ಯಜ್ಞವನ್ನು ಉದ್ದೇಶಿಸಿ ನಮಗೆ ಅಭಿಮುಖವಾಗಿ ದಯಮಾಡು. ನಿಜವಾದ ಧನವನ್ನು ಕೊಡತಕ್ಕ ಎಲೈ ಇಂದ್ರನೇ, ನಿನ್ನ ಆಗಮನವನ್ನು ಆಶಿಸಿ ನಿನಗೆ ಹವಿಸ್ಸನ್ನು ಅರ್ಪಿಸಿದ್ದೇವೆ.

English Translation

Attended by the winds, giver of true wealth, whether you may be pleased (to dwell) in a stately mansion or in a lowly dwelling, come to our sacrifice: desirous of your presence we offer you oblations.

ವಿಶೇಷವಿಷಯಗಳು

ಇಂದ್ರನ ಅನುಗ್ರಹಕ್ಕೆ ಐಶ್ವರ್ಯವು ಪ್ರಧಾನವಲ್ಲ. ಭಕ್ತಿಶ್ರದ್ಧಾದಿಗಳೇ ಪ್ರಧಾನ. ಆದುದರಿಂದ ಉತ್ಕೃಷ್ಟವಾದ ಗೃಹದಲ್ಲಿದ್ದರೂ, ಉತ್ಕೃಷ್ಟವಲ್ಲದ ಗೃಹದಲ್ಲಿದ್ದರೂ ಸಹ ಭಕ್ತಿಯಿಂದ ಯಜ್ಞಮಾಡಿ ಆಹುತಿಯನ್ನು ಅರ್ಪಿಸುವವನ ಯಜ್ಞಕ್ಕೆ ದಯಮಾಡಿಸಬೇಕೆಂದು ಪ್ರಾರ್ಥಿಸಿದೆ.

**ಸಧಸ್ಥೇ**—**ಸಹಸ್ಥಾನೇ** ।  (ನಿ. ೩-೧೫) ಎಲ್ಲರೂ ಒಟ್ಟಿಗೆ ಇರತಕ್ಕ ಪ್ರದೇಶವಾದುದರಿಂದ **ಗೃಹೇ** ಮನೆಯಲ್ಲಿ ಎಂದರ್ಥ. ಸ್ಕಂದಸ್ವಾಮಿಗಳು **ಸಹ ತಿಷ್ಠಂತಿ ಯಸ್ಮಿನ್ ದೇವತಾಃ ಸ ಸಧಸ್ಥೋ ಯಜ್ಞಃ ।** ದೇವತೆಗಳೆಲ್ಲರೂ ಒಟ್ಟಿಗೆ ಸೇರಿ ಕುಳಿತುಕೊಳ್ಳುವುದರಿಂದ ಯಜ್ಞವೆಂದರ್ಥವೆಂದು ಹೇಳಿರುತ್ತಾರೆ. ಇದರಂತೆಯೇ **ವೃಜನೇ** ಎನ್ನುವುದಕ್ಕೂ ಸಹ ಸಾಯಣರು ಗೃಹವೆಂದೂ, ಸ್ಕಂದಸ್ವಾಮಿಗಳು **ವರ್ಜಿತೇ ದೋಷೈಃ** । ದೋಷವರ್ಜಿತವಾದ ಯಜ್ಞವೆಂದೂ ಹೇಳುತ್ತಾರೆ. ಆಗ, **ಪರಮೇ ಅವಮೇ** ಎಂಬ ಶಬ್ದಗಳಿಗೂ ಅರ್ಥವ್ಯತ್ಯಾಸವಾಗುತ್ತದೆ ; ಗೃಹವೆಂದು ಅರ್ಥಮಾಡಿದರೆ **ಪರಮೇ ಗೃಹೇ, ಅವಮೇ ಗೃಹೇ** ಉತ್ಕೃಷ್ಟವಾದ ಗೃಹ ಮತ್ತು ಉತ್ಕೃಷ್ಟವಲ್ಲದ ಗೃಹವೆಂದೂ ; ಯಜ್ಞವೆಂದು ಅರ್ಥಮಾಡಿದರೆ **ಪರಮೇ ಯಜ್ಞೇ ಅವಮೇ ಯಜ್ಞೇ** ದೂರದಲ್ಲಿ ನೆರವೇರುತ್ತಿರುವ ಯಜ್ಞದಲ್ಲಿ ಭಾಗವಹಿಸುತ್ತಿದ್ದರೂ, **ಅವಮೇ ಅಂತಿಕೇ** ಹತ್ತಿರದಲ್ಲಿ ನೆರವೇರುತ್ತಿರುವ ಯಜ್ಞದಲ್ಲಿ ಭಾಗವಹಿಸುತ್ತಿದ್ದರೂ ಸಹ ನಮ್ಮ ಯಜ್ಞಕ್ಕೆ ದಯಮಾಡು ಎಂದಭಿಪ್ರಾಯ.

**ಸತ್ಯರಾಧಃ**—**ಸತ್ಯಸಾಧನಃ ।** ಯಜಮಾನರಿಗೆ ಕೊಡತಕ್ಕದ್ದೂ ಸತ್ಯರೂಪವೂ ಆದ ಧನವುಳ್ಳವನೆಂದು ಇಂದ್ರನಿಗೆ ವಿಶೇಷಣವಾಗಿದೆ.

**ಸ ವೃತ್ರಹತ್ಯೇ ಹವ್ಯಃ ಸ ಈಡ್ಯಃ ಸ ಸುಷ್ಟುತ ಇಂದ್ರಃ ಸತ್ಯರಾಧಾಃ ।**
(ಯ. ಸಂ. ೪-೨೪-೨).

**ತಿರಶ್ಚಿದರ್ಯಃ ಸವನಾ ಪುರೂಣ್ಯಾಂಗೂಷೇಭಿರ್ಗೃಣಾನಃ ಸತ್ಯರಾಧಾಃ ।**
(ಋ. ಸಂ. ೪-೨೯-೧)

**ಶಂಸೇದುಕ್ಥಂ ಸುದಾನವ ಉತ ದ್ಯುಕ್ಷಂ ಯಥಾ ನರಃ ।**
**ಚಕೃಮಾ ಸತ್ಯರಾಧಸೇ ॥**
(ಋ. ಸಂ. ೭-೩೧-೨)

ಇತ್ಯಾದಿ । **ಸತ್ಯರಾಧಸ್ಸೆಂಬ** ವಿಶೇಷಣವು ಬರುವ ಋಗ್ವಾಕ್ಯಗಳಲ್ಲೆಲ್ಲಾ (ನಿ. ೫-೮೦-೭ನೇ ಋಕ್ಕನ್ನು ಬಿಟ್ಟು) ಇಂದ್ರನಿಗೇ ವಿಶೇಷಣವಾಗಿ ಅವನ ಧನಸಂಪತ್ತನ್ನೂ ಔದಾರ್ಯವನ್ನೂ ಪ್ರಶಂಸಿಸುತ್ತದೆ.

ವ್ಯಾಕರಣಪ್ರಕ್ರಿಯಾ

**ಮರುತ್ವಃ**—ಮರುತ್ ಅಸ್ಯ ಅಸ್ತಿ ಇತಿ ಮರುತ್ವಾನ್. **ತದಸ್ಯಾಸ್ತ್ಯ**—ಎಂಬುದರಿಂದ ಮತುಪ್ ಪ್ರತ್ಯಯ. **ಝಯಃ**—ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ಸಂಬುದ್ಧಿಯಲ್ಲಿ **ಮತುವಸೋರು ಸಂಬುದ್ಧೌ**—(ಪಾ. ಸೂ. ೮-೩-೧) ಎಂಬುದರಿಂದ ನಕಾರಕ್ಕೆ ರುತ್ವ. ವಿಸರ್ಗ.

**ಸಧಸ್ಥೇ**— ಷ್ಠಾ ಗತಿನಿವೃತ್ತೌ ಧಾತು. **ಸುಪಿಸ್ಥ**—(ಪಾ. ಸೂ. ೩-೨-೪) ಎಂಬುದರಿಂದ ಸುಬಂತವು ಉಪಪದವಾಗಿರುವಾಗ ಇದಕ್ಕೆ ಕ ಪ್ರತ್ಯಯ. **ಆತೋ ಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. **ಸಧಮಾದಸ್ಥಯೋಶ್ಛಂದಸಿ**—(ಪಾ. ಸೂ. ೬-೩-೯೬) ಎಂಬುದರಿಂದ ಸಹ ಎಂಬುದಕ್ಕೆ ಸ್ಥಾ ಧಾತು ಪರದಲ್ಲಿರುವುದರಿಂದ ಸಧ ಎಂಬ ಆದೇಶ ಬರುತ್ತದೆ. ಸಧಸ್ಥ ಎಂದು ರೂಪವಾಗುತ್ತದೆ.

**ವೃಜನೇ**—ವೃಜೀ ವರ್ಜನೇ ಧಾತು. ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ**—ಎಂಬುದರಿಂದ ಅದಕ್ಕೆ ಅನಾದೇಶ. **ಸಂಜ್ಞಾಪೂರ್ವಕೋವಿಧಿರನಿತ್ಯಃ** ಎಂಬ ವಚನದಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ಮಾದಯಾಸೆ**—ಮದ ತೃಪ್ತಿಯೋಗೇ ಧಾತು ಚುರಾದಿ. ಅನುದಾತ್ತೇತ್ತಾದುದರಿಂದ ನಿತ್ಯ ಆತ್ಮನೇಪದೀ. **ಸತ್ಯಾಪಪಾಶ**—(ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್. **ಅತಉಪಧಾಯಾಃ**—(ಪಾ. ಸೂ. ೭-೨-೧೧೬) ಎಂಬುದರಿಂದ ತನ್ನಿಮಿತ್ತವಾಗಿ ಧಾತುವಿನ ಉಪಧೆಗೆ ಗುಣ. ಮಾದಿ ಎಂಬ ಣಿಜಂತದ ಮೇಲೆ ಲೇಟ್ ಮಧ್ಯಮಪುರುಷಏಕವಚನದಲ್ಲಿ ಥಾಸ್ ಪ್ರತ್ಯಯ. **ಥಾಸಸೇ**—(ಪಾ. ಸೂ. ೩-೪-೮೦) ಎಂಬುದರಿಂದ ಅದಕ್ಕೆ ಸೇ ಆದೇಶ. **ಲೇಟೋಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಆಡಾಗಮ. ಶಪ್ ವಿಕರಣ. ತನ್ನಿಮಿತ್ತವಾಗಿ ಣಿಚಿಗೆ ಗುಣ ಅಯಾದೇಶ ಮಾದಯಾಸೇ ಎಂದು ರೂಪವಾಗುತ್ತದೆ. ಯದ್ಯೋಗವಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ನಿಘಾತಸ್ವರ ಪ್ರತಿಷೇಧ ಬರುತ್ತದೆ. ಣಿಚ್ಸ್ವರದಿಂದ ದಕಾರೋತ್ತರಾಕಾರ ಉದಾತ್ತವಾಗುತ್ತದೆ.

**ಯಾಹಿ**—ಯಾ ಪ್ರಾಪಣೇ ಧಾತು. ಲೋಟ್ ಮಧ್ಯಮಪುರುಷ ಏಕವಚನದ ರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ತ್ವಾಯಾ**—ತ್ವಾಂ ಆತ್ಮನಃ ಇಚ್ಛತಿ ಎಂದು ಅರ್ಥವಿವಕ್ಷೆ ಮಾಡಿದಾಗ **ಸುಪ ಆತ್ಮನಃ ಕ್ಯಚ್**—(ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. ಯುಷ್ಮದ್+ಯ ಎಂದಿರುವಾಗ **ಪ್ರತ್ಯಯೋತ್ತರಪದಯೋಶ್ಚ**—ಎಂಬುದರಿಂದ ಮಪರ್ಯಂತಕ್ಕೆ ತ್ವಾದೇಶ. ಪ್ರತ್ಯಯದಿಂದ ದಕಾರಕ್ಕೆ ಅಕಾರಾದೇಶ. ತ್ವಾಯ ಎಂಬ ಕ್ಯಜಂತವು **ಸನಾದ್ಯಂತಾ ಧಾತವಃ**—ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಇದಕ್ಕೆ **ಅಪ್ರತ್ಯಯಾತ್**—(ಪಾ. ಸೂ. ೩-೩-೧೦೨) ಎಂಬುದರಿಂದ ಅಕಾರರೂಪ ಪ್ರತ್ಯಯ. **ಅಜಾದ್ಯತಷ್ಟಾಪ್**—ಎಂಬುದರಿಂದ ಸ್ತ್ರೀತ್ವದಲ್ಲಿ ಟಾಪ್. ಇದಕ್ಕೆ ತೃತೀಯಾವಿಭಕ್ತಿ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. (ಪಾ. ಸೂ. ೭-೧-೩೯) ಎಂಬುದರಿಂದ ಲುಕ್.

**ಸತ್ಯರಾಧಃ**—ಸತ್ಯಂ ರಾಧಃ ಧನಂ ಯಸ್ಯ ಸಃ ಸತ್ಯರಾಧಾಃ ಸಂಬುದ್ಧಿಯಲ್ಲಿ **ಆಮಂತ್ರಿತಸ್ಯಚ**—(ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೮ ॥

॥ ಸಂಹಿತಾಪಾಠಃ ॥

ತ್ವಾಯೇಂದ್ರ ಸೋಮಂ ಸುಷುಮಾ ಸುದಕ್ಷ ತ್ವಾಯಾ ಹವಿಶ್ಚ-
ಕೃಮಾ ಬ್ರಹ್ಮವಾಹಃ ।
ಅಧಾ ನಿಯುತ್ವಃ ಸಗಣೋ ಮರುದ್ಭಿರಸ್ಮಿನ್ಯಜ್ಞೇ ಬರ್ಹಿಷಿ ಮಾ-
ದಯಸ್ವ ॥ ೯ ॥

॥ ಪದಪಾಠಃ ॥

ತ್ವಾಽಯಾ । ಇಂದ್ರ । ಸೋಮಂ । ಸುಸುಮ । ಸುಽದಕ್ಷ । ತ್ವಾಽಯಾ । ಹವಿಃ ।
ಚಕೃಮ । ಬ್ರಹ್ಮಽವಾಹಃ ।
ಅಧ । ನಿಯುತ್ವಃ । ಸಽಗಣಃ । ಮರುತ್ಽಭಿಃ । ಅಸ್ಮಿನ್ । ಯಜ್ಞೇ । ಬರ್ಹಿಷಿ ।
ಮಾದಯಸ್ವ ॥ ೯ ॥

ಸಾಯಣಭಾಷ್ಯಂ

ಹೇ ಸುದಕ್ಷ ಶೋಭನಬಲೇಂದ್ರ ತ್ವಾಯಾ ತ್ವತ್ಕಾಮನಯಾ ಸೋಮಂ ಸುಷುಮ । ಅಭಿಷುತವಂತೋ ವಯಂ । ಹೇ ಬ್ರಹ್ಮವಾಹೋ ಬ್ರಹ್ಮಣಾ ಮಂತ್ರರೂಪೇಣ ಸ್ತೋತ್ರೇಣೋಹ್ಯಮಾನ ಪ್ರಾಪ್ಯಮಾಣೇಂದ್ರ ತ್ವಾಯಾ ತ್ವತ್ಕಾಮನಯಾಹವನೀಯೇ ಪುರೋಡಾಶಲಕ್ಷಣಂ ಹವಿಶ್ಚಕೃಮ । ಕೃತವಂತಃ । ಹೇ ನಿಯುತ್ವಃ । ನಿಯುತೋಽಶ್ವಾಃ । ತದ್ವನ್ನಿಂದ್ರ ಅಧಾನಂತರಂ ಮರುದ್ಭಿಃ ಸಪ್ತಗಣರೂಪೈರೇತತ್ಸಂಜ್ಞೈರ್ದೇವೈಃ ಸಗಣೋ ಗಣಸಹಿತಃ ಸನ್ನಸ್ಮಿನ್ವರ್ತಮಾನೇ ಯಜ್ಞೇ ಬರ್ಹಿಷ್ಯಾಸ್ತೀರ್ಣೇ ದರ್ಭ ಉಪವಿಶ್ಯ ಮಾದಯಸ್ವ । ತೃಪ್ತೋ ಭವ ॥ ಸುಷುಮಾ । ಷುಞ್ ಅಭಿಷವೇ । ಲಿಟಿ ಕ್ರಾದಿನಿಯಮಪ್ರಾಪ್ತಸ್ಯೇಟೋಽನಿತ್ಯಮಾಗಮಮಶಾಸನಮಿತಿ ವಚನಾದಭಾವಃ ॥

ಪ್ರತಿಪದಾರ್ಥ

ಸುದಕ್ಷ—ಶ್ರೇಷ್ಠವಾದ ಬಲವುಳ್ಳ । ಇಂದ್ರ—ಎಲೈ ಇಂದ್ರನೇ । ತ್ವಾಯಾ—ನಿನ್ನ (ಸಹಾಯವ)ನ್ನು ಅಪೇಕ್ಷಿಸಿ । ಸೋಮಂ—ಸೋಮರಸವನ್ನು । ಸುಷುಮ—ಹಿಂಡಿ ಅರ್ಪಿಸಿದ್ದೇವೆ । ಬ್ರಹ್ಮವಾಹಃ—ಸ್ತೋತ್ರದ

ಮೂಲಕ ಹೊಂದಲು ಯೋಗ್ಯನಾದ ಇಂದ್ರನೇ | **ತ್ವಾಯಾ**—ನಿನ್ನ ಸಹಾಯವನ್ನು ಅಪೇಕ್ಷಿಸಿ | **ಹವಿಃ**—ಹವಿಸ್ಸನ್ನು | **ಚಕೃಮ**— ಅರ್ಪಿಸಿದ್ದೇವೆ | **ನಿಯುತ್ವಃ**—ಅಶ್ವಗಳನ್ನು ಹೊಂದಿರುವ ಇಂದ್ರನೇ | **ಅಧ**—ಆದ್ದರಿಂದ | **ಮರುದ್ಭಿಃ**—ಮರುದ್ದೇವತೆಗಳೊಡನೆ | **ಸಗಣಃ**—ಗುಂಪುಕೂಡಿಕೊಂಡು | **ಅಸ್ಮಿನ್ ಯಜ್ಞೇ**—ಈಗ ನೆರವೇರುತ್ತಿರುವ ಈ ಯಜ್ಞದಲ್ಲಿ | **ಬರ್ಹಿಷಿ**—ದರ್ಭಾಸನಗಳಮೇಲೆ | **ಮಾದಯಸ್ವ**—ಕುಳಿತು ತೃಪ್ತಿಯನ್ನು ಹೊಂದು ||

ಭಾವಾರ್ಥ

ಶ್ರೇಷ್ಠನಾದ ಬಲವುಳ್ಳ ಇಂದ್ರನೇ, ನಿನ್ನ ಸಹಾಯವನ್ನು ಅಪೇಕ್ಷಿಸಿ ನಿನಗಾಗಿ ಸೋಮರಸವನ್ನು ಹಿಂಡಿ ಅರ್ಪಿಸಿದ್ದೇವೆ. ಸ್ತೋತ್ರಪ್ರಿಯನಾಗಿ ತನ್ಮೂಲಕನಾಗಿ ಸಮೀಪಿಸಲು ಯೋಗ್ಯನಾದ ಇಂದ್ರನೇ, ನಿನ್ನ ಸಹಾಯವನ್ನು ಅಪೇಕ್ಷಿಸಿ ನಿನಗೆ ಹವಿಸ್ಸನ್ನು ಅರ್ಪಿಸಿದ್ದೇವೆ. ಅಶ್ವಯುಕ್ತನಾದ ಇಂದ್ರನೇ, ಮರುದ್ದೇವತೆಗಳೊಡನೆ ಗುಂಪು ಕೂಡಿಕೊಂಡು ಈಗ ನೆರವೇರುತ್ತಿರುವ ಈ ಯಜ್ಞದಲ್ಲಿ ದರ್ಭಾಸನಗಳ ಮೇಲೆ ಕುಳಿತು ತೃಪ್ತಿಯನ್ನು ಹೊಂದು.

## English Translation

Desirous of you, Indra, who are possessed of excellent strength, we pour forth to you libations: desirous of you, who are obtained by prayer, we offer you oblations; therefore, do you, who are possessed of horses, sit down with pleasure upon the sacred grass, attended by the Maruts, at this sacrifice.

|| ವಿಶೇಷವಿಷಯಗಳು ||

**ಸುದಕ್ಷ—ಶೋಭನಬಲ |** ಶ್ರೇಷ್ಠನಾದ ಬಲವುಳ್ಳ ಇಂದ್ರನೇ ಎಂಬ ಸಂಬೋಧನೆಯಲ್ಲಿ ಇಂದ್ರನ ಅತಿಶಯವಾದ ಬಲವು ತಿಳಿಯುತ್ತದೆ. ಹಿಂದಿನ ಸೂಕ್ತದ ೧೫ ನೇ ಋಕ್ಕಿನಲ್ಲಿ,

**ನ ಯಸ್ಯ ದೇವಾ ದೇವತಾ ನ ಮರ್ತಾ ಆಪಶ್ಚನ ಶವಸೋ ಅಂತಮಾಪುಃ |**
**ಸ ಪ್ರರಿಕ್ವಾ ತ್ವಕ್ಷಸಾ ಕ್ಷ್ಮೋ ದಿವಶ್ಚ ಮರುತ್ವಾನ್ನೋ ಭವತ್ವಿಂದ್ರ ಊತೀ ||**
(ಋ. ಸಂ. ೧-೧೦೦-೧೫)

ದೇವತೆಗಳಾಗಲಿ, ಮನುಷ್ಯರಾಗಲಿ ನಿನ್ನ ಬಲವನ್ನು ಸಮೀಪಿಸಲಾಗಲಿಲ್ಲ ಎಂಬ ವರ್ಣನೆಯೂ, ಮತ್ತು

**ವಿಶ್ವೇ ತ ಇಂದ್ರ ವೀರ್ಯಂ ದೇವಾ ಅನು ಕ್ರತುಂ ದದುಃ |**
(ಋ. ಸಂ. ೮-೬೨-೭)

ಇತ್ಯಾದಿ ಋಕ್ಕುಗಳಲ್ಲಿ ಸಕಲ ದೇವತೆಗಳೂ ಇಂದ್ರನ ಶಕ್ತಿಯನ್ನೂ, ವೀರ್ಯವನ್ನೂ ಕ್ರಮೇಣ ಅನುಸರಿಸಿದರು ಎಂದು ಇಂದ್ರನ ಶಕ್ತಿಯು ಸ್ತುತಿಸಲ್ಪಟ್ಟಿದೆಯೋ ಇನ್ನೂ ಅನೇಕ ಸಂದರ್ಭಗಳಲ್ಲಿ ಅವನ ಪರಾಕ್ರಮದ ಮಹಿಮೆಯೂ ಸ್ತುತಿಸಲ್ಪಡುವ ಅಂಶವನ್ನು ಇಲ್ಲಿ **ಸುದಕ್ಷ** ಎಂಬ ಸಂಬೋಧನೆಯು ತಿಳಿಸುತ್ತದೆ.

**ಬ್ರಹ್ಮವಾಹಃ**— ಬ್ರಹ್ಮಣಾ ಮಂತ್ರರೂಪೇಣ ಸ್ತೋತ್ರೇಣೋಹ್ಯಮಾನ ಪ್ರಾಪ್ಯಮಾಣೇಂದ್ರ। ಸ್ತೋತ್ರದ ಮೂಲಕ ಹೊಂದಲು ಯೋಗ್ಯನಾದ ಇಂದ್ರನೇ ಎಂದು ಇಂದ್ರನ ಅನುಗ್ರಹವನ್ನು ಪಡೆಯಲು ಸ್ತುತಿಯು ಆವಶ್ಯಕತೆಯನ್ನು ತಿಳಿಸಿದೆ. ಇಂದ್ರನಲ್ಲದೆ ಉಳಿದದೇವತೆಗಳನ್ನೂ ಸಹ ಸ್ತುತಿಯ ಮೂಲಕವೇ ಒಲಿಸಿಕೊಳ್ಳಬೇಕಾದ ಆವಶ್ಯಕತೆಯಿದ್ದರೂ ಸಹ ಬ್ರಹ್ಮವಾಹನೆಂಬ ವಿಶೇಷಣವು ಇಂದ್ರನ ಪರವಾಗಿ ಮಾತ್ರ ಉಪಯೋಗಿಸಲ್ಪಟ್ಟಿದೆ.

**ಇಮಾ ಬ್ರಹ್ಮ ಬ್ರಹ್ಮವಾಹಃ ಕ್ರಿಯಂತ ಆ ಬರ್ಹಿಃ ಸೀದ ।**
(ಋ. ಸಂ. ೩-೪೧-೩)

**ಸುನೋತನ ಪಚತ ಬ್ರಹ್ಮವಾಹಸೇ ಪುರುಷ್ಟುತಾಯ ಪ್ರತರಂ ದಧಾತನ ।**
(ಋ. ಸಂ. ೫-೩೪-೧)

**ಸಖಾಯೋ ಬ್ರಹ್ಮವಾಹಸೇಽರ್ಚತ ಪ್ರ ಚ ಗಾಯತ ।**
(ಋ. ಸಂ. ೬-೪೫-೪)

ಈ ಋಕ್ಕುಗಳಲ್ಲಿಯೂ, ಹೀಗೆಯೇ ೫-೩೯-೫, ೬-೨೧-೬, ೬-೪೫-೭ ಇತ್ಯಾದಿ ಇನ್ನೂ ಅನೇಕ ಋಕ್ಕುಗಳಲ್ಲಿಯೂ ಸಹ **ಬ್ರಹ್ಮವಾಹ**ಶಬ್ದವು ಇಂದ್ರನಿಗೆ ಮಾತ್ರ ವಿಶೇಷಣವಾಗಿದೆ.

**ತ್ವಾಯಾ**—**ತ್ವಾಂ ಆತ್ಮನ ಇಚ್ಛತಿ । ತ್ವತ್ಕಾಮನಯಾ ।** ನಿನ್ನನ್ನು ನಮಗೆ ಸೇರಿದವನನ್ನಾಗಿ ಮಾಡಿಕೊಳ್ಳಬೇಕೆಂಬ ಅಪೇಕ್ಷೆಯಿಂದ. ಇದೊಂದು ಅಪರೂಪವಾದ ವ್ಯುತ್ಪತ್ತಿ. **ತ್ವತ್ಕಾಮನಯಾ** ಎಂಬ ಅರ್ಥಬರುವಾಗಲೆಲ್ಲಾ ಈ ಪದವನ್ನುಪಯೋಗಿಸಿದೆ. ೨-೧೮-೬, ೩-೪೬-೫, ೪-೨-೬, ೪-೧೩-೫ ಇತ್ಯಾದಿ ಅನೇಕ ಋಕ್ಕುಗಳಲ್ಲಿ ಈ ಪದವನ್ನು ಮೇಲಿನ ಅರ್ಥದಲ್ಲಿ ಉಪಯೋಗಿಸಿದೆ.

**ನಿಯುತ್ವಃ**—**ನಿಯುತಃ ಅಶ್ವಾಃ । ತದ್ವನ್ನಿಂದ್ರ ।** ನಿಯುತ್ತಗಳೆಂದರೆ ಕುದುರೆಗಳೆಂದರ್ಥ. ಅಶ್ವಗಳುಳ್ಳ ಎಂದು ಇಂದ್ರನಿಗೆ ವಿಶೇಷಣವಾಗಿದೆ. ಸಾಧಾರಣವಾಗಿ ಈ ವಿಶೇಷಣವನ್ನು ವಾಯುವಿನ ವಿಷಯದಲ್ಲಿ ಹೆಚ್ಚಾಗಿಯೂ ಇಂದ್ರ ಮತ್ತು ವರುಣದೇವತೆಗಳ ಪರವಾಗಿ ಕೆಲವು ಕಡೆಗಳಲ್ಲಿಯೂ ಉಪಯೋಗಿಸಿದೆ. **ನಿಯುತಃ** ಎಂದರೆ ವಾಯುವಿನ ಕುದುರೆಗಳು ಎಂದು ತೋರಿಸುವುದಕ್ಕೆ ನಿರುಕ್ತಕಾರರು,

**ವಿಶಾಮುಕ್ತ್ರೋರುಷಸಃ ಪೂರ್ವಹೂತೌ ವಾಯುಃ ಪೂಷಾ ಸ್ವಸ್ತಯೇ ನಿಯುತ್ವಾನ್ ।**
(ಋ. ಸಂ. ೭-೩೯-೨)

ಎಂಬ ಋಕ್ಕನ್ನು ಉದಹರಿಸಿ **ನಿಯುತ್ವಾನ್ ನಿಯುತೋಽಸ್ಯಾಶ್ವಾಃ ।** ನಿಯುತ್ತುಗಳು ಈ ವಾಯುವಿನ ಕುದುರೆಗಳು (ನಿ. ೫-೨೮) ಎಂದು ವಿವರಿಸಿದ್ದಾರೆ. ಆದರೂ ಸಹ **ನಿಯುತ್ವಾನ್** ಎಂಬ ವಿಶೇಷಣವು ಇಂದ್ರ ಮತ್ತು ವರುಣದೇವತೆಗಳ ಪರವಾಗಿಯೂ ಉಪಯೋಗಿಸಲ್ಪಟ್ಟಿದೆ.

**ಅಧಾ ನಿಯುತ್ವ ಉಭಯಸ್ಯ ನಃ ಪಿಬ ಶುಚಿಂ ಸೋಮಂ ಗವಾಶಿರಂ ।**
(ಋ. ಸಂ. ೮-೧೦೧-೧೦)

ಇತ್ಯಾದಿ ಋಕ್ಕುಗಳಲ್ಲಿ ಕೇವಲ ವಾಯುವಿನ ಅಶ್ವವೆಂದೂ,

> ಆ ವಾಂ ರಥೋ ನಿಯುತ್ವಾನ್ವಕ್ಷದವಸೇಽಭಿ ಪ್ರಯಾಂಸಿ ಸುಧಿತಾನಿ ವೀತಯೇ ವಾಯೋ ಹವ್ಯಾನಿ ವೀತಯೇ ।
>
> (ಋ. ಸಂ. ೧-೧೩೫-೪)

ಇತ್ಯಾದಿಋಕ್ಕುಗಳಲ್ಲಿ ಇಂದ್ರ ಮತ್ತು ವಾಯು ಇವರಿಬ್ಬರಿಗೂ ಸೇರಿದ ರಥಗಳನ್ನು ಎಳೆಯುವ ಕುದುರೆಗಳೆಂದೂ ವರ್ಣಿತವಾಗಿದೆ.

ವ್ಯಾಕರಣಪ್ರಕ್ರಿಯಾ

**ತ್ವಾಯಾ**—ಹಿಂದಿನ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

**ಸುಷುಮ**—ಷುಞ್ ಅಭಿಷವೇ ಧಾತು. ಲಿಟ್ ಉತ್ತಮಪುರುಷ ಬಹುವಚನದಲ್ಲಿ **ಪರಸ್ಮೈಪದಾನಾಂ**—(ಪಾ. ಸೂ. ೩-೪-೮೨) ಎಂಬುದರಿಂದ ಮ ಆದೇಶ. ಧಾತುವಿಗೆ ದ್ವಿತ್ವ. **ಕೃಸೃಭೃ**—(ಪಾ. ಸೂ. ೭-೨-೧೩) ಸೂತ್ರದಿಂದ ನಿಯಮಮಾಡಿರುವುದರಿಂದ ವಾಸ್ತವವಾಗಿ ಇಲ್ಲಿ ಇಟ್ ಬರಬೇಕಾಗುತ್ತದೆ. ಆದರೆ **ಆಗಮಶಾಸ್ತ್ರಮನಿತ್ಯಮ್** ಎಂಬ ವಚನದಿಂದ ಇಲ್ಲಿ ಇಡಾಗಮ ಬರುವುದಿಲ್ಲ. **ಆದೇಶಪ್ರತ್ಯಯಯೋಃ** ಎಂಬುದರಿಂದ ಧಾತುವಿನ ಸಕಾರಕ್ಕೆ ಷತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಚಕೃಮ**—ಡುಕೃಞ್ ಕರಣೇ ಧಾತು. ಲಿಡುತ್ತಮಪುರುಷ ಬಹುವಚನರೂಪ. ಕ್ರಾದಿನಿಯಮದಿಂದ ಇಡಾಗಮ ಬರುವುದಿಲ್ಲ. ತಿಙಂತನಿಘಾತ ಸ್ವರ ಬರುತ್ತದೆ.

**ನಿಯುತ್ವಃ**—ನಿಯುತಃ ಅಶ್ವಾಃ ಅಸ್ಯ ಸಂತಿ ಇತಿ— ನಿಯುತ್ವಾನ್. **ತದಸ್ಯಾಸ್ತ್ಯ**— ಎಂಬುದರಿಂದ ಮತುಪ್ ಪ್ರತ್ಯಯ. **ಝಯಃ** ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ಸಂಬುದ್ಧಿಯಲ್ಲಿ **ಮತುವಸೋರುಃ ಸಂಬುದ್ಧೌ** (ಪಾ. ಸೂ. ೮-೩-೧) ಎಂಬುದರಿಂದ ಸಕಾರಕ್ಕೆ ರುತ್ವ. ವಿಸರ್ಗ.

**ಅಧಾ**—ಛಂದಸ್ಸಿನಲ್ಲಿ ಅಥ ಎಂಬಲ್ಲಿ ವರ್ಣವ್ಯತ್ಯಯದಿಂದ ಧಕಾರಾದೇಶ. **ದ್ವ್ಯಚೋಽತಸ್ತಿಙಃ**—(ಪಾ. ಸೂ. ೬-೩-೧೩೫) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಮಾದಯಸ್ವ**—ಮದ ತೃಪ್ತಿಯೋಗೇ ಧಾತು. ಚುರಾದಿ. ನಿತ್ಯಾತ್ಮನೇ ಪದೀ. ಲೋಟ್ ಮಧ್ಯಮ ಪುರುಷ ಏಕವಚನದಲ್ಲಿ **ಸವಾಭ್ಯಾಂವಾಮೌ**—ಎಂಬುದರಿಂದ ಸೇ ಪ್ರತ್ಯಯದ ಏತ್ವಕ್ಕೆ ವಕಾರಾದೇಶ. ಣಿಚಿಗೆ ಶಪ್ ನಿಮಿತ್ತವಾಗಿ ಗುಣ ಅಯಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

——— :೦: ———

ಸಂಹಿತಾಪಾಠಃ

ಮಾದಯಸ್ವ ಹರಿಭಿರ್ಯೇ ತ ಇಂದ್ರ ವಿ ಷ್ಯಸ್ವ ಶಿಪ್ರೇ ವಿ
ಸೃಜಸ್ವ ಧೇನೇ।
ಆ ತ್ವಾ ಸುಶಿಪ್ರ ಹರಯೋ ವಹಂತೂಶನ್ಹವ್ಯಾನಿ ಪ್ರತಿ ನೋ
ಜುಷಸ್ವ ॥ ೧೦ ॥

ಪದಪಾಠಃ

ಮಾದಯಸ್ವ । ಹರಿಽಭಿಃ । ಯೇ । ತೇ । ಇಂದ್ರ । ವಿ । ಸ್ಯಸ್ವ । ಶಿಪ್ರೇ ಇತಿ ।
ವಿ । ಸೃಜಸ್ವ । ಧೇನೇ ಇತಿ ।
ಆ । ತ್ವಾ । ಸುಽಶಿಪ್ರ । ಹರಯಃ । ವಹಂತು । ಉಶನ್ । ಹವ್ಯಾನಿ । ಪ್ರತಿ ।
ನಃ । ಜುಷಸ್ವ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಹರಿಭಿರಶ್ವೈಃ ಸಹ ಮಾದಯಸ್ವ । ತೃಪ್ತೋ ಭವ। ಯೇ ತೇ ತವ ಸ್ವಭೂತಾ-ತದರ್ಥಂ ಶಿಪ್ರೇ ಹನೂ ಸಂಹತೇ ವಿ ಷ್ಯಸ್ವ। ಸೋಮಪಾನಾರ್ಥಂ ವಿವೃತೇ ಕುರು। ತಥಾ ಧೇನೇ ಪಾನ-ಸಾಧನಭೂತೇ ಜಿಹ್ವೋಪಜಿಹ್ವಿಕೇ ವಿ ಸೃಜಸ್ವ। ಸೋಮಪಾನಾರ್ಥಂ ವಿಶ್ಲಿಷ್ಟೇ ಕುರು। ಹೇ ಸುಶಿಪ್ರ। ಶಿಪ್ರೇ ಹನೂ ನಾಸಿಕೇ ವಾ। ಶೋಭನಶಿಪ್ರೇಂದ್ರ ತ್ವಾ ತ್ವಾಂ ಹರಯೋಽಶ್ವಾ ಆ ವಹಂತು। ಅಸ್ಮದೀಯಂ ಯಜ್ಞಂ ಪ್ರಾಪಯಂತು। ತ್ವಂ ಚೋಶನ್ ಅಸ್ಮಾನ್ಕಾಮಯಮಾನೋ ನೋಽಸ್ಮಾಕಂ ಹವ್ಯಾನಿ ಹವೀಂಷಿ ಪ್ರತಿ ಜುಷಸ್ವ। ಪ್ರತ್ಯೇಕಂ ಸೇವಸ್ವ। ನೋದಾಸಿಷ್ಠಾಃ ॥ ವಿ ಷ್ಯಸ್ವ। ಷೋ ಅಂತಕರ್ಮಣಿ। ವ್ಯತ್ಯಯೇನಾತ್ಮನೇಪದಂ। ದಿವಾದಿತ್ವಾತ್ ಶ್ಯನ್। ಓತಃ ಶ್ಯನಿ। ಪಾ. ೭-೩-೭೧। ಇತ್ಯೋಕಾರ-ಲೋಪಃ। ಉಪಸರ್ಗಾತ್ಸುನೋತೀತಿ ಷತ್ವಂ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ। ಯೇ ತೇ—ಯಾವ ನಿನ್ನ ಕುದುರೆಗಳು ನಿನ್ನ ಸ್ವರೂಪವನ್ನೇ ಹೊಂದಿವೆಯೋ। ಹರಿಭಿಃ—ಆ ಕುದುರೆಗಳೊಡನೆ। ಮಾದಯಸ್ವ—ತೃಪ್ತಿಯನ್ನು ಪಡೆ। ಶಿಪ್ರೇ—(ನಿನ್ನ) ಕೆನ್ನೆಗಳನ್ನು

(ದವಡೆಗಳನ್ನು) । ವಿಷ್ಯಸ್ವ—(ಸೋಮಪಾನಾರ್ಥವಾಗಿ) ಚೆನ್ನಾಗಿ ತೆರೆ । **ಧೇನೇ**—ಗಂಟಲನ್ನು । **ವಿಸೃಜಸ್ವ**—ಅಗಲವಾಗಿಮಾಡಿ ತೆರೆ । **ಸುಶಿಪ್ರ**—ಅಂದವಾದ ಕೆನ್ನೆಯುಳ್ಳ ಇಂದ್ರನೇ । **ತ್ವಾ**—ನಿನ್ನನ್ನು । **ಹರಯಃ**—ಕುದುರೆಗಳು । **ಆ ವಹಂತು**—(ನಮ್ಮ ಯಜ್ಞಕ್ಕೆ) ಅಭಿಮುಖವಾಗಿ ಕರೆತರಲಿ (ನೀನೂ ಸಹ) । **ಉಶನ್**—ನಮ್ಮನ್ನು ಪ್ರೀತಿಸಿ (ಅನುಗ್ರಹ ಬುದ್ಧಿಯುಳ್ಳವನಾಗಿ) । **ನಃ**—ನಮ್ಮ । **ಹವ್ಯಾನಿ**—ಹವಿಸ್ಸುಗಳನ್ನು । **ಪ್ರತಿ ಜುಷಸ್ವ**—ಪ್ರತ್ಯೇಕವಾಗಿ ಸೇವಿಸು.

ಭಾವಾರ್ಥ

ಎಲೈ ಇಂದ್ರನೇ, ನಿನ್ನ ಸ್ವರೂಪವನ್ನೇ ಹೊಂದಿರತಕ್ಕ ನಿನ್ನ ಕುದುರೆಗಳೊಡನೆ ತೃಪ್ತಿಯನ್ನು ಹೊಂದು. ಸೋಮಪಾನಾರ್ಥವಾಗಿ ನಿನ್ನ ದವಡೆಗಳನ್ನು ಅಗಲಿಸು. ಗಂಟಲನ್ನು ತೆರೆ. ಅಂದವಾದ ಕೆನ್ನೆಯುಳ್ಳ ಇಂದ್ರನೇ, ನಿನ್ನನ್ನು ನಿನ್ನ ಕುದುರೆಗಳು ನಮ್ಮ ಯಜ್ಞಾಭಿಮುಖವಾಗಿ ಕರೆತರಲಿ. ನೀನು ಸಹ ನಮ್ಮಲ್ಲಿ ಅನುಗ್ರಹ ಬುದ್ಧಿಯುಳ್ಳವನಾಗಿ ನಮ್ಮ ಹವಿಸ್ಸುಗಳನ್ನು ಪ್ರತ್ಯೇಕವಾಗಿ ಸೇವಿಸಿ ತೃಪ್ತನಾಗು.

English Translation

Rejoice, Indra, with the steeds who are of your nature ; open your jaws, set wide your throat (to drink the Soma juice); let your horses bring you who have a handsome chin, (hither), and, benignant towards us, be pleased by our oblations

ವಿಶೇಷವಿಷಯಗಳು

**ಸುಶಿಪ್ರ—ಶಿಪ್ರೇ ಹನೂ ನಾಸಿಕೇ ವಾ ।** (ನಿ. ೬-೧೭) **ಶಿಪ್ರ**—ಶಬ್ದಕ್ಕೆ ಕೆನ್ನೆಯೆಂದಾಗಲಿ ಅಥವಾ ನಾಸಿಕವೆಂದಾಗಲಿ ಅರ್ಥವಾಗುತ್ತದೆಂದು ನಿರುಕ್ತಕಾರರು ಹೇಳಿರುವುದರಿಂದ ಸಾಯಣರೂ ಸಹ ಇಲ್ಲಿ ಅವೆರಡರಲ್ಲಿ ಯಾವ ಅರ್ಥಬೇಕಾದರೂ ಆಗಬಹುದೆಂದಿದ್ದಾರೆ. **ಸುಶಿಪ್ರ ಅಥವಾ ಶಿಪ್ರೀ** ಎಂಬ ವಿಶೇಷಣವು ಇಂದ್ರನ ಪರವಾಗಿ ಇದ್ದರೂ, ಇತರ ದೇವತೆಗಳ ಪರವಾಗಿ ಉಪಯೋಗಿಸಲ್ಪಟ್ಟಿರುವುದರಿಂದಲೂ, ಅಲ್ಲಲ್ಲಾ ಅರ್ಥವ್ಯತ್ಯಾಸಗಳಿರುವುದರಿಂದಲೂ ಶಿಪ್ರ ಮತ್ತು **ಸುಶಿಪ್ರ** ಶಬ್ದಗಳು ಎಲ್ಲೆಲ್ಲಿ ಯಾವ ಯಾವ ಅರ್ಥಗಳನ್ನು ಕೊಡುವುವೆಂಬುದನ್ನು ತಿಳಿಯಬೇಕು.

**ಮತ್ಸ್ವಾ ಸುಶಿಪ್ರ ಮಂದಿಭಿಃ ಸ್ತೋಮೇಭಿರ್ವಿಶ್ವಚರ್ಷಣೇ ।**
(ಋ. ಸಂ. ೧-೯-೩)

ಇಲ್ಲಿ **ಸುಶಿಪ್ರ ಹೇ ಶೋಭನಹನೋ ಶೋಭನನಾಸಿಕ ವಾ । ಶಿಪ್ರೇ ಹನೂ ನಾಸಿಕೇ ವಾ ಇತಿ ಯಾಸ್ಕೇನೋಕ್ತತ್ವಾತ್ ।** ಶಿಪ್ರ ಶಬ್ದಕ್ಕೆ ಕೆನ್ನೆ ಅಥವಾ ನಾಸಿಕ ಎಂದು ಎರಡು ಅರ್ಥಗಳೂ ಇರುವುದರಿಂದ **ಸುಶಿಪ್ರ** ಎಂದರೆ ಶ್ರೇಷ್ಠವಾದ ಕೆನ್ನೆಯುಳ್ಳ ಅಥವಾ ಶ್ರೇಷ್ಠವಾದ ನಾಸಿಕವುಳ್ಳ ಎಂದು ಇಂದ್ರನನ್ನು ಸಂಬೋಧಿಸಿದೆ. ಇದೇ ರೀತಿಯಲ್ಲಿ, ಕೆನ್ನೆ ಅಥವಾ ನಾಸಿಕವೆಂಬ ಅರ್ಥವು.—

**ಶಿಪ್ರಿನ್ವಾಜಾನಾಂ ಪತೇ ಶಚೀವಸ್ತವ ದಂಸನಾ ।**

(ಋ. ಸಂ. ೧-೨೯-೨)

**ಶ್ರಿಯೆ ಋಷ್ವ ಉಪಾಕಯೋರ್ನಿ ಶಿಪ್ರೀ ಹರಿವಾನ್ದಧೇ ಹಸ್ತಯೋರ್ವಜ್ರಮಾಯಸಂ ।**

(ಋ. ಸಂ. ೧-೮೧-೪)

ಎಂಬ ಋಕ್ಕುಗಳಲ್ಲಿಯೂ ಸಹ ಸಾಧ್ಯವಾಗುತ್ತದೆ. **ಶಿಪ್ರ**ವುಳ್ಳ ಇಂದ್ರನೆಂದರ್ಥ.

**ಹಿರಣ್ಯಶಿಪ್ರಾ ಮರುತೋ ದವಿಧ್ವತಃ ಪೃಕ್ಷಂ ಯಾಥ ಪೃಷತೀಭಿಃ ಸಮನ್ಯವಃ ।**

(ಋ. ಸಂ. ೨-೩೪-೩)

ಎಂಬ ಋಕ್ಕಿನಲ್ಲಿ **ಶಿಪ್ರಂ ಶಿರಸ್ತ್ರಾಣಂ । ಸುವರ್ಣಮಯಶಿರಸ್ತ್ರಾಣಾಃ ।** ಚಿನ್ನದಿಂದ ಮಾಡಲ್ಪಟ್ಟ ಶಿರಸ್ತ್ರಾಣವುಳ್ಳ (Helmet) ಎಂದು ಮರುತ್ತುಗಳಿಗೆ ವಿಶೇಷಣವಾಗಿದೆ. ಮತ್ತು,

**ಅಗ್ನಿಭ್ರಾಜಸೋ ವಿದ್ಯುತೋ ಗಭಸ್ತ್ಯೋಃ ಶಿಪ್ರಾಃ ಶೀರ್ಷಸು ವಿತತಾ ಹಿರಣ್ಯಯೀಃ ।**

(ಋ. ಸಂ. ೫-೫೪-೧೧)

ಎಂಬ ಋಕ್ಕಿನಲ್ಲಿ **ಉಷ್ಣೀಷಮಯ್ಯಃ** ಎಂದು ಶಿಪ್ರಶಬ್ದಕ್ಕೆ ರುಮಾಲು (Turban) ಎಂದು ಅರ್ಥಮಾಡಿದ್ದಾರೆ.

ಒಟ್ಟಿನಲ್ಲಿ **ಶಿಪ್ರ** ಶಬ್ದಕ್ಕೂ ಆ ಪದದಿಂದ ನಿಷ್ಪನ್ನವಾಗುವ ಶಿಪ್ರಿನ್ ಇತ್ಯಾದಿ ಶಬ್ದಗಳಿಗೂ ಸಹ ಕೆಳಗೆ ಹೇಳುವ ಕ್ರಮದಲ್ಲಿ ಅರ್ಥಮಾಡಬಹುದೆಂದು ತೋರುತ್ತೆ.

ಈ ಪದವು ದ್ವಿವಚನದಲ್ಲಿ ಉಪಯೋಗಿಸಿದ್ದರೆ ಆಗ ಕೆನ್ನೆಯೆಂದು ಅರ್ಥವಾಗುತ್ತದೆ- ೧-೧೦೧-೧೦, ೩-೩೨-೧, ೫-೩೬-೨, ೮-೭೬-೧೦, ೧೦-೯೬-೯, ೧೦-೧೦೫-೫ ಇತ್ಯಾದಿ ಋಕ್ಕುಗಳಲ್ಲಿ ಕೆನ್ನೆಯೆಂದರ್ಥ. **ಶಿಪ್ರಿನ್** ಎಂದರೆ **ಕೆನ್ನೆ** ಅಥವಾ **ಮೂಗನ್ನು** ಹೊಂದಿರುವ ಇಂದ್ರನಿಗೆ ಮಾತ್ರ ವಿಶೇಷಣವಾಗುತ್ತದೆ. ೧-೨೯-೨, ೧-೮೪-೧, ೩-೩೬-೧೦ ಇತ್ಯಾದಿ ಸ್ಥಳಗಳಲ್ಲಿ ಇಂದ್ರನಿಗೆ ವಿಶೇಷಣವಾಗಿ ಶಿಪ್ರವುಳ್ಳವನು ಎಂದರ್ಥ, ಮತ್ತು

**ಸೀವ್ರೋಅಶ್ವಾಃ ಶುಚದ್ರಥಾ ಹಿ ಭೂತಾಯಃಶಿಪ್ರಾ ವಾಜಿನಃ ಸುನಿಷ್ಕಾಃ ।**

( ಋ. ಸಂ. ೪-೩೭-೪)

ಎಂಬ ಋಕ್ಕಿನಲ್ಲಿ **ಅಯಃಶಿಪ್ರಾಃ** ಎಂದು ಋಭುಗಳಿಗೆ ವಿಶೇಷಣವಾಗಿದೆ. ಇಲ್ಲಿ ಉಕ್ಕಿನಿಂದಮಾಡಿದ ಶಿರಸ್ತ್ರಾಣ (Visors) ವೆಂದಾದರೂ ಆಗಬಹುದು. ಅಥವಾ ಸಾಯಣರು ವಿವರಿಸುವಂತೆ **ಅಯೋವತ್ಸಾರಭೂತಶಿಪ್ರಾಃ ।** ಉಕ್ಕಿನಂತೆ ಬಲವುಳ್ಳ ಕೆನ್ನೆಯುಳ್ಳವರು ಎಂದಾದರೂ ಆಗಬಹುದು.

ಪ್ರಕೃತವಾದ ಈ ಋಕ್ಕಿನಲ್ಲಿ **ಸುಶಿಪ್ರ** ಎಂದರೆ ಅಂದವಾದ ಕೆನ್ನೆ ಅಥವಾ ಮೂಗುಳ್ಳ ಇಂದ್ರನೇ ಎಂದು ಇಂದ್ರನನ್ನು ಸಂಬೋಧಿಸಿದೆ. ಶಿಪ್ರೇ ಎನ್ನುವುದಕ್ಕೆ ಕೆನ್ನೆಗಳನ್ನು ಎಂದರ್ಥ. ಸೋಮಪಾನಾರ್ಥವಾಗಿ ನಿನ್ನ ದವಡೆಗಳನ್ನು ತೆರೆ ಎಂದಭಿಪ್ರಾಯ.

ವ್ಯಾಕರಣಪ್ರಕ್ರಿಯಾ

ವಿ **ಷ್ಯಸ್ವ**—ಷೋ ಅಂತಕರ್ಮಣಿ. ಧಾತು. **ಧಾತ್ವಾದೇಃ ಷಃ ಸಃ**—(ಪಾ. ಸೂ. ೬-೧-೬೪)—ಎಂಬುದರಿಂದ ಆದಿಗೆ ಸತ್ವ. **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಥಾಸ್ ಪ್ರತ್ಯಯ. **ಥಾಸಃ ಸೇ**—(ಪಾ. ಸೂ. ೩-೪-೮೦) ಎಂಬುದರಿಂದ ಸೇ ಆದೇಶ. **ಸವಾಭ್ಯಾಂ ವಾಮೌ**—(ಪಾ. ಸೂ. ೩-೪-೯೧) ಎಂಬುದರಿಂದ ಏಕಾರಕ್ಕೆ ವತ್ವ. **ದಿವಾದಿಭ್ಯಃ ಶ್ಯನ್**—(ಪಾ. ಸೂ. ೩-೧-೬೯) ಸೂತ್ರದಿಂದ ಶ್ಯನ್ ವಿಕರಣ. ಇದು ಪರವಾದಾಗ **ಓತಃ ಶ್ಯನಿ** (ಪಾ. ಸೂ. ೭-೩-೭೧) ಎಂಬುದರಿಂದ ಓಕಾರಕ್ಕೆ ಲೋಪ. ಸ್ಯಸ್ವ ಎಂದು ರೂಪವಾಗುತ್ತದೆ. ಉಪಸರ್ಗದಲ್ಲಿರುವ ನಿಮಿತ್ತದಿಂದ (ಇಕಾರ) ಪರವಾದುದರಿಂದ **ಉಪಸರ್ಗಾತ್ ಸು**—(ಪಾ. ಸೂ. ೮-೩-೬೫) ಎಂಬುದರಿಂದ ಷತ್ವ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸೃಜಸ್ವ**—ಸೃಜ ವಿಸರ್ಗೇ. ಧಾತು. ತುದಾದಿ. **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲೋಟ್ ಮಧ್ಯಮಪುರುಷ ಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

**ಸುಶಿಪ್ರ**—ಶೋಭನೇ ಶಿಪ್ರೇ ಯಸ್ಯ ಸಃ (ದವಡೆ) ಸುಶಿಪ್ರಃ **ಆಮಂತ್ರಿತಸ್ಯ ಚ**—(ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಜುಷಸ್ವ**—ಜುಷೀ ಪ್ರೀತಿಸೇವನಯೋಃ ಧಾತು. ಲೋಟ್ ಮಧ್ಯಮಪುರುಷಏಕವಚನರೂಪ ತಿಙಂತನಿಘಾತಸ್ವರ ಬರುತ್ತದೆ. ॥ ೧೦ ॥

———— :o: ————

ಸಂಹಿತಾಪಾಠಃ

ಮ॒ರುತ್ಸ್ತೋ॑ತ್ರಸ್ಯ ವೃ॒ಜನ॑ಸ್ಯ ಗೋ॒ಪಾ ವ॒ಯಮಿಂದ್ರೇ॑ಣ ಸನು-
ಯಾ॒ಮ ವಾಜಂ॑ ।
ತನ್ನೋ॑ ಮಿ॒ತ್ರೋ ವರು॑ಣೋ ಮಾಮಹಂತಾ॒ಮದಿ॑ತಿಃ॒ ಸಿಂಧು॑ಃ
ಪೃಥಿ॒ವೀ ಉ॒ತ ದ್ಯೌಃ ॥ ೧೧ ॥

॥ ಪದಪಾಠಃ ॥

ಮರುತ್ಽಸ್ತೋತ್ರಸ್ಯ । ವೃಜನಸ್ಯ । ಗೋಪಾಃ । ವಯಂ । ಇಂದ್ರೇಣ । ಸನು-

ಯಾಮ । ವಾಜಂ ।

ತತ್ । ನಃ । ಮಿತ್ರಃ । ವರುಣಃ । ಮಮಹಂತಾಂ । ಅದಿತಿಃ । ಸಿಂಧುಃ । ಪೃಥಿ-

ವೀ । ಉತ । ದ್ಯೌಃ ॥ ೧೧ ॥

ಸಾಯಣಭಾಷ್ಯಂ

ಮರುತ್ಸ್ತೋತ್ರಸ್ಯ। ಮರುದ್ಭಿಃ ಸಹ ಸ್ತೋತ್ರಂ ಯಸ್ಯ ಸ ಮರುತ್ಸ್ತೋತ್ರಃ । ತಸ್ಯ ವೃಜನಸ್ಯ ಶತ್ರೂಣಾಂ ಕ್ಷೇಪ್ತುರಿಂದ್ರಸ್ಯ ಸಂಬಂಧಿನೋ ಗೋಪಾ ಗೋಪಾಯನೀಯಾ ರಕ್ಷಣೀಯಾ ವಯಂ ತೇನೇಂದ್ರೇಣ ವಾಜಮನ್ನಂ ಸನುಯಾಮ । ಲಭೇಮಹಿ । ಯದೇತದಸ್ಮಾಭಿಃ ಪ್ರಾರ್ಥಿತಂ ನೋಽಸ್ಮದೀಯಂ ತನ್ಮಿತ್ರಾದಯೋ ದ್ಯಾವಾಪೃಥಿವ್ಯೌ ಚ ಮಮಹಂತಾಂ । ಪೂಜಿತಂ ಕುರ್ವಂತು ॥ ವೃಜನಸ್ಯ । ವೃಜೀ ವರ್ಜನೇ । ಕ್ಯಾಸ್ಯಾವೃಜಿಮುಂದಿನಿಧಾಞ್ಭ್ಯಃ ಕ್ಯುರಿತಿ ಕ್ಯುಪ್ರತ್ಯಯಃ ॥

ಪ್ರತಿಪದಾರ್ಥ

**ಮರುತ್ಸ್ತೋತ್ರಸ್ಯ**—ಮರುತ್ತುಗಳೊಡನೆ ಸ್ತೋತ್ರವನ್ನು ಸ್ವೀಕರಿಸುವವನೂ । **ವೃಜನಸ್ಯ**—ಶತ್ರುಗಳನ್ನು ನಾಶಮಾಡುವವನೂ ಆದ ಇಂದ್ರನ । **ಗೋಪಾಃ**— ರಕ್ಷಣೆಗೆ ಪಾತ್ರರಾದ । **ವಯಂ**— ನಾವು । **ಇಂದ್ರೇಣ**— (ಆ) ಇಂದ್ರನಿಂದ । **ವಾಜಂ**— ಅನ್ನವನ್ನು । **ಸನುಯಾಮ**—ಹೊಂದೋಣ. (ಹೊಂದುವಂತೆ ಆಗಲಿ) । **ನಃ**— ನಮ್ಮ । **ತತ್**— (ಪ್ರಾರ್ಥಿತವಾದ) ಆ ಅನ್ನವನ್ನು । **ಮಿತ್ರಃ**— ಮಿತ್ರನೂ । **ವರುಣಃ**— ವರುಣನೂ । **ಅದಿತಿಃ**—ಅದಿತಿಯೂ । **ಸಿಂಧುಃ**—ಸಾಗರಾಧಿದೇವತೆಯೂ । **ಪೃಥಿವೀ**—ಪೃಥಿವಿಯೂ । **ಉತ**—ಮತ್ತು । **ದ್ಯೌಃ**—ದ್ಯುಲೋಕವೂ । **ಮಮಹಂತಾಂ**—ಪೂಜ್ಯವನ್ನಾಗಿಮಾಡಲಿ. (ಮತ್ತು ರಕ್ಷಿಸಲಿ) ॥

॥ ಭಾವಾರ್ಥ ॥

ಮರುತ್ತುಗಳೊಡನೆ ಸ್ತೋತ್ರವನ್ನು ಸ್ವೀಕರಿಸುವವನೂ, ಶತ್ರುನಾಶಕನೂ ಆದ ಇಂದ್ರನ ರಕ್ಷಣೆಗೆ ಪಾತ್ರರಾದ ನಾವು ಆ ಇಂದ್ರನಿಂದ ಅನ್ನವನ್ನು ಪಡೆಯೋಣ. ನಮ್ಮ ಪ್ರಾರ್ಥಿತವಾದ ಆ ಅನ್ನವನ್ನು ಮಿತ್ರನೂ, ವರುಣನೂ ಅದಿತಿಯೂ, ಸಾಗರಾಧಿ ದೇವತೆಯೂ, ಪೃಥಿವಿಯೂ ಮತ್ತು ದ್ಯುಲೋಕವೂ ಸಹ ರಕ್ಷಿಸಲಿ.

English Translation

Protected by that destroyer of (foes), who is united in praise with the Maruts, we may receive sustenance from Indra ; and may Mitra, Varuna, Aditi,—ocean, and heaven, preserve it to us.

ವಿಶೇಷವಿಷಯಗಳು

**ಮರುತ್ಸ್ತೋತ್ರಸ್ಯ । ಮರುದ್ಭಿಃ ಸಹ ಸ್ತೋತ್ರಂ ಯಸ್ಯ ಸ ಮರುತ್ಸ್ತೋತ್ರಃ ತಸ್ಯ ।** ಮರುತ್ತುಗಳೊಡನೆ ಸ್ತೋತ್ರವನ್ನು ಸ್ವೀಕರಿಸುವ ಇಂದ್ರನಿಗೆ.

**ವೃಜನಸ್ಯ—ಶತ್ರೂಣಾಂ ಕ್ಷೇಪ್ತುರಿಂದ್ರಸ್ಯ ।** ಶತ್ರುಗಳನ್ನು ಸದೆಬಡಿದು ನಾಶಮಾಡುವ ಇಂದ್ರನ; ವೃಜನವೆಂದರೆ ವಕ್ರ, ವಂಚನೆ ಎಂದೂ, ಶಕ್ತಿಯೆಂದೂ (ನಿ. ೨-೯), ವಂಚನೆಯನ್ನು ಮಾಡತಕ್ಕ ಶತ್ರುವೆಂದೂ ಅರ್ಥವಾಗುತ್ತದೆ. ಇಲ್ಲಿ ಮೋಸಮಾಡತಕ್ಕ ಶತ್ರುವೆಂದರ್ಥ.

**ಯುಕ್ತಾ ಮಾತಾಸೀದ್ಧುರಿ ದಕ್ಷಿಣಾಯಾ ಅತಿಷ್ಠದ್ಗರ್ಭೋ ವೃಜನೀಷ್ವಂತಃ ।**
(ಋ. ಸಂ ೧-೧೬೪-೯)

ಎಂಬಲ್ಲಿ **ಉದಕವತ್ಸು ಮೇಘಪಂಕ್ತಿಷು** ಎಂದು ಹೇಳುವಾಗಲೂ ಸಹ ಮರೆಮಾಡತಕ್ಕ ಮೇಘಪಂಕ್ತಿಗಳು ಎಂದು ಅರ್ಥವಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಮರುತ್ಸ್ತೋತ್ರಸ್ಯ**—ಮರುದ್ಭಿಃ ಸಹ ಸ್ತೋತ್ರಂ ಯ ಸ್ಯಸಃ ಮರುತ್ಸ್ತೋತ್ರಃ. **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಸನುಯಾಮ**—ಷಣು ದಾನೇ ಧಾತು. **ಧಾತ್ವಾದೇಃ ಷಃ ಸಃ**—(ಪಾ. ಸೂ. ೬.೧.೬೪) ಎಂಬುದರಿಂದ ಆದಿಗೆ ಸತ್ವ. ಲಿಙ್ ಉತ್ತಮಪುರುಷ ಬಹುವಚನರೂಪ. **ನಿತ್ಯಂ ಙಿತಃ**—(ಪಾ. ಸೂ. ೩-೪-೯೯) ಎಂಬುದರಿಂದ ಸಕಾರಲೋಪ. **ಯಾಸುಟ್ಪರಸ್ಮೈಪದೇಷು**—(ಪಾ. ಸೂ. ೩-೪-೧೦೩) ಎಂಬುದರಿಂದ ಯಾಸುಟಾಗಮ. **ಲಿಙಃ ಸಲೋಪೋ**—(ಪಾ. ಸೂ. ೭-೨-೭೯) ಎಂಬುದರಿಂದ ಸಲೋಪ. **ತನಾದಿಕೃಞ್ಭ್ಯಃ ಉಃ**—(ಪಾ. ಸೂ. ೩-೧-೭೯) ಎಂಬುದರಿಂದ ಉವಿಕರಣ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಮುಹಂತಾಮ್**—ಮಹ ಪೂಜಾಯಾಂ ಧಾತು. ಲೋಟ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ. **ಝೋಂತಃ**— ಎಂಬುದರಿಂದ ಅಂತಾದೇಶ. **ಟಿತ ಆತ್ಮನೇಪದಾನಾಂ** — ಸೂತ್ರದಿಂದ ಏತ್ವ. **ಆಮೇತಃ**—(ಪಾ. ಸೂ. ೩-೪-೯೦) ಎಂಬುದರಿಂದ ಏಕಾರಕ್ಕೆ ಆಮಾದೇಶ. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ**—ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಮಮುಹಂತಾಮ್ ಎಂದು ರೂಪವಾಗುತ್ತದೆ ॥ ೧೧ ॥

———:o:———

# ನೂರ ಎರಡನೆಯ ಸೂಕ್ತವು

---

**ಇಮಾಂ ತ ಇತ್ಯೇಕಾದಶರ್ಚಂ ನವಮಂ ಸೂಕ್ತಂ ಕುತ್ಸಸ್ಯಾರ್ಷಮೈಂದ್ರಂ । ಅಂತ್ಯಾ ತ್ರಿಷ್ಟುಪ್ ಶಿಷ್ಟಾ ದಶ ಜಗತ್ಯಃ । ತಥಾ ಚಾನುಕ್ರಾಂತಂ । ಇಮಾಂ ತೇಽಂತ್ಯಾ ತ್ರಿಷ್ಟುಬಿತಿ ॥ ವಿನಿಯೋಗೋ ಲೈಂಗಿಕಃ ॥**

ಅನುವಾದವು—ಇಮಾಂತೇ ಎಂಬ ಈ ಸೂಕ್ತವು ಹದಿನೈದನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಕುತ್ಸನು ಋಷಿಯು. ಇಂದ್ರನು ದೇವತೆಯು. ಈ ಸೂಕ್ತದ ಕೊನೆಯ ಋಕ್ಕು ತ್ರಿಷ್ಟುಪ್ ಛಂದಸ್ಕವು. ಉಳಿದ ಹತ್ತುಋಕ್ಕುಗಳು ಜಗತೀಛಂದಸ್ಸಿನವು. ಅನುಕ್ರಮಣಿಕೆಯಲ್ಲಿ **ಇಮಾಂ ತೇಂತ್ಯಾತ್ರಿಷ್ಟುಬಿತಿ** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.



॥ ಓಂ ॥

## ಸೂಕ್ತ—೧೦೨

॥ ಮಂಡಲ—೧ ॥ ಅನುವಾಕ—೧೫ ॥ ಸೂಕ್ತ—೧೦೨ ॥

॥ ಅಷ್ಟಕ— ೧ ॥ ಅಧ್ಯಾಯ— ೭ ॥ ವರ್ಗ—೧೪, ೧೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ- ೧೧

॥ ಋಷಿಃ—ಕುತ್ಸ ಆಂಗಿರಸಃ ।

॥ ದೇವತಾ—ಇಂದ್ರಃ ॥

॥ ಛಂದಃ—೧-೧೦ ಜಗತೀ । ೧೧. ತ್ರಿಷ್ಟುಪ್ ॥

ಸಂಹಿತಾಪಾಠಃ

ಇಮಾಂ ತೇ ಧಿಯಂ ಪ್ರ ಭರೇ ಮಹೋ ಮಹೀಮಸ್ಯ ಸ್ತೋತ್ರೇ ಧಿಷಣಾ ಯತ್ತ ಆನಜೇ ।
ತಮುತ್ಸವೇ ಚ ಪ್ರಸವೇ ಚ ಸಾಸಹಿಮಿಂದ್ರಂ ದೇವಾಸಃ ಶವಸಾಮದನ್ನನು ॥ ೧ ॥

ಪದಪಾಠಃ

ಇಮಾಂ । ತೇ । ಧಿಯಂ । ಪ್ರ । ಭರೇ । ಮಹಃ । ಮಹೀಂ । ಅಸ್ಯ । ಸ್ತೋತ್ರೇ । ಧಿಷಣಾ । ಯತ್ । ತೇ । ಆನಜೇ ।
ತಂ । ಉತ್ಽಸವೇ । ಚ । ಪ್ರಽಸವೇ । ಚ । ಸಸಹಿಂ । ಇಂದ್ರಂ । ದೇವಾಸಃ । ಶವಸಾ । ಅಮದನ್ । ಅನು ॥ ೧ ॥

ಸಾಯಣಭಾಷ್ಯಂ

ಹೇ ಇಂದ್ರ ಮಹೋ ಮಹತಸ್ತೇ ತವೇಮಾಮಿದಾನೀಂ ಕ್ರಿಯಮಾಣಾಂ ಮಹೀಂ ಮಹತೀಂ ಅತ್ಯಂತೋತ್ಕೃಷ್ಟಾಂ ಧಿಯಂ ಸ್ತುತಿಂ ಪ್ರಭರೇ । ಪ್ರಕರ್ಷೇಣ ಸಂಪಾದಯಾಮಿ । ತೇ ತವ ಧಿಷಣಾ ತ್ವದೀಯಾ ಬುದ್ಧಿರಸ್ಯ ಮಮ ಸ್ತೋತುಃ ಸ್ತೋತ್ರೇ ಸ್ತುತೌ ಯದ್ಯಸ್ಮಾದಾನಜೇ ಅಕ್ತಾ ಸಂಶ್ಲಿಷ್ಟಾಸೀತ್। ತಸ್ಮಾತ್ತವ ಪ್ರಿಯಾಂ ಸ್ತುತಿಂ ಕರೋಮೀತ್ಯರ್ಥಃ। ಉತ್ತರೋಽರ್ಧರ್ಚಃ ಪರೋಕ್ಷಕೃತಃ। ಸಸಹಿಂ ಶತ್ರೂಣಾಮಭಿಭವಿತಾರಂ ಪೂರ್ವೋಕ್ತಂ ತಮಿಂದ್ರಂ ದೇವಾಸಃ ಕರ್ಮಸು ದೀವ್ಯಂತ ಋತ್ವಿಜಃ ಶವಸಾಸ್ತುತಿಭಿಃ ಕೀರ್ತನಬಲೇನಾನ್ವಮದನ್ । ಅನುಕ್ರಮೇಣ ಹರ್ಷಂ ಪ್ರಾಪಯನ್ । ಕಿಮರ್ಥಂ । ಉತ್ಸವೇ ಚೋತ್ಸವಾರ್ಥಮಭಿವೃದ್ಧ್ಯರ್ಥಂ ಪ್ರಸವೇ ಚ ಧನಾನಾಂ ವೃಷ್ಟ್ಯುದಕಾನಾಂ ವೋತ್ಪತ್ತ್ಯರ್ಥಂ ಚ ॥ ಆನಜೇ । ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು । ಅಸ್ಮಾತ್ಕರ್ಮಣಿ ಲಿಟ್ । ದ್ವಿರ್ವಚನಹಲಾದಿಶೇಷೌ। ಅತ ಆದೇರಿತ್ಯಭ್ಯಾಸಸ್ಯಾತ್ತ್ವಂ । ತಸ್ಮಾನ್ನುಟ್ದ್ವಿಹಲಃ । ಪಾ. ೭-೪-೭೧ । ಇತಿ ನುಟ್ । ವ್ಯತ್ಯಯೇನೋಪಧಾನಕಾರಲೋಪಃ । ಉತ್ಸವೇ । ಪ್ರಸವೇ । ಷೂ ಪ್ರೇರಣೇ । ಋದೋರಬಿತಿ ಭಾವೇಽಪ್ ।

**ನಿಮಿತ್ತಾತ್ಕರ್ಮಸಂಯೋಗೇ । ಪಾ. ೨-೩-೩೬-೬ । ಇತಿ ಸಪ್ತಮೀ । ಥಾಥಾದಿನೋತ್ತರಪದಾಂತೋದಾತ್ತತ್ವಂ । ಸಸಹಿಂ । ಷಹ ಅಭಿಭವೇ । ಆದೃಗಮಹನ ಇತ್ಯತ್ರೋತ್ಸರ್ಗಶ್ಛಂದಸೀತಿ ವಚನಾತ್ಕಿಪ್ರತ್ಯಯಃ। ಲಿಡ್ವದ್ಭಾವಾದ್ದ್ವಿರ್ವಚನಂ । ಅನ್ಯೇಷಾಮಪಿ ದೃಶ್ಯತ ಇತಿ ಸಂಹಿತಾಯಾಮಭ್ಯಾಸಸ್ಯ ದೀರ್ಘತ್ವಂ । ಅಮದನ್ । ಮದೀ ಹರ್ಷೇ । ಹೇತುಮತಿ ಣಿಚ್ । ಮದೀ ಹರ್ಷಗ್ಲಪನಯೋರಿತಿ ಘಟಾದಿಷು ಪಾಠಾನ್ಮಿತಾಂ ಹ್ರಸ್ವ ಇತಿ ಹ್ರಸ್ವತ್ವಂ । ಛಂದಸ್ಯುಭಯಥೇತಿ ಶಪ ಆರ್ಧಧಾತುಕತ್ವಾಣ್ಣೇರನಿಟೀತಿ ಣಿಲೋಪಃ ॥**

ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ) - **ತೇ**—ನಿನ್ನ । **ಧಿಷಣಾ**—ಮನಸ್ಸು । **ಅಸ್ಯ**—ಕೀರ್ತನಕಾರನಾದ ಈ ನನ್ನ । **ಸ್ತೋತ್ರೇ**—ಸ್ತುತಿಯಲ್ಲಿ । **ಯತ್**—ಯಾವ ಕಾರಣದಿಂದ । **ಆನಜೇ**—(ಆದರದಿಂದ) ಲೀನವಾಗಿದೆಯೋ (ಅದ್ದರಿಂದ) । **ಮಹಃ**—ಮಹಾತ್ಮನಾದ । **ತೇ**—ನಿನ್ನ । **ಮಹೀಂ**—ಅತ್ಯುತ್ಕೃಷ್ಟವಾದ । **ಇಮಾಂ ಧಿಯಂ**—ಈ ಸ್ತೋತ್ರವನ್ನು । **ಪ್ರಭರೇ**—ಅತಿಶಯವಾಗಿ ನಿರ್ಮಿಸುತ್ತೇನೆ । **ಸಸಹಿಂ**—ಶತ್ರುಗಳನ್ನು ಜಯಿಸತಕ್ಕ । **ತಂ ಇಂದ್ರಂ**—ಆ ಇಂದ್ರನನ್ನು । **ದೇವಾಸಃ**—(ಯಜ್ಞಕರ್ಮಗಳಲ್ಲಿ) ಪ್ರಕಾಶಿಸುವ ಋತ್ವಿಕ್ಕುಗಳು । **ಉತ್ಸವೇ ಚ**—(ತಮ್ಮ) ಅಭ್ಯುದಯಕ್ಕಾಗಿಯೂ । **ಪ್ರಸವೇ ಚ**—(ವೃಷ್ಟ್ಯುದಕಾದಿ ರೂಪವಾದ) ಧನಕ್ಕಾಗಿಯೂ । **ಶವಸಾ**—ಸ್ತುತಿಯ ಬಲದಿಂದ । **ಅನು ಅಮದನ್**—ಅನುಕ್ರಮವಾಗಿ ಹರ್ಷಪಡಿಸಿದರು.

ಭಾವಾರ್ಥ

ಎಲೈ ಇಂದ್ರನೇ, ನಿನ್ನ ಮನಸ್ಸು ಕೀರ್ತನಕಾರನಾದ ಈ ನನ್ನ ಸ್ತುತಿಯಲ್ಲಿಯೇ ಆದರದಿಂದ ಲೀನವಾಗಿರುವಕಾರಣ ಮಹಾತ್ಮನಾದ ನಿನಗೆ ಅತ್ಯುತ್ಕೃಷ್ಟವಾದ ಈ ಸ್ತೋತ್ರವನ್ನು ನಿರ್ಮಿಸಿ ಅರ್ಪಿಸುತ್ತೇನೆ. ಶತ್ರುಗಳನ್ನು ಜಯಿಸತಕ್ಕ ಆ ಇಂದ್ರನನ್ನು ಯಜ್ಞಕರ್ಮಗಳಲ್ಲಿ ಪ್ರಕಾಶಿಸುವ ಋತ್ವಿಕ್ಕುಗಳು ತಮ್ಮ ಅಭ್ಯುದಯಕ್ಕಾಗಿಯೂ ವೃಷ್ಟ್ಯುದಕಾದಿ ರೂಪವಾದ ಧನಕ್ಕಾಗಿಯೂ ತಮ್ಮ ಸ್ತೋತ್ರಬಲದಿಂದ ಅನುಕ್ರಮವಾಗಿ ಹರ್ಷಪಡಿಸಿದರು.

English Translation

I address to you, who are mighty, this excellent hymn, because your understanding has been gratified by my praise : the gods have successively delighted that victorious Indra with the power (of praise) for the sake of prosperity and wealth.

ವಿಶೇಷವಿಷಯಗಳು

**ಧಿಯಂ**—ಧೀಶಬ್ದವು ಹನ್ನೊಂದು ಪ್ರಜ್ಞಾನಾಮಗಳಲ್ಲಿ ಪಠಿತವಾಗಿದ್ದರೂ (ನಿ. ೩-೯) ಇಲ್ಲಿ ಈ ಶಬ್ದಕ್ಕೆ ಭಾಷ್ಯಕಾರರು ಸ್ತೋತ್ರವೆಂದು ಅರ್ಥಮಾಡಿರುವರು.

**ಉತ್ಸವೇ ಪ್ರಸವೇ—ಷೂ ಪ್ರೇರಣೇ—ಉತ್ಸವಾರ್ಥಮಭಿವೃದ್ಧ್ಯರ್ಥಂ** । ಅಭಿವೃದ್ಧಿಗಾಗಿ ಅಥವಾ ಶ್ರೇಯೋಭಿವೃದ್ಧಿಗಾಗಿ.

**ಸಸಹಿಂ**—ಷಹ ಅಭಿಭವೇ । **ಶತ್ರೂಣಾಮಭಿಭವಿತಾರಂ** । ಶತ್ರುಗಳನ್ನು ಪರಾಭವಗೊಳಿಸುವ, ಸೋಲಿಸುವ,

**ದೇವಾಸಃ** :— ಈ ಶಬ್ದಕ್ಕೆ ದೇವತೆಗಳು ಎಂಬ ಸಾಮಾನ್ಯಾರ್ಥವಿದ್ದರೂ ಇಲ್ಲಿ ಭಾಷ್ಯಕಾರರು— ಕರ್ಮಸು ದೀವ್ಯಂತ ಇತಿ ದೇವಾ ಋತ್ವಿಜಃ ಎಂದರೆ ಯಜ್ಞಾದಿಕರ್ಮಗಳಲ್ಲಿ ಮುಖ್ಯಪಾತ್ರವನ್ನು ವಹಿಸಿ ಪ್ರಕಾಶಿಸುವುದರಿಂದ ದೇವಾಃ ಅಥವಾ ದೇವಾಸಃ ಎಂದರೆ ಋತ್ವಿಕ್ಕುಗಳು ಎಂದು ಅರ್ಥಮಾಡಿರುವರು. ದೇವ ಶಬ್ದಕ್ಕೆ ಸಾಮಾನ್ಯಾರ್ಥವನ್ನು ಹೇಳುವಾಗ ಯಾಸ್ಕರು—ದೇವೋ ದಾನಾದ್ವಾ ದೀಪನಾದ್ವಾ ದ್ಯೋತನಾದ್ವಾ ದ್ಯುಸ್ಥಾನೋ ಭವತೀತಿ ವಾ ಎಂದು ಹೇಳಿರುವರು. ದೇವನೆಂದರೆ ಕೊಡುವವನು, ಪ್ರಕಾಶಿಸುವವನು ಅಥವಾ ಸ್ವರ್ಗದಲ್ಲಿ ಇರುವವನು ಎಂದರ್ಥವು. ಭಾಷ್ಯಕಾರರು—

**ಸ್ವಗ್ನಯೋ ಹಿ ವಾರ್ಯಂ ದೇವಾಸೋ ದಧಿರೇ ಚ ನಃ ।**

(ಋ. ಸಂ. ೧-೨೬-೮)

ಇತ್ಯಾದಿ ಋಕ್ಕುಗಳಲ್ಲಿ **ದೇವಾಸೋ ದೀಪ್ಯಮಾನಾ ಋತ್ವಿಜಃ** ಎಂದು ದೇವಾಸಃ ಎಂಬ ಶಬ್ದಕ್ಕೆ ಋತ್ವಿಕ್ಕುಗಳೆಂದೇ ಅರ್ಥಮಾಡಿರುವರು.

**ಶವಸಾ**—ಶವಃ ಎಂಬ ಶಬ್ದವು ಇಪ್ಪತ್ತೆಂಟು ಬಲನಾಮಗಳಲ್ಲಿ ಪಠಿತವಾಗಿದ್ದರೂ (ನಿ. ೨-೯) ಇಲ್ಲಿ ಭಾಷ್ಯಕಾರರು **ಶವಸಾ-ಸ್ತುತಿಭಿಃ ಕೀರ್ತನಬಲೇನ** ಎಂದರೆ ಸ್ತೋತ್ರಾದಿಗಳನ್ನು ಮಾಡುವುದರಿಂದ ಉಂಟಾಗುವ ಬಲದಿಂದ ಎಂದು ಅರ್ಥವಿವರಣೆ ಮಾಡಿರುವರು.

ಈ ಋಕ್ಕಿನಲ್ಲಿರುವ ಪೂರ್ವಾರ್ಧವು ಇಂದ್ರನನ್ನು ನೇರವಾಗಿ ಸಂಬೋಧಿಸಿ ಸ್ತೋತ್ರಮಾಡಿರುವುದು. ಈ ವಿಧವಾದ ಸ್ತೋತ್ರಕ್ಕೆ ಪ್ರತ್ಯಕ್ಷಕೃತವೆಂದು ಹೆಸರು. ಉತ್ತರಾರ್ಧವು ಇಂದ್ರನನ್ನು ಸಾಮಾನ್ಯವಾಗಿ ಎಂದರೆ ಸಂಬೋಧನಾದಿಗಳನ್ನು ಮಾಡದೆ ಇಂದ್ರನು ಎದುರಿಗಿಲ್ಲದಿದ್ದರೆ ಹೇಗೋ ಹಾಗೆಂದು ಭಾವಿಸಿ ಸ್ತೋತ್ರಮಾಡಲಾಗಿದೆ ಈ ವಿಧವಾದ ಸ್ತೋತ್ರಕ್ಕೆ ಪರೋಕ್ಷಕೃತವೆಂದು ಹೆಸರು. ಈ ವಿಷಯದಲ್ಲಿ ಯಾಸ್ಕರು ಈ ರೀತಿ ವಿವರಿಸಿರುವರು—

**ತದ್ಯಾನಿ ನಾಮಾನಿ ಪ್ರಾಧಾನ್ಯಸ್ತುತೀನಾಂ ದೇವತಾನಾಂ ತದ್ದೈವತಮಿತ್ಯಾಚಕ್ಷತೇ । ಯತ್ಕಾಮ ಋಷಿರ್ಯಸ್ಯಾಂ ದೇವತಾಯಾಮಾರ್ಥಪತ್ಯಮಿಚ್ಛನ್ಸ್ತುತಿಂ ಪ್ರಯುಂಕ್ತೇ ತದ್ದೈವತಃ ಸ ಮಂತ್ರೋ ಭವತಿ । ತಾಸ್ತ್ರಿವಿಧಾ ಋಚಃ ಪರೋಕ್ಷಕೃತಾಃ ಪ್ರತ್ಯಕ್ಷಕೃತಾ ಆಧ್ಯಾತ್ಮಿಕಾಶ್ಚ । ತತ್ರ ಪರೋಕ್ಷಕೃತಾಃ ಸರ್ವಾಭಿರ್ನಾಮವಿಭಕ್ತಿಭಿರ್ಯುಜ್ಯಂತೇ, ಪ್ರಥಮಪುರುಷೈಶ್ಚಾಖ್ಯಾತಸ್ಯ ॥ ಅಥ ಪ್ರತ್ಯಕ್ಷಕೃತಾ ಮಧ್ಯಮಪುರುಷಯೋಗಾಸ್ತ್ವಮಿತಿ ಚೈತೇನ ಸರ್ವನಾಮ್ನಾ ॥ ಪರೋಕ್ಷಕೃತಾಃ ಪ್ರತ್ಯಕ್ಷಕೃತಾಶ್ಚ ಮಂತ್ರಾ ಭೂಯಿಷ್ಠಾ ಅಲ್ಪಶ ಆಧ್ಯಾತ್ಮಿಕಾಃ ॥**

(ನಿರುಕ್ತ. ದೈವತಕಾಂಡ. ಅಧ್ಯಾಯ ೭. ಖಂಡ ೧-೩)

ಎಂದರೆ ಮಂತ್ರಗಳಲ್ಲಿ ದೈವತಮಂತ್ರ, ಸ್ತುತಿಮಂತ್ರ, ಆಶೀರ್ಮಂತ್ರ, ಶಪಥ, ಅಭಿಶಾಪ, ಕಶ್ಚಿದ್ಭಾವ, ಪರಿದೇವನಾ, ನಿಂದಾ, ಪ್ರಶಂಸಾ ಎಂದು ಅರ್ಥಾನುಸಾರ ಅನೇಕವಿಧಗಳಿರುವವು. ದೈವತಮಂತ್ರವೆಂದರೆ ದೇವತೆಗಳ ಮಹಿಮೆ

ಯನ್ನು ವರ್ಣಿಸುವ ಮಂತ್ರ. ಸ್ತುತಿ ಎಂದರೆ ಸ್ತೋತ್ರ, ಪ್ರಾರ್ಥನೆಗಳನ್ನೊಳಗೊಂಡಿರುವ ಮಂತ್ರ ಆಶೀಃ ಎಂದರೆ ಆಶೀರ್ವಾದ ಅಥವಾ ಒಳ್ಳೆಯದನ್ನು ಹಾರೈಸುವ ಮಂತ್ರ. ಶಪಥ ಎಂದರೆ ಪ್ರತಿಜ್ಞೆ. ಅಭಿಶಾಪ ಎಂದರೆ ಕೆಟ್ಟದ್ದನ್ನು ಹಾರೈಸುವಿಕೆ. ಕಶ್ಚಿದ್ಭಾವ ಎಂದರೆ ಒಂದು ವಿಷಯ ಅಥವಾ ತತ್ತ್ವದ ವಿವರಣೆ. ಪರಿದೇವನಾ ಎಂದರೆ ವ್ಯಸನ ನಿಂದಾ ಎಂದರೆ ನಿಂದೆಯು. ಪ್ರಶಂಸಾ ಎಂದರೆ ಹೊಗಳುವಿಕೆಯು, ದಾನಸ್ತುತಿ ಇತ್ಯಾದಿ.

ಮೇಲೆ ಹೇಳಿದ ಅನೇಕ ವಿಧಗಳಲ್ಲಿ ದೈವತವೆಂಬ ಋಕ್ಕುಗಳು ಪರೋಕ್ಷಕೃತ, ಪ್ರತ್ಯಕ್ಷಕೃತ, ಆಧ್ಯಾತ್ಮಿಕ ಎಂದು ಮೂರು ವಿಧವಾಗಿರುವವು. ಪರೋಕ್ಷಕೃತವೆಂದರೆ ಸ್ತುತಿಸಲ್ಪಡುವ ದೇವತೆಯು ಎದುರಿಗಿಲ್ಲದಿರುವುದರಿಂದ ಸ್ತುತಿಸುವಾಗ ಆ ದೇವತೆಯ ವಿಷಯದಲ್ಲಿ ಪ್ರಥಮಪುರುಷನಾಮ ಪದಗಳನ್ನೂ ಕ್ರಿಯಾ ಪದಗಳನ್ನೂ ( Third person both in subject and predicate,) ಉಪಯೋಗಿಸಿರುವ ಮಂತ್ರಗಳು. ಪ್ರತ್ಯಕ್ಷಕೃತವೆಂದರೆ ಸ್ತುತಿಸಲ್ಪಡುವ ದೇವತೆಯು ಪ್ರತ್ಯಕ್ಷವಾಗಿ ಎದುರಿಗೆ ಇದ್ದಂತೆ ಭಾವಿಸಿ ಅದನ್ನು ನೀನು, ನಿನ್ನ ಎಂದು ಮೊದಲಾದ ಮಧ್ಯಮಪುರುಷ ಶಬ್ದಗಳಿಂದ (Second person) ಸಂಬೋಧನೆಮಾಡಿ ಸ್ತುತಿಸುವ ಋಕ್ಕುಗಳು. ಆಧ್ಯಾತ್ಮಿಕ ವೆಂದರೆ–ಉತ್ತಮಪುರುಷ ( First person ) ಪ್ರಯೋಗವನ್ನು ಮಾಡಿ ಸ್ತುತಿಸಿರುವ ಮಂತ್ರಗಳು ಈ ಮೂರು ವಿಧ ಮಂತ್ರಗಳಲ್ಲಿ ಪರೋಕ್ಷಕೃತ, ಪ್ರತ್ಯಕ್ಷಕೃತ ಎಂಬ ಎರಡು ವಿಧ ಮಂತ್ರಗಳೇ ಹೆಚ್ಚಾಗಿರುವವು. ಆಧ್ಯಾತ್ಮಿಕ ಮಂತ್ರಗಳು ಕೇವಲ ಸ್ವಲ್ಪ ಮಾತ್ರವಿರುವವು. ಈ ಕ್ರಮದಂತೆ ಪ್ರಸಕ್ತ ಋಕ್ಕಿನಲ್ಲಿ ಋಕ್ಕಿನ ಪೂರ್ವಾರ್ಧವು ಪ್ರತ್ಯಕ್ಷಕೃತವಾಗಿಯೂ ಉತ್ತರಾರ್ಧವು ಪರೋಕ್ಷಕೃತವಾಗಿಯೂ ಇರುವುದು.

ವ್ಯಾಕರಣಪ್ರಕ್ರಿಯಾ

**ಧಿಯಮ್**—ಧ್ಯೈ ಚಿಂತಾಯಾಂ ಧಾತು. ಇದಕ್ಕೆ **ಧ್ಯಾಯತೇಃ ಸಂಪ್ರಸಾರಣಂ ಚ** (ಪಾ ಸೂ. ೩-೨-೧೭೮-೩) ಎಂಬುದರಿಂದ ಕ್ವಿಪ್ ಪ್ರತ್ಯಯ. ತತ್ಸನ್ನಿಯೋಗದಿಂದ ಸಂಪ್ರಸಾರಣ. **ಹಲಃ**—(ಪಾ ಸೂ. ೬-೪-೨) ಎಂಬುದರಿಂದ ದೀರ್ಘ. ಧೀ ಶಬ್ದವಾಗುತ್ತದೆ ಇದಕ್ಕೆ ಅಮ್ ಪರವಾದಾಗ **ಅಚಿಶ್ನುಧಾತುಭ್ರುವಾಂ** —ಎಂಬುದರಿಂದ ಇಯಜಾದೇಶ.

**ಭರೇ**—ಡುಭೃಞ್ ಭರಣೇ ಧಾತು. ಲಟ್ ಉತ್ತಮಪುರುಷ ಏಕವಚನದಲ್ಲಿ ಇಟ್‌ಪ್ರತ್ಯಯ. **ಟಿತ ಆತ್ಮನೇಪದಾನಾಂ**—ಎಂಬುದರಿಂದ ಏತ್ವ. ಶಪ್ ವಿಕರಣ. ತನ್ನಿಮಿತ್ತವಾಗಿ ಧಾತುವಿನ ಋಕಾರಕ್ಕೆ ಗುಣ. ರಪರವಾಗಿ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಹಃ**—ಮಹತ್ ಶಬ್ದ. ಷಷ್ಠಿಯಲ್ಲಿ ಮಹತಃ ಎಂದು ರೂಪವಾದಾಗ ಛಾಂದಸವಾಗಿ ತಲೋಪ ಬರುತ್ತದೆ.

**ಆನಜೇ**—ಅಂಜೂ ವ್ಯಕ್ತಿಮ್ರಕ್ಷಣಗತಿಷು. ಧಾತು. ಇದಕ್ಕೆ ಕರ್ಮಣಿಯಲ್ಲಿ ಲಿಟ್. ತನ್ನಿಮಿತ್ತ ವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ ಬಂದಾಗ **ಅತ ಆದೇಃ**—(ಪಾ. ಸೂ. ೭-೪-೭೦) ಎಂಬುದ ರಿಂದ ದೀರ್ಘ. ದೀರ್ಘದ ಪರದಲ್ಲಿ ದ್ವಿಹಲ್ ಧಾತು ಬಂದುದರಿಂದ **ತಸ್ಮಾನ್ನುಟ್ ದ್ವಿಹಲಃ**—(ಪಾ. ಸೂ. ೭-೪-೭೧) ಎಂಬುದರಿಂದ ಅದಕ್ಕೆ ನುಟ್. **ಲಿಟಸ್ತಝಯೋರೇಶಿರೇಚ್**—(ಪಾ. ಸೂ. ೩-೪-೮೧) ಎಂಬುದ ರಿಂದ ತಪ್ರತ್ಯಯಕ್ಕೆ ಏಶಾದೇಶ. ವ್ಯತ್ಯಯದಿಂದ ಧಾತುವಿನ ಉಪಧಾನಕಾರಲೋಪ ಆನಜೇ ಎಂದು ರೂಪ

ವಾಗುತ್ತದೆ. ಯತ್ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್**—(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ

**ಉತ್ಸವೇ**—ಪ್ರಸವೇ. ಷೂ ಪ್ರೇರಣೇ ಧಾತು. **ಋದೋರಪ್**—(ಪಾ. ಸೂ. ೩-೩-೫೭) ಎಂಬುದರಿಂದ ಭಾವಾರ್ಥದಲ್ಲಿ ಅಪ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ**—(ಪಾ. ಸೂ. ೭-೩-೮೪) ಎಂಬುದರಿಂದ ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಅವಾದೇಶ. **ನಿಮಿತ್ತಾತ್ಕರ್ಮಯೋಗೇ** (ಪಾ. ಸೂ. ೨-೩-೩೬-೩) ಕರ್ಮ (ಫಲ) ಸಂಬಂಧವಿರುವಾಗ ಹೇತುವಾಚಕವಾದುವರ ಮೇಲೆ ಸಪ್ತಮೀ ಎಂಬ ವಚನದಿಂದ ಇಲ್ಲಿ ಸಪ್ತಮೀ ಬಂದಿದೆ. **ಥಾಥಘಞ್**—(ಪಾ. ಸೂ. ೬-೨-೧೪೪) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಸಸಹಿಮ್**—ಷಹ ಅಭಿಭವೇ ಧಾತು. **ಆದೃಗಮ** (ಪಾ. ಸೂ. ೩-೨-೧೭೧) ಎಂಬಲ್ಲಿ **ಉತ್ಸರ್ಗಶ್ಛಂದಸಿ**—ಎಂಬ ವಚನವಿರುವುದರಿಂದ ಇದಕ್ಕೂ ಕಿಪ್ರತ್ಯಯ ಬರುತ್ತದೆ. **ಲಿಟ್ ಚ**—ಎಂದು ಲಿಡ್ವದ್ಭಾವ ಹೇಳಿರುವುದರಿಂದ ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್‌ಶೇಷ. **ಅನ್ಯೇಷಾಮಪಿದೃಶ್ಯತೆ** ಪಾ. ಸೂ. ೬-೩-೧೩೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾಏಕವಚನಾಂತರೂಪ.

**ದೇವಾಸಃ**—ದೇವ ಶಬ್ದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್**—(ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ಅಮದನ್**—ಮದೀ ಹರ್ಷೇ. ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತುಮತಿ ಚ** (ಪಾ.ಸೂ. ೩-೧-೨೬) ಎಂಬುದರಿಂದ ಣಿಚ್. **ಅತ ಉಪಧಾಯಾಃ**—(ಪಾ. ಸೂ. ೭-೨-೧೧೬) ಎಂಬುದರಿಂದ ಣಿಚ್‌ನಿಮಿತ್ತವಾಗಿ ಧಾತುವಿನ ಉಪಧೆಗೆ ವೃದ್ಧಿ. **ಮದೀ ಹರ್ಷಗ್ಲೇಪನಯೋಃ**—ಎಂದು ಘಟಾದಿಯಲ್ಲಿ ಪಾಠ ಮಾಡಿರುವುದರಿಂದ ಘಟಾದಯೋ ಮಿತಃ ಎಂದು ಅವುಗಳಿಗೆ ಮಿತ್‌ಸಂಜ್ಞಾ ಹೇಳಿರುವುದರಿಂದ **ಮಿತಾಂ ಹ್ರಸ್ವಃ**—(ಪಾ. ಸೂ. ೬-೪-೯೨) ಎಂಬುದರಿಂದ ಣಿಚಿನಲ್ಲಿ ಉಪಧಾಹ್ರಸ್ವ ಬರುತ್ತದೆ. ಲಙ್ ಪ್ರಥಮಪುರುಷ ಬಹುವಚನ ಝಿ ಪ್ರತ್ಯಯಕ್ಕೆ ಅಂತಾದೇಶ. **ಇತಶ್ಚ**—ಸೂತ್ರದಿಂದ ಇಕಾರಲೋಪವಾದಾಗ ಸಂಯೋಗಾಂತಲೋಪದಿಂದ ತಕಾರಲೋಪ. ಶಪ್ ವಿಕರಣ. ಇದಕ್ಕೆ **ಛಂದಸ್ಯುಭಯಥಾ**—(ಪಾ. ಸೂ. ೩-೪-೧೧೭) ಎಂಬುದರಿಂದ ಆರ್ಧಧಾತುಕಸಂಜ್ಞೆ ಇರುವುದರಿಂದ **ಣೇರನಿಟಿ**—(ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ‖ ೧ ‖



॥ ಸಂಹಿತಾಪಾಠಃ ॥

ಅಸ್ಯ ಶ್ರವೋ ನದ್ಯಃ ಸಪ್ತ ಬಿಭ್ರತಿ ದ್ಯಾವಾಕ್ಷಾಮಾ ಪೃಥಿವೀ
ದರ್ಶತಂ ವಪುಃ।
ಅಸ್ಮೇ ಸೂರ್ಯಾಚಂದ್ರಮಸಾಭಿಚಕ್ಷೇ ಶ್ರದ್ಧೇ ಕಮಿಂದ್ರ ಚರ-
ತೋ ವಿತರ್ತುರಂ ॥ ೨ ॥

॥ ಪದಪಾಠಃ ॥

ಅಸ್ಯ । ಶ್ರವಃ । ನದ್ಯಃ । ಸಪ್ತ । ಬಿಭ್ರತಿ । ದ್ಯಾವಾಕ್ಷಾಮಾ । ಪೃಥಿವೀ । ದರ್ಶ-
ತಂ । ವಪುಃ ।
ಅಸ್ಮೇ ಇತಿ । ಸೂರ್ಯಾಚಂದ್ರಮಸಾ । ಅಭಿಽಚಕ್ಷೇ । ಶ್ರದ್ಧೇ । ಕಂ । ಇಂದ್ರ ।
ಚರತಃ । ವಿಽತರ್ತುರಂ ॥ ೨ ॥

ಸಾಯಣಭಾಷ್ಯಂ

ಅಸ್ಯೇಂದ್ರಸ್ಯ ಶ್ರವೋ ಯಶಃ ಕೀರ್ತಿಂ ಸಪ್ತ ಇಮಂ ಮೇ ಗಂಗ ಇತ್ಯಸ್ಯಾಮೃಚಿ ಪ್ರಾಧಾನ್ಯೇನ ಪ್ರತಿಪಾದಿತಾ ಗಂಗಾದ್ಯಾಃ ಸಪ್ತಸಂಖ್ಯಾಕಾ ನದ್ಯೋ ಬಿಭ್ರತಿ । ಧಾರಯಂತಿ । ವೃತ್ರಹನನೇನೇಂದ್ರಸ್ಯ ಯದ್ವೃಷ್ಟೇಃ ಪ್ರದಾತೃತ್ವಂ ತತ್ಪ್ರಭೂತಜಲೋಪೇತಾ ನದ್ಯಃ ಪ್ರಕಟಯಂತೀತ್ಯರ್ಥಃ । ಅಪಿ ಚ ದ್ಯಾವಾಕ್ಷಾಮಾ ದ್ಯಾವಾಪೃಥಿವ್ಯೌ । ಪೃಥಿವೀತ್ಯಂತರಿಕ್ಷನಾಮ । ಅಂತರಿಕ್ಷಂ ಚಾಸ್ಯ ಸೂರ್ಯಾತ್ಮನಾ ವರ್ತಮಾನಸ್ಯೇಂದ್ರಸ್ಯ ದರ್ಶತಂ ಸರ್ವೈಃ ಪ್ರಾಣಿಭಿರ್ದರ್ಶನೀಯಂ ವಪುಃ । ರೂಪನಾಮೈತತ್ । ಪ್ರಕಾಶಾತ್ಮಕಂ ರೂಪಂ ಧಾರಯಂತಿ । ಕಿಂಚ ಹೇ ಇಂದ್ರ ಅಸ್ಮೇ ಅಸ್ಮಾಕಮಭಿಚಕ್ಷೇ ದ್ರಷ್ಟವ್ಯಾನಾಂ ಪದಾರ್ಥಾನಾಮಾಭಿಮುಖ್ಯೇನ ಪ್ರಕಾಶನಾರ್ಥಂ ಶ್ರದ್ಧೇ ಕಂ ಶ್ರದ್ಧಾರ್ಥಂ। ಚಕ್ಷುಷಾ ದೃಷ್ಟೇ ಹಿ ವಸ್ತುನೀದಂ ಸತ್ಯಮಿತಿ ಶ್ರದ್ಧೋತ್ಪದ್ಯತೇ । ಕಮಿತ್ಯೇತತ್ಪಾದಪೂರಣಂ । ತದುಭಯಾರ್ಥಂ ಸೂರ್ಯಾಚಂದ್ರಮಸಾ ವಿತರ್ತುರಂ ಪರಸ್ಪರವ್ಯತಿಹಾರೇಣ ತರಣಂ ಪುನಃಪುನರ್ಗಮನಂ ಯಥಾ ಭವತಿ ತಥಾ ಚರತಃ । ವರ್ತೇತೇ । ತ್ವಮೇವ ತದ್ರೂಪಃ ಸನ್ವರ್ತಸ ಇತ್ಯರ್ಥಃ ॥ ಅಸ್ಮೇ । ಊಡಿದಮಿತಿ ವಿಭಕ್ತೇ-

ರುದಾತ್ತತ್ವಂ । ದ್ಯಾವಾಕ್ಷಾಮಾ । ದ್ಯೌಶ್ಚ ಕ್ಷಾಮಾ ಚ । ದಿವೋ ದ್ಯಾವೇತಿ ದ್ಯಾವಾದೇಶಃ । ಸುಪಾಂ ಸುಲುಗಿತಿ ವಿಭಕ್ತೇರ್ಡಾದೇಶಃ । ದೇವತಾದ್ವಂದ್ವೇ ಚೇತ್ಯುಭಯಪದಪ್ರಕೃತಿಸ್ವರತ್ವಂ। ದರ್ಶತಂ । ಭೃಮೃದೃಶೀತ್ಯಾದಿನಾತಚ್ । ಸೂರ್ಯಾಚಂದ್ರಮಸಾ । ಸೂರ್ಯಶ್ಚ ಚಂದ್ರಮಾಶ್ಚ । ದೇವತಾದ್ವಂದ್ವೇ ಚೇತಿ ಪೂರ್ವಪದಸ್ಯಾನಙಾದೇಶಃ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಚಂದ್ರಮಸ್ಶಬ್ದೋ ದಾಸೀಭಾರಾದಿತ್ವಾತ್ಪೂರ್ವಪದಪ್ರಕೃತಿಸ್ವರೇಣ ಮಧ್ಯೋದಾತ್ತಃ। ಅತೋ ದೇವತಾದ್ವಂದ್ವೇ ಚೇತಿ ಪ್ರಾಪ್ತಸ್ಯೋಭಯಪದಪ್ರಕೃತಿಸ್ವರಸ್ಯ ನೋತ್ತರಪದೇಽನುದಾತ್ತಾದಾವಪೃಥಿವೀತಿ ಪ್ರತಿಷೇಧಃ । ಅಭಿಚಕ್ಷೇ । ಚಕ್ಷೇಃ ಪ್ರಕಾಶನಾರ್ಥಾತ್ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ತಾದರ್ಥ್ಯೇ ಚತುರ್ಥೀ । ಶ್ರದ್ಧೇ । ನೃಶಿಗ್ರಹಣಾದ್ದಧಾತೇರ್ಭಾವೇ ವಿಚ್ । ಚತುರ್ಥ್ಯೇಕವಚನ ಆತೋ ಧಾತೋರಿತ್ಯಾಕಾರಲೋಪಃ । ಉದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವಂ । ವಿತರ್ತುರಂ । ತರತೇರ್ಯಙ್ಲುಗಂತಾದೌಣಾದಿಕಃ ಕುರಚ್ । ಬಹುಲಂ ಛಂದಸೀತ್ಯುತ್ವಂ ॥

॥ ಪ್ರತಿಪದಾರ್ಥ ॥

ಅಸ್ಯ—ಈ ಇಂದ್ರನ । ಶ್ರವಃ ಕೀರ್ತಿಯನ್ನು । ಸಪ್ತ ನದ್ಯಃ—ಗಂಗಾದಿಸಪ್ತನದಿಗಳೂ ಸಹ । ಬಿಭ್ರತಿ— ಪ್ರಕಟಿಸುತ್ತವೆ. (ಮತ್ತು) । ದ್ಯಾವಾಕ್ಷಾಮಾ— ದ್ಯಾವಾಪೃಥಿವಿಗಳೂ । ಪೃಥಿವೀ-ಅಂತರಿಕ್ಷವೂ । ದರ್ಶತಂ—(ಸೂರ್ಯರೂಪದಿಂದ ಸಕಲರಿಗೂ) ಮನೋಹರವಾಗಿ ಗೋಚರಿಸತಕ್ಕದ್ದೂ । ವಪುಃ— ಪ್ರಕಾಶಮಾನವಾದದ್ದೂ ಆದ ಸ್ವರೂಪವನ್ನು (ಪ್ರಕಾಶಪಡಿಸುತ್ತವೆ.) । ಇಂದ್ರ— ಎಲೈ ಇಂದ್ರನೇ, । ಅಸ್ಮೇ—ನಮಗೆ । ಅಭಿಚಕ್ಷೇ—(ಸಕಲವೂ) ಗೋಚರವಾಗುವುದಕ್ಕಾಗಿಯೂ । ಶ್ರದ್ಧೇ ತಂ—(ಪ್ರತ್ಯಕ್ಷವಾದನಂತರ) ಅವುಗಳಲ್ಲಿ ಶ್ರದ್ಧೆಯನ್ನು ಹುಟ್ಟಿಸುವುದಕ್ಕಾಗಿಯೂ । ವಿತರ್ತುರಂ—(ತಮ್ಮ ಗಮನಾಗಮನರೂಪವಾದ) ಶಾಶ್ವತವಾದ ಸಂಚಾರವನ್ನು । ಚರತಃ—(ಸೂರ್ಯಚಂದ್ರಾದಿಗಳಿಬ್ಬರೂ) ನಿರ್ವಹಿಸುತ್ತಾರೆ. ।

ಭಾವಾರ್ಥ

ಇಂದ್ರನ ಕೀರ್ತಿಯನ್ನು ಗಂಗಾದಿಸಪ್ತನದಿಗಳೂ, ಹೊತ್ತುಕೊಂಡು ಲೋಕಕ್ಕೆಲ್ಲಾ ಪ್ರಕಟಿಸುತ್ತವೆ. ದ್ಯಾವಾಪೃಥಿವಿಗಳೂ, ಅಂತರಿಕ್ಷವೂ ಸೂರ್ಯರೂಪದಿಂದ ಸಕಲರ ಗೋಚರಕ್ಕೂ ಮನೋಹರವಾಗಿರತಕ್ಕದ್ದೂ ಮತ್ತು ಪ್ರಕಾಶಮಾನವಾದುದೂ ಆದ ಇಂದ್ರನ ಸ್ವರೂಪವನ್ನು ಪ್ರಕಾಶಪಡಿಸುತ್ತವೆ. ಎಲೈ ಇಂದ್ರನೇ, ನಮಗೆ ಸಕಲ ಪದಾರ್ಥಗಳೂ ಗೋಚರವಾಗುವುದಕ್ಕಾಗಿಯೂ, ಅವೆಲ್ಲವೂ ಪ್ರತ್ಯಕ್ಷವಾದನಂತರ ಅವುಗಳಲ್ಲಿ ಶ್ರದ್ಧೆಯನ್ನು ಹುಟ್ಟಿಸುವುದಕ್ಕಾಗಿಯೂ ಸೂರ್ಯಚಂದ್ರಾದಿಗಳಿಬ್ಬರೂ ಸಹ ತಮ್ಮ ಶಾಶ್ವತವಾದ ಗಮನಾಗಮನರೂಪವಾದ ಸಂಚಾರಕಾರ್ಯಗಳನ್ನು ನಿರ್ವಹಿಸುತ್ತಾರೆ.

## English Translation

The seven rivers display his glory; heaven and earth, and sky display his visible form: the sun and moon, Indra, perform their revolutions, that we may see, and have faith in what we see.

॥ ವಿಶೇಷವಿಷಯಗಳು ॥

**ಶ್ರವಃ**—ಶ್ರವಃ ಎಂದರೆ ಕೀರ್ತಿಯು. ಶ್ರವಶ್ಚಾಪಿ ಪ್ರಶಂಸಾಂ ಚ ಎಂದು ನಿರುಕ್ತವಚನವಿರುವುದು. (ನಿ. ೪-೨೪).

**ಅಸ್ಯ ಶ್ರವೋ ನದ್ಯಃ ಸಪ್ತ ಬಿಭ್ರತಿ**—ಇಲ್ಲಿ ಸಪ್ತನದಿಗಳೆಂದರೆ **ಇಮಂ ಮೇ ಗಂಗೇ** ಎಂಬ ಋಕ್ಕಿನಲ್ಲಿ ಹೇಳಿರುವ (ಋ.ಸಂ.೧೦-೭೫-೫) ಗಂಗಾ, ಯಮುನಾ, ಸರಸ್ವತೀ, ಶುತುದ್ರಿ, ಪರುಷ್ಣೀ, ಅಸಿಕ್ನೀ, ಮರುದ್ವೃಧಾ ಎಂಬ ಏಳು ನದಿಗಳು. ಈ ಏಳು ನದಿಗಳೂ ಇಂದ್ರನ ಕೀರ್ತಿಯನ್ನು ಎತ್ತಿ ಹಿಡಿಯುವವು. ಎಂದರೆ ಇಂದ್ರನು ಮೇಘಗಳನ್ನಾವರಿಸಿ ವೃಷ್ಟ್ಯುದಕವು ಭೂಮಿಯಮೇಲೆ ಬೀಳದಂತೆ ತಡೆದಿದ್ದಾಗ ಆ ವೃತ್ರನನ್ನು ಸಂಹಾರಮಾಡಿ ವೃಷ್ಟ್ಯುದಕವು ಭೂಮಿಯಮೇಲೆ ಬೀಳುವಂತೆ ಮಾಡಿದನು. ಆ ಉದಕದಿಂದ ಗಂಗಾದಿ ಸಪ್ತನದಿಗಳು ಬಹುವಾದ ಉದಕಗಳಿಂದ ತುಂಬಿ ಹರಿಯುತ್ತಾ ಇಂದ್ರನ ವೃತ್ರವಧಾದಿಸಾಹಸಕರ್ಮಗಳನ್ನು ಪ್ರಕಾಶಪಡಿಸುತ್ತಾ ಅವನ ಕೀರ್ತಿಯನ್ನು ಬೆಳಗುವವು ಎಂದು ಮುಖ್ಯಾಭಿಪ್ರಾಯವು. ಈ ನದಿಗಳಿಗೆ ಇಂದ್ರನು ಮಾಡಿದ ವೃತ್ರವಧವೇ ಕಾರಣವೆಂಬ ವಿಷಯವನ್ನು—

**ಅಪಾಮತಿಷ್ಠದ್ಧರುಣಹ್ವರಂ ತಮೋಽಂತರ್ವೃತ್ರಸ್ಯ ಜಠರೇಷು ಪರ್ವತಃ ।**
**ಅಭೀಮಿಂದ್ರೋ ನದ್ಯೋ ವವ್ರಿಣಾ ಹಿತಾ ವಿಶ್ವಾ ಅನುಷ್ಠಾಃ ಪ್ರವಣೇಷು ಜಿಘ್ನತೇ ॥**
(ಋ. ಸಂ. ೧-೫೪-೧೦)

**ತದು ಪ್ರಯಕ್ಷತಮಮಸ್ಯ ಕರ್ಮ ದಸ್ಮಸ್ಯ ಚಾರುತಮಮಸ್ತಿ ದಂಸಃ ।**
**ಉಪಹ್ವರೇ ಯದುಪರಾ ಅಪಿನ್ವನ್ಮಧ್ವರ್ಣಸೋ ನದ್ಯ೧ ಶ್ಚತಸ್ರಃ ॥**
(ಋ. ಸಂ ೧-೬೨-೬)

ಇತ್ಯಾದಿ ಋಕ್ಕುಗಳು ಸಮರ್ಥಿಸುವವು.

**ದ್ಯಾವಾಕ್ಷಾಮಾ**—ಗೌಃ ಗ್ಮಾ ಮೊದಲಾದ ಇಪ್ಪತ್ತೊಂದು ಪೃಥಿವೀ ನಾಮಗಳಲ್ಲಿ ಕ್ಷಾಮಾ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೨-೫) ದ್ಯಾವಾಕ್ಷಾಮಾ ಎಂದರೆ ದ್ಯಾವಾಪೃಥಿವಿಗಳು, ಸ್ವರ್ಗಭೂಮಿಗಳು ಎಂದರ್ಥವು.

**ಪೃಥಿವೀ**—ಅಂಬರಂ ವಿಯತ್ ಮೊದಲಾದ ಹದಿನಾರು ಅಂತರಿಕ್ಷ ನಾಮಗಳ ಮಧ್ಯದಲ್ಲಿ ಪೃಥಿವೀಶಬ್ದವು ಪಠಿತವಾಗಿರುವುದರಿಂದ ಪೃಥಿವೀ ಎಂದರೆ ಅಂತರಿಕ್ಷವೆಂದರ್ಥವು. ಆದುದರಿಂದ ಇಲ್ಲಿ ಹೇಳಿರುವ **ದ್ಯಾವಾಕ್ಷಾಮಾ ಪೃಥಿವೀ** ಎಂಬ ಶಬ್ದಗಳಿಗೆ ಭೂಮ್ಯಂತರಿಕ್ಷ ಸ್ವರ್ಗಗಳು ಎಂದರ್ಥವು.

**ದರ್ಶತಂ ವಪುಃ—ದರ್ಶನೀಯಂ ರೂಪಂ ।** ಸುಂದರಾಕಾರವು. ಭೂಮ್ಯಂತರಿಕ್ಷಸ್ವರ್ಗಗಳು ಸೂರ್ಯ ರೂಪದಿಂದ ಜಗತ್ತನ್ನು ಬೆಳಗುತ್ತಿರುವ ಇಂದ್ರನ ಸುಂದರವಾದ ಆಕಾರವನ್ನು ಪ್ರಕಟಿಸುತ್ತಾ ಅವನ ಮಹಿಮೆಯನ್ನು ಬೆಳಗುವವು ಎಂದು ಮುಖ್ಯಾಭಿಪ್ರಾಯವು.

**ಅಭಿಚಕ್ಷೇ, ಶ್ರದ್ಧೇ**—ಕಣ್ಣುಗಳಿಂದ ನೋಡುವುದರಿಂದ ಇಂತಹ ವಸ್ತುಗಳಿರುವುದು ಸತ್ಯವು ಎಂಬ ನಂಬಿಕೆ ಹುಟ್ಟುವುದು. ಆದುದರಿಂದ ಪ್ರತಿದಿನವೂ ಮತ್ತೆ ಮತ್ತೆ ಉದಯಾಸ್ತಗಳಿಂದ ನಮಗೆ ಗೋಚರಿಸುತ್ತಿರುವ ಸೂರ್ಯಚಂದ್ರರು ಇಂದ್ರನ ಮಹಿಮೆಯನ್ನು ಪ್ರತ್ಯಕ್ಷವಾಗಿ ನಮಗೆ ನಂಬಿಕೆ ಹುಟ್ಟುವಂತೆ ನಮ್ಮ ಕಣ್ಣುಗಳಿಗೆ ಯಾವಾಗಲೂ ಕಾಣಿಸುತ್ತಾ ಇರುವರು. ಮನುಷ್ಯರಾದ ನಮಗೆ ನಮ್ಮ ಕಣ್ಣಿಗೆ ಕಾಣಿಸುವ ವಸ್ತುಗಳಲ್ಲಿ ಎಂದರೆ ಪರ್ವತ ನದೀ ವೃಕ್ಷಾದಿಗಳಲ್ಲಿ ಅವುಗಳು ಸತ್ಯವಾಗಿಯೂ ಇರುವುವು ಎಂಬ ನಂಬಿಕೆಯು ಹುಟ್ಟುವುದು ಸಹಜವು. ಕಣ್ಣಿಗೆ ಕಾಣಿಸದಿರುವ ಸ್ವರ್ಗಾದಿಲೋಕಗಳಲ್ಲಿ ಅಷ್ಟಾಗಿ ನಂಬಿಕೆ ಇರುವುದಿಲ್ಲ. ಆದುದರಿಂದ ಸೂರ್ಯಚಂದ್ರರು ನಮ್ಮ ಕಣ್ಣಿಗೆ ಪ್ರತಿದಿನವೂ ಗೋಚರಿಸುತ್ತಿರುವರು. ಅವರನ್ನು ಇಂದ್ರನೇ ಅಂತರಿಕ್ಷದಲ್ಲಿ ಸ್ಥಾಪಿಸಿರುವುದರಿಂದ ಸೂರ್ಯಚಂದ್ರರನ್ನು ನೋಡಿದಾಗಲೆಲ್ಲಾ ಇಂದ್ರನ ಮಹಿಮೆಯು ನಮ್ಮ ಸ್ಮೃತಿಪಥಕ್ಕೆ ಗೋಚರವಾಗುವುದು. ಇಂದ್ರನ ಮಹಿಮೆಯನ್ನು ನಾವು ಪ್ರತ್ಯಕ್ಷವಾಗಿ ನೋಡಲಾಗದಿದ್ದರೂ ನಮಗೆ ಗೋಚರವಾಗುವ ಸೂರ್ಯಚಂದ್ರರನ್ನು ನೋಡುವುದರಿಂದ ಅದನ್ನು ನಾವು ಸುಲಭವಾಗಿ ಊಹಿಸಿ ತಿಳಿದುಕೊಳ್ಳಬಹುದೆಂದು ಮುಖ್ಯಾಭಿಪ್ರಾಯವು.

ಕಂ—ಯಾಸ್ಕರು ಈ ಶಬ್ದದ ವಿಷಯದಲ್ಲಿ—

> **ಅಥ ಯೇ ಪ್ರವೃತ್ತೇಽರ್ಥೇಽಮಿತಾಕ್ಷರೇಷು ಗ್ರಂಥೇಷು ವಾಕ್ಯಪೂರಣಾ ಆಗಚ್ಛಂತಿ ಪದಪೂರಣಾಸ್ತೇ ಮಿತಾಕ್ಷರೇಷ್ವನರ್ಥಕಾಃ ಕಮೀಮಿದ್ವಿತಿ ॥**
>
> ( ನಿ. ೧-೯ )

ಎಂದರೆ ಕಂ ಈಂ ಇತ್ ಉ ಎಂಬ ಅಕ್ಷರಗಳಿಗೆ ನಿರ್ದಿಷ್ಟಾರ್ಥವಿಲ್ಲ. ಇವುಗಳು ಛಂದೋಬದ್ಧವಾದ ಮಂತ್ರಗಳ ಪಾದಗಳಲ್ಲಿ ಕಡಿಮೆಯಾಗಿರುವ ಒಂದೆರಡು ಅಕ್ಷರಗಳನ್ನು ಸೇರಿಸಿ ಸರಿಪಡಿಸುವುದಕ್ಕಾಗಿ ಉಪಯೋಗಿಸಲ್ಪಡುವವು ಎಂದು ಹೇಳಿರುವರು.

### ವ್ಯಾಕರಣಪ್ರಕ್ರಿಯಾ

**ಶ್ರವಃ**—ಶ್ರು ಶ್ರವಣೇ ಧಾತು. ಅಸುನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ ಅವಾದೇಶ. ಶ್ರವಸ್ ಶಬ್ದವಾಗುತ್ತದೆ. **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಅಸ್ಯ—ಇದಮ್ ಶಬ್ದ. ಷಷ್ಠೀ ಏಕವಚನ ಙಸ್ ಪರವಾದಾಗ **ತ್ಯದಾದೀನಾಮಃ**—ಎಂಬುದರಿಂದ ಅತ್ವ. ಪ್ರತ್ಯಯಕ್ಕೆ ಅದಂತನಿಬಂಧನವಾಗಿ ಸ್ಯ ಆದೇಶ. **ಹಲಿ ಲೋಪಃ**—(ಪಾ. ಸೂ. ೭-೨-೧೧೩) ಎಂಬುದರಿಂದ ಇದಿಗೆ ಲೋಪ. **ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಬಿಭ್ರತಿ—ಭೃಞ್ ಭರಣೇ ಧಾತು. ಲಟ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. **ಅದಭ್ಯಸ್ತಾತ್**—(ಪಾ. ಸೂ. ೭-೧-೪) ಎಂಬುದರಿಂದ ಅದಾದೇಶ. ಶ್ಲುವಿಕರಣ. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ. **ಭೃಞಾಮಿತ್**—(ಪಾ. ಸೂ. ೭-೪-೭೬) ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಯಣಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದ್ಯಾವಾಕ್ಷಾಮಾ**— ದ್ಯೌಶ್ಚ ಕ್ಷಾಮಾ ಚ ದ್ಯಾವಾಕ್ಷಾಮಾ **ದಿವೋ ದ್ಯಾವಾ** (ಪಾ. ಸೂ. ೬-೩-೨೯) ಎಂಬುದರಿಂದ ದಿವಾ ಶಬ್ದಕ್ಕೆ ಸಮಾಸದಲ್ಲಿ ದ್ಯಾವಾದೇಶ. **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಡಾದೇಶ.

**ದರ್ಶತಮ್**—ದೃಶಿರ್ ಪ್ರೇಕ್ಷಣೇ ಧಾತು. **ಭೃಮೃದಿಶಿ**—(ಉ. ಸೂ. ೩-೩-೯೦) ಎಂಬುದರಿಂದ ಇದಕ್ಕೆ ಅತಚ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಚಿತಃ—(ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಸೂರ್ಯಾಚಂದ್ರಮಸಾ**—ಸೂರ್ಯಶ್ಚ ಚಂದ್ರಮಾಶ್ಚ ಸೂರ್ಯಾಚಂದ್ರಮಸೌ **ದೇವತಾದ್ವಂದ್ವೇ ಚ** (ಪಾ. ಸೂ. ೬-೩-೨೬) ಎಂಬುದರಿಂದ ಪೂರ್ವಪದಕ್ಕೆ ಅನಜಾದೇಶ. **ಸುಪಾಂ ಸುಲುಕ್**—ಎಂಬುದರಿಂದ ವಿಭಕ್ತಿಗೆ ಆಕಾರಾದೇಶ. ಚಂದ್ರಮಸ್ ಶಬ್ದವು ದಾಸೀಭಾರಾದಿಯಲ್ಲಿ ಸೇರಿರುವುದರಿಂದ ಪೂರ್ವಪದಪ್ರಕೃತಿಸ್ವರದಿಂದ ಮಧ್ಯೋದಾತ್ತವಾಗುತ್ತದೆ. ಆಗ **ದೇವತಾದ್ವಂದ್ವೇ ಚ** (ಪಾ. ಸೂ. ೬-೨-೧೪೧) ಎಂಬುದರಿಂದ ಪ್ರಾಪ್ತವಾದ ಉಭಯಪದಪ್ರಕೃತಿಸ್ವರಕ್ಕೆ **ನೋತ್ತರಪದೇಽನುದಾತ್ತಾದಾವಪೃಥಿವೀ**—(ಪಾ. ಸೂ. ೬-೨-೧೪೨) ಎಂಬುದರಿಂದ ಪ್ರತಿಷೇಧ ಬರುತ್ತದೆ.

**ಅಭಿಚಕ್ಷೇ**—**ಚಕ್ಷಿಙ್** ವ್ಯಕ್ತಾಯಾಂ ವಾಚಿ. ಧಾತು. **ಸಂಪದಾದಿಭ್ಯಃ ಕ್ವಿಪ್**—(೨೨೩೩) ಎಂಬುದರಿಂದ ಭಾವಾರ್ಥದಲ್ಲಿ ಕ್ವಿಪ್ ಪ್ರತ್ಯಯ. ಅಭಿಚಕ್ಷ್ ಎಂದು ರೂಪವಾಗುತ್ತದೆ. **ತಾದರ್ಥ್ಯೇ ಚತುರ್ಥೀವಾಚ್ಯಾ** ಎಂಬ ವಚನದಿಂದ ಚತುರ್ಥೀವಿಭಕ್ತಿ ಬರುತ್ತದೆ. **ಗತಿಕಾರಕೋಪಪದಾತ್ ಕೃತ್**—ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಶ್ರದ್ಧೇ**—ಡುಧಾಞ್ ಧಾರಣಪೋಷಣಯೋಃ ಧಾತು. **ಅನ್ಯೇಭ್ಯೋಽಪಿ ದೃಶ್ಯತೇ**—ಎಂಬಲ್ಲಿ ದೃಶಿಗ್ರಹಣ ಸಾಮರ್ಥ್ಯದಿಂದ ಇದಕ್ಕೆ ಭಾವಾರ್ಥದಲ್ಲಿ ವಿಚ್ ಪ್ರತ್ಯಯ. ವಿಚಿನಲ್ಲಿ ಸರ್ವಲೋಪವಾಗುತ್ತದೆ. ಇದಕ್ಕೆ ಚತುರ್ಥೀ ಏಕವಚನ ಪರವಾದಾಗ **ಆತೋ ಧಾತೋಃ**—(ಪಾ. ಸೂ. ೬-೪-೧೪೦) ಎಂಬುದರಿಂದ ಆಕಾರಲೋಪ. ಅನುದಾತ್ತ ಪರವಾದಾಗ ಉದಾತ್ತಾಕಾರಕ್ಕೆ ಲೋಪ ಬಂದುದರಿಂದ **ಅನುದಾತ್ತಸ್ಯ ಚ ಯತ್ರೋ**—(ಪಾ. ಸೂ. ೬-೧-೧೬೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವಿತರ್ತುರಮ್**—ತೄ ಪ್ಲವನತರಣಯೋಃ ಧಾತು. ಇದಕ್ಕೆ ಪೌನಃಪುನ್ಯಾರ್ಥದಲ್ಲಿ ಯಙ್ ಬಂದಾಗ **ಯಙೋಽಚಿ ಚ**—(ಪಾ. ಸೂ. ೨-೪-೭೪) ಎಂಬುದರಿಂದ ಆರ್ಧಧಾತುಕವಾಗಿ ಲೋಪ. ಯಙ್ ಲುಗಂತದ ಮೇಲೆ ಔಣಾದಿಕವಾದ ಕುರಚ್ ಪ್ರತ್ಯಯ. **ಬಹುಲಂ ಛಂದಸಿ**—ಎಂಬುದರಿಂದ ಉತ್ವ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥೨॥

—:O:—

ಸಂಹಿತಾಪಾಠಃ

ತಂ ಸ್ಮಾ ರಥಂ ಮಘವನ್ಪ್ರಾವ ಸಾತಯೇ ಜೈತ್ರಂ ಯಂ ತೇ
ಅನುಮದಾಮ ಸಂಗಮೇ ।
ಆಜಾ ನ ಇಂದ್ರ ಮನಸಾ ಪುರುಷ್ಟುತ ತ್ವಾಯದ್ಭ್ಯೋ ಮಘವ-
ಞ್ಛರ್ಮ ಯಚ್ಛ ನಃ ॥ ೩ ॥

ಪದಪಾಠಃ

ತಂ । ಸ್ಮ । ರಥಂ । ಮಘಽವನ್ । ಪ್ರ । ಅವ । ಸಾತಯೇ । ಜೈತ್ರಂ । ಯಂ ।
ತೇ । ಅನುಽಮದಾಮ । ಸಂಽಗಮೇ ।
ಆಜಾ । ನಃ । ಇಂದ್ರ । ಮನಸಾ । ಪುರುಽಸ್ತುತ । ತ್ವಾಯತ್ಽಭ್ಯಃ । ಮಘಽ-
ವನ್ । ಶರ್ಮ । ಯಚ್ಛ । ನಃ ॥ ೩ ॥

ಸಾಯಣಭಾಷ್ಯಂ

ಹೇ ಮಘವನ್ ಧನವನ್ನಿಂದ್ರ ಸಾತಯೇಽಸ್ಮಾಕಂ ಧನಲಾಭಾಯ ತಂ ಸ್ಮ ತಮೇವ ರಥಂ ಪ್ರಾವ । ಪ್ರೇರಯ । ವರ್ತಯ । ನೋಽಸ್ಮಾಕಂ ಮನಸಾ ಬುದ್ಧ್ಯಾ ಪುರುಷ್ಟುತ ಬಹುಶಃ ಸ್ತುತೇಂದ್ರ ತೇ ತವ ಸ್ವಭೂತಂ ಜೈತ್ರಂ ಜಯಶೀಲಂ ಯಂ ರಥಂ ಸಂಗಮೇ ಶತ್ರುಭಿಃ ಸಹ ಸಂಗಮನ ಆಜಾ ಯುದ್ಧೇ ಸತ್ಯನುಮದಾಮ । ವಯಮನುಕ್ರಮೇಣ ಸ್ತುಮಃ । ಅಪಿ ಚ ಹೇ ಮಘವನ್ ತ್ವಾಯದ್ಭ್ಯಸ್ತ್ವಾಂ ಕಾಮಯಮಾನೇಭ್ಯೋ ನೋಽಸ್ಮಭ್ಯಂ ಶರ್ಮ ಸುಖಂ ಯಚ್ಛ । ದೇಹಿ ॥ ಅವ । ಅವ ರಕ್ಷಣಗತಿಕಾಂತೀ-ತ್ಯುಕ್ತತ್ವಾದವತಿರತ್ರ ಗತ್ಯರ್ಥಃ । ಸಂಗಮೇ । ಗ್ರಹವೃದೃನಿಶ್ಚಿಗಮಶ್ಚೇತಿ ಕರ್ಮಣ್ಯಪ್ । ಥಾಥಾದಿನೋ-ತ್ತರಪದಾಂತೋದಾತ್ತತ್ವಂ । ಆಜಾ । ಸುಪಾಂ ಸುಲುಗಿತಿ ಸಪ್ತಮ್ಯಾ ಡಾದೇಶಃ । ತ್ವಾಯದ್ಭ್ಯಃ । ಸುಪ ಆತ್ಮನಃ ಕ್ಯಚ್ । ಪ್ರತ್ಯಯೋತ್ತರಪದಯೋಶ್ಚೇತಿ ಮಪರ್ಯಂತಸ್ಯ ತ್ವಾದೇಶಃ । ವ್ಯತ್ಯಯೇನ ದಕಾರ-ಸ್ಯಾತ್ವಂ । ಕ್ಯಜಂತಾಲ್ಲಟಃ ಶತೃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಸತಿ ಕ್ಯಚಾ ಸಹೈಕಾದೇಶ ಏಕಾದೇಶ ಉದಾತ್ತೇನೋದಾತ್ತ ಇತಿ ತಸ್ಯೋದಾತ್ತತ್ವಂ ॥

### ಪ್ರತಿಪದಾರ್ಥ

**ಮಘವನ್ ಇಂದ್ರ**—ಧನಯುಕ್ತನಾದ ಎಲೈ ಇಂದ್ರನೇ। **ಸಾತಯೇ**—(ನಮಗೆ) ಧನಲಾಭಕ್ಕಾಗಿ **ತಂ ಸ್ಮ ರಥಂ**—ನಿನ್ನ ಆ ರಥವನ್ನೇ। **ಪ್ರಾವ**—(ಕ್ಷಿಪ್ರವಾಗಿ) ಕಳುಹಿಸಿಕೊಡು। **ನಃ**—ನಮ್ಮ। **ಮನಸಾ**—ಮನಃಪೂರ್ವಕವಾಗಿ। **ಪುರುಷ್ಟುತ**—(ನಮ್ಮಿಂದ) ಅನೇಕವೇಳೆ ಸ್ತೋತ್ರಮಾಡಲ್ಪಡುವ ಇಂದ್ರನೇ। **ತೇ**—ನಿನ್ನದಾದುದೂ। **ಜೈತ್ರಂ**—ಜಯವನ್ನು ಪಡೆಯತಕ್ಕದ್ದೂ ಆದ। **ಯಂ**—ಯಾವ (ಅದೇ) ರಥವನ್ನು। **ಸಂಗಮೇ**—ಶತ್ರುಗಳನ್ನು ಎದುರಿಸುವ। **ಆಜಾ**— ಯುದ್ಧವು ಪ್ರಾಪ್ತವಾದಾಗ। **ಅನುಮದಾಮ**—(ಯುದ್ಧ ರಂಗದಲ್ಲಿ ನೋಡಿ) ಹರ್ಷಪಡುತ್ತೇವೆ। **ಮಘವನ್**— ಧನಯುಕ್ತನಾದ ಇಂದ್ರನೇ। **ತ್ವಾಯದ್ಭ್ಯಃ**— ನಿನ್ನ (ಸಹಾಯವ)ನ್ನು ಅಪೇಕ್ಷಿಸುವ। **ನಃ**—ನಮಗೆ। **ಶರ್ಮ**—ಸುಖವನ್ನು। **ಯಚ್ಛ**—ಕೊಡು॥

### ಭಾವಾರ್ಥ

ಧನಯುಕ್ತನಾದ ಎಲೈ ಇಂದ್ರನೇ, ನಮಗೆ ಧನವನ್ನು ಹೊಂದಿಸುವುದಕ್ಕಾಗಿ ನಿನ್ನ ರಥವನ್ನು ಕ್ಷಿಪ್ರವಾಗಿ ಕಳುಹಿಸಿಕೊಡು. ನಿನ್ನನ್ನು ನಾವು ಅನೇಕವೇಳೆ ಮನಃಪೂರ್ವಕವಾಗಿ ಸ್ತೋತ್ರಮಾಡುತ್ತೇವೆ. ಮತ್ತು ಶತ್ರುಗಳನ್ನು ಎದುರಿಸುವ ಯುದ್ಧವು ಪ್ರಾಪ್ತವಾದಾಗ ನಿನ್ನ ಜಯಶಾಲಿಯಾದ ರಥವನ್ನು ಯುದ್ಧರಂಗದಲ್ಲಿ ನೋಡಿದೊಡನೆಯೇ ನಮಗೆ ಜಯವು ಸಿದ್ಧವೆಂದು ಹರ್ಷಿಸುತ್ತೇವೆ. ಧನಯುಕ್ತನಾದ ಇಂದ್ರನೇ, ನಿನ್ನ ಸಹಾಯವನ್ನು ಅಪೇಕ್ಷಿಸುವ ನಮಗೆ ಸುಖವನ್ನು ಕೊಡು.

### English Translation

Maghavan, despatch your chariot to bring us wealth ; that victorious car, which, Indra, who are much praised by us in time of war, we rejoice to behold in battle : O, Maghavan, grant happiness to those who are devoted to you.

### ವಿಶೇಷವಿಷಯಗಳು

**ಸ್ಮ**—ಛಂದಸ್ಸಿನ ಅನುಕೂಲಕ್ಕಾಗಿ ಈ ಶಬ್ದದ ಅಂತ್ಯಾಕ್ಷರವು ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು. ಈ ಶಬ್ದಕ್ಕೆ ಏವ ಎಂದರ್ಥವು. ತಂ ಸ್ಮ—ತಮೇವ, ಅದನ್ನೇ ಎಂದರ್ಥವು.

**ಪ್ರ ಅವ—ಅವ ರಕ್ಷಣಗತಿಕಾಂತೀತ್ಯುಕ್ತತ್ವಾದವತಿರತ್ರ ಗತ್ಯರ್ಥಃ।** ಅವ ಧಾತುವಿಗೆ ರಕ್ಷಣಾದಿ ಅನೇಕಾರ್ಥಗಳಿರುವುದರಿಂದ ಇಲ್ಲಿ ಗತ್ಯರ್ಥವನ್ನು ಹೇಳಬೇಕೆಂದು ಭಾಷ್ಯಕಾರರು ಹೇಳಿರುವರು. ಆದುದರಿಂದ ಪ್ರಾವ ಎಂದರೆ ಪ್ರೇರಿಸು, ಕಳುಹಿಸು ಎಂದರ್ಥವು.

ಸಂಗಮೇ ಆಜಾ— ಶತ್ರುಭಿಃ ಸಹ ಸಂಗಮನ ಆಜಾ ಯುದ್ಧೇ। ಶತ್ರುಗಳೊಡನೆ ಸಂಧಿಸಿದಾಗಿನ ಯುದ್ಧದಲ್ಲಿ.

**ಮನಸಾ ಪುರುಷ್ಟುತೇ**—ನಮ್ಮ ಬುದ್ಧಿಯಿಂದ ಎಂದರೆ ಮನಃಪೂರ್ವಕವಾಗಿ ಶ್ರದ್ಧೆಯಿಂದ ಬಹಳವಾಗಿ ಸ್ತುತಿಸಲ್ಪಡುವವನು.

**ತ್ವಾಯದ್ಭ್ಯಃ—ತ್ವಾಂ ಕಾಮಯಮಾನೇಭ್ಯೋ ನೋಽಸ್ಮಾಕಂ ।** ನಿನ್ನನ್ನು (ಇಂದ್ರನನ್ನು) ಅಪೇಕ್ಷಿಸುವ ನಮಗೆ. ಈ ಶಬ್ದವು ಋಗ್ವೇದದಲ್ಲಿ ಈ ಋಕ್ಕಿನಲ್ಲಿ ಮಾತ್ರವಿರುವುದು. ಮತ್ತೆಲ್ಲಿಯೂ ಇರುವುದಿಲ್ಲ.

ವ್ಯಾಕರಣಪ್ರಕ್ರಿಯಾ

**ಅವ**—ಅವ ರಕ್ಷಣಾದಿಷು. ಧಾತು. ಇಲ್ಲಿ ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಲೋಟ್‌ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. ಶಪ್‌ವಿಕರಣ. **ಅತೋ ಹೇಃ**—(ಪಾ. ಸೂ. ೬-೪-೧೦೫) ಎಂಬುದರಿಂದ ಹಿಗೆ ಲುಕ್. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಾತಯೇ—ಊತಿಯೂತಿ**—ಎಂಬುದರಿಂದ ಅಂತೋದಾತ್ತವಾಗಿ ನಿಪಾತಿತವಾಗಿದೆ. ಚತುರ್ಥೀಏಕವಚನಾಂತರೂಪ.

**ಅನುಮದಾಮ**—ಮದೀ ಹರ್ಷಗ್ಲೇಪನಯೋಃ. ಧಾತು ಲೋಟ್ ಉತ್ತಮಪುರುಷ ಬಹುವಚನರೂಪ **ಯದ್ವೃತ್ತಾನ್ನಿತ್ಯಮ್**-(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರಪ್ರತಿಷೇಧ ಬರುತ್ತದೆ ಶಪ್ ಪಿತ್ತಾದುದರಿಂದ ಅನುದಾತ್ತ. ಲಸಾರ್ವಧಾತುಕವು. **ತಾಸ್ಯನುದಾ**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ **ತಿಙಿಚೋದಾತ್ತವತಿ**—(ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಅನು) ಅನುದಾತ್ತಸ್ವರ ಬರುತ್ತದೆ

**ಸಂಗಮೇ**—ಗಮ್ಲೃ ಗತೌ ಧಾತು. **ಗ್ರಹವೃದೃನಿಶ್ಚಿಗಮಶ್ಚ**—ಎಂಬುದರಿಂದ ಕರ್ಮಣಿಯಲ್ಲಿ ಅಪ್ ಪ್ರತ್ಯಯ. **ಥಾಥಘಞ್**—(ಪಾ. ಸೂ. ೬-೨-೧೪೪) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ ಸಪ್ತಮೀ ಏಕವಚನಾಂತರೂಪ.

**ಆಜಾ**—ಆಜಿ ಶಬ್ದ. ಸಪ್ತಮೀ ಏಕವಚನಪರವಾದಾಗ **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಡಾದೇಶ. ಡಿತ್ತಾದುದರಿಂದ ಟಿಲೋಪ.

**ತ್ವಾಯದ್ಭ್ಯಃ**—ತ್ವಾಂ ಆತ್ಮನಃ ಇಚ್ಛತಿ ತ್ವಾಯತಿ. **ಸುಪ ಆತ್ಮನಃ ಕ್ಯಚ್**—(ಪಾ. ಸೂ. ೩-೧-೮) ಎಂಬುದರಿಂದ ಯುಷ್ಮದ್ ಶಬ್ದಕ್ಕೆ ಕ್ಯಚ್ ಪ್ರತ್ಯಯ. ಇದು ಪರವಾದಾಗ **ಪ್ರತ್ಯಯೋತ್ತರಪದಯೋಶ್ಚ**—(ಪಾ. ಸೂ. ೭-೨-೯೮) ಎಂಬುದರಿಂದ ಮಪರ್ಯಂತಕ್ಕೆ ತ್ವ ಆದೇಶ. ವ್ಯತ್ಯಯದಿಂದ ದಕಾರಕ್ಕೆ ಅತ್ವ. **ಸನಾದ್ಯಂತಾ ಧಾತವಃ**—ಎಂಬುದರಿಂದ ತ್ವಾಯ ಎಂಬ ಕ್ಯಜಂತವು ಧಾತುಸಂಜ್ಞೆಯನ್ನು ಹೊಂದುತ್ತದೆ. ಇದಕ್ಕೆ ಲಟಿನಲ್ಲಿ ಶತೃಪ್ರತ್ಯಯ. ಉಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಉದಾತ್ತವಾದ ಕ್ಯಚಿನ ಅಕಾರದೊಡನೆ ಏಕಾದೇಶ (ಅತೋಗುಣೇ) ಬರುವುದರಿಂದ ಏಕಾದೇಶ **ಉದಾತ್ತೇನೋದಾತ್ತಃ**—(ಪಾ. ಸೂ. ೮-೨-೫) ಎಂಬುದರಿಂದ ಅದೂ ಉದಾತ್ತವಾಗುತ್ತದೆ. ಚತುರ್ಥೀ ಬಹುವಚನಾಂತರೂಪ.

**ಯಚ್ಛ**—ದಾಣ್ ದಾನೇ ಧಾತು. ಇದಕ್ಕೆ ಲೋಟ್‌ಮಧ್ಯಮ ಏಕವಚನದಲ್ಲಿ ಸಿಪಿಗೆ **ಸೇರ್ಹ್ಯಪಿಚ್ಚ**—ಎಂಬುದರಿಂದ ಹಿ ಆದೇಶ. ಶಪ್‌ವಿಕರಣ. **ಪಾಘ್ರಾಧ್ಮಾ**—(ಪಾ. ಸೂ. ೭-೩-೭೮) ಎಂಬುದರಿಂದ ಪ್ರಕೃತಿಗೆ

ಯಚ್ಛಾದೇಶ. **ಅತೋಹೇಃ**—(ಪಾ. ಸೂ. ೬-೪-೧೦೫) ಎಂಬುದರಿಂದ ಹಿಗೆ ಲುಕ್. ಯಚ್ಛ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ‖ ೩ ‖



ಸಂಹಿತಾಪಾಠಃ

ವಯಂ ಜಯೇಮ ತ್ವಯಾ ಯುಜಾ ವೃತಮಸ್ಮಾಕಮಂಶ-
ಮುದವಾ ಭರೇಭರೇ ।
ಅಸ್ಮಭ್ಯಮಿಂದ್ರ ವರಿವಃ ಸುಗಂ ಕೃಧಿ ಪ್ರ ಶತ್ರೂಣಾಂ ಮಘ-
ವನ್ವೃಷ್ಣ್ಯಾ ರುಜ ‖ ೪ ‖

। ಪದಪಾಠಃ ।

ವಯಂ । ಜಯೇಮ । ತ್ವಯಾ । ಯುಜಾ । ವೃತಂ । ಅಸ್ಮಾಕಂ । ಅಂಶಂ ।
ಉತ್ । ಅವ । ಭರೇಽಭರೇ ।
ಅಸ್ಮಭ್ಯಂ । ಇಂದ್ರ । ವರಿವಃ । ಸುಽಗಂ । ಕೃಧಿ । ಪ್ರ । ಶತ್ರೂಣಾಂ। ಮಘಽ-
ವನ್ । ವೃಷ್ಣ್ಯಾ । ರುಜ ‖ ೪ ‖

ಸಾಯಣಭಾಷ್ಯಂ

ಹೇ ಇಂದ್ರ ಯುಜಾಸ್ಮಾಭಿರ್ಯುಕ್ತೇನ ಸಹಾಯಭೂತೇನ ತ್ವಯಾ ವೃತಮಾವೃಣ್ವಂತಂ ಶತ್ರುಂ ವಯಂ ಸ್ತೋತಾರೋ ಜಯೇಮ । ಅಭಿಭವೇಮ । ಅಪಿ ಚ ಭರೇಭರೇ ಸಂಗ್ರಾಮೇ ಸಂಗ್ರಾಮೇಽಸ್ಮಾಕಮಂಶಮಸ್ಮದೀಯಂ ಭಾಗಮುದವ । ಶತ್ರುಕೃತಪೀಡಾಪರಿಹಾರೇಣೋತ್ಕೃಷ್ಟಂ ರಕ್ಷ । ತಥಾ ಹೇ

ಇಂದ್ರ ವರಿವೋ ಧನಮಸ್ಮಭ್ಯಂ ಸುಗಂ ಸುಗಮಂ ಸುಪ್ರಾಪಂ ಕೃಧಿ। ಕುರು। ತಥಾ ಹೇ ಮಘವನ್ ಶತ್ರೂಣಾಮಸ್ಮದುಪದ್ರವಕಾರಿಣಾಂ ವೃಷ್ಣ್ಯಾ ವೃಷ್ಣ್ಯಾನಿ ವೀರ್ಯಾಣಿ ಪ್ರ ರುಜ। ಪ್ರಭಂಗ್ಧಿ। ಬಾಧಸ್ವೇತ್ಯರ್ಥಃ॥ ವೃತಂ। ವೃಞ್ ವರಣೇ। ಕ್ವಿಪ್ಚೇತಿ ಕ್ವಿಪ್। ತುಗಾಗಮಃ। ಸುಗಂ। ಸುದುರೋರಧಿಕರಣ ಇತಿ ಗಮೇರ್ಡಪ್ರತ್ಯಯಃ। ಕೃಧಿ। ಶ್ರುಶೃಣುಪೄಕೃವೃಭ್ಯ ಇತಿ ಹೇರ್ಧಿಃ। ರುಜ। ರುಜೋ ಭಂಗೇ। ತೌದಾದಿಕಃ॥

ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ)। **ಯುಜಾ**—(ನಮಗೆ ಸಹಾಯಕನಾಗಿ) ನಮ್ಮೊಡನೆ ಸೇರಿಕೊಂಡಿರುವ **ತ್ವಯಾ**—ನಿನ್ನ ಸಹಾಯದಿಂದ। **ವೃತಂ**—ನಮ್ಮನ್ನು ಮುತ್ತಿರುವಶತ್ರುವನ್ನು। **ವಯಂ**—(ನಿನ್ನ ಭಕ್ತರಾದ) ನಾವು। **ಜಯೇಮ**—ಜಯಿಸುವಂತೆ ಆಗಲಿ.। **ಭರೇಭರೇ**—ಪ್ರತಿಯೊಂದು ಯುದ್ಧದಲ್ಲಿಯೂ। **ಅಸ್ಮಾಕಂ**—ನಮ್ಮ ನಮ್ಮ। **ಅಂಶಂ**—ಭಾಗವನ್ನು। **ಉದವ**—ಚೆನ್ನಾಗಿ ಕಾಪಾಡು। **ಇಂದ್ರ**—ಎಲೈ ಇಂದ್ರನೇ। **ವರಿವಃ**—ಧನವು। **ಅಸ್ಮಭ್ಯಂ**—ನಮಗೆ। **ಸುಗಂ**—ಸುಲಭವಾಗಿ ಸೇರುವಂತೆ। **ಕೃಧಿ**—ಮಾಡು.। **ಮಘವನ್**—ಧನವಂತನಾದ ಇಂದ್ರನೇ। **ಶತ್ರೂಣಾಂ**—ಶತ್ರುಗಳ। **ವೃಷ್ಣ್ಯಾ**—ಪ್ರಾಬಲ್ಯಗಳನ್ನು। **ಪ್ರರುಜ**—ಕ್ಷೀಣಿಸುವಂತೆ ಮಾಡು।

ಭಾವಾರ್ಥ

ಎಲೈ ಇಂದ್ರನೇ, ನಮ್ಮೊಡನೆ ಕೂಡಿಕೊಂಡಿರುವ ನಿನ್ನ ಸಹಾಯದಿಂದ ನಾವು ಆವರಿಸುವ ಶತ್ರುವನ್ನು ಜಯಿಸುವಂತಾಗಲಿ. ಪ್ರತಿಯೊಂದು ಯುದ್ಧದಲ್ಲಿಯೂ ಸಹ ನಮ್ಮ ನಮ್ಮ ಭಾಗವನ್ನು ಶತ್ರುಗಳ ಪೀಡೆಯಿಲ್ಲದಂತೆ ಕಾಪಾಡು. ಎಲೈ ಇಂದ್ರನೇ ನಮಗೆ ಧನವು ಸುಲಭವಾಗಿ ಸೇರುವಂತೆ ಮಾಡು. ಮತ್ತು ಧನವಂತನಾದ ಇಂದ್ರನೇ, ನಮ್ಮ ಶತ್ರುಗಳ ಪ್ರಾಬಲ್ಯವು ಕ್ಷೀಣಿಸುವಂತೆ ಮಾಡು.

## English Translation

May we, having you for our ally, overcome our adversaries in every encounter; defend our portion; render riches easily attained by us; enfeeble, Maghavan, the vigour of our enemies.

॥ ವಿಶೇಷವಿಷಯಗಳು ॥

**ವಯಂ ಜಯೇಮ ತ್ವಯಾ ಯುಜಾ ವೃತಂ—ವೃಞ್ ವರಣೇ।** ಯುದ್ಧಮಾಡುವುದಕ್ಕಾಗಿ ನಮ್ಮನ್ನು ಬಂದು ಮುತ್ತುವ ಶತ್ರುವನ್ನು ನಿನ್ನ ಸಹಾಯದಿಂದ ನಾವು ಜಯಿಸುವಂತಾಗಲಿ ಎಂದಭಿಪ್ರಾಯವು.

**ಅಸ್ಮಾಕಂ ಅಂಶಂ ಉತ್ ಅವ ಭರೇ ಭರೇ**—ನಮ್ಮ ಭಾಗವನ್ನು ಎಂದರೆ ನಮಗೆ ಸೇರಿದ ಗೃಹಾದಿಗಳನ್ನು, ಐಶ್ವರ್ಯವನ್ನು, ಧನವನ್ನು ಇತರ ವಸ್ತುಗಳನ್ನು ಪ್ರತಿಯುದ್ಧದಲ್ಲಿಯೂ ಶತ್ರುಗಳ ವಶವಾಗದಂತೆ ರಕ್ಷಿಸು ಎಂದರ್ಥವು. ಭರೇ ಎಂಬ ಶಬ್ದವು ಎರಡಾವರ್ತಿ ಪಠಿತವಾಗಿರುವುದರಿಂದ ಪ್ರತಿಯುದ್ಧದಲ್ಲಿಯೂ ಎಂಬರ್ಥವನ್ನು ಸೂಚಿಸುವುದು.

**ವರಿವಃ**—ಮಘಂ ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನನಾಮಗಳ ಮಧ್ಯದಲ್ಲಿ ವರಿವಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೯) ವರಿವಃ ಎಂದರೆ ಧನ ಎಂದರ್ಥವು.

**ಸುಗಂ ಕೃಧಿ**—ನಮಗೆ ಧನವು ಸುಲಭವಾಗಿ ದೊರಕುವಂತೆ ಮಾಡು.

**ವೃಷ್ಣ್ಯ**—ವೀರ್ಯ, ಅಥವಾ ಪರಾಕ್ರಮ.

**ರುಜ**—**ರುಜೋ ಭಂಗೇ** । ಭಗ್ನಮಾಡು, ನಾಶಮಾಡು ಎಂದರೆ **ಶತ್ರೂಣಾಂ ವೃಷ್ಣ್ಯ ಪ್ರ ರುಜ**—ಶತ್ರುಗಳ ಪರಾಕ್ರಮವನ್ನು (ಗರ್ವವನ್ನು) ಅಡಗಿಸು ಎಂದಭಿಪ್ರಾಯವು.

ವ್ಯಾಕರಣಪ್ರಕ್ರಿಯಾ

**ಜಯೇಮ**—ಜಿ ಜಯೇ ಧಾತು. ವಿಧಿಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಸ್‌ಪ್ರತ್ಯಯ. **ನಿತ್ಯಂ ಙಿತಃ**—(ಪಾ. ಸೂ. ೩-೪-೯೯) ಎಂಬುದರಿಂದ ಸಕಾರಲೋಪ. **ಯಾಸುಟ್‌ಪರಸ್ಮೈ**—(ಪಾ. ಸೂ. ೩-೪-೧೦೩) ಸೂತ್ರದಿಂದ ಯಾಸುಟಾಗಮ. ಶಪ್‌ವಿಕರಣ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಅಯಾದೇಶ. **ಅತೋ ಯೇ ಯಃ**—(ಪಾ. ಸೂ. ೭-೨-೮೦) ಎಂಬುದರಿಂದ ಯಾಸ್ ಎಂಬುದಕ್ಕೆ ಇಯಾದೇಶ. **ಲೋಪೋ ವ್ಯೋರ್ವಲಿ**—ಸೂತ್ರದಿಂದ ಯಕಾರಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯುಜಾ**—ಯುಜಿರ್ ಯೋಗೇ ಧಾತು. **ಕ್ವಿಪ್ ಚ**—(ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ತೃತೀಯಾವಿಭಕ್ತಿಗೆ **ಸಾವೇಕಾಚಸ್ತೃತೀಯಾದಿಃ**—(ಪಾ. ಸೂ. ೬-೧-೧೬೮) ಎಂಬುದರಿಂದ ಉದಾತ್ತಸ್ವರ ಬರುತ್ತದೆ.

**ಭರೇ ಭರೇ**—**ನಿತ್ಯವೀಪ್ಸಯೋಃ**—(ಪಾ. ಸೂ. ೮-೧-೪) ಎಂಬುದರಿಂದ ದ್ವಿರ್ವಚನ ಬಂದಾಗ **ತಸ್ಯ ಪರಮಾಮ್ರೇಡಿತಮ್**—ಎಂಬುದರಿಂದ ಅದರ ಪರರೂಪಕ್ಕೆ ಆಮ್ರೇಡಿತಸಂಜ್ಞೆ ಬರುತ್ತದೆ. **ಅನುದಾತ್ತಂಚ** (ಪಾ. ಸೂ. ೮-೧-೩) ಎಂಬುದರಿಂದ ಅದು ಅನುದಾತ್ತವಾಗುತ್ತದೆ.

**ವೃತಮ್**—ವೃಞ್ ವರಣೇ ಧಾತು. **ಕ್ವಿಪ್ ಚ**—(ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. **ಹ್ರಸ್ವಸ್ಯ ಪಿತಿ ಕೃತಿ ತುಕ್**—(ಪಾ. ಸೂ. ೬-೧-೭೧) ಎಂಬುದರಿಂದ ತುಕಾಗಮ. ದ್ವಿತೀಯಾ ಏಕವಚನಾಂತರೂಪ.

**ಸುಗಮ್**—ಗಮ್ಲೃ ಗತೌ ಧಾತು. ಇದಕ್ಕೆ ಸು ಎಂಬುದು ಉಪಪದವಾಗಿರುವಾಗ **ಸುದುರೋರಧಿಕರಣೇ**—(ಪಾ. ಸೂ. ೩-೨-೪೮-೩) ಎಂಬುದರಿಂದ ಡ ಪ್ರತ್ಯಯ. ಡಿತ್ಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಕೃಧಿ**—ಡುಕೃಞ್ ಕರಣೇ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ **ಸೇರ್ಹ್ಯಪಿಚ್ಚ**—ಎಂಬುದರಿಂದ ಸಿಗೆ ಹಿ ಆದೇಶ. ಅದಕ್ಕೆ **ಶ್ರುಶೃಣುಪೃಕೃವೃಭ್ಯಃ**—(ಪಾ. ಸೂ. ೬-೪-೧೦೨) ಎಂಬುದರಿಂದ ಹಿಗೆ ಧಿ ಆದೇಶ. ತಿಙಂತನಿಘಾತಸ್ವರ ಬರುತ್ತದೆ.

**ವೃಷ್ಣ್ಯ**—ನಪುಂಸಕದಲ್ಲಿ **ಶೇಶ್ಛಂದಸಿ ಬಹುಲಮ್**—ಎಂಬುದರಿಂದ ಶಿಗೆ ಲೋಪ.

ರುಜ—ರುಜೋ ಭಂಗೇ ಧಾತು. ತುದಾದಿ. ಲೋಟ್‌ಮಧ್ಯಮಪುರುಷದಲ್ಲಿ ಸಿಪಿಗೆ ಹಿ ಆದೇಶ. **ತುದಾದಿಭ್ಯಃ ಶಃ**—(ಪಾ. ಸೂ. ೩-೧-೭೭) ಎಂಬುದರಿಂದ ಶವಿಕರಣ. **ಸಾರ್ವಧಾತುಕಮಪಿತ್**—ಎಂಬುದರಿಂದ ಅದು ಙಿತ್ತಿನಂತಾಗುವುದರಿಂದ ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. **ಅತೋ ಹೇಃ**—(ಪಾ. ಸೂ. ೬-೪-೧೦೫) ಎಂಬುದರಿಂದ ಹಿಗೆ ಲುಕ್. ತಿಙಂತನಿಘಾತಸ್ವರ ಬರುತ್ತದೆ. ॥ ೪ ॥



॥ ಸಂಹಿತಾಪಾಠಃ ॥

ನಾನಾ ಹಿ ತ್ವಾ ಹವಮಾನಾ ಜನಾ ಇಮೇ ಧನಾನಾಂ ಧರ್ತರ-
ವಸಾ ವಿಪನ್ಯವಃ ।
ಅಸ್ಮಾಕಂ ಸ್ಮಾ ರಥಮಾ ತಿಷ್ಠ ಸಾತಯೇ ಜೈತ್ರಂ ಹೀಂದ್ರ
ನಿಭೃತಂ ಮನಸ್ತವ ॥ ೫ ॥

॥ ಪದಪಾಠಃ ॥

ನಾನಾ । ಹಿ । ತ್ವಾ । ಹವಮಾನಾಃ । ಜನಾಃ । ಇಮೇ । ಧನಾನಾಂ । ಧರ್ತಃ ।
ಅವಸಾ । ವಿಪನ್ಯವಃ ।
ಅಸ್ಮಾಕಂ । ಸ್ಮ । ರಥಂ । ಆ । ತಿಷ್ಠ । ಸಾತಯೇ । ಜೈತ್ರಂ । ಹಿ । ಇಂದ್ರ । ನಿऽಭೃತಂ ।
ಮನಃ । ತವ ॥ ೫ ॥

ಸಾಯಣಭಾಷ್ಯಂ

ಹೇ ಧನಾನಾಂ ಧರ್ತರ್ಗೋಹಿರಣ್ಯಾದಿರೂಪಾಣಾಂ ದ್ರವ್ಯಾಣಾಂ ಧಾರಯಿತರಿಂದ್ರ ವಿಪನ್ಯವಃ। ಸ್ತೋತ್ರನಾಮೈತತ್। ಸ್ತೋತಾರ ಇಮೇ ಜನಾ ಅವಸಾ ರಕ್ಷಣೇನ ಹೇತುನಾ ತ್ವಾ ಹವಮಾನಾಸ್ತ್ವಾಮಾಹ್ವಯಂತೋ ನಾನಾ ಹಿ । ವಿಭಿನ್ನಾಃ ಖಲು । ತೇಷಾಂ ಮಧ್ಯೇಽಸ್ಮಾಕಂ ಸ್ಮಾಸ್ಮಾಕಮೇವ ಸಾತಯೇ ಧನದಾನಾಯ ರಥಮಾತಿಷ್ಠ । ಆರೋಹ । ಹೇ ಇಂದ್ರ ನಿಭೃತಮವ್ಯಾಕುಲಂ ತವ ಮನಶ್ಚಿತ್ತಂ ಜೈತ್ರಂ ಹಿ । ಜಯಶೀಲಂ ಖಲು । ಶತ್ರೂಂಜಿತ್ವಾಽಸ್ಮಭ್ಯಂ ಧನಂ ದಾತುಂ ಸಮರ್ಥಮಿತ್ಯರ್ಥಃ ॥ ಸಾತಯೇ । ಷಣು ದಾನೇ । ಕ್ತಿನಿ ಜನಸನಖನಾಂ ಸಂಝಲೋರಿತ್ಯಾತ್ವಂ ॥

ಪ್ರತಿಪದಾರ್ಥ

ಧನಾನಾಂ—(ಗೋಹಿರಣ್ಯಾದಿರೂಪವಾದ) ಧನಗಳಿಗೆ । **ಧರ್ತಃ**—ಧಾರಕನಾದ ಇಂದ್ರನೇ । **ವಿಪನ್ಯವಃ**—(ನಿನ್ನ) ಭಕ್ತರಾದ । **ಇಮೇ ಜನಾಃ**—ಈ ಪ್ರಜೆಗಳು (ಈ ಪ್ರಜೆಗಳ ಗುಂಪಿನಲ್ಲಿ) । **ಅವಸಾ**—ರಕ್ಷಣೆಯನ್ನು ಪಡೆಯುವ ಉದ್ದಿಶ್ಯದಿಂದ । **ತ್ವಾ**—ನಿನ್ನನ್ನು । **ಹವಮಾನಾಃ**—ಕರೆಯುತ್ತಿರುವವರು । **ನಾನಾ ಹಿ**—ಬಹುಮಂದಿ ಇದ್ದಾರೆ । (ಅವರಲ್ಲಿ) **ಅಸ್ಮಾಕಂ ಸ್ಮ**—ನಮಗೇನೆ । **ಸಾತಯೇ**—ಧನದಾನಕ್ಕಾಗಿ । **ರಥಂ**—ರಥವನ್ನು । **ಆ ತಿಷ್ಠ**—ಹತ್ತಿಕುಳಿತುಕೊ । **ಇಂದ್ರ**—ಎಲೈ ಇಂದ್ರನೇ । **ನಿಭೃತಂ**—ಅವ್ಯಾಕುಲವಾದ (ಸ್ತಿಮಿತವಾದ) । **ತವ**—ನಿನ್ನ । **ಮನಃ**—ಮನಸ್ಸು । **ಜೈತ್ರಂ ಹಿ**—ಜಯಶೀಲವಾದದ್ದೆ ಅಲ್ಲವೇ—

॥ ಭಾವಾರ್ಥ ॥

ಗೋಹಿರಣ್ಯಾದಿರೂಪವಾದ ಧನಗಳಿಗೆ ಧಾರಕನಾದ ಇಂದ್ರನೇ, ನಿನ್ನ ಭಕ್ತರಾದ ಈ ಪ್ರಜೆಗಳ ಗುಂಪಿನಲ್ಲಿ ರಕ್ಷಣೆಯನ್ನು ಪಡೆಯುವ ಉದ್ದಿಶ್ಯದಿಂದ ನಿನ್ನನ್ನು ಕರೆಯುತ್ತಿರುವವರು ಬಹುಮಂದಿ ಇದ್ದಾರೆ. ಅವರಲ್ಲೆಲ್ಲಾ ನಮಗೇ ಮುಖ್ಯವಾಗಿ ಧನವನ್ನು ಒದಗಿಸಿ ಕೊಡುವುದಕ್ಕಾಗಿ ರಥವನ್ನು ಹತ್ತಿ ಕುಳಿತುಕೊ. ಎಲೈ ಇಂದ್ರನೇ, ಸ್ತಿಮಿತವಾದ ನಿನ್ನ ಮನಸ್ಸು ಜಯಶೀಲವಾದದ್ದೇ ಅಲ್ಲವೇ ?

English Translation

Many are the men who call upon you for your protection : mount your car to bring wealth to us, for your mind, Indra, is composed, and resolved on victory.

ವಿಶೇಷವಿಷಯಗಳು

**ವಿಪನ್ಯವಃ**—ವಿಪ್ರಃ ವಿಗ್ರಃ ಮೊದಲಾದ ಇಪ್ಪತ್ತುನಾಲ್ಕು ಮೇಧಾವಿ ನಾಮಗಳ ಮಧ್ಯದಲ್ಲಿ ವಿಪನ್ಯವಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೧೫) ಈ ಶಬ್ದಕ್ಕೆ ಬುದ್ಧಿವಂತರು ಎಂದರ್ಥವು. ಭಾಷ್ಯಕಾರರು ಸ್ತೋತ್ರಮಾಡುವವರು ಎಂದು ಹೇಳಿರುವರು.

**ನಾ ನಾ ಹಿತ್ವಾ ಹವಮಾನಾ ಜನಾ ಇಮೇ ವಿಪಸ್ಯವಃ**—ಈಗ ಇಲ್ಲಿ ಸೇರಿದು ನಿನ್ನನ್ನು ಆಹ್ವಾನವಾಡಿ ಸ್ತೋತ್ರಮಾಡುತ್ತಿರುವ ಜನರು ನಾನಾ ವಿಧವಾಗಿ ಇರುವರು. ಎಂದರೆ ಅವರ ಅಭೀಷ್ಟಗಳು ನಾನಾವಿಧವಾಗಿರು ವವು. ಅವರೆಲ್ಲರೂ ನಿನ್ನನ್ನು ತಮತಮಗೆ ರಕ್ಷಣೆಗಾಗಿಯೂ ಮತ್ತು ತಮಗೆ ಬೇಕಾದ ಇಷ್ಟಾರ್ಥಗಳಿಗಾಗಿಯೂ ನಿನ್ನನ್ನು ಆಹ್ವಾನಿಸಿ ಸ್ತೋತ್ರಮಾಡುತ್ತಿರುವರು..

**ಧನಾನಾಂ ಧರ್ತಃ**—ಗೋವುಗಳು, ಹಿರಣ್ಯ ಮೊದಲಾದ ಧನಗಳನ್ನು ಧರಿಸಿರುವವನು ಎಂದರೆ ಸ್ತೋತೃ ಗಳಿಗೆ ಕೊಡುವುದಕ್ಕಾಗಿ ಹೊಂದಿರುವವನು, ಕೈಯಲ್ಲಿ ಹಿಡಿದಿರುವವನು ಎಂದರ್ಥವು.

**ಅಸ್ಮಾಕಂ ಸಾತಯೇ**--ಸ್ತೋತ್ರಮಾಡುವ ಜನರಲ್ಲಿ ನಾವೂ ಸೇರಿರುವೆವು. ನಮಗೆ ಬೇಕಾದುದು ಧನವು.

**ರಥಂ ಆ ತಿಷ್ಠ**—ನಮಗೆ ಧನವನ್ನು ಕೊಡುವುದಕ್ಕಾಗಿ (ಬೇಗನೆ) ರಥವನ್ನು ಹತ್ತು (ಹೊರಟು ಬಾ)

**ಜೈತ್ರಂ ಹಿ ಇಂದ್ರ ನಿಭೃತಂ ಮನಃ ತವ**—ಎಲೈ ಇಂದ್ರನೇ, ನಿನ್ನ ಮನಸ್ಸು ಅವ್ಯಾಕುಲವಾಗಿ ಜಯ ದಲ್ಲಿಯೇ ನಿಶ್ಚಿಂತವಾಗಿರಲಿ ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಹವಮಾನಾಃ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಇದಕ್ಕೆ ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ಬಹುಲಂ ಛಂದಸಿ**—ಎಂಬುದರಿಂದ ಸಂಪ್ರಸಾರಣ. **ಸಂಪ್ರಸಾರಣಾಚ್ಚ**—ಎಂಬುದರಿಂದ ಪೂರ್ವರೂಪ. ಶಪ್ ವಿಕರಣ. ತನ್ನಿಮಿತ್ತವಾಗಿ ಉಕಾರಕ್ಕೆ ಗುಣ. ಅವಾದೇಶ. **ಆನೇಮುಕ್**—(ಪಾ.ಸೂ. ೭-೨-೮೨) ಎಂಬುದ ರಿಂದ ಅಜಂತಾಂಗಕ್ಕೆ ಮುಕಾಗಮ. ಶಪ್ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ತಿಷ್ಠ**—ಷ್ಠಾ ಗತಿನಿವೃತ್ತೌ ಧಾತು. ಲೋಣ್ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. ಶಪ್ ವಿಕರಣ. ಇದನ್ನು ನಿಮಿತ್ತೀಕರಿಸಿ **ಪಾಘ್ರಾಧ್ಮಾ**—(ಪಾ. ಸೂ. ೭-೩-೭೮) ಎಂಬುದರಿಂದ ತಿಷ್ಠಾದೇಶ. **ಅತೋ ಹೇಃ**—ಎಂಬುದರಿಂದ ಹಿಗೆ ಲುಕ್. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಾತಯೇ**--ಷಣು ದಾನೇ ಧಾತು. **ಸ್ತ್ರಿಯಾಂ ಕ್ತಿನ್**—(ಪಾ. ಸೂ. ೩-೩-೯೪) ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. **ಜನಸನಖನಾಂ ಸಞ್ಝಲೋಃ**—(ಪಾ. ಸೂ. ೬-೪-೪೨) ಎಂಬುದರಿಂದ ಧಾತುವಿಗೆ ಆತ್ವ. ಸಾತಿ ಎಂದು ರೂಪವಾಗುತ್ತದೆ. **ಊತಿಯೂತಿ**—ಎಂಬುದರಿಂದ ಅಂತೋದಾತ್ತವಾಗಿ ನಿಪಾತಿತವಾಗಿದೆ. ಚತುರ್ಥೀಏಕವಚನಾಂತ. ॥ ೫ ॥

———— :೦: ————

ಸಂಹಿತಾಪಾಠಃ

ಗೋಜಿತಾ ಬಾಹೂ ಅಮಿತಕ್ರತುಃ ಸಿಮಃ ಕರ್ಮನ್ಕರ್ಮಞ್ಛ-
ತಮೂತಿಃ ಖಜಂಕರಃ ।
ಅಕಲ್ಪ ಇಂದ್ರಃ ಪ್ರತಿಮಾನಮೋಜಸಾಥಾ ಜನಾ ವಿ ಹ್ವಯಂ-
ತೇ ಸಿಷಾಸವಃ ॥ ೬ ॥

ಪದಪಾಠಃ

ಗೋಽಜಿತಾ । ಬಾಹೂ ಇತಿ । ಅಮಿತಽಕ್ರತುಃ । ಸಿಮಃ । ಕರ್ಮನ್ಽಕರ್ಮನ್ । ಶತಂಽಊತಿಃ । ಖಜಂಽಕರಃ ।
ಅಕಲ್ಪಃ । ಇಂದ್ರಃ । ಪ್ರತಿಽಮಾನಂ । ಓಜಸಾ । ಅಥ । ಜನಾಃ । ವಿ । ಹ್ವಯಂತೇ । ಸಿಸಾಽಸವಃ ॥ ೬ ॥

ಸಾಯಣಭಾಷ್ಯಂ

ಹೇ ಇಂದ್ರ ತವ ಬಾಹೂ ಹಸ್ತೌ ಗೋಜಿತಾ ಜಯೇನ ಗವಾಂ ಲಂಭಯಿತಾರೌ । ತ್ವಂ ಚಾಮಿತಕ್ರತುರಪರಿಚ್ಛಿನ್ನಜ್ಞಾನಃ ಸಿಮಃ ಶ್ರೇಷ್ಠಃ । ತಥಾ ಚ ಶಾಟ್ಯಾಯನಕಂ । ಸಿಮ ಇತಿ ವೈ ಶ್ರೇಷ್ಠಮಾಚಕ್ಷತ ಇತಿ । ಯದ್ವಾ । ಸಿಮಃ ಶತ್ರೂಣಾಂ ಬಂಧಕಃ । ಕರ್ಮನ್ಕರ್ಮನ್ ಸ್ತೋತೄಣಾಂ ಕರ್ಮಣಿ ಕರ್ಮಣ್ಯುಪಸ್ಥಿತೇ ಶತಮೂತಿರ್ಬಹುವಿಧರಕ್ಷಣೋಪೇತಃ ಖಜಂಕರಃ । ಖಜತಿ ಮಥ್ನಾತಿ ಪುರುಷಾನಿತಿ ಖಜಃ ಸಂಗ್ರಾಮಃ । ತಸ್ಯ ಕರ್ತಾ । ಅಕಲ್ಪಃ । ಕಲ್ಪೇನಾನ್ಯೇನ ರಹಿತಃ । ಸ್ವತಂತ್ರ ಇತ್ಯರ್ಥಃ । ಓಜಸಾ ಸರ್ವೇಷಾಂ ಪ್ರಾಣಿನಾಂ ಯದೋಜೋ ಬಲಮಸ್ತಿ ತೇನ ಸರ್ವೇಣ ಪ್ರತಿಮಾನಂ ಪ್ರತಿನಿಧಿತ್ವೇನ ಮೀಯಮಾನಃ । ಯಸ್ಮಾದೇವಂಗುಣವಿಶಿಷ್ಟ ಇಂದ್ರೋಽಥಾತಃ ಕಾರಣಾತ್ಸಿಷಾಸವೋ ಧನಂ ಲಬ್ಧುಕಾಮಾ ಜನಾ ವಿಹ್ವಯಂತೇ । ವಿವಿಧಮಾಹ್ವಯಂತಿ ॥ ಗೋಜಿತಾ । ಗಾ ಜಯತ ಇತಿ ಗೋಜಿತೌ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಸಿಮಃ । ಷಿಞ್ ಬಂಧನೇ । ಅಸ್ಮಾದೌಣಾದಿಕೋ

**ಮುಕ್** । ಖಜಂಕರಃ ಖಜ । ಮುಂಥೇ । ಪಚಾದ್ಯಚ್ । ಕ್ಷೇಮಪ್ರಿಯಮದ್ರೇಽಣ್ ಚ । ಪಾ. ೩-೨-೪೪ । ಇತಿ ಚಶಬ್ದಸ್ಯಾನುಕ್ತಸಮುಚ್ಚಯಾರ್ಥತ್ವಾತ್ ಖಜಶಬ್ದೋಪಪದಾದಪಿ ಕರೋತೇಃ ಖಚ್। ಅರುರ್ದ್ವಿಷದಜಂತಸ್ಯೇತಿ ಮುಮ್ । ಕೃದುತ್ತರಪದಪ್ರಕೃತಿಸ್ವರತ್ವಂ । ಅಕಲ್ಪಃ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಸಿಷಾಸವಃ । ವನ ಷಣ ಸಂಭಕ್ತೌ । ಸನಿ ಸನೀವಂತರ್ಧೇತಿ ವಿಕಲ್ಪನಾದಿಡಭಾವಃ । ಜನಸನಖನಾಂ ಸಞ್ಝಲೋರಿತ್ಯಾತ್ವಂ । ದ್ವಿರ್ವಚನಾದಿ । ಸನಾಶಂಸಭಿಕ್ಷ ಉಃ । ಪಾ. ೩-೨-೧೬೮ । ಇತ್ಯುಪ್ರತ್ಯಯಃ । ಸತಿ ಶಿಷ್ಟತ್ವಾತ್ತಸ್ಯೈವ ಸ್ವರಃ ಶಿಷ್ಯತೇ ॥

ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ) । **ಬಾಹೂ**—ನಿನ್ನ ತೋಳುಗಳೆರಡೂ । **ಗೋಜಿತಾ**—(ಶತ್ರುಗಳನ್ನು) ಜಯಿಸಿ ಗೋವುಗಳನ್ನು ಪಡೆಯತಕ್ಕವು । **ಅಮಿತಕ್ರತುಃ**—(ನಿನ್ನ) ಜ್ಞಾನವು ಅಪರಿಮಿತವಾದದ್ದು । **ಸಿಮಃ**—(ನೀನು) ಅತ್ಯಂತ ಶ್ರೇಷ್ಠನು. ಅಥವಾ ಶತ್ರುವನ್ನು ಬಂಧಿಸುವವನು. । **ಕರ್ಮನ್ ಕರ್ಮನ್**—ಪ್ರತಿಯೊಂದು ಯಜ್ಞಕರ್ಮದಲ್ಲಿಯೂ । **ಶತಮೂತಿಃ**—ನೂರಾರು ವಿಧವಾದ ರಕ್ಷಣೆಯಿಂದ ಕೂಡಿದವನು. । **ಖಜಂಕರಃ**—(ನೀನು) ಯುದ್ಧಕರ್ತನು. । **ಅಕಲ್ಪಃ**—(ಇತರರ) ನಿಯಮಕ್ಕೆ ಒಳಪಡದ ಸ್ವತಂತ್ರನು. । **ಇಂದ್ರಃ**—ಇಂದ್ರನು । **ಓಜಸಾ**—(ಸಕಲ ಪ್ರಾಣಿಗಳ) ಬಲಕ್ಕೂ । **ಪ್ರತಿಮಾನಂ**—ಮಾದರಿಯಾದ ಪ್ರತಿನಿಧಿಯು । **ಅಥ**—ಆ ಕಾರಣದಿಂದಲೇ । **ಸಿಷಾಸವಃ**—ಧನವನ್ನು ಪಡೆಯುವ ಆಸೆಯುಳ್ಳ । **ಜನಾಃ**—ಮಾನವರು । **ವಿಹ್ವಯಂತೇ**—(ಇಂದ್ರನನ್ನು) ನಾನಾ ವಿಧವಾಗಿ ಕರೆಯುತ್ತಾರೆ. ।

ಭಾವಾರ್ಥ

ಎಲೈ ಇಂದ್ರನೇ. ನಿನ್ನ ತೋಳುಗಳೆರಡೂ ಶತ್ರುಗಳನ್ನು ಜಯಿಸಿ ಗೋವುಗಳನ್ನು ಪಡೆಯತಕ್ಕವು. ನಿನ್ನ ಜ್ಞಾನವು ಅಪರಿಮಿತವಾದದ್ದು. ನೀನು ಅತ್ಯಂತ ಶ್ರೇಷ್ಠನಾಗಿಯೂ, ಪ್ರತಿಯೊಂದು ಯಜ್ಞಕರ್ಮದಲ್ಲಿಯೂ ನೂರಾರುವಿಧವಾದ ರಕ್ಷಣೆಯಿಂದ ಕೂಡಿದವನಾಗಿಯೂ, ಯುದ್ಧಕರ್ತನಾಗಿಯೂ, ಇತರರ ನಿಯಮಕ್ಕೆ ಒಳಪಡದ ಸ್ವತಂತ್ರನಾಗಿಯೂ ಇದ್ದೀಯೆ. ಇಂದ್ರನು ಸಕಲ ಪ್ರಾಣಿಗಳ ಬಲಕ್ಕೂ ಮಾದರಿಯಾದ ಪ್ರತಿನಿಧಿಯಾಗಿದ್ದಾನೆ. ಆ ಕಾರಣದಿಂದಲೇ ಧನಾಪೇಕ್ಷಿಗಳಾದ ಮಾನವರು ಇಂದ್ರನನ್ನು ನಾನಾವಿಧವಾಗಿ ಪ್ರಾರ್ಥಿಸಿ ಕರೆಯುತ್ತಾರೆ.

English Translation

Your arms are the winners of cows, your wisdom is unbounded, you are most excellent, the granter of a hundred aids in every rite : the author of war, Indra is uncontrolled ; the type of strength ; therefore men, who are desirous of wealth, invoke him in various ways.

ವಿಶೇಷವಿಷಯಗಳು

ಗೋಜಿತಾ—ಶತ್ರೂಣಾಂ ಪರಾಜಯೇನ ಗವಾಂ ಲಂಭಯಿತಾರೌ । ಗಾಃ ಜಯತ ಇತಿ ಗೋಜಿತಾ ಯುದ್ಧದಲ್ಲಿ ಶತ್ರುಗಳನ್ನು ಸೋಲಿಸಿ ಅವರಲ್ಲಿರುವ ಗೋವುಗಳನ್ನು ಗೆದ್ದು ತರುವ ಸಾಮರ್ಥ್ಯವುಳ್ಳ ಇಂದ್ರನ ಹಸ್ತಗಳು

**ಅಮಿತಕ್ರತುಃ**— ಇಲ್ಲಿ ಕ್ರತು ಶಬ್ದಕ್ಕೆ ಜ್ಞಾನವೆಂದರ್ಥವು (ನಿ. ೩–೧೩) ಅಪರಿಮಿತಜ್ಞಾನವುಳ್ಳವನು, ಇಂದ್ರನ ಜ್ಞಾನಕ್ಕೆ ಎಲ್ಲೆಯೇ ಇಲ್ಲ. ಅತ್ಯಧಿಕ ಪ್ರಜ್ಞಾವಂತನು ಎಂದಭಿಪ್ರಾಯವು.

**ಸಿಮಃ— ಷಿಞ್ ಬಂಧನೇ । ಶ್ರೇಷ್ಠಃ ।** ಶ್ರೇಷ್ಠನಾದವನು. ಈ ಶಬ್ದವು ಋಗ್ವೇದದಲ್ಲಿ—

**ತಮಿತ್ಪೃಚ್ಛಂತಿ ನ ಸಿಮೋ ವಿ ಪೃಚ್ಛತಿ ಸ್ವೇನೇವ ಧೀರೋ ಮನಸಾ ಯದಗ್ರಭೀತ್ ।**
(ಋ. ಸಂ. ೧-೧೪೫-೨)

**ಸಿಮ ಉಕ್ಷ್ಣೋಽವಸೃಷ್ಟಾ ಅದಂತಿ ಸ್ವಯಂ ಬಲಾನಿ ತನ್ವಃ ಶೃಣಾನಾಃ ।**
(ಋ. ಸಂ ೧೦-೨೮-೧೧)

**ಯದೇದಯುಕ್ತ ಹರಿತಃ ಸಧಸ್ಥಾದಾದ್ರಾತ್ರೀ ವಾಸಸ್ತನುತೇ ಸಿಮಸ್ಮೈ ।**
(ಋ. ಸಂ ೧-೧೧೫-೪)

ಇತ್ಯಾದಿ ಋಕ್ಕುಗಳಲ್ಲಿ ಪಠಿತವಾಗಿರುವುದು. ಈ ಸ್ಥಳಗಳಲ್ಲಿ ಸಿಮಶಬ್ದಕ್ಕೆ ಸರ್ವ ಶಬ್ದಾರ್ಥವನ್ನೇ ಭಾಷ್ಯಕಾರರು ಹೇಳಿರುವರು. ಮತ್ತು **ತಥಾ ಚ ಶಾಟ್ಯಾಯನಕಂ । ಸಿಮ ಇತಿ ವೈ ಶ್ರೇಷ್ಠಮಾಚಕ್ಷತ ಇತಿ । ಯದ್ವಾ । ಸಿಮಃ ಶತ್ರೂಣಾಂ ಬಂಧಕಃ ।** ಎಂದರೆ ಶಾಟ್ಯಾಯನರು (ಸಾಮವೇದಿಗಳು) ಸಿಮ ಶಬ್ದವು ಶ್ರೇಷ್ಠವೆಂಬ ಅರ್ಥವನ್ನು ಬೋಧಿಸುವುದು ಎಂದು ಹೇಳುವರು. ಅಥವಾ ಸಿಮಶಬ್ದವು ಷಿಞ್ ಬಂಧನೇ ಎಂಬ ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ ಈ ಶಬ್ದಕ್ಕೆ ಶತ್ರುಗಳನ್ನು ಬಂಧಿಸುವವನು ಎಂಬ ಅರ್ಥವನ್ನು ಹೇಳಬಹುದು ಎಂದು ಭಾಷ್ಯಕಾರರು ಹೇಳಿರುವರು. ಆದುದರಿಂದ ಇಲ್ಲಿ ಸಿಮಃ ಎಂದರೆ ಸರ್ವಜನರಲ್ಲಿ ಶ್ರೇಷ್ಠನಾದವನು ಎಂಬರ್ಥವನ್ನು ಹೇಳಬಹುದು.

**ಕರ್ಮನ್ ಕರ್ಮನ್**— ಪ್ರತಿಕರ್ಮದಲ್ಲಿಯೂ, ಪ್ರತಿ ಯಜ್ಞಕರ್ಮದಲ್ಲಿಯೂ; ಕರ್ಮಶಬ್ದವು ಎರಡಾವರ್ತಿ ಪಠಿತವಾಗಿರುವುದರಿಂದ ಇದಕ್ಕೆ ಪ್ರತಿಕರ್ಮದಲ್ಲಿ ಎಂದರೆ ಸ್ತೋತ್ರಮಾಡುವವರು ಆಚರಿಸುವ ಪ್ರತಿಕರ್ಮದಲ್ಲಿ ಎಂದರ್ಥವು.

ಖಜಂಕರಃ— ಖಜ ಮಂಥೇ । **ಖಜತಿ ಮಥ್ನಾತಿ ಪುರುಷಾನಿತಿ ಖಜಃ ಸಂಗ್ರಾಮಃ । ತಸ್ಯ ಕರ್ತಾ ।** ಖಜಧಾತುವಿಗೆ ಮಥಿಸು, ಪೀಡಿಸು ಎಂಬರ್ಥವಿರುವುದರಿಂದ ಖಜವೆಂದರೆ ಜನಗಳನ್ನು ಪೀಡಿಸುವ ಹಿಂಸೆಪಡಿಸುವ ಯುದ್ಧವೆಂದರ್ಥ, ಖಜಂಕರಃ ಎಂದರೆ ಶತ್ರುಗಳೊಡನೆ ಯುದ್ಧಮಾಡುವವನು.

**ಅಕಲ್ಪಃ— ಕಲ್ಪೇನಾನ್ಯೇನ ರಹಿತಃ । ಅದ್ವಿತೀಯಃ । ಸ್ವತಂತ್ರ ಇತ್ಯರ್ಥಃ ।** ಇವನಿಗೆ ಸಮನಾದವನು ಯಾರೂ ಇಲ್ಲದ್ದರಿಂದ ಇವನು ಅದ್ವಿತೀಯನು ಅಥವಾ ಸ್ವತಂತ್ರನು.

**ಶತಮೂತಿಃ— ಬಹುವಿಧರಕ್ಷಣೋಪೇತಃ ।** ತನ್ನನ್ನು ಸ್ತೋತ್ರಮಾಡುವವರಿಗೆ ಅನೇಕ ವಿಧವಾದ ರಕ್ಷಣೆಗಳನ್ನು ನೀಡುವವನು. ಇಲ್ಲಿ ಶತಶಬ್ದಕ್ಕೆ ಅನೇಕವೆಂಬ ಅರ್ಥವನ್ನು ಹೇಳಬಹುದು.

**ಪ್ರತಿಮಾನಂ ಓಜಸಾ— ಸರ್ವೇಷಾಂ ಪ್ರಾಣಿನಾಂ ಯದೋಜೋ ಬಲಮಸ್ತಿ ತೇನ ಸರ್ವೇಣ ಪ್ರತಿಮಾನಂ ಪ್ರತಿನಿಧಿತ್ವೇನ ಮೀಯಮಾನಃ ।** ಸಮಸ್ತ ಪ್ರಾಣಿಗಳಲ್ಲಿಯೂ ಯಾವ ಯಾವ ಬಲ ಅಥವಾ ಶಕ್ತಿ

ಸಾಮರ್ಥ್ಯಗಳಿರುವವೋ ಅವೆಲ್ಲವೂ ಇಂದ್ರನಲ್ಲಿ ಒಟ್ಟುಗೂಡಿ ಇರುವವು. ಇಂದ್ರನ ಒಟ್ಟಿನ ಬಲವು ಸಮಸ್ತ ಪ್ರಾಣಿಗಳ ಒಟ್ಟು ಶಕ್ತಿಸಾಮರ್ಥ್ಯಗಳಿಗೆ ಸರಿಸಮಾನವೆಂದಭಿಪ್ರಾಯವು

**ಸಿಷಾಸವಃ**—ವನ ಷಣ ಸಂಭಕ್ತೌ । **ಧನಂ ಲಬ್ಧುಕಾಮಾಃ** । ಧನಾದಿಗಳನ್ನು ಅಪೇಕ್ಷಿಸುವ ಜನರು.

**ಜನಾ ವಿ ಹ್ವಯಂತೇ—ವಿವಿಧಮಾಹ್ವಯಂತಿ** । ನಾನಾವಿಧವಾಗಿ ಎಂದರೆ ಸ್ತೋತ್ರಾದಿಗಳಿಂದಲೂ, ಯಜ್ಞಕರ್ಮಾನುಷ್ಠಾನಗಳಿಂದಲೂ ಇಂದ್ರನನ್ನು ಆಹ್ವಾನಿಸುತ್ತಾರೆ. (ಕರೆಯುತ್ತಾರೆ) ಎಂದಭಿಪ್ರಾಯವು.

ವ್ಯಾಕರಣಪ್ರಕ್ರಿಯಾ

**ಗೋಜಿತಾ**—ಗಾ ಜಯತಃ ಇತಿ ಗೋಜಿತೌ. **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದ ರಿಂದ ವಿಭಕ್ತಿಗೆ ಆಕಾರಾದೇಶ.

**ಬಾಹೂ**—ಬಾಧತ ಇತಿ ಬಾಹುಃ **ಅರ್ಜಿದೃಶಿಕಮಿ**—(ಉ. ಸೂ. ೧-೨೭) ಎಂಬುದರಿಂದ ಬಾಧ ಧಾತುವಿಗೆ ಕು ಪ್ರತ್ಯಯ. ಧಕಾರಕ್ಕೆ ಹಕಾರಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತ. ದ್ವಿವಚನಾಂತರೂಪ.

**ಅಮಿತಕ್ರತುಃ**—ಅಮಿತಾಃ ಕ್ರತವಃ ಯಸ್ಯ ಸಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಸಿಮಃ**—ಷಿಞ್ ಬಂಧನೇ. ಧಾತು. ಇದಕ್ಕೆ ಔಣಾದಿಕವಾದ ಮಕ್‌ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಕರ್ಮನ್ ಕರ್ಮನ್—ನಿತ್ಯ ವೀಪ್ಸಯೋಃ**—(ಪಾ. ಸೂ. ೮-೧-೪) ಎಂಬುದರಿಂದ ದ್ವಿತ್ವ. ಪರಕ್ಕೆ ಆಮ್ರೇಡಿತಸಂಜ್ಞೆ ಇರುವಾಗ **ಅನುದಾತ್ತಂಚ**—(ಪಾ. ಸೂ. ೮-೧-೩) ಎಂಬುದರಿಂದ ಅದು ಅನುದಾತ್ತವಾಗುತ್ತದೆ. **ಸುಪಾಂ ಸುಲುಕ್**—ಸೂತ್ರದಿಂದ ಸಪ್ತಮಿಗೆ ಲುಕ್ ಬರುತ್ತದೆ.

**ಖಜಂಕರಃ**—ಖಜ ಮಂಥೇ ಧಾತು. **ನಂದಿಗ್ರಹಪಚಾದಿಭ್ಯೋ**—(ಪಾ. ಸೂ. ೩-೧-೧೩೪) ಸೂತ್ರ ದಿಂದ ಅಚ್ ಪ್ರತ್ಯಯ. ಖಜ ಎಂದು ರೂಪವಾಗುತ್ತದೆ. **ಕ್ಷೇಮಪ್ರಿಯಮದ್ರೇಣ್ ಚ**—(ಪಾ. ಸೂ. ೩-೨-೪೪) ಎಂಬ ಸೂತ್ರದಲ್ಲಿ ಚಕಾರವು ಅನುಕ್ತವಾದವುಗಳಿಗೆ ಸಮುಚ್ಚಾಯಕವಾದುದರಿಂದ ಖಜಶಬ್ದ ಉಪಪದವಾಗಿರು ವಾಗಲೂ ಕೃಞ್‌ಧಾತುವಿಗೆ ಖಚ್ ಪ್ರತ್ಯಯ ಬರುತ್ತದೆ. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ಖಿತ್ತಾದ ಪ್ರತ್ಯಯಾಂತವು ಪರದಲ್ಲಿರುವುದರಿಂದ **ಅರುರ್ದ್ವಿಷದಜಂತಸ್ಯಮುಮ್**—(ಪಾ. ಸೂ. ೬-೩-೬೭) ಎಂಬುದರಿಂದ ಪೂರ್ವಕ್ಕೆ ಮುಮಾಗಮ. ಖಜಂಕರ ಎಂದು ರೂಪವಾಗುತ್ತದೆ. **ಗತಿಕಾರಕೋಪಪದಾತ್‌ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತೆ.

ಅಕಲ್ಪಃ—ನ ವಿದ್ಯತೇ ಕಲ್ಪಃ ಯಸ್ಯ ಅಕಲ್ಪಃ **ನಞ್‌ಸುಭ್ಯಾಮ್**—(ಪಾ. ಸೂ. ೬-೨-೧೭೨)— ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಸಿಷಾಸವಃ**—ವನ ಷಣ ಸಂಭಕ್ತೌ ಧಾತು. **ಧಾತೋಃ ಕರ್ಮಣಃ ಸಮಾನ**—(ಪಾ. ಸೂ. ೩-೧-೭) ಎಂಬುದರಿಂದ ಸನ್. **ಸನೀವಂತರ್ಧ**—(ಪಾ. ಸೂ. ೭-೨-೪೯) ಎಂಬುದರಿಂದ ಸನಿಗೆ ಇಡಾಗಮ ಬರುವುದಿಲ್ಲ. **ಜನಸನಖನಾಂ ಸನ್‌ಝಲೋಃ**—(ಪಾ. ಸೂ. ೬-೪-೪೨) ಎಂಬುದರಿಂದ ಸನ್ ಪರವಾದಾಗ ಧಾತುವಿಗೆ ಆತ್ವ. **ಸನ್ಯಙೋಃ**—ಸೂತ್ರದಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ **ಹ್ರಸ್ವಃ**—ಸೂತ್ರದಿಂದ ಹ್ರಸ್ವ ಬಂದಾಗ **ಸನ್ಯತಃ**—(ಪಾ. ಸೂ. ೭-೪-೭೯) ಎಂಬುದರಿಂದ ಇತ್ವ. **ಆದೇಶಪ್ರತ್ಯಯಯೋಃ**—ಸೂತ್ರದಿಂದ ಧಾತು ಸಕಾರಕ್ಕೆ ಷತ್ವ. ಸಿಷಾಸ ಎಂಬ ಸನಂತವು **ಸನಾದ್ಯಂತಾ ಧಾತವಃ**—ಸೂತ್ರದಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಇದರ ಮೇಲೆ **ಸನಾಶಂಸಭಿಕ್ಷ ಉಃ**—(ಪಾ. ಸೂ. ೩-೨-೧೬೮) ಎಂಬುದರಿಂದ ಉ ಪ್ರತ್ಯಯ. **ಅತೋ ಲೋಪಃ**—ಸೂತ್ರದಿಂದ ಸನಿನ ಅಕಾರಕ್ಕೆ ಲೋಪ. ಉ ಪ್ರತ್ಯಯ ಸತಿಶಿಷ್ಟವಾಗುವುದರಿಂದ ಅದರ ಸ್ವರವೇ ಉಳಿಯುತ್ತದೆ. ಸಿಷಾಸು ಎಂದು ರೂಪವಾಗುತ್ತದೆ. ಪ್ರಥಮಾ ಬಹುವಚನಾಂತರೂಪ.

**ಹ್ವಯಂತೇ**— ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಲಟ್ ಪ್ರಥಮಪುರುಷಬಹುವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೬ ॥



ಸಂಹಿತಾಪಾಠಃ

ಉತ್ತೇ ಶತಾನ್ಮಘವನ್ನುಚ್ಚ ಭೂಯಸ ಉತ್ಸಹಸ್ರಾದ್ರಿರಿಚೇ
ಕೃಷ್ಟಿಷು ಶ್ರವಃ ।
ಅಮಾತ್ರಂ ತ್ವಾ ಧಿಷಣಾ ತಿತ್ವಿಷೇ ಮಹ್ಯಧಾ ವೃತ್ರಾಣಿ ಜಿಘ್ನ-
ಸೇ ಪುರಂದರ ॥ ೭ ॥

ಪದಪಾಠಃ

ಉತ್ । ತೇ । ಶತಾತ್ । ಮಘಽವನ್ । ಉತ್ । ಚ । ಭೂಯಸಃ । ಉತ್ । ಸಹಸ್ರಾತ್ । ರಿರಿಚೇ । ಕೃಷ್ಟಿಷು । ಶ್ರವಃ ।

ಅಮಾತ್ರಂ । ತ್ವಾ । ಧಿಷಣಾ । ತಿತ್ವಿಷೇ । ಮಹೀ । ಅಧ । ವೃತ್ರಾಣಿ । ಜಿ-
ಘ್ನಸೇ । ಪುರಂऽದರ ॥ ೬ ॥

ಸಾಯಣಭಾಷ್ಯಂ

ಹೇ ಮಘವನ್ ಧನವನ್ನಿಂದ್ರ ಕೃಷ್ಟಿಷು ಸ್ತೋತೃಷು ಮನುಷ್ಯೇಷು ತ್ವಯಾ ದೀಯಮಾನಂ ಶ್ರವೋ ಯದನ್ನಮಸ್ತಿ ತಚ್ಛತಾತ್ ಶತಸಂಖ್ಯಾಕಾದ್ಧನಾದುದ್ರಿರಿಚೇ । ಉದ್ರಿಕ್ತಮಧಿಕಂ ಭವತಿ । ಅಪಿ ಚ ಭೂಯಸಃ ಶತಸಂಖ್ಯಾಕಾದಪಿ ಬಹುತರಾದ್ಧನಾದುದ್ರಿರಿಚೇ । ಅಧಿಕಂ ಭವತಿ । ಕಿಂ ಬಹುನಾ । ಸಹಸ್ರಾತ್ಸಹಸ್ರಸಂಖ್ಯಾಕಾದಪ್ಯುದ್ರಿರಿಚೇ । ತ್ವಯಾ ದತ್ತಂ ತದನ್ನಮಕ್ಷಯಮಿತ್ಯರ್ಥಃ । ಅಪಿ ಚಾ-ಮಾತ್ರಂ ಮಾತ್ರಯೇಯತ್ತಯಾ ರಹಿತಂ ಪರಿಗಣಿತುಮಶಕ್ಯೈಃ ಸರ್ವೈರ್ಗುಣೈರಧಿಕಂ ತ್ವಾಂ ಮಹೀ ಮಹತೀ ಧಿಷಣಾಸ್ಮದೀಯಾ ಸ್ತುತಿಲಕ್ಷಣಾ ವಾಕ್ ತಿತ್ವಿಷೇ । ದೀಪಯತಿ । ತ್ವತ್ಸಂಬಂಧಿನೋ ಗುಣಾ-ನ್ಪ್ರಕಾಶಯತಿ । ಹೇ ಪುರಂದರ ಶತ್ರೂಣಾಂ ಪುರಾಂ ದಾರಯಿತರಿಂದ್ರ ಅಧ ಸ್ತುತ್ಯನಂತರಂ ವೃತ್ರಾ-ಣ್ಯಾವರಕಾನ್ ಶತ್ರೂನ್ ಜಿಘ್ನಸೇ । ಹಂಸಿ ವಿನಾಶಯಸಿ ॥ ರಿರಿಚೇ । ರಿಚಿರ್ ವಿರೇಚನೇ । ಕರ್ಮಣಿ ಲಿಟ್ । ತಿತ್ವಿಷೇ । ತ್ವಿಷ ದೀಪ್ತೌ । ಜಿಘ್ನಸೇ । ಹಂತೇರ್ಲೇಟಿ ವ್ಯತ್ಯಯೇನಾತ್ಮನೇಪದಂ । ಲೇಟೋಽ-ಡಾಟಾವಿತ್ಯಡಾಗಮಃ । ಬಹುಲಂ ಛಂದಸೀತಿ ಶಪಃ ಶ್ಲುಃ । ಗಮಹನೇತ್ಯಾದಿನೋಪಧಾಲೋಪಃ । ಸ್ಥಾನಿವದ್ಭಾವಾದ್ದ್ವಿರ್ವಚನಾದಿ । ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ಪುರಂದರ । ಪೂಃಸರ್ವಯೋ-ರ್ದಾರಿಸಹೋಃ । ಪಾ. ೩-೨-೪೧ । ಇತಿ ಖಚ್ । ಖಚಿ ಹ್ರಸ್ವಃ । ಪಾ. ೬-೪-೯೪ । ಇತಿ ಹ್ರಸ್ವತ್ವಂ । ವಾಚಂಯಮಪುರಂದರೌ ಚ । ಪಾ. ೬-೩-೬೯ । ಇತಿ ನಿಪಾತನಾದಮ್ ॥

ಪ್ರತಿಪದಾರ್ಥ

ಮಘವನ್— ಧನವಂತನಾದ ಎಲೈ ಇಂದ್ರನೇ । ಕೃಷ್ಟಿಷು—(ಭಕ್ತರಾದ) ಮಾನವರಿಗೆ । ತೇ—ನಿನ್ನ (ನೀನು ಅನುಗ್ರಹಿಸಿಕೊಡುವ) । ಶ್ರವಃ—ಅನ್ನವು । ಶತಸಂಖ್ಯಾಕಾದ್ಧನಾತ್—ನೂರುಮಂದಿಗೆ ಬೇಕಾದುವ ಕ್ಕಿಂತಲೂ । ಉತ್ ರಿರಿಚೇ— ಅಧಿಕವಾಗಿರುತ್ತದೆ । ಭೂಯಸಃ— ಅದಕ್ಕೂ ಮೀರಿದ ಸಂಖ್ಯೆಗಿಂತಲೂ । ಉತ್—ಅಧಿಕವಾಗಿರುತ್ತದೆ । ಚ—ಅಲ್ಲದೇ । ಸಹಸ್ರಾತ್—ಸಾವಿರ ಸಂಖ್ಯೆಗೆ ಬೇಕಾದುವಕ್ಕಿಂತಲೂ । ಉತ್—ಅಧಿಕವಾಗಿರುತ್ತದೆ । ಅಮಾತ್ರಂ—(ಮಾನವರ) ಅಳತೆಗೆ ಮೀರಿದ । ತ್ವಾ—ನಿನ್ನನ್ನು । ಮಹೀ—ಮಹತ್ತಾದ । ಧಿಷಣಾ—( ನಮ್ಮ ) ಸ್ತುತಿರೂಪವಾದ ವಾಕ್ಕು । ತಿತ್ವಿಷೇ— ಪ್ರಕಾಶಪಡಿಸುತ್ತದೆ । ಪುರಂದರ—ಶತ್ರುಗಳ ಪಟ್ಟಣಗಳನ್ನು ನಾಶಮಾಡುವ ಇಂದ್ರನೇ । ಅಧ—( ನಮ್ಮ ) ಸ್ತೋತ್ರಾನಂತರ । ವೃತ್ರಾಣಿ—ಆವರಿಸುವ ಶತ್ರುಗಳನ್ನು । ಜಿಘ್ನಸೇ—ನಾಶಮಾಡುತ್ತೀಯೆ ॥

ಭಾವಾರ್ಥ

ಎಲೈ ಧನವಂತನಾದ ಇಂದ್ರನೇ, ನಿನ್ನ ಭಕ್ತರಾದ ಮಾನವರಿಗೆ ನೀನು ಅನುಗ್ರಹಿಸಿ ಕೊಡುವ ಅನ್ನವು ನೂರುಮಂದಿಗೆ ಬೇಕಾದುವಕ್ಕಿಂತಲೂ ಅಧಿಕವಾಗಿರುತ್ತದೆ. ಅದಕ್ಕೆ ಮೀರಿದ ಸಂಖ್ಯೆಗೆ, ಅಲ್ಲದೇ ಸಾವಿರ ಸಂಖ್ಯೆಗೆ

ಸಾಕಾಗುವುದಕ್ಕಿಂತಲೂ ಅಧಿಕವಾಗಿರುತ್ತದೆ ಮಾನವರ ಅಳತೆಗೆ ಮೀರಿದ ನಿನ್ನನ್ನು ನಮ್ಮ ಮಹತ್ತಾದ ಸ್ತೋತ್ರವು ಪ್ರಕಾಶಪಡಿಸಿ ಬೆಳಗಿಸುತ್ತದೆ. ಶತ್ರುಪಟ್ಟಣಗಳನ್ನು ಧ್ವಂಸಮಾಡುವ ನೀನು ನಮ್ಮ ಸ್ತೋತ್ರವಾದನಂತರ ಅದರ ಉತ್ತೇಜನದಿಂದ ನಮ್ಮ ಶತ್ರುಗಳನ್ನೆಲ್ಲಾ ನಾಶಮಾಡುತ್ತೀಯೆ.

English Translation

The food, Maghavan, (which is to be given by you) to men. may be more than sufficient for a hundred, or for more, even, than a thounsand: great praise has glorified you, who are without limit, whereupon you destroy your enemies.

॥ ವಿಶೇಷವಿಷಯಗಳು ॥

**ಶ್ರವಃ**—ಶವಃ ಎಂಬ ಶಬ್ದವು ಅಂಧಃ ವಾಜಃ ಮೊದಲಾದ ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ ಪಠಿತವಾಗಿರುವುದರಿಂದ ಶ್ರವಃ ಎಂದರೆ ಅನ್ನಾದ್ಯಾಹಾರವು ಎಂದರ್ಥವು (ನಿ. ೩-೯).

**ಕೃಷ್ಟಿಷು (ತ್ವಯಾ ದತ್ತಂ ಯಚ್ಛ್ರವಸ್ತತ್) ಭೂಯಸಃ ಸಹಸ್ರಾತ್ ಉತ್ ರಿರಿಚೇ**— ಇಂದ್ರನು ಮನುಷ್ಯರಿಗೆ ಕೊಡುವ ಅನ್ನವು (ಆಹಾರವು) ನೂರು ಪಾಲಿನಷ್ಟು. ಇನ್ನೂ ಅಧಿಕವಾಗಿ, ಹೆಚ್ಚೇನು ಸಾವಿರ ಪಾಲು ಅಧಿಕವಾಗಿ ಅಭಿವೃದ್ಧಿಸ್ನೈದುವುದು ಎಂದರೆ ಅಕ್ಷಯವಾಗುವುದು ಬೇಗನೆ ತೀರಿಹೋಗುವುದಿಲ್ಲ. ಆದುದರಿಂದಲೇ.

**ಅಮಾತ್ರಂ— ಮಾತ್ರಯೇಯತ್ತಯಾ ರಹಿತಂ ಪರಿಗಣಿತುಮಶಕ್ಯೈಃ ಸರ್ವೈರ್ಗುಣೈರಧಿಕಂ ।** ಇಂದ್ರನು ಇಷ್ಟೆಂದು ನಿಷ್ಕರ್ಷಿಸಿ ಹೇಳಲು ಶಕ್ಯವಿಲ್ಲದಷ್ಟು ನಾನಾವಿಧಗುಣಗಳಿಂದ ಯುಕ್ತನಾದವನು, ಎಲ್ಲರಿಗಿಂತಲೂ ಅಧಿಕನಾದವನು. ಇಂತಹ ಇಂದ್ರನಾದ ನಿನ್ನನ್ನು,

**ಮಹೀ ಧಿಷಣಾ ತಿತ್ವಿಷೇ**—ನಾವು ಮಾಡುವ ದೊಡ್ಡದಾದ ಅಥವಾ ವಿಸ್ತಾರವಾದ ಈ ಸ್ತೋತ್ರರೂಪವಾದ ವಾಕ್ಯವು ನಿನ್ನ ಅಧಿಕಗುಣಗಳನ್ನು ಪ್ರಕಾಶಗೊಳಿಸುವುದು. ಎಂದರೆ ನಾವು ನಿನ್ನ ಶ್ರೇಷ್ಠವಾದ ಗುಣಗಳನ್ನು ಬಹಳವಾಗಿ ವರ್ಣಿಸಿ ಪ್ರಶಂಸೆಮಾಡುವೆವು ಎಂದಭಿಪ್ರಾಯವು.

**ಅಧ**—ಛಂದಸ್ಸಿನ ಅನುಕೂಲಕ್ಕಾಗಿ ಈ ಶಬ್ದದ ಅಂತ್ಯಾಕ್ಷರವು ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು. ಅಧ ಎಂದರೆ ಅನಂತರ

**ಅಧ ವೃತ್ರಾಣಿ ಜಿಘ್ನಸೇ ಪುರಂದರ**—ನಾವು ಸ್ತೋತ್ರಮಾಡಿದನಂತರ ನಮ್ಮ ಶತ್ರುಗಳನ್ನು ಸಂಹಾರಮಾಡು ಎಂದು ಪ್ರಾರ್ಥನೆಯು.

**ಪುರಂದರ— ಶತ್ರೂಣಾಂ ಪುರಾಂ ದಾರಯಿತರಿಂದ್ರ ।** ಶತ್ರುಗಳ ಪಟ್ಟಣಗಳನ್ನು ಧ್ವಂಸಗೊಳಿಸುವವನು. ಇಂದ್ರನು ಶಂಬರಾಸುರ ಮೊದಲಾದ ದಸ್ಯುಗಳ ಪಟ್ಟಣಗಳನ್ನು ನಾಶಮಾಡಿದ ವಿಷಯವಾಗಿ—

ಅಭಿ ಸಿಧ್ಮೋ ಅಜಿಗಾದಸ್ಯ ಶತ್ರೂನ್ವಿ ತಿಗ್ಮೇನ ವೃಷಭೇಣಾ ಪುರೋಽಭೇತ್ ।
(ಋ. ಸಂ. ೧-೩೩-೧೩)

ಉಗ್ರೋ ರಯಿಂ ನಿರಪಃ ಸ್ರೋತಸಾಸೃಜದ್ವಿ ಶುಷ್ಣಸ್ಯ ದೃಂಹಿತಾ ಐರಯತ್ಪುರಃ ।
(ಋ. ಸಂ. ೧-೫೧-೧೧)

ಭಿನತ್ಪುರೋ ನವತಿಮಿಂದ್ರ ಪೂರವೇ ದಿವೋದಾಸಾಯ ಮಹಿ ದಾಶುಷೇ ನೃತೋ ವಜ್ರೇಣ ದಾಶುಷೇ ನೃತೋ ।
(ಋ. ಸಂ. ೧-೧೩೦-೭)

ದಿವೋದಾಸಾಯ ನವತಿಂ ಚ ನವೇಂದ್ರಃ ಪುರೋ ವ್ಯೈರಯಚ್ಛಂಬರಸ್ಯ ।
(ಋ. ಸಂ. ೨-೧೯-೬)

ಪುರಾಣಿ ಯಚ್ಚ್ಯೌತ್ನಾ ಶಂಬರಸ್ಯ ವಿ ನವತಿಂ ನವ ಚ ದೇಹ್ಯೋ೩ ಹನ್ ।
(ಋ. ಸಂ ೬-೪೭-೨)

ಇತ್ಯಾದಿ ಅನೇಕ ಋಕ್ಕುಗಳಲ್ಲಿ ವರ್ಣನೆ ಇರುವುದು. ಪುರಂದರ ಶಬ್ದವು ಬಹಳವಾಗಿ ಇಂದ್ರನಿಗೆ ವಿಶೇಷಣವಾಗಿ ಉಪಯೋಗಿಸಲ್ಪಡುವುದು—

ಅಲರ್ಷಿ ಯುಧ್ಮ ಖಜಕೃತ್ಪುರಂದರ ಪ್ರ ಗಾಯತ್ರಾ ಅಗಾಸಿಷುಃ ।
(ಋ. ಸಂ. ೮-೧-೭)

ಸ ವೃತ್ರಹೇಂದ್ರಃ ಕೃಷ್ಣಯೋನೀಃ ಪುರಂದರೋ ದಾಸೀರೈರಯದ್ವಿ ।
(ಋ. ಸಂ. ೨-೨೦-೭)

ಪುರಂದರೋ ವೃತ್ರಹಾ ಧೃಷ್ಣುಷೇಣಃ ಸಂಗೃಭ್ಯಾ ನ ಆ ಭರಾ ಭೂರಿ ಪಶ್ವಃ ।
(ಋ. ಸಂ. ೩-೫೪-೧೫)

ಈ ಋಕ್ಕುಗಳಲ್ಲಿಯೂ, ಋ. ಸಂ. ೫-೩೦-೧೧ ; ೮-೧-೮ ; ೮-೬೧-೧೦ ; ೬-೧೬-೧೪ ; ೮-೬೧-೮ ; ೭-೬-೨ ಇತ್ಯಾದಿ ಋಕ್ಕುಗಳಲ್ಲಿಯೂ ಇರುವ ಪುರಂದರಶಬ್ದವು ಇಂದ್ರಪರವಾಗಿಯೇ ಇರುವುದು.

ವ್ಯಾಕರಣಪ್ರಕ್ರಿಯಾ

ರಿರಿಚೇ—ರಿಚಿರ್ ವಿರೇಚನೇ ಧಾತು. ಕರ್ಮಣಿಯಲ್ಲಿ ಲಿಟ್. ಭಾವಕರ್ಮಣೋಃ—(ಪಾ. ಸೂ. ೧-೩-೧೩) ಎಂಬುದರಿಂದ ಆತ್ಮನೇಪದ ಪ್ರತ್ಯಯ ಬರುತ್ತದೆ. ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ ಬಂದಾಗ ಲಿಟಸ್ತಝಯೋರೇಶಿರೇಚ್—(ಪಾ. ಸೂ. ೩-೪-೮೧) ಎಂಬುದರಿಂದ ಏಶಾದೇಶ. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್ ಶೇಷ ರಿರಿಚೇ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಕೃಷ್ಟಿಷು**—ಕೃಷ ವಿಲೇಖನೇ ಧಾತು. **ಕ್ತಿಚ್‌ಕ್ತೌ ಚ ಸಂಜ್ಞಾಯಾಮ್**—(ಪಾ. ಸೂ. ೩-೩-೧೭೪) ಎಂಬುದರಿಂದ ಕ್ತಿಚ್ ಪ್ರತ್ಯಯ. ಷ್ಟುತ್ವದಿಂದ ಪ್ರತ್ಯಯಕ್ಕೆ ಟಕಾರಾದೇಶ. ಪ್ರತ್ಯಯಸ್ವರ ಬರುತ್ತದೆ. ಸಪ್ತಮೀ ಬಹುವಚನಾಂತರೂಪ.

**ಅಮಾತ್ರಮ್**—ನ ವಿದ್ಯತೇ ಮಾತ್ರಾ ಯಸ್ಯ ಸಃ ಅಮಾತ್ರಃ ತಮ್. **ನಞ್‌ಸುಭ್ಯಾಮ್**—(ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ತಿತ್ವಿಷೇ**—ತ್ವಿಷ ದೀಪ್ತೌ ಧಾತು. ಲಿಟ್ ಪ್ರಥಮಪುರುಷ ಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

**ಮಹೀ**—ಮಹತೀ ಎಂದಿರುವಾಗ ಛಂದಸ್ಸಿನಲ್ಲಿ ವ್ಯತ್ಯಯದಿಂದ ತಕಾರಲೋಪ ಬರುತ್ತದೆ.

**ಅಧ**—ವರ್ಣವ್ಯತ್ಯಯದಿಂದ ಅಥ ಎಂದಿರುವಾಗ ಥಕಾರಕ್ಕೆ ಧಕಾರಾದೇಶ.

**ಜಿಘ್ನಸೇ**—ಹನ ಹಿಂಸಾಗತ್ಯೋಃ ಧಾತು. ಲೇಟ್ ಮಧ್ಯಮಪುರುಷ ಏಕವಚನದಲ್ಲಿ **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇ ಪದ ಪ್ರತ್ಯಯ ಬಂದಾಗ ಅದಕ್ಕೆ ಸೇ ಆದೇಶ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್ ಶೇಷ. **ಕುಹೋಶ್ಚುಃ** ಎಂಬುದರಿಂದ ಚುತ್ವ **ಗಮಹನ**—(ಪಾ. ಸೂ. ೬-೪-೯೮) ಎಂಬುದರಿಂದ ಉಪಧಾಲೋಪ. **ಅಭ್ಯಾಸಾಚ** (ಪಾ. ಸೂ. ೭-೩-೫೫) ಎಂಬುದರಿಂದ ಅಭ್ಯಾಸದ ಅಕಾರಕ್ಕೆ ಇತ್ವ. ಜಿಘ್ನಸೇ ಎಂದು ರೂಪವಾಗುತ್ತದ್ದೆ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಪುರಂದರ**—ದೄ ವಿದಾರಣೇ ಧಾತು. **ಪೂಃ ಸರ್ವಯೋರ್ದಾರಿಸಹೋಃ** (ಪಾ. ಸೂ. ೩-೨-೪೧) ಎಂಬುದರಿಂದ ಇದಕ್ಕೆ ಖಚ್ ಪ್ರತ್ಯಯ. ದಾರಿ ಎಂದು ಣಿಜಂತದಮೇಲೆ ವಿಧಾನಮಾಡಿರುವುದರಿಂದ **ಖಚಿ ಹ್ರಸ್ವಃ** (ಪಾ. ಸೂ. ೬-೪-೯೪) ಎಂಬದರಿಂದ ಉಪಧಾಹ್ರಸ್ವ. **ವಾಚಂಯಮಪುರಂದರೌ ಚ** (ಪಾ. ಸೂ. ೬-೩-೬೯) ಎಂಬುದರಿಂದ ನಿಘಾತಮಾಡಿರುವುದರಿಂದ ಅಮಾಗಮ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ ॥ ೭ ॥

———:o:———

ಸಂಹಿತಾಪಾಠಃ

ತ್ರಿವಿಷ್ಟಿಧಾತು ಪ್ರತಿಮಾನಮೋಜಸಸ್ತಿಸ್ರೋ ಭೂಮೀರ್ನೃಪತೇ
ತ್ರೀಣಿ ರೋಚನಾ ।
ಅತೀದಂ ವಿಶ್ವಂ ಭುವನಂ ವವಕ್ಷಿಥಾಶತ್ರುರಿಂದ್ರ ಜನುಷಾ ಸ-
ನಾದಸಿ ॥ ೮ ॥

ಪದಪಾಠಃ

ತ್ರಿವಿಷ್ಟಿಽಧಾತು । ಪ್ರತಿಽಮಾನಂ । ಓಜಸಃ । ತಿಸ್ರಃ । ಭೂಮೀಃ । ನೃಽಪತೇ ।
ತ್ರೀಣಿ । ರೋಚನಾ ।
ಅತಿ । ಇದಂ । ವಿಶ್ವಂ । ಭುವನಂ । ವವಕ್ಷಿಥ । ಅಶತ್ರುಃ । ಇಂದ್ರ । ಜನುಷಾ ।
ಸನಾತ್ । ಅಸಿ ॥ ೮ ॥

ಸಾಯಣಭಾಷ್ಯಂ

ಹೇ ನೃಪತೇ ನೃಣಾಂ ಪಾಲಯಿತರಿಂದ್ರ ತ್ವಮೋಜಸಃ ಸರ್ವೇಷಾಂ ಪ್ರಾಣಿನಾಂ ಬಲಸ್ಯ ಪ್ರತಿಮಾನಂ ಪ್ರತಿನಿಧಿರಸಿ । ಕೀದೃಶಂ ಪ್ರತಿಮಾನಂ । ತ್ರಿವಿಷ್ಟಿಧಾತು । ಧಾತುಶಬ್ದೋ ರಜ್ಜುಭಾಗವಚನಃ । ಯಥಾ ತ್ರಿಧಾತು ಪಂಚಧಾತು ವಾ ಶುಲ್ಬಂ ಕರೋತೀತಿ । ಯಥಾ ತ್ರಿವಿಷ್ಟಿಸ್ತ್ರಿಗುಣಿತಾ ರಜ್ಜುರ್ದ್ರಾಘೀಯಸೀ ಏವಮಿಂದ್ರೋಽಪಿ ಪೃಥತರ ಇತ್ಯರ್ಥಃ । ಕಿಂಚ ತ್ವಂ ತಿಸ್ರೋ ಭೂಮೀಸ್ತ್ರೀನ್ ಲೋಕಾನ್ ತ್ರೀಣಿ ರೋಚನಾ ತ್ರೀಣಿ ತೇಜಾಂಸಿ ದಿವ್ಯಾದಿತ್ಯಾಖ್ಯಮಂತರಿಕ್ಷೇ ವೈದ್ಯುತರೂಪಮಗ್ನಿಂ ಪೃಥಿವ್ಯಾಮಾಹವನೀಯಾದಿರೂಪೇಣ ವರ್ತಮಾನಂ ಪಾರ್ಥಿವಮಗ್ನಿಂ ಏವಂ ತ್ರೀನ್ ಲೋಕಾನ್ ತ್ರೀಣಿ ತೇಜಾಂಸಿ ಚಾತಿ ವವಕ್ಷಿಥ । ಅತಿಶಯೇನ ವೋಢುಮಿಚ್ಛಸಿ । ಅಪಿ ಚೇದಂ ವಿಶ್ವಂ ಸರ್ವಂ ಭುವನಂ ಭೂತಜಾತಂ ಚಾತಿವೋಢುಮಿಚ್ಛಸಿ । ಸರ್ವಸ್ಯ ಜಗತಃ ಪಾಲನೇನ ತ್ವಮೇವ ಸರ್ವೇಷಾಂ ನಿರ್ವಾಹಕೋ ಭವಸೀತ್ಯರ್ಥಃ । ಯಸ್ಮಾದ್ಧೇ ಇಂದ್ರ ತ್ವಂ ಸನಾಚ್ಚಿರಕಾಲಾದಾರಭ್ಯ ಜನುಷಾ ಜನ್ಮನಾ ಜನ್ಮಪ್ರಭೃತ್ಯಶತ್ರುಃ ಸಪತ್ನರಹಿತೋಽಸಿ ॥ ತ್ರಿವಿಷ್ಟಿಧಾತು । ತ್ರಿಧಾ ತ್ರಿಪ್ರಕಾರೇಣ ವಿಷ್ಟ್ಯ

ಪ್ರವೇಶನೇನ ವಿಧೀಯತೇ ಕ್ರಿಯತ ಇತಿ ತ್ರಿವಿಷ್ಟಿಧಾತುಸ್ತ್ರಿಗುಣಿತಾ ರಜ್ಜುಃ । ವಿಶೇರ್ಭಾವೇ ಕ್ತಿನ್ । ಧಾ ಇಃ ಸಿತನಿಗಮಿಮಸೀತ್ಯಾದಿನಾ । ಉ. ೧-೭೦ । ಕರ್ಮಣಿ ತುನ್ಪ್ರತ್ಯಯಃ । ಕೃದುತ್ತರಪದಪ್ರಕೃತಿಸ್ವರತ್ವಂ । ಅತ್ರ ದೃಢರಜ್ಜುವಾಚಕಃ ಶಬ್ದಸ್ತದ್ಗತಂ ದಾರ್ಢ್ಯಂ ಲಕ್ಷಯಿತ್ವಾ ತದ್ವತಿ ಪ್ರತಿಮಾನೇ ವರ್ತತೇ। ಯಥಾ ಮಾಣವಕೇಽಗ್ನಿಶಬ್ದಃ । ತಿಸ್ರಃ । ಶಸಿ ತ್ರಿಚತುರೋಃ ಸ್ತ್ರಿಯಾಮಿತಿ ತಿಸ್ರಾದೇಶೋಽಂತೋದಾತ್ತಃ। ಅಚಿ ರ ಋತ ಇತಿ ರೇಫಾದೇಶ ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತೇರುದಾತ್ತತ್ವಂ । ವವಕ್ಷಿಥ । ವಹ ಪ್ರಾಪಣ ಇತ್ಯಸ್ಮಾದಿಚ್ಛಾಸನಿ ಢತ್ವಕತ್ವಷತ್ವಾನಿ । ಸನ್ಯತ ಇತೀತ್ವಾಭಾವಶ್ಛಾಂದಸಃ ಛಾಂದಸೇ ಲಿಟ್ಯಮಂತ್ರ ಇತಿ ನಿಷೇಧಾದಾಮ್ಪ್ರತ್ಯಯಾಭಾವಃ । ಜನುಷಾ । ಜನೇರುಸಿಃ ॥

ಪ್ರತಿಪದಾರ್ಥ

**ನೃಪತೇ**—ಮಾನವರ ಪಾಲಕನಾದ ಇಂದ್ರನೇ । (**ತ್ವಂ**--ನೀನು) । **ತ್ರಿವಿಷ್ಟಿಧಾತು**—ಮೂರು ಪದಿಗಳಿಂದ ಹೊಸೆದ ಹಗ್ಗವು ಬಲವಾಗಿರುವಂತೆ । **ಓಜಸಃ**—(ಸಕಲ ಮಾನವರ) ಬಲಕ್ಕೂ ಕೂಡ । **ಪ್ರತಿಮಾನಂ**-ಮಾದರಿಯಾದ ಪ್ರತಿನಿಧಿಯಾಗಿದ್ದೀಯೆ. (ಅಲ್ಲದೆ) । **ತಿಸ್ರಃ ಭೂಮೀಃ**--ಮೂರು ಲೋಕಗಳನ್ನೂ । **ತ್ರೀಣಿ ರೋಚನಾ**--(ಆದಿತ್ಯ, ವಿದ್ಯುತ್, ಮತ್ತು ಆಹವನೀಯಾದಿ ರೂಪಗಳಲ್ಲಿರುವ ಅಗ್ನಿ ಈ ಮೂರು ತೇಜಸ್ಸುಗಳನ್ನೂ । **ಅತಿವವಕ್ಷಿಥ**--ಅತಿಶಯವಾಗಿ ಧಾರಣೆಮಾಡಲಿಚ್ಛಿಸುತ್ತೀಯೆ. (ಸಮರ್ಥನಾಗಿದ್ದೀಯೆ) । **ಇದಂ ವಿಶ್ವಂ ಭುವನಂ**--ಈ ಸಕಲ ಭೂತಜಾತಗಳನ್ನೂ (ಧಾರಣೆ ಮಾಡಲು ಸಮರ್ಥನಾಗಿದ್ದೀಯೆ) । **ಇಂದ್ರ**--ಎಲೈ ಇಂದ್ರನೇ । (**ತ್ವಂ**--ನೀನು) । **ಜನುಷಾ ಸನಾತ್**-ಹುಟ್ಟಿದ ಮೊದಲುಗೊಂಡು ಯಾವಾಗಲೂ (ಅತಿ ದೀರ್ಘಕಾಲದಿಂದಲೂ) । [**ಸನಾತ್ ಜನುಷಾ**--ಅತಿ ದೀರ್ಘಕಾಲವಾದ (ನೀನು) ಹುಟ್ಟಿದ ಮೊದಲುಗೊಂಡು] । **ಅಶತ್ರುಃ**--ಶತ್ರುರಹಿತನಾಗಿ । **ಅಸಿ**—ಇದ್ದೀಯೆ. ।

ಭಾವಾರ್ಥ

ಮಾನವರ ಪಾಲಕನಾದ ಎಲೈ ಇಂದ್ರನೇ, ಮೂರು ಪದಿಗಳಿಂದ ಹೊಸೆದ ಹಗ್ಗವು ಬಲವಾಗಿರುವಂತೆ ನೀನು ಸಕಲ ಮಾನವರ ಬಲಕ್ಕೂ ಮಾದರಿಯಾದ ಪ್ರತಿನಿಧಿಯಾಗಿದ್ದೀಯೆ. ಅಲ್ಲದೇ ನೀನು ಮೂರು ಲೋಕಗಳನ್ನೂ ಮೂರು ತೇಜಸ್ಸುಗಳನ್ನೂ ಅತಿಶಯವಾಗಿ ಧಾರಣೆಮಾಡಲಿಚ್ಛಿಸುತ್ತೀಯೆ. ಮತ್ತು ಸಮರ್ಥನಾಗಿದ್ದೀಯೆ. ಈ ಸಕಲ ಭೂತಜಾತಗಳನ್ನೂ ಸಹ ಧರಿಸಲು ಶಕ್ತನಾಗಿದ್ದೀಯೆ. ಎಲೈ ಇಂದ್ರನೇ, ನೀನು ಹುಟ್ಟಿದ ಮೊದಲುಗೊಂಡು ಅತಿ ದೀರ್ಘಕಾಲದಿಂದಲೂ ನೀನು ನಿನ್ನನ್ನು ಸೋಲಿಸುವ ಶತ್ರುರಹಿತನಾಗಿದ್ದೀಯೆ.

## English Translation

Strong as a thrice-twisted rope, you are the type of strength : protector of men, that are more than able to sustain the three spheres, the three luminaries, and all this world of beings, Indra, who have from birth ever been without a rival.

ವಿಶೇಷವಿಷಯಗಳು

ಇದಮುಕ್ತಂ ಭವತಿ— ಸಕಲಲೋಕೇಷು ಏತಸ್ಮಿಂಶ್ಚ ಭುವನೇ ಯತ್ಸರ್ವೇಷಾಂ ವಸ್ತೂನಾಂ ಬಲಮಸ್ತಿ ತಸ್ಯ ತ್ರಿಗುಣಂ ಬಲಂ ತ್ವಯಿ ಭವತೀತಿ ಭಾವಃ। ಇಮೇ ಚ ಯೇ ಲೋಕಾಸ್ತೇಭ್ಯಃ ಸರ್ವೇಭ್ಯೋಽಪಿ ತ್ವಂ ಮಹೀಯಾನ್ ಭವಸಿ। ಅತಃ ಕಾರಣಾನ್ನಕೋಽಪಿ ತವ ಶತ್ರುಃ ಕ್ವಾಪಿ ಭವತೀತಿ ಚ॥ ಎಂದರೆ ಸಕಲ ಲೋಕಗಳಲ್ಲಿಯೂ ಈ ಲೋಕದಲ್ಲಿಯೂ ಸಹ ಇರುವ ಸಮಸ್ತ ವಸ್ತುಗಳಲ್ಲಿಯೂ, ಪ್ರಾಣಿಗಳಲ್ಲಿಯೂ ಜನರಲ್ಲಿಯೂ ಎಷ್ಟೆಷ್ಟು ಶಕ್ತಿಸಾಮರ್ಥ್ಯಗಳಿರುವವವೋ ಅದರ ಮೂರರಷ್ಟು ಇಂದ್ರನಾದ ನಿನ್ನಲ್ಲಿ ಇರುವುದು ಈ ಸಮಸ್ತ ಲೋಕಗಳಿಗಿಂತಲೂ ನೀನೇ ದೊಡ್ಡವನು. ಆದುದರಿಂದ ನಿನಗೆ ಶತ್ರುವಾದವನು ಯಾವಾಗಲೂ ಎಲ್ಲಿಯೂ ಇಲ್ಲವೆಂದಭಿಪ್ರಾಯವು.

ತ್ರಿವಿಷ್ಟಿಧಾತು—ಧಾತುಶಬ್ದೋ ರಜ್ಜುಭಾಗವಚನಃ। ತ್ರಿಧಾ ತ್ರಿಪ್ರಕಾರೇಣ ವಿಷ್ಟ್ವಾ ಪ್ರವೇಶನೇನ ವಿಧೀಯತೇ ಕ್ರಿಯತ ಇತಿ ತ್ರಿವಿಷ್ಟಿಧಾತುಸ್ತ್ರಿಗುಣಿತಾ ರಜ್ಜುಃ। ಯಥಾ ತ್ರಿಧಾತು ಪಂಚಧಾತು ವಾ ಶುಲ್ಬಂ ಕರೋತೀತಿ। ಯಥಾ ತ್ರಿವಿಷ್ಟಿಸ್ತ್ರಿಗುಣಿತಾ ರಜ್ಜುರ್ದ್ರಢೀಯಸೀ ಏವಮಿಂದ್ರೋಽಪಿ ದೃಢತರ ಇತ್ಯರ್ಥಃ। ಇಲ್ಲಿ ಧಾತು ಶಬ್ದಕ್ಕೆ ರಜ್ಜು ಎಂದರೆ ಹಗ್ಗನೆಂದರ್ಥವನ್ನು ಹೇಳಬೇಕು. ತ್ರಿಧಾತುವೆಂದರೆ ಪ್ರತ್ಯೇಕವಾದ ಮೂರು ಹುರಿಗಳು ಸೇರಿ ಹೊಸೆಯುವಾಗ ಅವುಗಳು ಒಂದರೊಳಗೊಂದು ಹುರಿಗೊಂಡು ಸೇರಿ ಒಂದು ಬಲವಾದ ಹಗ್ಗವಾಗುವುದು. ಹಗ್ಗವನ್ನು ಮಾಡಬೇಕಾದರೆ ಸಣ್ಣ ಸಣ್ಣ ದಾರದಂತಿರುವ ಎರಡು ಮೂರು ಹುರಿಗಳನ್ನು ಹೊಸೆದು ಒಂದು ಹುರಿಯನ್ನು ಮಾಡುವರು. ಮತ್ತೆ ಅಂತಹ (ನೂರಿಳಿಯಿಂದ ಕೂಡಿದ) ಮೂರು ಹುರಿಗಳನ್ನು ಮೊದಲಿನಂತೆ ಹೊಸೆದು ದಪ್ಪವಾದ ಹಗ್ಗವನ್ನು ಮಾಡುವರು. ಇನ್ನೂ ದಪ್ಪವಾದ ಮತ್ತು ದೃಢವಾದ ಹಗ್ಗವಾಗಬೇಕಾದರೆ ಮತ್ತೊಂದಾವರ್ತಿ ಅಂತಹ ಹೊಸೆದ ಮೂರು ಹುರಿಗಳನ್ನು ಸೇರಿಸಿ ಹೊಸೆಯಬೇಕು. ಈ ರೀತಿ ಮಾಡಿದ ಹಗ್ಗವು ಬಹಳ ಘಟ್ಟಿಯಾಗಿರುವ ಹಾಗೆ ಇಂದ್ರನು ಬಹಳ ಶಕ್ತಿವಂತನಾಗಿರುವನೆಂದಭಿಪ್ರಾಯವು. ಇಲ್ಲಿ ಮೂರು ಹುರಿಗಳಿಂದ ಹೊಸೆದ ಹಗ್ಗವನ್ನು ಇಂದ್ರನ ಶಕ್ತಿಗೆ ಉಪಮಾನವನ್ನಾಗಿ ಕೊಟ್ಟಿರುವ ವಿಷಯದಲ್ಲಿ ಒಂದು ವಿಶೇಷವಿರುವುದು. ಈ ಋಕ್ಕಿನಲ್ಲಿಯೇ ತಿಸ್ರೋ ಭೂಮೀಃ, ತ್ರೀಣಿ ರೋಚನಾ ಎಂಬ ಶಬ್ದಗಳು--ಮೂರು ಹುರಿಗಳಿಂದ ಸಹಿತವಾದ ಹಗ್ಗದಲ್ಲಿ ಹುರಿಗಳು ಒಂದರೊಳಗೊಂದು ಯಾವರೀತಿ ವ್ಯಾಪಿಸಿರುವುವೋ ಆರೀತಿ ಇಂದ್ರನ ಶಕ್ತಿಸಾಮರ್ಥ್ಯಗಳು **ತಿಸ್ರೋ ಭೂಮೀಃ**--ಪೃಥಿವ್ಯಂತರಿಕ್ಷ ಸ್ವರ್ಗಲೋಕಗಳೆಂಬ ಮೂರು ಲೋಕಗಳಲ್ಲಿಯೂ **ತ್ರೀಣಿ ರೋಚನಾ**—ಎಂದರೆ ಮೂರು ವಿಧವಾದ ಅಗ್ನಿಗಳಲ್ಲಿಯೂ ವ್ಯಾಪಿಸಿ ಬೆಳಗುತ್ತಿರುವುವೆಂಬ ಭಾವವನ್ನು ವಿಶದೀಕರಿಸುವುದು.

ಪ್ರತಿಮಾನಂ ಓಜಸಃ--ಇಂದ್ರನ ಬಲವು ಸಮಸ್ತ ಪ್ರಾಣಿಗಳಲ್ಲಿರುವ ಬಲಕ್ಕೆ ಪ್ರತಿನಿಧಿಯಾಗಿರುವುದು ಎಂದರೆ ಸಮಸ್ತ ಪ್ರಾಣಿಗಳಲ್ಲಿಯೂ ಇರುವ ಸಮಷ್ಟಿ (ಒಟ್ಟು) ಬಲಕ್ಕೆ ಸಮನಾಗಿರುವುದು ಎಂದಭಿಪ್ರಾಯವು.

ತಿಸ್ರೋ ಭೂಮೀಃ—ತ್ರಯ ಇಮೇ ಲೋಕಾಃ। ದ್ಯೌಶ್ಚ ಪೃಥಿವೀ ಚಾಂತರಿಕ್ಷಂ ಚ। ಭೂಮ್ಯಂತರಿಕ್ಷ ಸ್ವರ್ಗಗಳೆಂಬ ಮೂರು ಲೋಕಗಳು. ಮೂರು ಲೋಕಗಳನ್ನು ಸೂಚಿಸುವ ತ್ರಿಸ್ರೋ ಭೂಮೀಃ ಎಂಬ ಶಬ್ದಗಳು-

ತಿಸ್ರೋ ಭೂಮೀರ್ಧಾರಯನ್ ತ್ರೀಁರುತ ದ್ಯೂನ್ ತ್ರೀಣಿ ವ್ರತಾ ವಿದಥೇ ಅಂತರೇಷಾಂ।

(ಋ. ಸಂ. ೨-೨೭-೮)

**ತಿಸ್ರೋ ದ್ಯಾವೋ ನಿಹಿತಾ ಅಂತರಸ್ಮಿನ್ತಿಸ್ರೋ ಭೂಮೀರುಪರಾಃ ಷಡ್ವಿಧಾನಾಃ ।**
(ಋ. ಸಂ. ೭-೮೭-೫)

**ಯಸ್ಯ ಶ್ವೇತಾ ವಿಚಕ್ಷಣಾ ತ್ರಿಸ್ರೋ ಭೂಮೀರಧಿಕ್ಷಿತಃ ।**
(ಋ. ಸಂ. ೮-೪೧-೯)

ಎಂಬ ಋಕ್ಕುಗಳಲ್ಲಿ ಪಠಿತವಾಗಿರುವುವು,

**ತ್ರೀಣಿ ರೋಚನಾ—ತ್ರೀಣಿ ತೇಜಾಂಸಿ । ದಿವ್ಯಾದಿತ್ಯಾಖ್ಯಮಂತರಿಕ್ಷೇ ವೈದ್ಯುತಮಗ್ನಿಂ ಪೃಥಿವ್ಯಾಮಾಹವನೀಯಾದಿರೂಪೇಣ ವರ್ತಮಾನಂ ಪಾರ್ಥಿವಮಗ್ನಿಂ ।** ಮೂರು ತೇಜಸ್ಸುಗಳು ಅಥವಾ ತೇಜೋಮಂಡಲಗಳು--ಸ್ವರ್ಗದಲ್ಲಿ (ಆಕಾಶದಲ್ಲಿ) ಸೂರ್ಯರೂಪದಿಂದಿರುವ ತೇಜಸ್ಸು, ಅಂತರಿಕ್ಷದಲ್ಲಿ ವೈದ್ಯುತ (ಮಿಂಚಿನ) ರೂಪದಿಂದಿರುವ ತೇಜಸ್ಸು, ಭೂಮಿಯಲ್ಲಿ ಆಹವನೀಯಾಗ್ನಿ ಮೊದಲಾದ ಅಗ್ನಿರೂಪದಿಂದ ಇರುವ ತೇಜಸ್ಸು ಎಂಬ ಮೂರುವಿಧ ತೇಜಸ್ಸುಗಳು.

**ಅತಿ ಇದಂ ವಿಶ್ವಂ ಭುವನಂ ವವಕ್ಷಿಥ**—ಮೇಲೆ ಹೇಳಿದ ಪೃಥಿವ್ಯಂತರಿಕ್ಷಸ್ವರ್ಗಗಳೆಂಬ ಲೋಕಗಳ ರೂಪದಿಂದ ಇರುವ ಸಮಸ್ತ ಜಗತ್ತನ್ನೂ, ಆದಿತ್ಯ, ವಿದ್ಯುತ್ ಅಗ್ನಿಗಳೆಂಬ ಮೂರು ವಿಧವಾದ ತೇಜೋರಾಶಿಗಳನ್ನೂ ಸಮಸ್ತ ಪ್ರಾಣಿಜಾತವನ್ನೂ ಸಹ ಇಂದ್ರನಾದ ನೀನು ನಿನ್ನ ಶಕ್ತಿಸಾಮರ್ಥ್ಯದಿಂದ ವಹಿಸಿ (ಧರಿಸಿ) ಕಾಪಾಡುತ್ತಿರುತ್ತೀಯೆ ಎಂದಭಿಪ್ರಾಯವು.

**ಅಶತ್ರುಃ ಇಂದ್ರ, ಜನುಷಾ ಸನಾತ್ ಅಸಿ**—ಎಲೈ ಇಂದ್ರನೇ ನಿನ್ನ ಜನ್ಮಾರಭ್ಯ ನಿನಗೆ ಶತ್ರುಗಳಾದವರು ಯಾವಾಗಲೂ ಎಲ್ಲಿಯೂ ಇಲ್ಲ. ಇಲ್ಲಿ ಶತ್ರುವೆಂದರೆ ನಿನಗೆ ಸರಿಸಮಾನನಾಗಿ ನಿನ್ನೊಡನೆ ಹೋರಾಡುವ ಸಾಮರ್ಥ್ಯವುಳ್ಳ ಶತ್ರುವೆಂದರ್ಥವು. ಅಂತಹ ಬಲಿಷ್ಠನಾದ ಶತ್ರುವು ನಿನಗೆ ಹಿಂದೆಯೂ ಇರಲಿಲ್ಲ. ಈಗಲೂ ಇಲ್ಲ, ಮುಂದೆಯೂ ಇರುವುದಿಲ್ಲ. ನೀನು ಅಪ್ರತಿಹತನಾದ ಪರಾಕ್ರಮಿಯು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ತ್ರಿವಿಷ್ಟಿಧಾತು**—ತ್ರಿಧಾ ತ್ರಿಪ್ರಕಾರೇಣ ವಿಷ್ಟ್ಯಾ ಪ್ರವೇಶನೇನ ವಿಧೀಯತೇ ಕ್ರಿಯತೇ ಇತಿ ತ್ರಿವಿಷ್ಟಿಧಾತುಃ ತ್ರಿಗುಣಿತಾ ರಜ್ಜುಃ (ಮೂರು ಆವೃತ್ತಿಯಿಂದ ಜೋಡಿಸಿದ ಹಗ್ಗ) ವಿಶ ಪ್ರವೇಶನೇ ಧಾತು. **ಸ್ತ್ರಿಯಾಂಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. **ವ್ರಶ್ಚಭ್ರಸ್ಜ**—ಎಂಬುದರಿಂದ ಶಕಾರಕ್ಕೆ ಷಕಾರಾದೇಶ. ಷ್ಟುತ್ವದಿಂದ ಪ್ರತ್ಯಯ ತಕಾರಕ್ಕೆ ಟಕಾರಾದೇಶ. ವಿಷ್ಟಿ ಎಂದು ರೂಪವಾಗುತ್ತದೆ. ಡುಧಾಞ್ ಧಾರಣಪೋಷಣಯೋಃ ಧಾತು. **ಸಿತನಿಗಮಿಮಸಿ**—(ಉ. ಸೂ. ೧-೬೯) ಎಂಬುದರಿಂದ ಕರ್ಮಣಿಯಲ್ಲಿ ತುನ್ ಪ್ರತ್ಯಯ. ತ್ರಾದಿಪೂರ್ವಪದವಾಗಿರುವುದರಿಂದ **ಗತಿಕಾರಕೋಪಪದಾತ್ ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಧಾತು ಎಂಬುದು ನಿತ್ ಪ್ರತ್ಯಯಾಂತವಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತವಾಗುತ್ತದೆ. ಇಲ್ಲಿ ಸಾದೃಶ್ಯನಿಬಂಧನವಾಗಿ ಲಾಕ್ಷಣಿಕ ಪ್ರಯೋಗ. ಅಗ್ನಿರ್ಮಾಣವಕಃ ಎಂದು ಪ್ರಯೋಗವಾದಾಗ ಹುಡುಗನಲ್ಲಿ ಬೆಂಕಿಯ ಅರ್ಥವು ಬಾಧಿತವಾಗಿ ಪಟುವಿಕೆ, ತೇಜಸ್ಸಾಧಿಕ್ಯಾದಿಗಳ ಸಾದೃಶ್ಯದಿಂದ ಸಂಭವವಾಗುತ್ತದೆ. ಅದರಂತೆ ಇಲ್ಲಿ ಮೂರು ರೀತಿಯಿಂದ

ಜೋಡಿಸಿಮಾಡಿದ ಹಗ್ಗವು ಅತ್ಯಂತವಾಗಿ ದೃಢವಾಗಿರುವಂತೆ ಅದರ ದಾರ್ಢ್ಯರೂಪಧರ್ಮವನ್ನಿಟ್ಟುಕೊಂಡು ಆರೀತಿ ದಾರ್ಢ್ಯವುಳ್ಳ ಪ್ರತಿಮಾನವನ್ನು ಲಕ್ಷಣಾವೃತ್ತಿಯಿಂದ ಬೋಧಿಸುತ್ತದೆ.

**ಪ್ರತಿಮಾನಮ್**—ಪ್ರತಿಮೀಯತೇ ಇತಿ ಪ್ರತಿಮಾನಮ್. ಮಾಙ್ ಮಾನೇ ಧಾತು. ಲ್ಯುಟ್ ಪ್ರತ್ಯಯ. **ಯುವೋರನಾಕೌ**—ಎಂಬುದರಿಂದ ಅನಾದೇಶ. **ಲಿತಿ**—(ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಗತಿಪೂರ್ವಕವಾದುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ತಿಸ್ರಃ**—ತ್ರಿಶಬ್ದ. ಸ್ತ್ರೀಲಿಂಗದಲ್ಲಿ ಶಸ್ ಪರವಾದಾಗ **ತ್ರಿಚತುರೋಃ ಸ್ತ್ರಿಯಾಂ ತಿಸೃ ಚತಸೃ**—(ಪಾ. ಸೂ. ೭-೨-೯೯) ಎಂಬುದರಿಂದ ತಿಸ್ರಾದೇಶ. ಇದು ಅಂತೋದಾತ್ತವಾಗಿ ವಿಹಿತವಾಗಿದೆ. **ಅಚಿರಋತಃ** (ಪಾ. ಸೂ. ೭-೨-೧೦೦) ಎಂಬುದರಿಂದ ಋಕಾರಕ್ಕೆ ರೇಫಾದೇಶ. ಉದಾತ್ತಸ್ಥಾನಕ್ಕೆ ಯಣಾದೇಶ ಬಂದುದರಿಂದ ಅದರ ಪರದಲ್ಲಿ ವಿಭಕ್ತಿ ಬಂದುದರಿಂದ **ಉದಾತ್ತಯಣೋಹಲ್ಪೂರ್ವಾತ್**—(ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ರೋಚನಾ**—ರೋಚನಾನಿ ಎಂದು ರೂಪವಾದಾಗ ನಪುಂಸಕದಲ್ಲಿ **ಶೇಶ್ಛಂದಸಿ ಬಹುಲಮ್**—(ಪಾ. ಸೂ.೬-೧-೭೦) ಎಂಬುದರಿಂದ ಶಿಗೆ ಲೋಪ.

**ವವಕ್ಷಿಥ**—ವಹ ಪ್ರಾಪಣೇ ಧಾತು. ಇಚ್ಛಾರ್ಥತೋರುವಾಗ **ಧಾತೋಃ ಕರ್ಮಣಃ ಸಃ**—(ಪಾ. ಸೂ. ೩-೧-೭) ಎಂಬುದರಿಂದ ಸನ್. **ಹೋಢಃ** ಸೂತ್ರದಿಂದ ಧಾತುಹಕಾರಕ್ಕೆ ಸನಿಮಿತ್ತವಾಗಿ ಢತ್ವ. **ಷಢೋಃ ಕಃ ಸಿ** (ಪಾ. ಸೂ.೮-೨-೪೧) ಎಂಬುದರಿಂದ ಅದಕ್ಕೆ ಕತ್ವ. **ಆದೇಶಪ್ರತ್ಯಯಯೋಃ** ಸೂತ್ರದಿಂದ ಸನಿನ ಸಕಾರಕ್ಕೆ ಷತ್ವ. **ಸನ್ಯಙೋಃ** (ಪಾ. ಸೂ. ೬-೧-೯) ಸೂತ್ರದಿಂದ ಧಾತುವಿಗೆ ದ್ವಿತ್ವ. ಛಾಂದಸವಾಗಿ **ಸನ್ಯತಃ** (ಪಾ. ಸೂ. ೭-೪.೭೯) ಎಂಬುದರಿಂದ ಅಭ್ಯಾಸಕ್ಕೆ ಇತ್ವ ಬರುವುದಿಲ್ಲ. ವವಕ್ಷ ಎಂಬ ಸನಂತವು **ಸನಾದ್ಯಂತಾ ಧಾತವಃ** ಸೂತ್ರದಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ವರ್ತಮಾನಾರ್ಥದಲ್ಲಿ **ಛಂದಸಿಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ಲಿಟ್. **ಕಾಸ್ಪ್ರತ್ಯಯಾದಾಮಮಂತ್ರೇ ಲಿಟಿ** (ಪಾ. ಸೂ ೩-೧-೩೫) ಸೂತ್ರದಲ್ಲಿ ಅಮಂತ್ರೇ ಎಂದು ನಿಷೇಧಮಾಡಿರುವುದರಿಂದ ಪ್ರತ್ಯಯಾಂತವಾದರೂ ಆಮ್‌ಪ್ರತ್ಯಯ ಬರುವುದಿಲ್ಲ. **ಅನಭ್ಯಾಸಸ್ಯ** ಎಂದು ಪ್ರತಿಷೇಧ ಮಾಡಿರುವುದರಿಂದ ಪುನಃ ಲಿಣ್ನಿಮಿತ್ತವಾಗಿ ದ್ವಿತ್ವಾದಿಗಳು ಬರುವುದಿಲ್ಲ. ಮಧ್ಯಮಪುರುಷೈಕವಚನದಲ್ಲಿ **ಪರಸ್ಮೈಪದಾನಾಂ** ಸೂತ್ರದಿಂದ ಸಿಪಿಗೆ ಥಲಾದೇಶ. **ಆರ್ಧಧಾತುಕಸ್ಯೇಡ್ವಲಾದೇಃ** ಸೂತ್ರದಿಂದ ಅದಕ್ಕೆ ಇಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಶತ್ರುಃ**—ನ ವಿದ್ಯತೇ ಶತ್ರುಃ ಯಸ್ಯ ಸಃ. **ನಞ್ಸುಭ್ಯಾಮ್**—(ಪಾ. ಸೂ ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ॥ ೮ ॥



ಸಂಹಿತಾಪಾಠಃ

ತ್ವಾಂ ದೇವೇಷು ಪ್ರಥಮಂ ಹವಾಮಹೇ ತ್ವಂ ಬಭೂಥ ಪೃತ-
ನಾಸು ಸಾಸಹಿಃ।
ಸೇಮಂ ನಃ ಕಾರುಮುಪಮನ್ಯುಮುದ್ಭಿದಮಿಂದ್ರಃ ಕೃಣೋತು
ಪ್ರಸವೇ ರಥಂ ಪುರಃ ॥ ೯ ॥

। ಪದಪಾಠಃ ॥

ತ್ವಾಂ । ದೇವೇಷು । ಪ್ರಥಮಂ । ಹವಾಮಹೇ । ತ್ವಂ । ಬಭೂಥ । ಪೃತನಾಸು । ಸಸಹಿಃ ।
ಸಃ । ಇಮಂ । ನಃ । ಕಾರುಂ । ಉಪಽಮನ್ಯುಂ । ಉತ್ಽಭಿದಂ । ಇಂದ್ರಃ । ಕೃಣೋತು । ಪ್ರಽಸವೇ । ರಥಂ । ಪುರಃ ॥ ೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ದೇವೇಷು ಪ್ರಥಮಂ ಶ್ರೇಷ್ಠಂ ತ್ವಾಂ ಹವಾಮಹೇ । ಯೋಗಾರ್ಥಮಾಹ್ವಯಾಮಹೇ । ತಥಾ ತ್ವಂ ಪೃತನಾಸು ಸಂಗ್ರಾಮೇಷು ಸಾಸಹಿರ್ಬಭೂಥ । ಶತ್ರೂಣಾಮಭಿಭವಿತಾಸಿ । ಉತ್ತರಾರ್ಧಃ ಪರೋಕ್ಷಕೃತಃ । ಸ ಇಂದ್ರೋ ನೋಽಸ್ಮಾಕಂ ಕಾರುಂ ಸ್ತುತೀನಾಂ ಕರ್ತಾರಮುಪಮನ್ಯುಮುಪಮಂತಾರಂ ಸರ್ವಜ್ಞಮುದ್ಭಿದಂ ಶತ್ರೂಣಾಮುದ್ಭೇತ್ತಾರಮಿಮಮೇವಂಗುಣವಿಶಿಷ್ಟಂ ಪುತ್ರಂ ಕೃಣೋತು । ಕರೋತು । ಅಪಿ ಚ ಪ್ರಸವೇ ಯುದ್ಧೋತ್ಪತ್ತಾವಸ್ಮದೀಯಂ ರಥಂ ಪುರೋಽನ್ಯೇಭ್ಯೋ ರಥೇಭ್ಯಃ ಪುರತೋ ವರ್ತಮಾನಂ ಕರೋತು । ಯದ್ವಾ । ಕಾರುಮಿತ್ಯಾದೀನಿ ರಥವಿಶೇಷಣಾನಿ । ಕಾರುಂ ಯುದ್ಧಸ್ಯ ಕರ್ತಾರಮುಪಮನ್ಯುಮುಪಗತೇನ ಪ್ರಾಪ್ತೇನ ಮನ್ಯುನಾ ಕ್ರೋಧೇನ ಯುಕ್ತಮುದ್ಭಿದಂ ಮಾರ್ಗೇಽವಸ್ಥಿತಾನಾಂ ವೃಕ್ಷಾದೀನಾಮುದ್ಭೇತ್ತಾರಮತಿಶಯೇನ ಭಂಕ್ತಾರಂ ॥ ಬಭೂಥ । ಬಭೂಥಾ ತತಂಥ ಜಗೃಂಭ ವವರ್ಥೇತಿ ನಿಗಮ ಇತಿ ನಿಪಾತನಾದಿಡಭಾವಃ । ಸ ಇಮಂ । ಸೋಽಚಿ

**ಲೋಪೇ ಚೇತ್ಪಾದಪೂರಣಮಿತಿ ಸುಲೋಪಃ । ಪ್ರಸವೇ । ಷೂಙ್ ಪ್ರಾಣಿಪ್ರಸವೇ । ಋದೋರಪ್ । ಥಾಥಾದಿನೋತ್ತರಪದಾಂತೋದಾತ್ತತ್ವಂ ॥**

॥ ಪ್ರತಿಪದಾರ್ಥ ॥

(ಇಂದ್ರ—ಎಲೈ ಇಂದ್ರನೇ) । **ದೇವೇಷು**—ದೇವತೆಗಳಲ್ಲಿ । **ಪ್ರಥಮಂ**—ಮೊದಲನೆಯವನಾದ ಅಥವಾ ಶ್ರೇಷ್ಠನಾದ । **ತ್ವಾಂ**—ನಿನ್ನನ್ನು । **ಹವಾಮಹೇ**—(ಯಜ್ಞಾರ್ಥವಾಗಿ) ಕರೆಯುತ್ತೇವೆ । **ತ್ವಂ**—ನೀನು । **ಪೃತನಾಸು**—ಯುದ್ಧಗಳಲ್ಲಿ । **ಸಸಹಿಃ**—ಶತ್ರುಗಳನ್ನು ಹೊಡೆದು ಸೋಲಿಸುವವನಾಗಿ । **ಬಭೂಥ**—ಆಗಿದ್ದೀಯೆ । **ಸಃ ಇಂದ್ರಃ**—ಆ ಇಂದ್ರನು । **ನಃ**—ನಮಗೆ. **ಕಾರುಂ**—ಸ್ತುತಿಕರ್ತನೂ । **ಉಪಮನ್ಯುಂ**—ಸರ್ವಜ್ಞನೂ **ಉದ್ಭಿದಂ**—(ಶತ್ರುಗಳನ್ನು) ನಿರ್ಮೂಲ ಮಾಡುವವನೂ ಆದ । **ಇಮಂ**—ಮಗನನ್ನು । **ಕೃಣೋತು**—ಅನುಗ್ರಹಿಸಲಿ । ಅಥವಾ [**ಕಾರುಂ**—ಯುದ್ಧ ನಿರ್ಮಾಪಕವಾದುದೂ । **ಉಪಮನ್ಯುಂ**—ಕ್ರೋಧವನ್ನು ಪ್ರಕಟಿಸತಕ್ಕದ್ದೂ । **ಉದ್ಭಿದಂ**—ಪ್ರತಿಬಂಧಕಗಳನ್ನು ನಾಶಮಾಡತಕ್ಕದ್ದೂ ಆದ] **ಇಮಂ ರಥಂ**—ಈ ನಮ್ಮ ರಥವನ್ನು । **ಪ್ರಸವೇ**—ಯುದ್ಧವು ಸಂಭವಿಸಿದ ಕಾಲದಲ್ಲಿ । **ಪುರಃ**—(ಇತರ ಎಲ್ಲಾ ರಥಗಳಿಗೂ) ಮುಂಭಾಗದಲ್ಲಿ **ಕೃಣೋತು**—ಇರುವಂತೆ ಮಾಡಲಿ ॥

ಭಾವಾರ್ಥ

ಎಲೈ ಇಂದ್ರನೇ, ದೇವತೆಗಳಲ್ಲೆಲ್ಲಾ ಶ್ರೇಷ್ಠನಾದ ನಿನ್ನನ್ನು ನಾವು ಯಜ್ಞಾರ್ಥವಾಗಿ ಕರೆಯುತ್ತೇವೆ. ನೀನು ಯುದ್ಧಗಳಲ್ಲಿ ಶತ್ರುಗಳನ್ನು ಹೊಡೆದು ಸೋಲಿಸುತ್ತೀಯೆ. ಇಂದ್ರನು ನಮಗೆ ಸರ್ವಜ್ಞನೂ ಶತ್ರುನಾಶಕನೂ ಆದ ಪುತ್ರನನ್ನು ಅನುಗ್ರಹಿಸಲಿ ಮತ್ತು ನಮಗೆ ಯುದ್ಧ ನಿರ್ಮಾಪಕವಾದುದೂ, ಕ್ರೋಧವನ್ನು ಪ್ರಕಟಿಸತಕ್ಕದ್ದೂ ಮತ್ತು ಪ್ರತಿಬಂಧಕಗಳನ್ನು ನಾಶಮಾಡತಕ್ಕದ್ದೂ ಆದ ರಥವನ್ನು । ಯುದ್ಧಕಾಲಗಳಲ್ಲಿ ಇತರ ಎಲ್ಲಾ ರಥಗಳಿಗಿಂತಲೂ ಮುಂಭಾಗದಲ್ಲಿರುವಂತೆ ಮಾಡಲಿ.

English Translation

We invoke you, Indra, the first among the gods ; you have been the victor in battles : may Indra put foremost in the battle this our chariot, which is efficient, impetuous, and the uprooter (of all impediments).

॥ ವಿಶೇಷವಿಷಯಗಳು ॥

**ತ್ವಾಂ ದೇವೇಷುಂ ಪ್ರಥಮಂ ಹವಾಮಹೇ**—ಈ ಶಬ್ದಗಳಿಗೆ ದೇವತೆಗಳಲ್ಲೆಲ್ಲಾ ಶ್ರೇಷ್ಠನಾದ ನಿನ್ನನ್ನು (ಇಂದ್ರನನ್ನು) ಅಥವಾ ದೇವತೆಗಳನ್ನು ಆಹ್ವಾನಮಾಡುವಾಗ ಮೊದಲು ನಿನ್ನನ್ನು ಆಹ್ವಾನಮಾಡುವೆವು ಎಂದರ್ಥವು.

**ಪೃತನಾಸು—ಸಂಗ್ರಾಮೇಷು** । ರಣಃ ವಿವಾಕ್ ಮೊದಲಾದ ನಲವತ್ತಾರು ಸಂಗ್ರಾಮನಾಮಗಳಲ್ಲಿ ಪೃತನಾಃ ಎಂಬ ಶಬ್ದವು ಪಠಿತವಾಗಿರುವುದರಿಂದ ಪೃತನಾಸು ಎಂದರೆ ಯುದ್ಧಗಳಲ್ಲಿ ಎಂದರ್ಥವು. (ನಿ. ೨-೧೭)

**ಸಸಹಿಃ—ಶತ್ರೂಣಾಮಭಿಭವಿತಾ** । ಶತ್ರುಗಳನ್ನು ಪರಾಭವಗೊಳಿಸುವವನು. ಇಲ್ಲಿ ಛಂದಸ್ಸಿನ ಅನುಕೂಲಕ್ಕಾಗಿ ಈ ಶಬ್ದದ ಮೊದಲ ಅಕ್ಷರವು ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು.

**ಕಾರುಂ**—ರೇಭಃ ಜರಿತಾ ಮೊದಲಾದ ಹದಿಮೂರು ಸ್ತೋತೃನಾಮಗಳ ಮಧ್ಯದಲ್ಲಿ ಕಾರುಃ ಎಂಬ ಶಬ್ದವು ಪಠಿತವಾಗಿರುವುದರಿಂದ ಕಾರುಂ ಎಂದರೆ ಸ್ತೋತ್ರಮಾಡುವವನನ್ನು ಎಂದರ್ಥವು. (ನಿ ೩-೧೯) ಇದಲ್ಲದೆ ಯಾಸ್ಕರು,

**ದೈವ್ಯಾ ಹೋತಾರಾ ಪ್ರಥಮಾ ಸುವಾಚಾ ಮಿಮಾನಾ ಯಜ್ಞಂ ಮನುಷೋ ಯಜಧ್ಯೈ ।**
**ಪ್ರಚೋದಯಂತಾ ವಿದಥೇಷು ಕಾರೂ ಪ್ರಾಚೀನಂ ಜ್ಯೋತಿಃ ಪ್ರದಿಶಾ ದಿಶಂತಾ ॥**
(ಋ. ಸಂ, ೧೦-೧೧೦-೭)

ಎಂಬ ಋಕ್ಕಿಗೆ ನಿರ್ವಚನವನ್ನು ಹೇಳುವಾಗ ವಿದಥೇಷು ಕಾರೂ-ಯಜ್ಞೇಷು ಕರ್ತಾರೌ ಋತ್ವಿಜೌ ಎಂದರೆ ಯಜ್ಞದಲ್ಲಿ ಭಾಗವಹಿಸುವ ಇಬ್ಬರು ಋತ್ವಿಕ್ಕುಗಳೆಂದು ಹೇಳಿರುವರು. (ನಿ. ೮-೧೨).

**ಉಪಮನ್ಯುಂ—ಉಪಮಂತಾರಂ ಸರ್ವಜ್ಞಂ । ಯದ್ವಾ ಉಪಮನ್ಯುಮುಪಗತೇನ ಪ್ರಾಪ್ತೇನ ಮನ್ಯುನಾ ಕ್ರೋಧೇನ ಯುಕ್ತಂ** । ಈ ಶಬ್ದಕ್ಕೆ ಮನ ಜ್ಞಾನೇ ಎಂಬ ಧಾತುವಿನಿಂದ ನಿಷ್ಪನ್ನವಾದಂತೆ ಭಾವಿಸುವುದಾದರೆ ಸರ್ವವನ್ನು ತಿಳಿದವನು, ಸರ್ವಜ್ಞನು ಎಂಬರ್ಥವನ್ನು ಹೇಳಬಹುದು. ಅಥವಾ ಮನ್ಯು ಶಬ್ದಕ್ಕೆ ಕ್ರೋಧವೆಂದು ಅರ್ಥವಿರುವುದರಿಂದ ಕ್ರೋಧವುಳ್ಳವನೆಂದೂ ಅರ್ಥವನ್ನು ಹೇಳಬಹುದು. ಈ ಸಂದರ್ಭದಲ್ಲಿ ಇಂದ್ರನು ಯುದ್ಧಮಾಡುವಾಗ ಶತ್ರುಗಳ ಮೇಲೆ ಕ್ರೋಧಯುಕ್ತನಾಗಿರುವನೆಂದಭಿಪ್ರಾಯವು.

**ಉದ್ಭಿದಂ—ಶತ್ರೂಣಾಮುದ್ಭೇತ್ತಾರಂ।** ಶತ್ರುಗಳನ್ನು ಭಂಜನಮಾಡುವವನು, ಧ್ವಂಸಮಾಡುವವನು, ನಾಶಗೊಳಿಸುವವನು.

**ಪ್ರಸವೇ—ಷೂಙ್ ಪ್ರಾಣಿಪ್ರಸವೇ ।** ಪ್ರಸವಶಬ್ದವು ಹುಟ್ಟುವುದು ಸಂಭವಿಸುವುದು ಎಂಬರ್ಥವನ್ನು ಸೂಚಿಸುವುದು. ಇಲ್ಲಿ ಯುದ್ಧಸಂಭವದಲ್ಲಿ ಯುದ್ಧವು ಪ್ರಾಪ್ತವಾಗುವ ಸಂದರ್ಭದಲ್ಲಿ, ಎಂದರ್ಥವು

**ಇಂದ್ರಃ ಕೃಣೋತು ಪ್ರಸವೇ ರಥಂ ಪುರಃ**—ಯುದ್ಧಭೂಮಿಯಲ್ಲಿ ನಮ್ಮ ರಥವು ಎಲ್ಲರ ರಥಗಳಿಗಿಂತಲೂ ಮುಂದಾಗಿರುವಂತೆ ಮಾಡು ಎಂದರೆ ನಾವು ಶತ್ರುಗಳನ್ನು ಎದುರಿಸಿ ಅವರನ್ನು ಜಯಿಸಲು ಅನುಕೂಲವಾಗುವಂತೆ ನಮ್ಮ ರಥವು ಶತ್ರುವಿನ ಮುಂದುಗಡೆ ದೃಢವಾಗಿ ಇರುವಂತೆ ಮಾಡು ಎಂದು ಇಂದ್ರನನ್ನು ಪ್ರಾರ್ಥಿಸಲಾಗಿರುವುದು. ಈ ಋಕ್ಕಿನಲ್ಲಿ ಪೂರ್ವಾರ್ಧವು ಪ್ರತ್ಯಕ್ಷಕೃತವಾಗಿಯೂ ಉತ್ತರಾರ್ಧವು ಪರೋಕ್ಷಕೃತವಾಗಿಯೂ ಇರುವುದು. ಪ್ರತ್ಯಕ್ಷಕೃತಾದಿ ಶಬ್ದಗಳ ವಿವರಣೆಯು ಈ ಸೂಕ್ತದ ಪ್ರಥಮ ಋಕ್ಕಿನ ವಿಶೇಷ ವಿಷಯಗಳಲ್ಲಿ ವಿವರಿಸಲಾಗಿರುವುದು. (ಪೇಜು 316)

ವ್ಯಾಕರಣಪ್ರಕ್ರಿಯಾ

**ಹವಾಮಹೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. **ಟಿತಆತ್ಮನೇ**—ಎಂಬುದರಿಂದ ಏತ್ವ. **ಬಹುಲಂ ಛಂದಸಿ**—ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಪೂರ್ವರೂಪ. ಶಪ್ ನಿಮಿತ್ತವಾಗಿ ಗುಣ ಅವಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ಬಭೂಥ**—ಭೂ ಸತ್ತಾಯಾಂ ಧಾತು. ಲಿಟ್ ಮಧ್ಯಮಪುರುಷ ಏಕವಚನರೂಪ. **ಬಭೂಥ ತತಂಥ ಜಗೃಂಭ ವವರ್ಥೇತಿ ನಿಗಮೇ** (ಪಾ. ಸೂ. ೭-೨-೬೪) ಎಂಬುದರಿಂದ ನಿಪಾತನಮಾಡಿರುವುದರಿಂದ ಛಂದಸ್ಸಿನಲ್ಲಿ ಇಡಾಗಮ ಬರುವುದಿಲ್ಲ. ಅತಿಜಂತದ ಪರದಲ್ಲಿರುವುದರಿಂದ ತಿಜಂತನಿಘಾತಸ್ವರ ಬರುತ್ತದೆ

**ಸಸಹಿಃ**—ಷಹ ಮರ್ಷಣೇ. ಧಾತು. **ಆದೃಗಮಹನ**—(ಪಾ. ಸೂ. ೩-೨-೧೭೧) ಎಂಬಲ್ಲಿ ಚಕಾರ ಗ್ರಹಣಸಾಮರ್ಥ್ಯದಿಂದ ಇದಕ್ಕೆ ಕಿಪ್ರತ್ಯಯ. ಲಿಡ್ವದ್ಭಾವವಿರುವುದರಿಂದ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್‌ಶೇಷ. **ಅನ್ಯೇಷಾಮಪಿ ದೃಶ್ಯತೇ**—(ಪಾ. ಸೂ. ೬-೩-೧೩೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಸೇಮಮ್**—ಸ ಇಮಮ್ ಎಂದಿರುವಾಗ **ಸೋಚಿ ಲೋಪೇ ಚೇತ್ ಪಾದಪೂರಣಮ್** (ಪಾ. ಸೂ. ೬-೧-೧೩೪) ಎಂಬುದರಿಂದ ಪಾದಪೂರ್ತಿಯಾಗುವುದರಿಂದ ಸಸ್ ಎಂಬಲ್ಲಿರುವ ಸುವಿಗೆ ಲೋಪ ಬರುತ್ತದೆ.

**ಕಾರುಮ್**—ಡುಕೃಞ್ ಕರಣೇ ಧಾತು. **ಕೃವಾಪಾಜಿ**—(ಉ. ಸೂ. ೧-೧) ಎಂಬುದರಿಂದ ಉಣ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಋಕಾರಕ್ಕೆ ವೃದ್ಧಿ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಪ್ರಸವೇ**— ಷೂಙ್ ಪ್ರಾಣಿಪ್ರಸವೇ ಧಾತು. **ಋದೋರಪ್**-(ಪಾ. ಸೂ. ೩-೩-೫೭) ಎಂಬುದರಿಂದ ಅಪ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ**-ಎಂಬುದರಿಂದ ಧಾತುವಿನ ಇಕಿಗೆ ಗುಣ. ಅವಾದೇಶ. **ಥಾಥಘಞ್**-(ಪಾ. ಸೂ. ೬-೨-೧೪೪) ಎಂಬುದರಿಂದ ಗತಿಯೊಡನೆ ಸಮಾಸವಾದಾಗ ಉತ್ತರಪದಾಂತೋದಾತ್ತ ಸ್ವರ ಬರುತ್ತದೆ. ಸಪ್ತಮೀಏಕವಚನಾಂತರೂಪ. ॥ ೯ ॥



ಸಂಹಿತಾಪಾಠಃ

ತ್ವಂ ಜಿಗೇಥ ನ ಧನಾ ರುರೋಧಿಥಾರ್ಭೇಷ್ವಾಜಾ ಮಘವನ್ಮ-
ಹತ್ಸು ಚ ।
ತ್ವಾಮುಗ್ರಮವಸೇ ಸಂ ಶಿಶೀಮಸ್ಯಥಾ ನ ಇಂದ್ರ ಹವನೇಷು
ಚೋದಯ ॥ ೧೦ ॥

ಪದಪಾಠಃ

ತ್ವಂ । ಜಿಗೇಥ । ನ । ಧನಾ । ರುರೋಧಿಥ । ಅರ್ಭೇಷು । ಆಜಾ । ಮಘऽವನ್ ।
ಮಹತ್ऽಸು । ಚ ।
ತ್ವಾಂ । ಉಗ್ರಂ । ಅವಸೇ । ಸಂ । ಶಿಶೀಮಸಿ । ಅಥ । ನಃ । ಇಂದ್ರ । ಹವನೇ-
ಷು । ಚೋದಯ ॥ ೧೦ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಂ ಜಿಗೇಥ । ಶತ್ರೂಞ್ಜಯಸಿ । ತಥಾ ಧನಾ ಶತ್ರುಭ್ಯೋಽಪಹೃತಾನಿ ಧನಾನಿ ನ ರುರೋಧಿಥ । ನಾವರುಣತ್ಸಿ । ಸ್ತೋತೃಭ್ಯಃ ಪ್ರಯಚ್ಛಸೀತ್ಯರ್ಥಃ । ಹೇ ಮಘವನ್ ಧನವನ್ನಿಂದ್ರ । ಅರ್ಭೇಷ್ವಲ್ಪೇಷ್ವಾಜಾ ಆಜಿಷು ಸಂಗ್ರಾಮೇಷು ಮಹತ್ಸು ಚ ಪ್ರೌಢೇಷು ಸಂಗ್ರಾಮೇಷು ಚಾವಸೇಽಸ್ಮಾಕಂ ರಕ್ಷಣಾರ್ಥಮುಗ್ರಮುದ್ಗೂರ್ಣಮಧಿಕಬಲಂ ತ್ವಾಂ ಸಂ ಶಿಶೀಮಸಿ । ಸ್ತೋತ್ರೈಸ್ತೀಕ್ಷ್ಣೀಕುರ್ಮಃ । ಅಥಾನಂತರಂ ಹೇ ಇಂದ್ರ ತ್ವಂ ಹವನೇಷು ಯುದ್ಧಾರ್ಥಮಾಹ್ವಾನೇಷು ಸತ್ಸ್ವಾಗತ್ಯ ನೋಽಸ್ಮಾಞ್ಚೋದಯ । ಸಂಗ್ರಾಮೇಷು ಪ್ರೇರಯ । ಜಯಂ ಪ್ರಾಪಯೇತ್ಯರ್ಥಃ॥ ಜಿಗೇಥ । ಜಿ ಜಯೇ । ಲಿಟಿ ಥಲಿ ಕ್ರಾದಿನಿಯಮಾತ್ಪ್ರಾಪ್ತಸ್ಯೇಟೋಽಚಸ್ತಾಸ್ವತ್ಥಲ್ಯನಿಟೋ ನಿತ್ಯಂ । ಪಾ. ೭-೨-೬೧ । ಇತಿ ಪ್ರತಿಷೇಧಃ । ಸನ್ಲಿಟೋರ್ಜೇರಿತ್ಯಭ್ಯಾಸಾದುತ್ತರಸ್ಯ ಜಕಾರಸ್ಯ ಕುತ್ವಂ । ರುರೋಧಿಥ । ಕ್ರಾದಿನಿಯಮಾದಿಟ್। ಆಜಾ । ಸುಪಾಂ ಸುಲುಗಿತಿ ಸಪ್ತಮೀಬಹುವಚನಸ್ಯ ಡಾದೇಶಃ । ಶಿಶೀಮಸಿ । ಶೋ ತನೂಕರಣೇ । ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ । ಆದೇಚ ಇತ್ಯಾತ್ವಂ । ದ್ವಿರ್ವಚನೇ ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ಈ ಹಲ್ಯಘೋರಿತೀಕಾರಾಂತಾದೇಶಃ । ಇದಂತೋ ಮಸಿಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ತ್ವಂ—ನೀನು । ಜಿಗೇಥ—(ಶತ್ರುಗಳನ್ನು) ಜಯಿಸುತ್ತೀಯೆ. । ಧನಾ (ಶತ್ರುಗಳಿಂದ ಕಸಿದುಕೊಂಡ) ಧನಗಳನ್ನು । ನ ರುರೋಧಿಥ—ಮುಚ್ಚಿಟ್ಟುಕೊಳ್ಳುವುದಿಲ್ಲ. (ನಿನ್ನ ಭಕ್ತರಿಗೆಲ್ಲಾ ಹಂಚುತ್ತೀಯೆ) । ಮಘವನ್—ಧನಯುಕ್ತನಾದ ಇಂದ್ರನೇ । ಅರ್ಭೇಷು ಆಜಾ—ಸಣ್ಣ ಸಣ್ಣ ಯುದ್ಧಗಳಲ್ಲಾಗಲಿ, । ಮಹತ್ಸು ಚ—ದೊಡ್ಡ ದೊಡ್ಡ ಯುದ್ಧಗಳಲ್ಲಾಗಲಿ । ಅವಸೇ—(ನಮ್ಮ) ರಕ್ಷಣಾರ್ಥವಾಗಿ । ಉಗ್ರಂ—ಪ್ರಚಂಡವಾದ ಬಲವುಳ್ಳ । ತ್ವಾಂ—ನಿನ್ನನ್ನು ಸಂ ಶಿಶೀಮಸಿ—(ಸ್ತೋತ್ರಗಳಿಂದ) ತೀಕ್ಷ್ಣವಾಗುವಂತೆ ಮಾಡುತ್ತೇವೆ. । ಅಥ—ಅನಂತರ । ಇಂದ್ರ—ಎಲೈ ಇಂದ್ರನೇ । ಹವನೇಷು—(ಯುದ್ಧಕ್ಕಾಗಿ) ನಾವು ಕರೆದಾಗ (ಬಂದು) । ನಃ—ನಮ್ಮನ್ನು । ಚೋದಯ—ಹುರಿದುಂಬಿಸು ।

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಶತ್ರುಗಳನ್ನು ಜಯಿಸುತ್ತೀಯೆ. ಶತ್ರುಗಳಿಂದ ಕಸಿದುಕೊಂಡ ಧನವನ್ನು ಮುಚ್ಚಿಟ್ಟುಕೊಳ್ಳದೇ ಭಕ್ತರಿಗೆಲ್ಲಾ ಅದನ್ನು ಹಂಚುತ್ತೀಯೆ. ಧನಯುಕ್ತನಾದ ಎಲೈ ಇಂದ್ರನೇ, ಸಣ್ಣ ಸಣ್ಣ ಯುದ್ಧಗಳಲ್ಲಾಗಲಿ, ದೊಡ್ಡ ದೊಡ್ಡ ಯುದ್ಧಗಳಲ್ಲಾಗಲಿ ನಮ್ಮ ರಕ್ಷಣಾರ್ಥವಾಗಿ ಪ್ರಚಂಡಬಲವುಳ್ಳ ನಿನ್ನನ್ನು ನಮ್ಮ ಸ್ತೋತ್ರಗಳಿಂದ ತೀಕ್ಷ್ಣನಾಗುವಂತೆ (ಪ್ರಸನ್ನನಾಗುವಂತೆ) ಮಾಡುತ್ತೇವೆ. ಅನಂತರ ಯುದ್ಧಕಾಲದಲ್ಲಿ ನಮ್ಮ ಕರೆಯನ್ನು ಮನ್ನಿಸಿ ಬಂದು ನಮ್ಮನ್ನು ಹುರಿದುಂಬಿಸು.

English Translation

You conquer, and withhold not the booty: in trifling or serious conflicts, we sharpen you, fierce Maghavan, for our defence: do you therefore, inspirit us in our defiances.

ವಿಶೇಷವಿಷಯಗಳು

**ಅರ್ಭೇಷು**—ಅರ್ಭ ಇತ್ಯಲ್ಪನಾಮ । ಅರ್ಭಕೇ ಅವೃದ್ಧೇ ಇತಿ ಯಾಸ್ಕಃ (ನಿ. ೩-೨೦) ಅಲ್ಪೇಷ್ವಿ-ತ್ಯರ್ಥಃ । ಸಣ್ಣದಾದ, ವೃದ್ಧಿಯನ್ನು ಹೊಂದದಿರುವ ಎಂದರ್ಥವು.

**ಅರ್ಭೇಷು ಮಹತ್ಸು ಚ ಆಜಾ**—ಸಣ್ಣ ಕದನಗಳಲ್ಲಿಯಾಗಲಿ ಅಥವಾ ದೊಡ್ಡ ಯುದ್ಧಗಳಲ್ಲಿಯಾಗಲೀ ಎಂದರ್ಥವು.

**ಉಗ್ರಂ— ಉದ್ಗೀರ್ಣಮಧಿಕಬಲಂ** । ಪರಾಕ್ರಮಶಾಲಿಯಾದ ಅಥವಾ ಅಧಿಕಬಲವುಳ್ಳ ಇಂದ್ರನನ್ನು.

**ಶಿಶೀಮಸಿ— ಸ್ತೋತ್ರೈಸ್ತೀಕ್ಷ್ಣೀಕುರ್ಮಃ । ಶೋ ತನೂಕರಣೇ** । ಸ್ತೋತ್ರಾದಿಗಳಿಂದ ನಿನ್ನನ್ನು ಪ್ರಶಂಸೆಮಾಡಿ ನಿನ್ನ ಬುದ್ಧಿಯು ಚುರುಕಾಗುವಂತೆ ಮಾಡುತ್ತೇವೆ.

**ಹವನೇಷು**—ಇದು ಆಹವ-ಯುದ್ಧ ಎಂಬ ಶಬ್ದದ ಪರ್ಯಾಯನಾಮವು. ಯುದ್ಧಗಳಲ್ಲಿ ಎಂದರ್ಥವು.

ಯುದ್ಧವು ಸಂಭವಿಸಿರುವ ಸಮಯದಲ್ಲಿ ಜಯವನ್ನು ಪಡೆಯುವುದಕ್ಕಾಗಿ ಇಂದ್ರನನ್ನು ಪ್ರಾರ್ಥಿಸಿ ಋಷಿಯು ಈ ಸ್ತೋತ್ರವನ್ನು ಮಾಡಿರುವನೆಂದು ಕೆಲವರು ಅಭಿಪ್ರಾಯಪಡುವರು. ಏಕೆಂದರೆ ಪ್ರತಿಋಕ್ಕಿನಲ್ಲಿಯೂ ಯುದ್ಧಸಂಬಂಧವಾದ ಶಬ್ದಗಳೂ ಜಯವನ್ನುಂಟುಮಾಡಬೇಕೆಂಬ ಪ್ರಾರ್ಥನೆಯೂ ಸ್ಪಷ್ಟವಾಗಿ ಉಕ್ತವಾಗಿರುವುದು.

ವ್ಯಾಕರಣಪ್ರಕ್ರಿಯಾ

**ಜಿಗೇಥ**—ಜಿ ಜಯೇ ಧಾತು. ಲಿಟ್ ಮಧ್ಯಮಪುರುಷ ಏಕವಚನದಲ್ಲಿ **ಪರಸ್ಮೈಪದಾನಾಂ**—(ಪಾ. ಸೂ. ೩-೪-೮೨) ಎಂಬುದರಿಂದ ಸಿಪಿಗೆ ಥಲಾದೇಶ. **ಕೃಸೃಭೃ**—(ಪಾ. ಸೂ. ೭-೨-೧೩) ಸೂತ್ರದಿಂದ ಲಿಟಿನಲ್ಲಿ ಇಣ್ನಿಷೇಧವನ್ನು ನಿಯಮಮಾಡಿರುವುದರಿಂದ ಇಲ್ಲಿ ಪ್ರಾಪ್ತವಾದರೆ **ಅಚಸ್ತಾಸ್ವತ್ ಥಲ್ಯನಿಟೋ ನಿತ್ಯಮ್**—

(ಪಾ. ಸೂ. ೭-೨-೬೧) ಎಂಬುದರಿಂದ ಅಜಂತವಾದುದರಿಂದ ಥಲಿನಲ್ಲಿ ಪುನಃ ಇಣ್ನಿಷೇಧ ಬರುತ್ತದೆ. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಸನ್‌ಲಿಟೋರ್ಜೇಃ**—(ಪಾ. ಸೂ. ೭-೩-೫೭) ಎಂಬುದರಿಂದ ಅಭ್ಯಾಸದ ಪರದಲ್ಲಿರುವ ಜಕಾರಕ್ಕೆ ಕುತ್ವ. **ಸಾರ್ವಧಾತು**—ಸೂತ್ರದಿಂದ ಇಕಾರಕ್ಕೆ ಗುಣ. ಜಿಗೇಥ ಎಂದು ರೂಪವಾಗುತ್ತದೆ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಧನಾ**—ಧನಾನಿ ಎಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್**—(ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ರುರೋಧಿಥ**—ರುಧಿರ್ ಆವರಣೇ ಧಾತು. ಲಿಣ್ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಥಲಾದೇಶ. ಹಿಂದಿನಂತೆ ಕ್ರಾದಿನಿಯಮದಿಂದ ಥಲಿಗೆ ಇಡಾಗಮ ಬರುತ್ತದೆ. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ. ತಿಜಂತನಿಘಾತಸ್ವರ ಬರುತ್ತದೆ.

**ಆಜಾ**—ಆಜಿ ಶಬ್ದ. ಸಪ್ತಮೀಏಕವಚನ ಪರವಾದಾಗ ಅದಕ್ಕೆ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಡಾದೇಶ. ಡಿತ್ತಾದುದರಿಂದ ಟಿಲೋಪ.

**ಅವಸೇ**—ಅವ ರಕ್ಷಣೇ ಧಾತು. ಸರ್ವಧಾತುಸಿಬಂಧನವಾದ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಶಿಶೀಮಸಿ**—ಶೋ ತನೂಕರಣೇ ಧಾತು. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಶ್ಲು ಆದೇಶ. **ಆದೇಚ ಉಪದೇಶೇಽಶಿತಿ**—(ಪಾ. ಸೂ. ೬-೧-೪೫) ಎಂಬುದರಿಂದ ಧಾತುವಿಗೆ ಆತ್ವ. **ಶ್ಲೌ**—(ಪಾ. ಸೂ. ೬-೧-೧೦) ಎಂಬುದರಿಂದ ಧಾತುವಿಗೆ ದ್ವಿತ್ವ. **ಬಹುಲಂ ಛಂದಸಿ**—(ಪಾ. ಸೂ. ೭-೪-೭೮) ಎಂಬುದರಿಂದ ಧಾತುವಿನ ಅಭ್ಯಾಸಕ್ಕೆ ಇತ್ವ. **ಈ ಹಲ್ಯಘೋಃ**—(ಪಾ. ಸೂ. ೬-೪-೧೧೩) ಸೂತ್ರದಿಂದ ಅಭ್ಯಸ್ತಸಂಜ್ಞಾ ಇರುವುದರಿಂದ ಧಾತುವಿನ ಆಕಾರಕ್ಕೆ ಈತ್ವ. **ಇದಂತೋ ಮಸಿಃ**—(ಪಾ. ಸೂ. ೭-೧-೪೬) ಸೂತ್ರದಿಂದ ಪ್ರತ್ಯಯಕ್ಕೆ ಇಕಾಗಮ. ಶಿಶೀಮಸಿ ಎಂದು ರೂಪವಾಗುತ್ತದೆ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಥ**—**ನಿಪಾತಸ್ಯ ಚ**—(ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಚೋದಯ** — ಚುದ ಪ್ರೇರಣೇ. ಧಾತು. **ಚುರಾದಿ. ಸತ್ಯಾಪಪಾಶ**—(ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್. ಣಿಜಂತದ ಮೇಲೆ ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. ಶಪ್‌ವಿಕರಣ. ತನ್ನಿಮಿತ್ತವಾಗಿ ಣಿಚಿಗೆ ಗುಣ. ಅಯಾದೇಶ. ತಿಜಂತನಿಘಾತಸ್ವರ ಬರುತ್ತದೆ. ||೧೦||



ಸಂಹಿತಾಪಾಠಃ

ವಿಶ್ವಾಹೇಂದ್ರೋ ಅಧಿವಕ್ತಾ ನೋ ಅಸ್ತ್ವಪರಿಹ್ವೃತಾಃ ಸನು-
ಯಾಮ ವಾಜಂ ।
ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ
ಪೃಥಿವೀ ಉತ ದ್ಯೌಃ ॥ ೧೧ ॥

ಪದಪಾಠಃ

ವಿಶ್ವಾಹಾ । ಇಂದ್ರಃ । ಅಧಿಽವಕ್ತಾ । ನಃ । ಅಸ್ತು । ಅಪರಿಽಹ್ವೃತಾಃ । ಸನು-
ಯಾಮ । ವಾಜಂ ।
ತತ್ । ನಃ । ಮಿತ್ರಃ । ವರುಣಃ । ಮಮಹಂತಾಂ । ಅದಿತಿಃ । ಸಿಂಧುಃ । ಪೃಥಿ-
ವೀ । ಉತ । ದ್ಯೌಃ ॥ ೧೧ ॥

ಸಾಯಣಭಾಷ್ಯಂ

ವ್ಯಾಖ್ಯಾತೇಯಂ ರೋಹಿಚ್ಛ್ಯಾವೇತಿ ವರ್ಗೇ । ಇಂದ್ರಃ ಸರ್ವೇಷ್ವಹಃಸ್ವಸ್ಮಾಕಂ ಪಕ್ಷಪಾತೇನ ವಕ್ತಾ ಭವತು । ವಯಂ ಚಾಕುಟಿಲಗತಯಃ ಸಂತ ಇಂದ್ರೇಣ ದತ್ತಮನ್ನಂ ಲಭಾಮಹೇ । ಯದಸ್ಮಾಭಿಃ ಪ್ರಾರ್ಥಿತಮಸ್ಮದೀಯಂ ತನ್ಮಿತ್ರಾದಯಃ ಪೂಜಿತಂ ಕುರ್ವಂತು ॥

ಪ್ರತಿಪದಾರ್ಥ

ವಿಶ್ವಾಹಾ—ಸರ್ವಕಾಲದಲ್ಲಿಯೂ । ನಃ—ನಮಗೆ । ಇಂದ್ರಃ—ಇಂದ್ರನು । **ಅಧಿವಕ್ತಾ**—ಅಭಿಮಾನವನ್ನು ತೋರಿಸುವ ವಚನವುಳ್ಳವನಾಗಿ । **ಅಸ್ತು**—ಆಗಿರಲಿ. (ನಾವೂ ಸಹ) । **ಅಪರಿಹ್ವೃತಾಃ**—ವಕ್ರವಾದ ಮಾರ್ಗವನ್ನು ಬಿಟ್ಟವರಾಗಿ (ಋಜುವಾದ ಮಾರ್ಗದಲ್ಲಿದ್ದುಕೊಂಡು) । **ವಾಜಂ**—(ಪ್ರಭೂತವಾದ) ಅನ್ನವನ್ನು । **ಸನುಯಾಮ**—ಅನುಭವಿಸೋಣ । **ನಃ**—ನಮ್ಮ । **ತತ್**—ಪ್ರಾರ್ಥಿತವಾದ ಇಷ್ಟಾರ್ಥವನ್ನು । ಮಿತ್ರಃ—ಮಿತ್ರನೂ । ವರುಣಃ—ವರುಣನೂ । **ಅದಿತಿಃ**—ಅದಿತಿಯೂ । **ಸಿಂಧುಃ**—ಸಾಗರಾಧಿದೇವತೆಯೂ । **ಪೃಥಿವೀ**—ಪೃಥ್ವಿಯೂ । ಉತ—ಮತ್ತು । ದ್ಯೌಃ—ದ್ಯುಲೋಕವೂ ಸಹ । **ಮಮಹಂತಾಂ**—ಸಂರಕ್ಷಿಸಲಿ ।

ಭಾವಾರ್ಥ

ಇಂದ್ರನು ನಮಗೆ ಸರ್ವಕಾಲದಲ್ಲಿಯೂ ಅಭಿಮಾನವಚನವುಳ್ಳವನಾಗಿರಲಿ ನಾವೂ ಕೂಡ ಯಾವಾಗಲೂ ಋಜುಮಾರ್ಗದಲ್ಲಿದ್ದುಕೊಂಡು ಪ್ರಭೂತವಾದ ಅನ್ನವನ್ನು ಅನುಭವಿಸೋಣ. ನಮ್ಮ ಪ್ರಾರ್ಥಿತವಾದ ಇಷ್ಟಾರ್ಥವನ್ನು ಮಿತ್ರನೂ, ವರುಣನೂ ಅದಿತಿಯೂ, ಸಾಗರಾಧಿದೇವತೆಯೂ, ಪೃಥ್ವಿಯೂ ಮತ್ತು ದ್ಯುಲೋಕವೂ ಸಹ ಸಂರಕ್ಷಿಸಲಿ.

English Translation

May Indra daily be our vindicator, and may we, with undiverted course, enjoy abundant food ; and may Mitra, Varuna, Aditi,—ocean, preserve it to us.

ವಿಶೇಷವಿಷಯಗಳು

**ವಿಶ್ವಾಹಾ**—ಎಂಬ ಈ ಋಕ್ಕು ೧೦೦ನೇ ಸೂಕ್ತದ ೧೯ನೆಯ ಋಕ್ಕಿನಲ್ಲಿಯೂ ಪಠಿತವಾಗಿರುವುದರಿಂದ ಇದರಲ್ಲಿರುವ ವಿಶೇಷವಿಷಯಗಳನ್ನು ಅಲ್ಲಿ ನೋಡಿ ತಿಳಿಯಬಹುದು. 263-264 ಪೇಜುಗಳನ್ನು ನೋಡಿ.

ವ್ಯಾಕರಣಪ್ರಕ್ರಿಯಾ

ಈ ಮಂತ್ರವು ಹಿಂದೆ ವ್ಯಾಖ್ಯಾತವಾದುದರಿಂದ ವ್ಯಾಕರಣಪ್ರಕ್ರಿಯೆಯೂ ಅಲ್ಲಿಯೇ (ಋ. ಸಂ ೧-೧೦೦-೧೯) ವಿವೃತವಾಗಿದೆ. ॥ ೧೧ ॥

ನೂರ ಎರಡನೇ ಸೂಕ್ತ ಸಮಾಪ್ತವು.

———:o:———

# ನೂರಮೂರನೆಯ ಸೂಕ್ತವು

ತತ್ರ ಇತ್ಯಷ್ಟರ್ಚಂ ದಶಮಂ ಸೂಕ್ತಂ ಕುತ್ಸಸ್ಯಾರ್ಷಮೈಂದ್ರಂ ತ್ರೈಷ್ಟುಭಂ । ತಥಾ ಚಾನುಕ್ರಾಂತಂ । ತತ್ತ್ರೇಽಷ್ಟಾವಿತಿ ॥ ತೃತೀಯೇ ಛಂದೋಮೇ ನಿಷ್ಕೇವಲ್ಯ ಇದಂ ಸೂಕ್ತಂ ನಿವಿದ್ಧಾನಂ । ವಿಶ್ವಜಿತ ಇತಿ ಖಂಡೇ ಸೂತ್ರಿತಂ । ತತ್ರ ಇಂದ್ರಿಯಮಿತಿ ನಿಷ್ಕೇವಲ್ಯಂ । ಅ. ೮-೭ । ಇತಿ ॥

ಅನುವಾದವು—ತತ್ತ ಇಂದ್ರಿಯಂ ಎಂಬ ಈ ಸೂಕ್ತವು ಹದಿನೈದನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕುತ್ಸನು ಋಷಿಯು. ಇಂದ್ರನು ದೇವತೆಯು. ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ತತ್ತೇಽಷ್ಟಾ** ಎಂದು ಮೊದಲಾಗಿ ಹೇಳಿರುವುದು. ತೃತೀಯಛಂದೋಮಾಮಂತ್ರಪಠನಮಾಡುವಾಗ ನಿಷ್ಕೇವಲ್ಯಶಸ್ತ್ರಮಂತ್ರಗಳಿಗೆ ಪೂರ್ವಭಾವಿಯಾಗಿ ಈ ಸೂಕ್ತವನ್ನು ನಿವಿದ್ಧಾನ ಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ವಿಶ್ವಜಿತೆ** ಎಂಬ ಖಂಡದ **ತತ್ತ ಇಂದ್ರಿಯಮಿತಿ ನಿಷ್ಕೇವಲ್ಯಂ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೭).

———:O:———

॥ ಓಂ ॥

## ಸೂಕ್ತ—೧೦೩

॥ ಮಂಡಲ—೧ ॥ ಅನುವಾಕ—೧೫ ॥ ಸೂಕ್ತ—೧೦೩ ॥

॥ ಅಷ್ಟಕ—೧ ॥ ಅಧ್ಯಾಯ—೭ ॥ ವರ್ಗ—೧೬, ೧೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೮ ॥

॥ ಋಷಿಃ—ಕುತ್ಸ ಆಂಗಿರಸಃ ॥

॥ ದೇವತಾ—ಇಂದ್ರಃ ॥

॥ ಛಂದಃ— ತ್ರಿಷ್ಟುಪ್ ॥

। ಸಂಹಿತಾಪಾಠಃ ।

ತತ್ತ ಇಂದ್ರಿಯಂ ಪರಮಂ ಪರಾಚೈರಧಾರಯಂತ ಕವಯಃ ಪುರೇದಂ।

ಕ್ಷಮೇದಮನ್ಯದ್ದಿವ್ಯ೧ನ್ಯದಸ್ಯ ಸಮೀ ಪೃಚ್ಯತೇ ಸಮನೇವ ಕೇತುಃ ॥೧॥

॥ ಪದಪಾಠಃ ॥

ತತ್ । ತೇ । ಇಂದ್ರಿಯಂ । ಪರಮಂ । ಪರಾಚೈಃ । ಅಧಾರಯಂತ । ಕವಯಃ । ಪುರಾ । ಇದಂ ।

ಕ್ಷಮಾ । ಇದಂ । ಅನ್ಯತ್ । ದಿವಿ । ಅನ್ಯತ್ । ಅಸ್ಯ । ಸಂ । ಈಮಿತಿ । ಪೃಚ್ಯತೇ । ಸಮನಾಽಇವ । ಕೇತುಃ ॥ ೧ ॥

ಸಾಯಣಭಾಷ್ಯಂ

ಹೇ ಇಂದ್ರ ತೇ ತ್ವದೀಯಂ ಪರಮಮುತ್ಕೃಷ್ಟಂ ತತ್ಪ್ರಸಿದ್ಧಮಿದಂ ವರ್ತಮಾನಮಿಂದ್ರಿಯಂ ಬಲಂ ಪುರಾ ಪೂರ್ವಸ್ಮಿನ್ಕಾಲೇ ಕವಯಃ ಕ್ರಾಂತದರ್ಶಿನಃ ಸ್ತೋತಾರಃ ಪರಾಚೈಃ ಪರಾಚೀನಂ ಪರಾಙ್ಮುಖಂ । ಯದ್ವಾ । ಪರಾಚೈಃ ಪರಾಂಚನೈಃ ಪರಾಗಮನೈರ್ಯುಕ್ತಂ । ಯುದ್ಧಾಭಿಮುಖಮೇವಾಧಾರಯಂತ । ಧೃತವಂತಃ । ಅಪಿ ಚಾಸ್ಯೇಂದ್ರಸ್ಯಾನ್ಯದೇಕಮಿದಮಗ್ನ್ಯಾಖ್ಯಂ ಜ್ಯೋತಿಃ ಕ್ಷಮಾ ಕ್ಷಮಾಯಾಂ ಭೂಮೌ ವರ್ತತೇ । ಅನ್ಯದಸ್ಯೈಕಂ ಸೂರ್ಯಾಖ್ಯಂ ದಿವಿ ದ್ಯುಲೋಕೇ । ಈಂ ತದಿದಮುಭಯವಿಧಮಿಂದ್ರಸ್ಯ ಜ್ಯೋತಿಃ ಸಂಪೃಚ್ಯತೇ । ಪರಸ್ಪರಂ ಸಂ ಯುಜ್ಯತೇ । ರಾತ್ರಾವಾದಿತ್ಯೋಽಗ್ನಿನಾ ಸಂಯುಕ್ತೋ ಭವತಿ । ಅಗ್ನಿಂ ವಾವಾದಿತ್ಯಃ ಸಾಯಂ ಪ್ರವಿಶತಿ । ತಸ್ಮಾದಗ್ನಿರ್ದೂರಾನ್ನಕ್ತಂ ದದೃಶ ಇತಿ ಶ್ರುತೇಃ । ಅಹನಿ ತ್ವಗ್ನಿಃ ಸೂರ್ಯೇಣ ಸಂಗಚ್ಛತೇ । ಉದ್ಯಂತಂ ವಾವಾದಿತ್ಯಮಗ್ನಿರನುಸಮಾರೋಹತಿ । ತಸ್ಮಾದ್ಧೂಮ ಏವಾಗ್ನೇರ್ದಿವಾ ದದೃಶ ಇತಿ ಶ್ರುತೇಃ । ತೈ. ಬ್ರಾ. ೨-೧-೨-೯, ೧೦ । ಅನಯೋಃ ಪರಸ್ಪರಸಂಗಮನೇ ದೃಷ್ಟಾಂತಃ । ಸಮನೇವ ಕೇತುಃ । ಸಮನಶಬ್ದಃ ಸಂಗ್ರಾಮವಾಚೀ । ಯಥಾ ಸಮನೇ ಸಂಗ್ರಾಮೇ ಯಧ್ಯಮಾನಯೋರುಭಯೋಃ ಕೇತುರ್ಧ್ವಜೋ ಧ್ವಜಾಂತರೇಣ ಸಂಯುಜ್ಯತೇ ತದ್ವತ್ ॥ ಇಂದ್ರಿಯಂ । ಇಂದ್ರಸ್ಯ ಲಿಂಗಂ ಬಲಂ । ಇಂದ್ರಿಯಮಿಂದ್ರಲಿಂಗಮಿತಿ ಘಚ್ಪ್ರತ್ಯಯಾಂತೋ ನಿಪಾತ್ಯತೇ । ಪರಾಚೈಃ । ಅವ್ಯಯಮೇತತ್ ಉಚ್ಚೈರ್ನೀಚೈರಿತಿ ಯಥಾ । ಯಾಸ್ಕಸ್ತ್ವಾಹ । ಪರಾಚೈಃ ಪರಾಂಚನೈಃ । ನಿ. ೧೧-೨೫ । ಇತಿ । ಕ್ಷಮಾ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ । ಈಮೋ ಮಲೋಪಃ ಸಾಂಹಿತಿಕಶ್ಛಾಂದಸಃ । ಸಮನೇವ । ಷಮ ಷ್ಟಮ ಅವೈಕ್ಲವ್ಯೇ । ಅನ್ಯೇಭ್ಯೋಽಪಿ ದೃಶ್ಯತೇ । ಪಾ. ೩-೩-೧೩೦ । ಇತಿ ಯುಚ್ । ಸುಪಾಂ ಸುಲುಗಿತಿ ಸಪ್ತಮ್ಯಾ ಆಕಾರಃ । ಇವೇನ ವಿಭಕ್ತ್ಯಲೋಪಃ ಪೂರ್ವಪದಪ್ರಕೃತಿಸ್ವರತ್ವಂ ಚೇತಿ ಸಮಾಸಃ ॥

ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ) । ತೇ—ನಿನ್ನ । ಪರಮಂ—ಉತ್ಕೃಷ್ಟವಾದುದೂ । ತತ್—ಪ್ರಸಿದ್ಧವಾದುದೂ । ಇದಂ—ಎದುರಿಗೆ ಕಾಣಿಸುತ್ತಿರುವುದೂ ಆದ । ಇಂದ್ರಿಯಂ—ಬಲವನ್ನು । ಪುರಾ—ಪೂರ್ವ

ನ್ನೂ । **ಕವಯಃ**—ಕ್ರಾಂತದರ್ಶಿಗಳಾದ ಸ್ತೋತೃಗಳು । **ಪರಾಚೈಃ**—(ದೇವನಿವಾಸಕ್ಕೆ) ಪರಾಙ್ಮುಖವಾಗಿ (ಶತ್ರುಗಳ ಅಭಿಮುಖವಾಗಿ) ಇರುವಂತೆಯೇ । **ಆಧಾರಯಂತ**—ಗ್ರಹಿಸಿ ತಿಳಿದರು. । **ಅಸ್ಯ**—ಈ ಇಂದ್ರನ । **ಅನ್ಯತ್**—ಒಂದು ಅಂಶವಾದ । **ಇದಂ**—ಅಗ್ನ್ಯಾಖ್ಯವಾದ ತೇಜಸ್ಸು । **ಕ್ಷಮಾ**—ಭೂಮಿಯ ಮೇಲೆಯೂ । **ಅನ್ಯತ್**—ಇನ್ನೊಂದು ಅಂಶವಾದ ಸೂರ್ಯಾಖ್ಯವಾದ ಜ್ಯೋತಿಯು । **ದಿವಿ**—ಅಂತರಿಕ್ಷದಲ್ಲಿಯೂ । (ಹೀಗೆ) **ಈಂ**—ಈ ಎರಡುವಿಧವಾದ ಇಂದ್ರನ ಜ್ಯೋತಿಯೂ ಸಹ । **ಸಮನಾ**—ಯುದ್ಧರಂಗದಲ್ಲಿ । **ಕೇತುಃ ಇವ**—(ಎರಡು ಪಕ್ಷಗಳ) ಧ್ವಜಗಳಂತೆ । **ಸಂ ಪೃಚ್ಯತೇ** ಒಟ್ಟಿಗೆ ಸೇರಿಕೊಳ್ಳುತ್ತವೆ ।

ಭಾವಾರ್ಥ

ಎಲೈ ಇಂದ್ರನೇ, ನಿನ್ನ ಉತ್ಕೃಷ್ಟವಾದುದೂ, ಪ್ರಸಿದ್ಧವಾದುದೂ, ಎಮಗೆ ಕಾಣಿಸಿಕೊಂಡಿರುವುದೂ ಆದ ಬಲವನ್ನು ಪೂರ್ವದಲ್ಲಿ ಕ್ರಾಂತದರ್ಶಿಗಳಾದ ಸ್ತೋತೃಗಳು ಯಾವಾಗಲೂ ಯುದ್ಧಾಭಿಮುಖವಾಗಿರುವಂತೆಯೇ ತಿಳಿದರು. ಇಂದ್ರನ ಒಂದಂಶವಾದುದೂ ಅಗ್ನ್ಯಾಖ್ಯವಾದುದೂ ಆದ ತೇಜಸ್ಸು ಭೂಮಿಯ ಮೇಲೆಯೂ ಇನ್ನೊಂದಂಶವಾದುದೂ, ಸೂರ್ಯಾಖ್ಯವಾದುದೂ ಆದ ಜ್ಯೋತಿಯು ಅಂತರಿಕ್ಷದಲ್ಲಿಯೂ ಹರಡಿ ಇವೆರಡೂ ಸಹ ಯುದ್ಧರಂಗದಲ್ಲಿ ಎರಡು ಪಕ್ಷಗಳ ಧ್ವಜವೂ ಒಟ್ಟಿಗೆ ಕಲೆತು ಸೇರುವಂತೆ ಅಹಸ್ಸಿನಲ್ಲಿ ಅಗ್ನಿಯು ಸೂರ್ಯನೊಂದಿಗೂ ರಾತ್ರಿಯಲ್ಲಿ ಸೂರ್ಯನು ಅಗ್ನಿಯೊಂದಿಗೂ ಸೇರಿಕೊಳ್ಳುತ್ತವೆ.

English Translation

The sages have formerly been possessed of this your supreme power, Indra, as if it were present with them, one light of whom shines upon the earth, the other in heaven, and both are in combination with each other, as banner (mingles with banner) in battle.

॥ ವಿಶೇಷವಿಷಯಗಳು ॥

**ಇಂದ್ರಿಯಂ**—ಬಲಂ । ಈ ಋಕ್ಕಿನಲ್ಲಿ ಇಂದ್ರಿಯಶಬ್ದಕ್ಕೆ ಬಲವೆಂದು ಸಾಯಣರೂ, ಬಲ ಅಥವಾ ಧನವೆಂದು ಸ್ಕಂದಸ್ವಾಮಿಗಳೂ ಅರ್ಥಮಾಡಿದ್ದಾರೆ. ನಿರುಕ್ತಕಾರರು ಈ ಶಬ್ದವನ್ನು **ಮಘಂ, ರೇಕ್ಣಃ** ಇತ್ಯಾದಿ ೨೮ ಧನನಾಮಗಳಲ್ಲಿ ಸೇರಿಸಿದ್ದಾರೆ. (ನಿ. ೨-೯) ಬಲವಾಗಲಿ, ಧನವಾಗಲಿ ಅಥವಾ ಇನ್ನಾವ ಬೇರೆ ಅರ್ಥವಾಗಲಿ, ಇಂದ್ರನಿಗೆ ಸಂಬಂಧಿಸಿದುದರಿಂದ ಇಂದ್ರಿಯವೆಂಬ ಅರ್ಥದ ಅಥವಾ ಶಬ್ದದ ನಿಷ್ಪತ್ತಿಯಾಗಿದೆಯೆಂದು ಋಕ್ಸಂಹಿತೆಯ ಅನೇಕ ವಾಕ್ಯಗಳಿಂದ ತಿಳಿಯುತ್ತದೆ. ಈ ಎರಡು ಅರ್ಥಗಳಲ್ಲದೆ ಇಂದ್ರನಿಗೆ ಅರ್ಪಿಸಲು ಯೋಗ್ಯವಾದುದು ಎಂದೂ, ಇಂದ್ರನಿಗೆ ತೃಪ್ತಿಯನ್ನುಂಟುಮಾಡತಕ್ಕದ್ದೆಂದೂ ಸಹ ಅರ್ಥವಾಗುತ್ತದೆ.

ಸ ಇದ್ವನೇ ನಮಸ್ಯುಭಿರ್ವಚಸ್ಯತೇ ಚಾರು ಜನೇಷು ಪ್ರಬ್ರುವಾಣ ಇಂದ್ರಿಯಂ ।
(ಋ. ಸಂ. ೧-೫೫-೪)

ಮಾಂತರಾಂ ಭುಜಮಾ ರೀರಿಷೋ ನಃ ಶ್ರದ್ಧಿತಂ ತೇ ಮಹತ ಇಂದ್ರಿಯಾಯ ।
(ಋ. ಸಂ. ೧-೧೦೪-೬)

ನ ಕ್ಷೋಣೀಭ್ಯಾಂ ಪರಿಭ್ವೇ ತ ಇಂದ್ರಿಯಂ ನ ಸಮುದ್ರೈಃ ಪರ್ವತೈರಿಂದ್ರ ತೇ ರಥಃ ।

(ಋ. ಸಂ. ೨-೧೬-೩)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರಿಯಂ—ಬಲಂ ; ಇಂದ್ರಿಯಾಯ ವೀರ್ಯಾಯ ಎಂದು ಇಂದ್ರನ ವೀರ್ಯವನ್ನೂ ಸಾಮರ್ಥ್ಯವನ್ನೂ ವರ್ಣಿಸಿದೆ.

ನಿರಗ್ನಯೋ ರುರುಚುರ್ನಿರು ಸೂರ್ಯೋ ನಿಃ ಸೋಮ ಇಂದ್ರಿಯೋ ರಸಃ ।

(ಋ. ಸಂ. ೮-೩-೨೦)

ಎಂಬ ಋಕ್ಕಿನಲ್ಲಿ ಇಂದ್ರೇಣ ಸೇವ್ಯಃ ಇಂದ್ರಿಯಃ ರಸಃ । ಇಂದ್ರನು ಸೇವಿಸಲು ಯೋಗ್ಯವಾದ ಸೋಮರಸವೆಂದೂ,

ನಹೀ ನ್ವಸ್ಯ ಮಹಿಮಾನಮಿಂದ್ರಿಯಂ ಸ್ವರ್ಗೃಣಂತ ಆನಶುಃ ।

(ಋ. ಸಂ. ೮-೩-೧೩)

ಎಂಬ ಋಕ್ಕಿನಲ್ಲಿ ಇಂದ್ರಿಯಮಿಂದ್ರಸ್ಯ ಲಿಂಗಮಿಂದ್ರಸ್ಯೈವಾಸಾಧಾರಣಂ । ಇಂದ್ರನ ಅಸಾಧಾರಣವಾದ ಮಹತ್ತ್ವವೆಂದೂ,

ಆದಿದ್ಧ ನೇಮ ಇಂದ್ರಿಯಂ ಯಜಂತ ಆದಿತ್ಪಕ್ತಿಃ ಪುರೋಳಾಶಂ ರಿರಿಚ್ಯಾತ್ ।

(ಋ. ಸಂ. ೪-೨೪-೫)

ಎಂಬಲ್ಲಿ ಬಲವಂತಮಿಂದ್ರಂ ಎಂದು ಇಂದ್ರನಿಗೆ ಪರ್ಯಾಯಶಬ್ದವಾಗಿಯೂ,

ಯಸ್ಯ ಧಾಮ ಶ್ರವಸೇ ನಾಮೇಂದ್ರಿಯಂ ಜ್ಯೋತಿರಕಾರಿ ಹರಿತೋ ನಾಯಸೇ ।

(ಋ. ಸಂ. ೧-೫೭-೩.)

ಎಂಬಲ್ಲಿ ಇಂದ್ರತ್ವಸ್ಯ ಪರಮೈಶ್ವರ್ಯಸ್ಯ ಲಿಂಗಂ ಯಸ್ಯ ಇಂದ್ರಸ್ಯ ಜ್ಯೋತಿಃ ಎಂದೂ,

ಆಪಚ್ಛ್ಲೋಕಮಿಂದ್ರಿಯಂ ಪೂಯಮಾನಃ ಪ್ರತಿ ದೇವಾ ಅಜುಷತ ಪಯೋಭಿಃ ।

(ಋ. ಸಂ. ೯-೯೨-೧)

ಇತ್ಯಾದಿಋಕ್ಕುಗಳಲ್ಲಿ ಇಂದ್ರಸ್ಯ ಪರ್ಯಾಪ್ತಂ। ಇಂದ್ರನಿಗೆ ತೃಪ್ತಿಯನ್ನುಂಟುಮಾಡಲು ಸಾಕಾಗುವಷ್ಟು ಎಂತಲೂ,

ಯಥಾ ಕ್ಷಯಾಮ ಸರ್ವವೀರಯಾ ವಿಶಾ ತನ್ನಃ ಶರ್ಧಾಯ ಧಾಸಥಾ ಸ್ವಿಂದ್ರಿಯಂ ।

(ಋ. ಸಂ. ೧-೧೧೧-೨)

ಉದ್ಯತ್ಸಹಃ ಸಹಸ ಆಜನಿಷ್ಟ ದೇದಿಷ್ಟ ಇಂದ್ರ ಇಂದ್ರಿಯಾಣಿ ವಿಶ್ವಾ ।

( ಋ. ಸಂ. ೫-೩೧-೩ )

ಅನು ತೇ ದಾಯಿ ಮಹ ಇಂದ್ರಿಯಾಯ ಸತ್ರಾ ತೇ ವಿಶ್ವಮನು ವೃತ್ರಹತ್ಯೇ ।

(ಋ. ಸಂ. ೬-೨೫-೮)

ಇತ್ಯಾದಿ ಋಕ್ಕುಗಳಲ್ಲಿ ಧನ, ಐಶ್ವರ್ಯ ಎಂದೂ ಅರ್ಥವಾಗುತ್ತದೆ. ಈ ರೀತಿ ಇಂದ್ರಿಯಶಬ್ದಕ್ಕೆ ಆಯಾ ಸಂದರ್ಭಕ್ಕನುಸಾರವಾಗಿ ನಿರ್ವಚನವಿರುವುದರಿಂದ ಬೇರೆಬೇರೆಯಾಗಿ ಆಗುವ ಅರ್ಥಗಳಲ್ಲಿ ಪ್ರಕೃತವಾದ ಈ ಋಕ್ಕಿನಲ್ಲಿ ಬಲವೆಂದಾಗಲಿ ಅಥವಾ ಧನವೆಂದಾಗಲಿ ಅರ್ಥವನ್ನು ಮಾಡಬಹುದು.

ಪರಾಚೈಃ—ಈ ಪದಕ್ಕೆ ಭಾಷ್ಯಕಾರರಿಗೇ ನಿಷ್ಕರ್ಷವಾಗಿ ಅರ್ಥವಾಗಿಲ್ಲ. ತಾವು ಮೊದಲು ಒಂದು ಅರ್ಥವನ್ನು ಹೇಳಿ ಅನಂತರ ನಿರುಕ್ತದಲ್ಲಿರುವ ನಿರ್ವಚನವನ್ನೂ ಉದಹರಿಸಿದ್ದಾರೆ. **ಪರಾಚೈಃ—ಪರಾಚೀನಂ । ಪರಾಙ್ಮುಖಂ ।** ಪರಾಙ್ಮುಖವಾಗಿ ಎಂದು ಮೊದಲು ವಿವರಿಸಿ ಅನಂತರ **ಪರಾಚೈಃ ಪರಾಂಚನೈಃ ಪರಾಗಮನೈರ್ಯುಕ್ತಂ ।** ಪರಾಗಮನದಿಂದ ಕೂಡಿದ ಎಂದು ನಿರುಕ್ತದ ವಿವರಣೆಯನ್ನೂ ಹೇಳಿರುತ್ತಾರೆ. ( ನಿ. ೧೧-೨೫ ) ನಿರುಕ್ತಕಾರರು. ಹತ್ತನೇ ಮಂಡಲದ—

**ಕಿಮಿಚ್ಛಂತೀ ಸರಮಾ ಪ್ರೇದಮಾನಡ್ದೂರೇ ಹ್ಯಧ್ವಾ ಜಗುರಿಃ ಪರಾಚೈಃ ।**

(ಋ. ಸಂ. ೧೦-೧೦೮-೧)

ಎಂಬ ಋಕ್ಕನ್ನು ವಿವರಿಸುವಾಗ **ಪರಾಚೈಃ** ಎನ್ನುವುದಕ್ಕೆ **ಪರಾಂಚನೈರಚಿತಃ** ಎಂದೂ, ಅದಕ್ಕೆ ದುರ್ಗಾಚಾರ್ಯರು **ಪರಾಙ್ಮುಖೈಃ ಅಂಚನೈರ್ಗಮನೈಃ ಅಚಿತೋ ಗತಃ, ವಿಪ್ರಕೃಷ್ಟೋ ದೇವನಿವಾಸಾತ್** ಎಂದೂ ವ್ಯಾಖ್ಯಾನವನ್ನು ಮಾಡಿದ್ದಾರೆ. ಇಲ್ಲಿಯಲ್ಲಿ, ಇಂದ್ರನ ಸಾಮರ್ಥ್ಯವು ಯಾವಾಗಲೂ ದೇವಲೋಕಕ್ಕೆ ಪರಾಙ್ಮುಖವಾಗಿಯೇ ಇದ್ದಿತು, ಎಂದರೆ, ಯಾವಾಗಲೂ ಸಹ ಶತ್ರುವಿಗೆ ಅಭಿಮುಖವಾಗಿಯೇ ಇದ್ದು ಶತ್ರುಜಯದಲ್ಲಿಯೇ ತತ್ಪರವಾಗಿದ್ದಿತು ಎಂದಭಿಪ್ರಾಯವಿರಬಹುದೆಂದು ಕಾಣುತ್ತದೆ. ಇದೇ ಪದವು

**ಬಾಧಸ್ವ ದೂರೇ ನಿರ್ಋತಿಂ ಪರಾಚೈಃ ಕೃತಂ ಚಿದೇನಃ ಪ್ರ ಮುಮುಗ್ಧ್ಯಸ್ಮತ್ ।**

(ಋ. ಸಂ. ೧-೨೪-೯)

**ಆರೇ ಬಾಧೇಥಾಂ ನಿರ್ಋತಿಂ ಪರಾಚೈರಸ್ಮೇ ಭದ್ರಾ ಸೌಶ್ರವಸಾನಿ ಸಂತು ।**

(ಋ. ಸಂ- ೬.೭೪-೨)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಪರಾಙ್ಮುಖವಾಗಿ ಎಂದು ಅರ್ಥವಾಗಿ ಸಂದರ್ಭಕ್ಕೆ ಸರಿಯಾಗಿ ಅರ್ಥವು ಹೊಂದಿಕೊಳ್ಳುತ್ತದೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಮಾತ್ರ ಅಲ್ಲಿನ ಅಭಿಪ್ರಾಯವನ್ನು ವಿಶದವಾಗಿ ತಿಳಿಸುವಹು. ನಿಷ್ಕರ್ಷವಾಗಿ ಅರ್ಥವಾಗುವುದು ಕಷ್ಟ. ಮೇಲೆಯೇ ಹೇಳಿರುವಂತೆ ಇಂದ್ರನ ಬಲವು ಯಾವಾಗಲೂ ದೇವಲೋಕದಿಂದ ಪರಾಙ್ಮುಖವಾಗಿ ಶತ್ರುಗಳ ಅಭಿಮುಖವಾಗಿಯೇ ಇದ್ದಿತೆಂದೂ ಹೇಳಿದರೆ ತಪ್ಪಾಗಲಾರದು.

**ಕವಯಃ ಅಧಾರಯಂತ—ಸ್ತೋತಾರಃ ಧೃತವಂತಃ ।** ಸ್ತೋತೃಗಳು ಇಂದ್ರನ ಶಕ್ತಿಯು ಯಾವಾಗಲೂ ಶತ್ರುಗಳ ಅಭಿಮುಖವಾಗಿರುವುದನ್ನು ಗ್ರಹಿಸಿದರು ಎಂದರ್ಥ.

**ಕ್ಷಮೇದಮನ್ಯದ್ದಿವಿ—ಇದಂ ಅಗ್ನ್ಯಾಖ್ಯಂ ಜ್ಯೋತಿಃ ಕ್ಷಮಾ ಭೂಮೌ ವರ್ತತೇ । ಅನ್ಯತ್ ಅಪ್ಯೇಕಂ ಸೂರ್ಯಾಖ್ಯಂ ದ್ಯುಲೋಕೇ ।** ಇಂದ್ರನ ಅಗ್ನಿರೂಪವಾದ ತೇಜಸ್ಸು ಪೃಥಿವಿಯಲ್ಲಿಯೂ ಸೂರ್ಯರೂಪವಾದ ಜ್ಯೋತಿಯು ಅಂತರಿಕ್ಷದಲ್ಲಿಯೂ ಪ್ರಸರಿಸಿ,

**ಉದ್ಯಂತಂ ವಾ ವಾದಿತ್ಯಮಗ್ನಿರನುಸಮಾರೋಹತಿ ।** ( ತೈ. ಬ್ರಾ. ೨-೧-೨-೯) ಎಂದು ವರ್ಣಿಸಿರುವಂತೆ ಅಹಸ್ಸಿನಲ್ಲಿ ಅಗ್ನಿಯು ಸೂರ್ಯನೊಂದಿಗೂ, ರಾತ್ರಿಯಲ್ಲಿ ಸೂರ್ಯನು ಅಗ್ನಿಯೊಂದಿಗೂ ಸೇರಿಕೊಳ್ಳುತ್ತಾರೆ ಎಂದು ವರ್ಣಿಸಿದೆ.

**ಸಮನಾ ಇವ ಕೇತುಃ—ಸಮನಶಬ್ದಃ ಸಂಗ್ರಾಮನಾಮ (ನಿ.೨.೧೭) ಯಥಾ ಸಮನೇ ಸಂಗ್ರಾಮೇ ಯುಧ್ಯಮಾನಯೋಃ ಉಭಯೋಃ ಧ್ವಜಃ ಧ್ವಜಾಂತರೇಣ ಸಂಯುಜ್ಯತೇ ತದ್ವತ್ ।** ಸಮನವೆಂದರೆ ಸಂಗ್ರಾಮವೆಂದರ್ಥ. ಯಾವ ರೀತಿ ಯುದ್ಧದಲ್ಲಿ ಎರಡು ಧ್ವಜಗಳೂ ಒಟ್ಟಿಗೆ ಸೇರಿಕೊಳ್ಳುವುವೋ ಹಾಗೆ ಎಂಬ ಉಪಮಾನವನ್ನು ಸೂರ್ಯಾಗ್ನಿಗಳ ಸಂಗಮಕ್ಕೆ ಹೋಲಿಸಿದೆ. **ಸಮನಾ ಇವ** ಎಂಬ ಉಪಮಾನಸೂಚಕವಾದ ಪದಗಳು ಇನ್ನೂ ಕೆಲವುಕಡೆಗಳಲ್ಲಿ ಉಪಯೋಗಿಸಲ್ಪಟ್ಟಿದ್ದರೂ ಸಹ ಅಲ್ಲಿ ಅರ್ಥವ್ಯತ್ಯಾಸವಿರುವುದನ್ನು ಗಮನಿಸಬೇಕು. ಇಲ್ಲಿ ಸ್ವರವ್ಯತ್ಯಾಸವಿರುವುದೇ ಕಾರಣ. **ಸ ಮ ನಾ ಇವ** ಎಂಬ ಕ್ರಮದಲ್ಲಿರುವ ಪದವು ಈ ಋಕ್ಕಿನಲ್ಲಿ ಮಾತ್ರ ಪ್ರಯೋಗದಲ್ಲಿದೆ. ಉಳಿದ-

**ಅಭಿ ಪ್ರವಂತ ಸಮನೇವ ಯೋಷಾಃ ಕಲ್ಯಾಣ್ಯಃ ಸ್ಮಯಮಾನಾಸೋ ಅಗ್ನಿಂ ।**
( ಋ. ಸಂ. ೪-೫೮-೮)

**ತೇ ಆಚರಂತೀ ಸಮನೇವ ಯೋಷಾ ಮಾತೇವ ಪುತ್ರಂ ಬಿಭೃತಾಮುಪಸ್ಥೇ ।**
( ಋ. ಸಂ. ೬-೭೫-೪)

**ಸಮನೇವ ವಪುಷ್ಯತಃ ಕೃಣವನ್ಮಾನುಷಾ ಯುಗಾ ।**
(ಋ. ಸಂ. ೮-೬೨-೯)

ಎಂಬ ಋಕ್ಕುಗಳಲ್ಲಿ **ಸಮನಾಽಇವ** ಎಂಬ ಆನುಪೂರ್ವಿಯಲ್ಲಿದ್ದು **ಸಮಾನಮನಸ್ಕಾ ಯೋಷಿದಿವ।** ಸಮಾನವಾದ ಮನಸ್ಸುಳ್ಳ ಯೋಷಿತ್ ಎಂದರೆ ಹೆಂಗಸಿನಂತೆ ಎಂದರ್ಥ. ಪ್ರಕೃತವಾದ ಈ ಋಕ್ಕಿನಲ್ಲಿ ಮಾತ್ರ **ಸಮನಶಬ್ದಕ್ಕೆ** ಸಂಗ್ರಾಮವೆಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಇಂದ್ರಿಯಮ್**—ಇಂದ್ರಸ್ಯ ಲಿಂಗಂ ಬಲಂ ಇಂದ್ರಿಯಮ್. **ಇಂದ್ರಿಯಮಿಂದ್ರಲಿಂಗಮಿಂದ್ರ—** (ಪಾ. ಸೂ. ೫-೨-೯೩) ಎಂಬುದರಿಂದ ಘಚ್‌ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. **ಚಿತಃ**—ಸೂತ್ರದಿಂದ ಅಂತೋದಾತ್ತವಾಗುತ್ತದೆ.

**ಪರಾಚೈಃ**—ಉಚ್ಚೈಃ ನೀಚೈಃ ಎಂಬಂತೆ ಇದು ಒಂದು ಅವ್ಯಯ. ಯಾಸ್ಕರು ಈ ರೀತಿಯಾಗಿ ಹೇಳಿರುತ್ತಾರೆ. ಪರಾಚೈಃ ಪರಾಂಚನೈಃ (ನಿರು. ೧೧-೨೫) ಇತಿ.

**ಅಧಾರಯಂತ**—ಧೃಙ್ ಅವಸ್ಥಾನೇ ಧಾತು ಪ್ರಯೋಜಕವ್ಯಾಪಾರಕೋರುವುದರಿಂದ ಣಿಚ್ ಣಿಜಂತದ ಮೇಲೆ ಲಙ್ ಪ್ರಥಮಪುರುಷಬಹುವಚನರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಕ್ಷಮಾ**— ಇದಕ್ಕೆ ಸಪ್ತಮೀವಿಭಕ್ತಿ ಪರವಾದಾಗ **ಸುಪಾಂ ಸುಲುಕ್**— (ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲುಕ್.

**ದಿವಿ**— **ಊಡಿದಂ ಪದಾದಿ**— (ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಈಮ್**— ಸಂಹಿತಾದಲ್ಲಿ ಛಾಂದಸವಾಗಿ ಇದರ ಮಕಾರಕ್ಕೆ ಲೋಪ ಬರುತ್ತದೆ.

**ಸಮನೇವ**— ಷಮ ಷ್ಟಮ ಅವೈಕ್ಲವ್ಯೇ ಧಾತು. **ಅನ್ಯೇಭ್ಯೋಽಪಿ ದೃಶ್ಯತೇ**— (ಪಾ. ಸೂ. ೩-೩-೧೩೦) ಎಂಬುದರಿಂದ ಇದಕ್ಕೆ ಯುಚ್ ಪ್ರತ್ಯಯ **ಯುವೋರನಾಕೌ**— (ಪಾ. ಸೂ. ೭-೨-೧) ಎಂಬುದರಿಂದ ಅದಕ್ಕೆ ಅನಾದೇಶ. ಧಾತ್ವಾದಿಗೆ ಸತ್ವ. ಇದಕ್ಕೆ ಸಪ್ತಮೀವಿಭಕ್ತಿಪರವಾದಾಗ **ಸುಪಾಂ ಸುಲುಕ್**— (ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. ಸಮನಾ ಎಂದು ರೂಪವಾಗುತ್ತದೆ. ಸಮನಾ ಇವ ಸಮನೇವ. **ಇವೇನ ವಿಭಕ್ತ್ಯಲೋಪಃ ಪೂರ್ವಪದ ಪ್ರಕೃತಿಸ್ವರತ್ವಂ ಚ**— ಎಂಬುದರಿಂದ ಸಮಾಸವಾಗುತ್ತದೆ. ॥ ೧ ॥

———:o:———

ಸಂಹಿತಾಪಾಠಃ

ಸ ಧಾರಯತ್ಪೃಥಿವೀಂ ಪಪ್ರಥಚ್ಚ ವಜ್ರೇಣ ಹತ್ವಾ ನಿರಪಃ ಸಸರ್ಜ ।
ಅಹನ್ನಹಿಮಭಿನದ್ರೌಹಿಣಂ ವ್ಯಹನ್ವ್ಯಂಸಂ ಮಘವಾ ಶಚೀಭಿಃ ॥ ೨ ॥

। ಪದಪಾಠಃ ।

ಸಃ । ಧಾರಯತ್ । ಪೃಥಿವೀಂ । ಪಪ್ರಥತ್ । ಚ । ವಜ್ರೇಣ । ಹತ್ವಾ । ನಿಃ । ಅಪಃ । ಸಸರ್ಜ ।

ಅಹನ್ । ಅಹಿಂ । ಅಭಿನತ್ । ರೌಹಿಣಂ । ವಿ । ಅಹನ್ । ವಿऽಅಂಸಂ । ಮಘऽವಾ । ಶಚೀಭಿಃ ॥ ೨ ॥

॥ ಸಾಯಣಭಾಷ್ಯಂ ॥

ಸ ಇಂದ್ರಃ ಪೃಥಿವೀಮಸುರೈಃ ಪೀಡಿತಾಂ ಭೂಮಿಂ ಧಾರಯತ್ । ಧೃತವಾನ್ । ಪೀಡಾರಾಹಿತ್ಯೇನ ಸ್ಥಿತಾಮಕರೋದಿತ್ಯರ್ಥಃ । ತದನಂತರಂ ಪಪ್ರಥಚ್ಚ । ತಾಂ ಭೂಮಿಂ ವಿಸ್ತೀರ್ಣಾಮಕರೋತ್ । ಅಪಿ ಚ ವಜ್ರೇಣಾಯುಧೇನ ಹಂತವ್ಯಾನ್ವೃತ್ರಾದೀನ್ಹತ್ವಾಪೋ ವೃಷ್ಟ್ಯುದಕಾನಿ ನಿಃ ಸಸರ್ಜ । ಮೇಘಾನ್ನಿರ್ಗಮಯಾಮಾಸ । ಏತದೇವ ಸ್ಪಷ್ಟೀಕ್ರಿಯತೇ । ಅಹಿಮಂತರಿಕ್ಷೇ ವರ್ತಮಾನಂ ಮೇಘಮಹನ್ । ವಜ್ರೇಣ ವರ್ಷಣಾರ್ಥಮತಾಡಯತ್ । ರೌಹಿಣಂ । ರೌಹಿಣೋ ನಾಮ ಕಶ್ಚಿದಸುರಃ । ತಂ ಚ ವ್ಯಭಿನತ್ । ವ್ಯದಾರಯತ್ । ಅಪಿ ಚ ಮಘವಾ ಧನವಾನಿಂದ್ರಃ ಶಚೀಭಿರಾತ್ಮೀಯೈರ್ಯುದ್ಧಕರ್ಮಭಿರ್ವ್ಯಂಸಂ ವಿಗತಭುಜಂ ವೃತ್ರಾಸುರಮಹನ್ । ಅವಧೀತ್ ॥ ಪಪ್ರಥತ್ । ಪೃಥುಂ ಕರೋತಿ ಪ್ರಥಯತಿ । ತತ್ಕರೋತೀತಿ ಣಿಚ್ । ಣಾವಿಷ್ಠವತ್ಪ್ರಾತಿಪದಿಕಸ್ಯ ಕಾರ್ಯಂ । ಪಾ. ೬-೪-೧೫೫-೧ । ಇತಿ ವಚನಾದ್ರ ಋತೋ ಹಲಾದೇರ್ಲಘೋಃ । ಪಾ. ೬.೪-೧೬೧ । ಇತಿ ಋಕಾರಸ್ಯ ರತ್ವಂ । ಟೇರಿತಿ ಟಿಲೋಪಃ । ತಸ್ಯ ಸ್ಥಾನಿವದ್ಭಾವಾದ್ವೃದ್ಧ್ಯಭಾವಃ । ಪ್ರಥಯತೇರ್ಲುಙಿ ಚಙಃ ಣಿಲೋಪಃ । ದ್ವಿರ್ವಚನೇ ಚಙ್ಯನ್ಯತರಸ್ಯಾಂ । ಪಾ. ೬-೧-೨೧೮ । ಇತಿ ಚಙಃ ಪೂರ್ವಸ್ಯೋದಾತ್ತತ್ವಂ । ನ ಣಿಲೋಪಸ್ಯ ಸ್ಥಾನಿವತ್ತ್ವಂ ನ ಪದಾಂತೇತ್ಯಾದಿನಾ ಸ್ವರವಿಧಿಂ ಪ್ರತಿ ತನ್ನಿಷೇಧಾತ್ । ಪೂರ್ವಪದಸ್ಯಾಸಮಾನವಾಕ್ಯಸ್ಥತ್ವಾನ್ನಿಘಾತಾಭಾವಃ ॥

ಪ್ರತಿಪದಾರ್ಥ

**ಸಃ**—ಇಂದ್ರನು । **ಪೃಥಿವೀಂ**—(ಅಸುರರಿಂದ ಪೀಡಿತನಾದ) ಪೃಥ್ವಿಯನ್ನು । **ಧಾರಯತ್**—ಎತ್ತಿ ಹಿಡಿದನು (ಮತ್ತು ಹಿಂಸೆಯನ್ನು ತಪ್ಪಿಸಿದನು.) । **ಪಪ್ರಥಚ್ಚ**—(ಪೃಥ್ವಿಯು) ವಿಸ್ತಾರವಾಗಿ ಹರಡುವಂತೆಯೂ ಮಾಡಿದನು. । **ವಜ್ರೇಣ**—ವಜ್ರಾಯುಧದಿಂದ । **ಹತ್ವಾ**—(ವೃತ್ರಾದಿಗಳನ್ನು) ಕೊಂದು । **ಅಪಃ**—ವೃಷ್ಟ್ಯುದಕಾದಿಗಳನ್ನು । **ನಿಃ ಸಸರ್ಜ**—(ಮೇಘಗಳಿಂದ) ಬಿಡಿಸಿ ಸುರಿಸಿದನು. । **ಅಹಿಂ**—(ಅಂತರಿಕ್ಷದಲ್ಲಿರುವ) ಮೇಘವನ್ನು । **ಅಹನ್**—ಹೊಡೆದನು. । **ರೌಹಿಣಂ**—ರೌಹಿಣನೆಂಬ ಅಸುರನನ್ನು । **ವಿ ಅಭಿನತ್**—ಸೀಳಿಹಾಕಿದನು । **ಮಘವಾ**—ಧನವಂತನಾದ ಇಂದ್ರನು । **ಶಚೀಭಿಃ**—(ತನ್ನ) ಯುದ್ಧಕರ್ಮಗಳಿಂದ । **ವ್ಯಂಸಂ**—ಭುಜಹೀನನಾದ ವೃತ್ರಾಸುರನನ್ನು । **ಅಹನ್**—ಕೊಂದನು. ।

ಭಾವಾರ್ಥ

ಇಂದ್ರನು ಅಸುರರಿಂದ ಪೀಡಿತನಾದ ಪೃಥ್ವಿಯನ್ನು ಎತ್ತಿಹಿಡಿದು ಅಸುರರಿಂದ ಹಿಂಸೆಯನ್ನು ತಪ್ಪಿಸಿದನು ಮತ್ತು ಪೃಥ್ವಿಯು ವಿಸ್ತಾರವಾಗಿ ಹರಡುವಂತೆ ಮಾಡಿದನು. ವಜ್ರಾಯುಧದಿಂದ ವೃತ್ರಾದಿಗಳನ್ನು ಕೊಂದು

ವೃಷ್ಟ್ಯುದಕಾದಿಗಳನ್ನು ಮೇಘಗಳಿಂದ ಬಿಡಿಸಿ ಸುರಿಸಿದನು. ಅಂತರಿಕ್ಷದಲ್ಲಿರುವ ಮೇಘವನ್ನು ವಜ್ರಾಯುಧದಿಂದ ಹೊಡೆದನು. ರೌಹಿಣನೆಂಬ ಅಸುರನನ್ನು ಸೀಳಿ ಹಾಕಿದನು. ಧನವಂತನಾದ ಇಂದ್ರನು ತನ್ನ ಯುದ್ಧಕರ್ಮಗಳಿಂದ ಭುಜಹೀನನಾದ ವೃತ್ರಾಸುರನನ್ನು ಕೊಂದುಹಾಕಿದನು.

## English Translation

He upholds, and has spread out, the earth; having struck (the clouds), he has extricated the waters; he has slain Ahi, he has pierced Rauhina, he has destroyed, by his prowess, the mutilated (Vritra).

### ವಿಶೇಷವಿಷಯಗಳು

**ಸಃ ಪೃಥಿವೀಂ ಧಾರಯತ್**—ಅಸುರರಿಂದ ಪೀಡಿತವಾದ ಪೃಥ್ವಿಯನ್ನು ಇಂದ್ರನು ರಕ್ಷಿಸಿದನೆಂದರ್ಥ ಪ್ರಾಯವು. ವೃಷ್ಟ್ಯುದಕಾದಿಗಳನ್ನು ತಡೆದು ಲೋಕಕ್ಕೆ ಕ್ಷಾಮಾದ್ಯುಪದ್ರವಗಳನ್ನುಂಟುಮಾಡುತ್ತಿದ್ದ ರಾಕ್ಷಸರನ್ನು ನಾಶಮಾಡಿ ಪೃಥ್ವಿಯು ಸುರಕ್ಷಿತವಾಗಿರುವಂತೆ ಮಾಡಿದ ಇಂದ್ರನ ಸಾಹಸಕೃತ್ಯಗಳನ್ನು ಇಲ್ಲಿ ವರ್ಣಿಸಿದೆ. **ಅಸುರೈಃ ಪೀಡಿತಾಂ ಭೂಮಿಂ ಧೃತವಾನ್ । ಪೀಡಾರಾಹಿತ್ಯೇನ ಸ್ಥಿತಾಂ ಅಕರೋದಿತ್ಯರ್ಥಃ ।** ಎಂದು ಸಾಯಣರು ವಿವರಿಸಿದ್ದಾರೆ.

**ಅಧಾರಯತ್ಪೃಥಿವೀಂ ವಿಶ್ವಧಾಯಸಮಸ್ತಭ್ನಾನ್ಮಾಯಯಾ ದ್ಯಾಮವಸ್ರಸಃ ।**
(ಋ. ಸಂ. ೨-೧೭-೫)

ಎಂಬಂತೆ ಇಂದ್ರನು ತನ್ನ ಶಕ್ತಿಯಿಂದಲೂ ಪ್ರಜ್ಞೆಯಿಂದಲೂ ವಿಶ್ವಕ್ಕೆಲ್ಲಾ ಧಾತ್ರಿಯಾದ ಪೃಥ್ವಿಯನ್ನು ಧರಿಸಿ ರಕ್ಷಿಸಿದನೆಂದು ಪ್ರಸಿದ್ಧವಾಗಿದೆ. ಮತ್ತು ಲೋಕೋಪಕಾರಕಗಳಾದ ಅವನ ಕೆಲಸಗಳೇನೆಂದರೆ,

**ವಜ್ರೇಣ ಹತ್ವಾ ಅಪಃ ನಿಃಸಸರ್ಜ**—ಎಲ್ಲಾ ಶತ್ರುಗಳಿಗಿಂತಲೂ ಹೆಚ್ಚಾಗಿ ಪ್ರತಿಬಂಧಕವನ್ನುಂಟುಮಾಡುವ ಮೇಘರೂಪವಾದ ಶತ್ರುವನ್ನು ನಾಶಮಾಡಿ ಜನಜೀವನಕ್ಕೆ ಅತ್ಯುಪಕಾರಕವಾದ ಮಳೆಯನ್ನು ಸುರಿಸಿದನು. ಪ್ರವಾಹವನ್ನು ಹರಿಸಿದನು. ಲೋಕಕ್ಕೆ ಜಲಸಂಪತ್ತನ್ನು ಕೊಟ್ಟನು. ಮತ್ತು,

**ಅಹಿಂ ಅಹನ್**—ಅಹಿಶಬ್ದವು ಮೇಘನಾಮಗಳಲ್ಲಿಯೂ (ನಿ. ೧-೧೦) ಉದಕನಾಮಗಳಲ್ಲಿಯೂ (ನಿ. ೧-೧೨) ಪಠಿತವಾಗಿದ್ದರೂ ಇಲ್ಲಿ ಮೇಘವೆಂಬ ಅರ್ಥವನ್ನೇ ತೆಗೆದುಕೊಳ್ಳಬೇಕು. ನಿರುಕ್ತಕಾರರು,

**ದಾಸಪತ್ನೀರಹಿಗೋಪಾ ಅತಿಷ್ಠನ್ನಿರುದ್ಧಾ ಆಪಃ ಪಣಿನೇವ ಗಾವಃ ।**
(ಋ. ಸಂ. ೧-೩೨-೧೧)

ಎಂಬ ಋಕ್ಕನ್ನು ಉದಹರಿಸಿ **ಅಹಿ**ಶಬ್ದದ ನಿರ್ವಚನವನ್ನು ಮಾಡುವಾಗ ಮೇಘವೆಂದು ಅರ್ಥವಾಡಿ, **ಅಹಿರಯನಾದೇತ್ಯಂತರಿಕ್ಷೇ ॥** (ನಿ. ೨-೧೭) ಅಂತರಿಕ್ಷದಲ್ಲಿ ಸಂಚರಿಸುವುದರಿಂದ ಮೇಘಕ್ಕೆ **ಅಹಿ**ಯೆಂದು ಹೆಸರು ಎಂದು ಹೇಳಿದ್ದಾರೆ. ಇಲ್ಲಿಯೂ ಶ್ರೀ ಸಾಯಣರು **ಅಂತರಿಕ್ಷೇ ವರ್ತಮಾನಂ ಮೇಘಂ** ಎಂದು ಹೇಳಿದ್ದಾರೆ. ಇದ

ಲ್ಲದೆ. **ಅಯಮಪೀತರೋಽಹಿರೇತಸ್ಮಾದೇವ ನಿರ್ಹ್ರಸಿತೋಪಸರ್ಗ ಆಹಂತೀತಿ** । (ನಿ. ೨-೧೭) ಮೇಲೆ ಬೀಳು ಎಂಬರ್ಥವನ್ನು ಕೊಡುವ **ಹನ್** ಧಾತುವಿನೊಂದಿಗೆ **ಆ** ಎಂಬ ಉಪಸರ್ಗವು ಸೇರಿ ಅನಂತರ ಅದು ಹ್ರಸ್ವವಾಗಿ **ಅಹಿ** ಎಂದು ವ್ಯುತ್ಪತ್ತಿಯಾಗಿ **ಸರ್ಪ**ವೆಂದರ್ಥವನ್ನು ಕೊಡುತ್ತದೆ. ಇದಲ್ಲದೇ, **ಯೋಽಹಿಃ ಸ ಬುಧ್ನ್ಯೋ ಬುಧ್ನಮಂತರಿಕ್ಷಂ ತನ್ನಿವಾಸಾತ್** । (ನಿ. ೧೦-೪೪) ಅಂತರಿಕ್ಷಕ್ಕೆ **ಬುಧ್ನ**ವೆಂದೂ ಇಂತಹ ಅಂತರಿಕ್ಷದಲ್ಲಿ ವಾಸ ಮಾಡುವುದರಿಂದ **ಅಹಿಗೆ** ಬುಧ್ನ್ಯವೆಂದೂ ಹೆಸರಾಗಿರುವುದಾಗಿಯೂ ಸಹ ನಿರುಕ್ತಕಾರರು ತಿಳಿಸಿರುತ್ತಾರೆ. ಇದೇ ಅರ್ಥವನ್ನು ವಿಶದಪಡಿಸುತ್ತಾ ಬೃಹದೇವತಾಕಾರರೂ ಸಹ,

**ಅಹಿರಾಹಂತಿ ಮೇಘಾನ್ಸ ಏತಿ ವಾ ತೇಷು ಮಧ್ಯಮಃ ।**
**ಯೋಽಹಿಃ ಸ ಬುಧ್ನ್ಯೋ ಬುಧ್ನೇ ಹಿ ಸೋಽಂತರಿಕ್ಷೇಽಭಿಜಾಯತೇ ।**
(ಬೃ. ದೇ. ೫-೧೬೬)

ಅಹಿಯು ಮೇಘಗಳನ್ನು ಆಶ್ರಯಿಸಿ ಮುನ್ನುಗ್ಗಿ ಹೋಗುತ್ತಾನೆ ಅಥವಾ ಅವುಗಳ ನಡುವೆ ಸಂಚರಿಸುತ್ತಾನೆ. ಗಭೀರವಾದ ಅಂತರಿಕ್ಷದಲ್ಲಿ ಉತ್ಪನ್ನನಾದುದರಿಂದ ಅವನಿಗೂ ಸಹ ಬುಧ್ನ್ಯವೆಂದೇ ಹೆಸರು ಎಂದು **ಅಹಿ**ಶಬ್ದಕ್ಕೆ ನಿರ್ವಚನವನ್ನು ಮಾಡಿದ್ದಾರೆ. ಈ ಅರ್ಥದಲ್ಲಿ **ಅಹಿ**ಯೆಂದರೆ ಸರ್ಪವಾದರೂ ಆಗಬಹುದು ಅಥವಾ ಅಸುರನೆಂದಾದರೂ ಆಗಬಹುದು. ಈ ರೀತಿ ಮೇಘ, ಗಭೀರವಾದ ಅಂತರಿಕ್ಷದಲ್ಲಿ ಸಂಚರಿಸತಕ್ಕ ಅಸುರ, ಅಥವಾ ಸರ್ಪ ಎಂಬ ಈ ಅರ್ಥಗಳಲ್ಲದೆ ವೃತ್ರಾಸುರನಿಗೆ ವಿಶೇಷಣವಾಗಿಯೂ ಅಥವಾ ಪರ್ಯಾಯರೂಪದಲ್ಲಿಯೂ ಉಪಯೋಗಿಸಲ್ಪಟ್ಟದೆ.

**ತ್ವಂ ಪ್ರತಿ ಪ್ರವತ ಆಶಯಾನಮಹಿಂ ವಜ್ರೇಣ ಮಘವನ್ವಿ ವೃಶ್ಚಃ ।**
(ಋ. ಸಂ. ೪-೧೭-೭)

ಇತ್ಯಾದಿ ಋಕ್ಕುಗಳಲ್ಲಿ **ಅಹಿಂ ವೃತ್ರನಾಮಾನಮಸುರಂ** ಎಂದು ವೃತ್ರಪರ್ಯಾಯವಾಗಿಯೇ ಅರ್ಥ. ಒಂದನೇ ಮಂಡಲದ ೩೨ ನೇ ಸೂಕ್ತದಲ್ಲೆಲ್ಲಾ **ಅಹಿ**ಯೆಂದರೆ ಸುತ್ತಲೂ ನೀರನ್ನು ತಡೆದು ವ್ಯಾಪಿಸಿರುವ **ಮೇಘ**ವೆಂದರ್ಥ. ಪ್ರಕೃತವಾದ ಈ ಋಕ್ಕಿನಲ್ಲಿಯೂ ಸಹ ಸಾಯಣರು ಹೇಳಿರುವಂತೆ ಮೇಘವೆಂದೇ ಅರ್ಥ. ಸ್ಕಂದಸ್ವಾಮಿಗಳು **ಅಹಿನಾಮಾನಮಸುರಂ** ಎಂದು ಹೇಳಿದ್ದಾರೆ. ಆದರೆ ಈ ಸಂದರ್ಭಕ್ಕೆ ಮೇಘವೆಂಬರ್ಥವೇ ಹೆಚ್ಚು ಹೊಂದಿಕೊಳ್ಳುವುದು.

**ರೌಹಿಣಂ**—ರೌಹಿಣ ಶಬ್ದವೂ ಮೇಘನಾಮಗಳಲ್ಲಿಯೇ ಪಠಿತವಾಗಿದೆ. (ನಿ. ೨-೨೧) ಇಲ್ಲಿ ರಾಕ್ಷಸನೆಂಬ ಅರ್ಥವು. ಇದರಂತೆಯೇ

**ಯೋ ರೌಹಿಣಮಸ್ಫುರದ್ವಜ್ರಬಾಹುರ್ದ್ಯಾಮಾರೋಹಂತಂ ಸ ಜನಾಸ ಇಂದ್ರಃ ।**
(ಋ. ಸಂ. ೨-೧೨-೧೨)

ಎಂಬಲ್ಲಿಯೂ ಸಹ ರಾಕ್ಷಸನೆಂದೇ ಅರ್ಥವು. ಋಕ್ಸಂಹಿತೆಯಲ್ಲೆಲ್ಲಾ ಈ ಅಸುರನ ಹೆಸರು ಎರಡು ಕಡೆಗಳಲ್ಲಿ ಮಾತ್ರವಿದೆ.

**ವ್ಯಂಸಂ ಅಹನ್**—ವ್ಯಂಸನೆಂಬ ಅಸುರನನ್ನು ಕೊಂದನು ಎಂದು **ವ್ಯಂಸ** ಶಬ್ದಕ್ಕೆ ಅಸುರಪರ್ಯಾಯವಾಗಿ ಅರ್ಥವಾಗಿದೆ. ವ್ಯಂಸ ಶಬ್ದವು ಒಂದೆರಡು ಕಡೆಗಳಲ್ಲಿ ಬಿಟ್ಟು ಉಳಿದೆಡೆಗಳಲ್ಲೆಲ್ಲಾ ವೃತ್ರನಿಗೆ ವಿಶೇಷಣವಾಗಿದೆ.

**ಅಹನ್ವೃತ್ರಂ ವೃತ್ರತರಂ ವ್ಯಂಸಮಿಂದ್ರೋ ವಜ್ರೇಣ ಮಹತಾ ವಧೇನ ।**

(ಋ. ಸಂ. ೧-೩೨-೫)

**ಯೋ ವ್ಯಂಸಂ ಜಾಹೃಷಾಣೇನ ಮನ್ಯುನಾ ಯಃ ಶಂಬರಂ ಯೋ ಅಹನ್ಪಿಪ್ರುಮವ್ರತಂ ।**

(ಋ. ಸಂ. ೧-೧೦೧-೨)

ಇತ್ಯಾದಿ ಋಕ್ಕುಗಳಲ್ಲಿ ಬರುವ ವ್ಯಂಸ ಶಬ್ದಕ್ಕೆ ವಿಗತಭುಜಂ ವೃತ್ರಂ ಎಂದು ವೃತ್ರನಿಗೆ ವಿಶೇಷಣವಾಗಿ ಅರ್ಥ ಮಾಡಿದೆ. ಹೀಗೆಯೇ ೨-೧೪-೫ ; ೩-೩೪-೩. ಎಂಬಲ್ಲಿಯೂ ಸಹ ವಿಗತಭುಜನಾದ ವೃತ್ರಸಂದರ್ಭವು.

**ಮಮಚ್ಚನ ತೇ ಮಘವನ್ವ್ಯಂಸೋ ನಿವಿವಿಧ್ವಾಁ ಅಪ ಹನೂ ಜಘಾನ ।**

(ಋ. ಸಂ. ೪-೧೮-೯)

ಎಂಬ ಋಕ್ಕಿನಲ್ಲಿಯೂ ಪ್ರಕೃತವಾದ ಈ ಋಕ್ಕಿನಲ್ಲಿಯೂ ಸಹ **ವ್ಯಂಸನಾಮಾ ಅಸುರಃ, ವ್ಯಂಸನಾಮಾನಮ-ಸುರಂ** ಎಂದು ಅಸುರಪರ್ಯಾಯವಾಗಿದೆ. ಪಿಪ್ರು, ಶುಷ್ಣ, ನಮುಚಿ ಇತ್ಯಾದಿ ಅಸುರರ ಜೊತೆಯಲ್ಲಿ ಇವನ ಹೆಸರನ್ನೂ ಹೇಳುವುದು ವಾಡಿಕೆಯಾಗಿದೆ. ಆದರೆ ಅಹಿ, ವೃತ್ರ ಮುಂತಾದ ಅಸುರರ ಭೀಕರಸ್ವರೂಪವನ್ನು ವರ್ಣಿಸುವಂತೆ ಇವನ ವರ್ಣನೆಯು ಅಷ್ಟು ಅಧಿಕವಾಗಿಲ್ಲ.

**ಶಚೀಭಿಃ—ಶಚೀ** ಶಬ್ದವು ಕರ್ಮನಾಮಗಳಲ್ಲಿಯೂ (ನಿ. ೩-೧) ಮತ್ತು ಪ್ರಜ್ಞಾನಾಮಗಳಲ್ಲಿಯೂ (ನಿ. ೩-೧೩) ಪಠಿತವಾಗಿರುವುದರಿಂದ ಇಲ್ಲಿ ಇಂದ್ರನ ಅಸಾಧಾರಣವಾದ ಕರ್ಮಗಳಿಂದ ಎಂದಾಗಲಿ, ಪ್ರಜ್ಞೆಗಳಿಂದ ಎಂದಾಗಲಿ ಅರ್ಥವಾಗುತ್ತದೆ.

**ಮಘವಾ—ಧನವಾನಿಂದ್ರಃ । ಮಘಶಬ್ದವು** ಧನನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯) **ಮಘವಾ** ಎಂದರೆ ಧನವಂತನಾದ ಇಂದ್ರನೆಂದು ಸಹಜವಾದ ಅರ್ಥವಾಗುವುದು. **ಮಘವತ್** ಎಂಬ ಪದವು ಯಜ್ಞಕರ್ತರ ಪರವಾಗಿಯೂ ಅನ್ವಯವಾಗಬಹುದೆಂದು ಮುಂದೆ ಆ ಸಂದರ್ಭಬಂದಾಗ ತಿಳಿಸಲಾಗುತ್ತೆ. ಇಲ್ಲಿ ಇಂದ್ರನಿಗೆ ಪರ್ಯಾಯವಾಗಿರುವುದರಿಂದಲೂ, ಅಸುರಾದಿಗಳೊಂದಿಗೆ ಯುದ್ಧಮಾಡುವ ಇಂದ್ರನ ವೀರ್ಯಕರ್ಮಗಳನ್ನು ವರ್ಣಿಸುತ್ತಿರುವುದರಿಂದಲೂ ಸಹ **ಮಘವಾ** ಎನ್ನುವುದಕ್ಕೆ **ವಿಷ್ಣು**ವಿನೊಡನೆ ಕೂಡಿಕೊಂಡಿರುವ ಇಂದ್ರನೆಂದು ಹೇಳಿದರೂ ತಪ್ಪಾಗಲಾರದು. ಇಂದ್ರನು ಅಸುರಾದಿಗಳೊಂದಿಗೆ ಯುದ್ಧಮಾಡುವಾಗ ವಿಷ್ಣುವಿನ ಸಹಾಯವನ್ನು ಪಡೆಯುವುದರಿಂದಲೂ, ವಿಷ್ಣುವಿಗೆ **ಮಖ**ನೆಂಬ ಹೆಸರು ಪ್ರಸಿದ್ಧವಾಗಿರುವುದರಿಂದಲೂ ಸಹ ಈ ಅರ್ಥವನ್ನು ಇಂತಹ ಸಂದರ್ಭಗಳಲ್ಲಿ ಹೇಳಲು ಶ್ರುತಿಯ ಆಧಾರವಿರುತ್ತದೆ.

**ಸ ಉ ಏವ ಮಖಃ ಸ ವಿಷ್ಣುಃ । ತತ ಇಂದ್ರೋ ಮಖವಾನಭವನ್ಮಖವಾನ್ಹ ವೈ ತಂ ಮಘವಾನಿತ್ಯಾಚಕ್ಷತೇ ಪರೋಽಕ್ಷಂ ಪರೋಕ್ಷಕಾಮಾ ಹಿ ದೇವಾಃ ।**

( ಶ. ಬ್ರಾ. ೧೪-೧-೧-೧೩ )

ಮಖವೇ ವಿಷ್ಣುವಾದುದರಿಂದಲೂ, ಇಂದ್ರನು ಮಖವಂತನಾದುದರಿಂದ ಇವನನ್ನೇ ಮಘವಂತನೆಂದು ಪರೋಕ್ಷಕಾಮರಾದ ದೇವತೆಗಳು ಕರೆಯುತ್ತಾರೆ ಎಂದು ಶತಪಥಬ್ರಾಹ್ಮಣದಲ್ಲಿ ವಿವರಿಸಿದೆ.

**ಇಂದ್ರಾವಿಷ್ಣೂ ದೃಂಹಿತಾಃ ಶಂಬರಸ್ಯ ನವ ಪುರೋ ನವತಿಂ ಚ ಶ್ನಥಿಷ್ಟಂ ।**
( ಋ. ಸಂ. ೭-೯೯-೫ )

ಇತ್ಯಾದಿ ಋಕ್ಕುಗಳಲ್ಲಿ **ಇಂದ್ರಾವಿಷ್ಣು**ಗಳು ಅಸುರರ ಹನನವನ್ನು ಮಾಡಿದರೆಂದು ಅನೇಕಕಡೆ ಹೇಳಿರುವಂತೆ ಪ್ರಕೃತವಾದ ಈ ಋಕ್ಕಿನಲ್ಲಿಯೂ ಸಹ ಅದೇರೀತಿ ವರ್ಣಿಸಿರುವುದರಿಂದಲೂ ಸಂದರ್ಭಕ್ಕನುಸಾರವಾಗಿ **ಮಘವಾ** ಎಂದರೆ ವಿಷ್ಣುಸಹಿತನಾದ ಇಂದ್ರನೆಂದು ಹೇಳಿದರೆ ತಪ್ಪಾಗಲಾರದು. ಆದರೆ ಭಾಷ್ಯಗಳಲ್ಲಿ ಧನವಂತನಾದ ಇಂದ್ರನೆಂದೇ ಇರುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಧಾರಯತ್**—ಧೃಙ್ ಅವಸ್ಥಾನೇ ಧಾತು. ಣಿಜಂತದ ಮೇಲೆ ಲಙ್ ಪ್ರಥಮಪುರುಷ ಏಕವಚನ ರೂಪ. **ಬಹುಲಂ ಛಂದಸ್ಯಮಾಙ್ಯೋಗೇಽಪಿ**—(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಪೃಥಿವೀಮ್**—ಪೃಥಿವೀ ಶಬ್ದ ಙೀಷಂತವಾದುದರಿಂದ ಅಂತೋದಾತ್ತ. **ಅಮಿ ಪೂರ್ವಃ**—ಸೂತ್ರದಿಂದ ಪೂರ್ವರೂಪ ಬಂದಾಗ **ಏಕಾದೇಶ ಉದಾತ್ತೇನೋದಾತ್ತಃ**—(ಪಾ. ಸೂ. ೮-೨-೫) ಎಂಬುದರಿಂದ ಉದಾತ್ತವಾಗುತ್ತದೆ.

**ಪಪ್ರಥತ್**—ಪೃಥುಂ ಕರೋತಿ ಪ್ರಥಯತಿ. **ತತ್ಕರೋತಿ ತದಾಚಷ್ಟೇ**—ಎಂಬ ವಾರ್ತಿಕದಿಂದ ಣಿಚ್. **ಣಾವಿಷ್ಠವತ್ ಪ್ರಾತಿಪದಿಕಸ್ಯಕಾರ್ಯಮ್**(ಪಾ. ಸೂ. ೬-೪-೧೫೫-೧) ಎಂಬ ವಚನದಿಂದ ಇಷ್ಠನ್ ಪ್ರತ್ಯಯ ಪರವಾದಾಗ ಯಾವ ಕಾರ್ಯ ಬರುವುದೋ ಅದು ಣಿಚ್ ಪರವಾದಾಗಲೂ ಬರುತ್ತದೆ. ಆಗ **ರ ಋತೋ ಹಲಾದೇರ್ಲಘೋಃ**—(ಪಾ. ಸೂ. ೬-೪-೧೬೧) ಎಂಬುದರಿಂದ ಋಕಾರಕ್ಕೆ ರತ್ವ. **ಟೇಃ**—(ಪಾ. ಸೂ. ೬-೪-೧೫೫) ಎಂಬುದರಿಂದ ಟಿಗೆ ಲೋಪ. **ಅಚಃ ಪರಸ್ಮಿನ್ ಪೂರ್ವವಿಧೌ**—ಸೂತ್ರದಿಂದ ಸ್ಥಾನಿವದ್ಭಾವ ಬರುವುದರಿಂದ ಣಿಚ್ ನಿಮಿತ್ತವಾಗಿ ಲಘೂಪಧಗುಣ ಬರುವುದಿಲ್ಲ. ಪ್ರಥಿ ಎಂಬ ಣಿಜಂತವು ಧಾತುಸಂಜ್ಞೆಯನ್ನು ಹೊಂದುತ್ತದೆ. ಇದಕ್ಕೆ ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ**—ಸೂತ್ರದಿಂದ ಇಕಾರ ಲೋಪ. **ಣಿಶ್ರಿದ್ರುಸ್ರುಭ್ಯಃ**—(ಪಾ. ಸೂ. ೩-೧-೪೮) ಎಂಬುದರಿಂದ ಚಙ್. **ಚಙಿ**—(ಪಾ. ಸೂ. ೬-೧-೧೧) ಎಂಬುದರಿಂದ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಆದಿಹಲ್‌ಶೇಷ. **ಣೇರನಿಟಿ**—(ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. **ಚಙ್ಯನ್ಯತರಸ್ಯಾಮ್**—(ಪಾ. ಸೂ. ೬-೧-೨೧೮) ಎಂಬುದರಿಂದ ಚಙಿನ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಆಗ ಣಿಚ್‌ಲೋಪಕ್ಕೆ ಸ್ಥಾನಿವದ್ಭಾವ ಬರಲಿ ಎಂದು ಶಂಕಿಸಬಾರದು. **ನಪದಾಂತ**—(ಪಾ. ಸೂ. ೧-೧-೫೮) ಎಂಬುದರಿಂದ ಸ್ವರವಿಧಿಯಲ್ಲಿ ಸ್ಥಾನಿವದ್ಭಾವನಿಷೇಧ ಬರುತ್ತದೆ. ಇಲ್ಲಿ ಪೃಥಿವೀಮ್ ಎಂದು ಪೂರ್ವಪದವಿದ್ದರೂ ಅದು ವಾಕ್ಯಾಂತರಗತವಾದುದರಿಂದ **ಸಮಾನವಾಕ್ಯೇ ನಿಘಾತಃ**—ಎಂಬುದರಿಂದ ನಿಘಾತಸ್ವರ ಬರುವುದಿಲ್ಲ.

**ಸಸರ್ಜ**—ಸೃಜ ವಿಸರ್ಗೇ ಧಾತು. ಲಿಟ್ ಪ್ರಥಮಪುರುಷ ಏಕವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಪಃ**—**ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅಹನ್**—ಹನ ಹಿಂಸಾಗತ್ಯೋಃ ಧಾತು. ಲಙ್ ಪ್ರಥಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಅಭಿನತ್**—ಭಿದಿರ್ ವಿದಾರಣೇ ಧಾತು. ಲಙ್ ಪ್ರಥಮಪುರುಷ ಏಕವಚನರೂಪ. ಅಹಿಮ್ ಎಂಬ ಹಿಂದೆ ಅತಿಙಂತವಿದ್ದರೂ ವಾಕ್ಯಾಂತರಗತವಾದುದರಿಂದ ನಿಘಾತಸ್ವರ ಬರುವುದಿಲ್ಲ. ಆದ್ಯುದಾತ್ತವಾಗುತ್ತದೆ.

**ವ್ಯಂಸಮ್**—ವಿಗತಃ ಅಂಸಃ ಯಸ್ಯ ಸಃ ವ್ಯಂಸಃ ಬಹುವ್ರೀಹಿಸಮಾಸ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬಂದಾಗ ಅದಕ್ಕೆ ಯಣಾದೇಶ. ಉದಾತ್ತಸ್ಥಾನದಲ್ಲಿ ಯಣಾದೇಶ ಬಂದು ಅದರ ಪರದಲ್ಲಿ ಅನುದಾತ್ತ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ**—(ಪಾ. ಸೂ. ೮-೨-೪) ಎಂಬುದರಿಂದ ಪರದ ಅನುದಾತ್ತಕ್ಕೆ ಸ್ವರಿತಸ್ವರ ಬರುತ್ತದೆ. ॥ ೨ ॥

———— :0: ————

ಸಂಹಿತಾಪಾಠಃ

ಸ ಜಾತೂಭರ್ಮಾ ಶ್ರದ್ದಧಾನ ಓಜಃ ಪುರೋ ವಿಭಿಂದನ್ನಚರದ್ವಿ ದಾಸೀಃ।
ವಿದ್ವಾನ್ವಜ್ರಿನ್ದಸ್ಯವೇ ಹೇತಿಮಸ್ಯಾರ್ಯಂ ಸಹೋ ವರ್ಧಯಾ ದ್ಯುಮ್ನಮಿಂದ್ರ ॥ ೩ ॥

ಪದಪಾಠಃ

ಸಃ । ಜಾತೂಽಭರ್ಮಾ । ಶ್ರತ್ಽದಧಾನಃ । ಓಜಃ । ಪುರಃ । ವಿಽಭಿಂದನ್ । ಅಚರತ್ । ವಿ । ದಾಸೀಃ ।

ವಿದ್ವಾನ್ । ವಜ್ರಿನ್ । ದಸ್ಯವೇ । ಹೇತಿಂ । ಅಸ್ಯ । ಆರ್ಯಂ । ಸಹಃ । ವರ್ಧಯ । ದ್ಯುಮ್ನಂ । ಇಂದ್ರ ॥ ೩ ॥

॥ ಸಾಯಣಭಾಷ್ಯಂ ॥

ಜಾತೂಭರ್ಮಾ । ಜಾತೂ ಇತ್ಯಶನಿನಾಮಾಚಕ್ಷತೇ । ಭರ್ಮಾಯುಧಂ । ಅಶನಿರೂಪಮಾಯುಧಂ ಯಸ್ಯ ಸ ತಥೋಕ್ತಃ । ಯದ್ವಾ । ಜಾತಾನಾಂ ಪ್ರಜಾನಾಂ ಭರ್ತಾ । ಓಜ ಓಜಸಾ ಬಲೇನ ನಿಷ್ಪಾದ್ಯಂ ಕಾರ್ಯಂ ಶ್ರದ್ದಧಾನಃ । ಆದರಾತಿಶಯೇನ ಕಾಮಯಮಾನಃ ಏವಂಭೂತಃ ಸ ಇಂದ್ರೋ ದಾಸೀರ್ದಸ್ಯುಸಂಬಂಧಿನೀ ಪುರಃ ಪುರಾಣಿ ವಿಭಿಂದನ್ ವಿನಾಶಯನ್ನ್ಯಚರತ್ । ವಿವಿಧಮಗಚ್ಛತ್ । ಹೇ ವಜ್ರಿನ್ವಜ್ರವನ್ನಿಂದ್ರ ವಿದ್ವಾನ್ ಸ್ತುತೀರ್ವಿಜಾನಂಸ್ತ್ವಮಸ್ಯ ಸ್ತೋತುರ್ದಸ್ಯವ ಉಪಕ್ಷಯಕಾರಿಣೇ ಶತ್ರವೇ ಹೇತಿಮಾಯುಧಂ ವಿಸೃಜೇತಿ ಶೇಷಃ । ಅಪಿ ಚ ಹೇ ಇಂದ್ರ ಆರ್ಯಂ ಸಹಃ । ಆರ್ಯಾ ವಿದ್ವಾಂಸಃ ಸ್ತೋತಾರಃ । ತದೀಯಂ ಬಲಂ ವರ್ಧಯ । ಅತಿವೃದ್ಧಂ ಕುರು । ತಥಾ ದ್ಯುಮ್ನಂ ತದೀಯಂ ಯಶಶ್ಚ ಪ್ರವರ್ಧಯ ॥ ಜಾತೂಭರ್ಮಾ । ಜನೀ ಪ್ರಾದುರ್ಭಾವೇ । ಅನ್ಯೇಷ್ವಪಿ ದೃಶ್ಯತ ಇತಿ ದೃಶಿಗ್ರಹಣಸ್ಯ ಸರ್ವೋಪಾಧಿವ್ಯಭಿಚಾರಾರ್ಥತ್ವಾತ್ಕೇವಲಾದಪಿ ಡಪ್ರತ್ಯಯಃ । ಜಾಂಸ್ತೂರ್ವತೀತಿ ಜಾತೂಃ । ತುರ್ವೀ ಹಿಂಸಾರ್ಥಃ । ಕ್ವಿಪಿ ರಾಲ್ಲೋಪ ಇತಿ ವಲೋಪಃ । ಭ್ರಿಯತ ಇತಿ ಭರ್ಮ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ । ಜಾತೂರ್ಭರ್ಮ ಯಸ್ಯ । ಛಾಂದಸೋ ರೇಫಲೋಪಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಪಕ್ಷಾಂತರೇ ತು ಜನೇರ್ನಿಷ್ಠಾ । ಜನಸನಖನಾಮಿತ್ಯಾತ್ವಂ । ಜಾತಂ ಸರ್ವಂ ಭರ್ಮ ಭರ್ತವ್ಯಂ ಯೇನ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ವರ್ಣವ್ಯಾಪತ್ತ್ಯಾಕಾರಸ್ಯ ಊಕಾರಃ ॥

ಪ್ರತಿಪದಾರ್ಥ

ಜಾತೂಭರ್ಮಾ—ವಜ್ರಾಯುಧವೇ ಆಯುಧವಾಗಿ ಉಳ್ಳವನೂ ಅಥವಾ ಉತ್ಪನ್ನವಾದ ಸಕಲ ಪ್ರಜೆಗಳಿಗೂ ಒಡೆಯನಾದವನೂ । ಓಜಃ—(ತನ್ನ) ಬಲವನ್ನು । ಶ್ರದ್ದಧಾನಃ—ದೃಢವಾದ ವಿಶ್ವಾಸವನ್ನಿಟ್ಟು ಆದರಿಸುವವನೂ ಆದ । ಸಃ—ಇಂದ್ರನು । ದಾಸೀಃ—ದಸ್ಯುಗಳಿಗೆ ಸೇರಿದ । ಪುರಃ—ಪಟ್ಟಣಗಳನ್ನು । ವಿಭಿಂದನ್—ನಾಶಮಾಡುತ್ತಾ । ವ್ಯಚರತ್—(ಸ್ವೇಚ್ಛೆಯಾಗಿ) ನಾನಾದಿಕ್ಕುಗಳಲ್ಲಿಯೂ ಸಂಚರಿಸಿದನು । ವಜ್ರಿನ್—ವಜ್ರಾಯುಧವನ್ನು ಹಿಡಿದಿರುವ ಇಂದ್ರನೇ, । ವಿದ್ವಾನ್—(ಸ್ತೋತ್ರಮಹಿಮೆಯನ್ನು)ತಿಳಿದವನಾಗಿ । ಅಸ್ಯ—ಈ ಸ್ತೋತ್ರಮಾಡತಕ್ಕ ಭಕ್ತನಿಗಾಗಿ । ದಸ್ಯವೇ—ಹಿಂಸೆಮಾಡತಕ್ಕ ಶತ್ರುವಿನ ಮೇಲೆ । ಹೇತಿಂ—ಆಯುಧವನ್ನು (ಎಸೆ) । ಇಂದ್ರ—ಎಲೈ ಇಂದ್ರನೇ । ಆರ್ಯಂ—ಆರ್ಯರಿಗೆ ಸೇರಿದ । ಸಹಃ—ಬಲವನ್ನೂ । ದ್ಯುಮ್ನಂ—ಯಶಸ್ಸನ್ನೂ । ವರ್ಧಯ—ವೃದ್ಧಿಯಾಗುವಂತೆ ಮಾಡು. ।

॥ ಭಾವಾರ್ಥ ॥

ವಜ್ರಾಯುಧವೇ ಆಯುಧವಾಗಿ ಉಳ್ಳವನೂ, ತನ್ನ ಬಲದಲ್ಲಿಯೇ ದೃಢವಾದ ವಿಶ್ವಾಸವನ್ನಿಟ್ಟಿರುವವನೂ ಆದ ಇಂದ್ರನು ದಸ್ಯುಗಳಿಗೆ ಸೇರಿದ ಪಟ್ಟಣಗಳನ್ನು ನಾಶಮಾಡುತ್ತಾ ಸ್ವೇಚ್ಛೆಯಾಗಿ ನಾನಾದಿಕ್ಕುಗಳಲ್ಲಿಯೂ ಸಂಚರಿಸಿದನು. ವಜ್ರಾಯುಧವನ್ನು ಹಿಡಿದಿರುವ ಎಲೈ ಇಂದ್ರನೇ, ಸ್ತೋತ್ರಗಳ ಮಹಿಮೆಯನ್ನು ತಿಳಿದವನಾಗಿ ಈ ಸ್ತೋತ್ರಮಾಡತಕ್ಕ ಭಕ್ತನಿಗಾಗಿ ಹಿಂಸಕನಾದ ಶತ್ರುವಿನ ಮೇಲೆ ನಿನ್ನ ಆಯುಧವನ್ನು ಎಸೆ. ಆರ್ಯರಿಗೆ ಸೇರಿದ ಬಲವನ್ನೂ ಕೀರ್ತಿಯನ್ನೂ ವೃದ್ಧಿಪಡಿಸು.

## English Translation

Armed with the thunderbolt, and confident in his strength, he has gone on destroying the cities of the Dasyus· Thunderer, acknowledging, (the praises of your worshipper), cast, for his sake, your shaft against the Dasyu, and augment the strength and glory of the Arya,

॥ ವಿಶೇಷವಿಷಯಗಳು ॥

**ಜಾತೂಭರ್ಮಾ**—ಜಾತೂ ಇತ್ಯಶನಿನಾಮಚಕ್ಷತೇ । ಭರ್ಮ ಆಯುಧಂ । ಅಶನಿರೂಪಮಾಯುಧಂ ಯಸ್ಯ ಸ ತಥೋಕ್ತಃ । ವಜ್ರಾಯುಧಕ್ಕೆ ಜಾತುವೆಂದು ಕರೆಯುವುದರಿಂದಲೂ, ಆ ಜಾತುವನ್ನೇ ಆಯುಧವನ್ನಾಗಿ ಹೊಂದಿರುವುದರಿಂದಲೂ ಇಂದ್ರನಿಗೆ **ಜಾತೂಭರ್ಮನೆಂದು** ಹೆಸರಿರುವುದಾಗಿ ಒಂದು ವಿಧವಾದ ಅರ್ಥವನ್ನು ಮಾಡಿ, ಯದ್ವಾ **ಜಾತಾನಾಂ ಪ್ರಜಾನಾಂ ಭರ್ತಾ** । ಉತ್ಪನ್ನರಾದ ಪ್ರಜೆಗಳ ಭರಣವನ್ನು ಮಾಡತಕ್ಕವನು ಎಂದು ಇನ್ನೊಂದುವಿಧವಾದ ಅರ್ಥವನ್ನೂ ಭಾಷ್ಯಕಾರರು ಹೇಳಿರುತ್ತಾರೆ. ನಿರುಕ್ತಕಾರರು,

**ತಸ್ಮೈ ಭರ್ಮಣೇ ಭುವನಾಯ ದೇವಾ ಧರ್ಮಣೇ ಕಂ ಸ್ವಧಯಾ ಪಪ್ರಥಂತ ।**

(ಋ. ಸಂ. ೧೦-೮೮-೧)

ಎಂಬ ಋಕ್ಕಿನ ಅರ್ಥವನ್ನು ವಿವರಿಸುವಾಗ **ಭರ್ಮಣೇ** ಎನ್ನುವ ಪದಕ್ಕೆ **ಭರಣಾಯ**, ಭರಣಮಾಡಲು, ಪೋಷಿಸಲು ಎಂದರ್ಥಮಾಡುವಂತೆಯೂ, (ನಿ. ೭-೨೫) ಮತ್ತು ಸಾಯಣರು,

**ದೇವೇಭಿರ್ದೇವ್ಯದಿತೇಽರಿಷ್ಟಭರ್ಮನ್ನಾ ಗಹಿ ।**

(ಋ. ಸಂ. ೮-೧೮-೪)

ಎಂಬ ಋಕ್ಕಿನಲ್ಲಿ **ಭರ್ಮನ್** ಶಬ್ದಕ್ಕೆ **ಭರಣವೆಂದು** ಅರ್ಥಮಾಡುವಂತೆಯೂ ಇಲ್ಲಿಯೂ ಸಹ ಭರಣವೆಂದರ್ಥ ಮಾಡಿದರೆ ಉತ್ಪನ್ನವಾದ ಸಕಲವಾದ ಪ್ರಜೆಗಳಿಗೂ ಸಂರಕ್ಷಕನು, ಪೋಷಕನು ಎಂದಾಗುವುದು. **ಜಾತು** ಶಬ್ದಕ್ಕೆ ಸರ್ವದಾ ಎಂದರ್ಥವೂ ಆಗುತ್ತದೆ.

**ಜಾತೂಷ್ಠಿರಸ್ಯ ಪ್ರ ವಯಃ ಸಹಸ್ವತೋ ಯಾ ಚಕರ್ಥ ಸೇಂದ್ರ ವಿಶ್ವಾಸ್ಯುಕ್ಥ್ಯಃ ।**

(ಋ. ಸಂ ೨-೧೩-೧೧)

ಎಂಬ ಋಕ್ಕಿನಲ್ಲಿ **ಜಾತುಶಬ್ದಕ್ಕೆ ಸರ್ವದಾ** ಎಂದಾಗುವಂತೆ ಇಲ್ಲಿಯೂ ಸಹ ಅದೇ ಅರ್ಥವಾದರೆ ಆಗ ಯಾವಾಗಲೂ ಲೋಕವನ್ನು ಭರಣಮಾಡುವವನೆಂದರ್ಥ. ಆದುದರಿಂದ ವಜ್ರವನ್ನೇ ಆಯುಧವನ್ನಾಗಿ ಹೊಂದಿರುವವನು ಎಂದು ಒಂದರ್ಥ. ಅಥವಾ ಉತ್ಪನ್ನರಾದ ಪ್ರಜೆಗಳನ್ನು ಭರಣಮಾಡುವವನು ಎಂದು ಇನ್ನೊಂದು ವಿಧ ಅಥವಾ ಶಾಶ್ವತವಾಗಿ ಲೋಕದ ಭರಣವನ್ನು ಮಾಡುವವನು ಎಂದಾಗಲಿ ಹೀಗೆ ಮೂರರಲ್ಲಿ ಒಂದರ್ಥವನ್ನು ಹೇಳಬಹುದು.

**ಓಜಃ ಶ್ರದ್ಧಧಾನಃ—ಓಜ ಓಜತೇರ್ವೋಬ್ಜತೇರ್ವಾ ।** (ನಿ. ೬-೮) ಶಕ್ತಿಯೆಂದರ್ಥವನ್ನು ಕೊಡುವ **ಓಜ್** ಧಾತುವಿನಿಂದಾಗಲಿ, ಅಥವಾ ನಿಗ್ರಹಿಸು ಎಂದರ್ಥವನ್ನು ಕೊಡುವ **ಉಬ್ಜ್** ಧಾತುವಿನಿಂದಾಗಲಿ **ಓಜಸ್** ಶಬ್ದವು ನಿಷ್ಪನ್ನವಾಗಬಹುದು. ಎರಡು ಅರ್ಥಕ್ಕೂ ಬಲವಲ್ಲಿಯೇ ತಾತ್ಪರ್ಯ

ಶ್ರದ್ದಧಾನಃ— ಅವಿತಥಮಿತಿ ಸಂಭಾವನಾ ಶ್ರದ್ಧಾ । **ಆತ್ಮನೋ ಬಲಮವಿತಥಮಿತಿ ಸಂಭಾವಯನ್ । ನ ಕಂಚಿದಪ್ಯಸುರಂ ಪ್ರತಿ ಮಮ ಬಲಂ ನ ಪ್ರತಿಹನ್ಯತ ಇತ್ಯೇವಂ ಸಂಭಾವಯನ್ನಿತ್ಯರ್ಥಃ ।** ನನ್ನ ಬಲಪ್ರಯೋಗವು ಯಾವ ಅಸುರನ ವಿಷಯದಲ್ಲಿಯೂ ಸಹ ವ್ಯರ್ಥವಾಗುವುದಿಲ್ಲ. ಎಲ್ಲರನ್ನೂ ನಿಗ್ರಹಿಸತಕ್ಕ ಸಾಮರ್ಥ್ಯವುಳ್ಳದ್ದು ಎಂಬ ದೃಢವಿಶ್ವಾಸವೆಂದು ಸ್ಕಂದಸ್ವಾಮಿಗಳು ವಿವರಿಸಿದ್ದಾರೆ. ಇಂದ್ರನು ಉತ್ಪನ್ನನಾದ ಕಾಲದಲ್ಲೇ ತನ್ನ ಶಕ್ತಿಯ ಮಹಿಮೆಯನ್ನರಿತುಕೊಂಡು ತನ್ನ ಶತ್ರುಗಳು ಯಾರು ಯಾರು ಇರುವರು, ಯಾರೊಂದಿಗೆ ಯುದ್ಧಮಾಡಬೇಕೆಂದು ತನ್ನ ಅಸಾಧಾರಣವಾದ ಪರಾಕ್ರಮವನ್ನು ಪ್ರಕಟಿಸುತ್ತಾ ತನ್ನ ತಾಯಿಯನ್ನು ಕೇಳಿದುದೂ, ಅದಕ್ಕೆ ಉತ್ತರವಾಗಿ ಅವನ ತಾಯಿಯು ಅಸುರಾದಿಗಳನ್ನು ನಿರ್ದೇಶಿಸಿದುದೂ ಋಕ್ಸಂಹಿತೆಯಲ್ಲಿಯೇ ವರ್ಣಿತವಾಗಿದೆ.

**ಆ ಬುಂದಂ ವೃತ್ರಹಾ ದದೇ ಜಾತಃ ಪೃಚ್ಛದ್ವಿ ಮಾತರಂ ।**
**ಕ ಉಗ್ರಾಃ ಕೇ ಹ ಶೃಣ್ವಿರೇ ॥**

(ಋ. ಸಂ. ೮-೪೫-೪)

**ಜಜ್ಞಾನೋ ನು ಶತಕ್ರತುರ್ವಿ ಪೃಚ್ಛದಿತಿ ಮಾತರಂ ।**
**ಕ ಉಗ್ರಾಃ ಕೇ ಹ ಶೃಣ್ವಿರೇ ॥**

(ಋ. ಸಂ. ೮-೭೭-೧)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನು ಉತ್ಪನ್ನನಾದೊಡನೆಯೇ ತನ್ನ ಸಾಮರ್ಥ್ಯವನ್ನು ಪ್ರಕಟಿಸುತ್ತಲೂ ಕೈಯಲ್ಲಿ ಆಯುಧವನ್ನು ಹಿಡಿಯುತ್ತಲೂ ತನ್ನ ಶತ್ರುಗಳ ಅನ್ವೇಷಣವನ್ನು ಮಾಡಿದನೆಂದು ಸ್ತುತಿಸಿದೆ. ಆ ಅಭಿಪ್ರಾಯಗಳನ್ನು ಪ್ರಕೃತವಾದ ಈ ಋಕ್ಕಿನಲ್ಲಿ ಸೂಚಿಸುತ್ತಾ ಇಂದ್ರನ ಆತ್ಮವಿಶ್ವಾಸವನ್ನೂ ತನ್ನ ಸಾಮರ್ಥ್ಯದಲ್ಲಿದ್ದ ದೃಢವಾದ ನಂಬಿಕೆಯನ್ನು ತಿಳಿಸಿದೆ. ಎಂತಹ ಕಠಿಣವಾದ ಶತ್ರುವು ಎದುರಾದರೂ ತನ್ನ ಬಲವು ವ್ಯರ್ಥವಾಗದೇ ಶತ್ರುನಾಶವನ್ನು ಖಂಡಿತವಾಗಿಯೂ ಮಾಡತಕ್ಕದ್ದೆಂಬ ಆತ್ಮವಿಶ್ವಾಸವನ್ನು ಪ್ರಶಂಸಿಸಿದೆ.

**ದಸ್ಯವೇ—ಉಪಕ್ಷಯಕಾರಿಣೇ ಶತ್ರವೇ ।** ನಾಶಕರನಾದ ಶತ್ರುವಿನಮೇಲೆ; **ದಾಸೀಃ—ದಸ್ಯು ಸಂಬಂಧೀನಿ ।** ದಸ್ಯುವಿಗೆ ಸೇರಿದ ಎಂದು ಎರಡುಕಡೆಗಳಲ್ಲಿಯೂ ಶತ್ರುವಿನ ಪರ್ಯಾಯವಾಗಿ ಉಪಯೋಗಿಸಿದೆ. ದಸ್ಯು ಪದಕ್ಕೆ ಇರುವ ನಾನಾರ್ಥಗಳನ್ನು ಉದಾಹರಣೆಗಳೊಂದಿಗೆ ಇದೇ ಸಂಪುಟದಲ್ಲಿ ೧೦೦ನೇ ಸೂಕ್ತದ ೧೮ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ತಿಳಿಸಿದೆ.

**ಹೇತಿಂ—ಹೇತಿರ್ಹಂತೇಃ ।** (ನಿ. ೬-೩) ಕೊಲ್ಲು ಎಂಬ ಅರ್ಥವನ್ನು ಕೊಡುವ **ಹನ್** ಧಾತುವಿನಿಂದ ನಿಷ್ಪನ್ನವಾಗಿದೆ. ಮತ್ತು ವಿದ್ಯುತ್, **ನೇಮಿಃ** ಇತ್ಯಾದಿ ೧೮ ವಜ್ರನಾಮಗಳಲ್ಲಿ ಪಠಿತವಾಗಿದೆ. (ನಿ. ೨-೨೦) ವಜ್ರಾಯುಧವೆಂದರ್ಥ.

**ಆರ್ಯಂ ಸಹಃ ದ್ಯುಮ್ನಂ ವರ್ಧಯ**—ಆರ್ಯ, ದಾಸ ಎಂದು ಎರಡು ಪಂಗಡಗಳು ಪರಸ್ಪರವಾಗಿ ವಿರೋಧ ವನ್ನು ತೋರಿಸುತ್ತಾ ಆರ್ಯರ ಗುಂಪು ಯಜ್ಞಯಾಗಾದಿ ಕರ್ಮನಿಷ್ಠರಾಯೂ ದೇವತಾ ಪೂಜೆಗಳಲ್ಲಿ ನಿರತರಾಗಿಯೂ ಇದ್ದುದರಿಂದ ದೇವತೆಗಳ ಅನುಗ್ರಹಕ್ಕೆ ಪಾತ್ರರಾಗಿದ್ದರು. ದಸ್ಯುಗಳು ಕರ್ಮಹೀನರಾಗಿದ್ದುದು ಮಾತ್ರವಲ್ಲದೇ ಯಜ್ಞಾದಿ ಕರ್ಮಾಚರಣೆಗಳಿಗೆ ವಿಘ್ನವನ್ನುಂಟುಮಾಡಿ ಲೋಕಕ್ಕೆ ಉಪದ್ರವವನ್ನುಂಟುಮಾಡುತ್ತಿದ್ದುದರಿಂದ ಇಂದ್ರನು ದಸ್ಯುಗಳನ್ನೂ ಅವರಿಗೆ ಸೇರಿದ ಪಟ್ಟಣಗಳನ್ನೂ ನಾಶಮಾಡಿ ಆರ್ಯರ ವೃದ್ಧಿಗೆ ಕಾರಣನಾದನು ಎಂದು ಪ್ರಸಿದ್ಧವಾಗಿದೆ.

**ತ್ವಂ ಹ ನು ತ್ಯದದಮಾಯೋ ದಸ್ಯೂಁರೇಕಃ ಕೃಷ್ಟೀರವನೋರಾರ್ಯಾಯ ।**

(ಋ. ಸಂ. ೬-೧೮-೩)

ಇತ್ಯಾದಿ ಋಕ್ಕುಗಳಲ್ಲಿ ದಸ್ಯುನಾಶಪೂರ್ವಕವಾಗಿ ಆರ್ಯರ ವೃದ್ಧಿಗೆ ಕಾರಣನಾದನೆಂದು ವರ್ಣಿಸಿರುವಂತೆ ಈ ಋಕ್ಕಿನ ಲ್ಲಿಯೂ ಸಹ ಆರ್ಯರಿಗೆ ವೃದ್ಧಿಕಾರಕನಾಗಬೇಕೆಂದು ಪ್ರಾರ್ಥಿಸಿದೆ.

ವ್ಯಾಕರಣಪ್ರಕ್ರಿಯಾ

**ಜಾತೂಭರ್ಮಾ**—ಜನೀ ಪ್ರಾದುರ್ಭಾವೇ ಧಾತು. **ಅನ್ಯೇಷ್ವಪಿ ದೃಶ್ಯತೇ**—(ಪಾ. ಸೂ. ೩-೨-೧೦೧) ಸೂತ್ರದಲ್ಲಿ ದೃಶಿಗ್ರಹಣವು ಎಲ್ಲಾ ಉಪಾಧಿಯನ್ನು (ವಿಶೇಷಣವನ್ನು) ಅತಿಕ್ರಮಿಸಿ ಕಾರ್ಯಬರಲು ಹಾಕಲ್ಪಟ್ಟಿದೆ. ಆದುದರಿಂದ ಕೇವಲವಾದ ಧಾತುವಿಗೂ ಡಪ್ರತ್ಯಯ ಬರುತ್ತದೆ. ಡಿತ್ವ ಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ಜ ಎಂದು ರೂಪವಾಗುತ್ತದೆ. ಜಾನ್ ತೂರ್ವತಿ ಇತಿ ಜಾತೂಃ. ತುರ್ವೀ ಹಿಂಸಾಯಾಂ ಧಾತು. **ಕ್ವಿಪ್ ಚ** (ಪಾ. ಸೂ. ೩-೨-೭೬) ಸೂತ್ರದಿಂದ ಕ್ವಿಪ್. ಇದು ಪರವಾದಾಗ **ರಾಲ್ಲೋಪಃ**—(ಪಾ. ಸೂ. ೬-೪-೨೧) ಎಂಬುದರಿಂದ ಧಾತುವಿನ ವಕಾರಕ್ಕೆ ಲೋಪ. ಜಾತೂರ್ ಶಬ್ದವಾಗುತ್ತದೆ. ಭ್ರಿಯತೇ ಇತಿ ಭರ್ಮ. **ಅನ್ಯೇಭ್ಯೋಽಪಿ ದೃಶ್ಯಂತೇ**—ಎಂಬುದರಿಂದ ಮನಿನ್ ಪ್ರತ್ಯಯ. ಜಾತೂಃ ಭರ್ಮ ಯಸ್ಯ ಸಃ ಜಾತೂಭರ್ಮಾ. ಛಂದಸನಾಗಿ ಪೂರ್ವಪದದ ರೇಫಕ್ಕೆ ಲೋಪ ಬರುತ್ತದೆ. **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಯದ್ವಾ ಎಂದು ಬೇರೆ ಅರ್ಥವಿದ್ದರೆ ವಾದಿಸಾಗ ಜನೀ ಧಾತುವಿಗೆ **ನಿಷ್ಠಾ**—(ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. ಜನಸನಖನಾಂ-

**ಸನ್**—(ಪಾ. ಸೂ. ೬-೪-೪೨) ಎಂಬುದರಿಂದ ಧಾತುವಿಗೆ ಆತ್ವ. ಜಾತಂ ಸರ್ವಂ ಭರ್ಮ ಭರ್ತವ್ಯಂ ಯೇನ ಜಾತೂಭರ್ಮಾ. ವರ್ಣವ್ಯತ್ಯಯದಿಂದ ಛಾಂದಸವಾಗಿ ಅಕಾರಕ್ಕೆ ಊಕಾರ ಬರುತ್ತದೆ. ಇಲ್ಲಿಯೂ ಹಿಂದಿನಂತೆ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾಏಕವಚನಾಂತರೂಪ.

**ಅಚರತ್**— ಚರ ಗತಿಭಕ್ಷಣಯೋಃ ಧಾತು. ಲಙ ಪ್ರಥಮಪುರುಷ ಏಕವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಿದ್ವಾನ್**—ವಿದ ಜ್ಞಾನೇ ಧಾತು. ಲಟರ್ಥದಲ್ಲಿ ಶತೃಪ್ರತ್ಯಯ ಬಂದಾಗ **ವಿದೇಃ ಶತುರ್ವಸುಃ**—(ಪಾ. ಸೂ. ೭-೧-೩೬) ಎಂಬುದರಿಂದ ಅದಕ್ಕೆ ವಸುರಾದೇಶ. ಪ್ರಥಮಾ ಸುವಿನಲ್ಲಿ ಉಗಿತ್ತಾದುದರಿಂದ ನುಮಾಗಮ.

**ದಸ್ಯವೇ**—ದಸು ಉಪಕ್ಷಯೇ. ಧಾತು. **ಯಜಿಮನಿಶುಂಧಿ**—(ಉ. ಸೂ. ೩-೨೦೦) ಎಂಬುದರಿಂದ ಇದಕ್ಕೆ ಯುಪ್ರತ್ಯಯ. ದಸ್ಯುಶಬ್ದವಾಗುತ್ತದೆ. **ವೃಷಾದೀನಾಂ ಚ**—(ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವರ್ಧಯ**—ವೃಧು ವೃದ್ಧೌ. ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. **ಪುಗಂತ ಲಘೂಪಧಸ್ಯ ಚ**—(ಪಾ. ಸೂ. ೭-೩-೮೬) ಎಂಬುದರಿಂದ ಣಿಚ್ ನಿಮಿತ್ತವಾಗಿ ಲಘೂಪಧಗುಣ. ಣಿಜಂತದ ಮೇಲೆ ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. ಶಪ್ ವಿಕರಣ. ತನ್ನಿಮಿತ್ತವಾಗಿ ಣಿಚಿಗೆ ಗುಣ ಅಯಾದೇಶ. **ಅತೋಹೇಃ**—ಎಂಬುದರಿಂದ ಹಿಗೆ ಲುಕ್. ತಿಙಂತನಿಘಾತಸ್ವರ ಬರುತ್ತದೆ. ॥ ೩ ॥



। ಸಂಹಿತಾಪಾಠಃ ।

ತದೂಚುಷೇ ಮಾನುಷೇಮಾ ಯುಗಾನಿ ಕೀರ್ತೇನ್ಯಂ ಮಘವಾ
ನಾಮ ಬಿಭ್ರತ್ ।
ಉಪಪ್ರಯನ್ದಸ್ಯುಹತ್ಯಾಯ ವಜ್ರೀ ಯದ್ಧ ಸೂನುಃ ಶ್ರವಸೇ
ನಾಮ ದಧೇ ॥ ೪ ॥

ಪದಪಾಠಃ

ತತ್ । ಊಚುಷೇ । ಮಾನುಷಾ । ಇಮಾ । ಯುಗಾನಿ । ಕೀರ್ತೇನ್ಯಂ ।
ಮಘಽವಾ । ನಾಮ । ಬಿಭ್ರತ್ ।
ಉಪಽಪ್ರಯನ್ । ದಸ್ಯುಽಹತ್ಯಾಯ । ವಜ್ರೀ । ಯತ್ । ಹ । ಸೂನುಃ ।
ಶ್ರವಸೇ । ನಾಮ । ದಧೇ ॥ ೪ ॥

। ಸಾಯಣಭಾಷ್ಯಂ ॥

ನಾಮ ಶತ್ರೂಣಾಂ ನಾಮಕಂ ತದಿಂದ್ರಸ್ಯ ಬಲಮೂಚುಷ ಉಕ್ತವತೇ ಸ್ತುವತೇ ಯಜಮಾನಾಯ ಕೀರ್ತೇನ್ಯಂ ಕೀರ್ತನೀಯಂ ಸ್ತುತ್ಯಂ । ನಾಮಕಂ ತದ್ಬಲಂ ಬಿಭ್ರದ್ಧಾರಯನ್ಮಘವಾ ಧನವಾನಿಂದ್ರೋ ಮಾನುಷಾ ಮನುಷ್ಯಾಣಾಂ ಸಂಬಂಧಿನೀಮೇಮಾನಿ ದೃಶ್ಯಮಾನಾನಿ ಯುಗಾನ್ಯಹೋರಾತ್ರಸಂಘನಿಷ್ಪಾದ್ಯಾನಿ ಕೃತತ್ರೇತಾದೀನಿ ಸೂರ್ಯಾತ್ಮನಾ ನಿಷ್ಪಾದಯತೀತಿ ಶೇಷಃ । ಕಿಂ ಪುನಸ್ತನ್ನಾಮ । ದಸ್ಯುಹತ್ಯಾಯ ದಸ್ಯೂನಾಂ ವೃತ್ರಾದೀನಾಂ ಹನನಾಯೋಪಪ್ರಯನ್ ಗೃಹಸಮೀಪಾನ್ನಿರ್ಗಚ್ಛನ್ ವಜ್ರೀ ವಜ್ರವಾನ್ಸೂನುಃ ಶತ್ರೂಣಾಂ ಪ್ರೇರಯಿತೇಂದ್ರೋ ಯದ್ಧ ಯತ್ಖಲು ನಾಮ ಶತ್ರೂಣಾಂ ನಾಮಕಂ ಶ್ರವಸೇ ಜಯಲಕ್ಷಣಾಯ ಯಶಸೇ ದಧೇ ಧೃತವಾನ್ ॥ ಊಚುಷೇ । ಬ್ರೂಞ್ ವ್ಯಕ್ತಾಯಾಂ ವಾಚಿ । ಬ್ರುವೋ ವಚಿಃ । ಲಿಟಃ ಕ್ವಸುಃ ವಚಿಸ್ವಪೀತ್ಯಾದಿನಾ ಸಂಪ್ರಸಾರಣಂ । ಚತುರ್ಥ್ಯೇಕವಚನೇ ಭಸಂಜ್ಞಾಯಾಂ ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ । ಶಾಸಿವಸಿಘಸೀನಾಂ ಚೇತಿ ಷತ್ವಂ । ಕ್ವಸುಪ್ರತ್ಯಯಾದ್ಯುದಾತ್ತತ್ವಂ । ಕೀರ್ತೇನ್ಯಂ । ಕೄತ ಸಂಶಬ್ದನೇ । ಕೃತ್ಯಾರ್ಥೇ ತವೈಕೇನಿತಿ ಕೇನ್ಯಪ್ರತ್ಯಯಃ । ಮಘವಾ । ಮಘಶಬ್ದಾಚ್ಛಂದಸೀವನಿಪಾವಿತಿ ಮತ್ವರ್ಥೀಯೋ ವನಿಪ್ । ಬಿಭ್ರತ್ । ಡುಭೃಞ್ ಧಾರಣಪೋಷಣಯೋಃ । ಶತರಿ ಜುಹೋತ್ಯಾದಿತ್ವಾಚ್ಛಪಃ ಶ್ಲುಃ । ಭೃಞಾಮಿದಿತ್ಯಭ್ಯಾಸಸ್ಯೇತ್ವಂ । ನಾಭ್ಯಸ್ತಾಚ್ಛತುರಿತಿ ನುಮಾಗಮಪ್ರತಿಷೇಧಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ॥

ಭಾವಾರ್ಥ

ಕೀರ್ತೇನ್ಯಂ—ಕೊಂಡಾಡಲು ಯೋಗ್ಯವಾದ ಶಕ್ತಿಯನ್ನು । ಬಿಭ್ರತ್—ಹೊಂದಿರುವವನಾಗಿ । ಮಘವಾ—ಧನವಂತನಾದ ಇಂದ್ರನು । **ನಾಮ**—(ಶತ್ರುಗಳಲ್ಲೆಲ್ಲಾ) ಪ್ರಸಿದ್ಧವಾದ । **ತತ್**—ಆ (ಇಂದ್ರನ) ಬಲವನ್ನು । **ಊಚುಷೇ**—ಹೊಗಳತಕ್ಕ ಯಜಮಾನನಿಗೆ । **ಮಾನುಷಾ**—ಮಾನವರಿಗೆ ಸಂಬಂಧಿಸಿದ । ಇಮಾ ಯುಗಾನಿ— ಈಗ ಗೋಚರವಾಗತಕ್ಕ ಕೃತತ್ರೇತಾದಿಯುಗಗಳನ್ನು (ಸೃಷ್ಟಿಮಾಡಿಕೊಡುತ್ತಾನೆ.) । ದಸ್ಯುಹತ್ಯಾಯ—ವೃತ್ರಾದಿದಸ್ಯುಗಳ ಹನನಕ್ಕಾಗಿ । **ಉಪಪ್ರಯನ್**—(ಅವರ ನಿವಾಸಗಳ ಮೇಲೆ) ಧಾಳಿಯನ್ನುಮಾಡುತ್ತಾ । ವಜ್ರೀ— ವಜ್ರಾಯುಧವನ್ನು ಹಿಡಿದಿರುವವನೂ । **ಸೂನುಃ**— (ಶತ್ರುಗಳನ್ನು ಕೆರಳಿ

ಸುವವನೂ । **ಯದ್ಧ ನಾಮ**—(ಯಾವ) ಅದೇ ಪ್ರಸಿದ್ಧವಾದ ಬಲವನ್ನು । **ಶ್ರವಸೇ**—ಜಯರೂಪವಾದ ಯಶಸ್ಸಿಗಾಗಿ । **ದಧೇ**—ಹೊಂದಿದ್ದಾನೆ. ।

ಭಾವಾರ್ಥ

ಸ್ತುತ್ಯವಾದ ಶಕ್ತಿಯನ್ನು ಹೊಂದಿರುವ ಇಂದ್ರನು ಶತ್ರುಸಮೂಹದಲ್ಲೆಲ್ಲಾ ಪ್ರಸಿದ್ಧವಾದ ತನ್ನ ಶಕ್ತಿಯನ್ನು ಯಾವ ಯಜಮಾನನು ಸ್ತೋತ್ರಮಾಡಿ ಹೊಗಳುತ್ತಾನೆಯೋ ಅವನಿಗೆ ಮಾನವರ ಆಯಸ್ಸನ್ನು ನಿಯಮಿಸುವ ಕೃತತ್ರೇತಾದಿಯುಗಗಳನ್ನು ಸೃಷ್ಟಿಮಾಡಿಕೊಡುತ್ತಾನೆ. ವೃತ್ರಾದಿದಸ್ಯುಗಳ ಹನನಕ್ಕಾಗಿ ಅವರ ನಿವಾಸಗಳ ಮೇಲೆ ಧಾಳಿಯನ್ನು ಮಾಡುತ್ತಾ ವಜ್ರಾಯುಧವನ್ನು ಹಿಡಿದಿರುವವನೂ, ಶತ್ರುಗಳನ್ನು ಓಡಿಸುವವನೂ ಆದ ಇಂದ್ರನು ತನ್ನ ಅದೇ ಪ್ರಸಿದ್ಧವಾದ ಬಲವನ್ನು ಜಯರೂಪವಾದ ಯಶಸ್ಸಿಗಾಗಿ ಹೊಂದಿದ್ದಾನೆ.

English Translation

Maghavan, possessing a name that is to be glorified, offers to him, who celebrates it, these (revolving) ages of man : the thunderer, the scatterer (of his foes), sallying forth to destroy the Dasyus, has obtained a name (renowned for victorious) prowess.

ವಿಶೇಷವಿಷಯಗಳು

ಇಂದ್ರನ ಶಕ್ತಿಯು ಎರಡು ಕಾರಣಗಳಿಂದ ಪ್ರಸಿದ್ಧವಾದುದು ಮತ್ತು ಸ್ತುತ್ಯವಾದುದು. ಮೊದಲನೆಯದಾಗಿ ಅದು ಯಾವಾಗಲೂ ಶತ್ರುಗಳನ್ನು ಹಿಂಸಿಸುತ್ತಾ ಅವರಲ್ಲಿ ಭೀತಿಯನ್ನುಂಟುಮಾಡುವುದರಿಂದ ಯಾವಾಗಲೂ ಶತ್ರುಗಳು ಇಂದ್ರನ ಸಾಮರ್ಥ್ಯವನ್ನು ನೆನಿಸಿಕೊಂಡು ಭಯಪಡುತ್ತಿರುತ್ತಾರೆ. ಆದುದರಿಂದ ಯಜ್ಞಕರ್ತರ ಭಾಗಕ್ಕೆ ರಕ್ಷಕವಾಗಿಯೂ ಅತ್ಯಂತ ಸ್ತುತ್ಯವಾಗಿಯೂ ಇದೆ. ಎರಡನೆಯದಾಗಿ ಇಂತಹ ಅಸಾಧಾರಣವಾದ ಸಾಮರ್ಥ್ಯವನ್ನು ಸ್ತುತಿಸುವ ಭಕ್ತರಿಗೆ ಇಂದ್ರನು ಸೂರ್ಯರೂಪದಿಂದ ಅಹೋರಾತ್ರಾದಿವ್ಯವಹಾರಕಾಲಗಳನ್ನೂ ದರ್ಶಪೂರ್ಣಮಾಸಾದಿಯಜ್ಞಕಾಲಗಳನ್ನೂ ನಿಯಮಿಸಿ ಉಪಕಾರಕನಾಗಿದ್ದಾನೆ. ಇದರಿಂದ ಶತ್ರು ಮತ್ತು ಮಿತ್ರ ಈ ಎರಡು ಕಡೆಗಳಲ್ಲೂ ಜಯರೂಪವಾದ ಯಶಸ್ಸನ್ನು ಪಡೆದಿದ್ದಾನೆ ಎಂಬ ಅಂಶಗಳನ್ನು ಈ ಋಕ್ಕಿನಲ್ಲಿ ವಿವರಿಸಿದೆ.

**ಕೀರ್ತೇನ್ಯಂ**—**ಕೀರ್ತನೀಯಂ । ಸ್ತುತ್ಯಂ** ಎಲ್ಲರಿಂದಲೂ ಪ್ರಶಂಸಿಸಲ್ಪಡತಕ್ಕ.

**ಯುಗಾನಿ—ಅಹೋರಾತ್ರಸಂಘನಿಷ್ಪಾದ್ಯಾನಿ ಕೃತತ್ರೇತಾದೀನಿ ಸೂರ್ಯಾತ್ಮನಾ ನಿಷ್ಪಾದಯತಿ ।** ಅಹೋರಾತ್ರಗಳ ಸಂಘಗಳಿಂದ ನಿಷ್ಪನ್ನವಾಗತಕ್ಕ ಕೃತತ್ರೇತಾದಿಯುಗಗಳನ್ನು ಸೂರ್ಯರೂಪದಿಂದ ಇದ್ದು ಇಂದ್ರನು ಸೃಷ್ಟಿಸುತ್ತಾನೆ ಎಂದು ಸಾಯಣರೂ.

**ಯುಗಶಬ್ದಃ ಕಾಲವಚನಃ ಸರ್ವತ್ರ ಚಾತ್ರ ಸಪ್ತಮ್ಯರ್ಥೇ ಪ್ರಥಮಾ। ಮನುಷ್ಯಾಣಾಂ ಸಂಬಂಧಿಷು ಸ್ತೋತ್ರೇಷು ಪೌರ್ಣಮಾಸ್ಯಮಾವಾಸ್ಯಾದಿಷು ಯೋಗಕಾಲೇಷು ಕೀರ್ತೇನ್ಯಂ ಆತ್ಮೀಯಂ ನಾಮ**

**ಧಾರಯೆನ್** | ಯುಗಶಬ್ದವು ಕಾಲವಾಚಿಯಾದುದರಿಂದ ಇಲ್ಲಿ ಮಾನವರ ಸ್ಮೃತಿಕಾಲದಲ್ಲೂ ಮತ್ತು ಪೌರ್ಣಮಾಸ್ಯ ಅಮಾವಾಸ್ಯಾದಿ ಯಾಗಕಾಲಗಳಲ್ಲೂ ಸಹ ತನ್ನ ಸ್ತುತ್ಯವಾದ ಹೆಸರನ್ನೂ ಯಶಸ್ಸನ್ನೂ ಪ್ರಕಟಿಸುತ್ತಾ ದಸ್ಯುಹನನಕ್ಕಾಗಿ ಹೊರಟನು ಎಂದು ಸ್ಕಂದಸ್ವಾಮಿಗಳೂ ಅನ್ವಯವನ್ನು ಮಾಡಿ ವಿವರಿಸಿದ್ದಾರೆ.

**ಸೂನುಃ**— **ಅದಿತೇಃ ಪುತ್ರಃ** | ಅದಿತಿಯ ಮಗನಾದ ಇಂದ್ರನು ಎಂದು ಸ್ಕಂದಸ್ವಾಮಿಗಳು **ಸೂನು** ಶಬ್ದಕ್ಕೆ ಮಗನೆಂದೂ, **ಶತ್ರೂಣಾಂ ಪ್ರೇರಯಿತೇಂದ್ರಃ** | ಶತ್ರುಗಳನ್ನು ಕೆರಳಿಸತಕ್ಕವನು ಎಂದು ಸಾಯಣರೂ ಅರ್ಥಮಾಡಿದ್ದಾರೆ. ಶತ್ರುಗಳಲ್ಲಿ ಯುದ್ಧಕ್ಕೆ ಉತ್ಸಾಹವನ್ನು ಉತ್ಪನ್ನಮಾಡುವವನು ಎಂದಭಿಪ್ರಾಯ. **ಸೂನು** ಶಬ್ದವು ಪುತ್ರ ಎಂಬ ಸಹಜವಾದ ಅರ್ಥವನ್ನು ಕೊಟ್ಟರೂ ಸಹ ಒಂದೆರಡೆಡೆಗಳಲ್ಲಿ **ಉತ್ಪಾದಕ** ಎಂದೂ ಆಗಿರುತ್ತದೆ.

**ಉದು ತ್ಯೇ ಸೂನವೋ ಗಿರಃ ಕಾಷ್ಠಾ ಅಜ್ಮೇಷ್ವತ್ನತ |**
(ಋ. ಸಂ. ೧-೩೭-೧೦)

ಎಂಬ ಋಕ್ಕಿನಲ್ಲಿ **ಸೂನವಃ** ಎಂದರೆ ವಾಕ್ಕುಗಳ ಉತ್ಪಾದಕರಾದ ಮರುತ್ತುಗಳೆಂದರ್ಥ.

**ಅಕ್ರೋ ನ ಬಭ್ರಿಃ ಸಮಿಥೇ ಮಹೀನಾಂ ದಿದೃಕ್ಷೇಯಃ ಸೂನವೇ ಭಾಋಜೀಕಃ |**
(ಋ. ಸಂ. ೩-೧-೧೨)

ಎಂಬ ಋಕ್ಕಿನಲ್ಲಿ **ಸೂನವೇ** ಎಂದರೆ ಸೋಮರಸವನ್ನು ಹಿಂಡಿ ರಸವನ್ನು ಉತ್ಪಾದನೆ ಮಾಡತಕ್ಕ ಯಜಮಾನನಿಗೆ ಎಂದರ್ಥ. ಹೀಗೆಯೇ ಪ್ರಕೃತವಾದ ಈ ಋಕ್ಕಿನಲ್ಲಿಯೂ ಸಹ ಶತ್ರುಗಳಿಗೂ ಯುದ್ಧೋತ್ಸಾಹವನ್ನು ಉತ್ಪನ್ನಮಾಡುವವನು, ಅವರನ್ನು ಕೆರಳಿಸುವವನು ಎಂದಭಿಪ್ರಾಯವಾಗಿರಬಹುದು.

**ಉಪ ಪ್ರಯೆನ್**--ಈ ಪದಕ್ಕೆ ಸಾಧಾರಣವಾಗಿ ಪ್ರಾರಂಭಿಸು, ಅಥವಾ ಅವಿಚ್ಛಿನ್ನವಾಗಿ ನೆರವೇರಿಸು ಎಂದರ್ಥವಾಗುತ್ತದೆ.

**ಉಪಪ್ರಯಂತೋ ಅಧ್ವರಂ ಮಂತ್ರಂ ವೋಚೇಮಾಗ್ನಯೇ |**
(ಋ ಸಂ. ೧-೭೪-೧)

ಈ ಋಕ್ಕಿನಲ್ಲಿ **ಪ್ರಾಪ್ತ್ಯವಿಚ್ಛೇದೇನ ಸಮ್ಯಗನುತಿಷ್ಠಂತಃ** | ಅನುಸ್ಯೂತವಾಗಿ ನೆರವೇರಿಸತಕ್ಕವರೆಂದರ್ಥ.

**ಇಂದ್ರಮಿವೇದುಭಯೇ ವಿ ಹ್ವಯಂತ ಉದೀರಾಣಾ ಯಜ್ಞಮುಪಪ್ರಯಂತಃ |**
(ಋ. ಸಂ. ೪-೩೯-೫)

**ದಧಿಕ್ರಾಮು ನಮಸಾ ಬೋಧಯಂತ ಉದೀರಾಣಾ ಯಜ್ಞಮುಪಪ್ರಯಂತಃ |**
(ಋ. ಸಂ. ೭-೪೪-೨)

ಈ ಋಕ್ಕುಗಳಲ್ಲಿ **ಉಪಕ್ರಮಮಾಣಾಃ** ಪ್ರಾರಂಭಿಸುವವರಾಗಿ ಎಂದರ್ಥ. ಪ್ರಕೃತವಾದ ಋಕ್ಕಿನಲ್ಲಿ ಮಾತ್ರ ಶತ್ರುಗಳ ಮೇಲೆ ಧಾಳಿಯನ್ನಾರಂಭಿಸಿ ಅನುಸ್ಯೂತವಾಗಿ ಶತ್ರುಗಳ ಮೇಲೆ ಬೀಳುವವನು ಎಂದರ್ಥವಾಗುತ್ತದೆ.

**ಯದ್ಧ ನಾಮ ಶ್ರವಸೇ ದಧೇ**— **ಯತ್ ಖಲು ಶತ್ರೂಣಾಂ ನಾಮಕಂ ಜಯಲಕ್ಷಣಾಯ ಯಶಸೇ ಧೃತವಾನ್** । ಶತ್ರುಗಳಿಗೆ ಪ್ರಜ್ಞಾಪಕವಾದ ತನ್ನ ಯಶಸ್ಸನ್ನು ಬೀರಿದನು ಎಂದು ಸಾಯಣರೂ.

ಶ್ರವ **ಇತ್ಯಪ್ಯನ್ನನಾಮ, ನಾಮಶಬ್ದೋಽಪ್ಯುದಕನಾಮ । ದಧೇ ಇತ್ಯಪಿ ಧಾರಯತಿರ್ದಾನಾರ್ಥಃ। ಯದಾ ಚ ಸಸ್ಯಲಕ್ಷಣಾಯಾನ್ನಾಯ ವೃಷ್ಟಿಲಕ್ಷಣಮುದಕಂ ದದಾತಿ ತದಾ ಆತ್ಮೀಯಂ ನಾಮಾಚಷ್ಟೇ ।** ಅನ್ನ ನಾಮಗಳಲ್ಲಿ ಪಠಿತವಾಗಿರುವುದರಿಂದ **ಶ್ರವ** ಶಬ್ದಕ್ಕೆ ಅನ್ನವೆಂದೂ, **ಉದಕ**ನಾಮಗಳಲ್ಲಿ ಪಠಿತವಾಗಿರುವುದರಿಂದ **ನಾಮ** ಶಬ್ದಕ್ಕೆ ಉದಕವೆಂದೂ ಅರ್ಥವಾಗಬಹುದಾದರೆ, ಸಸ್ಯರೂಪವಾದ ಅನ್ನಕ್ಕೆ ವೃಷ್ಟಿರೂಪವಾದ ಉದಕವನ್ನು ಕೊಟ್ಟು ತನ್ನ ಲೋಕೋಪಕಾರಕವಾದ ಯಶಸ್ಸನ್ನು ಪ್ರಕಟಪಡಿಸಿದನು ಎಂದಭಿಪ್ರಾಯವೆಂದು ಸ್ಕಂದಸ್ವಾಮಿಗಳೂ ವಿವರಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಊಚುಷೇ**—ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು. ಅದಾದಿ. ಲಿಟ್ ವಿವಕ್ಷಾಮಾಡಿದಾಗ **ಬ್ರುವೋವಚಿಃ**—(ಪಾ. ಸೂ. ೨-೪-೫೩) ಎಂಬುದರಿಂದ ವಚ್ಯಾದೇಶ. **ಕ್ವಸುಶ್ಚ**—(ಪಾ. ಸೂ. ೩-೨-೧೦೭) ಎಂಬುದರಿಂದ ಲಿಟಿಗೆ ಕ್ವಸುರಾದೇಶ. ಇದು ಕಿತ್ತಾದುದರಿಂದ **ವಚಿ ಸ್ವಪಿ ಯಜಾದೀನಾಂ ಕಿತಿ**—(ಪಾ. ಸೂ. ೬-೧-೧೫) ಎಂಬುದರಿಂದ ಧಾತುವಿಗೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ**—ಎಂಬುದರಿಂದ ಪೂರ್ವರೂಪ. ಚತುರ್ಥೀಏಕವಚನ (ಙೇ) ಪರವಾದಾಗ ಭಸಂಜ್ಞಾ ಇರುವುದರಿಂದ **ವಸೋಃ ಸಂಪ್ರಸಾರಣಮ್**—(ಪಾ. ಸೂ. ೬-೪-೧೩೧) ಎಂಬುದರಿಂದ ವಸುವಿನ ವಕಾರಕ್ಕೆ ಸಂಪ್ರಸಾರಣ. ಪೂರ್ವರೂಪ. **ಶಾಸಿವಸಿಘಸೀನಾಂ ಚ**—(ಪಾ. ಸೂ. ೮-೩-೬೦) ಎಂಬುದರಿಂದ ವಸುವಿನ ಸಕಾರಕ್ಕೆ ಷತ್ವ. ಊಚುಷೇ ಎಂದು ರೂಪವಾಗುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಉಕಾರ ಉದಾತ್ತವಾಗುತ್ತದೆ.

**ಮಾನುಷಾ**—**ಶೇಶ್ಛಂದಸಿ ಬಹುಲಮ್**—ಎಂಬುದರಿಂದ ಶಿಗೆ ಲೋಪ. ಹೀಗೆಯೇ ಇಮಾ ಎಂಬಲ್ಲಿಯೂ ಪ್ರಕ್ರಿಯೆ.

**ಕೀರ್ತೇನ್ಯಮ್**—ಕೄತ ಸಂಶಬ್ದನೇ ಧಾತು. ಇದಕ್ಕೆ **ಕೃತ್ಯಾರ್ಥೇ ತವೈಕೇನ್**—(ಪಾ. ಸೂ. (ಪಾ. ಸೂ. ೩-೪-೧೪) ಎಂಬುದರಿಂದ ಕೇನ್ಯ ಪ್ರತ್ಯಯ. **ಋತ ಇದ್ಧಾತೋಃ**—(ಪಾ. ಸೂ. ೭-೧-೧೦೦) ಎಂಬುದರಿಂದ ಧಾತುವಿಗೆ ಇತ್ವ. **ಹಲಿ ಚ**—ಎಂಬುದರಿಂದ ರೇಫಾಂತಕ್ಕೆ ದೀರ್ಘ. ಕೀರ್ತೇನ್ಯ ಎಂದು ರೂಪವಾಗುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಏಕಾರ ಉದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ

**ಮಘವಾ**—ಮಘ ಶಬ್ದದ ಮೇಲೆ **ಛಂದಸೀ ವನಿಪೌ ಚ ವಕ್ತವ್ಯಮ್**—ಎಂಬ ವಚನದಿಂದ ಮತ್ವರ್ಥದಲ್ಲಿ ವನಿಪ್ ಪ್ರತ್ಯಯ. ಮಘವನ್ ಶಬ್ದವಾಗುತ್ತದೆ. ವನಿಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಬಿಭ್ರತ್**—ಡುಭೃಞ್ ಧಾರಣಪೋಷಣಯೋಃ ಧಾತು. ಜುಹೋತ್ಯಾದಿ. ಲಡರ್ಥದಲ್ಲಿ ಶತೃಪ್ರತ್ಯಯ. **ಜುಹೋತ್ಯಾದಿಭ್ಯಃ ಶ್ಲುಃ**—ಎಂಬುದರಿಂದ ಶ್ಲು ವಿಕರಣ. **ಶ್ಲೌ**—ಸೂತ್ರದಿಂದ ಧಾತುವಿಗೆ ದ್ವಿತ್ವ. **ಭೃಞಾಮಿತ್**—(ಪಾ. ಸೂ. ೭-೪-೭೬) ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಧಾತುವಿನ ಋಕಾರಕ್ಕೆ ಯಣಾದೇಶ.

ಅಭ್ಯಸ್ತದ ಪರದಲ್ಲಿ ಶತೃ ಬಂದುದರಿಂದ **ನಾಭ್ಯಸ್ತಾಚ್ಛತುಃ**-(ಪಾ. ಸೂ. ೭-೧-೭೮) ಎಂಬುದರಿಂದ ಸುಪರವಾದಾಗ ನುಮಾಗಮ ಬರುವುದಿಲ್ಲ. **ಅಭ್ಯಸ್ತಾನಾಮಾದಿಃ**—(ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ. ಬರುತ್ತದೆ.

**ಉಪಪ್ರಯನ್**—ಇಣ್ ಗತೌ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. **ಇಣೋಯಣ್**—(ಪಾ. ಸೂ. ೬-೪-೮೧) ಎಂಬುದರಿಂದ ಧಾತುವಿಗೆ ಯಣಾದೇಶ. ಪ್ರತ್ಯಯಸ್ವರ ಉಳಿಯುತ್ತದೆ. **ತಿಙಿ ಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ ನಿಘಾತಸ್ವರ ಬರುತ್ತದೆ. ಗತಿಸಮಾಸವಾದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ದಧೇ**— ಡುಧಾಞ್ ಧಾರಣಪೋಷಣಯೋಃ ಧಾತು. ಲಿಟ್ ಪ್ರಥಮಪುರುಷ ಏಕವಚನರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೪ ॥



ಸಂಹಿತಾಪಾಠಃ

ತದಸ್ಯೇದಂ ಪಶ್ಯತಾ ಭೂರಿ ಪುಷ್ಟಂ ಶ್ರದಿಂದ್ರಸ್ಯ ಧತ್ತನ ವೀರ್ಯಾಯ ।
ಸ ಗಾ ಅವಿಂದತ್ಸೋ ಅವಿಂದದಶ್ವಾನ್ತ್ಸ ಓಷಧೀಃ ಸೋ ಅಪಃ ಸ ವನಾನಿ ॥ ೫ ॥

ಪದಪಾಠಃ

ತತ್ । ಅಸ್ಯ । ಇದಂ । ಪಶ್ಯತ । ಭೂರಿ । ಪುಷ್ಟಂ । ಶ್ರತ್ । ಇಂದ್ರಸ್ಯ । ಧತ್ತನ । ವೀರ್ಯಾಯ ।

ಸಃ । ಗಾಃ । ಅವಿಂದತ್ । ಸಃ । ಅವಿಂದತ್ । ಅಶ್ವಾನ್ । ಸಃ । ಓಷಧೀಃ । ಸಃ ।
ಅಪಃ । ಸಃ । ವನಾನಿ ॥ ೫ ॥

ಸಾಯಣಭಾಷ್ಯಂ

ಹೇ ಋತ್ವಿಗ್ಯಜಮಾನಲಕ್ಷಣಾ ಜನಾಃ ಅಸ್ಯೇಂದ್ರಸ್ಯ ತದಿದಂ ವೀರ್ಯಂ ಪುಷ್ಟಂ ಪ್ರವೃದ್ಧಂ । ಅತ ಏವ ಭೂರಿ ವಿಸ್ತೀರ್ಣಂ ಪಶ್ಯತ । ಆಲೋಕಯತ । ತಸ್ಮೈ ಚ ವೀರ್ಯಾಯ ಶ್ರದ್ಧತ್ತನ । ಬಹುಮಾನಂ ಕುರುತ । ಕಿಂ ಪುನಸ್ತದ್ವೀರ್ಯಮಿತಿ ಚೇತ್ ಉಚ್ಯತೇ । ಸ ಇಂದ್ರಃ ಪಣಿಭಿರಪಹೃತಾ ಗಾ ಯೇನ ವೀರ್ಯೇಣಾವಿಂದತ್ ಅಲಭತ । ತಥಾ ತೈರಪಹೃತಾನಶ್ವಾನ್ಸ ಇಂದ್ರೋ ಯೇನಾವಿಂದತ್ । ಅಪಿ ಚ ಸ ಇಂದ್ರ ಓಷಧೀರೋಷಧ್ಯುಪಲಕ್ಷಿತಾಂ ಸರ್ವಾಂ ಭೂಮಿಂ ಯೇನ ವೀರ್ಯೇಣಾಲಭತ । ತಥಾ ವೃತ್ರೇಣ ನಿರುದ್ಧಾ ಅಪೋ ವೃಷ್ಟ್ಯುದಕಾನಿ ಸ ಇಂದ್ರೋ ಯೇನಾಲಭತ । ತಥಾ ವನಾನಿ ವನನೀಯಾನಿ ಸಂಭಜನೀಯಾನಿ ಧನಾನಿ ಸ ಇಂದ್ರೋ ಯೇನ ವೀರ್ಯೇಣ ಪ್ರಾಪ್ನೋತ್ ॥ ಧತ್ತನ । ತಪ್ತನಪ್ತನಥನಾಶ್ಚೇತಿ ತಸ್ಯ ತನಾದೇಶಃ । ಅವಿಂದತ್ । ವಿದ್ಲೃ ಲಾಭೇ । ಶೇ ಮುಚಾದೀನಾಮಿತಿ ನುಮ್ ॥

ಪ್ರತಿಪದಾರ್ಥ

ಅಸ್ಯ ಇಂದ್ರಸ್ಯ—(ಎಲೈ ಋತ್ವಿಗಾದಿಗಳಿರಾ) ಈ ಇಂದ್ರನ । **ಪುಷ್ಟಂ**—ಪ್ರವೃದ್ಧವಾದುದೂ । **ಭೂರಿ**—ವಿಸ್ತೃತವಾದುದೂ ಆದ । **ತತ್ ಇದಂ**—ಪ್ರಸಿದ್ಧವಾದ ಈ ಪರಾಕ್ರಮವನ್ನು । **ಪಶ್ಯತ**—ನೋಡಿರಿ । **ವೀರ್ಯಾಯ**—(ಅವನ) ಪರಾಕ್ರಮದಲ್ಲಿ । **ಶ್ರತ್‌ಧತ್ತನ**—ವಿಶ್ವಾಸವನ್ನಿಟ್ಟು ಗೌರವಿಸಿರಿ । **ಸಃ**—ಆ ಇಂದ್ರನು । **ಗಾಃ**—(ಪಣಿಗಳಿಂದ ಅಪಹೃತಗಳಾದ) ಗೋವುಗಳನ್ನು । **ಅವಿಂದತ್**—(ತನ್ನ ಪರಾಕ್ರಮದಿಂದ) ಸ್ವಾಧೀನಪಡಿಸಿಕೊಂಡನು । **ಸಃ**—ಅದೇ ಇಂದ್ರನು । **ಅಶ್ವಾನ್**—ಕುದುರೆಗಳನ್ನೂ । **ಅವಿಂದತ್**—(ಮತ್ತೆ) ಪಡೆದನು । (ಅಲ್ಲದೇ) **ಸಃ**—ಅದೇ ಇಂದ್ರನು । **ಓಷಧೀಃ**—(ಸಕಲ) ಮೂಲಿಕಾದಿಸಸ್ಯಗಳನ್ನೂ (ಪಡೆದನು) । **ಸಃ**—ಅವನು । **ಅಪಃ**—ವೃಷ್ಟ್ಯುದಕಾದಿಗಳನ್ನು (ಪಡೆದನು) । **ಸಃ**—ಅವನು । **ವನಾನಿ**—(ಆಕರ್ಷಕಗಳಾದ) ಪೂಜ್ಯಗಳಾದ ಧನಗಳನ್ನೂ (ಅದೇ ಪರಾಕ್ರಮದಿಂದ ಪಡೆದನು) ।

ಭಾವಾರ್ಥ

ಎಲೈ ಋತ್ವಿಗ್ಯಜಮಾನರುಗಳಿರಾ, ಇಂದ್ರನ ಪ್ರವೃದ್ಧವಾದುದೂ, ವಿಸ್ತೃತವಾದುದೂ, ಪ್ರಸಿದ್ಧವಾದುದೂ ಆದ ಪರಾಕ್ರಮವನ್ನು ನೋಡಿರಿ. ಇದೇ ಪರಾಕ್ರಮದಿಂದ ಇಂದ್ರನು ಪಣಿಗಳಿಂದ ಅಪಹೃತಗಳಾದ ಗೋವುಗಳನ್ನು ಮತ್ತೆ ಪಡೆದು ಸ್ವಾಧೀನಪಡಿಸಿಕೊಂಡನು. ಅಶ್ವಗಳನ್ನೂ ಪಡೆದನು. ಮತ್ತು ಇದೇ ಪರಾಕ್ರಮದಿಂದ ಮೂಲಿಕಾದಿಗಳನ್ನೂ, ವೃಷ್ಟ್ಯುದಕಾದಿಗಳನ್ನೂ ಮತ್ತು ಪೂಜ್ಯಗಳಾದ ಧನಗಳನ್ನೂ ಪಡೆದನು.

## English Translation

Behold this, the vast and extensive (might of Indra) ; have confidence in his prowess ; he has recovered the cattle, he has recovered the horses, the plants, the waters, the woods.

॥ ವಿಶೇಷವಿಷಯಗಳು ॥

**ಓಷಧೀಃ—ಓಷಧ್ಯುಪಲಕ್ಷಿತಾಂ ಸರ್ವಾಂ ಭೂಮಿಂ ಯೇನ ವೀರ್ಯೇಣಾಲಭತ ।** ಓಷಧಿಗಳಿಂದ ಉಪಲಕ್ಷಿತವಾದ ಸಮಸ್ತ ಪೃಥ್ವಿಯನ್ನೂ ತನ್ನ ವೀರ್ಯದಿಂದ ಪಡೆದನೆಂದಭಿಪ್ರಾಯ.

**ವನಾನಿ—ವನನೀಯಾನಿ ಸಂಭಜನೀಯಾನಿ ಧನಾನಿ ।** ಅತ್ಯಂತ ಆದರದಿಂದ ಅಪೇಕ್ಷಿತಗಳಾದ ಧನಗಳೆಂದು ಒಂದು ಅರ್ಥವೂ ; **ವನಾನಿ—ಸದಾ ಪುಷ್ಪಫಲಾನಿ ।** ಯಾವಾಗಲೂ ಫಲಪುಷ್ಪಗಳಿಂದ ಭರಿತಗಳಾದ ವನಗಳನ್ನು ಎಂದು ಇನ್ನೊಂದು ಅರ್ಥವೂ ಸಾಧ್ಯವಾಗುತ್ತದೆ.

**ವನ**ಶಬ್ದವನ್ನು **ರಶ್ಮಿ** (ಕಿರಣ) ನಾಮಗಳಲ್ಲಿಯೂ (ನಿ. ೧-೧೫); **ಉದಕ** ನಾಮಗಳಲ್ಲಿಯೂ (ನಿ.೧-೧೨) ಪಠಿಸಿದೆ. ಇವುಗಳ ಜೊತೆಗೆ ಇನ್ನೂ ಅನೇಕ ಅರ್ಥಗಳಲ್ಲಿಯೂ ಈ ಪದವನ್ನು ಋಕ್ಸಂಹಿತೆಯಲ್ಲಿ ಪ್ರಯೋಗಿಸಿದೆ. ವನ ಸಂಭಕ್ತೌ ಎಂಬ ಅತ್ಯುತ್ಕಟವಾದ ಇಚ್ಛೆ, ಆಕಾಂಕ್ಷೆಯೆಂಬರ್ಥವನ್ನು ಕೊಡುವ **ವನ್** ಧಾತುವಿನಿಂದಾಗಲಿ, ಅಥವಾ **ವನು ಯಾಚನೆ** ಯಾಚಿಸು, ಪ್ರಾರ್ಥಿಸು ಎಂಬರ್ಥವನ್ನು ಕೊಡುವ **ವನ್** ಧಾತುವಿನಿಂದಾಗಲಿ **ವನಾನಿ, ವನಾಮಹೇ ವನತೇ** ಇತ್ಯಾದಿ ನಾಮಪದಗಳೂ, ಕ್ರಿಯಾಪದಗಳೂ ನಿಷ್ಪನ್ನವಾಗಿ ಪ್ರಯೋಗಿಸಲ್ಪಟ್ಟಿರುವುದರಿಂದ ಈ ಅರ್ಥವ್ಯತ್ಯಾಸಗಳನ್ನು ತಿಳಿಯಲು ಕೆಲವು ಉದಾಹರಣೆಗಳನ್ನು ನೋಡಬಹುದು. ನಾಮಪದಗಳ ಅಥವಾ ವಿಶೇಷಣಪದಗಳ ಪ್ರಯೋಗಗಳಲ್ಲಿ,

**ಊರ್ಧ್ವಾ ನಃ ಸಂತು ಕೋಮ್ಯಾ ವನಾನ್ಯಹಾನಿ ವಿಶ್ವಾ ಮರುತೋ ಜಿಗೀಷಾ ।**
(ಋ. ಸಂ. ೧-೧೭೧-೩)

ಎಂಬ ಋಕ್ಕಿನಲ್ಲಿ **ವನಾನಿ** ಎಂಬುದಕ್ಕೆ **ಸಂಭಜನೀಯಾನಿ** ಪ್ರಾಜ್ಯಭಾವದಿಂದ ಆದರಿಸಿ ಅಪೇಕ್ಷಿಸಲ್ಪಡತಕ್ಕವು ಎಂದರ್ಥವೂ,

**ಘೃಷುಂ ಪಾವಕಂ ವನಿನಂ ವಿಚರ್ಷಣಿಂ ರುದ್ರಸ್ಯ ಸೂನುಂ ಹವಸಾ ಗೃಣೀಮಸಿ ।**
(ಋ. ಸಂ. ೧-೬೪-೧೨)

ಇಲ್ಲಿ **ವನವಂತಂ, ಉದಕವಂತಂ** ಎಂದು ವನ ಶಬ್ದಕ್ಕೆ ಉದಕವೆಂದೂ,

**ವನಾನಿ ವಿಭ್ಯೋ ನಕಿರಸ್ಯ ತಾನಿ ವ್ರತಾ ದೇವಸ್ಯ ಸವಿತುರ್ಮಿನಂತಿ ।**
(ಋ. ಸಂ. ೨-೩೮-೭)

ಎಂಬಲ್ಲಿ ವನಾನಿ ಎಂದರೆ ವೃಕ್ಷಗಳೆಂದೂ,

**ಪಾರಾವತಸ್ಯ ರಾತಿಷು ದ್ರವಚ್ಚಕ್ರೇಷ್ವಾಶುಷು ।**
**ತಿಷ್ಠಂ ವನಸ್ಯ ಮಧ್ಯ ಆ ।**

(ಋ. ಸಂ. ೮-೩೪-೧೮)

ಇಲ್ಲಿ ರಥದ ಒಂದು ಭಾಗವೆಂದೂ ಅರ್ಥವಾಗುತ್ತದೆ. ಹೀಗೆಯೇ, ಕ್ರಿಯಾಪದಪ್ರಯೋಗಗಳನ್ನೂ ನೋಡಿದರೆ, ನಿರುಕ್ತದಲ್ಲಿ ಉದಾಹೃತವಾಗಿರುವ (ನಿ. ೫-೨)

**ತ್ವಯಾ ವಯಂ ಮಘವನ್ಪೂರ್ವ್ಯೇ ಧನ ಇಂದ್ರತ್ವೋತಾಃ ಸಾಸಹ್ಯಾಮ ಪೃತನ್ಯತೋ ವನುಯಾಮ ವನುಷ್ಯತಃ ।**

(ಋ. ಸಂ. ೧-೧೩೨-೧)

ಮತ್ತು,

**ಅಸ್ಮಾಕೇಭಿರ್ನೃಭಿರ್ವಯಂ ಸಾಸಹ್ಯಾಮ ಪೃತನ್ಯತೋ ವನುಯಾಮ ವನುಷ್ಯತೋ ನಭಂತಾಮನ್ಯಕೇ ಸಮೇ ।**

(ಋ. ಸಂ. ೮-೪೦-೭)

ಎಂಬ ಋಕ್ಕುಗಳಲ್ಲಿ ಕೊಲ್ಲು ಎಂಬರ್ಥವೂ,

**ಕುವಿದ್ದೇವಸ್ಯ ಸಹಸಾ ಚಕಾನಃ ಸುಮ್ನಮಗ್ನಿರ್ವನತೇ ವಾವೃಧಾನಃ ।**

(ಋ. ಸಂ. ೫-೩-೧೦)

ಎಂಬ ಋಕ್ಕಿನಲ್ಲಿ **ಪ್ರಯಚ್ಛತಿ ।** ಕೊಡುತ್ತಾನೆ ಎಂದರ್ಥವೂ.

**ವನೇಮ ಪೂರ್ವೀರರ್ಯೋ ಮನೀಷಾ ಅಗ್ನಿಃ ಸುಶೋಕೋ ವಿಶ್ವಾನ್ಯಶ್ಯಾಃ ।**

(ಋ. ಸಂ. ೧-೭೦-೧)

ಇತ್ಯಾದಿ ಕಡೆಗಳಲ್ಲಿ **ವನೇಮ** ಎಂದರೆ ಪೂಜ್ಯಭಾವದಿಂದ ಸೇವಿಸೋಣ ಎಂತಲೂ,

**ಪ್ರಿಯೋ ಅತಿಥಿರ್ವನೀಷು ಮೇಧಿರ ಆ ವನಿಷೀಷ್ಟ ಮೇಧಿರಃ ।**

(ಋ. ಸಂ. ೧-೧೨೭-೭)

ಎಂಬಲ್ಲಿ ಪ್ರೀತಿಯಿಂದ ಸ್ವೀಕರಿಸಿ ಸೇವಿಸಲಿ ಎಂದೂ ಹೀಗೆಯೇ ಇನ್ನೂ ಕೆಲವು ಅರ್ಥಗಳೂ ಇರುತ್ತವೆ. ಹೀಗೆ ಅನೇಕಾರ್ಥಗಳು ಸಾಧ್ಯವಾಗುವುದರಿಂದ ಪ್ರಕೃತವಾದ ಈ ಋಕ್ಕಿನಲ್ಲಿ **ವನಾನಿ** ಎನ್ನುವುದಕ್ಕೆ **ಸಂಭಜನೀಯಾನಿ ಧನಾನಿ** ಎಂದಾದರೂ ಆಗಬಹುದು ಅಥವಾ ಸ್ಕಂದಸ್ವಾಮಿಗಳು ವಿವರಿಸುವಂತೆ **ಸದಾ ಪುಷ್ಪಫಲಾನಿ ವನಾನಿ** ಎಂದಾದರೂ ಆಗಬಹುದು.

**ಶ್ರತ್ ಧತ್ತನ**—ವೀರ್ಯವಾಸಿಂದ್ರ ಇತ್ಯೇತದವಿತಥಂ ಪ್ರತಿಪದ್ಯಧ್ವಂ ।
ಇದೇ ಸೂಕ್ತದ ೩ನೇ ಋಕ್ಕಿನಲ್ಲಿ ವರ್ಣಿತವಾಗಿರುವಂತೆ, ಇಂದ್ರನ ಅಸಾಧಾರಣವಾದ ಪರಾಕ್ರಮದಲ್ಲಿ ಅವನಿಗೇ ಶ್ರದ್ಧೆಯಿರುವುದರಿಂದ, ಅದಕ್ಕಿಂತಲೂ ಹೆಚ್ಚಾಗಿ ಭಕ್ತರಿಗೆ ಇರಬೇಕೆಂದೂ, ಈ ಶ್ರದ್ಧೆಯಿಂದ ಇಂದ್ರನನ್ನು ಪೂಜಿಸಿದರೆ ಸಕಲ ಸಂಪತ್ತುಗಳೂ ಲಭಿಸುವುವೆಂದೂ ಸೂಚಿಸಿದೆ.

ತ್ವಯೇದಿಂದ್ರ ಯುಜಾ ವಯಂ ಪ್ರತಿ ಬ್ರುವೀಮಹಿ ಸ್ಪೃಧಃ ।
ತ್ವಮಸ್ಮಾಕಂ ತವ ಸ್ಮಸಿ ॥
(ಋ. ಸಂ. ೮-೯೨-೩೨)

ನಹ್ಯ೧ನ್ಯಂ ಬಳಾಕರಂ ಮರ್ಡಿತಾರಂ ಶತಕ್ರತೋ ।
ತ್ವಂ ನ ಇಂದ್ರ ಮೃಳಯ ।
(ಋ. ಸಂ. ೮-೮೦-೧)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನನ್ನು ಬಿಟ್ಟರೆ ಬೇರೆ ಯಾರೂ ರಕ್ಷಕರಿಲ್ಲವೆಂದೂ, ಅವನಿಂದಲೇ ಸಕಲವಿಧವಾದ ಸುಖಗಳೂ ಲಭಿಸಬೇಕೆಂದೂ, ಭಕ್ತರು ಇಂದ್ರನಿಗೆ ಸೇರಿದವರೂ, ಇಂದ್ರನು ಭಕ್ತರಿಗೆ ಸೇರಿದವನೂ ಆದ್ದರಿಂದ ಅವನ ಸ್ತೋತ್ರವನ್ನೇ ಮಾಡಬೇಕು, ಅವನ ಸಹಾಯದಲ್ಲಿಯೇ ಶ್ರದ್ಧೆಯನ್ನಿಡಬೇಕು ಎಂದೂ ತಿಳಿಸಿದೆ.

ವ್ಯಾಕರಣಪ್ರಕ್ರಿಯಾ

**ಪಶ್ಯತ**—ದೃಶಿರ್ ಪ್ರೇಕ್ಷಣೇ ಧಾತು. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ **ಲೋಟೋಲಙ್ವತ್** (ಪಾ. ಸೂ. ೩-೪-೮೫) ಎಂಬುದರಿಂದ **ತಸ್ಥಸ್ಥಮಿಪಾಂ**—(ಪಾ. ಸೂ. ೩-೪-೧೦೧) ಎಂಬುದರಿಂದ ತಾದೇಶ. ಶಪ್ ವಿಕರಣ. **ಪಾಘ್ರಾಧ್ಮಾಸ್ಥಾ**—(ಪಾ. ಸೂ. ೭-೩-೭೮) ಸೂತ್ರದಿಂದ ಧಾತುವಿಗೆ ಪಶ್ಯ ಆದೇಶ. ತಿಙಂತ ನಿಘಾತಸ್ವರ ಬರುತ್ತದೆ.

**ಪುಷ್ಟಮ್**—ಪುಷ ಪುಷ್ಟೌ. ಧಾತು. ಇದಕ್ಕೆ **ನಿಷ್ಠಾ**—(ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. ಷ್ಟುತ್ವದಿಂದ ಪ್ರತ್ಯಯಕ್ಕೆ ಟತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಧತ್ತನ**—ಡುಧಾಞ್ ಧಾರಣಪೋಷಣಯೋಃ ಧಾತು. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ತಾದೇಶ. ಅದಕ್ಕೆ **ತಪ್ತನಪ್ತನಥನಾಶ್ಚ**—(ಪಾ. ಸೂ. ೭-೧-೪೫) ಎಂಬುದರಿಂದ ತನಾದೇಶ. ಶ್ಲುವಿಕರಣ ಬರುವುದರಿಂದ ಧಾತುವಿಗೆ ದ್ವಿತ್ವಾದಿ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವೀರ್ಯಾಯ**—ವೀರಸ್ಯ ಭಾವಃ ವೀರ್ಯಮ್. ಯತ್ ಪ್ರತ್ಯಯ **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ. **ತಿತ್ಸ್ವರಿತಮ್**—(ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಗಾಃ**—ಗಮ್ಲೃ ಗತೌ ಧಾತು. **ಗಮೇರ್ಡೋಸ್**—ಎಂಬುದರಿಂದ ಡೋಸ್ ಪ್ರತ್ಯಯ. ಡಿತ್ತ್ವ ಸಾಮರ್ಥ್ಯದಿಂದ ಟಿಲೋಪ. ಗೋ ಶಬ್ದವಾಗುತ್ತದೆ. ಇದಕ್ಕೆ ಶಸ್ ಪರವಾದಾಗ **ಔತೋಮ್ಶಸೋಃ**—(ಪಾ. ಸೂ. ೬-೧-೯೩)—ಎಂಬುದರಿಂದ ಆಕಾರಾಂತಾದೇಶ. ಪ್ರತ್ಯಯಸಕಾರಕ್ಕೆ ರುತ್ವವಿಸರ್ಗ.

**ಅವಿಂದತ್**—ವಿದ್ಲೃ ಲಾಭೇ. ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ**—(ಪಾ. ಸೂ. ೩-೪-೧೦೦) ಎಂಬುದರಿಂದ ಅದರ ಇಕಾರಕ್ಕೆ ಲೋಪ. **ತುದಾದಿಭ್ಯಃ ಶಃ**—(ಪಾ. ಸೂ. ೩-೧-೭೭) ಸೂತ್ರದಿಂದ ಶ ವಿಕರಣ. ಇದು ಪರವಾದಾಗ **ಶೇಮುಚಾದೀನಾಮ್**—(ಪಾ. ಸೂ. ೭-೧-೫೯)

ಎಂಬುದರಿಂದ ಧಾತುವಿಗೆ ನುಮಾಗಮ. **ಮಿದಚೋಽಂತ್ಯಾತ್ಪರಃ**—ಎಂಬುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. ಅಂಗಕ್ಕೆ ಅಡಾಗಮ. ಅವಿಂದತ್ ಎಂದು ರೂಪವಾಗುತ್ತದೆ. ಅತಿಜಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ.

**ಅಪಃ**—ಅಪ್ ಶಬ್ದ. ದ್ವಿತೀಯಾಬಹುವಚನಾಂತರೂಪ. **ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೫ ॥

———:೦:———

ಸಂಹಿತಾಪಾಠಃ

ಭೂರಿಕರ್ಮಣೇ ವೃಷಭಾಯ ವೃಷ್ಣೇ ಸತ್ಯಶುಷ್ಮಾಯ ಸುನ-
ವಾಮ ಸೋಮಂ ।
ಯ ಆದೃತ್ಯಾ ಪರಿಪಂಥೀವ ಶೂರೋಽಯಜ್ವನೋ ವಿಭಜನ್ನೇತಿ
ವೇದಃ ॥ ೬ ॥

। ಪದಪಾಠಃ ।

ಭೂರಿಽಕರ್ಮಣೇ । ವೃಷಭಾಯ । ವೃಷ್ಣೇ । ಸತ್ಯಽಶುಷ್ಮಾಯ । ಸುನವಾಮ ।
ಸೋಮಂ ।
ಯಃ । ಆಽದೃತ್ಯ । ಪರಿಪಂಥೀಽಇವ । ಶೂರಃ । ಅಯಜ್ವನಃ । ವಿಽಭಜನ್ ।
ಏತಿ । ವೇದಃ ॥ ೬ ॥

ಸಾಯಣಭಾಷ್ಯಂ

ಭೂರಿಕರ್ಮಣೇ ಬಹುವಿಧೇನ ಶತ್ರುವಧಾದಿರೂಪೇಣ ಕರ್ಮಣಾ ಯುಕ್ತಾಯ ವೃಷಭಾಯ ವೃಷಭವತ್ಸರ್ವೇಷು ದೇವೇಷು ಶ್ರೇಷ್ಠಾಯ ವೃಷ್ಣೇ ಸೇಚನಸಮರ್ಥಾಯ ಸತ್ಯಶುಷ್ಮಾಯಾವಿತಥ-ಬಲಾಯೇಂದ್ರಾಯ ತದರ್ಥಂ ಸೋಮಂ ಸುನವಾಮ । ಹೋಮಾರ್ಥಂ ರಸರೂಪಂ ಕರವಾಮ । ಶೂರಃ ಶೌರ್ಯೋಪೇತೋ ಯ ಇಂದ್ರ ಆದೃತ್ಯ ಧನವಿಷಯಮಾದರಂ ಕೃತ್ವಾಯಜ್ವನೋಽಯಜಮಾನಸ್ಯ ವೇದೋ ಧನಂ ವಿಭಜನ್ । ತಸ್ಮಾದಯಜಮಾನಾದ್ವಿಭಕ್ತಂ ಕುರ್ವನ್ನಪಹರನ್ನೇತಿ । ಯಜಮಾನೇಭ್ಯ-ಸ್ತದ್ಧನಂ ದಾತುಂ ಗಚ್ಛತಿ । ತತ್ರ ದೃಷ್ಟಾಂತಃ । ಪರಿಪಂಥೀವ । ಯಥಾ ಮಾರ್ಗನಿರೋಧಕಶ್ಚೋರೋ ಗಚ್ಛತಾಂ ಪುಣ್ಯಪುರುಷಾಣಾಂ ಧನಂ ಬಲಾತ್ಕಾರೇಣಾಪಹೃತ್ಯ ಗಚ್ಛತಿ । ತದ್ವತ್ ॥ ಆದೃತ್ಯ । ದೃಙ್ ಆದರೇ । ಸಮಾಸೇಽನಞ್ಪೂರ್ವೇ ಕ್ತ್ವೋ ಲ್ಯಪ್ । ತಸ್ಯ ಸ್ಥಾನಿವದ್ಭಾವೇನ ಕೃತ್ತ್ವೇ ಸತಿ ಹ್ರಸ್ವಸ್ಯ ಪಿತಿ ಕೃತೀತಿ ತುಕ್ । ಪರಿಪಂಥೀವ । ಛಂದಸಿ ಪರಿಪಂಥಿಪರಿಪರಿಣೌ ಪರ್ಯವಸ್ಥಾತರಿ । ಪಾ. ೫-೨-೮೯ । ಇತೀನಿ-ಪ್ರತ್ಯಯಾಂತೋ ನಿಪಾತ್ಯತೇ ॥

ಪ್ರತಿಪದಾರ್ಥ

**ಶೂರಃ**—ಪರಾಕ್ರಮಶಾಲಿಯಾದ । **ಯಃ**—ಯಾವ ಇಂದ್ರನು । **ಆದೃತ್ಯ**— ಧನದಲ್ಲಿ ಆದರವನ್ನಿಟ್ಟು । **ಅಯಜ್ವನಃ**—ಯಾಗರಹಿತನಾದವನ । **ವೇದಃ**—ಧನವನ್ನು । **ಪರಿಪಂಥೀವ**—ದಾರಿಗಳ್ಳನು ಪ್ರಯಾಣಿಕನ ಧನವನ್ನು ಅಪಹರಿಸುವಂತೆ । **ವಿಭಜನ್**—ಅಪಹರಿಸಿ । **ಏತಿ**—(ಯಜ್ಞಕರ್ತರಿಗೆ ಹಂಚಲು) ಮುಂದುವರಿಯುತ್ತಾನೆಯೋ । **ಭೂರಿಕರ್ಮಣೇ**—(ಅಂತಹ ಶತ್ರುವಧವೇ ಮೊದಲಾದ) ಅನೇಕ ವೀರ್ಯಕರ್ಮಗಳೊಡನೆ ಕೂಡಿದವನೂ । **ವೃಷಭಾಯ**—(ದೇವತೆಗಳಲ್ಲೆಲ್ಲಾ) ಶ್ರೇಷ್ಠನೂ । **ವೃಷ್ಣೇ**—(ಇಷ್ಟಾರ್ಥಗಳನ್ನು) ಸುರಿಸಲು ಸಮರ್ಥನೂ । **ಸತ್ಯ ಶುಷ್ಮಾಯ**—ಸಾರ್ಥಕವಾದ ಬಲವುಳ್ಳವನೂ ಆದ ಇಂದ್ರನಿಗಾಗಿ । **ಸೋಮಂ**—ಸೋಮರಸವನ್ನು । **ಸುನವಾಮ**—(ಯಾಗಾರ್ಥವಾಗಿ) ಹಿಂಡೋಣ.

ಭಾವಾರ್ಥ

ಇಂದ್ರನು ಧನದಲ್ಲಿ ಆದರವನ್ನಿಟ್ಟು, ಯಾಗರಹಿತನಾದವನ ಧನವನ್ನು ದಾರಿಗಳ್ಳನು ಪ್ರಯಾಣಿಕನ ಧನವನ್ನು ಅಪಹರಿಸುವಂತೆ ಅಪಹರಿಸಿ ಅದನ್ನು ಯಜ್ಞಕರ್ತರಿಗೆ ಹಂಚಲು ಮುಂದುವರಿಯುತ್ತಾನೆ. ಆದುದರಿಂದ ಶತ್ರುವಧವೇ ಮೊದಲಾದ ಅನೇಕ ವೀರ್ಯಕರ್ಮಗಳೊಡನೆ ಕೂಡಿದವನೂ ದೇವತೆಗಳಲ್ಲೆಲ್ಲಾ ಶ್ರೇಷ್ಠನೂ ಇಷ್ಟಾರ್ಥಗಳನ್ನು ಸುರಿಸಲು ಸಮರ್ಥನೂ ಸಾರ್ಥಕವಾದ ಬಲವುಳ್ಳವನೂ ಆದ ಇಂದ್ರನನ್ನು ಉದ್ದೇಶಿಸಿ ಯಾಗಾರ್ಥವಾಗಿ ಸೋಮರಸವನ್ನು ಹಿಂಡೋಣ.

## English Translation

We offer the Soma libation to him who is the performer of many exploits, the best (of the gods), the showerer (of benefits), the possessor of true strength, the hero who, holding respect for wealth, takes it form

him who performs no sacrifice like a foot-pad (from a traveller), and proceeds ( to give it ) to the sacrificer.

॥ ವಿಶೇಷವಿಷಯಗಳು ॥

**ಭೂರಿಕರ್ಮಣೇ—ಬಹುವಿಧೇನ ಶತ್ರುವಧಾದಿರೂಪೇಣ ಕರ್ಮಣಾ ಯುಕ್ತಾಯ** । ವೃತ್ರಾದಿ ಶತ್ರುವಧವೂ, ವೃಷ್ಟ್ಯುದಕಾದಿಗಳನ್ನು ಸುರಿಸಿ ಜಲಸಂಪತ್ತನ್ನೊದಗಿಸುವುದೂ ಹೀಗೆಯೇ ಇನ್ನೂ ನಾನಾವಿಧವಾದ ಕರ್ಮಗಳೊಡನೆ ಯುಕ್ತನಾಗಿರುವ ಇಂದ್ರನಿಗೆ.

**ವೃಷಭಾಯ—ವೃಷಭವತ್ ಸರ್ವೇಷು ದೇವೇಷು ಶ್ರೇಷ್ಠಾಯ** । ವೃಷಭನಂತೆ ಸಕಲದೇವತೆಗಳಲ್ಲಿಯೂ ಶ್ರೇಷ್ಠನಾದ ಇಂದ್ರನಿಗೆ ಎಂದರ್ಥ.

**ವೃಷ್ಣೇ—ಸೇಚನಸಮರ್ಥಾಯ** । ಇಷ್ಟಾರ್ಥಗಳನ್ನು ಸುರಿಸಲು ಸಮರ್ಥನಾದವನಿಗೆ. **ವೃಷ—ಶಕ್ತಿಬಂಧನೇ** । ಶಕ್ತಿ ಮತ್ತು ಸಾಮರ್ಥ್ಯ ಎಂಬರ್ಥವನ್ನು ಕೊಡುವ **ವೃಷ** ಧಾತುವಿನಿಂದಲೂ, **ವೃಷು—ಸೇಚನೇ** । ಸುರಿಸು ಎಂಬರ್ಥವನ್ನು ಕೊಡುವ ವೃಷಧಾತುವಿನಿಂದಲೂ ನಿಷ್ಪನ್ನವಾಗಬಹುದು. ಇಲ್ಲಿ ಸೇಚನಮಾಡುವ ಸಾಮರ್ಥ್ಯವೆಂದು ಎರಡು ಅರ್ಥಗಳನ್ನೂ ಒಟ್ಟಿಗೆ ಸೂಚಿಸುತ್ತದೆ. ಈ ಪದದ ಸ್ವರೂಪವನ್ನೂ ಇದರಿಂದ ನಿಷ್ಪನ್ನವಾಗುವ ಪದಗಳಿಗಿರತಕ್ಕ ಬೇರೆ ಬೇರೆ ಅರ್ಥವನ್ನು ಉದಾಹರಣೆಗಳೊಂದಿಗೆ ಇದೇ ಭಾಗದಲ್ಲಿ ೧-೧೦೦-೧ ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ತಿಳಿಸಿದೆ. (ಪುಟ 168-170 ನೋಡಿ).

**ಸತ್ಯಶುಷ್ಮಾಯ— ಅವಿತಥಬಲಾಯ** । ಇದೇ ಸೂಕ್ತದ ಹಿಂದಿನ ಋಕ್ಕುಗಳಲ್ಲಿ ವರ್ಣಿಸಿರುವಂತೆ ವ್ಯರ್ಥವಾಗದೇ ಖಂಡಿತವಾಗಿಯೂ ಶತ್ರುಗಳನ್ನು ನಾಶಮಾಡುವ ಪರಾಕ್ರಮವುಳ್ಳವನು ಎಂದರ್ಥ.

**ಪರಿಪಂಥೀ—ಮಾರ್ಗನಿರೋಧಕಶ್ಚೋರಃ** । ದಾರಿಯನ್ನು ಕಾಯುವ ಕಳ್ಳನು ಪ್ರಯಾಣಿಕರ ಧನವನ್ನು ಬಲಾತ್ಕಾರದಿಂದಲೂ, ಭಯವನ್ನು ಹುಟ್ಟಿಸಿಯೂ ಖಂಡಿತವಾಗಿಯೂ ಕಸಿದುಕೊಳ್ಳುವಂತೆ ಇಂದ್ರನೂ ಸಹ ಶತ್ರುಗಳ ಧನವನ್ನು ಖಂಡಿತವಾಗಿಯೂ ಕಸಿದುಕೊಳ್ಳುತ್ತಾನೆಂದು ಉಪಮಾನವನ್ನು ಹೇಳಿದೆ.

॥ ವ್ಯಾಕರಣಪ್ರಕ್ರಿಯಾ ॥

**ಭೂರಿಕರ್ಮಣೇ**—ಭೂರಿ ಕರ್ಮ ಯಸ್ಯ ಸಃ ಭೂರಿಕರ್ಮಾ. **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಹೀಗೆಯೇ ಸತ್ಯಶುಷ್ಮಾಯ ಎಂಬಲ್ಲಿಯೂ ಸ್ವರ ಬರುತ್ತದೆ.

**ಸುನವಾಮ**—ಷುಞ್ ಅಭಿಷವೇ ಧಾತು. ಲೋಟ್ ಉತ್ತಮಪುರುಷ ಬಹುವಚನದಲ್ಲಿ ಲಙ್ವದ್ಭಾವವಿರುವುದರಿಂದ **ನಿತ್ಯಂಙಿತಃ**—(ಪಾ. ಸೂ. ೩-೪-೯೯) ಎಂಬುದರಿಂದ ಸಕಾರಕ್ಕೆ ಲೋಪ. **ಆಡುತ್ತಮಸ್ಯ ಪಿಚ್ಚ**—ಎಂಬುದರಿಂದ ಆಡಾಗಮ. ಶ್ನುವಿಕರಣ. ಆಟ್ ಪಿತ್ತಾದುದರಿಂದ ತನ್ನಿಮಿತ್ತವಾಗಿ ಗುಣ ಅವಾದೇಶ. ತಿಙಂತ ನಿಘಾತಸ್ವರ ಬರುತ್ತದೆ.

**ಅದೃತ್ಯ**—ದೃಙ್ ಆದರೇ ಧಾತು. **ಸಮಾನಕರ್ತೃಕ**—(ಪಾ. ಸೂ. ೩-೪-೨೧) ಎಂಬುದರಿಂದ ಕ್ತ್ವಾ ಪ್ರತ್ಯಯ. ಅಜಾನೊಡನೆ ಸಮಾಸವಾದಾಗ **ಸಮಾಸೇನಞ್ ಪೂರ್ವೇಕ್ತ್ವೋಲ್ಯಪ್**—(ಪಾ. ಸೂ. ೭-೧-೩೭) ಎಂಬುದರಿಂದ ಲ್ಯಪ್ ಆದೇಶ. **ಸ್ಥಾನಿವದಾದೇಶೋಽನಲ್ವಿಧೌ**—ಸೂತ್ರದಿಂದ ಸ್ಥಾನಿವದ್ಭಾವ ಬರುವುದರಿಂದ ಅದಕ್ಕೆ ಕೃತ್ವ ಬರುವುದರಿಂದ **ಹ್ರಸ್ವಸ್ಯಪಿತಿಕೃತಿತುಕ್**—(ಪಾ. ಸೂ. ೬-೧-೭೧) ಎಂಬುದರಿಂದ ತುಕಾಗಮ ಕಿತ್ತಾದುದರಿಂದ ಅಂತಾವಯವವಾಗಿ ಬರುತ್ತದೆ.

**ಪರಿಪನ್ಥೀವ**—ಛಂದಸಿ **ಪರಿಪನ್ಥಿಪರಿಪರಿಣೌ ಪರ್ಯವಸ್ಥಾತರಿ** (ಪಾ. ಸೂ. ೫-೨-೮೯) ಎಂಬುದರಿಂದ ಇನಿ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ.

**ಅಯಜ್ವನಃ**—ನ ಯಜ್ವಾ. ಅಯಜ್ವಾ. ನಞ್ ತತ್ಪುರುಷಸಮಾಸ. **ತತ್ಪುರುಷೇ ತುಲ್ಯಾರ್ಥ**—ಎಂಬುದರಿಂದ ನಞ್ ಪ್ರಕೃತಿಸ್ವರ ಬರುತ್ತದೆ.

**ಏತಿ**—ಇಣ್ ಗತೌ ಧಾತು. ಅದಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ**—ಎಂಬುದರಿಂದ ಶಪಿಗೆ ಲುಕ್. **ಸಾರ್ವಧಾತುಕಾರ್ಧಧಾತುಕಯೋಃ**—ಎಂಬುದರಿಂದ ಧಾತುವಿನ ಇಕಿಗೆ ಗುಣ. ಯಃ ಎಂದು ಹಿಂದೆ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್**—(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ತಿಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ವೇದಃ**—ವಿದ್ಲೃ ಲಾಭೇ ಧಾತು. ಅಸುನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ (ಲಘೂಪಧ) ಗುಣ. ವೇದಸ್ ಶಬ್ದವಾಗುತ್ತದೆ. **ಞ್ನಿತ್ಯಾದಿರ್ನಿತ್ಯಮ್**-ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ||೬||



ಸಂಹಿತಾಪಾಠಃ

ತದಿಂದ್ರ ಪ್ರೇವ ವೀರ್ಯಂ ಚಕರ್ಥ ಯತ್ಸಸಂತಂ ವಜ್ರೇಣಾ-

ಬೋಧಯೋಽಹಿಂ ।

ಅನು ತ್ವಾ ಪತ್ನೀರ್ಹೃಷಿತಂ ವಯಶ್ಚ ವಿಶ್ವೇ ದೇವಾಸೋ ಅಮ-
ದನ್ನನು ತ್ವಾ ॥ ೭ ॥

ಪದಪಾಠಃ

ತತ್ । ಇಂದ್ರ । ಪ್ರಽಇವ । ವೀರ್ಯಂ । ಚಕರ್ಥ । ಯತ್ । ಸಸಂತಂ । ವ-
ಜ್ರೇಣ । ಅಬೋಧಯಃ । ಅಹಿಂ ।

ಅನು । ತ್ವಾ । ಪತ್ನೀಃ । ಹೃಷಿತಂ । ವಯಃ । ಚ । ವಿಶ್ವೇ । ದೇವಾಸಃ ।
ಅಮದನ್ । ಅನು । ತ್ವಾ ॥ ೭ ॥

ಸಾಯಣಭಾಷ್ಯಂ

ಹೇ ಇಂದ್ರ ತದ್ವೀರ್ಯಂ ವೀರಕರ್ಮ ಪ್ರೇವ ಚಕರ್ಥ । ಪ್ರಖ್ಯಾತಮಿವಾಕಾರ್ಷೀಃ । ಕಿಂ ಪುನಸ್ತದ್ವೀರ್ಯಂ । ಸಸಂತಂ ಸ್ವಪಂತಂ ಮದೋನ್ಮತ್ತಮಹಿಂ ವೃತ್ರಂ ವಜ್ರೇಣ ಕುಲಿಶೇನ ಯದ್ಯೇನ ವೀರ್ಯೇಣ ತ್ವಮಬೋಧಯಃ । ಪ್ರಬುದ್ಧಃ ಸನ್ಮಯಾ ಸಹ ಯುದ್ಧಂ ಕರೋತ್ವಿತಿ ಹೃಷಿತಂ ತಾದೃಶಸ್ಯ ವೃತ್ರಸ್ಯ ಹನನೇನ ಪ್ರಾಪ್ತಹರ್ಷಂ ತ್ವಾಮನು ಪಶ್ಚಾತ್ಪತ್ನೀರ್ದೇವಪತ್ನ್ಯ ಅಮದನ್ । ಹರ್ಷಂ ಪ್ರಾಪ್ತಾಃ । ಅಪಿ ಚ ವಯಶ್ಚ ಗಮನಶೀಲಾ ಮರುತೋಽಪಿ ತಥಾ ವಿಶ್ವೇ ದೇವಾ-ಸೋಽನ್ಯೇ ಚ ಸರ್ವೇ ದೇವಾಸ್ತ್ವಾಮನು ಪಶ್ಚಾದಮದನ್ । ಅಮಾದ್ಯನ್ ॥ ಸಸಂತಂ । ಷಸ ಸ್ವಪ್ನೇ । ಅದಾದಿತ್ವಾಚ್ಛಪೋ ಲುಕ್ । ಪತ್ನೀಃ । ವಾ ಛಂದಸೀತಿ ಪೂರ್ವಸವರ್ಣದೀರ್ಘತ್ವಂ । ಅಮದನ್ । ಮದೀ ಹರ್ಷೇ । ವ್ಯತ್ಯಯೇನ ಶಪ್ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಸಸಂತಂ—ಮದೋನ್ಮತ್ತನಾದ । ಅಹಿಂ—ವೃತ್ರನನ್ನು । ವಜ್ರೇಣ—ವಜ್ರಾಯುಧದಿಂದ । ಯತ್—ಯಾವ ನಿನ್ನ ಪರಾಕ್ರಮದಿಂದ । ಅಬೋಧಯಃ—ಎಚ್ಚರಗೊಳಿಸಿದೆಯೋ (ಆಗ) । ತತ್ ವೀರ್ಯಂ—ನಿನ್ನ ಆ ವೀರ್ಯಕರ್ಮವನ್ನು । ಪ್ರೇವ ಚಕರ್ಥ—ಪ್ರಸಿದ್ಧವಾಗುವಂತೆ ಮಾಡಿದೆ । ಹೃಷಿತಂ ತ್ವಾ—(ವೃತ್ರ ವಧದಿಂದ) ಸಂತುಷ್ಟನಾದ ನಿನ್ನನ್ನು । ಅನು—ಅನುಸರಿಸಿ । ಪತ್ನೀಃ—ದೇವಪತ್ನಿ... । ಅಮದನ್—ಹರ್ಷಿಸಿದರು. । ವಯಶ್ಚ—ಸಂಚಾರಸ್ವಭಾವವುಳ್ಳ ಮರುತ್ತುಗಳೂ । ವಿಶ್ವೇದೇವಾಸಃ-(ಹಾಗೆಯೇ) ಇತರ ಸಕಲ ದೇವತೆಗಳೂ । ತ್ವಾ ಅನು—ನಿನ್ನನ್ನು ಅನುಸರಿಸಿ ಹರ್ಷಗೊಂಡರು ।

ಭಾವಾರ್ಥ

ಎಲೈ ಇಂದ್ರನೇ, ಮದೋನ್ಮತ್ತನಾದ ವೃತ್ರನನ್ನು ವಜ್ರಾಯುಧದಿಂದ ಹೊಡೆದು ನಿನ್ನ ಯಾವ ಪರಾಕ್ರಮದಿಂದ ಎಚ್ಚರಗೊಳಿಸಿ ಯುದ್ಧಮಾಡುವಂತೆ ಮಾಡಿದೆಯೋ, ಆಗ ನಿನ್ನ ಆ ವೀರ್ಯವನ್ನು ಪ್ರಸಿದ್ಧವಾಗುವಂತೆ ಮಾಡಿದೆ. ವೃತ್ರವಧದಿಂದ ನೀನು ಸಂತುಷ್ಟನಾದಂತೆಯೇ ನಿನ್ನನ್ನು ಅನುಸರಿಸಿ ದೇವಪತ್ನಿಯರೂ, ಸಂಚಾರಸ್ವಭಾವವುಳ್ಳ ಮರುತ್ತುಗಳೂ ಎಲ್ಲಾ ದೇವತೆಗಳೂ ಸಹ ನಿನ್ನ ಸಂತೋಷದಲ್ಲಿ ಭಾಗವನ್ನು ಪಡೆದು ಹರ್ಷಿತರಾದರು.

## English Translation

You did Indra, a glorious deed, when you awakened the sleeping Ahi with your thunderbolt ; then the wives ( of the gods ), the Maruts, and all the gods, imitated your exultation.

॥ ವಿಶೇಷವಿಷಯಗಳು ॥

**ಸಸಂತಂ—ಸ್ವಪಂತಂ । ಮದೋನ್ಮತ್ತಂ। ಶೌರ್ಯಮದೇನಾವಮತ್ಯ ದೇವಾನ್ ನಿಶ್ಚಿಂತಂ ಸಂತಂ।** ತನ್ನ ಪರಾಕ್ರಮದ ಮದದಿಂದ ಇಂದ್ರನನ್ನೊಬ್ಬನನ್ನು ಬಿಟ್ಟು ಉಳಿದ ದೇವತೆಗಳನ್ನು ತಿರಸ್ಕಾರದಿಂದ ಕಂಡು ಮದೋನ್ಮತ್ತನಾಗಿ ಮಲಗಿದ್ದ ವೃತ್ರನನ್ನು ಎಂದು ವೃತ್ರನ ಶಕ್ತಿಯನ್ನು ಸೂಚಿಸಿದೆ.

**ಅಹಿಂ--ವೃತ್ರಂ** । ವೃತ್ರನನ್ನು ಎಂದು ಸಾಯಣರೂ, **ಅಹಿನಾಮಾನಮಸುರಂ** ಅಹಿಯೆಂಬ ಹೆಸರುಳ್ಳ ಅಸುರನನ್ನು ಎಂದು ಸ್ಕಂದಸ್ವಾಮಿಗಳೂ ಅರ್ಥಮಾಡಿದ್ದಾರೆ. **ಅಹಿ** ಎಂದರೆ ಬೇರೆ ಅಸುರನ ಹೆಸರಾಗಬಹುದೆಂದೂ, ವೃತ್ರನಿಗೆ ವಿಶೇಷಣವಾಗಬಹುದೆಂದೂ, ಅಥವಾ ವೃತ್ರಪರ್ಯಾಯವಾಗಿಯೇ ಆಗಬಹುದೆಂದೂ ಉದಾಹರಣೆಗಳೊಂದಿಗೆ ಇದೇ ಸೂಕ್ತದ ೨ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. ಇಲ್ಲಿ ಯಾವ ಅರ್ಥವನ್ನು ಬೇಕಾದರೂ ಹೇಳಬಹುದು. ಆದರೆ ನಿಶ್ಚಿಂತೆಯಿಂದ ಪ್ರವಹಿಸುವ ನೀರಿಗೆ ಅಡ್ಡಲಾಗಿ ಮಲಗಿಕೊಂಡಿದ್ದನೆಂದು ಅನೇಕಕಡೆಗಳಲ್ಲಿ ವೃತ್ರನ ವಿಷಯವಾಗಿಯೇ ಹೇಳಿರುವುದರಿಂದಲೂ, ವೃತ್ರನಿಗೇ ಅಹಿಯೆಂಬ ನಾಮಾಂತರವಿರುವುದರಿಂದಲೂ ಇಲ್ಲಿ ಅಹಿಯೆಂದರೆ ವೃತ್ರನೆಂದು ಹೇಳುವುದೇ ಸಾಧುವಾಗಿರುವುದು. **ಸಸಂತಂ** ನಿಶ್ಚಿಂತೆಯಿಂದ ಮಲಗಿದ್ದ ವೃತ್ರನನ್ನು ಇಂದ್ರನು ಹೊಡೆದೆಬ್ಬಿಸಿದ ವರ್ಣನೆಯು ಇಲ್ಲಿರುವಂತೆಯೇ ಉಳಿದ ಅನೇಕ ಕಡೆಗಳಲ್ಲಿ ಉಕ್ತವಾಗಿರುವುದು.

**ತ್ವಂ ವೃತ್ರಮಾಶಯಾನಂ ಶಿರಾಸು ಮಹೋ ವಜ್ರೇಣ ಸಿಷ್ವಪೋ ವರಾಹುಂ ।**
(ಋ. ಸಂ. ೧-೧೨೧-೧೧)

**ಅಹಿಂ ಚಿದುಗ್ರ ಪ್ರಯುತಂ ಶಯಾನಂ ಜಘನ್ವಾँ ಇಂದ್ರ ತವಿಷೀಮಧತ್ಥಾಃ ।**
(ಋ. ಸಂ. ೫-೩೨-೨)

ಇತ್ಯಾದಿ ಋಕ್ಕುಗಳಲ್ಲಿ ಮಲಗಿದ್ದ ವೃತ್ರನನ್ನು ವರ್ಣಿಸಿರುವುದರಿಂದಲೂ, ೧-೩೨ ಇತ್ಯಾದಿ ಸೂಕ್ತಗಳಲ್ಲಿ ವೃತ್ರನಿಗೂ ಅಹಿಗೂ ತಾದಾತ್ಮ್ಯವನ್ನು ಹೇಳಿರುವುದರಿಂದಲೂ ಈ ಋಕ್ಕಿನಲ್ಲಿ ಅಹಿಯೆಂದರೆ ಸಾಯಣರು ಹೇಳಿರುವಂತೆ ವೃತ್ರನೆಂದೇ ಅರ್ಥ ಮಾಡಬೇಕು.

**ವಯಃ—ಗಂತೃತ್ವಾತ್ ಪಕ್ಷಿಸಾದೃಶ್ಯಾದ್ವಾ ಮರುತೋऽತ್ರ ವಯ ಉಚ್ಯಂತೇ ।** ಯಾವಾಗಲೂ ಸಂಚರಿಸುವ ಸ್ವಭಾವವಿರುವುದರಿಂದಲೂ, ಪಕ್ಷಿಸಾದೃಶ್ಯವಿರುವುದರಿಂದಲೂ ವಯಃ ಎಂದರೆ ಮರುತ್ತುಗಳೆಂದರ್ಥ-

**ಪ್ರೇವ ಚಕರ್ಥ—ಪ್ರಖ್ಯಾತಮಿವಾಕಾರ್ಷೀಃ ।** ಜಗತ್ತಿಗೆಲ್ಲಾ ಪ್ರಸಿದ್ಧವಾಗುವಂತೆ ಮಾಡಿದೆಯೆಂದು ಇಂದ್ರನನ್ನು ಸ್ತುತಿಸಿದೆ. ಮತ್ತು ಈ ವಿಧವಾದ ಉಪಕಾರದಿಂದ,

**ಪತ್ನೀಃ ಅಮದನ್ । ವಿಶ್ವೇದೇವಾಸಃ ತ್ವಾ ಅನು**—ದೇವಪತ್ನಿಯರು ಇಂದ್ರನನ್ನು ಸ್ತುತಿಸಿ ತಮ್ಮ ಹರ್ಷವನ್ನು ಸೂಚಿಸಿದರು. ಸಕಲದೇವತೆಗಳೂ ಹರ್ಷಗೊಂಡರು ಎಂದು ವೃತ್ರಹತ್ಯೆಯನ್ನು ವರ್ಣಿಸುವ ಕಡೆಗಳಲ್ಲೆಲ್ಲಾ ಹೇಳಿದೆ. ಉದಾಹರಣೆಗೆ—

**ಅಸ್ಮಾ ಇದು ಗ್ನಾಶ್ಚಿದ್ದೇವಪತ್ನೀರಿಂದ್ರಾಯಾರ್ಕಮಹಿಹತ್ಯ ಊವುಃ ।**
(ಋ. ಸಂ. ೧-೬೧-೮)

ವೃತ್ರಹನನಕಾಲದಲ್ಲಿ ದೇವಪತ್ನಿಯರು ಇಂದ್ರನನ್ನುದ್ದೇಶಿಸಿ ಪೂಜಾಸಾಧನವಾದ ಸ್ತೋತ್ರವನ್ನು ಪಠಿಸಿ ಇಂದ್ರನನ್ನು ಸ್ತುತಿಸಿದರು. ಮತ್ತು

**ಯತ್ಸೀಮನು ಪ್ರ ಮುಚೋ ಬದ್ಬಧಾನಾ ದೀರ್ಘಾಮನು ಪ್ರಸಿತಿಂ ಸ್ಯಂದಯಧ್ಯೈ ।**
(ಋ. ಸಂ. ೪-೨೨-೭)

ನಿನ್ನಿಂದ ರಕ್ಷಿತರಾದ ಸಕಲ ನದಿಗಳೂ ನಿನ್ನನ್ನು ಸ್ತೋತ್ರಮಾಡುತ್ತಾರೆ; ಅಲ್ಲದೇ,

**ಅನು ತ್ವಾಹಿಘ್ನೇ ಅಧ ದೇವ ದೇವಾ ಮದನ್ವಿಶ್ವೇ ಕವಿತಮಂ ಕವೀನಾಂ ।**
(ಋ. ಸಂ. ೬-೧೮-೧೪)

ಅಹಿರೂಪಿಯಾದ ವೃತ್ರಹನನ ಕಾಲದಲ್ಲಿ ಸಕಲದೇವತೆಗಳೂ ಸಂತೋಷಗೊಂಡರು ಇತ್ಯಾದಿಯಾಗಿ ವೃತ್ರವಧವನ್ನು ವರ್ಣಿಸುವಾಗಲೆಲ್ಲಾ ದೇವಪತ್ನಿಯರೂ, ವೃತ್ರನಿಂದ ಬಿಡುಗಡೆ ಹೊಂದಿದ ಸಕಲ ನದಿಗಳೂ ಇಂದ್ರನನ್ನುದ್ದೇಶಿಸಿ ಮಾಡಿರುವ ಸ್ತುತಿಗಳನ್ನೂ, ಸಕಲದೇವತೆಗಳೂ ವ್ಯಕ್ತಪಡಿಸಿದ ಹರ್ಷವನ್ನೂ ವರ್ಣಿಸಿರುವಂತೆ ಇಲ್ಲಿಯೂ ಸಹ ಅದೇ ಅಂಶವನ್ನು ಹೇಳಿದೆ.

ವ್ಯಾಕರಣಪ್ರಕ್ರಿಯಾ

**ಚಕರ್ಥ**— ಡುಕೃಞ್ ಕರಣೇ ಧಾತು. ಲಿಟ್ ಮಧ್ಯಮಪುರುಷಏಕವಚನರೂಪ. ಕ್ರಾದಿನಿಯಮದಿಂದ ಇಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಸಸಂತಮ್**— ಷಸ ಸ್ವಪ್ನೇ ಧಾತು. ಅದಾದಿ. ಇದಕ್ಕೆ ಲಡರ್ಥದಲ್ಲಿ ಶತೃಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ**—(ಪಾ. ಸೂ. ೨-೪-೭೨) ಎಂಬುದರಿಂದ ಶಪಿಗೆ ಲುಕ್. **ಧಾತ್ವಾದೇಃ ಷಃ ಸಃ**—ಎಂಬುದರಿಂದ ಧಾತುವಿನ ಆದಿಗೆ ಸತ್ವ. ಸಸತ್ ಶಬ್ದವಾಗುತ್ತದೆ. ಪ್ರತ್ಯಯಸ್ವರ ಬರುತ್ತದೆ. ದ್ವಿತೀಯಾಏಕವಚನ ಅಮ್ ಪರವಾದಾಗ **ಉಗಿದಚಾಂ ಸ**—(ಪಾ. ಸೂ. ೭-೧-೭೦) ಎಂಬುದರಿಂದ ನುಮಾಗಮ. ಅದಕ್ಕೆ ಅನುಸ್ವಾರ ಪರಸವರ್ಣ.

**ಅಬೋಧಯಃ**—ಬುಧ ಅವಗಮನೇ. ಧಾತು. ಣಿಜಂತದ ಮೇಲೆ ಲಙ್ ಮಧ್ಯಮಪುರುಷ ಏಕವಚನ ರೂಪ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ. ಯಚ್ಛಬ್ದಯೋಗವಿರುವುದರಿಂದ **ಯದ್ವೃತ್ತಾನ್ನಿತ್ಯಮ್**—ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ.

**ಪತ್ನೀಃ—ಪತ್ಯುರ್ನೋ ಯಜ್ಞಸಂಯೋಗೇ**—ಎಂಬುದರಿಂದ ಙೀಪ್ ಪ್ರತ್ಯಯ. ತತ್ಸನ್ನಿಯೋಗದಿಂದ ನುಕಾಗಮ. ಪತ್ನೀ ಶಬ್ದಕ್ಕೆ ಜಸ್ ಪರವಾದಾಗ **ವಾ ಛಂದಸಿ**—(ಪಾ. ಸೂ. ೬-೧-೧೦೬) ಎಂಬುದರಿಂದ ಪೂರ್ವಸವರ್ಣದೀರ್ಘ ಬರುತ್ತದೆ.

**ಹೃಷಿತವ್**—ಹೃಷು ಹೃಷ್ಟೌ. ಧಾತು. ದಿವಾದಿ. **ನಿಷ್ಠಾ** ಎಂಬುದರಿಂದ ಕ್ತಪ್ರತ್ಯಯ. **ಆರ್ಧಧಾತುಕಸ್ಯೇಡ್ವಲಾದೇಃ**—ಎಂಬುದರಿಂದ ಇಡಾಗಮ. ಅಂತೋದಾತ್ತವಾಗುತ್ತದೆ.

**ದೇವಾಸಃ**—ದೇವ ಶಬ್ದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್**—(ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ಅಮದನ್** — ಮದೀ ಹರ್ಷೇ. ಧಾತು. ದಿವಾದಿ. ಲಙ್ ಪ್ರಥಮಪುರುಷಬಹುವಚನದಲ್ಲಿ **ಝೋಂತಃ**—ಎಂಬುದರಿಂದ ಅಂತಾದೇಶ. **ಇತಶ್ಚ**—ಎಂಬುದರಿಂದ ಇಕಾರಲೋಪ. **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ಶಪ್ ವಿಕರಣ. ಸಂಯೋಗಾಂತಲೋಪದಿಂದ ಪ್ರತ್ಯಯಾಂತ ಲೋಪ. ತಿಙಂತನಿಘಾತಸ್ವರ ಬರುತ್ತದೆ. ॥ ೭ ॥

———— – :o: ————

ಸಂಹಿತಾಪಾಠಃ

ಶುಷ್ಣಂ ಪಿಪ್ರುಂ ಕುಯವಂ ವೃತ್ರಮಿಂದ್ರ ಯದಾವಧೀರ್ವಿ ಪುರಃ ಶಂಬರಸ್ಯ ।
ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ ಪೃಥಿವೀ ಉತ ದ್ಯೌಃ ॥ ೮ ॥

ಪದಪಾಠಃ

ಶುಷ್ಣಂ । ಪಿಪ್ರುಂ । ಕುಯವಂ । ವೃತ್ರಂ । ಇಂದ್ರ । ಯದಾ । ಅವಧೀಃ । ವಿ ।
ಪುರಃ । ಶಂಬರಸ್ಯ ।

ತತ್ । ನಃ । ಮಿತ್ರಃ । ವರುಣಃ । ಮಮಹಂತಾಂ । ಅದಿತಿಃ । ಸಿಂಧುಃ । ಪೃಥಿವೀ ।
ಉತ । ದ್ಯೌಃ ॥ ೮ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಂ ಶುಷ್ಣಾದೀಂಶ್ಚತುರೋಽಸುರಾನ್ಯದಾವಧೀಃ ಹತವಾನಸಿ ತದಾನೀಂ ಶಂಬರಸ್ಯಾಸುರಸ್ಯ ಪುರೋ ನಗರಾಣಿ ವಿದಾರಿತವಾನಸಿ । ಅಸುರಾಣಾಂ ಮುಖ್ಯೇಷು ಹತೇಷ್ವನ್ಯಾನ್ಯಪ್ಯಸುರಪುರಾಣಿ ವಿದೀರ್ಣಾನ್ಯಾಸನ್ನಿತ್ಯರ್ಥಃ । ಯದನೇನ ಸೂಕ್ತೇನ ಪ್ರಾರ್ಥಿತಮಸ್ಮದೀಯಂ ತನ್ಮಿತ್ರಾದಯೋ ಮಮಹಂತಾಂ । ಪೂಜಿತಂ ಕುರ್ವಂತು ॥ ಶುಷ್ಣಂ । ಶುಷ ಶೋಷಣೇ । ಅಂತರ್ಭಾವಿತಣ್ಯರ್ಥಾತ್ ತೃಷಿಶುಷಿರಸಿಭ್ಯಃ ಕಿಚ್ಚ । ಉ. ೩-೧೨ । ಇತಿ ನಪ್ರತ್ಯಯಃ । ನಿದಿತ್ಯನುವೃತ್ತೇರಾದ್ಯುದಾತ್ತತ್ವಂ । ಪಿಪ್ರುಂ । ಪೃ ಪಾಲನಪೂರಣಯೋಃ । ಪ್ರಾ ಇತ್ಯೇಕೇ । ಔಣಾದಿಕಃ ಕುಪ್ರತ್ಯಯಃ । ಛಂದಸ್ಯುಭಯಥೇತಿ ತಸ್ಯ ಸಾರ್ವಧಾತುಕತ್ವೇ ಸತಿ ಶಪ್ । ಜುಹೋತ್ಯಾದಿತ್ವಾತ್ ಶ್ಲುಃ । ಅರ್ತಿಪಿಪರ್ತ್ಯೋಶ್ಚೇತ್ಯಭ್ಯಾಸಸ್ಯೇತ್ವಂ । ಕುಯವಂ । ಯವೋ ಯವನಂ ಮಿಶ್ರಣಂ । ಕುತ್ಸಿತಂ ಯವನಮಸ್ಯ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಶಂಬರಸ್ಯ । ಶಮಯತೀತಿ ಶಂಬ ಆಯುಧಂ । ಶಮೇರ್ವನ್ । ಉ. ೪-೯೪ । ತತೋ ಮತ್ವರ್ಥೀಯೋ ರಪ್ರತ್ಯಯಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಶುಷ್ಣಂ--(ರಾಕ್ಷಸನಾದ) ಶುಷ್ಣನನ್ನೂ । ಪಿಪ್ರುಂ—ಪಿಪ್ರುವನ್ನೂ । ಕುಯವಂ—ಕುಯವನನ್ನೂ । ವೃತ್ರಂ—ವೃತ್ರನನ್ನೂ । ಯದಾ—ಯಾವಾಗ । ಅವಧೀಃ—ಕೊಂದೆಯೋ (ಆಗಲೇ) । ಶಂಬರಸ್ಯ—ಶಂಬರಾಸುರನ । ಪುರಃ—ಪಟ್ಟಣಗಳನ್ನು । ವಿ—ಚೆನ್ನಾಗಿ ಧ್ವಂಸಮಾಡಿದೆ । (ಆದ್ದರಿಂದ) ನಃ—ನಮ್ಮ । ತತ್—ಇಷ್ಟಾರ್ಥವನ್ನು । ಮಿತ್ರಃ—ಮಿತ್ರನೂ । ವರುಣಃ—ವರುಣನೂ । ಅದಿತಿಃ—ಅದಿತಿಯೂ । ಸಿಂಧುಃ—ಸಾಗರಾಧಿದೇವತೆಯೂ । ಪೃಥಿವೀ—ಪೃಥ್ವಿಯೂ । ಉತ—ಮತ್ತು । ದ್ಯೌಃ—ದ್ಯುಲೋಕಾಧಿದೇವತೆಯೂ । ಮಮಹಂತಾಂ—ಅನುಗ್ರಹಿಸಲಿ. ।

ಭಾವಾರ್ಥ

ಎಲೈ ಇಂದ್ರನೇ, ನೀನು ಯಾವಾಗ ರಾಕ್ಷಸರಾದ ಶುಷ್ಣನನ್ನೂ, ಪಿಪ್ರುವನ್ನೂ, ಕುಯವನನ್ನೂ, ವೃತ್ರನನ್ನೂ ಕೊಂದೆಯೋ ಆಗಲೇ ಶಂಬರಾಸುರನ ಪಟ್ಟಣಗಳನ್ನೂ ಧ್ವಂಸಮಾಡಿದೆ. ಆದ್ದರಿಂದ ನಮ್ಮಿಂದ ಪ್ರಾರ್ಥಿತ

ವಾದ ನಮ್ಮ ಇಷ್ಟಾರ್ಥಗಳನ್ನು ಮಿತ್ರನೂ, ವರುಣನೂ, ಅದಿತಿಯೂ, ಸಾಗರಾಧಿದೇವತೆಯೂ, ಪೃಥ್ವಿಯೂ ಮತ್ತು ದ್ಯುಲೋಕಾಧಿದೇವತೆಯೂ ಅನುಗ್ರಹಿಸಲಿ.

## English Translation

Inasmuch, Indra, as you have slain Sushna, Pipru, Kuyava, and Vritra and destroyed the cities of Sambara, therefore may Vritra, Varuna, Aditi, —Ocean, earth, and heaven, grant us that ( which we desire ).

### ವಿಶೇಷವಿಷಯಗಳು

**ವಿಶ್ವೇದೇವಾಸಃ ಅಮದನ್ನನು ತ್ವಾ । ಕದಾ ಪುನರನ್ವಮದನ್ । ಉಚ್ಯತೇ । ಶುಷ್ಣಮಿತ್ಯಾದಿ ।** ಎಂದು ಸ್ಕಂದಸ್ವಾಮಿಗಳು ಹಿಂದಿನ ಋಕ್ಕಿನ ಉತ್ತರಾರ್ಧಕ್ಕೂ ಈ ಋಕ್ಕಿನ ಪೂರ್ವಾರ್ಧಕ್ಕೂ ಇರುವ ಅನ್ವಯವನ್ನು ತೋರಿಸಿದ್ದಾರೆ. ಶುಷ್ಣಾದಿಗಳ ಹನನವಾದಾಗ ಸಕಲದೇವತೆಗಳೂ ಸಂತೋಷಪಟ್ಟು ಇಂದ್ರನನ್ನು ಸ್ತುತಿಸಿದರೆಂದರ್ಥ.

**ಶುಷ್ಣಂ, ಪಿಪ್ರುಂ, ಶಂಬರಂ**—ಅತ್ಯಂತ ಅಪಾಯಕರನಾಗಿದ್ದು ಅನಾವೃಷ್ಟಿಕಾರಕನಾಗಿಯೂ, ಭೀಷಣವಾದ ಆಕೃತಿಯಿಂದ ಕೂಡಿದವನೂ ಇದ್ದ ಶುಷ್ಣನೆಂಬ ಅಸುರನನ್ನು ಇಂದ್ರನು ವಧಮಾಡಿ ಕುತ್ಸಆರ್ಜುನೇಯನಿಗೆ ಸಹಾಯಮಾಡಿದ ವಿಷಯವನ್ನೂ, ಋಜಿಶ್ವನಿಗೆ ಸಹಾಯಮಾಡುವುದಕ್ಕಾಗಿ ಪಿಪ್ರುವಿನೊಡನೆ ಯುದ್ಧಮಾಡಿ, ಅವನ ದೃಢವಾದ ಪ್ರಾಕಾರಾದಿಗಳನ್ನು ನಾಶಮಾಡಿ ಅವನನ್ನು ಸೋಲಿಸಿದುದನ್ನೂ, ಬೆಟ್ಟಗುಡ್ಡಗಳಲ್ಲಿ ಅವಿತುಕೊಂಡು ಯಜ್ಞಕರ್ತರಿಗೆ ಹಿಂಸೆಯನ್ನು ಕೊಡುತ್ತಿದ್ದ ಶಂಬರನೊಡನೆ ಯುದ್ಧಮಾಡಿ ಅವನ ಅಸಂಖ್ಯಾತವಾದ ಕೋಟೆಗಳನ್ನು ಉರುಳಿಸಿ ಅವನನ್ನು ಸಂಹಾರಮಾಡಿ ತನ್ನ ಆಪ್ತ ಮಿತ್ರನಾದ ದಿವೋದಾಸನೆಂಬ ರಾಜನಿಗೆ ಸಹಾಯಮಾಡಿದುದನ್ನೂ ಹಿಂದೆಯೇ ತಿಳಿಸಿದೆ. (೧-೧೦೧-೨ ನೇ ಋಕ್ಕಿನ ವಿಶೇಷವಿಷಯಗಳನ್ನು ನೋಡಿ)

**ಕುಯವಂ**—ಇಂದ್ರನು ಕುತ್ಸನೆಂಬ ರಾಜರ್ಷಿಗೆ ಸಹಾಯಮಾಡುವುದಕ್ಕಾಗಿ ಕುಯವನೆಂಬ ಅಸುರನೊಂದಿಗೆ ಯುದ್ಧಮಾಡಿ ಅವನನ್ನು ಸೋಲಿಸಿದುದು ಪ್ರಸಿದ್ಧವಾಗಿದೆ.

> ಸ ರಂಧಯತ್ಸದಿವಃ ಸಾರಥಯೇ ಶುಷ್ಣಮಶುಷಂ ಕುಯವಂ ಕುತ್ಸಾಯ ।
> (ಋ. ಸಂ. ೨-೧೯-೬)

> ಕುತ್ಸಾಯ ಶುಷ್ಣಮಶುಷಂ ನಿ ಬರ್ಹೀಃ ಪ್ರಪಿತ್ವೇ ಅಹ್ನಃ ಕುಯವಂ ಸಹಸ್ರಾ ।
> (ಋ. ಸಂ. ೪-೧೬-೧೨)

> ತ್ವಂ ಕುತ್ಸೇನಾಭಿ ಶುಷ್ಣಮಿಂದ್ರಾಶುಷಂ ಯುಧ್ಯ ಕುಯವಂ ಗವಿಷ್ಟೌ ।
> (ಋ. ಸಂ. ೬-೩೧-೩)

> ದಾಸಂ ಯಚ್ಛುಷ್ಣಂ ಕುಯವಂ ನ್ಯಸ್ಮಾ ಅರಂಧಯ ಆರ್ಜುನೇಯಾಯ ಶಿಕ್ಷನ್ ।
> (ಋ. ಸಂ. ೭-೧೯-೨)

ಎಂಬ ಋಕ್ಕುಗಳಲ್ಲೆಲ್ಲಾ ಕುತ್ಸನ ಸಹಾಯಾರ್ಥವಾಗಿ ಕುಯವನನ್ನೂ ನಾಶಮಾಡಿದುದು ವರ್ಣಿತವಾಗಿದೆ.

**ಅವ ತ್ಮನಾ ಭರತೇ ಕೇತವೇದಾ ಅವ ತ್ಮನಾ ಭರತೇ ಫೇನಮುದನ್ ।**
**ಕ್ಷೀರೇಣ ಸ್ನಾತಃ ಕುಯವಸ್ಯ ಯೋಷೇ ಹತೇ ತೇ ಸ್ಯಾತಾಂ ಪ್ರವಣೇ ಶಿಫಾಯಾಃ ।**
(ಋ. ಸಂ. ೧-೧೦೪-೩)

ಎಂಬ ಋಕ್ಕಿನಲ್ಲಿ ಕುವಯನ ಪತ್ನಿಯರಿಬ್ಬರು ನದಿಯಲ್ಲಿ ಸ್ನಾನಮಾಡುತ್ತಿರುವುದನ್ನೂ ಮಾನವರೂಪರಾದ ಪ್ರಜೆಗಳಿಗೆ ಅವರಿಂದಾಗುತ್ತಿರುವ ತೊಂದರೆಯನ್ನೂ ವರ್ಣಿಸಿ ಆ ಇಬ್ಬರು ಹೆಂಡಿರನ್ನೂ ಸಹ ಶಿಫಾನದಿಯ ಪ್ರವಾಹದಲ್ಲಿಯೇ ನಾಶವಾಗುವಂತೆ ಮಾಡಬೇಕೆಂದೂ ಪ್ರಾರ್ಥಿಸಿದೆ.

**ಕರತ್ತಿಸ್ರೋ ಮಘವಾ ದಾನುಚಿತ್ರಾ ನಿ ದುರ್ಯೋಣೇ ಕುಯವಾಚಂ ಮೃಧಿ ಶ್ರೇತ್ ।**
(ಋ. ಸಂ. ೧-೧೭೪-೭)

ಎಂಬ ಋಕ್ಕಿನಲ್ಲಿ ಕುತ್ಸಿತವಾದ ವಾಕ್ಕುಳ್ಳವನೂ, ಈ ಹೆಸರುಳ್ಳವನೂ ಆದ ಅಸುರನನ್ನು ಯುದ್ಧದಲ್ಲಿ ಹಿಂಸಿಸಿದನೆಂದು ಹೇಳಿದೆ. ಆ ವಿಶೇಷಣದಿಂದ ಕುವಯನನ್ನೇ ಉದ್ದೇಶಿಸಿರಬಹುದು.

ವ್ಯಾಕರಣಪ್ರಕ್ರಿಯಾ

**ಶುಷ್ಣಮ್**—ಶುಷ ಶೋಷಣೇ. ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಈ ಧಾತುವಿನ ಮೇಲೆ **ತುಷಿ ಶುಷಿ ರಸಿಭ್ಯಃ ಕಿಚ್ಚ**— (ಉ. ಸೂ. ೩-೨೯೨) ಎಂಬುದರಿಂದ ನ ಪ್ರತ್ಯಯ. ಷ್ಟುತ್ವದಿಂದ ಅದಕ್ಕೆ ಣತ್ವ. ಕಿದ್ವದ್ಭಾವವಿರುವುದರಿಂದ ಲಘೂಪಧಗುಣ ಬರುವುದಿಲ್ಲ. ಹಿಂದಿನ ಸೂತ್ರದಿಂದ ನಿತ್ ಎಂದು ಅನುವೃತ್ತವಾಗುವುದರಿಂದ **ಞ್ನಿತ್ಯಾದಿರ್ನಿತ್ಯಮ್**—ಸೂತ್ರದಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

**ಪಿಪ್ರುಮ್**—ಪ್ೃ ಪಾಲನಪೂರಣಯೋಃ ಧಾತು. ಇದು ಹ್ರಸ್ವಾಂತವಾಗಿಯೂ ಇದೆಯೆಂದು ಕೆಲವರ ಮತ. ಇದಕ್ಕೆ ಔಣಾದಿಕವಾದ ಕುಪ್ರತ್ಯಯ. **ಛಂದಸ್ಯುಭಯಥಾ**—(ಪಾ. ಸೂ. ೩-೪-೧೧೭) ಎಂಬುದರಿಂದ ಇದಕ್ಕೆ ಸಾರ್ವಧಾತುಕಸಂಜ್ಞೆ ಇರುವುದರಿಂದ **ಕರ್ತರಿ ಶಪ್**—(ಪಾ. ಸೂ. ೩-೧-೬೮) ಎಂಬುದರಿಂದ ಶಪ್‌ವಿಕರಣ ಬರುತ್ತದೆ. ಧಾತುವು ಜುಹೋತ್ಯಾದಿಯಲ್ಲಿ ಸೇರಿರುವುದರಿಂದ **ಜುಹೋತ್ಯಾದಿಭ್ಯಃ ಶ್ಲುಃ**—ಎಂಬುದರಿಂದ ಅದಕ್ಕೆ ಶ್ಲು ಆದೇಶ. **ಶ್ಲೌ**—ಎಂಬುದರಿಂದ ಧಾತುವಿಗೆ ದ್ವಿತ್ವ. **ಅರ್ತಿಪಿಪರ್ತ್ಯೋಶ್ಚ**—(ಪಾ. ಸೂ. ೭-೪-೭೭) ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಧಾತುವಿನ ಋಕಾರಕ್ಕೆ ಯಣಾದೇಶ. **ಅಭ್ಯಸ್ತಾನಾಮಾದಿಃ**—(ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಕುಯವಮ್**—ಯವಃ ಯವನಂ ಮಿಶ್ರಣಮ್. ಯು ಮಿಶ್ರಣಾಮಿಶ್ರಣಯೋಃ ಧಾತು. ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ **ಯುವೋರನಾಕೌ**—ಎಂಬುದರಿಂದ ಅನಾದೇಶ. ಧಾತುವಿಗೆ ತನ್ನಿಮಿತ್ತವಾಗಿ ಗುಣ, ಅವಾದೇಶ. ಕುತ್ಸಿತಂ ಯವನಂ ಯಸ್ಯ ಸಃ ಕುಯವಃ ತಮ್. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಅವಧೀಃ**—ಹನ ಹಿಂಸಾಗತ್ಯೋಃ ಧಾತು. ಲುಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಇಕಾರ ಲೋಪ. **ಹನೋ ವಧ ಲಿಙಿ ಲುಙಿ ಚ**—(ಪಾ. ಸೂ. ೨-೪-೪೩) ಎಂಬುದರಿಂದ ವಧಾದೇಶ. ಯದಾ ಎಂದು ಹಿಂದೆ ಸಂಬಂಧವಿರುವುದರಿಂದ **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಸ್ವರಪ್ರತಿಷೇಧ ಬರುವುದರಿಂದ ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಶಂಬರಸ್ಯ**—ಶಮಯತೀತಿ ಶಂಬಃ ಆಯುಧಮ್. ಶಮು ಉಪಶಮೇ ಧಾತು. **ಶಮೇರ್ಬನ್**—(ಉ. ಸೂ. ೪-೫೪) ಎಂಬುದರಿಂದ ಬನ್ ಪ್ರತ್ಯಯ. ಶಂಬಃ ಅಸ್ಯ ಅಸ್ತೀತಿ ಶಂಬರಃ ಮತ್ವರ್ಥದಲ್ಲಿ ಛಾಂದಸವಾಗಿ ರಪ್ರತ್ಯಯ. ಬನ್ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ. || ೮ ||

ನೂರ ಮೂರನೆಯ ಸೂಕ್ತವು ಸಮಾಪ್ತಿಯಾದುದು.



# ನೂರನಾಲ್ಕನೆಯ ಸೂಕ್ತವು

---

**ಯೋನಿರಿತಿ ನವರ್ಚಮೇಕಾದಶಂ ಸೂಕ್ತಂ ಕುತ್ಸಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ಯೋನಿರ್ನವೇತ್ಯನುಕ್ರಾಂತಂ ॥ ಸೂಕ್ತವಿನಿಯೋಗೋ ಲೈಂಗಿಕಃ ॥**

ಅನುವಾದವು—ಯೋನಿಷ್ಟ ಇಂದ್ರ ಎಂಬ ಸೂಕ್ತವು ಹದಿನೈದನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಕುತ್ಸನು ಋಷಿಯು. ಇಂದ್ರನು ದೇವತೆಯು. ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ ಯೋನಿರ್ನವೇತ್ಯನುಕ್ರಾಂತಂ ಎಂದು ಮುಂತಾಗಿ ಹೇಳಿರುವುದು. ಸೂಕ್ತದ ವಿನಿಯೋಗವು ಲೈಂಗಿಕವು.

——— :o: ———

॥ ಓಂ ॥

## ಸೂಕ್ತ—೧೦೪

॥ ಮಂಡಲ—೧ ॥ ಅನುವಾಕ—೧೫ ॥ ಸೂಕ್ತ—೧೦೪ ॥

॥ ಅಷ್ಟಕ— ೧ ॥ ಅಧ್ಯಾಯ— ೭ ॥ ವರ್ಗ—೧೮, ೧೯ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೯ ॥

॥ ಋಷಿಃ—ಕುತ್ಸ ಆಂಗಿರಸಃ ॥

॥ ದೇವತಾ—ಇಂದ್ರಃ ॥

॥ ಛಂದಃ— ತ್ರಿಷ್ಟುಬ್ ॥

ಸಂಹಿತಾಪಾಠಃ

ಯೋನಿಷ್ಟ ಇಂದ್ರ ನಿಷದೇ ಅಕಾರಿ ತಮಾ ನಿ ಷೀದ ಸ್ವಾನೋ
ನಾರ್ವಾ ।
ವಿಮುಚ್ಯಾ ವಯೋಽವಸಾಯಾಶ್ವಾಂದೋಷಾ ವಸ್ತೋರ್ವಹೀ-
ಯಸಃ ಪ್ರಪಿತ್ವೇ ॥ ೧ ॥

॥ ಪದಪಾಠಃ ॥

ಯೋನಿಃ । ತೇ । ಇಂದ್ರ । ನಿಽಸದೇ । ಅಕಾರಿ । ತಂ । ಆ । ನಿ । ಸೀದ । ಸ್ವಾ-
ನಃ । ನ । ಅರ್ವಾ ।
ವಿಽಮುಚ್ಯ । ವಯಃ । ಅವಽಸಾಯ । ಅಶ್ವಾನ್ । ದೋಷಾ । ವಸ್ತೋಃ ।
ವಹೀಯಸಃ । ಪ್ರಽಪಿತ್ವೇ ॥ ೧ ॥

ಸಾಯಣಭಾಷ್ಯಂ

ಹೇ ಇಂದ್ರ ಯೋನಿರ್ವೇದ್ಯಾಖ್ಯಂ ಸ್ಥಾನಂ ತೇ ತವ ನಿಷದೇ ನಿಷದನಾಯೋಪವೇಶನಾಯಾಕಾರಿ । ಕೃತಮಸ್ಮಾಭಿಃ ಪ್ರಕಲ್ಪಿತಮಭೂತ್। ತಂ ಯೋನಿಮಾ ನಿ ಷೀದ । ಶೀಘ್ರಮಾಗತ್ಯ ತತ್ರೋಪವಿಶ । ಶೀಘ್ರಾಗಮನೇ ದೃಷ್ಟಾಂತಃ । ಸ್ವಾನೋ ನಾರ್ವಾ । ಅರ್ವೇತ್ಯಶ್ವನಾಮ । ಯಥಾಶ್ವಃ ಸ್ವಾನೋ ಹೇಷಾಶಬ್ದಂ ಕುರ್ವನ್ ಸ್ವಕೀಯಂ ಸ್ಥಾನಂ ಶೀಘ್ರಮಾಗಚ್ಛತಿ ತದ್ವತ್ । ಕಿಂ ಕೃತ್ವಾ । ವಯೋಽಶ್ವಬಂಧನಾರ್ಥಾನ್ ರಶ್ಮೀನ್ವಿಮುಚ್ಯ ರಥಾದ್ವಿಶ್ಲಿಷ್ಯ ತಥಾಶ್ವಾನ್ ರಥೇ ಯೋಜಿತಾಂಶ್ಚ ತುರಗಾನವಸಾಯ ವಿಮುಚ್ಯ । ಅತ್ರ ನಿರುಕ್ತಂ । ಅವಸಾಯಾಶ್ವಾನಿತಿ ಸ್ಯತಿರುಪಸೃಷ್ಟೋ ವಿಮೋಚನೇ । ನಿ. ೧-೧೭ । ಇತಿ । ಕೇದೃಶಾನಶ್ವಾನ್ । ಪ್ರಪಿತ್ವೇ ಯಾಗಕಾಲೇ ಪ್ರಾಪ್ತೇ । ಪ್ರಪಿತ್ವೇ ಪ್ರಾಪ್ತೇಽಭೀಕೇಽಭ್ಯಕ್ತೇ । ನಿ. ೩-೨೦ । ಇತಿ ಯಾಸ್ಕಃ । ದೋಷಾ ರಾತ್ರೌ ವಸ್ತೋರಹನಿ ಚ ವಹೀಯಸಃ ಆದರಾತಿಶಯೇನ ವೋಢ್ೄನ್ ॥ ನಿಷದೇ । ಸದೇಃ ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಸ್ವಾನಃ । ಸ್ವನ ಸ್ವನ ಧ್ವನ ಶಬ್ದೇ। ಬಹುಲವಚನಾತ್ಕರ್ತರಿ ಘಞ್ । ಕರ್ಷಾತ್ವತ ಇತ್ಯಂತೋದಾತ್ತತ್ವಂ । ವಯಃ । ವಿಯಂತಿ ರಥೇನ ಸಹ ಸಂಗಚ್ಛಂತ ಇತಿ ವಿಶಬ್ದೇನ ರಶ್ಮಯ ಉಚ್ಯಂತೇ । ವೀ ಗತ್ಯಾದಿಷು । ಔಣಾದಿಕ ಇಪ್ರತ್ಯಯಃ। ಟಿಲೋಪಶ್ಚ । ದ್ವಿತೀಯಾರ್ಥೇ ಪ್ರಥಮಾ । ಅವಸಾಯ । ಷೋ ಅಂತಕರ್ಮಣಿ । ಆದೇಚ ಇತ್ಯಾತ್ವಂ । ಸಮಾಸೇಽನಞ್ಪೂರ್ವ ಇತಿ ಕ್ತ್ವೋ ಲ್ಯಬಾದೇಶಃ । ವಹೀಯಸಃ । ವಹ ಪ್ರಾಪಣೇ । ತೃಜಂತಾದ್ವೋಢೃಶಬ್ದಾತ್ತುಶ್ಛಂದಸೀತೀಯಸುನ್ । ತುರಿಷ್ಠೇಮೇಯಃಸ್ವಿತಿ ತೃಲೋಪೇ ಕರ್ತವ್ಯೇ ಢತ್ವಧತ್ವಷ್ಟುತ್ವಢಲೋಪಾನಾಮಸಿದ್ಧತ್ವಾತ್ತದಾಶ್ರಿತಸ್ಯೌತ್ವಸ್ಯಾಪ್ಯಭಾವೇ ತೃಲೋಪ ಏವ ಕ್ರಿಯತೇ ॥

॥ ಪ್ರತಿಪದಾರ್ಥ ॥

ಇಂದ್ರ— ಎಲೈ ಇಂದ್ರನೇ । **ಯೋನಿಃ**— ಯಜ್ಞವೇದಿಕಾ ರೂಪವಾದ ಸ್ಥಾನವು । **ತೇ**— ನಿನಗೆ । **ನಿಷದೇ**— ಕುಳಿತುಕೊಳ್ಳುವುದಕ್ಕಾಗಿ । **ಅಕಾರಿ**—ಸಿದ್ಧವಾಗಿ ಮಾಡಲ್ಪಟ್ಟಿದೆ । **ವಯಃ**— ಕಡಿವಾಣಗಳನ್ನು । **ವಿಮುಚ್ಯ**— (ರಥದಿಂದ) ಸಡಿಲಿಸಿ (ಮತ್ತು) । **ಪ್ರಪಿತ್ವೇ**— ಯಜ್ಞಕಾಲವು ಪ್ರಾಪ್ತವಾದಾಗ । **ದೋಷಾ**— ರಾತ್ರಿಕಾಲದಲ್ಲಿಯೂ । **ವಸ್ತೋಃ**—ಹಗಲಿನಲ್ಲಿಯೂ । **ವಹೀಯಸಃ**- (ನಿನ್ನನ್ನು ಆದರದಿಂದ) ಹೊತ್ತುಕೊಂಡು ಬರುವ । **ಅಶ್ವಾನ್**--ಕುದುರೆಗಳನ್ನೂ । **ಅವಸಾಯ**—(ರಥದಿಂದ) ಬಿಚ್ಚಿ । **ಸ್ವಾನಃ**—ಹೇಷಾರವವನ್ನುಮಾಡಿಕೊಂಡು । **ಅರ್ವಾ ನ**—ಕುದುರೆಯು (ಸ್ವಸ್ಥಾನಕ್ಕೆ ಶೀಘ್ರನಾಗಿ) ಹೋಗಿ ಸೇರುವಂತೆ । **ತಂ**—ಆ ವೇದಿಕಾ ಪ್ರದೇಶಕ್ಕೆ । **ಆ ನಿಷೀದ**—ಶೀಘ್ರವಾಗಿ ಬಂದು ಕುಳಿತುಕೊ ॥

ಭಾವಾರ್ಥ

ಎಲೈ ಇಂದ್ರನೇ, ನಿನಗೆ ಕುಳಿತುಕೊಳ್ಳುವುದಕ್ಕಾಗಿ ಯಜ್ಞವೇದಿಕಾರೂಪವಾದ ಸ್ಥಾನವು ನಿರ್ಮಿತವಾಗಿ ಸಿದ್ಧವಾಗಿದೆ. ನೀನು ಜಾಗ್ರತೆಯಾಗಿ ನಿನ್ನ ರಥದಿಂದ ಕಡಿವಾಣವನ್ನು ಸಡಿಲಿಸಿ, ಯಜ್ಞಕಾಲದಲ್ಲಿ ಹಗಲೂ ರಾತ್ರಿಯೂ ಅಭಿಮಾನದಿಂದ ನಿನ್ನನ್ನು ಯಜ್ಞಗೃಹಕ್ಕೆ ಹೊತ್ತುಕೊಂಡು ಬರುವ ಕುದುರೆಗಳನ್ನೂ ಸಹ ರಥದಿಂದ ಬಿಟ್ಟು, ಕುದುರೆಯು ಬಿಚ್ಚಿದ ಕೂಡಲೇ ಹೇಷಾರವವನ್ನು ಮಾಡಿಕೊಂಡು ತನ್ನ ಸ್ವಸ್ಥಾನಕ್ಕೆ ವೇಗವಾಗಿ ಹೋಗಿ ಸೇರುವಂತೆ ನೀನೂ ಸಹ ವೇದಿಕೆಯಲ್ಲಿ ಬಂದು ಕುಳಿತುಕೊ ॥

## English Translation

The alter has been raised, Indra, for your seat; hasten to sit upon it, as a neighing horse (hastens to his stable); slackening the reins, and letting your coursers free, who, at the season of sacrifice bear the night and day.

### ವಿಶೇಷವಿಷಯಗಳು

**ಯೋನಿಃ**—ಯೋನಿಶಬ್ದಕ್ಕೆ ಉತ್ಪತ್ತಿಸ್ಥಾನವೆಂಬ ಪ್ರಸಿದ್ಧವಾದ ಅರ್ಥವಲ್ಲದೆ, ನಿವಾಸಸ್ಥಾನ, ಗೃಹ ಇತ್ಯಾದಿ ಅರ್ಥಗಳೂ ಉಂಟು. ನಿಘಂಟುವಿನಲ್ಲಿ **ಅರ್ಣಃ ಕ್ಷೋದಃ** ಇತ್ಯಾದಿ ೧೦೧ ಉದಕನಾಮಗಳೊಂದಿಗೆ ಪಠಿತ ವಾಗಿದೆ. (ನಿ. ೨-೨೪).

**ವರ್ಧಂತೀಮಾಪಃ ಪನ್ವಾ ಸುಶಿಶ್ವಿಮೃತಸ್ಯ ಯೋನಾ ಗರ್ಭೇ ಸುಜಾತಂ ।**
(ಋ. ಸಂ. ೧-೬೫-೪)

ಎಂಬ ಋಕ್ಕಿನಲ್ಲಿ **ಯಜ್ಞಸ್ಯ, ಅನ್ನಸ್ಯ ವಾ ಕಾರಣಭೂತೇ ಜಲೇ,** ಎಂದು **ಯೋನಿ** ಶಬ್ದಕ್ಕೆ ಜಲವೆಂದರ್ಥ.

**ಸಮಿದ್ಧಃ ಶುಕ್ರ ದೀದಿಹ್ಯೃತಸ್ಯ ಯೋನಿಮಾಸದಃ ಸಸಸ್ಯ ಯೋನಿ ಮಾಸದಃ ।**
(ಋ. ಸಂ. ೩-೨೧-೪)

ಇಲ್ಲಿ **ಯೋನಿಂ ಕಾರಣಂ । ಸ್ವರ್ಗಸಾಧನಂ ।** ಕಾರಣ, ಸಾಧನವೆಂದರ್ಥ.

**ದುರೋಕಶೋಚಿಃ ಕ್ರತುರ್ನ ನಿತ್ಯೋ ಜಾಯೇವ ಯೋನಾವರಂ ವಿಶ್ವಸ್ಮೈ ।**
(ಋ. ಸಂ. ೧-೬೬-೩)

ಎಂಬ ಋಕ್ಕಿನಲ್ಲಿ **ಗೃಹ**ವೆಂದೂ

**ಯಮೀಂ ದ್ವಾ ಸವಯಸಾ ಸಪರ್ಯತಃ ಸಮಾನೇ ಯೋನಾ ಮಿಥುನಾ ಸಮೋಕಸಾ ।**
(ಋ. ಸಂ. ೧-೧೪೪-೪)

ಇದೇ ಮುಂತಾದ ಕಡೆಗಳಲ್ಲಿ ಫಲಕ್ಕೆ ಉತ್ಪತ್ತಿಸ್ಥಾನವೆಂದೂ ಹೀಗೆಯೇ,

**ವೇದಿಷದೇ ಪ್ರಿಯಧಾಮಾಯ ಸುದ್ಯುತೇ ಧಾಸಿಮಿವ ಪ್ರ ಭರಾ ಯೋನಿಮಗ್ನಯೇ ।**
(ಋ. ಸಂ. ೧-೧೪೦-೧)

ಇತ್ಯಾದಿ ಋಕ್ಕುಗಳಲ್ಲಿಯೂ, ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ವೇದ್ಯಾಖ್ಯಂ ಸ್ಥಾನಂ** ವೇದಿರೂಪವಾದ ಸ್ಥಾನ ವೆಂದೂ ಅರ್ಥ. ಈ ಋಕ್ಕಿನಲ್ಲಿ **ಯೋನಿಃ ನಿಷದೇ ಅಕಾರಿ ।** ಎಂದರೆ ಯಜ್ಞವೇದಿಕಾರೂಪವಾದ ಸ್ಥಾನವು ಅಥವಾ ಆಸನವು ನಿನಗೆ ಕುಳಿತುಕೊಳ್ಳುವುದಕ್ಕಾಗಿ ಸಿದ್ಧವಾಗಿ ಮಾಡಲ್ಪಟ್ಟಿದೆಯೆಂದರ್ಥ.

**ವಯಃ**—**ವಯಃ** ಎಂಬ ಪದಕ್ಕೆ ಅನ್ನ, ಶಕ್ತಿ, ಆಯುಸ್ಸು ಇತ್ಯಾದ್ಯರ್ಥಗಳು ರೂಢಿಯಲ್ಲಿರುವುವು. ಇಲ್ಲಿ ಮಾತ್ರ **ಅಶ್ವಬಂಧನಾರ್ಥಾನ್ ರಶ್ಮೀನ್**—ಅಶ್ವಬಂಧನಕ್ಕಾಗಿ ಹಿಡಿದಿರುವ ಕಡಿವಾಣವೆಂದರ್ಥ.

**ಅವಸಾಯ**—ಈ ಪದವನ್ನು ವಿವರಿಸಿ ಅರ್ಥಮಾಡುವಾಗ ನಿರುಕ್ತಕಾರರು ಋಕ್ಸಂಹಿತೆಯಿಂದ ಎರಡು ಉದಾಹರಣೆಗಳನ್ನು ಕೊಡುತ್ತಾ ಎರಡು ಕಡೆಗಳಲ್ಲಿಯೂ ಬೇರೆ ಬೇರೆ ಅರ್ಥಗಳನ್ನು ಹೇಳಿರುತ್ತಾರೆ.

**ಪೀವಸ್ವತೀರ್ಜೀವಧನ್ಯಾಃ ಪಿಬಂತ್ವವಸಾಯ ಪದ್ವತೇ ರುದ್ರ ಮೃಳ ।**
(ಋ. ಸಂ. ೧೦-೧೬೯-೧)

ಎಂಬ ಋಕ್ಕಿನಲ್ಲಿರುವ **ಅವಸಾಯ** ಎನ್ನುವ ಪದಕ್ಕೆ **ಪದ್ವದವಸಂ ಗಾವಃ । ಪಥ್ಯದನಂ ।** ಪ್ರಯಾಣಕಾಲದಲ್ಲಿ ಗೋರೂಪವಾದ ಅನ್ನಕ್ಕಾಗಿ ಎಂದೂ, ಮತ್ತು ಪ್ರಕೃತವಾದ ಈ ಋಕ್ಕನ್ನೇ ಉದಹರಿಸಿ ಇಲ್ಲಿರುವ **ಅವಸಾಯ** ಎಂಬ ಪದಕ್ಕೆ **ಸ್ಯತಿರುಪಸೃಷ್ಟೋ ವಿಮೋಚನೇ** ಬಿಟ್ಟುಬಿಡು, ವಿಮೋಚನೆಮಾಡು ಎಂದರ್ಥವನ್ನು ಕೊಡುವ **ಸ್ಯತಿ** ಎಂಬ ಧಾತುವಿನೊಡನೆ **ಅವ** ಎಂಬ ಉಪಸರ್ಗವನ್ನು ಸೇರಿಸಿರುವುದರಿಂದ **ಅವಸಾಯ** ಎಂಬ ಪದವು ನಿಷ್ಪನ್ನವಾಗಿ ರಥಕ್ಕೆ ಕಟ್ಟಿರುವ ಕುದುರೆಯನ್ನು ಬಿಚ್ಚಿಬಿಟ್ಟು ಎಂದರ್ಥವಾಗಿದೆಯೆಂದು ನಿರುಕ್ತಕಾರರು ವಿವರಿಸಿದ್ದಾರೆ. (ನಿ. ೧-೧೭).

**ಪ್ರಪಿತ್ವೇ**—**ಯಾಗಕಾಲೇ ಪ್ರಾಪ್ತೇ ಪ್ರಪಿತ್ವೇಽಭೀಕ ಇತ್ಯಾಸನ್ನಸ್ಯ ಪ್ರಪಿತ್ವೇ ಪ್ರಾಪ್ತೇ ।** ಪ್ರಪಿತ್ವೇ, ಮತ್ತು ಅಭೀಕೇ ಎಂಬ ಎರಡು ಪದಗಳೂ **ಸಮೀಪ** ಎಂಬರ್ಥವನ್ನು ಕೊಡುತ್ತವೆ. **ಪ್ರಪಿತ್ವೇ** ಎಂದರೆ ಸಮೀಪಿಸಿದಾಗ, ಆ ಕಾಲವು ಪ್ರಾಪ್ತವಾದಾಗ ಎಂದರ್ಥವೆಂದು ನಿರುಕ್ತಕಾರರು ವಿವರಿಸಿದ್ದಾರೆ. (ನಿ. ೩-೨೦) ಈ ಋಕ್ಕಿನಲ್ಲಿ **ಪ್ರಪಿತ್ವೇ** ಎಂದರೆ ಯಾಗಕಾಲವು ಪ್ರಾಪ್ತವಾದಾಗ ಎಂದರ್ಥ. ಇದೇ ಅರ್ಥದಲ್ಲಿ **ಪ್ರಪಿತ್ವೇ** ಎಂಬ ಪದವನ್ನುಪಯೋಗಿಸಿರುವ

**ಆಪಿತ್ವೇ ನಃ ಪ್ರಪಿತ್ವೇ ತೂಯಮಾ ಗಹಿ ಕಣ್ವೇಷು ಸು ಸಚಾ ಪಿಬ ।**
(ಋ. ಸಂ. ೮-೪-೩)

ಎಂಬ ಋಕ್ಕನ್ನು ಸಹ ನಿರುಕ್ತಕಾರರು ಉದಹರಿಸಿ ಪ್ರಾಪ್ತವಾದ ಕಾಲದಲ್ಲಿ ಎಂಬರ್ಥವನ್ನು ವಿಶದಮಾಡಿ ತಿಳಿಸಿದ್ದಾರೆ.

**ವಸ್ತೋಃ**— **ವಸ್ತೋಃ, ದ್ಯುಃ** ಎಂಬ ೧೨ ಅಹರ್ನಾಮಗಳಲ್ಲಿ ಪಠಿತವಾಗಿದೆ. ( ನಿ. ೩-೨೦ ) ನಿರುಕ್ತಕಾರರು.

**ಕುಹ ಸ್ವಿದ್ದೋಷಾ ಕುಹ ವಸ್ತೋರಶ್ವಿನಾ ಕುಹಾಭಿಪಿತ್ವಂ ಕರತಃ ಕುಹೋಷತುಃ ।**
(ಋ. ಸಂ. ೧೦-೪೦-೩)

ಎಂಬ ಋಕ್ಕನ್ನು ಉದಹರಿಸಿ ಅಲ್ಲಿ **ವಸ್ತೋಃ** ಎಂಬ ಪದಕ್ಕೆ **ದಿವಾ** ಎಂದರ್ಥಮಾಡಿರುವಂತೆಯೇ (ನಿ. ೩-೧೫) ಈ ಋಕ್ಕಿನಲ್ಲಿಯೂ ಸಹ ಹಗಲಿನಲ್ಲಿ ಎಂದರ್ಥ.

ವ್ಯಾಕರಣಪ್ರಕ್ರಿಯಾ

**ನಿಷದೇ**—ಷದ್ಲೃ ವಿಶರಣಗತ್ಯವಸಾದನೇಷು. ಧಾತು. ಇದಕ್ಕೆ **ಸಂಪದಾದಿಭ್ಯಃ ಕ್ವಿಪ್**—(ಪಾ. ೨೨೩೩) ಎಂಬುದರಿಂದ ಭಾವಾರ್ಥದಲ್ಲಿ ಕ್ವಿಪ್. **ಉಪಸರ್ಗಾತ್—ಸದಿರಪ್ರತೇಃ**—(ಪಾ. ಸೂ. ೮-೩-೬೬) ಎಂಬುದರಿಂದ ಧಾತುವಿನ ಸಕಾರಕ್ಕೆ ಷತ್ವ. **ಗತಿಕಾರಕೋಪಪದಾತ್ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಅಕಾರಿ**—ಡುಕೃಞ್ ಕರಣೇ ಧಾತು. ಕರ್ಮಣಿಯಲ್ಲಿ ಲುಙ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಚಿಣ್ ಭಾವಕರ್ಮಣೋಃ**—(ಪಾ. ಸೂ. ೩-೧-೬೬) ಎಂಬುದರಿಂದ ಚ್ಲಿಗೆ ಚಿಣ್. **ಚಿಣೋಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ಚಿಣಿನ ಪರದಲ್ಲಿರುವ ಪ್ರತ್ಯಯಕ್ಕೆ ಲುಕ್. ಚಿಣ್ ಣಿತ್ತಾದುದರಿಂದ **ಅಚೋ ಞ್ಣಿತಿ**—ಸೂತ್ರದಿಂದ ಧಾತುವಿನ ಅಚಿಗೆ ವೃದ್ಧಿ. ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ.

**ನಿಷೀದ**—ಷದ್ಲೃ ವಿಶರಣಗತ್ಯವಸಾದನೇಷು ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ **ಪಾಘ್ರಾಧ್ಮಾ**—(ಪಾ. ಸೂ. ೭-೩-೭೮) ಎಂಬುದರಿಂದ ಧಾತುವಿಗೆ ಸೀದಾದೇಶ. ನಿಘಾತಸ್ವರ ಬರುತ್ತದೆ.

**ಸ್ವಾನಃ**—ಸ್ಯಮು ಸ್ವನ ಧ್ವನ ಶಬ್ದೇ ಧಾತು. **ಕೃತ್ಯಲ್ಯುಟೋ ಬಹುಲಮ್**—ಎಂಬಲ್ಲಿ ಬಹುಲವಚನವಿರುವುದರಿಂದ ಕರ್ತರಿಯಲ್ಲಿ ಘಞ್ ಪ್ರತ್ಯಯ. ಞಿತ್ತಾದುದರಿಂದ **ಅತ ಉಪಧಾಯಾಃ**— ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ. **ಕರ್ಷಾತ್ವತಃ**—(ಪಾ. ಸೂ. ೬-೧-೧೫೯) ಎಂಬುದರಿಂದ ಞಿತ್ ಸ್ವರಕ್ಕೆ ಬಾಧಕವಾಗಿ ಅಂತೋದಾತ್ತಸ್ವರ ಬರುತ್ತದೆ.

**ವಯಃ**—ವಿಯಂತಿ ರಥೇನ ಸಹ ಸಂಗಚ್ಛಂತೇ ಇತಿ ವಿಶಬ್ದೇನ ರಶ್ಮಯಃ ಉಚ್ಯಂತೇ. (ಕಿರಣಗಳು) ವೀ ಗತ್ಯಾದಿಷು. ಇದಕ್ಕೆ **ಅಚ ಇಃ**—(ಉ. ಸೂ. ೪-೫೭೮) ಎಂಬುದರಿಂದ ಇಪ್ರತ್ಯಯ. ಧಾತುವಿನ ಟಿಗೆ ಲೋಪ. ವಿ ಎಂದು ರೂಪವಾಗುತ್ತದೆ. ದ್ವಿತೀಯಾರ್ಥದಲ್ಲಿ ಪ್ರಥಮಾ ಬಂದಿದೆ. ಬಹುವಚನದಲ್ಲಿ **ಜಸಿಚ**— ಎಂಬುದರಿಂದ ಗುಣ, ಅಯಾದೇಶ.

**ಅವಸಾಯ**—ಷೋ ಅಂತಕರ್ಮಣಿ. ಧಾತು. **ಆದೇಚ ಉಪದೇಶೇಽಶಿತಿ**—(ಪಾ. ಸೂ. ೬-೧-೪೫ ಎಂಬುದರಿಂದ ಆತ್ವ. **ಸಮಾಸೇ ನಞ್ಪೂರ್ವೇ ಕ್ತ್ವೋ ಲ್ಯಪ್**—(ಪಾ. ಸೂ. ೭-೧-೩೭) ಸೂತ್ರದಿಂದ ಕ್ತ್ವಾ ಪ್ರತ್ಯಯಕ್ಕೆ ಲ್ಯಬಾದೇಶ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ವಹೀಯಸಃ**—ವಹ ಪ್ರಾಪಣೇ ಧಾತು. ಇದಕ್ಕೆ ಕರ್ತರಿಯಲ್ಲಿ ತೃಚ್ ಪ್ರತ್ಯಯ. **ಹೋಢಃ**— ಸೂತ್ರದಿಂದ ಹಕಾರಕ್ಕೆ ಢತ್ವ. **ಝಷಃತಥೋರ್ಧಃ**—ಸೂತ್ರದಿಂದ ಪ್ರತ್ಯಯ ತಕಾರಕ್ಕೆ ಧಕಾರಾದೇಶ ಬಂದಾಗ ಷ್ಟುತ್ವದಿಂದ ಢತ್ವ. **ಢೋ ಢೇ ಲೋಪಃ**—ಎಂಬುದರಿಂದ ಪೂರ್ವದ ಢಕಾರಕ್ಕೆ ಲೋಪ. **ಸವಹಿವ-ಹೋರೋದವರ್ಣಸ್ಯ**—(ಪಾ. ಸೂ. ೬-೩-೧೧೨) ಎಂಬುದರಿಂದ ಧಾತುವಿನ ಅಕಾರಕ್ಕೆ ಓತ್ವ. ವೋಢೃಶಬ್ದವಾಗುತ್ತದೆ. **ತುಶ್ಛಂದಸಿ**—(ಪಾ. ಸೂ. ೫-೩-೫೯) ಎಂಬುದರಿಂದ ಇದಕ್ಕೆ ಅತಿಶಯಾರ್ಥ ತೋರುವಾಗ ಈಯಸುನ್ ಪ್ರತ್ಯಯ. **ತುರಿಷ್ಠೇಮೇಯಃಸು**—(ಪಾ. ಸೂ. ೬-೪-೧೫೪) ಎಂಬುದರಿಂದ ಈಯಸುನ್ ಪರವಾದಾಗ

ತೃಚಿಗೆ ಲೋಪ. ಆಗ ಥತ್ವ, ಧತ್ವ, ಷ್ಟುತ್ವ ಢಲೋಪಗಳು ಅಸಿದ್ಧವಾಗುವುದರಿಂದ ಅವನ್ನು ಆಶ್ರಯಿಸಿ ಬಂದಿರುವ ಓತ್ವವೂ ಇಲ್ಲದಿರುವುದರಿಂದ ಕೇವಲ ತೃಚಿಗೆ ಲೋಪ. ವರ್ಹಿಯಸ್ ಎಂದು ರೂಪವಾಗುತ್ತದೆ. ಈಯಸುನ್ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ ಷಷ್ಠೀ ಏಕವಚನಾಂತರೂಪ. ॥ ೧ ॥

———:೦:———

ಸಂಹಿತಾಪಾಠಃ

ಓ ತ್ಯೇ ನರ ಇಂದ್ರಮೂತಯೇ ಗುರ್ನೂ ಚಿತ್ತಾನ್ತ್ಸದ್ಯೋ
ಅಧ್ವನೋ ಜಗಮ್ಯಾತ್ ।
ದೇವಾಸೋ ಮನ್ಯುಂ ದಾಸಸ್ಯ ಶ್ಚಮ್ನನ್ತೇ ನ ಆ ವಕ್ಷನ್ತ್ಸುವಿ-
ತಾಯ ವರ್ಣಂ ॥ ೨ ॥

ಪದಪಾಠಃ

ಓ ಇತಿ । ತ್ಯೇ । ನರಃ । ಇಂದ್ರಂ । ಊತಯೇ । ಗುಃ । ನು । ಚಿತ್ । ತಾನ್ ।
ಸದ್ಯಃ । ಅಧ್ವನಃ । ಜಗಮ್ಯಾತ್ ।
ದೇವಾಸಃ । ಮನ್ಯುಂ । ದಾಸಸ್ಯ । ಶ್ಚಮ್ನನ್ । ತೇ । ನಃ । ಆ । ವಕ್ಷನ್ । ಸುವಿ-
ತಾಯ । ವರ್ಣಂ ।

॥ ಸಾಯಣಭಾಷ್ಯಂ ॥

ತ್ಯೇ ತೇ ನರೋ ಯಜ್ಞಸ್ಯ ನೇತಾರೋ ಯಜಮಾನಾ ಊತಯೇ ರಕ್ಷಣಾಯೇಂದ್ರಮೋ । ಆ ಉ ಇತ್ಯೇತನ್ನಿಪಾತದ್ವಯಸಮುದಾಯ ಆಕಾರಾರ್ಥಃ । ಆ ಗುಃ ಆಗಚ್ಛಂತಿ। ಸ ಚೇಂದ್ರ ಆಗತಾಂಸ್ತಾನ್ ನೂ ಚಿತ್ಕ್ಷಿಪ್ರಂ ಸದ್ಯಸ್ತದಾನೀಮೇವಾಧ್ವನೋಽನುಷ್ಠಾನಮಾರ್ಗಾಞ್ಜಗಮ್ಯಾತ್ । ಗಮಯತು । ಪ್ರಾಪಯತು । ದೇವಾಸಃ ಸರ್ವೇ ದೇವಾ ದಾಸಸ್ಯೋಪಕ್ಷಪಯಿತುರಸುರಸ್ಯ ಮನ್ಯುಂ ಕ್ರೋಧಂ ಶ್ಚಮ್ನನ್ । ಭಕ್ಷಯಂತು । ಹಿಂಸಂತ್ವಿತ್ಯರ್ಥಃ । ಅಪಿ ಚ ತೇ ದೇವಾ ನೋಽಸ್ಮಾಕಂ ಸುವಿತಾಯ ಸುಷ್ಠು ಪ್ರಾಪ್ತವ್ಯಾಯ ಯಜ್ಞಾಯ ವರ್ಣಮನಿಷ್ಟನಿವಾರಕಮಿಂದ್ರಮಾ ವಕ್ಷನ್ । ಆವಹಂತು । ಆನಯಂತು ॥ ಜಗಮ್ಯಾತ್ । ಗಮೇರಂತರ್ಭಾವಿತಣ್ಯರ್ಥಾತ್ ಲಿಜ್ ಬಹುಲಂ ಛಂದಸೀತಿ ಶಪಃ ಶ್ಲುಃ । ಶ್ಚಮ್ನನ್ । ಚಮು ಅದನೇ। ಲೇಟಿ ವ್ಯತ್ಯಯೇನ ಶ್ನಾ। ಶಕಾರೋಪಜನಶ್ಛಾಂದಸಃ। ಯದ್ವಾ। ಶ್ಚಮ್ನಾತಿಃ ಪ್ರಕೃತ್ಯಂತರಂ ಹಿಂಸಾರ್ಥಂ ದ್ರಷ್ಟವ್ಯಂ। ವಕ್ಷನ್ । ವಹ ಪ್ರಾಪಣೇ । ಲೇಟಿ ಸಿಬ್ಬಹುಲಂ ಲೇಟೀತಿ ಸಿಪ್ । ಢತ್ವಕತ್ವಷತ್ವಾನಿ । ಸುವಿತಾಯ । ಸುಪೂರ್ವಾದೇತೇಃ ಕರ್ಮಣಿ ನಿಷ್ಠಾ । ತನ್ವಾದಿತ್ವಾದುವಙ್ । ಸೂಪಮಾನಾತ್ ಕ್ತ ಇತ್ಯುತ್ತರಪದಾಂತೋದಾತ್ತತ್ವಂ । ವರ್ಣಂ । ವೃಞ್ ವರಣೇ । ಅಸ್ಮಾದಂತರ್ಭಾವಿತಣ್ಯರ್ಥಾತ್ಕೃಜ್ವೃಸಿದ್ರುಪನ್ಯನಿಸ್ವಪಿಭ್ಯೋ ನಿಚ್ಚ । ಉ. ೩-೧೦ । ಇತಿ ನಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ತ್ಯೇ ನರಃ—ಪ್ರಸಿದ್ಧರಾದ ಆ ಯಜಮಾನರು । **ಊತಯೇ**—ರಕ್ಷಣಾರ್ಥವಾಗಿ । **ಇಂದ್ರಂ**— ಇಂದ್ರನನ್ನು । **ಆ ಗುಃ**—ಸಮೀಪಿಸುತ್ತಾರೆ ( ಆ ಇಂದ್ರನು ) । **ತಾನ್**—(ತನ್ನಲ್ಲಿಗೆ ಬಂದ) ಆ ಯಜಮಾನರನ್ನು । **ನೂ ಚಿತ್**—ಜಾಗ್ರತೆಯಾಗಿ (ಖಂಡಿತವಾಗಿಯೂ) । **ಸದ್ಯಃ**—ಒಡನೆಯೇ । **ಅಧ್ವನಃ**—(ಯಜ್ಞಾನುಷ್ಠಾನದ) ಮಾರ್ಗಗಳನ್ನು । **ಜಗಮ್ಯಾತ್**—ಸೇರಿಸಲಿ । **ದೇವಾಸಃ**— ಸಕಲ ದೇವತೆಗಳೂ । **ದಾಸಸ್ಯ**— ಹಿಂಸಕನಾದ ರಾಕ್ಷಸನ । **ಮನ್ಯುಂ**—ಕ್ರೋಧವನ್ನು । **ಶ್ಚಮ್ನನ್**—ನಾಶಮಾಡಲಿ. (ಮತ್ತು) । **ತೇ**—ಆ ದೇವತೆಗಳೇ । **ನಃ**—ನಮ್ಮ । **ಸುವಿತಾಯ**—ವಿಧ್ಯುಕ್ತವಾದ ಯಜ್ಞಕ್ಕೆ । **ವರ್ಣಂ**—ಕೆಡಕನ್ನು ತಪ್ಪಿಸುವ ಇಂದ್ರನನ್ನು । **ಆ ವಕ್ಷನ್**—ಕರೆತರಲಿ ॥

ಭಾವಾರ್ಥ

ಯಜ್ಞವನ್ನು ಮಾಡುವುದರಲ್ಲಿ ಪ್ರಸಿದ್ಧರಾದ ಯಜಮಾನರು ರಕ್ಷಣಾರ್ಥವಾಗಿ ಇಂದ್ರನನ್ನು ಸಮೀಪಿಸುತ್ತಾರೆ. ಆ ಇಂದ್ರನು ತನ್ನಲ್ಲಿ ಮರೆಹೊಕ್ಕುಬಂದ ಆ ಯಜಮಾನರನ್ನು ಖಂಡಿತವಾಗಿಯೂ ಒಡನೆಯೇ ಯಜ್ಞಾನುಷ್ಠಾನದ ಮಾರ್ಗಕ್ಕೆ ಸೇರಿಸಲಿ. ಸಕಲದೇವತೆಗಳೂ ಸಹ ಹಿಂಸಕನಾದ ರಾಕ್ಷಸನ ಕ್ರೋಧವನ್ನು ನಾಶಮಾಡಲಿ ಮತ್ತು ಅದೇ ದೇವತೆಗಳೇ ನಮ್ಮ ವಿಧ್ಯುಕ್ತವಾದ ಯಜ್ಞಕ್ಕೆ ಕೆಡಕನ್ನು ತಪ್ಪಿಸಲು ಸಮರ್ಥನಾದ ಇಂದ್ರನನ್ನು ಕರೆತರಲಿ.

English Translation

These persons have come to Indra (to solicit) his protection ; may he quickly direct them on the way ; may the gods repress the wrath of the destroyer, and bring to our solemnity the obviator of evil.

॥ ವಿಶೇಷವಿಷಯಗಳು ॥

ಆ ಗುಃ—ಆಗಚ್ಛಂತಿ । ಸಮೀಪಿಸುತ್ತಾರೆ ಎಂದು ಸಾಯಣರೂ, ಆ ಇತ್ಯೇಷ ಸಮಿತ್ಯೇತಸ್ಯ ಸ್ಥಾನೇ ಮರ್ಯಾದಾಯಾಂ ವಾ । ಗಾಯತಿರಸ್ಯರ್ಚತಿಕರ್ಮಾ । ಸಂಸ್ತುವಂತಿ, ಮರ್ಯಾದಯಾ ವಾ ಸ್ತುವಂತೀತ್ಯರ್ಥಃ । ಆ ಎನ್ನುವ ಉಪಸರ್ಗವು ಸಂ ಎಂದರೆ ಸಮೀಚೀನವಾಗಿ ಎಂದಾಗಲೀ, ಅಥವಾ ಮರ್ಯಾದಾರೂಪದಲ್ಲಾಗಲಿ ಅರ್ಥವನ್ನು ಕೊಡುತ್ತದೆ. ಅರ್ಚತಿಕರ್ಮ ನಾಮಗಳಲ್ಲಿ ಪಠಿತವಾಗಿರುವ (ನಿ. ೩-೧೪) ಗಾಯತಿ ಶಬ್ದಕ್ಕೆ ಪೂಜಿಸುತ್ತಾನೆ, ಸ್ತುತಿಸುತ್ತಾನೆ ಎಂದರ್ಥವನ್ನು ಗುಃ ಎಂಬ ಪದವು ತೋರಿಸುತ್ತದೆ. ಆ ಗುಃ ಎಂದರೆ ಸಮೀಚೀನವಾಗಿ ಆರಾಧಿಸುತ್ತಾರೆ ಅಥವಾ ಪೂಜ್ಯಭಾವದಿಂದ ಸ್ತುತಿಸುತ್ತಾರೆ ಎಂದರ್ಥ. ಎರಡು ಅರ್ಥಗಳೂ ಇಲ್ಲಿಗೆ ಹೊಂದಿಕೊಂಡರೂ ಸಹ ಗಮ್ ಧಾತುವಿನ ಅರ್ಥವೇ ಹೆಚ್ಚು ಬಳಕೆಯಲ್ಲಿದ್ದು ಸಂಹಿತಾವಾಕ್ಯಗಳಲ್ಲಿ ಉಪಯೋಗಿಸುವುದರಿಂದ ಸಮೀಪಿಸುತ್ತಾರೆ ಎಂಬುದೇ ಸರಿಯಾಗಿರುತ್ತದೆ.

ಋತಸ್ಯ ದೇವಾ ಅನು ವ್ರತಾ ಗುರ್ಭುವತ್ಪರಿಷ್ಟಿರ್ದ್ಯೌರ್ನ ಭೂಮ ।
(ಋ. ಸಂ. ೧-೬೫-೨)

ಎಂಬ ಋಕ್ಕಿನಲ್ಲಿ ಅನು ಗುಃ ಎಂದರೆ ಅನ್ವೇಷ್ಟುಮಗಮನ್ ಎಂದಾಗುವಂತೆಯೂ, ,

ಮಾ ಕಸ್ಮೈ ಧಾತಮಭ್ಯಮಿತ್ರಿಣೇ ನೋ ಮಾಕುತ್ರಾ ನೋ ಗೃಹೇಭ್ಯೋ ಧೇನವೋಽಗುಃ ।
(ಋ. ಸಂ. ೧-೧೨೦-೮)

ಎಂಬಲ್ಲಿಯೂ ಗಮನಾರ್ಥವಿರುವಂತೆಯೂ ಸಹ ಈ ಋಕ್ಕಿನಲ್ಲಿಯೂ ಗಮನಾರ್ಥವೇ ಎಂದರೆ ಇಂದ್ರನನ್ನು ಸಮೀಪಿಸುತ್ತಾರೆ ಎಂಬುದೇ ಸರಿಯಾಗಿ ಕಾಣುತ್ತದೆ.

ನೂ ಚಿತ್—ನು ಇತ್ಯೇಷೋಽನೇಕಕರ್ಮಾ । ಇದಂ ನು ಕರಿಷ್ಯತೀತಿ ಹೇತ್ವಪದೇಶೇ । ಕಥಂ ನು ಕರಿಷ್ಯತೀತ್ಯನುಪೃಷ್ಟೇ (ನಿ. ೧-೪) ನು ಎನ್ನುವ ನಿಪಾತಕ್ಕೆ ಅನೇಕ ಅರ್ಥಗಳಿವೆ. ಇದಂ ನು ಕರಿಷ್ಯತಿ ಎನ್ನುವಾಗ ನು ಎನ್ನುವುದಕ್ಕೆ ಅದ್ದರಿಂದ ಎಂದು ಹೇತ್ವರ್ಥ. ಕಥಂ ನು ಕರಿಷ್ಯತಿ ಎನ್ನುವಾಗ ನು ಎನ್ನುವುದಕ್ಕೆ ಹೇಗೆ ಎಂಬ ಪ್ರಶ್ನಾರ್ಥಕ. ಹೀಗೆಯೇ, ಅಥಾಪ್ಯುಪಮಾರ್ಥೇ ಭವತಿ । ಉಪಮಾನವನ್ನು ಸೂಚಿಸುವಾಗಲೂ ಸಹ ನು ಶಬ್ದಪ್ರಯೋಗವಿದೆ. ಉದಾಹರಣೆಗೆ—

ವೃಕ್ಷಸ್ಯ ನು ತೇ ಪುರುಹೂತ ವಯಾ ವ್ಯೂತಯೋ ರುರುಹುರಿಂದ್ರ ಪೂರ್ವೀಃ ।
(ಋ. ಸಂ. ೬-೨೪-೩)

ಎಂಬ ಋಕ್ಕನ್ನು ನಿರುಕ್ತಕಾರರು ಉದಹರಿಸಿ (೧-೪) ವೃಕ್ಷಸ್ಯೇವ ತೇ ಪುರುಹೂತ ಶಾಖಾ ವೃಕ್ಷದಂತೆ ಅಥವಾ ವೃಕ್ಷದ ಶಾಖೆಗಳಂತೆ ಎಂದು ನು ಎಂಬ ಪದಕ್ಕೆ ಉಪಮಾರ್ಥವನ್ನು ಹೇಳಿದೆ. ಹೀಗೆಯೇ ಕ್ಷಿಪ್ರವಾಗಿ, ಶಾಗ್ರತೆಯಾಗಿ ಎಂಬರ್ಥವೂ ಇದೆ.

**ನೂ ಮರ್ತೋ೯ ದಯತೇ ಸನಿಷ್ಯನ್ಯೋ೯ ವಿಷ್ಣವ ಉರುಗಾಯಾಯ ದಾಶತ್ ।**
(ಋ ಸಂ. ೭-೧೦೦-೧)

ಇತ್ಯಾದಿ ಋಕ್ಕುಗಳಲ್ಲಿ **ನು** ಎನ್ನುವದಕ್ಕೆ **ಕ್ಷಿಪ್ರಂ** ಎಂದರ್ಥಮಾಡಿದ್ದಾರೆ.

**ನೂ ಇಂದ್ರ ಶೂರ ಸ್ತವಮಾನ ಊತೀ ಬ್ರಹ್ಮಜೂತಸ್ತನ್ವಾ ವಾವೃಧಸ್ವ ।**
(ಋ ಸಂ. ೭-೧೯-೧೧)

ಇವೇ ಮುಂತಾದ ಕಡೆಗಳಲ್ಲಿ ಅದ್ಯ, ಈಗ ಎಂಬರ್ಥವೂ. ಹೀಗೆಯೇ ನಿರುಕ್ತಕಾರರು **ನು ಇತ್ಯೇಷೋಽನೇಕ ಕರ್ಮಾ** (೧-೪) ಎಂದು ಹೇಳಿರುವಂತೆ ಇನ್ನೂ ಅನೇಕಾರ್ಥಗಳಿದ್ದು ಪ್ರಕೃತವಾದ ಋಕ್ಕಿನಲ್ಲಿ **ನೂ ಚಿತ್** ಎಂದರೆ ಕ್ಷಿಪ್ರವಾಗಿ ಎಂದರ್ಥವಾಗುತ್ತದೆ.

**ಜಗಮ್ಯಾತ್**—**ಜಗಮ್ಯಾತ್** ಎಂದರೆ ಉಳಿದೆಡೆಗಳಲ್ಲೆಲ್ಲಾ **ಆಗಚ್ಛತು** ಬರಲಿ ಎಂದೇ ಅರ್ಥಮಾಡಿ ಇಲ್ಲಿ ಮಾತ್ರ **ಗಮಯತು, ಪ್ರಾಪಯತು** ನಮ್ಮನ್ನು ಒಳ್ಳೆಯ ದಾರಿಗೆ ಸೇರಿಸಲಿ. ಕರೆದೊಯ್ಯಲಿ ಎಂದು ಸಾಯಣರು ಅರ್ಥಮಾಡಿದ್ದಾರೆ. ಆದರೆ ಸ್ಕಂದಸ್ವಾಮಿಗಳು ಉಳಿದೆಡೆಗಳಲ್ಲಿರುವಂತೆಯೇ **ಆಗಚ್ಛತು** ಎಂದೇ ಹೇಳಿ ಅದಕ್ಕೆ ಅನ್ವಯವನ್ನು ಹೊಂದಿಸಿಕೊಂಡು **ಅಧ್ವನಃ । ತೃತೀಯಾರ್ಥೇ ಷಷ್ಠೀ । ಸ್ವೇನಾಗಮನಮಾರ್ಗೇಣ । ಅಧ್ವನಾ** ಎಂದು ತೃತೀಯೆಗೆ ಬದಲಾಗಿ **ಅಧ್ವನಃ** ಎಂಬ ಷಷ್ಠಿಯಿದೆ. ತಾನು ಯಾವಾಗಲೂ ಬರತಕ್ಕ ಮಾರ್ಗದಿಂದ ಬರಲಿ ಎಂದರ್ಥವೆಂದು ವಿವರಿಸಿದ್ದಾರೆ.

**ದೇವಾಸಃ**—**ಸರ್ವೇ ದೇವಾಃ, ದಾಸಸ್ಯ ಉಪಕ್ಷಪಯಿತುಃ ಅಸುರಸ್ಯ, ಮನ್ಯುಂ ಕ್ರೋಧಂ, ಶ್ನಥಿಷ್ಣನ್ ಭಕ್ಷಯಂತು ।** ಸಕಲದೇವತೆಗಳೂ ಸಹ ಹಿಂಸಾಕಾರಕನಾದ ಅಸುರನ ಕ್ರೋಧವನ್ನು ನಾಶಮಾಡಲಿ ಎಂದು ಸಾಯಣರೂ,

ದೇವಾಸಃ—**ದೇವಶಬ್ದೋಽತ್ರ ದೀವ್ಯತೇಃ ಸ್ತುತ್ಯರ್ಥಸ್ಯ ಸ್ತೋತೃವಚನಃ । ಯೇ ಸ್ತೋತಾರಃ ಕ್ರೋಧಂ ದಾಸಸ್ಯ ಉಪಕ್ಷಯಿತವ್ಯಸ್ಯ ಶತ್ರೋಃ ಶ್ನಥಿಷ್ಣನ್ । ಇಂದ್ರಪ್ರಸಾದೇನ ಭಕ್ಷಯಂತಿ । ಇಂದ್ರ-ಪ್ರಸಾದೇನ ಕ್ರುದ್ಧಮಪಿ ಶತ್ರುಂ ಅಯತ್ನೇನೈವ ತ್ರಾಸಯಂತೀತ್ಯರ್ಥಃ ।** ಇಲ್ಲಿ **ದೇವಶಬ್ದಕ್ಕೆ ಸ್ತೋತೃ**ಗಳೆಂದರ್ಥ. ಇಂದ್ರನ ಅನುಗ್ರಹದಿಂದ ಭಕ್ತರಾದ ಸ್ತೋತೃಗಳು ಕುಪಿತನಾದ ಶತ್ರುವನ್ನೂ ಸಹ ಶ್ರಮವಿಲ್ಲದೇ ಭಯಪಡಿಸಿ ಅವನನ್ನು ಹಿಂಸಿಸುತ್ತಾರೆ ಎಂದು ಸ್ಕಂದಸ್ವಾಮಿಗಳೂ ಸಹ ಈ ಸನ್ನಿವೇಶವನ್ನು ವಿವರಿಸಿದ್ದಾರೆ.

**ಶ್ನಥಿಷ್ಣನ್**—ಭಕ್ಷಣಾರ್ಥವಾಗಲಿ, ಹಿಂಸಾರ್ಥವಾಗಲಿ ಎರಡು ಅಭಿಪ್ರಾಯವೂ ಸಹ ಶತ್ರುಮರ್ದನದಲ್ಲಿ ತಾತ್ಪರ್ಯವನ್ನು ಕೊಡುತ್ತವೆ

**ತೇ ನಃ ಸುವಿತಾಯ ವರ್ಣಂ ಆ ವಕ್ಷನ್** । ಆ ದೇವತೆಗಳು ಅವರ ಆಗಮನಕ್ಕೆ ಯೋಗ್ಯವಾದ ನಮ್ಮ ಯಜ್ಞಕ್ಕೆ ಇಂದ್ರನನ್ನು ಕರೆತರಲಿ ಎಂದು ಸಾಯಣರು ವಿವರಿಸಿ **ಸುವಿತಾಯ** ಎಂಬ ಪದಕ್ಕೆ **ಸುಷ್ಠು ಗಂತವ್ಯಾಯ ಯಜ್ಞಾಯ** ಎಂದೂ; **ವರ್ಣಂ** ಎಂಬ ಪದಕ್ಕೆ **ಅನಿಷ್ಟನಿವಾರಕಮಿಂದ್ರಂ ।** ಅನಿಷ್ಟವನ್ನು ನಾಶ ಮಾಡತಕ್ಕ ಇಂದ್ರನನ್ನು ಎಂದೂ ತಾತ್ಪರ್ಯವನ್ನು ಹೇಳಿದ್ದಾರೆ.

ಸ್ಕಂದಸ್ವಾಮಿಗಳು **ಸುವಿತಾಯ** ಎಂಬ ಪದಕ್ಕೆ **ಸುಗಮನಾಯ ।** ಶ್ರೇಷ್ಠವಾದ ಗಮನಕ್ಕಾಗಿ. **ತೇ ನಃ—ಅಸ್ಮಾಕಂ ಸ್ವಭೂತಾಃ ಪುತ್ರಪೌತ್ರಾದಯ ಋತ್ವಿಜೋ ವಾ ಆ ವಕ್ಷನ್ ನಿತ್ಯಮಾವಹಂತ್ವಿತ್ಯಾಶಾಸ್ಮಹೇ ।** ತೇ ಎನ್ನುವಪದಕ್ಕೆ ನಮ್ಮ ಪುತ್ರಪೌತ್ರಾದಿಗಳು ಅಥವಾ ನಮಗೆ ಸೇರಿದಋತ್ವಿಕ್ಕುಗಳು ಶ್ರೇಷ್ಠನಾದ ಇಂದ್ರನನ್ನು ಯಾವಾಗಲೂ ಕರೆತರಲಿ ಎಂದು ಒಂದುವಿಧವಾಗಿಯೂ **ಅಥವಾ ದೇವಾ ಅತ್ರ ಮರುತೋಽಭಿಪ್ರೇತಾನಸ್ತೋತಾರಃ। ಯೋ ದೇವಾ ಮರುತಃ ದಾಸಸ್ಯ ಮನ್ಯುಂ ಶ್ಚಮ್ನನ್ ತೇಽಪಿ ಇಂದ್ರೇಣ ಸಹ ನಃ ಆ ವಕ್ಷನ್ ।** ಇಲ್ಲಿ **ದೇವಾಃ** ಎಂದರೆ ಸ್ತೋತೃಗಳಲ್ಲ; ಮರುತ್ತುಗಳೆಂದರ್ಥ. ಯಾವ ಮರುತ್ತುಗಳು ಇಂದ್ರನೊಡನೆ ಶತ್ರುವಿನ ಕ್ರೋಧವನ್ನು ನಾಶಮಾಡಿದರೋ ಆ ಮರುತ್ತುಗಳೂ ಸಹ ಇಂದ್ರನೊಡನೆ ನಮ್ಮ ಯಜ್ಞಕ್ಕೆ ಬರಲಿ ಎಂದು ಇನ್ನೊಂದು ವಿಧವಾಗಿಯೂ ಅರ್ಥಮಾಡಿದ್ದಾರೆ.

**ಇಂದ್ರೇಣ ಸಂ ಹಿ ದೃಕ್ಷಸೇ ಸಂಜಗ್ಮಾನೋ ಅಭಿಭ್ಯುಷಾ ।**
**ಮಂದೂ ಸಮಾನವರ್ಚಸಾ ॥**
(ಋ. ಸಂ. ೧-೬-೭)

ಇತ್ಯಾದಿ ಋಕ್ಕುಗಳಲ್ಲಿ ಮರುತ್ತುಗಳೊಡನೆ ಇಂದ್ರನ ವೈಭವವನ್ನೂ ಸಂತೃಪ್ತಿಯನ್ನೂ ವರ್ಣಿಸಿ ಸ್ತುತಿಸಿರುವುದರಿಂದ ಅದರಂತೆಯೇ ಇಲ್ಲಿಯೂ ಸಹ ಒಟ್ಟಿಗೆ ಹ್ವಾನವಿರಬಹುದು. ಆದುದರಿಂದ **ತೇ ನ ಆ ವಕ್ಷನ್ತು ವಿತ್ವಾಯ ವರ್ಣಂ** ಎಂಬ ಪಾದಕ್ಕೆ ಮೇಲಿನ ಮೂರು ವಿಧವಾದ ಅರ್ಥಗಳಲ್ಲಿ ಎಲ್ಲವೂ ಸಂದರ್ಭಾನುಸಾರವಾಗಿ ಹೊಂದಿಕೊಳ್ಳುತ್ತವೆ.

॥ ವ್ಯಾಕರಣಪ್ರಕ್ರಿಯಾ ॥

**ಗುಃ**—ಇಙ್ ಗತೌ ಧಾತು. ಅದಾದಿ. **ಛಂದಸಿ ಲುಙ್‌ಲಙ್‌ಲಿಟಃ**—(ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್. **ಇಣೋ ಗಾ ಲುಙಿ**—(ಪಾ. ಸೂ. ೨-೪-೪೫) ಎಂಬುದರಿಂದ ಧಾತುವಿಗೆ ಗಾದೇಶ. **ಗಾತಿಸ್ಥಾಘುಪಾ**—(ಪಾ. ಸೂ. ೨-೪-೭೭) ಎಂಬುದರಿಂದ ಲುಙಿನಲ್ಲಿ ಪ್ರಾಪ್ತವಾದ ಚ್ಲಿಗೆ ಲುಕ್. ಪ್ರಥಮಪುರುಷಬಹುವಚನಾಂತರೂಪ. **ಬಹುಲಂಛಂದಸ್ಯಮಾಙ್‌ಯೋಗೇಽಪಿ** — ಎಂಬುದರಿಂದ ಅಡಾಮ ಬರುವುದಿಲ್ಲ.

**ನು—ಋಚಿತುನುಘ**—(ಪಾ. ಸೂ. ೬-೩-೧೩೩) ಎಂಬುದರಿಂದ ಸಂಹಿತಾವಲ್ಲಿ ದೀರ್ಘ ಬರುತ್ತದೆ.

**ಜಗಮ್ಯಾತ್**—ಗಮ್‌ಲೃಗತೌ. ಧಾತು. ಪ್ರೇರಣಾರ್ಥವುಳ್ಳದರಿಂದ ಅಂತರ್ಭಾವಿತಣ್ಯರ್ಥಕವಾದ ಈ ಧಾತುವಿಗೆ ಲಿಙಿನಲ್ಲಿ **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ** (ಪಾ. ಸೂ. ೬-೧-೧೦) ಎಂಬುದರಿಂದ ಧಾತುವಿಗೆ ದ್ವಿತ್ವ. **ಕುಹೋಶ್ಚುಃ** (ಪಾ. ಸೂ. ೭-೪-೬೨) ಎಂಬುದರಿಂದ ಅಭ್ಯಾಸಕ್ಕೆ ಆದಿಹಲ್‌ಶೇಷ ಬಂದಾಗ ಚುತ್ವದಿಂದ ಜಕಾರಾದೇಶ. ಪ್ರಥಮಪುರುಷ ಏಕವಚನದಲ್ಲಿ ತಿಪಿನ ಇಕಾರಕ್ಕೆ ಲೋಪ. **ಯಾಸುಟ್‌ಪರ**—(ಪಾ. ಸೂ. ೩-೪-೧೦೩) ಎಂಬುದರಿಂದ ಅದಕ್ಕೆ ಯಾಸುಟಾಗಮ. ಜಗಮ್ಯಾತ್ ಎಂದು ರೂಪವಾಗುತ್ತದೆ. ಅತಿಙಂತದ ಪದಾತ್ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದೇವಾಸಃ**— **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಜಸಿಗೆ ಅಸುಕಾಗುವು.

**ಮನ್ಯುಮ್**—ಮನು ಅವಬೋಧನೇ. ಧಾತು. **ಯಜಿಮನಿಶುಂ**—(ಉ. ಸೂ. ೩-೨೦೦) ಎಂಬುದರಿಂದ ಯುಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಶ್ಚಮ್ನನ್**— ಚಮು ಅದನೇ ಧಾತು. ಲೇಟ್ ಪ್ರಥಮಪುರುಷಬಹುವಚನವಲ್ಲಿ ಝಪ್ರತ್ಯಯ **ಝೋಂತಃ** ಎಂಬುದರಿಂದ ಅಂತಾದೇಶ. **ಇತಶ್ಚ ಲೋಪಃ ಪರಸ್ಮೈಪದೇಷು** (ಪಾ ಸೂ. ೩-೪-೯೭) ಎಂಬುದರಿಂದ ಅಂತ್ಯ ಇಕಾರಕ್ಕೆ ಲೋಪ. **ವ್ಯತ್ಯಯೋ ಬಹುಲಂ** ಎಂಬುದರಿಂದ ಶ್ನಾವಿಕರಣ. **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ಅದರ ಆಕಾರಕ್ಕೆ ಲೋಪ. ಛಾಂದಸವಾಗಿ ಧಾತುವಿಗೆ ಶಕಾರಾಗಮ. ಸಂಯೋಗಾಂತಲೋಪದಿಂದ ಪ್ರತ್ಯಯಾಂತತಕಾರಲೋಪ. ಶ್ಚಮ್ನನ್ ಎಂದು ರೂಪವಾಗುತ್ತದೆ. ಅಥವಾ ಶ್ಚಮು ಧಾತುವು ಬೇರೊಂದು ಹಿಂಸಾರ್ಥದಲ್ಲಿ ಇದೆಯೆಂದು ಊಹಿಸಬೇಕು.

**ವಕ್ಷನ್**—ವಹ ಪ್ರಾಪಣೇ ಧಾತು. ಲೇಟ್ ಪ್ರಥಮಪುರುಷಬಹುವಚನವಲ್ಲಿ ಝಪ್ರತ್ಯಯ. ಅದಕ್ಕೆ ಹಿಂದಿನಂತೇ ಪ್ರಕ್ರಿಯಾ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಧಾತುವಿಗೆ ಸಿಪ್. **ಹೋಢಃ** ಎಂಬುದರಿಂದ ಧಾತುವಿನ ಹಕಾರಕ್ಕೆ ಢತ್ವ. **ಷಢೋಃಕಃಸಿ** (ಪಾ. ಸೂ. ೮-೨-೪೧) ಎಂಬುದರಿಂದ ಸಕಾರ ಪರದಲ್ಲಿರುವುದರಿಂದ ಢಕಾರಕ್ಕೆ ಕತ್ವ. **ಆದೇಶಪ್ರ**— ಎಂಬುದರಿಂದ ಸಕಾರಕ್ಕೆ ಷತ್ವ. ವಕ್ಷನ್ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸುವಿತಾಯ**—ಇಣ್ ಗತೌ ಧಾತು. ಇದಕ್ಕೆ ಕರ್ಮಣಿಯಲ್ಲಿ **ನಿಷ್ಠಾ** ಎಂಬುದರಿಂದ ಕ್ತಪ್ರತ್ಯಯ. ಇತ ಎಂದು ರೂಪವಾಗುತ್ತದೆ. ಸು+ಇತ ಎಂದಿರುವಾಗ ತನ್ವಾದಿಯಲ್ಲಿ ಸೇರಿರುವುದರಿಂದ ಉಕಾರಕ್ಕೆ ಉವಙಾದೇಶ. **ಸೂಪಮಾನಾತ್ ಕ್ತಃ** (ಪಾ ಸೂ. ೬-೨-೪೫) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ವರ್ಣಮ್**—ವೃಞ್ ವರಣೇ. ಧಾತು. ಅಂತರ್ಭಾವಿತಣ್ಯರ್ಥಕವಾದ ಧಾತು. ಇದಕ್ಕೆ ಕೃಜ್ಯಾವೃಸಿದ್ರು ಪನ್ಯನಿಸ್ವಪಿಭ್ಯೋ ನಿಚ್ಚ (ಉ. ಸೂ. ೩-೨೯೦) ಎಂಬುದರಿಂದ ನಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ-ಇಕಿಗೆ ಗುಣ. **ಉರಣ್ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ. ರೇಫನಿಮಿತ್ತವಾತ ಪ್ರತ್ಯಯಕ್ಕೆ ಣತ್ವ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ ॥ ೨ ॥



ಸಂಹಿತಾಪಾಠಃ

ಅವ ತ್ಮನಾ ಭರತೇ ಕೇತವೇದಾ ಅವ ತ್ಮನಾ ಭರತೇ ಫೇನಮು-
ದನ್ ।
ಕ್ಷೀರೇಣ ಸ್ನಾತಃ ಕುಯವಸ್ಯ ಯೋಷೇ ಹತೇ ತೇ ಸ್ಯಾತಾಂ
ಪ್ರವಣೇ ಶಿಫಾಯಾಃ ॥ ೩ ॥

ಪದಪಾಠಃ

ಅವ । ತ್ಮನಾ । ಭರತೇ । ಕೇತಽವೇದಾಃ । ಅವ । ತ್ಮನಾ । ಭರತೇ । ಫೇನಂ ।
ಉದನ್ ।
ಕ್ಷೀರೇಣ । ಸ್ನಾತಃ । ಕುಯವಸ್ಯ । ಯೋಷೇ ಇತಿ । ಹತೇ ಇತಿ । ತೇ ಇತಿ ।
ಸ್ಯಾತಾಂ । ಪ್ರವಣೇ । ಶಿಫಾಯಾಃ ॥ ೩ ॥

॥ ಸಾಯಣಭಾಷ್ಯಂ ॥

ಕೇತವೇದಾಃ ಕೇತಂ ಜ್ಞಾತಂ ವೇದಃ ಪರೇಷಾಂ ಧನಂ ಯೇನ ಸ ತಾದೃಶಃ ಕುಯವನಾಮಾಸುರಸ್ತ್ಮನಾತ್ಮನಾ ಸ್ವಯಮೇವಾವ ಭರತೇ । ಜ್ಞಾತಂ ಪರೇಷಾಂ ಧನಮುಪಹರತಿ । ಅಪಿ ಚ ಸೋಽಸುರ ಉದನ್ನುದಕೇಽಂತರ್ವರ್ತಮಾನಃ ಸನ್ಫೇನಂ ಫೇನಯುಕ್ತಮುದಕಮಾತ್ಮನಾ ಸ್ವಯಮೇವಾವ ಭರತೇ । ಅಪಹರತಿ । ಕ್ಷೀರೇಣ ಕ್ಷರಣಶೀಲೇನ ತೇನಾಪಹೃತೇನೋದಕೇನ ಕುಯವಸ್ಯಾಸುರಸ್ಯ ಯೋಷೇ ಭಾರ್ಯೇ ಸ್ನಾತಃ । ಸ್ನಾನಂ ಕುರ್ವಾತೇ । ತಾದೃಶ್ಯೌ ಸ್ತ್ರಿಯೌ ಶಿಫಾಯಾಃ । ಶಿಫಾ ನಾಮ ನದೀ । ತಸ್ಯಾಃ ಪ್ರವಣೇ ನಿಮ್ನೇ ಪ್ರವೇಷ್ಟುಮಶಕ್ಯೇಽಗಾಧಪ್ರದೇಶೇ ಹತೇ ನಷ್ಟೇ ಸ್ಯಾತಾಂ । ಭವೇತಾಂ । ಹೇ ಇಂದ್ರ ತ್ವಂ ಪರೇಷಾಂ ಧನಮುಪಹೃತ್ಯಾನ್ಯೈರ್ದುರವಗಾಹ ಉದಕಸ್ಯ ಮಧ್ಯೇ ವರ್ತಮಾನಂ ಕುಯವಂ ಸಕುಟುಂಬಮುವಧೀರಿತ್ಯರ್ಥಃ ॥ ತ್ಮನಾ । ಮಂತ್ರೇಷ್ವಾಙ್ಯಾದೇರಾತ್ಮನ ಇತ್ಯಾಕಾರಲೋಪಃ । ಭರತೇ । ಹೃಞ್ ಹರಣೇ । ಹೃಗ್ರಹೋರ್ಭ ಇತಿ ಭತ್ವಂ । ಕೇತವೇದಾಃ । ಕಿತ ಜ್ಞಾನೇ । ಕರ್ಮಣಿ ಘಞ್ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಉದನ್ । ಪದ್ದನ್ನಿತ್ಯಾದಿನೋದಕಶಬ್ದಸ್ಯೋದನ್ನಾದೇಶಃ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ ॥

ಪ್ರತಿಪದಾರ್ಥ

**ಕೇತವೇದಾಃ**— (ಇತರರ) ಧನದ ರಹಸ್ಯವನ್ನು ತಿಳಿದ (ಕುಯವನೆಂಬ) ಅಸುರನು। **ತ್ಮನಾ**—ತಾನಾಗಿಯೇ। **ಅವ ಭರತೇ**—(ಆ ಧನವನ್ನು) ಅಪಹರಿಸುತ್ತಾನೆ. । **ಉದನ್**—ನೀರಿನಲ್ಲಿದ್ದುಕೊಂಡು । **ಫೇನಂ**—ನೊರೆಯೊಡನೆ ಕೂಡಿದ ನೀರನ್ನು। **ಅವ ಭರತೇ**—ತಾನೇ ಅಪಹರಿಸುತ್ತಾನೆ। **ಕ್ಷೀರೇಣ**—(ಅವನಿಂದ ಅಪಸ್ಪೃತವಾದ) ಹರಿಯುವ ನೀರಿನಲ್ಲಿ। **ಕುಯವಸ್ಯ**—ಕುಯವನ। **ಯೋಷೇ**—ಹೆಂಡತಿಯರಿಬ್ಬರೂ। **ಸ್ನಾತಃ**—ಸ್ನಾನಮಾಡುತ್ತಾರೆ. । **ತೇ**—ಅವರಿಬ್ಬರೂ। **ಶಿಫಾಯಾಃ**—ಶಿಫಾ ಎಂಬ ನದಿಯ। **ಪ್ರವಣೇ**—ಅಗಾಧವಾದ ಪ್ರವಾಹದಲ್ಲಿ। **ಹತೇ ಸ್ಯಾತಾಂ**—ನಷ್ಟರಾಗಿ ಹೋಗಲಿ।

ಭಾವಾರ್ಥ

ಇತರರ ಧನದ ರಹಸ್ಯವನ್ನು ತಿಳಿದ ಕುಯವನೆಂಬ ಅಸುರನು ತಾನೇ ಬಂದು ಆ ಧನವನ್ನು ಅಪಹರಿಸುತ್ತಾನೆ. ಮತ್ತು ನೀರಿನಲ್ಲಿದ್ದುಕೊಂಡು ನೊರೆಯೊಡನೆ ಕೂಡಿದ ನೀರನ್ನು ತಾನೇ ಅಪಹರಿಸುತ್ತಾನೆ. ಅವನಿಂದ ಅಪಸ್ಪೃತವಾದ ಹರಿಯುವ ನೀರಿನಲ್ಲಿ ಕುಯವನ ಹೆಂಡತಿಯರಿಬ್ಬರೂ ಸ್ನಾನವನ್ನು ಮಾಡುತ್ತಾರೆ. ಎಲೈ ಇಂದ್ರನೇ, ಕುಯವನ ಆ ಇಬ್ಬರು ಹೆಂಡಿರೊಡನೆಯೂ ಶಿಫಾನದಿಯ ಅಗಾಧವಾದ ಪ್ರವಾಹದಲ್ಲಿ ಮುಳಿಗಿ ನಷ್ಟವಾಗಿ ಹೋಗುವಂತೆ ಮಾಡು.

English Translation

(The Asura) knowing the wealth of others, carries it off of himself; present in the water, he carries off, of himself, the foam ; the two wives of Kuyava bathe with the water : may they be drowned in the depths of the Sipha river.

॥ ವಿಶೇಷವಿಷಯಗಳು ॥

**ಕೇತವೇದಾಃ—ಕೇತಂ ಜ್ಞಾತಂ ವೇದಃ ಪರೇಷಾಂ ಧನಂ ಯೇನ ಸ ತಾದೃಶಃ ಕುಯವನಾಮಾಸುರಃ।** ಇತರರ ಧನವನ್ನು ಎಷ್ಟು ಗುಪ್ತವಾಗಿಟ್ಟದ್ದರೂ ಸಹ ಅದರ ರಹಸ್ಯವನ್ನು ತಿಳಿಯತಕ್ಕ ಕುಯವನೆಂಬ ಅಸುರನ ಮಾಯಾಶಕ್ತಿಯನ್ನು ಈ ವಿಶೇಷಣವು ವರ್ಣಿಸುತ್ತದೆ. ಕುಯವನ ವಿಷಯವನ್ನು ಹಿಂದಿನ ಸೂಕ್ತದ ಎಂಟನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ.

**ಅವ ಭರತೇ**—ಭೃ ಧಾತುವಿಗೆ ಅವ ಎಂಬ ಉಪಸರ್ಗವನ್ನು ಸೇರಿಸಿದರೆ ಅಪಹರಿಸು ಎಂದು ಅರ್ಥವಾಗುತ್ತದೆ. ಆದರೆ ಇದಲ್ಲದೆ ಇನ್ನೂ ಕೆಲವು ಅರ್ಥಗಳೂ ಸಾಧ್ಯವಾಗಿ ಬೇರೆ ಬೇರೆ ಅರ್ಥಗಳಲ್ಲಿಯೂ ಈ ಪದದ ಪ್ರಯೋಗವಿದೆ. ಉದಾಹರಣೆಗೆ—

ಅವ ಪ್ರಿಯಮರ್ಶಸಾನಸ್ಯ ಸಾಹ್ವಾಞ್ಛಿರೋ ಭರದ್ದಾಸಸ್ಯ ಸ್ವಧಾವಾನ್ ।
(ಋ. ಸಂ. ೨-೨೦-೬)

ಎಂಬ ಋಕ್ಕಿನಲ್ಲಿ **ಅವ ಭರತ್** ಎಂದರೆ **ಅಧಃ ಪಾತಯತು** ಅಸುರನ ತಲೆಯನ್ನು ಕೆಳಕ್ಕೆ ಬೀಳಿಸಲಿ ಎಂದರ್ಥವಾಗಿದೆ. (ಋ. ಸಂ. ೫-೩೧-೧೨ ; ೮-೧೯-೨೩ನೇ ಋಕ್ಕುಗಳನ್ನು ನೋಡಿ) ಮತ್ತು

**ತ್ವಂ ಮಖಸ್ಯ ದೋಧತಃ ಶಿರೋಽವ ತ್ವಚೋ ಭರಃ ।**
(ಋ. ಸಂ. ೧೦-೧೭೧-೨)

ಎಂಬ ಋಕ್ಕಿನಲ್ಲಿ **ಅವ ಭರಃ** ಎನ್ನುವುದಕ್ಕೆ **ಹೃತವಾನಸಿ** ಎಂದರೆ ಛೇದನವನ್ನು ಮಾಡಿದ್ದೀಯೆಂದು ತಾತ್ಪರ್ಯ. ಹೀಗೆಯೇ ಸನ್ನಿವೇಶಗಳಿಗನುಗುಣವಾಗಿ ಅರ್ಥವಾಗಿ ಪ್ರಕೃತವಾದ ಋಕ್ಕಿನಲ್ಲಿ **ಅವ ಭರತೇ** ಎಂದರೆ ಅಪಹರಿಸುತ್ತಾನೆ ಸಕಲರ ಧನವನ್ನೂ ಅಪಹರಿಸುತ್ತಾನೆ ಎಂದರ್ಥ.

**ಶಿಫಾಯಾಃ—ಶಿಫಾ ನಾಮ ಅಸುರಸ್ಯ ಪುರ್ಯಾಂ ನದೀ ।** ಶಿಫೆಯೆಂಬುದು ಅಸುರನ ಪಟ್ಟಣದಲ್ಲಿನ ನದಿಯ ಹೆಸರು. ಆ ನದಿಯ ಹೆಸರು ಇನ್ನೆಲ್ಲೂ ಹೇಳಲ್ಪಟ್ಟಿಲ್ಲ.

**ಪ್ರವಣೇ— ನಿಮ್ನೇ ಪ್ರವೇಷ್ಟುಮಶಕ್ಯೇ ಅಗಾಧಪ್ರದೇಶೇ** ಇತರರಿಂದ ಪ್ರವೇಶಿಸಲು ಸಾಧ್ಯವಿಲ್ಲದುದೂ ಕಡಿದಾದುದೂ ಆದ ಪ್ರವಾಹದ ಮಧ್ಯಭಾಗದಲ್ಲಿ.

**ಕ್ಷೀರೇಣ—ಕ್ಷರಣಶೀಲೇನ ತೇನಾಪಹೃತೇನ ಉದಕೇನ ।** ಹರಿಯುವ ಸ್ವಭಾವವುಳ್ಳದ್ದೂ ಆದರೆ ಕುಯವನಿಂದ ಅಪಹರಿಸಲ್ಪಟ್ಟುದೂ ಆದ ಉದಕದಲ್ಲಿ.

ವ್ಯಾಕರಣಪ್ರಕ್ರಿಯಾ

**ತ್ಮನಾ**—ಆತ್ಮನಾ ಎಂದು ಇರುವಾಗ **ಮಂತ್ರೇಷ್ವಾಙ್ಯಾದೇರಾತ್ಮನಃ** (ಪಾ. ಸೂ. ೬-೪-೧೪೧) ಎಂಬುದರಿಂದ ಆಕಾರಕ್ಕೆ ಲೋಪ.

**ಭರತೇ**— ಹೃಞ್ ಹರಣೇ. ಧಾತು. ಲಟ್ ಪ್ರಥಮಪುರುಷಏಕವಚನರೂಪ. **ಹೃಗ್ರಹೋರ್ಭಶ್ಛಂದಸಿ** ಎಂಬ ವಚನದಿಂದ ಛಂದಸ್ಸಿನಲ್ಲಿ ಹಕಾರಕ್ಕೆ ಭಕಾರಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ.

**ಕೇತವೇದಾಃ**—ಕಿತ ಜ್ಞಾನೇ. ಧಾತು. ಕರ್ಮಣಿಯಲ್ಲಿ ಘಞ್ ಪ್ರತ್ಯಯ. **ಪುಗಂತಲಘೂಪಧಸ್ಯ ಚ** ( ಪಾ. ಸೂ. ೭-೩-೮೬ ) ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ಕೇತಂ ವೇದಃ ಯೇನ ಸಃ ಕೇತವೇದಾಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿ ಸ್ವರ ಬರುತ್ತದೆ. ಕೇತ ಶಬ್ದವು ಞಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಉದನ್**— ಉದಕ ಶಬ್ದ. ಸಪ್ತಮೀ ಏಕವಚನಪರವಾದಾಗ **ಪದ್ದನ್ನೋಮಾಸ್**— (ಪಾ. ಸೂ. ೬-೧-೬೩) ಎಂಬುದರಿಂದ ಪ್ರಕೃತಿಗೆ ಉದನ್ ಆದೇಶ. **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಸಪ್ತಮಿಗೆ ಲುಕ್.

ಸ್ನಾತಃ—ಷ್ಣಾ ಶೌಚೇ ಧಾತು. ಧಾತ್ವಾದೇಃ ಷಃ ಸಃ ಎಂಬುದರಿಂದ ಆದಿಗೆ ಸತ್ವ. ಲಟ್ ಪ್ರಥಮ ಪುರುಷ ದ್ವಿವಚನದಲ್ಲಿ ತಸ್ ಪ್ರತ್ಯಯ. ಅದಿಪ್ರಭೃತಿಭ್ಯಃ ಶಪಃ ಎಂಬುದರಿಂದ ಶಪಿಗೆ ಲುಕ್. ಆಶಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ ॥ ೩ ॥

———— :೦: ————

। ಸಂಹಿತಾಪಾಠಃ ।

ಯುಯೋಪ ನಾಭಿರುಪರಸ್ಯಾಯೋಃ ಪ್ರ ಪೂರ್ವಾಭಿಸ್ತಿರತೇ
ರಾಷ್ಟಿ ಶೂರಃ ।
ಅಂಜಸೀ ಕುಲಿಶೀ ವೀರಪತ್ನೀ ಪಯೋ ಹಿನ್ವಾನಾ ಉದಭಿರ್ಭ-
ರಂತೇ ॥ ೪ ॥

॥ ಪದಪಾಠಃ ॥

ಯುಯೋಪ । ನಾಭಿಃ । ಉಪರಸ್ಯ । ಆಯೋಃ । ಪ್ರ । ಪೂರ್ವಾಭಿಃ । ತಿರತೇ ।
ರಾಷ್ಟಿ । ಶೂರಃ ।
ಅಂಜಸೀ । ಕುಲಿಶೀ । ವೀರಽಪತ್ನೀ । ಪಯಃ । ಹಿನ್ವಾನಾಃ । ಉದಽಭಿಃ । ಭ-
ರಂತೇ ॥ ೪ ॥

ಸಾಯಣಭಾಷ್ಯಂ

ಉಪರಸ್ಯೋದಕಮಧ್ಯ ಉಪ್ತಸ್ಯಾವಸ್ಥಿತಸ್ಯಾಯೋಃ ಪರೇಷಾಮುಪದ್ರವಾರ್ಥಮಿತಸ್ತತೋ ಗಚ್ಛತೇಃ ಕುಯವಸ್ಯಾಸುರಸ್ಯ ನಾಭಿಃ ಸಂನದ್ಧಮಾವಸನಸ್ಥಾನಂ ಯುಯೋಪ । ಗೂಢಮಾಸೀತ್ । ಯಥಾ-

ಸ್ಯೈರ್ನ ದೃಶ್ಯತೇ ಸೋಽಸುರಸ್ತಥಾಕರೋದಿತ್ಯರ್ಥಃ । ಅಪಿ ಚ । ಪೂರ್ವಾಭಿಃ ಪೂರಯಿತ್ರೀಭಿರಾತ್ಮನಾಪಹೃತಾಭಿರದ್ಭಿಃ ಪ್ರತಿರತೇ । ಸೋಽಸುರಃ ಪ್ರವರ್ಧತೇ । ಸ ಚ ಶೂರಃ ಶೌರ್ಯೋಪೇತೋ ರಾಷ್ಟಿ । ರಾಜತೇ ಚ । ಆತ್ಮೀಯೇನ ಶೌರ್ಯೇಣ ಲೋಕೇ ಪ್ರಖ್ಯಾತೋ ಭವತೀತ್ಯರ್ಥಃ । ತಮಿಮಮಸುರಮಂಜಸ್ಯಾಂಜಸ್ಯೋಪೇತಾ ಕುಲಿಶೀ ಕುಲಂ ಶಾತಯಂತೀ ವೀರಪತ್ನೀ ವೀರಸ್ಯ ಪಾಲಯಿತ್ರೀ । ಏತತ್ಸಂಜ್ಞಿಕಾಸ್ತಿಸ್ರೋನದ್ಯಃ ಪಯಃ ಪಯಸಾ ತತ್ಸಂಬಂಧಿನಾ ಸಾರಭೂತೇನೋದಕೇನ ಹಿನ್ವಾನಾಃ ಪ್ರೀಣಯಂತ್ಯ ಉದಭಿರಾತ್ಮೀಯೈರುದಕೈರ್ಭರಂತೇ । ಧಾರಯಂತಿ ॥ ಯುಯೋಪ । ಯುಪ ವಿಮೋಹನೇ । ನಾಭಿಃ । ನಹೋ ಭಶ್ಚ । ಉ. ೪-೧೨೫ । ಇತೀಞ್ಪ್ರತ್ಯಯಃ । ರಾಷ್ಟಿ । ರಾಜೃ ದೀಪ್ತೌ । ಬಹುಲಂ ಛಂದಸೀತಿ ಶಪೋ ಲುಕ್ । ವ್ರಶ್ಚಾದಿನಾ ಷತ್ವೇ ಷ್ಟುತ್ವಂ ಪಯಃ । ಸುಪಾಂ ಸುಲುಗಿತಿ ತೃತೀಯಾಯಾ ಲುಕ್ । ಹಿನ್ವಾನಾಃ । ಹಿವಿಃ ಪ್ರೀಣನಾರ್ಥಃ । ಇದಿತ್ವಾನ್ನುಮ್ । ಅಸ್ಮಾತ್ತಾಚ್ಛೀಲಿಕಶ್ಚಾನಶ್ । ಆಗಮಾನುಶಾಸನಸ್ಯಾನಿತ್ಯತ್ವಾನ್ಮುಗಭಾವಃ । ಚಾನಶೋ ಲಸಾರ್ವಧಾತುಕತ್ವಾಭಾವಾತ್ತತ್ಸ್ವರಾಭಾವೇ ಚಿತ್ಸ್ವರ ಏವ ಶಿಷ್ಯತೇ ॥ ೪

ಪ್ರತಿಪದಾರ್ಥ

ಉಪರಸ್ಯ— ನೀರಿನ ಮಧ್ಯದಲ್ಲಿ ಇರತಕ್ಕ । ಅಯೋಃ— (ಇತರರನ್ನು ಹಿಂಸಿಸಲು) ಅಲೆದಾಡುವ ಕುಯವನೆಂಬ ಅಸುರನ । ನಾಭಿಃ—ವಾಸಸ್ಥಾನವು । ಯುಯೋಪ – ಗೂಢವಾಗಿದ್ದಿತು । ಪೂರ್ವಾಭಿಃ—ಹಿಂದೆ ತಾನು ಅಪಹರಿಸಿದ ನೀರುಗಳಿಂದ । ಪ್ರ ತಿರತೇ—(ಅವನು) ವೃದ್ಧಿಯನ್ನು ಹೊಂದುತ್ತಾನೆ । ಶೂರಃ—ಪರಾಕ್ರಮಿಯಾದ ಅವನು । ರಾಷ್ಟಿ—(ಲೋಕಕ್ಕೆಲ್ಲಾ) ಪ್ರಸಿದ್ಧನಾಗುವಂತೆ ಬೆಳಗುತ್ತಾನೆ । ಅಂಜಸೀ—ಅಂಜಸೀ ನದಿಯೂ ಕುಲಿಶೀ—ಕುಲಿಶೀ ನದಿಯೂ । ವೀರಪತ್ನೀ—ವೀರಪತ್ನಿಯೆಂಬ ನದಿಯೂ ಸಹ । ಪಯಃ—ತಮ್ಮ ನೀರುಗಳಿಂದ । ಹಿನ್ವಾನಾಃ— (ಅವನನ್ನು) ಹರ್ಷಗೊಳಿಸುತ್ತಾ । ಉದಭಿಃ—ಆಸರೆಯನ್ನು ಕೊಟ್ಟು ಇಟ್ಟುಕೊಳ್ಳುತ್ತವೆ.

॥ ಭಾವಾರ್ಥ ॥

ಇತರರನ್ನು ಹಿಂಸಿಸಲು ಅಲೆದಾಡುವ ಕುಯವನೆಂಬ ಅಸುರನ ವಾಸಸ್ಥಾನವು ನೀರಿನ ಮಧ್ಯದಲ್ಲಿ ಗೂಢವಾಗಿದ್ದಿತು. ಅವನು ಹಿಂದೆ ತಾನೇ ಅಪಹರಿಸಿದ ನೀರುಗಳಿಂದ ವೃದ್ಧಿಯನ್ನು ಹೊಂದುತ್ತಾನೆ. ಪರಾಕ್ರಮಿಯಾದ ಅವನು ಲೋಕಕ್ಕೆಲ್ಲಾ ಪ್ರಸಿದ್ಧನಾಗುವಂತೆ ಬೆಳಗುತ್ತಾನೆ. ಅಂಜಸೀ ನದಿಯೂ ಕುಲಶೀ ನದಿಯೂ ವೀರಪತ್ನಿಯೆಂಬ ನದಿಯೂ ತಮ್ಮ ತಮ್ಮ ನೀರುಗಳಿಂದ ಅವನನ್ನು ಹರ್ಷಗೊಳಿಸುತ್ತಾ ತಮ್ಮ ನೀರುಗಳಿಂದ ಅವನಿಗೆ ಆಸರೆಯನ್ನು ಕೊಟ್ಟು ಇಟ್ಟುಕೊಳ್ಳುತ್ತವೆ.

## English Translation

The abiding-place of the vagrant ( Kuyava,) was concealed ( in the midst ) of the water : the hero increases with the waters formerly (carried off), and is ren wned (throughout the world): the Anjasi. Kulisi and Vira-patni rivers, pleasing him with their substance, sustain him with their waters.

ವಿಶೇಷವಿಷಯಗಳು

**ಆಯೋಃ**— **ಪರೇಷಾಮುಪದ್ರವಾರ್ಥಮಿತಸ್ತತೋ ಗಚ್ಛತಃ ಕುಯವಸ್ಯಾಸುರಸ್ಯ** । ಇತರರನ್ನು ಹಿಂಸಿಸಲು ಎಲ್ಲಾ ಕಡೆಯೂ ನುಗ್ಗುತ್ತಿರುವ ಕುವಯುನೆಂಬ ಅಸುರನ ಎಂದು ವಿವರಿಸಿದೆ. ಆದುದರಿಂದ **ಆಯೋಃ** ಎಂಬುದಕ್ಕೆ ಇಲ್ಲಿ ಶತ್ರುಪರ್ಯಾಯವಾಗಿ ಅರ್ಥವಾಗಿದೆ. ಹಿಂದೆ ೯೬–೨ನೇ ಸೂಕ್ತದ ಋಕ್ಕಿನ ವಿಶೇಷ ವಿಷಯಗಳಲ್ಲಿ (ಇದೇ ಭಾಗದ 77-78 ನೇ ಪುಟ) ಆಯುವೆಂಬ ಅಂಕಿತನಾಮವು ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ವ್ಯಕ್ತಿಗಳನ್ನು ತೋರಿಸುವುದೆಂದು ತಿಳಿಸಿದೆ. ಆದರೆ ಇಲ್ಲಿ ಸಂಕ್ಷೇಪವಾಗಿಯೂ, ಇಂದ್ರನಿಗೆ ಶತ್ರುಮಿತ್ರ ಪರ್ಯಾಯವಾಗಿಯೂ ಕಂಡಿರತಕ್ಕ ಕೆಲವು ಸಂದರ್ಭಗಳನ್ನು ಮಾತ್ರ ಉದಹರಿಸಿದೆ. ಪ್ರಕೃತದಲ್ಲಿ **ಆಯುವಿಗೂ** ಅಗ್ನಿಗೂ ಇರತಕ್ಕ ಸಂಬಂಧವನ್ನು ಸೂಚಿಸಿರುವ ಶ್ರುತಿವಾಕ್ಯಗಳನ್ನು ಉದಹರಿಸಿ ಆಯುವೆಂಬ ಹೆಸರುಳ್ಳ ವ್ಯಕ್ತಿಗಳು ಅನೇಕವಿದ್ದು, ದೇವತೆಗಳಿಗೂ ಯಜ್ಞಕರ್ತರಿಗೂ ಶತ್ರುವಾಗಿದ್ದ ಆಯುವೇ ಬೇರೆ, ಇಂದ್ರನ ಮಿತ್ರನಾದ ಆಯುವೇ ಬೇರೆ, ಅಗ್ನಿಗೆ ಮಿತ್ರನಾದ ಆಯುವೇ ಬೇರೆ ಎಂಬ ಅಂಶವನ್ನೂ ಮತ್ತು **ಆಯುವೆಂಬ** ಹೆಸರಿನಿಂದ ಪ್ರಸಿದ್ಧವಾದ ಒಂದು ಸಂತತಿಯೇ ಇದ್ದಿತೆಂಬುದನ್ನೂ ತಿಳಿಸಲಾಗುತ್ತದೆ.

**ಉರ್ವಶ್ಯಸೀತ್ಯಥೋತ್ತರಾರಣ್ಯಾಜ್ಯವಿಲಾಪನೀಮುಪಸ್ಪೃಶತ್ಯಾಯುರಸೀತಿ ತಾಮಭಿನಿದಧಾತಿ ಪುರೂರವಾ ಅಸೀತ್ಯುರ್ವಶೀ ವಾ ಅಪ್ಸರಾಃ ಪುರೂರವಾಃ ಪತಿರಥ ಯತ್ತಸ್ಮಾನ್ಮಿಥುನಾದಜಾಯತ ತದಾಯುರೇವಮೇವೈಷ ಏತಸ್ಮಿನ್ಮಿಥುನಾದ್ಯಜ್ಞಂ ಜನಯತಿ ।**
(ಶ. ಬ್ರಾ. ೩-೪-೧-೨೨)

ಎಂಬಲ್ಲಿ **ಆಯುವು** ಉರ್ವಶೀಪುರೂರವಸ್ಸುಗಳಿಂದ ಉತ್ಪನ್ನನಾದವನೆಂದು ಹೇಳಿ ಅಗ್ನಿಗೂ **ಆಯುವಿಗೂ** ತಾದಾತ್ಮ್ಯವನ್ನು ಹೇಳಿದೆ. ಇದರಂತೆಯೇ,

**ಆಯುಷೋ ನ ಮಥ್ಯಾದಿತ್ಯಗ್ನಿರ್ವಾ ಆಯುಃ ।**
(ಶ. ಬ್ರಾ. ೭-೨-೧-೧೫)

ಎಂಬ ವಾಕ್ಯದಲ್ಲಿಯೂ **ಅಗ್ನಿಗೂ ಆಯುವಿಗೂ** ತಾದಾತ್ಮ್ಯವನ್ನು ಹೇಳಿದೆ. ಆದರೆ ಇಲ್ಲಿ **ಆಯುವೆಂಬ** ಪದವು ಅಂಕಿತನಾಮವೆಂದು ಒಂದು ಮತ; ಅಲ್ಲವೆಂದು ಇನ್ನೊಂದು ಮತ ಇದಲ್ಲದೆ ಶತಪಥಬ್ರಾಹ್ಮಣದಲ್ಲಿ ಋಕ್ಸಂಹಿತೆಯ,

**ಮಾ ನೋ ಮಿತ್ರೋ ವರುಣೋ ಅರ್ಯಮಾಯುರಿಂದ್ರ ಋಭುಕ್ಷಾ ಮರುತಃ ಪರಿ ಖ್ಯನ್ ।**
(ಋ. ಸಂ. ೧-೧೬೨-೧)

ಎಂಬ ಋಕ್ಕನ್ನು ಉದಹರಿಸಿ (ಶ. ಬ್ರಾ. ೧೩-೫-೧-೧೮) ಇತರ ದೇವತೆಗಳೊಡನೆ ಆಯುವನ್ನೂ ಉದ್ದೇಶಿಸಿ ಮಾಡಿರುವ ಪ್ರಾರ್ಥನೆಯನ್ನೂ ಸೂಚಿಸಿದೆ.

ಸ ಪೂರ್ವಯಾ ನಿವಿದಾ ಕವ್ಯತಾಯೋರಿಮಾಃ ಪ್ರಜಾ ಅಜನಯನ್ಮನೂನಾಂ ।
(ಋ. ಸಂ. ೧-೯೬-೨)

ಎಂಬ ಋಕ್ಸಂಹಿತಾವಾಕ್ಯದಲ್ಲಿ ಆಯೋಃ ಎಂಬ ಪದಕ್ಕೆ ಮನುವೆಂದು ಅರ್ಥಮಾಡಿರುವುದರಿಂದ ಸೃಷ್ಟಿಕರ್ತರಾದ ಪ್ರಜಾಪತಿಗಳಲ್ಲಿ ಒಬ್ಬನಾದ ಮನುವೆಂದು ತಿಳಿಯಬಹುದು. ಹೀಗೆಯೇ, ಋ. ಸಂ. ೧-೫೩-೧೦ ; ೮-೧೫-೫ ; ೮-೫೩-೨ ; ೧-೧೦೪-೪ ; ೨-೩೨-೨. ಇತ್ಯಾದಿ ಋಕ್ಕುಗಳಲ್ಲಿಯೂ ಸಹ ಆಯುವೆಂಬ ಅಂಕಿತನಾಮವು ಯಾವ ವ್ಯಕ್ತಿಯನ್ನು ಸೂಚಿಸುತ್ತದೆಂಬುದನ್ನು ಹಿಂದೆಯೇ ತಿಳಿಸಿದೆ.

(ಯಜ್ಞಕರ್ತರಾದ) ಮಾನವರೆಂದು ಹೇಳುವುದಕ್ಕೆ ಪರ್ಯಾಯವಾಗಿ **ಆಯುಃ** ಎಂಬ ಪದವನ್ನು ಅನೇಕ ಕಡೆಗಳಲ್ಲಿ ಉಪಯೋಗಿಸಿದೆ. ಉದಾಹರಣೆಗೆ—

**ಹೋತ್ರಾಭಿರಗ್ನಿರ್ಮನುಷಃ ಸ್ವಧ್ವರೋ ರಾಜಾ ವಿಶಾಮತಿಥಿಶ್ಚಾರುರಾಯವೇ ।**
(ಋ. ಸಂ. ೨-೨-೮)

**ಇಮಂ ವಿಧಂತೋ ಅಪಾಂ ಸಧಸ್ಥೇ ದ್ವಿತಾದಧುರ್ಭೃಗವೋ ವಿಕ್ಷ್ವಾ ಯೋಃ ।**
(ಋ. ಸಂ. ೨-೪-೨)

**ಮರ್ತಾನಾಂ ಚಿದುರ್ವಶೀರಕೃಪ್ರನ್ವೃಧೇ ಚಿದರ್ಯ ಉಪರಸ್ಯಾಯೋಃ ।**
(ಋ. ಸಂ. ೪-೨-೧೮)

**ಪ್ರ ಸ್ವಾದನಂ ಪಿತೂನಾಮಸ್ತತಾತಿಂ ಚಿದಾಯವೇ ।**
(ಋ. ಸಂ. ೫-೭-೬)

ಇತ್ಯಾದಿ ಅನೇಕ ಋಕ್ಕುಗಳಲ್ಲಿರುವ **ಆಯು** ಶಬ್ದಕ್ಕೆ ಯಜಮಾನನೆಂದರ್ಥವೆಂದು ಭಾಷ್ಯದಿಂದ ಗೊತ್ತಾಗುತ್ತದೆ. ಆದರೆ Oldenberg ಮುಂತಾದ ಆಂಗ್ಲಪರಿವರ್ತನಕಾರರು ಇವೆಲ್ಲಾ ಅಂಕಿತನಾಮವೆಂಬ ಅಭಿಪ್ರಾಯವನ್ನಿಟ್ಟು ಕೊಂಡೇ ಋಕ್ಕುಗಳನ್ನು ಪರಿವರ್ತಿಸಿದ್ದಾರೆ. ಹೀಗೆ ಅನೇಕಾರ್ಥಗಳಲ್ಲಿ ಈ ಪದದ ಪ್ರಯೋಗವಿರುವಾಗ, ಪ್ರಕೃತ ವಾದ ಋಕ್ಕಿನಲ್ಲಿ ಯಜ್ಞಕರ್ತರಿಗೆ ಉಪದ್ರವವನ್ನು ಕೊಡತಕ್ಕ ಅಸುರನೆಂದರ್ಥ.

**ಉಪರಸ್ಯ—ಉದಕಮಧ್ಯೇ ಉಪ್ತಸ್ಯ ।** ನೀರಿನ ಮಧ್ಯದಲ್ಲಿ ವ್ಯಾಪಿಸಿರತಕ್ಕ ; (**ಆಯೋಃ**) ಮೇಲೆ ಉದಹರಿಸಿರುವ ೪-೨-೧೮ನೇ ಋಕ್ಕಿನಲ್ಲಿಯೂ ಸಹ **ಉಪರಸ್ಯಾಯೋಃ** ಎಂಬ ಪ್ರಯೋಗವಿದೆ. ಆದರೆ ಇಲ್ಲಿ **ಉಪರಸ್ಯ ಉಪ್ತಸ್ಯಾಪ್ಯತ್ಯಸ್ಯ ಆಯೋಃ ಮನುಷ್ಯಸ್ಯ ಭೃತ್ಯಾದೇಃ !** ಗರ್ಭರೂಪದಲ್ಲಿರುವ ಅಥವಾ ಉತ್ಪನ್ನ ನಾಗಿರುವ ಅಪತ್ಯನೆಂದರ್ಥವನ್ನು ಮಾಡಿದೆ. ಇಲ್ಲಿ ನೀರಿನ ನಡುವೆ **ವ್ಯಾಪಿಸಿರುವ** ಎಂದು ಅರ್ಥವನ್ನು ಮಾಡಿದೆ.

**ನಾಭಿಃ—ಆವಸನಸ್ಥಾನಂ ।** ವಾಸಸ್ಥಾನವು, ಎಂದು ಇಲ್ಲಿ ಅರ್ಥ. ನಾಭಿ ಶಬ್ದಕ್ಕೆ ಸಂಬಂಧ (ಬಂಧಕ) ಅನುರಕ್ತ, ರಕ್ಷಕ, ಉತ್ಪತ್ತಿಸ್ಥಾನ ಎಂಬ ಅರ್ಥಗಳೂ ಆಗುವಂತೆ ಪ್ರಯೋಗಗಳಿವೆ.

**ವೈಶ್ವಾನರ ನಾಭಿರಸಿ ಕ್ಷಿತೀನಾಂ ಸ್ಥೂಣೇವ ಜನಾँ ಉಪಮಿದ್ಯಯಂಥ ।**
(ಋ. ಸ, ೧-೫೯-೧)

ಇತ್ಯಾದಿ ಕಡೆಗಳಲ್ಲಿ **ವ್ಯಾಪಕವಾದ ಸಂಬಂಧವೆಂದೂ,**

**ಮೂರ್ಧಾ ದಿವೋ ನಾಭಿರಗ್ನಿಃ ಪೃಥಿವ್ಯಾ ಅಥಾಭವದರತೀ ರೋದಸ್ಯೋಃ ।**
(ಋ. ಸಂ. ೧-೫೯-೨)

ಎಂಬ ಋಕ್ಕುಗಳಲ್ಲಿ **ಸಂನಾಹಕ,** ಎಂದರೆ **ರಕ್ಷಕ** ಎಂದೂ,

**ಅಜಃ ಪುರೋ ನೀಯತೇ ನಾಭಿರಸ್ಯಾನು ಪಶ್ಚಾತ್ಕವಯೋ ಯಂತಿ ರೇಭಾಃ ।**
(ಋ. ಸಂ. ೧-೧೬೩-೧೨)

**ಪೃಚ್ಛಾಮಿ ತ್ವಾ ಪರಮಂತಂ ಪೃಥಿವ್ಯಾಃ ಪೃಚ್ಛಾಮಿ ಯತ್ರ ಭುವನಸ್ಯ ನಾಭಿಃ ।**
(ಋ. ಸಂ. ೧-೧೬೪-೩೪)

ಇತ್ಯಾದಿ ಋಕ್ಕುಗಳಲ್ಲಿ **ಬಂಧಕವೆಂದೂ,**

**ಗಂಧರ್ವೋ ಅಪ್ಸ್ವಪ್ಯಾ ಚ ಯೋಷಾ ಸಾ ನೋ ನಾಭಿಃ ಪರಮಂ ಜಾಮಿ ತನ್ನೌ ।**
(ಋ. ಸಂ. ೧೦-೧೦-೪)

ಎಂಬಲ್ಲಿ **ಉತ್ಪತ್ತಿಸ್ಥಾನವೆಂದೂ,**

**ಮಾತಾ ರುದ್ರಾಣಾಂ ದುಹಿತಾ ವಸೂನಾಂ ಸ್ವಸಾದಿತ್ಯಾನಾಮಮೃತಸ್ಯ ನಾಭಿಃ ।**
(ಋ. ಸಂ. ೮-೧೦೧-೧೫)

ಎಂಬ ಋಕ್ಕಿನಲ್ಲಿ **ಆವಾಸಸ್ಥಾನವೆಂದೂ** ಅರ್ಥವಾಗುತ್ತದೆ. ಪ್ರಕೃತವಾದ ಈ ಋಕ್ಕಿನಲ್ಲಿ ಆಯುವೆಂಬ ಅಸುರನ **ಆವಾಸಸ್ಥಾನವೆಂದರ್ಥ.**

**ಯುಯೋಪ—ಗೂಢಮಾಸೀತ್ । ಯಥಾನ್ಯೈರ್ನ ದೃಶ್ಯತೇ ತಥಾ ಸೋಽಸುರ ಅಕರೋದಿತ್ಯರ್ಥಃ ।** ಇತರರಿಗೆ ತಿಳಿಯದಂತೆ ಗುಪ್ತವಾಗಿ ಅಡಗಿರುವಂತೆ ವಾಸಸ್ಥಾನವನ್ನು ಕಲ್ಪಿಸಿಕೊಂಡನೆಂದರ್ಥ.

**ಪ್ರ ತಿರತೇ—ಪ್ರತಿರತಿರ್ವೃದ್ಧಿಕರ್ಮಾ** (ನಿ. ೧೦-೪೦) ನಿರುಕ್ತಕಾರರು ಋಕ್ಸಂಹಿತೆಯ ೧೦-೫೯-೫ ಮುಂತಾದ ಋಕ್ಕುಗಳನ್ನು ಉದಹರಿಸಿ **ಪ್ರ** ಎಂಬ ಉಪಸರ್ಗದಿಂದ ಕೂಡಿದ **ತೄ** ಧಾತುವಿಗೆ **ವೃದ್ಧಿಯಾಗು** ಎಂದರ್ಥವಾಗುತ್ತೆಂದು ತೋರಿಸಿದ್ದಾರೆ. ಇಲ್ಲಿಯೂ ಸಹ **ಆಯುವು** ತಾನು ಅಪಹರಿಸಿದ ನೀರುಗಳಿಂದ ವೃದ್ಧಿಯನ್ನು ಪಡೆಯುತ್ತಿದ್ದಾನೆಂದರ್ಥ.

**ಅವತಿರತೀತಿ ವಧಕರ್ಮಸು ಪಾಠಾತ್ ತಿರತಿರತ್ರ ವಧಾರ್ಥಃ । ಹತವಾನಿತ್ಯರ್ಥಃ ।** **ತಿರತಿ** ಶಬ್ದವು ವಧಕರ್ಮಗಳಲ್ಲಿ ಪಠಿತವಾಗಿರುವುದರಿಂದ ಕೊಂದನೆಂದರ್ಥ. **ಉಪರಶಬ್ದೋಽತ್ರ ಉಪರಿವರ್ತಿವಚನಃ । ಶೂರಾಣಾಂ ಉಪರಿವರ್ತಿನಃ । ಅತ್ಯಂತ ಶೂರಸ್ಯ ಇತ್ಯರ್ಥಃ । ಸಾಮರ್ಥ್ಯಾದ್ವೃತ್ರಸ್ಯ ವಾ ಅನ್ಯಸ್ಯ ಕಸ್ಯಚಿದುಪರಸ್ಯ । ಆಯೋಃ ।** ವೃತ್ರಾದಿಗಳಿಗಿಂತಲೂ ಅತ್ಯಧಿಕವಾಗಿ ಶೂರನಾಗಿಯೂ, ಜನರ ಮೇಲ್ಪಟ್ಟು ಇರುವವನಾಗಿಯೂ ಇರತಕ್ಕ ಆಯುವಿನ ಶರೀರವನ್ನು ಹಿಂದೆಮಾಡಿದ ಆಯುಧಪ್ರಯೋಗಗಳಿಂದಲೇ

ಇಂದ್ರನು ಕೊಂದನೆಂದರ್ಥ, ಮತ್ತು ಅಂಜಸೀ, ಕುಲಿಶೀ ಮತ್ತು ವೀರಪತ್ನಿಯರೆಂಬುವರು ಮೂವರು ಅಯುವಿನ ಪತ್ನಿಯರು ಉದಕವನ್ನಾಶ್ರಯಿಸಿದರು ಎಂದು ಪ್ರತ್ಯೇಕವಾದ ಅರ್ಥವನ್ನು ಮಾಡಿದ್ದಾರೆ. ಈ ಅರ್ಥವೂ ಒಂದು ವಿಧದಲ್ಲಿ ಹೊಂದಿಕೊಳ್ಳುತ್ತದೆ.

**ರಾಷ್ಟಿ**—**ರಾಜತೇ** । ಪ್ರಕಾಶಿಸುತ್ತಾನೆ. **ಆತ್ಮೀಯೇನ ಶೌರ್ಯೇಣ ಲೋಕೇ ಪ್ರಖ್ಯಾತೋ ಭವತೀತ್ಯರ್ಥಃ** । ತನ್ನ ಪರಾಕ್ರಮದಿಂದ ಲೋಕಕ್ಕೆಲ್ಲಾ ಪ್ರಸಿದ್ಧನಾಗಿದ್ದಾನೆಂದರ್ಥ.

**ಅಂಜಸೀ**—**ಅಂಜಸ್ಯೋಪೇತಾ** । ವಕ್ರಗಮನವಿಲ್ಲದೇ ಋಜುವಾಗಿ ಪ್ರವಹಿಸತಕ್ಕ ನದಿಯ ಅಂಕಿತ ನಾಮ. ಇದೇ ಅರ್ಥವುಳ್ಳ **ಅಂಜಸೀನಾಂ** ಎಂಬ ಪದವು,

**ಏತದ್ವೈ ಭದ್ರಮನುಶಾಸನಸ್ಯೋತ ಸ್ರುತಿಂ ವಿಂದತ್ಯಂಜಸೀನಾಂ** ।
(ಋ. ಸಂ. ೧೦-೩೨-೭)

ಎಂಬ ಋಕ್ಕಿನಲ್ಲಿಯೂ **ಋಜುನಾ ಮಾರ್ಗೇಣ ಗಂತವ್ಯಾನಾಂ ಅಪಾಂ** ವಕ್ರವಿಲ್ಲದೇ ನೇರವಾದ ಮಾರ್ಗದಲ್ಲಿ ಪ್ರವಹಿಸತಕ್ಕ ಪ್ರವಾಹಗಳೆಂದರ್ಥವನ್ನು ಕೊಡುತ್ತದೆ. ಆದರೆ ಅಂಕಿತನಾಮವಾಗಿ ಉಪಯೋಗಿಸಲ್ಪಟ್ಟಿಲ್ಲ. **ಅಂಜಸೀ** ಎಂಬ ನದಿಯ ಹೆಸರು ಇಲ್ಲಿ ಒಂದು ಸ್ಥಳದಲ್ಲಿ ಮಾತ್ರ ಇದೆ.

**ಕುಲಿಶೀ**—ಇದೂ ಒಂದು ನದಿಯ ಹೆಸರು.

**ವೀರಪತ್ನೀ**—**ವೀರಾಣಾಂ ಪಾಲಯಿತ್ರೀ** । ವೀರರನ್ನು ಪಾಲಿಸತಕ್ಕ ಸಾಮರ್ಥ್ಯವುಳ್ಳ ನದಿಯ ಹೆಸರು. **ವೀರಪತ್ನೀ** ಎಂಬ ಪದವು.

**ಪಾವೀರವೀ ಕನ್ಯಾ ಚಿತ್ರಾಯುಃ ಸರಸ್ವತೀ ವೀರಪತ್ನೀ ಧಿಯಂ ಧಾತ್** ।
(ಋ. ಸಂ. ೬-೪೯-೭)

ಎಂಬ ಋಕ್ಕಿನಲ್ಲಿ ವೀರನಿಗೆ ಪತ್ನಿಯಾದ ಸರಸ್ವತಿಗೆ ವಿಶೇಷಣವಾಗಿದೆ. **ವೀರಪತ್ನಿ**ಯೆಂಬ ನದಿಯ ಹೆಸರೂ ಸಹ ಇದೊಂದು ಋಕ್ಕಿನಲ್ಲಿ ಮಾತ್ರ ಇದೆ.

**ಹಿನ್ವಾನಾಃ**—**ಪ್ರೀಣಯಂತಃ** । ತೃಪ್ತಿಪಡಿಸುತ್ತಾ, ತಮ್ಮ ಸಮೃದ್ಧವಾದ ಪ್ರವಾಹಗಳಿಂದ ಆ ಅಸುರನನ್ನು ಧರಿಸಿವೆ. ಮೇಲಿನ ವಿವರಣೆಯೆಲ್ಲಾ ಸಾಯಣಭಾಷ್ಯವನ್ನನುಸರಿಸಿದೆ. ಆದರೆ ಸ್ಕಂದಸ್ವಾಮಿಗಳು ಬೇರೆ ವಿಧವಾಗಿ ವಿವರಿಸಿ ಅರ್ಥಮಾಡಿದ್ದಾರೆ.

**ರಾಷ್ಟಿ ಶೂರಃ**—**ಯಃ ರಾಜತೇ ಸ ಇಂದ್ರಃ** । ಪ್ರಕಾಶಮಾನನೂ ಸಕಲಲೋಕಕ್ಕೂ ಈಶನೂ ಆದ ಇಂದ್ರನು.

ವ್ಯಾಕರಣಪ್ರಕ್ರಿಯಾ

**ಯುಯೋಪ**—ಯುಪ ವಿಮೋಹನೇ ಧಾತು. ಲಿಟ್ ಪ್ರಥಮಪುರುಷ ಏಕವಚನದಲ್ಲಿ ತಿಪಿಗೆ **ಪರಸ್ಮೈಪದಾನಾಂ**—ಸೂತ್ರದಿಂದ ಣಲಾದೇಶ. ಧಾತುವಿಗೆ ಲಿಣ್ನಿಮಿತ್ತವಾಗಿ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್‌ಶೇಷ.

ಧಾತುವಿನ ಲಘೂಪಧೆಗೆ ಗುಣ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಲ್ ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುವುದರಿಂದ ಮಧ್ಯೋದಾತ್ತವಾಗುತ್ತದೆ.

**ನಾಭಿಃ**—ಣಹ ಬಂಧನೇ ಧಾತು. **ಣೋನಃ** ( ಪಾ. ಸೂ. ೬-೧-೬೫ ) ಎಂಬುದರಿಂದ ಆದಿಗೆ ನತ್ವ. **ನಹೋ ಭಶ್ಚ** (ಉ. ಸೂ. ೪-೫೬೫) ಎಂಬುದರಿಂದ ಇಞ್ ಪ್ರತ್ಯಯ. ತತ್ಸನ್ನಿಯೋಗದಿಂದ ಧಾತು ಹಕಾರಕ್ಕೆ ಭತ್ವ. ಪ್ರತ್ಯಯ ಞಿತ್ತಾದುದರಿಂದ **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾ ವೃದ್ಧಿ. ನಾಭಿ ಎಂದು ರೂಪವಾಗುತ್ತದೆ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ರಾಷ್ಟಿ**—ರಾಜೃ ದೀಪ್ತೌ ಧಾತು. ಲಿಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. **ವ್ರಶ್ಚಭ್ರಸ್ಜ ಸೃಜ**—(ಪಾ. ಸೂ. ೮-೨-೩೬) ಎಂಬುದರಿಂದ ಝಲ್ ಪರದಲ್ಲಿರುವುದರಿಂದ ಧಾತುವಿನ ಜಕಾರಕ್ಕೆ ಷತ್ವ. ಷ್ಟುತ್ವದಿಂದ ಪ್ರತ್ಯಯತಕಾರಕ್ಕೆ ಟಕಾರಾದೇಶ. ರಾಷ್ಟಿ ಎಂದು ರೂಪವಾಗುತ್ತದೆ. ತಿಙಂತದ ಪರದಲ್ಲಿರುವುದರಿಂದ **ಅತಿಙಃ** ಎಂದು ಪರ್ಯುದಾಸಮಾಡಿರುವುದರಿಂದ ನಿಘಾತಸ್ವರ ಬರುವುದಿಲ್ಲ. ತಿಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಪಯಃ**—ಪಯಸ್ ಶಬ್ದಕ್ಕೆ ತೃತೀಯಾ ಏಕವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲುಕ್. ಸಕಾರಕ್ಕೆ ರುತ್ವವಿಸರ್ಗ.

**ಹಿನ್ವಾನಾಃ**—ಹಿವಿ ಪ್ರೀಣನೇ ಧಾತು. ತಾಚ್ಛೀಲ್ಯ ತೋರುವಾಗ **ತಾಚ್ಛೀಲ್ಯವಯೋವಚನ**—(ಪಾ. ಸೂ. ೩-೨-೧೨೯) ಎಂಬುದರಿಂದ ಚಾನಶ್ ಪ್ರತ್ಯಯ. **ಇದಿತೋ ನುಮ್ ಧಾತೋಃ**—ಎಂಬುದರಿಂದ ನುಮಾಗಮ. **ಆಗಮಾನುಶಾಸನಮನಿತ್ಯಮ್**—ಎಂಬ ವಚನದಿಂದ **ಆನೇಮುಕ್**—(ಪಾ. ಸೂ. ೭-೨-೮೨) ಎಂಬುದರಿಂದ ಮುಕಾಗಮ ಬರುವುದಿಲ್ಲ. ಶಪ್ ವಿಕರಣ. ಅದುಪದೇಶದ ಪರದಲ್ಲಿ ಚಾನಶ್ ಬಂದರೂ ಲಸಾರ್ವಧಾತುಕವಾಗದಿದ್ದುದರಿಂದ ಅನುದಾತ್ತಸ್ವರ ಬರುವುದಿಲ್ಲ. **ಚಿತಃ**—(ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಪ್ರಥಮಾಬಹುವಚನಾಂತರೂಪ.

**ಉದಭಿಃ**—ಉದಕ ಶಬ್ದ. ತೃತೀಯಾಬಹುವಚನ ಪರವಾದಾಗ **ಪದ್ದನ್ನೋಮಾಸ್**—(ಪಾ. ಸೂ. ೬-೧-೬೩) ಎಂಬುದರಿಂದ ಉದನ್ ಆದೇಶ. ಪದಸಂಜ್ಞಾ ಇರುವುದರಿಂದ **ನಲೋಪಃ ಪ್ರಾತಿಪದಿಕಾಂತಸ್ಯ**—ಎಂಬುದರಿಂದ ನಲೋಪ. || ೪ ||

———— :೦: ————

ಸಂಹಿತಾಪಾಠಃ

ಪ್ರತಿ ಯತ್ಸ್ಯಾ ನೀಥಾದರ್ಶಿ ದಸ್ಯೋರೋಕೋ ನಾಚ್ಛಾ ಸದ-
ನಂ ಜಾನತೀ ಗಾತ್ ।
ಅಧ ಸ್ಮಾ ನೋ ಮಘವಞ್ಚರ್ಕೃತಾದಿನ್ಮಾ ನೋ ಮಘೇವ ನಿಷ್ಷ-
ಪೀ ಪರಾ ದಾಃ ॥ ೫ ॥

॥ ಪದಪಾಠಃ ॥

ಪ್ರತಿ । ಯತ್ । ಸ್ಯಾ । ನೀಥಾ । ಅದರ್ಶಿ । ದಸ್ಯೋಃ । ಓಕಃ । ನ । ಅಚ್ಛ । ಸದನಂ ।
ಜಾನತೀ । ಗಾತ್ ।
ಅಧ । ಸ್ಮ । ನಃ । ಮಘಽವನ್ । ಚರ್ಕೃತಾತ್ । ಇತ್ । ಮಾ । ನಃ । ಮಘಾಽ-
ಇವ । ನಿಷ್ಷಪೀ । ಪರಾ । ದಾಃ ॥ ೫ ॥

ಸಾಯಣಭಾಷ್ಯಂ

ಯದ್ಯದಾ ನೀಥಾ ನಯನಹೇತುಭೂತಾ ಸ್ಯಾ ಸಾ ಪದವೀ ಪ್ರತ್ಯದರ್ಶಿ ಅಸ್ಮಾಭಿರ್ದೃಷ್ಟಾಭೂತ್ । ಸಾ ಚ ಪದವೀ ದಸ್ಯೋರುಪಕ್ಷಪಯಿತುಃ ಕುಯವಸ್ಯಾಸುರಸ್ಯ ಸದನಂ ಗೃಹಮಚ್ಛಾಭಿಮುಖ್ಯೇನ ಗಾತ್ । ಗತಾ ಪ್ರಾಪ್ತಾ । ತತ್ರ ದೃಷ್ಟಾಂತಃ। ಜಾನತೀ ಸ್ವಕೀಯಂ ವತ್ಸಮಭಿಜಾನತೀ ಗೌರೋಕೋ-ನ ನಿವಾಸಸ್ಥಾನಂ ಸ್ವಕೀಯಂ ಗೋಷ್ಠಂ ಯಥಾ ಋಜು ಪ್ರಾಪ್ನೋತಿ । ತದ್ವನ್ಮಾರ್ಗೋಽಪ್ಯಸುರಗೃಹಂ ಪ್ರಾಪ್ತ ಇತ್ಯರ್ಥಃ । ಅಧ ಸ್ಮ ಅಥಾನಂತರಮೇವ ಹೇ ಮಘವನ್ಧನವನ್ನಿಂದ್ರ ಚರ್ಕೃತಾತ್ಪುನಃಪುನಸ್ತೇ-ನಾಸುರೇಣ ಕೃತಾದುಪದ್ರವಾನ್ನೋಽಸ್ಮಾನ್ರಕ್ಷೇತಿ ಶೇಷಃ । ಇದಿತ್ಯವಧಾರಣೇ । ಅಸ್ಮಾನ್ರಕ್ಷೈವ ನೋಽಸ್ಮಾನ್ಮಾ ಪರಾ ದಾಃ । ಮಾ ಪರಿತ್ಯಾಕ್ಷೀಃ । ಅಸ್ಮಾಭಿರ್ಜ್ಞಾತೇನ ಮಾರ್ಗೇಣ ಗತ್ವಾಽಸ್ಮದುಪದ್ರವಕಾರಿಣಮಸುರಂ ಜಹೀತಿ ತಾತ್ಪರ್ಯಾರ್ಥಃ। ತತ್ರ ವ್ಯತಿರೇಕೇ ದೃಷ್ಟಾಂತೋಽಭಿಧೀಯತೇ। ಮಘೇವ ನಿಷ್ಷಪೀ । ಯಥಾ ವಿನಿರ್ಗತಸಪೋ ವಿನಿರ್ಗತಶೇಪೋ ಯಥೇಷ್ಟಚಾರೀ ದಾಸೀಪತಿರ್ಮಘೇವ ಯಥಾ ಧನಾನ್ಯಸ್ಮಾತ್ಪರಿತ್ಯಜತಿ ತಥಾಸ್ಮಾನ್ಮಾ ಪರಿತ್ಯಾಕ್ಷೀರಿತ್ಯರ್ಥಃ । ಅತ್ರ ನಿರುಕ್ತಂ । ನಿಷ್ಷಪೀ ಸ್ತ್ರೀಕಾಮೋ

**ಭವತಿ ವಿನಿರ್ಗತಪಸಾಃ । ಸಪಃ ಸಪತೇಃ ಸ್ಪೃಶತಿಕರ್ಮಣಃ। ಮಾ ನೋ ಮಘೇವ ನಿಷ್ಷಪೀ ಪರಾ ದಾಃ । ಸ ಯಥಾ ಧನಾನಿ ವಿಭಜತಿ ಮಾ ನಸ್ತ್ವಂ ತಥಾ ಪರಾ ದಾಃ । ನಿ. ೫-೧೬ । ಇತಿ ॥ ನೀಥಾ । ಣೀಞ್ ಪ್ರಾಪಣೇ । ಹನಿಕುಷಿನೀರಮಿಕಾಶಿಭ್ಯಃ ಕ್ಥನ್ನಿತಿ ಕರಣೇ ಕ್ಥನ್ಪ್ರತ್ಯಯಃ । ಗಾತ್ । ಏತೇರ್ಲುಙಿ ಣೋ ಗಾ। ಲುಙೀತಿ ಗಾದೇಶಃ। ಗಾತಿಸ್ಥೇತಿ ಸಿಚೋ ಲುಕ್ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡ-ಭಾವಃ । ಚರ್ಕೃತಾತ್ । ಕರೋತೇರ್ಯಙ್ ಲುಗಂತಾನ್ನಿಷ್ಠೇತಿ ಕ್ತಪ್ರತ್ಯಯಃ । ಮುಷಾಽಇವ । ಶೇಶ್ಛಂದ-ಸೀತಿ ಶೇರ್ಲೋಪಃ । ನಿಷ್ಷಪೀ । ಷಪ ಸಮವಾಯೇ । ಸಪತಿ ಸಮವೈತಿ ಯೋನ್ಯಾ ಸಂಗಚ್ಛತ ಇತಿ ಸಪಃ ಶೇಪಃ । ಪಚಾದ್ಯಚ್ । ನಿರ್ಗತೋ ನಿತ್ಯೋದ್ಧೃತಃ ಸಪಃ ಶೇಪೋ ಯಸ್ಯ ಸ ಸ್ತ್ರೀವ್ಯಸನೀ ನಿಷ್ಷಪಃ । ವರ್ಣವ್ಯಾಪತ್ತ್ಯಾ ಈಕಾರಃ । ದಾಃ । ಡುದಾಞ್ ದಾನೇ । ಲುಙಃ ಗಾತಿಸ್ಥೇತಿ ಸಿಚೋ ಲುಕ್ । ನ ಮಾಙ್ಯೋಗ ಇತ್ಯಡಭಾವಃ ॥**

### ಪ್ರತಿಪದಾರ್ಥ

**ಯತ್**—ಯಾವಾಗ । **ನೀಥಾ**—(ಅಸುರನ ಮನೆಗೆ) ಕರೆದುಕೊಂಡು ಹೋಗುವ । **ಸ್ಯಾ**—ಆ ದಾರಿಯು। **ಪ್ರತಿ ಅದರ್ಶಿ**—(ನಮ್ಮಿಂದ) ನೋಡಲ್ಪಟ್ಟಿತೋ (ಆಗ) । **ದಸ್ಯೋಃ**—(ಕುಯವನೆಂಬ) ಅಸುರನ । **ಸದನಂ**—ಮನೆಯು । **ಜಾನತೀ**—(ತನ್ನ ಕರುವನ್ನು) ಗುರ್ತಿಸಿದ ಹಸುವು । **ಓಕೋ ನ**—ತನ್ನ ಕೊಟ್ಟಿಗೆಗೆ ನೇರವಾಗಿ ಹೋಗಿಸೇರುವಂತೆ । **ಅಚ್ಛ ಗಾತ್**— ನೇರವಾಗಿ ಪ್ರವೇಶಿಸಲ್ಪಟ್ಟಿತು । **ಅಧ ಸ್ಮ**— ಆನ್ತರಿಂದ ಒಡನೆಯೇ । **ಮಘವನ್**—ಧನವಂತನಾದ ಇಂದ್ರನೇ। **ಚರ್ಕೃತಾತ್**—(ಪುನಃಪುನಃ ಸಂಭವಿಸುವ ಆ ರಾಕ್ಷಸನ) ಉಪದ್ರವದಿಂದ **ನಃ**—ನಮ್ಮನ್ನು । **ಇತ್**—ಖಂಡಿತವಾಗಿಯೂ (ರಕ್ಷಿಸು) । **ನಿಷ್ಷಪೀ**—ನೀತಿರಹಿತನಾದ ವಿಷಯಲಂಪಟನು । **ಮಘಾ ಇವ**—(ಲಕ್ಷ್ಯಮಾಡದೆ) ಧನವನ್ನು ಎರಚಿಬಿಡುವಂತೆ । **ನಃ**— ನಮ್ಮನ್ನು । **ಮಾ ಪರಾ ದಾಃ**—ಅಲಕ್ಷ್ಯದಿಂದ ತ್ಯಜಿಸಬೇಡ.

### ಭಾವಾರ್ಥ

ಎಲೈ ಇಂದ್ರನೇ, ಕುಯವನೆಂಬ ಅಸುರನ ಮನೆಗೆ ಕರೆದುಕೊಂಡುಹೋಗುವ ದಾರಿಯು ನಮ್ಮ ಗಮನಕ್ಕೆ ಬಿದ್ದೊಡನೆಯೇ, ಕರುವನ್ನು ಕಂಡ ಹಸುವು ನೆಟ್ಟಗೆ ತನ್ನ ಕೊಟ್ಟಿಗೆಗೇ ಹೋಗುವಂತೆ ವೇಗವಾಗಿ ಅವನ ಮನೆಯನ್ನು ಪ್ರವೇಶಿಸಿಯಾಯಿತು. ಆದ್ದರಿಂದ ಒಡನೆಯೇ ಪುನಃಪುನಃ ಸಂಭವಿಸುವ ಆ ರಾಕ್ಷಸನ ಬಾಧೆಯಿಂದ ನಮ್ಮನ್ನು ಖಂಡಿತವಾಗಿಯೂ ರಕ್ಷಿಸು. ನೀತಿರಹಿತನಾದ ವಿಷಯಲಂಪಟನು ನಿರ್ಲಕ್ಷ್ಯವಾಗಿ ಧನವನ್ನೆಲ್ಲಾ ಎರಚಿ ಬಿಡುವಂತೆ ನೀನೂ ಸಹ ನಮ್ಮನ್ನು ಲಕ್ಷ್ಯಮಾಡದೇ ತ್ಯಜಿಸಿಬಿಡಬೇಡ.

### English Translation

Since the track that leads to the dwelling of the Dasyu has been seen by us, as a cow knows the way to her stall, therefore do you, Maghavan, ( defend us ) from his repeated violence; do not cast us away as a libertine throws away wealth.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಸಾಯಣರ ಭಾಷ್ಯಕ್ಕೂ ಸ್ಕಂದಸ್ವಾಮಿಗಳ ಭಾಷ್ಯಕ್ಕೂ ಅರ್ಥವಿವರಣೆಯಲ್ಲಿ ಬಹಳ ವ್ಯತ್ಯಾಸ ವಿದೆ. ಸಾಯಣಭಾಷ್ಯದಲ್ಲಿ,

**ನೀಥಾ ಸ್ಮ**—ಅಸುರನ ಮನೆಗೆ ಕರೆದುಕೊಂಡುಹೋಗುವ ಆ ದಾರಿಯು, **ಪ್ರತಿ ಅದರ್ಶಿ**—ನಮ್ಮಿಂದ ನೋಡಲ್ಪಟ್ಟಿತು. (ಆಗ), **ಜಾನತೀ**—ಕರುವನ್ನು ಗುರ್ತಿಸಿದ ಹಸುವು, **ಓಕೋ ನ**—ತನ್ನ ಕೊಟ್ಟಿಗೆಗೆ ನೇರವಾಗಿ ಹೋಗಿ ಸೇರುವಂತೆ, **ಅಚ್ಛಗಾತ್**—ನಮ್ಮಿಂದ ಪ್ರವೇಶಿಸಲ್ಪಟ್ಟಿತು ಎಂದಿದೆ. ಸ್ಕಂದಸ್ವಾಮಿಗಳ ಭಾಷ್ಯದಲ್ಲಿ, **ನೀಥಾ—ಸ್ತುತಿರತ್ರ ನೀಥೋಚ್ಯತೇ ।** ನೀಥಾ ಎಂದರೆ ಸ್ತುತಿಯೆಂದರ್ಥವೆಂದು—

**ಪ್ರ ವಾಮರ್ಚನ್ತ್ಯುಕ್ಥಿನೋ ನೀಥಾವಿದೋ ಜರಿತಾರಃ ।**
(ಋ. ಸಂ ೩-೧೨-೫)

ಎಂಬ ಋಕ್ಕನ್ನುದಹರಿಸಿ ಅಲ್ಲಿ ಹೇಗೆ **ನೀಥಾ** ಎಂಬ ಪದಕ್ಕೆ ಸ್ತೋತ್ರವೆಂದರ್ಥವೋ ಹಾಗೆಯೇ ಇಲ್ಲಿಯೂ ಸಹ ಸ್ತೋತ್ರವೆಂದರ್ಥವೆಂದು ತೋರಿಸಿದ್ದಾರೆ. ಅಂತಹ **ಸ್ತುತಿಃ ಪ್ರತ್ಯದರ್ಶಿ—ಅಸ್ಮಾಭಿರ್ದೃಷ್ಟಾ ।** ನಮ್ಮಿಂದ ನೋಡಲ್ಪಟ್ಟಾಗ, ಎಂದರೆ, ನಾವು ಮನನಮಾಡಿ, ನಿನಗೆ ಯೋಗ್ಯವಾದ ಸ್ತುತಿಯನ್ನು ರಚಿಸುವುದಕ್ಕಾಗಿ ಆಲೋಚಿಸಿ ನಿನ್ನನ್ನು ಪೂಜಿಸಲು ಅರ್ಹವಾದ ಸ್ತೋತ್ರವನ್ನು ನಿರ್ಮಿಸಿದಾಗ, **ದಸ್ಯೋಃ ಓಕೋ ನ—ಯಥಾ ಕಶ್ಚಿದ್ರಾಜಾ ಸ್ವಸ್ಯ ಶತ್ರೋಃ ನಿವಾಸಸ್ಥಾನಮಾಪ್ತುಂ ಮಹತಾ ಯತ್ನೇನ ಶೀಘ್ರಂ ಗಚ್ಛೇತ್ ಏವಂ ಸದಸಂ ಸರ್ವಸ್ತುತೀನಾಂ ಸ್ಥಾನಮಾಶ್ರಯಂ ಭವಂತಂ ಜಾನತೀ ಗಾತ್ ।** ಯಾವ ರೀತಿ ಒಬ್ಬ ಪರಾಕ್ರಮಿಯಾದ ರಾಜನು ತನ್ನ ಶತ್ರುನಿವಾಸಸ್ಥಾನವನ್ನು ಗುರ್ತಿಸಿದೊಡನೆಯೇ ಸರ್ವಪ್ರಯತ್ನದಿಂದಲೂ ಅಲ್ಲಿ ಹೋಗಿ ಶೀಘ್ರವಾಗಿ ಸೇರುವನೋ ಅದರಂತೆ ನಮ್ಮ ಸ್ತೋತ್ರಗಳೂ ಸಹ ಸರ್ವವಿಧವಾದ ಸ್ತುತಿಗಳಿಗೂ ಆಶ್ರಯಸ್ಥಾನನಾದ ನಿನ್ನನ್ನು ಸರ್ವಪ್ರಯತ್ನಗಳಿಂದಲೂ ಬಂದು ಸೇರುವುವು ಎಂದು ಉಪಮಾನೋಪಮೇಯವನ್ನು ತೋರಿಸಿದ್ದಾರೆ.

ಅನಂತರ, **ಅಧ ಸ್ಮ ಮಘವನ್ ಚರ್ಕೃತಾತ್ ನಃ ಇತ್** ಎನ್ನುವಾಗ ಸಾಯಣರು, **ಅಧ ಸ್ಮ—ಅಥಾನಂತರಮೇವ, ಚರ್ಕೃತಾತ್—ಪುನಃ ಪುನಸ್ತೇನಾಸುರೇಣ ಕೃತಾದುಪದ್ರವಾತ್ ನಃ ರಕ್ಷ** ಆದ್ದರಿಂದ ಪುನಃ ಪುನಃ ಸಂಭವಿಸುವ ಆ ರಾಕ್ಷಸನ ಉಪದ್ರವದಿಂದ ನಮ್ಮನ್ನು ಒಡನೆಯೇ ಖಂಡಿತವಾಗಿಯೂ ರಕ್ಷಿಸು ಎಂಬ ವಿವರಣೆಯನ್ನೂ, ಸ್ಕಂದಸ್ವಾಮಿಗಳು, **ನಃ—ತೃತೀಯಾರ್ಥೇ ಷಷ್ಠೀ । ಅಸ್ಮಾಭಿಃ ಚರ್ಕೃತಾತ್—ಅತ್ಯರ್ಥಂ ಕೃತಾತ್ । ಸಾಮರ್ಥ್ಯಾದಪರಾಧಾತ್ । ಮಾ ನಃ ಪರಾದಾಃ ।** ನಮ್ಮಿಂದ ಮಾಡಲ್ಪಟ್ಟ ಅಪರಾಧಗಳಿಗಾಗಿ ನಮ್ಮನ್ನು ತ್ಯಜಿಸಿ ನಾವು ನಾಶವಾಗುವಂತೆ ಮಾಡಬೇಡ ಎಂಬ ವಿವರಣೆಯನ್ನೂ ಮಾಡಿದ್ದಾರೆ. ಮೂಲದಕ್ಕೆ ಸಿಷ್ಟಹೀ **ಮಘಾ ಇವ** ಎಂಬ ಉಪಮಾನವನ್ನು ಇಬ್ಬರೂ ಒಂದೇ ವಿಧವಾಗಿ ವಿವರಿಸಿದ್ದಾರೆ.

ಇಲ್ಲಿ **ನೀಥಾ** ಎಂಬ ಪದಕ್ಕೆ ಪ್ರಾಪಕವಾದ ಎಂಬರ್ಥವು ಸರಿಯಾದರೂ ಸಹ, ಸ್ತುತಿಪರ್ಯಾಯವಾಗಿ ಈ ಪದವು ಉಪಯೋಗಿಸಲ್ಪಟ್ಟು **ಫಲಪ್ರಾಪಕ**ವಾದ ಸ್ತುತಿಯೆಂದು ಪರ್ಯವಸಾನವಾದ ಅರ್ಥವನ್ನು ಕೊಡುತ್ತದೆ. ಉದಾಹರಣೆಗೆ ಮೇಲೆ ಸ್ಕಂದಸ್ವಾಮಿಗಳು ಉದಹರಿಸಿರುವ ಸಂಹಿತಾವಾಕ್ಯದಂತೆ,

ಏತಾ ವಿಶ್ವಾ ವಿದುಷೇ ತುಭ್ಯಂ ವೇಧೋ ನೀಥಾನ್ಯಗ್ನೇ ನಿಣ್ಯಾ ವಚಾಂಸಿ ।
(ಋ. ಸಂ. ೪-೩-೧೬)

ಎಂಬ ಋಕ್ಕಿನಲ್ಲಿ **ಫಲಪ್ರಾಪಕಾಣಿ ಸ್ತೋತ್ರವಾಕ್ಯಾನಿ** । ಎಂದು ಸ್ತುತಿಯಲ್ಲಿಯೇ ಅನ್ವಯವಾಗಿದೆ. ಮತ್ತು

**ಉಕ್ಥಉಕ್ಥೇ ಸೋಮ ಇಂದ್ರಂ ಮಮಾದ ನೀಥೇನೀಥೇ ಮಘವಾನಂ ಸುತಾಸಃ ।**
(ಋ. ಸಂ. ೭-೨೬-೨)

**ಬಳಸ್ಯ ನೀಥಾ ವಿ ಪಣೇಶ್ಚ ಮನ್ಮಹೇ ವಯಾ ಅಸ್ಯ ಪ್ರಹುತಾ ಆಸುರತ್ತವೇ ।**
(ಋ. ಸಂ. ೧೦-೯೨-೩)

ಎಂಬ ಋಕ್ಕುಗಳಲ್ಲಿ ಸಾಕ್ಷಾತ್ತಾಗಿ ಸ್ತುತಿ ಮತ್ತು ಸ್ತುತಿಸಾಧಕವಾದ ಪ್ರಜ್ಞೆ ಎಂಬ ಅರ್ಥಗಳಾಗುತ್ತವೆ. ಅದರಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಸ್ತೋತ್ರವೆಂದಾಗಬಹುದು. ಆಗ ಸ್ಕಂದಸ್ವಾಮಿಗಳ ವಿವರಣೆಯು ಸಂದರ್ಭಕ್ಕೆ ಹೆಚ್ಚು ಹೊಂದಿಕೊಳ್ಳುವುದು.

**ನಿಷ್ಷಪೀ**— ಈ ಪದಕ್ಕೆ ನಿರುಕ್ತಕಾರರೇ ವಿಶದವಾಗಿ ನಿರ್ವಚನವನ್ನು ಮಾಡಿರುವುದರಿಂದ ಭಾಷ್ಯಕಾರರಿಬ್ಬರೂ ಆ ವಿವರಣೆಯನ್ನೇ ಅನುಸರಿಸಿದ್ದಾರೆ. ನಿರುಕ್ತಕಾರರ ನಿರ್ವಚನದಂತೆ-**ನಿಷ್ಷಪೀ-ನಿಷ್ಷಪೀ ಸ್ತ್ರೀಕಾಮೋ ಭವತಿ ವಿನಿರ್ಗತಸಪಃ । ಸಪಃ ಸಪತೇಃ ಸ್ಪೃಶತಿಕರ್ಮಣಃ । ಮಾ ನೋ ಮಘೇವ ನಿಷ್ಷಪೀ ಪರಾದಾಃ ।** (ನಿ. ೫-೧೬) ಸ್ಪರ್ಶನಮಾಡು ಎಂಬರ್ಥವನ್ನು ಕೊಡುವ ಸಪ್ ಧಾತುವಿನಿಂದ ನಿಷ್ಪನ್ನವಾಗಿ **ಸಪ** ಶಬ್ದಕ್ಕೆ ವೀರ್ಯ, ಶಕ್ತಿ ಅಥವಾ ಪುಂಸ್ತ್ವವಿಲ್ಲದ ಎಂದರ್ಥವಾಗುತ್ತದೆ. **ನಿಷ್ಷಪಿ**ಯೆಂದರೆ ಅಂತಹ ಪುಂಸ್ತ್ವವಿಲ್ಲದ ವಿಷಯಲಂಪಟನು ಲಕ್ಷ್ಯವಿಲ್ಲದೇ ಧನವನ್ನು ವೇಶ್ಯಾಸ್ತ್ರೀಯ ವಶಮಾಡುವಂತೆ ನಮ್ಮನ್ನು ತಿರಸ್ಕರಿಸಿ ನಮ್ಮ ಶತ್ರುಗಳ ವಶಮಾಡಬೇಡವೆಂದಭಿಪ್ರಾಯವಾಗುತ್ತದೆ. ಈ ನಿರ್ವಚನವನ್ನೇ ಭಾಷ್ಯಕಾರರಿಬ್ಬರೂ ಅನುಸರಿಸಿದ್ದಾರೆ. ನಿರುಕ್ತಕಾರರು ಪ್ರಕೃತವಾದ ಋಕ್ಕನ್ನೇ ಉದಹರಿಸಿ ಇಲ್ಲಿರುವ **ನಷ್ಷಪೀ** ಎಂಬ ಶಬ್ದವನ್ನು ವಿವರಿಸಿದ್ದಾರೆ.

**ಮಾ ಪರಾ ದಾಃ—ಮಾ ಪರಿತ್ಯಾಕ್ಷೀಃ ।** ನಮ್ಮನ್ನು ಬಿಟ್ಟುಕೊಡಬೇಡ.

ವ್ಯಾಕರಣಪ್ರಕ್ರಿಯಾ

**ನೀಥಾ**—ಣೀಞ್ ಪ್ರಾಪಣೇ ಧಾತು. **ಹನಿಕುಷಿನೀರಮಿಕಾಶಿಭ್ಯಃ ಕ್ಥನ್**—(ಉ. ಸೂ. ೨-೧೫೫) ಎಂಬುದರಿಂದ ಇದಕ್ಕೆ ಕರಣಾರ್ಥದಲ್ಲಿ ಕ್ಥನ್ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಸ್ತ್ರೀತ್ವದಲ್ಲಿ **ಅಜಾದ್ಯತಷ್ಟಾಪ್** —ಎಂಬುದರಿಂದ ಟಾಪ್. ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅದರ್ಶಿ**—ದೃಶಿರ್ ಪ್ರೇಕ್ಷಣೇ ಧಾತು. ಕರ್ಮಣಿಯಲ್ಲಿ ಲುಙ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಚಿಣ್‌ಭಾವಕರ್ಮಣೋಃ**—(ಪಾ. ಸೂ. ೩-೧-೬೬) ಎಂಬುದರಿಂದ ಚ್ಲಿಗೆ ಚಿಣ್. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. **ಚಿಣೋ ಲುಕ್**—(ಪಾ. ಸೂ. ೬-೪-೧೦೪) ಎಂಬುದರಿಂದ ಚಿಣಿನ ಪರದಲ್ಲಿರುವ ತಶಬ್ದಕ್ಕೆ ಲುಕ್. ಅಂಗಕ್ಕೆ ಅಡಾಗಮ. ಯದ್ವೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಅಚ್ಛ**—**ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

ಗಾತ್—ಇಣ್ ಗತೌ ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ**—ಎಂಬುದರಿಂದ ಇಕಾರಲೋಪ. **ಇಣೋಗಾ ಲುಙಿ**—(ಪಾ. ಸೂ. ೨-೪-೪೫) ಎಂಬುದರಿಂದ ಧಾತುವಿಗೆ ಗಾದೇಶ. ಚ್ಲಿಗೆ ಸಿಚಾದೇಶ ಬಂದಾಗ **ಗಾತಿಸ್ಥಾಘುಪಾ**—(ಪಾ. ಸೂ. ೨-೪-೭೭) ಎಂಬುದರಿಂದ ಅದಕ್ಕೆ ಲುಕ್. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ**—(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಅಧ—ಅಥ ಎಂಬಲ್ಲಿ ಸಂಹಿತಾದಲ್ಲಿ ಥಕಾರಕ್ಕೆ ವರ್ಣವ್ಯತ್ಯಯದಿಂದ ಧಕಾರಾದೇಶ.

**ಚರ್ಕೃತಾತ್**—ಡುಕೃಞ್ ಕರಣೇ ಧಾತು. **ಧಾತೋರೇಕಾಚಃ**—ಎಂಬುದರಿಂದ ಯಙ್ ಬಂದಾಗ **ಯಙೋಽಚಿಚ** (ಪಾ. ಸೂ. ೨-೪-೭೪) ಎಂಬುದರಿಂದ ಅದಕ್ಕೆ ಅಸ್ನೈಮಿತ್ತವಾಗಿ ಲುಕ್. ಯಙ್‌ಲುಙಂತದ ಮೇಲೆ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. ಚರ್ಕೃತ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪಂಚಮೀಏಕವಚನಾಂತರೂಪ.

**ಮಘಾ ಇವ**—ನಪುಂಸಕ ಬಹುವಚನದಲ್ಲಿ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ನಿಷ್ಷಪೀ**—ಷಪ ಸಮವಾಯೇ. ಧಾತು. ಸಪತಿ ಸಮವೈತಿ ಯೋನ್ಯಾ ಸಂಗಚ್ಛತೇ ಇತಿ ಸಪಃ ಶೇಪಃ. ಪಚಾದಿಯಲ್ಲಿ ಸೇರಿರುವುದರಿಂದ **ನಂದಿಗ್ರಹಪಚಾದಿಭ್ಯೋ**—(ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ನಿರ್ಗತಃ ಸಿತ್ರೋನ್ಮೃತಃ ಸಪಃ ಶೇಪಃ ಯಸ್ಯ ಸಃ ಸ್ತ್ರೀವ್ಯಸನೀ ನಿಷ್ಷಪಃ. ಛಂದಸ್ಸಿನಲ್ಲಿ ವರ್ಣವ್ಯತ್ಯಯದಿಂದ ಈಕಾರಾದೇಶ. ನಿಷ್ಷಪೀ ಎಂದಾಗುತ್ತದೆ. **ಗತಿಕಾರಕೋಪಪದಾತ್ ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ದಾಃ**—ಡುದಾಞ್ ದಾನೇ. ಧಾತು. ಲುಙ್ ಮಧ್ಯಮಪುರುಷಏಕವಚನದಲ್ಲಿ ಸಿಪ್. **ಇತಶ್ಚ**—ಸೂತ್ರದಿಂದ ಇಕಾರಲೋಪ. ಚ್ಲಿಗೆ ಸಿಚಾದೇಶ ಬಂದಾಗ **ಗಾತಿಸ್ಥಾಘುಪಾಭೂ**—(ಪಾ. ಸೂ. ೨-೪-೭೭) ಎಂಬುದರಿಂದ ಅದಕ್ಕೆ ಲುಕ್. ಪ್ರತ್ಯಯಸಕಾರಕ್ಕೆ ರುತ್ವ ವಿಸರ್ಗ. ಮಾಙ್ ಸಂಬಂಧವಿರುವುದರಿಂದ **ನ ಮಾಙ್ ಯೋಗೇ**—(ಪಾ. ಸೂ. ೬-೪-೭೪) ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ. ತಿಙಂತ ನಿಘಾತಸ್ವರ ಬರುತ್ತದೆ. ॥ ೫ ॥



ಸಂಹಿತಾಪಾಠಃ

ಸ ತ್ವಂ ನ ಇಂದ್ರ ಸೂರ್ಯೇ ಸೋ ಅಪ್ಸ್ವನಾಗಾಸ್ತ್ವ ಆ
 ಭಜ ಜೀವಶಂಸೇ ।
ಮಾಂತರಾಂ ಭುಜಮಾ ರೀರಿಷೋ ನಃ ಶ್ರದ್ಧಿತಂ ತೇ ಮಹತ
 ಇಂದ್ರಿಯಾಯ ॥ ೬ ॥

। ಪದಪಾಠಃ ।

ಸಃ । ತ್ವಂ । ನಃ । ಇಂದ್ರ । ಸೂರ್ಯೇ । ಸಃ । ಅಪ್ ऽ ಸು । ಅನಾಗಾಃ ऽ ತ್ವೇ ।
 ಆ । ಭಜ । ಜೀವ ऽ ಶಂಸೇ ।
ಮಾ । ಅಂತರಾಂ । ಭುಜಂ । ಆ । ರಿರಿಷಃ । ನಃ । ಶ್ರದ್ಧಿತಂ । ತೇ । ಮಹತೇ ।
 ಇಂದ್ರಿಯಾಯ ॥ ೬ ॥

ಸಾಯಣಭಾಷ್ಯಂ

ಹೇ ಇಂದ್ರ ಸ ತ್ವಂ ನೋಽಸ್ಮಾನ್ಸೂರ್ಯೇ ಸರ್ವಸ್ಯ ಪ್ರೇರಕ ಆದಿತ್ಯೇ ಆ ಭಜ । ಆಭಾಜಯ । ಆಭಿಮುಖ್ಯೇನ ಭಕ್ತಾನ್ಸಂಭಕ್ತಾನ್ಕುರು । ತಥಾ ಸ ತ್ವಮಪ್ಸ್ವಬ್ದೇವತಾಸ್ವಸ್ಮಾನಾಭಾಜಯ । ಅಪಿ ಚ ಜೀವಶಂಸೇ ಜೀವೈಃ ಪ್ರಾಣಿಭಿಃ ಶಂಸನೀಯೇ ಕಾಮಯಿತವ್ಯೇಽನಾಗಾಸ್ತ್ವೇಽಪಾಪತ್ವೇ ಪಾಪರಾಹಿತ್ಯೇಽಸ್ಮಾನಾಭಾಜಯ । ಅಪಿ ಚ ನೋಽಸ್ಮಾಕಮಂತರಾಂ ಗರ್ಭರೂಪೇಣಾಂತರ್ವರ್ತಮಾನಾಂ ಭುಜಂ ಪಾಲಯಿತ್ರೀಂ ಪ್ರಜಾಮಾ ಸಮಂತಾನ್ಮಾ ರೀರಿಷಃ । ಮಾ ಹಿಂಸೀಃ । ತೇ ತವ ಮಹತೇ ಪ್ರಭೂತಾಯೇಂದ್ರಿಯಾಯ ಬಲಾಯ ಶ್ರದ್ಧಿತಂ । ಅಸ್ಮಾಭಿಃ ಶ್ರದ್ಧಾನಂ ಕೃತಂ । ತ್ವದೀಯಂ ಬಲಂ ಬಹುಮಾನಪೂರ್ವಕಂ ಸ್ತುಮ ಇತ್ಯರ್ಥಃ । ತಸ್ಮಾತ್ತಾದೃಶಬಲಯುಕ್ತಸ್ತ್ವಂ ಮಾ ರೀರಿಷ ಇತಿ ಪೂರ್ವೇಣ ಸಂಬಂಧಃ ॥ ಅನಾಗಾಸ್ತ್ವೇ ನ ವಿದ್ಯತ ಆಗಃ ಪಾಪಂ ಯಸ್ಯ ಸೋಽನಾಗಾಃ । ತಸ್ಯ ಭಾವಸ್ತತ್ತ್ವಂ । ಛಾಂದಸ ಉಪಧಾದೀರ್ಘಃ । ಜೀವಶಂಸೇ । ಶಂಸು ಸ್ತುತೌ । ಕರ್ಮಣಿ ಘಞ್ । ಥಾಥಾದಿನೋತ್ತರಪದಾಂತೋದಾತ್ತತ್ವಂ । ಭುಜಂ । ಭುನಕ್ತಿ ಪಾಲಯತೀತಿ ಭುಕ್ ಪ್ರಜಾ । ಕ್ವಿಪ್ । ರೀರಿಷಃ । ರಿಷ ಹಿಂಸಾಯಾಂ ।

ಸ್ವಾರ್ಥೇ ಣ್ಯಂತಾದಸ್ಮಾಲ್ಲುಜಾ ಚಜಾ ಣಿಲೋಪೇ ಉಪಧಾಹ್ರಸ್ವತ್ವಾದೀನಿ । ಛಾಂದಸಂ ಪದಕಾಲೀನ-ಮಭ್ಯಾಸಹ್ರಸ್ವತ್ವಂ । ಶ್ರದ್ಧಿತಂ । ಶ್ರಚ್ಛಬ್ದಸ್ಯ ಊರ್ಯಾದಿತ್ವೇನ । ಪಾ. ೧.೪.೬೧ । ಗತಿತ್ವಾದ್ಗತಿರನಂತರ ಇತಿ ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ, । ಸಃ ತ್ವಂ—ಪ್ರಸಿದ್ಧನಾದ ನೀನು । ನಃ—ನಮ್ಮನ್ನು । **ಸೂರ್ಯೇ**—ಸೂರ್ಯ ದೇವನಲ್ಲಿ । ಆ ಭಜ—ಭಕ್ತಿಯನ್ನಿಡುವಂತೆ ಪ್ರೇರಿಸು. । (ಹಾಗೆಯೇ) ಸಃ—ಅದೇ ನೀನು । **ಅಪ್ಸು**—ಅಬ್ದೇವತೆ ಗಳಲ್ಲೂ (ಭಕ್ತಿಯನ್ನಿಡುವಂತೆ ನಮ್ಮನ್ನು ಪ್ರೇರಿಸು) । **ಜೀವಶಂಸೇ**—ಪ್ರಾಣಿಗಳಿಂದ ಅಪೇಕ್ಷಿತವಾದ । **ಅನಾಗಾಸ್ತ್ವೇ**—ಪಾಪರಹಿತವಾದ ಮಾರ್ಗದಲ್ಲಿ (ಭಕ್ತಿಯನ್ನಿಡುವಂತೆ ಪ್ರೇರಿಸು) । **ತೇ**—ನಿನ್ನ । **ಮಹತೇ**—ಅತಿ ಮಹತ್ತಾದ । **ಇಂದ್ರಿಯಾಯ**—ಬಲಕ್ಕೆ । **ಶ್ರದ್ಧಿತಂ**—(ನಮ್ಮ) ಶ್ರದ್ಧಾಪೂರ್ವಕವಾದ ಭಕ್ತಿಯು ಸಲ್ಲುತ್ತದೆ. (ಆದ್ದರಿಂದ) । **ನಃ**—ನಮ್ಮ । **ಅಂತರಾಂ**—ಗರ್ಭರೂಪದಲ್ಲಿರುವ । **ಭುಜಂ**—ಸಂತತಿಯನ್ನು । **ಆ**—ಸುತ್ತಲೂ । **ಮಾ ರೀರಿಷಃ**—ಹಿಂಸಿಸಬೇಡ ।

ಭಾವಾರ್ಥ

ಎಲೈ ಇಂದ್ರನೇ, ನಮ್ಮನ್ನೆಲ್ಲಾ ಸೂರ್ಯದೇವನಲ್ಲಿಯೂ, ಅಬ್ದೇವತೆಗಳಲ್ಲಿಯೂ ಸಕಲಪ್ರಾಣಿಗಳಿಂದ ಅಪೇಕ್ಷಿತವಾದ ಪಾಪರಹಿತವಾದ ಮಾರ್ಗದಲ್ಲಿಯೂ ಭಕ್ತಿಯನ್ನಿಡುವಂತೆ ಪ್ರೇರಿಸು. ನಿನ್ನ ಅತಿ ಮಹತ್ತಾದ ಬಲ ದಲ್ಲಿ ನಾವು ಶ್ರದ್ಧೆಯನ್ನಿಟ್ಟು ಭಕ್ತಿಯನ್ನು ಸಲ್ಲಿಸುತ್ತೇವೆ. ಆದ್ದರಿಂದ ಗರ್ಭರೂಪದಲ್ಲಿರುವ ನಮ್ಮ ಸಂತತಿಯನ್ನೂ ಹಿಂಸಿಸದೆ ಎಲ್ಲರನ್ನೂ ರಕ್ಷಿಸು. ನಮ್ಮ ವಂಶವು ಬೆಳೆಯುವಂತೆ ಮಾಡು.

English Translation

Excite in us, Indra, veneration for the sun, for the waters, and for those who are worthy of the praise of living beings, as exempt from sin: injure not our offspring while yet in the womb, for our trust is in your mighty power.

॥ ವಿಶೇಷವಿಷಯಗಳು ॥

ಮಹತೇ ಇಂದ್ರಿಯಾಯ ಶ್ರದ್ಧಿತಂ—ಪ್ರಭೂತಾಯ ಬಲಾಯ ಅಸ್ಮಾಭಿಃ ಶ್ರದ್ಧಾನಂ ಕೃತಂ । ನಿನ್ನ ಪ್ರಭೂತವಾದ ಬಲದಲ್ಲಿ ನಾವು ಶ್ರದ್ಧಾ ಭಕ್ತಿಯನ್ನಿಟ್ಟಿದ್ದೇವೆ ಎಂದು ತಾತ್ಪರ್ಯ. ಇಂದ್ರಿಯಶಬ್ದಕ್ಕೆ ಇರುವ ಅನೇಕ ಅರ್ಥಗಳನ್ನು ಇದೇ ಭಾಗದ ೧೦೩ನೇ ಸೂಕ್ತದ ಮೊದಲನೇ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಿದೆ. ಇಲ್ಲಿ ಇಂದ್ರಿಯವೆಂದರೆ ಬಲವೆಂದರ್ಥ. ಮಹತೇ ಇಂದ್ರಿಯಾಯ— ಅಸಾಧಾರಣವಾದ ಶಕ್ತಿಗಾಗಿ ; ಎಂದರೆ,

ಇಂದ್ರೋ ದಿವ ಇಂದ್ರ ಈಶೇ ಪೃಥಿವ್ಯಾ ಇಂದ್ರೋ ಅಪಾಮಿಂದ್ರ ಇತ್ಪರ್ವತಾನಾಂ ।
ಇಂದ್ರೋ ವೃಧಾಮಿಂದ್ರ ಇನ್ಮೇಧಿರಾಣಾಮಿಂದ್ರಃ ಕ್ಷೇಮೇ ಯೋಗೇ ಹವ್ಯ ಇಂದ್ರಃ ।
(ಋ ಸಂ. ೧೦-೮೯-೧೦)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿಸಿರುವಂತೆ ಸಕಲ ಲೋಕಗಳ ಪ್ರಭುವಾಗಿರುವವನೂ, ಸಮಸ್ತ ಅಸುರರನ್ನು ನಿಗ್ರಹಮಾಡುವವನೂ ಆದ, ಆದುದರಿಂದಲೇ ದುಷ್ಟಶಿಕ್ಷಣ ಮತ್ತು ಶಿಷ್ಟರಕ್ಷಣಗಳ ಶಕ್ತಿಯನ್ನು ಹೊಂದಿರುವ ಇಂದ್ರನಲ್ಲಿ ಅಪಾರವಾದ ಭಕ್ತಿ ಶ್ರದ್ಧೆಯಿರುವುದು ಸಹಜವಾಗಿದೆ.

ಅಧಾ ಚನ ಶ್ರದ್ದಧತಿ ತ್ವಿಷೀಮತ ಇಂದ್ರಾಯ ವಜ್ರಂ ನಿಘನಿಘ್ನತೇ ವಧಂ ।
(ಋ. ಸಂ. ೧-೫೫-೫)

**ಅಸ್ಮೇ ಸೂರ್ಯಾಚಂದ್ರಮಸಾಭಿಚಕ್ಷೇ ಶ್ರದ್ಧೇ ಕಮಿಂದ್ರ ಚರತೋ ವಿತರ್ತುರಂ ।**
(ಋ. ಸಂ. ೧-೧೦೨-೨)

**ತದಸ್ಯೇದಂ ಪಶ್ಯತಾ ಭೂರಿ ಪುಷ್ಟಂ ಶ್ರದಿಂದ್ರಸ್ಯ ಧತ್ತನ ವೀರ್ಯಾಯ ।**
(ಋ. ಸಂ. ೧-೧೦೩-೫)

ಇತ್ಯಾದ್ಯನೇಕಋಕ್ಕುಗಳಲ್ಲಿ ಇಂದ್ರನ ಮಹತ್ತಾದ ವೀರ್ಯದ ವಿಷಯದಲ್ಲಿ ಶ್ರದ್ಧೆಯು ತಾನಾಗಿಯೇ ಹುಟ್ಟು ವುದರಿಂದ ಆ ಅಂಶವನ್ನು ಈ ಋಕ್ಕಿನಲ್ಲಿಯೂ ಸಹ **ಮಹತೇ ಇಂದ್ರಿಯಾಯ ಶ್ರದ್ಧಿತಂ** ಎಂದು ಹೇಳಿದೆ.

**ಜೀವಶಂಸೇ**—ಈ ಪದಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಬಹುದು. ಮೊದಲನೆಯದಾಗಿ **ಜೀವ ಶಂಸೇ**—ಪ್ರಾಣಿಗಳಿಂದ ಅಪೇಕ್ಷಿತವಾದುದೂ, **ಅನಾಗಾಸ್ತ್ವೇ** ಪಾಪರಹಿತವಾದುದೂ ಆದ ಮಾರ್ಗದಲ್ಲಿ(ಶ್ರದ್ಧೆಯು ನ್ನಿಡುವಂತೆ ಪ್ರೇರಿಸು) ಎಂದು ಒಂದು ಅರ್ಥವೂ, ಅಥವಾ, ಸ್ಕಂದಸ್ವಾಮಿಗಳು—**ಸೂರ್ಯೇ—ಸೂರ್ಯೇಣ ತು ತತ್ಸಂಬದ್ಧೋ ದ್ಯುಲೋಕ ಉಚ್ಯತೇ । ಅಪ್ಸ್ವಿತ್ಯಪ್ಸಬ್ದೋಽಂತರಿಕ್ಷನಾಮ । ಜೀವಶಂಸ ಇತ್ಯಪಿ ಪಾರ್ಥಿವೋ ಲೋಕ ಉಚ್ಯತೇ । ತತ್ರ ಹ್ಯತಿಶಯೇನ ಜೀವಿತಂ ಆ ಶಂಸ್ಯತೇ । ಸೂರ್ಯಸಂಬದ್ಧೇ ದ್ಯುಲೋಕೇಽಂತರಿಕ್ಷೇ ಚ ಜೀವಿತಾಶಂಸಾಬಹುಲೇ ಚ ಪಾರ್ಥಿವೇ ಲೋಕೇ ಅನಾಗಾಸ್ತ್ವಾಯ ಅಸ್ಮಾನ್ ಸಂಭಜೇತ್ಯರ್ಥಃ ।** **ಸೂರ್ಯೇ** ಎಂದರೆ ಸೂರ್ಯನಿಗೆ ಸಂಬಂಧಿಸಿದ ದ್ಯುಲೋಕವೆಂದೂ, **ಅಪ್ಸು** ಎಂದರೆ **ಅಪ್**ಶಬ್ದವು ಅಂತರಿಕ್ಷ ನಾಮಗಳಲ್ಲಿ ಪಠಿತವಾಗಿರುವುದರಿಂದ ಅಂತರಿಕ್ಷವೆಂದೂ. ಅತಿಶಯವಾದ ಜೀವಿತವನ್ನು ಇಲ್ಲಿ ಅಪೇಕ್ಷಿಸುವುದರಿಂದ **ಜೀವಶಂಸ**ವೆಂದರೆ ಪೃಥ್ವೀಲೋಕವೆಂದೂ, ಹೀಗೆ ದ್ಯುಲೋಕದಲ್ಲೂ, ಪೃಥಿವ್ಯಂತರಿಕ್ಷಗಳಲ್ಲೂ ಸಹ ಪಾಪರಹಿತವಾದ ಮಾರ್ಗದಲ್ಲಿ ನಾವು ಶ್ರದ್ಧೆಯಿಂದ ವ್ಯವಹಾರ ಮಾಡುವಂತೆ ನಮ್ಮನ್ನು ಪ್ರೇರಿಸು ಎಂದು ಪ್ರಾರ್ಥಿಸಿದೆಯೆಂದು ತಾತ್ಪರ್ಯವನ್ನು ಹೇಳಿರುವಂತೆ ಇನ್ನೊಂದು ವಿಧವಾದ ಅರ್ಥವೂ ಇರುವುದು.

**ನಃ ಅಂತರಾಂ ಭುಜಂ ಮಾ ರೀರಿಷಃ**—ಇಲ್ಲಿಯೂ ಎರಡು ವಿಧವಾದ ಭಾವಾವಿಷ್ಕರಣವನ್ನು ತೋರಿಸು ವಂತೆ ಅರ್ಥಮಾಡಬಹುದು. ಮೊದಲನೆಯದಾಗಿ, ಸಾಯಣರು ಹೇಳುವಂತೆ, **ನಃ**—ನಮ್ಮ ; **ಅಂತರಾಂ**—**ಗರ್ಭ ರೂಪೇಣ ಅಂತರ್ವರ್ತಮಾನಾಂ । ಭುಜಂ—ಪಾಲಯಿತ್ರೀಂ ಪ್ರಜಾಂ ; ಆ-ಸಮಂತಾತ್, ಮಾ ರೀರಿಷಃ-ಮಾಹಿಂಸೀಃ** ನಮ್ಮ ಪತ್ನಿಯಲ್ಲಿ ಗರ್ಭರೂಪದಲ್ಲಿರುವುದೂ, ನಮ್ಮ ವಂಶಗಳನ್ನು ರಕ್ಷಿಸುವುದೂ ಆದ ನಮ್ಮ ಪ್ರಜಾರೂಪವಾದ ಸಂತತಿಗಳನ್ನು ಹಿಂಸಿಸಬೇಡ ಎಂದು ಪ್ರಾರ್ಥಿಸುವಂತೆ ಒಂದು ವಿಧವಾಗಿಯೂ, ಎರಡನೆಯದಾಗಿ,

**ಅಂತರಾಶಬ್ದಃ ಸನ್ನಿಕೃಷ್ಟವಚನಃ । ಸನ್ನಿಕೃಷ್ಟಂ ಚ ಐಹಲೌಕಿಕಂ ಭೋಗಂ ಮಾ ಹಿಂಸೀಃ ।** ಅಂತರಾ ಶಬ್ದಕ್ಕೆ ಹತ್ತಿರವೆಂಬ ಅರ್ಥವಿರುವುದರಿಂದ, ನಮ್ಮ ಸಮೀಪವರ್ತಿಗಳಾದುವೂ, ಐಹಲೌಕಿಕವಾದುದೂ (ಈ ಲೋಕ ಸಂಬಂಧವಾದುದೂ) ಆದ ಭೋಗಗಳನ್ನು ನಾಶಮಾಡಬೇಡ ಎಂದು ಪ್ರಾರ್ಥಿಸುವಂತೆ ಇನ್ನೊಂದು ವಿಧವಾಗಿಯೂ ತಾತ್ಪರ್ಯವನ್ನು ಹೇಳಬಹುದು. **ಭುಜಶಬ್ದಕ್ಕೆ** ಪಾಲನ ಮತ್ತು ಭೋಗ ಎಂಬ ಎರಡು ವಿಧವಾದ ಅರ್ಥಗಳೂ ಇರುವುದರಿಂದ ಇಲ್ಲಿ ಯಾವ ಅರ್ಥವನ್ನು ಬೇಕಾದರೂ ಹೇಳಬಹುದು. ಕೆಲವು ಕಡೆಗಳಲ್ಲಿ ಭೋಗಗಳೆಂದೂ ಇನ್ನು ಕೆಲವೆಡೆಗಳಲ್ಲಿ ಪಾಲನವೆಂದೂ ಆಗುವ ಅರ್ಥವ್ಯತ್ಯಾಸವು ಸಂದರ್ಭಾನುಸಾರವಾಗಿದೆ. ಉದಾಹರಣೆಗೆ—

**ವಿದ್ಯಾಮ ಯಾಸಾಂ ಭುಜೋ ಧೇನೂನಾಂ ನ ವಜ್ರಿವಃ ।**

(ಋ. ಸಂ. ೧೦-೨೨-೧೩)

**ಯೋ ಇಂದ್ರ ಭುಜ ಆಭರಃ ಸ್ವರ್ವಾ ಅಸುರೇಭ್ಯಃ ।**

(ಋ. ಸಂ. ೮-೯೭-೧)

ಇತ್ಯಾದಿ ಋಕ್ಕುಗಳಲ್ಲಿ **ಭುಜಃ** ಎಂದರೆ **ಭೋಗಾನಿ** ಅಥವಾ **ಭೋಕ್ತವ್ಯಾನಿ** ಎಂದರ್ಥವೂ,

**ಇಂದ್ರೇ ಭುಜಂ ಶಶಮಾನಾಸ ಆಶತ ಸೂರ್ಯೋ ದೃಶೀಕೇ ವೃಷಣಶ್ಚ ಪೌಂಸ್ಯೇ ।**

(ಋ. ಸಂ. ೧೦-೯೨-೭)

ಇತ್ಯಾದಿ ಋಕ್ಕುಗಳಲ್ಲಿ **ಭುಜಂ** ಎಂದರೆ **ಪಾಲನಂ** ಎಂದರ್ಥವೂ ಇರುವುದು. ಪ್ರಕೃತವಾದ ಋಕ್ಕಿನಲ್ಲಿರುವ ಭುಜ ಶಬ್ದಕ್ಕೆ ಈ ಎರಡರಲ್ಲಿ ಯಾವ ಅರ್ಥವನ್ನು ಹೇಳಿದರೂ ಸಹ ಅನ್ವಯವೂ, ತಾತ್ಪರ್ಯವೂ ಹೊಂದಿಕೊಳ್ಳುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಸೂರ್ಯೇ**—ಸರತಿ ಆಕಾಶೇ ಇತಿ ಸೂರ್ಯಃ ಸೃ ಗತೌ ಧಾತು. **ರಾಜಸೂಯ ಸೂರ್ಯ**—(ಪಾ.ಸೂ. ೩-೧-೧೧೪) ಎಂಬುದರಿಂದ ಕ್ಯಬಂತವಾಗಿ ನಿಪಾತಿತವಾಗಿದೆ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. ಸಪ್ತಮೀ ಏಕವಚನಾಂತರೂಪ.

**ಅಪ್ಸು**—ಅಪ್ ಶಬ್ದ. ಸಪ್ತಮೀವಿಭಕ್ತ್ಯಂತರೂಪ **ಊಡಿದಂ ಪದಾದಿ** ( ಪಾ. ಸೂ. ೬-೧-೧೭೧ ) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅನಾಗಾಸ್ತ್ವೇ**—ನ ವಿದ್ಯತೇ ಆಗಃ ಪಾಪಂ ಯಸ್ಯ ಸಃ ಅನಾಗಾಃ ಅನಾಗಸಃ ಭಾವಃ ಅನಾಗಸ್ತ್ವಂ ಛಾಂದಸವಾಗಿ ಉಪಧಾದೀರ್ಘ ಬರುತ್ತದೆ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಸಪ್ತಮೀ ಏಕವಚನಾಂತರೂಪ.

**ಭಜ**—ಭಜ ಸೇವಾಯಾಮ್. ಧಾತು. ಲೋಟ್ ಮಧ್ಯಮಪುರುಷ ಏಕವಚನರೂಪ. ತಿಙಂತನಿಘಾತ ಸ್ವರ ಬರುತ್ತದೆ.

**ಜೀವಶಂಸೇ**—ಶಂಸು ಸ್ತುತೌ ಧಾತು. ಕರ್ಮಣಿಯಲ್ಲಿ ಘಞ್ ಪ್ರತ್ಯಯ. ಜೀವೈಃ ಶಂಸನೀಯಃ ಜೀವಶಂಸಃ **ಥಾಥಘಞ್**—(ಪಾ. ಸೂ. ೬-೨-೧೪೪) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ ಸಪ್ತಮೀ ಏಕವಚನಾಂತರೂಪ.

**ಭುಜಮ್**—ಭುನಕ್ತಿ ಪಲಾಯತಿ ಇತಿ ಭುಕ್—ಪ್ರಜಾ. ಭುಜ ಪಾಲನಾಭ್ಯವಹಾರಯೋಃ ಧಾತು. ಇದಕ್ಕೆ **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ದ್ವಿತೀಯಾ ಏಕವಚನಾಂತರೂಪ.

**ರೀರಿಷಃ**—ರಿಷ ಹಿಂಸಾಯಾಂ, ಧಾತು. ಸ್ವಾರ್ಥದಲ್ಲಿ ಇದಕ್ಕೆ ಣಿಚ್ ಬರುತ್ತದೆ. ಣ್ಯಂತದಮೇಲೆ ಲುಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. **ಣಿಶ್ರಿದ್ರುಸ್ರುಭ್ಯಃ**—(ಪಾ. ಸೂ. ೩-೧-೪೮) ಎಂಬುದರಿಂದ ಚ್ಲಿಗೆ ಚಙಾದೇಶ. **ಚಙಿ** (ಪಾ. ಸೂ. ೬-೧-೧೧) ಎಂಬುರಿಂದ ಧಾತುವಿನ ಏಕಾಚಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್‌ಶೇಷ. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಚಙ್ ನಿಮಿತ್ತವಾಗಿ ಣಿಗೆ ಲೋಪ. ಣಿಚ್ ನಿಮಿತ್ತವಾಗಿ ಹಿಂದೆ ಧಾತುವಿನ ಉಪಧೆಗೆ ಬಂದಿರುವ ದೀರ್ಘಕ್ಕೆ (ಗುಣದ ಏಕಾರ) **ಣೌ ಚಙ್ಯುಪಧಾಯಾಃ ಹ್ರಸ್ವಃ**—(ಪಾ. ಸೂ. ೭-೪-೧) ಎಂಬುದರಿಂದ ಹ್ರಸ್ವ. **ಏಚ ಇಕ್‌ಹ್ರಸ್ವಾ-ದೇಶೇ** ಎಂಬ ನಿಯಮದಿಂದ ಪುನಃ ಇಕಾರವೇ ಬರುತ್ತದೆ. **ಸನ್ವಲ್ಲಘುನಿ** (ಪಾ. ಸೂ. ೭-೪-೯೩) ಎಂಬುದರಿಂದ ಸನ್ವದ್ಭಾವವಿರುವುದರಿಂದ **ದೀರ್ಘೋಽಲಘೋಃ**—(ಪಾ. ಸೂ. ೭-೪-೯೪) ಎಂಬುದರಿಂದ ಅಭ್ಯಾಸಕ್ಕೆ ಹ್ರಸ್ವ ಛಾಂದಸವಾಗಿ ಪದಕಾಲದಲ್ಲಿ ಅಭ್ಯಾಸಕ್ಕೆ ಹ್ರಸ್ವ ಬರುತ್ತದೆ. ಪ್ರತ್ಯಯಸಕಾರಕ್ಕೆ ರುತ್ವವಿಸರ್ಗ ಬಂದಾಗ ರೀರಿಷಃ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಶ್ರದ್ಧಿತಮ್**—ಶ್ರತ್ ಎಂಬುದು ಊರ್ಯಾದಿಯಲ್ಲಿ ಸೇರಿರುವುದರಿಂದ **ಊರ್ಯಾದಿಚ್ವಿಡಾಚಶ್ಚ**—(ಪಾ. ಸೂ. ೧-೪-೬೧) ಎಂಬುದರಿಂದ ಗತಿಸಂಜ್ಞೆಯನ್ನು ಹೊಂದುತ್ತದೆ. ಧಾಞ್ ಧಾತುವಿಗೆ **ಕ್ತ**ಪ್ರತ್ಯಯ ಮಾಡಿದಾಗ **ದಧಾತೇರ್ಹಿಃ** (ಪಾ. ಸೂ. ೭-೪-೪೨) ಎಂಬುದರಿಂದ ಹಿ ಆದೇಶ. ಹಿತ ಎಂದು ರೂಪವಾಗುತ್ತದೆ. **ಗತಿರನಂತರಃ** (ಪಾ. ಸೂ. ೬-೨ ೪೯) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಮಹತೇ**—ಮಹತ್ ಶಬ್ದ. **ಬೃಹನ್ಮಹತೋರುಪಸಂಖ್ಯಾನಮ್**-ಎಂಬುದರಿಂದ ವಿಭಕ್ತಿಗೆ (ಚತುರ್ಥೀ) ಉದಾತ್ತಸ್ವರ ಬರುತ್ತದೆ.

**ಇಂದ್ರಿಯಾಯ**—ಇಂದ್ರಸ್ಯ ಲಿಂಗಂ ಇಂದ್ರಿಯಮ್. **ಇಂದ್ರಿಯಮಿಂದ್ರಲಿಂಗಮಿಂದ್ರ**—(ಪಾ. ಸೂ. ೫-೨-೯೩) ಎಂಬುದರಿಂದ ಘಚ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ॥ ೬ ॥

——— :೦: ———

। ಸಂಹಿತಾಪಾಠಃ ।

ಅಧಾ ಮನ್ಯೇ ಶ್ರತ್ತೇ ಅಸ್ಮಾ ಅಧಾಯಿ ವೃಷಾ ಚೋದಸ್ವ
ಮಹತೇ ಧನಾಯ।
ಮಾ ನೋ ಅಕೃತೇ ಪುರುಹೂತ ಯೋನಾವಿಂದ್ರ ಕ್ಷುಧ್ಯದ್ಭ್ಯೋ
ವಯ ಆಸುತಿಂ ದಾಃ ॥ ೭ ॥

ಪದಪಾಠಃ।

ಅಧ। ಮನ್ಯೇ। ಶ್ರತ್। ತೇ। ಅಸ್ಮೈ। ಅಧಾಯಿ। ವೃಷಾ। ಚೋದಸ್ವ।
ಮಹತೇ। ಧನಾಯ।
ಮಾ। ನಃ। ಅಕೃತೇ। ಪುರುಽಹೂತ। ಯೋನೌ। ಇಂದ್ರ। ಕ್ಷುಧ್ಯತ್ಽಭ್ಯಃ।
ವಯಃ। ಆಽಸುತಿಂ। ದಾಃ ॥ ೭ ॥

ಸಾಯಣಭಾಷ್ಯಂ

ಹೇ ಇಂದ್ರ ಅಧಾಥಾನಂತರಂ ಮನ್ಯೇ। ತ್ವಾಂ ಮನಸಾ ಜಾನಾಮಿ। ತೇ ತವಾಸ್ಮೈ ಬಲಾಯ ಶ್ರದಧಾಯಿ। ಅಸ್ಮಾಭಿಃ ಶ್ರದ್ಧಾ ಕೃತಾ। ತ್ವದೀಯಬಲವಿಷಯಮಾದರಾತಿಶಯೇನ ಸ್ತೋತ್ರಂ ಕೃತಮಿತ್ಯರ್ಥಃ। ವೃಷಾ ಕಾಮಾನಾಂ ವರ್ಷಿತಾ ಸ ತ್ವಂ ಮಹತೇ ಪ್ರೌಢಾಯ ಧನಾಯ ಚೋದಸ್ವ। ಚೋದಯ। ಅಸ್ಮಾನ್ಪ್ರೇರಯ। ಹೇ ಪುರುಹೂತ। ಪುರುಭಿರ್ಬಹುಭಿರ್ಯಜಮಾನೈರಾಹೂತೇಂದ್ರ। ಅಕೃತೇಽನಿಷ್ಪಾದಿತೇ ಧನಶೂನ್ಯೇ ಯೋನೌ। ಗೃಹನಾಮೈತತ್। ಗೃಹೇ ನೋಽಸ್ಮಾನ್ಮಾ ಧಾಃ। ನಿಧೇಹಿ। ಧನಧಾನ್ಯಪೂರ್ಣೇ ಗೃಹೇಽಸ್ಮಾನ್ವಾಸಯೇತ್ಯರ್ಥಃ। ಅಪಿ ಚ ಹೇ ಇಂದ್ರ ಕ್ಷುಧ್ಯದ್ಭ್ಯೋ ಬುಭುಕ್ಷಿತೇಭ್ಯೋಽನ್ಯೇಭ್ಯೋಽಪಿ ಸ್ತೋತೃಭ್ಯೋ ವಯೋಽನ್ನಮಾಸುತಿಂ ಪೇಯಂ ಕ್ಷೀರಾದಿಕಂ ಚ ದಾಃ। ದೇಹಿ ॥ ಅಧಾಯಿ। ದಧಾತೇಃ ಕರ್ಮಣಿ ಲುಙಿ ಚ್ಲೇಶ್ಚಿಣ್। ಆತೋ ಯುಕ್ ಚಿಣ್ಕೃತೋರಿತಿ ಯುಕ್। ಕ್ಷುಧ್ಯದ್ಭ್ಯಃ। ಕ್ಷುಧ ಬುಭುಕ್ಷಾಯಾಂ। ದಿವಾದಿತ್ವಾತ್ ಶ್ಯನ್। ನಿತ್ತ್ವಾದಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಅಥ—ಒಡನೆಯೇ । ಮನ್ಯೇ—(ನಿನ್ನ) ಧ್ಯಾನವನ್ನು ಮಾಡುತ್ತೇನೆ । ತೇ—ನಿನ್ನ । ಅಸ್ಮೈ—ಈ ಬಲಕ್ಕೆ । ಶ್ರತ್ ಅಧಾಯಿ—ಶ್ರದ್ಧಾಪೂರ್ವಕವಾದ ಭಕ್ತಿಯು ಸಲ್ಲಿಸಲ್ಪಟ್ಟಿದೆ । ವೃಷಾ—(ಇಷ್ಟಾರ್ಥಗಳನ್ನು) ಸುರಿಸುವ ನೀನು । ಮಹತೇ—ಅತ್ಯಧಿಕವಾದ । ಧನಾಯ—ಧನಕ್ಕೆ । ಚೋದಸ್ವ—(ನಾವು ಭಾಗಿಗಳಾಗುವಂತೆ) ಪ್ರೇರಿಸು (ಸಹಾಯಮಾಡು) । ಪುರುಹೂತ—ಅನೇಕರಿಂದ ಕರೆಯಲ್ಪಡುವ ಇಂದ್ರನೇ, । ಅಕೃತೇ—ಧನರಹಿತವಾದ । ಯೋನೌ—ಮನೆಯಲ್ಲಿ । ನಃ—ನಮ್ಮನ್ನು । ಮಾ—ಇಡಬೇಡ (ಮತ್ತು) । ಕ್ಷುಧ್ಯದ್ಭ್ಯಃ—ಹಸಿವಿನಿಂದ ಬಳಲುವ ಇತರ ಭಕ್ತರಿಗೂ ಸಹ । ವಯಃ—ಅನ್ನವನ್ನೂ । ಆಸುತಿಂ—ಕ್ಷೀರಾದಿಗಳನ್ನೂ । ದಾಃ—ಕೊಡು ।

ಭಾವಾರ್ಥ

ಎಲೈ ಇಂದ್ರನೇ, ನಿನ್ನ ಧ್ಯಾನವನ್ನು ಈಗಲೇ ಮಾಡುತ್ತೇವೆ. ನಿನ್ನ ಬಲದಲ್ಲಿ ಶ್ರದ್ಧೆಯನ್ನಿಟ್ಟು ಭಕ್ತಿಯನ್ನು ಸಲ್ಲಿಸುತ್ತೇವೆ. ಇಷ್ಟಾರ್ಥಗಳನ್ನು ಸುರಿಸುವವನಾಗಿ ಅತ್ಯಧಿಕವಾದ ಧನವನ್ನು ಹೊಂದುವಂತೆ ನಮಗೆ ಸಹಾಯಮಾಡು. ಪುರುಹೂತನಾದ ಇಂದ್ರನೇ, ನಮ್ಮನ್ನು ಧನರಹಿತವಾದ ಮನೆಯಲ್ಲಿ ಇಡಬೇಡ. ಮತ್ತು ನಮಗೆ ಕೊಡುವಂತೆಯೇ ಹಸಿವಿನಿಂದ ಬಳಲುವ ಇತರ ಭಕ್ತರಿಗೂ ಸಹ ಅನ್ನವನ್ನೂ ಕ್ಷೀರಾದಿಗಳನ್ನೂ ಕೊಡು.

English Translation

Hence, Indra, I meditate on you ; on this (your power) has our trust been placed : showerer (of benefits), direct us to great wealth ; consign us not, you who are invoked by many, to a destitute dwelling ; give, Indra, food and drink to the hungry.

॥ ವಿಶೇಷವಿಷಯಗಳು ॥

ಅಥ—ಅನಂತರ ಎಂದಾಗಲಿ, ಹಿಂದಿನ ಋಕ್ಕಿನಲ್ಲಿ ಹೇಳಿರುವ ಶ್ರದ್ಧೆಯಲ್ಲದೆ ಅಥವಾ ಶ್ರದ್ಧೆಯೊಡನೆ ಎಂದಾಗಲಿ ಅರ್ಥವಾಗಬಹುದು.

ಮನ್ಯೇ—ತ್ವಾಂ ಮನಸಾ ಜಾನಾಮಿ । ನಿನ್ನನ್ನು ಮನಸ್ಸಿನಲ್ಲಿಯೇ ತಿಳಿಯುತ್ತೇನೆ ಎಂದರೆ ನಿನ್ನ ಮಹತ್ತ್ವವನ್ನು ಮನಸ್ಸಿನಲ್ಲಿಯೇ ಚಿಂತಿಸುತ್ತಿರುತ್ತೇನೆ, ಮತ್ತು ಅಸ್ಮೈ ಶ್ರತ್ ಅಧಾಯಿ—ಈ ನಿನ್ನ ಬಲಕ್ಕೆ ಶ್ರದ್ಧಾಪೂರ್ವಕವಾದ ಭಕ್ತಿಯು ಸಲ್ಲಿಸಲ್ಪಡುತ್ತದೆ ಎಂದು ಸಾಯಣರೂ,

ಅಥಶಬ್ದೋಽತ್ರ ಪದಪೂರಣಃ ಅಪಿ ಚೇತ್ಯಸ್ಮಿನ್ವಾ ಸ್ಥಾನೇ । ಅಪಿ ಚ ಮನ್ಯೇ ಶ್ರತ್ । ಮನ್ಯತೆ ಇತಿ ಕಾಂತಿಕರ್ಮಾ । ಶ್ರದಿತ್ಯಪಿ ಸತ್ಯನಾಮ । ಸತ್ಯಮಿದಂ ಕಾಮಯೇಽಹಂ । ಅಥ ಶಬ್ದಕ್ಕೆ ಮತ್ತು ಎಂದರ್ಥ. ಶ್ರತ್ ಎಂದರೆ ಸತ್ಯ. ಮನ್ಯತೇ ಎಂಬುದು ಕಾಂತಿಕರ್ಮಗಳಲ್ಲಿ ಪಠಿತವಾಗಿದೆ. ಸತ್ಯವಾಗಿಯೂ

ಅಪೇಕ್ಷಿಸುತ್ತೇನೆ ಎಂದರ್ಥ. ಆದರೆ ಯಾವುದನ್ನು ಎಂಬ ಆಕಾಂಕ್ಷೆಯು ಬರುತ್ತದೆ. ಆಗ **ಸಾಮರ್ಥ್ಯಾತ್ ಸೋಮಾದಿ ಹವಿಃ** । ಸೋಮರಸಾದ್ಯಾಹುತಿಗಳು. ಸೋಮಾದ್ಯಾಹುತಿಗಳನ್ನು ಅರ್ಪಿಸಲು ನಾನು ಸತ್ಯವಾಗಿಯೂ ಅಪೇಕ್ಷಿಸುತ್ತೇನೆ ಎಂದಭಿಪ್ರಾಯವೆಂದು ಸ್ಕಂದಸ್ವಾಮಿಗಳೂ ವಿವರಿಸಿದ್ದಾರೆ. ನನ್ನ ಈ ಶ್ರದ್ಧಾಭಕ್ತಿಗಳನ್ನು ತಿಳಿದು ಕೊಂಡು ಅತ್ಯಧಿಕವಾದ ಧನಕ್ಕೆ ಭಾಗಿಗಳಾಗುವಂತೆ ಪ್ರೇರಿಸು ಎಂದು ಪ್ರಾರ್ಥಿಸಿದೆ.

**ಅಕೃತೇ— ಅನಿಷ್ಪಾದಿತೇ ಧನಶೂನ್ಯೇ** । ಧನರಹಿತವಾದ ಎಂದಾಗಲಿ, **ಅಸಂಸ್ಕೃತೇ** ಅಯೋಗ್ಯವಾದ ಎಂದಾಗಲಿ ಅರ್ಥವಾಗುತ್ತದೆ.

**ಯೋನೌ—ಗೃಹೇ** । ಮನೆಯಲ್ಲಿ **ಯೋನಿ** ಶಬ್ದಕ್ಕೆ ಬೇರೆ ಬೇರೆ ಅರ್ಥಗಳಲ್ಲಿರುವ ಪ್ರಯೋಗಗಳನ್ನು ಈ ಸೂಕ್ತದ ಒಂದನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ.

**ದುರೋಕಶೋಚಿಃ ಕ್ರತುರ್ನ ನಿತ್ಯೋ ಜಾಯೇವ ಯೋನಾವರಂ ವಿಶ್ವಸ್ಮೈ** ।
(ಋ. ಸಂ. ೧-೬೬-೫)

ಇತ್ಯಾದಿ ಋಕ್ಕುಗಳಲ್ಲಿ **ಯೋನಿ** ಶಬ್ದಕ್ಕೆ ಗೃಹವೆಂದರ್ಥವಾಗುವಂತೆ ಇಲ್ಲಿಯೂ ಸಹ ಗೃಹವೆಂದರ್ಥ. ಅಸಂಸ್ಕೃತ ವಾದುದೂ ಯಜ್ಞಕ್ಕೆ ಅನರ್ಹವಾದುದೂ ಆದ ಗೃಹದಲ್ಲಿ ನನ್ನನ್ನು ಇರಿಸಬೇಡ ಎಂದು ಪ್ರಾರ್ಥಿಸಿದೆ.

**ಆಸುತಿಂ—ಪೇಯಂ ಕ್ಷೀರಾದಿಕಂ** । ಕುಡಿಯಲು ರಸರೂಪವಾದ ಕ್ಷೀರಾದಿಗಳನ್ನು, ಎಂದರ್ಥ.

**ತ್ವಯಾ ಮರ್ತಾಸಃ ಸ್ವದಂತ ಆಸುತಿಂ ತ್ವಂ ಗರ್ಭೋ ವೀರುಧಾಂ ಜಜ್ಞಿಷೇ ಶುಚಿಃ** ।
(ಋ. ಸಂ: ೨-೧-೧೪)

ಇತ್ಯಾದಿ ಋಕ್ಕುಗಳಲ್ಲಿ **ಆಸುತಿ** ಶಬ್ದಕ್ಕೆ **ಅಭಿಷುತವಾದುದೂ** ರಸರೂಪವಾದುದೂ ಕ್ಷೀರಾದ್ಯನ್ನವೆಂದರ್ಥ. ಅವೆಲ್ಲವನ್ನೂ ಕೊಡು ಎಂದು ಇಂದ್ರನನ್ನು ಪ್ರಾರ್ಥಿಸಿದೆ.

ವ್ಯಾಕರಣಪ್ರಕ್ರಿಯಾ

**ಅಧಾ**—ಅಥ ಎಂಬಲ್ಲಿ ಛಂದಸ್ಸಿನಲ್ಲಿ ವರ್ಣವ್ಯತ್ಯಯದಿಂದ ಧಕಾರಾದೇಶ. **ನಿಪತಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಮನ್ಯೇ**—ಮನ ಜ್ಞಾನೇ. ಧಾತು. ದಿವಾದಿ ಲಟ್ ಉತ್ತಮಪುರುಷ ಏಕವಚನರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಅಧಾಯಿ**—ಡುಧಾಞ್ ಧಾರಣಪೋಷಣಯೋಃ ಧಾತು. ಕರ್ಮಣಿಯಲ್ಲಿ ಲುಙ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. ಚ್ಲಿ ಬಂದಾಗ **ಚಿಣ್ ಭಾವಕರ್ಮಣೋಃ**—(ಪಾ. ಸೂ. ೩-೧-೬೬) ಎಂಬುದರಿಂದ ಅದಕ್ಕೆ ಚಿಣಾದೇಶ. ಆದಂತಧಾತುವಾದುದರಿಂದ **ಆತೋ ಯುಕ್ ಚಿಣ್ಕೃತೋಃ**—(ಪಾ. ಸೂ. ೭-೩-೩೩) ಎಂಬುದರಿಂದ ಚಿಣ್ಪರಕವಾಗಿ ಧಾತುವಿಗೆ ಯುಗಾಗಮ. **ಚಿಣೋ ಲುಕ್**—(ಪಾ. ಸೂ. ೬-೪-೧೦೪)

ಎಂಬುದರಿಂದ ಚಿಣಿನ ಪರದಲ್ಲಿರುವ ತ ಶಬ್ದಕ್ಕೆ ಲುಕ್. ಅಂಗಕ್ಕೆ ಆಡಾಗಮ. ಅಧಾಯಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಚೋದಸ್ವ**—ಚುದ ಪ್ರೇರಣೇ. ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಥಾಸಿಗೆ ಸೇ ಆದೇಶ ಬಂದಾಗ **ಸವಾಭ್ಯಾಂ ವಾಮೌ**—(ಪಾ. ಸೂ. ೩-೪-೯೧) ಎಂಬುದರಿಂದ ಏಕಾರಕ್ಕೆ ವತ್ವ. **ಛಂದಸ್ಯುಭಯಥಾ**—(ಪಾ. ಸೂ. ೩-೪-೧೧೭) ಎಂಬುದರಿಂದ ಶಪಿಗೆ ಆರ್ಧಧಾತುಕಸಂಜ್ಞೆಯೂ ಇರುವುದರಿಂದ **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. ತಿಙಂತನಿಘಾತಸ್ವರ ಬರುತ್ತದೆ.

**ಅಕೃತೇ**—ನ ಕೃತಂ ಅಕೃತಂ: ತಸ್ಮಿನ್. ನಞ್‌ತತ್ಪುರುಷ ಸಮಾಸ. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯ ಪೂರ್ವಪದಪ್ರಕೃತಿಸ್ವರ ಬರುತ್ತದೆ

**ಕ್ಷುಧ್ಯದ್ಭ್ಯಃ**—ಕ್ಷುಧ ಬುಭುಕ್ಷಾಯಾಮ್. ಧಾತು. ಇದಕ್ಕೆ ಲಡರ್ಥದಲ್ಲಿ ಶತೃಪ್ರತ್ಯಯ. **ದಿವಾದಿಭ್ಯಃ ಶ್ಯನ್** (ಪಾ. ಸೂ. ೩-೧-೬೯) ಎಂಬುದರಿಂದ ಶ್ಯನ್ ವಿಕರಣ ಕ್ಷುಧ್ಯತ್ ಶಬ್ದವಾಗುತ್ತದೆ. ಚತುರ್ಥೀ ಏಕವಚನಾಂತರೂಪ. ಶ್ಯನ್ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ದಾಃ**—ಡುದಾಞ್ ದಾನೇ ಧಾತು. ಇದೇ ಸೂಕ್ತದ ಐದನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ. ॥ ೭ ॥

———— :o: ————

ಸಂಹಿತಾಪಾಠಃ

ಮಾ ನೋ॑ ವಧೀರಿಂದ್ರ॒ ಮಾ ಪರಾ॑ ದಾ॒ ಮಾ ನಃ॑ ಪ್ರಿ॒ಯಾ
ಭೋಜ॑ನಾನಿ॒ ಪ್ರ ಮೋ॑ಷೀಃ ।
ಆಂ॒ಡಾ ಮಾ ನೋ॑ ಮಘವಞ್ಛಕ್ರ॒ ನಿರ್ಭೇ॒ನ್ಮಾ ನಃ॒ ಪಾತ್ರಾ॑
ಭೇತ್ಸ॒ಹಜಾ॑ನುಷಾಣಿ ॥ ೮ ॥

ಪದಪಾಠಃ

ಮಾ । ನಃ । ವಧೀಃ । ಇಂದ್ರ । ಮಾ । ಪರಾ । ದಾಃ । ಮಾ । ನಃ । ಪ್ರಿಯಾ ।
ಭೋಜನಾನಿ । ಪ್ರ । ಮೋಷೀಃ ।

ಆಂಡಾ । ಮಾ । ನಃ । ಮಘಽವನ್ । ಶಕ್ರ । ನಿಃ । ಭೇತ್ । ಮಾ । ನಃ । ಪಾತ್ರಾ । ಭೇತ್ । ಸಹಽಜಾನುಷಾಣಿ ॥ ೮ ॥

ಸಾಯಣಭಾಷ್ಯಂ

ಹೇ ಇಂದ್ರ ನೋಽಸ್ಮಾನ್ಮಾ ವಧೀಃ । ಮಾ ಹಿಂಸೀಃ । ಸರ್ವದಾ ರಕ್ಷೇತ್ಯರ್ಥಃ । ಅಪಿ ಚ ಮಾ ಪರಾ ದಾಃ । ಮಾ ಪರಿತ್ಯಾಕ್ಷೀಃ । ಪರಾದಾನಂ ಪರಿತ್ಯಾಗಃ । ಅಸ್ಮತ್ಕೃತಾಂ ಪೂಜಾಂ ಸರ್ವದಾ ಗೃಹಾಣೇತ್ಯರ್ಥಃ । ಅಪಿ ಚ ನೋಽಸ್ಮಾಕಂ ಪ್ರಿಯಾ ಪ್ರಿಯಾಣೀಪ್ಸಿತಾನಿ ಭೋಜನಾನ್ಯುಪಭೋಗ್ಯಾನಿ ಧನಾನಿ ಮಾ ಪ್ರಮೋಷೀಃ । ಮಾಪಹಾರ್ಷೀಃ । ಅಸ್ಮಾಸ್ವೇವ ಧನಾನಿ ಯಥಾ ಸ್ಯುಸ್ತಥಾ ಕುರ್ವಿತ್ಯರ್ಥಃ । ತಥಾ ಹೇ ಮಘವನ್ ಧನವನ್ ಶಕ್ರ ಸರ್ವಕಾರ್ಯೇಶಕ್ತೇಂದ್ರ ನೋಽಸ್ಮಾಕಮಾಂಡಾಂಡಸಂಬಂಧೀನಿ ಗರ್ಭರೂಪೇಣ ನಿಷಿಕ್ತಾನ್ಯಪತ್ಯಾನಿ ಮಾ ಭೇತ್ । ಮಾ ಭಿನಃ । ಗರ್ಭರೂಪೇಣಾವಸ್ಥಿತಾನಸ್ಮತ್ಪುತ್ರಾನ್ರಕ್ಷೇತ್ಯರ್ಥಃ ಮಾ ಚ ನಃ ಪಾತ್ರಾ । ಪತಂತಿ ಗಚ್ಛಂತಿ ಗಮನಸಮರ್ಥಾನಿ ಯಾನಿ ತಾನ್ಯಪತ್ಯಾನಿ ಪಾತ್ರಾಣಿ । ತಾನಿ ಚ ಮಾ ಭೇತ್ । ಮಾ ಭಿದಃ । ಸಹಜಾನುಷಾಣಿ । ಜಾನುಭ್ಯಾಂ ಯಾನಿ ಭೂಮಿಂ ಸನಂತಿ । ಗಚ್ಛಂತೀತ್ಯರ್ಥಃ । ತಾನಿ ಜಾನುಷಾಣಿ । ತೈಃ ಸಹಿತಾನಿ ಮಾ ವಿನೀನಶಃ ॥ ವಧೀಃ । ಹಂತೇರ್ಮಾಙಿ ಲುಙಿ ಚೇತಿ ವಧಾದೇಶಃ । ಸ ಚಾದಂತಃ । ಸಿಚ್ । ಅತೋ ಲೋಪ ಇತ್ಯಕಾರಲೋಪಃ । ತಸ್ಯ ಸ್ಥಾನಿವದ್ಭಾವಾದತೋ ಹಲಾದೇರಿತಿ ವೃದ್ಧ್ಯಭಾವಃ । ಇಟ ಈಟೀತಿ ಸಿಚೋ ಲೋಪಃ । ಮೋಷೀಃ । ಮುಷ ಸ್ತೇಯೇ । ಲುಙಿ ಸಿಚಿ ಇಟ್ । ನೇಟೀತಿ ವೃದ್ಧಿಪ್ರತಿಷೇಧಃ । ಭೇತ್ । ಭಿದಿರ್ ವಿದಾರಣೇ । ಲಙಿ ಸಿಪಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಲಘೂಪಧಗುಣಃ । ಹಲ್ಙ್ಯಾಬ್ಭ್ಯ ಇತಿ ಸಿಚೋ ಲೋಪಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ನಃ—ನಮ್ಮನ್ನು । ಮಾ ವಧೀಃ—ಹಿಂಸೆಮಾಡಬೇಡ. । (ಮತ್ತು) ಮಾ ಪರಾ ದಾಃ—ತ್ಯಜಿಸಬೇಡ । ನಃ—ನಮ್ಮ । ಪ್ರಿಯಾ—ಅಪೇಕ್ಷಿತಗಳಾದ । ಭೋಜನಾನಿ—ಅನುಭೋಗ

ಧನಗಳನ್ನು। **ಮಾ ಪ್ರಮೋಷೀಃ**— ಕಸಿದುಕೊಳ್ಳಬೇಡ। **ಮಘವನ್**— ಧನವಂತನಾದ। **ಶಕ್ರ**—ಸರ್ವ ಕಾರ್ಯಗಳಿಗೂ ಸಮರ್ಥನಾದ ಇಂದ್ರನೇ। **ನಃ**—ನಮ್ಮ। **ಆಂಡಾ**—ಗರ್ಭರೂಪದಲ್ಲಿರುವ ಸಂತಾನಗಳನ್ನು। **ಮಾ ಭೇತ್**— ಮುರಿಯಬೇಡ.। **ನಃ**—ನಮ್ಮ। **ಪಾತ್ರಾ**—ಸಂಚರಿಸುವ ವಯಸ್ಸುಳ್ಳ ಪುತ್ರರನ್ನೂ। **ಮಾ ಚಭೇತ್**—ನಾಶಮಾಡಬೇಡ.। **ಸಹಜಾನುಷಾಣಿ**—ಮಂಡಿಯಿಟ್ಟು ತೆವಳುವ ಮಕ್ಕಳನ್ನೂ (ಹಿಂಸಿಸಬೇಡ)।

॥ ಭಾವಾರ್ಥ ॥

ಎಲೈ ಇಂದ್ರನೇ, ನಮ್ಮನ್ನು ಹಿಂಸಿಸಬೇಡ. ಮತ್ತು ನಿನ್ನ ರಕ್ಷಣೆಯನ್ನು ಕೊಡದೆ ತ್ಯಾಗಮಾಡಲೂ ಬೇಡ. ನಮಗೆ ಅಮೂಲ್ಯವಾದುದೂ ಅತ್ಯಪೇಕ್ಷಿತಗಳಾದುದೂ ಆದ ನಮ್ಮ ಅನುಭೋಗಸಾಮಗ್ರಿಗಳನ್ನು ಕಸಿದು ಕೊಳ್ಳಬೇಡ. ಸರ್ವಕಾರ್ಯಗಳಿಗೂ ಸಮರ್ಥನಾದ ಎಲೈ ಇಂದ್ರನೇ, ನಮ್ಮ ಗರ್ಭರೂಪದಲ್ಲಿರುವ ಸಂತಾನಗಳನ್ನೂ ಮಂಡಿಯಿಟ್ಟು ತೆವಳುವ ಮಕ್ಕಳನ್ನೂ, ನಡೆಯಲು ಸಮರ್ಥರಾದ ಮಕ್ಕಳನ್ನೂ ಸಹ ಕೊಂಚವೂ ಹಿಂಸಿಸದೆ ಎಲ್ಲ ರನ್ನೂ ರಕ್ಷಿಸು.

## English Translation

Harm us not, Indra, abandon us not; deprive us not of the enjoyments that are dear to us; injure not affluent Sakra, our unborn offspring; harm not those who are capable (only of crawling) on their knees.

ವಿಶೇಷವಿಷಯಗಳು

ಇಂದ್ರನು ರಕ್ಷಕನಾಗಿದ್ದರೂ ಸಹ ತಪ್ಪು ಮಾಡುವವರನ್ನು ಶಿಕ್ಷಿಸುವವನು. ಅಸುರರನ್ನು ಹಿಂಸಿಸುವವನು. ದುಷ್ಟರನ್ನು ತ್ಯಜಿಸುವವನು. ಅವರ ಆಸ್ತಿಗಳನ್ನು ಕಸಿದುಕೊಳ್ಳುವವನು. ಆದುದರಿಂದ ಅವನ ಈ ಶಿಕ್ಷಕವಾದ ಶಕ್ತಿಗೆ ಬೆದರುವುದು ಎಲ್ಲರಿಗೂ ಸಹಜವಾದುದರಿಂದ ಅಂತಹ ಕ್ರೌರ್ಯವನ್ನು ಯಜ್ಞಕರ್ತರ ಮೇಲೆ ಪ್ರಯೋಗಿಸ ಬಾರದೆಂದು ಪ್ರಾರ್ಥಿಸಿದೆ.

**ಮಾ ಪರಾದಾಃ**—**ಪರಾದಾನಂ ಪರಿತ್ಯಾಗಃ। ಮಾ ಪರಿತ್ಯಾಕ್ಷೀಃ।** ತ್ಯಜಿಸಬೇಡ. ಅಥವಾ ಅಸುರರ ವಶಕ್ಕೆ ಬಿಟ್ಟುಕೊಡಬೇಡ, ಎಂದರ್ಥ. **ಪರಾದಾ** ಎಂಬ ಶಬ್ದಕ್ಕೆ ಒಂದು ಕಡೆಯಲ್ಲಿ ಮಾತ್ರ ವಿಕ್ರಯವೆಂಬ ಅರ್ಥವಿದೆ.

**ಮಹೇ ಚನ ತ್ವಾಮದ್ರಿವಃ ಪರಾ ಶುಲ್ಕಾಯ ದೇಯಾಂ।**

(ಋ. ಸಂ. ೮-೧-೫)

**ಮಹತೇಽಪಿ ಶುಲ್ಕಾಯ ನ ವಿಕ್ರೀಣಾನಿ।** ಎಂದು ಇನ್ನೊಂದು ಋಕ್ಕಿನಲ್ಲೂ ಇದು ಇತರಕಡೆಗಳಲ್ಲೆಲ್ಲಾ ತ್ಯಜಿಸ ಬೇಡವೆಂದೇ ಅರ್ಥ

**ಭೋಜನಾನಿ**—ಭೋಜನಶಬ್ದವು ಧನನಾಮಗಳಲ್ಲಿ ಪಠಿತವಾಗಿದೆ. (ನಿ. ೨-೭) **ಉಪಭೋಗ್ಯಾನಿ ಧನಾನಿ।** ಅನುಭವಿಸಲು ಯೋಗ್ಯವಾದ ಧನಗಳನ್ನು ಎಂದರ್ಥ.

ವಿಶ್ವಾ ಅಗ್ನೇ ಅಭಿಯುಜೋವಿಹತ್ಯಾ ಶತ್ರೂಯತಾಮಾ ಭರಾ ಭೋಜನಾನಿ ।
(ಋ. ಸಂ. ೫-೪-೫)

ಇಹೇಹ್ಯೆಷಾಂ ಕೃಣುಹಿ ಭೋಜನಾನಿ ಯೇ ಬರ್ಹಿಷೋ ನಮೋವೃಕ್ತಿಂ ನ ಜಗ್ಮುಃ ।
(ಋ. ಸಂ. ೧೦-೧೩೧-೨)

ಇತ್ಯಾದಿ ಋಕ್ಕುಗಳಲ್ಲಿರುವ ಭೋಜನ ಶಬ್ದಕ್ಕೆ ಧನವೆಂದರ್ಥವಾಗುವಂತೆಯೇ ಇಲ್ಲಿಯೂ ಸಹ ಧನವೆಂದರ್ಥ.

**ಶಕ್ರ—ಸರ್ವಕಾರ್ಯಸಮರ್ಥೇಂದ್ರ** । ಸಕಲಕಾರ್ಯಗಳಿಗೂ ಸಮರ್ಥನಾದವನು ಎಂದು ಸಾಮರ್ಥ್ಯವನ್ನು ಸೂಚಿಸುತ್ತದೆ. **ಶಕ್ರನೆಂದರೆ ಇಂದ್ರನೆಂದು** ಅರ್ಥವಾಗುವುದು ರೂಢಿಯಲ್ಲಿದೆ. (ಆದರೆ ಋಕ್ಸಂಹಿತೆಯಲ್ಲಿ ಈ ವಿಶೇಷಣವು ಇತರ ದೇವತೆಗಳ ಪರವಾಗಿಯೂ ಉಪಯೋಗಿಸಲ್ಪಟ್ಟಿದೆ. ಆದರೆ ಇದು ಅಪರೂಪ.) ಅತ್ಯಧಿಕವಾಗಿ ಇಂದ್ರನ ಸಾಮರ್ಥ್ಯವನ್ನೇ ವರ್ಣಿಸುವ ವಿಶೇಷಣವಾಗಿದೆ.

**ಪಾತ್ರಾ—ಪತಂತಿ, ಗಚ್ಛಂತಿ ಗಮನಸಮರ್ಥಾನಿ ಯಾನ್ಯಪತ್ಯಾನಿ** । ಸಂಚರಿಸುವ ವಯಸ್ಸುಳ್ಳ ಮಕ್ಕಳನ್ನು (ಹಿಂಸಿಸಬೇಡ)

**ಅಂಡಾ—ಅಂಡಸಂಬಂಧೀನಿ ಗರ್ಭರೂಪೇಣ ನಿಷಿಕ್ತಾನ್ಯಪತ್ಯಾನಿ** ಗರ್ಭರೂಪದಲ್ಲಿರುವ ಶಿಶುಗಳನ್ನೂ (ಹಿಂಸಿಸಬೇಡ)

ವ್ಯಾಕರಣಪ್ರಕ್ರಿಯಾ

**ವಧೀಃ**—ಹನ ಹಿಂಸಾಗತ್ಯೋಃ ಧಾತು. ಇದಕ್ಕೆ ಲುಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಇತಶ್ಚ**—ಸೂತ್ರದಿಂದ ಇಕಾರಲೋಪ. **ಲುಙಃ ಚ**—(ಪಾ. ಸೂ. ೨-೪-೪೩) ಎಂಬುದರಿಂದ ಧಾತುವಿಗೆ ವಧಾದೇಶ. ಅದು ಅದಂತ. **ಚ್ಲೇಃ ಸಿಚ್**—ಸೂತ್ರದಿಂದ ಸಿಜಾದೇಶ. ತನ್ನಿಮಿತ್ತವಾಗಿ **ಆತೋ-ಲೋಪಃ**—(ಪಾ. ಸೂ. ೬-೪-೪೮) ಎಂಬುದರಿಂದ ವಧ ಎಂಬಲ್ಲಿರುವ ಅಕಾರಕ್ಕೆ ಲೋಪ. ಸಿಚಿಗೆ ಇಡಾಗಮ. ಪ್ರತ್ಯಯಕ್ಕೆ **ಅಸ್ತಿಸಿಚೋಽಪೃಕ್ತೇ**—(ಪಾ. ಸೂ. ೭-೩-೯೬) ಎಂಬುದರಿಂದ ಈಡಾಗಮ. ಅಲೋಪಕ್ಕೆ **ಅಚಃ ಪರಸ್ಮಿನ್ ಪೂರ್ವವಿಧೌ**—ಸೂತ್ರದಿಂದ ಸ್ಥಾನಿವದ್ಭಾವ ಬರುವುದರಿಂದ **ಸಿಚಿವೃದ್ಧಿಃ ಪರಸ್ಮೈಪದೇಷು**—(ಪಾ. ಸೂ. ೭-೨-೧) ಎಂಬುದರಿಂದ ಧಾತುವಿಗೆ ವೃದ್ಧಿ ಬರುವುದಿಲ್ಲ. **ಇಟ ಈಟಿ**—(ಪಾ. ಸೂ. ೮-೨-೨೮) ಎಂಬುದರಿಂದ ಸಿಚಿಗೆ ಲೋಪ. ಪ್ರತ್ಯಯಸಕಾರಕ್ಕೆ ರುತ್ವವಿಸರ್ಗ. **ನಮಾಙ್ಯೋಗೇ**—(ಪಾ. ಸೂ. ೬-೪-೭೪) ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದಾಃ**—ಐದನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

**ಭೋಜನಾನಿ**—ಭುಜ ಪಾಲನಾಭ್ಯವಹಾರಯೋಃ ಧಾತು. ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. **ಯುವೋರನಾಕೌ**—ಸೂತ್ರದಿಂದ ಪ್ರತ್ಯಯಕ್ಕೆ ಅನಾದೇಶ. **ಲಿತಿ**—(ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಸ್ವರ ಬರುತ್ತದೆ.

**ಮೋಷೀಃ**—ಮುಷ ಸ್ತೇಯೇ. ಲುಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಇಕಾರಲೋಪ. ಚ್ಲಿಗೆ ಸಿಚ್. ಅದಕ್ಕೆ ಇಡಾಗಮ. ವೃದ್ಧಿಯು ಪ್ರಾಪ್ತವಾದರೆ **ನೇಟಿ**—(ಪಾ. ಸೂ. ೭-೨-೪) ಎಂಬುದರಿಂದ ನಿಷೇಧ. ಹಿಂದಿನಂತೆ **ಅಸ್ತಿಸಿಚೋಽಪೃಕ್ತೇ**—(ಪಾ. ಸೂ. ೭-೩-೯೬) ಎಂಬುದರಿಂದ ಪ್ರತ್ಯಯಕ್ಕೆ ಈಡಾಗಮ ಬಂದಾಗ **ಇಟಈಟಿ**—ಸೂತ್ರ ಸಿಚಿಗೆ ಲೋಪ. ಮಾಙ್ ಯೋಗವಿರುವುದರಿಂದ ಅಡಾಗಮ ಬರುವುದಿಲ್ಲ. ನಿಘಾತಸ್ವರ ಬರುತ್ತದೆ.

**ಆಂಡಾ**—ಅಂಡಸ್ಯ ಇಮಾನಿ ಆಂಡಾನಿ. **ತಸ್ಯೇದಮ್**—ಎಂಬುದರಿಂದ ಅಣ್ ಪ್ರತ್ಯಯ. **ತದ್ಧಿತೇಷ್ವ-ಚಾಮಾದೇಃ**—ಎಂಬುದರಿಂದ ಆದಿವೃದ್ಧಿ. ನಪುಂಸಕದಲ್ಲಿ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹು-ಲಮ್**—(ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ಭೇತ್**—ಭಿದಿರ್ ವಿದಾರಣೇ. ಧಾತು. ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಇತಶ್ಚ**—ಎಂಬುದರಿಂದ ಇಕಾರಲೋಪ. **ಬಹುಲಂ ಛಂದಸಿ**—ಎಂಬುದರಿಂದ ವಿಕರಣಕ್ಕೆ (ಶ್ನಮ್) ಲುಕ್. ಪ್ರತ್ಯಯ ನಿಮಿತ್ತವಾಗಿ **ಪುಗಂತಲಘೂಪಧಸ್ಯ ಚ**—(ಪಾ. ಸೂ. ೭-೩-೮೬) ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. **ಹಲ್‌ಙ್ಯಾಭ್ಯೋ**—ಸೂತ್ರದಿಂದ ಅಪೃಕ್ತಸಿಪಿಗೆ ಲೋಪ. ಮಾಙ್ ಯೋಗವಿರುವುದರಿಂದ ಅಡಾಗಮ ಬರುವುದಿಲ್ಲ. **ವಾವಸಾನೇ**—ಸೂತ್ರದಿಂದ ಅಂತ್ಯದಕಾರಕ್ಕೆ ಚರ್ತ್ವ. ತಿಙಂತನಿಘಾತಸ್ವರ ಬರುತ್ತದೆ.

**ಸಹಜಾನುಷಾಣಿ**—ಷಣ ಸಂಭಕ್ತೌ. ಧಾತು. ಇದಕ್ಕೆ ಕ್ವಿಪ್ ಪ್ರತ್ಯಯ. **ಜನಸನಖನಾಂ ಸಞ್ಝಲೋಃ** (ಪಾ. ಸೂ. ೬-೪-೪೨) ಎಂಬುದರಿಂದ ಆತ್ವ. ಜಾನುಭ್ಯಾಂ ಸನಂತಿ ಇತಿ ಜಾನುಷಾಣಿ. (ಮೊಣಕಾಲುಗಳಿಂದ ನಡೆಯುವವುಗಳು) ಜಾನುಷೈಃ ಸಹಿತಾನಿ ಸಹಜಾನುಷಾಣಿ. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ॥ ೮ ॥

ಸಂಹಿತಾಪಾಠಃ

ಅನ್ನಾಜಕೇಹಿ ಸೋಮಕಾಮಂ ತ್ವಾಹುರಯಂ ಸುತಸ್ತಸ್ಯ ಪಿಬಾ ಮದಾಯ ।

ಉರುವ್ಯಚಾ ಜಠರ ಆ ವೃಷಸ್ವ ಪಿತೇವ ನಃ ಶೃಣುಹಿ ಹೂ-
ಯಮಾನಃ ॥ ೯ ॥

ಪದಪಾಠಃ

ಅರ್ವಾಙ್ । ಆ । ಇಹಿ । ಸೋಮಽಕಾಮಂ । ತ್ವಾ । ಆಹುಃ । ಅಯಂ ।
ಸುತಃ । ತಸ್ಯ । ಪಿಬ । ಮದಾಯ ।
ಉರುಽವ್ಯಚಾಃ । ಜಠರೇ । ಆ । ವೃಷಸ್ವ । ಪಿತಾಽಇವ । ನಃ । ಶೃಣುಹಿ ।
ಹೂಯಮಾನಃ ॥ ೯ ॥

॥ ಸಾಯಣಭಾಷ್ಯಂ ॥

ಮಾಧ್ಯಂದಿನೇ ಸವನೇಽರ್ವಾಙೇಹೀತ್ಯೇಷಾ ಪೋತುಃ ಪ್ರಸ್ಥಿತಯಾಜ್ಯಾ । ಸೂತ್ರಿತಂ ಚ ಅರ್ವಾಙೇಹಿ ಸೋಮಕಾಮಂ ತ್ವಾಹುಸ್ತವಾಯಂ ಸೋಮಸ್ತ್ವಮೇಹ್ಯರ್ವಾಙ್ । ಆ. ೫-೫ । ಇತಿ ॥

ಹೇ ಇಂದ್ರ ತ್ವಮರ್ವಾಙ್ ಅಸ್ಮದಭಿಮುಖಃ ಸನ್ ಏಹಿ । ಆಗಚ್ಛ । ಕಿಂ ಕಾರಣಮಿತಿ ಚೇತ್ ಯಸ್ಮಾತ್ತ್ವಾಂ ಸೋಮಕಾಮಂ ಸೋಮವಿಷಯಾಭಿಲಾಷಮಾಹುಃ ಪುರಾವಿದಃ ಕಥಯಂತಿ । ಅಯಮಸ್ಮದೀಯಃ ಸೋಮಃ ಸುತಃ । ಋತ್ವಿಗ್ಭಿರಭಿಷುತಃ । ಅತ ಆಗಚ್ಛೇತ್ಯರ್ಥಃ । ಆಗತ್ಯ ಚ ಮದಾಯ ಹರ್ಷಾರ್ಥಂ ತಸ್ಯ ತಮಸ್ಮದೀಯಮಭಿಷುತಂ ಸೋಮಂ ಪಿಬ । ಏತದೇವ ಸ್ಪಷ್ಟೀಕ್ರಿಯತೇ । ಉರುವ್ಯಚಾ ಉರು ವಿಸ್ತೀರ್ಣಂ ವ್ಯಚೋ ವ್ಯಾಪನಂ ಯಸ್ಯ ತಾದೃಶೋ ಮಹಾವಯವೋ ಭೂತ್ವಾ ಜಠರ ಆತ್ಮೀಯ ಉದರ ಆ ವೃಷಸ್ವ । ಸೋಮಮಾಸಿಂಚ । ಆ ಸಮಂತಾತ್ಪೂರಯೇತ್ಯರ್ಥಃ । ಏವಂಭೂತಸ್ತ್ವಂ ಹೂಯಮಾನಃ ಸ್ತುತಿಭಿರಾಹೂಯಮಾನಃ ಸನ್ ಪಿತೇವ ಪುತ್ರಾಣಾಂ ವಾಕ್ಯಾನಿ ಶೃಣೋತಿ ತಥಾ ನೋಽಸ್ಮಾಕಂ ವಾಕ್ಯಾನಿ ಶೃಣುಹಿ । ಶೃಣು ॥ ಸೋಮಕಾಮಂ । ಸೋಮವಿಷಯಃ ಕಾಮೋಽಭಿಲಾಷೋ ಯಸ್ಯ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಆಹುಃ । ಬ್ರುವಃ ಪಂಚಾನಾಮಾದಿತ ಆಹೋ ಬ್ರುವಃ । ಪಾ. ೩.೪-೮೪ । ಇತಿ ಝೇರುಸಾದೇಶೋ ಧಾತೋರಾಹಾದೇಶಶ್ಚ । ತಸ್ಯ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ । ಮದಾಯ । ಮದೀ ಹರ್ಷೇ । ಮದೋಽನುಪಸರ್ಗ ಇತಿ ಭಾವೇಽಪ್ । ಉರುವ್ಯಚಾಃ । ವ್ಯಚ ವ್ಯಾಜೀಕರಣೇ । ಔಣಾದಿಕೋಽಸಿ-ಪ್ರತ್ಯಯಃ । ವ್ಯಚೇಃ ಕುಟಾದಿತ್ವಮನಸೀತಿ ವಚನಾತ್ । ಕಾ. ೧-೨-೧-೧ । ಙಿತ್ತ್ವಾಭಾವೇನ ಸಂಪ್ರ-

ಸಾರಣಾಭಾವಃ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ಯದ್ವಾ । ಉರು ವಿಚತಿ ವ್ಯಾಪ್ನೋತೀತ್ಯುರುವ್ಯಚಾಃ । ಕೃದುತ್ತರಪದಪ್ರಕೃತಿಸ್ವರತ್ವಂ । ವೃಷಸ್ವ । ವೃಷ ಸೇಚನೇ । ವ್ಯತ್ಯಯೇನಾತ್ಮನೇಪದಶಪ್ರತ್ಯಯೌ । ಶೃಣುಹಿ । ಉತಶ್ಚ ಪ್ರತ್ಯಯಾಚ್ಛಂದಸಿ ವಾವಚನಮಿತಿ ಹೇರ್ಲುಗಭಾವಃ ॥

। ಪ್ರತಿಪದಾರ್ಥ ।

(ಇಂದ್ರ—ಎಲೈ ಇಂದ್ರನೇ) । **ತ್ವಾ**—ನಿನ್ನನ್ನು । **ಸೋಮಕಾಮಂ**—ಸೋಮರಸದಲ್ಲಿ ಇಷ್ಟವುಳ್ಳವನೆಂದು । **ಆಹುಃ**—(ಪ್ರಾಜ್ಞರು) ಹೇಳುತ್ತಾರೆ. । **ಅಯಂ**—ನಮ್ಮ ಈ ಸೋಮರಸವು । **ಸುತಃ**—ಹಿಂಡಿ ಸಿದ್ಧವಾಗಿದೆ. (ಆದ್ದರಿಂದ) । **ಅರ್ವಾಙ್**—ನಮ್ಮ ಅಭಿಮುಖವಾಗಿ । **ಏಹಿ**—ದಯಮಾಡು । **ಮದಾಯ**—(ನಿನ್ನ) ಹರ್ಷಾರ್ಥವಾಗಿ । **ತಸ್ಯ**—ಆ ಸೋಮರಸವನ್ನು । **ಪಿಬ**—ಕುಡಿ । **ಉರುವ್ಯಚಾಃ**—ವಿಸ್ತಾರವಾಗಿ ವ್ಯಾಪಿಸಿರುವ ಅವಯವವುಳ್ಳವನಾಗಿ । **ಜಠರೇ**—(ನಿನ್ನ) ಉದರದಲ್ಲಿ । **ಆ ವೃಷಸ್ವ**—ಸೋಮರಸವನ್ನು ಸುರಿ. (ತುಂಬು) । **ಹೂಯಮಾನಃ**—(ನಮ್ಮ ಸ್ತೋತ್ರಗಳಿಂದ) ಕರೆಯಲ್ಪಟ್ಟು । **ಪಿತೇವ**—(ಮಕ್ಕಳ ಮಾತನ್ನು ಆಲಿಸುವ) ತಂದೆಯಂತೆ । **ನಃ**—ನಮ್ಮ (ವಾಕ್ಯಗಳನ್ನು) । **ಶೃಣುಹಿ**—ಆಲಿಸಿಕೇಳು. ।

ಭಾವಾರ್ಥ

ಎಲೈ ಇಂದ್ರನೇ, ನಿನಗೆ ಸೋಮರಸವು ಬಹಳ ಪ್ರಿಯವೆಂದು ಪ್ರಾಜ್ಞರು ಹೇಳುತ್ತಾರೆ. ನಾವು ನಿನಗಾಗಿ ಈ ಸೋಮರಸವನ್ನು ಹಿಂಡಿ ಸಿದ್ಧಮಾಡಿದ್ದೇವೆ. ಆದ್ದರಿಂದ ನಮ್ಮ ಅಭಿಮುಖವಾಗಿ ದಯಮಾಡು. ನಿನ್ನ ಹರ್ಷಾರ್ಥವಾಗಿ ಆ ಸೋಮರಸವನ್ನು ಕುಡಿ. ವಿಸ್ತಾರವಾಗಿ ವ್ಯಾಪಿಸುವ ಅವಯವಗಳುಳ್ಳವನಾಗಿ ನಿನ್ನ ಉದರವನ್ನು ಹಿಗ್ಗಿಸಿ ಆ ರಸವನ್ನು ತುಂಬು. ನಾವು ಸ್ತೋತ್ರಮಾಡಿ ಕರೆದಾಗ ತಂದೆಯು ಮಕ್ಕಳು ಕೂಗಿದಾಗ ಆ ಮಾತನು ಕೇಳುವಂತೆ ನೀನೂ ಸಹ ನಮ್ಮ ಸೋತ್ರವಾಕ್ಯನ್ನು ಆಲಿಸಿ ಕೇಳು.

English Translation

Come into our presence ; they have colled you, fond of the Soma-juice r it is prepared ; drink of it for your exhilartion : vast of limba, distend you stomach, and, when invoked, hear us, as a father (listens to the words of hi sons).

। ವಿಶೇಷವಿಷಯಗಳು ।

ಮದಾಯ—ಮದೀ ಹರ್ಷೇ ಧಾತು. ಮದೋಽನುಪಸರ್ಗೇ (ಪಾ. ಸೂ. ೩-೩-೬೭) ಎಂಬುದರಿಂದ ಭಾವಾರ್ಥದಲ್ಲಿ ಅಪ್ ಪ್ರತ್ಯಯ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ ಚತುರ್ಥೀ ಏಕವಚನಾಂತರೂಪ.

ಮಾಧ್ಯಂದಿನ ಸವನದಲ್ಲಿ **ಅರ್ವಾಙೇಹಿ** ಎಂಬ ಈ ಸೂಕ್ತವನ್ನು ಪೋತೃವೆಂಬ ಋತ್ವಿಜನು ಪ್ರಸ್ಥಿತಯಾಜ್ಯಾ ಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— **ಅರ್ವಾಙೇಹಿ ಸೋಮಕಾಮಂ ತ್ವಾಹುಸ್ತ್ವಾಯಂ ಸೋಮಸ್ತ್ವಮೇಹ್ಯರ್ವಾಙ್** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೬-೫).

**ಸೋಮಕಾಮಂ ಆಹುಃ**—ಸೋಮರಸದಲ್ಲಿ ಇಷ್ಟವುಳ್ಳವನೆಂದು ಪ್ರಾಜ್ಞರು ಹೇಳುತ್ತಾರೆ. ಆದುದರಿಂದ **ಅಯಂ ಸುತಃ** ಈ ರಸವು ಹಿಂಡಿ ಸಿದ್ಧವಾಗಿದೆ ಎಂದು ಸೋಮರಸವು ಅರ್ಪಿಸಲ್ಪಡುತ್ತದೆ. ಈ ಸೋಮರಸದ ಪಾನದಿಂದ ಇಂದ್ರನ ವೀರ್ಯವು ಅತ್ಯತಿಶಯವಾಗಿ ವೃದ್ಧಿಯಾಗುವುದೂ ಪ್ರಸಿದ್ಧವಾಗಿದೆ. ಇವನು ಉತ್ಪನ್ನ ನಾದೊಡನೆಯೇ ಇವನ ತಾಯಿಯು ಸೋಮರಸವನ್ನು ಕುಡಿಸಿದುದರಿಂದ ಇದೇ ಇವನ ಅತ್ಯವಶ್ಯವಾದ ಆಹಾರ ವೆಂಗೂ ಹೇಳಬಹುದು.

**ಅದ್ರೋಘ ಸತ್ಯಂ ತವ ತನ್ಮಹಿತ್ವಂ ಸದ್ಯೋ ಯಜ್ಜಾತೋ ಅಪಿಬೋ ಹ ಸೋಮಂ ।**
(ಋ. ಸಂ. ೩-೩೨-೯)

**ತ್ವಂ ಸದ್ಯೋ ಅಪಿಬೋ ಜಾತ ಇಂದ್ರ ಮದಾಯ ಸೋಮಂ ಪರಮೇ ವ್ಯೋಮನ್।**
(ಋ. ಸಂ. ೩-೩೨-೧೦)

ಇತ್ಯಾದಿ ಸೂಕ್ತಗಳಲ್ಲಿ ಅವನ ತಾಯಿಯು ಉತ್ಪನ್ನನಾದೊಡನೆಯೇ ಇವನಿಗೆ ಸೋಮರಸವನ್ನು ಪಾನಮಾಡಿಸು ದುದೂ ಅದರಿಂದ ಅವನ ಮಹತ್ತ್ವವು ವೃದ್ಧಿಯಾದುದೂ ವರ್ಣಿತವಾಗಿದೆ.

**ವಯೋ ನ ವೃಕ್ಷಂ ಸುಪಲಾಶಮಾಸದನ್ತ್ಸೋಮಾಸ ಇಂದ್ರಂ ಮಂದಿನಶ್ಚಮೂಷದಃ ।**
(ಋ. ಸಂ. ೧೦-೪೩-೪)

**ಆಪೋ ನ ಸಿಂಧುಮಭಿ ಯತ್ಸಮಕ್ಷರನ್ತ್ಸೋಮಾಸ ಇಂದ್ರಂ ಕುಲ್ಯಾ ಇವ ಹ್ರದಂ ।**
(ಋ. ಸಂ. ೧೦-೪೩-೭)

ಪಕ್ಷಿಗಳು ಪರ್ಣಭರಿತವಾದ ವೃಕ್ಷಗಳನ್ನು ಹೋಗಿ ಸೇರುವಂತೆಯೂ, ನದಿಗಳು ಸಾಗರವನ್ನು ಹೋಗಿ ಸೇರುವಂತೆಯೂ ಸೋಮರಸಗಳು ಇಂದ್ರನನ್ನು ಸೇರಿದವೆಂದೂ,

**ಏಕಯಾ ಪ್ರತಿಧಾಪಿಬತ್ಸಾಕಂ ಸರಾಂಸಿ ತ್ರಿಂಶತಂ ।**
**ಇಂದ್ರಃ ಸೋಮಸ್ಯ ಕಾಣುಕಾ ॥**
(ಋ. ಸಂ. ೮-೭೭-೪)

ಅತಿಶಯ ಅಧಿಕವಾದ ಸೋಮರಸವನ್ನು ಒಂದೇ ಗುಟುಕಿಗೆ ಮೂವತ್ತು ಘಟಗಳ ತುಂಬ ಕುಡಿದನೆಂದೂ,

**ಯಃ ಕುಕ್ಷಿಃ ಸೋಮಪಾತಮಃ ಸಮುದ್ರ ಇವ ಪಿನ್ವತೇ ।**
**ಉರ್ವೀರಾಪೋ ನ ಕಾಕುದಃ ।**
(ಋ. ಸಂ. ೧-೮-೭)

ಇವನ ಉದರಕುಕ್ಷಿಯು ಸಾಗರದಂತೆ ಆಳವಾಗಿರುವುದಾಗಿಯೂ, ನಾನಾ ಕಡೆಗಳಲ್ಲಿ ವರ್ಣಿತವಾಗಿದೆ. ಇಂತಹ ವೀರ್ಯದಾಯಕವಾದುದೂ ಅತ್ಯಂತ ಅವಶ್ಯವಾದುದೂ, ಆಪ್ಯಾಯಮಾನವಾದುದೂ ಆದ ಸೋಮರಸಪಾನದಿಂದಲೇ ಇಂದ್ರನು,

ಅವಂಶೇ ದ್ಯಾಮಸ್ತಭಾಯದ್ಬೃಹಂತಮಾ ರೋದಸೀ ಅಪೃಣದಂತರಿಕ್ಷಂ ।
ಸ ಧಾರಯತ್ಪೃಥಿವೀಂ ಪಪ್ರಥಚ್ಚ ಸೋಮಸ್ಯ ತಾ ಮದ ಇಂದ್ರಶ್ಚಕಾರ ॥
(ಋ. ಸಂ. ೨-೧೫-೨)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿಸಿರುವಂತೆ ವೀರ್ಯಶಾಲಿಯಾಗಿಯೂ ಹರ್ಷಿತನಾಗಿಯೂ ಯುದ್ಧೋನ್ಮತ್ತನಾದುದೂ, ದ್ಯಾವಾಪೃಥಿವಿಗಳನ್ನೂ ಸಹ ಧರಿಸುವ ಶಕ್ತಿಯನ್ನು ಪಡೆದುದೂ ಪ್ರಸಿದ್ಧವಾಗಿದೆ.

**ಉರುವ್ಯಚಾಃ**—ಉರು ವಿಸ್ತೀರ್ಣಂ ವ್ಯಚೋ ವ್ಯಾಪನಂ ಯಸ್ಯ ತಾದೃಶೋ ಮಹಾವಯವೋ ಭೂತ್ವಾ । ವಿಸ್ತಾರವಾಗಿ ವ್ಯಾಪಿಸುವ ಮಹತ್ತಾದ ಅವಯವಗಳನ್ನು ಹೊಂದಿರುವವನು ಎಂದು ಇಂದ್ರನನ್ನು ಸ್ತುತಿಸಿದೆ.

ಮಹಾँ ಅಸಿ ಮಹಿಷ ವೃಷ್ಣ್ಯೇಭಿರ್ಧನಸ್ಪೃದುಗ್ರ ಸಹಮಾನೋ ಅನ್ಯಾನ್ ।
(ಋ. ಸಂ. ೩-೪೬-೨)

ಪ್ರ ಮಾತ್ರಾಭೀ ರಿರಿಚೇ ರೋಚಮಾನಃ ಪ್ರ ದೇವೇಭಿರ್ವಿಶ್ವತೋ ಅಪ್ರತೀತಃ ।
ಪ್ರ ಮಜ್ಮನಾ ದಿವ ಇಂದ್ರಃ ಪೃಥಿವ್ಯಾಃ ಪ್ರೋರೋರ್ಮಹೋ ಅಂತರಿಕ್ಷಾದೃಜೀಷೀ ।
(ಋ. ಸಂ. ೩-೪೬-೩)

ಇತ್ಯಾದಿಋಕ್ಕುಗಳಲ್ಲಿ ಇಂದ್ರನ ಪ್ರಭಾವವೂ, ಮಹತ್ವವೂ, ಪ್ರಸರಣೆಯೂ ಪೃಥಿವ್ಯಂತರಿಕ್ಷಗಳನ್ನೂ ಮೀರಿ ಹರಡಿದವೆಂದು ವರ್ಣಿತವಾಗಿರುವಂತೆ ಆ ಅಂಶವನ್ನು ಇಲ್ಲಿ **ಉರುವ್ಯಚಾಃ** ಎಂಬ ವಿಶೇಷಣದಿಂದ ತಿಳಿಸಿದೆ.

**ಪಿತೇವ ನಃ ಶೃಣುಹಿ**– ಮಕ್ಕಳ ಪ್ರಾರ್ಥನೆಯನ್ನು ತಂದೆಯು ಆಲಿಸಿ ಕೇಳುವಂತೆ ನಿನ್ನ ಮಕ್ಕಳಿಗೆ ಸದೃಶರಾದ ನಮ್ಮ ಪ್ರಾರ್ಥನೆಯನ್ನು ನೀನು ಕೇಳಿ ನಮ್ಮ ಪ್ರಾರ್ಥನೆಯನ್ನು ನೆರವೇರಿಸು.

ತ್ರಾತಾ ನೋ ಬೋಧಿ ದದೃಶಾನ ಆಪಿರಭಿಖ್ಯಾತಾ ಮರ್ಡಿತಾ ಸೋಮ್ಯಾನಾಂ ।
ಸಖಾ ಪಿತಾ ಪಿತೃತಮಃ ಪಿತೄಣಾಂ ಕರ್ತೇಮು ಲೋಕಮುಶತೇ ವಯೋಧಾಃ ।
(ಋ. ಸಂ. ೪-೧೭-೧೭)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನು ಯಜ್ಞಕರ್ತನಾದ ಮಾನವನಿಗೆ ಅತ್ಯುತ್ತಮನಾದ ತಂದೆಯೆಂದೂ ಸಖನೆಂದೂ ಸುಖದಾತನೆಂದೂ ವರ್ಣಿತನಾಗಿದೆ. ಇಲ್ಲಿಯೂ ಸಹ ಅದೇ ಸಂಬಂಧವನ್ನು ಸೂಚಿಸಿ ಅವನ ಪ್ರೇಮವನ್ನು ಬಯಸಿದೆ.

ವ್ಯಾಕರಣಪ್ರಕ್ರಿಯಾ

ಇಹಿ—ಇಣ್ ಗತೌ ಧಾತು. ಲೋಟ್ ಮಧ್ಯಮಪುರುಷ ಏಕವಚನರೂಪ. ಹಿಗೆ ಅಪಿತ್ವವಿರುವುದರಿಂದ ಗುಣ ಬರುವುದಿಲ್ಲ. ನಿಘಾತಸ್ವರ ಬರುತ್ತದೆ.

**ಸೋಮಕಾಮಮ್**—ಸೋಮವಿಷಯಃ ಕಾಮಃ ಅಭಿಲಾಷಃ ಯಸ್ಯ ಸಃ ಸೋಮಕಾಮಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಆಹುಃ**—ಬ್ರೂ ಞ್ ವ್ಯಕ್ತಾಯಾಂ ವಾಚಿ. ಧಾತು. ಅದಾದಿ. ಲಟ್ ಪ್ರಥಮಪುರುಷ ಬಹುವಚನದಲ್ಲಿ ಝಿಪ್ರತ್ಯಯ **ಬ್ರುವಃ ಪಂಚಾನಾಮಾದಿತ ಆಹೋ ಬ್ರುವಃ** (ಪಾ. ಸೂ. ೩-೪-೮೪) ಎಂಬುದರಿಂದ ಝಿಗೆ ಉಸಾದೇಶ. ಧಾತುವಿಗೆ ಆಹಾದೇಶ. **ಉಸ್ಯಪದಾಂತಾತ್** (ಪಾ. ಸೂ. ೬-೧-೯೬) ಎಂಬುದರಿಂದ ಪರರೂಪ. ಅತಿಜಂತಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ತಸ್ಯ**—ಸಂಪ್ರದಾನ ಸಂಜ್ಞಾ ವಿಧಾಯಕ ಸೂತ್ರದಲ್ಲಿ **ಕ್ರಿಯಾಗ್ರಹಣಂ ಕರ್ತವ್ಯಮ್** ಎಂಬ ವಚನವಿರುವುದರಿಂದ ಕರ್ಮಕ್ಕೆ ಸಂಪ್ರದಾನ ಸಂಜ್ಞೆ ಬರುವುದರಿಂದ ಚತುರ್ಥ್ಯರ್ಥದಲ್ಲಿ ಷಷ್ಠೀ ಬರುತ್ತದೆ.

**ಪಿಬ**—ಪಾ ಪಾನೇ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ **ಪಾಘ್ರಾಧ್ಮಾ**— (ಪಾ. ಸೂ. ೭-೩-೭೮) ಎಂಬುದರಿಂದ ಪಿಬಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ಉರುವ್ಯಚಾಃ**—ವ್ಯಚ ವ್ಯಾಜೀಕರಣೇ ಧಾತು. ಇದಕ್ಕೆ ಔಣಾದಿಕವಾದ ಅಸಿ ಪ್ರತ್ಯಯ. **ವ್ಯಚೇಃಕುಟಾದಿತ್ವಮನಸಿ** ಎಂದು ಅಸಿ ಪ್ರತ್ಯಯದಲ್ಲಿ ಪರ್ಯುದಾಸವಾಡಿರುವುದರಿಂದ ಅಸಿಗೆ **ಗಾಙ್ಕುಟಾದಿಭ್ಯೋ**—(ಪಾ. ಸೂ. ೧-೨-೧) ಎಂಬುದರಿಂದ ಙಿತ್ವ ಬರುವುದಿಲ್ಲ. ಆದುದರಿಂದ ತನ್ನಿಮಿತ್ತವಾಗಿ ಧಾತುವಿಗೆ ಸಂಪ್ರಸಾರಣ ಬರುವುದಿಲ್ಲ. ವ್ಯಚಸ್ ಶಬ್ದವಾಗುತ್ತದೆ. **ಪರಾದಿಶ್ಛಂದಸಿ ಬಹುಲಮ್** (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಏಕವಚನಾಂತರೂಪ. ಅಥವಾ ಉರು ವಿಚತಿ ವ್ಯಾಪ್ನೋತಿ ಇತಿ ಉರುವ್ಯಚಾಃ ಆಗ **ಗತಿಗಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ವೃಷಸ್ವ**—ವೃಷು ಸೇಚನೇ. ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ **ವ್ಯತ್ಯಯೋ ಬಹುಲಮ್** (ಪಾ. ಸೂ ೩-೧-೮೫) ಎಂಬುದರಿಂದ ಆತ್ಮನೇಪದ ಪ್ರತ್ಯಯ ಥಾಸ್ ಬರುತ್ತದೆ. **ಥಾಸಃಸೇ** (ಪಾ. ಸೂ. ೩-೪-೮೦) ಎಂಬುದರಿಂದ ಸೇ ಆದೇಶ ಬಂದಾಗ **ಸವಾಭ್ಯಾಂ ವಾಮೌ** (ಪಾ. ಸೂ. ೩-೪-೯೧) ಎಂಬುದರಿಂದ ಏತ್ವಕ್ಕೆ ವತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಶೃಣುಹಿ—ಶ್ರು ಶ್ರವಣೇ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. **ಶ್ರುವಃ ಶೃ ಚ** (ಪಾ. ಸೂ. ೩-೧-೭೪) ಎಂಬುದರಿಂದ ಧಾತುವಿಗೆ ಶೃ ಆದೇಶ. ಶಪಿಗೆ ಶ್ನು ವಿಕರಣ. **ಉತಶ್ಚ**—ಸೂತ್ರ

ದಿಂದ ಹಿಗೆ ಲುಕ್ ಪ್ರಾಪ್ತವಾದರೆ **ಉತಶ್ಚ ಪ್ರತ್ಯಯಾ ಚ್ಛಂದಸಿ ವಾ ವಚನಮ್**—(ಪಾ. ಸೂ. ೬-೪-೧೦೬-೧) ಎಂಬುವರಿಂದ ವಿಕಲ್ಪವೆಂಬುದರಿಂದ ಇಲ್ಲಿ ಲೋಪ ಬರುವುದಿಲ್ಲ. **ತಿಙ್ಙತಿಙಃ**—(ಪಾ. ಸೂ. ೮-೧-೨೮) ಎಂಬುದ ರಿಂದ ನಿಘಾತಸ್ವರ ಬರುತ್ತದೆ. ಋಕಾರದ ಪರದಲ್ಲಿ ನಕಾರ ಬಂದುದರಿಂದ ಣತ್ವ ಬರುತ್ತದೆ. ‖ ೯ ‖

ನೂರ ನಾಲ್ಕನೇ ಸೂಕ್ತವು ಸಮಾಪ್ತಿಯಾದುದು.

———:o:———

# ನೂರಐದನೆಯ ಸೂಕ್ತವು

**ಚಂದ್ರಮಾ ಇತ್ಯೇಕೋನವಿಂಶತ್ಯೃಚಂ ದ್ವಾದಶಂ ಸೂಕ್ತಂ । ಆಪ್ತ್ಯಾಂ ಪುತ್ರಸ್ಯ ತ್ರಿತಸ್ಯ ಕೂಪೇ ಪತಿತಸ್ಯ ಕುತ್ಸಸ್ಯ ವಾರ್ಷಂ । ತಥಾ ಚೋಭಯೋಃ ಕೂಪಪಾತ ಆಮ್ನಾಯತೇ । ತ್ರಿತಃ ಕೂಪೇಽವಹಿತಃ ಕಾಟೇ ನಿಬಾಳ್ಹ ಋಷಿರಹ್ವದೂತಯ ಇತಿ ಚ । ತ್ರಿತಸ್ಯ ಚಾಪ್ತ್ಯಾಂ ಪುತ್ರತ್ವಂ ತೈತ್ತಿರೀಯಾಃ ಸ್ಪಷ್ಟಮಾಮನಂತಿ । ತತ ಏಕತೋಽಜಾಯತ ಸ ದ್ವಿತೀಯಮಭ್ಯಪಾತಯತ್ ತತೋ ದ್ವಿತೋಽಜಾಯತ ಸ ತೃತೀಯಮಭ್ಯಪಾತಯತ್ ತತಸ್ತ್ರಿತೋಽಜಾಯತ ಯದದ್ಭ್ಯೋಽಜಾಯಂತ ತದಾಪ್ತ್ಯಾನಾಮಾಪ್ತ್ಯತ್ವಂ। ತೈ. ಬ್ರಾ. ೩-೨-೮-೧೦, ೧೧ । ಇತಿ । ತನೋತಮಾಪ್ತ್ಯಂ ತ್ರಿತಸ್ತದ್ವೇದಾಪ್ತ್ಯ ಇತಿ ತಕಾರೋಪಜನೇನ ವಯಮಧೀಮಹ ಇತಿ । ಅಂತ್ಯಾ ತ್ರಿಷ್ಟುಪ್ । ಸಂ ಮಾ ತಪಂತೀತ್ಯೇಷಾ ಯವಮಧ್ಯಾ ಮಹಾಬೃಹತೀ ಆದ್ಯೌ ದ್ವಾವಷ್ಟಾಕ್ಷರೌ ಪಾದೌ ದ್ವಾದಶಾಕ್ಷರಸ್ತೃತೀಯಸ್ತತೋ ದ್ವಾವಷ್ಟಾಕ್ಷರೌ ಸಾ ಯವಮಧ್ಯಾ ಮಹಾಬೃಹತೀ । ಚತ್ವಾರೋಽಷ್ಟಕಾ ಜಾಗತಶ್ಚ ಮಹಾಬೃಹತೀತ್ಯುಕ್ತ್ವಾ ಮಧ್ಯೇ ಚೇದ್ಯವಮಧ್ಯಾ । ಅನು. ೯-೧೦ । ಇತ್ಯುಕ್ತಲಕ್ಷಣೋಪೇತತ್ವಾತ್ । ಶಿಷ್ಟಾಃ ಪಂಕ್ತಯಃ । ವಿಶ್ವೇ ದೇವಾ ದೇವತಾ । ತಥಾ ಚಾನುಕ್ರಾಂತಂ । ಚಂದ್ರಮಾ ಏಕೋನಾಪ್ತ್ಯಸ್ತ್ರಿತೋ ವಾ ವೈಶ್ವದೇವಂ ಹಿ ಪಾಂಕ್ತಮಂತ್ಯಾ ತ್ರಿಷ್ಟುಬಷ್ಟಮಿಾ ಮಹಾಬೃಹತೀ ಯವಮಧ್ಯೇತಿ । ಹೀತ್ಯಭಿಧಾನಾದಿದಮಾದೀನಿ ತ್ರೀಣಿ ಸೂಕ್ತಾನಿ ವೈಶ್ವದೇವಾನಿ ‖ ವಿನಿಯೋಗಃ । ಅತ್ರ ಶಾಟ್ಯಾಯನಿನ ಇತಿಹಾಸಮಾಚಕ್ಷತೇ । ಏಕತೋ ದ್ವಿತಸ್ತ್ರಿತ ಇತಿ ಪುರಾ ತ್ರಯ ಋಷಯೋ ಬಭೂವುಃ । ತೇ ಕದಾಚಿನ್ಮರುಭೂಮಾವರಣ್ಯೇ ವರ್ತಮಾನಾಃ ಪಿಪಾಸಯಾ ಸಂತಪ್ತ-**

**ಗಾತ್ರಾಃ ಸಂತ ಏಕಂ ಕೂಪಮವಿಂದನ್ । ತತ್ರ ತ್ರಿತಾಖ್ಯ ಏಕೋ ಜಲಪಾನಾಯ ಕೂಪಂ ಪ್ರಾವಿಶತ್ । ಸ್ವಯಂ ಪೀತ್ವೇತರಯೋಶ್ಚ ಕೂಪಾದುದಕಮುದ್ಧೃತ್ಯ ಪ್ರಾದಾತ್ । ತೌ ತದುದಕಂ ಪೀತ್ವಾ ತ್ರಿತಂ ಕೂಪೇ ಪಾತಯಿತ್ವಾ ತದೀಯಂ ಧನಂ ಸರ್ವಮಪಹೃತ್ಯ ಕೂಪಂ ಚ ರಥಚಕ್ರೇಣ ಪಿಧಾಯ ಪ್ರಾಸ್ಥಿ-ಷಾತಾಂ । ತತಃ ಕೂಪೇ ಪತಿತಃ ಸ ತ್ರಿತಃ ಕೂಪಾದುತ್ತರೀತುಮಶಕ್ನುವನ್ಸರ್ವೇ ದೇವಾ ಮಾಮುದ್ಧ-ರಂತ್ವಿತಿ ಮನಸಾ ಸಸ್ಮಾರ । ತತಸ್ತೇಷಾಂ ಸ್ತಾವಕಮಿದಂ ಸೂಕ್ತಂ ದದರ್ಶ । ತತ್ರ ರಾತ್ರೌ ಕೂಪಸ್ಯಾಂ-ತಶ್ಚಂದ್ರಮಸೋ ರಶ್ಮೀನ್ಪಶ್ಯನ್ಪರಿದೇವಯತೇ ॥**

ಅನುವಾದವು— **ಚಂದ್ರಮಾ ಅಪ್ಸು** ಎಂಬ ಈ ಸೂಕ್ತವು ಹದಿನೈದನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು. ಇದರಲ್ಲಿ ಹತ್ತೊಂಭತ್ತು ಋಕ್ಕುಗಳಿರುವವು. ಜಲದ ಪುತ್ರನೆಂದು ಹೆಸರಾದ, ಭಾವಿಯಲ್ಲಿ ಬಿದ್ದಿದ್ದ ತ್ರಿತನು ಅಥವಾ ಕುತ್ಸನೆಂಬುವನು ಈ ಸೂಕ್ತಕ್ಕೆ ಋಷಿಯು. ಇವನಬ್ಬರೂ ಭಾವಿಯಲ್ಲಿ ಬಿದ್ದ ವಿಷಯವು— **ತ್ರಿತಃ ಕೂಪೇಽವಹಿತಃ** ನಿಬಾಳ್ಹ **ಋಷಿರಹ್ವದೂತಯೆ** ಇತಿ ಚ ಎಂಬ ಶ್ರುತಿವಾಕ್ಯದಲ್ಲಿ ಹೇಳಿರುವುದು. ತ್ರಿತನು ಉದಕಗಳ ಪುತ್ರನು ಹೇಗಾದನೆಂಬ ವಿಷಯವು ತೈತ್ತಿರೀಯ ಬ್ರಾಹ್ಮಣದಲ್ಲಿ ಈ ರೀತಿ ಉಕ್ತವಾಗಿರುವುದು— **ಸೋಽಙ್ಗಾರೇಣಾಪ ಅಭ್ಯಪಾತಯತ್ । ತತ ಏಕತೋಽಜಾಯತ । ಸ ದ್ವಿತೀಯಮಭ್ಯಪಾತಯತ್ । ತತೋ ದ್ವಿತೋಽಜಾಯತ । ಸ ತೃತೀಯಮಭ್ಯಪಾತಯತ್ । ತತಸ್ತ್ರಿತೋಽಜಾಯತ ಯದದ್ಭ್ಯೋಽಜಾಯಂತ ತದಾಪ್ತ್ಯಾನಾಮಾಪ್ತ್ಯತ್ವಂ** (ತೈ. ಬ್ರಾ. ೩-೨-೮-೧೦,೧೧) ಎಂದು ; ಎಂದರೆ ದೇವತೆಗಳಿಗೆ ಕೊಡಬೇಕಾದ ಹವಿರ್ಭಾಗವನ್ನು ಘರ್ಷಣಾದಿಗಳಿಂದ ಸಂಸ್ಕರಿಸುವುದಕ್ಕಾಗಿ ಅಗ್ನಿಯ ಸಮೀಪದಲ್ಲಿಯೇ ಮೂರು ಜಲಕುಂಡಗಳು (ಬಾವಿಗಳು) ಸ್ಥಾಪಿತವಾದವು. ಅವುಗಳಲ್ಲಿ ಮೂವರು ಪುರುಷರು ಹುಟ್ಟಿದರು. (ಋ. ಸಂ. ಭಾಗ ೫ ಪೇಜು 230-232 ನೋಡಿ) ಇಲ್ಲಿ ಹೇಳಿದ ಕೂಪದಲ್ಲಿ ಉತ್ಪನ್ನವಿಸಿದ ತ್ರಿತನೆಂಬುವನೇ ಈ ಸೂಕ್ತದ ಋಷಿಯು. ಈ ಸೂಕ್ತದ ಕೊನೆಯ ಋಕ್ಕು ತ್ರಿಷ್ಟುಪ್ ಛಂದಸ್ಸುವು. **ಸಂ ಮಾ ತಪಂತಿ** ಎಂಬ ಎಂಟನೆಯ ಋಕ್ಕು ಯವಮಧ್ಯಾ ಮಹಾ ಬೃಹತೀ ಎಂಬ ಛಂದಸ್ಸಿನದು. ಈ ಛಂದಸ್ಸಿನಲ್ಲಿ ಮೊದಲಿನ ಎರಡು ಪಾದಗಳಲ್ಲಿ ಎಂಟು ಅಕ್ಷರಗಳೂ, ಮೂರನೆಯ ಪಾದದಲ್ಲಿ ಹನ್ನೆರಡು ಅಕ್ಷರಗಳೂ, ನಾಲ್ಕನೆಯ ಪಾದದಲ್ಲಿ ಎಂಟು ಅಕ್ಷರಗಳೂ ಇರುವವು. ಈರೀತಿ ಇರುವ ಛಂದಸ್ಸಿಗೆ **ಯವಮಧ್ಯಾ ಮಹಾಬೃಹತೀ** ಎಂದು ಹೆಸರು. ಅನುಕ್ರಮಣಿಕೆಯಲ್ಲಿ— **ಚತ್ವಾರೋಽಷ್ಟಕಾ ಜಾಗ-ತಶ್ಚ ಮಹಾಬೃಹತೀತ್ಯುಕ್ತ್ವಾ ಮಧ್ಯೇ ಚೇದ್ಯವಮಧ್ಯಾ** ಎಂದು ಈ ಛಂದಸ್ಸಿನ ಲಕ್ಷಣವನ್ನು ಹೇಳಿರುವರು. (ಅನು. ೯-೧೦) ಈ ಸೂಕ್ತದ ಉಳಿದ ಋಕ್ಕುಗಳು ಪಂಕ್ತಿಛಂದಸ್ಸಿನವು. ಈ ಸೂಕ್ತಕ್ಕೆ ವಿಶ್ವೇ ದೇವತೆಗಳೇ ದೇವತೆಗಳು. ಅನುಕ್ರಮಣಿಕೆಯಲ್ಲಿ— **ಚಂದ್ರಮಾ ಏಕೋನಾಪ್ತ್ಯಸ್ತ್ರಿತೋ ವಾ ವೈಶ್ವದೇವಂ ಹಿ ಪಾಂಕ್ತಮಂತ್ಯಾ ತ್ರಿಷ್ಟುಬಷ್ಟಮೀ ಮಹಾಬೃಹತೀ ಯವಮಧ್ಯೇತಿ** ಎಂದು ಹೇಳಿರುವುದು. ಸೂತ್ರದಲ್ಲಿ ಹಿ ಎಂಬ ಶಬ್ದ ಪ್ರಯೋಗವಿರುವುದರಿಂದ ಈ ಸೂಕ್ತ ಮೊದಲುಗೊಂಡು ಮೂರು ಸೂಕ್ತಗಳು ವಿಶ್ವೇದೇವತಾಕ ಸೂಕ್ತಗಳೆಂದು ತಿಳಿಯಬೇಕು. ವಿನಿಯೋಗವು— ಇಲ್ಲಿ ಶಾಟ್ಯಾಯನಶಾಖಿಗಳು (ಸಾಮವೇದಿಗಳು) ಒಂದು ಉಪಾಖ್ಯಾನವನ್ನು ಹೇಳುವರು— ಪೂರ್ವದಲ್ಲಿ ಏಕತ, ದ್ವಿತ, ತ್ರಿತ ಎಂದು ಮೂವರು ಋಷಿಗಳಿದ್ದರು. ಅವರು ಒಂದಾನೊಂದು ಕಾಲದಲ್ಲಿ ಜನಶೂನ್ಯವಾದ ಮರುಭೂಮಿಯಲ್ಲಿ ಸಂಚರಿಸುತ್ತಿರುವಾಗ ಬಾಯಾರಿಕೆಯಿಂದ ಬಳಲಿದವರಾಗಿ ಜಲಪಾನಕ್ಕಾಗಿ ಒಂದು ಭಾವಿಯ ಸಮೀಪಕ್ಕೆ ಬಂದರು. ಆಗ ಅವರಲ್ಲಿ ತ್ರಿತನೆಂಬುವನು ನೀರನ್ನು ಕುಡಿಯುವುದಕ್ಕಾಗಿ

ಭಾವಿಯೊಳಕ್ಕೆ ಇಳಿದನು ತಾನೂ ಜಲವನ್ನು ಕುಡಿದು ಇತರರಿಗೂ ಕೊಡಬೇಕೆಂದು ಬಾವಿಯಿಂದ ನೀರನ್ನು ತೆಗೆದುಕೊಂಡು ಬಂದು ಕೊಟ್ಟನು. ಎಕತ ದ್ವಿತ ಎಂಬಿಬ್ಬರೂ ತ್ರಿತನು ತಂದುಕೊಟ್ಟ ನೀರನ್ನು ಕುಡಿದು ತ್ರಿತನನ್ನು ಭಾವಿಯಲ್ಲಿ ತಳ್ಳಿ ಅವನ ಬಳಿಯಿದ್ದ ದ್ರವ್ಯವನ್ನಪಹರಿಸಿ ಅವನು ಈಚೆಗೆ ಬರದಂತೆ ಮಾಡುವುದಕ್ಕಾಗಿ ಆ ಭಾವಿಯಮೇಲೆ ಒಂದು ರಥ ಚಕ್ರವನ್ನು ಅಡ್ಡಲಾಗಿ ಮುಚ್ಚಿ ಹೊರಟುಹೋದರು. ಆಗ ಭಾವಿಯಲ್ಲಿ ಬಿದ್ದಿದ್ದ ತ್ರಿತನು ಭಾವಿಯಿಂದ ಮೇಲಕ್ಕೆ ಬರಲು ಶಕ್ತಿಯಿಲ್ಲದೆ ಸಮಸ್ತದೇವತೆಗಳನ್ನು (ವಿಶ್ವೇದೇವತೆಗಳನ್ನು) ಕುರಿತು ತನ್ನನ್ನು ಬಾವಿಯಿಂದ ಮೇಲಕ್ಕೆತ್ತಿ ಕಾಪಾಡಬೇಕೆಂದು ಮನಸ್ಸಿನಲ್ಲಿಯೇ ಪ್ರಾರ್ಥಿಸಿದನು. ಆಗ ಆ ತ್ರಿತನಿಗೆ ಈ ವಿಶ್ವೇದೇವತಾಕವಾದ ಸೂಕ್ತವು ದೃಷ್ಟವಾಯಿತು. ಆಗ ರಾತ್ರಿಯಲ್ಲಿ ಭಾವಿಯಲ್ಲಿ ಕಾಣಿಸುತ್ತಿದ್ದ ಚಂದ್ರನ ಕಿರಣಗಳನ್ನು ನೋಡಿ ತ್ರಿತನಿಗೆ ಬಹುದುಃಖವಾಯಿತು ಎಂದು.



॥ ಓಂ ॥

## ಸೂಕ್ತ—೧೦೫

॥ ಮಂಡಲ—೧ ॥ ಅನುವಾಕ—೧೫ ॥ ಸೂಕ್ತ—೧೦೫ ॥

॥ ಅಷ್ಟಕ—೧ ॥ ಅಧ್ಯಾಯ—೭ ॥ ವರ್ಗ—೨೦, ೨೧, ೨೨, ೨೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೧೯ ॥

॥ ಋಷಿಃ—ಆಪ್ತ್ಯಸ್ತ್ರಿತಃ ಕುತ್ಸೋ ವಾ ॥

॥ ದೇವತಾ—ವಿಶ್ವೇದೇವಾಃ ॥

॥ ಛಂದಃ—೧-೭, ೯-೧೮ ಪಂಕ್ತಿಃ । ೮. ಮಹಾಬೃಹತೀ ಯವಮಧ್ಯಾ । ೧೯. ತ್ರಿಷ್ಟುಪ್ ॥

ಸಂಹಿತಾಪಾಠಃ

ಚಂದ್ರಮಾ ಅಪ್ಸ್ವ೧ನ್ತರಾ ಸುಪರ್ಣೋ ಧಾವತೇ ದಿವಿ ।
ನ ವೋ ಹಿರಣ್ಯನೇಮಯಃ ಪದಂ ವಿಂದಂತಿ ವಿದ್ಯುತೋ ವಿತ್ತಂ
ಮೇ ಅಸ್ಯ ರೋದಸೀ ॥ ೧ ॥

ಪದಪಾಠಃ

ಚಂದ್ರಮಾಃ । ಅಪ್ ऽ ಸು । ಅಂತಃ । ಆ । ಸು ऽ ಪರ್ಣಃ । ಧಾವತೇ । ದಿವಿ । ನ । ವಃ । ಹಿರಣ್ಯ ऽ ನೇಮಯಃ । ಪದಂ । ವಿಂದಂತಿ । ವಿ ऽ ದ್ಯುತಃ । ವಿತ್ತಂ । ಮೇ । ಅಸ್ಯ । ರೋದಸೀ ಇತಿ ॥ ೧ ॥

ಸಾಯಣಭಾಷ್ಯಂ

ಅಪ್ಸ್ವಂತರಿಕ್ಷಾಸೂದಕಮಯೇ ಮಂಡಲೇಽಂತರ್ಮಧ್ಯೇ ವರ್ತಮಾನಃ ಸುಪರ್ಣಃ ಶೋಭನಪತನಃ । ಯದ್ವಾ । ಸುಪರ್ಣ ಇತಿ ರಶ್ಮಿನಾಮ । ಸುಷುಮ್ನಾಖ್ಯೇನ ಸೂರ್ಯರಶ್ಮಿನಾ ಯುಕ್ತಶ್ಚಂದ್ರಮಾ ದಿವಿ ದ್ಯುಲೋಕ ಆ ಧಾವತೇ । ಆಙ್ ಮರ್ಯಾದಾಯಾಂ । ಏಕೇನೈವ ಪ್ರಕಾರೇಣ ಧಾವತೇ । ಶೀಘ್ರಂ ಗಚ್ಛತಿ । ತಾದೃಶಸ್ಯ ಚಂದ್ರಮಸಃ ಸಂಬಂಧಿನೋ ಹೇ ಹಿರಣ್ಯನೇಮಯಃ ಸುವರ್ಣಸದೃಶಪರ್ಯಂತಾಃ । ಯದ್ವಾ । ಹಿತರಮಣೀಯಪ್ರಾಂತಾ । ವಿದ್ಯುತೋ ವಿದ್ಯೋತಮಾನಾ ರಶ್ಮಯೋ ವೋ ಯುಷ್ಮಾಕಂ ಪದಂ ಪಾದಸ್ಥಾನೀಯಮಗ್ರಂ ನ ವಿಂದಂತಿ । ಮದೀಯಾನೀಂದ್ರಿಯಾಣಿ ಕೂಪೇನಾವೃತತ್ವಾನ್ನ ಲಭಂತೇ । ಅತ ಇದಮನುಚಿತಂ । ತಸ್ಮಾತ್ಕೂಪಾನ್ಮಾಮುತ್ತಾರಯತೇತ್ಯರ್ಥಃ । ಅಪಿ ಚ ಹೇ ರೋದಸೀ ದ್ಯಾವಾಪೃಥಿವ್ಯೌ ಮೇ ಮದೀಯಮಸ್ಯೇದಂ ಸ್ತೋತ್ರಂ ವಿತ್ತಂ । ಜಾನೀತಂ । ಯದ್ವಾ । ಮದೀಯಂ ಕೂಪಪತನರೂಪಂ ಯದಿದಂ ದುಃಖಂ ತದವಗಚ್ಛತಂ । ಮದೀಯಂ ಸ್ತೋತ್ರಂ ಶ್ರುತ್ವಾ ಮದೀಯಂ ದುಃಖಂ ಜ್ಞಾತ್ವಾ ನಾಸ್ಮಾತ್ಕೂಪಾನ್ಮಾಮುತ್ತಾರಯತಮಿತ್ಯರ್ಥಃ ॥ ಚಂದ್ರಮಾಃ । ಚಂದ್ರಮಾಹ್ಲಾದನಂ ಸರ್ವಸ್ಯ ಜಗತೋ ನಿರ್ಮಿಮೀತ ಇತಿ ಚಂದ್ರಮಾಃ । ಚಂದ್ರೇ ಮಾಙೋ ಡಿತ್ । ಉ. ೪-೨೨೭ । ಇತ್ಯಸುನ್ । ದಾಸೀಭಾರಾದಿಷು ಪಾಠಾತ್ಪೂರ್ವಪದಪ್ರಕೃತಿಸ್ವರತ್ವಂ । ಧಾವತೇ । ಸೃ ಗತೌ । ಪಾಘ್ರೇತ್ಯಾದಿನಾ ವೇಗಿತಾಯಾಂ ಧಾವಾದೇಶಃ । ವ್ಯತ್ಯಯೇನಾತ್ಮನೇಪದಂ । ವಿತ್ತಂ । ವಿದ ಜ್ಞಾನೇ । ಲೋಟ್ಯದಾದಿತ್ವಾಚ್ಛಪೋ ಲುಕ್ । ಪಾದಾದಿತ್ವಾತ್ತಿಙ್ಙತಿಙ ಇತಿ ನಿಘಾತಾಭಾವಃ । ಅಸ್ಯ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ । ಊಡಿದಮಿತಿ ವಿಭಕ್ತೇರುದಾತ್ತತ್ವಂ ॥

ಪ್ರತಿಪದಾರ್ಥ

ಅಪ್ಸು ಅಂತಃ—(ಅಂತರಿಕ್ಷಕ್ಕೆ ಸೇರಿದ) ಉದಕಮಯವಾದ ಮಂಡಲದ ಮಧ್ಯಭಾಗದಲ್ಲಿ । ಸುಪರ್ಣಃ—ಮನೋಹರವಾದ ಸಂಚಾರವುಳ್ಳ ಅಥವಾ ಸುಷುಮ್ನವೆಂಬ ಸೂರ್ಯಕಿರಣದಿಂದ ಕೂಡಿದ । ಚಂದ್ರಮಾಃ-ಚಂದ್ರನು । ದಿವಿ—ದ್ಯುಲೋಕದಲ್ಲಿ । ಆ ಧಾವತೇ—ಒಂದೇ ವಿಧವಾದ ವೇಗದಲ್ಲಿ ಸಂಚರಿಸುತ್ತಾನೆ । ಹಿರಣ್ಯನೇಮಯಃ—ಚಿನ್ನದ ಬಣ್ಣವನ್ನು ಹೊಂದಿದ ಅಂಚುಗಳುಳ್ಳ ಅಥವಾ ಹಿತವಾಗಿಯೂ ರಮಣೀಯವಾಗಿಯೂ ಇರುವ ಅಂಚು

ಗಳುಳ್ಳ ; **ವಿದ್ಯುತಃ**—ಪ್ರಕಾಶಮಾನವಾದ (ಚಂದ್ರನ) ಕಿರಣಗಳೇ, । **ವಃ**—ನಿಮ್ಮ । **ಪದಂ**—ಮೂಲಸ್ಥಾನವನ್ನು । **ನ ವಿಂದಂತಿ**—(ನಾನು ಬಾವಿಯಲ್ಲಿ ಬಿದ್ದಿರುವುದರಿಂದ ನನ್ನ ಕಣ್ಣುಗಳು) ತಿಳಿಯಲಾರವು । **ರೋದಸೀ**—ಎಲೈ ದ್ಯಾವಾಪೃಥಿವಿಗಳೇ, । **ಮೇ**—ನನ್ನ । **ಅಸ್ಯ**—ಈ ಸ್ತೋತ್ರವನ್ನು ಅಥವಾ (ನನ್ನ ಕೂಪಪತನದಿಂದ ಪ್ರಾಪ್ತವಾದ) ದುಃಖವನ್ನು । **ವಿತ್ತಂ**—ಗಮನಿಸಿ ತಿಳಿಯಿರಿ.

ಭಾವಾರ್ಥ

ಅಂತರಿಕ್ಷಕ್ಕೆ ಸೇರಿದ ಉದಕಮಯವಾದ ಮಂಡಲದ ಮಧ್ಯಭಾಗದಲ್ಲಿ ಮನೋಹರವಾದ ಸಂಚಾರವುಳ್ಳ ಚಂದ್ರನು ತನ್ನ ಒಂದೇ ವಿಧವಾದ ವೇಗದ ದ್ಯುಲೋಕದ ಸಂಚಾರವನ್ನಿಟ್ಟುಕೊಂಡಿದ್ದಾನೆ. ಹೊಂಬಣ್ಣದ ಅಂಚುಗಳನ್ನು ಹೊಂದಿ ಪ್ರಕಾಶಮಾನಗಳಾದ ಎಲೈ ಚಂದ್ರನ ಕಿರಣಗಳೇ, ನಾನು ಬಾವಿಯಲ್ಲಿ ಬಿದ್ದಿರುವುದರಿಂದ ನಿಮ್ಮ ಮೂಲಸ್ಥಾನವಾವುದೆಂಬುದನ್ನು ನನ್ನ ಕಣ್ಣು ಅರಿಯಲಾರವು. ಎಲೈ ದ್ಯಾವಾಪೃಥಿವಿಗಳೇ, ನನ್ನ ಈ ಕೂಪಪತನದಿಂದ ಪ್ರಾಪ್ತವಾದ ದುಃಖವನ್ನು ನೀವು ಚೆನ್ನಾಗಿ ಅರಿತು ನನ್ನನ್ನು ಬಾವಿಯಿಂದ ಮೇಲಕ್ಕೆ ಎತ್ತಿ ನನ್ನ ದುಃಖವನ್ನು ನಿವಾರಿಸಿರಿ.

## English Translation

The graceful-moving moon speeds along the middle region in the sky : bright golden rays, (my eyes) behold not your abiding-place. Heaven and earth, be conscious of this (my affiction).

ವಿಶೇಷವಿಷಯಗಳು

ಈ ಸೂಕ್ತವು ಬಾವಿಯಲ್ಲಿ ಬಿದ್ದಿದ್ದ ತ್ರಿತನಿಂದ (ಅಥವಾ ಕುತ್ಸನಿಂದ) ದೃಷ್ಟವಾದದ್ದು, ವಿಶ್ವೇದೇವತೆಗಳನ್ನು ಉದ್ದೇಶಿಸಿದ ಪ್ರಾರ್ಥನಾರೂಪದಲ್ಲಿದೆ. ಈ ಪ್ರಾರ್ಥನೆಗೆ ಹಿನ್ನೆಲೆಯಾದ ಒಂದು ಕಥೆಯಿದೆ. ಆದರೆ ಸಾಯಣಭಾಷ್ಯದ ಈ ಸೂಕ್ತಕ್ಕೆ ಉಪೋದ್ಘಾತದಲ್ಲಿರುವ ಕಥಾಕ್ರಮವೇ ಬೇರೆ, ಸ್ಕಂದಸ್ವಾಮಿಗಳ ಭಾಷ್ಯದಲ್ಲಿರುವ ಕ್ರಮವೇ ಬೇರೆ. ಸಾಯಣಭಾಷ್ಯದ ರೀತ್ಯಾ, (ಇದು ಶಾಕಟಾಯನ ಕ್ರಮವನ್ನನುಸರಿಸಿದೆ)—**ಏಕತೋ ದ್ವಿತಸ್ತ್ರಿತ ಇತಿ ಪುರಾ ತ್ರಯ ಋಷಯೋ ಬಭೂವುಃ । ತೇ ಕದಾಚಿನ್ಮರುಭೂಮಾವರಣ್ಯೇ ವರ್ತಮಾನಾಃ ಪಿಪಾಸಯಾ ಸಂತಪ್ತಗಾತ್ರಾಃ ಸಂತ ಏಕಂ ಕೂಪಮವಿಂದನ್ । ತತ್ರ ತ್ರಿತಾಖ್ಯ ಏಕೋ ಜಲಪಾನಾಯ ಕೂಪಂ ಪ್ರಾವಿಶತ್ । ಸ್ವಯಂ ಪೀತ್ವಾ ಇತರಯೋಃಶ್ಚ ಕೂಪಾದುದಕಮುದ್ಧೃತ್ಯ ಪ್ರಾದಾತ್ । ತೌ ತದುದಕಂ ಪೀತ್ವಾ ತ್ರಿತಂ ಕೂಪೇ ಪಾತಯಿತ್ವಾ ತದೀಯಂ ಧನಂ ಸರ್ವಮಪಹೃತ್ಯ ಕೂಪಂ ಚ ರಥಚಕ್ರೇಣ ಪಿಧಾಯ ಪ್ರಾಸ್ಥಿಷಾತಾಂ । ತತಃ ಕೂಪೇ ಪತಿತಃ ಸ ತ್ರಿತಃ ಕೂಪಾದುತ್ತರೀತುಮಶಕ್ನುವನ್ ಸರ್ವೇ ದೇವಾ ಮಾಮುದ್ಧರಂತ್ವಿತಿ ಮನಸಾ ಸಸ್ಮಾರ । ತತಸ್ತೇಷಾಂ ಸ್ತಾವಕಮಿದಂ ಸೂಕ್ತಂ ದದರ್ಶ । ತತ್ರ ರಾತ್ರೌ ಕೂಪಸ್ಯಾಂತಶ್ಚಂದ್ರಮಸೋ ರಶ್ಮೀನ್ ಪಶ್ಯನ್ ಪರಿದೇವಯತೇ ।**

ಏಕತ, ದ್ವಿತ ಮತ್ತು ತ್ರಿತ ಎಂಬ ಮೂವರು ಋಷಿಗಳು ಇದ್ದರು. ಅವರು ಒಂದುಸಲ ಅರಣ್ಯಮಧ್ಯದಲ್ಲಿ ಮರುಭೂಮಿಯಲ್ಲಿ ಸಿಕ್ಕಿಕೊಂಡು ಅತ್ಯಂತ ಬಾಯಾರಿಕೆಯಿಂದ ಹಿಂಸೆಪಡುತ್ತಿರುವಾಗ ಆಕಸ್ಮಾತ್ತಾಗಿ ಒಂದು ಬಾವಿ

ಯನ್ನು ನೋಡಿ ಅವರ ಹತ್ತಿರ ಬಂದರು. ಆಗ ತ್ರಿತನು ಜಲಪಾನಕ್ಕಾಗಿ ಬಾವಿಗೆ ಇಳಿದನು. ನಂತರ ತಾನು ನೀರನ್ನು ಕುಡಿದು ಉಳಿದಿಬ್ಬರಿಗೂ ಸಹ ಬಾವಿಯಿಂದ ನೀರನ್ನು ತೆಗೆದುಕೊಂಡು ಮೇಲಕ್ಕೆ ಬಂದನು. ಮೇಲಿದ್ದ ಏಕತ ಮತ್ತು ದ್ವಿತರು ಆ ನೀರನ್ನು ಕುಡಿದು ತ್ರಿತನ ಸರ್ವಧನವನ್ನೂ ಅಪಹರಿಸಬೇಕೆಂದು ಅವನನ್ನು ಬಾವಿಗೆ ತಳ್ಳಿ ರಥಚಕ್ರದಿಂದ ಬಾವಿಯನ್ನು ಮುಚ್ಚಿ ಅಲ್ಲಿಂದ ಹೊರಟುಹೋದರು. ಬಾವಿಯಲ್ಲಿ ಬಿದ್ದಿದ್ದ ತ್ರಿತನಿಗೆ ಮೇಲಕ್ಕೆ ಬರಲಾಗದೇ ನಿಂತಲ್ಲಿಯೇ ವಿಶ್ವದೇವತೆಗಳ ಪ್ರಾರ್ಥನೆಯನ್ನು ಮಾಡಿ ಅವರು ನನ್ನನ್ನುದ್ಧರಿಸಲಿ ಎಂದು ಮನಸ್ಸಿನಲ್ಲಿಯೇ ಸ್ಮರಿಸಿದನು. ಆಗ ಅವರನ್ನು ಸ್ತುತಿಸತಕ್ಕ ಈ ಸೂಕ್ತದ ದರ್ಶನವನ್ನು ಪಡೆದನು. ಆ ಕಾಡಿನಲ್ಲಿ ಬಾವಿಯೊಳಕ್ಕೆ ಪ್ರಸರಿಸಿದ ಚಂದ್ರಕಿರಣಗಳನ್ನು ನೋಡಿ ತನ್ನ ವೇದನೆಯನ್ನು ಪ್ರಕಾಶಪಡಿಸುತ್ತಾ ಪ್ರಾರ್ಥಿಸುತ್ತಿದ್ದಾನೆಂದು ಸಾಯಣಭಾಷ್ಯದ ಕಥೆ. ಸ್ಕಂದಸ್ವಾಮಿಗಳ ಭಾಷ್ಯದಲ್ಲಿ ಕಥಾಕ್ರಮವು ಕೆಳಗೆ ಹೇಳುವ ರೀತಿಯಲ್ಲಿದೆ.

ಅತ್ರ ಸೂಕ್ತೇ ಇತಿಹಾಸಮಾಚಕ್ಷತೇ । ಆಪ್ತ್ಯಸ್ಯ ಋಷೇಃ ತ್ರಯಃ ಪುತ್ರಾ ಬಭೂವುಃ ಏಕತೋ ದ್ವಿತಸ್ತ್ರಿತ ಇತಿ । ತೇ ಯಷ್ಟುಕಾಮಾಃ ಸ್ವಾನ್ ಯಾಜ್ಯಾನ್ ಗಾ ಯಯಾಚಿರೇ । ತಾ ಆದಾಯ ಸರಸ್ವತ್ಯಾಸ್ತೀರೇಣ ಪಥಾ ಗಚ್ಛತಃ ತಾನ್ ಪರಸ್ಮಿನ್ ಕೂಲೇ ನಿಷಣ್ಣೋ ರಾತ್ರಿವೃಕೋ ದದರ್ಶ । ದೃಷ್ಟ್ವಾ ಚೋತ್ಥಾಯ ಅಭಿಮುಖಃ ಸಾರಸ್ವತೀರಪ ಉತ್ತರನ್ ತಾಂಸ್ತ್ರಾಸಯಾಮಾಸ । ತೇಷಾಂ ಪಶ್ಯತಾಂ ತ್ರಿತೋ ನಿರ್ಜಲೇ ಸಾಂಸುಭಿಃ ವೀರುದ್ಭಿಃ ತೃಣೈಶ್ಚಾವೃತೇ ಮಹತ್ಯಂಧಕೂಪೇ ಪಪಾತ । ಏಕತದ್ವಿತೌ ತು ಸಹ ಗೋಭಿಃ ಗೃಹಂ ಜಗ್ಮತುಃ । ಅಥ ಕೂಪಸ್ಥಸ್ಯ ಇಯಂ ಚಿಂತಾ ಬಭೂವ । ಅಕೃತಸೋಮಯಾಗಸ್ಯ ಮೃತ್ಯುರ್ನಶ್ರೇಯಸೇ । ತತ್ ಕಃ ಉಪಾಯಃ ಸ್ಯಾತ್ ಯೇನಾಽಪಮಿಹಸ್ಥಃ ಸೋಮಂ ಪಿಬೇಯಮಿತಿ । ಚಿಂತಯನ್ನೇವ ಯದೃಚ್ಛಯಾ ತತ್ರ ಲಂಬಮಾನಾಂ ವೀರುಧಂ ದದರ್ಶ । ತಾಂ ಸೋಮ ಇತಿ ಸಂಕಲ್ಪ್ಯ ಯೋಗೈಶ್ವರ್ಯಾತ್ ಮನಸಾ ಶಿಷ್ಟಾನಿ ಅಗ್ನ್ಯಾದೀನಿ ಸಾಧನಾನಿ ಪರಿಸಂಕಲ್ಪ್ಯ ಶರ್ಕರಾ ಗ್ರಾವ್ಣಃ ಕೃತ್ವಾ ತಾಭಿಸ್ತಾಂ ವೀರುಧಮಭಿಷ್ಟುತ್ಯ ಯಾಗಾರ್ಥಂ ದೇವಾನ್ ಆಜುಹಾವ । ತಾ ಆಹ್ವಾನಕಾರಣಮನವಬುಧ್ಯಮಾನಾ ಆವಿಗ್ನಾ ಬಭೂವುಃ । ಅಥ ತದಾಹ್ವಾನಂ ಬೃಹಸ್ಪತಿಃ ಶುಶ್ರಾವ । ಸ ದೇವಾನುವಾಚ । ತ್ರಿತಸ್ಯ ವರ್ತತೇ ಯಜ್ಞಸ್ತತ್ರ ಗಚ್ಛಾಮ ಇತಿ । ಅಥ ತತ್ರ ಸರ್ವೇ ದೇವಾ ಜಗ್ಮುಃ । ತಾನಾಗತಾನ್ ಕೂಪಾದುತ್ತಾರಣಾರ್ಥೀ ತ್ರಿತಃ ಕ್ರಮೇಣ ತುಷ್ಟಾವ ಚಂದ್ರಮಾ ಇತ್ಯಾದಿನೇತಿ ।

ಆಪ್ತ್ಯಋಷಿಗೆ ಏಕತ, ದ್ವಿತ ಮತ್ತು ತ್ರಿತ ಎಂಬ ಮೂವರು ಪುತ್ರರಿದ್ದರು. ಅವರು ಯಜ್ಞಮಾಡಬೇಕೆಂಬ ಆಸೆಯಿಂದ ಯಜ್ಞಪಶುಗಳನ್ನು ಯಾಚನೆಮಾಡಿಕೊಂಡು ಅವುಗಳೊಂದಿಗೆ ಸರಸ್ವತೀನದಿಯ ತೀರದ ಮಾರ್ಗದಿಂದ ಬರುತ್ತಿರುವಾಗ ಆಚೆ ದಡದಲ್ಲಿದ್ದ ಒಂದು ತೋಳನು ಇವರನ್ನು ನೋಡಿತು. ಒಡನೇ ಅದು ಎದ್ದು ನದಿಯ ನೀರನ್ನು ದಾಟಿಕೊಂಡು ಬಂದು ಇವರನ್ನು ಗದರಿಸಿತು. ಅವರೆಲ್ಲರೂ ಪ್ರಾಣಭೀತಿಯಿಂದ ಗಾಬರಿಗೊಂಡಾಗ ತ್ರಿತನು ಧೂಳುಗಳಿಂದಲೂ ಲತೆಗಳಿಂದಲೂ, ಜೊಂಡುಗಳಿಂದಲೂ ಆವೃತವಾದ ಒಂದು ಅಗಾಧವಾದ ಬಾವಿಯೊಳಕ್ಕೆ ಬಿದ್ದುಬಿಟ್ಟನು. ಏಕತ ಮತ್ತು ದ್ವಿತರು ಹೇಗೋ ತಪ್ಪಿಸಿಕೊಂಡು ಗೋವುಗಳನ್ನು ಅಟ್ಟಿಕೊಂಡು ಮನೆಗೆ ಹೊರಟುಹೋದರು. ಆಗ ಕಗ್ಗತ್ತಲಿನಿಂದ ಆವೃತವಾದ ಬಾವಿಯಲ್ಲಿ ಬಿದ್ದಿದ್ದ ತ್ರಿತನು, ‘ ಸೋಮಯಾಗವನ್ನು

ನೆರವೇರಿಸದೇ ಸತ್ತರೆ ಮನುಷ್ಯನಿಗೆ ಶ್ರೇಯಸ್ಸಿಲ್ಲ. ಈಗ ಯಾವ ಉಪಾಯದಿಂದ ಯಜ್ಞಮಾಡಿ ಸೋಮರಸವನ್ನು ಪಾನಮಾಡಲು ಸಾಧ್ಯವಾದೀತು ' ಎಂದು ಯೋಚನೆಮಾಡತೊಡಗಿದನು. ಹಾಗೆ ಆಲೋಚಿಸುತ್ತಿರುವಲ್ಲಿಯೇ ಆಕಸ್ಮಿಕವಾಗಿ ಅಲ್ಲಿ ನೇತಾಡುತ್ತಿದ್ದ ಒಂದು ಬಳ್ಳಿಯನ್ನು ನೋಡಿದನು. ಅನಂತರ ಅದೇ ಸೋಮಲತೆಯೆಂದು ನಿಶ್ಚಯಿಸಿ ತನ್ನ ಆಂತರಿಕವಾದ ಯೋಗಸಂಪತ್ತಿನಿಂದ ಅಂತಸ್ಥವಾದ ಅಗ್ನಿಯನ್ನು ಸಿದ್ಧಮಾಡಿ, ಆ ಲತೆಯನ್ನೂ ಹಿಂಡಿ ಯಾಗಾರ್ಥವಾಗಿ ದೇವತೆಗಳನ್ನು ಕರೆದನು. ಅವರು ಈ ಆಹ್ವಾನಕಾರಣವನ್ನು ತಿಳಿಯದೆ ಚಿಂತಿಸತೊಡಗಿದರು. ಆಗ ಬೃಹಸ್ಪತಿಯು ಆ ಆಹ್ವಾನವನ್ನು ಕೇಳಿ, ದೇವತೆಗಳನ್ನು ಕುರಿತು ' ತ್ರಿತನ ಯಜ್ಞವು ನೆರವೇರುತ್ತಿದೆ. ನಾವೆಲ್ಲರೂ ಅಲ್ಲಿಗೆ ಹೋಗೋಣ ' ಎಂದನು. ಅನಂತರ ಅಲ್ಲಿಗೆ ಎಲ್ಲರೂ ಹೋದರು. ಆಗ ತ್ರಿತನು ಬಾವಿಯಿಂದ ಮೇಲಕ್ಕೆ ಬರಬೇಕೆಂಬ ಆಸೆಯಿಂದ ಅಲ್ಲಿ ಬಂದಿದ್ದ ದೇವತೆಗಳನ್ನು ಒಬ್ಬೊಬ್ಬರನ್ನಾಗಿ ಸ್ತುತಿಸತೊಡಗಿದನು ಎಂದು ಸ್ಕಂದಸ್ವಾಮಿಗಳ ಭಾಷ್ಯದಲ್ಲಿರುವ ಕಥಾಕ್ರಮವು ಬೇರೆ ರೀತಿಯಲ್ಲಿದೆ.

ಪಾಶ್ಚಾತ್ಯಪಂಡಿತನಾದ Wilson ಎಂಬ ಪಂಡಿತನು ಪರಿಧೀರಿವ ತ್ರಿತಃ ಎಂಬ ಶಬ್ದಗಳ ವಿಷಯವಾಗಿ ಈರೀತಿ ಬರೆದಿರುತ್ತಾನೆ—

The text has only ಪರಿಧೀರಿವ ತ್ರಿತಃ and ತ್ರಿತಃ may mean triple or threefold; making the phrase, "as through triple coverings," or defences; whence Rosen has, custodes veluti a tribus partibus constitutos; M. Langlois is more correct. In considering ತ್ರಿತಃ as a proper name; but it may be doubted if he has authority for rendering it by Soma,— on libations qui porte le nom de Trita ; or for the additional circumstances he narrates. The legend told by the scholiast and confirmed by other passages of the text, as well as by the version of the story found in NITIMANJARI, is wholly different, ಏಕತ, ದ್ವಿತ, and ತ್ರಿತ were three men produced in water by Agni,, for the purpose of removing or rubbing off the reliques of an oblation of clarified butter, the proper function of the sacred grass, to the three blades of which placed on the alter, the legend may owe its origin; but this does not appear from the narrative. The Scholiast following Taittiriyas says that Agni threw the cinders of the burnt offerings into water whence successively arose ಏಕತ, ದ್ವಿತ and ತ್ರಿತ who, it elswhere appears, were therefore called APTYAS or sons of water (ಸೂ. ೧೦೫.೯) ತ್ರಿತ having on a subsequent occasion gone to draw water from a well, fell into it, and the Asuras heaped coverings over the mouth of it to prevent his getting out ; but he broke through them with ease. It is to this exploit that Indra's breaking through the defences of the Asura, Vala, is compared. The story is somewhat differently related in the NITIMANJARI. Three brothers, it is said, ಏಕತ ದ್ವಿತ and ತ್ರಿತ were travelling in a desert and being distressed by thirst' came to a well from which the youngest ತ್ರಿತ drew water and gave it to his brothers ; in requital, they threw him into the well, in order to appropriate his property and having covered the top with a cart-wheel left him in the well ; in this extremity he prayed to all the gods to extricate him and by their-favour he made his escape. ಪರಿಧಿ the term of the text, means a circumference, a

circular covering or lid. Mr. Colebrooke, has briefly, but with his usual accuracy cited his story in his account of the ಋಗ್ವೇದ (As Researches viii p. 353) Dr. Roth conceives ತ್ರಿತ to be the same as ತ್ರೈತನ a name that occurs in a text of Rik and converting the latter into a deifications, he imagines him to be the original of Threetona, the Zend form of Feridun, one of the heroes of the Shah-nama, and of ancient Persian tradition-Zeitschrift der D. Morgenlandischen Gesellschaft, vol. ii p. 216. Professor Lassen seems disposed to adopt this, identification—Indische Alterthumskunde, Additions. The identity of ತ್ರಿತ and ತ್ರೈತನ, however remains to be established, and the very stanza quoted by Dr. Roth as authority for the latter name is explained in the NITIMANJARI in a very different sense from that which he has given. It is said, that the slaves of Dirghatamas, when he was old and blind, became insubordinate and attempted to destroy him, first by throwing him into the fire, whence he was saved by the Aswins. Then into water, whence he was extricated by the same divinities; upon which ತ್ರೈತನ one of the slaves wounded him on the head, breast, and arms, and then inflicted like injuries on himseif of which he perished. After these events, the sage recited in praise of Aswins the hymn in which the verse occurs—

ನ ಮಾ ಗರನ್ನದ್ಯೋ ಮಾತೃತಮಾ ದಾಸಾ ಯದೀಂ ಸುಸಮುಬ್ಧಮವಾಧುಃ ।
ಶಿರೋ ಯದಸ್ಯ ತ್ರೈತನೋ ವಿತಕ್ಷತ್ಸ್ವಯಂ ದಾಸ ಉರೋ ಅಂಸಾವಪಿ ಗ್ಧ ॥
(ಋ. ಸಂ. ೧-೧೫೮-೫)

"Let not the maternal waters swallow me, since the slaves assailed this decrepit old man e in like manner as the slave ತ್ರೈತನ wounded his ʰead, so has he struck it of himself and likewise his breast and shoulders" If this interpretation be correct there can be little relation between ತ್ರಿತ and ತ್ರೈತನ and between the latter and Feridun. The former term has however, found admission as a numeral, and apparently also as a proper name into the Zend books.

ಬೃಹದ್ದೇವತೆಯಲ್ಲಿಯೂ ಸಹ ಈ ಕಥೆಯು ಉಕ್ತವಾಗಿದೆ. ಅದರಲ್ಲೂ ಸಹ ತೋಳನ ಹೆದರಿಕೆಯಿಂದಲೇ ತ್ರಿತನು ಬಾವಿಗೆ ಬಿದ್ದನೆಂದೂ ಅನಂತರ ಅವನು ದೇವತಾಸ್ತುತಿಯನ್ನು ಮಾಡಿದನೆಂದೂ ಹೇಳಿದೆ.

ತ್ರಿತಂ ಗಾಸ್ತ್ವನುಗಚ್ಛಂತಂ ಕ್ರೂರಾಃ ಸಾಲಾವೃಕೀಸುತಾಃ ।
ಕೂಪೇ ಪ್ರಕ್ಷಿಪ್ಯ ಗಾಃ ಸರ್ವಾಸ್ತತ ಏವಾಪಜಹ್ರಿರೇ ॥

ಸ ತತ್ರ ಸುಷುವೇ ಸೋಮಂ ಮಂತ್ರವಿನ್ಮಂತ್ರವಿತ್ತಮಃ ।
ದೇವಾಂಶ್ಚಾವಾಹಯತ್ಸರ್ವಾಂಸ್ತಚ್ಛುಶ್ರಾವ ಬೃಹಸ್ಪತಿಃ ॥

ಆಗಚ್ಛತ್ಸೋಽಥ ತಾನ್ದೃಷ್ಟ್ವಾ ಕ್ವ ವಸತ್ಯಸ್ಯ ತತ್ತ್ವತಃ ।
ಸರ್ವಪೃಕ್ತ್ವಂ ಚ ವರುಣಸ್ಯಾರ್ಯಮ್ಣಶ್ಚೈತ್ಯುಪಾಲಭತ್ ॥

**ಕೂಪೇಷ್ಟಕಾಭಿರ್ವ್ರಣಿತಾನ್ಯಂಗಾನ್ಯೇವಾಭವನ್ಮಮ ।**
**ದೃಷ್ಟ್ವಾ ಸರ್ವಾನಹಂ ಸ್ತೌಮಿ ಯದ್ಯಪ್ಯೇಕೋ ನ ಪಶ್ಯತಿ ॥**

**ಬೃಹಸ್ಪತಿಪ್ರಚೋದಿತಾ ವಿಶ್ವೇ ದೇವಗಣಾಸ್ತ್ರಯಃ ।**
**ಜಗ್ಮುಸ್ತ್ರಿತಸ್ಯ ತಂ ಯಜ್ಞಂ ಭಾಗಾಂಶ್ಚ ಜಗೃಹುಃ ಸಹ ॥**

**ಬೃಹಸ್ಪತಿಸ್ತ್ರಿತಸ್ಯೈತದ್ ಜ್ಞಾನಂ ವಿಜ್ಞಾನಮೇವ ಚ ।**
**ತೃಚೇನಾಂತ್ಯೇನ ಸೂಕ್ತಸ್ಯ ಜಗಾದರ್ಷಿರಸಾವಿತಿ ॥**

(ಬೃ. ದೇ. ೩-೧೩೨-೧೩೬)

ಕ್ರೂರಸ್ವಭಾವವುಳ್ಳ ಆ ತೋಳನ ಮರಿಗಳು ತ್ರಿತನನ್ನು ಬಾವಿಗೆ ತಳ್ಳಿ ಅವನ ಗೋವುಗಳನ್ನು ಅಲ್ಲಿಂದ ಕಸಿದುಕೊಂಡು ಹೊರಟುಹೋದವು. ಆಗ ಮಂತ್ರವಿತ್ತುಗಳಲ್ಲೆಲ್ಲಾ ಶ್ರೇಷ್ಠನಾದ ಮಂತ್ರವಿತ್ತಾದ ತ್ರಿತನು ಸೋಮರಸವನ್ನು ಹಿಂಡಿ ದೇವತೆಗಳನ್ನು ಕರೆದನು. ಬೃಹಸ್ಪತಿಯು ಈ ಆಹ್ವಾನವನ್ನು ಕೇಳಿ ಸಕಲದೇವತೆಗಳೊಡನೆಯೂ ಕೂಡಿಕೊಂಡು ಬಂದನು. ಅವರು ಬಂದೊಡನೆಯೇ ಒಂದು ವಿಧವಾದ ಅಸಮಾಧಾನದಿಂದ ಈ ವರುಣನ ಮತ್ತು ಅರ್ಯಮನ ಸರ್ವದೃಕ್ತ್ವ (ಎಲ್ಲವನ್ನೂ ನೋಡತಕ್ಕ ಶಕ್ತಿ) ಈಗೆಲ್ಲಿ ಹೋಯಿತು ? ಈ ಬಾವಿಯ ಇಟ್ಟಿಗೆಯಿಂದ ನನ್ನ ಅಂಗಗಳೆಲ್ಲವೂ ಗಾಯವಾಗಿವೆ. ನಾನು ಅವರನ್ನೆಲ್ಲಾ ನೋಡುತ್ತಾ ಸ್ತುತಿಸುತ್ತಿದ್ದರೂ ಸಹ ನನ್ನನ್ನು ಅವರಲ್ಲೊಬ್ಬರೂ ನೋಡುವುದಿಲ್ಲವಲ್ಲಾ ಎಂಬ ಪರಿತಾಪದಿಂದ ತನ್ನ ಅಸಮಾಧಾನವನ್ನು ವ್ಯಕ್ತಪಡಿಸಿದನು. ಆಗ ಬೃಹಸ್ಪತಿಯಿಂದ ಚೋದಿತರಾದ ಸರ್ವದೇವತೆಗಳೂ ಸಹ ಆ ಯಜ್ಞಕ್ಕೆ ಹೋಗಿ ತಮ್ಮ ತಮ್ಮ ಹವಿರ್ಭಾಗಗಳನ್ನು ಸ್ವೀಕರಿಸಿದರು. ಅನಂತರ ಬೃಹಸ್ಪತಿಯು ತ್ರಿತನ ಜ್ಞಾನವನ್ನೂ ವಿಜ್ಞಾನವನ್ನೂ ಶ್ಲಾಘಿಸಿದನು. ಇದು ಬೃಹದ್ದೇವತೆಯಲ್ಲಿ ಉಕ್ತವಾಗಿರುವ ಕಥೆ.

**ಅಪ್ಸ್ವಂತಃ**—ಅಂತರಿಕ್ಷನಾಮಗಳಲ್ಲಿ **ಅಪ್**ಶಬ್ದವು ಪಠಿತವಾಗಿರುವುದರಿಂದ ಇಲ್ಲಿ ಅಂತರಿಕ್ಷಮಧ್ಯದಲ್ಲಿರುವ ಚಂದ್ರನೆಂದರ್ಥ.

**ಸುಪರ್ಣಃ**—**ಶೋಭನ ಪತನಃ ।** ಮನೋಹರವಾದ ಸಂಚಾರವುಳ್ಳ ಅಥವಾ **ಸುಪರ್ಣ ಇತಿ ರಶ್ಮಿನಾಮ ।** (ನಿ. ೨-೧೫) ಕಿರಣವೆಂದು **ಸುಪರ್ಣ** ಶಬ್ದಕ್ಕೆ ಅರ್ಥ. ಸುಷುಮ್ನವೆಂಬ ಸೂರ್ಯರಶ್ಮಿಯಿಂದ ಕೂಡಿದ ಚಂದ್ರನೆಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಚಂದ್ರಮಾಃ**—ಚಂದ್ರಂ ಆಹ್ಲಾದನಂ ಸರ್ವಸ್ಯ ಜಗತಃ ನಿರ್ಮಿಮೀತೇ ಇತಿ ಚಂದ್ರಮಾಃ (ಸಕಲ ಲೋಕಕ್ಕೆ ಸಂತೋಷ ಜನಕ) ಮಾಙ್ ಮಾನೇ. ಚಂದ್ರ ಶಬ್ದ ಉಪಪದವಾಗಿರುವಾಗ **ಚಂದ್ರೇ ಮಾಙೋ ಡಿತ್** (ಉ. ಸೂ. ೪-೬೬೭) ಎಂಬುದರಿಂದ ಅಸುನ್ ಪ್ರತ್ಯಯ. ಡಿತ್ವಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ಚಂದ್ರಮಸ್ ಶಬ್ದವಾಗುತ್ತದೆ. ದಾಸೀಭಾರಾದಿಯಲ್ಲಿ ಸೇರಿರುವುದರಿಂದ ಕೃದುತ್ತರಪದಸ್ವರ ಬಾಧಕವಾಗಿ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಸು ಪರವಾದಾಗ **ಅತ್ವಸಂತಸ್ಯ**—ಸೂತ್ರದಿಂದ ಉಪಧಾದೀರ್ಘ.

**ಅಪ್ಸು**—**ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ಸಪ್ತಮೀವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸುಪರ್ಣಃ**—ಶೋಭನಾಃ ಪರ್ಣಾಃ ರಶ್ಮಯಃ ಯಸ್ಯ ಸಃ ಸುಪರ್ಣಃ **ನಞ್ಸುಭ್ಯಾಮ್**—(ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಧಾವತೇ**—ಸೃ ಗತೌ ಧಾತು. ವೇಗರೂಪ ಅರ್ಥ ತೋರುವಾಗ ಲಿಟಿನಲ್ಲಿ **ಪಾಘ್ರಾಧ್ಮಾ**—(ಪಾ. ಸೂ. ೭-೩-೭೮) ಎಂಬುದರಿಂದ ಇದಕ್ಕೆ ಧಾವಾದೇಶ. **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇಪದ ಪ್ರತ್ಯಯ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದಿವಿ**—**ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವಿಂದಂತಿ**—ವಿದ್ಲೃ ಲಾಭೇ ಧಾತು. ತುದಾದಿ ಲಟ್ ಪ್ರಥಮಪುರುಷಬಹುವಚನರೂಪ. **ಶೇಮುಚಾದೀನಾಮ್**—(ಪಾ. ಸೂ. ೭-೧-೫೯) ಎಂಬುದರಿಂದ ನುಮಾಗಮ ಬರುತ್ತದೆ. ತಿಙಂತನಿಘಾತಸ್ವರ ಬರುತ್ತದೆ

**ವಿತ್ತಮ್**—ವಿದ ಜ್ಞಾನೇ ಧಾತು. ಅದಾದಿ ಲೋಟ್ ಮಧ್ಯಮಪುರುಷ ದ್ವಿವಚನದಲ್ಲಿ **ಲೋಟೋಲಙ್ವತ್**—ಎಂಬುದರಿಂದ ಲಙ್ವದ್ಭಾವವಿರುವುದರಿಂದ **ತಸ್ಥಸ್ಥ**—(ಪಾ. ಸೂ. ೩-೪-೧೦೧) ಎಂಬುದರಿಂದ ತಮಾದೇಶ. **ಅದಿಪ್ರಭೃತಿಭ್ಯಃ ಶಪಃ**—ಎಂಬುದರಿಂದ ಶಪಿಗೆ ಲುಕ್. **ಖರಿ ಚ**—ಎಂಬುದರಿಂದ ಧಾತುವಿನ ದಕಾರಕ್ಕೆ ಚರ್ತ್ವ. ಪಾದಾದಿಯಲ್ಲಿರುವುದರಿಂದ **ತಿಙ್ಙತಿಙಃ**—(ಪಾ. ಸೂ. ೮-೧-೨೮) ಎಂಬುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಸ್ಯ**—ಇದಂ ಶಬ್ದ. ಷಷ್ಠೀ ಏಕವಚನದಿಂದ ತ್ಯದಾದ್ಯತ್ವ ಬಂದಾಗ **ಟಾಙಸಿಙಸಾಮಿನಾತ್ಸ್ಯಾಃ**—ಎಂಬುದರಿಂದ ವಿಭಕ್ತಿಗೆ ಸ್ಯಾದೇಶ. **ಹಲಿ ಲೋಪಃ**—ಎಂಬುದರಿಂದ ಇದಮಿನ ಇದಿಗೆ ಲೋಪ. **ಕ್ರಿಯಾಗ್ರಹಣಂ ಕರ್ತವ್ಯಮ್**—ಎಂಬುದರಿಂದ ಕರ್ಮಕ್ಕೆ ಸಂಪ್ರದಾನಸಂಜ್ಞೆ ಬರುವುದರಿಂದ ಚತುರ್ಥ್ಯರ್ಥದಲ್ಲಿ ಷಷ್ಠೀ. **ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೧ ॥

ಸಂಹಿತಾಪಾಠಃ

ಅರ್ಥಮಿದ್ವಾ ಉ ಅರ್ಥಿನ ಆ ಜಾಯಾ ಯುವತೇ ಪತಿಂ।
ತುಂಜಾತೇ ವೃಷ್ಣ್ಯಂ ಪಯಃ ಪರಿದಾಯ ರಸಂ ದುಹೇ ವಿತ್ತಂ
ಮೇ ಅಸ್ಯ ರೋದಸೀ ॥ ೨॥

ಪದಪಾಠಃ

ಅರ್ಥಂ । ಇತ್ । ವೈ । ಊಂ ಇತಿ । ಅರ್ಥಿನಃ । ಆ । ಜಾಯಾ । ಯುವತೇ ।
ಪತಿಂ ।
ತುಂಜಾತೇ ಇತಿ । ವೃಷ್ಣ್ಯಂ । ಪಯಃ । ಪರಿಽದಾಯ । ರಸಂ । ದುಹೇ । ವಿತ್ತಂ ।
ಮೇ । ಅಸ್ಯ । ರೋದಸೀ ಇತಿ ॥ ೨ ॥

ಸಾಯಣಭಾಷ್ಯಂ

ಅರ್ಥಿನೋ ಧನಮಪೇಕ್ಷಮಾಣಾಃ ಪುರುಷಾ ಅರ್ಥಮಿದ್ವೈ ಅಪೇಕ್ಷಿತಂ ಧನಂ ಪ್ರಾಪ್ನುವಂತ್ಯೇವ। ನಾಹಂ ಪ್ರಾಪ್ನೋಮಿ । ಉ ಇತ್ಯೇತತ್ಪಾದಪೂರಣಂ । ಅಪಿ ಚ ಜಾಯಾನ್ಯದೀಯಾ ಭಾರ್ಯಾ ಪತಿಂ ಸ್ವಪತಿಮಾ ಯುವತೇ । ಆಭಿಮುಖ್ಯೇನ ಪ್ರಾಪ್ನೋತಿ । ಮದೀಯಾ ತು ಮದ್ವಿರಹಾದ್ದುಃಖಾಸೀತ್ । ಅಪಿ ಚ ಸಂಯುಕ್ತೌ ತೌ ಜಾಯಾಪತೀ ವೃಷ್ಣ್ಯಂ ವೀರ್ಯರೂಪಂ ಪಯ ಉದಕಂ ತುಂಜಾತೇ । ಪ್ರಜನನಾ- ಯಾನ್ಯೋನ್ಯಸಂಘಟ್ಟನೇನ ಪ್ರೇರಯತಃ । ತದನಂತರಂ ರಸಂ ಪುರುಷಸ್ಯ ಸಾರಭೂತಂ ವೀರ್ಯಂ ಪರಿದಾಯ ಗರ್ಭಾಶಯೇನಾದಾಯ ಗರ್ಭರೂಪೇಣ ಧೃತ್ವಾ ದುಹೇ । ದುಗ್ಧೇ । ಪುತ್ರರೂಪೇಣ ಜನ- ಯತಿ । ಮಮ ತು ಪುತ್ರೋಽಪಿ ನೋತ್ಪದ್ಯತೇ । ಅತ ಇದಂ ಮದೀಯಂ ದುಃಖಂ ಹೇ ದ್ಯಾವಾಪೃಥಿವ್ಯೌ ಜಾನೀತಂ ॥ ಉ । ಉಞಃ ಪಾ. ೧-೧-೧೭ । ಇತಿ ಶಾಕಲ್ಯಸ್ಯ ಮತೇನ ಪ್ರಗೃಹ್ಯತ್ವಾತ್ ಪ್ಲುತಪ್ರಗೃಹ್ಯಾ ಅಚೀತಿ ಪ್ರಕೃತಿಭಾವಃ । ಯುವತೇ । ಯು ಮಿಶ್ರಣೇ । ವ್ಯತ್ಯಯೇನಾತ್ಮನೇಪದಂ । ಶಬ್ಲುಕಿ ಪ್ರಾಪ್ತೇ ವ್ಯತ್ಯಯೇನ ಶಃ । ತುಂಜಾತೇ । ತುಜಿ ಪಿಜಿ ಹಿಂಸಾಬಲದಾನನಿಕೇತನೇಷು । ಇದಿತ್ತ್ವಾನ್ನುಮ್ । ವ್ಯತ್ಯಯೇನ ಶ್ನಮ್ । ಶ್ನಾನ್ನಲೋಪಃ । ದುಹೇ । ದುಹ ಪ್ರಪೂರಣೇ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ ॥

॥ ಪ್ರತಿಪದಾರ್ಥ ॥

**ಅರ್ಥಿನಃ**–(ನನ್ನನ್ನುಳಿದು) ಧನಾಪೇಕ್ಷಿಗಳಾದ (ಇತರ) ಎಲ್ಲಾ ಪುರುಷರೂ । **ಅರ್ಥಂ**—ಅಪೇಕ್ಷಿಸಿದ ಧನವನ್ನು । **ಇತ್ ವೈ**—ಹೊಂದಿಯೇ ಹೊಂದುತ್ತಾರೆ । **ಜಾಯಾ**—(ಇತರ ಎಲ್ಲಾ ಪುರುಷರ) ಪತ್ನಿಯೂ । **ಪತಿಂ**—(ತನ್ನ ತನ್ನ) ಪತಿಯನ್ನು । **ಆ ಯುವತೇ**—ಆದರದಿಂದ ಸೇರಿಕೊಳ್ಳುತ್ತಾಳೆ । **ವೃಷ್ಣ್ಯಂ**—ವೀರ್ಯ ರೂಪವಾದ । **ಪಯಃ**—ಉದಕವನ್ನು । **ತುಂಜಾತೇ**—ಸಿಂಚಿಸುತ್ತಾಳೆ । **ರಸಂ**—(ತನ್ನ ಪುರುಷನ) ವೀರ್ಯವನ್ನು । **ಪರಿದಾಯ**—(ಗರ್ಭರೂಪದಲ್ಲಿ) ತೆಗೆದುಕೊಂಡು । **ದುಹೇ**—(ಪುತ್ರನನ್ನು) ಪಡೆಯುತ್ತಾಳೆ (ನನಗೂ ನನ್ನ ಪತ್ನಿಗೂ ಈ ಯಾವ ಭಾಗ್ಯವೂ ಇಲ್ಲ. ಆದ್ದರಿಂದ) । **ರೋದಸೀ**—ಎಲೈ ದ್ಯಾವಾಪೃಥಿವಿಗಳೇ । **ಮಮ**—ನನ್ನ । **ಅಸ್ಯ**—ಈ ಸ್ತೋತ್ರವನ್ನು ಅಥವಾ (ನನ್ನ ಕೂಪಪತನದಿಂದ ಪ್ರಾಪ್ತವಾದ) ದುಃಖವನ್ನು । **ವಿತ್ತಂ**—ಗಮನಿಸಿ ತಿಳಿಯಿರಿ.

ಭಾವಾರ್ಥ

ನನ್ನನ್ನುಳಿದು ಧನಾಪೇಕ್ಷಿಗಳಾದ ಇತರ ಎಲ್ಲಾ ಪುರುಷರೂ ಅವರು ಅಪೇಕ್ಷಿಸಿದ ಧನವನ್ನು ಹೊಂದಿಯೇ ಹೊಂದುತ್ತಾರೆ. ನನ್ನ ಪತ್ನಿಯೊಬ್ಬಳನ್ನು ಬಿಟ್ಟು ಇತರ ಎಲ್ಲರ ಪತ್ನಿಯರೂ ಅವರವರ ಪತಿಗಳನ್ನು ಆದರದಿಂದ ಸೇರಿಕೊಳ್ಳುತ್ತಾರೆ. ವೀರ್ಯರೂಪವಾದ ಉದಕವನ್ನು ಸಿಂಚಿಸಿ ತಮ್ಮ ಪುರುಷರ ವೀರ್ಯವನ್ನು ಗರ್ಭರೂಪದಲ್ಲಿ ತೆಗೆದುಕೊಂಡು ಪುತ್ರನನ್ನು ಪಡೆಯುತ್ತಾರೆ. ನನ್ನ ಪತ್ನಿಗೆ ಈ ಭಾಗ್ಯವಿಲ್ಲ. ಆದ್ದರಿಂದ ಎಲೈ ದ್ಯಾವಾಪೃಥಿವಿಗಳೇ, ಕೂಪಪತನದಿಂದ ಪ್ರಾಪ್ತವಾದ ನನ್ನ ಈ ದುಃಖವನ್ನು ಚೆನ್ನಾಗಿ ಅರಿತು ನನ್ನ ಸ್ತೋತ್ರವನ್ನು ಕೇಳಿ ನನ್ನನ್ನು ಬಾವಿಯಿಂದ ಮೇಲಕ್ಕೆತ್ತಿ ನನ್ನ ದುಃಖವನ್ನು ನಿವಾರಿಸಿರಿ.

## English Translation

Those who seek for wealth, obtain it : a wife enjoys (the presence of her husband, and from their union progeny is engendered. Heaven and earth, be conscious of this (my affliction).

॥ ವಿಶೇಷವಿಷಯಗಳು ॥

ಭಾಷ್ಯಕಾರರು ಈ ಸೂಕ್ತದ ಪೀಠಿಕೆಯಲ್ಲಿ ಪರಿದೇವಯತೇ ಎಂದು ಹೇಳಿರುವಂತೆ ಕುತ್ಸ ಋಷಿಯು (ಅಥವಾ ತ್ರಿತನು) ಬಾವಿಯಲ್ಲಿ ಬಿದ್ದು ಮೇಲಕ್ಕೆ ಬರಲಾಗದೆ ದುಃಖದಿಂದ ಪರಿತಪಿಸುತ್ತಾ ಇತರರು ಸುಖವಾಗಿರುವಾಗ ತಾನು ಈರೀತಿ ದುಃಖವನ್ನನುಭವಿಸುತ್ತಿರುವೆನೆಂದು ಪ್ರಲಾಪಮಾಡುತ್ತಿರುವುದನ್ನು ಈ ಋಕ್ಕಿನಲ್ಲಿ ವರ್ಣಿಸಿದೆ.

ಅರ್ಥಮಿದ್ವಾ ಉ ಅರ್ಥಿನಃ—ಧನವನ್ನಪೇಕ್ಷಿಸುವವರು ಅದಕ್ಕಾಗಿ ಪ್ರಯತ್ನಪಟ್ಟು ಧನವನ್ನು ಸಂಪಾದಿಸಿ ಸುಖಿಸುತ್ತಿರುವರು. ಆದರೆ ನಾನು ಈಗ ಈ ಬಾವಿಯಲ್ಲಿ ಬಿದ್ದು ಹೊರಕ್ಕೆ ಬರುವುದಕ್ಕೆ ಸಾಧ್ಯವಿಲ್ಲದ್ದರಿಂದ ಧನವನ್ನು ಸಂಪಾದಿಸುವುದಕ್ಕಾಗಿ ಯಾವ ಪ್ರಯತ್ನವನ್ನು ಮಾಡಲು ಸಾಧ್ಯವಿಲ್ಲ. ನನ್ನ ಭಾಗಕ್ಕೆ ಧನದಿಂದ ಲಭಿಸುವ ಸುಖವಿಲ್ಲವಲ್ಲಾ ಎಂದು ಪರಿತಾಪಪಡುವನು.

**ಅ ಜಾಯೊ ಯುವತೇ ಪತಿಂ**—ಯುವತಿಯಾದ ಸ್ತ್ರೀಯು ಚಂದ್ರನ ಆಹ್ಲಾದಕರವಾದ ಬೆಳದಿಂಗಳಲ್ಲಿ ತನ್ನ ಪತಿಯನ್ನು ಸೇರಿ ಸುಖಿಸುವಳು. ಆದರೆ ನಾನು ಭಾವಿಯಲ್ಲಿ ಬಿದ್ದಿರುವುದರಿಂದ ನನಗೆ ಆ ಸುಖವಿಲ್ಲ. ನನ್ನ ಪತ್ನಿಯು ವಿರಹದುಃಖದಿಂದ ವ್ಯಥೆಪಡುತ್ತಿರುವಳು.

**ತುಂಜಾತೇ ವೃಷ್ಣ್ಯಂ ಪಯಃ ಪರಿದಾಯ ರಸಂ ದುಹೇ**—ದಂಪತಿಗಳು ಇಂತಹ ರಾತ್ರಿಯಲ್ಲಿ ಸೇರುವುದರಿಂದ ಸ್ತ್ರೀಯು ಪುರುಷನ ಸಾರಭೂತವಾದ ವೀರ್ಯವನ್ನು ಪರಿಗ್ರಹಿಸಿ ಪುತ್ರಸಂತತಿಯನ್ನು ಉಂಟುಮಾಡುವಳು ಆದರೆ ನನಗೆ ಪುತ್ರಸಂತಾನವು ಲಭಿಸಲು ಸಾಧ್ಯವಿಲ್ಲ. ಆದುದರಿಂದ ಎಲೈ ದ್ಯಾವಾಪೃಥಿವಿಗಳೇ, ನೀವು ನನ್ನ ಸ್ಥಿತಿಯನ್ನು ಗಮನಿಸಿ ನನ್ನ ದುಃಖವನ್ನು ತಿಳಿದು ನನ್ನನ್ನು ಕಾಪಾಡಬೇಕೆಂದು ಪ್ರಾರ್ಥಿಸಿರುವನು.

ವ್ಯಾಕರಣಪ್ರಕ್ರಿಯಾ

**ಉ ಅರ್ಥಿನಃ**—**ಉಞಃ**—(ಪಾ. ಸೂ. ೧-೧-೧೭) ಎಂಬುದರಿಂದ ಶಾಕಲ್ಯರ ಮತದಲ್ಲಿ ಇದಕ್ಕೆ ಪ್ರಗೃಹ್ಯಸಂಜ್ಞಾ ಬರುವುದರಿಂದ ಇದಕ್ಕೆ ಅಚ್ ಪರವಾದಾಗ **ಪ್ಲುತಪ್ರಗೃಹ್ಯಾ ಅಚಿ ನಿತ್ಯಮ್**—(ಪಾ. ಸೂ ೬-೧-೧೨೫) ಎಂಬುದರಿಂದ ಪ್ರಕೃತಿಭಾವ ಬರುತ್ತದೆ.

**ಅರ್ಥಮ್**—ಋ ಗತೌ ಧಾತು. ಇದಕ್ಕೆ ಔಣಾದಿಕ ಥನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ಯುವತೇ**—ಯು ಮಿಶ್ರಣಾಮಿಶ್ರಣಯೋಃ ಧಾತು. **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಅದಾದಿಯಾದುದರಿಂದ ಶಬ್ಲುಕ್ ಪ್ರಾಪ್ತವಾದರೆ ವ್ಯತ್ಯಯದಿಂದ ಅದಕ್ಕೆ ಶ ವಿಕರಣ ಆದೇಶ ಬರುತ್ತದೆ. **ಸಾರ್ವಧಾತುಕಮಪಿತ್**—(ಪಾ. ಸೂ. ೧-೨-೪) ಸೂತ್ರದಿಂದ ಇದು ಙಿತ್ತಾದುದರಿಂದ ಇದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ ಬರುವುದಿಲ್ಲ. **ಅಚಿಶ್ನುಧಾತುಭ್ರುವಾ**—(ಪಾ. ಸೂ. ೬-೪-೭೭) ಎಂಬುದರಿಂದ ಉವಙಾದೇಶ. ಯುವತೇ ಎಂದು ರೂಪವಾಗುತ್ತದೆ. **ತಿಙ್ಙತಿಙಃ**—ಸೂತ್ರದಿಂದ ನಿಘಾತಸ್ವರ ಬರುತ್ತದೆ.

**ತುಞ್ಜಾತೇ**—**ತುಜಿ** ಪಿಜಿ ಹಿಂಸಾಬಲದಾನನಿಕೇತನೇಷು. ಧಾತು. ಧಾತುವು ಇದಿತ್ತಾದುದರಿಂದ **ಇದಿತೋನುಮ್ ಧಾತೋಃ**—(ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. **ಮಿದಚೋಂತ್ಯಾತ್ಪರಃ**—ಎಂಬುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. ಅದಕ್ಕೆ ಅನುಸ್ವಾರ ಪರಸವರ್ಣ. **ವ್ಯತ್ಯಯೋ ಬಹುಲಮ್** —ಎಂಬುದರಿಂದ ಶಪಿಗೆ ಶ್ನಮ್ ವಿಕರಣ. ಲಟ್ ದ್ವಿವಚನದಲ್ಲಿ ಆತಾಮ್ ಪ್ರತ್ಯಯ. **ಟಿತ ಆತ್ಮನೇಪದಾನಾಂ**—(ಪಾ. ಸೂ. ೩-೪-೭೯) ಎಂಬುದರಿಂದ ಟಿಗೆ ಏತ್ವ. **ಶ್ನಾನ್ನಲೋಪಃ**—(ಪಾ. ಸೂ. ೬-೪-೨೩) ಎಂಬುದರಿಂದ ನಕಾರಕ್ಕೆ ಲೋಪ. ತುಞ್ಜಾತೇ ಎಂದು ರೂಪವಾಗುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಆಕಾರ ಉದಾತ್ತವಾಗುತ್ತದೆ.

**ವೃಷ್ಣ್ಯಮ್**—ವೃಷ್ಣಃ ಭಾವಃ ವೃಷ್ಣ್ಯಮ್. ಭಾವಾರ್ಥದಲ್ಲಿ ಷ್ಯಞ್ ಪ್ರತ್ಯಯ. ಯಾದಿಪ್ರತ್ಯಯ ಪರವಾದುದರಿಂದ ಭಸಂಜ್ಞಾ ನಿಮಿತ್ತವಾಗಿ **ಅಲ್ಲೋಪೋಽನಃ**—(ಪಾ. ಸೂ. ೬-೪-೧೩೪) ಎಂಬುದರಿಂದ ಅನಿನ ಅಕಾರಕ್ಕೆ ಲೋಪ. ಞಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪರಿದಾಯ**—ಡುದಾಞ್ ದಾನೇ ಧಾತು. **ಸಮಾಸೇ ನಞ್‌ಪೂರ್ವೇ ಕ್ತ್ವೋಲ್ಯಪ್**—(ಪಾ. ಸೂ. ೭-೧-೩೭) ಎಂಬುದರಿಂದ ಕ್ತ್ವಾ ಪ್ರತ್ಯಯಕ್ಕೆ ಲ್ಯಬಾದೇಶ.

**ದುಹೇ**—ದುಹ ಪ್ರಪೂರಣೇ. ಧಾತು. ಅದಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಟಿತ ಆತ್ಮನೇ ಪದಾನಾಂ**—ಎಂಬುದರಿಂದ ಟಿಗೆ ಏತ್ವ. **ಲೋಪಸ್ತ ಆತ್ಮನೇ ಪದೇಷು**—(ಪಾ. ಸೂ. ೭-೧-೪೧) ಎಂಬುದರಿಂದ ಪ್ರತ್ಯಯದ ತಕಾರಕ್ಕೆ ಲೋಪ ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ ॥ ೨ ॥

ಸಂಹಿತಾಪಾಠಃ

ಮೋ ಷು ದೇವಾ ಅದಃ ಸ್ವ೧ರವ ಪಾದಿ ದಿವಸ್ಪರಿ ।
ಮಾ ಸೋಮ್ಯಸ್ಯ ಶಂಭುವಃ ಶೂನೇ ಭೂಮ ಕದಾ ಚನ ವಿ-
ತ್ತಂ ಮೇ ಅಸ್ಯ ರೋದಸೀ ॥ ೩ ॥

। ಪದಪಾಠಃ ।

ಮೋ ಇತಿ । ಸು । ದೇವಾಃ । ಅದಃ । ಸ್ವಃ । ಅವ । ಪಾದಿ । ದಿವಃ । ಪರಿ ।
ಮಾ । ಸೋಮ್ಯಸ್ಯ । ಶಂಽಭುವಃ । ಶೂನೇ । ಭೂಮ । ಕದಾ । ಚನ । ವಿತ್ತಂ ।
ಮೇ । ಅಸ್ಯ । ರೋದಸೀ ಇತಿ ।

ಸಾಯಣಭಾಷ್ಯಂ

ಹೇ ದೇವಾಃ ಸ್ವಃ ಸ್ವರ್ಗೇ ವರ್ತಮಾನಮದಸ್ತದಸ್ಮದೀಯಂ ಪಿತೃಪಿತಾಮಹಪ್ರಪಿತಾಮಹಾತ್ಮಕಂ ಸಂತಾನಂ ದಿವಸ್ಪರಿ ದಿವಶ್ದ್ಯೋಪರಿ ವರ್ತಮಾನಂ ಮೋ ಷು ನ್ಯೈವಾವ ಪಾದಿ । ಅವಪನ್ನಂ ವಿಪನ್ನಂ ಪ್ರಭ್ರಷ್ಟಂ ಮಾ ಭೂತ್ ಮಮ ಪುತ್ರಾಭಾವಾತ್ । ಪುತ್ರೇಣ ಲೋಕಾಂಜ್ಜಯತಿ ನಾಪುತ್ರಸ್ಯ ಲೋಕೋಽಸ್ತೀತಿ ಶ್ರುತೇಃ । ಅತೋ ವಯಂ ಸೋಮ್ಯಸ್ಯ ಸೋಮಪಾನಾರ್ಹಸ್ಯ ಪಿತೃಗಣಸ್ಯ ಶಂಭುವಃ ಸುಖಸ್ಯ ಭಾವಯಿತುಃ ಪುತ್ರಸ್ಯ ಶೂನೇ ಅಪಗಮನೇ ಕದಾ ಚನ ಕದಾಚಿದಪಿ ಮಾ ಭೂಮ । ಯುಷ್ಮತ್ಪ್ರಸಾದಾನ್ಮಮ ಪುತ್ರಾ ಜಾಯಂತಾಂ । ಅತೋ ಮಾಮಸ್ಮಾದ್ದುಃಖಾದುತ್ತಾರಯತೇತ್ಯರ್ಥಃ ಹೇ ದ್ಯಾವಾಪೃಥಿವ್ಯೌ ಯುವಾಂ ಚ ಮದೀಯಂ ವಿಜ್ಞಾಪನಂ ಜಾನೀತಂ ॥ ಮೋ । ಮಾ ಉ ಇತಿ ನಿಪಾತದ್ವಯಸಮುದಾಯೋ ನ್ಯೈವೇತ್ಯಸ್ಯಾರ್ಥೇ । ಸು ಇತ್ಯೇತದವಧಾರಣೇ । ಸುಞ ಇತಿ ಷತ್ವಂ । ಪಾದಿ । ಪದ ಗತೌ । ಚಿಣ್ ತೇ ಪದಃ । ಪಾ. ೩-೧-೬೦ । ಇತಿ ಕರ್ತರಿ ಲುಙಃ ಚ್ಲೇಶ್ಚಿಣಾದೇಶಃ । ದಿವಃ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ಪಂಚಮ್ಯಾಃ ಪರಾವಧ್ಯರ್ಥ ಇತಿ ವಿಸರ್ಜನೀಯಸ್ಯ ಸತ್ವಂ । ಸೋಮ್ಯಸ್ಯ ಸೋಮಮರ್ಹತಿ ಯಃ । ಪಾ. ೪-೪-೧೩೭ । ಇತಿ ಯಪ್ರತ್ಯಯಃ । ಶಂಭುವಃ । ಭವತೇರಂತರ್ಭಾವಿತಣ್ಯರ್ಥಾತ್ಕ್ವಿಪ್ । ಶೂನೇ । ಟುಓಶ್ವಿ ಗತಿವೃದ್ಧ್ಯೋಃ । ಭಾವೇ ನಿಷ್ಠಾ । ಶ್ವಿದಿತೋ ನಿಷ್ಠಾಯಾಮಿತೀಟ್ಪ್ರತಿಷೇಧಃ । ವಚಿಸ್ವಪೀತ್ಯಾದಿನಾ ಸಂಪ್ರಸಾರಣಂ । ಓದಿತಶ್ಚ । ಪಾ. ೮-೨-೪೫ । ಇತಿ ನಿಷ್ಠಾನತ್ವಂ । ವ್ಯತ್ಯಯೇನಾದ್ಯುದಾತ್ತತ್ವಂ । ವೃಷಾದಿರ್ವಾ ದ್ರಷ್ಟವ್ಯ ॥ ೩

ಪ್ರತಿಪದಾರ್ಥ

**ದೇವಾಃ**–ಎಲೈ ದೇವತೆಗಳೇ । **ಸ್ವಃ**—ಸ್ವರ್ಗದಲ್ಲಿರುವ । **ಅದಃ**—ನನ್ನ (ಪಿತೃಪಿತಾಮಹಪ್ರಪಿತಾಮಹಾದಿಗಳನ್ನು) । **ದಿವಸ್ಪರಿ**—ಸ್ವರ್ಗದ ಮೇಲಿನ ವಾಸದಿಂದ । **ಮೋಷು ಅವ ಪಾದಿ**—ಭ್ರಷ್ಟರಾಗುವಂತೆ ಖಂಡಿತವಾಗಿಯೂ ಮಾಡಬೇಡಿರಿ. । **ಸೋಮ್ಯಸ್ಯ**—ಸೋಮರಸದ ಪಾನಕ್ಕೆ ಯೋಗ್ಯವಾದ ಪಿತೃಗಣಕ್ಕೆ । **ಶಂಭುವಃ**-ಹರ್ಷದಾಯಕನಾದ ಪುತ್ರನ । **ಶೂನೇ**—ಅಭಾವದಲ್ಲಿ । **ಕದಾ ಚನ**—ಯಾವಾಗಲೂ । **ಮಾ ಭೂಮ**—(ನಾವು) ಇರುವಂತೆ ಆಗಬೇಡ । **ರೋದಸೀ**—ಎಲೈ ದ್ಯಾವಾಪೃಥಿವಿಗಳೇ । **ಮೇ**—ನನ್ನ । **ಅಸ್ಯ**—ಈ ಸ್ತೋತ್ರವನ್ನು ಅಥವಾ (ಕೂಪಪತನದಿಂದ ಪ್ರಾಪ್ತವಾದ) ದುಃಖವನ್ನು । **ವಿತ್ತಂ**—ಗಮನಿಸಿ ತಿಳಿಯಿರಿ ।

ಭಾವಾರ್ಥ

ಎಲೈ ದೇವತೆಗಳೇ, ನಾನು ಪುತ್ರರಹಿತನಾಗಿದ್ದು ಅದೇ ಕಾರಣದಿಂದ ಸ್ವರ್ಗದಲ್ಲಿರುವ ನನ್ನ ಪಿತೃಪಿತಾಮಹಪ್ರಪಿತಾಮಹಾದಿಗಳನ್ನು ಸ್ವರ್ಗದ ಮೇಲಿನ ವಾಸದಿಂದ ಭ್ರಷ್ಟರಾಗುವಂತೆ ಖಂಡಿತವಾಗಿಯೂ ಮಾಡಬೇಡಿರಿ. ಸೋಮರಸದ ಪಾನಕ್ಕೆ ಯೋಗ್ಯವಾದ ಪಿತೃಗಣಕ್ಕೆ ಹರ್ಷದಾಯಕನಾದ ಪುತ್ರನ ಅಭಾವದಲ್ಲಿ ನಾನು ಯಾವಾಗಲೂ ಇರುವಂತೆ ಆಗಬೇಡ. ಎಲೈ ದ್ಯಾವಾಪೃಥಿವಿಗಳೇ. ನನ್ನ ಕೂಪಪತನದಿಂದ ಪ್ರಾಪ್ತವಾದ ದುಃಖವನ್ನು ಚೆನ್ನಾಗಿ ಅರಿತು, ನನ್ನ ಈ ಸ್ತೋತ್ರವನ್ನು ಕೇಳಿ ನನ್ನನ್ನು ಬಾವಿಯಿಂದ ಮೇಲಕ್ಕೆತ್ತಿರಿ.

## English Translation

Never, gods, may this (my ancestry), abiding above in heaven, be excluded (from it) ; never may we be in want (of a son) the cause of joy (to his progenitors,) entitled to libations of Soma juice· Heaven and earth be conscious of this (my affliction)

### ವಿಶೇಷವಿಷಯಗಳು

**ಅದಃ**—ಈ ಋಕ್ಕಿನ ಅರ್ಥವು ಸ್ಪಷ್ಟವಾಗಿಲ್ಲ. ಭಾಷ್ಯಕಾರರು ಕೆಲವು ಶಬ್ದಗಳನ್ನು ಅಧ್ಯಾಹಾರಮಾಡಿ ಅರ್ಥವನ್ನು ಹೊಂದುವಂತೆ ಮಾಡಿರುವರು. ಈ ಋಕ್ಕಿನಲ್ಲಿರುವ ಅದಃ ಎಂಬ ಶಬ್ದಕ್ಕೆ ತತ್-ಇ (ದ್ವಿತೀಯಾಬಹು) ವಚನ) ಎಂದು ಅರ್ಥವಾಗುವುದಾದರೂ (ನಿ. ೨-೬) ಭಾಷ್ಯಕಾರರು ಈ ಋಕ್ಕಿನಲ್ಲಿರುವ ಸ್ವಃ ಮತ್ತು ದಿವಸ್ಪರಿ ಎಂಬ ಶಬ್ದಗಳ ಪ್ರಯೋಗದಿಂದ ಸ್ವಃ—ಸ್ವರ್ಗೇ ವರ್ತಮಾನಮದಸ್ತದಸ್ಮದೀಯಂ ಪಿತೃಪಿತಾಮಹಪ್ರಪಿತಾಮಹಾತ್ಮಕಂ ಸಂತಾನಂ ದಿವಸ್ಪರಿ—ದಿವಃ ದ್ಯೋಃಪರಿ - ಅಂತರಿಕ್ಷಲೋಕದ ಮೇಲುಭಾಗದಲ್ಲಿರುವ ಸ್ವರ್ಗದಲ್ಲಿ ವಾಸಿಸುವ ನಮ್ಮ ಪಿತೃಪಿತಾಮಹಪ್ರಪಿತಾಮಹರಾದಿಯಾದ ನಮ್ಮ ವಂಶದವರನ್ನು ಎಂದು ಅರ್ಥವಿವರಣೆ ಮಾಡಿರುವರು. ಇವರಂತೆಯೇ,

**ಶಂಭುವಃ ಶೂನೇ ಕದಾಚನ ಮಾ ಭೂಮ**—ಎಂಬ ವಾಕ್ಯದಲ್ಲಿ ಶಂಭುವಃ ಶಬ್ದಕ್ಕೆ ಸುಖವನ್ನುಂಟು ಮಾಡುವ ಪುತ್ರನೆಂದು ಅರ್ಥಮಾಡಿ, ಅಂತಹ ಪುತ್ರರಹಿತನಾಗದಿರುವಂತೆ ಅನುಗ್ರಹಿಸಬೇಕೆಂದು ಪ್ರಾರ್ಥಿಸಲಾಗಿದೆ.

ಕೆಲವು ಆಧುನಿಕಪಂಡಿತರು ಸ್ವಃ ಎಂಬ ಶಬ್ದಕ್ಕೆ ಆದಿತ್ಯನೆಂದು (ಸ್ವರಾದಿತ್ಯೋ ಭವತಿ ನಿ ೨-೧೪), ಅರ್ಥಮಾಡಿ ಸ್ವರ್ಗದ ಮೇಲುಭಾಗದಲ್ಲಿ ಪ್ರಕಾಶಮಾನನಾಗಿ ಬೆಳಗುತ್ತಿರುವ ಸೂರ್ಯನು ನಮಗೆ ಸುಖವನ್ನುಂಟು ಮಾಡದಂತೆ ಆಗದಿರಲಿ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುವರು.

ಅದಃ—ಅತ್ ಶಬ್ದ. ಅತ್‌ಶಬ್ದಕ್ಕೆ ತಚ್ಛಬ್ದಾರ್ಥವಿರುವುದು. ಅದಃ ಎಂದರೆ ಅವರನ್ನು ಅಥವಾ ಪ್ರಸಿದ್ಧರಾದ ಅವರನ್ನು ಎಂದರ್ಥವು. ಈ ಶಬ್ದವು—

**ಯದದೋ ಪಿತೋ ಅಜಗನ್ವಿವಸ್ವ ಪರ್ವತಾನಾಂ ।**

(ಋ. ಸಂ. ೧-೧೮೭-೭)

ಎಂಬ ಋಕ್ಕಿನಲ್ಲಿ-ಅದಃ-ಪ್ರಸಿದ್ಧಂ ಪ್ರಸಿದ್ಧವೆಂಬ ಅರ್ಥದಲ್ಲಿಯೂ,

**ಉತಾದಃ ಪರುಷೇ ಗವಿ ಸೂರಶ್ಚಕ್ರಂ ಹಿರಣ್ಯಯಂ ।**

(ಋ. ಸಂ. ೬-೫೬-೩)

ಎಂಬ ಋಕ್ಕಿನಲ್ಲಿ ಅದಃ-ತಸ್ಯ ರಥಸ್ಯ । ಅ, ಅದರ ಎಂಬರ್ಥದಲ್ಲಿಯೂ,

**ಯತ್ಸ್ಥೋ ದೀರ್ಘಪ್ರಸದ್ಮನಿ ಯದ್ವಾದೋ ರೋಚನೇ ದಿವಃ ।**

(ಋ. ಸಂ. ೮-೧೦-೧)

**ಯದದೋ ದಿವೋ ಅರ್ಣವ ಇಷೋ ವಾ ಮದಥೋ ಗೃಹೇ ।**

(ಋ. ಸಂ. ೮-೨೬-೧೭)

ಎಂಬ ಋಕ್ಕುಗಳಲ್ಲಿ ಅದಃ ಎಂಬ ಶಬ್ದವು ಅಮುಷ್ಮಿನ್ ಎಂಬರ್ಥದಲ್ಲಿಯೂ,

**ಯೇ ಸೋಮಾಸಃ ಪರಾವತಿ ಯೇ ಅರ್ವಾವತಿ ಸುನ್ವಿರೇ ।**
**ಯೇ ವಾದಃ ಶರ್ಯಣಾವತಿ ॥**

(ಋ. ಸಂ. ೯-೬೫-೨೨)

ಎಂಬ ಋಕ್ಕಿನಲ್ಲಿ ಅಸ್ಮಿನ್ ಎಂಬ ಅರ್ಥದಲ್ಲಿಯೂ ಪ್ರಯುಕ್ತವಾಗಿದೆ. ಆದುದರಿಂದ ಆತ್‌ಶಬ್ದಕ್ಕೆ ತಚ್ಛಬ್ದಾರ್ಥವೇ ಇರುವುದೆಂಬುದು ಸ್ಪಷ್ಟವು.

**ಸ್ವಃ**—ಸ್ವಃ ಎಂಬ ಶಬ್ದಕ್ಕೆ ಅನೇಕಾರ್ಥಗಳಿರುವುವು. ಇಲ್ಲಿ ಸ್ವರ್ಗವೆಂಬ ಸಾಧಾರಣಾರ್ಥದಲ್ಲಿ ಇದರ ಪ್ರಯೋಗವಿರುವುದು. (ನಿ. ೨-೧೪)

**ಪ್ರತ್ಯಙ್ ದೇವಾನಾಂ ವಿಶಃ ಪ್ರತ್ಯಙ್ಙುದೇಷಿ ಮಾನುಷಾನ್ ।**
**ಪ್ರತ್ಯಙ್ ವಿಶ್ವಂ ಸ್ವರ್ದೃಶೇ ॥**

(ಋ. ಸಂ. ೧-೫೦-೫)

ಎಂಬ ಋಕ್ಕಿನಲ್ಲಿ ಸ್ವಃ ಎಂಬ ಶಬ್ದಕ್ಕೆ ಸ್ವಃ-ಸ್ವರ್ಲೋಕಂ ಎಂದು ಭಾಷ್ಯಕಾರರು ವ್ಯಾಖ್ಯಾನಮಾಡಿರುವುದರಿಂದ ಸ್ವರ್ಗಲೋಕವೆಂದರ್ಥವು. **ಸ್ವರಾದಿತ್ಯೋ ಭವತಿ** । ಸ್ವಃ ಎಂದರೆ ಸೂರ್ಯನ ಹೆಸರು.

**ಯಾಭೀ ರೇಭಂ ನಿವೃತಂ ಸಿತಮದ್ಭ್ಯ ಉದ್ವಂದನಮೈರಯತಂ ಸ್ವರ್ದೃಶೇ ।**

(ಋ. ಸಂ. ೧-೧೧೨-೫)

ಎಂಬ ಋಕ್ಕಿನಲ್ಲಿ ಸ್ವಃ ಎಂಬ ಶಬ್ದವು **ಸ್ವರಾದಿತ್ಯಂ** ಆದಿತ್ಯ ಅಥವಾ ಸೂರ್ಯನೆಂಬ ಅರ್ಥದಲ್ಲಿಯೂ,

**ತ್ಮನಾ ವಹಂತೋ ದುರೋ ವ್ಯೃಣ್ವನ್ನವಂತ ವಿಶ್ವೇ ಸ್ವ೧ ರ್ದೃಶೀಕೇ ।**

(ಋ. ಸಂ. ೧-೬೯-೫)

**ಸಿಂಧುಂ ನ ಕ್ಷೋದಃ ಪ್ರ ನೀಚೈರೈನೋನ್ನವಂತ ಗಾವಃ ಸ್ವ೧ ರ್ದೃಶೀಕೇ ।**

ಎಂಬ ಋಕ್ಕುಗಳಲ್ಲಿ ಸ್ವಃ-ನಭಸಿ, ಅಂತರಿಕ್ಷವೆಂಬರ್ಥದಲ್ಲಿಯೂ,

(ಋ. ಸಂ. ೧-೭೨-೫)

**ನಿ ಯಂ ದಧುರ್ಮನುಷ್ಯಾಸು ವಿಕ್ಷು ಸ್ವ೧ ರ್ಣ ಚಿತ್ರಂ ವಪುಷೇ ವಿಭಾವಂ ।**

(ಋ. ಸಂ. ೧-೧೪೮-೧)

ಎಂಬ ಋಕ್ಕಿನಲ್ಲಿ ಯಾಸ್ಕರು **ಸ್ವರಾದಿತ್ಯೋ ಭವತಿ ಸು ಅರಣಃ ಸು ಈರಣಃ ಸ್ವೃತೋ ರಸಾನ್ಸ್ವೃತೋ ಭಾಸಂ ಜ್ಯೋತಿಷಾಂ ಸ್ವೃತೋ ಭಾಸೇತಿ ವಾ** -ಎಂದು ಹೇಳಿರುವಂತೆ ಭಾಸಾ-ಎಂದರೆ ಪ್ರಕಾಶವೆಂದೂ ಅರ್ಥವು. ಸ್ವಃ ಎಂಬ ಶಬ್ದವು ಅಣಃ ಕ್ಷೋದಃ ಮೊದಲಾದ ನೂರೊಂದು ಉದಕನಾಮಗಳ ಮಧ್ಯದಲ್ಲಿ ಪಠಿತವಾಗಿರುವುದರಿಂದ ಸ್ವಃ ಎಂದರೆ ಉದಕವೆಂದೂ ಅರ್ಥವು. (ನಿ ೨-೨೪)

ವ್ಯಾಕರಣಪ್ರಕ್ರಿಯಾ

**ನೋ, ಸು**—ನಾ ಮತ್ತು ಉ ಎಂಬ ಇವೆರಡು ನಿಪಾತಗಳು ನೈವ (ಇಲ್ಲವೇ ಇಲ್ಲ) ಎಂಬರ್ಥದಲ್ಲಿ ಪ್ರಯುಕ್ತವಾಗಿವೆ. ಸು ಎಂಬುದು ಅವಧಾರಣಾರ್ಥದಲ್ಲಿ (ನಿಶ್ಚಯ) ಪ್ರಯುಕ್ತವಾಗಿದೆ. **ಸುಞಃ**—(ಪಾ. ಸೂ. ೮-೩-೧೦೭) ಎಂಬುದರಿಂದ ಇದಕ್ಕೆ ಷತ್ವ ಬರುತ್ತದೆ.

**ಸ್ವಃ—ನ್ಯಙ್ ಸ್ವರೌ ಸರಿತೌ**—(ಫಿ. ಸೂ. ೭೪) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ಪಾದಿ**—ಪದ ಗತೌ ಧಾತು. ಇದಕ್ಕೆ ಕರ್ತರಿಲುಙ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಚ್ಲೇಃ ಸಿಚ್**—ಸೂತ್ರದಿಂದ ಚ್ಲಿಗೆ ಸಿಚಾದೇಶವು ಪ್ರಾಪ್ತವಾದರೆ **ಚಿಣ್ ತೇಪದಃ**—(ಪಾ. ಸೂ. ೩-೧-೬೦) ಎಂಬುದರಿಂದ ಅದಕ್ಕೆ ಚಿಣಾದೇಶ. ಣಿತ್ತಾದುದರಿಂದ **ಅತ ಉಪಧಾಯಾಃ**—(ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ. **ಚಿಣೋಲುಕ್**—(ಪಾ. ಸೂ. ೬-೪-೧೦೪) ಎಂಬುದರಿಂದ ಪ್ರತ್ಯಯ ತಶಬ್ದಕ್ಕೆ ಲೋಪ. **ನ ಮಾಙ್ ಯೋಗೇ**—(ಪಾ. ಸೂ. ೬-೪-೭೪) ಎಂಬುದರಿಂದ ಅಡಾಗಮ ಬರುವುದಿಲ್ಲ.

**ದಿವಃ—ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ದಿವಃ+ಪರಿ ಎಂದಿರುವಾಗ **ಪಂಚಮ್ಯಾಃ ಪರಾವಧ್ಯರ್ಥೇ**—(ಪಾ. ಸೂ. ೮-೩-೫೧) ಎಂಬುದರಿಂದ ವಿಸರ್ಗಕ್ಕೆ ಸತ್ವ ಬರುತ್ತದೆ.

**ಸೋಮ್ಯಸ್ಯ—ಸೋಮಮರ್ಹತಿ ಯಃ**—(ಪಾ. ಸೂ. ೪-೪-೧೩೭) ಎಂಬುದರಿಂದ ಯ ಪ್ರತ್ಯಯ ಯಾದಿ ಪ್ರತ್ಯಯವಾದುದರಿಂದ ಭಸಂಜ್ಞಾ ಇರುವುದರಿಂದ **ಯಸ್ಯೇತಿ ಚ**—ಎಂಬುದರಿಂದ ಅಕಾರಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಷಷ್ಠೀ ಏಕವಚನಾಂತರೂಪ.

**ಶಂಭುವಃ**—ಭೂ ಸತ್ತಾಯಾಂ ಧಾತು. . ಪ್ರೇರಣಾರ್ಥೋರುವುದರಿಂದ ಅಂತರ್ಭಾವಿತ ಣ್ಯರ್ಥಕವಾದ ಈ ಧಾತುವಿಗೆ **ಕ್ವಿಪ್ ಚ** (ಪಾ. ಸೂ. ೩-೨ ೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಷಷ್ಠೀ ಏಕವಚನದಲ್ಲಿ **ನಭೂಸುಧಿಯೋಃ**—ಸೂತ್ರದಿಂದ ಯಣ್ ನಿಷೇಧ ಬರುವುದರಿಂದ **ಅಚಿಶ್ನುಧಾತುಭ್ರುವಾಂ**—(ಪಾ. ಸೂ. ೬-೪-೭೭) ಎಂಬುದರಿಂದ ಉವಙಾದೇಶ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಶೂನೇ**—ಟು ಓಶ್ವಿ ಗತಿವೃದ್ಧ್ಯೋಃ ಧಾತು. ಇದಕ್ಕೆ ಭಾವಾರ್ಥದಲ್ಲಿ ಕ್ತಪ್ರತ್ಯಯ. **ಶ್ವೀದಿತೋ ನಿಷ್ಠಾಯಾಮ್**—(ಪಾ. ಸೂ ೭-೨-೧೪) ಎಂಬುದರಿಂದ ಪ್ರತ್ಯಯಕ್ಕೆ ಇಣ್ನಿಷೇಧ ಬರುತ್ತದೆ. ಪ್ರತ್ಯಯ ಕಿತ್ತಾದುದರಿಂದ ಇದು ಪರವಾದಾಗ **ವಚಿಸ್ವಪಿಯಜಾದೀನಾಂ ಕಿತಿ**—(ಪಾ. ಸೂ ೬-೧-೧೫) ಎಂಬುದರಿಂದ ಧಾತು

ವಿಗೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ**—ಸೂತ್ರದಿಂದ ಇಕಾರಕ್ಕೆ ಪೂರ್ವರೂಪ. ಧಾತುವು ಓದಿತ್ತಾದುದರಿಂದ **ಓದಿತಶ್ಚ**—(ಪಾ. ಸೂ. ೮-೨-೪೫) ಎಂಬುದರಿಂದ ನಿಷ್ಠಾತಕಾರಕ್ಕೆ ನತ್ವ. **ಹಲಃ**—(ಪಾ. ಸೂ. ೬-೪-೨) ಎಂಬುದರಿಂದ ದೀರ್ಘ. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ. ಅಥವಾ ವೃಷಾದಿಯು ಆಕೃತಿಗಣವಾದುದರಿಂದ **ವೃಷಾದೀನಾಂ ಚ**—(ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಭೂಮ**—ಭೂ ಸತ್ತಾಯಾಂ ಧಾತು. ಲುಙ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. ನಿತ್ಯಂ ಙಿತಃ (ಪಾ. ಸೂ. ೩-೪-೯೯) ಎಂಬುದರಿಂದ ಸಕಾರಲೋಪ. **ಗಾತಿಸ್ಥಾಘು**—(ಪಾ. ಸೂ. ೨-೪-೭೭) ಎಂಬುದರಿಂದ ಸಿಚಿಗೆ ಲೋಪ. **ನಮಾಙ್ಯೋಗೇ**—ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ. ॥ ೩ ॥

———:o:———

ಸಂಹಿತಾಪಾಠಃ

ಯಜ್ಞಂ ಪೃಚ್ಛಾಮ್ಯವಮಂ ಸ ತದ್ದೂತೋ ವಿ ವೋಚತಿ ।
ಕ್ವ ಋತಂ ಪೂರ್ವ್ಯಂ ಗತಂ ಕಸ್ತದ್ಬಿಭರ್ತಿ ನೂತನೋ ವಿತ್ತಂ
ಮೇ ಅಸ್ಯ ರೋದಸೀ ॥ ೪ ॥

। ಪದಪಾಠಃ ।

ಯಜ್ಞಂ । ಪೃಚ್ಛಾಮಿ । ಅವಮಂ । ಸಃ । ತತ್ । ದೂತಃ । ವಿ । ವೋಚತಿ ।
ಕ್ವ । ಋತಂ । ಪೂರ್ವ್ಯಂ । ಗತಂ । ಕಃ । ತತ್ । ಬಿಭರ್ತಿ । ನೂತನಃ । ವಿತ್ತಂ ।
ಮೇ । ಅಸ್ಯ । ರೋದಸೀ ಇತಿ ॥ ೪ ॥

ಸಾಯಣಭಾಷ್ಯಂ

ಯಜ್ಞಂ ಯಜನೀಯಮವಮಂ ಸರ್ವೇಷಾಂ ದೇವಾನಾಮಾದಿಭೂತಂ । ಅಗ್ನಿರ್ಮುಖಂ ಪ್ರಥಮೋ ದೇವತಾನಾಂ । ಐ. ಬ್ರಾ. ೧-೪ । ಇತಿ ಶ್ರುತೇಃ । ಅಗ್ನಿರ್ವೈ ದೇವಾನಾಮವಮ ಇತಿ ಬ್ರಾಹ್ಮಣಾಚ್ಚ । ತಮಗ್ನಿಂ ಪೃಚ್ಛಾಮಿ । ಯನ್ಮಯಾ ಪೃಷ್ಟಂ ತದ್ದೇವಾನಾಂ ದೂತಃ ಸೋಽಗ್ನಿರ್ವಿವೋಚತಿ । ವಿವಿಚ್ಯ ಕಥಯತು। ಕಿಂ ಪುನಸ್ತತ್ಪೃಚ್ಛ್ಯತ ಇತಿ ಚೇತ್ ಉಚ್ಯತೇ । ಹೇ ಅಗ್ನೇ ತ್ವದೀಯಂ ಪೂರ್ವ್ಯಂ ಪೂರ್ವಕಾಲೀನಮೃತಂ ಭದ್ರಂ ಸ್ತೋತೃಭ್ಯಃ ಕೃತಂ ಶ್ರೇಯಃ ಕ್ವ ಗತಂ । ಕುತ್ರೇದಾನೀಂ ವರ್ತತೇ । ನೂತನೋ ನವತರಸ್ತ್ವತ್ತೋಽನ್ಯಃ ಕಃ ಪುರುಷಸ್ತದ್ಭದ್ರಂ ಬಿಭರ್ತಿ । ಧಾರಯತಿ । ಯದಿ ತ್ವಯ್ಯವರ್ತಿಷ್ಯತ ಮಮೇದೃಶೀ ದಶಾಪಿ ನಾಭವಿಷ್ಯತ್ । ಅತಸ್ತತ್ ಕ್ವ ಗತಮಿತಿ ಕಥಯ ॥ ವೋಚತಿ । ವಚ ಪರಿಭಾಷಣೇ । ಲೇಟ್ಯಡಾಗಮಃ । ವಚ ಉಮಿತಿ ವ್ಯತ್ಯಯೇನ ಧಾತೋರುಮಾಗಮಃ । ಕ್ವ । ಕಿಮೋಽತ್ । ಪಾ. ೫-೩-೧೨ । ಇತಿ ಸಪ್ತಮ್ಯರ್ಥೇಽತ್ । ಕ್ವಾತಿ । ಪಾ ೭-೨-೧೦೫ । ಇತಿ ಕಿಮಃ ಕ್ವಾದೇಶಃ । ತಿತ್ಸ್ವರಿತ ಇತಿ ಸ್ವರಿತತ್ವಂ । ಪರೇಣ ಸಹ ಋತ್ಯಕ ಇತಿ ಪ್ರಕೃತಿಭಾವಃ ॥

ಪ್ರತಿಪದಾರ್ಥ

**ಯಜ್ಞಂ**—ಯಜ್ಞಕ್ಕೆ ಅರ್ಹನೂ । **ಅವಮಂ**—(ಸಕಲ ದೇವತೆಗಳಿಗೂ) ಮೊದಲನೆಯವನೂ ಆದ ಅಗ್ನಿಯನ್ನು । **ಪೃಚ್ಛಾಮಿ**—ಕೇಳಿಕೊಳ್ಳುತ್ತೇನೆ । **ತತ್**—ನಾನು ಕೇಳಿಕೊಂಡ ಪ್ರಶ್ನೆಯನ್ನು । **ದೂತಃ**—ದೇವ ದೂತನಾದ । **ಸಃ**—ಆ ಅಗ್ನಿಯು । **ವಿ ವೋಚತಿ**—(ಎಲ್ಲಾ ದೇವತೆಗಳಿಗೂ) ಬಿಡಿಸಿಹೇಳಲಿ. (ನನ್ನ ಪ್ರಶ್ನೆಯು ಏನೆಂದರೆ) । (**ಅಗ್ನೇ**—ಎಲೈ ಅಗ್ನಿಯೇ) । **ಪೂರ್ವ್ಯಂ**—(ನಿನ್ನಲ್ಲಿ) ಹಿಂದೆ ಇದ್ದಂತಹ । **ಋತಂ**—ಉಪಕಾರ ಬುದ್ಧಿಯು । **ಕ್ವ ಗತಂ**—ಎಲ್ಲಿ ಹೋಯಿತು ? । **ನೂತನಃ**—ಹೊಸಬನಾದ । **ಕಃ**—ಯಾವ ಪುರುಷನು । **ತತ್**-ಆ ಉಪಕಾರ ಬುದ್ಧಿಯನ್ನು । **ಬಿಭರ್ತಿ**—ಹೊಂದಿರುತ್ತಾನೆ ? । **ರೋದಸೀ**—ಎಲೈ ದ್ಯಾವಾಪೃಥಿವಿಗಳೇ, **ಮೇ**—ನನ್ನ । **ಅಸ್ಯ**—ಈ ಸ್ತೋತ್ರವನ್ನು ಅಥವಾ ದುಃಖವನ್ನು । **ವಿತ್ತಂ**—ಗಮನಿಸಿ ತಿಳಿಯಿರಿ.

ಭಾವಾರ್ಥ

"ಎಲೈ ಅಗ್ನಿಯೇ, ನಿನ್ನಲ್ಲಿ ಹಿಂದೆ ಇದ್ದಂತಹ ಉಪಕಾರಬುದ್ಧಿಯು ಈಗ ಎಲ್ಲಿ ಹೋಯಿತು ? ಯಾವ ಹೊಸ ಪುರುಷನು ಈಗ ಉಪಕಾರ ಬುದ್ಧಿಯನ್ನು ಹೊಂದಿದ್ದಾನೆ ? ನೀನು ಹಿಂದಿನಂತೆಯೇ ಇದ್ದಿದ್ದರೆ ನನಗೆ ಈ ದುಃಖವು ಪ್ರಾಪ್ತವಾಗುತ್ತಿರಲಿಲ್ಲ" ಎಂದು ಯಜ್ಞಾರ್ಹನೂ, ಸಕಲ ದೇವತೆಗಳಿಗೂ ಮೊದಲನೆಯವನೂ ಆದ ಅಗ್ನಿಯನ್ನು ನಾನು ಕೇಳಿಕೊಳ್ಳುತ್ತೇನೆ. ನನ್ನ ಕೇಳಿಕೆಯನ್ನು ದೇವದೂತನಾದ ಆ ಅಗ್ನಿಯು ಎಲ್ಲಾ ದೇವತೆಗಳಿಗೂ ಬಿಡಿಸಿ ಹೇಳಲಿ. ಎಲೈ ದ್ಯಾವಾಪೃಥಿವಿಗಳೇ, ನನ್ನ ದುಃಖವನ್ನು ಅರಿಯಿರಿ ಮತ್ತು ನನ್ನ ಸ್ತೋತ್ರವನ್ನು ಕೇಳಿ ನನ್ನನ್ನು ಬಾವಿಯಿಂದ ಮೇಲಕ್ಕೆತ್ತಿರಿ.

## English Translation

I implore the first (of the gods) the object of sacrifice, that he will become my messenger, and narrate (my condition to the other deities).

Where, Agni, is your former benevolence, what new being now possesses it? Heaven and earth, be conscious of this (my affliction).

ವಿಶೇಷವಿಷಯಗಳು

**ಯಜ್ಞಂ ಅವಮಂ ಪೃಚ್ಛಾಮಿ—ಯಜನೀಯಂ, ಸರ್ವೇಷಾಂ ದೇವಾನಾಮಾದಿಭೂತಂ ಅಗ್ನಿಂ ಪೃಚ್ಛಾಮಿ।** ಪೂಜಾರ್ಹನೂ, ಸಕಲ ದೇವತೆಗಳಿಗೂ ಆದಿಭೂತನೂ ಆದ ಅಗ್ನಿಯನ್ನು ಪ್ರಶ್ನಿಸುತ್ತೇನೆ ಎಂದರ್ಥ ವೆಂದು ಸಾಯಣರು ವಿವರಿಸಿದ್ದಾರೆ. ಸ್ಕಂದಸ್ವಾಮಿಗಳು **ಅವಮ** ಶಬ್ದಕ್ಕೆ, **ಅವಮಂ— ಅಂತಿಕನಾಮೈತತ್। (ನಿ. ೩-೯) ಅಗ್ನೇಶ್ಚ ವಿಶೇಷಣಂ। ಸನ್ನಿಕೃಷ್ಟಂ। ಸರ್ವಯಜಮಾನಾನಾಂ ಆಪ್ತಮಿತ್ಯರ್ಥಃ। ಅಥವಾ ಅವಮಮಿತಿ ಯಜ್ಞಸ್ಯ ವಿಶೇಷಣಂ। ಸನ್ನಿಕೃಷ್ಟಂ ಯಜ್ಞಮಿತಿ। ಅವಮ** ಶಬ್ದವು ಅಗ್ನಿಗೆ ವಿಶೇಷಣವಾದರೆ ಸನ್ನಿಕೃಷ್ಟನಾಗಿಯೂ ಸಕಲ ಯಜಮಾನರಿಗೂ ಆಪ್ತನಾಗಿಯೂ ಇರುವ ಅಗ್ನಿಯನ್ನು ಉದ್ದೇಶಿಸಿ ಎಂದೂ, ಅಥವಾ ಯಜ್ಞಕ್ಕೆ ವಿಶೇಷಣವಾದರೆ, ನನಗೆ ಸನ್ನಿಕೃಷ್ಟವಾದ ಈ ಯಜ್ಞವನ್ನು ಎಂದೂ ಅರ್ಥವಾಗುತ್ತ ದೆಂದು ಹೇಳಿದ್ದಾರೆ. ಇಲ್ಲಿ ಎರಡು ವಿಧವಾಗಿಯೂ ಅರ್ಥವಾಗಬಹುದು. ಸಾಯಣರು **ಅವಮ** ಶಬ್ದಕ್ಕೆ ಶ್ರುತಿವಾ ಕ್ಯದ ಆಧಾರದಮೇಲೆಯೇ ಆದಿಭೂತನೆಂಬ ಅರ್ಥವನ್ನು ಮಾಡಿರುತ್ತಾರೆ.

**ಅಗ್ನಿರ್ಮುಖಂ ಪ್ರಥಮೋ ದೇವತಾನಾಂ।**
(ಐ. ಬ್ರಾ. ೧-೪)

**ಅಗ್ನಿರ್ವೈ ದೇವಾನಾಮವಮಃ।**
(ಐ. ಬ್ರಾ. ೧-೧)

ಇತ್ಯಾದಿ ಬ್ರಾಹ್ಮಣವಾಕ್ಯಗಳು ಅಗ್ನಿಯನ್ನು ದೇವತೆಗಳಿಗೆಲ್ಲಾ **ಅವಮ**ನೆಂದು ಸ್ತುತಿಸುತ್ತವೆ. ಅದೇ ಅರ್ಥವನ್ನು ಇಲ್ಲಿಯೂ ಹೇಳಬೇಕೆಂದಿರುತ್ತಾರೆ. ಆ ಪದಕ್ಕೆ ಅಂತಿಕವೆಂಬ ಅರ್ಥಕ್ಕೂ ಶ್ರುತ್ಯಾಧಾರವಿದೆ.

**ಸ ತ್ವಂ ನೋ ಅಗ್ನೇಽವಮೋ ಭವೋತೀ ನೇದಿಷ್ಠೋ ಅಸ್ಯಾ ಉಷಸೋ ವ್ಯುಷ್ಟೌ।**
(ಋ. ಸಂ. ೪-೧-೫)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯು ಯಜ್ಞಕರ್ತರಿಗೆ ಪ್ರತ್ಯಾಸನ್ನನಾಗಿಯೂ ಸಹಾಯಕನಾಗಿಯೂ ಇರುವನೆಂದು ವರ್ಣನೆಯಿರುವುದರಿಂದ ಈ ಅರ್ಥವೂ ಹೊಂದಿಕೊಳ್ಳುತ್ತದೆ.

ಈ ಸ್ಥಳಗಳಲ್ಲದೇ ಉಳಿದ ಒಂದೆರಡು ಕಡೆಗಳಲ್ಲಿ **ಅವಮ** ಶಬ್ದಕ್ಕೆ ಕನಿಷ್ಠ, ಕೆಳಮಟ್ಟದ ಅಥವಾ ಕಡಿಮೆ ಅಂತಸ್ತಿನ ಎಂದೂ ಅರ್ಥವಾಗುತ್ತದೆ. ಉದಾಹರಣೆಗೆ

**ತವೇದಿಂದ್ರಾವಮಂ ವಸು ತ್ವಂ ಪುಷ್ಯಸಿ ಮಧ್ಯಮಂ।**
(ಋ. ಸಂ. ೭-೩೨-೧೬)

ಎಂಬ ಋಕ್ಕಿನಲ್ಲಿ ಅವಮ ಶಬ್ದಕ್ಕೆ ಅಧಮನೆಂದು ಅರ್ಥಮಾಡಿದ್ದಾರೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಆ ವಿಧವಾದ ಅರ್ಥಕ್ಕೆ ಅವಕಾಶವಿಲ್ಲ.

ಸ್ಕಂದಸ್ವಾಮಿಗಳು **ಅವಮ** ಶಬ್ದವನ್ನು ಯಜ್ಞಕ್ಕೂ ವಿಶೇಷಣವನ್ನಾಗಿ ಮಾಡಿ ಸನ್ನಿಕೃಷ್ಟವಾದ ಎಂದರೆ ಸಾಂನಿಧಿಕವಾದ ಈ ಯಜ್ಞದ ವಿಷಯವನ್ನು ಅಗ್ನಿಯನ್ನು ಕುರಿತು ನನಗೆ ಉಪದೇಶಿಸುವಂತೆ ಕೇಳಿಕೊಳ್ಳುತ್ತೇನೆ ಎಂಬ ಅಭಿಪ್ರಾಯವನ್ನು ಕೊಡುವುದಾಗಿ ವಿವರಿಸಿರುವುದು ಸಂದರ್ಭಕ್ಕೆ ಅಷ್ಟು ಹೊಂದಿಕೊಳ್ಳುವುದಿಲ್ಲ. ಪೂರ್ವಾರ್ಧಕ್ಕೂ ಮತ್ತು ಉತ್ತರಾರ್ಧಕ್ಕೂ ಸಹ ಬೇರೆ ಬೇರೆ ಅನ್ವಯವಾಗಿರುತ್ತದೆ. ಆದುದರಿಂದ ಸಾಯಣರ ವಿವರಣೆಯೇ ಸಮಂಜಸವಾಗಿದೆ. ಯಜ್ಞಾರ್ಹನೂ ದೇವತೆಗಳಲ್ಲೆಲ್ಲಾ **ಅವಮನೂ** ಆದ ಅಗ್ನಿಯನ್ನು ಮುಂದೆ ಹೇಳುವಂತೆ ಪ್ರಶ್ನಿಸುತ್ತೇನೆ ಎಂದರ್ಥ.

**ಸ ದೂತಃ—ದೇವಾನಾಂ ದೂತಃ ।** ಹವಿಸ್ಸನ್ನು ಹಂಚುವುದರಲ್ಲಿ ದೂತಕೃತ್ಯವನ್ನು ಮಾಡುವವನು.

**ಮಂದ್ರೋ ಹೋತಾ ಗೃಹಪತಿರಗ್ನೇ ದೂತೋ ವಿಶಾಮಸಿ ।**
(ಋ. ಸಂ. ೧-೩೬-೫)

**ಜುಷ್ಟೋ ಹಿ ದೂತೋ ಅಸಿ ಹವ್ಯವಾಹನೋಽಗ್ನೇ ರಥೀರಧ್ವರಾಣಾಂ ।**
(ಋ. ಸಂ. ೧-೪೪-೨)

ಇತ್ಯಾದಿ ನಾನಾ ವಾಕ್ಯಗಳಲ್ಲಿ ಸ್ತುತಿಸಿರುವಂತೆ ದೇವದೂತನಾದ ಅಗ್ನಿಯು **ವಿವೋಚತು ವಿವಿಚ್ಯ ಕಥಯತು**— ಬಿಡಿಸಿ ಹೇಳಲಿ ಎಂದು ಅನ್ವಯ. ಆ ಪ್ರಶ್ನೆಯೇನೆಂದರೆ,

**ಕ್ವ ಋತಂ ಪೂರ್ವ್ಯಂ ಗತಂ—ಪೂರ್ವಕಾಲೀನಂ ಭದ್ರಂ ಸ್ತೋತೃಭ್ಯಃ ಕೃತಂ ಶ್ರೇಯಃ ಕುತ್ರ ಇದಾನೀಂ ವರ್ತತೇ ।** ನಿನ್ನ ಸ್ತೋತ್ರಮಾಡಿ ಯಜ್ಞವನ್ನು ನೆರವೇರಿಸುವವರಿಗೆ ನೀನು ಅತ್ಯವಶ್ಯಕವಾಗಿ ಅನುಗ್ರಹಮಾಡಿಕೊಡುತ್ತಿದ್ದ ಶ್ರೇಯಸ್ಸು ಈಗೆಲ್ಲಿ ಹೋಯಿತು ? ನಾನೂ ಸಹ ಯಜ್ಞಮಾಡುತ್ತಿರುವೆನಲ್ಲಾ, ನನಗೇಕೆ ನಿನ್ನ ಅನುಗ್ರಹವಿಲ್ಲ ಎಂದಭಿಪ್ರಾಯ. ಇಲ್ಲಿ **ಋತ** ಶಬ್ದಕ್ಕೆ ಸಾಯಣರು ಭದ್ರ, ಶ್ರೇಯಸ್ಸು ಎಂದೂ, ಸ್ಕಂದಸ್ವಾಮಿಗಳು ಸತ್ಯವೆಂದೂ ಅರ್ಥಮಾಡಿದ್ದಾರೆ. ಎರಡರ್ಥಗಳೂ ಒಂದೇ ತಾತ್ಪರ್ಯದಲ್ಲಿ ಪರ್ಯವಸಾನವನ್ನು ಹೊಂದುತ್ತವೆ. ಶ್ರದ್ಧಾಭಕ್ತಿಗಳಿಂದ ಯಜ್ಞವನ್ನು ನೆರವೇರಿಸುವವನಿಗೆ ಪ್ರತಿಫಲವನ್ನು ಕೊಡುವುದೇ ಅಗ್ನಿಯ ಸತ್ಯಸ್ವರೂಪ. ಅಗ್ನಿಯು ಸತ್ಯಾತ್ಮನು. ಆದರೆ ಈಗ ಆ ಫಲವನ್ನು ಕೊಡುವುದು ತಡವಾಗಿ ತ್ರಿತನ ಕಷ್ಟನಿವಾರಣೆಯಾಗದೇ ಇದ್ದುದರಿಂದ ಅವನು ಈ ರೀತಿಯಾದ ಪ್ರಶ್ನೆಯಿಂದ ತನ್ನ ವೇದನೆಯನ್ನು ಪ್ರಕಟಿಸಿದ್ದಾನೆ. **ಋತ**ಶಬ್ದಕ್ಕೆ ಯಜ್ಞ, ಸತ್ಯ ಇತ್ಯಾದಿ ಬೇರೆ ಬೇರೆ ಅರ್ಥಗಳ ನಡುವೆ ಇಲ್ಲಿ **ಸತ್ಯ**ವೆಂಬ ಅರ್ಥವೇ ಹೊಂದಿಕೊಳ್ಳುತ್ತದೆ. ಅಥವಾ ಯಜ್ಞವೂ ಸತ್ಯಾತ್ಮಕವೇ ಆದುದರಿಂದ ಎರಡು ಅರ್ಥಗಳೂ ಒಂದೇ ಆಗುತ್ತವೆ. ಅಗ್ನಿಗೆ ಋತಜ್ಞ, ಋತಜಾತ ಇತ್ಯಾದಿ ವಿಶೇಷಣಗಳು ಅನೇಕವಾಗಿವೆ.

**ರಾಜಂತಮಧ್ವರಾಣಾಂ ಗೋಪಾಮೃತಸ್ಯ ದೀದಿವಿಂ ।**
(ಋ. ಸಂ. ೧-೧-೮)

ಎಂಬ ಋಕ್ಕಿನಲ್ಲಿ **ಋತಸ್ಯ ಸತ್ಯಸ್ಯಾವಶ್ಯಂಭಾವಿನಃ ಕರ್ಮಫಲಸ್ಯ ದ್ಯೋತಕಂ ।** ಅತ್ಯವಶ್ಯವಾಗಿ ಸಂಭವಿಸಬೇಕಾದ ಕರ್ಮಫಲದ ದ್ಯೋತಕನೆಂದರ್ಥ.

**ಅಗ್ನೇ ಜುಷಸ್ವ ಪ್ರತಿ ಹರ್ಯ ತದ್ವಚೋ ಮಂದ್ರ ಸ್ವಧಾವ ಋತಜಾತ ಸುಕ್ರತೋ ।**
(ಋ. ಸಂ. ೧-೧೪೪-೭)

**ವಿ ಷು ತ್ವಾವಾಂ ಋತಜಾತ ಯಂಸದ್ಗೃಣಾನೋ ಅಗ್ನೇ ತನ್ವೇ ೩ ವರೂಥಂ ।**
(ಋ. ಸಂ. ೧-೧೮೯-೬)

ಇತ್ಯಾದಿ ಋಕ್ಕುಗಳಲ್ಲಿ ಋತಜಾತನೆಂದೂ,

**ಯದೀಮೃತಸ್ಯ ಪಯಸಾ ಪಿಯಾನೋ ನಯನ್ನೃತಸ್ಯ ಪಥಿಭೀ ರಜಿಷ್ಠೈಃ ।**
(ಋ. ಸಂ. ೧-೭೯-೩)

**ತಂ ಯಜ್ಞಸಾಧಮಪಿ ವಾತಯಾಮಸ್ಯೃತಸ್ಯ ಪಥಾ ನಮಸಾ ಹವಿಷ್ಮತಾ ದೇವತಾತಾ ಹವಿಷ್ಮತಾ ।**
(ಋ. ಸಂ. ೧-೧೨೮-೨)

ಎಂಬಲ್ಲಿ **ಋತದ** ಪಥದಲ್ಲಿಯೇ ಸಂಚರಿಸುವವನೆಂದೂ,

**ಉತ ದ್ಯುಮ್ನಸ್ಯ ಶವಸ ಋತಸ್ಯ ರಶ್ಮಿಮಾ ದದೇ ।**
(ಋ. ಸಂ. ೫-೭-೩)

ಎಂಬಲ್ಲಿ **ಋತದ** ರಶ್ಮಿಯನ್ನು ಹಿಡಿದಿರುವವನೆಂದೂ ಹೀಗೆಯೇ ಇನ್ನೂ ಇತರ ವಿಧವಾಗಿಯೂ **ಅಗ್ನಿಗೂ ಋತಕ್ಕೂ** ಅವಿಚ್ಛೇದ ಸಂಬಂಧವಿರುವುದೆಂದು ಶ್ರುತಿ ಪ್ರಸಿದ್ಧವಾಗಿರುವುದರಿಂದ ಈಗ ಆ ನಿತ್ಯಸಂಬಂಧವು ಎಲ್ಲಿ ಹೋಯಿತು, ನಾನು ಯಜ್ಞವನ್ನು ಮಾಡುತ್ತಿದ್ದರೂ ಸಹ ಅದಕ್ಕೆ ಫಲರೂಪವಾದ ನನ್ನ ಕಷ್ಟನಿವಾರಣೆಯಾಗಲಿಲ್ಲವಲ್ಲ, ಅಂತಹ **ಪೂರ್ವ್ಯಂ ಋತಂ ಕ್ವ ಗತಂ** ಎಂದು ಮೊರೆಯಿಡುತ್ತಿರುವುದು ಒಂದು ವಿಧದಲ್ಲಿ ಆಕ್ಷೇಪಕವಾಗಿಯೂ, ಇನ್ನೊಂದು ವಿಧದಲ್ಲಿ ತನ್ನ ದುಃಖವನ್ನು ಆವಿಷ್ಕರಣಮಾಡಿಕೊಳ್ಳುವುದಾಗಿಯೂ ಇದೆ. **ಯೇನ ಸತ್ಯೇನಾಗ್ನಿರ್ಯಷ್ಟ್ರೄನಾಪದ್ಭ್ಯೋ ರಕ್ಷತಿ ಕ್ವ ತಸ್ಯ ತತ್ಸತ್ಯಂ ಗತಂ ಇತಿ ಆತ್ಮನ ಆಪದೋಽರಕ್ಷಣಾದುಪಾಲಂಭೋಽಯಂ ಪರಿದೇವನಾ ವಾ ।** ಎಂದು ಸ್ಕಂದಸ್ವಾಮಿಗಳು **ಮೇಲಿನ** ಅರ್ಥವನ್ನು ವಿವರಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಯಜ್ಞಮ್**—ಯಜ ದೇವಪೂಜಾಸಂಗತಿಕರಣದಾನೇಷು. **ಯಜಯಾಚಯತ**—(ಪಾ. ಸೂ. ೩-೩-೯೦) ಎಂಬುದರಿಂದ ನಙ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕ ವಚನಾಂತರೂಪ.

**ಪೃಚ್ಛಾಮಿ**—ಪೃಚ್ಛ ಜ್ಞೀಪ್ಸಾಯಾಂ ವಾಚಿ. ಧಾತು. ಲಡುತ್ತಮಪುರುಷ ಏಕವಚನರೂಪ. ತಿಙಂತ ನಿಘಾತಸ್ವರ ಬರುತ್ತದೆ

**ವೋಚತಿ**—ವಚ ಪರಿಭಾಷಣೇ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಲೇಟೋಽಡಾಟೌ**—(ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. ವ್ಯತ್ಯಯದಿಂದ ಲುಙ್ ನಿಮಿತ್ತ

ವಿಲ್ಲದಿದ್ದರೂ (ಅಜ್) **ವಚಉಮ್**—(ಪಾ. ಸೂ. ೭-೪-೨೦) ಸೂತ್ರದಿಂದ ಧಾತುವಿಗೆ ಉಮಾಗಮ. ಮಿತ್ತಾ ದುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. ಗುಣ. **ತಿಙ್ಙತಿಙಃ**—ಸೂತ್ರದಿಂದ ನಿಘಾತಸ್ವರ ಬರುತ್ತದೆ.

**ಕ್ವ**—ಕಿಮ್ ಶಬ್ದ. ಇದಕ್ಕೆ ಸಪ್ತಮ್ಯರ್ಥದಲ್ಲಿ **ಕಿಮೋಽತ್**—(ಪಾ. ಸೂ. ೫-೩-೧೨) ಎಂಬುದರಿಂದ ಅತ್ ಪ್ರತ್ಯಯ. **ಕ್ವಾತಿ**—(ಪಾ. ಸೂ. ೭-೨-೧೦೫) ಎಂಬುದರಿಂದ ಅತ್ ಪರವಾದಾಗ ಪ್ರಕೃತಿಗೆ ಕ್ವ ಆದೇಶ. **ಯಸ್ಯೇತಿಚ**—ಸೂತ್ರದಿಂದ ಅಕಾರಲೋಪ. ಅತ್ ತಿತ್ತಾದುದರಿಂದ **ತಿತ್‌ಸ್ವರಿತಮ್**—(ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ. ಕ್ವ ಋತಮ್ ಎಂದಿರುವಾಗ ಋಕಾರಪರವಾದುದರಿಂದ **ಋತ್ಯಕಃ**—(ಪಾ. ಸೂ. ೬-೧-೧೨೮) ಎಂಬುದರಿಂದ ಪ್ರಕೃತಿಭಾವ ಸಂಧಿ ಬರುತ್ತದೆ.

**ಪೂರ್ವ್ಯಮ್**—ಪೂರ್ವಸ್ಮಿನ್ ಭವಃ ಪೂರ್ವ್ಯಃ। **ಭವೇಚ್ಛಂದಸಿ**—(ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. **ಯಸ್ಯೇತಿಚ**—ಸೂತ್ರದಿಂದ ಅಕಾರಲೋಪ. ದ್ವಿತೀಯಾಏಕವಚನಾಂತರೂಪ.

**ಗತಮ್**—ಗಮ್ಲೃ ಗತೌ ಧಾತು. ಇದಕ್ಕೆ ಕ್ತಪ್ರತ್ಯಯ ವಿವಕ್ಷಿತವಾದಾಗ **ಅನುದಾತ್ತೋಪದೇಶ-ವನತಿ**—(ಪಾ. ಸೂ. ೬-೪-೩೭) ಎಂಬುದರಿಂದ ಅನುನಾಸಿಕವಾದ ಮಕಾರಕ್ಕೆ ಲೋಪ. ಗತ ಎಂದು ರೂಪ ವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಬಭರ್ತಿ—ಡುಭೃಞ್ ಭರಣೇ ಧಾತು. ಜುಹೋತ್ಯಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಜುಹೋತ್ಯಾದಿಭ್ಯಃ ಶ್ಲುಃ**—ಎಂಬುದರಿಂದ ಶ್ಲು ವಿಕರಣ. **ಶ್ಲೌ**—ಸೂತ್ರದಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ **ಭೃಞಾಮಿತ್**—(ಪಾ. ಸೂ. ೭-೪-೭೬) ಎಂಬುದರಿಂದ ಇತ್ವ. ಜಸ್ತ್ವಾದಿ. ಪ್ರತ್ಯಯ ನಿಮಿತ್ತವಾಗಿ ಧಾತುವಿಗೆ (ಇಕಿಗೆ) ಗುಣ. ರಪರವಾಗಿ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೪ ॥



ಸಂಹಿತಾಪಾಠಃ

ಅಮೀ ಯೇ ದೇವಾಃ ಸ್ಥನ ತ್ರಿಷ್ವಾ ರೋಚನೇ ದಿವಃ ।

ಕದ್ವ ಋತಂ ಕದನೃತಂ ಕ್ವ ಪ್ರತ್ನಾ ವ ಆಹುತಿರ್ವಿತ್ತಂ ಮೇ

ಅಸ್ಯ ರೋದಸೀ ॥ ೫ ॥

ಪದಪಾಠಃ

ಅಮೀ ಇತಿ । ಯೇ । ದೇವಾಃ । ಸ್ಥನ । ತ್ರಿಷು । ಆ । ರೋಚನೇ । ದಿವಃ ।
ಕತ್ । ವಃ । ಋತಂ । ಕತ್ । ಅನೃತಂ । ಕ್ವ । ಪ್ರತ್ನಾ । ವಃ । ಆಽಹುತಿಃ ।
ವಿತ್ತಂ । ಮೇ । ಅಸ್ಯ । ರೋದಸೀ ಇತಿ ॥ ೫ ॥

ಸಾಯಣಭಾಷ್ಯಂ

ಹೇ ದೇವಾಃ । ತ್ರಿಷು ಪೃಥಿವ್ಯಾದಿಷು ಸ್ಥಾನೇಷು ಯೇಽಮೀ ಯೂಯಂ ಸ್ಥನ ವರ್ತಮಾನಾ ಭವಥ । ಯಾನಿ ಸ್ಥಾನಾನಿ ದಿವೋ ದ್ಯೋತಮಾನಸ್ಯ ಸೂರ್ಯಸ್ಯ ಆ ರೋಚನೇ ದೀಪ್ತಿವಿಷಯೇ ವರ್ತಂತೇ । ಸೂರ್ಯಪ್ರಕಾಶ್ಯೇಷು ಸ್ಥಾನೇಷ್ವಿತ್ಯರ್ಥಃ । ತೇಷಾಂ ವೋ ಯುಷ್ಮಾಕಂ ಸಂಬಂಧಿ ಸ್ತೋತ್ರ-ವಿಷಯಮೃತಂ ಸತ್ಯಂ ಕತ್ । ಕಸ್ಮಿನ್ದೇಶೇ ವರ್ತತೇ । ಅನೃತಂ ದ್ವೇಷ್ಟೃವಿಷಯಮಸತ್ಯಂ ಚ ಕತ್ ಕುತ್ರ ಗತಂ । ಅಪಿ ಚ ಪ್ರತ್ನಾ ಚಿರಕಾಲೀನಾ ವೋ ಯುಷ್ಮಾಕಂ ಸಂಬಂಧಿನ್ಯಾಹುತಿರ್ಮಯಾ ಪೂರ್ವ-ಮನುಷ್ಠಿತೋ ಯಾಗಃ ಕ್ವ । ಕುತ್ರಾಸೀತ್ । ಈದೃಗ್ಭೂತದುಃಖಾನುಭವೇನ ಮಯಾ ಪೂರ್ವಮನು-ಷ್ಠಿತೋ ಯಾಗಸಮೂಹೋ ಯುಷ್ಮಾನ್ನ ಪ್ರಾಪ್ನೋದಿತ್ಯನುಮಿಮೇ । ಅನ್ಯತ್ಪೂರ್ವವತ್ ॥ ಸ್ಥನ । ತಪ್ತನಪ್ತನಥನಾಶ್ಚೇತಿ ತಶಬ್ದಸ್ಯ ಥನಾದೇಶಃ । ಕತ್ ಕ್ವಶಬ್ದಸ್ಯ ವರ್ಣವ್ಯಾಪತ್ತ್ಯಾ ಕದ್ಭಾವಃ ॥

ಪ್ರತಿಪದಾರ್ಥ

**ದೇವಾಃ**—ಎಲೈ ದೇವತೆಗಳೇ । **ಯೇ ಅಮೀ**— ಯಾವ ನೀವು । **ದಿವಃ**— ಪ್ರಕಾಶಮಾನವಾದ ಸೂರ್ಯನ । **ಆರೋಚನೇ**— ತೇಜಸ್ಸನ್ನೊಳಗೊಂಡ । **ತ್ರಿಷು**— (ಪೃಥಿವ್ಯಾದಿ) ಮೂರು ಲೋಕಗಳಲ್ಲಿಯೂ । **ಸ್ಥನ**— ಇರುತ್ತೀರೋ । **ವಃ**—(ಅಂತಹ) ನಿಮ್ಮ । **ಋತಂ**— ಸತ್ಯವು । **ತತ್**— ಎಲ್ಲಿ (ಇದೆ) ? । **ಅನೃತಂ**— (ಶತ್ರುವಿಷಯಕವಾದ) ಅಸತ್ಯವು । **ತತ್**—ಎಲ್ಲಿ (ಹೋಯಿತು)? । **ಪ್ರತ್ನಾ**—ಪ್ರಾಚೀನವಾದ । **ವಃ**—ನಿಮ್ಮನ್ನು । ಉದ್ದೇಶಿಸಿದ । **ಆಹುತಿಃ**—ಯಜ್ಞವು (ಅಥವಾ ಸ್ತೋತ್ರರೂಪದ ಆಹ್ವಾನವು) । **ಕ್ವ**—ಎಲ್ಲಿ (ಹೋಯಿತು) । **ರೋದಸೀ**— ದ್ಯಾವಾಪೃಥಿವಿಗಳೇ । **ಮೇ**— ನನ್ನ । **ಅಸ್ಯ**— ಈ ಸ್ತೋತ್ರವನ್ನು ಅಥವಾ ದುಃಖವನ್ನು । **ವಿತ್ತಂ**—ಚೆನ್ನಾಗಿ ಅರಿಯಿರಿ ॥

ಭಾವಾರ್ಥ

ಎಲೈ ದೇವತೆಗಳೇ, ಯಾವ ನೀವು ಪ್ರಕಾಶಮಾನವಾದ ಸೂರ್ಯನ ತೇಜಸ್ಸು ವ್ಯಾಪಿಸಿರುವ ಮೂರು ಲೋಕ ಗಳಲ್ಲೂ ಇರುತ್ತೀರೋ ಅಂತಹ ನಿಮ್ಮ ಸತ್ಯವು ಈಗ ಎಲ್ಲಿದೆ? ಶತ್ರುವಿಷಯಕವಾದ ಅಸತ್ಯವು ಎಲ್ಲಿ? ನನ್ನ ದುಃಖ

ನಿವಾರಣೆಗಾಗಿ ನಿಮ್ಮನ್ನು ಉದ್ದೇಶಿಸಿ ನಡೆಸಿದ ನನ್ನ ಪ್ರಾಚೀನವಾದ ಸ್ತೋತ್ರವು ಎಲ್ಲಿ ? ಎಲೈ ದ್ಯಾವಾಪೃಥಿವಿಗಳೇ, ನನ್ನ ಈ ದುಃಖವನ್ನು ಚೆನ್ನಾಗಿ ಅರಿಯಿರಿ. ನನ್ನ ಸ್ತೋತ್ರವನ್ನು ಕೇಳಿ ನನ್ನನ್ನು ಮೇಲಕ್ಕೆತ್ತಿರಿ.

## English Translation

Gods, who are present in three worlds, who abide in the light of the sun, where now is your truth, where your untruth, where the ancient invocation (that I have addressed) to you ? Heaven and earth, be conscious of (my affliction).

॥ ವಿಶೇಷವಿಷಯಗಳು ॥

ಹಿಂದಿನ ಸೂಕ್ತಿನಲ್ಲಿ ಅಗ್ನಿಯನ್ನು ಮಾತ್ರ ಉದ್ದೇಶಿಸಿ ಪ್ರಶ್ನಿಸಿದೆ. ಈ ಸೂಕ್ತಿನಲ್ಲಿ ಅದೇ ರೀತಿಯಾದ ಪ್ರಶ್ನೆಯನ್ನು ಲೋಕತ್ರಯದಲ್ಲೂ ಇರುವ ಸಕಲ ದೇವತೆಗಳನ್ನೂ ಉದ್ದೇಶಿಸಿದೆ.

**ತ್ರಿಷು ಸ್ಥನ**—ಮೂರು ಲೋಕಗಳಲ್ಲೂ ಇರತಕ್ಕವರು ಎಂದರ್ಥ. ಈ ಮೂರು ಲೋಕಗಳಾವುವು, ಇವುಗಳಲ್ಲಿರುವ ದೇವತೆಗಳಾರು, ಅವರ ಸಂಖ್ಯೆಯೆಷ್ಟು, ಅವರ ಸ್ವರೂಪವೇನು ? ಇವೇ ಮುಂತಾದ ವಿಷಯಗಳನ್ನು ಪೀಠಿಕಾಪ್ರಕರಣವಾದ ಮೊದಲನೇ ಭಾಗದಲ್ಲಿ ಹೇಳಿದೆ. ಆದರೂ ಸಹ ಇಲ್ಲಿ ಸಂದರ್ಭಾನುಸಾರವಾಗಿ ಸಂಹಿತಾ ವಾಕ್ಯಗಳನ್ನೂ ನಿರುಕ್ತವಚನಗಳನ್ನೂ ಉದಹರಿಸಿ ಆ ಸಕಲ ದೇವತೆಗಳ ಸಂಖ್ಯೆ ಮತ್ತು ಸ್ವರೂಪಗಳನ್ನು ತಿಳಿಸಲಾಗುತ್ತೆ.

**ಸೂರ್ಯೋ ನೋ ದಿವಸ್ಪಾತು ವಾತೋ ಅಂತರಿಕ್ಷಾತ್ ।**
**ಅಗ್ನಿರ್ನಃ ಪಾರ್ಥಿವೇಭ್ಯಃ ॥**
(ಋ. ಸಂ. ೧೦-೧೫೮-೧)

ಎಂಬ ಸೂಕ್ತಿನಲ್ಲಿ ದ್ಯುಲೋಕದಲ್ಲಿ ಸೂರ್ಯನೂ, ಮಧ್ಯಮಲೋಕವಾದ ಅಂತರಿಕ್ಷದಲ್ಲಿ ವಾಯುವೂ, ಪೃಥ್ವಿಯಲ್ಲಿ ಅಗ್ನಿಯೂ ಅಧಿದೇವತೆಗಳೆಂದೂ, ಅವರು ವಿಶ್ವರಕ್ಷಕರೆಂದೂ ಹೇಳಿದೆ. ಇದೇ ವಿಭಾಗದಂತೆಯೇ ನಿರುಕ್ತದಲ್ಲಿಯೂ ಸಹ.

ತಿಸ್ರ ಏವ ದೇವತಾ ಇತಿ ನೈರುಕ್ತಾಃ । ಅಗ್ನಿಃ ಪೃಥಿವೀಸ್ಥಾನಃ । ವಾಯುರ್ವಾ ಇಂದ್ರೋ ವಾ ಅಂತರಿಕ್ಷಸ್ಥಾನಃ । ಸೂರ್ಯೋ ದ್ಯುಸ್ಥಾನಃ । ತಾಸಾಂ ಮಹಾಭಾಗ್ಯಾತ್ ಏಕೈಕಸ್ಯಾ ಅಪಿ ಬಹೂನಿ ನಾಮಧೇಯಾನಿ ಭವಂತಿ । ಅಪಿ ವಾ ಕರ್ಮಪೃಥಕ್ತ್ವಾತ್ । (ನಿ. ೭-೫).

ನೈರುಕ್ತಕಾರರ ಮತದಂತೆ ಅಗ್ನಿ ವಾಯು ಅಥವಾ ಇಂದ್ರ ಮತ್ತು ಸೂರ್ಯ ಈ ಮೂರು ದೇವತೆಗಳೂ ಸಹ ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕ ಈ ಮೂರು ಲೋಕಗಳ ಅಧಿದೇವತೆಗಳು. ಈ ದೇವತೆಗಳಿಗೇ ಅವರವರ ಮಹತ್ವಕ್ಕನುಗುಣವಾಗಿಯಾಗಲಿ ಅಥವಾ ಕ್ರಿಯಾವೈವಿಧ್ಯಗಳ ದೆಸೆಯಿಂದಾಗಲೀ ಅನೇಕ ವಿಧವಾದ ನಾಮಧೇಯ ಗಳಿರುತ್ತವೆಯೆಂದು ಹೇಳಿ, **ಅಥಾತೋಽನುಕ್ರಮಿಷ್ಯಾಮಃ ಅಗ್ನಿಃ ಪೃಥಿವೀಸ್ಥಾನಃ ತಂ ಪ್ರಥಮಂ ವ್ಯಾಖ್ಯಾಸ್ಯಾಮಃ ।** ಎಂದು ನಿ. ೭-೧೪ರಿಂದ ೯-೪೩ನೇ ಖಂಡದವರೆಗೆ ಪೃಥಿವೀಸ್ಥವಾದ ದೇವತೆಗಳ ಸ್ವರೂಪವನ್ನೂ, **ಅಥಾತೋ ಮಧ್ಯಸ್ಥಾನಾ ದೇವತಾಃ । ತಾಸಾಂ ವಾಯುಃ ಪ್ರಥಮಾಗಾಮೀ ಭವತಿ ।** ಎಂದು ೧೦-೧ರಿಂದ ೧೧-೫೦ನೇ ಖಂಡದ ವರೆಗೆ ಮಧ್ಯಮಸ್ಥಾನವಾದ ಅಂತರಿಕ್ಷಸ್ಥ ದೇವತೆಗಳ ಸ್ವರೂಪವನ್ನೂ, **ಅಥಾತೋ ದ್ಯುಸ್ಥಾನಾ ದೇವತಾಃ ।** ಎಂದು ೧೨-೧ರಿಂದ ಅಧ್ಯಾಯದ ಕೊನೆಯವರೆಗೆ ದ್ಯುಲೋಕಸ್ಥರಾದ ದೇವತೆಗಳ ಸ್ವರೂಪವನ್ನೂ ಹೇಳಿದೆ. ಹೀಗೆ ವಿಭಾಗಿಸಿರುವ ಈ ದೇವತೆಗಳ ಸಂಖ್ಯೆಯೆಷ್ಟು ಎಂಬ ವಿಷಯದಲ್ಲಿ ಮತಭೇದಗಳಿವೆಯಾದರೂ ಋಕ್ಸಂಹಿತೆಯ ಅನೇಕ ಕಡೆಗಳಲ್ಲಿ ಒಂದೇ ವಿಧವಾದ ಅಭಿಪ್ರಾಯವು ಕಾಣುತ್ತದೆ.

**ಆ ನಾಸತ್ಯಾ ತ್ರಿಭಿರೇಕಾದಶೈರಿಹ ದೇವೇಭಿರ್ಯಾತಂ ಮಧುಪೇಯಮಶ್ವಿನಾ ।**

(ಋ. ಸಂ. ೧-೩೪-೧೧)

(೧೧×೩) ಮೂವತ್ತು ಮೂರು ದೇವತೆಗಳೊಂದಿಗೂ ಮಧುಪಾನವನ್ನಪೇಕ್ಷಿಸಿ ಇಲ್ಲಿಗೆ ಬನ್ನಿರಿ, ಎಂದು ಅಶ್ವಿನೀ ದೇವತೆಗಳನ್ನೂ,

**ತಾನ್ರೋಹಿದಶ್ವ ಗಿರ್ವಣಸ್ತ್ರಯಸ್ತ್ರಿಂಶತಮಾ ವಹ ।**

(ಋ. ಸಂ. ೧-೪೫-೨)

ಮೂವತ್ತುಮೂರು ದೇವತೆಗಳನ್ನೂ ಕರೆದುಕೊಂಡು ಬಾ ಎಂದು ಅಗ್ನಿಯನ್ನೂ,

**ಯೇ ದೇವಾಸೋ ದಿವ್ಯೇಕಾದಶ ಸ್ಥ ಪೃಥಿವ್ಯಾಮಧ್ಯೇಕಾದಶ ಸ್ಥ ।**
**ಅಪ್ಸುಕ್ಷಿತೋ ಮಹಿನೈಕಾದಶಸ್ಥ ತೇ ದೇವಾಸೋ ಯಜ್ಞಮಿಮಂ ಜುಷಧ್ವಂ ।**

(ಋ. ಸಂ. ೧-೧೩೯-೧೧)

ಎಲೈ ದೇವತೆಗಳೇ, (ಒಂದೊಂದರಲ್ಲೂ) ದ್ಯುಲೋಕದಲ್ಲಿಯೂ, ಪೃಥಿವ್ಯಂತರಿಕ್ಷಲೋಕಗಳಲ್ಲಿಯೂ ಕ್ರಮವಾಗಿ ಹನ್ನೊಂದು ಸಂಖ್ಯೆಯಲ್ಲಿ ವಿಭಕ್ತರಾಗಿರುವ ನೀವೆಲ್ಲಾ ಒಟ್ಟಿಗೆ ಸೇರಿ ನಮ್ಮ ಯಜ್ಞಕ್ಕೆ ಬಂದು ಅದನ್ನು ಸೇವಿಸಿರಿ ಎಂದು ಸಕಲ ದೇವತೆಗಳನ್ನೂ ಸಾಕ್ಷಾತ್ತಾಗಿಯೂ ಪ್ರಾರ್ಥಿಸಿದೆ. ಹೀಗೆಂಬುದಾಗಿ ಮೇಲೆ ಉದಹರಿಸಿರುವ ಋಕ್ಕುಗಳಲ್ಲಿಯೂ ಹೀಗೆಯೇ ಇನ್ನೂ ಋ. ಸಂ. ೩-೬-೯ ; ೭-೨೮-೧; ೮-೩೦-೨; ೮-೩೫-೩ ; ೯-೯೨-೪ ಇತ್ಯಾದಿ ಋಕ್ಕುಗಳಲ್ಲಿಯೂ ಸಹ ದೇವತೆಗಳ ಸಂಖ್ಯೆಯು ಮೂವತ್ತುಮೂರೆಂಬುದು ಸ್ಪಷ್ಟವಾಗಿದೆ. ಶತಪಥಬ್ರಾಹ್ಮಣ ದಲ್ಲಿಯೂಸಹ,

**ಅಷ್ಟೌ ವಸವಃ । ಏಕಾದಶ ರುದ್ರಾಃ ದ್ವಾದಶಾದಿತ್ಯಾ ಇಮೇ ಏವ ದ್ಯಾವಾಪೃಥಿವೀ ತ್ರಯಸ್ತ್ರಿಂಶದ್ವೈ ದೇವಾಃ ಪ್ರಜಾಪತಿಶ್ಚತುಸ್ತ್ರಿಂಶಃ ।** ಎಂಟು ವಸುಗಳೂ ಹನ್ನೊಂದು ರುದ್ರರೂ ಹನ್ನೆರಡು ಆದಿತ್ಯರೂ ಮತ್ತು ದ್ಯಾವಾಪೃಥಿವಿಗಳೂ ಸಹ ಸೇರಿ ಮೂವತ್ತುಮೂರು ದೇವತೆಗಳು. ಪ್ರಜಾಪತಿಯು ಇವರಲ್ಲಿಯೇ

ಮೂವತ್ತುನಾಲ್ಕನೆಯವನು, ಎಂದು ಒಂದುಕಡೆ ಹೇಳಿದೆ (ಶ. ಬ್ರಾ. ೪-೫-೭-೨) ಆದರೆ ಇನ್ನೊಂದು ಸ್ಥಳದಲ್ಲಿ ಅದೇ ಮುವತ್ತುಮೂರು ಸಂಖ್ಯೆಯಿದ್ದರೂ ಸಹ **ದ್ಯಾವಾಪೃಥಿವಿಗಳಿಗೆ** ಬದಲಾಗಿ **ಇಂದ್ರನನ್ನೂ ಪ್ರಜಾಪತಿಯನ್ನೂ** ಸೇರಿಸಿದೆ.

**ತೇ ತ್ರಯಸ್ತ್ರಿಂಸದಿತ್ಯಷ್ಟೌ ವಸವ ಏಕಾದಶರುದ್ರಾ ದ್ವಾದಶಾದಿತ್ಯಾಸ್ತ ಏಕತ್ರಿಂಶದಿಂದ್ರಶ್ಚೈವ ಪ್ರಜಾಪತಿಶ್ಚ ತ್ರಯಸ್ತ್ರಿಂಶಾವಿತಿ ।**

(ಶ. ಬ್ರಾ. ೧೧-೬-೩-೫)

ಐತರೇಯ ಬ್ರಾಹ್ಮಣದಲ್ಲೂ ಸಹ—

**ತ್ರಯಸ್ತ್ರಿಂಶದ್ವೈ ದೇವಾಃ ಸೋಮಪಾಸ್ತ್ರಯಸ್ತ್ರಿಂಶದ ಸೋಮಪಾ ಅಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಃ ಪ್ರಜಾಪತಿಶ್ಚ ವಷಟ್ಕಾರಶ್ಚೈತೇ ದೇವಾಃ ಸೋಮಪಾಃ ।**

(ಐ. ಬ್ರಾ. ೨-೧೮)

ಸೋಮಪಾನವನ್ನು ಮಾಡತಕ್ಕವರು ಮೂವತ್ತುಮೂರು ದೇವತೆಗಳು. ಅವರು ಅಷ್ಟವಸುಗಳು, ಏಕಾದಶ ರುದ್ರರು ಮತ್ತು ದ್ವಾದಶಾದಿತ್ಯರು ಇವರೊಂದಿಗೆ ಪ್ರಜಾಪತಿ ಮತ್ತು ವಷಟ್ಕಾರ. ಹೀಗೆ ಸಂಹಿತೆಯಲ್ಲಿಯೂ ಬ್ರಾಹ್ಮಣಗಳಲ್ಲಿಯೂ ಈ ಸಂಖ್ಯೆಯ ವಿಷಯದಲ್ಲಿ ಒಂದೇ ಅಭಿಪ್ರಾಯವಿದೆ. ಆದರೆ,

**ತ್ರೀಣಿ ಶತಾ ತ್ರೀ ಸಹಸ್ರಾಣ್ಯಗ್ನಿಂ ತ್ರಿಂಶಚ್ಚ ದೇವಾ ನವ ಚಾಸಪರ್ಯನ್ ।**

(ಋ. ಸಂ. ೩-೯-೯)

ಎಂಬ ಋಕ್ಕಿನಲ್ಲಿಯೂ ಇದರಂತೆಯೇ ಋ. ಸಂ. ೧೦-೫೨-೬ನೇ ಋಕ್ಕಿನಲ್ಲಿಯೂ ಸಹ ಮೂರು ಸಾವಿರದ ಮುನ್ನೂರ ಒಂಭತ್ತು ದೇವತೆಗಳು ಅಗ್ನಿಯನ್ನು ಪೂಜಿಸಿದರೆಂದು ಹೇಳಿದೆ. ವಾಜಸನೇಯ ಸಂಹಿತೆಯಲ್ಲಿಯೂ (೩೩-೭) ಇದೇ ಆನುಪೂರ್ವಿಯಿದೆ. ಇದೂ ಅಲ್ಲದೇ

**ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ ನಮೋ ಯುವಭ್ಯೋ ನಮ ಆಶಿನೇಭ್ಯಃ ।**

(ಋ. ಸಂ. ೧-೨೭-೧೩)

ಅತ್ಯಧಿಕವಾದ ಗುಣಗಳುಳ್ಳವರೂ, ನ್ಯೂನವಾದ ಗುಣವುಳ್ಳವರೂ, ತರುಣರೂ, ವೃದ್ಧರೂ ಆದ ಸಕಲವಿಧವಾದ ದೇವತೆಗಳಿಗೂ ನಮಸ್ಕಾರವೆಂದು ಹೇಳುವಾಗ ದೇವತೆಗಳಲ್ಲಿ ಸ್ವರೂಪವೈವಿಧ್ಯವಿದೆಯೆಂದು ತಿಳಿಯುತ್ತದೆ. ಈ ಋಕ್ಕನ್ನೇ ಐತರೇಯ ಬ್ರಾಹ್ಮಣದಲ್ಲೂ ಸಹ ( ೭-೧೬ ) ಶುನಶ್ಶೇಪೋಪಾಖ್ಯಾನದಲ್ಲಿ ವಿಶ್ವೇದೇವಪ್ರಾರ್ಥನಾಸಂದರ್ಭದಲ್ಲಿ ಪಠಿಸಿದೆ. ಆದರೆ,

**ನಹಿ ವೋ ಅಸ್ತ್ಯರ್ಭಕೋ ದೇವಾಸೋ ನ ಕುಮಾರಕಃ । ವಿಶ್ವೇ ಸತೋ ಮಹಾಂತ ಇತ್ ॥**

(ಋ. ಸಂ. ೮-೩೦-೧)

ಎಂಬಲ್ಲಿ ದೇವತೆಗಳ ಮಧ್ಯೆ ದೊಡ್ಡವರು ಚಿಕ್ಕವರು ಎಂಬ ಭೇದವೇ ಇಲ್ಲ. ಸಕಲ ದೇವತೆಗಳೂ ಮಹಾತ್ಮರೇ ಆಗಿದ್ದಾರೆ ಎಂಬ ಪ್ರಶಂಸೆಯಿದೆ. ಇಂತಹ ಮಾಹಾತ್ಮ್ಯವುಳ್ಳ ಸಕಲದೇವತೆಗಳನ್ನೂ ಉದ್ದೇಶಿಸಿ ತ್ರಿತನು ಪ್ರಕೃತವಾದ ಋಕ್ಕಿನಲ್ಲಿ ಪ್ರಾರ್ಥಿಸಿದ್ದಾನೆ. ಅವನ ಪ್ರಾರ್ಥನೆಯು ಋತದ ಪಾಲಕರೂ ಶತ್ರುನಾಶಕರೂ ಆದ ಆ ದೇವತೆಗಳಲ್ಲಿ ತನಗೆ ಸಹಾಯಮಾಡಲಿಲ್ಲವೆಂಬ ಆಕ್ಷೇಪರೂಪವಾದುದೂ ಮತ್ತು ಪರಿದೇವನಾರೂಪವಾದದ್ದೂ ಆಗಿದೆ. ಆದುದರಿಂದಲೇ **ವಃ ಋತಂ ಕತ್ ; ತತ್ ಪ್ರಶ್ನಾ ವಃ ಆಹುತಿಃ ಕ್ವ** ಎಂದು ಪ್ರಶ್ನೆಯ ರೂಪದಲ್ಲಿದೆ.

**ಪ್ರಶ್ನಾ—ಚಿರಕಾಲೀನಾ ; ಮಯಾ ಪೂರ್ವಮನುಷ್ಠಿತೋ ಯಾಗಃ** ನಾನು ಹಿಂದೆಲ್ಲಾ ನೆರವೇರಿಸಿದ ಯಜ್ಞಾಹುತಿಯು ನಿಮಗೆ ತಲಪಲಿಲ್ಲವೇ ? **ಈದೃಗ್ಭೂತದುಃಖಾನುಭವೇನ ಮಯಾ ಪೂರ್ವಮನುಷ್ಠಿತೋ ಯಾಗಸಮೂಹೋ ಯುಷ್ಮಾನ್ನಪ್ರಾಪ್ನೋದಿತ್ಯನುಮಿಮೇ ।** ನಾನು ಈ ವಿಧವಾದ ದುಃಖವನ್ನು ಅನುಭವಿಸುವುದರಿಂದ ನನ್ನ ಹಿಂದಿನ ಯಜ್ಞಾಹುತಿಗಳೆಲ್ಲಾ ನಿಮ್ಮನ್ನು ತಲಪಲಿಲ್ಲವೆಂದೇ ಊಹಿಸುತ್ತೇನೆ. ಅವು ತಲಪಿದ್ದ ಪಕ್ಷದಲ್ಲಿ ಮಹಾತ್ಮರಾದ ನೀವು ನನಗೆ ಖಂಡಿತವಾಗಿಯೂ ಅನುಗ್ರಹಿಸುತ್ತಿದ್ದಿರೆಂಬ ಅಭಿಪ್ರಾಯ.

॥ ವ್ಯಾಕರಣಪ್ರಕ್ರಿಯಾ ॥

**ಸ್ಥನ**—ಅಸ ಭುವಿ. ಧಾತು. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ **ಲೋಟೋಲಙ್ವತ್**—(ಪಾ. ಸೂ. ೩-೪-೮೫) ಎಂಬುದರಿಂದ **ತಸ್ಥಸ್ಥ**—(ಪಾ. ಸೂ. ೩-೪-೧೦೧) ಎಂಬುದರಿಂದ ಥಪ್ರತ್ಯಯಕ್ಕೆ ತಾದೇಶ. **ಸಾರ್ವಧಾತುಕಮಪಿತ್**—(ಪಾ. ಸೂ. ೧-೨-೪) ಎಂಬುದರಿಂದ ಅದಕ್ಕೆ ಙಿತ್ತ್ವಾತಿದೇಶವಿರುವುದರಿಂದ **ಶ್ನಸೋರಲ್ಲೋಪಃ**—(ಪಾ. ಸೂ. ೬-೪-೧೧೧) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. **ತಪ್ತನಪ್ತನಥನಾಶ್ಚ**—(ಪಾ. ಸೂ ೭-೧-೪೫) ಎಂಬುದರಿಂದ ತ ಎಂಬುದಕ್ಕೆ ಥನಾದೇಶ. ಯಚ್ಛಬ್ದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್**—(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರಪ್ರತಿಷೇಧ ಬರುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ತ್ರಿಷು—ಸಾವೇಕಾಚಸ್ತೃತೀಯಾದಿಃ**—(ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ದಿವಃ—ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಕತ್**— ಕ್ವ ಶಬ್ದ. ಛಂದಸ್ಸಿನಲ್ಲಿ ವರ್ಣವ್ಯತ್ಯಯದಿಂದ ಕತ್ ಎಂದು ರೂಪವಾಗಿದೆ.

**ಅನೃತಮ್**— ನ ಋತಮ್. ಅನೃತಮ್. **ನ ಲೋಪೋ ನಞಃ**—(ಪಾ. ಸೂ. ೬-೩-೭೩) ಎಂಬುದರಿಂದ ನಞಿನ ನಕಾರಕ್ಕೆ ಲೋಪ ಬಂದಾಗ **ತಸ್ಮಾನ್ನುಡಚಿ**—(ಪಾ. ಸೂ. ೬-೩-೭೪) ಎಂಬುದರಿಂದ ಪರದ ಅಚಿಗೆ ನುಡಾಗಮ. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ. ॥ ೫ ॥

। ಸಂಹಿತಾಪಾಠಃ ।

ಕದ್ವ ಋತಸ್ಯ ಧರ್ಣಸಿ ಕದ್ವರುಣಸ್ಯ ಚಕ್ಷಣಂ ।
ಕದರ್ಯಮ್ಣೋ ಮಹಸ್ಪಥಾತಿ ಕ್ರಾಮೇಮ ದೂಢ್ಯೋ ವಿತ್ತಂ
ಮೇ ಅಸ್ಯ ರೋದಸೀ ॥ ೬ ॥

ಪದಪಾಠಃ

ಕತ್ । ವಃ । ಋತಸ್ಯ । ಧರ್ಣಸಿ । ಕತ್ । ವರುಣಸ್ಯ । ಚಕ್ಷಣಂ ।
ಕತ್ । ಅರ್ಯಮ್ಣಃ । ಮಹಃ । ಪಥಾ । ಅತಿ । ಕ್ರಾಮೇಮ । ದುಃऽಧ್ಯಃ ।
ವಿತ್ತಂ । ಮೇ । ಅಸ್ಯ । ರೋದಸೀ ಇತಿ ॥ ೬ ॥

॥ ಸಾಯಣಭಾಷ್ಯಂ ॥

ಹೇ ದೇವಾ ವೋ ಯುಷ್ಮಾಕಂ ಸಂಬಂಧಿನ ಋತಸ್ಯ ಸತ್ಯಸ್ಯಾಭಿಮತಫಲಪ್ರಾಪಣಸ್ಯ ಧರ್ಣಸಿ ಧಾರಣಂ ಕತ್ । ಕುತ್ರ ಗತಂ । ವರುಣಸ್ಯಾನಿಷ್ಟನಿವಾರಕಸ್ಯ ದೇವಸ್ಯ ಚಕ್ಷಣಮನುಗ್ರಹದೃಷ್ಟ್ಯಾ ಪ್ರದರ್ಶನಂ ಕತ್ । ಕ್ವ ಗತಂ । ಮಹೋ ಮಹತೋ ಮಹಾನುಭಾವಸ್ಯಾರ್ಯಮ್ಣೋಽರೀಣಾಂ ನಿಯಂತುರೇತತ್ಸಂಜ್ಞಕಸ್ಯ ದೇವಸ್ಯ ಸಂಬಂಧಿನಾ ಪಥಾ ಶೋಭನಮಾರ್ಗೇಣೇಷ್ಟದೇಶಪ್ರಾಪಣಂ ಕತ್ । ಕ್ವ ಗತಂ । ಏತತ್ಸರ್ವಂ ಯುಷ್ಮಾಸ್ವೇವ ವರ್ತತೇ । ನ ಕುತ್ರಾಪಿ ಗತಂ । ಅತೋ ವಯಂ ದೂಢ್ಯೋ ದುರ್ಧಿಯಃ ಪಾಪಬುದ್ಧೀನಸ್ಮದನಿಷ್ಟಾಚರಣಪರಾಞ್ ಶತ್ರೂನತಿ ಕ್ರಾಮೇಮ । ಅತಿತರೇಮ । ತೈಃ ಕೃತಾದಸ್ಮಾತ್ಕೂಪಪಾತಲಕ್ಷಣಾದ್ದುಃಖಾದ್ವಿಯುಕ್ತಾ ಭವೇಮ । ಹೇ ದ್ಯಾವಾಪೃಥಿವ್ಯೌ ಮದೀಯಮಿದಂ ಜಾನೀತಂ । ಧರ್ಣಸಿ । ಧೃಞ್ ಧಾರಣೇ । ಸಾನಸಿಧರ್ಣಸಿಪರ್ಣಸೀತ್ಯಾದಿನಾ । ಉ. ೪–೧೦೭ । ಅಸಿಪ್ರತ್ಯಯಾಂತೋ ನಿಪಾತ್ಯತೇ । ಅರ್ಯಮ್ಣಃ । ಷಷ್ಠ್ಯೇಕವಚನೇಽಲ್ಲೋಪೋಽನ ಇತ್ಯಕಾರಲೋಪಃ । ಉದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವಂ । ಮಹಃ । ಮಹತೋಽಚ್ಛಬ್ದಲೋಪಶ್ಛಾಂದಸಃ । ಯದ್ವಾ । ಮಹ ಪೂಜಾಯಾಂ । ಕ್ವಿಪ್ । ಉಭಯಥಾಪಿ ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ದೂಢ್ಯಃ । ಪೃಷೋದರಾದಿಃ । ಧ್ಯೈ ಚೇತಿ ತತ್ರ ಪಾಠಾದ್ದುರೋ ರೇಫಸ್ಯೋತ್ವಂ । ಉತ್ತರಪದಾದೇಃ ಷ್ಟುತ್ವಂ ಚ । ಉದಾತ್ತಸ್ವರಿತಯೋರ್ಯಣ ಇತಿ ಸ್ವರಿತತ್ವಂ ॥

॥ ಪ್ರತಿಪದಾರ್ಥ ॥

(ಎಲೈ ದೇವತೆಗಳೇ) । **ವಃ**—ನಿಮ್ಮ । **ಋತಸ್ಯ**—(ಇಷ್ಟಾರ್ಥವನ್ನು ಹೊಂದಿಸುವ) ಸತ್ಯದ । **ಧರ್ಣಸಿ**-ಆಚರಣೆಯು । **ಕತ್**—ಎಲ್ಲಿ ಹೋಯಿತು ? **ವರುಣಸ್ಯ**—(ಅನಿಷ್ಟವನ್ನು ತಡೆಯುವ) ವರುಣದೇವನ । **ಚಕ್ಷಣಂ**-ಉಪಕಾರ ದೃಷ್ಟಿಯು । **ಕತ್**—ಎಲ್ಲಿ ಹೋಯಿತು । **ಮಹಃ**—ಮಹಾನುಭಾವನೂ । **ಅರ್ಯಮ್ಣಃ**—(ಶತ್ರುಗಳನ್ನು ನಿರೋಧಿಸುದವನೂ ಆದ) ಅರ್ಯಮನ । **ಪಥಾ**—(ಇಷ್ಟ ಪ್ರಾಪಕವಾದ) ಮಾರ್ಗವು । **ಕತ್**—ಎಲ್ಲಿ ? (ಇವೆಲ್ಲವೂ ನಿಮ್ಮಲ್ಲಿಯೇ ಇವೆ. ಆದ್ದರಿಂದಲೇ) । (**ವಯಂ**--ನಾವು) । **ದೂಢ್ಯಃ**—ದುಷ್ಟಬುದ್ಧಿಯುಳ್ಳ ಶತ್ರುಗಳನ್ನು । **ಅತಿಕ್ರಾಮೇಮ**—ಜಯಿಸಿ ಮುಂದುವರಿಯಬಲ್ಲೆವು । **ರೋದಸೀ**—ಎಲೈ ದ್ಯಾವಾಪೃಥಿವಿಗಳೇ । **ಮೇ**—ನನ್ನ । **ಅಸ್ಯ**—ಈ ಸ್ತೋತ್ರವನ್ನು ಅಥವಾ ದು!ಖವನ್ನು । **ವಿತ್ತಂ**—ಚೆನ್ನಾಗಿ ಅರಿಯಿರಿ

ಭಾವಾರ್ಥ

ಎಲೈ ದೇವತೆಗಳೇ, ನಮಗೆ ಇಷ್ಟಾರ್ಥವನ್ನು ಹೊಂದಿಸುವ ನಿಮ್ಮ ಸತ್ಯದ ಆಚರಣೆಯು ಎಲ್ಲಿ ಹೋಯಿತು? ವರುಣನ ಉಪಕಾರ ಬುದ್ಧಿಯು ಎಲ್ಲಿ ? ಮಹಾನುಭಾವನಾದ ಅರ್ಯಮನ ಶ್ರೇಷ್ಠವಾದುದೂ ನಮ್ಮ ಅಭೀಷ್ಟವನ್ನು ಹೊಂದಿಸುವುದೂ ಆದ ಮಾರ್ಗವೆಲ್ಲಿ ? ಇವೆಲ್ಲಾ ಶಕ್ತಿಗಳೂ ನಿಮ್ಮನ್ನು ಬಿಟ್ಟು ಬೇರೆ ಎಲ್ಲೂ ಹೋಗಿಲ್ಲ. ನಾವೆಲ್ಲಾ ಅವನ್ನೇ ನಂಬಿಕೊಂಡಿರುವುದರಿಂದ ಖಂಡಿತವಾಗಿಯೂ ದುಷ್ಟರಾದ ಶತ್ರುಗಳನ್ನು ಜಯಿಸಿ ಮುಂದುವರಿಯಬಲ್ಲೆವು. ಎಲೈ ದ್ಯಾವಾಪೃಥಿವಿಗಳೇ; ನನ್ನ ದುಃಖವನ್ನರಿಯಿರಿ. ಮತ್ತು ನನ್ನ ಸ್ತೋತ್ರವನ್ನು ಕೇಳಿ ನನ್ನನ್ನು ಮೇಲಕ್ಕೆತ್ತಿರಿ.

English Translation

Where, deities, is your observance of the truth, where the (benignant) regard of Varuna, where is the path of the mighty Aryaman, (so that) we may overcome the malevolent? Heaven and earth, be conscious of this (my affliction).

॥ ವಿಶೇಷವಿಷಯಗಳು ॥

**ಋತಸ್ಯ ಧರ್ಣಸಿ—ಸತ್ಯಸ್ಯ ಅಭಿಮತಫಲಪ್ರಾಪಣಸ್ಯ ಧಾರಣಂ** । ಯಜ್ಞಕರ್ತರಿಗೆ ಅಭಿಮತ ಫಲವನ್ನು ಹೊಂದಿಸತಕ್ಕುದೂ, ಸತ್ಯರೂಪವಾದದ್ದೂ ಆದ ನಿಮ್ಮ ವ್ರತಧಾರಣವು. **ಕತ್**—ಎಲ್ಲಿ ಹೋಯಿತು ? **ಅಸತ್ಯಭೂತಾಃ ಸ್ಥ** । ನೀವು ಅಸತ್ಯಭೂತರಾದಿರೆಂದು ಸೂಚನೆಯು ಎಂದು ಒಂದು ವಿಧವಾಗಿಯೂ, ಅಥವಾ, **ಋತಶಬ್ದೋಽಪ್ಯತ್ರಾದಿತ್ಯವಚನಃ** । **ಧರ್ಣಸೀತ್ಯಪಿ ಬಲನಾಮ** (ನಿ. ೩-೯) **ಯುಷ್ಮಾಕಂ ಮಧ್ಯೇ ಆದಿತ್ಯಸ್ಯ ಭಕ್ತಾನುಗ್ರಹಸಾಮರ್ಥ್ಯಲಕ್ಷಣಂ ಬಲಂ** । ಇಲ್ಲಿ ಋತ ಶಬ್ದಕ್ಕೆ ಆದಿತ್ಯನೆಂದೂ, ಧರ್ಣಸಿಯೆಂಬ ಪದವು ಬಲ ನಾಮಗಳಲ್ಲಿ ಪಠಿತವಾಗಿರುವುದರಿಂದ ಶಕ್ತಿಯೆಂದೂ ಒಟ್ಟಿನಲ್ಲಿ ಭಕ್ತರಿಗೆ ಅನುಗ್ರಹವನ್ನು ಮಾಡುವ ಸಾಮರ್ಥ್ಯವುಳ್ಳ ಆದಿತ್ಯನ ಬಲವೆಲ್ಲಿ ಹೋಯಿತು ಎಂಬ ಅರ್ಥವೂ ಆಗಬಹುದೆಂದು ಸ್ಕಂದಸ್ವಾಮಿಗಳು ವಿವರಿಸಿದ್ದಾರೆ.

ವರುಣಸ್ಯ — ಅನಿಷ್ಟ ನಿವಾರಕಸ್ಯ ದೇವಸ್ಯ । ಅನಿಷ್ಟವನ್ನು ತಡೆಗಟ್ಟುವುದರಿಂದ ವರುಣನೆಂಬ ಹೆಸರು.

ಅರ್ಯಮ್ಣಃ — ಅರೀಣಾಂ ನಿಯಂತುಃ ಏತತ್ಸಂಜ್ಞಕಸ್ಯ ದೇವಸ್ಯ । ಶತ್ರುಗಳನ್ನು ನಿಗ್ರಹಿಸುವ ಸಾಮರ್ಥ್ಯವುಳ್ಳವನು. **ವರುಣ** ಮತ್ತು **ಅರ್ಯಮ** ಎಂಬ ದೇವತೆಗಳ ಸ್ವರೂಪವನ್ನೂ, ವಿಶ್ವನಿಯಮನಶಕ್ತಿಯನ್ನೂ ಮುಂದಕ್ಕೆ ವಿವರಿಸಲಾಗುತ್ತದೆ.

ಚಕ್ಷಣಂ — ಭಕ್ತಾಭಕ್ತವಿವೇಕಜ್ಞಾನಂ । ಭಕ್ತರಿಗೂ ಅಭಕ್ತರಿಗೂ ವ್ಯತ್ಯಾಸವನ್ನು ತಿಳಿಯುವ ಶಕ್ತಿಯು. ಅಭಕ್ತರನ್ನು ತಿರಸ್ಕರಿಸುವಂತೆ ಈಗ ಭಕ್ತನನ್ನೂ ತಿರಸ್ಕರಿಸಿರುವುದರಿಂದ ಆ ವಿವೇಕವು ಎಲ್ಲಿ ಹೋಯಿತೆಂಬ ಪ್ರಶ್ನೆ. **ಚಕ್ಷಣ** ಶಬ್ದವು ದರ್ಶನವೆಂಬ ಅರ್ಥದ್ಯೋತಕವಾದರೂ ಸಹ ದರ್ಶನಕ್ಕೆ ಆಧಾರವಾದ **ರೂಪವೆಂಬ** ಅರ್ಥದಲ್ಲಿಯೂ ಒಂದುಕಡೆ ಉಪಯೋಗಿಸಲ್ಪಟ್ಟಿದೆ.

ಆಭೂಷೇಣ್ಯಂ ವೋ ಮರುತೋ ಮಹಿತ್ವನಂ ದಿದೃಕ್ಷೇಣ್ಯಂ ಸೂರ್ಯಸ್ಯೇವ ಚಕ್ಷಣಂ ।
(ಋ. ಸಂ. ೫-೫೫-೪)

ಎಂಬ ಋಕ್ಕಿನಲ್ಲಿ ದರ್ಶನೀಯವಾದ **ರೂಪವೆಂದರ್ಥ.** ಪ್ರಕೃತವಾದ ಋಕ್ಕಿನಲ್ಲಿ ವಿವೇಚನೆಯಿಂದ ನೋಡುವ **ದರ್ಶನ ಶಕ್ತಿ**ಯೆಂದು ತಾತ್ಪರ್ಯ.

ದೂಢ್ಯಃ — ದುಷ್ಟಧ್ಯಾನೋಪೇತಾನಾತ್ಮನೋ ಹಿಂಸಕಾಞ್ಛತ್ರೂನ್ । ದುಷ್ಟವಾದ ವಿಷಯಗಳನ್ನೇ ಆಲೋಚಿಸುತ್ತಲೂ ತನಗೆ ಹಿಂಸೆಮಾಡುತ್ತಲೂ ಇರುವ ಶತ್ರುಗಳನ್ನು ಎಂದರ್ಥ. **ದೂಢ್ಯಂ — ದುರ್ಧಿಯಂ । ಪಾಪಧಿಯಂ ।** ಎಂದು ನಿರುಕ್ತಕಾರರು ವಿವರಿಸಿದ್ದಾರೆ. (ನಿ. ೫-೨).

॥ ವ್ಯಾಕರಣಪ್ರಕ್ರಿಯಾ ॥

ಧರ್ಣಸಿ — ಧೃಞ್ ಧಾರಣೇ ಧಾತು. **ಸಾನಸಿ ಧರ್ಣಸಿ ವರ್ಣಸಿ** — (ಉ. ಸೂ. ೪-೫೪೭) ಎಂಬುದರಿಂದ ಅಸಿಚ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಚಿತ್ತಾದುದರಿಂದ **ಚಿತಃ** — (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತವಾಗುತ್ತದೆ.

ಚಕ್ಷಣಮ್ — ಚಕ್ಷಿಙ್ ವ್ಯಕ್ತಾಯಾಂ ವಾಚಿ. ಧಾತು. ಧಾತುಗಳಿಗೆ ಅನೇಕಾರ್ಥವು ಸ್ವೀಕೃತವಾದುದರಿಂದ ಇಲ್ಲಿ ದರ್ಶನಾರ್ಥದಲ್ಲಿ ಪ್ರಯುಕ್ತವಾಗಿದೆ. ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** — ಎಂಬುದರಿಂದ ಅನಾದೇಶ. ಷಕಾರನಿಮಿತ್ತವಿರುವುದರಿಂದ **ಅಟ್ಕುಪ್ವಾಙ್ ನುಮ್ವ್ಯವಾಯೇಽಪಿ** — ಎಂಬುದರಿಂದ ಪ್ರತ್ಯಯ ನಕಾರಕ್ಕೆ ಣತ್ವ. ಪ್ರತ್ಯಯ ಲಿತ್ತಾದುದರಿಂದ **ಲಿತಿ** — (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

ಅರ್ಯಮ್ಣಃ — ಅರ್ಯಮನ್ ಶಬ್ದ. ಷಷ್ಠೀಏಕವಚನದಲ್ಲಿ ಙಸ್ ಪ್ರತ್ಯಯ. **ಅಲ್ಲೋಪೋಽನಃ** (ಪಾ. ಸೂ. ೬-೪-೧೩೪) ಎಂಬುದರಿಂದ ಭಸಂಜ್ಞೆ ಇರುವುದರಿಂದ ಅನಿನ ಅಕಾರಕ್ಕೆ ಲೋಪ. ರೇಫನಿಮಿತ್ತವಿರುವುದರಿಂದ **ಅಟ್ಕುಪ್ವಾಙ್** — ಸೂತ್ರದಿಂದ ನಕಾರಕ್ಕೆ ಣತ್ವ. ಅನುದಾತ್ತಪರವಾದಾಗ ಉದಾತ್ತ ಅಕಾರಲೋಪದ

ವಾದುದರಿಂದ **ಅನುದಾತ್ತಸ್ಯಚ ಯತ್ರೋದಾತ್ತಲೋಪಃ**—(ಪಾ. ಸೂ. ೬-೧-೧೬೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಮಹಃ**—ಮಹತಃ ಎಂದಿರುವಾಗ ಛಾಂದಸವಾಗಿ ಅತಿಗೆ ಲೋಪ ಬರುತ್ತದೆ. ಅಥವಾ ಮಹ ಪೂಜಾಯಾಂ ಧಾತು. ಇದಕ್ಕೆ **ಕ್ವಿಪ್ ಚ**—(ಪಾ. ಸೂ. ೩-೨-೭೬) ಎಂಬುದರಿಂದ ನಿರುಪಪದವಾಗಿದ್ದರೂ ಕ್ವಿಪ್ ಬರುತ್ತದೆ. ಎರಡು ರೀತಿಯಿಂದಲೂ ಏಕಾಚಾದುದರಿಂದ **ಸಾವೇಕಾಚಸ್ತೃತೀಯಾದಿಃ**—(ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಕ್ರಾಮೇಮ**—ಕ್ರಮು ಪಾದವಿಕ್ಷೇಪೇ ಧಾತು. ಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂಙಿತಃ**—ಎಂಬುದರಿಂದ ಅದರ ಸಕಾರಕ್ಕೆ ಲೋಪ. ಶಪ್ ವಿಕರಣ. **ಕ್ರಮಃ ಪರಸ್ಮೈಪದೇಷು** (ಪಾ. ಸೂ. ೭-೩-೭೬) ಎಂಬುದರಿಂದ ಶಿತ್ ಪ್ರತ್ಯಯ ಪರವಾದಾಗ ಉಪಧಾದೀರ್ಘ. **ಯಾಸುಟ್ ಪರಸ್ಮೈ**—(ಪಾ. ಸೂ. ೩-೪-೧೦೩) ಸೂತ್ರದಿಂದ ಯಾಸುಟಾಗಮ. **ಅತೋಯೇಯಃ**—(ಪಾ. ಸೂ. ೭-೨-೮೦) ಎಂಬುದರಿಂದ ಅದಕ್ಕೆ ಇಯಾದೇಶ. **ಲೋಪೋವ್ಯೋರ್ವಲಿ**—ಎಂಬುದರಿಂದ ಯಕಾರಕ್ಕೆ ಲೋಪ. ಗುಣ. ಕ್ರಾಮೇಮ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದೂಢ್ಯಃ**—**ಪೃಷೋದರಾದೀನಿಯಥೋಪದಿಷ್ಟಮ್**—(ಪಾ. ಸೂ. ೬-೩-೧೦೯) ಎಂಬುದರಿಂದ ಇದು ಪೃಷೋದರಾದಿಯಲ್ಲಿ ಪಠಿತವಾದುದರಿಂದ ಅಭಿಮತರೂಪಸಿದ್ಧಿಯಾಗುತ್ತದೆ. **ಧ್ಯೈಚ**—ಎಂದು ಅಲ್ಲಿ ಪಾಠ ಮಾಡಿರುವುದರಿಂದ ದುರಿನ ರೇಫಕ್ಕೆ (ಉಪಸರ್ಗ) ಉತ್ವವೂ ಉತ್ತರಪದದ ಆದಿಗೆ ಷ್ಟುತ್ವವೂ ನಿಪಾತತದಿಂದ ಸಿದ್ಧವಾಗುತ್ತದೆ. ಸವರ್ಣದೀರ್ಘ. ಉದಾತ್ತಸ್ಥಾನದಲ್ಲಿ ಯಣ್ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ**—(ಪಾ. ಸೂ. ೮-೨-೪) ಎಂಬುದರಿಂದ ಸ್ವರಿತಸ್ವರ ಬರುತ್ತದೆ. ॥ ೬ ॥

ಸಂಹಿತಾಪಾಠಃ

ಅಹಂ ಸೋ ಅಸ್ಮಿ ಯಃ ಪುರಾ ಸುತೇ ವದಾಮಿ ಕಾನಿ ಚಿತ್ ।
ತಂ ಮಾ ವ್ಯಂತ್ಯಾಧ್ಯೋ೩ ವೃಕೋ ನ ತೃಷ್ಣಜಂ ಮೃಗಂ
ವಿತ್ತಂ ಮೇ ಅಸ್ಯ ರೋದಸೀ ॥ ೭ ॥

ಪದಪಾಠಃ

ಅ॒ಹಂ । ಸಃ । ಅ॒ಸ್ಮಿ॒ । ಯಃ । ಪು॒ರಾ । ಸು॒ತೇ । ವದಾ॑ಮಿ । ಕಾನಿ॑ । ಚಿ॒ತ್ ।
ತಂ । ಮಾ॒ । ವ್ಯಂ॒ತಿ॒ । ಆ॒ಽಧ್ಯಃ॑ । ವೃಕಃ॑ । ನ । ತೃ॒ಷ್ಣ॑ಽಜಂ । ಮೃ॒ಗಂ । ವಿ॒ತ್ತಂ ।
ಮೇ॒ । ಅ॒ಸ್ಯ । ರೋ॒ದ॒ಸೀ॒ ಇತಿ॑ ॥ ೭ ॥

ಸಾಯಣಭಾಷ್ಯಂ

ಹೇ ದೇವಾಃ ಪುರಾ ಪೂರ್ವಸ್ಮಿನ್ಕಾಲೇ ಸುತೇ ಯುಷ್ಮದ್ಯಾಗಾರ್ಥಂ ಸೋಮೇಽಭಿಷುತೇ ಕಾನಿ ಚಿತ್ ಕತಿಪಯಾನಿ ಸ್ತೋತ್ರಾಣಿ ಯೋಽಹಂ ವದಾಮಿ ಉಕ್ತವಾನಸ್ಮಿ ಸ ಏವಾಹಮಸ್ಮಿ ನ ತ್ವನ್ಯಃ ಕಶ್ಚಿತ್ । ತಸ್ಮಾತ್ಕಿಮರ್ಥಂ ಮಾಂ ಪರಿತ್ಯಜಥ । ತಂ ತಾದೃಶಂ ಮಾಮಾಧ್ಯೋಽಭಿಲಷಿತಪುತ್ರಾದ್ಯ-ಪ್ರಾಪ್ತ್ಯಾ ಜನಿತಾ ಮಾನಸ್ಯೋ ವ್ಯಥಾ ವ್ಯಂತಿ । ಭಕ್ಷಯಂತಿ । ತತ್ರ ದೃಷ್ಟಾಂತಃ । ತೃಷ್ಣಜಂ ಜಾತತೃಷ್ಣಂ ಪಿಪಾಸಂತಮುದಕಂ ಪ್ರತಿ ಗಚ್ಛಂತಂ ಮೃಗಂ ವೃಕೋ ನ । ಯಥಾರಣ್ಯಶ್ವಾ ಮಧ್ಯೇ ಮಾರ್ಗಂ ಭಕ್ಷಯತಿ ತದ್ವತ್ । ಅನ್ಯತ್ಪೂರ್ವವತ್ ॥ ವ್ಯಂತಿ । ವೀ ಗತ್ಯಾದಿಷು । ಅದಾದಿತ್ವಾಚ್ಛಪೋ ಲುಕ್ । ತನ್ವಾದೀನಾಂ ಛಂದಸಿ ಬಹುಲಮುಪಸಂಖ್ಯಾನಮಿತಿ ಬಹುಲವಚನಾದ್ಯಣ್ । ಆಧ್ಯಃ । ಆಧೀಯತೇ ಮನಸಿ ಸ್ಥಾಪ್ಯತ ಇತ್ಯಾಧಿಃ । ಉಪಸರ್ಗೇ ಘೋಃ ಕಿಃ । ಪಾ. ೩-೨-೯೨ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ । ಜಸಾದಿಷು ಛಂದಸಿ ವಾವಚನಮಿತಿ ಜಸಿ ಚೇತಿ ಗುಣಸ್ಯ ವಿಕಲ್ಪನಾದಭಾವೇ ಯಣಾದೇಶಃ । ತೃಷ್ಣಜಂ । ತೃಷ ಪಿಪಾಸಾಯಾಂ । ಸ್ವಪಿತೃಷೋರ್ನಜಿಙ್ । ಪಾ. ೩-೨-೧೭೨ । ಇತಿ ನಜಿಙ್ । ಪದಕಾರಸ್ತ್ವೇವಂ ಮನ್ಯತೇ । ಅನ್ಯೇಷ್ವಪಿ ದೃಶ್ಯತ ಇತಿ ದೃಶಿಗ್ರಹಣಸ್ಯ ಸರ್ವೋಪಾಧಿವ್ಯಭಿ-ಚಾರಾರ್ಥತ್ವಾತ್ಕೇವಲಾದಪಿ ಜನೇರ್ಡಪ್ರತ್ಯಯಃ । ತೃಷ್ಣಾ ಜಾತಾ ಯಸ್ಯ । ಙ್ಯಾಪೋಃ ಸಂಜ್ಞಾಛಂದ-ಸೋರ್ಬಹುಲಮಿತಿ ಹ್ರಸ್ವತ್ವಂ ॥

ಪ್ರತಿಪದಾರ್ಥ

ಪುರಾ—(ಎಲೈ ದೇವತೆಗಳಿರಾ) ಹಿಂದೆ । ಸುತೇ—(ನಿಮ್ಮನ್ನು ಉದ್ದೇಶಿಸಿದ ಯಾಗಕ್ಕಾಗಿ) ಸೋಮರಸವನ್ನು ಹಿಂಡುವಾಗಲೆಲ್ಲಾ । ಕಾನಿ ಚಿತ್—ಹಲವು ಸ್ತೋತ್ರಗಳನ್ನು । ಯಃ ಅಹಂ—ಯಾವ ನಾನು । ವದಾಮಿ—ಪಠಿಸುತ್ತಿದ್ದೆನೆಯೋ । ಸಃ—ಅದೇ ನಾನೇ (ನಿಮಗೆ ತೋರುತ್ತಿದ್ದೇನೆ) । ಅಸ್ಮಿ—(ಈಗಲೂ ನಿಮ್ಮ ಭಕ್ತನಾಗಿ) ಇದ್ದೇನೆ । (ಆದರೂ ಸಹ) ತಂ ಮಾ—ಆ ನನ್ನನ್ನು । ತೃಷ್ಣಜಂ—ಬಾಯಾರಿಕೆಯುಳ್ಳ (ನೀರು ಕುಡಿಯಲು ಹೋಗುವ) । ಮೃಗಂ—ಜಿಂಕೆಯನ್ನು । ವೃಕೋ ನ—ತೋಳವು ಮೇಲೆ ಬಿದ್ದು ತಿನ್ನುವಂತೆ । ಆಧ್ಯಃ—ಮಾನಸಿಕವಾದ ವ್ಯಥೆಗಳು । ವ್ಯಂತಿ—ಆಕ್ರಮಿಸಿ ತಿನ್ನುತ್ತಿವೆ. । ರೋದಸೀ—ಎಲೈ ದ್ಯಾವಾಪೃಥಿವಿಗಳೇ । ಮೇ—ನನ್ನ । ಅಸ್ಯ—ಈ ಸ್ತೋತ್ರವನ್ನು [illegible] । ವಿತ್ತಂ—ಚೆನ್ನಾಗಿ ತಿಳಿಯಿರಿ. ।

ಭಾವಾರ್ಥ

ಎಲೈ ದೇವತೆಗಳೇ, ಹಿಂದೆ ನಿಮ್ಮನ್ನು ಉದ್ದೇಶಿಸಿದ ಯಾಗಕ್ಕಾಗಿ ಸೋಮರಸವನ್ನು ಹಿಂಡುವಕಾಲದಲ್ಲೆಲ್ಲಾ ಉಪಯುಕ್ತವಾದ ಸ್ತೋತ್ರವನ್ನು ಪಠಿಸಿದ ಅದೇ ನಾನೇ ಈಗಲೂ ನಿಮ್ಮ ಭಕ್ತನಾಗಿದ್ದೇನೆ. ನಿಮಗೆ ಮೊರೆಯಿಡುತ್ತಿರುವವನು ಇನ್ನಾರೂ ಅಲ್ಲದೇ ನಾನೇ ಆಗಿದ್ದೇನೆ. ಆದರೂ ಸಹ ಭಕ್ತನಾದ ನನ್ನನ್ನು ಬಾಯಾರಿಕೆಯಿಂದ ನೀರು ಕುಡಿಯಲು ಹೋದ ಜಿಂಕೆಯನ್ನು ತೋಳನು ಮೇಲೆ ಬಿದ್ದು ತಿಂದುಬಿಡುವಂತೆ ಮಾನಸಿಕವಾದ ವ್ಯಥೆಗಳು ಆಕ್ರಮಿಸಿ ತಿನ್ನುತ್ತಿವೆ. ಎಲೈ ದ್ಯಾವಾಪೃಥಿವಿಗಳೇ, ನನ್ನ ದುಃಖವನ್ನರಿತು ನನ್ನ ಸ್ತೋತ್ರವನ್ನು ಕೇಳಿ ನನ್ನನ್ನು ದುಃಖದಿಂದ ಪಾರುಮಾಡಿರಿ.

English Translation

I am he, Gods, who formerly recited (your praise) when the libation was poured out, yet sorrows, assail me, like a wolf (that falls upon) a thirsty deer. Heaven and earth, be conscious of this (my affliction).

॥ ವಿಶೇಷವಿಷಯಗಳು ॥

**ಯಃ ಅಹಂ ವದಾಮಿ ಸೋಽಸ್ಮಿ—ವದಾಮಿ ಉದಿತವಾನ್** । ಹಿಂದೆ ಯಾಗಾರ್ಥವಾಗಿ ಸೋಮರಸವನ್ನು ಹಿಂಡುವಾಗಲೆಲ್ಲಾ ನಿಮಗೆ ಪ್ರೀತಿಕರವಾದ ಸ್ತೋತ್ರಗಳನ್ನು ಪಠಿಸುತ್ತಿದ್ದ **ತ್ರಿತನೇ** ನಾನು ಎಂದು ದೇವತೆಗಳಿಗೆ ತಾನು ಹಿಂದೆ ಅವರನ್ನು ಆರಾಧಿಸುತ್ತಿದ್ದುದನ್ನೂ, ಅವರಿಗೆ ಹರ್ಷದಾಯಕನಾಗಿದ್ದುದನ್ನೂ ಜ್ಞಾಪಿಸುತ್ತಾನೆ. ಸೋಮರಸವನ್ನು ಹಿಂಡುವುದರಲ್ಲಿಯೂ, ಸ್ತುತಿರೂಪವಾದ ಮಂತ್ರಗಳನ್ನು ಪಠಿಸುವುದರಲ್ಲಿಯೂ ತ್ರಿತನು ಅತ್ಯಂತ ಪ್ರಸಿದ್ಧನೆಂದು ಅನೇಕ ಆಧಾರಗಳಿಂದ ತಿಳಿಯುತ್ತದೆ.

**ಸ ತತ್ರ ಸುಷುವೇ ಸೋಮಂ ಮಂತ್ರವಿನ್ಮಂತ್ರವಿತ್ತಮಃ ।**

(ಬೃ. ದೇ. ೩-೧೩೩)

ಮಂತ್ರವಿತ್ತುಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠನಾದ ತ್ರಿತನು ಸೋಮರಸವನ್ನು ಹಿಂಡಿ ಯಾಗಕ್ಕೆ ಸಿದ್ಧನಾದನೆಂದು ಬೃಹದ್ದೇವತೆಯಲ್ಲಿ ಅವನ ಮಹಿಮೆಯನ್ನು ವರ್ಣಿಸಿ, ಈ ಮಹತ್ತ್ವಪೂರಿತವಾದ ಯೋಗ್ಯತೆಯನ್ನು ಅವನು ಪ್ರಕಾಶಪಡಿಸಿದುದರಿಂದಲೇ ಬೃಹಸ್ಪತಿಯು ಅವನ ಪರಿದೇವನಾಕಾಲದಲ್ಲಿ,

**ಬೃಹಸ್ಪತಿಸ್ತ್ರಿತಸ್ಯೈತದ್ ಜ್ಞಾನಂ ವಿಜ್ಞಾನಮೇವ ಚ ।**
**ತೃಚೇನಾಂತ್ಯೇನ ಸೂಕ್ತಸ್ಯ ಜಗಾದರ್ಷಿರಸಾವಿತಿ ।**

(ಬೃ. ದೇ. ೩-೧೩೭)

ಜ್ಞಾನದಿಂದಲೂ ವಿಜ್ಞಾನಪ್ರಭಾವದಿಂದಲೂ ಪೂರಿತನಾದ ಅವನ ಸ್ತುತಿಯನ್ನು ಒಪ್ಪನೆಯೇ ತಿಳಿದುಕೊಂಡು ಇತರ ಋಷಿಗಳಿಗೂ ಆ ಋಷಿಯು ಮಹತ್ತ್ವಪೂರಿತವಾದುದೂ ಸ್ತುತಿಯಿಂದ ಕೂಡಿದುದೂ ಆದ ಮಾನಸಿಕವಾದ ಯಜ್ಞದ ವಿಷಯವನ್ನು ತಿಳಿಸಿದನೆಂದು ಹೇಳಿದೆ. ಸ್ಕಂದಸ್ವಾಮಿಗಳ ಭಾಷ್ಯದಲ್ಲೂ ಸಹ ಅವನ ಯೋಗೈಶ್ವರ್ಯದ ಮಹಿಮೆ

ಯನ್ನು ತಿಳಿಸಿದೆ. ಇಂತಹ ಶ್ರೇಷ್ಠವಾದ ಯೋಗ್ಯತೆಯುಳ್ಳ ತ್ರಿತನು ಹಿಂದೆಲ್ಲಾ ಸೋಮರಸವನ್ನು ಹಿಂಡಿ ಯಾಗ ಮಾಡಿರುವುದೂ, ಆ ಕಾಲದಲ್ಲಿ ಅತ್ಯತಿಶಯವಾದ ಸ್ತೋತ್ರಗಳನ್ನು ಪಠಿಸಿರುವುದೂ ಋಕ್ಸಂಹಿತೆಯಲ್ಲಿಯೇ ವರ್ಣಿಸಲ್ಪಟ್ಟಿದೆ. ಉದಾಹರಣೆಗೆ—

**ಆದೀಂ ತ್ರಿತಸ್ಯ ಯೋಷಣೋ ಹರಿಂ ಹಿನ್ವಂತ್ಯದ್ರಿಭಿಃ ।**
(ಋ. ಸಂ. ೯-೩೨-೨)

**ಭುವತ್ತ್ರಿತಸ್ಯ ಮರ್ಜ್ಯೋ ಭುವದಿಂದ್ರಾಯ ಮತ್ಸರಃ ।**
(ಋ. ಸಂ. ೯-೩೪-೪)

ಇತ್ಯಾದಿ ಋಕ್ಕುಗಳಲ್ಲಿ ತ್ರಿತನು ಹಿಂಡಿದ ಸೋಮರಸವು ಇಂದ್ರನಿಗೆ ಹರ್ಷದಾಯಕವಾಗಿ ಅವನ ಪ್ರಭಾವವನ್ನು ಹೆಚ್ಚಿಸಿತೆಂದೂ,

**ಸ ತ್ರಿತಸ್ಯಾಧಿ ಸಾನವಿ ಪವಮಾನೋ ಅರೋಚಯತ್ । ಜಾಮಿಭಿಃ ಸೂರ್ಯಂ ಸಹ ॥**
(ಋ. ಸಂ. ೯-೩೭-೪)

ಇತ್ಯಾದಿ ಋಕ್ಕುಗಳಲ್ಲಿ ತ್ರಿತನ ಯಜ್ಞಕಾಲದಲ್ಲಿ ಹಿಂಡಿ ಪವಿತ್ರಗಳಾದ ಸೋಮರಸಗಳು ಸೂರ್ಯನನ್ನು ಅತಿಶಯವಾಗಿ ಪ್ರಕಾಶಿಸುವಂತೆ ಮಾಡಿದವು ಎಂದೂ,

**ಅಸ್ಯ ಸುವಾನಸ್ಯ ಮಂದಿನಸ್ತ್ರಿತಸ್ಯ ನ್ಯರ್ಬುದಂ ವಾವೃಧಾನೋ ಅಸ್ತಃ ।**
**ಅವರ್ತಯತ್ಸೂರ್ಯೋ ನ ಚಕ್ರಂ ಭಿನದ್ವಲಮಿಂದ್ರೋ ಅಂಗಿರಸ್ವಾನ್ ॥**
(ಋ. ಸಂ. ೨-೧೧-೨೦)

**ಅನು ತ್ರಿತಸ್ಯ ಯುಧ್ಯತಃ ಶುಷ್ಮಮಾವನ್ನುತ ಕ್ರತುಂ । ಅನ್ವಿಂದ್ರಂ ವೃತ್ರತೂರ್ಯೇ ॥**
(ಋ. ಸಂ. ೮-೭-೨೪)

ಇತ್ಯಾದಿ ಋಕ್ಕುಗಳಲ್ಲಿ ತ್ರಿತನ ಸ್ತೋತ್ರದಿಂದಲೂ, ಅವನು ಅರ್ಪಿಸಿದ ಸೋಮರಸಪಾನದಿಂದಲೂ ಹರ್ಷಿತನಾದ ಇಂದ್ರನು ಅತಿಶಯವಾದ ಪ್ರಭಾವವನ್ನು ಪಡೆದು ಅಸುರರನ್ನು ನಾಶಮಾಡಲು ಶಕ್ತನಾದನೆಂದೂ, ಮರುತ್ತುಗಳೂ, ಇಂದ್ರನೂ ಸಹ ತ್ರಿತನ ಶಕ್ತಿಯ ಸಹಾಯದಿಂದಲೇ ವೃತ್ರಾದಿ ವಧವನ್ನು ಮಾಡಲು ಶಕ್ತರಾದರೆಂದೂ ಸಹ ಬಹಳವಾಗಿ ವರ್ಣಿಸಿದೆ. ಹೀಗೆ ಹಿಂದೆಲ್ಲಾ ತಾನು ದೇವತೆಗಳಿಗೆ ತೃಪ್ತಿಪಡಿಸಿರುವುದನ್ನೂ ಅನೇಕ ವಿಧವಾಗಿ ಸಹಾಯ ಮಾಡಿರುವುದನ್ನೂ ಸಹ ಈಗ ಜ್ಞಾಪಿಸಿ ತಾನು ಕಷ್ಟಕ್ಕೆ ಸಿಕ್ಕಿಕೊಂಡಾಗ ತನಗೆ ಅವರು ಸಹಾಯಮಾಡಬೇಕೆಂದೂ ಪ್ರಾರ್ಥಿಸಿದ್ದಾನೆ.

ತೃಷ್ಣಜಂ—ಜಾತತೃಷ್ಣಂ । ಬಾಯಾರಿಕೆಯಿಂದ ಕೂಡಿದ (ಮೃಗವನ್ನು) ಉಪಮಾನವು ಇಲ್ಲಿ ಊಹಿತವಾಗಿದೆ. ತನ್ನನ್ನು ಜಿಂಕೆಗೂ, ತನ್ನ ಮನೋವ್ಯಾಧಿಯನ್ನು ತೋಳನಿಗೂ ಹೋಲಿಸಿದ್ದಾನೆ.

**ವ್ಯಂತಿ—ವ್ಯದಿರತ್ರ ಖಾದನಾರ್ಥಃ । ಖಾದಂತಿ ।** ವ್ಯಂತಿಯೆಂದರೆ ತಿನ್ನುತ್ತವೆಯೆಂದರ್ಥ, ಅಥವಾ ಮನೋವ್ಯಾಧಿಯು ತನ್ನನ್ನು ಸಾಯಿಸುತ್ತಿದೆಯೆಂದಾದರೂ ಆಗಬಹುದೆಂದು ಸ್ಕಂದಸ್ವಾಮಿಗಳು **ಉದ್ವೇಗೇನ ಮಾರಯಂತೀ ವೇತ್ಯರ್ಥಃ** ಎಂದು ವಿವರಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಅಸ್ಮಿ**—ಅಸ ಭುವಿ. ಧಾತು. ಲಟ್ ಉತ್ತಮಪುರುಷಏಕವಚನದಲ್ಲಿ ಮಸ್ ಪ್ರತ್ಯಯ ಶಪಿಗೆ ಲುಕ್. **ತಿಙಂತತನಿಘಾತಸ್ವರ** ಬರುತ್ತದೆ.

**ಸುತೇ**—ಷುಞ್ ಅಭಿಷವೇ ಧಾತು. **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಧಾತ್ವಾದಿಗೆ ಸತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತ. ಸಪ್ತಮೀ ಏಕವಚನಾಂತರೂಪ.

**ವದಾಮಿ**—ವದ ವ್ಯಕ್ತಾಯಾಂ ವಾಚಿ ಧಾತು. ಲಟ್ ಉತ್ತಮಪುರುಷ ಏಕವಚನರೂಪ. ಯದ್ಯೋಗ ವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಮಿಪ್ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ವ್ಯನ್ತಿ**—ವೀ ಗತ್ಯಾದಿಷು ಧಾತು. ಲಟ್ ಪ್ರಥಮಪುರುಷ ಬಹುವಚನದಲ್ಲಿ **ಝೋಽಂತಃ** ಎಂಬುದರಿಂದ ಝಿಗೆ ಅಂತಾದೇಶ. **ಅದಿಪ್ರಭೃತಿಭ್ಯಃ ಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ಶಪಿಗೆ ಲುಕ್. **ತನ್ವಾದೀನಾಂ-ಛಂದಸಿ ಬಹುಲಮುಪಸಂಖ್ಯಾನಮ್** ಎಂಬಲ್ಲಿ ಬಹುಲವಚನವಿರುವುದರಿಂದ ಇಯಙ್ ಬಾರದೆ ಯಣಾದೇಶ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಆಧ್ಯಃ**—ಆಧೀಯತೇ ಮನಸಿ ಸ್ಥಾಪ್ಯತೇ ಇತಿ ಆಧೀಃ । ಡುಧಾಞ್ ಧಾರಣಪೋಷಣಯೋಃ ಧಾತು. ಇದಕ್ಕೆ ಆಙ್ ಉಪಸರ್ಗ ಉಪಪದವಾಗಿರುವಾಗ **ಉಪಸರ್ಗೇ ಘೋಃ ಕಿಃ** (ಪಾ. ಸೂ. ೩-೩-೯೨) ಎಂಬುದರಿಂದ ಕಿ ಪ್ರತ್ಯಯ. **ದಾಧಾಘ್ವದಾಪ್** (ಪಾ. ಸೂ. ೧-೧-೨೦) ಎಂಬುದರಿಂದ ಧಾರೂಪವಾದುದರಿಂದ ಘು ಸಂಜ್ಞಾ ಬರುತ್ತದೆ. ಕಿ ಎಂಬಲ್ಲಿ **ಲಶಕ್ವತದ್ಧಿತೇ** ಸೂತ್ರದಿಂದ ಕಕಾರಕ್ಕೆ ಇತ್ ಸಂಜ್ಞಾದಿಂದ ಲೋಪ. ಇದು ಪರವಾದಾಗ **ಆತೋ ಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಆಧಿ ಎಂದು ರೂಪವಾಗುತ್ತದೆ. ಇದಕ್ಕೆ ಜಸ್ ಪರವಾದಾಗ **ಜಸಾದಿಷು ಛಂದಸಿವಾ ವಚನಮ್** ಎಂಬುದರಿಂದ ವಿಕಲ್ಪವೆಂಬುದರಿಂದ **ಜಸಿ ಚ** (ಪಾ. ಸೂ. ೭-೩-೧೦೯) ಎಂಬುದರಿಂದ ಗುಣ ಬರುವುದಿಲ್ಲ. ಯಣಾದೇಶ. ಉದಾತ್ತಸ್ಥಾನದಲ್ಲಿ ಯಣ್ ಬಂದು ಅದರ ಪರದಲ್ಲಿ ವಿಭಕ್ತಿ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ** (ಪಾ. ಸೂ. ೮-೨-೪)ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ತೃಷ್ಣಜಂ**—ತೃಷ ಪಿಪಾಸಾಯಾಂ ಧಾತು. **ಸ್ವಪಿತೃಷೋರ್ನಜಿಙ್** (ಪಾ. ಸೂ. ೩-೨-೧೭೨) ಎಂಬುದರಿಂದ ನಜಿಙ್ ಪ್ರತ್ಯಯ **ರಷಾಭ್ಯಾಂ ಣೋ ನಃ ಸಮಾನಪದೇ** (ಪಾ. ಸೂ. ೮-೪-೧) ಎಂಬುದರಿಂದ ಪ್ರತ್ಯಯನಕಾರಕ್ಕೆ ಣತ್ವ. ದ್ವಿತೀಯಾಏಕವಚನಾಂತರೂಪ. ಪ್ರತ್ಯಯಸ್ವರದಿಂದ ನಕಾರೋತ್ತರಾಕಾರ ಉದಾತ್ತವಾಗುತ್ತದೆ. ಪದಕಾರರು ಈ ರೀತಿಯಾಗಿ ಅಭಿಪ್ರಾಯಪಡುತ್ತಾರೆ. ಜನೀ ಪ್ರಾದುರ್ಭಾವೇ ಧಾತು. **ಅನ್ಯೇಷ್ವಪಿ ದೃಶ್ಯತೇ** (ಪಾ. ಸೂ. ೩-೨-೧೦೧) ಎಂಬಲ್ಲಿ ದೃಶಿಗ್ರಹಣದಿಂದ ಎಲ್ಲಾ ವಿಶೇಷಣಗಳನ್ನು ಅತಿಕ್ರಮ

ಸಿಯೂ ಪ್ರತ್ಯಯ ಬರುತ್ತದೆ ಎಂಬುದರಲ್ಲಿ ಜ್ಞಾಪಕವಾದುದರಿಂದ ಕೇವಲವಾದ ಈ ಧಾತುವಿಗೂ ಡ ಪ್ರತ್ಯಯ ಬರುತ್ತದೆ. ಡಿತ್ವಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ತೃಷ್ಣಾ ಜಾತಾ ಯಸ್ಯ ಸಃ ತೃಷ್ಣಜಃ **ಙ್ಯಾಪೋಃ ಸಂಜ್ಞಾಛಂದಸೋರ್ಬಹುಲಂ** (ಪಾ. ಸೂ. ೬-೩-೬೩) ಎಂಬುದರಿಂದ ಛಂದಸ್ಸಿನಲ್ಲಿ ಪೂರ್ವದಲ್ಲಿರುವ ಆಬಂತಕ್ಕೆ (ತೃಷ್ಣಾ) ಹ್ರಸ್ವ ಬರುತ್ತದೆ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

———:o:———

ಸಂಹಿತಾಪಾಠಃ

ಸಂ ಮಾ ತಪಂತ್ಯಭಿತಃ ಸಪತ್ನೀರಿವ ಪರ್ಶವಃ ।
ಮೂಷೋ ನ ಶಿಶ್ನಾ ವ್ಯದಂತಿ ಮಾಧ್ಯಃ ಸ್ತೋತಾರಂ ತೇ
ಶತಕ್ರತೋ ವಿತ್ತಂ ಮೇ ಅಸ್ಯ ರೋದಸೀ ॥ ೮ ॥

ಪದಪಾಠಃ

ಸಂ । ಮಾ । ತಪಂತಿ । ಅಭಿತಃ । ಸಪತ್ನೀಃಽಇವ । ಪರ್ಶವಃ ।
ಮೂಷಃ । ನ । ಶಿಶ್ನಾ । ವಿ । ಅದಂತಿ । ಮಾ । ಆಽಧ್ಯಃ । ಸ್ತೋತಾರಂ । ತೇ ।
ಶತಕ್ರತೋ ಇತಿ ಶತಽಕ್ರತೋ । ವಿತ್ತಂ । ಮೇ । ಅಸ್ಯ । ರೋದಸೀ ಇತಿ ॥

ಸಾಯಣಭಾಷ್ಯಂ

ಐಂದ್ರ್ಯೇಷಾ । ಹೇ ಇಂದ್ರ ಪರ್ಶವಃ ಪಾರ್ಶ್ವಾಸ್ಥೀನಿ । ಅತ್ರ ಸಾಮರ್ಥ್ಯಾತ್ಪರ್ಶುಸ್ಥಾನೀಯಾಃ ಕೂಪಭಿತ್ತಯೋ ಮಾ ಮಾಮಭಿತಃ ಸರ್ವತಃ ಸಂ ತಪಂತಿ । ಸಮ್ಯಕ್ ಪೀಡಯಂತಿ । ತತ್ರ ದೃಷ್ಟಾಂತಃ । ಸಪತ್ನೀರಿವ । ಸಮಾನ ಏಕಃ ಪತಿರ್ಯಾಸಾಂ ತಾಃ ಸಪತ್ನ್ಯಃ । ಯಥೈಕಂ ಪತಿಮಭಿತಃ ಪೀಡಯಂತಿ । ಪರಸ್ಪರಂ ವಾ ಪೀಡಯಂತೇ । ಹೇ ಶತಕ್ರತೋ ಬಹುವಿಧಕರ್ಮನ್ ಬಹುವಿಧಪ್ರಜ್ಞ ನೇಂದ್ರ ತೇ ತವ

ಸ್ತೋತಾರಂ ಮಾಮಾಧ್ಯೋಽಸಂಪದ್ಯಮಾನೈರ್ಯೋಗದಾನಾದಿಭಿರುತ್ಪಾದಿತಾ ಮಾನಸ್ಯಃ ಪೀಡಾ ವ್ಯದಂತಿ। ವಿವಿಧಂ ಭಕ್ಷಯಂತಿ । ತತ್ರ ದೃಷ್ಟಾಂತಃ। ಮೂಷೋ ನ ಯಥಾ ಮೂಷಿಕಾ ಶಿಶ್ನಾ ಶಿಶ್ನಾನಿ ಕುವಿಂದೇನ ವಾಯಿತಾನ್ಯನ್ನರಸೇನಾಲಿಪ್ತಾನಿ ಸೂತ್ರಾಣಿ ಭಕ್ಷಯಂತಿ । ಯದ್ವಾ । ಶಿಶ್ನಶಬ್ದೇನ ಪ್ರಜನನ-ಮೇವೋಚ್ಯತೇ । ತಚ್ಚೋಪಚಾರಾತ್ಪುಚ್ಛೇ ವರ್ತತೇ । ಯಥಾ। ಸ್ವಕೀಯಾನಿ ಪುಚ್ಛಾನಿ ಘೃತತೈಲಾದಿ-ಭಾಂಡೇ ಪ್ರಕ್ಷಿಪ್ಯೋರ್ಧ್ವಮುತ್ಕ್ಷಿಪ್ಯ ವ್ಯದಂತಿ । ಲಿಹಂತೀತ್ಯರ್ಥಃ । ಏವಂ ಮಾಮಾಧಯೋ ಭಕ್ಷ-ಯಂತಿ । ನ ಚೈತತ್ ಹೇ ಇಂದ್ರ ತವ ಸ್ತೋತುರ್ನ್ಯಾಯ್ಯಂ । ತಸ್ಮಾತ್ತ್ವಮಸ್ಮಾನ್ಮುತ್ತಾರಯ । ಅನ್ಯತ್ಸಮಾನಂ ॥ ಅತ್ರ ನಿರುಕ್ತಂ। ಸಂತಪಂತಿ ಮಾಮಭಿತಃ ಸಪತ್ನ್ಯ ಇವೇಮಾಃ ಪರ್ಶವಃ ಕೂಪ-ಪರ್ಶವೋ ಮೂಷಿಕಾ ಇವಾಸ್ನಾತಾನಿ ಸೂತ್ರಾಣಿ ವ್ಯದಂತಿ । ಸ್ವಾಂಗಾಭಿಧಾನಂ ವಾ ಸ್ಯಾತ್ । ಶಿಶ್ನಾನಿ ವ್ಯದಂತೀತಿ । ನಿ. ೪-೬ । ಇತಿ । ಸಪತ್ನೀಃ। ನಿತ್ಯಂ ಸಪತ್ನ್ಯಾದಿಷು । ೪-೧-೩೫ । ಇತಿ ಪತಿಶಬ್ದಸ್ಯ ನಕಾರಾಂತಾದೇಶಃ । ಜಸಃ ಪೂ । ವಾ ಛಂದಸೀತಿ ಪೂರ್ವಸವರ್ಣದೀರ್ಘತ್ವಂ । ಮೂಷಃ ಮುಷ ಸ್ತೇಯೇ। ಕ್ವಿಪಿ ಛಾಂದಸೋ ದೀರ್ಘಃ । ತಥಾ ಚ ಯಾಸ್ಕಃ । ಮೂಷೋ ಮೂಷಿಕಾ ಇತ್ಯರ್ಥೋ ಮೂಷಿಕಾಃ ಪುನರ್ಮುಷ್ಣಾತೇರ್ಮೂಷೋಽಪ್ಯೇತಸ್ಮಾದೇವ । ನಿ. ೪-೫ । ಇತಿ । ಶಿಶ್ನಾ । ಷ್ಣಾ ಶೌಚೇ । ಘಞರ್ಥೇ ಕವಿಧಾನಂ ಸ್ಥಾಸ್ನಾಪಾವ್ಯಧಿಹನಿಯುಧ್ಯರ್ಥಮಿತಿ ಕಃ । ವರ್ಣವ್ಯಾಪತ್ತ್ಯಾ ಸಕಾರಸ್ಯ ಶಕಾರಃ । ಕೃಞಾದೀನಾಂ ಕೇ ದ್ವೇ ಭವತ ಇತಿ ವಕ್ತವ್ಯಂ । ಕಾ. ೬-೧-೧೨-೧ । ಇತಿ ದ್ವಿರ್ವಚನಂ । ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ ॥

ಪ್ರತಿಪದಾರ್ಥ

**ಪರ್ಶವಃ**—(ಎಲೈ ಇಂದ್ರನೇ) ಈ ಬಾವಿಯ ಅಡ್ಡಗಟ್ಟಿಯ ಗೋಡೆಗಳು । **ಮಾ**—ನನ್ನನ್ನು । **ಅಭಿತಃ**—ಸುತ್ತಲೂ । **ಸಪತ್ನೀಃ ಇವ**—ಸವತಿಯರು ಸುತ್ತಲೂ ಮುತ್ತಿ ಗಂಡನನ್ನು ಪೀಡಿಸುವಂತೆ । **ಸಂ ತಪಂತಿ**—ಬಹಳವಾಗಿ ಪೀಡಿಸುತ್ತಿವೆ. । **ಶತಕ್ರತೋ**—ನಾನಾವಿಧವಾದ ಕರ್ಮಗಳುಳ್ಳ ಅಥವಾ ಜ್ಞಾನಗಳುಳ್ಳ ಇಂದ್ರನೇ । **ತೇ**—ನಿನ್ನ । **ಸ್ತೋತಾರಂ**—ಭಕ್ತನಾದ ನನ್ನನ್ನು । **ಆಧ್ಯಃ**—ಮಾನಸಿಕ ವ್ಯಥೆಗಳು । **ಮೂಷಃ**—ಇಲಿಯು । **ಶಿಶ್ನಾನ**—ನೆಯಿಗೆಯವನ (ಗಂಜಿಯಲ್ಲಿ ಅದ್ದಿದ) ನೂಲನ್ನು ಅಗಿಯುವಂತೆ ಅಥವಾ (ಘೃತಾದಿಗಳಲ್ಲಿ ಅದ್ದಿದ) ತನ್ನ ಬಾಲವನ್ನು ಕಚ್ಚುವಂತೆ । **ವ್ಯದಂತಿ**—ನಾನಾವಿಧವಾಗಿ ಅಗಿಯುತ್ತಿವೆ. । **ರೋದಸೀ**—ಎಲೈ ದ್ಯಾವಾಪೃಥಿವಿಗಳೇ । **ಮೇ**—ನನ್ನ । **ಅಸ್ಯ**—ಈ ಸ್ತೋತ್ರವನ್ನು ಅಥವಾ ದುಃಖವನ್ನು **ವಿತ್ತಂ**—ಚೆನ್ನಾಗಿ ಅರಿಯಿರಿ ।

ಭಾವಾರ್ಥ

ಎಲೈ ಇಂದ್ರನೇ, ಸವತಿಯರು ಗಂಡನ ಸುತ್ತಲೂ ಮುತ್ತಿ ಹಿಂಸಿಸುವಂತೆ ಈ ಬಾವಿಯ ಅಡ್ಡಗೋಡೆಗಳು ನನ್ನನ್ನು ಮುತ್ತಿ ಸುತ್ತಲೂ ಪೀಡಿಸುತ್ತಿವೆ. ಶತಕ್ರತುವಾದ ಇಂದ್ರನೇ, ನಿನ್ನ ಭಕ್ತನಾದ ನನ್ನನ್ನು ಮಾನಸಿಕವಾದ ವ್ಯಥೆಗಳು, ಇಲಿಯು ನೆಯಿಗೆಯವನ ಗಂಜಿಯಲ್ಲಿ ಅದ್ದಿದ ನೂಲನ್ನು ಅಗಿಯುವಂತೆ ಅಥವಾ ಘೃತಾದಿಗಳಲ್ಲಿ ಅದ್ದಿದ ತನ್ನ ಬಾಲವನ್ನು ಕಚ್ಚುವಂತೆ, ನಾನಾವಿಧವಾಗಿ ಅಗಿಯುತ್ತಿವೆ. ಎಲೈ ದ್ಯಾವಾಪೃಥಿವಿಗಳೇ, ನನ್ನ ಈ ದುಃಖವನ್ನು ಚೆನ್ನಾಗಿ ಅರಿಯಿರಿ ಮತ್ತು ನನ್ನ ಸ್ತೋತ್ರವನ್ನು ಕೇಳಿ ನನ್ನನ್ನು ದುಃಖದಿಂದ ಪಾರುಮಾಡಿರಿ.

## English Translation

The ribs (of the well close) round me, like the rival wives (of one husband): cares cousume me, Satakratu, although your worshipper, as a rat (gnaws a weaver's) threads. Heaven and earth, be conscious of this (my affliction).

### ವಿಶೇಷವಿಷಯಗಳು

ಈ ಋಕ್ಕಿಗೆ ನಿರುಕ್ತಕಾರರು ಈ ರೀತಿ ವ್ಯಾಖ್ಯಾನಮಾಡಿದ್ದಾರೆ.

**ಸಂತಪಂತಿ ಮಾಮಭಿತಃ ಸಪತ್ನ್ಯ ಇವೇಮಾಃ ಪರ್ಶವಃ ಕೂಪಪರ್ಶವೋ ಮೂಷಿಕಾ ಇವಾಸ್ನಾತಾನಿ ಸೂತ್ರಾಣಿ ವ್ಯದಂತಿ । ಸ್ವಾಂಗಾಭಿಧಾನಂ ವಾ ಸ್ಯಾಚ್ಛಿಶ್ನಾನಿ ವ್ಯದಂತೀತಿ ವಾ ಸಂತಪಂತಿ ಮಾಧ್ಯಃ ಕಾಮಾಃ 'ಸ್ತೋತಾರಂ ತೇ ಶತಕ್ರತೋ', 'ವಿತ್ತಂ ಮೇ ಅಸ್ಯ ರೋದಸೀ' ಜಾನೀತಂ ಮೇಽಸ್ಯ ದ್ಯಾವಾಪೃಥಿವ್ಯಾವಿತಿ । ತ್ರಿತಂ ಕೂಪೇಽವಹಿತಮೇತತ್ಸೂಕ್ತಂ ಪ್ರತಿಬಭೌ । ತತ್ರ ಬ್ರಹ್ಮೇತಿ—ಹಾಸಮಿಶ್ರಮೃಙ್ಮಿಶ್ರಂ ಗಾಥಾಮಿಶ್ರಂ ಭವತಿ । ತ್ರಿತಸ್ತೀರ್ಣತಮೋ ಮೇಧಯಾ ಬಭೂವ ಅಪಿ ವಾ ಸಂಖ್ಯಾನಾಮೈವಾಭಿಪ್ರೇತಂ ಸ್ಯಾದೇಕತೋ ದ್ವಿತಸ್ತ್ರಿತ ಇತಿ ತ್ರಯೋ ಬಭೂವುಃ । (ನಿ. ೪-೬).**

ಸುತ್ತಲೂ ಸವತಿಯರು ಮುತ್ತಿಕೊಂಡು ಗಂಡನನ್ನು ಪೀಡಿಸುವಂತೆಯೂ, ಇಲಿಗಳು ತೈಲದಲ್ಲಿ ಅದ್ದಿದ ನೂಲನ್ನು ಕಚ್ಚುವಂತೆಯೂ ಈ ಬಾವಿಯ ಗೋಡೆಗಳ ಇಟ್ಟಿಗೆಗಳು ನನ್ನನ್ನು ಸುತ್ತಲೂ ಮುತ್ತಿಕೊಂಡು ಹಿಂಸಿಸುತ್ತಿವೆ. ಅಥವಾ ಶಿಶ್ನ ಶಬ್ದಕ್ಕೆ ತಮ್ಮ ಶಿಶ್ನವೆಂಬ ಅಂಗವೇ ಆದರೂ ಸಹ ಮೂಷಿಕಗಳು ಅವನ್ನೇ ಕಚ್ಚುವಂತೆ ನನ್ನ ಮನೋವ್ಯಾಧಿಗಳು ನನ್ನನ್ನು ಕಚ್ಚಿ ತಿನ್ನುತ್ತಿವೆ. ಎಲೈ ಶತಕ್ರತುವಾದ ಇಂದ್ರನೇ, ನಿನ್ನ ಸ್ತೋತೃವಾದ ನನ್ನನ್ನೂ ಸಹ ಈ ರೀತಿ ನನ್ನ ಮಾನಸಿಕವ್ಯಥೆಗಳು ಹಿಂಸಿಸುತ್ತಿವೆ. ಎಲೈ ದ್ಯಾವಾಪೃಥಿವಿಗಳೇ, ನನ್ನ ಈ ವೇದನೆಯನ್ನು ತಿಳಿಯಿರಿ ಎಂದು ಋಕ್ಕನ್ನು ವಿವರಿಸಿ ಅನಂತರ ವಿಶೇಷವಿಷಯಗಳನ್ನು ತಿಳಿಸುತ್ತಾರೆ. ಈ ಸೂಕ್ತವು ಬಾವಿಯಲ್ಲಿ ಬಿದ್ದಿದ್ದ ತ್ರಿತನಿಂದ ದೃಷ್ಟವಾಯಿತು. ಇದಕ್ಕೆ ಸಂಬಂಧಿಸಿದಂತೆ ಗಾಥೆಯಿಂದ ಕೂಡಿದುದೂ, ಋಕ್ಕಿನಿಂದ ಕೂಡಿದುದೂ ಆದ ಒಂದು ಇತಿಹಾಸವಿದೆ. ತ್ರಿತನು ಪ್ರಾಜ್ಞರಲ್ಲೆಲ್ಲಾ ಅತ್ಯಂತ ಶ್ರೇಷ್ಠನಾದವನು. ಅಥವಾ ಕ್ರಮಕ್ರಮವಾಗಿ ಉತ್ಪನ್ನರಾದ ಏಕತ, ದ್ವಿತ ಮತ್ತು ತ್ರಿತ ಈ ಮೂವರಲ್ಲಿ ಕೊನೆಯವನನ್ನು ಸೂಚಿಸುವ ಸಂಖ್ಯಾವಾಚಕವಾಗಿರಲೂಬಹುದು, ಎಂದು ನಿರುಕ್ತಕಾರರು ವಿವರಿಸಿದ್ದಾರೆ. ಈ ಋಕ್ಕುಗಳು ಈ ಅಭಿಪ್ರಾಯವನ್ನೇ ಸೂಚಿಸುತ್ತವೆ.—

**ಸಂ ಮಾ ತಪಂತ್ಯಭಿತಃ ಸಪತ್ನೀರಿವ ಪರ್ಶವಃ ।**
**ನಿ ಬಾಧತೇ ಅಮತಿರ್ನಗ್ನತಾ ಜಸುರ್ವೇರ್ನ ವೇವೀಯತೇ ಮತಿಃ ॥**
**ಮೂಷೋ ನ ಶಿಶ್ನಾ ವ್ಯದಂತಿ ಮಾಧ್ಯಃ ಸ್ತೋತಾರಂ ತೇ ಶತಕ್ರತೋ ।**
**ಸಕೃತ್ಸು ನೋ ಮಘವನ್ನಿಂದ್ರ ಮೃಳಯಾಧಾ ಪಿತೇವ ನೋ ಭವ ॥**

( ಋ. ಸಂ. ೧೦-೩೩-೨—೩ )

**ಪರ್ಶವಃ—ಪರ್ಶುಸ್ಥಾನೀಯೋಃ ಕೂಪಭಿತ್ತ್ಯೋಃ** । ಕೊಡಲಿಯಂತಿರುವ ಬಾವಿಯ ಇಟ್ಟಿಗೆ ಗೋಡೆಗಳೆಂದು ಪ್ರಕೃತವಾದ ಋಕ್ಕಿನಲ್ಲಿಯೂ ; **ಪಾರ್ಶ್ವಾಸ್ಥೀನಿ** ಪಾರ್ಶ್ವದ ಎಲುಬುಗಳೆಂದು ಮೇಲೆ ಉದಹರಿಸಿರುವ ೧೦-೩೩-೨ನೇ ಋಕ್ಕಿನಲ್ಲಿಯೂ ಅರ್ಥಮಾಡಿದ್ದಾರೆ. **ಪರ್ಶು** ಶಬ್ದವು ಇತರ ಋಕ್ಕುಗಳಲ್ಲಿಯೂ ಸಹ ಉಪಯೋಗಿಸಲ್ಪಟ್ಟು ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ.

**ಶತಮಹಂ ತಿರಿಂದಿರೇ ಸಹಸ್ರಂ ಪರ್ಶಾವಾ ದದೇ** ।
(ಋ. ಸಂ. ೮-೬-೪೬)

ಎಂಬ ಋಕ್ಕಿನಲ್ಲಿ **ಪರ್ಶು**ವೆಂಬುವನು ಒಬ್ಬ ಪುರುಷನು.

**ಪರ್ಶುರ್ಹ ನಾಮ ಮಾನವೀ ಸಾಕಂ ಸಸೂವ ವಿಂಶತಿಂ** ।
(ಋ. ಸಂ. ೧೦-೮೬-೨೩)

ಎಂಬ ಋಕ್ಕಿನಲ್ಲಿ **ಪರ್ಶು**ವೆಂದರೆ ಒಬ್ಬ ಹೆಂಗಸಿನ ಹೆಸರು.

**ಶತಕ್ರತೋ—**ಕ್ರತು ಶಬ್ದವು ಕರ್ಮನಾಮಗಳಲ್ಲಿಯೂ (ನಿ. ೩-೨) ಮತ್ತು ಪ್ರಜ್ಞಾನಾಮಗಳಲ್ಲಿಯೂ (೩-೧೩) ಪಠಿತವಾಗುವುದರಿಂದ ನೂರಾರು ಕರ್ಮಗಳುಳ್ಳವನು ಅಥವಾ ನಾನಾವಿಧವಾದ ಜ್ಞಾನವುಳ್ಳವನು ಎಂದರ್ಥ.

**ಮೂಷಃ—ಮೂಷಿಕಾಃ ಪುನರ್ಮುಷ್ಣಾತೇಃ । ಮೂಷೋಽಪ್ಯೇತಸ್ಮಾದೇವ,** (ನಿ. ೪-೫) **ಮೂಷಿಕ** ಮತ್ತು **ಮೂಷ** ಎರಡು ಪದಗಳೂ ಸಹ ಕದಿಯುವುದು ಎಂಬ ಅರ್ಥವನ್ನು ಕೊಡುವ **ಮುಷ** ಧಾತುವಿನಿಂದ ನಿಷ್ಪನ್ನವಾಗಿವೆ.

ವ್ಯಾಕರಣಪ್ರಕ್ರಿಯಾ

**ತಪಂತಿ—**ತಪ ಸಂತಾಪೇ ಧಾತು. ಲಟ್ ಪ್ರಥಮಪುರುಷ ಬಹುವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

**ಸಪತ್ನೀಃ—**ಸಮಾನಃ ಏಕಃ ಪತಿಃ ಯಾಸಾಂ ತಾಃ ಸಪತ್ನ್ಯಃ **ನಿತ್ಯಂ ಸಪತ್ನ್ಯಾದಿಷು**—(ಪಾ. ಸೂ. ೪-೧-೩೫) ಎಂಬುದರಿಂದ ಪತಿಶಬ್ದಕ್ಕೆ ನಿತ್ಯವಾಗಿ ನಕಾರಾಂತಾದೇಶ. ತತ್ಸನ್ನಿಯೋಗದಿಂದ (ಸ್ತ್ರೀತ್ವದಲ್ಲಿ) ಙೀಪ್. **ಸಪತ್ನೀ** ಎಂದು ರೂಪವಾಗುತ್ತದೆ. ಇದಕ್ಕೆ ಜಸ್ ಪರವಾದಾಗ **ದೀರ್ಘಾಜ್ಜಸಿಚ—**ಎಂಬುದರಿಂದ ಪೂರ್ವಸವರ್ಣದೀರ್ಘವು ನಿಷಿದ್ಧವಾದಾಗ—**ವಾ ಛಂದಸಿ—**(ಪಾ. ಸೂ. ೬-೧-೧೦೬) ಎಂಬುದರಿಂದ ಛಂದಸ್ಸಿನಲ್ಲಿ ಪೂರ್ವಸವರ್ಣದೀರ್ಘ. ಪ್ರತ್ಯಯಸಕಾರಕ್ಕೆ ರುತ್ವವಿಸರ್ಗ.

**ಮೂಷಃ—**ಮುಷ ಸ್ತೇಯೇ ಧಾತು. **ಕ್ವಿಪ್ ಚ**-(ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಕ್ವಿಪ್ ಪರವಾದಾಗ ಛಾಂದಸವಾಗಿ ಧಾತುವಿಗೆ ದೀರ್ಘಬರುತ್ತದೆ. ಪ್ರಥಮಾ ಬಹುವಚನಾಂತರೂಪ. ಈ ವಿಷಯದಲ್ಲಿ ಯಾಸ್ಕರು ಹೀಗೆ ನಿರ್ವಚನಮಾಡಿರುತ್ತಾರೆ. ಮೂಷೋ ಮೂಷಿಕಾ ಇತ್ಯರ್ಥಃ । ಮೂಷಿಕಾಃ ಪುನಃ

ಮುಷ್ಣಾತೇಃ ಮೂಷೋಽಸ್ಯೇತಸ್ಮಾದೇವ. (ನಿರು ೪-೫) ಮೂಷ ಎಂದರೆ ಮೂಷಿಕಗಳು ಅಂದರೆ ಇಲಿಗಳು ಮೂಷ ಧಾತುವಿನಿಂದ ಈ ಎರಡು ಶಬ್ದಗಳು ನಿಷ್ಪನ್ನಗಳಾಗಿವೆ ಎಂದು ತಾತ್ಪರ್ಯ.

**ಶಿಶ್ನಾ**—ಷ್ಣಾ ಶೌಚೇ. ಧಾತು. ಅದಾದಿ. **ಘಞರ್ಥೇ ಕವಿಧಾನಂ ಸ್ಥಾಸ್ನಾಪಾವ್ಯಧಿಹನಿಯುಧ್ಯರ್ಥಮ್**—ಎಂಬ ವಚನದಿಂದ ಕಪ್ರತ್ಯಯ. ಛಂದಸ್ಸಿನಲ್ಲಿ ವರ್ಣವ್ಯತ್ಯಯದಿಂದ ಸಕಾರಕ್ಕೆ ಶಕಾರಾದೇಶ. **ಕೃಞಾದೀನಾಂ ಕೆ ದ್ವೇ ಭವತ ಇತಿ ವಕ್ತವ್ಯಮ್**—(ಕಾ. ೬-೧-೧೨-೧) ಎಂಬ ವಚನದಿಂದ ಧಾತುವಿಗೆ ಕಪ್ರತ್ಯಯ ಪರವಾದಾಗ ದ್ವಿತ್ವ. **ಬಹುಲಂ ಛಂದಸಿ**—(ಪಾ. ಸೂ. ೭-೪-೭೮) ಎಂಬುದರಿಂದ ಅಭ್ಯಾಸಕ್ಕೆ ಇತ್ವ. ನಪುಂಸಕದಲ್ಲಿ ಶಿಆದೇಶ ಬಂದು ದೀರ್ಘಾದಿ ಕಾರ್ಯವಾದಾಗ **ಶೇಶ್ಛಂದಸಿ ಬಹುಲಮ್**—(ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ಅದಂತಿ**—ಅದ ಭಕ್ಷಣೇ. ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸ್ತೋತಾರಮ್**—ಷ್ಟುಞ್ ಸ್ತುತೌ ಧಾತು. ಕರ್ತರಿಯಲ್ಲಿ ತೃಚ್‌ಪ್ರತ್ಯಯ. **ಚಿತಃ**—(ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಅಮ್ ಪರವಾದಾಗ **ಋತೋಙಿಸರ್ವನಾಮ**—(ಪಾ. ಸೂ. ೭-೩-೧೧೦) ಎಂಬುದರಿಂದ ಗುಣ. ರಪರವಾಗಿ ಬರುತ್ತದೆ. **ಅಪ್‌ತೃನ್‌ತೃಚ್**—(ಪಾ. ಸೂ. ೬-೪-೧೧) ಎಂಬುದರಿಂದ ಉಪಧಾದೀರ್ಘ. ॥ ೮ ॥



ಸಂಹಿತಾಪಾಠಃ

ಅ॒ಮೀ ಯೇ ಸ॒ಪ್ತ ರ॒ಶ್ಮಯ॒ಸ್ತತ್ರಾ॑ ಮೇ॒ ನಾಭಿ॒ರಾತ॑ತಾ ।
ತ್ರಿ॒ತಸ್ತದ್ವೇ॑ದಾ॒ಪ್ತ್ಯಃ ಸ ಜಾ॑ಮಿ॒ತ್ವಾಯ॑ ರೇಭತಿ ವಿ॒ತ್ತಂ ಮೇ॑
ಅ॒ಸ್ಯ ರೋ॑ದಸೀ ॥ ೯ ॥

ಪದಪಾಠಃ

ಅಮೀ ಇತಿ । ಯೇ । ಸಪ್ತ । ರಶ್ಮಯಃ । ತತ್ರ । ಮೇ । ನಾಭಿಃ । ಆऽತತಾ ।
ತ್ರಿತಃ । ತತ್ । ವೇದ । ಆಪ್ತ್ಯಃ । ಸಃ । ಜಾಮಿಽತ್ವಾಯ । ರೇಭತಿ । ವಿತ್ತಂ ।
ಮೇ । ಅಸ್ಯ । ರೋದಸೀ ಇತಿ ॥ ೯ ॥

ಸಾಯಣಭಾಷ್ಯಂ

ಯೇಽಮೀ ದ್ಯುಲೋಕೇ ವರ್ತಮಾನಾಃ ಸಪ್ತಸಂಖ್ಯಾಕಾ ರಶ್ಮಯಃ ಸೂರ್ಯಸ್ಯ ಕಿರಣಾಃ ಸಂತಿ ತತ್ರ ತೇಷು ಸೂರ್ಯರಶ್ಮಿಷ್ವಧ್ಯಾತ್ಮಂ ಸಪ್ತಪ್ರಾಣರೂಪೇಣ ವರ್ತಮಾನೇಷು ಮೇ ಮದೀಯಾ ನಾಭಿ-ರಾತತಾ ಸಂಬದ್ಧಾ । ಋಷಿರಾತ್ಮಾನಮೇವ ಪರೋಕ್ಷತಯಾ ನಿರ್ದಿಶತಿ । ತ್ರಿತಸ್ತೀರ್ಣತಮುಸ್ತಿರಸ್ಕೃತಾ-ಜ್ಞಾನ ಆಪ್ತ್ಯೋಽಪಾಂ ಪುತ್ರ ಋಷಿಸ್ತತ್ಪೂರ್ವೋಕ್ತಂ ವೃತ್ತಾಂತಂ ವೇದ । ಜಾನಾತಿ । ನಾನ್ಯಃ । ಸ ಜಾನನ್ನೃಷಿರ್ಜಾಮಿತ್ವಾಯ ಕೂಪಾನ್ನಿರ್ಗಂತೃತ್ವಾಯ ರೇಭತಿ । ತಾನ್ ರಶ್ಮೀನ್ ಸ್ತೌತಿ । ಅನ್ಯತ್ಸ-ಮಾನಂ ॥ ಆತತಾ । ತನೋತೇಃ ಕರ್ಮಣಿ ನಿಷ್ಠಾ । ಅನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಜಾಮಿತ್ವಾಯ । ಜಮುಃಶಿರ್ಗತಿಕರ್ಮಾ । ಜಮತಿ ಗಚ್ಛತೀತಿ ಜಾಮಿಃ । ಔಣಾದಿಕ ಇಣ್ಪ್ರತ್ಯಯಃ । ತಸ್ಯ ಭಾವಸ್ತತ್ತ್ವಂ । ರೇಭತಿ । ರೇಭೃ ಶಬ್ದೇ । ಭೌವಾದಿಕಃ ॥

॥ ಪ್ರತಿಪದಾರ್ಥ ।

**ಸಪ್ತ**—ಏಳು ಸಂಖ್ಯೆಗಳುಳ್ಳ । **ಯೇ ಅಮೀ ರಶ್ಮಯಃ**—ಯಾವ ಈ ಸೂರ್ಯಕಿರಣಗಳಿವೆಯೋ । **ತತ್ರ**—(ಸಪ್ತ ಪ್ರಾಣರೂಪವಲ್ಲಿರುವ) ಇವುಗಳಲ್ಲಿ । **ಮೇ**—ನನ್ನ । **ನಾಭಿಃ**—ನಾಭಿಯು । **ಆತತಾ**—ವಿಸ್ತೃತವಾಗಿ ಬೆಳೆಯಿತು । **ತ್ರಿತಃ**—ಅಜ್ಞಾನವನ್ನು ದಾಟಿದವನೂ । **ಅಪ್ತ್ಯಃ**—ನೀರುಗಳ ಪುತ್ರನೂ ಆದ ತ್ರಿತನು । **ತತ್**—ಆ (ತನ್ನ) ಸಂಬಂಧವನ್ನು । **ವೇದ**—ತಿಳಿಯುತ್ತಾನೆ । **ಸಃ**—ಈ ತಿಳಿವಳಿಕೆಯುಳ್ಳ ಋಷಿಯು । **ಜಾಮಿ-ತ್ವಾಯ**—(ಭಾವಿಯಿಂದ) ಹೊರಕ್ಕೆ ಬರುವುದಕ್ಕಾಗಿ । **ರೇಭತಿ**—(ಈ ರಶ್ಮಿಗಳನ್ನು ಕುರಿತು) ಸ್ತೋತ್ರಮಾಡುತ್ತಾನೆ । **ರೋದಸೀ**—ಎಲೈ ದ್ಯಾವಾಪೃಥಿವಿಗಳೇ । **ಮೇ**—ನನ್ನ । **ಅಸ್ಯ**—ಈ ಸ್ತೋತ್ರವನ್ನು ಅಥವಾ ದುಃಖವನ್ನು । **ವಿತ್ತಂ**—ಅರಿಯಿರಿ.

ಭಾವಾರ್ಥ

ಸಪ್ತ ಪ್ರಾಣರೂಪವಲ್ಲಿರುವ ಈ ಏಳು ಸೂರ್ಯಕಿರಣಗಳಲ್ಲಿ ನನ್ನ ನಾಭಿಯು ವಿಸ್ತೃತವಾಗಿ ಬೆಳೆಯಿತು. ಅಜ್ಞಾನವನ್ನು ದಾಟಿದವನೂ ನೀರುಗಳ ಪುತ್ರನೂ ಆದ ತ್ರಿತನು ತನ್ನ ಈ ಹಿಂದಿನ ಚರಿತ್ರೆಯನ್ನು ತಿಳಿದಿದ್ದಾನೆ. ಈ ತಿಳಿವಳಿಕೆಯುಳ್ಳ ಋಷಿಯು ಭಾವಿಯಿಂದ ಹೊರಕ್ಕೆ ಬರುವುದಕ್ಕಾಗಿ ತನ್ನ ಸಂಬಂಧಿಗಳಾದ ಈ ರಶ್ಮಿಗಳನ್ನು

ಕುರಿತು ಸ್ತೋತ್ರಮಾಡುತ್ತಾನೆ. ಎಲೈ ದ್ಯಾವಾಪೃಥಿವಿಗಳೇ, ನನ್ನ ದುಃಖವನ್ನರಿಯಿರಿ ಮತ್ತು ನನ್ನ ಈ ಸ್ತೋತ್ರವನ್ನು ಕೇಳಿ ನನ್ನ ದುಃಖವನ್ನು ನೀಗಿಸಿರಿ.

## English Translation

Those which are the seven rays (of the sun,) in them is my navel expanded ; Trita, the son of the waters, knows that (it is so), and he praises them for his extrication (from the well). Heaven and earth, be conscious of this (my affliction).

॥ ವಿಶೇಷವಿಷಯಗಳು ॥

**ಯೇ ಅಮೀ ಸಪ್ತ ರಶ್ಮಯಃ**— ಇಲ್ಲಿ ಏಳು ರಶ್ಮಿಗಳಾವುವು, ಇವುಗಳಿಗೂ ತ್ರಿತನ ಬೆಳವಣಿಗೆಗೂ ಏನು ಸಂಬಂಧ ಎಂಬ ವಿಚಾರದಲ್ಲಿ ವಿಪ್ರತಿಪತ್ತಿಯಿದೆ. ಕೆಲವರು ತ್ರಿತನಿಗೂ ವೈದ್ಯುತಾಗ್ನಿಗೂ ತಾದಾತ್ಮ್ಯವನ್ನು ಹೇಳಿದ್ದಾರೆ. ಇನ್ನು ಕೆಲವರು ತ್ರಿತನೇ ಸೋಮನೆಂದೂ ಹೇಳಿರುವರು. ಸಾಯಣರು ಅನೇಕ ಸಂದರ್ಭಗಳಲ್ಲಿ ಸೂಕ್ತದ್ರಷ್ಟೃವಾದ ಋಷಿಯೆಂದೇ ಹೇಳಿದ್ದಾರೆ. ತ್ರಿತನ (ತ್ರಿತ ಆಪ್ತ್ಯನ) ವಿಷಯವಾಗಿ ವೈದಿಕ ಪಂಡಿತರೂ ಮತ್ತು ಪಾಶ್ಚಾತ್ಯಪಂಡಿತರೂ ಹೇಳಿರುವ ಅಭಿಪ್ರಾಯಗಳನ್ನು ಈ ಭಾಗದ ಪೀಠಿಕಾಪ್ರಕರಣದಲ್ಲಿ ವಿಶದವಾಗಿ ತಿಳಿಸಿದೆ.) ಇಲ್ಲಿ ತ್ರಿತನು ವೈದ್ಯುತಾಗ್ನಿಯೆಂದು ಹೇಳಿದರೆ ಅದಕ್ಕೂ ಆಧಾರಗಳನ್ನು ತೋರಿಸಬಹುದು.

**ಯದೀಮಾಹ ತ್ರಿತೋ ದಿವ್ಯುಪ ಧ್ಮಾತೇವ ಧಮತಿ ಶಿಶೀತೇ ಧ್ಮಾತರೀ ಯಥಾ ।**
(ಋ. ಸಂ. ೫-೯-೫)

**ಪ್ರ ಸಕ್ಷಣೋ ದಿವ್ಯಃ ಕಣ್ವಹೋತಾ ತ್ರಿತೋ ದಿವಃ ಸಜೋಷಾ ವಾತೋ ಅಗ್ನಿಃ ।**
(ಋ. ಸಂ. ೫-೪೧-೪)

ಇತ್ಯಾದಿ ಋಕ್ಕುಗಳಲ್ಲಿ ತ್ರಿತನು ಅಂತರಿಕ್ಷಸ್ಥನೆಂದೂ, ಅಂತರಿಕ್ಷಕ್ಕೆ ಹರಡುವ ಅಗ್ನಿಜ್ವಾಲೆಯನ್ನೂ, ಅಂತರಿಕ್ಷದಲ್ಲೇ ಇರುವ ಸೂರ್ಯಕಿರಣಗಳನ್ನೂ ಪ್ರಕಾಶವಾಗುವಂತೆ ಮಾಡಿದನೆಂದು ಹೇಳಿದೆ. ಅಲ್ಲದೆ,

ಅಗ್ನಿಂ ಮನ್ಯೇ ಪಿತರಮಗ್ನಿಮಾಪಿಮಗ್ನಿಂ ಭ್ರಾತರಂ ಸದಮಿತ್ಸಖಾಯಂ ।
ಅಗ್ನೇರನೀಕಂ ಬೃಹತಃ ಸಪರ್ಯಂ ದಿವಿ ಶುಕ್ರಂ ಯಜತಂ ಸೂರ್ಯಸ್ಯ ।
(ಋ. ಸಂ. ೧೦-೭-೩)

ಎಂಬ ಋಕ್ಕಿನಲ್ಲಿ ಸೂಕ್ತದ್ರಷ್ಟೃವಾದ ತ್ರಿತನು ಅಗ್ನಿಯೇ ತನಗೆ ಪಿತೃವೆಂದೂ, ಭ್ರಾತೃವೆಂದೂ, ಸಖನೆಂದೂ ಹೇಳಿ, ಅಂತಹ ಅಗ್ನಿಯನ್ನು ತಾನು ಆರಾಧಿಸುವುದಾಗಿಯೂ ಮತ್ತು ದ್ಯುಲೋಕಸ್ಥನೂ ಪೂಜ್ಯನೂ ಆದ ಸೂರ್ಯನನ್ನು ತೇಜಃಪ್ರಕಾಶವನ್ನು ಬೀರುವುದಕ್ಕೆ ಸಹಾಯಮಾಡುವುದಾಗಿಯೂ ಅಗ್ನಿಯನ್ನು ಸ್ತುತಿಸಿದ್ದಾನೆ. ಈ ಆಧಾರಗಳಿಂದ ಇಲ್ಲಿ ಹೇಳಿರುವ ಸಪ್ತರಶ್ಮಿಗಳು ಸೂರ್ಯರಶ್ಮಿಗಳೇ ಆಗಿರಬೇಕು. ಹಾಗೆ ಹೇಳಿದರೆ ವೈದ್ಯುತಾಗ್ನಿರೂಪ

ದಲ್ಲಿರುವ ತ್ರಿತನಿಗೂ, ದ್ಯುಲೋಕಸ್ಥನಾದ ಸೂರ್ಯನ ಕಿರಣಗಳಿಗೂ ಪರಸ್ಪರವಾದ ಸಂಬಂಧವು ಅರ್ಥವಾಗುವುದು. ಇದೇ ಭಾವವನ್ನು,

**ಸ ತ್ರಿತಸ್ಯಾಧಿ ಸಾನವಿ ಪವಮಾನೋ ಅರೋಚಯತ್ ।**
**ಜಾಮಿಭಿಃ ಸೂರ್ಯಂ ಸಹ ।**

(ಋ. ಸಂ. ೯-೩೭-೪)

**ಉಪ ತ್ರಿತಸ್ಯ ಪಾಷ್ಯೋಃ ಅ ರಭಕ್ತ ಯದ್ಗುಹಾ ಪದಂ ।**
**ಯಜ್ಞಸ್ಯ ಸಪ್ತ ಧಾಮಭಿರಧ ಪ್ರಿಯಂ ॥**

(ಋ ಸಂ ೯-೧೦೨-೨)

ಎಂಬ ಋಕ್ಕುಗಳಲ್ಲಿ **ಜಾಮಿಭಿಃ, ಸಪ್ತ ಧಾಮಭಿಃ** ಎಂಬ ಪದಗಳು ವಿಶದಪಡಿಸುತ್ತವೆ.

**ತ್ರಿತಃ ತತ್ ವೇದ**—ಈ ಸಂಬಂಧವು ತ್ರಿತನಿಗೆ ಚೆನ್ನಾಗಿ ಗೊತ್ತಿದೆ. ಅಂತರಿಕ್ಷಸ್ಥನಾದ ಸೂರ್ಯನಿಗೂ, ಪೃಥಿವೀಸ್ಥನಾದ ಅಗ್ನಿಗೂ ತನಗೂ ಸಾಕ್ಷಾತ್ಸಂಬಂಧವಿದೆಯೆಂದು ಅವನಿಗೆ ಸಂಪೂರ್ಣವಾಗಿ ಗೊತ್ತಿರುವ ವಿಷಯವು.

**ಅಸ್ಯ ವಾಮಸ್ಯ ಪಲಿತಸ್ಯ ಹೋತುಸ್ತಸ್ಯ ಭ್ರಾತಾ ಮಧ್ಯಮೋ ಅಸ್ತ್ಯಶ್ನಃ ।**
**ತೃತೀಯೋ ಭ್ರಾತಾ ಘೃತಪೃಷ್ಠೋ ಅಸ್ಯಾತ್ರಾಪಶ್ಯಂ ವಿಶ್ಪತಿಂ ಸಪ್ತಪುತ್ರಂ ॥**

(ಋ. ಸಂ. ೧-೧೬೪-೧)

ಎಂಬ ಋಕ್ಕಿನಲ್ಲಿ ಹೇಳಿರುವ ಭ್ರಾತೃಸಂಬಂಧದ ವಿವರಣೆಯಿಂದ ತಿಳಿಯುತ್ತದೆ.

**ತ್ರಿತ ಆಪ್ತ್ಯಃ**—ಈ ವಿಶೇಷಣವು ತ್ರಿತನಿಗೆ ಯಾವ ಯಾವ ಸಂದರ್ಭದಲ್ಲಿ ಉಪಯೋಗಿಸಲ್ಪಟ್ಟಿದೆ, ಅವನ ಸ್ವರೂಪವನ್ನು ಯಾವ ರೀತಿ ವಿವರಿಸುತ್ತದೆ ಎಂಬ ವಿಷಯವನ್ನು ಈ ಭಾಗದ ಪೀಠಿಕಾಪ್ರಕರಣದಲ್ಲಿ ವಿವರಿಸಿದೆ.

**ಜಾಮಿತ್ವಾಯ—ಕೂಪಾನ್ನಿರ್ಗಂತೃತ್ವಾಯ ।** ಬಾವಿಯಿಂದ ಹೊರಕ್ಕೆ ಬರುವುದಕ್ಕಾಗಿ ಎಂದು ಸಾಯಣರೂ, **ಸಮಾನಜಾತೀಯವಚನಃ । ಸಮಾನ ಜಾತೀಯತ್ವಾರ್ಥಂ । ತದ್ಭಾವ್ಯಪ್ರತಿಪತ್ತ್ಯರ್ಥಮಿತ್ಯರ್ಥಃ ।** ಎಂದು ಸ್ಕಂದಸ್ವಾಮಿಗಳೂ ವಿವರಿಸಿದ್ದಾರೆ. ಇಲ್ಲಿ ಸಾಯಣರು ಹೇಳುವ ಅರ್ಥಕ್ಕಿಂತಲೂ ಸ್ಕಂದಸ್ವಾಮಿಗಳು ಹೇಳುವ ಅರ್ಥವು ಉಚಿತವಾಗಿರುವುದು. ಮೊದಲನೆಯದಾಗಿ, ಈ ಋಕ್ಕಿನಲ್ಲಿ ಪೂರ್ಣವಾಗಿ ತ್ರಿತನಿಗೂ, ಸೂರ್ಯಾಗ್ನಿಗಳಿಗೂ ಇರತಕ್ಕ ಸಂಬಂಧವನ್ನು ತೋರಿಸಿ ಅವರ ದಯೆಯನ್ನು ಸಂಪಾದಿಸುವುದಾಗಿದೆ. ಆದುದರಿಂದ ಇಲ್ಲಿಯೂ ಆ ಸಂಬಂಧವನ್ನು ಅರ್ಥಮಾಡಿಕೊಳ್ಳುವುದಕ್ಕಾಗಿ ಎಂದು ಹೇಳುವುದು ಸರಿಯಾಗಿದೆ. ಎರಡನೆಯದಾಗಿ, **ಜಾಮಿ** ಶಬ್ದಕ್ಕೆ ಸಂಬಂಧವೆಂಬ ಅರ್ಥವು ಅನೇಕಕಡೆಗಳಲ್ಲಿ ಸಹಜವಾಗಿದೆ. [**ಜಾಮಿ** ಶಬ್ದದ ವಿವರಣೆಯನ್ನು ಇದೇ ಭಾಗದಲ್ಲಿ ೧೦೦ ನೇ ಸೂಕ್ತದ ೧೧ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ.]

**ರೇಭತಿ**— **ಅರ್ಚತಿ, ಗಾಯತಿ, ರೇಭತಿ** ಇತ್ಯಾದಿ ೪೪ **ಅರ್ಚತಿಕರ್ಮ** ನಾಮಗಳಲ್ಲಿ ಪಠಿತವಾಗಿರು ವುದರಿಂದ (ನಿ. ೩-೧೪) ಇಲ್ಲಿ **ಅರ್ಚತಿ, ಸ್ತೌತಿ** ಪೂಜಿಸುತ್ತಾನೆ ಅಥವಾ ಸ್ತುತಿಸುತ್ತಾನೆ ಎಂದರ್ಥ.

ವ್ಯಾಕರಣಪ್ರಕ್ರಿಯಾ

**ಆತತಾ**—ತನು ವಿಸ್ತಾರೇ. ಧಾತು. ಇದಕ್ಕೆ ಕರ್ಮಣಿಯಲ್ಲಿ **ನಿಷ್ಠಾ**—(ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. ಇದು ಕಿತ್ತಾದುದರಿಂದ **ಅನುದಾತ್ತೋಪದೇಶ ವನತಿತನೋತ್ಯಾದೀನಾಂ**—(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಅನುನಾಸಿಕ ನಕಾರಕ್ಕೆ ಲೋಪ. ಆಜ್ ಎಂಬ ಗತಿಸಂಜ್ಞೆಯುಳ್ಳ ಪದದೊಡನೆ ಸಮಾಸವಾದಾಗ **ಗತಿರನಂತರಃ**—(ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಆಜ್) ಪ್ರಕೃತಿ ಸ್ವರ ಬರುತ್ತದೆ. ಸ್ತ್ರೀತ್ವವಿವಕ್ಷಾಮಾಡಿದಾಗ **ಅಜಾದ್ಯತಷ್ಟಾಪ್**—ಸೂತ್ರದಿಂದ ಟಾಪ್ ಪ್ರತ್ಯಯ.

**ವೇದ**—ವಿದ ಜ್ಞಾನೇ. ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪಿಗೆ **ವಿದೋಲಟೋವಾ**—(ಪಾ. ಸೂ. ೩-೪-೮೩) ಎಂಬುದರಿಂದ ಲಿಟಿನ ಣಲಾದೇಶ. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಅತಿಙಂತದ ಪರದಲ್ಲಿರುವುದರಿಂದ **ನಿಘಾತಸ್ವರ** ಬರುತ್ತದೆ.

**ಜಾಮಿತ್ವಾಯ**—ಜಮು ಧಾತುವು ಗತ್ಯರ್ಥದಲ್ಲಿದೆ. ಜಮತಿ ಗಚ್ಛತಿ ಇತಿ ಜಾಮಿಃ ಔಣಾದಿಕವಾದ ಇಣ್ ಪ್ರತ್ಯಯ ಬರುತ್ತದೆ. ಣಿತ್ತಾದುದರಿಂದ **ಅತ ಉಪಧಾಯಾಃ**—(ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಜಾಮೇಃ ಭಾವಃ ಜಾಮಿತ್ವಮ್. **ತಸ್ಯಭಾವಸ್ತ್ವತಲೌ**—(ಪಾ. ಸೂ. ೫-೧-೧೧೯) ಎಂಬುದರಿಂದ ಭಾವಾರ್ಥದಲ್ಲಿ ತ್ವ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಚತುರ್ಥೀ ಏಕವಚನಾಂತರೂಪ.

**ರೇಭತಿ**—ರೇಭೃ ಶಬ್ದೇ. ಧಾತು. ಭ್ವಾದಿ. ಲಟ್ ಪ್ರಥಮಪುರುಷ ಏಕವಚನರೂಪ. ಅತಿಙಂತದ ಪರದಲ್ಲಿರುವುದರಿಂದ **ನಿಘಾತಸ್ವರ** ಬರುತ್ತದೆ. ॥ ೯ ॥

———:o:———

**ಸಂಹಿತಾಪಾಠಃ**

ಅಮೀ ಯೇ ಪಂಚೋಕ್ಷಣೋ ಮಧ್ಯೇ ತಸ್ಥುರ್ಮಹೋದಿವಃ ।
ದೇವತ್ರಾ ನು ಪ್ರವಾಚ್ಯಂ ಸಧ್ರೀಚೀನಾ ನಿ ವಾವೃತುರ್ವಿತ್ತಂ
ಮೇ ಅಸ್ಯ ರೋದಸೀ ॥ ೧೦ ॥

। ಪದಪಾಠಃ ।

ಅಮೀ ಇತಿ । ಯೇ । ಪಂಚ । ಉಕ್ಷಣಃ । ಮಧ್ಯೇ । ತಸ್ಥುಃ । ಮಹಃ । ದಿವಃ ।
ದೇವಽತ್ರಾ । ನು । ಪ್ರಽವಾಚ್ಯಂ । ಸಧ್ರೀಚೀನಾಃ । ನಿ । ವವೃತುಃ । ವಿತ್ತಂ ।
ಮೇ । ಅಸ್ಯ । ರೋದಸೀ ಇತಿ ॥ ೧೦ ॥

। ಸಾಯಣಭಾಷ್ಯಂ ॥

ಉಕ್ಷಣಃ ಸೇಕ್ತಾರಃ ಕಾಮಾಭಿವರ್ಷಕಾಃ ಪಂಚ । ತನ್ನ ಇಂದ್ರಸ್ತದ್ವರುಣಸ್ತದಗ್ನಿಸ್ತದರ್ಯಮಾ ತತ್ಸವಿತಾ ಚನೋ ಧಾತ್ । ಋ. ೧-೧೦೭-೩ । ಇತ್ಯರ್ಧರ್ಚೇನ ಪ್ರತಿಪಾದಿತಾಃ ಪಂಚಸಂಖ್ಯಾಕಾ ದೇವಾಃ । ಯದ್ವಾ । ಅಗ್ನಿರ್ವಾಯುಃ ಸೂರ್ಯಶ್ಚಂದ್ರಮಾ ವಿದ್ಯುದಿತ್ಯೇವಂ ಪಂಚಸಂಖ್ಯಾಕಾಃ । ತಥಾ ಚ ಶಾಟ್ಯಾಯನಕಂ । ಏತಾನ್ಯೇವ ಪಂಚ ಜ್ಯೋತೀಂಷಿ ಯಾನ್ಯೇಷು ಲೋಕೇಷು ದೀಪ್ಯಂತೇ । ಅಗ್ನಿಃ ಪೃಥಿವ್ಯಾಂ ವಾಯುರಂತರಿಕ್ಷೇ ಚ ಆದಿತ್ಯೋ ದಿವಿ ಚಂದ್ರಮಾ ನಕ್ಷತ್ರೇ ವಿದ್ಯುದಪ್ಸ್ವಿತಿ । ನಕ್ಷತ್ರೇ ನಕ್ಷತ್ರಲೋಕೇ । ಅಪ್ಸು ಮೇಘಸ್ಥೋದಕೇಷು । ತೈತ್ತಿರೀಯೇಽಪ್ಯೇವಮಾಮ್ನಾತಂ । ಅಗ್ನಿಃ ಪೃಥಿವ್ಯಾಂ ವಾಯುರಂತರಿಕ್ಷೇ ಸೂರ್ಯೋ ದಿವಿ ಚಂದ್ರಮಾ ದಿಕ್ಷು ನಕ್ಷತ್ರಾಣಿ ಸ್ವಲೋಕ ಇತಿ । ಯೇಽಮೀ ಪಂಚಸಂಖ್ಯಾಕಾ ದೇವಾ ಮಹೋ ದಿವೋ ಮಹತೋ ವಿಸ್ತೀರ್ಣಸ್ಯ ದ್ಯುಲೋಕಸ್ಯ ಮಧ್ಯೇ ತಸ್ಥುಃ । ತಿಷ್ಠಂತಿ ಆಸತೇ ದೇವತ್ರಾ ದೇವೇಷು ನು ಕ್ಷಿಪ್ರಂ ಪ್ರವಾಚ್ಯಂ ಪ್ರಶಂಸನೀಯಂ ದೇವಾನಾಂ ಯೋಗ್ಯಂ ಮದೀಯಂ ಸ್ತೋತ್ರಂ ಪ್ರತಿ ಸಧ್ರೀಚೀನಾಃ ಸಹಾಂಚಂತೋ ಯುಗಪದಾಗಚ್ಛಂತಸ್ತೇ ದೇವಾ ಮದೀಯಂ ಪರಿಚರಣಂ ಸ್ವೀಕುರ್ವಂತಿ ತದನಂತರಂ ನಿ ವವೃತುಃ । ತೃಪ್ತಾಃ ಸಂತೋ ನಿವರ್ತಂತೇ ಚ । ಅನ್ಯತ್ಸಮಾನಂ ಉಕ್ಷಣಃ । ವಾ ಷಪೂರ್ವಸ್ಯ ನಿಗಮ ಇತ್ಯುಪಧಾದೀರ್ಘಾಭಾವಃ । ದೇವತ್ರಾ । ದೇವಮನುಷ್ಯೇತ್ಯಾದಿನಾ ಸಪ್ತಮ್ಯರ್ಥೇ ತ್ರಾಪ್ರತ್ಯಯಃ । ಪ್ರವಾಚ್ಯಂ । ವಾಚಯತೇರಚೋ ಯದಿತಿ ಯತ್ । ಣೇರನಿಟೀತಿ ಣಿಲೋಪಃ । ಯತೋಽನಾವ ಇತ್ಯಾದ್ಯುದಾತ್ತತ್ವೇ ಕೃದುತ್ತರಪದಪ್ರಕೃತಿಸ್ವರತ್ವಂ । ಸಧ್ರೀಚೀನಾಃ । ಸಹಾಂಚಂತೀತಿ ಸಧ್ರ್ಯಂಚಃ । ತ ಏವ ಸಧ್ರೀಚೀನಾಃ । ಸಹಪೂರ್ವಾದಂಚತೇರ್ಋತ್ವಿಗಿತ್ಯಾದಿನಾ ಕ್ವಿನ್ । ಅನಿದಿತಾಮಿತಿ ನಲೋಪಃ । ಸಹಸ್ಯ ಸಧ್ರಿಃ । ಪಾ. ೬-೩-೯೫ । ಇತಿ ಸಧ್ರ್ಯಾದೇಶಃ । ವಿಭಾಷಾಂಚೇರದಿಕ್ಸ್ತ್ರಿಯಾಮಿತಿ ಸ್ವಾರ್ಥೇ ಖಪ್ರತ್ಯಯಃ । ವವೃತುಃ । ವೃತು ವರ್ತನೇ । ಛಂದಸಿ ಲುಙ್‌ಲಙ್‌ಲಿಟ ಇತಿ ವರ್ತಮಾನೇ ಲಿಟ್ । ವ್ಯತ್ಯಯೇನ ಪರಸ್ಮೈಪದಂ । ಅನ್ಯೇಷಾಮಪಿ ದೃಶ್ಯತ ಇತಿ ಸಂಹಿತಾಯಾಮಭ್ಯಾಸಸ್ಯ ದೀರ್ಘತ್ವಂ ॥

### ಪ್ರತಿಪದಾರ್ಥ

ಉಕ್ಷಣಃ—(ಇಷ್ಟಾರ್ಥಗಳನ್ನು) ಸುರಿಸುವವರೂ। **ಪಂಚ**— ಇಂದ್ರ, ವರುಣ, ಅಗ್ನಿ, ಅರ್ಯಮ, ಮತ್ತು ಸವಿತಾ ಅಥವಾ ಅಗ್ನಿ, ವಾಯು, ಸೂರ್ಯ, ಚಂದ್ರ ಮತ್ತು ವಿದ್ಯುತ್ ಎಂದು ಐದು ಸಂಖ್ಯೆಗಳುಳ್ಳವರೂ ಆದ। **ಯೇ ಅಮೀ**—ಯಾವ ಈ ದೇವತೆಗಳು। **ಮಹಃ**—ಅತ್ಯಂತ ವಿಸ್ತಾರವಾದ। **ದಿವಃ**—ದ್ಯುಲೋಕದ। **ಮಧ್ಯೇ**—ನಡುವೆ। **ತಸ್ಥುಃ**—ಇರುತ್ತಾರೋ (ಅವರು)। **ದೇವತ್ರಾ**—ದೇವತೆಗಳ ನಡುವೆ। **ಪ್ರವಾಚ್ಯಂ**—ಪ್ರಶಂಸನೀಯವಾದ (ನನ್ನ) ಸ್ತೋತ್ರವನ್ನು ಕುರಿತು। **ನು**—ಜಾಗ್ರತೆಯಾಗಿ। **ಸಧ್ರೀಚೀನಾಃ**—ಒಟ್ಟಿಗೆ ಸೇರಿಕೊಂಡು ಬಂದು (ನನ್ನ ಉಪಚಾರವನ್ನು ಸ್ವೀಕರಿಸುತ್ತಾರೆ)। **ನಿ ವವೃತುಃ**—(ಅನಂತರ ತೃಪ್ತರಾಗಿ) ಹಿಂತಿರುಗುತ್ತಾರೆ। **ರೋದಸೀ**—ಎಲೈ ದ್ಯಾವಾಪೃಥಿವಿಗಳೇ। **ಮೇ**—ನನ್ನ। **ಅಸ್ಯ**—ಈ ಸ್ತೋತ್ರವನ್ನು ಅಥವಾ ದುಃಖವನ್ನು। **ವಿತ್ತಂ**—ಚೆನ್ನಾಗಿ ಅರಿಯಿರಿ ॥

### ಭಾವಾರ್ಥ

ಅತ್ಯಂತ ವಿಸ್ತಾರವಾದ ದ್ಯುಲೋಕದ ಮಧ್ಯಭಾಗದಲ್ಲಿರುವವರೂ, ಇಷ್ಟಾರ್ಥಗಳನ್ನು ಸುರಿಸುವವರೂ ಆದ ಐದು ದೇವತೆಗಳೂ ಸಹ ಒಟ್ಟಿಗೆ ಹೋಗಿ ಸಕಲ ದೇವತೆಗಳಿಗೂ ನನ್ನ ಪ್ರಶಂಸನೀಯವಾದ ಸ್ತೋತ್ರವನ್ನು ಅರ್ಪಿಸಿ ಜಾಗ್ರತೆಯಾಗಿ ಹಿಂತಿರುಗುತ್ತಾರೆ. ಎಲೈ ದ್ಯಾವಾಪೃಥಿವಿಗಳೇ, ನನ್ನ ದುಃಖವನ್ನು ಚೆನ್ನಾಗಿ ಅರಿತು ನನ್ನ ಸ್ತೋತ್ರವನ್ನು ಕೇಳಿ ನನ್ನನ್ನು ದುಃಖದಿಂದ ಪಾರುಮಾಡಿರಿ.

### English Translation

May the five shedders (of benefits) who abide in the centre of the expanded heavens, having together conveyed my prayers quickly to the gods, (speedly) return. Heaven and earth, be conscious of this (my affliction).

### ವಿಶೇಷವಿಷಯಗಳು

**ಪಂಚ ಉಕ್ಷಣಃ**—ಅವರವರ ಕರ್ಮಗಳಿಂದ ಯಜ್ಞಕರ್ತರಿಗೆ ಇಷ್ಟಾರ್ಥಗಳನ್ನು ಸುರಿಸಿಕೊಡುವ ಐದು ದೇವತೆಗಳು. ಈ ಐದು ದೇವತೆಗಳು ಯಾರೆಂದರೆ

> ತನ್ನ ಇಂದ್ರಸ್ತದ್ವರುಣಸ್ತದರ್ಯಮಾ ತತ್ಸವಿತಾ ಚನೋ ಧಾತ್ ।
> (ಋ. ಸಂ. ೧-೧೦೭-೩)

ಎಂದು ಋಕ್ಸಂಹಿತೆಯಲ್ಲಿಯೇ ಹೇಳಿರುವಂತೆ ಇಂದ್ರ, ವರುಣ, ಅಗ್ನಿ, ಅರ್ಯಮ ಮತ್ತು ಸವಿತೃ ಈ ಐದು ದೇವತೆಗಳಾಗಬಹುದು, ಅಥವಾ,

> ಅಗ್ನಿಃ ಪೃಥಿವ್ಯಾಂ ವಾಯುರಂತರಿಕ್ಷೇ ಸೂರ್ಯೋ ದಿವಿ ಚಂದ್ರಮಾ ದಿಕ್ಷು ನಕ್ಷತ್ರಾಣಿ ಸ್ವಲೋಕೇ ।
> (ತೈ. ಆ. ೧-೨೦-೧)

ಎಂದು ತೈತ್ತಿರೀಯಾರಣ್ಯಕದಲ್ಲಿ ಹೇಳಿರುವಂತೆ ಅಗ್ನಿ, ವಾಯು, ಸೂರ್ಯ, ಚಂದ್ರ ಮತ್ತು ನಕ್ಷತ್ರಗಳು ಎಂದಾಗ ಬಹುದು ಅಥವಾ ಸಾಯಣರು **ತಥಾ ಚ ಶಾಟ್ಯಾಯನಕಂ** ಎಂದು ಉಲ್ಲೇಖಿಸುವ **ಏತಾನ್ಯೇವ ಪಂಚ ಜ್ಯೋತೀಂಷಿ ಯಾನ್ಯೇಷು ಲೋಕೇಷು ದೀಪ್ಯಂತೇ। ಅಗ್ನಿಃ ಪೃಥಿವ್ಯಾಂ ವಾಯುರಂತರಿಕ್ಷೇ ಚ ಆದಿತ್ಯೋ ದಿವಿ ಚಂದ್ರಮಾ ನಕ್ಷತ್ರೇ ವಿದ್ಯುದಪ್ಸು।** ಎಂಬ ವಾಕ್ಯದಲ್ಲಿ ಹೇಳಿರುವ ಐದು ದೇವತೆಗಳಾಗಬಹುದು.

**ಉಕ್ಷಣಃ—ಸೇಕ್ತಾರಃ, ಕಾಮಾಭಿವರ್ಷಕಾಃ।** ಸೇಚನ ಎಂದರೆ ಸುರಿಸು ಎಂದರ್ಥವನ್ನು ಕೊಡುವ **ಉಕ್ಷ್**‌ಧಾತುವಿನಿಂದ ನಿಷ್ಪನ್ನವಾಗಿದೆ. ಭಕ್ತರಿಗೆ ಇಷ್ಟಾರ್ಥಗಳನ್ನು ಸುರಿಸುವ ದೇವತೆಗಳೆಂದರ್ಥ. **ಉಕ್ಷನ್** ಶಬ್ದವನ್ನು ನಿರುಕ್ತಕಾರರು **ಮಹನ್ನಾಮ**ಗಳಲ್ಲಿ ಪಠಿಸಿದ್ದಾರೆ (ನಿ. ೩-೧೩) ಮತ್ತು,

**ಘಸತ್ತ ಇಂದ್ರ ಉಕ್ಷಣಃ ಪ್ರಿಯಂ ಕಾಚಿತ್ಕರಂ ಹವಿರ್ವಿಶ್ವಸ್ಮಾದಿಂದ್ರ ಉತ್ತರಃ।**
(ಋ. ಸಂ. ೧೦-೮೬-೧೩)

ಎಂಬ ಋಕ್ಕನ್ನು ಉದಹರಿಸಿ ಅದರಲ್ಲಿ ಬರುವ **ಉಕ್ಷಣ** ಶಬ್ದಕ್ಕೆ ಅರ್ಥವನ್ನು ಹೇಳುವಾಗ **ಉಕ್ಷಣ ಉಕ್ಷತೇ-ರ್ವೃದ್ಧಿಕರ್ಮಣಃ ಉಕ್ಷಂತ್ಯುದಕೇನೇತಿ ವಾ** (ನಿ. ೧೨-೯) ವೃದ್ಧಿಯಾಗು ಎಂದರ್ಥವನ್ನು ಕೊಡುವ **ಉಕ್ಷ್** ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ ಉದಕದೊಂದಿಗೆ ವೃದ್ಧಿಯಾಗತಕ್ಕ ಎಂದರ್ಥವನ್ನು ಆ ಸಂದರ್ಭದಲ್ಲಿ ಮಾಡಿರುತ್ತಾರೆ. ಸಾಧಾರಣವಾಗಿ ಉಕ್ಷಣಶಬ್ದವು ಶಕ್ತಿ, ಸಾಮರ್ಥ್ಯ ಎಂಬರ್ಥದಲ್ಲಿ ಉಪಯೋಗಿಸಿದೆ. ಸೇಚನ ಸಾಮರ್ಥ್ಯದಲ್ಲಿ ತಾತ್ಪರ್ಯವಾಗುತ್ತದೆ. ಉದಾಹರಣೆಗೆ—

**ತೇ ಜಜ್ಞಿರೇ ದಿವ ಋಷ್ವಾಸ ಉಕ್ಷಣೋ ರುದ್ರಸ್ಯ ಮರ್ಯಾ ಅಸುರಾ ಅರೇಪಸಃ।**
(ಋ. ಸಂ. ೧-೬೪-೨)

**ಇಮೇ ಯೇ ತೇ ಸು ವಾಯೋ ಬಾಹ್ವೋಜಸೋಽಂತರ್ನದೀ ತೇ ಪತಯಂತ್ಯುಕ್ಷಣೋ ಮಹಿ ವ್ರಾಧಂತ ಉಕ್ಷಣಃ।**
(ಋ. ಸಂ. ೧-೧೩೫-೯)

**ಕೃಣ್ವಂತಮಗ್ನಿಂ ಘೃತಪೃಷ್ಠಮುಕ್ಷಣಂ ಪೃಣಂತಂ ದೇವಂ ಪೃಣತೇ ಸುವೀರ್ಯಂ।**
(ಋ. ಸಂ. ೧೦-೧೨೨-೪)

ಇತ್ಯಾದಿಋಕ್ಕುಗಳಲ್ಲಿ **ಉಕ್ಷಣ**ಶಬ್ದಕ್ಕೆ **ಸೇಚನ**ವೆಂಬ ಅರ್ಥವಾದರೂ ಸಹ **ಸೇಚನಸಾಮರ್ಥ್ಯ**ವೆಂದು ಶಕ್ತಿಯಲ್ಲಿ ಪರ್ಯವಸಾನವಾಗಿರುವುದರಿಂದ **ಯುವಾನಃ** ಎಂದು ಅರ್ಥಮಾಡಿರುತ್ತಾರೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಸೇಚನಸಾಮರ್ಥ್ಯ**ವುಳ್ಳವರೆಂದೇ ಅರ್ಥಮಾಡಬಹುದು.

**ದೇವತ್ರಾ—ದೇವೇಷು**—ದೇವತೆಗಳ ನಡುವೆಯೆಂದರ್ಥ.

**ಸಧ್ರೀಚೀನಾ— ಸಹಾಂಚಂತೋ ಯುಗಪದಾಗಚ್ಛಂತಸ್ತೇ ದೇವಾಃ** ಒಟ್ಟಿಗೆ ಸೇರಿಕೊಂಡು ಬರತಕ್ಕವರು.

ವ್ಯಾಕರಣಪ್ರಕ್ರಿಯ

**ಉಕ್ಷಣಃ**—ಉಕ್ಷನ್ ಶಬ್ದ. ಇದಕ್ಕೆ ಜಸ್ ಪರವಾದಾಗ ಉಪಧಾದೀರ್ಘಪ್ರಾಪ್ತವಾದರೆ **ವಾಷಪೂರ್ವಸ್ಯನಿಗಮೇ** (ಪಾ. ಸೂ. ೬.೪-೯) ಎಂಬುದರಿಂದ ಷಕಾರಪೂರ್ವಕವಾದುದರಿಂದ ಉಪಧಾದೀರ್ಘ ಬರುವುದಿಲ್ಲ.

**ತಸ್ಥುಃ**—ಷ್ಠಾ ಗತಿ ನಿವೃತ್ತೌ ಧಾತು. ಲಿಟ್ ಪ್ರಥಮಪುರುಷ ಬಹುವಚನರೂಪ. ಯೇ ಎಂದು ಹಿಂದೆ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ.ಸೂ.೮-೧-೬೬) ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಮಹಃ**—ಮಹ ಪೂಜಾಯಾಂ. ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಷಷ್ಠೀ ಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ದೇವತ್ರಾ**—**ದೇವಮನುಷ್ಯ**—(ಪಾ. ಸೂ. ೫-೪-೫೬) ಎಂಬುದರಿಂದ ಸಪ್ತಮ್ಯರ್ಥದಲ್ಲಿ ತ್ರಾ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಪ್ರವಾಚ್ಯಮ್**—ವಚ ಪರಿಭಾಷಣೇ. ಧಾತು. ಇದಕ್ಕೆ ಣಿಜಂತದ ಮೇಲೆ **ಅಚೋಯತ್**—(ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ. ಣಿಚ್‌ನಿಮಿತ್ತವಾಗಿ **ಅತ ಉಪಧಾಯಾಃ**—(ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. **ಣೇರನಿಟಿ**—(ಪಾ. ಸೂ. ೬-೪-೫೧) ಎಂಬುದರಿಂದ ಯತ್ ನಿಮಿತ್ತವಾಗಿ ಣಿಚಿಗೆ ಲೋಪ. **ಯತೋಽನಾವಃ**—(ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರ ಎಂಬುದರೊಡನೆ ಗತಿಸಮಾಸವಾದಾಗ **ಗತಿಕಾರಕೋಪಪದಾತ್ ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸಧ್ರೀಚೀನಾಃ**—ಸಹ ಅಂಚತಿ ಇತಿ ಸಧ್ರ್ಯಙ್. ತೇ ಏವ ಸಧ್ರೀಚೀನಾಃ ಸಹ ಪೂರ್ವವಾಗಿರುವಾಗ, ಅಂಚುಗತಿಪೂಜನಯೋಃ ಧಾತುವಿಗೆ **ಋತ್ವಿಕ್‌ದಧೃಕ್**—(ಪಾ. ಸೂ ೩-೨-೫೯) ಎಂಬುದರಿಂದ ಕ್ವಿನ್ ಪ್ರತ್ಯಯ. **ಅನಿದಿತಾಂ ಹಲ**—(ಪಾ. ಸೂ. ೬-೪-೨೪) ಎಂಬುದರಿಂದ ಧಾತುವಿನ ಉಪಧಾನಕಾರಲೋಪ. **ಸಹಸ್ಯ ಸಧ್ರಿಃ** (ಪಾ. ಸೂ. ೬-೩-೯೫) ಎಂಬುದರಿಂದ ಸಹ ಎಂಬುದಕ್ಕೆ ಸಧ್ರ್ಯಾದೇಶ. ಇದರ ಮೇಲೆ ಸ್ವಾರ್ಥದಲ್ಲಿ **ವಿಭಾಷಾಂಚೇರದಿಕ್ ಸ್ತ್ರಿಯಾಮ್**—(ಪಾ. ಸೂ. ೫-೪-೮) ಎಂಬುದರಿಂದ ಖಪ್ರತ್ಯಯ. **ಆಯನೇಯೀನೀ**—(ಪಾ ಸೂ. ೭-೧-೨) ಎಂಬುದರಿಂದ ಅದಕ್ಕೆ ಈನಾದೇಶ. ಪ್ರಥಮಾಬಹುವಚನಾಂತರೂಪ.

**ವವೃತುಃ**—ವೃತು ವರ್ತನೇ ಧಾತು. ವರ್ತಮಾನಾರ್ಥ ತೋರುವಾಗ **ಛಂದಸಿ ಲುಙ್‌ಲಙ್‌ಲಿಟಃ**—(ಪಾ. ಸೂ. ೩-೪-೬) ಎಂಬುದರಿಂದ ಲಿಟ್. ಆತ್ಮನೇಪದಿಯಾದರೂ **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ಪರಸ್ಮೈಪದ ಪ್ರತ್ಯಯ ಬರುತ್ತದೆ. ದ್ವಿವಚನಕ್ಕೆ **ಪರಸ್ಮೈಪದಾನಾಂ** (ಪಾ. ಸೂ. ೩-೪-೮೨) ಎಂಬುದರಿಂದ ಅತುಸಾದೇಶ. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಅದಿಹಲ್‌ಶೇಷ.

**ಉರತ್** ಎಂಬುದರಿಂದ ಅತ್ವ. ತಪರವಾಗಿ ಬಂದಾಗ ಆದಿಹಲ್‌ಶೇಷ. **ಅನ್ಯೇಷಾಮಪಿದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ಸಂಹಿತಾದಲ್ಲಿ ಅಭ್ಯಾಸಕ್ಕೆ ದೀರ್ಘ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.



ಸಂಹಿತಾಪಾಠಃ

ಸುಪರ್ಣಾ ಏತ ಆಸತೇ ಮಧ್ಯ ಆರೋಧನೇ ದಿವಃ ।
ತೇ ಸೇಧಂತಿ ಪಥೋ ವೃಕಂ ತರಂತಂ ಯಹ್ವತೀರಪೋ ವಿತ್ತಂ
ಮೇ ಅಸ್ಯ ರೋದಸೀ ॥ ೧೧ ॥

। ಪದಪಾಠಃ ।

**ಸುऽಪರ್ಣಾಃ । ಏತೇ । ಆಸತೇ । ಮಧ್ಯೇ । ಆऽರೋಧನೇ । ದಿವಃ ।**
**ತೇ । ಸೇಧಂತಿ । ಪಥಃ । ವೃಕಂ । ತರಂತಂ । ಯಹ್ವತೀಃ । ಅಪಃ । ವಿತ್ತಂ ।**
**ಮೇ । ಅಸ್ಯ । ರೋದಸೀ ಇತಿ ॥ ೧೧ ॥**

ಸಾಯಣಭಾಷ್ಯಂ

ಸುಪರ್ಣಾಃ । ರಶ್ಮಿನಾಮೈತತ್ । ಶೋಭನಪತನಾ ಏತೇ ಸೂರ್ಯರಶ್ಮಯ ಆರೋಧನೇ ಸರ್ವಸ್ಯಾವರಕೇ ವ್ಯಾಪ್ತೇ ದಿವೋಂತರಿಕ್ಷಸ್ಯ ಮಧ್ಯ ಆಸತೇ ವರ್ತಂತೇ । ತೇ ಸೂರ್ಯರಶ್ಮಯಃ ಪಥೋ ಮಾರ್ಗಾದ್ವೃಕಮಾರಣ್ಯಶ್ವಾನಂ ಸೇಧಂತಿ । ನಿಷೇಧಂತಿ । ನಿವಾರಯಂತಿ । ಕೀದೃಶಂ । ಯಹ್ವತೀರ್ಮ-

ಹತೀರಪಸ್ತರಂತಮತಿಕ್ರಾಮಂತಂ । ಕೂಪಪತಿತೇನಾತ್ಪೂರ್ವಂ ತ್ರಿತಂ ದೃಷ್ಟ್ವೈನಂ ಭಕ್ಷಯಿತುಂ ಕಶ್ಚಿದರಣ್ಯಶ್ವಾ ಮಹತೀಂ ನದೀಂ ತಿತೀರ್ಷುರಾಜಗಾಮ । ಸ ಚ ಸೂರ್ಯರಶ್ಮೀನ್ದೃಷ್ಟ್ವಾ ಯಮವಸರೋ ನ ಭವತೀತಿ ನಿವವೃತೇ । ಅತೋ ರಶ್ಮಯೋ ವೃಕಂ ನಿಷೇಧಂತೀತ್ಯುಚ್ಯತೇ । ಯಾಸ್ಕಪಕ್ಷೇ ತ್ವಾಪ ಇತ್ಯಂತರಿಕ್ಷನಾಮ । ಯಹ್ವತೀರಪೋ ಮಹದಂತರಿಕ್ಷಂ ಪಥಃ ಪಥಾ ದ್ವಾದಶರಾಶ್ಯಾತ್ಮನಾ ಮಾರ್ಗೇಣ ತರಂತಂ ವೃಕಂ ಚಂದ್ರಮಸಂ ಸೂರ್ಯರಶ್ಮಯೋ ನಿಷೇಧಂತಿ । ಅಹನಿ ಹಿ ಸೂರ್ಯರಶ್ಮಿಭಿರ್ನಿರುದ್ಧಶ್ಚಂದ್ರಮಾ ನಿಷ್ಪ್ರಭೋ ದೃಶ್ಯತೇ । ಅತೋ ನಿಷ್ಪ್ರಭಂ ಕುರ್ವಂತೀತ್ಯರ್ಥಃ ॥ ಆರೋಧನೇ । ಆರುಧ್ಯತ ಆವ್ರಿಯತೇಽನೇನೇತ್ಯಾರೋಧನಂ ॥ ಕರಣೇ ಲ್ಯುಟ್ । ಸೇಧಂತಿ । ಷಿಧು ಗತ್ಯಾಂ । ಅಯಂ ಕೇವಲೋಽಪಿ ನಿಪೂರ್ವಾರ್ಥೇ ದ್ರಷ್ಟವ್ಯಃ । ಪಥಃ । ಪಂಚಮ್ಯೇಕವಚನೇ ಭಸ್ಯ ಟೇರ್ಲೋಪ ಇತಿ ಟಿಲೋಪಃ । ಉದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವಂ । ಯಾಸ್ಕಪಕ್ಷೇ ತು ತೃತೀಯಾರ್ಥೇ ವ್ಯತ್ಯಯೇನ ಪಂಚಮೀ । ಯಹ್ವತೀಃ । ಯಹ್ವ ಇತಿ ಮಹನ್ನಾಮ । ಅಸ್ಮಾದಾಚಾರಾರ್ಥೇ ಸರ್ವಪ್ರಾತಿಪದಿಕೇಭ್ಯಃ । ಮ. ೩-೧-೧೧-೩ । ಇತಿ ಕ್ವಿಪ್ । ತತೋ ಲಟಃ ಶತೃ । ಉಗಿತಶ್ಚೇತಿ ಙೀಪ್ । ಆಗಮಾನುಶಾಸನಸ್ಯಾನಿತ್ಯತ್ವಾನ್ನುಮಭಾವಃ । ಶತುರನುಮ ಇತಿ ನದೀಸ್ವರೋ ವ್ಯತ್ಯಯೇನ ನ ಪ್ರವರ್ತತೇ ॥

ಪ್ರತಿಪದಾರ್ಥ

**ಸುಪರ್ಣಾಃ**—ಮನೋಹರವಾದ ಪತನವುಳ್ಳ । **ಏತೇ**—ಈ ಸೂರ್ಯನ ಕಿರಣಗಳು । **ಆರೋಧನೇ**—ಸರ್ವತ್ರ ವ್ಯಾಪಿಸಿರುವ । **ದಿವಃ**—ಅಂತರಿಕ್ಷದ । **ಮಧ್ಯೇ**—ಮಧ್ಯಭಾಗದಲ್ಲಿ । **ಆಸತೇ**—ಇರುತ್ತವೆ । **ತೇ**—ಆ ಸೂರ್ಯರಶ್ಮಿಗಳು । [**ಪಥಃ**—ಮಾರ್ಗದಿಂದ (ತ್ರಿತನನ್ನು ತಿನ್ನಲು) । **ಯಹ್ವತೀಃ**—ಮಹತ್ತಾದ । **ಅಪಃ**—ನೀರುಗಳನ್ನು । **ತರಂತಂ**—ದಾಟುತ್ತಿರುವ । **ವೃಕಂ**—ತೋಳನನ್ನು । **ಸೇಧಂತಿ**—ತಡೆದು ನಿಲ್ಲಿಸುತ್ತವೆ. ]

**ಅಥವಾ**

**ಯಹ್ವತೀಃ**—ಮಹತ್ತಾದ । **ಅಪಃ**—ಅಂತರಿಕ್ಷವನ್ನು । **ಪಥಃ**—(ದ್ವಾದಶರಾಶಿರೂಪವಾದ) ಮಾರ್ಗದಿಂದ । **ತರಂತಂ**—ಪ್ರಸರಿಸಿ ಬರುತ್ತಿರುವ । **ವೃಕಂ**—ಚಂದ್ರನನ್ನು । **ಸೇಧಂತಿ**—ತಡೆದುನಿಲ್ಲಿಸುತ್ತವೆ. (ಮಂಕಾಗುವಂತೆ ಮಾಡುತ್ತವೆ) । **ರೋದಸೀ**—ಎಲೈ ದ್ಯಾವಾಪೃಥಿವಿಗಳೇ, । **ಮೇ**—ನನ್ನ । **ಅಸ್ಯ**—ಈ ದುಃಖವನ್ನು । **ವಿತ್ತಂ**—ಅರಿಯಿರಿ.

ಭಾವಾರ್ಥ

ಮನೋಹರವಾದ ಪತನವುಳ್ಳ ಸೂರ್ಯನ ಕಿರಣಗಳು ಸರ್ವತ್ರವ್ಯಾಪಿಸಿರುವ ಅಂತರಿಕ್ಷದ ಮಧ್ಯಭಾಗದಲ್ಲಿರುತ್ತವೆ. ಅವು ದಾರಿಯಲ್ಲಿ ಮಹತ್ತಾದ ನೀರುಗಳನ್ನು ದಾಟಿ ತ್ರಿತನನ್ನು ತಿನ್ನಲು ಬರುತ್ತಿರುವ ತೋಳನನ್ನು ತಡೆದು ನಿಲ್ಲಿಸುತ್ತವೆ. ಎಲೈ ದ್ಯಾವಾಪೃಥಿವಿಗಳೇ, ನನ್ನ ಈ ದುಃಖವನ್ನರಿತು ನನ್ನ ಸ್ತೋತ್ರವನ್ನು ಕೇಳಿ ನನ್ನನ್ನು ರಕ್ಷಿಸಿರಿ.

English Translation

The rays of the sun abide in the surrounding centre of heaven ; they drive back the wolf crossing the great waters from the path. Heaven and earth be conscious of this (my affliction).

ವಿಶೇಷವಿಷಯಗಳು

**ಸುಪರ್ಣಾಃ**—ಸುಪರ್ಣಶಬ್ದವು **ರಶ್ಮಿನಾಮ**ಗಳಲ್ಲಿಯೂ (ನಿ. ೧-೫) ಅಶ್ವನಾಮಗಳಲ್ಲಿಯೂ (ನಿ. ೧-೧೪) ಪಠಿತವಾಗಿದೆಯಾದರೂ ಸಹ **ಪಕ್ಷಿ, ಬಾಣ** ಇತ್ಯಾದ್ಯರ್ಥಗಳಲ್ಲಿಯೂ ಉಪಯೋಗಿಸಲ್ಪಟ್ಟಿದೆ. ಯಾವ ಅರ್ಥವನ್ನು ಹೇಳಿದರೂ **ಶೋಭನಪತನ** ಎಂದರೆ ಮನೋಹರವಾಗಿಯೂ ಆಕರ್ಷಕವಾಗಿಯೂ ಸಂಚರಿಸತಕ್ಕನ್ನು ಎಂಬ ಅಭಿಪ್ರಾಯವನ್ನೇ ಕೊಡುತ್ತದೆ.

**ವಿ ಸುಪರ್ಣೋ ಅಂತರಿಕ್ಷಾಣ್ಯಖ್ಯದ್ಗಭೀರವೇಪಾ ಅಸುರಃ ಸುನೀಥಃ ।**
(ಋ. ಸಂ. ೧-೩೫-೭)

**ಕೃಷ್ಣಂ ನಿಯಾನಂ ಹರಯಃ ಸುಪರ್ಣಾ ಅಪೋ ವಸಾನಾ ದಿವಮುತ್ಪತಂತಿ ।**
(ಋ. ಸಂ. ೧-೧೬೪-೪೭)

ಇತ್ಯಾದಿ ಋಕ್ಕುಗಳಲ್ಲಿ **ಶೋಭನಪತನಾ** ರಶ್ಮಯಃ ಎಂದೂ,

**ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿ ಷಸ್ವಜಾತೇ ।**
(ಋ. ಸಂ. ೧-೧೬೪-೨೦)

ಇತ್ಯಾದಿ ಋಕ್ಕುಗಳಲ್ಲಿ (೧-೧೪೬-೪೬ ; ೨-೪-೨೨ ಇತ್ಯಾದಿ) ಸುಪತನಗಳಾದ ಪಕ್ಷಿಗಳೆಂದೂ,

**ಉಕ್ಷಾ ಸಮುದ್ರೋ ಅರುಷಃ ಸುಪರ್ಣಃ ಪೂರ್ವಸ್ಯ ಯೋನಿಂ ಪಿತುರಾವಿವೇಶ ।**
(ಋ. ಸಂ. ೫-೪೭-೩)

ಎಂಬಲ್ಲಿ ಸುಗಮನವುಳ್ಳ **ಸಮುದ್ರ**ವೆಂದೂ,

**ಸುಪರ್ಣಂ ವಸ್ತೇ ಮೃಗೋ ಅಸ್ಯಾ ದಂತೋ ಗೋಭಿಃ ಸಂನದ್ಧಾ ಪತತಿ ಪ್ರಸೂತಾ ।**
(ಋ. ಸಂ. ೬-೭೫-೧೧)

ಎಂಬ ನಿರುಕ್ತದಲ್ಲಿ ಉದಾಹೃತವಾಗಿರುವ (೯-೧೯) ಋಕ್ಕಿನಲ್ಲಿ ಸುಪತನವುಳ್ಳ **ಬಾಣ**ವೆಂದೂ ಹೀಗೆಯೇ ನಾನಾರ್ಥಗಳಾಗುತ್ತವೆ. ಪ್ರಕೃತವಾದ ಋಕ್ಕಿನಲ್ಲಿ **ಶೋಭನ** ಪತನವಾದ ರಶ್ಮಿಗಳೆಂದರ್ಥ.

**ಆರೋಧನೇ**—ಸಾಯಣರು ಈ ಪದಕ್ಕೆ ವ್ಯಾಪ್ತ್ಯರ್ಥವನ್ನು ಸ್ಕಂದಸ್ವಾಮಿಗಳು **ಆರೋಹತಿ ಮರ್ತ್ಯಾ-ಜಯಾ ರುಣದ್ಧಿ ವಾ ತಮಾಂಸೀತ್ಯಾರೋಧನಮಾದಿತ್ಯಮಂಡಲಮಿಹಾಭಿಪ್ರೇತಂ ।** ಕತ್ತಲನ್ನು ತಡೆಯುತ್ತ

ಆದಿತ್ಯಮಂಡಲವೆಂದೂ ಅರ್ಥವನ್ನು ಹೇಳಿರುತ್ತಾರೆ. ಉಳಿದ ಕಡೆಗಳಲ್ಲಿ **ಆರೋಧನ**ಶಬ್ದಕ್ಕೆ ಸಾಧಾರಣವಾಗಿ ಆರೋಹಣ, ಹತ್ತುವುದು ಅಥವಾ (ಸ್ವರ್ಗವನ್ನು) ಹತ್ತುವ ಯೋಗ್ಯತೆಯುಳ್ಳದ್ದು ಎಂದರ್ಥವಾಗುತ್ತದೆ. ಉದಾಹರಣೆಗೆ—

**ಜೂತ ಈಯಸೇ ಪ್ರದಿವ ಉರಾಣೋ ವಿದುಷ್ಟರೋ ದಿವ ಆರೋಧನಾನಿ ।**

(ಋ. ಸಂ. ೪-೭-೮)

**ಸ ಹಿ ವೇದಾ ವಸುಧಿತಿಂ ಮಹಾಁ ಆರೋಧನಂ ದಿವಃ ।**

(ಋ. ಸಂ. ೪-೮-೨)

ಇತ್ಯಾದಿ ಋಕ್ಕುಗಳಲ್ಲಿ **ಆರೋಹಣ**ವೆಂಬ ಅರ್ಥದಲ್ಲಿ ಈ ಪದವನ್ನು ಪ್ರಯೋಗಿಸಿದೆ. ಪ್ರಕೃತವಾದ ಋಕ್ಕಿನಲ್ಲಿ, **ಸರ್ವತ್ರವ್ಯಾಪಿಸಿರುವ** ಎಂದರ್ಥವಾಗಿರುತ್ತದೆ.

**ತೇ ಸೇಧಂತಿ ಪಥೋ ವೃಕಂ ತರಂತಂ ಯಹ್ವತೀರಪಃ ।** ಎಂಬ ವಾಕ್ಯಕ್ಕೆ ಎರಡು ವಿಧವಾದ ಅರ್ಥಗಳಾಗಬಹುದು. ಮೊದಲನೆಯದಾಗಿ, **ಅಪಃ** ಎಂಬ ಶಬ್ದಕ್ಕೆ **ನೀರೆಂದೂ ವೃಕ**ಶಬ್ದಕ್ಕೆ **ತೋಳ**ನೆಂದೂ ಅರ್ಥವಾದರೆ ಆಗ ಹಿಂದೆ ಈ ಸೂಕ್ತದ ಪ್ರಾರಂಭದಲ್ಲಿ ವಿವರಿಸಿರುವಂತೆ ತೋಳನು ತ್ರಿತನನ್ನು ತಿನ್ನಲು ಬಂದಾಗ **ತೇ** ಆ ಸೂರ್ಯಕಿರಣಗಳು **ಸೇಧಂತಿ** ತಡೆದು ನಿಲ್ಲಿಸುತ್ತವೆಯೆಂದು ಅರ್ಥವಾಗುತ್ತದೆ. ಇದು ಸಾಯಣರ ಸ್ವತಂತ್ರವಾದ ಅರ್ಥ. ತಮ್ಮ ಅರ್ಥಕ್ಕೆ ಪ್ರಥಮಪ್ರಾಶಸ್ತ್ಯವನ್ನು ಕೊಟ್ಟು **ಕೂಪಪತನಾತ್ಪೂರ್ವಂ ತ್ರಿತಂ ದೃಷ್ಟ್ವಾ ಏನಂ ಭಕ್ಷ-ಯಿತುಂ ಕಶ್ಚಿದರಣ್ಯಶ್ವಾ ಮಹತೀಂ ನದೀಂ ತಿತೀರ್ಷುಃ ಆ ಜಗಾಮ । ಸ ಚ ಸೂರ್ಯರಶ್ಮೀನ್ ದೃಷ್ಟ್ವಾ ಅಯಮವಸರೋ ನ ಭವತೀತಿ ನಿವವೃತೇ । ಅತೋ ರಶ್ಮಯೋ ವೃಕಂ ನಿಷೇಧಂತೀತ್ಯುಚ್ಯತೇ ।** ತ್ರಿತನು ಬಾವಿಯಲ್ಲಿ ಬೀಳುವುದಕ್ಕೆ ಮೊದಲು ವೃಕವು ಮಹತ್ತಾದ ನದಿಯನ್ನು ದಾಟಲು ಪ್ರಯತ್ನಪಟ್ಟಾಗ ಸೂರ್ಯರಶ್ಮಿಗಳನ್ನು ನೋಡಿ ಈಗ ಇದು ಸಮಯವಲ್ಲವೆಂದು ಹಿಂತಿರುಗಿತು. ಆದುದರಿಂದಲೇ ಸೂರ್ಯರಶ್ಮಿಗಳು ವೃಕನನ್ನು ತಡೆದವು ಎಂದಭಿಪ್ರಾಯವೆಂದು ಮೊದಲು ಹೇಳಿ ಅನಂತರ—**ಯಾಸ್ಕಪಕ್ಷೇ ತು**— **ಅಪ ಇತ್ಯಂತರಿಕ್ಷನಾಮ । ಯಹ್ವ-ತೀರಪೋ ಮಹದಂತರಿಕ್ಷಂ ಪಥಃ ಪಥಾ ದ್ಯಾವಾಪೃಥಿವ್ಯಾತ್ಮನಾ ಮಾರ್ಗೇಣ ತರಂತಂ ವೃಕಂ ಚಂದ್ರಮಸಂ ಸೂರ್ಯರಶ್ಮಯೋ ನಿಷೇಧಂತಿ । ಅಹನಿ ಹಿ ಸೂರ್ಯರಶ್ಮಿಭಿಃ ನಿರುದ್ಧಶ್ಚಂದ್ರಮಾ ನಿಷ್ಪ್ರಭೋ ದೃಶ್ಯತೇ । ಅತೋ ನಿಷ್ಪ್ರಭಂ ಕುರ್ವಂತೀತ್ಯರ್ಥಃ.** ಯಾಸ್ಕರ ಮತದಂತೆ, **ಅಪಃ** ಎಂಬ ಶಬ್ದಕ್ಕೆ ಅಂತರಿಕ್ಷವೆಂದೂ ವೃಕಶಬ್ದಕ್ಕೆ ಚಂದ್ರನೆಂದೂ ಅರ್ಥವಾದರೆ, ಆಗ ಹಗಲಿನಲ್ಲಿ ಚಂದ್ರನ ಪ್ರಕಾಶವು ಮಹತ್ತಾದ ಅಂತರಿಕ್ಷದಲ್ಲಿ ಪ್ರಸರವಾಗದಂತೆ ಸೂರ್ಯನ ಕಿರಣಗಳು ತಡೆಯುತ್ತವೆಯೆಂದೂ ಅಭಿಪ್ರಾಯವೆಂದು ಸಾಯಣರು ಎರಡು ಅರ್ಥಗಳನ್ನು ಹೇಳಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಸುಪರ್ಣಾಃ**—ಶೋಭನಾಃ ಪರ್ಣಾಃ ಯಸ್ಯ ಸಃ ಸುಪರ್ಣಃ **ನಞ್ಸುಭ್ಯಾಮ್**—(ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಪ್ರಥಮಾಬಹುವಚನಾಂತರೂಪ.

**ಆಸತೇ**—ಆಸು ಉಪವೇಶನೇ. ಧಾತು. ಅದಾದಿ. ಲಟ್ ಪ್ರಥಮಪುರುಷ ಬಹುವಚನದಲ್ಲಿ **ಆತ್ಮನೇಪದೇಷ್ವನತಃ**—(ಪಾ. ಸೂ. ೭-೧-೫) ಎಂಬುದರಿಂದ ಝ ಪ್ರತ್ಯಯಕ್ಕೆ ಅತಾದೇಶ. ಟಿಗೆ ಏತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಆರೋಧನೇ**—ಆರುಧ್ಯತೇ ಆವ್ರಿಯತೇ ಅನೇನ ಇತಿ ಆರೋಧನಮ್. ರುಧಿರ್ ಆವರಣೇ ಧಾತು. ಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ **ಯುವೋರನಾಕೌ**—(ಪಾ. ಸೂ. ೭-೨-೧) ಎಂಬುದರಿಂದ ಅನಾದೇಶ. ರುಧ್ ಎಂಬುವಕ್ಕೆ ಲಘೂಪಧಗುಣ. ಪ್ರತ್ಯಯ ಲಿತ್ತಾದುದರಿಂದ **ಲಿತಿ**—ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ

**ಸೇಧಂತಿ**—ಷಿಧು ಗತ್ಯಾಮ್. ಧಾತು. ಇದು ಕೇವಲವಾಗಿದ್ದರೂ ನಿ ಉಪಸರ್ಗವಿಶಿಷ್ಟವಾದುದರ ಅರ್ಥವನ್ನು ಬೋಧಿಸುತ್ತದೆ. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪಥಃ**—ಪಥಿನ್‌ಶಬ್ದ. ಇದಕ್ಕೆ ಪಂಚಮ್ಯೇಕವಚನ ಙಸಿಪ್ರತ್ಯಯ ಪರವಾದಾಗ ಭಸಂಜ್ಞಾ ಇರುವುದರಿಂದ **ಭಸ್ಯ ಟೇರ್ಲೋಪಃ**—(ಪಾ. ಸೂ. ೭-೧-೮೮) ಎಂಬುದರಿಂದ ಟಿಗೆ ಲೋಪ. ಅನುದಾತ್ತವಾದ ವಿಭಕ್ತಿ ನಿಮಿತ್ತವಾಗಿ ಉದಾತ್ತವಾದ ಇನಿಗೆ ಲೋಪ ಬಂದುದರಿಂದ **ಅನುದಾತ್ತಸ್ಯ ಯತ್ರೋದಾತ್ತಲೋಪಃ**—(ಪಾ. ಸೂ. ೬-೧-೧೬೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಯಾಸ್ಕರ ಮತದಲ್ಲಿ ಇಲ್ಲಿ ತೃತೀಯಾರ್ಥದಲ್ಲಿ ಪಂಚಮೀ ಬಂದಿದೆ.

**ಯಹ್ವತೀಃ**—ಯಹ್ವ ಎಂಬುದು ಮಹತ್ತಿನ ಹೆಸರು. ಇದರಮೇಲೆ ಆಚಾರಾರ್ಥದಲ್ಲಿ **ಸರ್ವಪ್ರಾತಿಪದಿಕೇಭ್ಯಃ ಕ್ವಿಬ್ವಾ ವಕ್ತವ್ಯಃ**—(ಪಾ. ವಾ. ೩-೧-೧೧-೩) ಎಂಬುದರಿಂದ ಕ್ವಿಪ್. ಆಚಾರಕ್ವಿಬಂತವಾದ ಯಹ್ವ ಎಂಬುದಕ್ಕೆ **ಸನಾದ್ಯಂತಾ ಧಾತವಃ**—ಎಂಬುದರಿಂದ ಧಾತುಸಂಜ್ಞಾ ಬರುತ್ತದೆ. ಇದರ ಮೇಲೆ ವರ್ತಮಾನಾರ್ಥದಲ್ಲಿ ಲಟ್ ಬಂದಾಗ ಅದಕ್ಕೆ ಶತೃಪ್ರತ್ಯಯ. ಯಹ್ವತ್ ಎಂದು ರೂಪವಾಗುತ್ತದೆ. ಇದಕ್ಕೆ ಸ್ತ್ರೀತ್ವ ವಿವಕ್ಷಾ ಮಾಡಿದಾಗ **ಉಗಿತಶ್ಚ**—(ಪಾ. ಸೂ. ೪-೧-೬) ಎಂಬುದರಿಂದ ಶತೃನಲ್ಲಿ ಉಗಿತ್ತಾದುದರಿಂದ ಙೀಪ್ ಬರುತ್ತದೆ. **ಆಗಮಾನುಶಾಸನಮನಿತ್ಯಮ್**—ಎಂಬ ವಚನದಿಂದ ಉಗಿತ್ತಾದರೂ ನುಮಾಗಮ ಬರುವುದಿಲ್ಲ. ನುಮ್‌ರಹಿತವಾದ ಶತೃವಿನ ಪರದಲ್ಲಿ ನದಿಯು ಬಂದರೂ **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ಇಲ್ಲಿ ನದಿಗೆ (ಈ) ಉದಾತ್ತಸ್ವರ ಬರುವುದಿಲ್ಲ.

**ಅಪಃ**—**ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ‖ ೧೧ ‖



ಸಂಹಿತಾಪಾಠಃ

ನವ್ಯಂ ತದುಕ್ಥ್ಯಂ ಹಿತಂ ದೇವಾಸಃ ಸುಪ್ರವಾಚನಂ ।
ಋತಮರ್ಷಂತಿ ಸಿಂಧವಃ ಸತ್ಯಂ ತಾತಾನ ಸೂರ್ಯೋ ವಿತ್ತಂ
ಮೇ ಅಸ್ಯ ರೋದಸೀ ॥ ೧೨ ॥

ಪದಪಾಠಃ

ನವ್ಯಂ । ತತ್ । ಉಕ್ಥ್ಯಂ । ಹಿತಂ । ದೇವಾಸಃ । ಸುऽಪ್ರವಾಚನಂ ।
ಋತಂ । ಅರ್ಷಂತಿ । ಸಿಂಧವಃ । ಸತ್ಯಂ । ತತಾನ । ಸೂರ್ಯಃ । ವಿತ್ತಂ । ಮೇ ।
ಅಸ್ಯ । ರೋದಸೀ ಇತಿ ॥ ೧೨ ॥

ಸಾಯಣಭಾಷ್ಯಂ

ಹೇ ದೇವಾಸೋ ದೇವಾಃ ನವ್ಯಂ ನವತರಮುಕ್ಥ್ಯಂ ಪ್ರಶಸ್ಯಂ ಸ್ತುತ್ಯರ್ಹಂ ಸುಪ್ರವಾಚನಂ ಸುಷ್ಠು ಋತ್ವಿಗ್ಭಿರ್ವಾಚಯಿತುಂ ಶಕ್ಯಂ ಏವಂಭೂತಂ ತದ್ಭವದೀಯಂ ಬಲಂ ಹಿತಂ । ಯುಷ್ಮಾಸು ನಿಹಿತಂ । ಅತೋ ಯುಷ್ಮದೀಯೇನ ಬಲೇನ ಸಿಂಧವಃ ಸ್ಯಂದನಶೀಲಾ ನದ್ಯ ಋತಮುದಕಮರ್ಷಂತಿ । ಆಲಸ್ಯರಾಹಿತ್ಯೇನ ಸರ್ವದಾ ಪ್ರೇರಯಂತಿ । ಅಶೋಷ್ಯಾಃ ಸತ್ಯಃ ಪ್ರವಹಂತೀತ್ಯರ್ಥಃ । ತಥಾ ಸೂರ್ಯಃ ಸತ್ಯಂ ಸರ್ವದಾ ವಿದ್ಯಮಾನಂ ಸ್ವಕೀಯಂ ತೇಜಸ್ತತಾನ । ಆತನೋತಿ ವಿಸ್ತಾರಯತಿ । ಅನ್ಯತ್ಸಮಾನಂ ॥ ಸುಪ್ರವಾಚನಂ । ವಚ ಪರಿಭಾಷಣೇ । ಅಸ್ಯಾಣ್ಯಂತಾದನ್ಯೇಭ್ಯೋಽಪಿ ದೃಶ್ಯತ ಇತಿ ಖಲರ್ಥೇ ಯುಚ್ । ಅರ್ಷಂತಿ । ಅರ್ತೇರ್ಲೇಟಿ ಸಿಬ್ಬಹುಲಂ ಲೇಟೀತಿ ಸಿಪ್ । ಗುಣಃ । ತತಾನ । ಅನ್ಯೇಷಾಮಪಿ ದೃಶ್ಯತ ಇತಿ ಸಂಹಿತಾಯಾಮಭ್ಯಾಸಸ್ಯ ದೀರ್ಘತ್ವಂ ॥

ಪ್ರತಿಪದಾರ್ಥ

ದೇವಾಸಃ—ಎಲೈ ದೇವತೆಗಳೇ । ನವ್ಯಂ—ನೂತನವಾದುದೂ । ಉಕ್ಥ್ಯಂ ಸ್ತೋತ್ರಾರ್ಹವಾದುದೂ । ಸುಪ್ರವಾಚನಂ—ಋತ್ವಿಕ್ಕುಗಳಿಂದ ಪಠಿಸಲು ಯೋಗ್ಯವಾದುದೂ ಆದ । ತತ್—(ನಿಮ್ಮ) ಬಲವು । ಹಿತಂ—(ನಿಮ್ಮಲ್ಲಿ) ನೆಲಸಿದೆ. (ಆ ನಿಮ್ಮ ಬಲದಿಂದಲೇ) । ಸಿಂಧವಃ—ಪ್ರವಹಿಸುವ ನದಿಗಳು ।

**ಋತಂ**—ನೀರನ್ನು । **ಅರ್ಷಂತಿ**—ಸರ್ವದಾ ಪ್ರವಹಿಸುವಂತೆ ಮಾಡುತ್ತವೆ. (ಹಾಗೆಯೇ) । **ಸೂರ್ಯಃ**—ಸೂರ್ಯನು । **ಸತ್ಯಂ**—ಶಾಶ್ವತವಾಗಿರತಕ್ಕ ತನ್ನ ತೇಜಸ್ಸನ್ನು । **ತತಾನ**—ವಿಸ್ತಾರವಾಗಿ ಹರಡುವಂತೆ ಮಾಡುತ್ತಾನೆ. । **ರೋದಸೀ**—ಎಲೈ ದ್ಯಾವಾಪೃಥಿವಿಗಳೇ । **ಮೇ**—ನನ್ನ । **ಅಸ್ಯ**—ಈ ಸ್ತೋತ್ರವನ್ನು ಅಥವಾ ದುಃಖವನ್ನು । **ವಿತ್ತಂ**—ಚೆನ್ನಾಗಿ ಅರಿಯಿರಿ ।

**ಭಾವಾರ್ಥ**

ಎಲೈ ದೇವತೆಗಳೇ, ನೂತನವಾದುದೂ, ಸ್ತೋತ್ರಾರ್ಹವಾದುದೂ, ಋತ್ವಿಕ್ಕುಗಳಿಂದ ಪಠಿಸಲು ಯೋಗ್ಯವಾದುದೂ ಆದ ನಿಮ್ಮ ಬಲವು ನಿಮ್ಮಲ್ಲಿ ಸ್ಥಿರವಾಗಿ ನೆಲೆಸಿದೆ. ನಿಮ್ಮ ಆ ಬಲದಿಂದಲೇ ಪ್ರವಹಿಸುವ ನದಿಗಳು ನೀರನ್ನು ಸರ್ವದಾ ಹರಿಯುವಂತೆ ಮಾಡುತ್ತವೆ. ಸೂರ್ಯನೂ ಸಹ ಶಾಶ್ವತವಾಗಿರತಕ್ಕ ತನ್ನ ತೇಜಸ್ಸನ್ನು ವಿಸ್ತಾರವಾಗಿ ಹರಡುವಂತೆ ಮಾಡುತ್ತಾನೆ. ಎಲೈ ದ್ಯಾವಾಪೃಥಿವಿಗಳೇ, ನನ್ನ ದುಃಖವನ್ನರಿಯಿರಿ. ಈ ಸ್ತೋತ್ರವನ್ನು ಕೇಳಿ ನನ್ನನ್ನು ಮೇಲಕ್ಕೆತ್ತಿರಿ.

## English Translation

That new praiseworthy and commended (vigour) is seated in you, O Gods, (by which) the rivers urge on the waters, and the sun diffuses his constant (light). Heaven and earth, be conscious of this (my affliction).

**॥ ವಿಶೇಷವಿಷಯಗಳು ॥**

**ನವ್ಯಂ ಉಕ್ಥ್ಯಂ ಸುಪ್ರವಾಚನಂ ತತ್**—ಈ ವಾಕ್ಯದಲ್ಲಿ **ಉಕ್ಥ್ಯಂ** ಎಂದರೆ **ಸ್ತುತ್ಯರ್ಹಂ ಸ್ತೋತ್ರಕ್ಕೆ** ಯೋಗ್ಯವಾದುದು ಎಂದೂ, **ತತ್** ಎಂಬ ಪದಕ್ಕೆ ದೇವತೆಗಳ **ಶಕ್ತಿ**ಯೆಂದೂ ಸಾಯಣರು ಅರ್ಥಮಾಡಿದ್ದಾರೆ. ಸ್ಕಂದಸ್ವಾಮಿಗಳು ಉಕ್ಥ್ಯಶಬ್ದೋऽತ್ರ ಉಕ್ಥಪರ್ಯಾಯಃ ಸ್ತೋತ್ರವಚನಃ ನ ಪ್ರಶಸ್ಯವಚನಃ । ಯುಷ್ಮತ್ಸ್ತೋತ್ರಂ । ಉಕ್ಥ್ಯಶಬ್ದವು ಸ್ತುತ್ಯರ್ಹವಾದುದು, ಪ್ರಶಸ್ಯವಾದುದು ಎಂಬರ್ಥದಲ್ಲಲ್ಲ. **ಉಕ್ಥವೆಂದೇ** ಅರ್ಥ. ನಿಮ್ಮನ್ನುದ್ದೇಶಿಸಿದ ಸ್ತೋತ್ರವೆಂದಭಿಪ್ರಾಯವೆಂದು ಹೇಳಿದ್ದಾರೆ. **ನವ್ಯ** ಶಬ್ದವು **ಉಕ್ಥ್ಯ**ಕ್ಕೆ ವಿಶೇಷಣವಾಗಿ **ನವಂ ತತ್ ಅನ್ಯೈಃ ಸ್ತೋತ್ರೈರಕೃತಪೂರ್ವಂ** । ಇತರ ಸ್ತೋತೃಗಳು ಇಲ್ಲಿಯವರೆಗೆ ಮಾಡದೇ, ನಮ್ಮಿಂದ ಅತ್ಯಂತ ನೂತನವಾಗಿ ನಿರ್ಮಿಸಲ್ಪಟ್ಟದ್ದೂ, ಋತ್ವಿಕ್ಕುಗಳಿಂದ ಪಠಿಸಲು ಯೋಗ್ಯವಾದುದೂ ಆದ ಸ್ತೋತ್ರವೆಂದಭಿಪ್ರಾಯ. ಅಥವಾ, **ಯುಷ್ಮಾಕಂ ಮಾಹಾತ್ಮ್ಯಂ ನವ್ಯಂ । ನೌತೇರರ್ಚತಿಕರ್ಮಣ ಇದಂ ರೂಪಂ । ಸ್ತುತ್ಯಂ ತತ್ ಪ್ರಶಸ್ಯಂ ಉಕ್ಥ್ಯಂ ಚ ಹಿತಂ ಚ ಸ್ತೋತೃಭ್ಯಃ** । ನವ್ಯವೆಂಬ ಪದವು **ಅರ್ಚತಿ ಕರ್ಮ**ಗಳಲ್ಲಿ ಪಠಿತವಾಗಿರುವ (ನಿ. ೩-೧೯) **ನೌತಿ** ಎಂಬ ಪದದಿಂದ ನಿಷ್ಪನ್ನವಾಗಿ ಸ್ತುತ್ಯವೂ, ಪೂಜಾರ್ಹವೂ ಆದ ನಿಮ್ಮ ಮಾಹಾತ್ಮ್ಯವು ಸ್ತೋತೃಗಳಿಗೆ **ಹಿತಂ**— ಹಿತಕರವಾಗಿದೆಯೆಂಬ ಅಭಿಪ್ರಾಯವೂ ಇರಲು ಸಾಧ್ಯವೆಂದು ತೋರಿಸಿದ್ದಾರೆ, ಮತ್ತು ಪೂರ್ವಾರ್ಧಕ್ಕೂ ಉತ್ತರಾರ್ಧಕ್ಕೂ ಸಂಬಂಧವನ್ನು ತೋರಿಸದೆ ಎರಡೂ ಬೇರೆಬೇರೆ ಅಭಿಪ್ರಾಯಗಳೆಂದು ತಿಳಿಸಿ **ಪರೋऽರ್ಧರ್ಚೋ ಭಿನ್ನಂ ವಾಕ್ಯಂ** । ಋಕ್ಕಿನ ಎರಡನೆಯ ಅರ್ಧವು ಬೇರೆ ವಾಕ್ಯವೆಂದೂ ಹೇಳಿರುತ್ತಾರೆ. ಸಾಯಣರು ಈ ಉತ್ತರಾರ್ಧದ ಭಾವಕ್ಕೂ ಪೂರ್ವಾರ್ಧದ ಭಾವಕ್ಕೂ ಸಂಬಂಧವನ್ನು ತೋರಿಸುವ ಅನ್ವಯವನ್ನು ಮಾಡಿ ಕಾರ್ಯಕಾರಣ ಸಂಬಂಧವನ್ನೂ ತೋರಿಸಿದ್ದಾರೆ. **ತತ್** ಭವದೀಯಂ ಬಲಂ ಹಿತಂ ಯುಷ್ಮಾಸು ನಿಹಿತಂ

ಅತೋ ಯುಷ್ಮದೀಯೇನ ಬಲೇನ ಸಿಂಧವಃ ಸ್ಯಂದನಶೀಲಾ ನದ್ಯಃ ಋತಂ ಉದಕಂ ಅರ್ಷಂತಿ ಆಲಸ್ಯ-ರಾಹಿತ್ಯೇನ ಸರ್ವದಾ ಪ್ರೇರಯಂತಿ । ಅಶೋಷ್ಯಾಃ ಸತ್ಯಃ ಪ್ರವಹಂತೀತ್ಯರ್ಥಃ । ನಿಮ್ಮ ಶಕ್ತಿಯು ನಿಮ್ಮಲ್ಲಿ ಸ್ಥಾಪಿತವಾಗಿರುವುದರಿಂದಲೇ ಸಮಸ್ತನದಿಗಳೂ ಸಹ ಸ್ವಲ್ಪವೂ ಶೋಷಿಸದೇ ತಮ್ಮ ಪ್ರವಾಹಗಳನ್ನು ಹರಿಸುತ್ತಿವೆ ಯೆಂದು ಹಿತಂ ಎಂಬ ಶಬ್ದಕ್ಕೆ ಮೇಲೆ ಹೇಳಿದಂತೆ ಹಿತಕಾರವಾದುದು ಎಂದರ್ಥಮಾಡದೆ, **ನಿಹಿತಂ**—ಇಡಲ್ಪಟ್ಟಿದೆ, ಸ್ಥಾಪಿತವಾಗಿದೆಯೆಂದು ಹೇಳಿದೆ. ಇಲ್ಲಿ ಶಕ್ತಿಯಾವುದು, ದೇವತೆಗಳ ನಿಜವಾದ ಬಲವಾವುದು, ಯಾವ ಬಲದಿಂದ ಅವರು ಪ್ರಪಂಚ ವ್ಯವಹಾರವೆಲ್ಲಾ ನಿರ್ವಹಿಸುವಂತೆ ಸಹಾಯಮಾಡುತ್ತಾರೆಂದರೆ, ಅವರವರ **ವ್ರತಪರಿಪಾಲನೆ** ಯೆಂದು ಹೇಳಬೇಕು. ಯಜ್ಞಕರ್ತರಾದ ಮಾನವರಿಗೆ ಯಾವ ವಿಧವಾದ ವ್ರತಪಾಲನವಿದೆಯೋ ಅದೇ ರೀತಿ ದೇವತೆಗಳಿಗೂ ಸಹ ಅಲೌಕಿಕವೂ, ಲೌಕಿಕವ್ಯವಹಾರಕ್ಕೆ ಕಾರಣವಾದುದೂ ಆದ ವ್ರತಪಾಲನಗಳಿವೆಯೆಂದೂ ದೇವತೆಗಳು ಅವನ್ನು ಆಚರಿಸುವುದೇ ಅವರ ಶಕ್ತಿವರ್ಧಕವೆಂದೂ ಋಕ್ಸಂಹಿತೆಯಲ್ಲಿಯೇ ಉಕ್ತವಾಗಿದೆ.

**ತ್ವಮಗ್ನೇ ರಾಜಾ ವರುಣೋ ಧೃತವ್ರತಸ್ತ್ವಂ ಮಿತ್ರೋ ಭವಸಿ ದಸ್ಮ ಈಡ್ಯಃ ।**
(ಋ. ಸಂ. ೨-೧-೪)

**ಋತಾವಾನಾ ನಿ ಷೇದತುಃ ಸಾಮ್ರಾಜ್ಯಾಯ ಸುಕ್ರತೂ ।**
**ಧೃತವ್ರತಾ ಕ್ಷತ್ರಿಯಾ ಕ್ಷತ್ರಮಾಶತುಃ ॥**
(ಋ. ಸಂ. ೮-೨೫-೮)

**ಧೃತವ್ರತಾಃ ಕ್ಷತ್ರಿಯಾ ಯಜ್ಞನಿಷ್ಕೃತೋ ಬೃಹದ್ದಿವಾ ಅಧ್ವರಾಣಾಮಭಿಶ್ರಿಯಃ ।**
**ಅಗ್ನಿಹೋತಾರ ಋತಸಾಪೋ ಅದ್ರುಹೋಽಪೋ ಅಸೃಜನ್ನನು ವೃತ್ರತೂರ್ಯೇ ॥**
(ಋ. ಸಂ. ೧೦-೬೬-೮)

ಇತ್ಯಾದಿ ನಾನಾಋಕ್ಕುಗಳಲ್ಲಿ ಇಂದ್ರ, ವರುಣ, ಅಗ್ನಿ ಇತ್ಯಾದಿ ಸಕಲ ದೇವತೆಗಳನ್ನೂ **ಧೃತವ್ರತರೆಂದು** ಸ್ತುತಿಸಿ ಅವರ ಆ ನಿಯಮಪಾಲನದಿಂದಲೂ, **ಋತದ** ಮಾರ್ಗವನ್ನನುಸರಿಸಿರುವುದರಿಂದಲೂ ವೃತ್ರಹತ್ಯಾದಿಗಳನ್ನು ನಡೆಸಿ ಜಲವನ್ನು ಹರಿಯುವಂತೆ ಮಾಡಲು ಅನುಕೂಲವಾಯಿತೆಂದು ಹೇಳಿದೆ. ಅಲ್ಲದೆ, ದೇವತೆಗಳ ಆ ಪ್ರಭಾವದಿಂದ **ಸೂರ್ಯಃ ಸತ್ಯಂ ತತಾನ**—ಸೂರ್ಯನು ತನ್ನ ತೇಜಸ್ಸನ್ನು ವಿಸ್ತರಿಸಿ ಹರಡುತ್ತಾನೆ ಎಂದು ವರ್ಣಿಸುವುದೂ ಸಹ ಆ ದೇವತೆಗಳ ಶಕ್ತಿಯನ್ನು ತೋರಿಸುತ್ತದೆ.

**ವಿ ಯೋ ರಜಾಂಸ್ಯಮಿಮೀತ ಸುಕ್ರತುರ್ವೈಶ್ವಾನರೋ ವಿ ದಿವೋ ರೋಚನಾ ಕವಿಃ ।**
**ಪರಿ ಯೋ ವಿಶ್ವಾ ಭುವನಾನಿ ಪಪ್ರಥೇಽದಬ್ಧೋ ಗೋಪಾ ಅಮೃತಸ್ಯ ರಕ್ಷಿತಾ ।**
(ಋ. ಸಂ. ೬-೭-೭)

**ಅಗ್ನೇ ನಕ್ಷತ್ರಮಜರಮಾ ಸೂರ್ಯಂ ರೋಹಯೋ ದಿವಿ ।**
**ದಧಜ್ಜ್ಯೋತಿರ್ಜನೇಭ್ಯಃ ॥**
(ಋ. ಸಂ. ೧೦-೧೫೬-೪)

ಇತ್ಯಾದಿಋಕ್ಕುಗಳಲ್ಲಿ ಅಗ್ನಿಯು ತನ್ನ ಪ್ರಭಾವದಿಂದ **ಸೂರ್ಯಾದಿಗ್ರಹಗಳನ್ನು** ಅಂತರಿಕ್ಷದಲ್ಲಿ ಪ್ರಕಾಶಿಸುವಂತೆ ಮಾಡಿದನೆಂದೂ, ಹೀಗೆಯೇ,

**ರಾಜಾಭವೋ ಜಗತಶ್ಚರ್ಷಣೀನಾಂ ಸಾಕಂ ಸೂರ್ಯಂ ಜನಯನ್ದ್ಯಾಮುಷಾಸಂ ।**
(ಋ. ಸಂ. ೬-೩೦-೫)

**ಯದಾ ಸೂರ್ಯಮಮುಂ ದಿವಿ ಶುಕ್ರಂ ಜ್ಯೋತಿರಧಾರಯಃ ॥**
(ಋ. ಸಂ. ೮-೧೨-೩೦)

ಇತ್ಯಾದಿಋಕ್ಕುಗಳಲ್ಲೆಲ್ಲಾ **ಇಂದ್ರನು** ಅಂತರಿಕ್ಷದಲ್ಲಿ **ಸೂರ್ಯಾದಿ**ಗ್ರಹಗಳನ್ನು ಸ್ಥಾಪಿಸಿ ಪ್ರಕಾಶಿಸುವಂತೆ ಮಾಡಿದನೆಂದೂ ಹೀಗೆಯೇ **ವರುಣಾದಿಗಳ** ಮಹಿಮೆಯನ್ನೂ ಹೊಗಳಿರುವುದರಿಂದಲೂ ಸಹ ಆ ಅಂಶವನ್ನೇ ಇಲ್ಲಿಯೂ ಸಹ ಹೇಳಿ ದೇವತೆಗಳ ಮಹಿಮೆಯಿಂದಲೇ **ಸೂರ್ಯಃ ಸತ್ಯಂ ತತಾನ** ಎಂದಿದೆ.

**ಸತ್ಯಂ—ಸರ್ವದಾ ವಿದ್ಯಮಾನಂ ಸ್ವಕೀಯಂ ತೇಜಃ ।** ಶಾಶ್ವತವಾಗಿ ಲೋಕವ್ಯವಹಾರವನ್ನು ನಡೆಸುವುದಕ್ಕೆ ಅನುಕೂಲಿಸುವಂತೆ ಬೆಳಗುತ್ತಿರುವ ಸೂರ್ಯನ ಪ್ರಭೆಯೆಂದರ್ಥ.

**ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ।**
(ಋ. ಸಂ. ೧-೧೧೫-೧)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿಸಿರುವಂತೆ ಸ್ಥಾವರಜಂಗಮಾತ್ಮಕವಾದ ಸಕಲಜಗತ್ತಿಗೂ ಸೂರ್ಯನೇ ಸತ್ಯಾತ್ಮಕನಾಗಿದ್ದಾನೆ. ಜಗತ್ತಿನ ಸತ್ಯಕ್ಕೆ ಸೂರ್ಯನ ಸತ್ಯತ್ವವೇ ಕಾರಣವೆಂದೂ ಅನೇಕಕಡೆ ಹೇಳಿದೆ.

**ಅರ್ಷಂತಿ—ಅಶೋಷ್ಯಾಃ ಸತ್ಯಂ ಪ್ರವಹಂತಿ ।** ಯಾವಾಗಲೂ ಸಮೃದ್ಧವಾಗಿ ಪ್ರವಹಿಸುತ್ತವೆ ಎಂದರ್ಥ. ಇವೆಲ್ಲವೂ ದೇವತೆಗಳ ಮಹಿಮೆಯಿಂದ ನಡೆಯತಕ್ಕದ್ದೆಂದು ಋಕ್ಕಿನ ತಾತ್ಪರ್ಯ.

**ಅಥವಾ, ಋತಶಬ್ದೋಽತ್ರ ಯಜ್ಞವಚನಃ । ಆದಿತ್ಯವಚನೋ ವಾ ಸಿಂಧವೋ ರಶ್ಮಯ ಉಚ್ಯಂತೇ । ಯಜ್ಞಮಾದಿತ್ಯಂ ವಾ ಪ್ರತಿ ರಶ್ಮಯೋ ಗಚ್ಛಂತೀತ್ಯರ್ಥಃ । ಋತ** ಶಬ್ದಕ್ಕೆ ಇಲ್ಲಿ **ಯಜ್ಞ**ಪರ್ಯಾಯವಾಗಿಯಾಗಲಿ, **ಆದಿತ್ಯ**ಪರ್ಯಾಯವಾಗಿಯಾಗಲಿ ಅರ್ಥಮಾಡಿದರೆ ಮತ್ತು **ಸಿಂಧವಃ** ಎನ್ನುವುದಕ್ಕೆ **ರಶ್ಮಿಗಳು** ಎಂದರ್ಥಮಾಡಿದರೆ ಆಗ ರಶ್ಮಿಗಳು ಯಜ್ಞಾಭಿಮುಖವಾಗಿಯಾಗಲಿ ಅಥವಾ ಆದಿತ್ಯಾಭಿಮುಖವಾಗಿಯಾಗಲಿ ಪ್ರಸರಿಸುತ್ತವೆಯೆಂದಾಗುತ್ತದೆಂದು ಸ್ಕಂದಸ್ವಾಮಿಗಳು ಹೇಳಿದ್ದಾರೆ. ಆದರೆ ಮೇಲೆ ಹೇಳಿರುವಂತೆ ಸಾಯಣರ ವಿವರಣೆಯೇ ಇಲ್ಲಿಗೆ ಸಮಂಜಸವಾಗಿರುತ್ತದೆ.

॥ ವ್ಯಾಕರಣಪ್ರಕ್ರಿಯಾ

**ಉಕ್ಥ್ಯಮ್**—ವಚ ಪರಿಭಾಷಣೇ. ಧಾತು. ಔಣಾದಿಕ ಥಕ್‌ಪ್ರತ್ಯಯ. **ಚೋಃ ಕುಃ**—ಎಂಬುದರಿಂದ ಧಾತು ಚಕಾರಕ್ಕೆ ಕುತ್ವ. ವಕಾರಕ್ಕೆ ಸಂಪ್ರಸಾರಣ ಪೂರ್ವರೂಪ. ಉಕ್ಥಾಯ ಅರ್ಹಂ. ಉಕ್ಥ್ಯಮ್. ತದರ್ಹಾರ್ಥದಲ್ಲಿ ಯತ್ ಪ್ರತ್ಯಯ. **ತಿತ್‌ಸ್ವರಿತಮ್**—(ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ಹಿತಮ್**—ಡುಧಾಞ್ ಧಾರಣಪೋಷಣಯೋಃ ಧಾತು. ಕರ್ಮಣಿಯಲ್ಲಿ **ನಿಷ್ಠಾ**—(ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. **ದಧಾತೇರ್ಹಿಃ**—(ಪಾ. ಸೂ. ೭-೪-೪೨) ಎಂಬುದರಿಂದ ಧಾತುವಿಗೆ ಹಿ ಆದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ದೇವಾಸಃ**—ಜಸ್ ಪರವಾದಾಗ **ಆಜ್ಜಸೇರಸುಕ್**-(ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ಸುಪ್ರವಾಚನಮ್**— ವಚ ಪರಿಭಾಷಣೇ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ —**ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಣಿಜಂತದ ಮೇಲೆ **ಅನ್ಯೇಭ್ಯೋಽಪಿ ದೃಶ್ಯತೇ**-(ಪಾ. ಸೂ. ೩-೩-೧೩೦) ಎಂಬುದರಿಂದ ಖಲರ್ಥದಲ್ಲಿ ಯುಚ್‌ಪ್ರತ್ಯಯ. ಣಿಚ್ ನಿಮಿತ್ತವಾಗಿ **ಅತಉಪಧಾಯಾಃ**—(ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. **ಣೇರನಿಟಿ**—(ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. **ಯುವೋರನಾಕೌ**—(ಪಾ. ಸೂ. ೭-೧-೧) ಎಂಬುದರಿಂದ ಪ್ರತ್ಯಯಕ್ಕೆ ಅನಾದೇಶ. ಪ್ರತ್ಯಯ ಚಿತ್ತಾದುದರಿಂದ **ಚಿತಃ**—(ಪಾ. ಸೂ. ೬-೧-೧೬೩) ಸೂತ್ರದಿಂದ ಅಂತೋದಾತ್ತಸ್ವರ ಬರುತ್ತದೆ. ಗತಿಸಮಾಸವಾದಾಗ **ಗತಿಕಾರಕೋಪಪದಾತ್ಕೃತ್**—(ಪಾ. ಸೂ. ೬-೧-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಅರ್ಷಂತಿ**—ಋ ಗತೌ. ಧಾತು. ಲೇಟ್ ಪ್ರಥಮಪುರುಷಬಹುವಚನದಲ್ಲಿ ಝಿ ಪ್ರತ್ಯಯ. **ಝೋಽಂತಃ**— (ಪಾ. ಸೂ. ೭-೧-೩) ಎಂಬುದರಿಂದ ಅಂತಾದೇಶ. **ಸಿಬ್ಬಹುಲಂ ಲೇಟಿ**— ( ಪಾ. ಸೂ. ೩-೧ ೩೪ ) ಎಂಬುದರಿಂದ ಧಾತುವಿಗೆ ಸಿಪ್. ತನ್ನಿಮಿತ್ತವಾಗಿ **ಸಾರ್ವಧಾತುಕಾರ್ಧಧಾತುಕಯೋಃ**—ಎಂಬುದರಿಂದ ಧಾತುವಿಗೆ ಗುಣ. **ಉರಣ್ರಪರಃ**—ಎಂಬುದರಿಂದ ರಪರವಾಗಿ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಿಂಧವಃ**—ಸ್ಯಂದೂ ಪ್ರಸ್ರವಣೇ ಧಾತು. **ಸ್ಯಂದೇಃ ಸಂಪ್ರಸಾರಣಂ ಧಶ್ಚ**- (ಉ. ಸೂ. ೧-೧೧) ಎಂಬುದರಿಂದ ಉಪ್ರತ್ಯಯ. ಧಾತುವಿಗೆ ಸಂಪ್ರಸಾರಣ, ದಕಾರಕ್ಕೆ ಧಕಾರಾದೇಶ.

**ತತಾನ**—ತನು ವಿಸ್ತಾರೇ. ಧಾತು. ವರ್ತಮಾನಾರ್ಥದಲ್ಲಿ **ಛಂದಸಿ ಲುಙ್‌ಲಙ್‌ಲಿಟಃ**—(ಪಾ. ಸೂ. ೩-೪-೬) ಎಂಬುದರಿಂದ ಲಿಟ್. ಪ್ರಥಮಪುರುಷ ಏಕವಚನದಲ್ಲಿ ಣಲಾದೇಶ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್‌ಶೇಷ. ಪ್ರತ್ಯಯನಿಮಿತ್ತವಾಗಿ **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. **ಅನ್ಯೇಷಾಮಪಿ ದೃಶ್ಯತೇ**—(ಪಾ. ಸೂ. ೬-೩-೧೩೭) ಸೂತ್ರದಿಂದ ಸಂಹಿತಾದಲ್ಲಿ ಅಭ್ಯಾಸಕ್ಕೆ ದೀರ್ಘ. ಅತಿಙಂತದ ಪರದಲ್ಲಿ ಬಂದುದರಿಂದ ತಿಙಂತನಿಘಾತಸ್ವರ ಬರುತ್ತದೆ.

**ಸೂರ್ಯಃ**—**ರಾಜಸೂಯಸೂರ್ಯ**—(ಪಾ. ಸೂ. ೩-೧-೧೧೪) ಎಂಬುದರಿಂದ ಸೃಧಾತುವಿಗೆ ಕ್ಯಪ್ ನಿಪಾತಿತವಾಗಿದೆ. ॥ ೧೨ ॥

ಸಂಹಿತಾಪಾಠಃ

ಅಗ್ನೇ ತವ ತ್ಯದುಕ್ಥ್ಯಂ ದೇವೇಷ್ವಸ್ತ್ಯಾಪ್ಯಂ।
ಸ ನಃ ಸತ್ತೋ ಮನುಷ್ವದಾ ದೇವಾನ್ಯಕ್ಷಿ ವಿದುಷ್ಟರೋ ವಿತ್ತಂ
ಮೇ ಅಸ್ಯ ರೋದಸೀ ॥೧೩॥

ಪದಪಾಠಃ

ಅಗ್ನೇ । ತವ । ತ್ಯತ್ । ಉಕ್ಥ್ಯಂ । ದೇವೇಷು । ಅಸ್ತಿ । ಆಪ್ಯಂ ।
ಸಃ । ನಃ । ಸತ್ತಃ । ಮನುಷ್ವತ್ । ಆ । ದೇವಾನ್ । ಯಕ್ಷಿ । ವಿದುಃऽತರಃ ।
ವಿತ್ತಂ । ಮೇ । ಅಸ್ಯ । ರೋದಸೀ ಇತಿ ॥೧೩॥

ಸಾಯಣಭಾಷ್ಯಂ

ಹೇ ಅಗ್ನೇ ತವೋಕ್ಥ್ಯಂ ಪ್ರಶಸ್ಯಂ ತ್ಯತ್ ಶ್ರುತಿಪ್ರಸಿದ್ಧಮಾಪ್ಯಂ। ಆಪಿರ್ಬಂಧುಃ। ತಸ್ಯ ಭಾವ। ಬಾಂಧವಂ ದೇವೇಷು ದಾನಾದಿಗುಣಯುಕ್ತೇಷ್ವಿಂದ್ರಾದಿಷ್ವಸ್ತಿ । ವಿದ್ಯತೇ । ತಸ್ಮಾತ್ತ್ವಂ ತಾದೃಶೋ ವಿದುಷ್ಟರೋ ವಿದ್ವತ್ತರಸ್ತ್ವಂ ನೋಽಸ್ಮಾಕಂ ಯಜ್ಞೇ ಸತ್ತೋ ನಿಷಣ್ಣಃ ಸನ್ದೇವಾಂಸ್ತಾನಿಂದ್ರಾದೀನಾ ಶಾಸ್ತ್ರಮರ್ಯಾದಯಾ ಯಕ್ಷಿ। ಯಜ। ಹವಿರ್ಭಿಃ ಪೂಜಯ । ತತ್ರ ದೃಷ್ಟಾಂತಃ । ಮನುಷ್ವತ್ । ಯಥಾ ಮನೂನಾಂ ಯಜ್ಞೇ ತದ್ವತ್ । ಅನ್ಯತ್ಪೂರ್ವವತ್ ॥ ಆಪ್ಯಂ । ಆಪ್ಲೃ ವ್ಯಾಪ್ತೌ । ಅಸ್ಮಾಣ್ಣ್ಯಂತಾದಚ ಇರಿತೀಃಪ್ರತ್ಯಯಃ । ಬ್ರಾಹ್ಮಣಾದಿತ್ವಾತ್ ಷ್ಯಞ್ । ಸತ್ತಃ । ನಸತ್ತನಿಷತ್ತೇತಿ ನಿಪಾತನಾನ್ನಿಷ್ಠಾನತ್ವಾಭಾವಃ । ಛಾಂದಸೋ ನಿಶಬ್ದಲೋಪೋ ದ್ರಷ್ಟವ್ಯಃ । ಮನುಷ್ವತ್ । ಮನೇರೌಣಾದಿಕ ಉಸಿಪ್ರತ್ಯಯಃ । ತತ್ರ ತಸ್ಯೇವೇತಿ ಷಷ್ಠ್ಯರ್ಥೇ ವತಿಃ । ನಭೋಽಂಗಿರೋಮನುಷಾಂ ವತ್ಯುಪಸಂಖ್ಯಾನಂ । ಪಾ ೧-೪-೧೮-೩ । ಇತಿ ಭತ್ವೇನ ಪದತ್ವಾಭಾವಾದ್ರುತ್ವಾದ್ಯಭಾವಃ । ಯಕ್ಷಿ । ಬಹುಲಂ ಛಂದಸೀತಿ ಶಪೋ ಲುಕ್ । ವ್ರಶ್ಚಾದಿಷತ್ವೇ ಕುತ್ವಂ । ವಿದುಷ್ಟರಃ । ವಿದ್ವಃಶಬ್ದಾತ್ತರಪ್ಯಯಸ್ಮಯಾದಿತ್ವೇನ ಭತ್ವಾದ್ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ । ಶಾಸಿವಸಿಘಸೀನಾಂ ಚೇತಿ ಷತ್ವಂ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತವ—ನಿನಗೆ । ಉಕ್ಥ್ಯಂ—ಸ್ತೋತ್ರಾರ್ಹವಾದುದೂ । **ತ್ಯತ್**—ಶ್ರುತಿ ಪ್ರಸಿದ್ಧವಾದುದೂ ಆದ । **ಆಪ್ಯಂ**—ಬಂಧುತ್ವವು । **ದೇವೇಷು**—ದೇವತೆಗಳಲ್ಲಿ । **ಅಸ್ತಿ**—ನೆಲೆಸಿರುತ್ತದೆ. (ಆದ್ದರಿಂದ) । **ಸಃ**—ಆ ಬಾಂಧವ್ಯವಿರುವವನೂ । **ವಿದುಷ್ಟರಃ**—ಅತ್ಯಂತ ಪ್ರಾಜ್ಞನೂ ಆದ ನೀನು । **ನಃ**—ನಮ್ಮ (ಯಜ್ಞದಲ್ಲಿ) । **ಸತ್ತಃ**—ಕುಳಿತುಕೊಂಡು । **ಮನುಷ್ವತ್**—ಮನುವಿನ ಯಜ್ಞಗಳಲ್ಲಿ ನೆರವೇರಿಸಿದಂತೆ । **ದೇವಾನ್**—ದೇವತೆಗಳನ್ನು । **ಆ**—ವಿಧ್ಯುಕ್ತವಾದ ರೀತಿಯಲ್ಲಿ । **ಯಕ್ಷಿ**—ಹವಿಸ್ಸುಗಳಿಂದ ಪೂಜಿಸು । **ರೋದಸೀ**—ಎಲೈ ದ್ಯಾವಾಪೃಥಿವಿಗಳೇ । **ಮೇ**—ನನ್ನ । **ಅಸ್ಯ**—ಈ ಸ್ತೋತ್ರವನ್ನು ಅಥವಾ ಕೂಪಪತನ ರೂಪವಾದ ದುಃಖವನ್ನು । **ವಿತ್ತಂ**—ಚೆನ್ನಾಗಿ ಅರಿಯಿರಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ದೇವತೆಗಳಲ್ಲಿ ನಿನ್ನ ಬಂಧುತ್ವವು ಸ್ತೋತ್ರಾರ್ಹವಾಗಿಯೂ ಶ್ರುತಿ ಪ್ರಸಿದ್ಧವಾಗಿಯೂ ನೆಲೆಸಿದೆ. ಅಂತಹ ಶ್ರೇಷ್ಠವಾದ ಬಾಂಧವ್ಯವಿರುವುದರಿಂದ ಅತ್ಯಂತ ಪ್ರಾಜ್ಞನಾದ ನೀನು ನಮ್ಮ ಯಜ್ಞದಲ್ಲಿ ಕುಳಿತುಕೊಂಡು ಮನುವಿನ ಯಜ್ಞಗಳಲ್ಲಿ ನೆರವೇರಿಸಿದಂತೆ ದೇವತೆಗಳನ್ನು ವಿಧ್ಯುಕ್ತವಾದ ರೀತಿಯಲ್ಲಿ ಪೂಜಿಸು. ಎಲೈ ದ್ಯಾವಾಪೃಥಿವಿಗಳೇ, ನನ್ನ ದುಃಖವನ್ನರಿತು ನನ್ನನ್ನು ಬಾವಿಯಿಂದ ಮೇಲಕ್ಕೆತ್ತಿರಿ.

## English Translation

Worthy of praise, Agni, is that your relationship (with the gods); you are most wise ; seated at our ( solemnity ), worship ( the gods ), as (at the sacrifice of) Manu.

॥ ವಿಶೇಷವಿಷಯಗಳು ॥

**ಆಪ್ಯಂ**—ಆಪಿಃ ಬಂಧುಃ ತಸ್ಯ ಭಾವಃ । ಬಂಧುತ್ವವೆಂದರ್ಥ. ಅಗ್ನಿಯ ಬಂಧುತ್ವವು ದೇವತೆಗಳಲ್ಲಿ ನಿತ್ಯಸಂಬಂಧವಾಗಿರುತ್ತದೆ.

**ತ್ವಮಗ್ನೇ ಪ್ರಥಮೋ ಅಂಗಿರಾ ಋಷಿರ್ದೇವೋ ದೇವಾನಾಮಭವಃ ಶಿವಃ ಸಖಾ ।**
(ಋ. ಸಂ. ೧-೩೧-೧)

**ಅಗ್ನಿರ್ದೇವೋ ದೇವಾನಾಮಭವತ್ಪುರೋಹಿತೋಽಗ್ನಿಂ ಮನುಷ್ಯಾ ಋಷಯಃ ಸಮೀಧಿರೇ ।**
(ಋ. ಸಂ. ೧೦-೧೫೦-೪)

ಇವೇ ಮುಂತಾದ ಸೂಕ್ತಗಳಲ್ಲಿ ವರ್ಣಿಸಿರುವಂತೆ ಅಗ್ನಿಯು ದೇವತೆಗಳೊಂದಿಗೆ ಶಾಶ್ವತವಾದ ಸಂಬಂಧವನ್ನೂ ಸಖ್ಯವನ್ನೂ ಹೊಂದಿರುವುದು ಇಲ್ಲಿಯೂ ಹೇಳಲ್ಪಟ್ಟಿದೆ. ಇದರಂತೆಯೇ ಯಜ್ಞಕರ್ತರಾದ ಮಾನವರಿಗೂ ಸಹ ಆಪಿಯಾಗಿದ್ದಾನೆಂದು,

**ಆ ಹಿ ಷ್ಮಾ ಸೂನವೇ ಪಿತಾಪಿರ್ಯಜತ್ಯಾಪಯೇ ।**
(ಋ ಸಂ. ೧-೨೬-೩)

ಇತ್ಯಾದಿ ಕಡೆಗಳಲ್ಲಿ ಸ್ತುತಿಸಿದೆ.

ಸಾಯಣರು, **ತತ್ ಆಪ್ಯಂ ದೇವೇಷು ಅಸ್ತಿ** । ಅಗ್ನಿಯ ಆ ಬಂಧುತ್ವವು ದೇವತೆಗಳಲ್ಲಿ ನೆಲೆಸಿದೆ ಯೆಂದರ್ಥ ಎಂದು ವಿವರಿಸಿದ್ದಾರೆ. ಸ್ಕಂದಸ್ವಾಮಿಗಳು, **ಅಸ್ಮಾಕಂ ಆಪ್ಯಂ ಅಸ್ತಿ ಚ ಜ್ಞಾತಿತ್ವಂ ತವಾಸ್ಮಾಭಿಃ ಸಹ ಸರ್ವಯಜಮಾನಾನಾಂ ಹಿ ಜ್ಞಾತಿಭೂತೋಽಗ್ನಿಃ** । ಎಂದು ವಿವರಿಸಿ ಯಜ್ಞಮಾಡತಕ್ಕ ಮಾನವರಿಗೂ ಅಗ್ನಿಗೂ ನಿತ್ಯಬಂಧುತ್ವವಿದೆಯೆಂದರ್ಥವೆಂದು ಹೇಳಿ,

**ಆಪಿಃ ಪಿತಾ ಪ್ರಮತಿಃ ಸೋಮ್ಯಾನಾಂ ಭೃಮಿರಸ್ಯೃಷಿಕೃನ್ಮರ್ತ್ಯಾನಾಂ।**
(ಋ. ಸಂ. ೧-೩೧-೧೬)

ಎಂದು ಅಗ್ನಿಗೂ ಮಾನವರಿಗೂ ಇರತಕ್ಕ **ಆಪ್ಯದ** ಸ್ವರೂಪವನ್ನು ತಿಳಿಸುವ ಋಕ್ಕನ್ನು ಉದಹರಿಸಿ ತೋರಿಸಿದ್ದಾರೆ.

**ವಿದುಷ್ಟರಃ—ವಿದ್ವತ್ತರಸ್ತ್ವಂ** । ಅತ್ಯಂತ ಪ್ರಾಜ್ಞನೆಂದರ್ಥ. ಇದೇ ರೀತಿ ಅಗ್ನಿಯ ಪ್ರಾಜ್ಞತ್ವವನ್ನು ಹೇಳತಕ್ಕ ವಿಶೇಷಣವು—

**ಅಧ್ರಸ್ಯ ಚಿತ್ಪ್ರಮತಿರುಚ್ಯಸೇ ಪಿತಾ ಪ್ರ ಪಾಕಂ ಶಾಸ್ಸಿ ಪ್ರ ದಿಶೋ ವಿದುಷ್ಟರಃ ।**
(ಋ. ಸಂ. ೧-೩೧-೧೪)

**ದೂತ ಈಯಸೇ ಪ್ರದಿವ ಉರಾಣೋ ವಿದುಷ್ಟರೋ ದಿವ ಆರೋಧನಾನಿ ।**
(ಋ. ಸಂ. ೪-೭-೮)

ಇವೇಮುಂತಾದ ಅನೇಕ ಋಕ್ಕುಗಳಲ್ಲಿ ಅಗ್ನಿಯ ಜ್ಞಾನಸ್ವರೂಪವನ್ನು ಸ್ತುತಿಸುತ್ತದೆ.

**ಮನುಷ್ವತ್**—ಈ ಪದಕ್ಕೆ ಸ್ಕಂದಸ್ವಾಮಿಗಳು **ಮನುಷ್ಯವತ್** ಮಾನವರಂತೆ (ನೀನೂ ಸಹ ಹೋತೃವಾಗಿ ದೇವತೆಗಳನ್ನು ಉದ್ದೇಶಿಸಿ ಯಜ್ಞಮಾಡು) ಎಂದೂ, ಸಾಯಣರು **ಯಥಾ ಮನೂನಾಂ ಯಜ್ಞೇ ತದ್ವತ್।** ಮನುಗಳ ಯಜ್ಞದಲ್ಲಿ ನೆರವೇರಿಸಿದಂತೆ (ಈಗಲೂ ದೇವತೆಗಳನ್ನು ಹವಿಸ್ಸಿನಿಂದ ಪೂಜಿಸು) ಎಂದೂ ಅರ್ಥಮಾಡಿದ್ದಾರೆ. ಮನುವಿಗಾಗಿ ಯಜ್ಞಮಾಡಿದಂತೆ, ಅಥವಾ ಮನುವಿಗೆ ಸಹಾಯಮಾಡಿದಂತೆ ಎಂದು ಹಿಂದಿನ ಸನ್ನಿವೇಶವನ್ನು ಉದಾಹರಣೆಗೆ ತೆಗೆದುಕೊಂಡು ಅದರಂತೆ ನನಗೂ ಸಹಾಯಮಾಡೆಂದು ಪ್ರಾರ್ಥಿಸಿದೆಯೆಂದರ್ಥ.

**ಏವಾನೇನ ಹವಿಷಾ ಯಕ್ಷಿ ದೇವಾನ್ಮನುಷ್ವದ್ಯಜ್ಞಂ ಪ್ರ ತಿರೇಮಮದ್ಯ ।**
(ಋ. ಸಂ. ೩-೧೭-೨)

ಇತ್ಯಾದಿ ಋಕ್ಕುಗಳಲ್ಲಿ ಪ್ರಾರ್ಥಿಸುವಂತೆ ಇಲ್ಲಿಯೂ ಸಹ ಅಗ್ನಿಯ ಸಹಾಯವನ್ನಪೇಕ್ಷಿಸಿದೆ. ಅಗ್ನಿಯು ಮನುವಿಗೆ ಸಹಾಯಮಾಡಿದುದು ಇದರಂತೆಯೇ ಇನ್ನೂ ಅನೇಕಕಡೆ ಹೇಳಲ್ಪಟ್ಟಿದೆ.

ವ್ಯಾಕರಣಪ್ರಕ್ರಿಯ

**ಆಪ್ಯಮ್**—ಆಪ್ಲೃ ವ್ಯಾಪ್ತೌ. ಧಾತು. **ಹೇತುಮತಿ ಚ**—(ಪಾ. ಸೂ. ೩-೧-೨೬) ಎಂಬುದರಿಂದ ಇದಕ್ಕೆ ಣಿಚ್. ಣಿಜಂತದ ಮೇಲೆ **ಅಚಇಃ**—(ಉ. ಸೂ. ೪-೫೧೮) ಎಂಬುದರಿಂದ ಇ ಪ್ರತ್ಯಯ. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. ಆಪಿ ಎಂದು ರೂಪವಾಗುತ್ತದೆ. ಇದಕ್ಕೆ ಭಾವಾರ್ಥದಲ್ಲಿ

ಗುಣವಚನ **ಬ್ರಾಹ್ಮಣಾದಿಭ್ಯಃ ಷ್ಯಞ್**—(ಪಾ. ಸೂ. ೫-೧-೧೨೪) ಎಂಬುದರಿಂದ ಇದು ಬ್ರಾಹ್ಮಣಾದಿಯಲ್ಲಿ ಸೇರಿರುವುದರಿಂದ ಷ್ಯಞ್ ಪ್ರತ್ಯಯ. ಇದು ಞಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸತ್ತಃ**—ಷದಲ್ಟ ವಿಶರಣಗತ್ಯವಸಾದನೇಷು. ಧಾತು. ಇದಕ್ಕೆ **ನಿಷ್ಠಾ**—(ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. ನತ್ವಪ್ರಾಪ್ತವಾದರೆ **ನಸತ್ತನಿಷತ್ತ**—(ಪಾ. ಸೂ ೮-೨-೬೧) ಎಂಬುದರಿಂದ ನಿಪಾತ ಮಾಡಿರುವುದರಿಂದ **ರದಾಭ್ಯಾಂ**—ಸೂತ್ರದಿಂದ ನತ್ವ ಬರುವುದಿಲ್ಲ. ನಿ ಎಂಬುದು ಉಪಪದವಾಗಿರುವಾಗ ನಿಪಾತ ಮಾಡಿರುವುದರಿಂದ ಛಾಂದಸವಾಗಿ ಇಲ್ಲಿ ನಿ ಶಬ್ದಕ್ಕೆ ಲೋಪಬಂದಿದೆ ಎಂದು ಊಹಿಸಬೇಕು.

**ಮನುಷ್ವತ್**—ಮನ ಜ್ಞಾನೇ. ಧಾತು. ಇದಕ್ಕೆ ಔಣಾದಿಕವಾದ ಉಸಿಪ್ರತ್ಯಯ. ಮನುಸ್‌ಶಬ್ದವಾಗುತ್ತದೆ. ಇದಕ್ಕೆ **ತತ್ರ ತಸ್ಯೇವ**—(ಪಾ. ಸೂ. ೫-೧-೧೧೬) ಎಂಬುದರಿಂದ ಷಷ್ಠ್ಯರ್ಥದಲ್ಲಿ ವತಿಪ್ರತ್ಯಯ. ರುತ್ವಪ್ರಾಪ್ತವಾದರೆ **ನಭೋಂಗಿರೋಮನುಷಾಂ ವತ್ಯುಪಸಂಖ್ಯಾನಮ್**—(ಪಾ. ಸೂ. ೧-೪-೧೮-೨) ಎಂಬುದರಿಂದ ಪದಸಂಜ್ಞೆಗೆ ಅಪವಾದವಾಗಿ ಭಸಂಜ್ಞಾ ಬರುವುದರಿಂದ ರುತ್ವ ಬರುವುದಿಲ್ಲ.

**ಯಕ್ಷಿ**—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಲುಕ್. **ವ್ರಶ್ಚಭ್ರಸ್ಜ**— ಎಂಬುದರಿಂದ ಜಕಾರಕ್ಕೆ ಷತ್ವ. **ಷಢೋಃ ಕಃಸಿ**—ಸೂತ್ರದಿಂದ ಅದಕ್ಕೆ ಕತ್ವ. **ಆದೇಶಪ್ರತ್ಯಯಯೋಃ**—ಸೂತ್ರದಿಂದ ಪ್ರತ್ಯಯ ಸಕಾರಕ್ಕೆ ಷತ್ವ. ಅತಿಙಂತದ ಪರದಲ್ಲಿರುವುದರಿಂದ ತಿಙಂತನಿಘಾತಸ್ವರ ಬರುತ್ತದೆ.

**ವಿದುಷ್ಟರಃ**—ವಿದ ಜ್ಞಾನೇ ಧಾತು. ಲಡರ್ಥದಲ್ಲಿ ಶತೃಬಂದಾಗ **ವಿದೇಃ ಶತುರ್ವಸುಃ**—(ಪಾ. ಸೂ. ೭-೧-೩೬) ಎಂಬುದರಿಂದ ವಸುಪ್ರತ್ಯಯ. ಅತಿಶಯೇನ ವಿದ್ವಾನ್ ವಿದುಷ್ಟರಃ **ದ್ವಿವಚನವಿಭ**—(ಪಾ. ಸೂ. ೫-೩-೫೭) ಎಂಬುದರಿಂದ ತರಪ್ ಪ್ರತ್ಯಯ. ಅಯಸ್ಮಯಾದಿಯಲ್ಲಿ ಸೇರಿರುವುದರಿಂದ **ಅಯಸ್ಮಯಾದೀನಿ ಛಂದಸಿ** (ಪಾ. ಸೂ. ೧-೪-೨೦) ಎಂಬುದರಿಂದ ಭಸಂಜ್ಞಾ ಬರುವುದರಿಂದ **ವಸೋಃ ಸಂಪ್ರಸಾರಣಮ್**—(ಪಾ ಸೂ. ೬-೪-೧೩೧) ಎಂಬುದರಿಂದ ಸಂಪ್ರಸಾರಣ ಬರುತ್ತದೆ. ಪೂರ್ವರೂಪ ಬಂದಾಗ ವಿದುಸ್‌ತರ ಎಂದಾಗುತ್ತದೆ. **ಶಾಸಿವಸಿಘಸೀನಾಂ ಚ**—(ಪಾ. ಸೂ. ೮-೩-೬೦) ಎಂಬುದರಿಂದ ವಸಿನ ಸಕಾರಕ್ಕೆ ಷತ್ವ. ತರಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಆಗ ವಸುವಿನ ಸ್ವರವೇ ಉಳಿಯುತ್ತದೆ. ॥ ೧೩ ॥

———:೦:———

ಸಂಹಿತಾಪಾಠಃ

ಸತ್ತೋ ಹೋತಾ ಮನುಷ್ವದಾ ದೇವಾँ ಅಚ್ಛಾ ವಿದುಷ್ಟರಃ ।
ಅಗ್ನಿರ್ಹವ್ಯಾ ಸುಷೂದತಿ ದೇವೋ ದೇವೇಷು ಮೇಧಿರೋ ವಿತ್ತಂ
ಮೇ ಅಸ್ಯ ರೋದಸೀ ॥ ೧೪ ॥

ಪದಪಾಠಃ

ಸತ್ತಃ । ಹೋತಾ । ಮನುಷ್ವತ್ । ಆ । ದೇವಾನ್ । ಅಚ್ಛ । ವಿದುಃऽತರಃ ।
ಅಗ್ನಿಃ । ಹವ್ಯಾ । ಸುಸೂದತಿ । ದೇವಃ । ದೇವೇಷು । ಮೇಧಿರಃ । ವಿತ್ತಂ ।
ಮೇ । ಅಸ್ಯ । ರೋದಸೀ ಇತಿ ॥ ೧೪ ॥

ಸಾಯಣಭಾಷ್ಯಂ

ಮನುಷ್ವತ್ ಮನೋರಿವಾಸ್ಮಾಕಂ ಯಜ್ಞೇ ಸತ್ತೋ ನಿಷಣ್ಣೋ ಹೋತಾ ದೇವಾನಾಮಾಹ್ವಾತಾ ವಿದುಷ್ಟರೋ ವಿದ್ವತ್ತರೋ ದೇವೋ ದಾನಾದಿಗುಣಯುಕ್ತೋ ದೇವೇಷು ಸರ್ವೇಷ್ವಿಂದ್ರಾದಿಷು ಮಧ್ಯೇ ಮೇಧಿರೋ ಮೇಧಾವೀ । ಏವಂಭೂತೋಽಗ್ನಿಸ್ತಾನ್ದೇವಾನಚ್ಛಾಭಿಮುಖ್ಯೇನ ಹವ್ಯಾ ಹವ್ಯಾನ್ಯಸ್ಮದೀಯಾನಿ ಹವೀಂಷಿ । ಮರ್ಯಾದಾಯಾಮಾಕಾರಃ । ಶಾಸ್ತ್ರಮರ್ಯಾದಯಾ ಯಥಾಶಾಸ್ತ್ರಂ ಸುಷೂದತಿ । ಪ್ರೇರಯತು । ಅನ್ಯತ್ಸಮಾನಂ ॥ ಸುಷೂದತಿ । ಷೂದ ಕ್ಷರಣೇ । ಲೇಟ್ಯಡಾಗಮಃ । ಬಹುಲಂ ಛಂದಸೀತಿ ಶಪಃ ಶ್ಲುಃ । ಮೇಧಿರಃ । ಮೇಧಾರಥಾಭ್ಯಾಮಿರನಿರಚೌ ವಕ್ತವ್ಯೌ । ಪಾ. ೫-೨-೧೦೯-೩ । ಇತಿ ಮತ್ವರ್ಥೀಯ ಇರನ್ ॥

। ಪ್ರತಿಪದಾರ್ಥ ।

**ಮನುಷ್ವತ್**—ಮನುವಿನ ಯಜ್ಞದಲ್ಲಿ ಮಾಡಿದಂತೆಯೇ । **ಸತ್ತಃ**—(ನಮ್ಮ ಯಜ್ಞದಲ್ಲಿಯೂ) ಕುಳಿತು ಕೊಂಡು । **ಹೋತಾ**—(ದೇವತೆಗಳನ್ನು) ಕರೆಯುವವನೂ । **ವಿದುಷ್ಟರಃ**—ಅತ್ಯಂತ ಪ್ರಾಜ್ಞನೂ । **ದೇವಃ**—ದಾನಾದಿ ಗುಣಯುಕ್ತನೂ । **ದೇವೇಷು**—ಇಂದ್ರಾದಿ ದೇವತೆಗಳ ನಡುವೆ । **ಮೇಧಿರಃ**—ಅತ್ಯಂತ ಮೇಧಾವಿಯೂ ಆದ । **ಅಗ್ನಿಃ**—ಅಗ್ನಿಯು । **ದೇವಾನ್**—ಆ ದೇವತೆಗಳನ್ನು । **ಅಚ್ಛ**—ಎದುರುಗೊಂಡು । **ಹವ್ಯಾ**—(ನಮ್ಮ) ಹವಿ

ಸ್ಸುಗಳನ್ನು । ಆ—ಶಾಸ್ತ್ರರೀತಿಯಿಂದ। **ಸುಷೂದತಿ**—ಅರ್ಪಿಸಲಿ । **ರೋದಸೀ**—ಎಲೈ ದ್ಯಾವಾಪೃಥಿವಿಗಳೇ! **ಮೇ**—ನನ್ನ । **ಅಸ್ಯ**—ಈ ಸ್ತೋತ್ರವನ್ನು ಅಥವಾ ಕೂಪಪತನರೂಪವಾದ ದುಃಖವನ್ನು । **ವಿತ್ತಂ**—ಅರಿಯಿರಿ.

ಭಾವಾರ್ಥ

ದೇವತೆಗಳಿಗೆ ಆಹ್ವಾನವನ್ನು ಕೊಡುವವನೂ, ಅತ್ಯಂತಪ್ರಾಜ್ಞನೂ, ದಾನಾದಿಗುಣಯುಕ್ತನೂ, ಇಂದ್ರಾದಿ ದೇವತೆಗಳ ನಡುವೆ ಅತ್ಯಂತ ಮೇಧಾವಿಯೂ ಆದ ಅಗ್ನಿಯು ಸಕಲದೇವತೆಗಳನ್ನೂ ಎದುರುಗೊಂಡು ಮನುವಿನ ಯಜ್ಞದಲ್ಲಿ ಮಾಡಿದಂತೆ ನಮ್ಮ ಯಜ್ಞದಲ್ಲಿಯೂ ಕುಳಿತುಕೊಂಡು ನಮ್ಮ ಹವಿಸ್ಸನ್ನು ಶಾಸ್ತ್ರರೀತಿಯಿಂದ ದೇವತೆಗಳಿಗೆ ಅರ್ಪಿಸಲಿ. ಎಲೈ ದ್ಯಾವಾಪೃಥಿವಿಗಳೇ, ನನ್ನ ಈ ದುಃಖವನ್ನರಿತು ನನ್ನನ್ನು ಮೇಲಕ್ಕೆತ್ತಿರಿ.

English Translation

May that wise and liberal Agni, a sage amongst the gods, seated at our rite, as at the sacrifice of Manu, be the invoker of the deities, and offer them oblations. Heaven and earth, be conscious of this ( my affliction ).

॥ ವಿಶೇಷವಿಷಯಗಳು ॥

**ಮನುಷ್ವತ್**—ಹಿಂದಿನ ಋಕ್ಕಿನಲ್ಲಿ ಹೇಳಿರುವಂತೆ ಇಲ್ಲಿಯೂ ಸಹ ಮನುವಿಗೆ ಸಹಾಯವಾಡಿದಂತೆ ಎಂದರ್ಥವಾಗಿ ಅದರಂತೆ ನಮಗೂ ಸಹಾಯಮಾಡು, ನಮ್ಮ ಯಜ್ಞವು ನೆರವೇರುವಂತೆ ಮಾಡು ಎಂಬ ಪ್ರಾರ್ಥನೆ.

**ಯಥಾ ವಿಪ್ರಸ್ಯ ಮನುಷೋ ಹವಿರ್ಭಿರ್ದೇವಾ ಅಯಜಃ ಕವಿಭಿಃ ಕವಿಃ ಸನ್ ।**
**ಏವಾ ಹೋತಃ ಸತ್ಯತರ ತ್ವಮದ್ಯಾಗ್ನೇ ಮಂದ್ರಯಾ ಜುಹ್ವಾ ಯಜಸ್ವ ।**
(ಋ. ಸಂ. ೧-೭೬-೫)

ಎಂಬ ಋಕ್ಕಿನಲ್ಲಿ ಅಗ್ನಿಯು ಪ್ರಾಜ್ಞತ್ವವನ್ನೂ, ಶ್ರೇಷ್ಠನಾದ ಹೋತೃತ್ವವನ್ನೂ, ಮನುವಿಗಾಗಿ ಇಂದ್ರಾದಿಗಳಿಗೆ ಹವಿಸ್ಸನ್ನು ಅರ್ಪಿಸಿದುದನ್ನೂ ವರ್ಣಿಸಿರುವಂತೆ, ಇಲ್ಲಿಯೂ ಸಹ (ತ್ರಿತನೆಂಬ ಭಕ್ತನಾದ) ನನಗಾಗಿ ಯಜ್ಞವನ್ನು ನಿರ್ವಹಿಸು ಎಂದು ಪ್ರಾರ್ಥಿಸಿದೆ.

**ದೇವೋ ದೇವೇಷು ಮೇಧಿರಃ**—**ದೇವಾನಾಂ ಮಧ್ಯೇ ಯಜ್ಞವಾನ್** ದೇವತೆಗಳ ನಡುವೆ ಯಜ್ಞಕರ್ತನೆಂದು ಸ್ಕಂದಸ್ವಾಮಿಗಳೂ, **ಸರ್ವೇಷ್ವಿಂದ್ರಾದಿಷು ಮಧ್ಯೇ ಮೇಧಾವೀ ।** ಇಂದ್ರಾದಿ ಸಕಲದೇವತೆಗಳ ಮಧ್ಯೆ ಅತ್ಯಂತ ಮೇಧಾವಿಯೆಂದು ಸಾಯಣರೂ ವಿವರಿಸಿದ್ದಾರೆ.

**ತ್ವಮಗ್ನೇ ಪ್ರಥಮೋ ಅಂಗಿರಸ್ತಮಃ ಕವಿರ್ದೇವಾನಾಂ ಪರಿಭೂಷಸಿ ವ್ರತಂ ।**
**ವಿಭುರ್ವಿಶ್ವಸ್ಮೈ ಭುವನಾಯ ಮೇಧಿರೋ ದ್ವಿಮಾತಾ ಶಯುಃ ಕತಿಧಾ ಚಿದಾಯವೇ ।**
(ಋ. ಸಂ. ೧-೩೧-೨)

ಎಂಬ ಋಕ್ಕಿನಲ್ಲಿ ಮೇಲೆ ಹೇಳಿರುವ ಎರಡು ವಿಧವಾದ ಅರ್ಥಗಳಿಗೂ ಅವಕಾಶವಾಗಿರುವಂತೆ ಅಗ್ನಿಯ ಮಹಿಮೆಯನ್ನು ವರ್ಣಿಸಿದೆ. ಅಗ್ನಿಯೇ ಅತ್ಯಂತ ಮೇಧಾವಿಯೆಂದೂ, ಅಂಗಿರಾಋಷಿಗಳೆಲ್ಲೆಲ್ಲಾ ಅತ್ಯಂತ ಶ್ರೇಷ್ಠನೆಂದೂ, ವ್ರತವನ್ನು ಅಲಂಕರಿಸುವವನೆಂದೂ, ಸಕಲಲೋಕದ ಯಜ್ಞವನ್ನೂ ನಿರ್ವಹಿಸುವವನೆಂದೂ ಇದರಂತೆಯೇ ಇನ್ನೂ ಅನೇಕಕಡೆ ಸ್ತುತಿಸಿದೆ.

**ವೀತಿಹೋತ್ರಂ ತ್ವಾ ಕವೇ ದ್ಯುಮಂತಂ ಸಮಿಧೀಮಹಿ ।**
(ಶ. ಬ್ರಾ. ೧-೩-೪-೬)

ಎಂದು ಅಗ್ನಿಗೆ **ಕವಿಯೆಂಬ** ಸಂಬೋಧನೆಯೂ ಸಾಮಾನ್ಯವಾಗಿ ಎಲ್ಲಾ ಶ್ರುತಿಗಳಲ್ಲಿಯೂ ಇರುತ್ತದೆ. **ಮೇಧಿರ** ಎಂಬ ವಿಶೇಷಣವು **ಅಗ್ನಿ**ಪರವಾಗಿರುವಂತೆಯೇ, **ಇಂದ್ರ** ಮತ್ತು **ವರುಣ** ಇವರ ಪರವಾಗಿಯೂ ಉಪಯೋಗಿಸಲ್ಪಟ್ಟಿದೆ. ಮೇಧಾವಿಯೆಂದಾದರೂ ಆಗಬಹುದು. ಅಥವಾ ಯಜ್ಞವಾನ್ ಎಂದಾದರೂ ಆಗಬಹುದು. ಉದಾಹರಣೆಗೆ—

**ವೇದಾ ವಿಶ್ವಸ್ಯ ಮೇಧಿರೋ ಧೃಷತ್ತಂತಮಿದೇಷತೇ ।**
(ಋ. ಸಂ. ೬-೪೨-೩)

ಎಂಬ ಋಕ್ಕಿನಲ್ಲಿ **ಇಂದ್ರ**ಪರವಾಗಿ ಉಪಯೋಗಿಸಲ್ಪಟ್ಟು **ಮೇಧಿರಃ ಮೇಧಾವೀ । ಮೇಧೋ ಯಜ್ಞಸ್ತದ್ವಾನ್ವಾ ಇಂದ್ರಃ** ಎಂದು ಭಾಷ್ಯಕಾರರ ವಿವರಣೆಯಿದೆ.

**ಇಂದ್ರಸ್ಯ ನು ಸುಕೃತಂ ದೈವ್ಯಂ ಸಹೋಽಗ್ನಿರ್ಗೃಹೇ ಜರಿತಾ ಮೇಧಿರಃ ಕವಿಃ ।**
(ಋ. ಸಂ. ೧೦-೧೦೦-೬)

ಎಂಬ ಋಕ್ಕಿನಲ್ಲಿ **ಕವಿಃ** ಎಂದು ಬೇರೆ ಪದವು ಅಗ್ನಿಯ ಕ್ರಾಂತದರ್ಶಿತ್ವವನ್ನು ತೋರಿಸಿರುವುದರಿಂದ ಇಲ್ಲಿ **ಮೇಧಿರಃ** ಎಂದರೆ **ಯಜ್ಞವಾನ್** ಅಥವಾ **ಹವಿಷ್ಮಾನ್** ಎಂದರ್ಥವೆಂದು ಹೇಳಿದೆ. ಹೀಗೆಯೇ ಇತರ ಋಕ್ಕುಗಳಲ್ಲಿಯೂ ಸನ್ನಿವೇಶಕ್ಕನುಗುಣವಾಗಿ **ಮೇಧಿರ** ಶಬ್ದಕ್ಕೆ ಅರ್ಥಮಾಡಿಕೊಳ್ಳಬೇಕು.

ವ್ಯಾಕರಣಪ್ರಕ್ರಿಯಾ

**ಅಚ್ಛ—ನಿಪಾತಸ್ಯ ಚ**—(ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾವಲ್ಲಿ ದೀರ್ಘ ಬರುತ್ತದೆ.

**ಹವ್ಯಾ**—ಹವ್ಯಾನಿ ಎಂದು ನಪುಂಸಕದಲ್ಲಿ ರೂಪವಾದಾಗ **ಶೇಶ್ಛಂದಸಿ ಬಹುಲಮ್**—(ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ ಬರುತ್ತದೆ.

**ಸುಷೂದತಿ**—ಷೂದ ಕರಣೇ. ಧಾತು. ಲೇಟ್ ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. **ಲೇಟೋಽಡಾಟೌ**—(ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. **ಬಹುಲಂ ಛಂದಸಿ**—(ಪಾ. ಸೂ. ೨-೪-೭೬) ಎಂಬುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ**—(ಪಾ. ಸೂ. ೬-೧-೧೦) ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ **ಹ್ರಸ್ವಃ**—ಸೂತ್ರದಿಂದ ಹ್ರಸ್ವ. **ಆದೇಶಪ್ರತ್ಯಯಯೋಃ**—ಎಂಬುದರಿಂದ ಧಾತುವಿನ ಸಕಾರಕ್ಕೆ ಷತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಮೇಧಿರಃ—ಮೇಧಾ ಅಸ್ಯ ಅಸ್ತಿ ಇತಿ ಮೇಧಿರಃ। **ಮೇಧಾರಥಾಭ್ಯಾಮಿರನಿರಚೌ ವಕ್ತವ್ಯೌ**—(ಪಾ. ಸೂ. ೫-೨-೧೦೯-೩) ಎಂಬುದರಿಂದ ಮತ್ವರ್ಥದಲ್ಲಿ ಮೇಧಾಶಬ್ದಕ್ಕೆ ಇರನ್ ಪ್ರತ್ಯಯ. **ಯಸ್ಯೇತಿ ಚ**—(ಪಾ. ಸೂ. ೬-೪-೧೪೮) ಎಂಬುದರಿಂದ ಆಕಾರಕ್ಕೆ ಲೋಪ. ಮೇಧಿರ ಎಂದು ರೂಪವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾಏಕವಚನಾಂತರೂಪ. ॥ ೧೪ ॥



ಸಂಹಿತಾಪಾಠಃ

ಬ್ರಹ್ಮಾ ಕೃಣೋತಿ ವರುಣೋ ಗಾತುವಿದಂ ತಮೀಮಹೇ।
ವ್ಯೂರ್ಣೋತಿ ಹೃದಾ ಮತಿಂ ನವ್ಯೋ ಜಾಯತಾಮೃತಂ ವಿತ್ತಂ
ಮೇ ಅಸ್ಯ ರೋದಸೀ ॥ ೧೫ ॥

ಪದಪಾಠಃ

ಬ್ರಹ್ಮ । ಕೃಣೋತಿ । ವರುಣಃ । ಗಾತುऽವಿದಂ । ತಂ । ಈಮಹೇ ।
ವಿ । ಊರ್ಣೋತಿ । ಹೃದಾ । ಮತಿಂ । ನವ್ಯಃ । ಜಾಯತಾಂ । ಋತಂ । ವಿತ್ತಂ
ಮೇ । ಅಸ್ಯ । ರೋದಸೀ ಇತಿ ॥ ೧೫ ॥

॥ ಸಾಯಣಭಾಷ್ಯಂ ॥

ಯೋ ವರುಣೋಽನಿಷ್ಟಸ್ಯ ನಿವಾರಯಿತಾ ದೇವೋ ಬ್ರಹ್ಮ ಪರಿವೃಢಂ ತದ್ರಕ್ಷಣರೂಪಂ ಕರ್ಮ ಕೃಣೋತಿ ಕರೋತಿ । ತಂ ತಾದೃಶಂ ಗಾತುವಿದಂ ಗಾತೋರ್ಮಾರ್ಗಸ್ಯ ದುಃಖನಿವಾರಕಸ್ಯ ಲಂಭಯಿ-

ತಾರಂ ವರುಣಮೀಮಹೇ । ಅಭಿಮತಫಲಂ ಯಾಚಾಮಹೇ । ಈಮಹ ಇತಿ ಯಾಚ್ಞಾಕರ್ಮಾ । ತಸ್ಮೈ ವರುಣಾಯಾಯಮಸ್ಮದೀಯಃ ಸ್ತೋತಾ ಹೃದಾ ಹೃದಯೇನ ಮತಿಂ ಮನನೀಯಾಂ ಸ್ತುತಿಂ ವ್ಯೂರ್ಣೋತಿ ವಿವೃಣೋತಿ । ಪ್ರಕಾಶಯತಿ । ಉಚ್ಚಾರಯತೀತ್ಯರ್ಥಃ । ಸೋಽಯಂ ನವ್ಯಃ ಸ್ತುತ್ಯೋ ವರುಣೋಽಸ್ಮಾಕಮೃತಂ ಜಾಯತಾಂ । ಸತ್ಯಭೂತೋಽಸ್ತು ॥ ಬ್ರಹ್ಮ । ಅನ್ಯೇಷಾಮಪಿ ದೃಶ್ಯತ ಇತಿ ಸಾಂಹಿತಿಕೋ ದೀರ್ಘಃ। ಗಾತುವಿದಂ । ವಿದ್ಲೃ ಲಾಭೇ । ಅಂತರ್ಭಾವಿತಣ್ಯರ್ಥಾತ್ ಕ್ವಿಪ್ । ಈಮಹೇ । ಈಙ್ ಗತೌ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಹೃದಾ । ಪದ್ದನ್ನಿತ್ಯಾದಿನಾ ಹೃದಯಶಬ್ದಸ್ಯ ಹೃದಾದೇಶಃ ।

ಪ್ರತಿಪದಾರ್ಥ

**ವರುಣಃ**—ಅನಿಷ್ಟವನ್ನು ತಪ್ಪಿಸತಕ್ಕ ವರುಣದೇವನು । **ಬ್ರಹ್ಮ**—ರಕ್ಷಣರೂಪವಾದ ಕರ್ಮವನ್ನು । **ಕೃಣೋತಿ**—ಮಾಡುತ್ತಾನೆ । **ತಂ ಗಾತುವಿದಂ**—ಅಂತಹ ದುಃಖನಿವಾರಕವಾದ ಮಾರ್ಗವನ್ನು ತೋರಿಸತಕ್ಕ ವರುಣನನ್ನು । **ಈಮಹೇ**—(ಇಷ್ಟಾರ್ಥವನ್ನು ಕೊಡಬೇಕೆಂದು, ನಮ್ಮ ಮಾರ್ಗದರ್ಶಕನಾಗಬೇಕೆಂದು ಆ ವರುಣನಿಗೆ) ಪ್ರಾರ್ಥಿಸುತ್ತೇವೆ. । **ಹೃದಾ**—ಹೃತ್ಪೂರ್ವಕವಾಗಿ । **ಮತಿಂ**—ಸ್ತೋತ್ರವನ್ನು । **ವ್ಯೂರ್ಣೋತಿ**—(ಕೀರ್ತನಕಾರನು) ನಿರ್ಮಿಸಿ ಪಠಿಸುತ್ತಾನೆ । **ನವ್ಯಃ**—ಸ್ತೋತ್ರಾರ್ಹನಾದ ವರುಣನು । (**ಅಸ್ಮಾಕಂ**—ನಮಗೆ) । **ಋತಂ**—ಸತ್ಯಾತ್ಮಕನಾದ ಸಹಾಯಕನಾಗಿ । **ಜಾಯತಾಂ**—ಉಂಟಾಗಲಿ । **ರೋದಸೀ**—ಎಲೈ ದ್ಯಾವಾಪೃಥಿವಿಗಳೇ, । **ಮೇ**—ನನ್ನ । **ಅಸ್ಯ**—ಈ ಸ್ತೋತ್ರವನ್ನು ಅಥವಾ ದುಃಖವನ್ನು । **ವಿತ್ತಂ**—ಚೆನ್ನಾಗಿ ಅರಿಯಿರಿ ।

॥ ಭಾವಾರ್ಥ ॥

ಅನಿಷ್ಟನಿವಾರಕನಾದ ವರುಣನು ರಕ್ಷಣರೂಪವಾದ ಕರ್ಮವನ್ನು ನೆರವೇರಿಸುತ್ತಾನೆ. ಅಂತಹ ದುಃಖನಿವಾರಕನಾದ ವರುಣನನ್ನು ನಮಗೆ ಮಾರ್ಗದರ್ಶಕನಾಗಿರಬೇಕೆಂದು ಪ್ರಾರ್ಥಿಸುತ್ತೇವೆ. ಕೀರ್ತನಕಾರನು ಆ ವರುಣನಿಗೆ ಹೃತ್ಪೂರ್ವಕವಾದ ಸ್ತೋತ್ರವನ್ನು ಪಠಿಸುತ್ತಾನೆ. ಸ್ತೋತ್ರಾರ್ಹನಾದ ಆ ವರುಣನು ನಮಗೆ ಸತ್ಯಾತ್ಮಕನಾದ ಸಹಾಯಕನಾಗಿ ಆಗಿರಲಿ. ಎಲೈ ದ್ಯಾವಾಪೃಥಿವಿಗಳೇ, ನನ್ನ ದುಃಖವನ್ನರಿತು ನನ್ನನ್ನು ಮೇಲಕ್ಕೆತ್ತಿರಿ.

## English Translation

Varuna performs the rite of preservation; we desire him as the guide of our way; (to him, the repeater of praise) addresses praise with his (whole) heart; may he who is entitled to laudation become our true (support). Heaven and earth, be conscious of this (my affliction).

ವಿಶೇಷವಿಷಯಗಳು

**ವರುಣಃ—ವರುಣೋ ವೃಣೋತೀತಿ ಸತಃ** । ಮುಚ್ಚು ಎಂಬರ್ಥವನ್ನು ಕೊಡತಕ್ಕ ವೃ ಧಾತುವಿನಿಂದ ವರುಣಶಬ್ದವು ನಿಷ್ಪನ್ನವಾಗಿದೆಯೆಂದು ನಿರುಕ್ತಕಾರರು ನಿರ್ವಚನವನ್ನು ಹೇಳಿರುತ್ತಾರೆ. (ನಿ. ೧೦-೩) ಇದಕ್ಕೆ **ದುರ್ಗಾಚಾರ್ಯರು ವಿಯದ್ವೃಣೋತಿ ಮೇಘಜಾಲೇನ** । ಮೇಘಗಳ ಗುಂಪಿನಿಂದ ಅಂತರಿಕ್ಷವನ್ನು ಮುಚ್ಚುವವನೆಂದು ವ್ಯಾಖ್ಯಾನಮಾಡಿದ್ದಾರೆ. ಸಾಯಣರು ಈ ಋಕ್ಕಿನ ಭಾಷ್ಯದಲ್ಲಿ **ಅನಿಷ್ಟಸ್ಯ ನಿವಾರಯಿತಾ ದೇವಃ** । ಕೇಡಕನ್ನು ತಪ್ಪಿಸತಕ್ಕ ದೇವನೆಂದೂ, ವಿವರಿಸಿದ್ದಾರೆ.

**ಬ್ರಹ್ಮ—ತದ್ರಕ್ಷಣರೂಪಂ ಕರ್ಮ** । ಬ್ರಹ್ಮ ಶಬ್ದಕ್ಕೆ ಇಲ್ಲಿ ರಕ್ಷಣರೂಪವಾದ ಕರ್ಮವೆಂದರ್ಥ. ಇಂತಹ ಕರ್ಮವನ್ನು **ಕೃಣೋತಿ**—ಮಾಡುತ್ತಾನೆ ಎಂದು ಸಾಯಣರೂ **ಬ್ರಹ್ಮ-ಸ್ತುತಿಲಕ್ಷಣಂ: ಕೃಣೋತಿ-ಕಾರಯತಿ ಕಾಮಾನ್ ಸ್ತೋತೃಭಿರಾತ್ಮಾನಂ ಸ್ತಾವಯತೀತ್ಯರ್ಥಃ** । ಸ್ತೋತೃಗಳು ತನ್ನನ್ನು ಸ್ತುತಿಸುವಂತೆ ಮಾಡುತ್ತಾನೆಂದರ್ಥವೆಂದು ಸ್ಕಂದಸ್ವಾಮಿಗಳು ಹೇಳಿರುತ್ತಾರೆ ಎರಡನೆಯ ವಿವರಣೆಯ ಪ್ರಕಾರವೂ ಸಹ **ವರುಣನು** ಲೋಕರಕ್ಷಣವೇ ಮುಂತಾದ ಕರ್ಮಗಳನ್ನು ನಿರ್ವಹಿಸಿ ಜಗತ್ತೆಲ್ಲಾ ತನ್ನನ್ನು ಹೊಗಳುವಂತೆ ಮಾಡುತ್ತಾನೆಂದು ತಾತ್ಪರ್ಯ

**ಗಾತುವಿದಂ—ಗಾತೋರ್ಮಾರ್ಗಸ್ಯ ದುಃಖನಿವಾರಕಸ್ಯ ಲಂಭಯಿತಾರಂ ವರುಣಂ** । ದುಃಖನಿವಾರಕವಾದ ಮಾರ್ಗವನ್ನು ತೋರಿಸಿಕೊಡತಕ್ಕ ವರುಣನೆಂದು ಸಾಯಣರೂ **ಯಜ್ಞಾನ್ ಪ್ರತಿ ಗಂತುಂ ಜ್ಞಾತಾರಂ** । ಯಜ್ಞಕ್ಕೆ ಹೋಗತಕ್ಕ ಮಾರ್ಗವನ್ನು ತಿಳಿದವನೆಂದು ಸ್ಕಂದಸ್ವಾಮಿಗಳೂ ವಿವರಿಸಿದ್ದಾರೆ. **ಗಾತು** ಶಬ್ದಕ್ಕೆ **ಅನುಷ್ಠಾನ**ಮಾರ್ಗವೆಂದೂ **ದೇವಲೋಕಗಮನ**ಮಾರ್ಗವೆಂದೂ, **ಯಜ್ಞಗಮನ**ಮಾರ್ಗವೆಂದೂ ಅರ್ಥಗಳನ್ನು ಹೇಳಬಹುದು. **ಸುಗಂ** ಎಂಬ ಶಬ್ದಕ್ಕಿರುವಂತೆಯೇ (೧-೯೪-೯ ನೇ ಋಕ್ಕಿನ ವಿಶೇಷ ವಿಷಯಗಳನ್ನು ನೋಡಿ) ಈ ಪದಕ್ಕೂ ಭೌತಿಕವಾದ ನೈತಿಕವಾದ ಅರ್ಥಗಳಿರುವುವು. ವರುಣನು **ಋತಪಾಲಕನೂ, ಧೃತವ್ರತನೂ** ಆದುದರಿಂದ ವ್ರತಾನುಷ್ಠಾನಮಾರ್ಗಗಳನ್ನು ತಿಳಿದವನೆಂದಾದರೂ ಆಗಬಹುದು. ಅಥವಾ **ನೀತಿ**ಮಾರ್ಗಗಳನ್ನು ತಿಳಿದವನೆಂದಾದರೂ ಆಗಬಹುದು, **ವರುಣನ** ಪರವಾಗಿ ಉಪಯೋಗಿಸಿರುವಂತೆಯೇ ಈ ವಿಶೇಷಣವನ್ನು ಇಂದ್ರಾದಿ ಇತರ ದೇವತೆಗಳ ಪರವಾಗಿಯೂ ಉಪಯೋಗಿಸಿದೆ. ಆದರೆ ಇದರ ನೈತಿಕವಾದ ಅರ್ಥವನ್ನು ತೆಗೆದುಕೊಂಡರೆ ವರುಣನಿಗೆ ವಿಶೇಷಣವಾಗಿರುವುದೇ ಹೆಚ್ಚು ಒಪ್ಪುವುದು.

**ಈಮಹೇ-ಅಭಿಮತಫಲಂ ಯಾಚಾಮಹೇ** । **ಈಮಹೇ ಇತಿ ಯಾಚ್ಞಾಕರ್ಮ** । **ಈಮಹೇ** ಎಂಬುದು ಯಾಚ್ಞಾಕರ್ಮಗಳಲ್ಲಿ ಪಠಿತವಾಗಿರುವದರಿಂದ ಇಲ್ಲಿ ನಮ್ಮ ಇಷ್ಟಾರ್ಥಗಳನ್ನು ಅನುಗ್ರಹಿಸಬೇಕೆಂದು ಬೇಡಿಕೊಳ್ಳುತ್ತೇವೆಂದರ್ಥ.

**ಮತಿಂ—ಮನನೀಯಾಂ ಸ್ತುತಿಂ** । ಅತ್ಯಂತ ಆಪ್ಯಾಯಮಾನವಾದ ಸ್ತುತಿಯನ್ನು, **ವ್ಯೂರ್ಣೋತಿ—ಉಚ್ಚಾರಯತಿ । ಪ್ರಕಾಶಯತಿ** । ನಿರ್ಮಿಸಿ ಪಠಿಸುತ್ತಾನೆಂದರ್ಥ. **ಊರ್ಣುಞ್—ಆಚ್ಛಾದನೇ** । ಮರೆಸು, ಮುಚ್ಚು ಎಂಬರ್ಥದ ಊರ್ಣು ಧಾತುವು ಊರ್ಣೋತಿ ಎಂದಾಗುತ್ತದೆ. ಇಲ್ಲಿ ವಿ ಎಂಬ ಉಪಸರ್ಗದೊಡನೆ

ಸೇರಿ ವಿಗತವಾದ **ಆಚ್ಛಾದನೆ** ಎಂದರೆ ಮರೆಯನ್ನು ತಪ್ಪಿಸುವುದು ಎಂದರ್ಥ. ಪ್ರಕಾಶಪಡಿಸುವುದೆಂದು ತಾತ್ಪರ್ಯ. ಮಾನಸಿಕವಾದ ಸ್ತುತಿಯನ್ನು ಪಠಿಸಿ ಪ್ರಕಾಶನಮಾಡುವುದೆಂದು ಅಭಿಪ್ರಾಯ. ಈ ಪ್ರಕಾಶನವು ಅನೇಕ ವಿಧವಾಗಿರಬಹುದು.

**ವ್ಯೂರ್ಣ್ವತೀ ದಿವೋ ಅಂತಾँ ಅಬೋಧ್ಯಪ ಸ್ವಸಾರಂ ಸನುತರ್ಯುಯೋತಿ ।**
(ಋ. ಸಂ. ೧-೯೨-೧೧)

ಎಂಬ ಋಕ್ಕಿನಲ್ಲಿ **ವ್ಯೂರ್ಣ್ವತೀ** ಎಂಬ ಪದಕ್ಕೆ ಸುತ್ತಲೂ ಆವರಿಸಿರುವ ಕತ್ತಲೆಯಿಂದ ಜಗತ್ತನ್ನು ಬಿಡಿಸಿ ಪ್ರಕಾಶಗೊಳಿಸುತ್ತಿರುವ (ಉಷಸ್ಸು) ಎಂದರ್ಥ.

ಕೆಲವು ಕಡೆಗಳಲ್ಲಿ ಈ ಪದಕ್ಕೆ ಕೊಡುವುದು ಎಂಬ ಅರ್ಥವೂ ಇದೆ. ಉದಾಹರಣೆಗೆ—

**ವ್ಯೂರ್ಣ್ವತೀ ದಾಶುಷೇ ವಾರ್ಯಾಣಿ ಪುನರ್ಜ್ಯೋತಿರ್ಯುವತಿಃ ಪೂರ್ವಥಾಕಃ ।**
(ಋ. ಸಂ. ೫-೮೦-೬)

ಎಂಬ ಋಕ್ಕಿನಲ್ಲಿ **ಪ್ರಯಚ್ಛಂತೀ** ಕೊಡುವವಳಾಗಿ ಎಂದು ಅರ್ಥಮಾಡಿದ್ದಾರೆ. ಇಲ್ಲಿಯೂ ಸಹ ಪ್ರಕಾಶಪಡಿಸಿ ಕೊಡುವುದು ಎಂದರ್ಥ.

**ನವ್ಯಃ**- **ನೌತಿ** ಎಂಬ ಪದವು **ಅರ್ಚತಿಕರ್ಮ** ನಾಮಗಳಲ್ಲಿ ಪಠಿತವಾಗಿ **ನವ್ಯಃ** ಎಂದು ನಿಷ್ಪನ್ನವಾಗಿರುವುದರಿಂದ **ಸ್ತುತ್ಯಃ** । ಸ್ತೋತ್ರಾರ್ಹನು ಎಂದರ್ಥ. ಇಂತಹ ವರುಣನು ನಮಗೆ **ಋತಂ ಜಾಯತಾಂ- ಸತ್ಯಭೂತೋಽಸ್ತು** । ಸತ್ಯಾತ್ಮಕನಾಗಲಿ ; ಎಂದರೆ ನಾವು ನಿರ್ವಹಿಸುವ ಯಾಗಾದಿ ಪೂಜಾಕರ್ಮಗಳು ವ್ಯರ್ಥವಾಗದೇ ಅವೆಲ್ಲವೂ ಸತ್ಫಲದಾಯಕಗಳಾಗುವಂತೆ ಅನುಗ್ರಹಿಸಲಿ ಎಂದರ್ಥ.

ಸ್ಕಂದಸ್ವಾಮಿಗಳು ಇಲ್ಲಿ **ಮತಿ**ಶಬ್ದಕ್ಕೆ ಜ್ಞಾನವೆಂದು ಅರ್ಥಮಾಡಿ **ಮಮ ಮನಸೋ ಜ್ಞಾನಮುತ್ಪಾದಯತ್ವಿತ್ಯರ್ಥಃ** ನನ್ನ ಹೃದಯದಲ್ಲಿ ಜ್ಞಾನವನ್ನುಂಟುಮಾಡಲಿ ಎಂದರ್ಥವೆಂದು ಹೇಳಿದ್ದಾರೆ.

**ಯಃ ಬ್ರಹ್ಮ ಕೃಣೋತಿ ವರುಣಃ ಯಶ್ಚ ಪ್ರಕಾಶಾದಿಕರಣೇನ ಸರ್ವಪ್ರಾಣಿನಾಂ ವ್ಯೂರ್ಣೋತಿ ಹೃದಯಸ್ಯ ಮತಿಂ ಜ್ಞಾನಂ ತಂ ಮಯಮೀಮಹೇ । ನವ್ಯೋ ಜಾಯತಾಮೃತೇ ಅಸ್ಮದೀಯೋ ಇತಿ ।** ಯಾವ ವರುಣನು ಸ್ತುತ್ಯನಾಗುತ್ತಾನೋ, ಯಾವ ವರುಣನು ನಮ್ಮ ಹೃದಯದ ಅಜ್ಞಾನವನ್ನು ನಾಶಮಾಡಿ ಜ್ಞಾನವನ್ನು ಪ್ರಕಾಶಪಡಿಸುತ್ತಾನೆಯೋ ಅವನು ನಮ್ಮ ಯಜ್ಞದಲ್ಲಿ ಸ್ತುತ್ಯನಾಗಲಿ ಎಂದರ್ಥವೆಂದು ವಿವರಿಸಿದ್ದಾರೆ. ಇಲ್ಲಿ ಸಾಯಣರ ವಿವರಣೆಯೇ ಹೆಚ್ಚು ಸಮಂಜಸವಾಗಿದೆ.

ವ್ಯಾಕರಣಪ್ರಕ್ರಿಯಾ

ಬ್ರಹ್ಮ—ಬ್ರಹ್ಮನ್ ಶಬ್ದ. ನಪುಂಸಕದಲ್ಲಿ **ಸ್ವಮೋರ್ನಪುಂಸಕಾತ್**—(ಪಾ. ಸೂ. ೭-೧-೨೩) ಎಂಬುದರಿಂದ ಸುಲೋಪ ಬಂದಾಗ **ನಲೋಪಃ ಪ್ರಾತಿಪದಿಕಾಂತಸ್ಯ**—(ಪಾ. ಸೂ. ೮-೨-೭) ಎಂಬುದರಿಂದ ನಲೋಪ. **ಅನ್ಯೇಷಾಮಪಿ ದೃಶ್ಯತೇ**—(ಪಾ. ಸೂ. ೬-೩-೧೩೭) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಕೃಣೋತಿ**---ಕೃವಿ ಹಿಂಸಾಕರಣಯೋಶ್ಚ ಧಾತು. ಲಟ್‌ಪ್ರಥಮಪುರುಷಏಕವಚನದಲ್ಲಿ ತಿಪ್. **ಧಿನ್ವಿಕೃಣ್ವ್ಯೋರಚ**—(ಪಾ. ಸೂ. ೩-೧-೮೦) ಎಂಬುದರಿಂದ ಅಕಾರ ಅಂತಾದೇಶ. ಉ ಪ್ರತ್ಯಯ. ಇದಿತ್ತಾದುದರಿಂದ ನುಮಾಗಮ. **ಅತೋ ಲೋಪಃ**—(ಪಾ. ಸೂ. ೬-೪-೪೮) ಎಂಬುದರಿಂದ ಅಕಾರಲೋಪ. ತಿಙಂತ ನಿಘಾತಸ್ವರ ಬರುತ್ತದೆ.

**ಗಾತುವಿದಮ್**—ವಿದ್ಲೃ ಲಾಭೇ. ಧಾತು. ಪ್ರೇರಣಾರ್ಥರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಈ ಧಾತುವಿಗೆ **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಗಾತುವಿತ್ ಶಬ್ದವಾಗುತ್ತದೆ. **ಗತಿಕಾರಕೋಪಪದಾತ್ ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

**ಈಮಹೇ**—ಈಙ್ ಗತೌ ಧಾತು. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. **ಟಿತ ಆತ್ಮನೇಪದಾ**—(ಪಾ. ಸೂ. ೩-೪-೭೯) ಎಂಬುದರಿಂದ ಟಿಗೆ ಏತ್ವ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ (ಶ್ಯನ್) ಲುಕ್. ಈಮಹೇ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಊರ್ಣೋತಿ**—ಊರ್ಣುಞ್ ಆಚ್ಛಾದನೇ. ಧಾತು. ಅದಾದಿ. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ

**ಹೃದಾ**—ಹೃದಯ ಶಬ್ದಕ್ಕೆ ತೃತೀಯಾ ಏಕವಚನ ಪರವಾದಾಗ **ಪದ್ದನ್ನೋಮಾಸ್**—(ಪಾ. ಸೂ. ೬-೧-೬೩)—ಎಂಬುದರಿಂದ ಪ್ರಕೃತಿಗೆ ಹೃದಾದೇಶ **ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ನವ್ಯಃ**—ಣು ಸ್ತುತೌ. ಧಾತು. ಇದಕ್ಕೆ **ಅಚೋ ಯತ್**—(೩-೧-೯೭) ಎಂಬುದರಿಂದ ಯತ್ ಪ್ರತ್ಯಯ. **ಯತೋಽನಾವಃ**—(ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಜಾಯತಾಮ್**—ಜನೀ ಪ್ರಾದುರ್ಭಾವೇ ಧಾತು. ಲೋಟ್ ಪ್ರಥಮಪುರುಷ ಏಕವಚನದಲ್ಲಿ **ಟಿತ ಆತ್ಮನೇ**—ಎಂಬುದರಿಂದ ಏತ್ವಬಂದಾಗ **ಆಮೇತಃ**—(ಪಾ. ಸೂ. ೩-೪-೯೦) ಎಂಬುದರಿಂದ ಏಕಾರಕ್ಕೆ ಆಮಾದೇಶ. ಶ್ಯನ್ ವಿಕರಣ. **ಜ್ಞಾಜನೋರ್ಜಾ** (ಪಾ. ಸೂ. ೭-೩-೭೯) ಎಂಬುದರಿಂದ ಶ್ಯನ್ ಪರವಾದಾಗ ಧಾತುವಿಗೆ ಜಾದೇಶ. ತಿಙಂತನಿಘಾತಸ್ವರ ಬರುತ್ತದೆ. ॥ ೧೫ ॥

———:o:———

॥ ಸಂಹಿತಾಪಾಠಃ ॥

ಅ॒ಸೌ ಯಃ ಪಂಥಾ॑ ಆದಿ॒ತ್ಯೋ ದಿ॒ವಿ ಪ್ರ॒ವಾಚ್ಯಂ॑ ಕೃ॒ತಃ ।
ನ ಸ ದೇ॑ವಾ ಅತಿ॒ಕ್ರಮೇ॒ ತಂ ಮ॑ರ್ತಾಸೋ॒ ನ ಪ॑ಶ್ಯಥ ವಿ॒ತ್ತಂ
ಮೇ॑ ಅ॒ಸ್ಯ ರೋ॑ದಸೀ ॥ ೧೬ ॥

॥ ಪದಪಾಠಃ ॥

ಅ॒ಸೌ । ಯಃ । ಪಂಥಾ॑ಃ । ಆ॒ದಿ॒ತ್ಯಃ । ದಿ॒ವಿ । ಪ್ರ॒ಽವಾಚ್ಯಂ॑ । ಕೃ॒ತಃ ।
ನ । ಸಃ । ದೇ॒ವಾ॒ಃ । ಅ॒ತಿ॒ಽಕ್ರಮೇ॑ । ತಂ । ಮ॒ರ್ತಾ॒ಸ॒ಃ । ನ । ಪ॒ಶ್ಯ॒ಥ॒ । ವಿ॒ತ್ತಂ ।
ಮೇ॒ । ಅ॒ಸ್ಯ । ರೋ॒ದ॒ಸೀ॒ ಇತಿ॑ ॥ ೧೬ ॥

॥ ಸಾಯಣಭಾಷ್ಯಂ ॥

ಪಂಥಾಃ ಸತತಗಾಮೀ । ಯದ್ವಾ । ಬ್ರಹ್ಮಲೋಕಂ ಗಚ್ಛತಾಮುಪಾಸಕಾನಾಂ ಮಾರ್ಗಭೂತಃ । ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾಂತಿ । ಮು. ಉ.೧-೨-೧೧। ಇತಿ ಶ್ರುತೇಃ । ಏವಂಭೂತೋ ಯೋಽಸಾವಾದಿತ್ಯೋ ದಿವಿದ್ಯುಲೋಕೇ ಪ್ರವಾಚ್ಯಂ ಪ್ರಕರ್ಷೇಣ ವಚನಂ ಯಥಾ ಭವತಿ ತಥಾ ಕೃತೋ ನಿರ್ಮಿತಃ। ಯಥಾ ಸರ್ವೈಃ ಪ್ರಾಣಿಭಿರ್ದೃಶ್ಯತೇ ತಥಾ ವರ್ತಮಾನ ಇತ್ಯರ್ಥಃ । ಹೇ ದೇವಾಃ ಸೋಽಯಮಾದಿತ್ಯೋ ಯುಷ್ಮಾಭಿರಪಿ ನಾತಿಕ್ರಮೇ । ಅತಿಕ್ರಮಿತುಂ ನ ಶಕ್ಯಃ । ಯುಷ್ಮಜ್ಜೀವನಸ್ಯ ತದಾಯತ್ತತ್ವಾತ್ । ಸತಿ ಹಿ ಸೂರ್ಯೇ ವಸಂತಾದಯಃ ಕಾಲಾ ನಿಷ್ಪದ್ಯಂತೇ । ಕಾಲೇಷು ಚ ಯಾಗಾಃ ಕ್ರಿಯಂತೇ । ಯಾಗೇಷು ಚ ಸತ್ಸು ಭವತಾಂ ಜೀವನಂ । ಅತೋ ಯುಷ್ಮಾಭಿರಪ್ಯಸೌ ನಾತಿಕ್ರಮಿತವ್ಯಃ । ಏವಂ ಚ ಸತಿ ಹೇ ಮರ್ತಾಸಃ ಪಾಪಕೃತೋ ಮನುಷ್ಯಾಃ ತಂ ಮಹಾನುಭಾವಂ ಸೂರ್ಯಂ ನ ಪಶ್ಯಥ । ಸೂರ್ಯಂ ನ ಜಾನೀಥಃ । ಏತಚ್ಚ ಕೂಪೇ ಪಾತಯಿತ್ವಾ ನಿರ್ಗತಾನೇಕತದ್ವಿತೌ ಪ್ರತಿ ನಿಂದನಂ । ಅಹಮೇವ ಮಂತ್ರದ್ರಷ್ಟಾ ತಂ ಸೂರ್ಯಂ ಜಾನಾಮಿ ಪಾಪಕೃತೌ ಯುವಾಂ ನ ಜಾನೀಥ ಇತಿ ॥ ಪಂಥಾಃ । ಪತ್ಲೃ ಗತೌ । ಪತೇಃಸ್ಥ ಚೇತೀನಿಪ್ರತ್ಯಯಃ । ಪಥಿಮಥ್ಯೃಭುಕ್ಷಾಮಾದಿತ್ಯಾತ್ತ್ವಂ । ಇತೋಽತ್ಸರ್ವನಾಮಸ್ಥಾನೇ । ಪಾ. ೭-೧-೮೬ । ಇತ್ಯತ್ವಮಿಕಾರಸ್ಯ । ಥೋ ನ್ಥಃ । ಪಾ. ೭-೧-೮೭ । ಪಥಿಮಥೋಃ ಸರ್ವನಾಮಸ್ಥಾನ ಇತ್ಯಾದ್ಯುದಾತ್ತತ್ವಂ । ಪ್ರವಾಚ್ಯಂ । ವಕ್ತೇರ್ಣ್ಯಂತಾದಚೋ ಯದಿತಿ ಭಾವೇ ಯತ್ । ಯತೋಽನಾವ

ಇತ್ಯಾದ್ಯುದಾತ್ತತ್ವಂ । ಅತಿಕ್ರಮೇ । ಕ್ರಮು ಪಾದವಿಕ್ಷೇಪೇ । ಕೃತ್ಯಾರ್ಥೇ ತವೈಕೇನ್ಕೇನ್ಯತ್ವನ ಇತಿ ಕೇನ್ಯಪ್ರತ್ಯಯಃ । ನಿತ್ಯಾತ್ವಾದಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

**ದೇವಾಃ**—ಎಲೈ ದೇವತೆಗಳೇ, । **ಪಂಥಾಃ**—ಸರ್ವದಾ ಸಂಚಾರವುಳ್ಳ ಅಥವಾ (ಉಪಾಸಕರಿಗೆ ಬ್ರಹ್ಮಲೋಕದ) ಮಾರ್ಗಭೂತನಾದ । **ಯಃ ಅಸೌ ಆದಿತ್ಯಃ**—ಯಾವ ಈ ಆದಿತ್ಯನು । **ದಿವಿ**—ದ್ಯುಲೋಕದಲ್ಲಿ । **ಪ್ರವಾಚ್ಯಂ**—(ಎಲ್ಲರೂ) ಕಂಠೋಕ್ತವಾಗಿ ಹೊಗಳುವಂತೆ । **ಕೃತಃ**—ಸೃಷ್ಟನಾಗಿದ್ದಾನೆ(ಯೋ) । **ಸಃ**—ಆ ಸೂರ್ಯನು । **ನ ಅತಿಕ್ರಮೇ**—(ಯಾಗಾದಿಗಳಿಗೆ ಅತ್ಯವಶ್ಯವಾಗಿರುವುದರಿಂದ) ಅನಾದರಣೆಯಿಂದ (ನಿಮ್ಮಿಂದಲೂ) ಅತಿಕ್ರಮಿಸಲು ಸಾಧ್ಯನಲ್ಲ. (ಹೀಗಿರುವಾಗ) । **ಮರ್ತಾಸಃ**—(ಪಾಪಕಾರಿಗಳಾದ) ಮಾನವರು । **ತಂ**—ಮಹಾನುಭಾವನಾದ ಸೂರ್ಯನನ್ನು । **ನ ಪಶ್ಯಥ**—(ಅವನ ಮಹಿಮೆಯನ್ನು) ಅರಿಯುವುದಿಲ್ಲ । **ರೋದಸೀ**—ಎಲೈ ದ್ಯಾವಾಪೃಥಿವಿಗಳೇ, । **ಮೇ**—ನನ್ನ । **ಅಸ್ಯ**—ಈ ದುಃಖವನ್ನು । **ವಿತ್ತಂ**—ಅರಿಯಿರಿ ।

ಭಾವಾರ್ಥ

ಉಪಾಸಕರಿಗೆ ಬ್ರಹ್ಮಲೋಕದ ಮಾರ್ಗಭೂತನಾದ ಆದಿತ್ಯನು ದ್ಯುಲೋಕದಲ್ಲಿ ಎಲ್ಲರಿಗೂ ತಿಳಿಯುವಂತೆ ಪ್ರಸಿದ್ಧನಾಗಿ ಪ್ರಕಾಶಿಸುತ್ತಾ ಇದ್ದಾನೆ. ಅವನನ್ನು ಎಲ್ಲರೂ ಕಂಠೋಕ್ತವಾಗಿ ಹೊಗಳುತ್ತಾರೆ ಎಲೈ ದೇವತೆಗಳೇ, ಆ ಸೂರ್ಯನು ಯಾಗಾದಿಗಳಿಗೆ ಅತ್ಯವಶ್ಯವಾಗಿದ್ದು ನಮ್ಮ ಜೀವನದ ಆಧಾರವೇ ಆಗಿರುವುದರಿಂದ ಅವನನ್ನು ನೀವು ಅನಾದರಣೆಯಿಂದ ಅತಿಕ್ರಮಿಸಲು ಸಾಧ್ಯವಿಲ್ಲ. ಹಾಗಿದ್ದರೂ ಸಹ ಏಕತ-ದ್ವಿತಾದಿ ಮಾನವರು ಅವನ ಮಹಿಮೆಯನ್ನು ಅರಿಯದೇ ಅವನನ್ನು ಅನಾದರಿಸುತ್ತಾರೆ. ನನ್ನಂತಹವನು ಮಾತ್ರ ಅವನ ಮಹಿಮೆಯನ್ನರಿತು ಸ್ತೋತ್ರಮಾಡಬಲ್ಲೆನು. ಎಲೈ ದ್ಯಾವಾಪೃಥಿವಿಗಳೇ, ನನ್ನ ಈ ದುಃಖವನ್ನರಿತು ನನ್ನನ್ನು ಮೇಲಕ್ಕೆತ್ತಿರಿ.

## English Translation

The sun, who is avowedly made the path in heaven, is not to be disregarded, Gods, by you ; but you, mortals, regard him not· Heaven and earth, be conscious of this (my affliction)

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಆದಿತ್ಯನ ಮಹಿಮೆಯನ್ನು ಸ್ತುತಿಸಿದೆ. ಈ ವರ್ಣನೆಯಲ್ಲಿ ಆದಿತ್ಯ, ಸೂರ್ಯ, ಸವಿತೃ ಎಂಬ ಮೂರು ದೇವತೆಗಳ ಗುಣಗಳೂ ಒಟ್ಟಿಗೆ ಸೇರಿರುವುದರಿಂದ ಆ ಮೂರು ಹೆಸರುಗಳೂ ಒಂದೇ ದೇವತೆಯ ಬೇರೆ ಬೇರೆ ಸ್ವರೂಪಗಳನ್ನು ತಿಳಿಸುತ್ತವೆ ಎಂದು ಹೇಳಬಹುದು.

ಪಂಥಾಃ—ಈ ಪದಕ್ಕೆ ಎರಡು ವಿಧವಾದ ಅರ್ಥಗಳುಂಟೆಂದು ಭಾಷ್ಯಕಾರರು ಹೇಳಿದ್ದಾರೆ. ಮೊದಲನೆಯದು ಸಂಚಾರವುಳ್ಳ ಎಂಬ ಸಾಧಾರಣವಾದ ಅರ್ಥ. ಎರಡನೆಯದು ಉಪಾಸಕರನ್ನು ಬ್ರಹ್ಮಲೋಕಕ್ಕೆ ಕರೆದು

ಕೊಂಡು ಹೋಗಲು ಮಾರ್ಗಭೂತನಾದ ಎಂದು ಆಧ್ಯಾತ್ಮಿಕವಾದ ಅರ್ಥ ಎರಡು ಅರ್ಥಗಳಲ್ಲೂ ಸೂರ್ಯನಿಗೆ ವಿಶೇಷಣವಾಗಿದೆ. ಮೊದಲನೆಯ ಅರ್ಥವನ್ನು ತೆಗೆದುಕೊಂಡರೆ ಸೂರ್ಯನ ಶಾಶ್ವತವಾದ ಸಂಚಾರದ ವರ್ಣನೆಯು ತೋರುತ್ತದೆ

**ಹಿರಣ್ಯಯೇನ ಸವಿತಾ ರಥೇನಾ ದೇವೋ ಯಾತಿ ಭುವನಾನಿ ಪಶ್ಯನ್ ।**
(ಋ. ಸಂ. ೧-೩೫-೨)

**ಯಾತಿ ದೇವಃ ಪ್ರವತಾ ಯಾತ್ಯುದ್ವತಾ ಯಾತಿ ಶುಭ್ರಾಭ್ಯಾಂ ಯಜತೋ ಹರಿಭ್ಯಾಂ ।**
**ಆ ದೇವೋ ಯಾತಿ ಸವಿತಾ ಪರಾವತೋಽಪ ವಿಶ್ವಾ ದುರಿತಾ ಬಾಧಮಾನಃ ॥**
(ಋ. ಸಂ. ೧-೩೫-೩)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿತವಾಗಿರುವ ಸೂರ್ಯನ ಶುಭ್ರವಾದುದೂ ಶಾಶ್ವತವಾದುದೂ ಆದ ಸಂಚಾರದ ಸ್ವರೂಪವನ್ನು ಇಲ್ಲಿಯೂ ತಿಳಿಸಿದೆ. ಸ್ಕಂದಸ್ವಾಮಿಗಳೂ **ಪಂಥಾ ಇತಿ ಪತತ್ರೇರ್ಗತ್ಯರ್ಥಸ್ಯ ಗಂತೃವಚನಃ ನ ಮಾರ್ಗಶಬ್ದಪರ್ಯಾಯಃ । ಅಸೌ ಯಃ ಉದಯಾಸ್ತಮಯಲಕ್ಷಿತೇನ ಮಾರ್ಗೇಣ ಗಂತಾ ತದ್ವಾನ್ವಾ ಆದಿತ್ಯಃ ।** ಎಂದು ನಿತ್ಯಸಂಚಾರವುಳ್ಳ ಸೂರ್ಯನು ಎಂದು ಮೊದಲು ಹೇಳಿ ಅನಂತರ **ಅಥವಾ ಪಂಥಾ ಇತಿ ಪಥಿಶಬ್ದೋ ಮಾರ್ಗವಚನ ಏವ ।** ಪಂಥಾಃ ಎಂದರೆ ಮಾರ್ಗವೆಂದೇ ಅರ್ಥವಾಗಬಹುದು ಎಂದು ಅದಕ್ಕನುಗುಣವಾಗಿ ಮುಂದಿನ ಅನ್ವಯವನ್ನೂ ಮಾಡಿದ್ದಾರೆ.

ಸಾಯಣರು ಹೇಳಿರುವ ಎರಡನೆಯ ಅರ್ಥದ ಪ್ರಕಾರ ಸುಕೃತಿಗಳನ್ನು ಬ್ರಹ್ಮಲೋಕಕ್ಕೆ ಒಯ್ಯುವ ಮಾರ್ಗಭೂತನಾದ ಸೂರ್ಯನೆಂದರ್ಥ. **ದೇವಯಾನವೆಂದು** ಉಪನಿಷತ್ತುಗಳಲ್ಲಿ ವರ್ಣಿತವಾಗಿರುವಂತೆ ಇಲ್ಲಿಯೂ ಆ **ದೇವಯಾನವೆಂದು** ತಾತ್ಪರ್ಯ. ಉಪನಿಷತ್ತುಗಳಲ್ಲಿ **ದೇವಯಾನ, ಪಿತೃಯಾನ** ಎಂಬ ಪದಗಳಿಗೆ ಪಾರಿಭಾಷಿಕವಾದ ಅರ್ಥವಿದೆ. ಆದರೆ ಋಕ್ಸಂಹಿತೆಯಲ್ಲಿ **ದೇವಯಾನವೆಂಬ** ಪದಕ್ಕೆ ದೇವತೆಗಳು ಸಂಚರಿಸತಕ್ಕ ಮಾರ್ಗವೆಂದು ಸಾಧಾರಣವಾದ ಅರ್ಥವಾಗುತ್ತದೆ- ಕೆಲವೆಡೆಗಳಲ್ಲಿ ಮಾತ್ರ ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ ಭಾವವೂ ಇದೆ.

**ಪರಂ ಮೃತ್ಯೋ ಅನು ಪರೇಹಿ ಪಂಥಾಂ ಯಸ್ತೇ ಸ್ವ ಇತರೋ ದೇವಯಾನಾತ್ ।**
(ಋ. ಸಂ. ೧೦-೧೮-೧)

ಇತ್ಯಾದಿ ಋಕ್ಕುಗಳಲ್ಲಿ **ದೇವಯಾನವು** ಮೃತ್ಯುರಹಿತವಾದ ಮಾರ್ಗವೆಂದು ಹೇಳಿದೆ. ಈ ಮಾರ್ಗದಲ್ಲಿ ಸವಿತೃವು ಸುಕೃತಿಗಳನ್ನು ಮರಣರಹಿತವಾದ ಪುಣ್ಯಲೋಕಕ್ಕೆ ಕರೆದುಕೊಂಡು ಹೋಗುವನು ಎಂದು ಋಕ್ಸಂಹಿತೆಯಲ್ಲಿಯೇ ಉಕ್ತವಾಗಿರುವುದರಿಂದ ಈ ಅರ್ಥವೂ ಅನುರೂಪವಾಗಿದೆ.

**ಯೇ ತೇ ಪಂಥಾಃ ಸವಿತಃ ಪೂರ್ವ್ಯಾಸೋಽರೇಣವಃ ಸುಕೃತಾ ಅಂತರಿಕ್ಷೇ ।**
**ತೇಭಿರ್ನೋ ಅದ್ಯ ಪಥಿಭಿಃ ಸುಗೇಭೀ ರಕ್ಷಾ ಚ ನೋ ಅಧಿ ಚ ಬ್ರೂಹಿ ದೇವ ।**
(ಋ. ಸಂ. ೧-೩೫-೧೧)

ಯತ್ರಾಸತೇ ಸುಕೃತೋ ಯತ್ರ ತೇ ಯಯುಸ್ತತ್ರ ತ್ವಾ ದೇವಃ ಸವಿತಾ ದಧಾತು ।
(ಋ. ಸಂ. ೧೦-೧೭-೪)

ಇತ್ಯಾದಿ ಋಕ್ಕುಗಳಲ್ಲಿ ಸವಿತೃವು ಸತ್ಪಥದಲ್ಲಿ ಸುಕೃತಿಗಳನ್ನು ಕರೆದುಕೊಂಡುಹೋಗುವ ದೇವನಾದುದರಿಂದ ಯಜ್ಞಕರ್ತರಾದ ಯಜಮಾನರನ್ನೆಲ್ಲಾ ಅದೇ ಶುದ್ಧವಾದುದೂ, ರಜೋರಹಿತವಾದುದೂ, ಮೃತ್ಯುರಹಿತವಾದುದೂ ಆದ ಮಾರ್ಗದಲ್ಲಿ ಕರೆದುಕೊಂಡು ಹೋಗಬೇಕೆಂದು ಪ್ರಾರ್ಥಿತನಾಗಿದ್ದಾನೆ. ಈ ಮಾರ್ಗವನ್ನೇ ಉಪನಿಷತ್ತುಗಳಲ್ಲಿ ಅರ್ಚಿರಾದಿ ಮಾರ್ಗವೆಂದು ಹೇಳಿದೆ. ಮರಣಾನಂತರ ಈ ಮಾರ್ಗದಲ್ಲಿ ಬ್ರಹ್ಮಲೋಕವನ್ನು ಸೇರಿದ ಸುಕೃತಿಗಳಿಗೆ ಪುನರಾವರ್ತಿಯಿಲ್ಲವೆಂದು ಈ ಮಾರ್ಗವನ್ನು ವರ್ಣಿಸಿದೆ.

ತತ್ಪುರುಷೋಽಮಾನವಃ ಸ ಏನಾನ್ಬ್ರಹ್ಮ ಗಮಯತ್ಯೇಷ ದೇವಪಥೋ ಬ್ರಹ್ಮಪಥ ಏತೇನ ಪ್ರತಿಪದ್ಯಮಾನಾ ಇಮಂ ಮಾನವಮಾವರ್ತಂ ನಾವರ್ತಂತೇ ನಾವರ್ತಂತೇ ।
(ಛಾ. ಉ. ೪-೧೫-೫)

ಇದೇ ಅಭಿಪ್ರಾಯವನ್ನು ಮುಂಡಕೋಪನಿಷತ್ತಿನಲ್ಲಿಯೂ ಸಹ,

ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾಂತಿ ಯತ್ರಾಮೃತಃ ಸ ಪುರುಷೋಹ್ಯವ್ಯಯಾತ್ಮಾ ।
(ಮು. ಉ. ೨-೧೧)

ಎಂಬ ಸೂರ್ಯದ್ವಾರವನ್ನು ವರ್ಣಿಸುವ ವಾಕ್ಯಗಳಲ್ಲಿ ಉಕ್ತವಾಗಿರುವುದು. ಆದುದರಿಂದ ಉಪನಿಷತ್ತುಗಳಲ್ಲಿ ದೇವಯಾನವೆಂದು ಪ್ರಸಿದ್ಧವಾಗಿರುವ ಸೂರ್ಯಪಥಕ್ಕೆ ಇಲ್ಲಿ ಪಂಥಾಃ ಎಂಬರ್ಥವೆಂದು ಸಾಯಣರು ಅರ್ಥಮಾಡಿದ್ದಾರೆ. ಈ ಮಾರ್ಗವು ಸಕಲರಿಗೂ ಶ್ರೇಯಸ್ಸಾಧಕವಾದುದರಿಂದ ಇದು ಪ್ರವಾಚ್ಯವಾಗಿದೆ.

ಸಃ ನ ಅತಿಕ್ರಮೇ—ದೇವತೆಗಳೂ ಆ ಸೂರ್ಯದೇವನನ್ನು ಅನಾದರಣೆಯಿಂದ ಕಾಣಲು ಸಾಧ್ಯವಿಲ್ಲವೆಂದು ಅರ್ಥ. ಯಾಗಾದಿಗಳಿಗೆ ಅತ್ಯವಶ್ಯವಾದ ಸಾಧನನಾಗಿರುವುದರಿಂದಲೂ,

ಯುಷ್ಮಜ್ಜೀವನಸ್ಯ ತದಾಯತ್ತತ್ವಾತ್ । ಸತಿ ಹಿ ಸೂರ್ಯೇ ವಸಂತಾದಯಃ ಕಾಲಾ ನಿಷ್ಪದ್ಯಂತೇ। ಕಾಲೇಷು ಚ ಯಾಗಾಃ ಕ್ರಿಯಂತೇ ಯಾಗೇಷು ಚ ಸತ್ಸು ಭವತಾಂ ಜೀವನಂ । ಅತೋ ಯುಷ್ಮಾಭಿರಪ್ಯಸೌ ನಾತಿಕ್ರಮಿತವ್ಯಃ ।

ಆದುದರಿಂದ ದೇವತೆಗಳಿಗೆಲ್ಲಾ ಆಧಾರಭೂತವಾಗಿರುವುದರಿಂದಲೂ ಸಹ ಸೂರ್ಯನನ್ನು ದೇವಮಾನವರಾದಿಯಾಗಿ ಸಕಲರೂ ಆರಾಧಿಸಬೇಕೆಂದು ತಾತ್ಪರ್ಯ.

ಬಟ್ ಸೂರ್ಯ ಶ್ರವಸಾ ಮಹಾँ ಅಸಿ ಸತ್ರಾ ದೇವ ಮಹಾँ ಅಸಿ ।
ಮಹ್ನಾ ದೇವಾನಾಮಸುರ್ಯಃ ಪುರೋಹಿತೋ ವಿಭು ಜ್ಯೋತಿರದಾಭ್ಯಂ ॥
(ಋ. ಸಂ. ೮-೧೦೧-೧೨)

ದೇವೇಭ್ಯೋ ಹಿ ಪ್ರಥಮಂ ಯಜ್ಞಿಯೇಭ್ಯೋಽಮೃತತ್ವಂ ಸುವಸಿ ಭಾಗಮುತ್ತಮಂ ।
ಆದಿದ್ದಾಮಾನಂ ಸವಿತರ್ವ್ಯೂರ್ಣುಷೇಽನೂಚೀನಾ ಜೀವಿತಾ ಮಾನುಷೇಭ್ಯಃ ॥
(ಋ. ಸಂ. ೪-೫೪-೨)

ಇತ್ಯಾದಿ ಋಕ್ಕುಗಳಲ್ಲಿ ದೇವಮಾನವಾದಿ ಸಕಲರಿಗೂ ಆತ್ಮಾವಶ್ಯವಾದ ಜೀವಾತುವೆಂದೂ ಅಮೃತದಾಯಕನೆಂದೂ ಸೂರ್ಯನನ್ನು ವರ್ಣಿಸಿರುವುದರಿಂದ ಅವನನ್ನು ಎಲ್ಲರೂ ಪೂಜಿಸಬೇಕೆಂದಭಿಪ್ರಾಯವು.

**ಮರ್ತಾಸಃ ತಂ ನ ಪಶ್ಯಥ**—ಇದು ನಿಂದಾವಾಕ್ಯವೆಂದು ಸಾಯಣರು ಹೇಳಿದ್ದಾರೆ. ಹೇಗೆಂದರೆ. **ಏತಚ್ಚ ಕೂಪೇ ಪಾತಯಿತ್ವಾ ನಿರ್ಗತೌ ಏಕದ್ವಿತೌ ಪ್ರತಿನಿಂದನಂ । ಅಹಮೇವ ಮಂತ್ರದ್ರಷ್ಟಾ ತಂ ಸೂರ್ಯಂ ಜಾನಾಮಿ ಪಾಪಕೃತೌ ಯುವಾಂ ನ ಜಾನೀಥಃ ಇತಿ ।** ಬಾವಿಯಲ್ಲಿ ತಳ್ಳಿಹೋದ **ಏಕತ** ಮತ್ತು **ದ್ವಿತ** ಇವರಿಬ್ಬರಿಗೂ ಸೂರ್ಯದೇವನ ಮಹಿಮೆಯು ಗೊತ್ತಿಲ್ಲ. ಅವರು ಪಾಪಿಷ್ಠರು. ಮಂತ್ರವಿಜ್ಞಾದ ನನಗೆ ಮಾತ್ರ ಸೂರ್ಯನ ಮಹಿಮೆಯು ತಿಳಿದಿದೆಯೆಂದು ತ್ರಿತನು ಹೇಳಿರುವುದಾಗಿ ಸಾಯಣರು ವಿವರಿಸಿದ್ದಾರೆ. ಸ್ಕಂದಸ್ವಾಮಿಗಳು **ಹೇ ಮನುಷ್ಯಾಃ ನ ಜಾನೀಥ । ಅಹಂ ಸಮ್ಯಜ್ಞಜಾನಾಮೀತ್ಯರ್ಥಃ ।** ಮಾನವರಿಗೆ ಈ ಸೂರ್ಯನ ಮಹಿಮೆಯು ಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲದಿದ್ದರಿಂದ ಮನುಷ್ಯನೇ ಆದ ನನಗೂ ಸಹ ಇವನ ಮಹಿಮೆಯು ಪೂರ್ಣವಾಗಿ ತಿಳಿಯುವುದಿಲ್ಲವೆಂದರ್ಥವೆಂದು ವಿವರಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಪನ್ಥಾಃ**—ಪತ್ಲೃ ಗತೌ ಧಾತು. **ಪತೇಸ್ಥಚ**—(ಉ. ಸೂ. ೪-೪೫೨) ಎಂಬುದರಿಂದ ಇನಿ ಪ್ರತ್ಯಯ. ಧಾತುವಿನ ತಕಾರಕ್ಕೆ ಥಕಾರಾದೇಶ. ಪಥಿನ್ ಶಬ್ದವಾಗುತ್ತದೆ. ಇದಕ್ಕೆ ಸು ಪರವಾದಾಗ **ಪಥಿಮಥ್ಯೃಭುಕ್ಷಾ-ಮಾತ್**—(ಪಾ. ಸೂ. ೭-೧-೮೫) ಎಂಬುದರಿಂದ ಆತ್ವ. **ಇತೋತ್ಸರ್ವನಾಮಸ್ಥಾನೇ**—(ಪಾ. ಸೂ. ೭-೧-೮೬) ಎಂಬುದರಿಂದ ಇಕಾರಕ್ಕೆ ಅಕಾರಾದೇಶ. **ಥೋನ್ಥಃ**—(ಪಾ. ಸೂ. ೭-೧-೮೭) ಎಂಬುದರಿಂದ ಥಕಾರಕ್ಕೆ ನ್ಥ ಎಂಬಾದೇಶ. ಪ್ರತ್ಯಯ ಸಕಾರಕ್ಕೆ ರುತ್ವ ವಿಸರ್ಗ. ಪನ್ಥಾಃ ಎಂದು ರೂಪವಾಗುತ್ತದೆ. **ಪಥಿಮಥೋಃ ಸರ್ವನಾಮಸ್ಥಾನೇ** (ಪಾ. ಸೂ. ೬-೧-೧೯೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಆದಿತ್ಯಃ**—ಅದಿತೇಃ ಅಪತ್ಯಂ ಪುಮಾನ್ ಆದಿತ್ಯಃ. **ದಿತ್ಯದಿತ್ಯಾದಿ**—(ಪಾ. ಸೂ. ೪-೧-೮೫) ಎಂಬುದರಿಂದ ಣ್ಯ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ**—(ಪಾ. ಸೂ. ೭-೨-೧೧೭) ಸೂತ್ರದಿಂದ ಆದಿವೃದ್ಧಿ. **ಯಸ್ಯೇತಿ ಚ** (ಪಾ. ಸೂ. ೬-೪-೧೪೮) ಎಂಬುದರಿಂದ ಇಕಾರಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ದಿವಿ—ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪ್ರವಾಚ್ಯಮ್**—ವಚ ಪರಿಭಾಷಣೇ. ಧಾತು. **ಹೇತುಮತಿಚ**—(ಪಾ. ಸೂ. ೩-೧-೨೬) ಎಂಬುದರಿಂದ ಣಿಚ್ ಪ್ರತ್ಯಯ. **ಅತ ಉಪಧಾಯಾಃ**—(ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾ ಅಕಾರಕ್ಕೆ ವೃದ್ಧಿ. ವಾಚಿ ಎಂಬ ಣ್ಯಂತದ ಮೇಲೆ **ಅಚೋ ಯತ್**—(ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ. **ಣೇರನಿಟಿ**—(ಪಾ. ಸೂ. ೬-೪-೫೧) ಎಂಬುದರಿಂದ ತನ್ನಿಮಿತ್ತವಾಗಿ ಣಿಚಿಗೆ ಲೋಪ. **ಯತೋಽನಾವಃ**—(ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ಗತಿಕಾರಕೋಪಪದಾತ್ಕೃತ್**—(ಪಾ. ಸೂ. ೬-೧-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ದೇವಾಃ**—ಸಂಬೋಧನಾಬಹುವಚನಾಂತರೂಪ. **ಆಮಂತ್ರಿತಸ್ಯ ಚ**—(ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅತಿಕ್ರಮೇ**—ಕ್ರಮು ಪಾದವಿಕ್ಷೇಪೇ. ಧಾತು. **ಕೃತ್ಯಾರ್ಥೇ ತವೈಕೇನ್**-(ಪಾ. ಸೂ. ೩-೪-೧೪) ಎಂಬುದರಿಂದ ಕೇನ್ ಪ್ರತ್ಯಯ. ನಿತ್ತ್ವಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಮರ್ತಾಸಃ**—ಮರ್ತ ಶಬ್ದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್**—(ಪಾ. ಸೂ. ೭-೧-೫೦) ಎಂಬುದರಿಂದ ಅಸುಕ್ ಆಗಮ. **ಆಮಂತ್ರಿತಸ್ಯ ಚ**—(ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಪಶ್ಯಥ**—ದೃಶಿರ್ ಪ್ರೇಕ್ಷಣೇ ಧಾತು. ಲಟ್ ಮಧ್ಯಮಪುರುಷ ಏಕವಚನದಲ್ಲಿ ಥಪ್ರತ್ಯಯ. ಶಪ್ ವಿಕರಣಪರವಾದಾಗ **ಪಾಘ್ರಾಧ್ಮಾ**—(ಪಾ. ಸೂ. ೭-೩-೭೮) ಎಂಬುದರಿಂದ ಧಾತುವಿಗೆ ಪಶ್ಯಾದೇಶ. ನಿಘಾತಸ್ವರ ಬರುತ್ತದೆ. ॥ ೧೬ ॥



ಸಂಹಿತಾಪಾಠಃ

ತ್ರಿ॒ತಃ ಕೂಪೇಽವ॑ಹಿತೋ ದೇ॒ವಾನ್ಹ॑ವತ ಊ॒ತಯೇ॑।
ತಚ್ಛು॑ಶ್ರಾವ॒ ಬೃಹ॒ಸ್ಪತಿಃ॑ ಕೃ॒ಣ್ವನ್ನ॑ಂಹೂರ॒ಣಾದು॒ರು ವಿ॒ತ್ತಂ ಮೇ॑
ಅ॒ಸ್ಯ ರೋ॑ದಸೀ ॥ ೧೭ ॥

ಪದಪಾಠಃ

ತ್ರಿ॒ತಃ । ಕೂಪೇ॑ । ಅವ॑ಽಹಿತಃ । ದೇ॒ವಾನ್ । ಹ॒ವ॒ತೇ॒ । ಊ॒ತಯೇ॑ ।
ತತ್ । ಶು॒ಶ್ರಾ॒ವ॒ । ಬೃ॒ಹ॒ಸ್ಪತಿಃ॑ । ಕೃ॒ಣ್ವನ್ । ಅ॒ಂಹೂ॒ರ॒ಣಾತ್ । ಉ॒ರು । ವಿ॒ತ್ತಂ ।
ಮೇ॒ । ಅ॒ಸ್ಯ । ರೋ॒ದ॒ಸೀ॒ ಇತಿ॑ ॥ ೧೭ ॥

### ಸಾಯಣಭಾಷ್ಯ

ಕೂಪೇಽವಹಿತಃ ಪಾತಿತಸ್ತ್ರಿತ ಇತಿತತ್ಸಂಜ್ಞ ಋಷಿರೂತಯೇ ರಕ್ಷಣಾಯ ದೇವಾನ್ಹವತೇ । ಸ್ತುತಿಭಿರಾಕಾರಯತಿ । ಯದೇತತ್ತ್ರಿತಸ್ಯಾಹ್ವಾನಂ ಬೃಹಸ್ಪತಿರ್ಬೃಹತಾಂ ಮಹತಾಂ ದೇವಾನಾಂ ರಕ್ಷಕ ಇತಿತತ್ಸಂಜ್ಞೋ ದೇವಸ್ತದಾಹ್ವಾನಂ ಶುಶ್ರಾವ । ಶ್ರುತವಾನ್ । ಕಿಂ ಕುರ್ವನ್ । ಅಂಹೂರಣಾದಂಹಸಃ ಪಾಪರೂಪಾದಸ್ಮಾತ್ಕೂಪಪಾತಾದುನ್ನೀಯೋರು ವಿಸ್ತೀರ್ಣಂ ಶೋಭನಂ ಕೃಣ್ವನ್ ಕುರ್ವನ್ ॥ ಹವತೇ । ಹ್ವಯತೇರ್ಲಟಿ ಬಹುಲಂ ಛಂದಸೀತಿ ಸಂಪ್ರಸಾರಣಂ । ಶಬ್ಗುಣಾವಾದೇಶಾಃ । ಊತಯೇ । ಊತಿಯೂತೀತ್ಯಾದಿನಾ ಕ್ತಿನ ಉದಾತ್ತತ್ವಂ । ಬೃಹಸ್ಪತಿಃ । ತದ್ಬೃಹತೋಃ ಕರಪತ್ಯೋಃ । ಪಾ. ೬-೧-೧೫೭ । ಇತಿ ಪಾರಸ್ಕರಾದಿಷು ಪಾಠಾತ್ ಸುಟ್ತಲೋಪೌ । ಉಭೇ ವನಸ್ಪತ್ಯಾದಿಷ್ವಿತಿ ಪೂರ್ವೋತ್ತರಪದಯೋರ್ಯುಗಪತ್ಪ್ರಕೃತಿಸ್ವರತ್ವಂ । ಅಂಹೂರಣಾತ್ । ಅಹಿ ಗತೌ । ಇದಿತ್ತ್ವಾನ್ನುಮ್ । ಖರ್ಜಿಪಿಂಜ್ಯಾದಿಭ್ಯ ಊರೋಲಚೌ । ಉ. ೪-೯೦ । ಇತಿ ಭಾವ ಊರಪ್ರತ್ಯಯಃ । ದುಃಖಪ್ರಾಪ್ತಿಹೇತುಭಾವಾ ಗತಿರಸ್ಯಾಸ್ತೀತಿ ಪಾಮಾದಿಲಕ್ಷಣೋ ಮತ್ವರ್ಥೀಯೋ ನಃ । ಪಾ. ೫-೨-೧೦೦ । ಅಜ್ಪೂರ್ವಾದ್ಧ್ರಂತೇರ್ವಾ ರೂಪಮುನ್ನೇಯಂ ॥

### ಪ್ರತಿಪದಾರ್ಥ

**ಕೂಪೇ**—ಬಾವಿಯಲ್ಲಿ । **ಅವಹಿತಃ**—ತಳ್ಳಲ್ಪಟ್ಟ । **ತ್ರಿತಃ**—ತ್ರಿತನೆಂಬ ಋಷಿಯು । **ಊತಯೇ**—ರಕ್ಷಣಾರ್ಥವಾಗಿ । **ದೇವಾನ್**—ದೇವತೆಗಳನ್ನು । **ಹವತೇ**—ಮೊರೆಯಿಟ್ಟು ಕರೆಯುತ್ತಾನೆ. । **ಬೃಹಸ್ಪತಿಃ**—ಬೃಹಸ್ಪತಿಯು । **ಅಂಹೂರಣಾತ್**—ಕೂಪಪತನರೂಪವಾದ ಈ ಪಾಪದಿಂದ (ಮೇಲಕ್ಕೆತ್ತಿ) । **ಉರು**—ಅಧಿಕವಾಗಿ ಒಳ್ಳೆಯದನ್ನು । **ಕೃಣ್ವನ್**—ಮಾಡುವವನಾಗಿ । **ತತ್**—ಆ ಮೊರೆಯನ್ನು । **ಶುಶ್ರಾವ**—ಕೇಳಿದನು. । **ರೋದಸೀ**—ಎಲೈ ದ್ಯಾವಾಪೃಥಿವಿಗಳೇ । **ಮೇ**—ನನ್ನ । **ಅಸ್ಯ**—ಈ ರೋದನವನ್ನು (ದುಃಖವನ್ನು) । **ವಿತ್ತಂ**—ಅರಿಯಿರಿ. ।

### ಭಾವಾರ್ಥ

ಬಾವಿಯಲ್ಲಿ ತಳ್ಳಲ್ಪಟ್ಟ ತ್ರಿತನೆಂಬ ಋಷಿಯು ರಕ್ಷಣಾರ್ಥವಾಗಿ ದೇವತೆಗಳನ್ನು ಮೊರೆಯಿಟ್ಟು ಕರೆಯುತ್ತಾನೆ. ಬೃಹಸ್ಪತಿಯು ಕೂಪಪತನರೂಪವಾದ ಈ ಪಾಪದಿಂದ ಮೇಲಕ್ಕೆತ್ತಿ ಅಧಿಕವಾಗಿ ಒಳ್ಳೆಯದನ್ನು ಮಾಡುವವನಾಗಿ ಆ ಮೊರೆಯನ್ನು ಕೇಳಿದನು. ಎಲೈ ದ್ಯಾವಾಪೃಥಿವಿಗಳೇ, ನನ್ನ ಈ ರೋದನವನ್ನು ಕೇಳಿ ನನ್ನನ್ನು ಮೇಲಕ್ಕೆತ್ತಿರಿ.

### English Translation

Trita, fallen into the well, invokes the Gods for succour; Brihaspati, who liberates many from sin, heard (the supplication). Heaven and earth, be conscious of this (my affliction).

॥ ವಿಶೇಷವಿಷಯಗಳು ॥

**ಅಂಹೂರಣಾತ್**—**ಅಂಹಸಃ ಪಾಪರೂಪಾದಸ್ಮಾತ್ ಕೂಪಪಾತಾತ್** । ಈ ಕೂಪಪತನರೂಪವಾದ ಪಾಪದಿಂದ **ಅಂಹುರ**ಶಬ್ದಕ್ಕೆ ನಿರ್ವಚನವನ್ನು ತೋರಿಸುತ್ತಾ ನಿರುಕ್ತಕಾರರು **ಅಂಹುರೋಽಂಹಸ್ವಾನಂಹೂರಣಮಿತ್ಯಪ್ಯಸ್ಯ ಭವತಿ** । (ನಿ. ೬-೨೭) ದುಃಖಪೂರಿತನಾದುದರಿಂದ **ಅಂಹುರ** ಎಂದಾಗಿದೆಯೆಂದು ತೋರಿಸಿದ್ದಾರೆ. ಅದರಂತೆಯೇ ಇಲ್ಲಿಯೂ **ಅಂಹೂರಣ**ವೆಂದರೆ ದುಃಖಪೂರಿತನೆಂದರ್ಥ. ಇದನ್ನು ಸಮರ್ಥಿಸಲು ನಿರುಕ್ತಕಾರರು ಈ ಋಕ್ಕನ್ನೇ ಉದಹರಿಸಿದ್ದಾರೆ. ಅಥವಾ **ದುಃಖ**ವನ್ನೇ ಪಾಪಫಲವಾಗಿಯಾಗಲೀ, ಪಾಪರೂಪದಲ್ಲಿಯಾಗಲಿ ಅರ್ಥಮಾಡಬಹುದು. ಈ ಸಂದರ್ಭದಲ್ಲಿ **ತ್ರಿತನ ಪಾಪವೇನು**? ಎಂಬ ಸಂಶಯದಿಂದ ಸ್ಕಂದಸ್ವಾಮಿಗಳು, **ಯದಿ ರಕ್ಷಣಮತ್ರ ವಿವಕ್ಷಿತಂ ತತಃ ಪಾಪಕರ್ಮಕಾರಿತ್ವಾದ್ವೃಕಃ । ಅಥೋತ್ತ್ರರಣಂ ತತ ಉದ್ವೇಗಕರೈಸ್ತೃಣಾದಿಭಿರುಪೇತತ್ವಾತ್ಕೂಪಃ । ಪಾಪಕರ್ಮಕಾರಿಣೋ ವೃಕಾತ್ । ಉದ್ವೇಗಕರತೃಣಾದ್ಯುಪೇತಾತ್ ವಾ ಕೂಪಾದಿತ್ಯರ್ಥಃ** । ವೃಕ ಪಾಪಕರ್ಮಕಾರಿಯೆಂದೂ, ಕೂಪವು ಉದ್ವೇಗಕರವೆಂದೂ ಇವೆರಡರಿಂದಲೂ ರಕ್ಷಣೆಯನ್ನು ಪ್ರಾರ್ಥಿಸಿದೆಯೆಂದು ವಿವರಿಸಿದ್ದಾರೆ. ದುಃಖಹೇತುವಾದ ಈ ಪಾಪಕೃತ್ಯದಿಂದ ರಕ್ಷಿಸು ಎಂದು ತ್ರಿತನ ಪ್ರಾರ್ಥನೆ.

**ಅಂಹುರ**ಶಬ್ದಕ್ಕೆ ದುಃಖಹೇತುವಾದ ಪಾಪವೆಂದು ತೋರಿಸಲು ನಿರುಕ್ತಕಾರರು ಋಕ್ಸಂಹಿತೆಯ ಬೇರೊಂದು ವಾಕ್ಯವನ್ನು ಉದಹರಿಸಿದ್ದಾರೆ.

**ಸಪ್ತ ಮರ್ಯಾದಾಃ ಕವಯಸ್ತತಕ್ಷುಸ್ತಾಸಾಮೇಕಾಮಿದಭ್ಯಂಹುರೋ ಗಾತ್** ।
(ಋ. ಸಂ. ೧೦-೫-೬)

ಅದು ಏಳುವಿಧವಾಗಿದೆ. ಸ್ತೇಯಂ, ತಲ್ಪಾರೋಹಣಂ, ಬ್ರಹ್ಮಹತ್ಯಾಂ, ಭ್ರೂಣಹತ್ಯಾಂ ಸುರಾಪಾನಂ, ದುಷ್ಕೃತಸ್ಯ ಕರ್ಮಣಃ ಪುನಃ ಪುನಃ ಸೇವಾಂ, ಪಾತಕೇಽನೃತೋದ್ಯಂ ಇತಿ—ಬ್ರಹ್ಮಹತ್ಯೆಯು ಆ ಪಾತಕಗಳಲ್ಲೊಂದೆಂದು ಪ್ರಕೃತವಾದ ಋಕ್ಕಿನಿಂದ ತಿಳಿಯುತ್ತದೆ.

**ಬೃಹಸ್ಪತಿಃ ಶುಶ್ರಾವ**—ತ್ರಿತನ ಪ್ರಾರ್ಥನೆಯು ಇತರದೇವತೆಗಳಿಗೆ ಕೇಳಿಸಿದರೂ ಸಹ ಅವರಿಗೆ ಅದು ಯಾರ ಪ್ರಾರ್ಥನೆಯೆಂದು ತಿಳಿಯದೇ ಶ್ರಮಪಟ್ಟರೆಂದೂ ಆಗ ಬೃಹಸ್ಪತಿಯು ಅವರಿಗೆ ತ್ರಿತನ ಮೊರೆಯನ್ನು ತಿಳಿಸಿದನೆಂದೂ ಕಥೆಯಿದೆ.

ಸಃ **ಯಾಗಾರ್ಥಃ ದೇವಾನ್ ಆಜುಹಾವ । ತಾ ಆಹ್ವಾನಕಾರಣಮನವಬುಧ್ಯಮಾನಾ ಆವಿಗ್ನಾ ಬಭೂವುಃ । ಅಥ ತದಾಹ್ವಾನಂ ಬೃಹಸ್ಪತಿಃ ಶುಶ್ರಾವ । ಸ ದೇವಾನುವಾಚ । ತ್ರಿತಸ್ಯ ವರ್ತತೇ ಯಜ್ಞಸ್ತತ್ರ ಗಚ್ಛಾಮಃ । ಅಥ ತತ್ರ ಸರ್ವೇ ದೇವಾ ಜಗ್ಮುಃ** । ಬಾವಿಯಲ್ಲಿ ಬಿದ್ದ ತ್ರಿತನು ಯಾಗಾರ್ಥವಾಗಿ ದೇವತೆಗಳನ್ನು ಕರೆದಾಗ ಅವರು ಇವನ ಆಹ್ವಾನಕಾರಣವನ್ನು ತಿಳಿಯದೇ ಶ್ರಮಪಟ್ಟರು. ಆಗ ಬೃಹಸ್ಪತಿಯು ಆ ಕಾರಣವನ್ನು ವಿವರಿಸಿ ಹೇಳಿದಾಗ ಅವರೆಲ್ಲರೂ ಅಲ್ಲಿಗೆ ಬಂದರು ಎಂದು ಸ್ಕಂದಸ್ವಾಮಿಗಳು ಪೂರ್ವಕಥೆಯನ್ನು ತಮ್ಮ ಭಾಷ್ಯದಲ್ಲಿ ಉದಹರಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಹವತೇ**— ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಲಟ್ ಪ್ರಥಮಪುರುಷಏಕವಚನದಲ್ಲಿ ತಪ್ರತ್ಯಯ. **ಕರ್ತರಿ ಶಪ್**—(ಪಾ. ಸೂ. ೩-೧-೬೮) ಎಂಬುದರಿಂದ ಶಪ್‌ವಿಕರಣ. **ಬಹುಲಂ ಛಂದಸಿ**— ಎಂಬುದರಿಂದ ಸಂಪ್ರಸಾರಣ. **ಸಂಪ್ರಸಾರಣಾಚ್ಚ**—ಎಂಬುದರಿಂದ ಪೂರ್ವರೂಪ. ಹು+ಅ+ತೇ ಎಂದಿರುವಾಗ ಶಪ್ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಅವಾದೇಶ. ಹವತೇ ಎಂದು ರೂಪವಾಗುತ್ತದೆ **ತಿಙ್ಙತಿಙಃ** — (ಪಾ. ಸೂ. ೮-೧-೨೮) ಎಂಬುದರಿಂದ ತಿಙಂತ ನಿಘಾತಸ್ವರ ಬರುತ್ತದೆ.

**ಊತಯೇ**--**ಸ್ತ್ರಿಯಾಂ ಕ್ತಿನ್**—(ಪಾ. ಸೂ. ೩-೩-೯೪) ಎಂಬುದರಿಂದ ಕ್ತಿನ್ ಬಂದಾಗ **ಊತಿಯೂತಿ**— (ಪಾ. ಸೂ. ೩-೩-೯೭) ಎಂಬುದರಿಂದ ಕ್ತಿನಿಗೆ ಉದಾತ್ತಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ.

**ಶುಶ್ರಾವ**— ಶ್ರು ಶ್ರವಣೇ. ಧಾತು. ಲಿಟ್ ಪ್ರಥಮಪುರುಷಏಕವಚನರೂಪ ತಿಙಂತನಿಘಾತಸ್ವರ ಬರುತ್ತದೆ.

ಬೃಹಸ್ಪತಿಃ—**ತದ್ಬೃಹತೋಃ ಕರಪತ್ಯೋಶ್ಚೋರದೇವತಯೋಃ**—(ಪಾ. ಸೂ. ೬-೧-೧೫೭ ಗ) ಎಂದು ಪಾರಸ್ಕರಾದಿಯಲ್ಲಿ (ಗಣ) ಪಾಠಮಾಡಿರುವುದರಿಂದ ಪತಿಶಬ್ದಪರವಾದಾಗ ಬೃಹಚ್ಛಬ್ದದ ತಕಾರಕ್ಕೆ ಲೋಪ. ಸುಡಾಗಮ. ಬೃಹಸ್ಪತಿಃ ಎಂದು ರೂಪವಾಗುತ್ತದೆ. **ಉಭೇ ವನಸ್ಪತ್ಯಾದಿಷು**—(ಪಾ. ಸೂ. ೬-೨-೧೪೦) ಎಂದು ಅಲ್ಲಿ ಪಾಠಮಾಡಿರುವುದರಿಂದ ಪೂರ್ವೋತ್ತರಪದಗಳಿಗೆ ಏಕಕಾಲದಲ್ಲಿ ಪ್ರಕೃತಿಸ್ವರ ಬರುತ್ತದೆ.

**ಕೃಣ್ವನ್**—ಕೃವಿ ಹಿಂಸಾಕರಣಯೋಶ್ಚ. ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. **ಧಿನ್ವಿಕೃಣ್ವ್ಯೋರ ಚ**—(ಪಾ. ಸೂ. ೩-೧-೮೦) ಎಂಬುದರಿಂದ ಅಕಾರ. ಅಂತಾದೇಶ. ಉವಿಕರಣ **ಅತೋ ಲೋಪಃ**— ಎಂಬುದರಿಂದ ಉನಿಮಿತ್ತವಾಗಿ ಅಲೋಪ. **ಇದಿತೋ ನುಮ್‌ಧಾತೋಃ**— ಎಂಬುದರಿಂದ ನುಮಾಗಮ. ಉಕಾರಕ್ಕೆ ಯಣಾದೇಶ. ಪ್ರಥಮಾ ಏಕವಚನದಲ್ಲಿ ಕೃಣ್ವನ್ ಎಂದು ರೂಪವಾಗುತ್ತದೆ

**ಅಂಹೂರಣಾತ್**—ಅಹಿ ಗತೌ ಧಾತು. **ಇದಿತೋ ನುಮ್‌ಧಾತೋಃ**—(ಪಾ. ೭-೧-೫೮)—ಎಂಬುದರಿಂದ ಧಾತುವಿಗೆ ನುಮಾಗಮ. **ಖರ್ಜಿಪಿಞ್ಜಾದಿಭ್ಯ ಊರೋಲಚೌ**—(ಉ ಸೂ ೪-೫೩೦) ಎಂಬುದರಿಂದ ಭಾವಾರ್ಥದಲ್ಲಿ ಊರ ಪ್ರತ್ಯಯ. ಅಂಹೂರ ಎಂದು ರೂಪವಾಗುತ್ತದೆ. ದುಃಖಪ್ರಾಪ್ತಿಗೆ ಕಾರಣಭೂತವಾದ ಗತಿ ಎಂದರ್ಥ. (ಇದು ಉಳ್ಳದ್ದು) ಅಂಹೂರಃ ಅಸ್ಯ ಅಸ್ತಿ ಎಂಬರ್ಥದಲ್ಲಿ **ಲೋಮಾದಿ, ಪಾಮಾದಿ ಪಿಚ್ಛಾದಿಭ್ಯಃ ಶನೇಲಚಃ**—(ಪಾ. ಸೂ. ೫-೨-೧೦೦) ಎಂಬುದರಿಂದ ಇದು ಪಾಮಾದಿಯಲ್ಲಿ ಸೇರಿರುವುದರಿಂದ (ಮತ್ವರ್ಥದಲ್ಲಿ) ನಪ್ರತ್ಯಯ. **ಅಟ್‌ಕುಪ್ವಾಙ್**—ಎಂಬುದರಿಂದ ಣತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪಂಚಮೀ ಏಕವಚನಾಂತರೂಪ. ಅಥವಾ ಅಙ್ ಪೂರ್ವಕವಾದ ಹನ್ ಧಾತುವಿಗೆ ಪ್ರತ್ಯಯ ಬಂದು ಸಿದ್ಧವಾಗಿದೆ ಎಂದು ಊಹಿಸಬೇಕು. ಪೃಷೋದರಾದಿಯೆಂದು ಸಿದ್ಧವಾಗುತ್ತದೆ. ॥ ೧೭ ॥

ಸಂಹಿತಾಪಾಠಃ

ಅರುಣೋ ಮಾ ಸಕೃದ್ವೃಕಃ ಪಥಾ ಯಂತಂ ದದರ್ಶ ಹಿ ।
ಉಜ್ಜಿಹೀತೇ ನಿಚಾಯ್ಯಾ ತಷ್ಟೇವ ಪೃಷ್ಟ್ಯಾಮಯೀ ವಿತ್ತಂ
ಮೇ ಅಸ್ಯ ರೋದಸೀ ॥ ೧೮ ॥

ಪದಪಾಠಃ

ಅರುಣಃ । ಮಾ । ಸಕೃತ್ । ವೃಕಃ । ಪಥಾ । ಯಂತಂ । ದದರ್ಶ । ಹಿ ।
ಉತ್ । ಜಿಹೀತೇ । ನಿಽಚಾಯ್ಯ । ತಷ್ಟಾಽಇವ । ಪೃಷ್ಟಿಽಆಮಯೀ ।
ವಿತ್ತಂ । ಮೇ । ಅಸ್ಯ । ರೋದಸೀ ಇತಿ ॥ ೧೮ ॥

ಸಾಯಣಭಾಷ್ಯಂ

ಅರುಣವರ್ಣೋ ಲೋಹಿತವರ್ಣೋ ವೃಕೋಽರಣ್ಯಶ್ವಾ ಸಕೃದೇಕವಾರಂ ಪಥಾ ಯಂತಂ ಮಾರ್ಗೇಣ ಗಚ್ಛಂತಂ ಮಾಂ ದದರ್ಶ ಹಿ । ದೃಷ್ಟವಾನ್ । ಹಿ ಪಾದಪೂರಣಃ । ನಿಚಾಯ್ಯ ದೃಷ್ಟ್ವಾ ಚ ಮಾಂ ಜಿಘೃಕ್ಷುಃ ಸನ್ ಉಜ್ಜಿಹೀತೇ । ಉದ್ಗಚ್ಛತಿ ಸ್ಮ । ತತ್ರ ದೃಷ್ಟಾಂತಃ । ತಷ್ಟೇವ ಪೃಷ್ಟ್ಯಾಮಯೀ । ಯಥಾ ತಕ್ಷಣಜನಿತಪೃಷ್ಠಕ್ಲೇಶಸ್ತಷ್ಟಾ ವರ್ಧಕಿಸ್ತದಪನೋದನಾಯೋರ್ಧ್ವಾಭಿಮುಖೋ ಭವತಿ ತದ್ವತ್ । ಹೇ ದ್ಯಾವಾಪೃಥಿವ್ಯೌ ಮದೀಯಮಿದಂ ದುಃಖಂ ವಿತ್ತಂ । ಜಾನೀತಂ । ಯದ್ವಾ । ವೃಕ ಇತಿ ವಿವೃತಜ್ಯೋತಿಷ್ಕಶ್ಚಂದ್ರಮಾ ಉಚ್ಯತೇ । ಅರುಣ ಆರೋಚಮಾನಃ ಕೃತ್ಸ್ನಸ್ಯ ಜಗತಃ ಪ್ರಕಾಶಕಃ ಮಾಸಕೃತ್ ಮಾಸಾರ್ಧಮಾಸರ್ತ್ವಯನಸಂವತ್ಸರಾದೀನ್ಕಾಲವಿಶೇಷಾನ್ಕುರ್ವನ್ । ತಿಥಿವಿಭಾಗಜ್ಞಾನಸ್ಯ ಚಂದ್ರಗತ್ಯಧೀನತ್ವಾತ್ । ಸ ಚಂದ್ರಮಾ ಆಕಾಶಮಾರ್ಗೇ ಯಂತಂ ಗಚ್ಛಂತಂ ನಕ್ಷತ್ರಗಣಂ ದದರ್ಶ । ಹಿರವಧಾರಣೇ । ನಕ್ಷತ್ರಗಣಮೇವ ದದರ್ಶ ನ ಕೂಪಪತಿತಂ ಮಾಮಿತ್ಯನಾದರೋ ದ್ಯೋತ್ಯತೇ । ಯದಿ ಮಾಂ ಪಶ್ಯೇತ್ ಉದ್ಧರೇತ್ಕೂಪಾತ್ । ನಿಚಾಯ್ಯ ನಕ್ಷತ್ರಗಣಂ ದೃಷ್ಟ್ವಾ ಚೋಜ್ಜಿಹೀತೇ । ಯೇನ ನಕ್ಷತ್ರೇಣ ಸಂಯುಜ್ಯತೇ ತೇನ ಸಹೋದ್ಗಚ್ಛತಿ । ನ ಮಾಮಭಿಗಚ್ಛತೀತ್ಯರ್ಥಃ । ಅನ್ಯತ್ಪೂರ್ವವತ್ । ಅತ್ರ ಮಾಸಕೃದಿತಿ ಯಾಸ್ಕ ಏಕಂ ಪದಂ ಮನ್ಯತೇ ಶಾಕಲ್ಯಸ್ತು ಪದದ್ವಯಂ । ತಸ್ಮಿನ್ಪಕ್ಷೇಽಯಮರ್ಥಃ । ದಕ್ಷಪ್ರಜಾಪತೇರ್ದುಹಿತೃಭೂತಾಃ ಸ್ವಭಾರ್ಯಾ ಅಶ್ವಿನ್ಯಾದ್ಯಾಸ್ತಾರಕಾಃ ಪುನಃ-

ಪುನಃಪುನರ್ದದರ್ಶ । ಮಾಂ ಸಕೃದೇವ ಪಶ್ಯತೀತಿ ಸಕೃದ್ದೃಷ್ಟ್ವಾ ಚೋಜ್ಜಿಹೀತೇ । ತಾರಾಭಿಃ ಸಹೋ-ರ್ಧ್ವಮೇವ ಗಚ್ಛತಿ । ನ ಮಾಂ ಕೂಪಾದುತ್ತಾರಯತಿ । ಅತ ಇದಮನುಚಿತಂ । ಹೇ ದ್ಯಾವಾಪೃಥಿವ್ಯೌ ಮದೀಯಮಿಮಂ ವೃತ್ತಾಂತಂ ಜಾನೀತಂ ॥ ಅತ್ರ ನಿರುಕ್ತಂ । ವೃಕಶ್ಚಂದ್ರಮಾ ಭವತಿ ವಿವೃತಜ್ಯೋ-ತಿಷ್ಕೋ ವಾ ವಿಕೃತಜ್ಯೋತಿಷ್ಕೋ ವಾ ವಿಕ್ರಾಂತಜ್ಯೋತಿಷ್ಕೋ ವಾ । ಅರುಣ ಆರೋಚನೋ ಮಾಸ-ಕೃನ್ಮಾಸಾನಾಂ ಚಾರ್ಧಮಾಸಾನಾಂ ಚ ಕರ್ತಾ ಭವತಿ ಚಂದ್ರಮಾ ವೃಕಃ ಪಥಾ ಯಂತಂ ದದರ್ಶ ನಕ್ಷತ್ರ-ಗಣಮಭಿಜಿಹೀತೇ ನಿಚಾಯ್ಯ ಯೇನ ಯೇನ ಯೋಕ್ಷ್ಯಮಾಣೋ ಭವತಿ ಚಂದ್ರಮಾಸ್ತಕ್ಷ್ಣುವನ್ನಿವ ಪೃಷ್ಠರೋಗೀ । ನಿ. ೫-೨೦ । ಇತಿ ॥ ಸಕೃತ್ । ಏಕಸ್ಯ ಸಕೃಚ್ಚ । ಪಾ. ೫-೪-೧೯ । ಇತಿ ಕ್ರಿಯಾಭ್ಯಾ-ವೃತ್ತಿಗಣನೇ ನಿಪಾತಿತಃ । ವೃಕಃ । ವೃಞ್ ವರಣೇ । ಸೃವೃಭೂಶುಷಿಮುಷಿಭ್ಯಃ ಕಿತ್ । ಉ. ೩-೪೧ । ಇತಿ ಕಪ್ರತ್ಯಯಃ । ಜಿಹೀತೇ । ಓಹಾಙ್ ಗತೌ । ಜುಹೋತ್ಯಾದಿಕಃ । ಭೃಞಾಮಿದಿತ್ಯಭ್ಯಾಸಸ್ಯೇತ್ವಂ । ನಿಚಾಯ್ಯ । ಚಾಯೃ ಪೂಜಾನಿಶಾಮನಯೋಃ । ಅತ್ರ ದರ್ಶನಾರ್ಥೋ ಧಾತೂನಾಮನೇಕಾರ್ಥತ್ವಾತ್ । ಸಮಾಸೇಽನಞ್ಪೂರ್ವೇ ಕ್ತ್ವೋ ಲ್ಯಪ್ । ಪೃಷ್ಟ್ಯಾಮಯೀ । ಸ್ಪೃಶ ಸಂಸ್ಪರ್ಶನೇ । ಸ್ಪೃಶ್ಯತೇಽನೇನೇತಿ ಸ್ಪೃಷ್ಟಿಃ । ಛಾಂದಸೋ ವರ್ಣಲೋಪಃ । ಪೃಷ್ಟ್ವಾನಾಮಯಃ ಪೃಷ್ಟ್ಯಾಮಯಃ । ತದ್ವಾನ್ ಪೃಷ್ಟ್ಯಾ-ಮಯೀ ॥

॥ ಪ್ರತಿಪದಾರ್ಥ ॥

**ಅರುಣಃ**—ಕೆಂಪುಬಣ್ಣವುಳ್ಳ । **ವೃಕಃ**—ತೋಳನು । **ಸಕೃತ್**—ಒಂದು ಸಲ । **ಪಥಾ**—ದಾರಿಯಲ್ಲಿ । **ಯಂತಂ**—ಹೋಗುತ್ತಿದ್ದ । **ಮಾ**—ನನ್ನನ್ನು । **ದದರ್ಶ ಹಿ**—ನೋಡಿಯೇ ಬಿಟ್ಟಿತು । **ನಿಚಾಯ್ಯ**—(ನನ್ನನ್ನು) ನೋಡಿ । **ಪೃಷ್ಟ್ಯಾಮಯೀ**—ಬೆನ್ನುನೋವಿನಿಂದ ಹಿಂಸೆಪಡುವ । **ತಷ್ಟೇ ಇವ**— ಕಮ್ಮಾರನು (ಬೆನ್ನನ್ನು ಸರಿಪಡಿಸಿಕೊಳ್ಳಲು ಊರ್ಧ್ವಮುಖವಾಗಿ ದೇಹವನ್ನು ಮೇಲಕ್ಕೆತ್ತುವಂತೆ)। **ಉಜ್ಜಿಹಾತಿ**--(ದೇಹವನ್ನು ಮೇಲಕ್ಕೆತ್ತಿ ಕೊಂಡು) ಅಟ್ಟಿಸಿಕೊಂಡು ಬಂದುಬಿಟ್ಟಿತು । **ರೋದಸೀ**—ಎಲೈ ದ್ಯಾವಾಪೃಥಿವಿಗಳೇ । **ಮೇ**—ನನ್ನ । **ಅಸ್ಯ**—ಈ ದುಃಖವನ್ನು । **ವಿತ್ತಂ**—ತಿಳಿಯಿರಿ ॥

( ಈ ಋಕ್ಕಿನ ಇನ್ನೊಂದರ್ಥವನ್ನು ವಿಶೇಷವಿಷಯಗಳಲ್ಲಿ ನೋಡಬಹುದು ).

ಭಾವಾರ್ಥ

ಒಂದು ಸಲ ನಾನು ದಾರಿಯಲ್ಲಿ ಹೋಗುತ್ತಿದ್ದಾಗ ಒಂದು ಕೆಂಪು ಬಣ್ಣದ ತೋಳನು ನನ್ನನ್ನು ನೋಡಿಬಿಟ್ಟಿತು. ಅನಂತರ ಅದು ನನ್ನನ್ನು ನೋಡಿ ತಿನ್ನಲಿಚ್ಛೆಯಿಂದ ಬೆನ್ನುನೋವಿನಿಂದ ಹಿಂಸೆಪಡುವ ಕಮ್ಮಾರನು ತನ್ನ ಬೆನ್ನನ್ನು ಸರಿಪಡಿಸಿಕೊಳ್ಳಲು ಊರ್ಧ್ವಮುಖವಾಗಿ ದೇಹವನ್ನು ಎತ್ತರಿಸಿ ಇಟ್ಟುಕೊಳ್ಳುವಂತೆ ಈ ತೋಳನೂ ಸಹ ತನ್ನ ದೇಹವನ್ನು ಊರ್ಧ್ವಮುಖವಾಗಿ ಮಾಡಿಕೊಂಡು ನನ್ನನ್ನು ಅಟ್ಟಿಸಿಕೊಂಡು ಬಂದಿತು. ಎಲೈ ದ್ಯಾವಾಪೃಥಿವಿಗಳೇ, ನನ್ನ ಈ ದುಃಖವನ್ನು ತಿಳಿಯಿರಿ.

## English Translation

Once a twany wolf beheld me, faring on my way, and, having seen me, rushed upon me, (rearing) as a carpenter, whose back aches (with stooping, stands erect from his work).

॥ ವಿಶೇಷವಿಷಯಗಳು ॥

ನಿರುಕ್ತಕಾರರು ವೃಕಶಬ್ದದ ನಿರ್ವಚನವನ್ನು ಮಾಡುವಾಗ ಉದಾಹರಣೆಗಾಗಿ ಈ ಋಕ್ಕನ್ನು ತೆಗೆದುಕೊಂಡು ವಿವರಿಸಿದ್ದಾರೆ. (೫-೨೧) ಆಗ ಅವರು **ಮಾಸಕೃತ್** ಎಂಬ ಪದಕ್ಕೆ ಅರ್ಥಮಾಡಿರುವುದು ತಪ್ಪೆಂದೂ ಅದು **ಮಾಸಕೃತ್** ಎಂಬ ಒಂದು ಪದವಲ್ಲವೆಂದೂ, **ಮಾ ಸಕೃತ್** ಎಂದು ಎರಡು ಪದಗಳಾಗಬೇಕೆಂದೂ ಬೃಹದ್ದೇವತಾಕಾರರು ಖಂಡಿಸಿದ್ದಾರೆ. ಮೊದಲು ನಿರುಕ್ತಕಾರರ ವಿವರಣೆಯನ್ನು ನೋಡಿ ಅನಂತರ ಖಂಡನೆಯನ್ನು ಪರಿಶೀಲಿಸೋಣ.

> **ವೃಕಶ್ಚಂದ್ರಮಾ ಭವತಿ ವಿವೃತಜ್ಯೋತಿಷ್ಕೋ ವಾ ವಿಕೃತಜ್ಯೋತಿಷ್ಕೋ ವಾ ವಿಕ್ರಾಂತಜ್ಯೋತಿಷ್ಕೋ ವಾ । ಅರುಣ ಆರೋಚನೋ ಮಾಸಕೃನ್ಮಾಸಾನಾಂ ಚಾರ್ಧಮಾಸಾನಾಂ ಚ ಕರ್ತಾ ಭವತಿ ಚಂದ್ರಮಾ ವೃಕಃ ಪಥಾ ಯಂತಂ ದದರ್ಶ ನಕ್ಷತ್ರಗಣಮಭಿಜಿಹೀತೇ ನಿಚಾಯ್ಯ ಯೇನ ಯೇನ ಯೋಕ್ಷ್ಯಮಾಣೋ ಭವತಿ ಚಂದ್ರಮಾಸ್ತಕ್ಷ್ನುವನ್ನಿವ ಪೃಷ್ಠರೋಗೀ ಜಾನೀತಂ ಮೇಽಸ್ಯ ದ್ಯಾವಾಪೃಥಿವ್ಯಾವಿತಿ** । (ನಿ. ೫-೨೦, ೨೧).

ವೃಕನೆಂದರೆ **ಚಂದ್ರ**ನೆಂದರ್ಥ, ಜ್ಯೋತಿಯನ್ನು ಪ್ರಕಾಶಪಡಿಸುವುದರಿಂದಾಗಲಿ ಅಥವಾ ನ್ಯೂನವಾದ ಜ್ಯೋತಿಯುಳ್ಳವನೆಂದಾಗಲಿ ಅಥವಾ ನಕ್ಷತ್ರಗಳೊಡನೆ ಹೋಲಿಸಿದರೆ ಅಧಿಕವಾದ ಪ್ರಕಾಶವುಳ್ಳವನೆಂದಾಗಲಿ ಅರ್ಥವನ್ನು ಕೊಡುವುದರಿಂದ ಚಂದ್ರನಿಗೆ ಈ ಹೆಸರು ಬಂದಿದೆ ಎಂದು ಪ್ರಕೃತವಾದ ಈ ಋಕ್ಕನ್ನು ಉದಹರಿಸಿ ವಿವರಿಸಿದ್ದಾರೆ. ಈ ವಿವರಣೆಯಲ್ಲಿ **ಅರುಣ** ಶಬ್ದಕ್ಕೆ **ಆರೋಚನಃ** ಸಕಲಜಗತ್ತಿಗೂ ಪ್ರಕಾಶವನ್ನು ಬೀರಿ ಮನೋಹರನಾಗಿ ಕಾಣುವ ಎಂದರ್ಥ. **ಮಾಸಕೃತ್** ಎಂದರೆ **ಮಾಸಾರ್ಧಮಾಸರ್ತ್ವಯನಸಂವತ್ಸರಾದೀನ್ ಕಾಲವಿಶೇಷಾನ್ ಕುರ್ವನ್ । ತಿಥಿವಿಭಾಗಜ್ಞಾನಸ್ಯ ಚಂದ್ರಗತ್ಯಧೀನತ್ವಾತ್** । ಮಾಸ, ಅರ್ಧಮಾಸ, ಋತು, ಅಯನ, ಸಂವತ್ಸರ ಹೀಗೆ ಕಾಲವಿಭಾಗಗಳನ್ನು ಮಾಡತಕ್ಕವನೆಂದರ್ಥ. ಅಂತಹ ಚಂದ್ರನು ಆಕಾಶದಲ್ಲಿ ಸಂಚರಿಸುವ ನಕ್ಷತ್ರಗಣವನ್ನು ನೋಡಿದನು, (ಇಲ್ಲಿ ಹಿ ಶಬ್ದದಿಂದ **ನಕ್ಷತ್ರಗಣಮೇವ ದದರ್ಶ ನ ಮಾಂ ಇತ್ಯನಾದರೋ ದ್ಯೋತ್ಯತೇ** । ನಕ್ಷತ್ರಗಣವನ್ನು ಮಾತ್ರ ನೋಡಿದನೇ ಹೊರತು ನನ್ನನ್ನು ನೋಡಲೇ ಇಲ್ಲವೆಂದರ್ಥವಾಗುತ್ತದೆ (ಸಾ. ಭಾ.) ಇಲ್ಲಿ **ಮಾಸಕೃತ್** ಎಂಬ ಪದಕ್ಕೆ ನಿರುಕ್ತಕಾರರ ವಿವರಣೆಗೂ ಶಾಕಲ್ಯರ ವಿವರಣೆಗೂ ವ್ಯತ್ಯಾಸವನ್ನು ತೋರಿಸುತ್ತಾ ಸಾಯಣರು **ಅತ್ರ ಮಾಸಕೃತ್ ಇತಿ ಯಾಸ್ಕಃ ಏಕಂ ಪದಂ ಮನ್ಯತೇ, ಶಾಕಲ್ಯಸ್ತು ಪದದ್ವಯಂ । ತಸ್ಮಿನ್ಪಕ್ಷೇಽಯಮರ್ಥಃ । ದಕ್ಷಪ್ರಜಾಪತೇರ್ದುಹಿತೃಭೂತಾಃ ಸ್ವಭಾರ್ಯಾಃ ಅಶ್ವಿನ್ಯಾದ್ಯಾಸ್ತಾರಕಾಃ ಪುನಃಪುನರ್ದದರ್ಶ । ಮಾಂ ಸಕೃದೇವ ಪಶ್ಯತೀತಿ ಸಕೃದ್ದೃಷ್ಟ್ವಾ ಚೋಚ್ಛ್ರಿ ಹೀತೇ । ತಾರಾಭಿಃ ಸಹೋರ್ಧ್ವಮೇವ ಗಚ್ಛತಿ । ನ ಮಾಂ ಕೂಪಾದುತ್ತಾರಯತಿ । ಅತ ಇದಮನುಚಿತಂ** । ಇಲ್ಲಿ ಯಾಸ್ಕರ

ಮತದಂತೆ **ಮಾಸಕೃತ್** ಎಂಬುದು ಒಂದೇ ಪದ. ಆದರೆ ಶಾಕಲ್ಯರ ಮತದಲ್ಲಿ ಇವು ಎರಡು ಪದಗಳು. ಅವರ ಅಭಿಪ್ರಾಯದಂತೆ ಈ ವಿಧವಾದ ಅರ್ಥವಾಗುತ್ತದೆ. ಅದು, ದಕ್ಷಪ್ರಜಾಪತಿಯ ಕನ್ಯೆಯರಾದ ಅಶ್ವಿನ್ಯಾದಿನಕ್ಷತ್ರಗಳನ್ನು (ತನ್ನ ಪತ್ನಿಯರನ್ನು) ಚಂದ್ರನು ಪುನಃ ಪುನಃ ನೋಡುತ್ತಾ ನನ್ನನ್ನು ಕೊಂಚಮಾತ್ರ ನೋಡುತ್ತಾನೆ. (ಮಾಂ ಸಕೃದೇವ ಪಶ್ಯತಿ). ಆಗ ನನ್ನನ್ನು ಲಕ್ಷ್ಯಮಾಡದೇ ತಾರೆಗಳೊಡನೆಯೇ ಸೇರಿಕೊಂಡು ಹೊರಟುಹೋಗುತ್ತಾನೆ. ಕೂಪದಲ್ಲಿ ಬಿದ್ದಿದ್ದ ನನ್ನನ್ನು ಮೇಲಕ್ಕೆತ್ತುವುದೇ ಇಲ್ಲ. ಇದು ಅನುಚಿತ. (ಎಲೈ ದ್ಯಾವಾಪೃಥಿವಿಗಳೇ ನನ್ನ ಮೊರೆಯನ್ನು ಕೇಳಿರಿ.) ಎಂದು ತಾತ್ಪರ್ಯ.

ಹೀಗೆ ಎರಡು ಅಭಿಪ್ರಾಯಗಳನ್ನು ಉದಹರಿಸಿದ್ದಾರೆ. ಬೃಹದ್ದೇವತೆಯಲ್ಲಿ ನಿರುಕ್ತಕಾರರ ಕೆಲವು ದೋಷಗಳನ್ನು ಉದಹರಿಸುವ ಸಂದರ್ಭದಲ್ಲಿ ಈ ಪದವೂ ಒಂದು ಉದಾಹರಣೆಯಾಗಿ ತೆಗೆಯಲ್ಪಟ್ಟಿದೆ.

**ಪದಮೇಕಂ ಸಮಾದಾಯ ದ್ವಿಧಾ ಕೃತ್ವಾ ನಿರುಕ್ತವಾನ್ ।**
**ಪುರುಷಾದಃ ಪದಂ ಯಾಸ್ಕೋ ವೃಕ್ಷೇ ವೃಕ್ಷ ಇತಿ ತ್ವೃಚಿ ॥**
**ಅನೇಕಂ ಸತ್ತಥಾ ಚಾನ್ಯದೇಕಮೇವ ನಿರುಕ್ತವಾನ್ ।**
**ಅರುಣೋ ಮಾ ಸಕೃನ್ಮಂತ್ರೇ ಮಾಸಕೃದ್ವಿಗ್ರಹೇಣ ತು ॥**

( ಬೃ. ದೇ. ೩-೧೧೧, ೧೧೨ )

ಇಲ್ಲಿ ಬೃಹದ್ದೇವತಾಕಾರರು ಯಾಸ್ಕರ ಎರಡು ವಿಧವಾದ ದೋಷಗಳನ್ನು ತೋರಿಸಿದ್ದಾರೆ. ಮೊದಲನೆಯದಾಗಿ ಯಾಸ್ಕರು ಒಂದೇ ಪದವಾಗಿರಬೇಕಾದ ಸಂದರ್ಭದಲ್ಲಿ ಒಂದೇ ಪದವನ್ನು ಎರಡು ಪದಗಳಾಗಿ ಭೇದಮಾಡುವುದೂ, ಎರಡನೆಯದಾಗಿ ಎರಡು ಪದಗಳಾಗಿರಬೇಕಾದ ಸನ್ನಿವೇಶದಲ್ಲಿ ಒಂದೇ ಪದವನ್ನು ಮಾಡಿರುವುದೂ ಸಹ ಅರ್ಥವನ್ನು ಬಹಳ ವ್ಯತ್ಯಾಸಮಾಡಿರುತ್ತದೆ. ಉದಾಹರಣೆಗೆ

**ವೃಕ್ಷೇವೃಕ್ಷೇ ನಿಯತಾ ಮೀಮಯದ್ಗೌಸ್ತತೋ ವಯಃ ಪ್ರ ಪತಾನ್ಪೂರುಷಾದಃ ।**

(ಋ. ಸಂ. ೧೦-೨೭-೨೨)

ಎಂಬ ಋಕ್ಕಿನಲ್ಲಿ **ಪೂರುಷಾದಃ** ಎಂಬ ಒಂದೇ ಪದವಾಗಿರಬೇಕಾದಾಗ ಅದನ್ನು ಎರಡು ಪದಗಳಾಗಿ ವಿಭಾಗಿಸಿ ಅರ್ಥಮಾಡಿದ್ದಾರೆ. ಅಲ್ಲದೇ, ಪ್ರಕೃತವಾದ ಋಕ್ಕಿನಲ್ಲಿ **ಮಾ, ಸಕೃತ್** ಎಂದು ಎರಡು ಪದಗಳಾಗಿರಬೇಕಾದಾಗ ಅದನ್ನು **ಮಾಸಕೃತ್** ಎಂದು ಒಂದೇ ಪದವನ್ನಾಗಿಮಾಡಿ ವಿವರಿಸಿದ್ದಾರೆ. ಇಲ್ಲಿ ಅರ್ಥವ್ಯತ್ಯಾಸವಾಗಿರುವುದು ಎಂದು ಯಾಸ್ಕರ ದೋಷವನ್ನು ತೋರಿಸಿದ್ದಾರೆ. ಹೀಗೆಯೇ ಇನ್ನೂ ಇಂತಹ ಕೆಲವು ದೋಷಗಳನ್ನು ತೋರಿಸಿರುವರು. ಆದರೆ ಅವು ಸದ್ಯಃ ಅಪ್ರಕೃತವಾದುದರಿಂದ ಅವನ್ನೆಲ್ಲಾ ಸಂದರ್ಭಾನುಸಾರವಾಗಿ ಉದಹರಿಸಲಾಗುತ್ತದೆ.

**ವೃಕಃ**—ವೃಕಶಬ್ದಕ್ಕೆ ಈ ಋಕ್ಕಿನಲ್ಲಿ **ತೋಳನೆಂದಾಗಲಿ** ಅಥವಾ **ಚಂದ್ರನೆಂದಾಗಲಿ** ಅರ್ಥ. ಆದರೆ ಈ ಪದವನ್ನು ಇನ್ನೂ ಕೆಲವು ಅರ್ಥಗಳಲ್ಲೂ ಉಪಯೋಗಿಸಿದೆ. ಆದಿತ್ಯೋಽಪಿ **ವೃಕ ಉಚ್ಯತೇ** ಯದಾವೃಙ್ಕ್ತೇ (ನಿ. ೫-೨೧) ಎಂದು ನಿರುಕ್ತಕಾರರು,

**ಅಜೋಹವೀದಶ್ವಿನಾ ವರ್ತಿಕಾ ವಾಮಾಸ್ನೋ ಯತ್ಸೀಮಮುಂಚತಂ ವೃಕಸ್ಯ ।**
(ಋ. ಸಂ. ೧-೧೧೭-೧೬)

ಎಂಬ ಋಕ್ಕನ್ನು ಉದಹರಿಸಿ ಕತ್ತಲನ್ನು ನಾಶಮಾಡಿ ಬೆಳಕನ್ನು ಹರಡುವುದೆಂದು ಅರ್ಥವನ್ನು ಕೊಡುವುದರಿಂದ ಇಲ್ಲಿ ವೃಕ ಶಬ್ದಕ್ಕೆ ಆದಿತ್ಯನೆಂದು ಅರ್ಥ.

**ಶ್ವಾಪಿ ವೃಕ ಉಚ್ಯತೇ ವಿಕರ್ತನಾತ್ ।** ಕಚ್ಚುವುದರಿಂದ ಅರಣ್ಯಶ್ವಾ ಎಂದರೆ ಕಾಡುನಾಯಿಗೂ (ತೋಳ) ವೃಕವೆಂದು ಹೆಸರು, ಎಂದು ಉದಾಹರಣೆಗಾಗಿ—

**ವೃಕಶ್ಚಿದಸ್ಯ ವಾರಣ ಉರಾಮಥಿರಾ ವಯುನೇಷು ಭೂಷತಿ ।**
(ಋ. ಸಂ. ೮-೬೬-೮)

ಎಂಬ ಋಕ್ಕನ್ನು ಉದಹರಿಸಿದ್ದಾರೆ. ಆದರೆ ಈ ಋಕ್ಕಿನಲ್ಲಿ **ವೃಕ**ಶಬ್ದಕ್ಕೆ ಸಾಯಣರು **ಕಳ್ಳ** ಎಂಬರ್ಥವನ್ನು ಮಾಡಿದ್ದಾರೆ.

**ಉಜ್ಜಿಹೀತೇ—ಉದ್ಗಚ್ಛತಿ ಅಥವಾ ಅಭಿಜಿಹೀತೇ ।** ಎಂದರೆ ಆಟ್ಟಿಸಿಕೊಂಡು ಬರುವಂತೆ ಮೇಲಕ್ಕೆದ್ದಿತು ಎಂದರ್ಥ. ತನ್ನ ಸ್ಥಾನವನ್ನು ಬಿಟ್ಟು ಬೇರೆ ಕಡೆಗೆ ಹೊರಡುವುದು ಎನ್ನುವ ಅರ್ಥದಲ್ಲಿ ಈ ಪದದ ಪ್ರಯೋಗವಿದೆ.

**ಯಹ್ವಾ ಇವ ಪ್ರ ವಯಾಮುಜ್ಜಿಹಾನಾಃ ಪ್ರ ಭಾನವಃ ಸಿಸ್ರತೇ ನಾಕಮಚ್ಛ ।**
(ಋ. ಸಂ. ೫-೧-೧)

ಎಂಬ ಋಕ್ಕಿನಲ್ಲಿ **ಉಜ್ಜಿಹಾನಾಃ** ಎಂಬ ಪದಕ್ಕೆ ತಮ್ಮ ಸ್ವಸ್ಥಾನವನ್ನು ಬಿಟ್ಟು ಬೇರೆ ಕಡೆಗೆ ಹೊರಟವು ಎಂದರ್ಥ.

**ಉಪಾತ್ಯೈರ್ಜಿಹತೇ ಬೃಹದ್ವಾರೋ ದೇವೀರ್ಹಿರಣ್ಯಯೀಃ ।**
(ಋ. ಸಂ. ೯-೫-೫)

ಎಂಬ ಋಕ್ಕಿನಲ್ಲಿ **ಉಜ್ಜಿಹತೇ** ಎಂದರೆ ಬಾಗಿಲು ಮೇಲೆದ್ದು ತೆರೆಯಿತು ಎಂದು ತಾತ್ಪರ್ಯ

**ನಿಚಾಯ್ಯ—ಚಾಯೃ ಪೂಜಾನಿಶಾಮನಯೋಃ ।** ಪೂಜಿಸು ಧ್ಯಾನಿಸು ಎಂಬರ್ಥವನ್ನು ಕೊಡುವ **ಚಾಯೃ** ಧಾತುವಿನಿಂದ ನಿಷ್ಪನ್ನವಾಗಿದೆ. **ದರ್ಶನ** ಮತ್ತು **ಮನನ** ಈ ಎರಡರ್ಥಗಳಲ್ಲಿಯೂ ಈ ಪದದ ಪ್ರಯೋಗವಿದೆ.

**ವೈಶ್ವಾನರಂ ಮನಸಾಗ್ನಿಂ ನಿಚಾಯ್ಯಾ ಹವಿಷ್ಮಂತೋ ಅನುಷತ್ಯಂ ಸ್ವರ್ವಿದಂ ।**
(ಋ. ಸಂ. ೩-೨೬-೧)

ಎಂಬ ಋಕ್ಕಿನಲ್ಲಿ **ನಿಚಾಯ್ಯ** ಎಂದರೆ ವೈಶ್ವಾನರಾಗ್ನಿಯನ್ನು **ಅಂತಃಕರಣದಲ್ಲಿ ಧ್ಯಾನಿಸುತ್ತಾ** ಎಂದರ್ಥ. ಪ್ರಕೃತವಾದ ಋಕ್ಕಿನಲ್ಲಿ ದುರುಗುಟ್ಟಿಕೊಂಡು ನೋಡುವುದು ಎಂದರ್ಥ.

**ಪೃಷ್ಟ್ಯಾಮಯೀ—ಪೃಷ್ಟಿರಿತಿ ಪೃಷ್ಠಮುಚ್ಯತೇ ।** ಪೃಷ್ಠ ಎಂದರೆ ಬೆನ್ನು ಎಂದರ್ಥ. ಬೆನ್ನುನೋವು ಎಂದು ತಾತ್ಪರ್ಯ.

ವ್ಯಾಕರಣಪ್ರಕ್ರಿಯಾ

**ಸಕೃತ್**—**ಏಕಸ್ಯ ಸಕೃಚ್ಚ**—(ಪಾ. ಸೂ. ೫-೪-೧೯) ಎಂಬುದರಿಂದ ಕ್ರಿಯಾಭ್ಯಾವೃತ್ತಿಗಣನದಲ್ಲಿ (ಕ್ರಿಯೆಯ ಪೌನಃ ಪುನ್ಯದಲ್ಲಿ) ನಿಪಾತಿತವಾಗಿದೆ.

**ವೃಕಃ**—ವೃಞ್ ವರಣೇ. ಧಾತು. **ಸೃವೃಭೂಶುಷಿಮುಷಿಭ್ಯಃ ಕಿತ್**—(ಉ. ಸೂ. ೩-೩೮) ಎಂಬುದರಿಂದ ಕ ಪ್ರತ್ಯಯ. ಇದಕ್ಕೆ ಕಿತ್ತ್ವವಿಧಾನಮಾಡಿರುವುದರಿಂದ ಧಾತುವಿಗೆ ಗುಣ ಬರುವುದಿಲ್ಲ.

**ಪಥಾ**—ಪಥಿನ್ ಶಬ್ದ. ತೃತೀಯಾ ಏಕವಚನಪರವಾದಾಗ **ಭಸ್ಯಟೇರ್ಲೋಪಃ**—ಎಂಬುದರಿಂದ ಟಿಗೆ ಲೋಪ. **ಅನುದಾತ್ತಸ್ಯ ಚ**—(ಪಾ. ಸೂ. ೬-೧-೧೬೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಯಂತಮ್**—ಯಾ ಪ್ರಾಪಣೇ. ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ಶಪಿಗೆ ಲುಕ್. **ಸಾರ್ವಧಾತುಕಮಪಿತ್**—ಸೂತ್ರದಿಂದ ಶತೃವಿಗೆ ಙಿತ್ತ್ವ ವಿರುವುದರಿಂದ **ಆತೋಲೋಪ ಇಟಿಚ**—(ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಆದ್ಯುದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ದದರ್ಶ**—ದೃಶಿರ್ ಪ್ರೇಕ್ಷಣೇ. ಧಾತು. ಲಿಟ್ ಪ್ರಥಮಪುರುಷಏಕವಚನರೂಪ. ಹಿ ಎಂಬುದರ ಸಂಬಂಧವಿರುವುದರಿಂದ **ಹಿಚ**—ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಣಲ್ ಲಿತ್ತಾದುದರಿಂದ—**ಲಿತಿ**—(ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಜಿಹೀತೇ**—ಓಹಾಙ್ ಗತೌ ಧಾತು. ಜುಹೋತ್ಯಾದಿ. ಲಟ್ ಪ್ರಥಮಪುರುಷ ಏಕವಚದದಲ್ಲಿ ತ ಪ್ರತ್ಯಯ. **ಟಿತ ಆತ್ಮನೇಪದಾನಾಂ**—ಎಂಬುದರಿಂದ ಟಿಗೆ ಏತ್ವ. **ಜುಹೋತ್ಯಾದಿಭ್ಯಃ ಶ್ಲುಃ**— (ಪಾ. ಸೂ. ೨-೪-೭೫) ಎಂಬುದರಿಂದ ಶ್ಲುವಿಕರಣ. **ಶ್ಲೌ**—ಎಂಬುದರಿಂದ ಧಾತುವಿಗೆ ದ್ವಿತ್ವ. **ಭೃಞಾಮಿತ್**—(ಪಾ. ಸೂ. ೭-೪-೭೬) ಎಂಬುದರಿಂದ ಅಭ್ಯಾಸಕ್ಕೆ ಇತ್ವ. **ಕುಹೋಶ್ಚುಃ**—ಎಂಬುದರಿಂದ ಚುತ್ವ, ಜಶ್ತ್ವ. **ಈ ಹಲ್ಯಘೋಃ**—(ಪಾ. ಸೂ ೬-೪-೧೧೩) ಎಂಬುದರಿಂದ ಆಕಾರಕ್ಕೆ ಈತ್ವ. ತಿಙಂತನಿಘಾತಸ್ವರ ಬರುತ್ತದೆ.

**ನಿಚಾಯ್ಯ**—ಚಾಯೃ ಪೂಜಾನಿಶಾಮನಯೋಃ. ಧಾತು. ಧಾತುಗಳಿಗೆ ಅನೇಕಾರ್ಥವಿದೆಯೆಂದು ಸ್ವೀಕರಿಸಿರುವುದರಿಂದ ಇಲ್ಲಿ ದರ್ಶನಾರ್ಥದಲ್ಲಿ ಪ್ರಯುಕ್ತವಾಗಿದೆ. **ಸಮಾಸೇಽನಞ್ ಪೂರ್ವೇಕ್ತ್ವೋಲ್ಯಪ್**—(ಪಾ. ಸೂ. ೭-೧-೩೭) ಎಂಬುದರಿಂದ ಕ್ತ್ವಾ ಪ್ರತ್ಯಯ ಬಂದಾಗ ಅದಕ್ಕೆ ಲ್ಯಬಾದೇಶ. **ಅನ್ಯೇಷಾಮಪಿದೃಶ್ಯತೇ**—(ಪಾ. ಸೂ. ೬-೩-೧೩೭) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಪುಷ್ಟ್ಯಾವಾನುಯೀ**—ಸ್ಪೃಶ ಸಂಸ್ಪರ್ಶನೇ. ಧಾತು. ಸ್ಪೃಶ್ಯತೇ ಅನೇನ ಇತಿ ಸ್ಪೃಷ್ಟಿಃ. ಕರಣಾರ್ಥದಲ್ಲಿ ಕ್ತಿನ್ ಪ್ರತ್ಯಯ. **ವ್ರಶ್ಚಭ್ರಸ್ಜ**—ಎಂಬುದರಿಂದ ಶಕಾರಕ್ಕೆ ಷತ್ವ. ಷ್ಟುತ್ವದಿಂದ ತಕಾರಕ್ಕೆ ಟತ್ವ. ಛಾಂದಸವಾಗಿ ಧಾತುವಿನ ಸಕಾರಕ್ಕೆ ಲೋಪ. ಪುಷ್ಟಾವಾನುಯಃ ಪುಷ್ಟ್ಯಾವಾನುಯಃ ಅಸ್ಯ ಅಸ್ತಿ ಇತಿ ಪುಷ್ಟ್ಯಾವಾನುಯೀ

ಅತಇನಿಠನೌ—(ಪಾ. ಸೂ. ೫-೨-೧೧೫) ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ. ಯಸ್ಯೇತಿಚ — ಎಂಬುದರಿಂದ ಅಕಾರಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೧೮ ॥



ಸಂಹಿತಾಪಾಠಃ

ಏನಾಂಗೂಷೇಣ ವಯಮಿಂದ್ರವಂತೋಽಭಿ ಷ್ಯಾಮ ವೃಜನೇ
ಸರ್ವವೀರಾಃ।
ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ
ಪೃಥಿವೀ ಉತ ದ್ಯೌಃ ॥ ೧೯ ॥

ಪದಪಾಠಃ

ಏನಾ । ಆಂಗೂಷೇಣ । ವಯಂ । ಇಂದ್ರಽವಂತಃ । ಅಭಿ । ಸ್ಯಾಮ । ವೃಜನೇ।
ಸರ್ವಽವೀರಾಃ ।
ತತ್ । ನಃ । ಮಿತ್ರಃ । ವರುಣಃ । ಮಮಹಂತಾಂ । ಅದಿತಿಃ । ಸಿಂಧುಃ । ಪೃಥಿ-
ವೀ । ಉತ । ದ್ಯೌಃ ॥ ೧೯ ॥

॥ ಸಾಯಣಭಾಷ್ಯಂ ॥

ಏನಾನೇನಾಂಗೂಷೇಣಾಘೋಷಣಯೋಗ್ಯೇನ ಸ್ತೋತ್ರೇಣ ಹೇತುಭೂತೇನೇಂದ್ರವಂತೋಽನು-ಗ್ರಾಹಕೇಣೇಂದ್ರೇಣ ಯುಕ್ತಾಃ ಸರ್ವವೀರಾಃ ಸರ್ವೈರ್ವೀರೈಃ ಪುತ್ರೈಃ ಪೌತ್ರಾದಿಭಿಶ್ಚೋಪೇತಾಃ ಸಂತೋ

ವಯಂ ವೃಜನೇ ಸಂಗ್ರಾಮೇಽಭಿಷ್ಯಾಮ । ಶತ್ರೂನಭಿಭವೇಮ । ತದಿದಮಸ್ಮದೀಯಂ ವಚನಂ ಮಿತ್ರಾದಯೋ ಮಮಹಂತಾಂ । ಪೂಜಯಂತು । ಪಾಲಯಂತ್ವಿತ್ಯರ್ಥಃ । ಉತಶಬ್ದೋ ದೇವತಾಸಮುಚ್ಚಯೇ । ಅತ್ರ ಯಾಸ್ಕಃ । ಅಂಗೂಷ ಸ್ತೋಮ ಆಘೋಷಃ । ಅನೇನ ಸ್ತೋಮೇನ ವಯಮಿಂದ್ರವಂತಃ । ನಿ. ೫-೧೧ । ಇತಿ ॥ ಏನಾ । ದ್ವಿತೀಯಾಟೌಸ್ಸ್ವೇನಃ । ಪಾ. ೨-೪-೩೪ । ಇತಿ ತೃತೀಯಾಯಾಮಿದಮ ಏನಾದೇಶಃ । ಸುಪಾಂ ಸುಲುಗಿತಿ ವಿಭಕ್ತೇರಾಜಾದೇಶಃ । ಚಿತ್ಸ್ವರೇಣಾಂತೋದಾತ್ತತ್ವಂ । ಅಂಗೂಷೇಣ । ಆಙ್ಪೂರ್ವಾದ್ಘುಷೇಃ ಕರ್ಮಣಿ ಘಞ್ । ಆಙೋ ಙಕಾರಲೋಪಾಭಾವಶ್ಛಾಂದಸಃ । ಘೋಷಶಬ್ದಸ್ಯ ಗೂಷಭಾವಶ್ಚ ಪೃಷೋದರಾದಿತ್ವಾತ್ । ಥಾಥಾದಿನೋತ್ತರಪದಾಂತೋದಾತ್ತತ್ವಂ । ಸ್ಯಾಮ । ಅಸ್ತೇಃ ಪ್ರಾರ್ಥನಾಯಾಂ ಲಿಙ್ । ಶ್ನಸೋರಲ್ಲೋಪ ಇತ್ಯಕಾರಲೋಪಃ । ಉಪಸರ್ಗಪ್ರಾದುರ್ಭ್ಯಾಮಸ್ತಿರ್ಯಚ್ಪರಃ । ಪಾ. ೮-೩-೮೭ । ಇತಿ ಷತ್ವಂ ॥

ಪ್ರತಿಪದಾರ್ಥ

**ಏನಾ ಅಂಗೂಷೇಣ**—ಗಟ್ಟಿಯಾಗಿ ಪಠಿಸಲು ಯೋಗ್ಯವಾದ ಈ ಸ್ತೋತ್ರದ ಸಹಾಯದಿಂದ । **ಇಂದ್ರವಂತಃ**—(ಅನುಗ್ರಹ ಬುದ್ಧಿಯುಳ್ಳ) ಇಂದ್ರನೊಡನೆ ಕೂಡಿದವರೂ । **ಸರ್ವವೀರಾಃ**—ಸಕಲವೀರಪುತ್ರ ಪೌತ್ರಾದಿಗಳೊಡನೆ ಕೂಡಿದವರೂ ಆಗಿ । **ವಯಂ**—ನಾವು । **ವೃಜನೇ**—ಯುದ್ಧದಲ್ಲಿ । **ಅಭಿಷ್ಯಾಮ**—(ಶತ್ರುಗಳನ್ನು) ಜಯಿಸುವಂತಾಗಲಿ । **ನಃ ತತ್**—ನಮ್ಮ ಈ ಸ್ತೋತ್ರವಾಕ್ಯವನ್ನು । **ಮಿತ್ರಃ**—ಮಿತ್ರನೂ । **ವರುಣಃ**—ವರುಣನೂ । **ಅದಿತಿಃ**—ಅದಿತಿಯೂ । **ಸಿಂಧುಃ**—ಸಾಗರಾಧಿದೇವತೆಯೂ । **ಪೃಥಿವೀ**—ಪೃಥಿವಿಯೂ । **ಉತ**—ಮತ್ತು । **ದ್ಯೌಃ**—ದ್ಯುಲೋಕವೂ । **ಮಮಹಂತಾಂ**—ಪಾಲಿಸಲಿ ।

ಭಾವಾರ್ಥ

ಗಟ್ಟಿಯಾಗಿ ಪಠಿಸಲು ಯೋಗ್ಯವಾದ ನಮ್ಮ ಈ ಸ್ತೋತ್ರದ ಸಹಾಯದಿಂದ ನಾವು ಅನುಗ್ರಾಹಕನಾದ ಇಂದ್ರನೊಡಗೂಡಿದವರಾಗಿಯೂ ವೀರರಾದ ಸಕಲ ಪುತ್ರಪೌತ್ರಾದಿ ಬಲದೊಡನೆ ಕೂಡಿದವರಾಗಿಯೂ ಸಹ ಆಗಿ ನಾವು ಯುದ್ಧದಲ್ಲಿ ಶತ್ರುಗಳನ್ನು ಜಯಿಸುವಂತಾಗಲಿ. ನಮ್ಮ ಈ ಸ್ತೋತ್ರವಾಕ್ಯವನ್ನು ಮಿತ್ರನೂ, ವರುಣನೂ, ಅದಿತಿಯೂ, ಸಾಗರಾಧಿದೇವತೆಯೂ ಪೃಥ್ವಿಯೂ ಮತ್ತು ದ್ಯುಲೋಕವೂ ಪಾಲಿಸಲಿ.

English Translation

By this recitation may we, becoming possessed of Indra, and strong with multiplied progeny, overcome our foes in battle ; and may Mitra, Varun, Aditi,—ocean, earth and heaven be gracious to us in this (request).

ವಿಶೇಷವಿಷಯಗಳು

**ಆಂಗೂಷೇಣ**—**ಆಂಗೂಷಃ ಸ್ತೋಮ ಆಘೋಷಃ** । (ನಿ. ೫-೧೧) ಗಟ್ಟಿಯಾಗಿ ಪಠಿಸಬೇಕಾದ ಸ್ತೋತ್ರಕ್ಕೆ ಆಂಗೂಷವೆಂದು ಹೆಸರು, ಎಂದು ನಿರುಕ್ತಕಾರರು ಈ ಪದದ ನಿರ್ವಚನಕಾಲದಲ್ಲಿ ಈ ಋಕ್ಕನ್ನೇ ಉದಾಹರಿಸಿದ್ದಾರೆ. ಸ್ಕಂದಸ್ವಾಮಿಗಳು **ಸೋಮ** ಮತ್ತು **ಸ್ತೋಮ** ಎಂಬ ಎರಡರ್ಥವನ್ನು ಹೇಳಬಹುದೆಂದಿದ್ದಾರೆ ಇದಕ್ಕನುಗುಣವಾಗಿ ಉಳಿದ ಪದಗಳಿಗೂ ಎರಡರ್ಥಗಳನ್ನು ಹೇಳಬೇಕಾಗುತ್ತದೆ. ಸೋಮವೆಂದರ್ಥವಾದರೆ **ಕೂಪೇ ಪ್ರಕಲ್ಪಿತೇನ ಸೋಮೇನ** ಭಾವಿಯಲ್ಲಿ ಸಿದ್ಧಪಡಿಸಿದ ಸೋಮದಿಂದ ಎಂದೂ **ವೃಜನ** ಶಬ್ದಕ್ಕೆ **ವೃಜ್ಯತೇ ದೋಷೈಃ ಇತಿ ವೃಜನಃ ಯಜ್ಞಃ** । ಯಜ್ಞವೆಂದೂ ಅರ್ಥವಾಗಬೇಕು. ಆದರೆ **ಆಂಗೂಷ** ಶಬ್ದವು ಋಕ್ಸಂಹಿತೆಯಲ್ಲಿ ಹತ್ತಾರುಸಲ ಬಂದಿದೆ. ಅವೆಲ್ಲಾ ಕಡೆಗಳಲ್ಲಿಯೂ ಸ್ತೋತ್ರವೆಂಬರ್ಥವೇ ಇರುತ್ತದೆ. ಆದುದರಿಂದ ಇಲ್ಲಿಯೂ ಸಹ **ವಿತ್ತಂ ಮೇ ಅಸ್ಯರೋದಸೀ** ಎಂದು ಮೊರೆಯಿಡುವುದರಿಂದ ಗಟ್ಟಿಯಾಗಿ ಪಠಿಸುವ ಸ್ತೋತ್ರವೆಂದೇ ಹೇಳಬೇಕು.

**ವೃಜನೇ**—ವೃಜನ ಶಬ್ದವು ಬಲನಾಮಗಳಲ್ಲಿ ಪಠಿತವಾಗಿದೆ. **ಸೇನಾದಿಲಕ್ಷಣೇನ ಬಲೇನ ಯುಕ್ತೇ ಸಂಗ್ರಾಮೇ** । ಸೇನಾರೂಪವಾದ ಬಲದಿಂದ ಕೂಡಿದ ಸಂಗ್ರಾಮದಲ್ಲಿ ಎಂದರ್ಥ.

**ಅಭಿಷ್ಯಾಮ**—**ಶತ್ರೂನಭಿಭವೇಮ** । ಶತ್ರುಗಳನ್ನು ಜಯಿಸುವಂತಾಗಲಿ ಎಂಬ ಪ್ರಾರ್ಥನೆ.

॥ ವ್ಯಾಕರಣಪ್ರಕ್ರಿಯಾ ॥

ಏನಾ—ಇದಮ್ ಶಬ್ದ. ತೃತೀಯಾ ಏಕವಚನ ಟಾವಿಭಕ್ತಿ ಪರವಾದಾಗ **ದ್ವಿತೀಯಾ ಟೌಸ್ವೇನಃ**—(ಪಾ. ಸೂ. ೨-೪-೩೪) ಎಂಬುದರಿಂದ ಪ್ರಕೃತಿಗೆ ಏನಾದೇಶ. ಪ್ರತ್ಯಯಕ್ಕೆ **ಟಾಙಸಿ**—ಸೂತ್ರದಿಂದ ಇನಾದೇಶ ಪ್ರಾಪ್ತವಾದರೆ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಚಾದೇಶ. ಇದು ಚಿತ್ತಾದುದರಿಂದ **ಚಿತಃ**—(ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಆಜ್ಘೋಷೇಣ**—ಘುಷಿರ್ ಅವಿಶಬ್ದನೇ. ಧಾತು. ಇದಕ್ಕೆ ಆಙ್ ಪೂರ್ವವಾಗಿರುವಾಗ ಕರ್ಮಣಿಯಲ್ಲಿ ಘಞ್ ಪ್ರತ್ಯಯ. ಆಙಿನಲ್ಲಿ ಛಾಂದಸವಾಗಿ ಙಕಾರಲೋಪ ಬರುವುದಿಲ್ಲ. ಪ್ರತ್ಯಯನಿಮಿತ್ತವಾಗಿ ಗುಣ ಬಂದು ಘೋಷ ಎಂದು ರೂಪವಾದಾಗ ಪೃಷೋದರಾದಿಯಲ್ಲಿ ಸೇರಿರುವುದರಿಂದ **ಪೃಷೋದರಾದೀನಿ ಯಥೋಪದಿಷ್ಟಮ್**—(ಪಾ. ಸೂ. ೬-೩-೧೦೯) ಎಂಬುದರಿಂದ ಅದಕ್ಕೆ ಗೂಷ ಎಂಬ ರೂಪವಾಗುತ್ತದೆ. **ಥಾಥಘಞ್**—(ಪಾ. ಸೂ. ೬-೨-೧೪೪) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

ಇಂದ್ರವಂತಃ—ಇಂದ್ರಃ ಅಸ್ಯ ಅಸ್ತಿ ಇತಿ ಇಂದ್ರವಾನ್ **ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್**—(ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ **ಮಾದುಪಧಾಯಾಶ್ಚ**—(ಪಾ. ಸೂ. ೮-೨-೯) ಎಂಬುದರಿಂದ ಅಕಾರದ ಪರದಲ್ಲಿ ಮತುಪ್ ಬಂದುದರಿಂದ ಮಕಾರಕ್ಕೆ ವತ್ವ. ಪ್ರಥಮಾಬಹುವಚನರೂಪ.

ಸ್ಯಾಮ—ಅಸ ಭುವಿ. ಧಾತು. **ವಿಧಿನಿಮಂತ್ರಣ** —(ಪಾ. ಸೂ. ೩-೩-೧೬೧) ಎಂಬುದರಿಂದ ಪ್ರಾರ್ಥನಾದಿ ಅರ್ಥ ತೋರುವಾಗ ಲಿಙ್. ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. ನಿತ್ಯಂಙಿತಃ

(ಪಾ. ಸೂ. ೩-೪-೯೯) ಎಂಬುದರಿಂದ ಸಕಾರಲೋಪ. **ಸಾರ್ವಧಾತುಕಮಪಿತ್** ಎಂಬುದರಿಂದ ಇದಕ್ಕೆ ಙಿತ್ವಾತಿ ದೇಶಬರುವುದರಿಂದ **ಶ್ನಸೋರಲ್ಲೋಪಃ**— (ಪಾ. ಸೂ. ೬-೪-೧೧೧) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ಲಿಙಿಗೆ ಯಾಸುಟಾಗಮ. **ಲಿಙಃ ಸಲೋಪೋಽನಂತ್ಯಸ್ಯ**—(ಪಾ. ಸೂ. ೭-೨-೭೯) ಎಂಬುದರಿಂದ ಸಕಾರಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ಅಭಿ+ಸ್ಯಾಮ ಎಂದಿರುವಾಗ **ಉಪಸರ್ಗಪ್ರಾದುರ್ಭ್ಯಾಮಸ್ತಿರ್ಯಚ್‌ಪರಃ**—(ಪಾ. ಸೂ. ೮-೩-೮೭) ಎಂಬುದರಿಂದ ಧಾತುವಿನ ಸಕಾರಕ್ಕೆ ಯಕಾರಪರವಾದುದರಿಂದ ಷತ್ವ ಬರುತ್ತದೆ.

**ಸರ್ವವೀರಾಃ**—ಸರ್ವೇ ವೀರಾಃ ಯೇಷಾಂ ತೇ ಸರ್ವವೀರಾಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಉಳಿದ ಶಬ್ದಗಳ ಪ್ರಕ್ರಿಯೆಯು ಈ ಹಿಂದೆ ವ್ಯಾಖ್ಯಾತಗಳಾಗಿವೆ. ॥ ೧೯ ॥

ನೂರ ಐದನೆಯ ಸೂಕ್ತವು ಸಮಾಪ್ತಿಯಾದುದು.



# ನೂರಆರನೆಯ ಸೂಕ್ತವು

**ಷೋಡಶೇಽನುವಾಕೇ ಸಪ್ತದಶಸೂಕ್ತಾನಿ । ತತ್ರೇಂದ್ರಮಿತಿ ಸಪ್ತರ್ಚಂ ಪ್ರಥಮಂ ಸೂಕ್ತಂ । ಅತ್ರಾನುಕ್ರಮ್ಯತೇ । ಇಂದ್ರಂ ಮಿತ್ರಂ ಸಪ್ತ ತ್ರಿಷ್ಟುಬಂತಮಿತಿ । ಅನುವರ್ತಮಾನತ್ವಾತ್ಕುತ್ಸ ಋಷಿಃ । ತ್ರಿತಸ್ತು ವಾಽವಿಶಿಷ್ಟತ್ವಾತ್ತತ್ರೈವ ವಿಕಲ್ಪಿತೋ ನಾನುವರ್ತತೇ । ಅಂತ್ಯಾ ತ್ರಿಷ್ಟುಪ್। ಶಿಷ್ಟಾಸ್ತ್ರಿಷ್ಟುಬಂತ-ಪರಿಭಾಷಯಾ ಜಗತ್ಯಃ । ವಿಶ್ವೇ ದೇವಾ ದೇವತೇತ್ಯುಕ್ತಂ । ವಿನಿಯೋಗೋ ಲೈಂಗಿಕಃ ॥**

ಅನುವಾಕವು—ಈ ಸೂಕ್ತದಿಂದ ಪ್ರಥಮ ಮಂಡಲದಲ್ಲಿ ಹದಿನಾರನೆಯ ಅನುವಾಕವು ಪ್ರಾರಂಭವಾಗುವುದು. ಈ ಅನುವಾಕದಲ್ಲಿ (೧೦೬-೧೧೫) ಹತ್ತು ಸೂಕ್ತಗಳಿರುವವು. ಅವುಗಳಲ್ಲಿ ಇಂದ್ರಂ ಮಿತ್ರಂ ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಏಳು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—ಇಂದ್ರಂ ಮಿತ್ರಂ

ಸಪ್ತ ತ್ರಿಷ್ಟುಬಂತಮಿತಿ ಎಂದು ಹೇಳಿರುವುದು. ಈ ಸೂಕ್ತಕ್ಕೆ ಕುತ್ಸನು ಋಷಿಯು. ಅಥವಾ ವಿಕಲ್ಪವಾಗಿ ತ್ರಿತನೂ ಋಷಿಯಾಗಬಹುದು. ವಿಶ್ವೇದೇವತೆಗಳೇ ದೇವತೆಯು. ಕೊನೆಯ ಋಕ್ಕು ತ್ರಿಷ್ಟುಪ್ ಛಂದಸ್ಕವು. ಉಳಿದ ಋಕ್ಕುಗಳು ಜಗತೀಛಂದಸ್ಸಿನವು. ವಿನಿಯೋಗವು ಲೈಂಗಿಕವು.

---:O:---

॥ ಓಂ ॥

## ಸೂಕ್ತ—೧೦೬

॥ ಮಂಡಲ—೧ ॥ ಅನುವಾಕ—೧೬ ॥ ಸೂಕ್ತ—೧೦೬ ॥

॥ ಅಷ್ಟಕ— ೧ ॥ ಅಧ್ಯಾಯ— ೭ ॥ ವರ್ಗ—೨೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೭ ॥

॥ ಋಷಿಃ—ಕುತ್ಸ ಆಂಗೀರಸಃ ॥

॥ ದೇವತಾ—ವಿಶ್ವೇದೇವಾಃ ॥

॥ ಛಂದಃ— ೧-೬ ಜಗತೀ । ೭ ತ್ರಿಷ್ಟುಪ್ ॥

ಸಂಹಿತಾಪಾಠಃ

ಇಂದ್ರ ಮಿತ್ರಂ ವರುಣಮಗ್ನಿಮೂತಯೇ ಮಾರುತಂ ಶರ್ಧೋ
ಅದಿತಿಂ ಹವಾಮಹೇ।
ರಥಂ ನ ದುರ್ಗಾದ್ವಸವಃ ಸುದಾನವೋ ವಿಶ್ವಸ್ಮಾನ್ನೋ ಅಂಹ-
ಸೋ ನಿಷ್ಪಿಪರ್ತನ ॥೧॥

ಪದಪಾಠಃ

ಇಂದ್ರಂ । ಮಿತ್ರಂ । ವರುಣಂ । ಅಗ್ನಿಂ । ಊತಯೇ । ಮಾರುತಂ । ಶರ್ಧಃ ।
ಅದಿತಿಂ । ಹವಾಮಹೇ ।

ರಥಂ । ನ । ದುಃऽಗಾತ್ । ವಸವಃ । ಸುऽದಾನವಃ । ವಿಶ್ವಸ್ಮಾತ್ । ನಃ । ಅಂ-
ಹಸಃ । ನಿಃ । ಪಿಪರ್ತನ ॥ ೧ ॥

ಸಾಯಣಭಾಷ್ಯಂ

ಊತಯೇ ರಕ್ಷಣಾಯ ವಯಮಿಂದ್ರಾದೀನ್ಮಾರುತಂ ಶರ್ಧೋ ಮರುತ್ಸಮೂಹರೂಪಂ ಬಲಂ ಚ ಹವಾಮಹೇ । ಆಹ್ವಯಾಮಹೇ । ವಸವೋ ನಿವಾಸಯಿತಾರಃ ಸುದಾನವಃ ಶೋಭನದಾನಾ ಇಂದ್ರಾದಯೋ ವಿಶ್ವಸ್ಮಾತ್ಸರ್ವಸ್ಮಾದಂಹಸಃ ಪಾಪಾನ್ನೋಽಸ್ಮಾನ್ನಿಷ್ಪಿಪರ್ತನ । ನಿರ್ಗಮಯ್ಯ ಪಾಲಯತ । ತತ್ರ ದೃಷ್ಟಾಂತಃ । ರಥಂ ನ ದುರ್ಗಾತ್ । ಗಂತುಮಶಕ್ಯಾನ್ನಿಮ್ನೋನ್ನತಾತ್ಸ್ಥಾನಾತ್ಸಾರಥಯೋ ಯಥಾ ರಥಂ ಪಾಲಯಂತಿ । ತದ್ವತ್ । ಪಿಪರ್ತನ । ಪೃ ಇತ್ಯೇಕೇ । ಲೋಟಿ ತಪ್ತನಪ್ತನಥನಾಶ್ಚೇತಿ ತಸ್ಯ ತನಬಾದೇಶಃ । ಪಿತ್ತ್ವೇನ ಙಿತ್ತ್ವಾಭಾವಾದ್ಗುಣಃ । ಅರ್ತಿಪಿಪರ್ತ್ಯೋಶ್ಚೇತ್ಯಭ್ಯಾಸಸ್ಯೇತ್ವಂ ॥

ಪ್ರತಿಪದಾರ್ಥ

(ವಯಂ—ನಾವು) । **ಊತಯೇ**—ರಕ್ಷಣಾರ್ಥವಾಗಿ । **ಇಂದ್ರಂ**—ಇಂದ್ರನನ್ನೂ । **ಮಿತ್ರಂ**—ಮಿತ್ರನನ್ನೂ । **ವರುಣಂ**—ವರುಣನನ್ನೂ । **ಅಗ್ನಿಂ**—ಅಗ್ನಿಯನ್ನೂ । **ಮಾರುತಂ**—ಮರುತ್ತುಗಳ । **ಶರ್ಧಃ**—ಸಂಘಾತ (ಸಮೂಹ) ರೂಪವಾದ ಶಕ್ತಿಯನ್ನೂ । **ಅದಿತಿಂ**—ಅದಿತಿಯನ್ನೂ । **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ । **ವಸವಃ**—ವಾಸಸ್ಥಾನವನ್ನು ದಯಪಾಲಿಸುವವರೂ । **ಸುದಾನವಃ**—ಅತ್ಯಂತ ಔದಾರ್ಯವುಳ್ಳವರೂ ಆದ ಇಂದ್ರಾದಿಗಳು । **ದುರ್ಗಾತ್**—ಇಕ್ಕಟ್ಟಾದ ಕಣಿವೆಯ ಮಾರ್ಗದಿಂದ । **ರಥಂ ನ** —(ಸಾರಥಿಯು) ರಥವನ್ನು ಸುರಕ್ಷಿತವಾಗಿ ಹೊಡೆದು ಹೊರಕ್ಕೆ ತರುವಂತೆ । **ನಃ**—ನಮ್ಮನ್ನು । **ವಿಶ್ವಸ್ಮಾತ್ ಅಂಹಸಃ**—ಸಮಸ್ತವಾದ ಪಾಪದಿಂದಲೂ । **ನಿಷ್ಪಿಪರ್ತನ**—ಮುಕ್ತರನ್ನಾಗಿಮಾಡಿ ರಕ್ಷಿಸಲಿ- ।

॥ ಭಾವಾರ್ಥ ॥

ನಮ್ಮ ರಕ್ಷಣಾರ್ಥವಾಗಿ ನಾವು ಇಂದ್ರನನ್ನೂ, ಮಿತ್ರನನ್ನೂ, ವರುಣನನ್ನೂ, ಅಗ್ನಿಯನ್ನೂ, ಮರುತ್ತುಗಳ ಸಂಘಾತರೂಪವಾದ ಶಕ್ತಿಯನ್ನೂ ಅದಿತಿಯನ್ನೂಪ್ರಾರ್ಥಿಸಿ ಕರೆಯುತ್ತೇವೆ. ವಾಸಸ್ಥಾನವನ್ನು ದಯಪಾಲಿಸುವವರೂ ಅತ್ಯಂತ ಔದಾರ್ಯವುಳ್ಳವರೂ ಆದ ಇಂದ್ರಾದಿಗಳು ಇಕ್ಕಟ್ಟಾದ ಕಣಿವೆಯ ಮಾರ್ಗದಿಂದ ಸಾರಥಿಯು ರಥವನ್ನು ಸುರಕ್ಷಿತವಾಗಿ ಹೊಡೆದು ಹೊರಕ್ಕೆ ತರುವಂತೆ ನಮ್ಮನ್ನು ಸಮಸ್ತವಾದ ಪಾಪದಿಂದಲೂ ಮುಕ್ತರನ್ನಾಗಿ ಮಾಡಿ ರಕ್ಷಿಸಲಿ.

## English Translation

We invoke, for our preservation, Indra, Mitra, Varuna, Agni, the might of the Maruts and Aditi; may they, who are bountiful and bestowers of dwelling, extricate us from all sins, as a chariot from a defile.

॥ ವಿಶೇಷವಿಷಯಗಳು ॥

**ಮಾರುತಂ ಶರ್ಧಃ**—ಶರ್ಧ ಶಬ್ದವು ಬಲ ನಾಮಗಳಲ್ಲಿ ಪಠಿತವಾಗಿದೆ. (ನಿ.೨-೯) ಇಲ್ಲಿ **ಮರುತ್ಸಮೂಹ ರೂಪಂ ಬಲಂ** । ಮರುತ್ತುಗಳ ಸಂಘಾತರೂಪವಾದ ಶಕ್ತಿಯೆಂದರ್ಥ.

**ಸಪ್ತ ಸಪ್ತ ಹಿ ಮಾರುತೋ ಗಣಸ್ತಸ್ಮಾನ್ಮಾರುತಃ ಸಪ್ತಕಪಾಲಃ ।**

(ಶ. ಬ್ರಾ. ೨-೫-೧-೧೩)

**ಸಪ್ತ ಸಪ್ತ ಹಿ ಮಾರುತೋ ಗಣಃ ಸರ್ವಮೇವೈತೇನ ರಥಂ ಪ್ರೀಣಾತಿ ।**

(ಶ. ಬ್ರಾ. ೫-೪-೩-೧೭)

ಇತ್ಯಾದಿ ವಾಕ್ಯಗಳಿಂದ ಮರುತ್ತುಗಳು ಯಾವಾಗಲೂ ಗುಂಪಾಗಿಯೇ ಇರುವರೆಂದು ತಿಳಿಯುತ್ತದೆ. ಆ ವಿಧವಾದ ಗುಂಪಿನಲ್ಲಿ ಒಂದು ವಿಧವಾದ ಚೈತನ್ಯವೂ ಶಕ್ತಿಯೂ ಸಹಜವಾಗಿರುವುದು. **ಶರ್ಧಃ** ಎನ್ನುವ ಪದವು ಆ ಸಂಘ ಶಕ್ತಿಯನ್ನು ಹೇಳುವ ಪರ್ಯಾಯಪದವಾಗಿದೆ. ಈ ಪದವು **ಸಕಾರಾಂತನಪುಂಸಕಲಿಂಗದಲ್ಲೂ** **ಅಕಾರಾಂತ** ಪುಲ್ಲಿಂಗದಲ್ಲೂ ಉಪಯೋಗಿಸಲ್ಪಟ್ಟಿದೆ. ೫-೫೬-೯, ೨-೩೦-೧೧, ೭-೫೬-೮ ಇತ್ಯಾದಿ ಸೂಕ್ತಗಳಲ್ಲಿ ಅಕಾರಾಂತ ವಾಗಿದೆ. ಇಲ್ಲಿಯೂ ೧-೩೭.೧ ಇತ್ಯಾದಿ ಇತರ ಕಡೆಗಳಲ್ಲಿಯೂ ಸಕಾರಾಂತವಾಗಿದೆ. ಈ ಪದವು ಸಾಧಾರಣವಾಗಿ ಮರುತ್ತುಗಳ ಪರವಾಗಿಯೇ ಉಪಯೋಗಿಸಲ್ಪಟ್ಟರೂ ಸಹ ಕೆಲವುಸಲ ಇತರ ದೇವತೆಗಳ ಗುಂಪನ್ನು ಹೇಳುತ್ತದೆ.

**ಶೃಣೋತು ನೋ ದೈವ್ಯಂ ಶರ್ಧೋ ಅಗ್ನಿಃ ಶೃಣ್ವಂತು ವಿಶ್ವೇ ಮಹಿಷಾ ಅಮೂರಾಃ ।**

(ಋ. ಸಂ. ೭-೪೪-೫)

**ಸ ಆ ವಹ ದೇವತಾತಿಂ ಯವಿಷ್ಠ ಶರ್ಧೋ ಯದದ್ಯ ದಿವ್ಯಂ ಯಜಾಸಿ ।**

(ಋ. ಸಂ. ೩-೧೯-೪)

**ಅಸ್ತು ಶ್ರೌಷಟ್ ಪುರೋ ಅಗ್ನಿಂ ಧಿಯಾ ದಧ ಆ ನು ತಚ್ಛರ್ಧೋ ದಿವ್ಯಂ ವೃಣೀಮಹ ಇಂದ್ರ-ವಾಯೂ ವೃಣೀಮಹೇ ।**

(ಋ. ಸಂ. ೧-೧೩೯-೧)

ಇವೆಲ್ಲ ದೈವಂ ಶರ್ಧಃ, ದಿವ್ಯಂ ಶರ್ಧಃ ಎಂದರೆ ದೇವತಾತ್ಮಕವಾದ ಸಂಘಶಕ್ತಿ ಎಂದರ್ಥವಾಗುತ್ತದೆ. ಹೀಗೆಯೇ ಬೇರೆ ಲೌಕಿಕವಾದ ಗುಂಪನ್ನು ನಿರ್ದೇಶಿಸುವಾಗಲೂ ಸಹ ಈ ಪದದ ಪ್ರಯೋಗವು ಇರುವುದು. ಉದಾಹರಣೆಗೆ—

**ತಂ ವಃ ಶರ್ಧಂ ರಥಾನಾಂ ತ್ವೇಷಂ ಗಣಂ ಮಾರುತಂ ನವ್ಯಸೀನಾಂ ।**

(ಋ. ಸಂ. ೫-೫೨-೧೦)

ಎಂಬ ಋಕ್ಕಿನಲ್ಲಿ ರಥಗಳ ಸಾಮೂಹಿಕ ಶಕ್ತಿಯೆಂದೂ,

**ಅವಾಸಾಂ ಮಘವಞ್ಜಹಿ ಶರ್ಧೋ ಯಾತುಮತೀನಾಂ ।**
(ಋ. ಸಂ. ೧-೧೩೩-೩)

ಎಂಬಲ್ಲಿ **ಆಯುಧಗಳ** ಅಥವಾ **ಹಿಂಸಾಕಾರಕರ** ಶಕ್ತಿಯೆಂದೂ ಅರ್ಥವಾಗುತ್ತದೆ. ಇಂತಹ ಕೆಲವೆಡೆಗಳಲ್ಲಿ ಇರತಕ್ಕ ಉದಾಹರಣೆಗಳನ್ನು ಬಿಟ್ಟರೆ **ಶರ್ಧ** ಶಬ್ದವು ಬರುವ ಉಳಿದ ಎಲ್ಲಾ ಸಂದರ್ಭಗಳಲ್ಲೂ ಸಹ **ಮಾರುತವಾದ** ಶರ್ಧವೆಂದೇ ಪ್ರಸಿದ್ಧವಾದ ಅರ್ಥವಿದೆ.

**ಸುದಾನವಃ—ಶೋಭನದಾನಾಃ ಇಂದ್ರಾದಯಃ ।** ಅತ್ಯಂತ ಉದಾರವಾಗಿ ದಾನಮಾಡತಕ್ಕ ಇಂದ್ರಾದಿಗಳು ಎಂದು ಅರ್ಥಮಾಡಿದ್ದಾರೆ. **ಸುದಾನವಃ** ಎಂಬ ಪದಕ್ಕೆ **ರಸಭರಿತರು** ಅಥವಾ ರಸದಾತರು ಎಂಬರ್ಥವೂ ಇರುತ್ತದೆ. ಈ ಪದವು ಮರುತ್ತುಗಳಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಾಗ ಕೆಲವುಕಡೆ **ರಸದಾತರು** ಎಂದರೆ ಉತ್ತಮ ವೃಷ್ಟ್ಯುದಕವನ್ನು ಸುರಿಸುವವರು ಎಂದಾಗಬಹುದು.

**ಪಿನ್ವಂತ್ಯಪೋ ಮರುತಃ ಸುದಾನವಃ ಪಯೋ ಘೃತವದ್ವಿದಥೇಷ್ವಾಭುವಃ ।**
(ಋ. ಸಂ. ೧-೬೪-೬)

ಇತ್ಯಾದಿ ಇನ್ನೂ ಅನೇಕ ಕಡೆಗಳಲ್ಲಿ ಮರುತ್ತುಗಳಿಗೆ ವಿಶೇಷಣವಾಗಿ ವೃಷ್ಟ್ಯುದಕವನ್ನು ಪ್ರಾರ್ಥಿಸುತ್ತಿರುವುದರಿಂದ ಈ ಅರ್ಥವಾಗಬಹುದು. (ಮರುತ್ತುಗಳಿಗೆ **ಜೀರದಾನು** ಎಂಬ ವಿಶೇಷಣವೂ ಉಂಟು). ಈ ಎರಡರಲ್ಲಿ ಯಾವ ಅರ್ಥವಾದರೂ ಸಹ ದೇವತೆಗಳ ಔದಾರ್ಯವನ್ನು ತೋರಿಸುತ್ತದೆ. ಆದರೆ ಉದಾರವಾದ ದಾನವು ದೇವತೆಗಳ ಕಾರ್ಯವೇ ಅಲ್ಲದೆ ಯಜ್ಞಕರ್ತರ ಪರವಾಗಿಯೂ ಆಗಿರಬಹುದು.

**ಇಷಂ ಪೃಂಚಂತಾ ಸುಕೃತೇ ಸುದಾನವ ಆ ಬರ್ಹಿಃ ಸೀದತಂ ನರಾ ।**
(ಋ. ಸಂ. ೧-೪೭-೮)

**ಸೇದಗ್ನೇ ಅಸ್ತು ಸುಭಗಃ ಸುದಾನುರ್ಯಸ್ತ್ವಾ ನಿತ್ಯೇನ ಹವಿಷಾ ಯ ಉಕ್ಥೈಃ ।**
(ಋ. ಸಂ. ೪-೪-೭)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಶ್ರೇಷ್ಠವಾದ ದಾನಿಗಳೆಂದು ಯಜ್ಞಕರ್ತರಿಗೆ ವಿಶೇಷಣವಾಗಿದೆ. ೧೦-೪೩-೭ ಇತ್ಯಾದಿ ಋಕ್ಕುಗಳಲ್ಲಿ **ದಾನು** ಶಬ್ದಕ್ಕೆ ಸೋಮರಸವೆಂದೂ ಅರ್ಥವಾಗಬಹುದು. ಇದಲ್ಲದೆ—

**ಉತ್ತರಾ ಸೂರಧರಃ ಪುತ್ರ ಆಸೀದ್ದಾನುಃ ಶಯೇ ಸಹವತ್ಸಾ ನ ಧೇನುಃ ।**
(ಋ. ಸಂ. ೧-೩೨-೯)

**ಸಹದಾನುಂ ಪುರುಹೂತ ಕ್ಷಿಯಂತಮಹಸ್ತಮಿಂದ್ರ ಸಂ ಪಿಣಕ್ಕುಣಾರುಂ ।**
(ಋ. ಸಂ. ೩-೩೦-೮)

ಇತ್ಯಾದಿ ಸೂಕ್ತಗಳಲ್ಲಿ ದಾನುವೆಂದರೆ ವೃತ್ರಮಾತೆಯಾದ ಅಸುರಸ್ತ್ರೀಯೆಂದರ್ಥ. ಆದರೆ **ಸುದಾನವಃ** ಎಂದಿರುವಾಗ ಉದಾರವಾದ ದಾನಿಗಳು ಎಂದರ್ಥವಿದ್ದು ಪ್ರಕೃತವಾದ ಸೂಕ್ತದಲ್ಲಿ ಎಲ್ಲಾ ದೇವತೆಗಳಿಗೂ ವಿಶೇಷಣವಾಗಿ ಅವರ ಔದಾರ್ಯವನ್ನು ತೋರಿಸಿದೆ.

ವ್ಯಾಕರಣಪ್ರಕ್ರಿಯೆ

**ಊತಯೇ—ಊತಿಯೂತಿಜೂತಿ**—(ಪಾ. ಸೂ. ೩-೩-೯೭) ಎಂಬುದರಿಂದ ಉದಾತ್ತವಾದ ಕ್ತಿನ್ನಂತದೊಡನೆ ನಿಪಾತಿತವಾಗಿದೆ. ಚತುರ್ಥೀಏಕವಚನರೂಪ.

**ಹವಾಮಹೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಇದಕ್ಕೆ ಲಡುತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. **ಟಿತಆತ್ಮ**—ಎಂಬುದರಿಂದ ಟಿಗೆ ಏತ್ವ. **ಬಹುಲಂ ಛಂದಸಿ**—ಎಂಬುದರಿಂದ ಶಪ್ ಪರವಾದಾಗ ಧಾತುವಿಗೆ ಸಂಪ್ರಸಾರಣ. ಪೂರ್ವರೂಪದಿಂದ ಉಕಾರವಿರುವಾಗ ಅದಕ್ಕೆ ಶಪ್ ನಿಮಿತ್ತವಾಗಿ ಗುಣ. ಅವಾದೇಶ. ಅದಂತಾಂಗವಾದುದರಿಂದ **ಅತೋ ದೀರ್ಘೋ ಯಞಿ**—(ಪಾ. ಸೂ. ೭-೩-೧೦೧) ಎಂಬುದರಿಂದ ಪ್ರತ್ಯಯನಿಮಿತ್ತವಾಗಿ ಅದಕ್ಕೆ ದೀರ್ಘ. ತಿಙಂತನಿಘಾತಸ್ವರ ಬರುತ್ತದೆ.

**ದುರ್ಗಾತ್**—ದುಃಖೇನ ಗಚ್ಛತಿ ಅತ್ರ ಇತಿ ದುರ್ಗಃ. ಗಮ್ಲೃ ಗತೌ ಧಾತು ಅಧಿಕರಣಾರ್ಥದಲ್ಲಿ **ಸುದುರೋರಧಿಕರಣೇ**—(ವಾ. ೨೧೧೬) ಎಂಬುದರಿಂದ ಡ ಪ್ರತ್ಯಯ. ಡಿತ್ವ ಸಾಮರ್ಥ್ಯದಿಂದ ಧಾತುವಿನ ಟಿಗೆ (ಅಮ್) ಲೋಪ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ವಸವಃ**—ವಸ ನಿವಾಸೇ ಧಾತು. **ಶೄಸ್ವೃಸ್ನಿಹಿತ್ರ್ಯಸಿ**—(ಉ. ಸೂ. ೧-೧೦) ಎಂಬುದರಿಂದ ಉ ಪ್ರತ್ಯಯ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯ ಚ**—(ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಪಿಪರ್ತನ**—ಪೄ ಪಾಲನಪೂರಣಯೋಃ ಧಾತು. ಪೄ ಇತ್ಯೇಕೇ. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ಲಙ್ವದ್ಭಾವವಿರುವುದರಿಂದ **ತಸ್ಥಸ್ಥ**—(ಪಾ. ಸೂ. ೩-೪-೧೦೧) ಎಂಬುದರಿಂದ ತಾದೇಶ. **ಜುಹೋತ್ಯಾದಿಭ್ಯಃ ಶ್ಲುಃ**—(ಪಾ. ಸೂ. ೨-೪-೭೫) ಎಂಬುದರಿಂದ ಶ್ಲುವಿಕರಣ. **ಶ್ಲೌ**—ಎಂಬುದರಿಂದ ಧಾತುವಿಗೆ ದ್ವಿತ್ವ. **ಅರ್ತಿ ಪಿಪರ್ತ್ಯೋಶ್ಚ**—(ಪಾ. ಸೂ. ೭-೪-೭೭) ಎಂಬುದರಿಂದ ಅಭ್ಯಾಸಕ್ಕೆ ಇತ್ವ. **ತಪ್ತನಪ್ತನಥನಾಶ್ಚ**—(ಪಾ. ಸೂ. ೭-೧-೪೫) ಎಂಬುದರಿಂದ ಪ್ರತ್ಯಯಕ್ಕೆ ತನಬಾದೇಶ. ಅದು ಪಿತ್ತಾದುದರಿಂದ ಙಿತ್ವಾತಿದೇಶದಲ್ಲಿ ಅಪಿತ್ ಎಂಬುದರಿಂದ ಙಿತ್ವಬಾರದಿರುವುದರಿಂದ ಅದನ್ನು ನಿಮಿತ್ತೀಕರಿಸಿ **ಸಾರ್ವಧಾತುಕಾರ್ಧ**—ಎಂಬುದರಿಂದ ಧಾತುವಿನ ಇಕಿಗೆ ಗುಣ. **ಉರಣ್ರಪರಃ**—ಎಂಬುದರಿಂದ ರಪರವಾಗಿ ಬರುತ್ತದೆ. ಪಿಪರ್ತನ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧ ॥

ಸಂಹಿತಾಪಾಠಃ

ತ ಆದಿತ್ಯಾ ಆ ಗತಾ ಸರ್ವತಾತಯೇ ಭೂತ ದೇವಾ ವೃತ್ರ-
ತೂರ್ಯೇಷು ಶಂಭುವಃ ।
ರಥಂ ನ ದುರ್ಗಾದ್ವಸವಃ ಸುದಾನವೋ ವಿಶ್ವಸ್ಮಾನ್ನೋ ಅಂಹ-
ಸೋ ನಿಷ್ಪಿಪರ್ತನ ॥ ೨ ॥

॥ ಪದಪಾಠಃ ॥

ತೇ । ಆದಿತ್ಯಾಃ । ಆ । ಗತ । ಸರ್ವಽತಾತಯೇ । ಭೂತ । ದೇವಾಃ । ವೃತ್ರಽ-
-ತೂರ್ಯೇಷು । ಶಂಽಭುವಃ ।
ರಥಂ । ನ । ದುಃಽಗಾತ್ । ವಸವಃ । ಸುಽದಾನವಃ । ವಿಶ್ವಸ್ಮಾತ್ । ನಃ । ಅಂ-
ಹಸಃ । ನಿಃ । ಪಿಪರ್ತನ ॥ ೨ ॥

ಸಾಯಣಭಾಷ್ಯಂ

ಹೇ ಆದಿತ್ಯಾ ಅದಿತೇಃ ಪುತ್ರಾ ದೇವಾಃ । ತೇ ಯೂಯಂ ಸರ್ವತಾತಯೇ ಸರ್ವೈರ್ವೀರಪುರುಷೈಸ್ತತಾಯ ವಿಸ್ತಾರಿತಾಯ ಯುದ್ಧಾಯ । ಯುದ್ಧೇಽಸ್ಮಾಕಂ ಸಾಹಾಯ್ಯಂ ಕರ್ತುಮಿತ್ಯರ್ಥಃ । ಆ ಗತ । ಆಗಚ್ಛತ । ಅಪಿ ಚ ವೃತ್ರತೂರ್ಯೇಷು । ಸಂಗ್ರಾಮನಾಮೈತತ್ । ಸಂಗ್ರಾಮೇಷು ಶಂಭುವಃ ಸುಖಸ್ಯ ಭಾವಯಿತಾರೋ ಭೂತ । ಭವತ ॥ ಗತ । ಗಮೇರ್ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ ॥

॥ ಪ್ರತಿಪದಾರ್ಥ ।

ಆದಿತ್ಯಾಃ—ಅದಿತಿಪುತ್ರರಾದ । ದೇವಾಃ—ಎಲ್ಲ ದೇವತೆಗಳೇ । ತೇ—ಆ ನೀವು । ಸರ್ವತಾತಯೇ—ಸಕಲವೀರಪುರುಷರಿಂದಲೂ ವಿಸ್ತೃತವಾದ ಯುದ್ಧಕ್ಕೆ । ಆ ಗತ—(ನಮ್ಮ ಸಹಾಯಕ್ಕಾಗಿ) ಬನ್ನಿರಿ. (ಮತ್ತು) । ವೃತ್ರತೂರ್ಯೇಷು—ಯುದ್ಧಗಳಲ್ಲಿ । ಶಂಭುವಃ—(ನಮಗೆ) ಸುಖವನ್ನುಂಟುಮಾಡುವವರಾಗಿ । ಭೂತ—

ಆಗಿರಿ । ದುರ್ಗಾತ್—ಇಕ್ಕಟ್ಟಾದ ಕಣಿವೆಯ ಮಾರ್ಗದಿಂದ । ರಥಂ ನ—(ಸಾರಥಿಯು) ರಥವನ್ನು ಸುರಕ್ಷಿತವಾಗಿ ಹೊಡೆದುತರುವಂತೆ । ವಸವಃ—ವಾಸಸ್ಥಾನವನ್ನು ದಯಪಾಲಿಸುವವರೂ । ಸುದಾನವಃ—ಅತ್ಯಂತ ಉದಾರಿಗಳೂ ಆದ ಇಂದ್ರಾದಿಗಳು । ನಃ—ನಮ್ಮನ್ನು । ವಿಶ್ವಸ್ಮಾತ್ ಅಂಹಸಃ—ಸಮಸ್ತವಾದ ಪಾಪದಿಂದಲೂ । ನಿಷ್ಪಿಪರ್ತನ—ಬಿಡುಗಡೆಯನ್ನು ಮಾಡಿ ರಕ್ಷಿಸಲಿ. ।

ಭಾವಾರ್ಥ

ಅದಿತಿಪುತ್ರರಾದ ಎಲೈ ದೇವತೆಗಳೇ, ನೀವು ಸಕಲವೀರರೊಡನೆಯೂ ಸಕಲ ವೀರಪುರುಷರಿಂದಲೂ ಕೂಡಿಕೊಂಡು ವಿಸ್ತೃತವಾದ ಯುದ್ಧದಲ್ಲಿ ನಮ್ಮ ಸಹಾಯಕ್ಕಾಗಿ ಬನ್ನಿರಿ. ಮತ್ತು ಯುದ್ಧಗಳಲ್ಲಿ ನಮಗೆ ಸುಖವನ್ನುಂಟುಮಾಡುವವರಾಗಿ ಆಗಿರಿ. ಇಕ್ಕಟ್ಟಾದ ಕಣಿವೆಯ ಮಾರ್ಗದಿಂದ ಸಾರಥಿಯು ರಥವನ್ನು ಸುರಕ್ಷಿತವಾಗಿ ಹೊಡೆದುಹೊರಕ್ಕೆ ತರುವಂತೆ ವಾಸಸ್ಥಾನವನ್ನು ದಯಪಾಲಿಸುವವರೂ, ಅತ್ಯಂತ ಉದಾರವಾಗಿ ದಾನಮಾಡುವವರೂ ಆದ ಇಂದ್ರಾದಿಗಳು ನಮ್ಮನ್ನು ಸಮಸ್ತವಾದ ಪಾಪದಿಂದಲೂ ಬಿಡಿಸಿ ರಕ್ಷಿಸಲಿ.

English Translation

Sons of Aditi, come with all (your hosts) to battle; be to us the cause of happiness in combats, and may they, who are bountiful and bestowers of dwellings, extricate us from all sin as a chariot from a defile.

॥ ವಿಶೇಷವಿಷಯಗಳು ॥

ಹಿಂದಿನ ಸೂಕ್ತದಲ್ಲಿ ಇಂದ್ರಾದಿದೇವತೆಗಳೊಡನೆ ಅದಿತಿಯನ್ನೂ ಈ ಸೂಕ್ತದಲ್ಲಿ ಸಕಲರಾದ ಆದಿತ್ಯರನ್ನೂ ರಕ್ಷಣೆಗಾಗಿ ಕರೆದು ಪ್ರಾರ್ಥಿಸಿದೆ. ಇಲ್ಲಿ ಆದಿತ್ಯಾಃ ಎಂದರೆ ಅದಿತೇಃ ಪುತ್ರಾಃ ದೇವಾಃ ಅದಿತಿ ಪುತ್ರರಾದ ದೇವತೆಗಳೆಂದರ್ಥ. ಅದಿತಿಯು ಸ್ವತಂತ್ರವಾದ ದೇವತೆಯೆಂಬುದು ಪ್ರಸಿದ್ಧವಾದ ವಿಷಯ. (ಆದರೆ ಕೆಲವೆಡೆಗಳಲ್ಲಿ ಇತರ ದೇವತೆಗಳಿಗೆ ವಿಶೇಷಣವಾಗಿ ಈ ಪದವು ಉಪಯೋಗಿಸಲ್ಪಟ್ಟಾಗ ಆ ಸನ್ನಿವೇಶಕ್ಕನುಗುಣವಾಗಿ ಇದರ ಅರ್ಥವನ್ನು ತಿಳಿಯಬೇಕು). ಈ ದೇವತೆಯ ಸ್ವರೂಪವು ಅನೇಕವಾಗಿರುವುದರಿಂದ ಒಂದೊಂದು ಕಡೆ ಒಂದೊಂದು ವಿಧವಾಗಿ ವರ್ಣಿಸಿದೆ. ಈ ವಿಷಯವನ್ನೂ ಅದಿತಿಗೂ ಆದಿತ್ಯರಿಗೂ ಇರತಕ್ಕ ಸಂಬಂಧವನ್ನೂ ಆದಿತ್ಯರ ಸಂಖ್ಯೆಯೆಷ್ಟು ಎಂಬ ವಿಷಯವನ್ನೂ ಸಹ ಇದೇ ಭಾಗದ ಪೀಠಿಕಾಪ್ರಕರಣದಲ್ಲಿ ವಿಶದವಾಗಿ ವಿವರಿಸಿದೆ.

ಆದಿತ್ಯಾಃ—ಆದಿತ್ಯಃ ಕಸ್ಮಾದಾದತ್ತೇ ರಸಾನಾದತ್ತೇ ಭಾಸಂ ಜ್ಯೋತಿಷಾಮಾದೀಪ್ತೋ ಭಾಸಾ ಇತಿ ವಾದಿತೇಃ ಪುತ್ರ ಇತಿ ವಾ । (ನಿ. ೨-೧೩) ರಸಗಳನ್ನು ಸ್ವೀಕರಿಸುತ್ತಾನೆ ( ಹೀರುತ್ತಾನೆ ) ಎಂದಾಗಲಿ, ಜ್ಯೋತಿರ್ಮಂಡಲಗಳ ಪ್ರಕಾಶವನ್ನು ಸ್ವೀಕರಿಸುತ್ತಾನೆ (ತನ್ನ ಕಾಂತಿಯಿಂದ ಮರೆಸುತ್ತಾನೆ) ಎಂದಾಗಲಿ ಅಥವಾ ಅದಿತಿ ಪುತ್ರನೆಂದಾಗಲಿ ಆದಿತ್ಯಶಬ್ದಕ್ಕೆ ಅರ್ಥವಾಗುತ್ತದೆ. ಸೂರ್ಯನಿಗೆ ಪರ್ಯಾಯಶಬ್ದವಾದವುಗಳೆಲ್ಲಾ ಇವುಗಳಲ್ಲಿ ಯಾವ ಅರ್ಥವನ್ನಾದರೂ ಹೇಳಬಹುದು. ಆದರೆ ಈ ಸೂಕ್ತದಲ್ಲಿ ಆದಿತ್ಯಾಃ ಎಂದು ಬಹುವಚನವಿರುವುದರಿಂದ ಇಲ್ಲಿ ಆದಿತ್ಯಶಬ್ದವು ಸೂರ್ಯನಿಗೆ ಅಲ್ಲದೇ ಇತರ ದೇವತೆಗಳಿಗೂ ಅನ್ವಯಿಸುತ್ತದೆ. ನಿರುಕ್ತಕಾರರೇ ಇದನ್ನು ವಿವರಿ

ಸುತ್ತಾ ಏವಮನ್ಯಾಸಾಮಪಿ ದೇವತಾನಾಮಾದಿತ್ಯಪ್ರವಾದಾಃ ಸ್ತುತಯೋ ಭವಂತಿ ತದ್ಯಥೈತನ್ಮಿತ್ರಸ್ಯ ವರುಣಸ್ಯಾರ್ಯಮ್ಣೋ ದಕ್ಷಸ್ಯ ಭಗಸ್ಯಾಂಶಸ್ಯೇತಿ (ನಿ. ೨-೧೩). ಆದಿತ್ಯಪರವಾದ ಸ್ತುತಿಗಳು ಮಿತ್ರನಿಗೂ ವರುಣನಿಗೂ, ಅರ್ಯಮನಿಗೂ, ದಕ್ಷನಿಗೂ, ಭಗನಿಗೂ, ಅಂಶನಿಗೂ ಅನ್ವಯಿಸುತ್ತವೆಂದು ತಿಳಿಸಿ ಉದಾಹರಣೆಗಳನ್ನೂ ಕೊಡುತ್ತಾರೆ. ಋಕ್ಸಂಹಿತೆಯಲ್ಲಿ ಆದಿತ್ಯಪರವಾದ

ಇಮಾ ಗಿರ ಆದಿತ್ಯೇಭ್ಯೋ ಘೃತಸ್ನೂಃ ಸನಾದ್ರಾಜಭ್ಯೋ ಜುಹ್ವಾ ಜುಹೋಮಿ ।
ಶೃಣೋತು ಮಿತ್ರೋ ಅರ್ಯಮಾ ಭಗೋ ನಸ್ತುವಿಜಾತೋ ವರುಣೋ ದಕ್ಷೋ ಅಂಶಃ ॥
(ಋ. ಸಂ. ೨-೨೭-೧)

ಎಂಬ ಋಕ್ಕಿನಲ್ಲಿ ಮಿತ್ರ, ಅರ್ಯಮ, ಭಗ, ವರುಣ, ದಕ್ಷ ಮತ್ತು ಅಂಶ ಎಂಬುದಾಗಿ ಆದಿತ್ಯರು ಆರು ಮಂದಿಯೆಂದು ವಿವರಿಸಿದೆ.

ಅಷ್ಟೌ ಪುತ್ರಾಸೋ ಅದಿತೇರ್ಯೇ ಜಾತಾಸ್ತನ್ವ೧ ಸ್ಪರಿ ।
(ಋ. ಸಂ. ೧೦-೭೨-೮)

ಎಂಬ ಋಕ್ಕಿನಲ್ಲಿ ಅದಿತಿಪುತ್ರರು ಎಂಟುಮಂದಿಯೆಂದು ಸೂಚಿಸಿದೆ. ಈಗ ರೂಢಿಯಲ್ಲಿರುವ ದ್ವಾದಶಾದಿತ್ಯರ ಸಂಖ್ಯೆಯು ಹನ್ನೆರಡಕ್ಕೆ ಹೇಗೆ ಬೆಳೆಯಿತೆಂದು ಉದಾಹರಣೆಗಳೊಡನೆ ಪೀಠಿಕಾಪ್ರಕರಣದಲ್ಲಿ ತಿಳಿಸಿದೆ ಅನೇಕ ಕಡೆಗಳಲ್ಲಿ ಅದಿತಿಯನ್ನೂ ಆದಿತ್ಯರನ್ನೂ ಒಟ್ಟಿಗೆ ಸೇರಿಸಿ ಸಹಾಯಕ್ಕಾಗಿ ಪ್ರಾರ್ಥಿಸಿದೆ.

ಇಂದ್ರ ಇಂದ್ರಿಯೈರ್ಮರುತೋ ಮರುದ್ಭಿರಾದಿತ್ಯೈರ್ನೋ ಅದಿತಿಃ ಶರ್ಮ ಯಂಸತ್ ।
(ಋ. ಸಂ. ೧-೧೦೭-೨)

ಆದಿತ್ಯೈರ್ನೋ ಅದಿತಿಃ ಶೃಣೋತು ಯಚ್ಛಂತು ನೋ ಮರುತಃ ಶರ್ಮ ಭದ್ರಂ ।
(ಋ. ಸಂ. ೩-೫೪-೨೦)

ವಿಶ್ವ ಆದಿತ್ಯಾ ಅದಿತೇ ಸಜೋಷಾ ಅಸ್ಮಭ್ಯಂ ಶರ್ಮ ಬಹುಲಂ ವಿ ಯಂತ ।
(ಋ. ಸಂ. ೬-೫೧-೫)

ತಾಁ ಆ ವಿವಾಸ ನಮಸಾ ಸುವೃಕ್ತಿಭಿರ್ಮಹೋ ಆದಿತ್ಯಾಁ ಅದಿತಿಂ ಸ್ವಸ್ತಯೇ ।
(ಋ. ಸಂ. ೧೦-೬೩-೫)

ಇತ್ಯಾದಿ ಅನೇಕ ಋಕ್ಕುಗಳಲ್ಲಿ ಅದಿತಿಯನ್ನು ಅವಳ ಪುತ್ರರಾದ ಆದಿತ್ಯರನ್ನು ಸಹ ಜೊತೆಯಾಗಿ ಸೇರಿಸಿ ಅವರ ರಕ್ಷಣೆಯನ್ನು ಅವರಿಂದ ಲಭಿಸಬೇಕಾದ ಸೌಖ್ಯವನ್ನು ಅಪೇಕ್ಷಿಸಿ ಪ್ರಾರ್ಥಿಸಿದೆ.

**ಸರ್ವತಾತಯೇ**—ಸರ್ವೈರ್ವೀರಪುರುಷೈಸ್ತತಾಯ ವಿಸ್ತಾರಿತಾಯ ಯುದ್ಧಾಯ । ಸಕಲ ವೀರಪುರುಷರೂ ಸೇರಿ ವಿಸ್ತರಿಸಿರುವ ಯುದ್ಧಕ್ಕಾಗಿ ಎಂದರೆ ಯುದ್ಧೇ ಅಸ್ಮಾಕಂ ಸಾಹಾಯ್ಯಂ ಕರ್ತುಂ ಯುದ್ಧದಲ್ಲಿ ನಮಗೆ ಸಹಾಯಮಾಡುವುದಕ್ಕಾಗಿ ಎಂದು ಇಲ್ಲಿ ಅರ್ಥವಾಗುತ್ತದೆ. ಸಾಧಾರಣವಾಗಿ, **ಸರ್ವತಾತಾ** ಎನ್ನುವ ಪದವು ಯಜ್ಞಪರ್ಯಾಯವಾಗಿಯೇ ಉಪಯೋಗಿಸಲ್ಪಟ್ಟಿದೆ. ಉದಾಹರಣೆಗೆ—

ದೇವಾನಾಂ ದೂತಃ ಪುರುಧ ಪ್ರಸೂತೋಽನಾಗಾನ್ನೋ ವೋಚತು ಸರ್ವತಾತಾ ।
(ಋ. ಸಂ. ೩-೫೪-೧೯)

ಶಶತೇಮಂ ವೇಶ್ಯಂ ಸರ್ವತಾತಾ ದಿವೋದಾಸಮತಿಥಿಗ್ವಂ ಯದಾವಂ ।
(ಋ. ಸಂ. ೪-೨೬-೩)

ರಾಯೇ ಮಿತ್ರಾವರುಣಾ ಸರ್ವತಾತೇಳೇ ತೋಕಾಯ ತನಯಾಯ ಶಂ ಯೋಃ ।
(ಋ. ಸಂ. ೫-೬೯-೩)

ಎಂಬ ಋಕ್ಕುಗಳಲ್ಲಿಯೂ ಹೀಗೆಯೇ ೬-೧೫-೧೮ ; ೭-೧೮-೧೯ ಇತ್ಯಾದಿಋಕ್ಕುಗಳಲ್ಲಿಯೂ ಸಹ **ಸರ್ವತಾತಾ** ಎಂಬ ಶಬ್ದವು ಯಜ್ಞಪರ್ಯಾಯವಾಗಿಯೇ ಉಪಯೋಗಿಸಲ್ಪಟ್ಟಿದೆ. ನಿರುಕ್ತಕಾರರು ಈ ಶಬ್ದಕ್ಕೆ ನಿರ್ವಚನವನ್ನು ಮಾಡುವಾಗ **ಸರ್ವಾಸು ಕರ್ಮತತಿಷು** ಸಕಲ ಯಜ್ಞಗಳ ಸಮೂಹದಲ್ಲಿ ಎಂದು ಅರ್ಥವನ್ನು ಮಾಡಿದ್ದಾರೆ. (ನಿ. ೧೧-೨೪) ಪ್ರಕೃತವಾದ ಈ ಋಕ್ಕಿನಲ್ಲಿಯೂ ಸಹ ಸ್ಕಂದಸ್ವಾಮಿಗಳು **ಸರ್ವಸ್ಮೈ ಅಸ್ಮದ್ಯಾಗಾಯ ಅಥವಾ ಸರ್ವಸ್ಮೈ ಯಾಗಸಂತತ್ಯೈ** ಎಂದೇ ಅರ್ಥಮಾಡಿದ್ದಾರೆ ಆದರೆ, **ವೃತ್ರತೂರ್ಯೇಷು** ಎಂಬುದು ಸಂಗ್ರಾಮ ಸಂಬಂಧವಾದುದರಿಂದ ಸಾಯಣರು **ಯುದ್ಧಾಯ** ಎಂದು ಹೇಳುವುದೂ ಉಚಿತವಾಗಬಹುದು.

**ವೃತ್ರತೂರ್ಯೇಷು—ವೃತ್ರತೂರ್ಯ**ಶಬ್ದವು **ಸಂಗ್ರಾಮ**ನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯)

॥ ವ್ಯಾಕರಣಪ್ರಕ್ರಿಯಾ ॥

**ಆದಿತ್ಯಾಃ**—ಅದಿತೇಃ ಅಪತ್ಯಾನಿ ಪುಮಾಂಸಃ ಆದಿತ್ಯಾಃ **ದಿತ್ಯದಿತ್ಯಾದಿತ್ಯ**—(ಪಾ. ಸೂ. ೪-೧-೮೫) ಎಂಬುದರಿಂದ ಣ್ಯತ್‌ಪ್ರತ್ಯಯ. **ತದ್ಧಿತೇಷ್ವಚಾಮಾದೇಃ**—(ಪಾ. ಸೂ ೭-೨-೧೧೭) ಎಂಬುದರಿಂದ ಆದಿವೃದ್ಧಿ. **ಯಸ್ಯೇತಿ ಚ**—(ಪಾ. ಸೂ. ೬-೪-೧೪೮) ಎಂಬುದರಿಂದ ಅಕಾರಲೋಪ. **ಆಮಂತ್ರಿತಸ್ಯ ಚ**—(ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಗತ**—ಗಮ್ಲೃ ಗತೌ ಧಾತು. ಲೋಟ್ ಮಧ್ಯಮಪುರುಷಬಹುವಚನದಲ್ಲಿ ಲಙ್ವದ್ಭಾವದಿಂದ ಥಕ್ಕೆ ತಾದೇಶ. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಲುಕ್. ಆದುದರಿಂದ ಛತ್ವ ಬರುವುದಿಲ್ಲ. **ಸಾರ್ವಧಾತುಕಮಪಿತ್**—ಎಂಬುದರಿಂದ ಪ್ರತ್ಯಯಕ್ಕೆ ಙಿತ್ತ್ವವಿರುವುದರಿಂದ **ಅನುದಾತ್ತೋಪದೇಶವ**—(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಅನುನಾಸಿಕ ಮಕಾರಕ್ಕೆ ಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ.

**ಭೂತ**— ಭೂ ಸತ್ತಾಯಾಂ ಧಾತು. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ತಾದೇಶ. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಲುಕ್. ಪ್ರತ್ಯಯಕ್ಕೆ ಙಿತ್ತ್ವವಿರುವುದರಿಂದ ತನ್ನಿಮಿತ್ತವಾಗಿ ಧಾತುವಿಗೆ ಗುಣ ಬರುವುದಿಲ್ಲ.

**ಶಂಭುವಃ**—ಭೂ ಸತ್ತಾಯಾಂ ಧಾತು. ಅಂತರ್ಭಾವಿತ ಣ್ಯರ್ಥಕವಾದ ಈ ಧಾತುವಿಗೆ ಶಮ್ ಉಪಪದವಾಗಿರುವಾಗ ಕ್ವಿಪ್ ಚ—(ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್. ಪ್ರಥಮಾಬಹುವಚನಾಂತರೂಪ.

। ಸಂಹಿತಾಪಾಠಃ ।

ಅವಂತು ನಃ ಪಿತರಃ ಸುಪ್ರವಾಚನಾ ಉತ ದೇವೀ ದೇವಪುತ್ರೇ
ಋತಾವೃಧಾ।
ರಥಂ ನ ದುರ್ಗಾದ್ವಸವಃ ಸುದಾನವೋ ವಿಶ್ವಸ್ಮಾನ್ನೋ ಅಂಹ-
ಸೋ ನಿಷ್ಪಿಪರ್ತನ ॥ ೩ ॥

ಪದಪಾಠಃ

ಅವಂತು । ನಃ । ಪಿತರಃ । ಸುಽಪ್ರವಾಚನಾಃ । ಉತ । ದೇವೀ ಇತಿ । ದೇವ-
ಪುತ್ರೇ ಇತಿ ದೇವಽಪುತ್ರೇ । ಋತಽವೃಧಾ ।
ರಥಂ । ನ । ದುಃಽಗಾತ್ । ವಸವಃ । ಸುಽದಾನವಃ । ವಿಶ್ವಸ್ಮಾನ್ । ನಃ । ಅಂ-
ಹಸಃ । ನಿಃ । ಪಿಪರ್ತನ ॥ ೩ ॥

ಸಾಯಣಭಾಷ್ಯಂ

ನೋಽಸ್ಮಾನ್ಪಿತರೋಽಗ್ನಿಷ್ವಾತ್ತಾದಯೋಽವಂತು । ರಕ್ಷಂತು । ಕೀದೃಶಾಃ । ಸುಪ್ರವಾಚನಾಃ । ಸುಖೇನ ಪ್ರವಕ್ತುಂ ಸ್ತೋತುಂ ಶಕ್ಯಾಃ । ಉತಾಪಿ ಚ ದೇವಪುತ್ರೇ ದೇವಾಃ ಸರ್ವೇ ಪುತ್ರಸ್ಥಾನೀಯಾ ಯಯೋಸ್ತೇ ಋತಾವೃಧಾ ಋತಸ್ಯ ಸತ್ಯಸ್ಯ ಯಜ್ಞಸ್ಯ ವಾ ವರ್ಧಯಿತ್ರ್ಯೌ ದೇವೀ ದೇವನಾದಿ-ಗುಣಯುಕ್ತೇ ದ್ಯಾವಾಪೃಥಿವ್ಯಾವಸ್ಮಾನ್ರಕ್ಷತಾಂ । ಅನ್ಯತ್ಸಮಾನಂ ॥ ದೇವೀ । ವಾ ಛಂದಸೀತಿ ಪೂರ್ವ-ಸವರ್ಣದೀರ್ಘತ್ವಂ । ಋತಾವೃಧಾ । ವೃಧೇರಂತರ್ಭಾವಿತಣ್ಯರ್ಥಾತ್ ಕ್ವಿಪ್ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ ॥

ಪ್ರತಿಪದಾರ್ಥ

ಸುಪ್ರವಾಚನಾಃ—ಸುಲಭವಾಗಿ ಸ್ತೋತ್ರವನ್ನು ಮಾಡಲು ಸಾಧ್ಯರಾದ । ಪಿತರಃ—ಅಗ್ನಿಷ್ವಾತ್ತಾದಿ ಪಿತೃಗಳು । ನಃ—ನಮ್ಮನ್ನು । ಅವಂತು—ರಕ್ಷಿಸಲಿ । ಉತ—ಅಲ್ಲದೇ । ದೇವಪುತ್ರೇ—ದೇವತೆಗಳನ್ನು ಪುತ್ರರ

ನ್ನಾಗಿ ಪಡೆದಿರುವವರೂ | **ಋತಾವೃಧಾ**—ಸತ್ಯವನ್ನು ಅಥವಾ ಯಜ್ಞವನ್ನು ವೃದ್ಧಿಮಾಡುವವರೂ | **ದೇವೀ**—ದೇವತಾತ್ಮರೂ ಆದ ದ್ಯಾವಾಪೃಥಿವಿಗಳು (ನಮ್ಮನ್ನು ರಕ್ಷಿಸಲಿ) | **ದುರ್ಗಾತ್**—ಇಕ್ಕಟ್ಟಾದ ಕಣಿವೆಯ ಮಾರ್ಗದಿಂದ | **ರಥಂ ನ**—(ಒಳ್ಳೆಯ ಸಾರಥಿಯು) ರಥವನ್ನು ಸುರಕ್ಷಿತವಾಗಿ ಹೊಡೆದು ಹೊರಕ್ಕೆ ತರುವಂತೆ | **ವಸವಃ**—ವಾಸಸ್ಥಾನವನ್ನು ದಯಪಾಲಿಸುವವರೂ | **ಸುದಾನವಃ**—ಅತ್ಯಂತ ಉದಾರವಾಗಿ ದಾನಮಾಡುವವರೂ ಆದ ಇಂದ್ರಾದಿಗಳು | **ನಃ**—ನಮ್ಮನ್ನು | **ವಿಶ್ವಸ್ಮಾತ್ ಅಂಹಸಃ**—ಸಮಸ್ತವಾದ ಪಾಪದಿಂದಲೂ | **ನಿಷ್ಪಿಪರ್ತನ**—ಬಿಡುಗಡೆಯನ್ನು ಮಾಡಿ ರಕ್ಷಿಸಲಿ.

### ಭಾವಾರ್ಥ

ಸುಲಭವಾಗಿ ಸ್ತೋತ್ರಮಾಡಲು ಸಾಧ್ಯರಾದ ಅಗ್ನಿಷ್ವಾತ್ತಾದಿಪಿತೃಗಳು ನಮ್ಮನ್ನು ರಕ್ಷಿಸಲಿ. ಮತ್ತು ದೇವತೆಗಳನ್ನೇ ಪುತ್ರರನ್ನಾಗಿ ಪಡೆದಿರುವವರೂ, ಯಜ್ಞವನ್ನು ವೃದ್ಧಿಮಾಡುವವರೂ ದೇವತಾತ್ಮರೂ ಆದ ದ್ಯಾವಾಪೃಥಿವಿಗಳು ನಮ್ಮನ್ನು ರಕ್ಷಿಸಲಿ. ಒಳ್ಳೆಯ ಸಾರಥಿಯು ಇಕ್ಕಟ್ಟಾದ ಕಣಿವೆಯ ಮಾರ್ಗದಿಂದ ರಥವನ್ನು ಸುರಕ್ಷಿತವಾಗಿ ಹೊಡೆದು ಹೊರಕ್ಕೆ ತರುವಂತೆ ವಾಸಸ್ಥಾನವನ್ನು ದಯಪಾಲಿಸುವವರೂ, ಅತ್ಯಂತ ಉದಾರವಾಗಿ ದಾನಮಾಡುವವರೂ ಆದ ಇಂದ್ರಾದಿಗಳು ನಮ್ಮನ್ನು ಸಮಸ್ತವಾದ ಪಾಪದಿಂದಲೂ ಮುಕ್ತರನ್ನಾಗಿ ಮಾಡಿ ರಕ್ಷಿಸಲಿ.

### English Translation

May the Pitris, who are easily to be praised, protect us ; and may the two divinities, heaven and earth, the promoters of sacrifices, and of whom the gods are the progeny, protect us ; and may they, who are bountiful and the givers of dwellings, extricate us from sin as a chariot from a defile.

### ವಿಶೇಷವಿಷಯಗಳು

ಪಿತರಃ—ಅಗ್ನಿಷ್ವಾತ್ತಾದಯಃ | ಅಗ್ನಿಷ್ವಾತ್ತಾದಿ ಪಿತೃಗಳೆಂದರ್ಥ. ಪಿತೃಗಳನ್ನು ಮೂರು ಗಣಗಳನ್ನಾಗಿ ವಿಂಗಡಿಸಿದೆ. **ತ್ರಿವಿಧಾಃ ಪಿತರ ಉತ್ತಮಾ ಮಧ್ಯಮಾ ಅಧಮಾಶ್ಚೇತಿ | ಯಥಾವಿಧಂ ಶ್ರೌತಂ ಕರ್ಮಾನುಷ್ಠಾಯ ಪಿತೃತ್ವಂ ಪ್ರಾಪ್ತಾ ಉತ್ತಮಾಃ | ಸ್ಮಾರ್ತಕರ್ಮಮಾತ್ರಪರಾ ಮಧ್ಯಮಾಃ | ಅತ್ರಾಪಿ ಕೈಶ್ಚಿತ್ಸಂಸ್ಕಾರೈರ್ವಿಕಲಾ ಅಧಮಾಃ |** ಪಿತೃಗಳಲ್ಲಿ ಉತ್ತಮರು, ಮಧ್ಯಮರು ಮತ್ತು ಅಧಮರೆಂದು ಮೂರು ಗುಂಪುಗಳಿವೆ. ವಿಧ್ಯುಕ್ತವಾಗಿ ಶ್ರೌತಕರ್ಮಗಳನ್ನು ನೆರವೇರಿಸಿ ಪಿತೃತ್ವವನ್ನು ಪಡೆದವರು ಉತ್ತಮರು. ಸ್ಮೃತ್ಯುಕ್ತಗಳಾದ ಕರ್ಮಗಳನ್ನು ಮಾತ್ರ ನೆರವೇರಿಸಿ ಪಿತೃತ್ವವನ್ನು ಪಡೆದಿರುವವರು ಮಧ್ಯಮರು. ಇವರಲ್ಲಿಯೂ ಸಂಸ್ಕಾರಗಳಿಂದ ಹೀನರಾಗಿ ಪಿತೃತ್ವವನ್ನು ಪಡೆದಿರುವವರು ಅಧಮರು. ಈ ಅಭಿಪ್ರಾಯವು.

ಯೇ ಅಗ್ನಿದಗ್ಧಾ ಯೇ ಅನಗ್ನಿದಗ್ಧಾ ಮಧ್ಯೇ ದಿವಃ ಸ್ವಧಯಾ ಮಾದಯಂತೇ |
(ಋ. ಸಂ. ೧೦-೧೫-೧೪)

ಎಂಬ ಋಕ್ಕಿನಲ್ಲಿ ಅಗ್ನಿದಗ್ಧರು, ಅನಗ್ನಿದಗ್ಧರು ಎಂಬ ವಿಭಾಗದಿಂದ ತಿಳಿಯುತ್ತದೆ. ಹೀಗೆ ಈ ಮೂರು ಗುಂಪುಗಳನ್ನೂ ಸಹ ಋಕ್ಸಂಹಿತೆಯಲ್ಲಿಯೇ ವಿವರಿಸಿದೆ.

**ಉದೀರತಾಮವರ ಉತ್ಪರಾಸ ಉನ್ಮಧ್ಯಮಾಃ ಪಿತರಃ ಸೋಮ್ಯಾಸಃ ।**
**ಅಸುಂ ಯ ಈಯುರವೃಕಾ ಋತಜ್ಞಾಸ್ತೇ ನೋಽವಂತು ಪಿತರೋ ಹವೇಷು ।**
(ಋ. ಸಂ. ೧೦-೧೫-೧)

ಎಂಬ ಋಕ್ಕಿನಲ್ಲಿ ಹೇಳಿರುವಂತೆ ಉತ್ತಮರು, ಮಧ್ಯಮರು, ನಿಕೃಷ್ಟರು ಎಂದು ಮೂರು ಭಾಗವಾಗಿದೆ ಹೀಗೆ **ಅವರ, ಪರಾಸಃ, ಮಧ್ಯಮಾಃ** ಎಂಬ ಭಾಗವಿರುವಂತೆಯೇ, **ಬರ್ಹಿಷದಃ, ಸೋಮವಂತಃ** ಮತ್ತು **ಅಗ್ನಿಷ್ವಾತ್ತಾಃ** ಎಂಬ ಭಾಗಗಳೂ ಸಂಹಿತಾವಾಕ್ಯಗಳಲ್ಲಿಯೇ ಹೇಳಲ್ಪಟ್ಟಿವೆ.

**ಬರ್ಹಿಷದಃ ಪಿತರ ಊತ್ಯ೧ ರ್ವಾಗಿಮಾ ವೋ ಹವ್ಯಾ ಚಕೃಮಾ ಜುಷಧ್ವಂ ।**
(ಋ. ಸಂ. ೧೦-೧೫-೪)

ಎಂಬ ಋಕ್ಕಿನಲ್ಲಿ ಹೇಳಿರುವಂತೆಯೂ, ಮತ್ತು

**ಯೇ ವೈ ಯಜ್ವಾನಸ್ತೇ ಪಿತರೋ ಬರ್ಹಿಷದಃ ।**
(ತೈ. ಬ್ರಾ. ೧-೬-೯)

ಎಂಬ ಬ್ರಾಹ್ಮಣ ವಾಕ್ಯದಲ್ಲಿ ಹೇಳಿರುವಂತೆಯೂ ಸಹ **ಮಹಾಪಿತೃಯಜ್ಞ**ದಲ್ಲಿ ಸಾಕ್ಷಾತ್ತಾಗಿ ಭಾಗವಹಿಸಿ ಯಜ್ಞವನ್ನು ನೆರವೇರಿಸುವವರು **ಬರ್ಹಿಷದ** ರೆಂದೂ,

**ಉಪಹೂತಾಃ ಪಿತರಃ ಸೋಮ್ಯಾಸೋ ಬರ್ಹಿಷ್ಯೇಷು ನಿಧಿಷು ಪ್ರಿಯೇಷು ।**
(ಋ. ಸಂ. ೧೦-೧೫-೫)

ಎಂಬ ಋಕ್ಕಿನಲ್ಲಿ ಹೇಳುವಂತೆ ಮಹಾಪಿತೃಯಜ್ಞದಲ್ಲಿ ಸೋಮಸಂಪಾದಿಗಳು **ಸೋಮವಂತರೆಂದೂ,**

**ಅಗ್ನಿಷ್ವಾತ್ತಾಃ ಪಿತರ ಏಹ ಗಚ್ಛತ ಸದಃಸದಃ ಸದತ ಸುಪ್ರಣೀತಯಃ ।**
(ಋ. ಸಂ. ೧೦-೧೫-೧೧)

ಎಂಬ ಋಕ್ಕಿನಲ್ಲಿ ಹೇಳಿರುವಂತೆ **ಅಗ್ನಿಷ್ವಾತ್ತರೆಂದೂ** ಮೂರು ಗಣಗಳಿವೆ. ಈ ಪಿತೃಗಳ ಸಂಖ್ಯೆಯು ಅತ್ಯಧಿಕವಾಗಿರುವುದರಿಂದಲೂ, ಸ್ಥಾನಗಳು ಅತಿ ದೂರವಾಗಿರುವುದರಿಂದಲೂ ಸಹ ಅವರ ವಿಷಯವಾಗಿ ನಿಸ್ಕೃಷ್ಟವಾದ ಜ್ಞಾನವಿಲ್ಲದಿರುವುದರಿಂದಲೂ ಸಹ,

**ಯೇ ಚೇಹ ಪಿತರೋ ಯೇ ಚ ನೇಹ ಯಾಁಶ್ಚ ವಿದ್ಮ ಯಾಁ ಉ ಚ ನ ಪ್ರವಿದ್ಮ ।**
**ತ್ವಂ ವೇತ್ಥ ಯತಿ ತೇ ಜಾತವೇದಃ ಸ್ವಧಾಭಿರ್ಯಜ್ಞಂ ಸುಕೃತಂ ಜುಷಸ್ವ ।**
(ಋ. ಸಂ. ೧೦-೧೫-೧೩)

ಅವರೆಲ್ಲರಿಗೂ ಸ್ವಧಾನ್ನವನ್ನು ಹಂಚಿ ತೃಪ್ತಿಯನ್ನುಂಟುಮಾಡಬೇಕೆಂದು ಅಗ್ನಿಯನ್ನು ಪ್ರಾರ್ಥಿಸಿದೆ. ಹೀಗೆ ಪಿತೃಗಣಗಳನ್ನು ಮೂರು ಭಾಗಗಳನ್ನಾಗಿ ವಿಭಾಗಿಸಿರುವುದನ್ನು ಶತಪಥಬ್ರಾಹ್ಮಣದಲ್ಲಿಯೂ ಹೇಳಿರುವುದು.

ಮಹಾಹವಿಷಾ ಹ ವೈ ದೇವಾ ವೃತ್ರಂ ಜಘ್ನುಃ। ತೇನೋಽಏವ ವ್ಯಜಯಂತ ಯೇಯ-ಮೇಷಾಂ ವಿಜಿತಿಸ್ತಾಮಥ ಯಾನೇವೈಷಾಂ ತಸ್ಮಿನ್ತ್ಸಂಗ್ರಾಮೇಽಘ್ನಂಸ್ತಾನ್ಪಿತೃಯಜ್ಞೇನ ಸಮೈರಯಂತ ಪಿತರೋ ವೈತೇಽಆಸಂಸ್ತಸ್ಮಾತ್ಪಿತೃಯಜ್ಞೋ ನಾಮ।

(ಶ. ಬ್ರಾ, ೨-೬-೧-೧)

ದೇವತೆಗಳು **ಮಹಾಹವಿಸ್ಸನ್ನು** ಅರ್ಪಿಸಿ ಅದರ ಸಹಾಯದಿಂದ ವೃತ್ರನನ್ನು ಕೊಂದರು. ಅನಂತರ **ಪಿತೃಯಜ್ಞವನ್ನು** ನೆರವೇರಿಸಿ ಮೃತರಾದವರನ್ನು ಬದುಕಿಸಿದರು. ಅವರೇ **ಪಿತೃಗಳು** ಆದುದರಿಂದಲೇ ಅದಕ್ಕೆ **ಪಿತೃಯಜ್ಞವೆಂಬ** ಹೆಸರು ಬಂದಿತು. (ಸಾಧಾರಣವಾದ ಮಾಸಿಕಪಿತೃಯಜ್ಞಕ್ಕೂ ಮಹಾಪಿತೃಯಜ್ಞಕ್ಕೂ ಇರುವ ವ್ಯತ್ಯಾಸವನ್ನು (ಶ. ಬ್ರಾ. ೨-೪-೨ರಲ್ಲಿ ವಿವರಿಸಿದೆ.) ಈ ಪಿತೃಗಳಲ್ಲಿ,

ತದ್ಯೇ ಸೋಮೇನೇಜಾನಾಃ। ತೇ ಪಿತರಃ ಸೋಮವಂತೋಽಥ ಯೇ ದತ್ತೇನ ಲೋಕಂ ಜಯಂತಿ ತೇ ಪಿತರೋ ಬರ್ಹಿಷದೋಽಥ ಯೇ ತತೋ ನಾನ್ಯತರಂಚನ ಯಾನಗ್ನಿರೇವ ದಹನ್ತ್ಸ್ವದಯತಿ ತೇ ಪಿತರೋಽಗ್ನಿಷ್ವಾತ್ತಾ ಏತ ಉ ತೇ ಯೇ ಪಿತರಃ।

(ಶ. ಬ್ರಾ. ೨-೬-೧-೭)

ಸೋಮರಸವನ್ನರ್ಪಿಸಿ ಯಾಗಮಾಡಿರುವವರು **ಸೋಮವಂತರೆಂದೂ,** ಪಕ್ವಾನ್ನವನ್ನರ್ಪಿಸಿ ಯಾಗಮಾಡಿರುವವರು **ಬರ್ಹಿಷದರೆಂದೂ,** ಇವೆರಡೂ ಇಲ್ಲದೇ ಅಗ್ನಿದಗ್ಧರಾದವರು **ಅಗ್ನಿಷ್ವಾತ್ತರೆಂದೂ** ಕರೆಯಲ್ಪಡುತ್ತಾರೆ. ಇವರೇ ಪಿತೃಗಳು.

**ಸುಪ್ರವಚನಾಃ**–ಶೋಭನಂ ಪ್ರವಚನಂ ಯೇಷಾಂ ತೇ ಸುಪ್ರವಚನಾಃ। ಸುಸ್ತುತಯ ಇತ್ಯರ್ಥಃ। ಶ್ರೇಷ್ಠವಾದ ಸ್ತುತಿಗೆ ಪಾತ್ರರಾದವರೆಂದರ್ಥ.

**ದೇವಪುತ್ರೇ ದೇವೀ**— ದೇವಾಃ ಸರ್ವೇ ಪುತ್ರಸ್ಥಾನೀಯಾ ಯಯೋಸ್ತೇ ದ್ಯಾವಾಪೃಥಿವ್ಯೌ। ಸಕಲದೇವತೆಗಳನ್ನೂ ಪುತ್ರರನ್ನಾಗಿ ಪಡೆದಿರತಕ್ಕ ದ್ಯಾವಾಪೃಥಿವಿಗಳು. ದ್ಯಾವಾಪೃಥಿವಿಗಳಿಗೆ ಪಿತರೌ ಎಂಬ ಹೆಸರು ಪ್ರಸಿದ್ಧವಾಗಿದೆ.

ಸುರೇತಸಾ ಪಿತರಾ ಭೂಮ ಚಕ್ರತುರುರು ಪ್ರಜಾಯಾ ಅಮೃತಂ ವರೀಮಭಿಃ।

(ಋ. ಸಂ. ೧-೧೫೯-೨)

ಇತ್ಯಾದಿ ಋಕ್ಕುಗಳಲ್ಲಿ ಎರಡನ್ನೂ ಒಟ್ಟಿಗೆ ಸೇರಿಸಿ ಪಿತರೌ (ಮಾತಾಪಿತೃಗಳು) ಎಂದೂ,

ತನ್ನೋ ವಾತೋ ಮಯೋಭು ವಾತು ಭೇಷಜಂ ತನ್ಮಾತಾ ಪೃಥಿವೀ ತತ್ಪಿತಾ ದ್ಯೌಃ।

(ಋ. ಸಂ. ೧-೮೯-೪)

ಇತ್ಯಾದಿ ಋಕ್ಕುಗಳಲ್ಲಿ ಪೃಥಿವಿಯನ್ನು ಮಾತೆಯೆಂದೂ, ದ್ಯುಲೋಕವನ್ನು ಪಿತೃವೆಂದೂ,

**ಪ್ರ ದ್ಯಾವಾ ಯಜ್ಞೈಃ ಪೃಥಿವೀ ಋತಾವೃಧಾ ಮಹೀ ಸ್ತುಷೇ ವಿದಥೇಷು ಪ್ರಚೇತಸಾ ।**
**ದೇವೇಭಿರ್ಯೇ ದೇವಪುತ್ರೇ ಸುದಂಸಸೇತ್ಥಾ ಧಿಯಾ ವಾರ್ಯಾಣಿ ಪ್ರಭೂಷತಃ ॥**
(ಋ. ಸಂ. ೧-೧೫೯-೧)

ಇತ್ಯಾದಿ ಋಕ್ಕುಗಳಲ್ಲಿ ದ್ಯಾವಾಪೃಥಿವಿಗಳು ದೇವತೆಗಳನ್ನು ಪುತ್ರರನ್ನಾಗಿ ಪಡೆದಿರುವರೆಂದೂ, ವರ್ಣಿಸಿದೆ; **ಪೃಥಿವಿಗೂ ಅದಿತಿಗೂ** ತಾದಾತ್ಮ್ಯವನ್ನು ಅನೇಕಕಡೆ ಹೇಳಿರುವುದರಿಂದಲೂ, ದೇವತೆಗಳು ಅದಿತಿಪುತ್ರರಾದುದರಿಂದಲೂ ಪೃಥಿವಿಗೂ ದೇವಮಾತೆಯೆಂದು ಹೇಳುವುದು ರೂಢಿಯಿದೆ. (ಈ ವಿಷಯವನ್ನು ಪೀಠಿಕಾಪ್ರಕರಣದಲ್ಲಿ ವಿವರಿಸಿದೆ).

ಐತರೇಯಬ್ರಾಹ್ಮಣದಲ್ಲಿ ದ್ಯಾವಾಪೃಥಿವಿಗಳ ದಾಂಪತ್ಯದ ವಿಷಯವನ್ನು ಕುರಿತು ಒಂದು ಸಣ್ಣಕಥೆಯಿದೆ. ಅದರಂತೆ—

**ಇಮೌ ವೈ ಲೋಕೌ ಸಹಾಸ್ತಾಂ ತೌ ವ್ಯೈತಾಂ ನಾವರ್ಷನ್ನತಪನ್ ತತ್ರೇ ಪಂಚಜನಾ ನ ಸಮಜಾನತ ತೌ ದೇವಾಃ ಸಮನಯಂಸ್ತೌ ಸಂಯಂತಾವೇತಂ ದೇವವಿವಾಹಂ ವ್ಯವಹೇತಾಂ ।**
(ಐ. ಬ್ರಾ. ೪-೨೭)

ದ್ಯಾವಾಪೃಥಿವಿಗಳು ಮೊದಲಿನಿಂದಲೂ ಸಂಯುಕ್ತವಾಗಿದ್ದು ಒಂದು ಸಲ ವಿಭಕ್ತವಾದವು. ಕೂಡಲೇ ಲೋಕಕ್ಕೆ ವೃಷ್ಟಿಪತನವೂ, ಸೂರ್ಯನ ಪ್ರಕಾಶವೂ ಇಲ್ಲದೇ ಹೋಯಿತು. ಆಗ **ಪಂಚಜನರ** ನಡುವೆ ಯಾರಿಗೂ ಶಾಂತಿಯಿರಲಿಲ್ಲ (ಪಂಚಜನ ಎಂಬ ಪದದ ವಿವರಣೆಯನ್ನು ಇದೇ ಭಾಗದಲ್ಲಿ ೧೦೦ ನೇ ಸೂಕ್ತದ ೧೨ ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ವಿವರಿಸಿದೆ.) ಆಗ ದೇವತೆಗಳು ದ್ಯಾವಾಪೃಥಿವಿಗಳಿಗೆ ಸಮನ್ವಯವನ್ನುಂಟುಮಾಡಿದರು. ಆಗ ಇವೆರಡಕ್ಕೂ ದೇವತೆಗಳ ಪದ್ಧತಿಯಂತೆ ವಿವಾಹವು ಜರುಗಿತು. ಎಂಬ ಕಥೆಯು ಋಕ್ಸಂಹಿತೆಯಲ್ಲಿ ಅನೇಕ ಕಡೆ ಹೇಳಿರುವ ದ್ಯಾವಾಪೃಥಿವಿಗಳ ಸಂಬಂಧವನ್ನು ವಿವರಿಸಿದೆ. ಇದರಂತೆಯೇ,

**ಯ ಇಮೇ ದ್ಯಾವಾಪೃಥಿವೀ ಜನಿತ್ರೀ ರೂಪೈರಪಿಂಶದ್ಭುವನಾನಿ ವಿಶ್ವಾ ।**
(ಋ. ಸಂ. ೧೦-೧೧೦-೯)

ಇತ್ಯಾದಿ ಋಕ್ಕುಗಳಲ್ಲಿ **ಜನಿತ್ರೀ** ಎಂಬ ವಿಶೇಷಣವು ಸಾಧಾರಣವಾಗಿದೆ. **ದೇವಪುತ್ರೇ** ಎಂಬ ವಿಶೇಷಣವು ಸಾಮಾನ್ಯವಾಗಿ ಅನೇಕ ಕಡೆ ದ್ಯಾವಾಪೃಥಿವಿಗಳ ಪರವಾಗಿರುವುದರ ಜೊತೆಗೆ

**ದೇವೀ ದೇವಸ್ಯ ರೋದಸೀ ಜನಿತ್ರೀ ಬೃಹಸ್ಪತಿಂ ವಾವೃಧತುರ್ಮಹಿತ್ವಾ ।**
(ಋ. ಸಂ. ೭-೯೭-೮)

**ಯಂ ತ್ವಾ ದ್ಯಾವಾಪೃಥಿವೀ ಯಂ ತ್ವಾಪಸ್ತ್ವಷ್ಟಾ ಯಂ ತ್ವಾ ಸುಜನಿಮಾ ಜಜಾನ ।**
(ಋ. ಸಂ. ೧೦-೨-೭)

ಇತ್ಯಾದಿ ಋಕ್ಕುಗಳಲ್ಲಿ ಬೃಹಸ್ಪತಿ, ಅಗ್ನಿ ಇತ್ಯಾದಿ ದೇವತೆಗಳನ್ನು ದ್ಯಾವಾಪೃಥಿವಿಗಳು ಪಡೆದು ಪೋಷಿಸಿದರೆಂದು ಹೇಳಿದೆ. ಈ ಕಾರಣಗಳಿಂದ **ದೇವಪುತ್ರೇ** ಎಂಬ ವಿಶೇಷಣವಿದೆ.

**ಋತಾವೃಧಾ**—**ಋತಸ್ಯ ಯಜ್ಞಸ್ಯ ಸತ್ಯಸ್ಯ ವಾ ವರ್ಧಯಿತ್ರ್ಯೌ ।** ಋತಶಬ್ದಕ್ಕೆ ಯಜ್ಞ, ಸತ್ಯ ಎಂಬ ಅರ್ಥಗಳಿರುವುದರಿಂದಲೂ, ದ್ಯಾವಾಪೃಥಿವಿಗಳ ಸಹಾಯದಿಂದಲೇ ಯಜ್ಞವು ನೆರವೇರುವುದೂ ಸತ್ಯವು ವ್ಯಾಪಿಸುವುದೂ ಆಗಬೇಕಾಗಿರುವುದರಿಂದಲೂ **ಋತಾವೃಧಾ** ಮತ್ತು ಋತಾವರೀ ಎಂಬ ವಿಶೇಷಣಗಳು ಇವರಂತೆಯೇ ಇನ್ನೂ ಅನೇಕಕಡೆ ಉಪಯೋಗಿಸಲ್ಪಟ್ಟಿವೆ.

ವ್ಯಾಕರಣಪ್ರಕ್ರಿಯಾ

**ಅವಂತು**—ಅವ ರಕ್ಷಣೇ. ಧಾತು. ಲೋಟ್ ಪ್ರಥಮಪುರುಷ ಬಹುವಚನದಲ್ಲಿ ಝಿಗೆ ಅಂತಾದೇಶ ಬಂದಾಗ **ಏರುಃ**—(ಪಾ. ಸೂ. ೩-೪-೮೬) ಎಂಬುದರಿಂದ ಉತ್ವ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಪಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ದೇವೀ**—ಇದಕ್ಕೆ ಪ್ರಥಮಾದ್ವಿವಚನ ಪರವಾದಾಗ **ವಾ ಛಂದಸಿ**—(ಪಾ. ಸೂ. ೬-೧-೧೦೬) ಎಂಬುದರಿಂದ ಪೂರ್ವಸವರ್ಣದೀರ್ಘ ಬರುತ್ತದೆ.

**ದೇವಪುತ್ರೇ**—ದೇವಾಃ ಪುತ್ರಾಃ ಯಯೋಸ್ತೇ ದೇವಪುತ್ರೇ. **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಋತಾವೃಧಾ**—ವೃಧು ವೃದ್ಧೌ. ಧಾತು ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತ ಣ್ಯರ್ಥಕವಾದ ಈ ಧಾತುವಿಗೆ **ಕ್ವಿಪ್ ಚ**—(ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಋತಸ್ಯ-ವರ್ಧಯಿತ್ರ್ಯೌ ಋತಾವೃಧೌ. ಇಲ್ಲಿ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ. **ಅನ್ಯೇಷಾಮಪಿ ದೃಶ್ಯತೇ**—(ಪಾ. ಸೂ. ೬-೩-೧೩೭) ಎಂಬುದರಿಂದ ಪೂರ್ವಪದಕ್ಕೆ ದೀರ್ಘ. **ಗತಿಕಾರಕೋಪಪದಾತ್ಕೃತ್**— (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ॥ ೩ ॥



ಸಂಹಿತಾಪಾಠಃ

ನರಾಶಂಸಂ ವಾಜಿನಂ ವಾಜಯನ್ನಿಹ ಕ್ಷಯದ್ವೀರಂ ಪೂಷಣಂ ಸುಮ್ನೈರೀಮಹೇ ।

ರಥಂ ನ ದುರ್ಗಾದ್ವಸವಃ ಸುದಾನವೋ ವಿಶ್ವಸ್ಮಾನ್ನೋ ಅಂಹ-
ಸೋ ನಿಷ್ಪಿಪರ್ತನ ॥ ೪ ॥

ಪದಪಾಠಃ

ನರಾಶಂಸಂ । ವಾಜಿನಂ । ವಾಜಯನ್ । ಇಹ । ಕ್ಷಯತ್ಽವೀರಂ । ಪೂಷ-
ಣಂ । ಸುಮ್ನೈಃ । ಈಮಹೇ ।

ರಥಂ । ನ । ದುಃಽಗಾತ್ । ವಸವಃ । ಸುಽದಾನವಃ । ವಿಶ್ವಸ್ಮಾತ್ । ನಃ ।
ಅಂಹಸಃ । ನಿಃ । ಪಿಪರ್ತನ ॥ ೪ ॥

॥ ಸಾಯಣಭಾಷ್ಯಂ ॥

ನರಾಶಂಸಂ ನರೈಃ ಶಂಸನೀಯಂ ವಾಜಿನಮನ್ನವಂತಮಗ್ನಿಂ ವಾಜಯನ್ ಉಪವಾಜಯನ್ ಪ್ರಜ್ವಲಯನ್ನಿಹಾಸ್ಮಿನ್ಕಾಲೇ ಸ್ತೌಮೀತಿ ಶೇಷಃ । ತಥಾ ಕ್ಷಯದ್ವೀರಮತಿಬಲಿನಂ । ಯಸ್ಮಿನ್ಸರ್ವೇ ವೀರಾಃ ಕ್ಷೀಯಂತೇ । ಏವಂರೂಪಂ ಪೂಷಣಂ ಪೋಷಕಂ ದೇವಂ ಸುಮ್ನೈಃ ಸುಖಕರೈಃ ಸ್ತೋತ್ರೈರ್ಹೇತುಭೂತೈರೀಮಹೇ । ಯಾಚಾಮಹೇ । ಅಭೀಷ್ಟಂ ಪ್ರಾರ್ಥಯಾಮಹೇ ॥ ನರಾಶಂಸಂ । ಉಭೇ ವನಸ್ಪತ್ಯಾದಿಷ್ವಿತಿ ಯುಗಪದುಭಯಪದಪ್ರಕೃತಿಸ್ವರತ್ವಂ । ನರಶಬ್ದ ಋದೋರಬಿತ್ಯಬಂತ ಆದ್ಯುದಾತ್ತಃ । ನಿಪಾತನಾದ್ದೀರ್ಘಃ । ಶಂಸಶಬ್ದೋ ಘಞಂತ ಆದ್ಯುದಾತ್ತಃ । ವಾಜಯನ್ । ವಜ ವ್ರಜ ಗತೌ । ಅಸ್ಮಾಣ್ಣಿಚ್ । ಕ್ಷಯದ್ವೀರಂ । ಕ್ಷಿ ಕ್ಷಯೇ । ಲಟಃ ಶತೃ । ಶಪಿ ಪ್ರಾಪ್ತೇ ವ್ಯತ್ಯಯೇನ ಶಃ । ತಸ್ಯ ಛಂದಸ್ಯುಭಯಥೇತ್ಯಾರ್ಧಧಾತುಕತ್ವೇನ ಙಿತ್ತ್ವಾಭಾವಾದ್ಗುಣಾಯಾದೇಶೌ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ವಿಕರಣಸ್ವರಃ । ಅತೋ ಗುಣ ಇತಿ ಪರಪೂರ್ವತ್ವೇ ಏಕಾದೇಶ ಉದಾತ್ತೇನೋದಾತ್ತ ಇತ್ಯೇಕಾದೇಶ ಉದಾತ್ತಃ । ಕ್ಷಯಂತೋ ವೀರಾ ಯಸ್ಮಿನ್ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥

ಪ್ರತಿಪದಾರ್ಥ

ನರಾಶಂಸಂ—ನರರಿಂದ ಸ್ತುತಿಸಲ್ಪಡುವವನೂ । ವಾಜಿನಂ—ಅನ್ನವುಳ್ಳವನೂ ಆದ ಅಗ್ನಿಯನ್ನು । ವಾಜಯನ್—ಪ್ರಜ್ವಲಿಸುವಂತೆ ಮಾಡುತ್ತಾ । ಇಹ—ಈ ಯಜ್ಞಕಾಲದಲ್ಲಿ (ಪೂಜಿಸುತ್ತೇವೆ) । ಕ್ಷಯದ್ವೀರಂ—ಸಕಲವೀರರನ್ನೂ ಕ್ಷೀಣಿಸುವಂತೆ ಮಾಡುವವನೂ । ಪೂಷಣಂ—ಪೋಷಕನಾದವನೂ ಆದ ಅಗ್ನಿಯನ್ನು ।

**ಸುಮ್ನೈಃ**—ಸುಖಕರವಾದ ಸ್ತೋತ್ರಗಳಿಂದ | **ಈಮಹೇ**—(ನಮ್ಮ ಇಷ್ಟಾರ್ಥವನ್ನು) ಯಾಚಿಸುತ್ತೇವೆ. | **ದುರ್ಗಾತ್**—ಇಕ್ಕಟ್ಟಾದ ಕಣಿವೆಯ ದಾರಿಯಿಂದ | **ರಥಂ ನ**—(ಸಾರಥಿಯು) ರಥವನ್ನು ಸುರಕ್ಷಿತವಾಗಿ ಹೊಡೆದು ಹೊರಕ್ಕೆ ತರುವಂತೆ | **ವಸವಃ**—ವಾಸಸ್ಥಾನವನ್ನು ದಯಪಾಲಿಸುವವರೂ | **ಸುದಾನವಃ**—ಉದಾರವಾಗಿ ದಾನಮಾಡುವವರೂ ಆದ ಇಂದ್ರಾದಿದೇವತೆಗಳು | **ನಃ**—ನಮ್ಮನ್ನು | **ವಿಶ್ವಸ್ಮಾತ್ ಅಂಹಸಃ**—ಸಮಸ್ತವಾದ ಪಾಪದಿಂದಲೂ | **ನಿಷ್ಪಿಪರ್ತನ**—ಮುಕ್ತರನ್ನಾಗಿ ಮಾಡಿ ರಕ್ಷಿಸಲಿ |

॥ ಭಾವಾರ್ಥ ॥

ನರರಿಂದ ಸ್ತುತಿಸಲ್ಪಡುವವನೂ, ಅನ್ನದಾತನೂ ಆದ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುತ್ತಾ, ಈ ಯಜ್ಞಕಾಲದಲ್ಲಿ ಇಲ್ಲೇ ಇರುವಂತೆ ಪೂಜಿಸುತ್ತೇವೆ. ಸಕಲವೀರರನ್ನೂ ಕ್ಷೀಣಿಸುವಂತೆ ಮಾಡುವವನೂ ಎಲ್ಲರಿಗೂ ಪೋಷಕನೂ ಆದ ಅಗ್ನಿಯನ್ನು ಸುಖದಾಯಕವಾದ ಸ್ತೋತ್ರಗಳಿಂದ ಪ್ರಾರ್ಥಿಸಿ ನಮ್ಮ ಇಷ್ಟಾರ್ಥವನ್ನು ಯಾಚಿಸುತ್ತೇವೆ. ಇಕ್ಕಟ್ಟಾದ ಕಣಿವೆಯದಾರಿಯಿಂದ ಸಾರಥಿಯು ರಥವನ್ನು ಸುರಕ್ಷಿತವಾಗಿ ಹೊಡೆದು ಹೊರಕ್ಕೆ ತರುವಂತೆ, ವಾಸಸ್ಥಾನವನ್ನು ದಯಪಾಲಿಸುವವರೂ ಮತ್ತು ಉದಾರವಾದ ದಾನಿಗಳೂ ಆದ ಇಂದ್ರಾದಿದೇವತೆಗಳು ನಮ್ಮನ್ನು ಸಮಸ್ತವಾದ ಪಾಪದಿಂದಲೂ ಮುಕ್ತರನ್ನಾಗಿ ಮಾಡಿ ರಕ್ಷಿಸಲಿ.

## English Translation

Exciting him who is the praised of men and the giver of food, (to be present) at this rite, we solicit (also) with our praises him who is the purifier and destroyer of heroes ; may they, who are bountiful and the givers of food, extricate us from sin, as a chariot from a defile.

॥ ವಿಶೇಷವಿಷಯಗಳು ॥

**ನರಾಶಂಸಂ—ನರೈಃ ಶಂಸನೀಯಂ** (ಅಗ್ನಿಂ) | ನರರಿಂದ ಸ್ತುತಿಸಲ್ಪಡುವ ಅಗ್ನಿಯನ್ನು, ಎಂದು ಅಗ್ನಿಗೆ ಅನ್ವರ್ಥನಾಮವಾಗಿದೆ. ಸ್ಕಂದಸ್ವಾಮಿಗಳು **ನರಾಶಂಸೋಽಗ್ನಿರ್ಯಜ್ಞೋ ವಾ** | ನರಾಶಂಸನೆಂದರೆ ಅಗ್ನಿಯೆಂದಾಗಲಿ ಅಥವಾ ಯಜ್ಞವೆಂದಾಗಲಿ ಅರ್ಥವಾಗುತ್ತದೆಂದು ಹೇಳಿರುತ್ತಾರೆ. ಈ ಎರಡುವಿಧವಾದ ಅರ್ಥಕ್ಕೂ ಅವಕಾಶವಿದೆಯೆಂದು ನಿರುಕ್ತದಿಂದಲೂ ಗೊತ್ತಾಗುತ್ತದೆ.

**ನರಾಶಂಸೋ ಯಜ್ಞ ಇತಿ ಕಾತ್ಥಕ್ಯಃ | ನರಾಃ ಅಸ್ಮಿನ್ನಾಸೀನಾಃ ಶಂಸಂತಿ | ಅಗ್ನಿರಿತಿ ಶಾಕಪೂಣಿಃ | ನರೈಃ ಪ್ರಶಸ್ಯೋ ಭವತಿ** | (ನಿ. ೮-೬) ನರರು ಯಜ್ಞದಲ್ಲಿ ಕುಳಿತುಕೊಂಡು ಪ್ರಶಂಸೆ ಮಾಡುವುದರಿಂದ ಯಜ್ಞಕ್ಕೆ ನರಾಶಂಸನೆಂಬ ಹೆಸರೆಂದು ಕಾತ್ಥಕ್ಯನೂ, ನರರಿಂದ ಪ್ರಶಸ್ಯನಾದುದರಿಂದ ಅಗ್ನಿಗೆ ಈ ಹೆಸರೆಂದು ಶಾಕಪೂಣಿಯೂ ಹೇಳಿರುವುದಾಗಿ ನಿರುಕ್ತಕಾರರು ಈ ಎರಡು ಅಭಿಪ್ರಾಯಗಳನ್ನು ಸೂಚಿಸಿ ಅನಂತರ—

ನರಾಶಂಸಸ್ಯ ಮಹಿಮಾನಮೇಷಾಮುಪ ಸ್ತೋಷಾಮ ಯಜತಸ್ಯ ಯಜ್ಞೈಃ |

(ಋ. ಸಂ. ೭-೨-೨)

ಎಂಬ ಋಕ್ಕನ್ನು ಉದಹರಿಸಿದ್ದಾರೆ. ಈ ಋಕ್ಕಿನಲ್ಲಿ **ನರಾಶಂಸ**ವೆಂಬ ಪದಕ್ಕೆ **ಅಗ್ನಿ**ಯೆಂಬ ಅರ್ಥವೇ ನ್ಯಾಯವಾಗಿದೆ. ನಿಘಂಟುವಿನಲ್ಲಿ ಪರಿಗಣಿತವಾಗಿರುವ ದೇವತೆಗಳ ನಡುವೆ **ನರಾಶಂಸ** ದೇವತೆಯು ಅಗ್ನಿಯ ರೂಪಾಂತರಗಳಲ್ಲೊಂದು ಎಂದು ತಿಳಿಯುತ್ತದೆ. (ನಿಘಂಟು. ೫೫-೧) ಇದನ್ನೇ ಬೃಹದ್ದೇವತಾಕಾರರು,

**ನರಾಶಂಸಃ ಶ್ರಿತಸ್ತ್ವೇನಂ ಏನಮೇವಾಶ್ರಿತಸ್ತ್ವಿಳಃ ।**
**ಬರ್ಹಿರ್ದ್ವಾರಶ್ಚ ದೇವ್ಯೋಽಗ್ನಿಮೇನಮೇವ ತು ಸಂಶ್ರಿತಾಃ ॥**
(ಬೃ. ದೇ. ೧-೧೦೭)

ಎಂಬ ಶ್ಲೋಕದಲ್ಲಿ **ನರಾಶಂಸನು** ಇಲ್ಲಿ ಹೇಳಿರುವ ಇತರ ದೇವತೆಗಳಂತೆಯೇ **ಅಗ್ನಿ**ಯಲ್ಲಿ ಅಂತರ್ಗತನಾಗಿರುವನೆಂದು ಹೇಳಿದ್ದಾರೆ. ಮತ್ತು,

**ಪೃಥಕ್ತ್ವೇನ ಸಮಾಸೈಸ್ತು ಯಜ್ಞೇ ಯಚ್ಛಸ್ಯತೇ ನೃಭಿಃ ।**
**ಸ್ತುವಂತ್ಯಾಪ್ರೀಷು ತೇನೇಮಂ ನರಾಶಂಸಂ ತು ಕಾರವಃ ॥**
(ಬೃ. ದೇ. ೨-೨೮)

ಯಜ್ಞದಲ್ಲಿ ಸೇರಿರತಕ್ಕ ಸಕಲನರರಿಂದಲೂ ಪದ ಪ್ರತ್ಯೇಕವಾಗಿ ಪ್ರಶಂಸಿಸಲ್ಪಡುವುದರಿಂದ ಕೃತಿಕಾರರು (ಕವಿಗಳು) ಇವನನ್ನು (ಅಗ್ನಿಯನ್ನು) **ನರಾಶಂಸ**ನೆಂಬ ಹೆಸರಿನಿಂದ ಆಪ್ರೀಸೂಕ್ತಗಳಲ್ಲಿ ಸ್ತುತಿಸಿದ್ದಾರೆ, ಎಂದು ಹೇಳಿ, ನಿರುಕ್ತಕಾರರು ಹೇಳಿರುವ ಅಭಿಪ್ರಾಯಭೇದಗಳನ್ನು ಇವರೂ ತೋರಿಸಿದ್ದಾರೆ.

**ನರಾಶಂಸಮಿಹೈಕೇ ತು ಅಗ್ನಿಮಾಹುರಥೇತರೇ ।**
**ನರಾಃ ಶಂಸಂತಿ ಸರ್ವೇಽಸ್ಮಿನ್ನಾಸೀನಾ ಇತಿ ವಾಕ್ಯರೇ ॥**

**ಏತಮೇವಾಹುರನ್ಯೇಽಗ್ನಿಂ ನರಾಶಂಸೋಽಧ್ವರೇ ಹ್ಯಯಂ ।**
**ನರೈಃ ಪ್ರಶಸ್ಯ ಆಸೀನೈರಾಹುಶ್ಚೈವರ್ತ್ವಿಜೋ ನರಃ ॥**
(ಬೃ. ದೇ. ೩-೨-೩)

ಕೆಲವರು **ನರಾಶಂಸನನ್ನು** ಅಗ್ನಿಯೆಂದು ಹೇಳುತ್ತಾರೆ. ಇನ್ನು ಕೆಲವರು ಯಜ್ಞದಲ್ಲಿ ನರರು ಸೇರಿ ಪ್ರಶಂಸಿಸುವುದರಿಂದ **ಯಜ್ಞ**ವೆಂದೇ ಹೇಳುತ್ತಾರೆ. ಯಜ್ಞದಲ್ಲಿ ಸೇರಿರತಕ್ಕ ನರರಿಂದ ಪ್ರಶಂಸಿಸಲ್ಪಡುವುದರಿಂದ **ನರಾಶಂಸ**ನೆಂದರೆ ಅಗ್ನಿಯೇ ಎಂದು ಇನ್ನು ಕೆಲವರ ಮತ. ಮೂರನೆಯದು ಮೊದಲನೆಯ ಮತ್ತು ಎರಡನೆಯ ಮತಗಳ ಸಮನ್ವಯವಾಗಿದೆ. ಈ ಎರಡು ಅರ್ಥಗಳ ಜೊತೆಗೆ ಸಾಯಣರು ಮೂರನೆಯ ಅರ್ಥವನ್ನೂ ಹೇಳಿರುತ್ತಾರೆ. ಋ. ಸಂ. ೧-೧೮-೯ನೇ ಋಕ್ಕನ್ನು ಭಾಷ್ಯದಲ್ಲಿ ವಿವರಿಸುವಾಗ **ನರಾಶಂಸಮೇತನ್ನಾಮಕಂ ದೇವ-ವಿಶೇಷಂ ಯದ್ವಾ ಅವಯವಾರ್ಥವ್ಯುತ್ಪತ್ತ್ಯಾ ಸದಸಸ್ಪತಿದೇವತಾಪರೋಽಯಂ ಶಬ್ದಃ । ಅತ್ರ ಅಗ್ನಿವತ್ ಸದಸಸ್ಪತೇರಪಿ ನರೈಃ ಶಸ್ಯಮಾನತ್ವಾತ್ ನರಾಶಂಸತ್ವಂ । ಏತಮೇವಾಭಿಪ್ರಾಯಂ ಹೃದಿ ನಿಧಾಯ ಬ್ರಾಹ್ಮಣಮೇವಮಾಮ್ನಾಯತೇ -'ಪ್ರಜಾ ವೈ ನರೋ ವಾಕ್ ಶಂಸಃ' (ಐ. ಬ್ರಾ. ೬-೨೭) ಇತಿ.** ನರಾ-ಶಂಸನೆಂದರೆ ಈ ಹೆಸರಿನ ದೇವತಾವಿಶೇಷನೆಂದಾಗಲಿ ಅಥವಾ ಸದಸಸ್ಪತಿಯೆಂದಾಗಲಿ ಅರ್ಥವಾಗಬಹುದು. ಸದಸ

ಸ್ತುತಿಯೂ ನರರಿಂದ ಸ್ತುತಿಸಲ್ಪಡುವುದರಿಂದಲೂ, ಈ ಭಾವವನ್ನು ಐತರೇಯಬ್ರಾಹ್ಮಣದಲ್ಲಿ ಉದಾಹೃತವಾಗಿರುವ ವಾಕ್ಯವು ಸೂಚಿಸುವುದರಿಂದಲೂ ಸಹ ಈ ಅರ್ಥವಾಗಬಹುದು ಎಂದು ಮೂರನೆಯ ಅರ್ಥವನ್ನು ತೋರಿಸಿದ್ದಾರೆ. ಆದರೆ ಋಕ್ಸಂಹಿತೆಯಲ್ಲೆಲ್ಲಾ ಅಗ್ನಿಪರ್ಯಾಯವಾಗಿಯೇ ಇದೆಯೆಂದು ಹೇಳಿದರೆ ತಪ್ಪಾಗಲಾರದು.

**ನರಾಶಂಸಸ್ತ್ರಿರಾ ದಿವೋ ದೇವೋ ದೇವೇಷು ಯಜ್ಞಿಯಃ ।**
(ಋ. ಸಂ. ೧-೧೪೨-೩)

**ನರಾಶಂಸಃ ಪ್ರತಿಧಾಮಾನ್ಯಞ್ಜನ್ ತಿಸ್ರೋ ದಿವಃ ಪ್ರತಿ ಮಹ್ನಾ ಸ್ವರ್ಚಿಃ ।**
(ಋ. ಸಂ. ೨-೩-೨)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಅಗ್ನಿಯೆಂದೇ ಅರ್ಥ.

**ವಾಜಯನ್**—ಉಪವಾಜಯನ್ ಪ್ರಜ್ವಲಯನ್ । ಪ್ರಜ್ವಲಿಸುವಂತೆ ಮಾಡುತ್ತಾ **ಅಹಂ ಸ್ತೌಮಿ** ನಾನು ಸ್ತುತಿಸುತ್ತೇನೆ ಎಂದು ಸಾಯಣರು **ಅಹಂ ಸ್ತೌಮಿ** ಎಂಬುದನ್ನು ಅಧ್ಯಾಹಾರಮಾಡಿಕೊಂಡು ವಿವರಿಸಿದ್ದಾರೆ. ಸ್ಕಂದಸ್ವಾಮಿಗಳು—**ವಾಜಯತೀತ್ಯರ್ಚತಿಕರ್ಮಾ** (ನಿ. ೩-೧೯) । **ಬಹುವಚನಸ್ಯ ಸ್ಥಾನೇ ಏಕವಚನಂ । ಸ್ತುವಂತಃ ಇಹ ಕರ್ಮಣಿ** । ವಾಜಯತಿ ಎಂಬುದು **ಅರ್ಚತಿಕರ್ಮ**ನಾಮಗಳಲ್ಲಿ ಸೇರಿರುವುದರಿಂದ ಈ ಯಜ್ಞ ಕರ್ಮದಲ್ಲಿ ಅಗ್ನಿಯನ್ನು **ಸ್ತುತಿಸುವವರಾಗಿ** ಎಂದರ್ಥವೆಂದು ಹೇಳಿದ್ದಾರೆ.

ವಾಜಶಬ್ದವು ಅನ್ನನಾಮಗಳಲ್ಲಿಯೂ (ನಿ. ೨-೭), ಸಂಗ್ರಾಮನಾಮಗಳಲ್ಲಿಯೂ ಪಠಿತವಾಗಿದೆ. ಬಲ ವೆಂದೂ ಅರ್ಥ. ಈ ಮೂರು ಅರ್ಥಗಳಲ್ಲಿಯೂ ಈ ಪದದ ಪ್ರಯೋಗವಿದೆ. ಮತ್ತು **ಸ್ತುತ್ಯರ್ಥ**ದಲ್ಲೂ ಉಪಯೋಗಿಸಲ್ಪಟ್ಟಿದೆ.

**ಇಂದ್ರ ಋಭುಭಿರ್ವಾಜಿಭಿರ್ವಾಜಯನ್ನಿಹ ಸ್ತೋಮಂ ಜರಿತುರುಪ ಯಾಹಿ ಯಜ್ಞಿಯಂ ।**
(ಋ. ಸಂ. ೩-೬೦-೭)

ಇತ್ಯಾದಿ ಋಕ್ಕುಗಳಲ್ಲಿ **ವಾಜಯನ್** ಎಂದರೆ **ಅನ್ನಂ ಕುರ್ವಾಣಃ** ಎಂದೂ,

**ಏನಾ ತ ಇಂದ್ರೋಚಥಮಹೇಮ ಶ್ರವಸ್ಯಾ ನ ತ್ಮನಾ ವಾಜಯಂತಃ ।**
(ಋ. ಸಂ. ೨-೧೯-೭)

ಇತ್ಯಾದಿ ಋಕ್ಕುಗಳಲ್ಲಿ **ಬಲಿನಂ ಕುರ್ವತಃ** ಎಂದೂ,

**ಮಾಂ ನರಃ ಸ್ವಶ್ವಾ ವಾಜಯಂತೋ ಮಾಂ ವೃತಾಃ ಸಮರಣೇ ಹವಂತೇ ।**
(ಋ. ಸಂ. ೪-೪೨-೫)

ಇವೇ ಮುಂತಾದ ಕಡೆಗಳಲ್ಲಿ **ಸಂಗ್ರಾಮಮಿಚ್ಛಂತಃ** ಎಂದೂ.

**ಸ ಮಾತರಾ ವಿಚರನ್ವಾಜಯನ್ನಪಃ ಪ್ರ ಮೇಧಿರಃ ಸ್ವಧಯಾ ಪಿನ್ವತೇ ಪದಂ ।**
(ಋ. ಸಂ. ೯-೬೮-೪)

ಇತ್ಯಾದಿ ಕಡೆಗಳಲ್ಲಿ ಪ್ರೇರಯನ್ ಎಂದೂ ಹೀಗೆಯೇ ಅನೇಕಾರ್ಥಗಳಲ್ಲಿ ಉಪಯೋಗಿಸಲ್ಪಟ್ಟು ಪ್ರಕೃತವಾದ ಋಕ್ಕಿನಲ್ಲಿ ಭಾಷ್ಯಕಾರರು ಹೇಳಿರುವ ಎರಡರ್ಥಗಳೂ ಹೊಂದಿಕೊಳ್ಳುವುವು.

**ಕ್ಷಯದ್ವೀರಂ**—**ಅತಿಬಲಿನಂ ಯಸ್ಮಿನ್ ಸರ್ವೇ ವೀರಾಃ ಕ್ಷೀಯಂತೇ** । ಯಾವನ ಕೈಯಿಂದ ಸಕಲ ಶತ್ರುಗಳ ಕಡೆಯ ವೀರರೆಲ್ಲಾ ನಾಶಹೊಂದುವರೋ ಅಂತಹ ಪರಾಕ್ರಮವುಳ್ಳವನೆಂದು ಸಾಯಣರೂ, **ಕ್ಷಿ ನಿವಾಸಗತ್ಯೋಃ ವೀರಾಣಾಂ ನಿವಾಸಯಿತಾ ಕ್ಷಯದ್ವೀರಃ । ಪೂಷಾ ಹ್ಯಸ್ತಂ ಗಚ್ಛನ್ ಸರ್ವವೀರಾನ್ ಸ್ವೇ ಸ್ವೇ ಸ್ಥಾನೇ ನಿವಾಸಯತಿ । ತೇನಾಸೌ ಕ್ಷಯದ್ವೀರ ಇತ್ಯುಚ್ಯತೇ** । ಕ್ಷಿಶಬ್ದಕ್ಕೆ ವಾಸಸ್ಥಾನವೆಂದೂ, ಪೂಷನು ಅಸ್ತನಾಗುವ ಕಾಲದಲ್ಲಿ ಸಕಲ ವೀರರನ್ನೂ ಅವರವರ ವಾಸಸ್ಥಾನದಲ್ಲಿರಿಸುವನೆಂದೂ, ಆದುದರಿಂದ ಅವನಿಗೆ ಕ್ಷಯದ್ವೀರನೆಂಬ ಹೆಸರೆಂದೂ ಸ್ಕಂದಸ್ವಾಮಿಗಳೂ ವಿವರಿಸಿದ್ದಾರೆ.

**ಸುಮ್ನೈಃ**— **ಸುಮ್ನ**ಶಬ್ದವು **ಸುಖನಾಮ**ಗಳಲ್ಲಿ ಪಠಿತವಾಗಿದೆ (ನಿ. ೩-೧೩) **ಸುಖಕರೈಃ ಸ್ತೋತ್ರೈಃ** ಸುಖಕರವಾದ ಸ್ತುತಿಗಳಿಂದ ಎಂದರ್ಥ.

**ಈಮಹೇ**—**ಯಾಚಾಮಹೇ । ಅಭೀಷ್ಟಂ ಪ್ರಾರ್ಥಯಾಮಹೇ** । ಇಷ್ಟಾರ್ಥಗಳನ್ನು ಅನುಗ್ರಹಿಸಿ ಬೇಡಿಕೊಳ್ಳುತ್ತೇವೆ ಎಂದರ್ಥ. (ನಿ. ೩-೧೯)

ವ್ಯಾಕರಣಪ್ರಕ್ರಿಯಾ

**ನರಾಶಂಸಮ್**—ನರೈಃ ಶಂಸನೀಯಃ ನರಾಶಂಸಃ. **ಉಭೇ ವನಸ್ಪತ್ಯಾದಿಷು**—(ಪಾ. ಸೂ. ೬-೨-೧೪೦) ಎಂಬುದರಿಂದ ಒಟ್ಟಿಗೆ ಉಭಯಪದಪ್ರಕೃತಿಸ್ವರ ಬರುತ್ತದೆ. ನರಶಬ್ದವು **ಋದೋರಪ್**—(ಪಾ. ಸೂ. ೩-೩-೫೭) ಎಂಬುದರಿಂದ ಅಬಂತವಾದುದರಿಂದ ಆದ್ಯುದಾತ್ತವಾಗುತ್ತದೆ. ನಿಪಾತದಿಂದ ದೀರ್ಘ ಬರುತ್ತದೆ. ಶಂಸ ಶಬ್ದವು ಶಂಸು ಸ್ತುತೌ ಧಾತುವಿಗೆ ಘಞ್ ಬಂದು ನಿಷ್ಪನ್ನವಾಗಿದೆ. ಞಿನಂತವಾದುದರಿಂದ ಆದ್ಯುದಾತ್ತವಾಗುತ್ತದೆ.

**ವಾಜಯನ್**—ವಜ ವ್ರಜ ಗತೌ. ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತುಮತಿ ಚ**—(ಪಾ. ಸೂ. ೩-೧-೨೬) ಎಂಬುದರಿಂದ ಇದಕ್ಕೆ ಣಿಚ್. **ಅತ ಉಪಧಾಯಾಃ**—(ಪಾ. ಸೂ. ೭-೨-೧೧೬) ಎಂಬುದರಿಂದ ಆದಿವೃದ್ಧಿ. ಣಿಜಂತದ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. ಶಪ್‌ವಿಕರಣ. ತನ್ನಿಮಿತ್ತವಾಗಿ ಣಿಚಿಗೆ ಗುಣ. ಅಯಾದೇಶ. ಣಿಚ್‌ಸ್ವರ ಉಳಿಯುತ್ತದೆ. ಪ್ರಥಮಾಏಕವಚನಾಂತರೂಪ.

**ಕ್ಷಯದ್ವೀರಮ್**—ಕ್ಷಿ ಕ್ಷಯೇ. ಧಾತು. ಇದಕ್ಕೆ ಲಡರ್ಥದಲ್ಲಿ ಶತೃಪ್ರತ್ಯಯ. ಶಪ್‌ವಿಕರಣ ಪ್ರಾಪ್ತವಾದಾಗ **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ಶ ವಿಕರಣ. **ಛಂದಸ್ಯುಭಯಥಾ**—(ಪಾ. ಸೂ. ೩-೪-೧೧೭) ಎಂಬುದರಿಂದ ಇದಕ್ಕೆ ಆರ್ಧಧಾತುಕಸಂಜ್ಞೆ ಬರುವುದರಿಂದ **ಸಾರ್ವಧಾತುಕಮಪಿತ್**—ಸೂತ್ರದಿಂದ ಙಿತ್ವ ಬರುವುದಿಲ್ಲ. ಆಗ ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ, ಅಯಾದೇಶ. ಕ್ಷಯ+ಅತ್ ಎಂದಿರುವಾಗ ಅನುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅದು ಅನುದಾತ್ತವಾಗುತ್ತದೆ. **ಅತೋ ಗುಣೇ**—(ಪಾ. ಸೂ. ೬-೧-೯೭) ಎಂಬುದರಿಂದ ಪರರೂಪ. ಉದಾತ್ತದೊಡನೆ ಏಕಾದೇಶ ಬಂದುದರಿಂದ **ಏಕಾದೇಶ ಉದಾತ್ತೇನೋದಾತ್ತಃ**— (ಪಾ. ಸೂ. ೮-೨-೫) ಎಂಬುದರಿಂದ ಬಂದಿರುವ ಏಕಾದೇಶವು ಉದಾತ್ತವಾಗುತ್ತದೆ. ಕ್ಷಯತ್ ಎಂದು ಶತ್ರಂತ ಶಬ್ದ

ವಾಗುತ್ತದೆ. ಕ್ಷಯಂತಃ ವೀರಾಃ ಯಸ್ಮಿನ್ ತತ್ ಕ್ಷಯದ್ವೀರವ್. **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಪೂಷಣಮ್—ಶ್ವನ್ನುಕ್ಷನ್**—(ಉ. ಸೂ. ೧-೫೭) ಎಂಬುದರಿಂದ ಕನಿಪ್ರತ್ಯಯಾಂತವಾಗಿ ನಿಪಾತಿತವಾಗಿದೆ. **ಇನ್‌ಹನ್**—(ಪಾ. ಸೂ. ೬-೪-೧೩) ಎಂಬುದರಿಂದ ಸುವಿನಲ್ಲಿ ಮಾತ್ರ ದೀರ್ಘವೆಂದು ನಿಯಮಮಾಡಿರುವುದರಿಂದ ಉಪಧಾದೀರ್ಘ ಬರುವುದಿಲ್ಲ.

**ಈಮಹೇ**—ಈಜ್ ಗತೌ. ಧಾತು. ಲಡುತ್ತಮಪುರುಷ ಬಹುವಚನದಲ್ಲಿ ಮಹಿಜ್ ಪ್ರತ್ಯಯ. **ಟಿತ ಆತ್ಮನೇ**—ಎಂಬುದರಿಂದ ಟಿಗೆ ಏತ್ವ. **ಬಹುಲಂ ಛಂದಸಿ**—ಎಂಬುದರಿಂದ ವಿಕರಣಕ್ಕೆ (ಶ್ಯನ್) ಲುಕ್. ತಿಙಂತನಿಘಾತಸ್ವರ ಬರುತ್ತದೆ. ॥ ೪ ॥



ಸಂಹಿತಾಪಾಠಃ

ಬೃಹಸ್ಪತೇ ಸದಮಿನ್ನಃ ಸುಗಂ ಕೃಧಿ ಶಂ ಯೋರ್ಯತ್ತೇ
ಮನುರ್ಹಿತಂ ತದೀಮಹೇ ।
ರಥಂ ನ ದುರ್ಗಾದ್ವಸವಃ ಸುದಾನವೋ ವಿಶ್ವಸ್ಮಾನ್ನೋ ಅಂಹ-
ಸೋ ನಿಷ್ಪಿಪರ್ತನ ॥ ೫ ॥

ಪದಪಾಠಃ

ಬೃಹಸ್ಪತೇ । ಸದಂ । ಇತ್ । ನಃ । ಸುऽಗಂ । ಕೃಧಿ । ಶಂ । ಯೋಃ । ಯತ್ ।
ತೇ । ಮನುಃऽಹಿತಂ । ತತ್ । ಈಮಹೇ ।

ರಥಂ । ನ । ದುಃ ಽ ಗಾತ್ । ವಸವಃ । ಸು ಽ ದಾನವಃ । ವಿಶ್ವಸ್ಮಾತ್ । ನಃ । ಅಂ-
ಹಸಃ । ನಿಃ । ಪಿಪರ್ತನ ॥ ೨ ॥

ಸಾಯಣಭಾಷ್ಯಂ

ಬೃಹಸ್ಪತೇ ಸದಮಿತ್ ಸದೈವಾ ನೋಽಸ್ಮಾಕಂ ಸುಗಂ । ಸುಖನಾಮೈತತ್ । ಸುಖಂ ಕೃಧಿ । ಕುರು । ಅಪಿ ಚ ತೇ ತವ ಸ್ವಭೂತಂ ಶಂ ಶಮನೀಯಾನಾಂ ರೋಗಾಣಾಮುಪಶಮನಂ ಯೋಃ ಪೃಥ-ಕ್ಕರ್ತವ್ಯಾನಾಂ ಭಯಾನಾಂ ಯಾವನಂ ಪೃಥಕ್ಕರಣಂ ಮನುರ್ಹಿತಂ ಮನುನಾ ಬ್ರಹ್ಮಣಾ ಹಿತಂ ತ್ವಯ್ಯ-ವಸ್ಥಾಪಿತಂ । ಯದ್ವಾ । ಮನುಷ್ಯಾಣಾಮನುಕೂಲಂ । ಏವಂವಿಧಂ ಶಮನಂ ಯಾವನಂ ಚ ಯದಸ್ತಿ ತದೀಮಹೇ । ಯಾಚಾಮಹೇ ॥ ಸುಗಂ । ಸುಷ್ಠು ಗಮ್ಯತೇಽಸ್ಮಿನ್ನಿತಿ ಸುಗಂ । ಸುದುರೋರಧಿಕರಣ ಇತಿ ಗಮೇರ್ಡಃ। ಶಂ ಯೋರಿತ್ಯೇತತ್ಪದದ್ವಯಂ ಯಾಸ್ಕೇನೈವಂ ವ್ಯಾಖ್ಯಾತಂ। ಶಮನಂ ಚ ರೋಗಾಣಾಂ ಯಾವನಂ ಚ ಭಯಾನಾಂ । ನಿ ೪-೨೧ । ಇತಿ । ಮನುರ್ಹಿತಂ । ಮನೇರೌಣಾದಿಕ ಉಸಿನ್ಪ್ರತ್ಯಯಃ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ ॥ ೫

ಪ್ರತಿಪದಾರ್ಥ

ಬೃಹಸ್ಪತೇ—ಎಲೈ ಬೃಹಸ್ಪತಿಯೇ ! **ಸದಮಿತ್**—ಯಾವಾಗಲೂ । **ನಃ**—ನಮಗೆ । **ಸುಗಂ**—ಸುಖವನ್ನು । **ಕೃಧಿ**—ಉಂಟುಮಾಡು । **ಮನುರ್ಹಿತಂ**—(ನಿನ್ನಲ್ಲಿ) ಮನುವಿನಿಂದ ಸ್ಥಾಪಿತವಾದ ಅಥವಾ ಮಾನವರಿಗೆ ಉಪಕಾರಕವಾದ । **ಶಂ**—ರೋಗನಾಶಕವಾದುದೂ । **ಯೋಃ**—ಭಯನಿವಾರಕವಾದುದೂ ಆದ । **ಯತ್**—ಯಾವ ಶಕ್ತಿಯಿದೆಯೋ । **ತತ್**—ಅದನ್ನು । **ಈಮಹೇ**—ಯಾಚಿಸುತ್ತೇವೆ । **ದುರ್ಗಾತ್**—ಇಕ್ಕಟ್ಟಾದ ಕಣಿವೆ ದಾರಿಯಿಂದ । **ರಥಂ ನ**—(ಒಳ್ಳೆಯ) ಸಾರಥಿಯು ರಥವನ್ನು ಸುರಕ್ಷಿತವಾಗಿ ಹೊಡೆದು ಹೊರಕ್ಕೆ ತರುವಂತೆ । **ವಸವಃ**—ವಾಸಸ್ಥಾನವನ್ನು ದಯಪಾಲಿಸುವವರೂ । **ಸುದಾನವಃ**—ಉದಾರವಾಗಿ ದಾನಮಾಡುವವರೂ ಆದ ಇಂದ್ರಾದಿ ದೇವತೆಗಳು । **ನಃ**—ನಮ್ಮನ್ನು । **ವಿಶ್ವಸ್ಮಾತ್ ಅಂಹಸಃ**—ಸಮಸ್ತವಾದ ಪಾಪದಿಂದಲೂ । **ನಿಷ್ಪಿಪರ್ತನ** । ಮುಕ್ತರನ್ನಾಗಿಮಾಡಿ ರಕ್ಷಿಸಲಿ.

ಭಾವಾರ್ಥ

ಎಲೈ ಬೃಹಸ್ಪತಿಯೇ, ನಮಗೆ ಸರ್ವದಾ ಸುಖವನ್ನುಂಟುಮಾಡು. ಮನುವಿನಿಂದ ನಿನ್ನಲ್ಲಿ ಸ್ಥಾಪಿತವಾದ ಯಾವ ರೋಗನಾಶಕವಾದುದೂ ಭಯನಿವಾರಕವಾದುದೂ ಆದ ಶಕ್ತಿಯಿದೆಯೋ ನಾವು ಆಶಕ್ತಿಯ ಸಹಾಯವನ್ನು ಯಾಚಿಸುತ್ತೇವೆ. ಒಳ್ಳೆಯ ಸಾರಥಿಯು ಇಕ್ಕಟ್ಟಾದ ಕಣಿವೆಯ ದಾರಿಯಿಂದ ರಥವನ್ನು ಸುರಕ್ಷಿತವಾಗಿ ಹೊಡೆದು ಹೊರಕ್ಕೆ ತರುವಂತೆ, ವಾಸಸ್ಥಾನವನ್ನು ದಯಪಾಲಿಸುವವರೂ ಮತ್ತು ಉದಾರವಾದದಾನಿಗಳೂ ಆದ ಇಂದ್ರಾದಿ ದೇವತೆಗಳು ನಮ್ಮನ್ನು ಸಮಸ್ತವಾದ ಪಾಪದಿಂದಲೂ ಮುಕ್ತರನ್ನಾಗಿಮಾಡಿ ರಕ್ಷಿಸಲಿ.

## English Translation

Brihaspati, always confer happiness upon us; we solicit that faculty of both (alleviating pain and obviating peril) implanted in you by Manu: may they, who are bountiful and the givers of dwellings, extricate us from all sins, as a chariot from a defile.

### ವಿಶೇಷವಿಷಯಗಳು

**ಸದಂ ಇತ್**—**ಸದಂ ಇತಿ ಸದಾ ಇತ್ಯಸ್ಯ ಪರ್ಯಾಯಃ । ಇತ್ ಶಬ್ದಃ ಅತ್ರ ಏವಾರ್ಥೇ । ಸದೈವ ಇತ್ಯರ್ಥಃ ।** **ಸದಂ** ಎಂಬ ಶಬ್ದವು **ಸರ್ವದಾ** ಎನ್ನುವುದರ ಪರ್ಯಾಯಪದವು. **ಸದಂ ಇತ್** ವಿಚ್ಛಿತ್ತಿಯಿಲ್ಲದೆ ಯಾವಾಗಲೂ ಎಂದು ತಾತ್ಪರ್ಯ. ನಿರುಕ್ತಕಾರರು ಈ ಪದದ ಪ್ರಯೋಗವಿರುವ

**ದೇವಾ ನೋ ಯಥಾ ಸದಮಿದ್ವೃಧೇ ಅಸನ್ನಪ್ರಾಯುವೋ ರಕ್ಷಿತಾರೋ ದಿವೇದಿವೇ ।**
(ಋ. ಸಂ ೧-೮೯-೧)

ಎಂಬ ಋಕ್ಕನ್ನು ಉದಹರಿಸಿ **ಸದಂ** ಎನ್ನುವ ಪದಕ್ಕೆ **ಸರ್ವದಾ** ಎಂಬರ್ಥವೆಂದು ತೋರಿಸಿದ್ದಾರೆ. (ನಿ. ೪-೧೯)

**ಸುಗಂ**—**ಸುಗಂ ಇತ್ಯಪಠಿತಮಪಿ ಸುಖನಾಮ ದ್ರಷ್ಟವ್ಯಂ ।** ಸುಖನಾಮಗಳಲ್ಲಿ ಪಠಿತವಾಗಿಲ್ಲವಿದ್ದರೂ ಸಹ **ಸುಗ** ಶಬ್ದಕ್ಕೆ **ಸುಖ**ವೆಂದೇ ಅರ್ಥವೆಂದು ಸ್ಕಾಂದಸ್ವಾಮಿಗಳು,

**ಅಸ್ಮಭ್ಯಮಿಂದ್ರ ವರಿವಃ ಸುಗಂ ಕೃಧಿ ಪ್ರ ಶತ್ರೂಣಾಂ ಮಘವನ್ವೃಷ್ಣ್ಯಾ ರುಜ ।**
(ಋ. ಸಂ. ೧-೧೦೨-೪)

ಎಂಬ ಋಕ್ಕನ್ನು ಉದಹರಿಸಿ ಅಲ್ಲಿ **ಸುಗಂ** ಶಬ್ದಕ್ಕೆ ಹೇಗೆ **ಸುಖ**ವೆಂದರ್ಥವೋ ಅದರಂತೆ ಇಲ್ಲಿಯೂ **ಸುಖ**ವೆಂದರ್ಥವೆಂದು ವಿವರಿಸಿದ್ದಾರೆ.

ಈ ಅರ್ಥವಲ್ಲದೆ **ಸುಗಂ** ಶಬ್ದಕ್ಕೆ **ಶೋಭನಂ ಮಾರ್ಗಂ ।** ಸಂಚಾರದ ದೃಷ್ಟಿಯಿಂದ ಸುಲಭವಾಗಿ ಸಂಚರಿಸಬಹುದಾದ ಮಾರ್ಗವೆಂದೂ, ನೈತಿಕ ದೃಷ್ಟಿಯಿಂದ ಶ್ರೇಷ್ಠವಾದ ಮಾರ್ಗವೆಂದೂ ಅರ್ಥವಾಗುತ್ತದೆ. ಈ ಎರಡು ಅರ್ಥಗಳಲ್ಲಿಯೂ ಈ ಪದದ ಪ್ರಯೋಗವಿದೆ. ಉದಾಹರಣೆಗೆ—

**ದೇವಯಾನಾನ್ ಸುಗಾನ್ ಪಥಃ ಕುರುಷ್ವ ಸುಮನಾಃ ಸ್ವಯಂ ।**
(ಬೃ. ದೇ. ೭-೬೫)

ಎಂಬ ಶ್ಲೋಕದಲ್ಲಿ ದೇವತೆಗಳು ಸುಲಭವಾಗಿ ಸಂಚರಿಸತಕ್ಕ ಮಾರ್ಗಗಳೆಂದಾಗುತ್ತದೆ. ಇದೇ ಅರ್ಥದಲ್ಲಿ ಋಕ್ಸಂಹಿತೆಯಲ್ಲಿಯೂ ಸಹ,

**ಶಂ ನಃ ಕರತ್ಯರ್ವತೇ ಸುಗಂ ಮೇಷಾಯ ಮೇಷ್ಯೇ ।**
**ನೃಭ್ಯೋ ನಾರಿಭ್ಯೋ ಗವೇ ॥**

(ಋ. ಸಂ. ೧-೪೩-೬)

ಈ ಋಕ್ಕಿನಲ್ಲಿಯೂ ೮-೯೩-೧೦, ೧೦-೮೬-೫ ಇತ್ಯಾದಿ ಋಕ್ಕುಗಳಲ್ಲಿಯೂ ಸಹ ಸುಲಭವಾಗಿ ಸಂಚರಿಸಬಹುದಾದ ಮಾರ್ಗವೆಂದೂ,

**ಬೃಹಸ್ಪತೇ ಅಪ ತಂ ವರ್ತಯಾ ಪಥಃ ಸುಗಂ ನೋ ಅಸ್ಯೈ ದೇವವೀತಯೇ ಕೃಧಿ ।**
(ಋ. ಸಂ. ೨-೨೩-೭)

ಇತ್ಯಾದಿ ಋಕ್ಕುಗಳಲ್ಲಿ ಇರುವ **ಸುಗಂ** ಶಬ್ದಕ್ಕೆ ನೈರುಕ್ತಿಕವಾದ ವ್ಯುತ್ಪತ್ತಿಯಲ್ಲಿ **ಸುಷ್ಠು ಗಂತವ್ಯಂ । ಯಜ್ಞಾನುಷ್ಠಾನಾಯ ಸುಮತಿಂ ದೇಹಿ ।** ಯಜ್ಞಾನುಷ್ಠಾನಗಳನ್ನು ಮಾಡತಕ್ಕ **ಸದ್ಬುದ್ಧಿ**ಯೆಂದೂ ಅರ್ಥವಾಗುತ್ತದೆ. ಮತ್ತು,

**ಇಂದ್ರಾಸೋಮಾ ದುಷ್ಕೃತೇ ಮಾ ಸುಗಂ ಭೂದ್ಯೋ ನಃ ಕದಾ ಚಿದಭಿದಾಸತಿ ದ್ರುಹಾ ।**
(ಋ. ಸಂ. ೭-೧೦೪-೭)

ಇತ್ಯಾದಿ ಸ್ಥಳಗಳಲ್ಲಿ ಸುಖವೆಂದೂ ಅರ್ಥವಾಗುತ್ತದೆ. ಈ ಕೊನೆಯ ಅರ್ಥವನ್ನೇ ಪ್ರಕೃತವಾದ ಋಕ್ಕಿನಲ್ಲೂ ಹೇಳಬೇಕೆಂದು ಭಾಷ್ಯಕಾರರ ಅಭಿಪ್ರಾಯವು.

**ಶಂ ಯೋಃ**—ಶಂ ಎಂದರೆ **ಸುಖಂ ಯೋಃ** (ನಿ. ೫-೨೧) **ಶಮನಂ ಚ ರೋಗಾಣಾಂ ಯಾವನಂ ಭಯಾನಾಂ ।** ಅಂದರೆ ರೋಗಗಳ ಶಮನರೂಪವಾದ ಸುಖವೂ ಭಯದ ನಿವಾರಣಾರೂಪವಾದ ಸುಖವೂ ಎಂದರ್ಥ. ನಮ್ಮ ರೋಗಗಳನ್ನು ಶಮನಮಾಡಿ ಭಯವನ್ನು ನಿವಾರಿಸು ಎಂಬಭಿಪ್ರಾಯ. ಇಲ್ಲಿ **ಸುಖ** ರೂಪವಾದ ಶಂಯುವಿಗೂ ಬೃಹಸ್ಪತಿ ಪುತ್ರನಾದ ಶಂಯುವಿಗೂ ಇರತಕ್ಕ ಸಂಬಂಧವನ್ನು ತಿಳಿದರೆ ಆಗ ಬೃಹಸ್ಪತಿಯನ್ನು ಪ್ರಾರ್ಥಿಸುವ ಈ ಋಕ್ಕಿನಲ್ಲಿ **ಶಂಯು** ಪದದ ಔಚಿತ್ಯವು ಚೆನ್ನಾಗಿ ತಿಳಿಯುತ್ತದೆ. (೧-೯೩-೭, ಇತ್ಯಾದಿ ಋಕ್ಕುಗಳಲ್ಲಿ ಇತರ ದೇವತೆಗಳನ್ನು ಪ್ರಾರ್ಥಿಸುವಾಗಲೂ ಸಹ **ಶಂಯು**ವೆಂದರೆ ಸುಖವೆಂದರ್ಥವಾಗುತ್ತದೆ) ಬೃಹಸ್ಪತಿಪುತ್ರನಿಗೆ ಶಂಯುವೆಂದು ಹೆಸರು.

**ತಚ್ಛಂಯೋರಾವೃಣೀಮಹೇ ।**
(ತೈ. ಸಂ. ೨-೬-೧೦-೨)

ಎಂಬಲ್ಲಿ ಬೃಹಸ್ಪತಿಪುತ್ರನಾದ **ಶಂಯುವಿನಿಂದ ಶಂಯುವ**ನ್ನು (ಸುಖ) ಅಪೇಕ್ಷಿಸುತ್ತೇವೆ ಎಂದು ಪ್ರಾರ್ಥಿಸಿದೆ. **ಪ್ರಕೃತವಾದ ಋಕ್ಕಿನಲ್ಲಿ ಮನುರ್ಹಿತಃ** ಎಂಬುದಕ್ಕೆ ಮಾನವರಿಗೆ ಹಿತಕಾರಕವಾದ ಎಂದರ್ಥವಾದರೆ ಇಂತಹ ಮನುರ್ಹಿತವಾದ ಸುಖವನ್ನು ಹಿಂದೆ ಬೃಹಸ್ಪತಿಪುತ್ರನು ದೇವಲೋಕವನ್ನು ಮಾತ್ರ ಸೇರುವಂತೆ ಮಾಡಿ ಅದನ್ನು ಮಾನವರಿಗೆ ತಪ್ಪಿಸಿದನೆಂದು ಶತಪಥ ಬ್ರಾಹ್ಮಣದಲ್ಲಿ ಒಂದು ಕಥೆಯಿದೆ.

**ಅಥ ಶಂಯೋರಾಹ । ಶಮ್ಯುರ್ಹ ವೈ ಬಾರ್ಹಸ್ಪತ್ಯೋಽಂಜಸಾ ಯಜ್ಞಸ್ಯ ಸಂಸ್ಥಾಂ ವಿದಾಂ ಚಕಾರ ಸ ದೇವಲೋಕಮಪೀಯಾಯ ತತ್ತದಂತರ್ಹಿತಮಿವ ಮನುಷ್ಯೇಭ್ಯ ಆಸ ।**
(ಶ. ಬ್ರಾ. ೧-೯-೧-೨೪)

ಎಂಬ ಬ್ರಾಹ್ಮಣವಾಕ್ಯಗಳಿಂದ ಬೃಹಸ್ಪತಿಪುತ್ರನಾದ ಶಂಯುವು ಹಿಂದೆ ಯಾಗದ ಶ್ರೇಷ್ಠತೆಯನ್ನು ಅರಿತು ಆ ಜ್ಞಾನದಿಂದ ಲಭಿಸಬಹುದಾದ ಸೌಖ್ಯವನ್ನು ಪಡೆಯುವುದಕ್ಕೆ ದೇವಲೋಕಕ್ಕೆ ಹೋದನು. ಆಗಿನಿಂದ ಮನುಷ್ಯರಿಗೆ ಆ ಜ್ಞಾನವು ನಷ್ಟವಾಯಿತು.

ತದ್ವಾ ಋಷೀಣಾಮನುಶ್ರುತಮಾಸ । .... .... .... .... .... .... ತೇ ತಾಮೇವ ಯಜ್ಞಸ್ಯ ಸಂಸ್ಥಾಮುಪಾಯಯನ್ಯಾಂ ಶಂಯುರ್ಬಾರ್ಹಸ್ಪತ್ಯೋ ವೇದ್ಯಚ್ಛಂಯೋರಬ್ರುವಂಸ್ತಾಮೇ-ವೈಷ ಏತದ್ಯಜ್ಞಸ್ಯ ಸಂಸ್ಥಾಮುಪೈತಿ ... ... .... .... ... .... ತಸ್ಮಾದ್ವೈ ಶಂಯೋರಾಹ । ಸ ಪ್ರತಿಪದ್ಯತೇ । ತಚ್ಛಂಯೋ ರಾವೃಣೀಮಹ ಇತಿ।

( ಶ. ಬ್ರಾ. ೧-೯-೧-೨೫ )

ಈ ವಿಷಯವು ಋಷಿಗಳಿಗೆ ತಿಳಿದು ಅನಂತರ ಶಂಯೋಃ ಎಂದು ಮಂತ್ರವನ್ನು ಉಚ್ಚರಿಸಿದನಂತರ ಈ ಯಜ್ಞಸ್ವರೂಪವನ್ನು ಮಾನವರ ಹಿತಕ್ಕಾಗಿ ಸಂಪಾದಿಸಿಕೊಂಡರು ಎಂದು ಕಥೆಯ ವಿವರಣೆಯಿದೆ. ಆದುದರಿಂದ ರೋಗಗಳ ಶಮನರೂಪವಾದದೂ ಭಯದ ನಿವಾರಣಾರೂಪವಾದುದೂ ಆದ ಸುಖವನ್ನು ನಿರೀಕ್ಷಿಸಿ ಪ್ರಾರ್ಥಿಸುವಾಗ ಬೃಹಸ್ಪತಿಯನ್ನುದ್ದೇಶಿಸಿದ ಋಕ್ಕಿನಲ್ಲಿ ಹೆಚ್ಚು ಔಚಿತ್ಯವಿರುವುದೆಂದು ಹೇಳಬಹುದು.

॥ ವ್ಯಾಕರಣಪ್ರಕ್ರಿಯಾ

**ಬೃಹಸ್ಪತೇ—ತತ್ಬೃಹತೋಃ**—(ಪಾ. ಸೂ. ೬-೧-೧೫೭) ಎಂಬುದರಿಂದ ಪೂರ್ವಪದಕ್ಕೆ ಸುಡಾಗಮ ತಲೋಪ. ವನಸ್ಪತ್ಯಾದಿಗಣದಲ್ಲಿ ಸೇರಿರುವುದರಿಂದ ಒಟ್ಟಿಗೆ ಉಭಯಪದ ಪ್ರಕೃತಿಸ್ವರ ಬರುತ್ತದೆ. ಇಲ್ಲಿ ಸಂಬುದ್ಧಿಯಾದುದರಿಂದ ಪಾದಾದಿಯಲ್ಲಿ ಬಂದುದರಿಂದ **ಆಮಂತ್ರಿತಸ್ಯ**—(ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸುಗಮ್**—ಸುಖ್ಯು ಗಮ್ಯತೇಽಸ್ಮಿನ್ ಇತಿ ಸುಗಮ್. **ಸುದುರೋರಧಿಕರಣೇ**—ಎಂಬ ವಾರ್ತಿಕದಿಂದ ಅಧಿಕರಣಾರ್ಥದಲ್ಲಿ ಗಮ್ಲೃ ಧಾತುವಿಗೆ ಡಪ್ರತ್ಯಯ. ಡಿತ್ವಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಕೃಧಿ**—ಡುಕೃಞ್ ಕರಣೇ. ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿಆದೇಶ ಬಂದಾಗ **ಶ್ರುಶೃಣು ಪೃಕೃ**—(ಪಾ. ಸೂ. ೬-೪-೧೦೨) ಎಂಬುದರಿಂದ ಅದಕ್ಕೆ ಧಿ ಆದೇಶ. **ಬಹುಲಂ ಛಂದಸಿ**—ಎಂಬುದರಿಂದ ವಿಕರಣಕ್ಕೆ ಲುಕ್. ತಿಙಂತನಿಘಾತಸ್ವರ ಬರುತ್ತದೆ.

**ಶಂಯೋಃ**—ಈ ಎರಡು ಪದಗಳಲ್ಲಿ ಯಾಸ್ಕರು ಹೀಗೆ ವ್ಯಾಖ್ಯಾನಮಾಡಿರುತ್ತಾರೆ. **ಶಮನಂ ಚ ರೋಗಾಣಾಂ ಯಾವನಂ ಚ ಭಯಾನಾಮ್**-(ನಿರು. ೪-೨೧) ಇತಿ. (ರೋಗ ಶಾಮಕವಾದ ಮತ್ತು ಭಯನಿವಾರಕ)

**ಮನುರ್ಹಿತಮ್**—ಮನ ಜ್ಞಾನೇ ಧಾತು. ಇದಕ್ಕೆ ಔಣಾದಿಕವಾದ ಉಸಿಸ್ ಪ್ರತ್ಯಯ. ಮನುಷ್ ಎಂದು ರೂಪವಾಗುತ್ತದೆ. **ಇತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಮನುಷಾ ಹಿತಮ್ ಮನುರ್ಹಿತಮ್. **ತೃತೀಯಾ ಕರ್ಮಣಿ**—(ಪಾ. ಸೂ. ೬-೨-೪೮) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ॥ ೫ ॥

ಸಂಹಿತಾಪಾಠಃ

ಇಂದ್ರಂ ಕುತ್ಸೋ ವೃತ್ರಹಣಂ ಶಚೀಪತಿಂ ಕಾಟೇ ನಿಬಾಳ್ಹ
ಋಷಿರಹ್ವದೂತಯೇ।
ರಥಂ ನ ದುರ್ಗಾದ್ವಸವಃ ಸುದಾನವೋ ವಿಶ್ವಸ್ಮಾನ್ನೋ ಅಂಹ-
ಸೋ ನಿಷ್ಪಿಪರ್ತನ ॥ ೬ ॥

ಪದಪಾಠಃ

ಇಂದ್ರಂ । ಕುತ್ಸಃ । ವೃತ್ರಽಹನಂ । ಶಚೀಂ ಪತಿಂ । ಕಾಟೇ । ನಿಽಬಾ-
ಳ್ಹಃ । ಋಷಿಃ । ಅಹ್ವತ್ । ಊತಯೇ ।
ರಥಂ । ನ । ದುಃಽಗಾತ್ । ವಸವಃ । ಸುಽದಾನವಃ । ವಿಶ್ವಸ್ಮಾತ್ । ನಃ । ಅಂ-
ಹಸಃ । ನಿಃ । ಪಿಪರ್ತನ ॥ ೧ ॥

॥ ಸಾಯಣಭಾಷ್ಯಂ ।

ಕಾಟ ಇತಿ ಕೂಪನಾಮ। ತಸ್ಮಿನ್ನಿಬಾಳ್ಹೋ ನಿಪಾತಿತಃ ಕುತ್ಸ ಋಷಿರೂತಯೇ ರಕ್ಷಣಾಯೇಂದ್ರ-ಮಹ್ವತ್ । ಆಹ್ವಯತಿ ಸ್ಮ । ಕೀದೃಶಂ । ವೃತ್ರಹಣಂ ವೃತ್ರಾಣಾಂ ಶತ್ರೂಣಾಂ ಹಂತಾರಂ । ಶಚೀಪತಿಂ। ಶಚೀತಿ ಕರ್ಮನಾಮ । ಸರ್ವೇಷಾಂ ಕರ್ಮಣಾಂ ಪಾಲಯಿತಾರಂ। ಯದ್ವಾ। ಶಚ್ಯಾ ದೇವ್ಯಾ ಭರ್ತಾರಂ ॥ ಶಚೀಪತಿಂ । ವನಸ್ಪತ್ಯಾದಿಷು ಪಾಠಾದುಭಯಪದಪ್ರಕೃತಿಸ್ವರತ್ವಂ । ಶಚೀಶಬ್ದಃ ಶಾರ್ಙ್ಗರವಾದಿಙೀನಂತ ಆದ್ಯುದಾತ್ತಃ । ನಿಬಾಳ್ಹಃ । ಬಾಹೃ ಪ್ರಯತ್ನೇ । ನೀತ್ಯುಪಸರ್ಗವಶಾತ್ಪತನೇ ವರ್ತತೇ । ನಿಷ್ಠಾಯಾ-ಮನಿತ್ಯಮಾಗಮಶಾಸನಮಿತೀಡಭಾವಃ । ಢತ್ವಧತ್ವಾದೀನಿ । ಯದ್ವಾ। ಕ್ಷುಬ್ಧಸ್ವಾಂತೇತ್ಯಾದೌ । ಪಾ. ೭-೨-೧೮ । ಭೃಶಾರ್ಥ ಇಡಭಾವೋ ನಿಪಾತ್ಯತೇ । ಅತ್ರ ಚ ವಾಢಶಬ್ದೋ ಭೃಶತ್ವೋಪೇತೇ ಪತನೇ ಸಾಮರ್ಥ್ಯಾದ್ವರ್ತತೇ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಅಹ್ವನ್ । ಲಿಪಿಸಿಚಿಹ್ವಶ್ಚ । ಪಾ. ೩-೧-೫೩ । ಇತಿ ಲುಙ' ಚ್ಲೇರಙಾದೇಶಃ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ ॥

ಪ್ರತಿಪದಾರ್ಥ

**ಕಾಟೇ**— ಬಾವಿಯಲ್ಲಿ । **ನಿಬಾಳ್ಹಃ**— ತಳ್ಳಲ್ಪಟ್ಟ । **ಕುತ್ಸಃ ಋಷಿಃ**— ಕುತ್ಸನೆಂಬ ಋಷಿಯು । **ಊತಯೇ**—ರಕ್ಷಣಾರ್ಥವಾಗಿ । **ವೃತ್ರಹಣಂ**—ಶತ್ರುನಾಶಕನೂ । **ಶಚೀಪತಿಂ**—ಸಕಲಕರ್ಮಗಳಿಗೂ ಪಾಲಕನೂ ಅಥವಾ ಶಚೀದೇವಿಯ ಪತಿಯೂ ಆದ । **ಇಂದ್ರಂ**— ಇಂದ್ರನನ್ನು । **ಅಹ್ವತ್**—ಕರೆದನು । **ದುರ್ಗಾತ್**— ಇಕ್ಕಟ್ಟಾದ ಕಣಿವೆದಾರಿಯಿಂದ । **ರಥಂ ನ**— (ಒಳ್ಳೆಯ ಸಾರಥಿಯು) ರಥವನ್ನು ಸುರಕ್ಷಿತವಾಗಿ ಹೊಡೆದು ಹೊರಕ್ಕೆ ತರುವಂತೆ । **ವಸವಃ**— ವಾಸಸ್ಥಾನವನ್ನು ದಯಪಾಲಿಸುವವರೂ । **ಸುದಾನವಃ**— ಉದಾರವಾಗಿ ದಾನಮಾಡುವವರೂ ಆದ ಇಂದ್ರಾದಿದೇವತೆಗಳು । **ನಃ**—ನಮ್ಮನ್ನು । **ವಿಶ್ವಸ್ಮಾತ್ ಅಂಹಸಃ**—ಸಮಸ್ತವಾದ ಪಾಪದಿಂದಲೂ । **ನಿಷ್ಪಿಪರ್ತನ**—ಮುಕ್ತರನ್ನಾಗಿಮಾಡಿ ರಕ್ಷಿಸಲಿ ॥

ಭಾವಾರ್ಥ

ಕುತ್ಸನೆಂಬ ಋಷಿಯು ಬಾವಿಯಲ್ಲಿ ತಳ್ಳಲ್ಪಟ್ಟಾಗ ಶತ್ರುನಾಶಕನೂ ಮತ್ತು ಸಕಲ ಕರ್ಮಗಳ ಪಾಲಕನೂ ಆದ ಇಂದ್ರನನ್ನು ರಕ್ಷಣಾರ್ಥವಾಗಿ ಕರೆದನು. ಒಳ್ಳೆಯ ಸಾರಥಿಯು ಇಕ್ಕಟ್ಟಾದ ಕಣಿವೆ ದಾರಿಯಿಂದ ರಥವನ್ನು ಸುರಕ್ಷಿತವಾಗಿ ಹೊಡೆದು ಹೊರಕ್ಕೆತರುವಂತೆ ವಾಸಸ್ಥಾನವನ್ನು ದಯಪಾಲಿಸುವವರೂ ಮತ್ತು ಉದಾರವಾಗಿ ದಾನ ಮಾಡುವವರೂ ಆದ ಇಂದ್ರಾದಿ ದೇವತೆಗಳು ನಮ್ಮನ್ನು ಸಮಸ್ತವಾದ ಪಾಪದಿಂದಲೂ ಮುಕ್ತರನ್ನಾಗಿ ಮಾಡಿ ರಕ್ಷಿಸಲಿ.

English Translation

Kutsa, the Rishi, thrown into a well, has invoked to his succour, Indra, the slayer of enemies, the encourager of good works: may they, who are bountiful and the givers of dwellings, extricate us from all sin, as a chariot from a defile.

॥ ವಿಶೇಷವಿಷಯಗಳು ॥

**ಕಾಟೇ**—ಕಾಟ ಶಬ್ದವು ಕೂಪನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೨೩) ಕಾಟೇ ಎಂದರೆ ಬಾವಿಯಲ್ಲಿ ಎಂದರ್ಥ.

ನಿಬಾಳ್ಹಃ—ನಿಪಾತಿತಃ ತಳ್ಳಲ್ಪಟ್ಟವನಾಗಿ ಎಂದು ಸಾಯಣರು. **ನಿಬಾಧ್ಯ ಇತಿ ನಿಶಬ್ದಃ ಪ್ರಕರ್ಷೇ। ನಿಕೃಷ್ಟಂ ನಿರುಕ್ತಮಿತಿ ಯಥಾ ಅತಿಶಯೇನ ಬಾಧ್ಯತೇ ಅಸೌ ಇತಿ ನಿಬಾಳ್ಹಃ। ಕೂಪೇ ಅತಿ ಸಂಬಾಧತ್ವಾತ್ ।** ನಿಕೃಷ್ಟ, ನಿರುಕ್ತ ಎಂಬ ಪದಗಳಲ್ಲಿ ನಿಃ ಎಂಬ ಉಪಸರ್ಗವು ಅತಿಶಯವಾಗಿ ಎಂಬ ಅರ್ಥವನ್ನು ಕೊಡುವಂತೆ ಇಲ್ಲಿಯೂ ಪದ ಅತ್ಯಧಿಕವಾಗಿ ಎಂಬರ್ಥವನ್ನು ಕೊಡುತ್ತದೆ. ಇಕ್ಕಟ್ಟಾದ ಬಾವಿಯಲ್ಲಿ ಅತ್ಯಂತವಾಗಿ ಬಾಧೆ ಯನ್ನು ಅನುಭವಿಸುತ್ತಿದ್ದ ಕ್ರಿತನು ಎಂದು ವ್ಯಾಖ್ಯಾನಿಗಳೂ ಈ ಪದಕ್ಕೆ ಅರ್ಥವನ್ನು ವಿವರಿಸಿರುವರು

**ಶಚೀಪತಿಂ**—ಶಚೀಶಬ್ದವು **ವಾಙ್**ನಾಮಗಳಲ್ಲಿಯೂ (ನಿ. ೨-೨೩) **ಕರ್ಮ**ನಾಮಗಳಲ್ಲಿಯೂ (ನಿ ೩.೧) **ಪ್ರಜ್ಞಾ**ನಾಮಗಳಲ್ಲಿಯೂ (ನಿ. ೩-೧೩) ಪಠಿತವಾಗಿದೆ. **ಶಚಿ**ಯೆಂಬುದು **ಇಂದ್ರಾಣಿಯ** ಹೆಸರೂ ಆಗಿದೆ. ಆದುದರಿಂದ **ಶಚೀಪತಿ**ಯೆಂದರೆ ಸ್ತುತಿರೂಪವಾದ ವಾಕ್ಕುಗಳಿಗೆ ಅಧಿಪತಿಯೆಂದಾಗಲಿ, ಕರ್ಮಾಧಿಪತಿಯೆಂದಾಗಲಿ ಅಥವಾ ಇಂದ್ರಾಣಿಯ ಪತಿಯೆಂದಾಗಲಿ ಅರ್ಥವಾಗುತ್ತದೆ.

ವ್ಯಾಕರಣಪ್ರಕ್ರಿಯಾ

**ವೃತ್ರಹಣಮ್**—ವೃತ್ರಂ ಹತವಾನ್ ವೃತ್ರಹಾ। ಹನ ಹಿಂಸಾಗತ್ಯೋಃ ಧಾತು. **ಬ್ರಹ್ಮಭ್ರೂಣವೃತ್ರೇಷು**—(ಪಾ. ಸೂ. ೩-೨-೮೭) ಎಂಬುದರಿಂದ ಭೂತಾರ್ಥದಲ್ಲಿ ಕ್ವಿಪ್ ಪ್ರತ್ಯಯ. ದ್ವಿತೀಯಾ ಏಕವಚನ ಪರವಾದಾಗ **ಇನ್‌ಹನ್‌ಪೂಷಾ**—(ಪಾ. ಸೂ. ೬-೪-೧೨) ಎಂದು ನಿಯಮಮಾಡಿರುವುದರಿಂದ ಉಪಧಾದೀರ್ಘ ಬರುವುದಿಲ್ಲ.

**ಶಚೀಪತಿಮ್**—**ಉಭೇ ವನಸ್ಪತ್ಯಾದಿಷು**—ಎಂಬುದರಿಂದ ಆಗಣದಲ್ಲಿ ಇದು ಪಠಿತವಾದುದರಿಂದ ಶಚೀ ಶಬ್ದವು ಜೀನಂತವಾಗಿ ಆದ್ಯುದಾತ್ತವಾಗುತ್ತದೆ.

**ನಿಬಾಳ್ಹಃ**—ಬಾಧೃ ಪ್ರಯುತ್ನೇ. ಧಾತು. ನಿ ಎಂಬ ಉಪಸರ್ಗ ಸಂಬಂಧದಿಂದ ಪತನಾರ್ಥದಲ್ಲಿ ಪ್ರಯುಕ್ತವಾಗಿದೆ. ಉಪಸರ್ಗವಶದಿಂದ ಧಾತ್ವರ್ಥವು ಬೇರೆಯಾಗುವುದೆಂದು ಹಿಂದೆ ಹೇಳಿದೆ. **ನಿಷ್ಠಾ**—(ಪಾ. ಸೂ. ೩-೨-೧೦೨) ಎಂಬುದರಿಂದ ಇದಕ್ಕೆ ಕ್ತಪ್ರತ್ಯಯ. **ಆಗಮಾನುಶಾಸನಮನಿತ್ಯಮ್**—ಎಂಬ ವಚನದಿಂದ ಇಡಾಗಮ ಬರುವುದಿಲ್ಲ. **ಹೋಢಃ**—(ಪಾ. ಸೂ. ೮-೨-೩೧) ಎಂಬುದರಿಂದ ಧಾತುಹಕಾರಕ್ಕೆ ಢತ್ವ. **ಝಷಸ್ತಥೋ**—(ಪಾ. ಸೂ. ೮-೨-೪೦) ಎಂಬುದರಿಂದ ಪ್ರತ್ಯಯಕ್ಕೆ ಧತ್ವ. ಷ್ಟುತ್ವದಿಂದ ಢತ್ವ. **ಢೋಢೇಲೋಪಃ** ಎಂಬುದರಿಂದ ಪೂರ್ವಢಕಾರಕ್ಕೆ ಲೋಪ. ಅಥವಾ **ಕ್ಷುಬ್ಧಸ್ವಾಂತ**—(ಪಾ. ಸೂ. ೭-೨-೧೮) ಎಂಬುದರಿಂದ ಭೃಶಾರ್ಥದಲ್ಲಿ (ಅತಿಶಯ) ಇಡಭಾವವು ನಿಪಾತಿತವಾಗಿದೆ. ಇಲ್ಲಿ ಬಾಢಶಬ್ದವು ಶಬ್ದಶಕ್ತಿಸಾಮರ್ಥ್ಯದಿಂದ ಭೃಶಾರ್ಥದಿಂದ ಕೂಡಿದ ಪತನಾರ್ಥದಲ್ಲಿ ಇದೆ. **ಗತಿರನಂತರಃ**—(ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ನಿ) ಪ್ರಕೃತಿಸ್ವರ ಬರುತ್ತದೆ.

**ಅಹ್ವತ್**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ**—ಎಂಬುದರಿಂದ ಇಕಾರಲೋಪ. **ಚ್ಲಿ ಲುಙಿ**—ಎಂಬುದರಿಂದ ಚ್ಲಿ ಬಂದಾಗ—**ಲಿಪಿಸಿಚಿಹ್ವಶ್ಚ**—(ಪಾ. ಸೂ. ೩-೧-೫೩) ಎಂಬುದರಿಂದ ಅದಕ್ಕೆ ಅಙಾದೇಶ. **ಆದೇಚ ಉಪದೇಶೇ**—(ಪಾ. ಸೂ. ೬-೧-೪೫) ಎಂಬುದರಿಂದ ಧಾತುವಿನ ಏಕಾರಕ್ಕೆ ಆತ್ವ. **ಆತೋಲೋಪ ಇಟಿಚ** (ಪಾ ಸೂ. ೬-೪-೬೪) ಎಂಬುದರಿಂದ ಆಕಾರಕ್ಕೆ ಲೋಪ. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ. ॥ ೬ ॥



ಸಂಹಿತಾಪಾಠಃ

ದೇವೈರ್ನೋ ದೇವ್ಯದಿತಿರ್ನಿ ಪಾತು ದೇವಸ್ತ್ರಾತಾ ತ್ರಾಯತಾ-
ಮಪ್ರಯುಚ್ಛನ್ ।
ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ
ಪೃಥಿವೀ ಉತ ದ್ಯೌಃ ॥ ೭ ॥

ಪದಪಾಠಃ

ದೇವೈಃ । ನಃ । ದೇವೀ । ಅದಿತಿಃ । ನಿ । ಪಾತು । ದೇವಃ । ತ್ರಾತಾ । ತ್ರಾಯತಾಂ ।
ಅಪ್ರಽಯುಚ್ಛನ್ ।
ತತ್ । ನಃ । ಮಿತ್ರಃ । ವರುಣಃ । ಮಮಹಂತಾಂ । ಅದಿತಿಃ । ಸಿಂಧುಃ । ಪೃಥಿವೀ ।
ಉತ । ದ್ಯೌಃ ॥ ೭ ॥

ಸಾಯಣಭಾಷ್ಯಂ

ದೇವೀ ದಾನಾದಿಗುಣಯುಕ್ತಾದಿತಿರಖಂಡನೀಯಾದೀನಾ ವಾ ದೇವಮಾತಾ ದೇವೈರ್ದಾನಾದಿ-ಗುಣಯುಕ್ತೈಃ ಸ್ವಕೀಯೈಃ ಪುತ್ರೈಃ ಸಹ ನೋಽಸ್ಮಾನ್ನಿ ಪಾತು । ನಿತರಾಂ ರಕ್ಷತು । ದೇವೋ ದೀಪ್ಯ-ಮಾನಸ್ತ್ರಾತಾ ಸರ್ವೇಷಾಂ ರಕ್ಷಕಃ ಸವಿತಾಪ್ರಯುಚ್ಛನ್ ಅಪ್ರಮಾದ್ಯನ್ ಅಸ್ಮದ್ರಕ್ಷಣೇ ಜಾಗರೂಕಃ ಸನ್ ತ್ರಾಯತಾಂ । ಅಸ್ಮಾನ್ಪಾಲಯತು । ಯದನೇನ ಸೂಕ್ತೇನಾಸ್ಮಾಭಿಃ ಪ್ರಾರ್ಥಿತಂ ನೋಽಸ್ಮದೀಯಂ ತನ್ಮಿತ್ರಾದಯಃ ಷಡ್ದೇವತಾ ಮಮಹಂತಾಂ । ಪೂಜಯಂತು ॥ ತ್ರಾಯತಾಂ । ತ್ರೈಙ್ ಪಾಲನೇ । ಭೌವಾದಿಕಃ । ಅಪ್ರಯುಚ್ಛನ್ । ಯುಚ್ಛ ಪ್ರಮಾದೇ । ಅಸ್ಮಾಲ್ಲಟಃ ಶತೃ । ನಞ್ಸಮಾಸೇಽವ್ಯಯ ಪೂರ್ವಪದಪ್ರಕೃತಿಸ್ವರತ್ವಂ ॥

ಪ್ರತಿಪದಾರ್ಥ

ದೇವೀ— ದಾನಾದಿಗುಣಗಳಿಂದ ಕೂಡಿದ। ಅದಿತಿಃ— ದೇವತೆಗಳ ತಾಯಿಯಾದ ಅದಿತಿಯು। ದೇವೈಃ— (ತನ್ನ ಪುತ್ರರಾದ) ಸಕಲ ದೇವತೆಗಳೊಡನೆಯೂ। ನಃ— ನಮ್ಮನ್ನು । ನಿ ಪಾತು— ಸಂಪೂರ್ಣವಾಗಿ

ರಕ್ಷಿಸಲಿ. **ದೇವಃ**—ಪ್ರಕಾಶಮಾನನೂ । **ತ್ರಾತಾ**—ಸಕಲರಿಗೂ ರಕ್ಷಕನೂ ಆದ ಸವಿತೃವು । **ಅಪ್ರಯುಚ್ಛನ್**—ಅಜಾಗರೂಕನಾಗಿಲ್ಲದೆ (ಯಾವಾಗಲೂ ಜಾಗರೂಕನಾಗಿದ್ದುಕೊಂಡು) । **ತ್ರಾಯತಾಂ**—(ನಮ್ಮನ್ನು) ಸಂರಕ್ಷಿಸಲಿ. **ನಃ**—ನಮ್ಮ । **ತತ್**—ಪ್ರಾರ್ಥಿತವಾದ ಇಷ್ಟಾರ್ಥವನ್ನು । **ಮಿತ್ರಃ**—ಮಿತ್ರನೂ । **ವರುಣಃ**—ವರುಣನೂ । **ಅದಿತಿಃ**—ಅದಿತಿಯೂ । **ಸಿಂಧುಃ**—ಸಾಗರಾಧಿ ದೇವತೆಯೂ । **ಪೃಥಿವೀ**—ಪೃಥಿವಿಯೂ । **ಉತ**—ಮತ್ತು । **ದ್ಯೌಃ**—ದ್ಯುಲೋಕಾಧಿದೇವತೆಯೂ । **ಮಮಹಂತಾಂ**—ರಕ್ಷಿಸಲಿ.

ಭಾವಾರ್ಥ

ದೇವತಾತ್ಮಳೂ, ಸಕಲ ದೇವತೆಗಳ ತಾಯಿಯೂ ಆದ ಅದಿತಿಯು ತನ್ನ ಪುತ್ರರಾದ ಸಕಲ ದೇವತೆಗಳೊಡನೆಯೂ ಕೂಡಿಕೊಂಡು ನಮ್ಮನ್ನು ಸಂಪೂರ್ಣವಾಗಿ ರಕ್ಷಿಸಲಿ. ಪ್ರಕಾಶಮಾನನೂ, ಸಕಲರಿಗೂ ರಕ್ಷಕನೂ ಆದ ಸವಿತೃವು ಯಾವಾಗಲೂ ಜಾಗರೂಕನಾಗಿದ್ದುಕೊಂಡು ನಮ್ಮನ್ನು ರಕ್ಷಿಸಲಿ. ಮಿತ್ರನೂ, ವರುಣನೂ, ಅದಿತಿಯೂ ಸಾಗರಾಧಿದೇವತೆಯೂ, ಪೃಥಿವಿಯೂ ಮತ್ತು ದ್ಯುಲೋಕಾಧಿದೇವತೆಯೂ ನಮ್ಮ ಪ್ರಾರ್ಥಿತವಾದ ಇಷ್ಟಾರ್ಥವನ್ನು ರಕ್ಷಿಸಲಿ.

English Translation

May the goddess Aditi, with the gods, protect us, and may the radiant guardian, (the sun), be vigilant for our protection ; and may they, who are bountiful and the givers of dwellings, extricate us from all sin, as a chariot from a defile.

ವಿಶೇಷವಿಷಯಗಳು

**ಅದಿತಿಃ—ಅದಿತಿರದೀನಾ ದೇವಮಾತಾ** । (ನಿ. ೪-೨೨). ಕ್ಷೀಣವಾಗದಿರುವ ಶಕ್ತಿಯುಳ್ಳ ದೇವಮಾತೆಯೆಂದು ಅದಿತಿಯ ಸ್ವರೂಪವನ್ನು ತಿಳಿಸಿ ಅವಳ ನಾನಾವಿಧವಾದ ರೂಪಗಳನ್ನು ವರ್ಣಿಸತಕ್ಕ

**ಅದಿತಿರ್ದ್ಯೌರದಿತಿರಂತರಿಕ್ಷಮದಿತಿರ್ಮಾತಾ ಸ ಪಿತಾ ಸ ಪುತ್ರಃ ।**
**ವಿಶ್ವೇ ದೇವಾ ಅದಿತಿಃ ಪಂಚಜನಾ ಅದಿತಿರ್ಜಾತಮದಿತಿರ್ಜನಿತ್ವಂ ॥**
(ಋ. ಸಂ. ೧-೮೯-೧೦)

ಎಂಬ ಋಕ್ಕನ್ನು ನಿರುಕ್ತಕಾರರು ಉದಹರಿಸಿದ್ದಾರೆ. ಈ ಋಕ್ಕಿನಲ್ಲಿ ಅಖಂಡಳಾದ ಅದಿತಿಯು ಸಕಲ ವಿಶ್ವಕ್ಕೂ ಜನ್ಮದಾತೆಯು, ಅವಳೇ ಜಗಜ್ಜನನಿಯು. ಜಗಜ್ಜನಕನು. ಉತ್ಪನ್ನವಾದ ಸಕಲವಸ್ತುವೂ ಅವಳೇ, ಅದಿತಿಯೇ ಉತ್ಪತ್ತಿಸ್ಥಾನವು. ವರ್ಣಾತ್ಮಕವಾದ ಮತ್ತು ನಿಷಾದರಿಂದ ಕೂಡಿದ ಐದು ಜಾತಿಯ ಜನರೂ ಅವಳೇ, ಅದಿತಿಯೇ ಸಕಲ ದೇವತೆಗಳು, ಅವಳೇ ಪ್ರಕಾಶಮಾನವಾದ ಸ್ವರ್ಗವು, ಅವಳೇ ಅಂತರಿಕ್ಷವು, ಅವಳೇ ಸಕಲ ವಿಶ್ವವು, ಅವಳೇ ವಿಶ್ವನಿಯಾಮಕಳು ಎಂದು ವರ್ಣಿಸಿದೆ. ಇಂತಹ ಅಪ್ರಮೇಯವಾದ ಗುಣಗಳುಳ್ಳ ಅದಿತಿಯನ್ನು ಸಾಧಾರಣವಾಗಿ **ದೇವೀ ಅದಿತಿಃ** ಎಂದು ಸಂಬೋಧಿಸುವುದು ರೂಢಿಯಲ್ಲಿದೆ.

ಪ್ರ ಪಸ್ತ್ಯಾ೩ ಮದಿತಿಂ ಸಿಂಧುಮರ್ಕೈಃ ಸ್ವಸ್ತಿಮೀಳೇ ಸಖ್ಯಾಯ ದೇವೀಂ ।

(ಋ. ಸಂ. ೪-೫೫-೩)

ಸ್ವಸ್ತಿ ನೋ ಮಿಮೀತಾಮಶ್ವಿನಾ ಭಗಃ ಸ್ವಸ್ತಿ ದೇವ್ಯದಿತಿರನರ್ವಣಃ ।

(ಋ. ಸಂ. ೫-೫೧-೧೧)

ಇತ್ಯಾದಿ ಅನೇಕ ಋಕ್ಕುಗಳಲ್ಲಿರುವಂತೆಯೇ ಇಲ್ಲಿಯೂ ದೇವೀ ಅದಿತಿಃ ಎಂದು ಹೇಳಿದೆ.

**ಅಪ್ರಯುಚ್ಛನ್**—ಯುಚ್ಛ-ಪ್ರಮಾದೇ । ಅಪ್ರಯುಚ್ಛನ್ । ಅಸ್ಮದ್ರಕ್ಷಣೇ ಜಾಗರೂಕಃಸನ್ । ಪ್ರಮಾದ, ಅಜಾಗರೂಕನಾಗಿರುವುದು ಎಂಬ ಅರ್ಥವನ್ನು ಕೊಡುವ **ಯುಚ್ಛ**ಧಾತುವಿನಿಂದ ನಿಷ್ಪನ್ನವಾಗಿ ಉಪಸರ್ಗಗಳೊಡನೆ ಕೂಡಿ ಅಜಾಗರೂಕನಾಗಿಲ್ಲದಿರುವುದು ಎಂಬಭಿಪ್ರಾಯವನ್ನು ಕೊಡುತ್ತದೆ ಸವಿತೃವಿನ ಜಾಗರೂಕತೆಯಿಂದಲೇ ಲೋಕದ ವ್ಯವಹಾರವೂ ರಕ್ಷಣೆಯೂ ನಡೆಯುತ್ತಿರುವುದರಿಂದ ಸವಿತೃವು ಕೊಂಚ ಪ್ರಮಾದವನ್ನು ತೋರಿಸಿದರೂ ಸಹ ಲೋಕವ್ಯವಹಾರಕ್ಕೆ ಭಂಗಬರುತ್ತದೆ. ಆದುದರಿಂದಲೇ ಈ ವಿಧವಾದ ಪ್ರಾರ್ಥನೆಯಿದೆ. ಅದೂ ಅಲ್ಲದೆ ಅವನ ಜಾಗರೂಕವಾದ ಪ್ರಭುತ್ವವು ವಿಶ್ವನಿಯಮವನ್ನು ಹೇಗೆ ಪಾಲಿಸುತ್ತಿದೆ ಎಂದು ವರ್ಣಿಸುವ ಅನೇಕ ವಾಕ್ಯಗಳು ಸವಿತೃವಿನ ನಿಯಮನಕ್ರಮವನ್ನು ತೋರಿಸುತ್ತವೆ.

ಅದಾಭ್ಯೋ ಭುವನಾನಿ ಪ್ರಚಾಕಶದ್ವ್ರತಾನಿ ದೇವಃ ಸವಿತಾಭಿ ರಕ್ಷತೇ ।
ಪ್ರಾಸ್ರಾಗ್ಬಾಹೂ ಭುವನಸ್ಯ ಪ್ರಜಾಭ್ಯೋ ಧೃತವ್ರತೋ ಮಹೋ ಅಜ್ಮಸ್ಯ ರಾಜತಿ ।

(ಋ. ಸಂ. ೪-೫೩-೪)

ಇತ್ಯಾದಿ ನಾನಾ ಋಕ್ಕುಗಳಲ್ಲಿ ಸವಿತೃವು ಧೃತವ್ರತನೆಂದೂ,

ಯಸ್ಯ ಪ್ರಯಾಣಮನ್ವನ್ಯ ಇದ್ಯಯುರ್ದೇವಾ ದೇವಸ್ಯ ಮಹಿಮಾನಮೋಜಸಾ ।

(ಋ. ಸಂ. ೫-೮೧-೩)

ಇತ್ಯಾದಿ ಋಕ್ಕುಗಳಲ್ಲಿ ಉಳಿದ ಸಕಲ ದೇವತೆಗಳೂ ಈ ಸವಿತೃವಿನ ಮಾರ್ಗದರ್ಶಿತ್ವವನ್ನೇ ಅನುಸರಿಸುತ್ತಾರೆಂದೂ ವರ್ಣಿಸಿದೆ. ಇಂತಹ ಧೃತವ್ರತನಾದ ಸವಿತೃವು ನಮ್ಮನ್ನು ಅಪ್ರಮತ್ತನಾಗಿಯೂ, ಆದರವುಳ್ಳವನಾಗಿಯೂ ರಕ್ಷಿಸಲಿ ಎಂದು ಪ್ರಾರ್ಥಿಸಿದೆ.

ವ್ಯಾಕರಣಪ್ರಕ್ರಿಯಾ

**ಪಾತು**—ಪಾ ರಕ್ಷಣೇ. ಧಾತು. ಲೋಟ್ ಪ್ರಥಮಪುರುಷಏಕವಚನದಲ್ಲಿ ತಿಪ್‌ಪ್ರತ್ಯಯ. ಏರುಃ—(ಪಾ. ಸೂ. ೩-೪-೮೬) ಎಂಬುದರಿಂದ ಉತ್ವ. **ಅದಿಪ್ರಭೃತಿಭ್ಯಃ ಶಪಃ**—ಎಂಬುದರಿಂದ ಶಪಿಗೆ ಲುಕ್. ತಿಙಂತನಿಘಾತಸ್ವರ ಬರುತ್ತದೆ.

**ತ್ರಾತಾ**—ತ್ರೈಙ್ ಪಾಲನೇ. ಧಾತು. ಕರ್ತರಿಯಲ್ಲಿ ತೃಚ್‌ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತ. ಆದೇಚಉಪದೇ—(ಪಾ. ಸೂ. ೬-೧-೪೫) ಎಂಬುದರಿಂದ ಧಾತುವಿಗೆ ಆತ್ವ. ಪ್ರಥಮಾಏಕವಚನಾಂತರೂಪ.

**ತ್ರಾಯೆತಾಮ್**— ತ್ರೈಜ್ ಪಾಲನೇ. ಧಾತು. ಭ್ವಾದಿ. ಲೋಟ್ ಪ್ರಥಮಪುರುಷಏಕವಚನದಲ್ಲಿ ಏತ್ವ ಬಂದಾಗ **ಆಮೇತಃ**—(ಪಾ. ಸೂ. ೩-೪-೯೦) ಎಂಬುದರಿಂದ ಅನಕ್ಕೆ ಆಮ್ ಆದೇಶ. ಶಪ್ ವಿಕರಣ. ಆಯಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ಅಪ್ರಯುಚ್ಛನ್**—ಯುಚ್ಛ ಪ್ರಮಾದೇ. ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ನ ಪ್ರಯುಚ್ಛನ್. **ತತ್ಪುರುಷೇ ತು**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ ॥ ೭ ॥

ನೂರ ಆರನೆಯ ಸೂಕ್ತವು ಸಮಾಪ್ತಿಯಾದುದು.



# ನೂರ ಏಳನೆಯ ಸೂಕ್ತವು

---

**ಯಜ್ಞೋ ದೇವಾನಾಮಿತಿ ತೃಚಂ ದ್ವಿತೀಯಂ ಸೂಕ್ತಂ ಕುತ್ಸಸ್ಯಾರ್ಷಂ ತ್ರೈಷ್ಟುಭಂ ವೈಶ್ವದೇವಂ । ಯಜ್ಞಸ್ತ್ರ್ಯೃಚಮಿತ್ಯನುಕ್ರಾಂತಂ । ವಿನಿಯೋಗೋ ಲೈಂಗಿಕಃ ॥**

ಅನುವಾದವು—**ಯಜ್ಞೋ ದೇವಾನಾಂ** ಎಂಬ ಈ ಸೂಕ್ತವು ಹದಿನಾರನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಕುತ್ಸನು ಋಷಿಯು. ವಿಶ್ವೇದೇವತೆಗಳೇ ದೇವತೆಯು. ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಯಜ್ಞಸ್ತ್ರ್ಯೃಚಂ** ಎಂದು ಮೊದಲಾಗಿ ಹೇಳಿರುವುದು. ವಿನಿಯೋಗವು ಲೈಂಗಿಕವು.

———:o:———

॥ ಓಂ ॥

## ಸೂಕ್ತ—೧೦೭

॥ ಮಂಡಲ—೧ ॥ ಅನುವಾಕ—೧೬ ॥ ಸೂಕ್ತ—೧೦೭ ॥

॥ ಅಷ್ಟಕ— ೧ ॥ ಅಧ್ಯಾಯ— ೭ ॥ ವರ್ಗ—೨೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ– ೩ ॥

॥ ಋಷಿಃ—ಕುತ್ಸ ಆಂಗಿರಸಃ ॥

॥ ದೇವತಾ—ವಿಶ್ವೇದೇವಾಃ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಯಜ್ಞೋ ದೇವಾನಾಂ ಪ್ರತ್ಯೇತಿ ಸುಮ್ನಮಾದಿತ್ಯಾಸೋ ಭವ-

ತಾ ಮೃಳಯಂತಃ।

ಆ ವೋಽರ್ವಾಚೀ ಸುಮತಿರ್ವವೃತ್ಯಾದಂಹೋಶ್ಚಿದ್ಯಾ ವರಿ-

ವೋವಿತ್ತರಾಸತ್ ॥೧॥

॥ ಪದಪಾಠಃ ॥

ಯಜ್ಞಃ । ದೇವಾನಾಂ । ಪ್ರತಿ । ಏತಿ । ಸುಮ್ನಂ । ಆದಿತ್ಯಾಸಃ । ಭವತ । ಮೃಳ-

ಯಂತಃ ।

ಆ । ವಃ । ಅರ್ವಾಚೀ । ಸುಽಮತಿಃ । ವವೃತ್ಯಾತ್ । ಅಂಹೋಃ । ಚಿತ್ ।

ಯಾ । ವರಿವೋವಿತ್ಽತರಾ । ಅಸತ್ ॥ ೧ ॥

### ಸಾಯಣಭಾಷ್ಯಂ

ಅಸ್ಮದೀಯೋ ಯಜ್ಞೋ ದೇವಾನಾಮಿಂದ್ರಾದೀನಾಂ ಸುಮ್ನಂ ಸುಖಂ ಪ್ರತ್ಯೇತಿ ಪ್ರಾಪ್ನೋತು। ಅಪಿ ಚ ಹೇ ಆದಿತ್ಯಾಸ ಆದಿತ್ಯಾ ಮೃಳಯಂತೋಽಸ್ಮಾನ್ಸುಖಯಂತೋ ಭವತ। ತಥಾ ವೋ ಯುಷ್ಮಾಕಂ ಸುಮತಿಃ ಶೋಭನಾ ಮತಿರ್ಭಕ್ತಾನುಗ್ರಹಪರಾ ಬುದ್ಧಿರರ್ವಾಚ್ಯಸ್ಮದಭಿಮುಖ್ಯಾ ವವೃತ್ಯಾತ್। ಆವರ್ತತಾಂ। ಯಾ ಮತಿರಂಹೋಶ್ಚಿತ್ ದಾರಿದ್ರ್ಯಂ ಪ್ರಾಪ್ತಸ್ಯಾಪಿ ಪುರುಷಸ್ಯ ವರಿವೋವಿತ್ತರಾ। ವರಿವ ಇತಿ ಧನನಾಮ। ಅತಿಶಯೇನ ಧನಸ್ಯ ಲಂಭಯಿತ್ರ್ಯಸತ್ ಭವೇತ್। ಸೈಷಾ ಮತಿರಸ್ಮಾನ್ರಕ್ಷಿತುಂ ವರ್ತತಾಮಿತ್ಯರ್ಥಃ॥ ಭವತ। ಆಮಂತ್ರಿತಂ ಪೂರ್ವಮವಿದ್ಯಮಾನವದಿತ್ಯಾದಿತ್ಯಾಸ ಇತಿ ಪಾದಾದೌ ವರ್ತಮಾನಸ್ಯಾಮಂತ್ರಿತಸ್ಯಾವಿದ್ಯಮಾನವತ್ತ್ವೇನಾಸ್ಯ ಪಾದಾದಿತ್ವಾತ್ ಅಪಾದಾದಾವಿತಿ ಪರ್ಯುದಾಸಾನ್ನಿಘಾತಾಭಾವಃ। ಮೃಳಯಂತಃ। ಮೃಡ ಸುಖನೇ। ಣ್ಯಂತಾಲ್ಲಟಃ ಶತೃ। ಶಪ್। ಛಂದಸ್ಯುಭಯಥೇತಿ ಶತುರಾರ್ಧಧಾತುಕತ್ವೇನಾದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವಾಭಾವೇ ಶತುಃ ಸ್ವರಃ ಶಿಷ್ಯತೇ। ವವೃತ್ಯಾತ್। ವೃತು ವರ್ತನೇ। ಲಿಙಿ ವ್ಯತ್ಯಯೇನ ಪರಸ್ಮೈಪದಂ। ಬಹುಲಂ ಛಂದಸೀತಿ ಶಪಃ ಶ್ಲುಃ। ಅಂಹೋಃ। ಅಹಿ ಗತೌ। ಇದಿತ್ತ್ವಾನ್ನುಮ್। ಔಣಾದಿಕ ಉಪ್ರತ್ಯಯಃ। ವರಿವೋವಿತ್ತರಾ। ವಿದ್ಲೃ ಲಾಭೇ। ಅಸ್ಮಾದಂತರ್ಭಾವಿತಣ್ಯರ್ಥಾತ್ ಕ್ವಿಪ್। ತತ ಆತಿಶಾಯನಿಕಸ್ತರಪ್। ಅಸತ್। ಅಸು ಭುವಿ। ಲೇಟ್ಯಡಾಗಮಃ॥

॥ ಪ್ರತಿಪದಾರ್ಥ ॥

**ಯಜ್ಞಃ**—ನಮ್ಮ ಯಜ್ಞವು। **ದೇವಾನಾಂ**—ಇಂದ್ರಾದಿ ದೇವತೆಗಳಿಗೆ। **ಸುಮ್ನಂ**—ಸುಖವನ್ನು। **ಪ್ರತ್ಯೇತಿ**—ಉಂಟುಮಾಡಲಿ.। **ಆದಿತ್ಯಾಸಃ**—ಎಲೈ ಆದಿತ್ಯರೇ,। **ಮೃಳಯಂತಃ**—ನಮ್ಮನ್ನು ಸುಖಪಡಿಸುತ್ತಾ। **ಭವತ**—ಇರಿ.। **ವಃ**—ನಿಮ್ಮ। **ಯಾ**—ಯಾವ ಬುದ್ಧಿಯು। **ಅಂಹೋಶ್ಚಿತ್**—ದಾರಿದ್ರ್ಯವನ್ನು ಅನುಭವಿಸುತ್ತಿರುವವನಿಗೂ ಕೂಡ। **ವರಿವೋವಿತ್ತರಾ**—ಪ್ರಭೂತವಾಗಿ ಧನವನ್ನು ಒದಗಿಸಿ ಕೊಡುವುದಾಗಿ। **ಅಸತ್**—ಆಗಬಲ್ಲುದೋ। **ಸುಮತಿಃ**—ಅಂತಹ ಶ್ರೇಷ್ಠವಾದ ಅನುಗ್ರಹಬುದ್ಧಿಯು। **ಅರ್ವಾಚೀ**—ನಮಗೆ ಅಭಿಮುಖವಾಗಿ। **ಆವವೃತ್ಯಾತ್**—ತಿರುಗಿಸಲ್ಪಡಲಿ.

॥ ಭಾವಾರ್ಥ ॥

ನಮ್ಮ ಯಜ್ಞವು ಇಂದ್ರಾದಿದೇವತೆಗಳಿಗೆ ಸುಖವನ್ನುಂಟುಮಾಡಲಿ. ಎಲೈ ಆದಿತ್ಯರೇ, ನಮ್ಮನ್ನು ಯಾವಾಗಲೂ ಸುಖಪಡಿಸುತ್ತೀರಿ. ದಾರಿದ್ರ್ಯವನ್ನು ಅನುಭವಿಸುತ್ತಿರುವವನಿಗೂ ಸಹ ಪ್ರಭೂತವಾಗಿ ಧನವನ್ನು ಒದಗಿಸಿ ಕೊಡಲು ಸಾಮರ್ಥ್ಯವುಳ್ಳ ನಿಮ್ಮ ಅತ್ಯಂತ ಶ್ರೇಷ್ಠವಾದ ಅನುಗ್ರಹಬುದ್ಧಿಯನ್ನು ನಮಗೆ ಅಭಿಮುಖವಾಗಿ ತಿರುಗಿಸಿರಿ.

## English Translation

May our sacrifice give satisfaction to the gods: A'dityas, be gracious, and may your good intentions be directed towards us, so as to be an abundant source of affluence to the poor.

ವಿಶೇಷವಿಷಯಗಳು

ಯಜ್ಞಃ ದೇವಾನಾಂ ಸುಮ್ನಂ ಪ್ರತ್ಯೇತಿ—ನಮ್ಮ ಯಜ್ಞವು ಇಂದ್ರಾದಿ ದೇವತೆಗಳಿಗೆ ಸುಖವನ್ನುಂಟು ಮಾಡಲಿ; ದೇವತೆಗಳಿಗೆ ಆ ಸುಖವು ದೊರೆತಾಗ ಅವರು ಯಜ್ಞಕರ್ತರಿಗೂ ಸುಖವನ್ನು ಕೊಡಬೇಕೆಂದು ಆದಿತ್ಯಾಸಃ ಮೃಳಯಂತಃ ಭವತ—ಎಂದು ಅವರನ್ನೂ ಪ್ರಾರ್ಥಿಸಿದೆ.

ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ ।
ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥

( ಭಗವದ್ಗೀತಾ. ೩-೧೧ )

ಎಂದು ಭಗವದ್ಗೀತೆಯಲ್ಲಿ ವರ್ಣಿತವಾಗಿರುವಂತೆ ಯಜ್ಞವು ಸಕಲದೇವಮಾನವಾದಿಗಳಿಗೂ ಶ್ರೇಯಸ್ಸನ್ನು ಕೊಡತಕ್ಕದ್ದಾದ್ದರಿಂದ ಅಂತಹ ಯಜ್ಞವು ದೇವತೆಗಳಿಗೆ ಸುಖವನ್ನುಂಟುಮಾಡಲಿ ಎಂದು ಆಶಿಸಿದೆ.

ಪ್ರದಾನಾದ್ಧಿ ದೇವಾ ಉಪಜೀವಂತಿ ।

(ಶ. ಬ್ರಾ. ೧-೨-೫-೨೪)

ಯಜ್ಞ ಉ ದೇವಾನಾಮನ್ನಂ ॥

(ಶ. ಬ್ರಾ. ೮-೧-೨-೧೦)

ಇತ್ಯಾದಿ ವಾಕ್ಯಗಳಲ್ಲಿ ಹೇಳಿರುವಂತೆ ಯಜ್ಞವೇ ದೇವತೆಗಳ ಅನ್ನವಾದ್ದರಿಂದಲೂ ಅದರಿಂದಲೇ ಅವರ ಜೀವಿಕೆಯಿರುವುದರಿಂದಲೂ ಸಹ ಯಜ್ಞದಲ್ಲಿ ಅರ್ಪಿತಗಳಾದ ಆಹುತಿಗಳು ದೇವತೆಗಳಿಗೆ ಸುಖವನ್ನುಂಟುಮಾಡತಕ್ಕವಾಗಿವೆ. ಅವರಲ್ಲಿಯೂ ಸೋಮರಸದ ಅರ್ಪಣೆಯು ದೇವತೆಗಳಿಗೆ ಉಂಟುಮಾಡತಕ್ಕ ಸುಖವು—

ಮತ್ಸಿ ಸೋಮ ವರುಣಂ ಮತ್ಸಿ ಮಿತ್ರಂ ಮತ್ಸೀಂದ್ರಮಿಂದೋ ಪವಮಾನ ವಿಷ್ಣುಂ ।
ಮತ್ಸಿ ಶರ್ಧೋ ಮಾರುತಂ ಮತ್ಸಿ ದೇವಾನ್ ಮತ್ಸಿ ಮಹಾಮಿಂದ್ರಮಿಂದೋ ಮದಾಯ ॥

(ಋ. ಸಂ. ೯-೯೦-೫)

ಮತ್ಸಿ ವಾಯುಮಿಷ್ಟಯೇ ರಾಧಸೇ ಚ ಮತ್ಸಿ ಮಿತ್ರಾವರುಣಾ ಪೂಯಮಾನಃ ।
ಮತ್ಸಿ ಶರ್ಧೋ ಮಾರುತಂ ಮತ್ಸಿ ದೇವಾನ್ ಮತ್ಸಿ ದ್ಯಾವಾಪೃಥಿವೀ ದೇವ ಸೋಮ ॥

(ಋ. ಸಂ. ೯-೯೭-೪೨)

ಇತ್ಯಾದಿ ಅನೇಕಸೂಕ್ತಗಳಲ್ಲಿ ವರ್ಣಿತವಾಗಿದೆ. ಇಂತಹ ಸುಖವು ದೇವತೆಗಳಿಗೆ ಆಗಲಿ. ನಮ್ಮ ಯಜ್ಞವು ಸಾರ್ಥಕವಾಗಲಿ, ಹವಿಸ್ಸುಗಳು ದೇವತೆಗಳನ್ನು ತೃಪ್ತಿಪಡಿಸಲಿ ಎಂದು ಪ್ರಾರ್ಥಿಸಿದೆ.

ಆದಿತ್ಯಾಸಃ ಮೃಳಯಂತಃ ಭವತ—ಎಲೈ ಆದಿತ್ಯರೇ ನಮ್ಮನ್ನು ಸುಖಪಡಿಸುತ್ತಾ ಇರಿ. ಆದಿತ್ಯರಿಂದ ಲಭಿಸತಕ್ಕ ಸುಖದ ವೈಶಿಷ್ಟ್ಯವನ್ನು ತೋರಿಸುವುದಕ್ಕಾಗಿ ಅನೇಕಕಡೆಗಳಲ್ಲಿ ಸ್ವಾರಸ್ಯವಾದ ಉಪಮಾನಗಳನ್ನು

ಕೊಟ್ಟು ಅವರ ರಕ್ಷಣೆಯನ್ನೂ ಅವರಲ್ಲಿರುವ ಆದರವನ್ನೂ, ಭೀತಿನಿವಾರಕವಾದ ಶಕ್ತಿಯನ್ನು ತೋರಿಸಿದೆ. ಉದಾಹರಣೆ—

**ಪಕ್ಷಾ ವಯೋ ಯಥೋಪರಿ ವ್ಯಸ್ಮೇ ಶರ್ಮ ಯಚ್ಛತಾನೇಹಸೋ ವ ಊತಯಃ ಸು-
ಊತಯೋ ವ ಊತಯಃ ।**

(ಋ. ಸಂ. ೮-೪೭-೨)

ಪಕ್ಷಿಗಳು ತಮ್ಮ ಮರಿಗಳನ್ನು ತಮ್ಮ ರೆಕ್ಕೆಗಳಿಂದ ಮುಚ್ಚಿಕೊಂಡು ಸುಖವಾಗಿ ರಕ್ಷಿಸುವಂತೆ ಆದಿತ್ಯರು ಮಾನವರನ್ನು ರಕ್ಷಿಸಿ ಸುಖದಾತರಾಗುತ್ತಾರೆಂದೂ, ಇಂತಹ ರಕ್ಷಣೆಗೊಳಗಾದವರನ್ನು,

**ನ ತಂ ತಿಗ್ಮಂ ಚನ ತ್ಯಜೋ ನ ದ್ರಾಸದಭಿ ತಂ ಗುರು ।
ಯಸ್ಮಾ ಉ ಶರ್ಮ ಸಪ್ರಥ ಆದಿತ್ಯಾಸೋ ಅರಾಧ್ವಮನೇಹಸೋ ವ ಊತಯಃ ಸುಊತ-
ಯೋ ವ ಊತಯಃ ।**

(ಋ. ಸಂ. ೮-೪೭-೭)

ಶತ್ರುವಿನಿಂದ ಪ್ರಯೋಗಿಸಲ್ಪಟ್ಟ ಎಂತಹ ಹರಿತವಾದ ಆಯುಧಗಳೂ ಹಿಂಸಿಸಲಾರವೆಂದೂ, ಇವರ ಭಕ್ತರು ಸಂಪೂರ್ಣಸುಖಿಗಳಾಗುವರೆಂದೂ ಅನೇಕಕಡೆ ಹೇಳಿರುವಂತೆ ಅಂತಹ ರಕ್ಷಣೆಯನ್ನೂ ಸೌಖ್ಯವನ್ನೂ ತಮಗೂ ಕೊಡಬೇಕೆಂದು ಪ್ರಾರ್ಥಿಸಿದೆ.

**ಅಂಹೋಶ್ಚಿತ್**—ದಾರಿದ್ರ್ಯವನ್ನನುಭವಿಸುತ್ತಿರುವವನಿಗೂ ಕೂಡ ಎಂದು **ಅಂಹಸ್** ಶಬ್ದಕ್ಕೆ ದಾರಿದ್ರ್ಯವೆಂದು ಅರ್ಥಮಾಡಿದೆ. ದಾರಿದ್ರ್ಯವು ಯಜ್ಞಯಾಗಾದಿಗಳಿಗೆ ಅನೇಕವೇಳೆ ಅಡಚಣೆಯಾಗುವುದರಿಂದ ಪಾಪಹೇತುವಾಗುವುದು. ಹೀಗೆ ದಾರಿದ್ರ್ಯದೋಷದಿಂದ ಯಜ್ಞಾಚರಣೆಯಲ್ಲಿ ನ್ಯೂನತೆಗಳಿದ್ದು ಅಂತಹ ಪಾಪವನ್ನು ಮಾಡತಕ್ಕ ಯಜಮಾನನಿಗೂ ಸಹ ಪ್ರಭೂತವಾಗಿ ಧನವನ್ನು ಒದಗಿಸಿಕೊಡಬಲ್ಲರು ಎಂದು ಆದಿತ್ಯರ ಔದಾರ್ಯವನ್ನು ಪ್ರಶಂಸಿಸಿದೆ.

**ವಿದಾ ದೇವಾ ಅಘಾನಾಮಾದಿತ್ಯಾಸೋ ಅಪಾಕೃತಿಂ ।**

(ಋ. ಸಂ. ೮-೪೭-೨)

ಇತ್ಯಾದಿ ಋಕ್ಕುಗಳಲ್ಲಿ ಆದಿತ್ಯರು ಪಾಪವನ್ನೂ ದುಃಖವನ್ನೂ ನಾಶಮಾಡುವವರೆಂದು ಹೇಳಿರುವುದರಿಂದ ಅನನುಕೂಲಗಳಿಂದ ಸಂಭವಿಸಿದ ನ್ಯೂನತೆಗಳನ್ನು ಕ್ಷಮಿಸಿ ಅನುಗ್ರಹಿಸುತ್ತಾರೆಂದರ್ಥ.

ವ್ಯಾಕರಣಪ್ರಕ್ರಿಯಾ

ಏತಿ ಇಣ್ ಗತೌ ಧಾತು. ಅದಾದಿ ಲಟ್ ಪ್ರಥಮಪುರುಷ ಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

ಆದಿತ್ಯಾಸಃ—ಅದಿತೇಃ ಅಪತ್ಯಾನಿ ಪುಮಾಂಸಃ ಆದಿತ್ಯಾಸಃ—**ದಿತ್ಯದಿತ್ಯಾದಿತ್ಯ**—(ಪಾ. ಸೂ. ೪-೧-೮೫) ಎಂಬುದರಿಂದ ಅಪತ್ಯಾರ್ಥದಲ್ಲಿ ಣ್ಯ ಪ್ರತ್ಯಯ. ಣಿತ್ತಾದುದರಿಂದ ಆದಿವೃದ್ಧಿ. ಜಸ್ ಪರವಾದಾಗ **ಆಜ್ಜಸೇರಸುಕ್**—(ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

ಭವತ—ಭೂ ಸತ್ತಾಯಾಂ ಧಾತು. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ಲಙ್ವದ್ಭಾವವಿರುವುದರಿಂದ **ತಸ್ಥಸ್**—(ಪಾ. ಸೂ. ೩-೪-೧೦೧) ಎಂಬುದರಿಂದ ತ ಆದೇಶ. ಶಪ್ ವಿಕರಣ. ಧಾತುವಿಗೆ ತನ್ನಿಮಿತ್ತವಾಗಿ ಗುಣ. ಅವಾದೇಶ. **ಆಮಂತ್ರಿತಂ ಪೂರ್ವಮವಿದ್ಯಮಾನವತ್**—(ಪಾ. ಸೂ. ೮-೧-೭೨) ಎಂಬುದರಿಂದ ಆದಿತ್ಯಾಸಃ ಎಂಬುದು ಪೂರ್ವದಲ್ಲಿ ಪಾದಾದಿಯಲ್ಲಿದ್ದರೂ ಅದಕ್ಕೆ ಆಮಂತ್ರಿತಸಂಜ್ಞೆ ಇರುವುದರಿಂದ ಅವಿದ್ಯಮಾನವದ್ಭಾವವಿರುವುದರಿಂದ (ಇಲ್ಲದಿರುವಿಕೆ) ಇದೇ ಪಾದಾದಿಯಲ್ಲಿ ಬಂದಂತಾಗುವುದರಿಂದ **ಅಪಾದಾದೌ**—ಎಂದು ಪ್ರತಿಷೇಧಮಾಡಿರುವುದರಿಂದ ತಿಙಂತನಿಘಾತಸ್ವರ ಬರುವುದಿಲ್ಲ. ಶಪ್ ಪಿತ್ತಾದುದರಿಂದ ಅನುದಾತ್ತ. ಲಸಾರ್ವಧಾತುಕವು ಅದುಪದೇಶದ ಪರದಲ್ಲಿರುವುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುತ್ತದೆ. ಆಗ ಧಾತುಸ್ವರ ಉಳಿಯುತ್ತದೆ.

ಮೃಳಯಂತಃ—ಮೃಡ ಸುಖನೇ. ಧಾತು. ಪ್ರೇರಣಾರ್ಥದಲ್ಲಿ **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಣ್ಯಂತದ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. ಶಪ್ ವಿಕರಣ. ತನ್ನಿಮಿತ್ತವಾಗಿ ಣಿಚಿಗೆ ಗುಣ ಅಯಾದೇಶ. **ಛಂದಸ್ಯುಭಯಥಾ**—(ಪಾ. ಸೂ. ೩-೪-೧೧೭) ಎಂಬುದರಿಂದ ಶತೃವಿಗೆ ಆರ್ಧಧಾತುಕ ಸಂಜ್ಞೆ ಬರುವುದರಿಂದ ಅದುಪದೇಶದ ಪರದಲ್ಲಿ ಬಂದರೂ ಲಸಾರ್ವಧಾತುಕಾನುದಾತ್ತಸ್ವರ ಬರುವುದಿಲ್ಲ. ಆಗ ಶತೃಪ್ರತ್ಯಯಸ್ವರವೇ ಉಳಿಯುತ್ತದೆ. ಪ್ರಥಮಾಬಹುವಚನಾಂತರೂಪ.

**ವವೃತ್ಯಾತ್**—ವೃತು ವರ್ತನೇ. ಲಿಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ**—ಎಂಬುದರಿಂದ ಇಕಾರಲೋಪ. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ**—ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಉರದತ್ವ ಬಂದಾಗ ಹಲಾದಿಶೇಷ. **ಯಾಸುಟ್ ಪರಸ್ಮೈಪದೇಷೂದಾತ್ತೋ ಙಿಚ್ಚ**—(ಪಾ. ಸೂ. ೩-೪-೧೦೩) ಎಂಬುದರಿಂದ ಲಿಙ್‌ಗೆ ಯಾಸುಟಾಗಮ. ಇದು ಙಿತ್ತಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ. ಧಾತುವು ಅನುದಾತ್ತೇತ್ತಾದರೂ ವ್ಯತ್ಯಯದಿಂದ ಪರಸ್ಮೈಪದಿಯಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಅಂಹೋಃ—ಅಹಿ ಗತೌ ಧಾತು. **ಇದಿತೋನುಮ್ ಧಾತೋಃ**—(ಪಾ. ಸೂ. ೭-೧-೫೮) ಎಂಬುದರಿಂದ ಧಾತುವಿಗೆ ನುಮಾಗಮ. ಇದಕ್ಕೆ ಉಣಾದಿಕ ಉ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತ. ಷಷ್ಠೀ ಏಕವಚನಾಂತರೂಪ.

ವರಿವೋವಿತ್ತರಾ—ವಿದ್ಲೃ ಲಾಭೇ ಧಾತು. ಪ್ರೇರಣಾ ತೋರುವುದರಿಂದ ಅಂತರ್ಭಾವಿತಣ್ಯರ್ಥವಾದ ಈ ಧಾತುವಿಗೆ **ಕ್ವಿಪ್ ಚ**—(ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್. ಇದರ ಮೇಲೆ ಅತಿಶಯಾರ್ಥದಲ್ಲಿ ದ್ವಿವಚನವಿ—(ಪಾ. ಸೂ. ೫-೩-೫೭) ಎಂಬುದರಿಂದ ತರಪ್ ಪ್ರತ್ಯಯ. ಸ್ತ್ರೀತ್ವದಲ್ಲಿ **ಅಜಾದ್ಯತಷ್ಟಾಪ್**—

ಎಂಬುದರಿಂದ ಟಾಪ್. ತರಪ್, ಟಾಪ್ ಪಿತ್ತಾದುದರಿಂದ ಅನುದಾತ್ತ. ಧಾತುಸ್ವರ ಉಳಿಯುತ್ತದೆ. ಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಅಸತ್**—ಅಸ ಭುವಿ. ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ-ಲೋಪಃ**—(ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ**—(ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆಗಮ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ. ॥ ೧ ॥

ಸಂಹಿತಾಪಾಠಃ

ಉಪ ನೋ ದೇವಾ ಅವಸಾ ಗಮಂತ್ವಂಗಿರಸಾಂ ಸಾಮಭಿಃ
ಸ್ತೂಯಮಾನಾಃ ।
ಇಂದ್ರ ಇಂದ್ರಿಯೈರ್ಮರುತೋ ಮರುದ್ಭಿರಾದಿತ್ಯೈರ್ನೋ
ಅದಿತಿಃ ಶರ್ಮ ಯಂಸತ್ ॥ ೨ ॥

। ಪದಪಾಠಃ ।

ಉಪ । ನಃ । ದೇವಾಃ । ಅವಸಾ । ಆ । ಗಮಂತು । ಅಂಗಿರಸಾಂ । ಸಾಮಽಭಿಃ ।
ಸ್ತೂಯಮಾನಾಃ ।
ಇಂದ್ರಃ । ಇಂದ್ರಿಯೈಃ । ಮರುತಃ । ಮರುತ್ಽಭಿಃ । ಆದಿತ್ಯೈಃ । ನಃ । ಅದಿ-
ತಿಃ । ಶರ್ಮ । ಯಂಸತ್ ॥ ೨ ॥

### ಸಾಯಣಭಾಷ್ಯಂ

ದೇವಾ ದಾನಾದಿಗುಣಯುಕ್ತಾಃ ಸರ್ವೇ ದೇವಾ ಅವಸಾ ರಕ್ಷಣೇನಾಸ್ಮಭ್ಯಂ ದಾತವ್ಯೇನಾನ್ನೇನ ವಾ ಯುಕ್ತಾ ನೋಽಸ್ಮಾನ್ ಸ್ತೋತೄನುಪಾಗಮಂತು। ಉಪಾಗಚ್ಛಂತು। ಪ್ರಾಪ್ನುವಂತು । ಕಥಂಭೂತಾಃ। ಅಂಗಿರಸಾಮೇತತ್ಸಂಜ್ಞಕಾನಾಮೃಷೀಣಾಂ ಸಂಬಂಧಿಭಿಃ ಸಾಮಭಿಃ ಪ್ರಗೀತೈರ್ಮಂತ್ರೈಃ ಸ್ತೂಯಮಾನಾಃ। ಅಪಿ ಚೇಂದ್ರ ಇಂದ್ರಿಯೈಃ । ಧನನಾಮೈತತ್ । ಸ್ವಸಂಬಂಧಿಭಿರಸ್ಮಭ್ಯಂ ದಾತವ್ಯೈರ್ಧನೈಃ ಸಹಾಸ್ಮಾನಾಗಚ್ಛತು । ತಥಾ ಮರುತಃ ಸಪ್ತಗಣರೂಪಾ ಏಕೋನಪಂಚಾಶತ್ಸಂಖ್ಯಾಕಾ ಈದೃಙ್ ಚಾನ್ಯಾದೃಙ್ ಚೇತ್ಯೇವಮಾದಿನಾಮಾನೋ ದೇವಾ ಮರುದ್ಭಿಃ ಸ್ವಾವಯವಭೂತೈಃ ಪ್ರಾಣಾಪಾನಾದಿರೂಪೇಣ ವರ್ತಮಾನೈರ್ವಾಯುಭಿಃ ಸಹಾಸ್ಮಾನಾಗಚ್ಛಂತು । ತಥಾದಿತಿರಖಂಡನೀಯಾದೀನಾ ವಾ ದೇವಮಾತಾದಿತ್ಯೈಃ ಸ್ವಕೀಯೈಃ ಪುತ್ರೈಃ ಸಹ ನೋಽಸ್ಮಭ್ಯಂ ಶರ್ಮ ಸುಖಂ ಯಂಸತ್ । ಯಚ್ಛತು ॥ ಗಮಂತು । ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ । ಛಂದಸ್ಯುಭಯಥೇತಿ ಝೋರಾರ್ಧಧಾತುಕತ್ವೇನ ಙಿತ್ತ್ವಾಭಾವಾದ್ಗಮಹನೇತ್ಯಾದಿನೋಪಧಾಲೋಪಾಭಾವಃ । ಯಂಸತ್ । ಯಮ ಉಪರಮೇ । ಲೇಟ್ಯಡಾಗಮಃ । ಸಿಬ್ಬಹುಲಂ ಲೇಟೀತಿ ಸಿಪ್ ॥

### ಪ್ರತಿಪದಾರ್ಥ

**ಅಂಗಿರಸಾಂ**—ಅಂಗಿರಸ್ಸೆಂಬ ಋಷಿಗಳ । **ಸಾಮಭಿಃ**—ಗಾನರೂಪವಾದ ಮಂತ್ರಗಳಿಂದ । **ಸ್ತೂಯಮಾನಾಃ**—ಸ್ತುತಿಸಲ್ಪಡುವ । **ದೇವಾಃ**—ಸಕಲ ದೇವತೆಗಳೂ । **ಅವಸಾ**— ರಕ್ಷಣೆಯೊಂದಿಗೆ ಅಥವಾ (ನಮಗೆ ಕೊಡಬೇಕೆಂದಿರುವ) ಅನ್ನದೊಂದಿಗೆ । **ನಃ**—(ಭಕ್ತರಾದ) ನಮ್ಮನ್ನು । **ಉಪ ಆ ಗಮಂತು**—ಸಮೀಪಿಸಿ ಬಂದು ಸೇರಲಿ । **ಇಂದ್ರಃ**—ಇಂದ್ರನು । **ಇಂದ್ರಿಯೈಃ**—(ನಮಗೆ ಕೊಡಬೇಕೆಂದಿರುವ) ತನ್ನ ಧನಗಳೊಂದಿಗೆ ನಮ್ಮಲ್ಲಿಗೆ ಬಂದು ಸೇರಲಿ) । **ಮರುತಃ**—ಮರುತ್ತುಗಳು । **ಮರುದ್ಭಿಃ**—ಪ್ರಾಣಾಪಾನಾದಿರೂಪಗಳಾದ ತಮ್ಮ ಅವಯವಗಳೊಂದಿಗೆ (ನಮ್ಮನ್ನು ಸಮೀಪಿಸಲಿ) । **ಅದಿತಿಃ**—ಆ ದೇವಮಾತೆಯಾದ ಅದಿತಿಯೂ ಸಹ । **ಆದಿತ್ಯೈಃ**—ತನ್ನ ಪುತ್ರರಾದ ದೇವತೆಗಳೊಡನೆ । **ನಃ**—ನಮಗೆ । **ಶರ್ಮ**—ಸುಖವನ್ನು । **ಯಂಸತ್**—ಕೊಡಲಿ ॥

### ಭಾವಾರ್ಥ

ಅಂಗಿರಸ್ಸೆಂಬ ಋಷಿಗಳ ಗಾನರೂಪವಾದ ಮಂತ್ರಗಳಿಂದ ಸ್ತುತಿಸಲ್ಪಡುವ ಸಕಲದೇವತೆಗಳೂ ತಮ್ಮ ರಕ್ಷಣೆಯೊಂದಿಗೆ ಭಕ್ತರಾದ ನಮ್ಮಲ್ಲಿಗೆ ಬರಲಿ. ಇಂದ್ರನು ತನ್ನ ಧನಗಳೊಂದಿಗೂ, ಮರುತ್ತುಗಳು ತಮ್ಮ ಪ್ರಾಣಾಪಾನಾದಿರೂಪವಾದ ತಮ್ಮ ಅವಯವಗಳೊಂದಿಗೂ ದೇವಮಾತೆಯಾದ ಅದಿತಿಯು ತನ್ನ ಪುತ್ರರಾದ ದೇವತೆಗಳೊಂದಿಗೂ ನಮ್ಮಲ್ಲಿಗೆ ಬಂದು ನಮಗೆ ಸುಖವನ್ನು ಉಂಟುಮಾಡಲಿ.

### English Translation

May the gods, who are to be landed by the hymns of the Angirasas, come hither for our protection; may Indra with his treasures, the Maruts with the vital airs, and Aditi with the A'dityas, (come and) give us felicity.

॥ ವಿಶೇಷವಿಷಯಗಳು ॥

**ಅಂಗಿರಸಾಂ ಸಾಮಭಿಃ**—ಅಂಗಿರಸ್ ಎಂಬ ಋಷಿಯ ಅಥವಾ ಋಷಿಗಳ ವಿಷಯವನ್ನು ಇದೇ ಭಾಗದ ೧೦೦ನೇ ಸೂಕ್ತದ ೪ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ವಿವರಿಸಿರುವುದು.

**ತಂ ಹಾಂಗಿರಾ ಉದ್ಗೀಥಮುಪಾಸಾಂಚಕ್ರ ಏತಮು ।**
**ಏವಾಂಗಿರಸಂ ಮನ್ಯಂತೇಽಂಗಾನಾಂ ಯದ್ರಸಃ ॥**

(ಛಾಂ. ಉ. ೧-೨-೧೦)

ಇತ್ಯಾದಿ ವಾಕ್ಯಗಳಿಂದ ಇವರ ಉಪಾಸನಾಕ್ರಮವನ್ನೂ ಗಾನರೂಪವಾದ ಮಂತ್ರಗಳನ್ನು ಪಠಿಸುವುದರಲ್ಲಿ ಇವರಿಗಿರುವ ವೈಶಿಷ್ಟ್ಯವನ್ನೂ ತಿಳಿಯಬಹುದು.

**ಇಂದ್ರಿಯೈಃ**—**ಸ್ವಸಂಬಂಧಿಭಿರಸ್ಮಭ್ಯಂ ದಾತವ್ಯೈರ್ಧನೈಃ ।** ನಮಗೆ ಕೊಡಬೇಕಾದ ಧನಗಳೊಂದಿಗೆ ಎಂದು **ಇಂದ್ರಿಯ**ಶಬ್ದಕ್ಕೆ **ಇಂದ್ರನ ಧನ**ವೆಂದು ಸಾಯಣರೂ, **ಇಂದ್ರಜುಷ್ಟಃ ಅತ್ರ ಇಂದ್ರಿಯಶಬ್ದೇನೋಚ್ಯತೇ ।** ಯೇ ಇಂದ್ರಸ್ಯ ಪ್ರಿಯಾ ದೇವಾಸ್ತೈಸ್ಸಹ ಇಂದ್ರ ಇತ್ಯರ್ಥಃ । ಇಂದ್ರನಿಗೆ ಪ್ರಿಯರಾದ ದೇವತೆಗಳೊಡನೆ ಎಂದು ಸ್ಕಂದಸ್ವಾಮಿಗಳೂ ವಿವರಿಸಿದ್ದಾರೆ. **ಇಂದ್ರಿಯ** ಶಬ್ದಕ್ಕೆ ಇಂದ್ರನ ಅಸಾಧಾರಣವಾದ **ಶಕ್ತಿ**, ಧನ, ತೃಪ್ತಿ ಇತ್ಯಾದ್ಯನೇಕ ಅರ್ಥವಿರುವುದರಿಂದ (ಇದೇ ಭಾಗದ ೧೦೩ನೇ ಸೂಕ್ತದ ೧ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ನೋಡಿ) ಇಲ್ಲಿ ಎರಡರಲ್ಲಿ ಯಾವ ಅರ್ಥವನ್ನಾದರೂ ಹೇಳಬಹುದು.

**ಮರುದ್ಭಿಃ**—**ಸ್ವಾವಯವಭೂತೈಃ ಪ್ರಾಣಾಪಾನಾದಿರೂಪೇಣ ವರ್ತಮಾನೈಃ ವಾಯುಭಿಃ ಸಹ ।** ತನ್ನ ಅವಯವಗಳಾದ ಪ್ರಾಣಾಪಾನಾದಿರೂಪಗಳಾದ ವಾಯುಗಳೊಂದಿಗೆ ಎಂದರೆ ಸಮಸ್ತ ಶಕ್ತಿಗಳೊಂದಿಗೆ ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಗಮಂತು**—ಗಮ್ಲೃ ಗತೌ ಧಾತು. ಲೋಟ್ ಪ್ರಥಮಪುರುಷ ಬಹುವಚನದಲ್ಲಿ ಝಿಗೆ ಅಂತಾದೇಶ **ವಿರುಃ**—(ಪಾ. ಸೂ. ೩-೪-೮೬) ಎಂಬುದರಿಂದ ಉತ್ವ. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಲುಕ್. ಆದುದರಿಂದ ಛಾದೇಶ ಬರುವುದಿಲ್ಲ. ಯದ್ಯಪಿ ಪ್ರತ್ಯಯಕ್ಕೆ ಙಿತ್ತ್ವಾತಿದೇಶವಿರುವುದರಿಂದ ಉಪಧಾಲೋಪ ಪ್ರಾಪ್ತವಾಗುತ್ತದೆ. ಆದರೆ **ಛಂದಸ್ಯುಭಯಥಾ**—(ಪಾ. ಸೂ. ೩-೪-೧೧೭) ಎಂಬುದರಿಂದ ಝಿಗೆ ಆರ್ಧಧಾತುಕಸಂಜ್ಞೆ ಇರುವುದರಿಂದ ಙಿತ್ತ್ವವೇ ಬರುವುದಿಲ್ಲ. ಆದುದರಿಂದ **ಗಮಹನಜನ**—(ಪಾ. ಸೂ. ೬-೪-೯೮) ಎಂಬುದರಿಂದ ಉಪಧಾಲೋಪ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸ್ತೂಯಮಾನಾಃ**—ಷ್ಟುಞ್ ಸ್ತುತೌ ಧಾತು. ಇದಕ್ಕೆ ಕರ್ಮಣಿಯಲ್ಲಿ ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಧಾತ್ವಾದಿಗೆ ಸತ್ವ. **ಸಾರ್ವಧಾತುಕೇ ಯಕ್**—(ಪಾ. ಸೂ. ೩-೧-೬೭) ಎಂಬುದರಿಂದ ಯಕ್. **ಅಕೃತ್ಸಾರ್ವ**—(ಪಾ. ಸೂ. ೭-೪-೨೫) ಎಂಬುದರಿಂದ ಧಾತುವಿನ ಅಚಿಗೆ ದೀರ್ಘ. **ಆನೇಮುಕ್**—(ಪಾ. ಸೂ. ೭-೨-೮೨)—ಸೂತ್ರದಿಂದ ಮುಕಾಗಮ. ಲಸಾರ್ವಧಾತುಕಕ್ಕೆ ಅನುದಾತ್ತಸ್ವರ ಬರುವುದರಿಂದ ಯಕ್ಸ್ವರ ಉಳಿಯುತ್ತದೆ.

**ಇಂದ್ರಿಯೈಃ**—ಇಂದ್ರ ಶಬ್ದಕ್ಕೆ **ಇಂದ್ರಿಯಮಿಂದ್ರಲಿಂ**—(ಪಾ. ಸೂ. ೫-೨-೯೩) ಎಂಬುದರಿಂದ ಘಚ್ ಪ್ರತ್ಯಯ ಬಂದು ನಿಪಾತಿತವಾಗಿದೆ. **ಆಯನೇಯೀ**—(ಪಾ. ಸೂ. ೭-೧-೨) ಎಂಬುದರಿಂದ ಇಯಾದೇಶ. **ಯಸ್ಯೇತಿ ಚ**—(ಪಾ. ಸೂ. ೬-೪-೧೪೮) ಎಂಬುದರಿಂದ ಅಕಾರಲೋಪ. **ಚಿತಃ**—(ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಯಂಸತ್**—ಯಮು ಉಪರಮೇ. ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚಲೋಪಃ**—(೩-೪-೯೭) ಎಂಬುದರಿಂದ ಅಡಾಗಮ. **ಸಿಬ್ಬಹುಲಂಲೇಟಿ**—(ಪಾ. ಸೂ. ೩-೧-೩೪) ಎಂಬುದರಿಂದ ಧಾತುವಿಗೆ ಸಿಪ್. ಧಾತುವಿನ ಮಕಾರಕ್ಕೆ ಅನುಸ್ವಾರ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ. ॥ ೨ ॥



ಸಂಹಿತಾಪಾಠಃ

ತನ್ನ ಇಂದ್ರಸ್ತದ್ವರುಣಸ್ತದಗ್ನಿಸ್ತದರ್ಯಮಾ ತತ್ಸವಿತಾ ಚನೋ ಧಾತ್ ।
ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ ಪೃಥಿವೀ ಉತ ದ್ಯೌಃ ॥ ೩ ॥

ಪದಪಾಠಃ

ತತ್ । ನಃ । ಇಂದ್ರಃ । ತತ್ । ವರುಣಃ । ತತ್ । ಅಗ್ನಿಃ । ತತ್ । ಅರ್ಯಮಾ । ತತ್ । ಸವಿತಾ । ಚನಃ । ಧಾತ್ ।

ತತ್ । ನಃ । ಮಿತ್ರಃ । ವರುಣಃ । ಮಮಹಂತಾಂ । ಅದಿತಿಃ । ಸಿಂಧುಃ ।
ಪೃಥಿವೀ । ಉತ । ದ್ಯೌಃ ॥ ೩ ॥

ಸಾಯಣಭಾಷ್ಯಂ

ಯದಸ್ಮಾಭಿಃ ಪ್ರಾರ್ಥ್ಯಮಾನಮನ್ನಮಸ್ತಿ । ಚನ ಇತ್ಯನ್ನನಾಮ । ತತ್ತಾದೃಶಂ ಚನೋಽನ್ನಂ ನೋಽಸ್ಮಭ್ಯಮಿಂದ್ರೋ ಧಾತ್ । ದಧಾತು । ದದಾತು । ಏವಂ ತದ್ವರುಣ ಇತ್ಯಾದಾವಪಿ ಯೋಜ್ಯಂ । ತದಿದಮಿಂದ್ರಾದಿಭಿರ್ದತ್ತಮಸ್ಮದೀಯಮನ್ನಂ ಮಿತ್ರಾದಯೋ ಮಮಹಂತಾಂ । ಪೂಜಯಂತು । ಪಾಲಯಂತ್ವಿತ್ಯರ್ಥಃ ॥ ಚನಃ । ಚಾಯ್ಯ ಪೂಜಾನಿಶಾಮನಯೋಃ । ಚಾಯೇರನ್ನೇ ಹ್ರಸ್ವಶ್ಚ । ಉ. ೪-೧೯೯ ಇತ್ಯಸುನ್ ನುಡಾಗಮಶ್ಚ ಧಾತೋರ್ಹ್ರಸ್ವತ್ವಂ ಚ । ವಲಿ ಲೋಪಃ । ನಿತ್ತ್ವಾದಾದ್ಯುದಾತ್ತತ್ವಂ । ಧಾತ್ । ಛಂದಸಿ ಲುಙ್‌ಲಙ್‌ಲಿಟ ಇತಿ ಪ್ರಾರ್ಥನಾಯಾಂ ಲುಙ್ । ಗಾತಿಸ್ಥೇತಿ ಸಿಚೋ ಲುಕ್ ॥

ಪ್ರತಿಪದಾರ್ಥ

**ತತ್**— ನಮ್ಮಿಂದ ಪ್ರಾರ್ಥಿತವಾದ । **ಚನಃ**—ಅನ್ನವನ್ನು । **ನಃ**— ನಮಗೆ । **ಇಂದ್ರಃ**—ಇಂದ್ರನು । **ಧಾತ್** - (ಅನುಗ್ರಹಿಸಿ) ಕೊಡಲಿ । **ತತ್**— ಆ ಅನ್ನವನ್ನು । **ವರುಣಃ**— ವರುಣನೂ (ಕೊಡಲಿ) । **ತತ್**— ಅದನ್ನು । **ಅಗ್ನಿಃ**—ಅಗ್ನಿಯೂ । **ತತ್**—ಆ ಅನ್ನವನ್ನು । **ಅರ್ಯಮಾ** - ಅರ್ಯಮನೂ । **ತತ್**—ಅದನ್ನು । **ಸವಿತಾ**—ಸವಿತೃವೂ ಕೊಡಲಿ । **ನಃ ತತ್**— ನಮ್ಮ (ಇಂದ್ರಾದಿಗಳಿಂದ ದತ್ತವಾದ) ಆ ಅನ್ನವನ್ನು । **ಮಿತ್ರಃ**— ಮಿತ್ರನೂ । **ವರುಣಃ**—ವರುಣನೂ । **ಅದಿತಿಃ**—ಅದಿತಿಯೂ । **ಸಿಂಧುಃ**—ಸಾಗರಾಧಿದೇವತೆಯೂ । **ಪೃಥಿವೀ**— ಪೃಥಿವಿಯೂ । **ಉತ**—ಮತ್ತು । **ದ್ಯೌಃ**—ದ್ಯುಲೋಕಾಧಿದೇವತೆಯೂ । **ಮಮಹಂತಾಂ**—ರಕ್ಷಿಸಲಿ ॥

ಭಾವಾರ್ಥ

ನಾವು ಪ್ರಾರ್ಥಿಸಿದ ಅನ್ನವನ್ನು ನಮಗೆ ಇಂದ್ರನು ಅನುಗ್ರಹಿಸಿಕೊಡಲಿ. ಅದರಂತೆಯೇ ವರುಣನೂ, ಅಗ್ನಿಯೂ ರ್ಯಮನೂ ಮತ್ತು ಸವಿತೃವೂ ಕೊಡಲಿ. ಆ ಇಂದ್ರಾದಿಗಳಿಂದ ದತ್ತವಾದ ಅನ್ನವನ್ನು ಮಿತ್ರನೂ ವರುಣನೂ ಅದಿತಿಯೂ ಸಾಗರಾಧಿ ದೇವತೆಯೂ ಪೃಥಿವಿಯೂ ಮತ್ತು ದ್ಯುಲೋಕಾಧಿದೇವತೆಯೂ ರಕ್ಷಿಸಲಿ.

## English Translation

May Indra, may Varuna, may Agni, may Aryaman, may Savitri, bestow upon us that food (which we solicit); and may Mitra, Varuna, Aditi,—ocean, earth and heaven, preserve it (to us).

। ವಿಶೇಷವಿಷಯಗಳು ।

ಚನಃ—ಅನ್ನನಾಮಗಳಲ್ಲಿ ಸೇರಿರುವುದರಿಂದ ಚನಃ ಎಂದರೆ ಅನ್ನವನ್ನು ಎಂದರ್ಥ. (ನಿ. ೬-೧೬)

ಈ ಋಕ್ಕಿನಲ್ಲಿ **ಧಾತ್, ಮಮಹಂತಾಂ** ಎಂಬ ಎರಡು ಕ್ರಿಯಾಪದಗಳಿವೆ. **ಚನಃ ಧಾತ್** ಎಂದರೆ ಇಂದ್ರಾದಿಗಳು ಅನ್ನವನ್ನು ಕೊಡಲಿ ಎಂದರ್ಥವಾಗುತ್ತದೆ. ಪುನಃ **ಮಮಹಂತಾಂ** ಎಂದಿದೆ. **ಮಹಂತಿ** ಎಂಬ ಪದವೂ ಸಹ **ದಾನಕರ್ಮ** ನಾಮಗಳಲ್ಲಿ ಪಠಿತವಾಗಿದೆ (ನಿ. ೩-೧೯).

ಯದೀಂ ವಾಜಸ್ಯ ಗೋಮತಃ ಸ್ತೋತೃಭ್ಯೋ ಮಂಹತೇ ಮಘಂ ।
(ಋ. ಸಂ. ೧-೧೧-೩)

**ಅಸ್ಯೇದಿಂದ್ರೋ ಮದೇಷ್ವಾ ವಿಶ್ವಾ ವೃತ್ರಾಣಿ ಜಿಘ್ನತೇ ।**
**ಶೂರೋ ಮಘಾ ಚ ಮಂಹತೇ ॥**
(ಋ. ಸಂ. ೯-೧-೧೦)

ಇತ್ಯಾದಿ ಕಡೆಗಳಲ್ಲಿ **ಮಂಹತೇ** ಎಂಬ ಕ್ರಿಯಾಪದಕ್ಕೆ **ಪ್ರಯಚ್ಛತಿ** ಎಂದರ್ಥ. ಆದರೆ ಪ್ರಕೃತವಾದ ಋಕ್ಕಿನಲ್ಲಿ **ಮಂಹ್** ಧಾತುವಿಗೆ ವಿಶೇಷಾರ್ಥವಿದೆ. ಈ ಪದವು ಕುತ್ಸ ಆಂಗಿರಸನ ಎಲ್ಲಾ ಸೂಕ್ತಗಳ ಕೊನೆಯಲ್ಲಿಯೂ ಉಪಯೋಗಿಸಲ್ಪಟ್ಟಿದೆ. **ಪೂಜ್ಯವಾದುದನ್ನಾಗಿ** ಮಾಡಲಿ ಎಂದರ್ಥವೆಂದು ಮೊದಲನೆಯ ಎಂದರೆ ೧-೯೪-೧೬ನೇ ಋಕ್ಕಿನಲ್ಲಿ ಭಾಷ್ಯಕಾರರು ಹೇಳಿದ್ದಾರೆ. ಅದೇ ಅರ್ಥವು ಕೊನೆಯವರೆಗೂ ಅನುಸ್ಯೂತವಾಗಿ ಅನುಸರಿಸುತ್ತದೆ. ಇಂದ್ರಾದಿ ದೇವತೆಗಳು ಕೊಟ್ಟ ಅನ್ನವನ್ನು ಮಿತ್ರಾದಿಗಳು ನಮಗೆ ಅರ್ಚನೀಯವಾದುದನ್ನಾಗಿ ಮಾಡಲಿ ಎಂದಭಿಪ್ರಾಯ; ಅಥವಾ ವೃದ್ಧಿಪಡಿಸಲಿ ಎಂದಾದರೂ ಆಗಬಹುದು.

ವ್ಯಾಕರಣಪ್ರಕ್ರಿಯಾ

**ಅರ್ಯಮಾ – ಶ್ವನ್ನುಕ್ಷನ್**—(ಉ. ಸೂ. ೧-೧೫೭) ಎಂಬುದರಿಂದ ಕನಿ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಪ್ರಥಮಾಏಕವಚನಾಂತರೂಪ.

**ಚನಃ**—ಚಾಯೃ ಪೂಜಾನಿಶಾಮನಯೋಃ ಧಾತು. ಇದಕ್ಕೆ **ಚಾಯತೇರನ್ನೇ ಹ್ರಸ್ವಶ್ಚ**—(ಉ. ಸೂ. ೪-೬೩೯) ಎಂಬುದರಿಂದ ಅಸುನ್ ಪ್ರತ್ಯಯ. ತತ್ಸಂನ್ನಿಯೋಗದಿಂದ ನುಡಾಗಮ. ಧಾತುವಿಗೆ ಹ್ರಸ್ವ. **ಲೋಪೋ-ವ್ಯೋರ್ವಲಿ**—(ಪಾ. ಸೂ. ೬-೧-೬೬) ಎಂಬುದರಿಂದ ಧಾತುವಿನ ಯಕಾರಕ್ಕೆ ವಕಾರನಿಮಿತ್ತವಾಗಿ ಲೋಪ. ಚನಸ್ ಎಂದು ರೂಪವಾಗುತ್ತದೆ. ಪ್ರತ್ಯಯವು ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಧಾತ್** — ಡುಧಾಞ್ ಧಾರಣಪೋಷಣಯೋಃ ಧಾತು. ಪ್ರಾರ್ಥನಾರೂಪಅರ್ಥ ತೋರುವಾಗ **ಛಂದಸಿ ಲುಙ್ಲಙ್ಲಿಟಃ**— (ಪಾ. ಸೂ. ೩-೪-೬) ಎಂಬುದರಿಂದ ಲುಙ್. ಪ್ರಥಮಪುರುಷ ಏಕವಚನವಿವಕ್ಷಿತಿಪಿಗೆ **ಇತಶ್ಚ**—ಎಂಬುದರಿಂದ ಇಕಾರಲೋಪ. ಚ್ಲಿಗೆ ಸಿಚಾದೇಶ ಬಂದಾಗ **ಗಾತಿಸ್ಥಾಘುಪಾ**—(ಪಾ. ಸೂ. ೨-೪-೭೭) ಎಂಬುದರಿಂದ ಅದಕ್ಕೆ ಲುಕ್. **ಬಹುಲಂಛಂದಸ್ಯಮಾಙ್ಯೋಗೇಽಪಿ**—(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಧಾತ್ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ. ಉಳಿದ ಪದಗಳು ಹಿಂದೆ ವ್ಯಾಖ್ಯಾತಗಳಾಗಿವೆ. ॥ ೩ ॥

ನೂರ ಏಳನೇ ಸೂಕ್ತವು ಸಮಾಪ್ತಿಯಾದುದು.

# ನೂರ ಎಂಟನೆಯ ಸೂಕ್ತವು

—:o:—

**ಯ ಇಂದ್ರಾಗ್ನೀ ಇತಿ ತ್ರಯೋದಶರ್ಚಂ ತೃತೀಯಂ ಸೂಕ್ತಂ ಕುತ್ಸಸ್ಯಾರ್ಷಂ ತ್ರೈಷ್ಟುಭಮೈಂದ್ರಾಗ್ನಂ । ತಥಾ ಚಾನುಕ್ರಾಂತಂ । ಯ ಇಂದ್ರಾಗ್ನೀ ಸಪ್ತೋನೈಂದ್ರಾಗ್ನಂ ತ್ವಿತಿ । ವಿನಿಯೋಗೋ ಲೈಂಗಿಕಃ ॥**

ಅನುವಾದವು—**ಯ ಇಂದ್ರಾಗ್ನೀ** ಎಂಬ ಈ ಸೂಕ್ತವು ಹದಿನಾರನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹದಿಮೂರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಕುತ್ಸನು ಋಷಿಯು. ಇಂದ್ರಾಗ್ನಿಗಳು ದೇವತೆಯು. ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ— **ಯ ಇಂದ್ರಾಗ್ನೀಸಪ್ತೋನೈಂದ್ರಾಗ್ನಂ** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

———— ————

॥ ಓಂ ॥

**ಸೂಕ್ತ—೧೦೮**

ಮಂಡಲ—೧ ॥ ಅನುವಾಕ—೧೬ ॥ ಸೂಕ್ತ— ೧೦೮॥

ಅಷ್ಟಕ—೧ ॥ ಅಧ್ಯಾಯ—೭ ॥ ವರ್ಗ— ೨೬, ೨೭ ।

ಸೂಕ್ತದಲ್ಲಿರುವ ಋಕ್ಸಂಖ್ಯೆ— ೧೩ ॥

॥ ಋಷಿಃ—ಕುತ್ಸ ಆಂಗಿರಸಃ

॥ ದೇವತಾ— ಇಂದ್ರಾಗ್ನೀ ॥

॥ ಛಂದಃ—ತ್ರಿಷ್ಟುಪ್ ॥

**ಸಂಹಿತಾಪಾಠಃ**

ಯ ಇಂದ್ರಾಗ್ನೀ ಚಿತ್ರತಮೋ ರಥೋ ವಾಮಭಿ ವಿಶ್ವಾನಿ
ಭುವನಾನಿ ಚಷ್ಟೇ ।

ತೇನಾ ಯಾತಂ ಸರಥಂ ತಸ್ಥಿವಾಂಸಾಥಾ ಸೋಮಸ್ಯ ಪಿಬತಂ
ಸುತಸ್ಯ ॥ ೧ ॥

ಪದಪಾಠಃ

ಯಃ । ಇಂದ್ರಾಗ್ನೀ ಇತಿ । ಚಿತ್ರಽತಮಃ । ರಥಃ । ವಾಂ । ಅಭಿ । ವಿಶ್ವಾನಿ । ಭುವನಾನಿ । ಚಷ್ಟೇ ।

ತೇನ । ಆ । ಯಾತಂ । ಸಽರಥಂ । ತಸ್ಥಿಽವಾಂಸಾ । ಅಥ । ಸೋಮಸ್ಯ । ಪಿಬತಂ । ಸುತಸ್ಯ ॥ ೧ ॥

ಸಾಯಣಭಾಷ್ಯಂ

ಹೇ ಇಂದ್ರಾಗ್ನೀ ಚಿತ್ರತಮೋಽತಿಶಯೇನ ಚಾಯನೀಯೋ ವಾಂ ಯುವಯೋಃ ಸಂಬಂಧೀ ಯೋ ರಥೋ ವಿಶ್ವಾನಿ ಭುವನಾನಿ ಭೂತಜಾತಾನ್ಯಭಿಚಷ್ಟೇ ಅಭಿಮುಖ್ಯೇನ ಪಶ್ಯತಿ । ಸುವರ್ಣಮಯತ್ವಾತ್ ರತ್ನಖಚಿತತ್ವಾಚ್ಚ ಸ್ವಪ್ರಭಾಭಿಃ ಕೃತ್ಸ್ನಂ ಜಗದ್ಭಾಸಯತೀತ್ಯರ್ಥಃ । ತೇನ ರಥೇನಾ ಯಾತಂ । ಅಸ್ಮದ್ಯಜ್ಞಮಾಗಚ್ಛತಂ । ತತ್ಕಿಂ ಪರ್ಯಾಯೇಣ । ನೇತ್ಯಾಹ । ಸರಥಂ ಸಮಾನಮೇಕಂ ರಥಂ ತಸ್ಥಿವಾಂಸಾ ಯುಗಪದೇವಾಸ್ಥಿತವಂತೌ ಯುವಾಮಾಗಚ್ಛತಂ । ನ ಪರ್ಯಾಯೇಣೇತ್ಯರ್ಥಃ । ಅಥಾಗಮನಾನಂತರಂ ಸುತಸ್ಯ ಋತ್ವಿಗ್ಭಿರಭಿಷುತಂ ಸೋಮಸ್ಯ ಸೋಮಂ ಸ್ವಾಂಶಲಕ್ಷಣಂ ತದೇಕದೇಶಂ ವಾ ಪಿಬತಂ ॥ ವಾಂ । ಯುಷ್ಮದಸ್ಮದೋಃ ಷಷ್ಠೀಚತುರ್ಥೀ ಇತ್ಯಾದಿನಾ । ಪಾ. ೮-೧-೨೦ । ಷಷ್ಠೀದ್ವಿವಚನಸ್ಯ ವಾಮಾದೇಶಃ । ಸರ್ವಾನುದಾತ್ತತ್ವಂ । ಚಷ್ಟೇ । ಚಕ್ಷಿಙ್ ವ್ಯಕ್ತಾಯಾಂ ವಾಚಿ । ಅತ್ರ ಪ್ರಕಾಶನಾರ್ಥಃ । ಅದಾದಿತ್ವಾಚ್ಛಪೋ ಲುಕ್ । ಸ್ಕೋಃ ಸಂಯೋಗಾದ್ಯೋರಿತಿ ಕಲೋಪಃ । ತಾಸ್ಯನುದಾತ್ತೇದಿತಿ ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ ಶಿಷ್ಯತೇ । ಯದ್ವೃತ್ತಾನ್ನಿತ್ಯಮಿತಿ ನಿಘಾತಪ್ರತಿಷೇಧಃ । ಸರಥಂ । ಸಮಾನಶ್ಚಾಸೌ ರಥಶ್ಚ ಸರಥಃ । ಸಮಾನಸ್ಯ ಛಂದಸೀತಿ ಸಭಾವಃ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ತಸ್ಥಿವಾಂಸಾ । ಷ್ಠಾ ಗತಿನಿವೃತ್ತೌ । ಲಿಟಃ ಕ್ವಸುಃ । ದ್ವಿರ್ವಚನೇ । ಶರ್ಪೂರ್ವಾಃ ಖಯಃ । ವಸ್ವೇಕಾಜಾದ್ಘಸಾಮಿತೀಡಾಗಮಃ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ । ಸುಪಾಂ ಸುಲುಗಿತ್ಯಾಕಾರಃ । ಸೋಮಸ್ಯ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ ॥

। ಪ್ರತಿಪದಾರ್ಥ ।

**ಇಂದ್ರಾಗ್ನೀ**—ಎಲೈ ಇಂದ್ರಾಗ್ನಿಗಳೇ । **ವಾಂ**—ನಿಮಗೆ ಸೇರಿರುವುದೂ । **ಚಿತ್ರತಮಃ**—ಅತ್ಯಂತ ಮನೋಹರವಾದುದೂ ಆದ । **ಯಃ ರಥಃ** – ಯಾವ ರಥವು । **ವಿಶ್ವಾನಿ ಭುವನಾನಿ**—ಸಮಸ್ತ ಭೂತಜಾತಗಳನ್ನೂ । **ಅಭಿಚಷ್ಟೇ**—ಅಭಿಮುಖವಾಗಿದ್ದು ನೋಡುತ್ತದೆಯೋ (ಅತಿಶಯವಾಗಿ ಬೆಳಗುತ್ತದೆಯೋ) । **ತೇನ ರಥೇನ**—ಆ ರಥದಲ್ಲಿ । **ಸರಥಂ**—(ಇಬ್ಬರೂ) ಒಂದೇ ರಥದಲ್ಲಿ । **ತಸ್ಥಿವಾಂಸಾ**— ಒಟ್ಟಿಗೆ ಕುಳಿತವರಾಗಿ । **ಆ ಯಾತಂ**—(ನಮ್ಮ ಯಜ್ಞಕ್ಕೆ) ದಯಮಾಡಿರಿ । **ಅಥ**—ಅನಂತರ । **ಸುತಸ್ಯ**—(ಋತ್ವಿಕ್ಕುಗಳು) ಹಿಂಡಿದ । **ಸೋಮಸ್ಯ**—ಸೋಮರಸದ (ಭಾಗವನ್ನು) । **ಪಿಬತಂ**—ಕುಡಿಯಿರಿ ॥

ಭಾವಾರ್ಥ

ಎಲೈ ಇಂದ್ರಾಗ್ನಿಗಳೇ, ಸಮಸ್ತಭೂತಜಾತಗಳನ್ನೂ ಆಶ್ಚರ್ಯಕರವಾದ ರೀತಿಯಲ್ಲಿ ಬೆಳಗುವ ನಿಮ್ಮ ಮನೋಹರವಾದ ರಥದಲ್ಲಿ ಇಬ್ಬರೂ ಒಟ್ಟಿಗೆ ಒಂದೇ ಕಾಲದಲ್ಲಿ ಕುಳಿತುಕೊಂಡು ನಮ್ಮ ಯಜ್ಞಕ್ಕೆ ದಯಮಾಡಿ. ಬಂದ ನಂತರ ಋತ್ವಿಕ್ಕುಗಳು ಹಿಂಡಿದ ಸೋಮರಸದ ಭಾಗವನ್ನೂ ಕುಡಿಯಿರಿ.

English Translation

Indra and Agni, sitting tcgether in your car,—that wonderful car which illuminates all beings, approach and drink of the effused Soma juice.

ವಿಶೇಷವಿಷಯಗಳು

**ಇಂದ್ರಾಗ್ನೀ**—ಇಂದ್ರಾಗ್ನಿಗಳ ಸಾಹಚರ್ಯವನ್ನೂ, ಆ ಸಾಹಚರ್ಯದ ಪ್ರಭಾವವನ್ನೂ ತಿಳಿಯಲು ಮೊದಲು ಅಗ್ನಿಯ ಸ್ವರೂಪವನ್ನು ತಿಳಿಯಬೇಕು. ಅನಂತರ ಆ ಸ್ವರೂಪವಿಶೇಷವು ಅಗ್ನಿಗೂ ಇಂದ್ರನಿಗೂ ಇರತಕ್ಕ ಸಹಜವಾದ ಸಾಹಚರ್ಯವನ್ನು ತಿಳಿಸುತ್ತದೆ.

**ದಿವಸ್ಪರಿ ಪ್ರಥಮಂ ಜಜ್ಞೇ ಅಗ್ನಿರಸ್ಮದ್ದ್ವಿತೀಯಂ ಪರಿ ಜಾತವೇದಾಃ ।**
**ತೃತೀಯಮಪ್ಸು ನೃಮಣಾ ಅಜಸ್ರಮಿಂಧಾನ ಏನಂ ಜರತೇ ಸ್ವಾಧೀಃ ॥**
(ಋ. ಸಂ. ೧೦-೪೫-೧)

**ಇದಂ ತ ಏಕಂ ಪರ ಊ ತ ಏಕಂ ತೃತೀಯೇನ ಜ್ಯೋತಿಷಾ ಸಂ ವಿಶಸ್ವ ।**
(ಋ. ಸಂ. ೧೦-೫೬-೧)

ಇತ್ಯಾದಿಸಂಹಿತಾವಾಕ್ಯಗಳು ಅಗ್ನಿಯು ಮೂರು ರೂಪಗಳಲ್ಲಿ ತನ್ನ ಅಸ್ತಿತ್ವವನ್ನು ಪ್ರಕಾಶಪಡಿಸಿಕೊಳ್ಳುವನೆಂದು ತಿಳಿಸುತ್ತವೆ. ಇದನ್ನೇ ನಿರುಕ್ತಕಾರರೂ ಸಹ

**ತಮಕುರ್ವಂಸ್ತ್ರೇಧಾಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ ।**
(ನಿ. ೭-೨೮)

ಇತ್ಯಾದಿ ವಾಕ್ಯಗಳಿಂದ ವಿವರಿಸಿದ್ದಾರೆ. ಎಂದರೆ, ದ್ಯುಲೋಕದಲ್ಲಿ ಸೂರ್ಯಾತ್ಮನಾಗಿಯೂ, ಅಂತರಿಕ್ಷದಲ್ಲಿ ವಿದ್ಯುದ್ರೂಪದಿಂದಲೂ, ಪೃಥ್ವಿಯಮೇಲೆ ಯಜ್ಞಾಗ್ನಿಯ ಆಕಾರದಲ್ಲಿಯೂ ಅಗ್ನಿಯು ಆವಿಷ್ಕೃತನಾಗಿದ್ದಾನೆ. ಈ ಮೂರು ರೂಪಗಳಲ್ಲಿಯೂ ಇಂದ್ರಾಗ್ನಿಗಳ ಸಹಜವಾದ ಸಾಹಚರ್ಯವು ಇದ್ದೇ ಇರುತ್ತದೆ. ಮೊದಲನೆಯದಾಗಿ,

**ತದ್ವಾ ಏಷ ಏವೇಂದ್ರಃ । ಯ ಏಷ ತಪತ್ಯಥೈಷ ಏವ ವೃತ್ರೋ ಯಚ್ಚಂದ್ರಮಾಃ ।**
(ಶ. ಬಾ. ೧-೬-೪-೧೮)

ಇತ್ಯಾದಿ ವಾಕ್ಯಗಳು ಇಂದ್ರನಿಗೂ, ದ್ಯುಲೋಕದಲ್ಲಿ ಪ್ರಕಾಶಿಸುತ್ತಿರುವ ಸೂರ್ಯನಿಗೂ ತಾದಾತ್ಮ್ಯವನ್ನೇ ಹೇಳುತ್ತವೆ. ಇಂತಹ ಸಂದರ್ಭಗಳಲ್ಲಿ ಸೂರ್ಯಾತ್ಮರೇ ಆಗಿರುವ ಇಂದ್ರಾಗ್ನಿಗಳು ಒಟ್ಟಿಗೆ ಒಂದೇ ರಥದಲ್ಲಿ ಕುಳಿತುಕೊಂಡುಬರುವ ದೃಶ್ಯವನ್ನು ವರ್ಣಿಸುವುದೂ ಸಾಧಾರಣವಾಗಿದೆ.

ಎರಡನೆಯದಾಗಿ, ವಿದ್ಯುದ್ರೂಪದಲ್ಲಿರುವ ಅಗ್ನಿಗೂ ಇಂದ್ರನಿಗೂ ಸಹ ಸಾಹಚರ್ಯವು ವೃತ್ರವಧಕಾಲದಲ್ಲಿ ಇದ್ದೇ ಇರುತ್ತದೆ. ಈ ಅಂಶವನ್ನು ಇದೇ ಸೂಕ್ತದ ಮೂರನೆಯ ಋಕ್ಕಿನಲ್ಲಿ ತಿಳಿಸಿರುತ್ತದೆ. ಮೂರನೆಯದಾಗಿ ಯಜ್ಞಾಹುತಿಗಳನ್ನೆಲ್ಲಾ ದೇವತೆಗಳಿಗೆ ಹಂಚುವಾಗ ಇಂದ್ರನೇ ಪ್ರಧಾನ ದೇವನಾದುದರಿಂದ ಇವರಿಬ್ಬರ ಸಂಬಂಧವು ಉಳಿದ ದೇವತೆಗಳೊಡನೆ ಇರತಕ್ಕ ಸಂಬಂಧಕ್ಕಿಂತ ಹೆಚ್ಚು ನಿಕಟವಾದುದು. ಇವರಿಬ್ಬರೂ ಪ್ರಜಾಪತಿಯ ಎರಡು ಭುಜಗಳಾಗಿರುವರು.

**ತಾಭ್ಯಾಂ ವೈ ನೌ ಸರ್ವಮನ್ನಂ ಪ್ರಯಚ್ಛೇತಿ ತೌ ವೈ ಮಾ ಬಾಹೂ ಭೂತ್ವಾ ಪ್ರಪದ್ಯೇಥಾಂ ।**
(ಶ. ಬ್ರಾ. ೭-೪-೧-೪೦)

ಎಂದು ವರ್ಣಿತನಾಗಿರುವ ಪ್ರಜಾಪತಿಯ ಭುಜಗಳೇ ಲೋಕಕ್ಕೆಲ್ಲಾ ಸೂರ್ಯನ ರೂಪದಲ್ಲಿ ಬೆಳಕನ್ನು ಹರಡುವವರಾದ್ದರಿಂದ,

**ಯಾಸ್ತೇ ಅಗ್ನೇ ಸೂರ್ಯೇ ರುಚಃ ।**
( ಶ. ಬ್ರಾ. ೭-೪-೨-೨೧ )

ಇತ್ಯಾದಿ ವಾಕ್ಯಗಳಿಂದ ಸೂರ್ಯಾತ್ಮರಾದ ಇಂದ್ರಾಗ್ನಿಗಳನ್ನು ಲೋಕಕ್ಕೆಲ್ಲಾ ಬೆಳಕನ್ನು ಹರಡಬೇಕೆಂದು ಪ್ರಾರ್ಥಿಸಿದೆ. ಈ ಸೂರ್ಯನು ಮಿತ್ರಾವರುಣರ ಚಕ್ಷುಸ್ಸು. ಈ ತೇಜೋರೂಪವಾದ ಕಣ್ಣಿನಿಂದ ಲೋಕವನ್ನೆಲ್ಲಾ ಬೆಳಗಿಸುವನು ಮತ್ತು ಒಟ್ಟಿಗೆ ನೋಡುವನು.

**ಅಭಿಚಷ್ಟೇ – ಅಭಿಪಶ್ಯತಿ ।** ಅಭಿಮುಖನಾಗಿದ್ದು ನೋಡುತ್ತದೆ ಎಂದು ಪದಕ್ಕೆ ಸರಿಯಾದ ಅರ್ಥವನ್ನು ಮಾಡಿ ಅನಂತರ **ದರ್ಶನೇನಾತ್ರ ತದ್ಧೇತುಭೂತಂ ಗಮನಂ ಲಕ್ಷ್ಯತೇ ।** ದರ್ಶನಶಬ್ದವು ಇಲ್ಲಿ ಗಮನವೆಂಬ ಅರ್ಥವನ್ನು ಕೊಡುತ್ತಿದೆ ಎಂದು ಸ್ಕಂದಸ್ವಾಮಿಗಳು ವಿವರಿಸಿದ್ದಾರೆ. ಸಾಯಣರು ಈ ಪದವು ಬರುವ ಕಡೆಗಳಲ್ಲೆಲ್ಲಾ ನಿರುಕ್ತಕಾರರ ಅರ್ಥವನ್ನೇ ಅನುಸರಿಸಿದ್ದಾರೆ. ನಿರುಕ್ತಕಾರರು ಎರಡು ಕಡೆಗಳಲ್ಲಿ ಈ ಪದವು ಪ್ರಯೋಗವಿರುವ ಋಕ್ಕುಗಳನ್ನು ಉದಹರಿಸಿ ಅಭಿಪಶ್ಯತಿ ಎಂಬ ಅರ್ಥವನ್ನೇ ಹೇಳಿರುತ್ತಾರೆ. ( ೧೦-೨೬ ; ೧೩-೨೭ ).

ಇಂತಹ ವರ್ಣನೆಯು ಬರುವ ಕಾಲಗಳಲ್ಲೆಲ್ಲಾ, ವರುಣ, ಇಂದ್ರ, ಅಗ್ನಿ, ಸೂರ್ಯ ಈ ದೇವತೆಗಳ ಲೋಕಯಾತ್ರಾ ಕಾರ್ಯವೂ, ಲೋಕಪ್ರಕಾಶನಕಾರ್ಯವೂ ಸಮಾನವಾಗಿದೆ.

**ಋಜು ಮರ್ತೇಷು ವೃಜಿನಾ ಚ ಪಶ್ಯನ್ನಭಿ ಚಷ್ಟೇ ಸೂರೋ ಅರ್ಯ ಏವಾನ್ ।**
(ಋ. ಸಂ. ೬-೫೧-೨)

**ಅಭಿ ಯೋ ವಿಶ್ವಾ ಭುವನಾನಿ ಚಷ್ಟೇ ಸ ಮನ್ಯುಂ ಮರ್ತ್ಯೇಷ್ವಾ ಚಿಕೇತ ।**
(ಋ. ಸಂ. ೭-೬೧-೧)

ಇತ್ಯಾದಿಋಕ್ಕುಗಳಲ್ಲಿ ವರ್ಣಿತವಾಗಿರುವಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಸೂರ್ಯಾತ್ಮರಾದ ಇಂದ್ರಾಗ್ನಿಗಳ ಏಕಕಾಲಿಕವಾದ ಲೋಕವೀಕ್ಷಣವೂ, ಲೋಕಪ್ರಕಾಶನವೂ ವರ್ಣಿತವಾಗಿದೆ.

॥ ವ್ಯಾಕರಣಪ್ರಕ್ರಿಯಾ

**ಚಿತ್ರತಮಃ**—ಅತಿಶಯೇನ ಚಿತ್ರಃ ಚಿತ್ರತಮಃ **ಅತಿಶಾಯನೇ ತಮಬಿಷ್ಠನೌ**—(ಪಾ. ಸೂ. ೫-೩-೫೫) ಎಂಬುದರಿಂದ ತಮಪ್ ಪ್ರತ್ಯಯ.

**ವಾಮ್**—ಯುಷ್ಮದ್ ಶಬ್ದ. ಷಷ್ಠೀ ವಿಭಕ್ತಿ ಬಂದು ರೂಪವಾದಾಗ **ಯುಷ್ಮದಸ್ಮದೋಃ ಷಷ್ಠೀ-ಚತುರ್ಥೀ**—(ಪಾ. ಸೂ. ೮-೧-೨೦) ಎಂಬುದರಿಂದ ಷಷ್ಠೀದ್ವಿವಚನಾಂತಕ್ಕೆ ವಾಮಾದೇಶ. ನಿಘಾತಯುಷ್ಮದಸ್ಮದಾದೇಶವೆಂಬುದರಿಂದ ಸರ್ವಾನುದಾತ್ತವಾಗುತ್ತದೆ.

**ಚಷ್ಟೇ**—ಚಕ್ಷಿಙ್ ವ್ಯಕ್ತಾಯಾಂ ವಾಚಿ. ಧಾತು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಪ್ರಕಾಶನಾರ್ಥದಲ್ಲಿ ಪ್ರಯುಕ್ತವಾಗಿದೆ. ಅದಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಟಿತ-ಆತ್ಮನೇ**—ಎಂಬುದರಿಂದ ಏತ್ವ. **ಅದಿಪ್ರಭೃತಿಭ್ಯಃ ಶಪಃ**—(ಪಾ. ಸೂ. ೨-೪-೭೨) ಎಂಬುದರಿಂದ ಶಪಿಗೆ ಲುಕ್. **ಸ್ಕೋಃ ಸಂಯೋಗಾದ್ಯೋರಂತೇಚ** (ಪಾ. ಸೂ. ೮-೨-೨೯) ಎಂಬುದರಿಂದ ಧಾತುವಿನ ಸಂಯೋಗಾದಿ ಕಕಾರಕ್ಕೆ ಲೋಪ ಷ್ಟುತ್ವದಿಂದ ಪ್ರತ್ಯಯ ತಕಾರಕ್ಕೆ ಟತ್ವ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಧಾತುವು ಅನುದಾತ್ತೇತ್ತಾದುದರಿಂದ ಪರದಲ್ಲಿರುವ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ವ್ಯವಹಿತವಾದರೂ ಯಚ್ಛಬ್ದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ.

**ಯಾತಮ್**—ಯಾ ಪ್ರಾಪಣೇ. ಧಾತು. ಲೋಟ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಸರಥಮ್**—ಸಮಾನಶ್ಚಾಸೌ ರಥಶ್ಚ ಸರಥಃ **ಸಮಾನಸ್ಯಛಂದಸ್ಯ**—(ಪಾ. ಸೂ. ೬-೩-೮೪) ಎಂಬುದರಿಂದ ಸಮಾನಶಬ್ದಕ್ಕೆ ಸಭಾವ. **ಪರಾದಿಶ್ಛಂದಸಿ ಬಹುಲಮ್** (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ತಸ್ಥಿವಾಂಸಾ**— ಷ್ಠಾ ಗತಿನಿವೃತ್ತೌ ಧಾತು. ಲಿಟಿಗೆ **ಕ್ವಸುಶ್ಚ** (ಪಾ.ಸೂ ೩-೨-೧೦೭) ಎಂಬುದರಿಂದ ಕ್ವಸುರಾದೇಶ ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಶರ್ಪೂರ್ವಾಃಖಯಃ** (ಪಾ. ಸೂ. ೭-೪-೬೧) ಎಂಬುದರಿಂದ ಅಭ್ಯಾಸದಲ್ಲಿ ತಕಾರಶೇಷ. ಧಾತುವು ಏಕಾಚಾಗುದರಿಂದ **ವಸ್ವೇಕಾಚಾ**—(ಪಾ. ಸೂ. ೭-೨-೬೭) ಎಂಬುದರಿಂದ ವಸುವಿಗೆ ಇಡಾಗಮ **ಆತೋಲೋಪ ಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ತನ್ನಿಮಿತ್ತವಾಗಿ ಧಾತುವಿನ ಆಕಾರಕ್ಕೆ ಲೋಪ. ತಸ್ಥಿವಸ್ ಶಬ್ದವಾಗುತ್ತದೆ. ಪ್ರಥಮಾದ್ವಿವಚನಪರವಾದಾಗ **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರ. ನುಮಾಗಮ. ಅನುಸ್ವಾರ. ತಸ್ಥಿವಾಂಸಾ ಎಂದು ರೂಪವಾಗುತ್ತದೆ.

ಅಥ— ನಿಪಾತಸ್ಯ ಚ—(ಪಾ. ಸೂ. ೬-೩-೧೩೬) ಎಂಬುದರಿಂದ ದೀರ್ಘ ಬರುತ್ತದೆ.

**ಸೋಮಸ್ಯ**— ಸಂಪ್ರದಾನ ಸೂತ್ರದಲ್ಲಿ **ಕ್ರಿಯಾಗ್ರಹಣಂ ಕರ್ತವ್ಯಮ್**— ಎಂಬ ವಚನವಿರುವುದರಿಂದ ಇಲ್ಲಿ ಕರ್ಮಕ್ಕೆ ಸಂಪ್ರದಾನಸಂಜ್ಞೆ ಬರುವುದರಿಂದ ಚತುರ್ಥ್ಯರ್ಥದಲ್ಲಿ ಷಷ್ಠೀ ಬರುತ್ತದೆ.

**ಪಿಬತಮ್** — ಪಾ. ಪಾನೇ. ಧಾತು. ಲೋಟ್ ಮಧ್ಯಮಪುರುಷದ್ವಿವಚನದಲ್ಲಿ ತಮಾದೇಶ **ಪಾಘ್ರಾಧ್ಮಾ**—(ಪಾ. ಸೂ. ೭-೩-೭೮) ಎಂಬುದರಿಂದ ಪಿಬಾದೇಶ. ತಿಙಂತನಿಘಾತಸ್ವರ ಬರುತ್ತದೆ. ॥ ೧ ॥



ಸಂಹಿತಾಪಾಠಃ

ಯಾವದಿದಂ ಭುವನಂ ವಿಶ್ವಮಸ್ತ್ಯುರುವ್ಯಚಾ ವರಿಮತಾ ಗಭೀರಂ।  
ತಾವಾ ಅಯಂ ಪಾತವೇ ಸೋಮೋ ಅಸ್ತ್ವರಮಿಂದ್ರಾಗ್ನೀ  
ಮನಸೇ ಯುವಭ್ಯಾಂ ॥ ೨ ॥

ಪದಪಾಠಃ

ಯಾವತ್ । ಇದಂ । ಭುವನಂ । ವಿಶ್ವಂ । ಅಸ್ತಿ । ಉರುಽವ್ಯಚಾ । ವರಿಮತಾ ।
ಗಭೀರಂ ।

ತಾವಾನ್ । ಅಯಂ । ಪಾತವೇ । ಸೋಮಃ । ಅಸ್ತು । ಅರಂ । ಇಂದ್ರಾಗ್ನೀ ಇತಿ ।
ಮನಸೇ । ಯುವಽಭ್ಯಾಂ ॥ ೨ ॥

ಸಾಯಣಭಾಷ್ಯಂ

ವಿಶ್ವಂ ಸರ್ವಮಿದಂ ಭುವನಂ ಜಗದ್ಯಾವದಸ್ತಿ ಯಾವತ್ಪ್ರಮಾಣಂ ಭವತಿ । ಕೀದೃಶಂ ಉರುವ್ಯಚಾ । ವಿಸ್ತೀರ್ಣವ್ಯಾಪನಂ । ಸರ್ವವ್ಯಾಪಕಮಿತ್ಯರ್ಥಃ । ತಥಾ ವರಿಮತಾ ವರಿಮ್ಣೋರುತ್ವೇನಾತ್ರೀಯೇನ ಗೌರವೇಣ ಗಭೀರಂ ಗಾಂಭೀರ್ಯೋಪೇತಂ । ಹೇ ಇಂದ್ರಾಗ್ನೀ ಪಾತವೇ ಯುವಾಭ್ಯಾಂ ಪಾತುಂ ಸೋಮಸ್ತಾವಾನಸ್ತು । ತಾವತ್ಪ್ರಮಾಣೋ ಭವತು । ತಥಾ ಮನಸೇ ಯುವಯೋರಂತಃಕರಣಾಯಾರಂ ಸ ಸೋಮಃ ಪರ್ಯಾಪ್ತೋ ಭವತು ॥ ಉರುವ್ಯಚಾ । ವ್ಯಚ ವ್ಯಾಜೀಕರಣೇ । ಅಸುನ್ । ವ್ಯಚೇಃ ಕುಟಾದಿತ್ವಮನಸೀತಿ ವಚನಾತ್ ಙಿತ್ತ್ವಾಭಾವೇನ ಸಂಪ್ರಸಾರಣಾಭಾವಃ । ಸ್ವಮೋರ್ನಪುಂಸಕಾತ್ । ಪಾ. ೭-೧-೨೩ । ಇತಿ ಸೋರ್ಲುಕಿ ಪ್ರಾಪ್ತೇ ಸುಪಾಂ ಸುಲುಗಿತಿ ವ್ಯತ್ಯಯೇನ ಡಾದೇಶಃ । ವರಿಮತಾ । ಪೃಥ್ವಾದಿಭ್ಯ ಇಮನಿಜ್ವೇತ್ಯುರುಶಬ್ದಾತ್ತಸ್ಯ ಭಾವ ಇತ್ಯರ್ಥ ಇಮನಿಚ್ । ಪ್ರಿಯಸ್ಥಿರೇತ್ಯಾದಿನೋರುಶಬ್ದಸ್ಯ ವರಾದೇಶಃ । ಪುನರಪಿ ಭಾವಪ್ರತ್ಯಯೋತ್ಪತ್ತಿಶ್ಛಾಂದಸೀ । ಸುಪಾಂ ಸುಲುಗಿತಿ ತೃತೀಯಾಯಾ ಲುಕ್ । ಯದ್ವಾ । ತೃತೀಯಾಯಾಶ್ಛಾಂದಸಸ್ತುಡಾಗಮಃ । ತಾವಾನ್ । ತತ್ಪರಿಮಾಣಮಸ್ಯ । ಯತ್ತದೇತೇಭ್ಯಃ ಪರಿಮಾಣೇ ವತುಪ್ । ಪಾ. ೫-೨-೩೯ । ಆ ಸರ್ವನಾಮ್ನ ಇತ್ಯಾತ್ವಂ । ಪಾತವೇ । ಪಾ ಪಾನೇ । ತುಮರ್ಥೇ ಸೇಸೇನಿತಿ ತವೇನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ಅರಂ । ವಾಲಮೂಲಲಘ್ವಲಮಂಗುಲೀನಾಂ ವಾ ಲೋ ರಮಾಪದ್ಯತ ಇತಿ ವಕ್ತವ್ಯಂ । ಮ. ೮-೨-೧೮ । ಇತಿ ಲತ್ವವಿಕಲ್ಪಃ । ಯುವಭ್ಯಾಂ । ವ್ಯತ್ಯಯೇನಾತ್ವಾಭಾವೇ ಶೇಷೇ ಲೋಪ ಇತಿ ದಕಾರಲೋಪಃ ॥

ಪ್ರತಿಪದಾರ್ಥ

ಇಂದ್ರಾಗ್ನೀ—ಎಲೈ ಇಂದ್ರಾಗ್ನಿಗಳೇ । ವಿಶ್ವಂ—ಸಮಸ್ತವಾದ । ಇದಂ ಭುವನಂ—ಈ ಜಗತ್ತು । ಯಾವತ್—ಎಷ್ಟುಮಟ್ಟಿಗೆ । ಉರುವ್ಯಚಾ—ಎಲ್ಲವನ್ನೂ ವ್ಯಾಪಿಸುವಷ್ಟು ವಿಸ್ತಾರವಾಗಿಯೂ (ಹಾಗೆಯೇ) । ವರಿಮತಾ—ತನ್ನ ಗೌರವದಿಂದ । ಗಭೀರಂ—ಅತ್ಯಂತ ಗಾಢವಾಗಿಯೂ (ಆಳವಾಗಿಯೂ) । ಅಸ್ತಿ—ಇದೆಯೋ (ಅಷ್ಟು) । ಯುವಭ್ಯಾಂ—ನಿಮ್ಮಿಬ್ಬರ । ಪಾತವೇ—ಪಾನಕ್ಕಾಗಿ । ಅಯಂ ಸೋಮಃ—ಈ ಸೋಮರಸವು ।

**ತಾತ್ಪರ್ಯ**—ಅಷ್ಟು ವಿಸ್ತಾರವಾದುದೂ, ಆಳವಾದುದೂ ಆದ ಪ್ರಮಾಣವುಳ್ಳದ್ದಾಗಿ । **ಅಸ್ತು**—ಆಗಿರಲಿ । **ಮನಸೇ**—(ನಿಮ್ಮ) ಮನಸ್ಸಿಗೆ । **ಅಯಂ**—(ಈ ಸೋಮರಸವು) ತೃಪ್ತಿಯನ್ನು ಕೊಡುವಂತೆ ಪರ್ಯಾಪ್ತವಾಗಿರಲಿ.

ಭಾವಾರ್ಥ

ಎಲೈ ಇಂದ್ರಾಗ್ನಿಗಳೇ, ಈ ಸಮಸ್ತಜಗತ್ತೂ ಯಾವ ಪ್ರಮಾಣದಲ್ಲಿ ಎಲ್ಲವನ್ನೂ ವ್ಯಾಪಿಸುವಷ್ಟು ವಿಸ್ತಾರವಾಗಿಯೂ, ಹಾಗೆಯೇ ತನ್ನ ಗೌರವದಿಂದ ಗಾಢವಾಗಿಯೂ ಇರುತ್ತದೆಯೋ, ನಿಮ್ಮಿಬ್ಬರ ಪಾನಕ್ಕಾಗಿ ಸಿದ್ಧವಾಗಿರುವ ಈ ಸೋಮರಸವೂ ಸಹ ಅಷ್ಟೇ ವಿಸ್ತಾರವಾದುದೂ ಮತ್ತು ಆಳವಾದುದೂ ಆದ ಪ್ರಮಾಣವುಳ್ಳದ್ದಾಗಿ ಆಗಿರಲಿ. ಮತ್ತು ನಿಮ್ಮ ಮನಸ್ಸಿಗೆ ತೃಪ್ತಿಯನ್ನು ಕೊಡುವಷ್ಟು ಪರ್ಯಾಪ್ತವಾಗಿರಲಿ.

## English Translation

Vast as is the whole universe in expanse, and profound in depth, such, Indra and Agni, may this Soma be for your beverage, sufficient for your desires.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಇಂದ್ರಾಗ್ನಿಗಳ ಸೋಮರಸದ ಪಾನಕ್ರಮವನ್ನೂ, ಅದಕ್ಕಾಗಿ ಸಿದ್ಧಪಡಿಸಿರುವ ಸೋಮರಸದ ಪ್ರಮಾಣವನ್ನೂ ವರ್ಣಿಸಿದೆ. ಈ ಪ್ರಮಾಣವನ್ನು ಸಮಸ್ತಜಗತ್ತಿನ ವಿಸ್ತಾರಕ್ಕೂ ಗಭೀರತೆಗೂ ಹೋಲಿಸಿದೆ.

**ಉರುವ್ಯಚಾ**—ಉರು ವಿಸ್ತೀರ್ಣಂ ವ್ಯಚಃ ವ್ಯಾಪನಂ । ಅತ್ಯಂತ ವಿಸ್ತಾರವಾಗಿ ವ್ಯಾಪಿಸತಕ್ಕದ್ದು ಮತ್ತು ಎಲ್ಲವನ್ನೂ ವ್ಯಾಪಿಸುವಷ್ಟು ವಿಸ್ತಾರವುಳ್ಳದ್ದು. ಈ ಪದವು ಅಧಿಕವಾಗಿ ದ್ಯಾವಾಪೃಥಿವಿಗಳಿಗೂ, ಅದಿತಿಗೂ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿರುತ್ತದೆ. ಆದುದರಿಂದಲೇ ಈ ಪದದಿಂದ ಸೂಚಿತವಾಗುವ ವೈಶಾಲ್ಯದ ಆಧಿಕ್ಯವು ತಿಳಿಯುತ್ತದೆ.

**ಉರುವ್ಯಚಸಾ ಮಹಿನೀ ಅಸಶ್ಚತಾ ಪಿತಾ ಮಾತಾ ಚ ಭುವನಾನಿ ರಕ್ಷತಃ ।**
(ಋ. ಸಂ. ೧-೧೬೦-೨)

ಇತ್ಯಾದಿ ಋಕ್ಕುಗಳಲ್ಲಿ ದ್ಯಾವಾಪೃಥಿವಿಗಳ ವಿಸ್ತಾರವನ್ನೂ,

**ಭಗೋ ವಿಭಕ್ತಾ ಶವಸಾವಸಾ ಗಮದುರುವ್ಯಚಾ ಅದಿತಿಃ ಶ್ರೋತು ಮೇ ಹವಂ ।**
(ಋ. ಸಂ. ೫-೪೬-೬)

ಇತ್ಯಾದಿ ಋಕ್ಕುಗಳಲ್ಲಿ ಅದಿತಿಯ ಮಹತ್ತ್ವಪೂರಿತವಾದ ವೈಶಾಲ್ಯವನ್ನೂ ವರ್ಣಿಸಿದೆ. ಮತ್ತು ಇವರಂತೆಯೇ **ಪರಿಮಿತಾ** ಎಂಬ ಪದವೂ ಸಹ ಈ ವಿಸ್ತೃತಿಯನ್ನೇ ತೋರಿಸುತ್ತದೆ. ಈ ವಿಧವಾದ ವಿಸ್ತೀರ್ಣ ವ್ಯಾಪ್ತಿಯಿರುವುದರಿಂದಲೇ,

ಗಭೀರಂ—ಗಹನಾತೀತವಾದುದು. ಸೋಮನ ಮಹಿಮೆಯು ಯಾರಿಗೂ ಪೂರ್ಣವಾಗಿ ಅರ್ಥವಾಗದೇ ಗಂಭೀರವಾದುದೂ ಗಹನಾತ್ಮಕವಾದುದೂ ಆಗಿದೆ.

**ರಾಜ್ಞೋ ನು ತೇ ವರುಣಸ್ಯ ವ್ರತಾನಿ ಬೃಹದ್ಗಭೀರಂ ತವ ಸೋಮ ಧಾಮ ।**

(ಋ. ಸಂ. ೧-೯೧-೩ ಅಥವಾ ೯-೮೮-೮)

ಎಂಬ ಋಕ್ಕಿನಲ್ಲಿಯೂ ಇದೇ ಆನುಪೂರ್ವಿಯಲ್ಲಿ ಋ. ಸಂ. ೯-೯೮-೮ ನೇ ಋಕ್ಕಿನಲ್ಲಿಯೂ ಸೋಮನ ಗಂಭೀರವಾದ **ಧಾಮದ** ಸ್ತುತಿರೂಪವಾದ ವರ್ಣನೆಯಿರುವಂತೆ ಇಲ್ಲಿಯೂ ಸಹ ಆ ಮಹತ್ಪ್ರಮಾಣವನ್ನು ಸೂಚಿಸಿ ಅಷ್ಟು ಅಧಿಕವಾದ ಪ್ರಮಾಣವುಳ್ಳ ಸೋಮರಸವು ನಿಮಗೆ ತೃಪ್ತಿಯನ್ನುಂಟುಮಾಡಲಿ ಎಂದು ಪ್ರಾರ್ಥಿಸಿದೆ. ಇಂದ್ರನ ಸೋಮರಸಪಾನವು ಅತ್ಯತಿಶಯವಾದುದು. ಯಜ್ಞಕಾಲದಲ್ಲಿ,

**ತ್ರೀಣಿ ಸರಾಂಸಿ ಪೃಶ್ನಯೋ ದುದುಹ್ರೇ ವಜ್ರಿಣೇ ಮಧು ।**

(ಋ. ಸಂ. ೮-೭-೧೦)

ಇತ್ಯಾದಿಋಕ್ಕುಗಳಲ್ಲಿ ವರ್ಣಿತವಾಗಿರುವಂತೆ ಇಂದ್ರನು ತನಗೆ ಆದೃತವಾದ ಸೋಮರಸವನ್ನು ಒಂದೇ ಗುಟುಕಿಗೆ ಮೂವತ್ತು ಘಟಗಳ ತುಂಬ ಕುಡಿದುದೂ, ಇವನ ಉದರದ ಕುಕ್ಷಿಯು ಸಾಗರದಂತೆ ಆಳವಾಗಿರುವುದೂ, ಇಂತಹ ಮಹಚ್ಛಕ್ತಿಯುಳ್ಳ ಇಂದ್ರನು ಅಧಿಕವಾದ ಪ್ರಮಾಣದಲ್ಲಿ ಸೋಮರಸವನ್ನು ಪಾನಮಾಡಿದುದೂ ಇದೇ ಭಾಗದ ೧೦೪ ನೇ ಸೂಕ್ತದ ೯ನೇ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಿದೆ. ಮತ್ತು ಇಂದ್ರನು ಸೋಮಪಾನ ಮಾಡುವಾಗಲೆಲ್ಲಾ ಅಗ್ನಿಯ ಮೂಲಕವಾಗಿಯೇ ಮಾಡುತ್ತಾನೆ.

**ತೇಭಿರೇತಂ ಸಜೋಷಾ ವಾವಶಾನೋ ೩ ಗ್ನೇಃ ಪಿಬ ಜಿಹ್ವಯಾ ಸೋಮಮಿಂದ್ರ ।**

(ಋ. ಸಂ. ೩-೩೫-೯)

ಇತ್ಯಾದಿಋಕ್ಕುಗಳಲ್ಲಿ ಹೇಳಿರುವಂತೆ ಇಂದ್ರನಿಗೆ ಅರ್ಪಿಸಬೇಕಾದ ಸೋಮರಸಗಳೆಲ್ಲವೂ ಅಗ್ನಿಯ ಮೂಲಕವಾಗಿಯೇ ಅರ್ಪಿಸಬೇಕಾದುದರಿಂದ ಇಂದ್ರಾಗ್ನಿಗಳಿಗೆ ಪರ್ಯಾಪ್ತವಾಗುವಷ್ಟು ಸೋಮವು ಸಿದ್ಧವಾಗಿದೆಯೆಂದು ಇಬ್ಬರನ್ನೂ ಕುರಿತು ಪ್ರಾರ್ಥಿಸಿದೆ.

**ಅರಂ—ಅಲಂ । ಪರ್ಯಾಪ್ತ ಇತ್ಯರ್ಥಃ ।** ತೃಪ್ತಿಯನ್ನು ಕೊಡುವಷ್ಟು ಪರ್ಯಾಪ್ತವಾಗಿರಲಿ, ಎಂದು ಇಲ್ಲಿ ಅರ್ಥ. **ಪರ್ಯಾಪ್ತ**ವೆಂಬರ್ಥವನ್ನು ಕೊಡುವಂತೆಯೇ ಈ ಪದವು ಸಿದ್ಧಮಾಡು, ಸೇವಿಸು ಎನ್ನುವ ಅರ್ಥಗಳಲ್ಲಿಯೂ ಪ್ರಯೋಗಿಸಲ್ಪಟ್ಟಿದೆ.

**ವಾಯವಾ ಯಾಹಿ ದರ್ಶತೇಮೇ ಸೋಮಾ ಅರಂಕೃತಾಃ ।**

(ಋ. ಸಂ. ೧-೨-೧)

**ಅರಂ ಕೃಣ್ವಂತು ವೇದಿಂ ಸಮಗ್ನಿಮಿಂಧತಾಂ ಪುರಃ ।**

(ಋ. ಸಂ. ೧-೧೭೦-೪)

ಇತ್ಯಾದಿಋಕ್ಕುಗಳಲ್ಲಿ **ಅರಂಕೃತ ಅರಂಕೃಣ್ವಂತು** ಎಂದರೆ ಸಿದ್ಧಪಡಿಸು ಎಂಬರ್ಥವನ್ನೂ,

**ತ್ವಮಗ್ನೇ ದ್ರವಿಣೋದಾ ಅರಂಕೃತೇ ತ್ವಂ ದೇವಃ ಸವಿತಾ ರತ್ನಧಾ ಅಸಿ ।**

(ಋ. ಸಂ. ೨-೧-೭)

ಇತ್ಯಾದಿಋಕ್ಕುಗಳಲ್ಲಿ ಪೂಜೆಮಾಡು, ಸೇವಿಸು ಎಂಬರ್ಥವನ್ನೂ ಕೊಡುತ್ತದೆ. ಪ್ರಕೃತವಾದ ಋಕ್ಕಿನಲ್ಲಿಯೂ ಹೀಗೆಯೇ,

ದುರೋಕಶೋಚಿಃ ಕ್ರತುರ್ನ ನಿತ್ಯೋ ಜಾಯೇವ ಯೋನಾವರಂ ವಿಶ್ವಸ್ಮೈ ।
(ಋ. ಸಂ. ೧-೬೬-೩)

ಸೋಮಾರುದ್ರಾ ಧಾರಯೇಥಾಮಸುರ್ಯಂ೧ ಪ್ರ ವಾಮಿಷ್ಟಯೋಽರಮಶ್ನುವಂತು ।
(ಋ. ಸಂ. ೬-೭೪-೧)

ಇತ್ಯಾದಿಋಕ್ಕುಗಳಲ್ಲಿಯೂ ಸಹ ತೃಪ್ತಿಯನ್ನು ಕೊಡುವಷ್ಟು ಪರ್ಯಾಪ್ತವಾದುದು ಎಂಬರ್ಥವಾಗುತ್ತದೆ.

ವ್ಯಾಕರಣಪ್ರಕ್ರಿಯಾ

**ಉರುವ್ಯಚಾ** — ವ್ಯಚ ವ್ಯಾಜೀಕರಣೇಧಾತು. **ಸರ್ವಧಾತುಭ್ಯ ಅಸುನ್** — ಎಂಬುದರಿಂದ ಅಸುನ್ ಪ್ರತ್ಯಯ. ಕುಟಾದಿಯಲ್ಲಿ ಈ ಧಾತುವು ಸೇರಿದರೂ **ವ್ಯಚೇಃ ಕುಟಾದಿತ್ವಮನಸಿ**— ಎಂಬ ವಚನದಿಂದ ಅನಸಿ ಎಂದು ನಿಷೇಧಮಾಡಿರುವುದರಿಂದ ಪ್ರತ್ಯಯಕ್ಕೆ ಙಿತ್ವವಿಲ್ಲದಿರುವುದರಿಂದ ತನ್ನಿಮಿತ್ತವಾಗಿ ಧಾತುವಿಗೆ ಸಂಪ್ರಸಾರಣ ಬರುವುದಿಲ್ಲ. **ಸ್ವಮೋರ್ನಪುಂಸಕಾತ್**—(ಪಾ. ಸೂ. ೭-೧-೨೩) ಎಂಬುದರಿಂದ ಸು ವಿಭಕ್ತಿಗೆ ಲುಕ್ ಪ್ರಾಪ್ತವಾದರೆ ವ್ಯತ್ಯಯದಿಂದ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಡಾದೇಶ. ಡಿತ್ವ ಸಾಮರ್ಥ್ಯದಿಂದ ಟಿಗೆ ಲೋಪ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ವರಿಮತಾ**—ಉರು ಶಬ್ದ. ಪೃಥ್ವಾದಿಯಲ್ಲಿ ಸೇರಿರುವುದರಿಂದ **ಪೃಥ್ವಾದಿಭ್ಯ ಇಮನಿಜ್ವಾ** (ಪಾ. ಸೂ. ೫-೧-೧೨೨) ಎಂಬುದರಿಂದ ತಸ್ಯಭಾವಃ ಎಂಬರ್ಥದಲ್ಲಿ ಇಮನಿಜ್ ಪ್ರತ್ಯಯ. **ಪ್ರಿಯಸ್ಥಿರಸ್ಫಿ**—(ಪಾ. ಸೂ. ೬-೪-೧೫೭) ಎಂಬುದರಿಂದ ಉರು ಶಬ್ದಕ್ಕೆ ವರಾದೇಶ. ವರಿಮನ್ ಶಬ್ದವಾಗುತ್ತದೆ. ಭಾವಾರ್ಥದಲ್ಲಿ ಪ್ರತ್ಯಯ ಬಂದರೂ ಪುನಃ ಭಾವಾರ್ಥದಲ್ಲಿ ಛಾಂದಸವಾಗಿ **ತಸ್ಯಭಾವಸ್ತ್ವತಲೌ**—(ಪಾ ಸೂ. ೫-೧-೧೧೯) ಎಂಬುದರಿಂದ ತಲ್ ಪ್ರತ್ಯಯ ಬರುತ್ತದೆ. ಪದಸಂಜ್ಞಾ ಇರುವುದರಿಂದ **ನಲೋಪಃ ಪ್ರಾತಿಪದಿ**—(ಪಾ. ಸೂ. ೮-೨-೭) ಎಂಬುದರಿಂದ ನಲೋಪ. **ತಲಂತಂಸ್ತ್ರಿಯಾಂ**—ಎಂಬುದರಿಂದ ಸ್ತ್ರೀಲಿಂಗವಾಗುತ್ತದೆ. ತೃತೀಯಾ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲುಕ್. ಅಥವಾ ತೃತೀಯಾ ಪರವಾದಾಗ ಛಾಂದಸವಾಗಿ ತುಡಾಗಮ ಬರುತ್ತದೆ.

**ತಾವಾನ್**—ತದ್ ಶಬ್ದ. ತತ್ ಪರಿಮಾಣಂ ಅಸ್ಯ. ತಾವಾನ್. **ಯತ್ತದೇತೇಭ್ಯಃ ಪರಿಮಾಣೇ ವತುಪ್**—(ಪಾ ಸೂ. ೫-೨-೩೯) ಎಂಬುದರಿಂದ ಪರಿಮಾಣಾರ್ಥದಲ್ಲಿ ವತುಪ್ ಪ್ರತ್ಯಯ. **ಆ ಸರ್ವನಾಮ್ನಃ**—(ಪಾ. ಸೂ. ೬-೩-೯೧) ಎಂಬುದರಿಂದ ವತುಪನ್ನು ನಿಮಿತ್ತೀಕರಿಸಿ ತದಿಗೆ ಆತ್ವ. ತಾವತ್ ಶಬ್ದವಾಗುತ್ತದೆ. ಪ್ರಥಮಾಸು ಪರವಾದಾಗ ಉಗಿತ್ತಾದುದರಿಂದ ನುಮಾಗಮ.

**ಪಾತವೇ**—ಪಾ ಪಾನೇ. ಧಾತು. ತುಮುನರ್ಥ ತೋರುವಾಗ **ತುಮರ್ಥೇ ಸೇಸೇನಸೇ**—(ಪಾ. ಸೂ. ೩-೪-೯) ಎಂಬುದರಿಂದ ತವೇನ್ ಪ್ರತ್ಯಯ. ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅರಮ್—ವಾಲಮೂಲ ಲಘ್ವಲಮಂಗುಲೀನಾಂ ವಾ ಲೋರಮಾಪದ್ಯತೇ ಇತಿ ವಕ್ತವ್ಯಮ್**—(ಪಾ. ಮ. ೮-೨-೧೮) ಎಂಬುದರಿಂದ ಲತ್ವವಿಕಲ್ಪವಾದುದರಿಂದ ಇಲ್ಲಿ ಬರುವುದಿಲ್ಲ.

**ಯುವಭ್ಯಾಮ್**—ಯುಷ್ಮದ್ ಶಬ್ದ. ಭ್ಯಾಮ್ ಪರವಾದಾಗ **ಯುವಾವೌ ದ್ವಿವಚನೇ**—(ಪಾ. ಸೂ. ೭-೨-೯೨) ಎಂಬುದರಿಂದ ಮಪರ್ಯಂತಕ್ಕೆ ಯುವಾದೇಶ. ವ್ಯತ್ಯಯದಿಂದ ಆತ್ವ ಬರುವುದಿಲ್ಲ. ಆಗ **ಶೇಷೇ ಲೋಪಃ**—(ಪಾ. ಸೂ. ೭-೨-೯೦) ಎಂಬುದರಿಂದ ಮಪರ್ಯಂತದ ಪರದಲ್ಲಿರುವುದಕ್ಕೆ (ದ್) ಲೋಪ. ॥ ೨ ॥

———:O:———

ಸಂಹಿತಾಪಾಠಃ

ಚಕ್ರಾಥೇ ಹಿ ಸಧ್ರ್ಯ೧ಙ್ನಾಮ ಭದ್ರಂ ಸಧ್ರೀಚೀನಾ ವೃತ್ರ-
ಹಣಾ ಉತ ಸ್ಥಃ ।
ತಾವಿಂದ್ರಾಗ್ನೀ ಸಧ್ರ್ಯಂಚಾ ನಿಷದ್ಯಾ ವೃಷ್ಣಃ ಸೋಮಸ್ಯ ವೃ-
ಷಣಾ ವೃಷೇಥಾಂ ॥ ೩ ॥

ಪದಪಾಠಃ

ಚಕ್ರಾಥೇ ಇತಿ । ಹಿ । ಸಧ್ರ್ಯಕ್ । ನಾಮ । ಭದ್ರಂ । ಸಧ್ರೀಚೀನಾ । ವೃತ್ರಽ-
ಹನಾ । ಉತ । ಸ್ಥಃ ।
ತೌ । ಇಂದ್ರಾಗ್ನೀ ಇತಿ । ಸಧ್ರ್ಯಂಚಾ । ನಿಽಸದ್ಯ । ವೃಷ್ಣಃ । ಸೋಮಸ್ಯ । ವೃ-
ಷಣಾ । ಆ । ವೃಷೇಥಾಂ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಗ್ನೀ ಭದ್ರಂ ಕಲ್ಯಾಣಂ ನಾಮ ಸ್ವಕೀಯಂ ನಾಮಧೇಯಂ ಸಧ್ರ್ಯಕ್ ಸಹಗತ-ಮಿಂದ್ರಾಗ್ನೀ ಇತ್ಯೇವಂ ಸಂಯುಕ್ತಂ ಚಕ್ರಾಥೇ । ಯುವಾಂ ಕೃತವಂತೌ । ಉತಾಪಿ ಚ ಹೇ ವೃತ್ರಹಣೌ ವೃತ್ರಸ್ಯಾಸುರಸ್ಯ ಹಂತಾರಾವಿಂದ್ರಾಗ್ನೀ ಸಧ್ರೀಚೀನಾ ಸಹಾಂಚಂತೌ ವೃತ್ರವಧಾರ್ಥಂ ಸಂಗತೌ

ಸ್ಥಃ । ಭವಥಃ । ಹಿ ಯಸ್ಮಾದೇವಂ ತಸ್ಮಾದ್ಹೇ ವೃಷಣಾ ಕಾಮಾನಾಂ ವರ್ಷಿತಾರಾವಿಂದ್ರಾಗ್ನೀ ತೌ ಯುವಾಂ ಸಧ್ರ್ಯಂಚೌ ಸಹಿತಾವೇವ ಸಂತೌ ನಿಷದ್ಯ ವೇದ್ಯಾಮುಪವಿಶ್ಯ ವೃಷ್ಣಃ ಸೇಕ್ತುಃ ಸೋಮಸ್ಯಾತ್ಮೀಯಂ ಭಾಗಮಾ ವೃಷೇಥಾಂ । ಸ್ವಕೀಯ ಉದರೇ ಆಸಿಂಚೇಥಾಂ ॥ ಸಧ್ರ್ಯಕ್ । ಸಹಶಬ್ದೋಪಪದಾದಂಚತೇರ್ಋತ್ವಿಗಿತ್ಯಾದಿನಾ ಕ್ವಿನ್। ಅನಿದಿತಾಮಿತಿ ನಲೋಪಃ । ಸಹಸ್ಯ ಸಧ್ರಿಃ। ಅದ್ರಿಸಧ್ರ್ಯೋರಂತೋದಾತ್ತನಿಪಾತನಂ ಕೃತ್ಸ್ವರನಿವೃತ್ತ್ಯರ್ಥಂ। ಪಾ ೬-೩-೯೫-೧। ಇತಿ ವಚನಾತ್ಸಧ್ರ್ಯಾದೇಶೋಂತೋದಾತ್ತಃ । ಯಣಾದೇಶ ಉದಾತ್ತಸ್ವರಿತಯೋರ್ಯಣ ಇತಿ ಸ್ವರಿತತ್ವಂ । ಸಧ್ರೀಚೀನಾ । ವಿಭಾಷಾಂಚೇರದಿಕ್ಸ್ತ್ರಿಯಾಮಿತಿ ಸ್ವಾರ್ಥೇ ಖಃ । ಸುಪಾಂ ಸುಲುಗಿತಿ ವಿಭಕ್ತೇರಾಜಾದೇಶಃ । ವೃತ್ರಹಣೌ । ಸಂಹಿತಾಯಾಮಾವಾದೇಶೇ ಲೋಪಃ ಶಾಕಲ್ಯಸ್ಯೇತಿ ವಲೋಪಃ । ವೃಷೇಥಾಂ । ವೃಷ ಸೇಚನೇ । ವ್ಯತ್ಯಯೇನ ಶ ಆತ್ಮನೇಪದಂ ಚ ॥

ಪ್ರತಿಪದಾರ್ಥ

ಇಂದ್ರಾಗ್ನೀ—ಎಲೈ ಇಂದ್ರಾಗ್ನಿಗಳೇ । ಭದ್ರಂ—ಕಲ್ಯಾಣಾತ್ಮಕವಾದ । **ನಾಮ**—(ನಿಮ್ಮ) ಹೆಸರನ್ನು । **ಸಧ್ರ್ಯಕ್**—(ಯಾವಾಗಲೂ) ಒಡಗೂಡಿ ಸಂಯುಕ್ತವಾದುದನ್ನಾಗಿ । **ಚಕ್ರಾಥೇ**—(ನೀವು) ಪ್ರಸಿದ್ಧವಾಡಿದ್ದೀರಿ। **ಉತ**—ಮತ್ತು । **ವೃತ್ರಹಣೌ**—ವೃತ್ರನ ಹಂತಕರಾದ ಇಂದ್ರಾಗ್ನಿಗಳೇ । **ಸಧ್ರೀಚೀನಾ**—(ವೃತ್ರಹನನ ಕಾಲದಲ್ಲಿಯೂ) ಒಡಗೂಡಿದವರಾಗಿಯೇ । **ಸ್ಥಃ**—ಆಗಿದ್ದೀರಿ । **ಹಿ**—ಆದ್ದರಿಂದಲೇ । **ವೃಷಣೌ**—(ಇಷ್ಟಾರ್ಥಗಳನ್ನು) ಸುರಿಸುವ ಇಂದ್ರಾಗ್ನಿಗಳೇ । **ತೌ**—ಆ ನೀವು । **ಸಧ್ರ್ಯಂಚಾ**—ಒಟ್ಟಿಗೆ ಸೇರಿ । **ನಿಷದ್ಯ**—(ವೇದಿಕೆಯಲ್ಲಿ) ಕುಳಿತು । **ವೃಷ್ಣಃ**—ಸ್ರವಿಸುತ್ತಿರುವ । **ಸೋಮಸ್ಯ**—ಸೋಮರಸದ ಭಾಗವನ್ನು । **ಆ ವೃಷೇಥಾಂ**—[ಕುಡಿಯಿರಿ] ನಿಮ್ಮ ಉದರಕ್ಕೆ ಸುರಿಯಿರಿ.

ಭಾವಾರ್ಥ

ಎಲೈ ಇಂದ್ರಾಗ್ನಿಗಳೇ, ನೀವು ಕಲ್ಯಾಣಾತ್ಮಕವಾದ ನಿಮ್ಮ ಹೆಸರನ್ನು ಯಾವಾಗಲೂ ಸಂಯುಕ್ತವಾಗಿ ಒಡಗೂಡಿರುವುದೆಂದು ಪ್ರಸಿದ್ಧವಾಡಿದ್ದೀರಿ. ಮತ್ತು ವೃತ್ರನಹಂತಕರಾಗಿ ವೃತ್ರಹನನಕಾಲದಲ್ಲಿಯೂ ಸಹ ಒಡಗೂಡಿದವರಾಗಿಯೇ ಇದ್ದೀರಿ. ಆದ್ದರಿಂದಲೇ, ಇಷ್ಟಾರ್ಥಪ್ರದರಾದ ಎಲೈ ಇಂದ್ರಾಗ್ನಿಗಳೇ, ಆ ನೀವಿಬ್ಬರೂ ಒಟ್ಟಿಗೆ ಸೇರಿ ಯಜ್ಞವೇದಿಕೆಯಲ್ಲಿ ಕುಳಿತು ಸ್ರವಿಸುತ್ತಿರುವ ನಿಮ್ಮ ಭಾಗದ ಸೋಮರಸವನ್ನು ಕುಡಿಯಿರಿ.

## English Translation

You have made your associated names renowned, since, slayers of Vritra, you have been allied (for his death, ; the showerers of benefits, Indra and Agni, are the two seated together (on the altar); receive (your portion) of the libation.

ವಿಶೇಷವಿಷಯಗಳು

ಚಕ್ರಾಥೇ ಸಧ್ರ್ಯಙ್ನಾಮ ಭದ್ರಂ—ಯೌ ಚಕ್ರಾಥೇ ವೃತ್ರಹನನಪವಿಸರ್ಜನಾದಿನಾ ಸ್ವೇನ ವ್ಯಾಪಾರೇಣ । ಸೂರ್ಯರೂಪದಿಂದ ಲೋಕಕ್ಕೆ ಪ್ರಕಾಶವನ್ನು ತರುವುದೂ, ವೃತ್ರಹನನದಿಂದ ವೃಷ್ಟ್ಯುದಕಾದಿಗಳನ್ನು

ಹರಿಸಿ ಲೋಕದ ಸಂಪತ್ತನ್ನು ವೃದ್ಧಿಪಡಿಸುವುದೂ, ಯಜ್ಞವನ್ನು ನೆರವೇರಿಸುವುದಕ್ಕೆ ಯಾಜಮಾನರಿಗೆ ನಾನಾವಿಧವಾಗಿ ಸಹಾಯಮಾಡುವುದೂ ಇವೇ ಮುಂತಾದ ಲೋಕಕಲ್ಯಾಣಕರವಾದ ಕೆಲಸಗಳನ್ನು ನೆರವೇರಿಸುತ್ತಾ ಇಂದ್ರಾಗ್ನಿಗಳು ತಮ್ಮ ನಾಮಧೇಯವನ್ನು ಕಲ್ಯಾಣಾತ್ಮಕವಾಗಿ ಮಾಡಿಕೊಂಡರು. ಅವರ ಹೆಸರುಗಳ ರೂಪ ನಿಷ್ಪತ್ತಿಯಿಂದಲೇ ಅವರ ಮಹತ್ಕಾರ್ಯವು ಸೂಚಿತವಾಗಿದೆ. ಲೋಕರಕ್ಷಣವೇ ಇಂದ್ರ ಶಬ್ದಾರ್ಥ; ಹೇಗೆಂದರೆ; **ಇರಾಂ ದೃಣಾತೀತಿ ವಾ—ಇರಾಂ ಅನ್ನಂ ವ್ರೀಹ್ಯಾದಿ, ದೃಣಾತಿ ವಿಹಾರಯತಿ। ವರ್ಷಕ್ಲೇದಿತಮಂಕುರಂ ಬೀಜಂ ಭಿನತ್ತಿ ತದಿಂದ್ರಕಾರಿತಂ।** ಮಳೆಯಿಂದ ತೋಯಲ್ಪಟ್ಟ ಅಂಕುರವನ್ನೂ ಬೀಜವನ್ನೂ ಸೀಳಿ ಸಸ್ಯಾದಿಗಳನ್ನು ಬೆಳೆಸುವುದರಿಂದಲೂ ಅಥವಾ **ಇರಾಂ ದದಾತೀತಿ ವಾ** ಅನ್ನವನ್ನು ಕೊಡುವವನಾದುದರಿಂದಲೂ, **ಇರಾಂ ದಧಾತೀತಿ ವಾ** ಅನ್ನವನ್ನು ಧರಿಸಿರುವವನಾದ್ದರಿಂದಲೂ, **ಇಂದವೇ ದ್ರವತೀತಿ ವಾ** ಸೋಮರಸ ಪಾನಾರ್ಥವಾಗಿ ವೇಗವಾಗಿ ಹೋಗುವವನಾದ್ದರಿಂದಲೂ; **ಇಂಧೇ ಭೂತಾನೀತಿ ವಾ** ಭೂತಗಳನ್ನು ಚೈತನ್ಯದಾನಾದಿಗಳಿಂದ ಬೆಳಗುವಂತೆ ಮಾಡುವುದರಿಂದಲೂ, ಅಥವಾ **ಇಂದನ್ ಶತ್ರೂಣಾಂ ದಾರಯಿತಾ ದ್ರಾವಯಿತಾ ವಾ** ಶತ್ರುಗಳನ್ನು ಓಡಿಸುವವನು ಮತ್ತು ನಾಶಮಾಡುವವನಾದ್ದರಿಂದಲೂ ಅಥವಾ **ಆದರಯಿತಾ ಚ ಯಜ್ವನಾಂ।** ಯಜ್ಞಕರ್ತರನ್ನು ಪ್ರೀತಿಸುವವನಾದ್ದರಿಂದಲೂ ಸಹ ಇಂದ್ರನೆಂದು ಹೆಸರು ಬಂದಿದೆ. ಈ ಕರ್ಮಗಳೆಲ್ಲಾ ಲೋಕಹಿತವಾದುದರಿಂದ ಇಂದ್ರನು ತನ್ನ ನಾಮವನ್ನು **ಭದ್ರ**ವನ್ನಾಗಿ ಮಾಡಿದನು. ಹಾಗೆಯೇ ಅಗ್ನಿಯೂ ಕೂಡ ಸೂರ್ಯಾದಿರೂಪಗಳಲ್ಲಿದ್ದು ಲೋಕಹಿತವನ್ನು ಸಂಪಾದಿಸುವುದರಿಂದಲೂ ಸಹ (ನಿ ೭-೧೪; ೧೦-೮) ಇಬ್ಬರ ಹೆಸರೂ ಕಲ್ಯಾಣಾತ್ಮಕವಾಗಿವೆ.

**ಸಧ್ರೀಚೀನಾ ವೃತ್ರಹಣಾ ಉತಸ್ಥಃ**—ವಿದ್ಯುದ್ರೂಪದಲ್ಲಿರುವ ಅಗ್ನಿಯ ಸಹಾಯದಿಂದ ವೃತ್ರವನ್ನು ಇಂದ್ರನು ಸಂಹರಿಸಿದನೆಂಬುದು ಪ್ರಸಿದ್ಧವಾಗಿದೆ.

**ಇಂದ್ರಾಗ್ನೀ ನವತಿಂ ಪುರೋ ದಾಸಪತ್ನೀರಧೂನುತಂ।**
**ಸಾಕಮೇಕೇನ ಕರ್ಮಣಾ॥**

(ಋ. ಸಂ. ೩-೧೨-೬)

ಇತ್ಯಾದಿಋಕ್ಕುಗಳಲ್ಲಿ ಇಂದ್ರಾಗ್ನಿಗಳಿಬ್ಬರೂ ತಮ್ಮ ಸಮಾನವಾದ ಒಂದೇ ಕರ್ಮದಿಂದ ತೊಂಭತ್ತು ಶತ್ರುರಕ್ಷಿತಗಳಾದ ಕೋಟೆಗಳನ್ನು ಮುರಿದರೆಂದೂ, ಇದರಂತೆಯೇ,

**ಸಖಾ ಸಖ್ಯೇ ಅಪಚತ್ತೂಯಮಗ್ನಿರಸ್ಯ ಕ್ರತ್ವಾ ಮಹಿಷಾ ತ್ರೀ ಶತಾನಿ।**

(ಋ. ಸಂ. ೫-೨೯-೭)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯು ಇಂದ್ರನಿಗೆ ಶತ್ರುಹನನಸಾಧನವಾದ ಆಹಾರವನ್ನು ಪಾಕಮಾಡಿಕೊಟ್ಟನೆಂದೂ, ವರ್ಣಿಸಿದೆ. ಈ ವಿಧವಾದ ಶತ್ರುಹನನದಿಂದ ಲೋಕಕ್ಕೆ ವೃಷ್ಟಿಪ್ರವಾಹವೂ, ಬೆಳಕೂ, ಇತರವಿಧವಾದ ಸಂಪತ್ತೂ ಒಟ್ಟಿಗೆ ಲಭಿಸಿದವು.

**ಆ ವೋ ಯಕ್ಷ್ಯಮೃತತ್ವಂ ಸುವೀರಂ ಯಥಾ ವೋ ದೇವಾ ವರಿವಃ ಕರಾಣಿ।**
**ಆ ಬಾಹ್ವೋರ್ವಜ್ರಮಿಂದ್ರಸ್ಯ ಧೇಯಾಮಥೇಮಾ ವಿಶ್ವಾಃ ಪೃತನಾ ಜಯಾತಿ॥**

( ಋ. ಸಂ. ೧೦-೫೨-೫ )

ಎಂಬ ಮಕ್ಕಿನಲ್ಲಿ ಅಗ್ನಿಯು ಇಂದ್ರನಿಗೆ ವಜ್ರಾಯುಧವನ್ನು ಕೊಟ್ಟು ಅದರಿಂದ ಶತ್ರುಹನನಕ್ಕೆ ಸಹಾಯಮಾಡುವುದೂ, ಇಂತಹ ತನ್ನ ಉಪಕಾರಕವಾದ ಕಾರ್ಯವನ್ನು ಅಗ್ನಿಯು ದೇವತೆಗಳ ಮುಂದೆ ಹೇಳಿಕೊಂಡು ಅವರಿಗೆ ಜಯವನ್ನು ಸಂಪಾದಿಸಿಕೊಡುವುದಾಗಿ ಭರವಸೆಕೊಡುವುದೂ ವರ್ಣಿತವಾಗಿದೆ. ಇಂದ್ರಾಗ್ನಿಗಳ ಇಂತಹ ಸಂಯುಕ್ತವಾದ ಶತ್ರುಹನನ ಕ್ರಿಯೆಗಳಿಂದ.

ತಾ ಯೋಧಿಷ್ಟಮಭಿ ಗಾ ಇಂದ್ರ ನೂನಮಪಃ ಸ್ವರುಷಸೋ ಅಗ್ನ ಊಳ್ಹಾಃ ।
ದಿಶಃ ಸ್ವರುಷಸ ಇಂದ್ರ ಚಿತ್ರಾ ಅಪೋ ಗಾ ಅಗ್ನೇ ಯುವಸೇ ನಿಯುತ್ವಾನ್ ॥

(ಋ. ಸಂ. ೬-೬೦-೨)

ಇಂದ್ರಾಗ್ನಿಗಳು ಅಪಹೃತವಾದ ಗೋವುಗಳನ್ನು ತರಬೇಕೆಂದೂ, ಅಪಹೃತವಾದ ಬೆಳಕನ್ನು ತಂದುಕೊಡಬೇಕೆಂದೂ, ಉದಕಗಳನ್ನು ಸುರಿಸಬೇಕೆಂದೂ, ಪ್ರಾರ್ಥಿಸಿದೆ. ಇಂತಹ ಉಪಕಾರಕರಾದ ಇಂದ್ರಾಗ್ನಿಗಳು **ಸಧ್ರ್ಯಂಚಾ ನಿಷದ್ಯ ವೃಷ್ಣಃ ಸೋಮಸ್ಯ ವೃಷೇಥಾಂ ।** ಒಟ್ಟಿಗೆ ಯಜ್ಞಗೃಹದಲ್ಲಿ ಕುಳಿತು ಹರ್ಷದಾಯಕವಾದ ಸೋಮರಸವನ್ನು ಕುಡಿಯಲಿ ಎಂದು ಕೃತಜ್ಞತಾ ಪೂರ್ವಕವಾಗಿ ಪ್ರಾರ್ಥಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಚಕ್ರಾಥೇ** ಡುಕೃಞ್ ಕರಣೇ. ಧಾತು. ಲಟ್ ಮಧ್ಯಮಪುರುಷದ್ವಿವಚನದಲ್ಲಿ ಆಥಾಂ ಪ್ರತ್ಯಯ ಟಿಗೆ ಏತ್ವ. ಪಾದಾದಿಯಲ್ಲಿ ಬಂದುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ.

**ಸಧ್ರ್ಯಕ್**—ಸಹ ಎಂಬುದು ಉಪಪದವಾಗಿರುವಾಗ, ಅಂಚುಗತಿಪೂಜನಯೋಃ ಧಾತುವಿಗೆ **ಋತ್ವಿಕ್ ದಧೃಕ್**—(ಪಾ. ಸೂ. ೩-೨-೫೯) ಎಂಬುದರಿಂದ ಕ್ವಿನ್ ಪ್ರತ್ಯಯ. **ಅನಿದಿತಾಂ ಹಲಉ**—(ಪಾ. ಸೂ. ೬-೪-೨೪) ಎಂಬುದರಿಂದ ಉಪಧಾ ನಕಾರಕ್ಕೆ ಲೋಪ. ಅಂಚುಪರವಾದಾಗ ಸಹ ಎಂಬುದಕ್ಕೆ—**ಸಹಸ್ಯ ಸಧ್ರಿಃ** (ಪಾ. ಸೂ. ೬-೩-೯೫) ಎಂಬುದರಿಂದ ಸಧ್ರಿ ಆದೇಶ. **ಚೋಃ ಕುಃ**—(ಪಾ. ಸೂ. ೮-೨-೩೦) ಎಂಬುದರಿಂದ ಧಾತುಚಕಾರಕ್ಕೆ ಕುತ್ವ. **ಅದ್ರಿ ಸಧ್ರ್ಯೋರಂತೋದಾತ್ತನಿಪಾತನಂ ಕೃತ್‌ಸ್ವರನಿವೃತ್ತ್ಯರ್ಥಮ್**—(ಪಾ. ಸೂ. ೬-೩-೯೫-೧) ಎಂಬ ವಚನದಿಂದ ಸಧ್ರಿ ಎಂಬ ಆದೇಶವು ಅಂತೋದಾತ್ತವಾಗುತ್ತದೆ. ಕೊನೆಗೆ ಯಣಾದೇಶ ಬಂದಾಗ **ಉದಾತ್ತಸ್ವರಿತಯೋಃ**—(ಪಾ. ಸೂ. ೮-೨-೪) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ಸಧ್ರೀಚೀನಾ**—**ವಿಭಾಷಾಂ ಚೇರದಿಕ್‌ಸ್ತ್ರಿಯಾಮ್**—(ಪಾ. ಸೂ. ೫-೪-೮) ಎಂಬುದರಿಂದ ಸ್ವಾರ್ಥದಲ್ಲಿ ಖ ಪ್ರತ್ಯಯ. **ಆಯನೇಯೀ**—ಪಾ. ಸೂ. ೭-೧-೨) ಎಂಬುದರಿಂದ ಅದಕ್ಕೆ ಈನಾದೇಶ. ಸಧ್ರೀಚೀನ ಎಂದು ರೂಪವಾಗುತ್ತದೆ. ದ್ವಿವಚನ ಪರವಾದಾಗ ಅದಕ್ಕೆ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಆಕಾರಾದೇಶ. ಇದು ಚಿತ್ತಾದುದರಿಂದ **ಚಿತಃ**—(ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವೃತ್ರಹಣಾ**—ವೃತ್ರಂ ಹತವಂತೌ ವೃತ್ರಹಣೌ. **ಬ್ರಹ್ಮಭ್ರೂಣವೃತ್ರೇಷು**—(ಪಾ. ಸೂ. ೩-೨-೮೭) ಎಂಬುದರಿಂದ ಭೂತಾರ್ಥದಲ್ಲಿ ಕ್ವಿಪ್ ಪ್ರತ್ಯಯ. ಇದಕ್ಕೆ ದ್ವಿವಚನ ಔ ಪರವಾದಾಗ **ಇನ್‌ಹನ್‌ಪೂ**—(ಪಾ. ಸೂ.

೬-೮-೧೨) ಎಂಬುದರಿಂದ ನಿಯಮಮಾಡಿರುವುದರಿಂದ ಉಪಧಾದೀರ್ಘ ಬರುವುದಿಲ್ಲ. ವೃತ್ರಹಣೌ+ಉತ ಎಂದಿರುವಾಗ **ಏಚೋಽಯವಾಯಾವಃ**—ಎಂಬುದರಿಂದ ಆವಾದೇಶ. **ಲೋಪಃ ಶಾಕಲ್ಯಸ್ಯ**—(ಪಾ. ಸೂ. ೮-೩-೧೯) ಎಂಬುದರಿಂದ ವಕಾರಕ್ಕೆ ಲೋಪ.

**ಸ್ಥಃ**—ಅಸ ಭುವಿ ಧಾತು. ಲಟ್ ಮಧ್ಯಮಪುರುಷ ದ್ವಿವಚನದಲ್ಲಿ ಥಸ್ ಪ್ರತ್ಯಯ. ಇದಕ್ಕೆ ಙಿತ್ತ್ವ ವಿರುವುದರಿಂದ **ಶ್ನಸೋರಲ್ಲೋಪಃ**—(ಪಾ. ಸೂ. ೬-೪-೧೧೧) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ನಿಘಾತಸ್ವರ ಬರುತ್ತದೆ.

**ನಿಷದ್ಯ**—ಷದ್ಲೃ ವಿಶರಣಗತ್ಯವಸಾದನೇಷು. ಧಾತು. **ಸಮಾಸೇಽನಞ್ಪೂರ್ವೇ**—(ಪಾ. ಸೂ. ೭-೧-೩೭) ಎಂಬುದರಿಂದ ಕ್ತ್ವಾಪ್ರತ್ಯಯಕ್ಕೆ ಲ್ಯಬಾದೇಶ. **ಸದಿರಪ್ರತೇಃ**—(ಪಾ. ಸೂ ೮-೩-೬೬) ಎಂಬುದರಿಂದ ಷತ್ವ. ಛಾಂದಸವಾಗಿ ಅಂತ್ಯದೀರ್ಘ ಬರುತ್ತದೆ.

**ವೃಷೇಥಾಮ್**—ವೃಷ ಷೇಚನೇ. ಧಾತು. **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇಪದವೂ, ಶವಿಕರಣವೂ ಬರುತ್ತದೆ. ವಿಕರಣಕ್ಕೆ ಙಿತ್ತ್ವವಿರುವುದರಿಂದ ಲಘೂಪಧಗುಣ ಬರುವುದಿಲ್ಲ. ಮಧ್ಯಮಪುರುಷ ದ್ವಿವಚನದಲ್ಲಿ ಆಥಾಮ್ ಪ್ರತ್ಯಯ. ಟಿಗೆ ಏತ್ವ. **ಆನೋತಃ**—(ಪಾ. ಸೂ. ೩-೪-೯೦) ಎಂಬುದರಿಂದ ಅದಕ್ಕೆ ಆನಾದೇಶ. **ಆತೋಙಿತಃ**—(ಪಾ. ಸೂ. ೭-೨-೮೧) ಎಂಬುದರಿಂದ ಆಕಾರಕ್ಕೆ ಇಯಾದೇಶ. **ಲೋಪೋ ವ್ಯೋರ್ವಲಿ**—ಸೂತ್ರದಿಂದ ಯಕಾರಲೋಪ. ಗುಣ. ಅತಿಙಂತದ ಪರ ದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ. ॥ ೩ ॥

---

ಸಂಹಿತಾಪಾಠಃ

ಸಮಿದ್ಧೇಷ್ವಗ್ನಿಷ್ವಾನಜಾನಾ ಯತಸ್ರುಚಾ ಬರ್ಹಿರು ತಿಸ್ತಿರಾಣಾ ।
ತೀವ್ರೈಃ ಸೋಮೈಃ ಪರಿಷಿಕ್ತೇಭಿರರ್ವಾಗೇಂದ್ರಾಗ್ನೀ ಸೌಮನ-
ಸಾಯ ಯಾತಂ ॥ ೪ ॥

ಪದಪಾಠಃ

ಸಂಽಇದ್ಧೇಷು । ಅಗ್ನಿಷು । ಆನಜಾನಾ । ಯತಽಸ್ರುಚಾ । ಬರ್ಹಿಃ । ಊಂ ಇತಿ । ತಿಸ್ತಿರಾಣಾ ।

ತ್ರೀವ್ರೈಃ । ಸೋಮೈಃ । ಪರಿ॑ऽಸಿಕ್ತೇಭಿಃ । ಅರ್ವಾಕ್ । ಆ । ಇಂದ್ರಾಗ್ನೀ॒

ಇತಿ॑ । ಸೌ॒ಮ॒ನ॒ಸಾಯ॑ । ಯಾ॒ತ॒ಂ ॥ ೪ ॥

॥ ಸಾಯಣಭಾಷ್ಯಂ ॥

ಅಗ್ನಿಷು ಗಾರ್ಹಪತ್ಯಾದಿಷ್ವನ್ವಾಧಾನಾದಿನಾ ಸಮಿದ್ಧೇಷು ಸಮ್ಯಗಿದ್ಧೇಷು ದೀಪ್ತೇಷು ಸತ್ಸ್ವಾನಜಾನಾ ಹವೀಂಷ್ಯಾಜ್ಯೇನಾಂಜಂತೌ ಯತಸ್ರುಚಾ ತದನಂತರಂ ಯಾಗಾರ್ಥಂ ಗೃಹೀತಸ್ರುಚೌ ಬರ್ಹಿರು ವೇದ್ಯಾಂ ಬರ್ಹಿರಪಿ ತಿಸ್ತಿರಾಣಾ ಆಸ್ತೀರ್ಣಂ ಕೃತವಂತಾವಧ್ವರ್ಯುಪ್ರತಿಪ್ರಸ್ಥಾತಾರಾವೇವಂಭೂತಾವಭೂತಾಂ । ತಥಾ ಸತಿ ಹೇ ಇಂದ್ರಾಗ್ನೀ ತೀವ್ರೈಃ ಕ್ಷಿಪ್ರಂ ಮದಕರೈಃ ಪರಿಷಿಕ್ತೇಭಿಃ ಪರಿತಃ ಸರ್ವೇಷು ಗ್ರಹಚಮಸಾದಿಷ್ವಾಸಿಕ್ತೈಃ ಸೋಮೈರ್ಹೇತುಭೂತೈರರ್ವಾಗಸ್ಮದಭಿಮುಖಮಾ ಯಾತಂ । ಆಗಚ್ಛತಂ । ಕಿಮರ್ಥಂ । ಸೌಮನಸಾಯ ಸೌಮನಸ್ಯಾಯ । ಅಸ್ಮಾಕಮನುಗ್ರಹಾಯೇತ್ಯರ್ಥಃ ॥ ಆನಜಾನಾ। ಅಂಜೂ ವ್ಯಕ್ತಿಮ್ರಕ್ಷಣಗತಿಷು । ಲಿಟಃ ಕಾನಚ್ । ಅನಿದಿತಾಮಿತಿ ನಲೋಪಃ । ದ್ವಿರ್ಭಾವೇಽತ ಆದೇರಿತ್ಯಭ್ಯಾಸಸ್ಯ ದೀರ್ಘಃ । ತಸ್ಮಾನ್ನುಡ್ದ್ವಿಹಲ ಇತ್ಯದ್ವಿಹಲೋಽಪಿ ವ್ಯತ್ಯಯೇನ ನುಟ್ । ತಿಸ್ತಿರಾಣಾ । ಸ್ತೄ ಞ್ ಆಚ್ಛಾದನೇ । ಪೂರ್ವವತ್ಕಾನಚ್ । ಋೂತ ಇದ್ಧಾತೋರಿತೀತ್ವಂ । ದ್ವಿರ್ವಚನೇ ಶರ್ಪೂರ್ವಾಃ ಖಯಃ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಚಿತ್ತ್ವಾದಂತೋದಾತ್ತತ್ವಂ ॥

ಪ್ರತಿಪದಾರ್ಥ

**ಅಗ್ನಿಷು**—ಗಾರ್ಹಪತ್ಯಾದಿ ಅಗ್ನಿಗಳು । **ಸಮಿದ್ಧೇಷು**—(ಸಮಿತ್ತುಗಳಿಂದ) ಪ್ರಜ್ವಲಿತಗಳಾದಾಗ । **ಆನಜಾನಾ**—ಹವಿಸ್ಸುಗಳನ್ನು ಘೃತದಲ್ಲಿ ಅದ್ದಿದವರಾಗಿಯೂ । **ಯತಸ್ರುಚಾ**—(ಯಜ್ಞಕ್ಕಾಗಿ) ಸೌಟುಗಳನ್ನು ಎತ್ತಿಹಿಡಿದವರಾಗಿಯೂ । **ಬರ್ಹಿರು**—(ವೇದಿಕೆಯಮೇಲೆ) ದರ್ಭಾಸನಗಳನ್ನೂ । **ತಿಸ್ತಿರಾಣಾ**—ಹರಡಿದವರಾಗಿಯೂ ಆಗಿ (ಅಧ್ವರ್ಯುಪ್ರತಿಪ್ರಸ್ಥಾತೃಗಳು ಸಿದ್ಧರಾಗಿದ್ದಾರೆ ಆದ್ದರಿಂದ ಎಲೈ ಇಂದ್ರಾಗ್ನಿಗಳೇ) । **ತೀವ್ರೈಃ**—ವೇಗವಾಗಿ ಹರ್ಷವನ್ನುಂಟುಮಾಡುವುವೂ । **ಪರಿಷಿಕ್ತೇಭಿಃ**—(ಚಮಸಾದಿಗಳಲ್ಲಿ) ಸುರಿದಿರುವುವೂ ಆದ । **ಸೋಮೈಃ**—ಸೋಮರಸಗಳ ನಿಮಿತ್ತವಾಗಿ (ಅಥವಾ ಸೋಮರಸಗಳಿಂದ ಆಕರ್ಷಿತರಾಗಿ) । **ಅರ್ವಾಕ್**—ನಮ್ಮ ಅಭಿಮುಖವಾಗಿ । **ಸೌಮನಸಾಯ**—(ನಮಗೆ) ಅನುಗ್ರಹವನ್ನು ಮಾಡುವುದಕ್ಕಾಗಿ । **ಆ ಯಾತಂ**—ಬನ್ನಿರಿ.

ಭಾವಾರ್ಥ

ಸಮಿತ್ತುಗಳಿಂದ ಗಾರ್ಹಪತ್ಯಾದಿ ಅಗ್ನಿಗಳನ್ನು ಪ್ರಜ್ವಲಿತಗಳನ್ನಾಗಿಮಾಡಿ ಹವಿಸ್ಸುಗಳನ್ನು ಘೃತದಲ್ಲಿ ಅದ್ದಿದವರಾಗಿಯೂ, ಯಾಗಾರ್ಥವಾಗಿ ಸೌಟುಗಳನ್ನು ಎತ್ತಿಹಿಡಿದವರಾಗಿಯೂ ಮತ್ತು ವೇದಿಕೆಯಮೇಲೆ ದರ್ಭಾಸನಗಳನ್ನು ಹರಡಿದವರಾಗಿಯೂ ಆಗಿ ಅಧ್ವರ್ಯುಪ್ರತಿಪ್ರಸ್ಥಾತೃಗಳು ನಿಮ್ಮನ್ನು ನಿರೀಕ್ಷಿಸುತ್ತಿದ್ದಾರೆ. ಆದ್ದರಿಂದ ಎಲೈ ಇಂದ್ರಾಗ್ನಿಗಳೇ, ವೇಗವಾಗಿ ಹರ್ಷವನ್ನುಂಟುಮಾಡುವುವೂ, ಚಮಸಾದಿಗಳಲ್ಲಿ ಸುರಿದಿರುವುವೂ ಆದ ಸೋಮರಸಗಳಿಂದ ಆಕರ್ಷಿತರಾಗಿ ನಮ್ಮನ್ನು ಅನುಗ್ರಹಿಸುವುದಕ್ಕಾಗಿ ನಮ್ಮ ಅಭಿಮುಖವಾಗಿ ಬನ್ನಿರಿ.

## English Translation

The fires being kindled, the two ( priests stand by ) sprinkling the clarified butter from the ladles, which they raise, and spreading the sacred grass ( upon the altar ); therefore, Indra and Agni, come before us for our gratification, ( attracted ) by stimulating Soma juices sprinkled all around.

### ॥ ವಿಶೇಷವಿಷಯಗಳು ॥

**ಆನಜಾನಾ—ಹವೀಂಷ್ಯಾಜ್ಯೇನಾಂಜಂತೌ** । ಹವಿಸ್ಸುಗಳನ್ನು ಆಜ್ಯದಲ್ಲಿ ಅದ್ದಿ ಪರಿಷ್ಕೃತಗಳನ್ನಾಗಿ ಮಾಡಿ ಎಂದು ಸಾಯಣರೂ, **ಅಂಜೇರ್ಗತ್ಯರ್ಥಸ್ಯ ಇದಂ ರೂಪಂ । ಆಗತವಂತೌ** । ಗತ್ಯರ್ಥಕವಾದ **ಅಂಜು** ಧಾತುವಿನಿಂದ ನಿಷ್ಪನ್ನವಾಗಿ ಯಜ್ಞಗೃಹಕ್ಕೆ ಬಂದ ಎಂದು ಇಂದ್ರಾಗ್ನಿಗಳಿಗೆ ವಿಶೇಷಣವೆಂದು ಸ್ಕಂದಸ್ವಾಮಿಗಳೂ ವಿವರಿಸಿದ್ದಾರೆ. ಸಾಯಣರು **ಆನಜಾನಾ, ಯತಸ್ರುಚಾ** ಮತ್ತು **ತಿಸ್ತಿರಾಣಾ** ಎಂಬ ಮೂರು ಪದಗಳನ್ನೂ ಸಹ **ಅಧ್ವರ್ಯುಪ್ರತಿಪ್ರಸ್ಥಾತೃಗಳಿಗೆ** ವಿಶೇಷಣವನ್ನಾಗಿ ಮಾಡಿದ್ದಾರೆ. ಹಾಗಾದರೆ, ಹವಿಸ್ಸುಗಳನ್ನು ಆಜ್ಯದಲ್ಲಿ ಅದ್ದಿದವರೂ, **ಯತಸ್ರುಚಾ** ಯಾಗಾರ್ಥವಾಗಿ ಸೌಟುಗಳನ್ನು ಕೈಯಲ್ಲಿ ಹಿಡಿದಿರುವವರೂ ಮತ್ತು **ತಿಸ್ತಿರಾಣಾ** ದರ್ಭಾಸನಗಳನ್ನು ಸಿದ್ಧಪಡಿಸಿರುವವರೂ ಆದ ಅಧ್ವರ್ಯು ಪ್ರತಿಪ್ರಸ್ಥಾತೃಗಳೆಂದರ್ಥ. ಸ್ಕಂದಸ್ವಾಮಿಗಳು ಈ ಮೂರು ಪದಗಳನ್ನೂ ಸಹ ಇಂದ್ರಾಗ್ನಿಗಳಿಗೆ ವಿಶೇಷಣವೆಂದು ಹೇಳಿದ್ದಾರೆ. **ಆನಜಾನಾ** ಎಂದರೆ ಯಜ್ಞಗೃಹಕ್ಕೆ ಬಂದವರು, **ಯತಸ್ರುಚಾ** ಎಂದರೆ **ಸರ್ವೈಃ ಯಜಮಾನೈಃ ಉದ್ಯತಾ ಸ್ರುಚೋ ಯಯೋರರ್ಥಾಯ ತೌ ಯತಸ್ರುಚೌ** ಯಾವ ಇಂದ್ರಾಗ್ನಿಗಳನ್ನುದ್ದೇಶಿಸಿ ಯಾಗಮಾಡುವುದಕ್ಕೆ ಸೌಟುಗಳು ಎತ್ತಲ್ಪಟ್ಟವೋ ಆ ಇಂದ್ರಾಗ್ನಿಗಳು ಎಂದೂ ಮತ್ತು **ತಿಸ್ತಿರಾಣಾ ಇತ್ಯಪಿ ಋತ್ವಿಕ್ಕರ್ತೃಕಸ್ಯಾಪಿ ಸ್ತರಣಸ್ಯ ಹೇತುಭೂತತ್ವಾತ್ ಇಂದ್ರಾಗ್ನೀ ಏವ ಕರ್ತಾರೌ ಉಚ್ಯೇತೇ** ಬರ್ಹಿಗಳಮೇಲೆ ವಿಸ್ತರಿಸಿ ಕುಳಿತುಕೊಳ್ಳುವುದು ಋತ್ವಿಕ್ಕಗಳ ಕರ್ಮವಾದರೂ ಸಹ ಇಲ್ಲಿ ಇಂದ್ರಾಗ್ನಿಗಳೇ ಆ ಕರ್ಮಕರ್ತೃಗಳೆಂದು ತಿಳಿಯಬೇಕೆಂದೂ ವಿವರಿಸಿದ್ದಾರೆ.

**ತೀವ್ರೈಃ—ಕ್ಷಿಪ್ರಂ ಮದಕರೈಃ** । ಬಹಳ ಜಾಗ್ರತೆಯಾಗಿ ಮದರೂಪವಾದ ಹರ್ಷವನ್ನುಂಟುಮಾಡುವ (**ಸೋಮರಸಗಳು**).

### ವ್ಯಾಕರಣಪ್ರಕ್ರಿಯಾ

**ಆನಜಾನಾ**—ಅಂಜೂ ವ್ಯಕ್ತಿಮ್ರಕ್ಷಣಗತಿಷು. ಧಾತು. ಇದಕ್ಕೆ ಲಿಟ್ ಬಂದಾಗ **ಲಿಟಃ ಕಾನಜ್ವಾ**—(ಪಾ. ಸೂ. ೩-೨-೧೦೬) ಎಂಬುದರಿಂದ ಅದಕ್ಕೆ ಕಾನಜಾದೇಶ. ಇದು ಕಿತ್ತಾದುದರಿಂದ **ಅನಿದಿತಾಂ ಹಲ**—ಎಂಬುದರಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. ಪ್ರತ್ಯಯನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲ್‌ಲೋಪ ಬಂದಾಗ **ಅತ ಆದೇಃ**—(ಪಾ. ಸೂ. ೭-೪-೭೦) ಎಂಬುದರಿಂದ ದೀರ್ಘ. ಧಾತುವು ದ್ವಿಹಲ್ ವಿಶಿಷ್ಟವಾಗಿದ್ದರೂ ವ್ಯತ್ಯಯದಿಂದ **ತಸ್ಮಾನ್ನುಟ್ ದ್ವಿಹಲಃ**—(ಪಾ. ಸೂ. ೭-೪-೭೧) ಎಂಬುದರಿಂದ ಧಾತುವಿಗೆ ನುಡಾಗಮ. ಆನಜಾನ ಎಂದು ರೂಪವಾಗುತ್ತದೆ. ದ್ವಿವಚನ ಔಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಆಕಾರಾದೇಶ. **ಚಿತಃ**—(ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ

ಬಂದಾಗ ಏಕಾದೇಶ **ಉದಾತ್ತೇನೋದಾತ್ತಃ**—(ಪಾ. ಸೂ ೮-೨-೫) ಎಂಬುದರಿಂದ ಉದಾತ್ತವಾಗುತ್ತದೆ. ಮುಂದೆ ಹೀಗೆಯೇ ವಿಭಕ್ತಿಗೆ ಆಕಾರಾದೇಶ.

**ತಿಸ್ತಿರಾಣಾ**—ಸ್ತೃಞ್ ಆಚ್ಛಾದನೇ. ಧಾತು. ಹಿಂದಿನಂತೇ ಲಿಟಿಗೆ ಕಾನಜಾದೇಶ ಬಂದಾಗ ಧಾತುವಿಗೆ ದ್ವಿತ್ವ. **ಋತ ಇತ್‌ಧಾತೋಃ**—(ಪಾ. ಸೂ. ೭-೧-೧೦೦) ಎಂಬುದರಿಂದ ಮೊದಲು ಧಾತುವಿಗೆ ಇತ್ವ. ಉರಣ್ರಪರಃ—ಎಂಬುದರಿಂದ ರಪರವಾಗಿ ಬರುತ್ತದೆ. ದ್ವಿತ್ವ ಬಂದಾಗ ಶರ್‌ಪೂರ್ವಕವಾದ ಖಯ್ ಅಭ್ಯಾಸದಲ್ಲಿರುವುದರಿಂದ **ಶರ್ಪೂರ್ವಾಃ ಖಯಃ**—(ಪಾ. ಸೂ. ೭-೪-೬೧) ಎಂಬುದರಿಂದ ಖಯ್‌ಗೆ (ತ) ಶೇಷ ಬರುತ್ತದೆ. ರೇಫ ನಿಮಿತ್ತವಿರುವುದರಿಂದ **ಅಟ್‌ಕುಪ್ವಾಙ್**—ಸೂತ್ರದಿಂದ ಪ್ರತ್ಯಯ ನಕಾರಕ್ಕೆ ಣತ್ವ. ಅಂತೋದಾತ್ತಸ್ವರ ಬರುತ್ತದೆ. ಹಿಂದಿನಂತೆ ವಿಭಕ್ತಿಗೆ ಆಕಾರಾದೇಶ. ಏಕಾದೇಶ ಬಂದಾಗ ಉದಾತ್ತಸ್ವರ ಬರುತ್ತದೆ.

**ಪರಿಷಿಕ್ತೇಭಿಃ**—ಷಿಚಿರ್ ಕ್ಷರಣೇ. ಧಾತು. ಕರ್ಮಣಿಯಲ್ಲಿ ಕ್ತಪ್ರತ್ಯಯ. **ಚೋಃ ಕುಃ** ಎಂಬುದರಿಂದ ಧಾತುವಿಗೆ ಕುತ್ವ. **ಗತಿರನಂತರಃ**—(ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಪರಿ) ಪ್ರಕೃತಿಸ್ವರ ಬರುತ್ತದೆ. ಭಿಸ್ ಪರವಾದಾಗ **ಬಹುಲಂ ಛಂದಸಿ**—ಎಂಬುದರಿಂದ ಭಿಸಿಗೆ ಐಸ್ ಬರುವುದಿಲ್ಲ. **ಬಹುವಚನೇ ಝಲ್ಯೇತ್**—ಎಂಬುದರಿಂದ ಏತ್ವ.

**ಸೌಮನಸಾಯ**—ಸುಮನಸಃ ಭಾವಃ ಸೌಮನಸಮ್. ತಸ್ಮೈ. ಪ್ರತ್ಯಯ ಣಿತ್ತಾದುದರಿಂದ **ತದ್ಧಿತೇಷ್ವಚಾಮಾದೇಃ**—ಎಂಬುದರಿಂದ ಆದಿವೃದ್ಧಿ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೪ ॥

———— :o: ————

ಸಂಹಿತಾಪಾಠಃ

ಯಾನೀಂದ್ರಾಗ್ನೀ ಚಕ್ರಥುರ್ವೀರ್ಯಾಣಿ ಯಾನಿ ರೂಪಾಣ್ಯುತ
ವೃಷ್ಣ್ಯಾನಿ ।
ಯಾ ವಾಂ ಪ್ರತ್ನಾನಿ ಸಖ್ಯಾ ಶಿವಾನಿ ತೇಭಿಃ ಸೋಮಸ್ಯ ಪಿಬತಂ
ಸುತಸ್ಯ ॥ ೫ ॥

। ಪದಪಾಠಃ ।

ಯಾನಿ । ಇಂದ್ರಾಗ್ನೀ ಇತಿ । ಚಕ್ರಥುಃ । ವೀರ್ಯಾಣಿ । ಯಾನಿ । ರೂಪಾಣಿ ।
ಉತ । ವೃಷ್ಣ್ಯಾನಿ ।

ಯಾ । ವಾಂ । ಪ್ರತ್ನಾನಿ । ಸಖ್ಯಾ । ಶಿವಾನಿ । ತೇಭಿಃ । ಸೋಮಸ್ಯ । ಪಿಬತಂ ।
ಸುತಸ್ಯ ॥ ೫ ॥

ಸಾಯಣಭಾಷ್ಯಂ

ಹೇ ಇಂದ್ರಾಗ್ನೀ ಯಾನಿ ವೀರ್ಯಾಣಿ ವೃತ್ರವಧಾದಿರೂಪಾಣಿ ಚಕ್ರಥುಃ ಕೃತವಂತೌ ಯುವಾಂ ಯಾನಿ ಚ ರೂಪಾಣಿ ನಿರೂಪ್ಯಮಾಣಾನಿ ಗವಾಶ್ವಾದೀನಿ ಭೂತಜಾತಾನಿ ಕೃತವಂತೌ । ಇಂದ್ರಾಗ್ನಿಭ್ಯಾಂ ಹಿ ಸರ್ವಂ ಜಗತ್ಸೃಜ್ಯತೇ । ಇಂದ್ರಃ ಸೂರ್ಯಾತ್ಮನಾ ವೃಷ್ಟಿಂ ಸೃಜತ್ಯಗ್ನಿಶ್ಚಾಹುತಿದ್ವಾರಾ ವೃಷ್ಟ್ಯುತ್ಪಾದಕಃ । ವೃಷ್ಟೇಃ ಸಕಾಶಾತ್ಸರ್ವೇ ಪ್ರಾಣಿನ ಉತ್ಪದ್ಯಂತೇ । ಉತಾಪಿ ಚ ಯಾನಿ ವೃಷ್ಣ್ಯಾನಿ ವೃಷ್ಣಿಭವಾನಿ ವೃಷ್ಟಿಪ್ರದಾನಾದಿರೂಪಾಣಿ ಕರ್ಮಾಣಿ ಕೃತವಂತೌ । ತಥಾ ವಾಂ ಯುವಯೋಃ ಸಂಬಂಧೀನಿ ಪ್ರತ್ನಾನಿ ಚಿರಂತನಾನಿ ಶಿವಾನಿ ಶೋಭನಾನಿ ಯಾ ಯಾನಿ ಸಖ್ಯಾ ಸಖಿತ್ವಾನಿ ಸಂತಿ । ತೇಭಿಸ್ತೈಃ ಸರ್ವೈಃ ಸಹಿತೌ ಯುವಾಂ ಸುತಸ್ಯ ಸೋಮಸ್ಯಾಭಿಷುತಂ ಸೋಮಂ ಪಿಬತಂ ॥ ಸಖ್ಯಾ । ಸಖ್ಯುರ್ಭಾವಃ ಸಖ್ಯಂ । ಸಖ್ಯುರ್ಯ ಇತಿ ಯಪ್ರತ್ಯಯಃ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ತೇಭಿಃ । ಬಹುಲಂ ಛಂದಸೀತಿ ಭಿಸ ಐಸಭಾವಃ । ಸಾವೇಕಾಚ ಇತಿ ಪ್ರಾಪ್ತಸ್ಯ ವಿಭಕ್ತ್ಯುದಾತ್ತತ್ವಸ್ಯ ನ ಗೋಶ್ವನ್ಸಾವವರ್ಣೇತಿ ಪ್ರತಿಷೇಧಃ ॥

ಪ್ರತಿಪದಾರ್ಥ

ಇಂದ್ರಾಗ್ನೀ— ಎಲೈ ಇಂದ್ರಾಗ್ನಿಗಳೇ । ಯಾನಿ ವೀರ್ಯಾಣಿ-- (ವೃತ್ರವಧಾದಿರೂಪವಾದ) ಯಾವ ವೀರ್ಯಕರ್ಮಗಳನ್ನು । ಚಕ್ರಥುಃ—(ನೀವು) ಮಾಡಿದ್ದೀರೋ । ಯಾನಿ ರೂಪಾಣಿ— ಕಣ್ಣಿಗೆ ಗೋಚರವಾಗತಕ್ಕ ಯಾವ ಯಾವ ರೂಪಗಳನ್ನು (ನಿರ್ಮಿಸಿದ್ದೀರೋ) । ಉತ—ಅಲ್ಲದೇ । ವೃಷ್ಣ್ಯಾನಿ—(ಯಾವ ಯಾವ) ವೃಷ್ಟಿ ಪ್ರದಾನಾದಿ ಕರ್ಮಗಳನ್ನು ಮಾಡಿದ್ದೀರೋ (ಹಾಗೆಯೇ) । ವಾಂ— ನಿಮ್ಮಿಬ್ಬರಿಗೆ ಸೇರಿದ । ಪ್ರತ್ನಾನಿ—ಪ್ರಾಚೀನಗಳಾದವೂ । ಶಿವಾನಿ— ಮಂಗಳಕರವಾದವೂ ಆದ । ಯಾ ಸಖ್ಯಾ— ಯಾವ ಯಾವ ಸ್ನೇಹರೂಪಗಳಾದ ಬಂಧುತ್ವಗಳಿವೆಯೋ । ತೇ— ಅವುಗಳೊಂದಿಗೆಲ್ಲಾ ಕೂಡಿಕೊಂಡು । ಸುತಸ್ಯ — ಹಿಂಡಿದ । ಸೋಮಸ್ಯ — ಸೋಮರಸದ (ನಿಮ್ಮ ಭಾಗವನ್ನು) । ಪಿಬತಂ—(ನೀವಿಬ್ಬರೂ) ಕುಡಿಯಿರಿ

ಭಾವಾರ್ಥ

ಎಲೈ ಇಂದ್ರಾಗ್ನಿಗಳೇ, ನೀವಿಬ್ಬರೂ ವೃತ್ರವಧಾದಿರೂಪಗಳಾದ ಯಾವ ಯಾವ ವೀರ್ಯಕರ್ಮಗಳನ್ನು ನೆರವೇರಿಸಿದ್ದೀರೋ, ಮತ್ತು ಕಣ್ಣಿಗೆ ಗೋಚರವಾಗತಕ್ಕ ಯಾವಯಾವ ರೂಪಗಳನ್ನು ನಿರ್ಮಿಸಿದ್ದೀರೋ ಅದೂ

ಅಲ್ಲದೇ, ಉಪಕಾರಕಗಳಾದ ಯಾವ ಯಾವ ವೃಷ್ಟಿಪ್ರದಾನಾದಿ ಕರ್ಮಗಳನ್ನು ಮಾಡಿದ್ದಿರೋ ಮತ್ತು ನಿಮ್ಮಿಬ್ಬರಿಗೂ ಸೇರಿದ ಪ್ರಾಚೀನಗಳಾದವೂ ಮಂಗಳಕರವಾದವೂ ಆದ ಯಾವ ಯಾವ ಸ್ನೇಹರೂಪಗಳಾದ ಬಂಧುತ್ವಗಳಿವೆಯೋ ಅವುಗಳೊಂದಿಗೆಲ್ಲಾ ಕೂಡಿಕೊಂಡು ನಾವು ಹಿಂಡಿರುವ ಸೋಮರಸದಲ್ಲಿ ನೀವಿಬ್ಬರೂ ಸೇರಿಕೊಂಡು ನಿಮ್ಮ ಭಾಗವನ್ನು ಕುಡಿಯಿರಿ.

English Translation

Whatever heroic exploits you have achieved, whatever forms ( you have created), whatever benefits ( you have poured down ) whatever ancient and fortunate friendships (you have contracted, come with them all) and drink of the effused Soma juice.

ವಿಶೇಷವಿಷಯಗಳು

ಈ ಸೂಕ್ತಿನಲ್ಲಿ ಇಂದ್ರಾಗ್ನಿಗಳ ವೀರ್ಯಕರ್ಮಗಳನ್ನೂ, ಅವರು ನಿರ್ಮಿಸಿದ ಸೌಂದರ್ಯಪೂರಿತವಾದ ರೂಪಗಳನ್ನೂ ಅವರಿಬ್ಬರ ಪ್ರಾಚೀನವಾದ ಸಂಬಂಧವನ್ನೂ ಸ್ತುತಿಸಿದೆ. ಈ ಎಲ್ಲಾ ಅಂಶಗಳಲ್ಲಿಯೂ ಇಬ್ಬರೂ ಒಂದೇ ಸಮನಾದ ಪ್ರಭಾವವನ್ನು ಬೀರಿರುವುದರಿಂದ ಅವುಗಳನ್ನು ಪ್ರಕಾಶಪಡಿಸುತ್ತಾ ಇಬ್ಬರೂ ಒಟ್ಟಿಗೆ ಬಂದು ಸೋಮರಸವನ್ನು ಪಾನಮಾಡಲಿ ಎಂದು ಪ್ರಾರ್ಥಿಸಿದೆ.

**ಯಾನಿ ವೀರ್ಯಾಣಿ**— ಇಂದ್ರನು ಜನನಕಾಲದಲ್ಲಿಯೇ ತನ್ನ ವೀರ್ಯವನ್ನು ಪ್ರಕಾಶಪಡಿಸುತ್ತಾ ತನ್ನ ಶತ್ರುಗಳು ಯಾರ್ಯಾರೆಂದು ತನ್ನ ಜನನಿಯನ್ನು ಪ್ರಶ್ನಿಸಿದನೆಂದು ಕಥೆಯು ಪ್ರಸಿದ್ಧವಾಗಿದೆ.

**ಆ ಬುಂದಂ ವೃತ್ರಹಾ ದದೇ ಜಾತಃ ಪೃಚ್ಛದ್ವಿಮಾತರಂ ।**
**ಕ ಉಗ್ರಾಃ ಕೇ ಹ ಶೃಣ್ವಿರೇ ॥**

(ಋ. ಸಂ. ೮-೪೫-೪)

ಎಂಬ ಋಕ್ಕಿನಲ್ಲಿ ಇಂದ್ರನು ತನ್ನ ತಾಯಿಯನ್ನು ಪ್ರಶ್ನಿಸಿದ ವಿಷಯವನ್ನು ಹೇಳಿದೆ. ಇದರಂತೆಯೇ ಅಗ್ನಿಯೂ ಸಹ ತನ್ನ ಉತ್ಪತ್ತಿಕಾಲದಲ್ಲಿಯೇ ತನ್ನ ಶಕ್ತಿ ಮತ್ತು ಸೌಂದರ್ಯಗಳೆರಡನ್ನೂ ಪ್ರಕಟಿಸಿದ್ದಾನೆ.

**ಆವಿಷ್ಟ್ಯೋ ವರ್ಧತೇ ಚಾರುರಾಸು ಜಿಹ್ಮಾನಾಮೂರ್ಧ್ವಃ ಸ್ವಯಶಾ ಉಪಸ್ಥೇ ।**
**ಉಭೇ ತ್ವಷ್ಟುರ್ಬಿಭ್ಯತುರ್ಜಾಯಮಾನಾತ್ಪ್ರತೀಚೀ ಸಿಂಹಂ ಪ್ರತಿ ಜೋಷಯೇತೇ ॥**

(ಋ. ಸಂ. ೧-೯೫-೫)

ಎಂಬ ಋಕ್ಕಿನಲ್ಲಿ ಏಕಕಾಲದಲ್ಲಿಯೇ ಚಿತ್ತಾಕರ್ಷಕವಾದ ರಮಣೀಯತೆಯಿಂದಲೂ, ಭೀತಿಯನ್ನುಂಟುಮಾಡುವ ಭೀಮಗುಣಗಳಿಂದಲೂ ಅಗ್ನಿಯು ಪ್ರಕಾಶಿಸುವುದನ್ನು ವರ್ಣಿಸಿದೆ. ಆಕರ್ಷಕ ಸ್ವಭಾವವುಳ್ಳ ಈ ಅಗ್ನಿಯು ಅಪ್ರತಿಹತವಾದ ವೇಗದಿಂದಲೂ ದಾಹದಿಂದಲೂ ಲೋಕವನ್ನಾಕ್ರಮಿಸುವಾಗ ಸಿಂಹದಂತೆ ಭಯಜನಕವಾಗಿರುತ್ತದೆ. ಆದುದರಿಂದಲೇ ದ್ಯಾವಾಪೃಥಿವಿಗಳೆರಡೂ ಈ ಅಗ್ನಿಗೆ ಗೌರವವನ್ನು ಸಲ್ಲಿಸಿ ಸೇವಿಸುತ್ತವೆ. ಮತ್ತು

**ವಿ ಯತ್ತಿರೋ ಧರುಣಮಚ್ಯುತಂ ರಜೋಽತಿಷ್ಠಿಪೋ ದಿವ ಆತಾಸು ಬರ್ಹಣಾ ।**
**ಸ್ವರ್ಮೀಳ್ಹೇ ಯನ್ಮದ ಇಂದ್ರ ಹರ್ಷ್ಯಾಹನ್‌ವೃತ್ರಂ ನಿರಪಾಮೌಬ್ಜೋ ಅರ್ಣವಂ ॥**

(ಋ. ಸಂ. ೧-೫೬-೫)

ಅವಂಶೇ ದ್ಯಾಮಸ್ತಭಾಯದ್ಬೃಹಂತಮಾ ರೋದಸೀ ಅಪೃಣದಂತರಿಕ್ಷಂ ।
ಸ ಧಾರಯತ್ಪೃಥಿವೀಂ ಪಪ್ರಥಚ್ಚ ಸೋಮಸ್ಯ ತಾ ಮದ ಇಂದ್ರಶ್ಚಕಾರ ॥
(ಋ. ಸಂ. ೨-೧೫-೨)

ಜಘಾನ ವೃತ್ರಂ ಸ್ವಧಿತಿರ್ವನೇವ ರುರೋಜ ಪುರೋ ಅರದನ್ನ ಸಿಂಧೂನ್ ।
ಬಿಭೇದ ಗಿರಿಂ ನವಮಿನ್ನ ಕುಂಭಮಾ ಗಾ ಇಂದ್ರೋ ಅಕೃಣುತ ಸ್ವಯುಗ್ಭಿಃ ॥
(ಋ. ಸಂ. ೧೦-೮೯-೭)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿತವಾಗಿರುವ ಯಾವ ವೀರ್ಯ ಕರ್ಮಗಳುಂಟೋ ಅವುಗಳು ಇಂದ್ರನ ವೀರ್ಯಕರ್ಮಗಳು, ಇಂದ್ರಕೃತವಾದವು. ಇದರಂತೆಯೇ,

ವೈಶ್ವಾನರೋ ದಸ್ಯುಮಗ್ನಿರ್ಜಘನ್ವಾँ ಅಧೂನೋತ್ಕಾಷ್ಠಾ ಅವ ಶಂಬರಂ ಭೇತ್ ।
(ಋ. ಸಂ. ೧-೫೯-೬)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿತವಾಗಿರುವ ವೀರ್ಯಕರ್ಮಗಳು ಅಗ್ನಿಕೃತವಾದವು.

**ಯಾನಿ ರೂಪಾಣಿ**--ಇಂದ್ರಾಗ್ನಿಗಳ ಉತ್ಪತ್ತಿಸ್ಥಾನಗಳೇ ರಮ್ಯವಾದವು ಇವರು ತಾವೂ ಸ್ವತಃ ಆಕರ್ಷಕವಾದ ಸ್ವರೂಪವುಳ್ಳವರು ಮತ್ತು ಇವರ ಕರ್ಮಗಳೂ ಸಹ ಸುಂದರವೂ ಆಕರ್ಷಕವೂ ಆದವು.

ಸ ಹಿ ದ್ವರೋ ದ್ವರಿಷು ವವ್ರ ಊಧನಿ ಚಂದ್ರಬುಧ್ನೋ ಮದವೃದ್ಧೋ ಮನೀಷಿಭಿಃ ।
(ಋ. ಸಂ. ೧-೫೨-೩)

ಎಂಬ ಋಕ್ಕಿನಲ್ಲಿ ಇಂದ್ರನಿಗೆ **ಚಂದ್ರಬುಧ್ನಃ** ಎಂಬ ವಿಶೇಷಣದಿಂದ **ಸರ್ವಾಸಾಂ ಪ್ರಜಾನಾಮಾಹ್ಲಾದಕಮೂಲಃ ಅಂತರಿಕ್ಷಸ್ಯ ಸರ್ವಾಹ್ಲಾದಕತ್ವಾತ್ ।** ಸರ್ವರಿಗೂ ಆಹ್ಲಾದವನ್ನುಂಟುಮಾಡುವಷ್ಟು ಆಕರ್ಷಕವಾಗಿರುವ ಅಂತರಿಕ್ಷವೇ ಇಂದ್ರನ ಉತ್ಪತ್ತಿಸ್ಥಾನವಾಗಿದೆ

ಹರಿತ್ವತಾ ವರ್ಚಸಾ ಸೂರ್ಯಸ್ಯ ಶ್ರೇಷ್ಠೈ ರೂಪೈಸ್ತನ್ವಂ ಸ್ಪರ್ಶಯಸ್ವ ।
( ಋ. ಸಂ. ೧೦-೧೧೨-೩ )

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನ ರಮ್ಯವಾದ ದೇಹದ ರೂಪವೂ ವಿಸ್ತೃತಿಯೂ **ಚಂದ್ರಬುಧ್ನ**ವಾದ ಹಿನ್ನೆಲೆಯೂ ಅತ್ಯಂತ ರಮಣೀಯವಾಗಿವೆಯೆಂದು ವರ್ಣಿತವಾಗಿವೆ. ಇದೇ ಅಂತರಿಕ್ಷವು ವಿದ್ಯುದ್ರೂಪನಾದ ಅಗ್ನಿಗೂ ಉತ್ಪತ್ತಿಸ್ಥಾನವು. ಈ ಇಂದ್ರಾಗ್ನಿಗಳಿಬ್ಬರೂ ಸಹ ತಮ್ಮ ಸ್ವಾಭಾವಿಕವಾದ ಸೌಂದರ್ಯದೊಡನೆ ತಮ್ಮ ಕೃತಿಗಳಲ್ಲೂ ಸಹ ತಮ್ಮ ಸೌಂದರ್ಯವನ್ನು ಪ್ರಕಾಶಪಡಿಸಿ ಲೋಕಕ್ಕೆ ಆಹ್ಲಾದವನ್ನುಂಟುಮಾಡುತ್ತಾರೆ. ತಮಸ್ಸು, ಅನ್ನಾಭಾವ, ಶತ್ರುಪೀಡೆ ಇವೆಲ್ಲವೂ ಮಾನವನಿಗೆ ಅತ್ಯಂತವಿಕಾರವಾದ ಸನ್ನಿವೇಶಗಳು, ಈ ವಿಕಾರಗಳನ್ನು ನಾಶಮಾಡಿ ಪ್ರಕಾಶವನ್ನೂ, ಅನ್ನವನ್ನೂ, ಶತ್ರುನಾಶದ ಮೂಲಕ ಸಂರಕ್ಷಣೆಯನ್ನೂ ಕೊಡುವುದರ ಮೂಲಕ ಇಂದ್ರಾಗ್ನಿಗಳು ತಮ್ಮ ಕೃತಿಗಳಲ್ಲೂ **ಸುರೂಪ**ವನ್ನೂ ಪ್ರಕಾಶಗೊಳಿಸಿದರು.

ಕೇತುಂ ಕೃಣ್ವನ್ನಕೇತವೇ ಪೇಶೋ ಮರ್ಯಾ ಅಪೇಶಸೇ ।
ಸಮುಷದ್ಭಿರಜಾಯಥಾಃ ॥
( ಋ. ಸಂ. ೧-೬-೩ )

ಇತ್ಯಾದಿ ಸ್ಥಳಗಳಲ್ಲಿ ಆದಿತ್ಯರೂಪನಾದ ಇಂದ್ರನು ರೂಪರಹಿತವಾದ ಭೂತಗಳಿಗೆಲ್ಲಾ ರೂಪಾವಿಷ್ಕರಣವಾಗುವಂತೆ ಮಾಡಿದನೆಂದು ಸ್ತುತಿಸಿರುವ ಅಂಶವನ್ನು ಇಲ್ಲಿಯೂ ಹೇಳಿದೆ. ಅಗ್ನಿಯೂ ಈ ಆದಿತ್ಯನ ರೂಪದಲ್ಲಿರುವುದರಿಂದ ಅಪ್ರಕಾಶಾತ್ಮಕವಾದ ಲೋಕಕ್ಕೆ ಸುರೂಪವನ್ನುಂಟುಮಾಡುವುದು ಅಗ್ನಿಯ ಕರ್ಮವೂ ಆದುದರಿಂದ ಇಂದ್ರಾಗ್ನಿಗಳ ಸಾಹಚರ್ಯದಿಂದ ಉಂಟಾದ ಈ ಕಾರ್ಯಗಳನ್ನು ಪ್ರಶಂಸಿಸಿದೆ.

**ಯಾ ವಾಂ ಪ್ರತ್ನಾನಿ ಸಖ್ಯಾ**—ಇಂದ್ರಾಗ್ನಿಗಳ ಉತ್ಪತ್ತಿಸ್ಥಾನವು ಸಮಾನವಾದುದರಿಂದಲೂ, ಪೃಥ್ವೀ, ಅಂತರಿಕ್ಷ ಮತ್ತು ದ್ಯುಲೋಕಗಳಲ್ಲೆಲ್ಲಾ ಇವರ ಕರ್ಮಗಳೂ ಸಮಾನವಾದುದರಿಂದಲೂ, ಇವರ ಸಾಹಚರ್ಯವೂ ಸಂಬಂಧವೂ ಶಾಶ್ವತವಾದುದರಿಂದಲೂ ಇವರ ಸಖ್ಯವೂ ಪ್ರತ್ನವಾದುದೆಂದು ಹೇಳಿದೆ. ಇದೇ ಅಲ್ಲದೇ,

**ಕ್ಷತ್ರಂ ವಾ ಇಂದ್ರಾಗ್ನೀ । ವಿಶೋ ವಿಶ್ವೇದೇವಾಃ ।**

( ಶ. ಬ್ರಾ. ೨-೪-೩-೫ )

ಇತ್ಯಾದಿ ವಾಕ್ಯಗಳಲ್ಲಿ ಇಂದ್ರಾಗ್ನಿಗಳ **ಕ್ಷಾತ್ರರೂಪವಾದ** ಸಖ್ಯವನ್ನೂ ।

**ವಾಗ್ವಾ ಅಗ್ನಿಃ ಪ್ರಾಣ ಇಂದ್ರಃ ।**

( ಶ. ಬ್ರಾ. ೬-೧-೨-೨೮ )

ಇತ್ಯಾದಿ ವಾಕ್ಯಗಳಲ್ಲಿ **ವಾಕ್‌ಪ್ರಾಣರೂಪವಾದ** ಸಖ್ಯವನ್ನೂ ಸ್ತುತಿಸಿರುವುದು. ಇಂದ್ರಾಗ್ನಿಗಳ ಈ ಎಲ್ಲಾ ವಿಧವಾದ ಸಖ್ಯಗಳೂ ಲೋಕಕ್ಕೆ ಮಂಗಳಕರಗಳಾಗಿರುವುದರಿಂದ **ಶಿವಾನಿ** ಎಂಬ ವಿಶೇಷಣವನ್ನುಪಯೋಗಿಸಿದೆ.

ವ್ಯಾಕರಣಪ್ರಕ್ರಿಯಾ

**ಚಕ್ರಥುಃ**—ಡುಕೃಞ್ ಕರಣೇ. ಧಾತು. ಲಿಟ್‌ಮಧ್ಯಮ ಪುರುಷದ್ವಿವಚನರೂಪ. ಯಚ್ಛಬ್ದ ಸಂಬಂಧ ವಿರುವುದರಿಂದ **ಯದ್ವೃತ್ತಾನ್ನಿತ್ಯಮ್**—(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ.

**ವೃಷ್ಣ್ಯಾನಿ**—ವೃಷ್ಣಿ ಭವಾನಿ ವೃಷ್ಣ್ಯಾನಿ. **ಭವೇಛಂದಸಿ**—(ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. ಭಸಂಜ್ಞಾ ಇರುವುದರಿಂದ **ಅಲ್ಲೋಪೋಽನಃ** (ಪಾ. ಸೂ. ೬-೪-೧೩೪) ಎಂಬುದರಿಂದ ಉಪಧಾ ಅಕಾರಲೋಪ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪ್ರತ್ನಾನಿ—ನಚ್ಚ ಪುರಾಣೇ ಪ್ರಾತ್** (ಪಾ. ಸೂ. ೫-೪-೨೫-೧) ಎಂಬುದರಿಂದ ಪುರಾಣಾರ್ಥದಲ್ಲಿರುವ ಪ್ರಶಬ್ದಕ್ಕೆ ತ್ನಪ್ ಪ್ರತ್ಯಯ. ಪ್ರಥಮಾ ಬಹುವಚನಾಂತರೂಪ.

**ಸಖ್ಯಾ**— ಸಖ್ಯುರ್ಭಾವಃ ಸಖ್ಯಮ್. **ಸಖ್ಯುರ್ಯಃ** ( ಪಾ. ಸೂ. ೫-೧-೧೨೬ ) ಎಂಬುದರಿಂದ ಯ ಪ್ರತ್ಯಯ. ಜಸಿಗೆ ಶಿ ಆದೇಶಬಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ತೇಭಿಃ**—ತದ್‌ಶಬ್ದ. ಭಿಸ್ ಪರವಾದಾಗ **ತ್ಯದಾದೀನಾಮಃ** (ಪಾ. ಸೂ. ೭-೨-೧೦೨) ಎಂಬುದರಿಂದ ಅತ್ವ ಪರರೂಪ. **ಬಹುಲಂ ಛಂದಸಿ** (ಪಾ. ಸೂ. ೭-೧-೧೦) ಎಂಬುದರಿಂದ ಭಿಸಿಗೆ ಐಸ್ ಬರುವುದಿಲ್ಲ. ಏತ್ವ. ಏಕಾಚಾದುದರಿಂದ **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಪ್ರಾಪ್ತವಾದಾಗ **ನಗೋಶ್ವನ್‌ಸಾವವರ್ಣೇ** ( ಪಾ. ಸೂ. ೬-೧-೧೮೨ ) ಎಂಬುದರಿಂದ ಪುನಃ ನಿಷೇಧ ಬರುತ್ತದೆ. ॥ ೫ ॥

——:೦:——

ಸಂಹಿತಾಪಾಠಃ

ಯದಬ್ರವಂ ಪ್ರಥಮಂ ವಾಂ ವೃಣಾನೋ೩ಽಯಂ ಸೋಮೋ
ಅಸುರೈರ್ನೋ ವಿಹವ್ಯಃ ।
ತಾಂ ಸತ್ಯಾಂ ಶ್ರದ್ಧಾಮಭ್ಯಾ ಹಿ ಯಾತಮಥಾ ಸೋಮಸ್ಯ
ಪಿಬತಂ ಸುತಸ್ಯ ॥ ೬ ॥

ಪದಪಾಠಃ

ಯತ್ । ಅಬ್ರವಂ । ಪ್ರಥಮಂ । ವಾಂ । ವೃಣಾನಃ । ಅಯಂ । ಸೋಮಃ ।
ಅಸುರೈಃ । ನಃ । ವಿಽಹವ್ಯಃ ।
ತಾ । ಸತ್ಯಾಂ । ಶ್ರದ್ಧಾಂ । ಅಭಿ । ಆ । ಹಿ । ಯಾತಂ । ಅಥ । ಸೋಮಸ್ಯ । ಪಿಬ-
ತಂ । ಸುತಸ್ಯ ॥ ೬ ॥

ಸಾಯಣಭಾಷ್ಯಂ

ಹೇ ಇಂದ್ರಾಗ್ನೀ ಪ್ರಥಮಂ ಕರ್ಮೋಪಕ್ರಮ ಏವ ವಾಂ ಯುವಾಂ ವೃಣಾನಃ ಸಂಭಜಮಾನೋ ಯದಬ್ರವಂ ಸೋಮೇನ ಪ್ರೀಣಯಿಷ್ಯಾಮೀತಿ ಯದವೋಚಂ ಸತ್ಯಾಂ ಯಥಾರ್ಥಾಂ ತಾಂ ಶ್ರದ್ಧಾಂ ಶ್ರದ್ಧಯಾದರಾತಿಶಯೇನ ಕೃತಾಮುಕ್ತಿಮಭ್ಯಭಿಲಕ್ಷ್ಯಾ ಹಿ ಯಾತಂ । ಆಗಚ್ಛತಮೇವ ನೋದಾಸಾಥಾಂ । ಅಥಾಗಮನಾನಂತರಮಭಿಷುತಂ ಸೋಮಂ ಪಿಬತಂ। ತಥಾ ಸತ್ಯಸುರೈರ್ಹವಿಷಾಂ ಪ್ರಕ್ಷೇಪಕೈರ್ಋತ್ವಿಗ್ಭಿರಯಂ ನೋಽಸ್ಮಾಕಂ ಸೋಮೋ ವಿಹವ್ಯೋ ವಿಶೇಷೇಣ ಹೋತವ್ಯೋ ಭವತಿ । ಇತರಥಾ ವ್ಯರ್ಥಃ ಸ್ಯಾತ್ । ತಸ್ಮಾದಿಂದ್ರಾಗ್ನೀ ಆಗಚ್ಛತಮಿತ್ಯರ್ಥಃ ॥ ವೃಣಾನಃ । ವೃಞ್ ಸಂಭಕ್ತೌ । ಲಟಃ ಶಾನಚ್ । ಶ್ನಾಭ್ಯಸ್ತಯೋರಾತ ಇತ್ಯಾಕಾರಲೋಪಃ । ಅಸುರೈಃ । ಅಸು ಕ್ಷೇಪಣೇ । ಅಸೇರುರನ್ । ಉ. ೧-೪೩ । ಇತ್ಯುರನ್ಪ್ರತ್ಯಯಃ । ವಿಹವ್ಯಃ । ಹುದಾನಾದನಯೋಃ । ಅಚೋ ಯತ್ । ಗುಣಃ । ಧಾತೋಸ್ತನ್ನಿಮಿತ್ತಸ್ಯೈವೇತ್ಯವಾದೇಶಃ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ ॥

ಪ್ರತಿಪದಾರ್ಥ

**ಪ್ರಥಮಂ**—(ಎಲೈ ಇಂದ್ರಾಗ್ನಿಗಳೇ) ಯಜ್ಞಕರ್ಮಕ್ಕೆ ಮೊದಲೇನೇ । **ವಾಂ**—ನಿಮ್ಮನ್ನು ಉದ್ದೇಶಿಸಿ । **ವೃಣಾನಃ**—ಪೂಜಿಸುತ್ತಾ । **ಯದಬ್ರವಂ**—(ನಿಮ್ಮನ್ನು ಸೋಮರಸದಿಂದ ತೃಪ್ತಿಗೊಳಿಸುತ್ತೇನೆ ಎಂದು) ಯಾವ ಪ್ರತಿಜ್ಞಾಪೂರ್ವಕವಾದ ವಾಕ್ಯವನ್ನು ಹೇಳಿದೆನೋ । **ಸತ್ಯಾಂ**—ಯಥಾರ್ಥವಾದ (ಮತ್ತು) । **ತಾಂ ಶ್ರದ್ಧಾಂ**—ಶ್ರದ್ಧಾಪೂರ್ವಕವಾಗಿ ಹೇಳಿದ ಆ ಉಕ್ತಿಯನ್ನೇ । **ಅಭಿ**— ಗಮನಿಸಿ । **ಆ ಹಿ ಯಾತಂ**— ಬಂದಿತವಾಗಿಯೂ ದಯಮಾಡಿರಿ । **ಅಥ**—ಅನಂತರ । **ಸುತಸ್ಯ**—ಹಿಂಡಿರುವ । **ಸೋಮಸ್ಯ**—ಸೋಮರಸದ (ನಿಮ್ಮ ಭಾಗವನ್ನು) । **ಪಿಬತಂ**—ಕುಡಿಯಿರಿ । **ಅಸುರೈಃ**— ಋತ್ವಿಕ್ಕುಗಳಿಂದ । **ನಃ**— ನಮ್ಮ । **ಅಯಂ ಸೋಮಃ**— ಈ ಸೋಮರಸವು । **ವಿಹವ್ಯಃ**—ಹೋಮಕ್ಕೆ ಯೋಗ್ಯವಾಗಿ ಮಾಡಲ್ಪಟ್ಟಿದೆ ॥

ಭಾವಾರ್ಥ

ಎಲೈ ಇಂದ್ರಾಗ್ನಿಗಳೇ, ಯಜ್ಞಕರ್ಮಕ್ಕೆ ಮೊದಲೇನೇ ನಿಮ್ಮನ್ನು ಪೂಜಿಸುತ್ತಾ "ನಿಮನ್ನು ಸೋಮರಸದ ಅರ್ಪಣೆಯಿಂದ ತೃಪ್ತಿಗೊಳಿಸುತ್ತೇನೆ" ಎಂದು ಯಾವ ಪ್ರತಿಜ್ಞಾಪೂರ್ವಕವಾದ ವಾಕ್ಯವನ್ನು ನಾನು ಹೇಳಿದೆನೋ, ಯಥಾರ್ಥವಾದುದೂ ಮತ್ತು ಶ್ರದ್ಧಾಪೂರ್ವಕವಾಗಿ ಹೇಳಿದುದೂ ಆದ ನನ್ನ ಆ ಮಾತನ್ನೇ ಗಮನಿಸಿ ಖಂಡಿತವಾಗಿಯೂ ನಮ್ಮ ಯಜ್ಞಕ್ಕೆ ದಯಮಾಡಿರಿ. ನಮ್ಮ ಈ ಸೋಮರಸವು ಋತ್ವಿಕ್ಕುಗಳಿಂದ ಹೋಮಕ್ಕೆ ಯೋಗ್ಯವಾದುದಾಗಿ ಮಾಡಲ್ಪಟ್ಟಿದೆ. ನೀವು ಬಂದು ಹಿಂಡಿರುವ ಈ ಸೋಮರಸದ ನಿಮ್ಮ ಭಾಗವನ್ನು ಕುಡಿಯಿರಿ.

English Translation

Come and witness the sincere faith with which, selecting you two, I first promised (you the libation); drink of the effused libation, for the Soma juice is prepared by the priests.

॥ ವಿಶೇಷವಿಷಯಗಳು ॥

**ಅಸುರೈಃ**—**ಹವಿಷಾಂ ಪ್ರಕ್ಷೇಪಕೈಃ ಋತ್ವಿಗ್ಭಿಃ** ಹವಿಸ್ಸನ್ನು ಬೀಳಿಸುವ (ಅರ್ಪಿಸುವ) ಋತ್ವಿಕ್ಕುಗಳಿಂದ ಎಂದು ಸಾಯಣರೂ, **ಅಸುರಿತಿ ಪ್ರಾಣನಾಮ,** (ನಿ. ೩-೮) **ತದ್ವಂತಃ ಅಸುರಾಃ ಋತ್ವಿಜಃ** ಪ್ರಾಣವುಳ್ಳವರು ಋತ್ವಿಕ್ಕುಗಳು ಆದ್ದರಿಂದ ಅಸುರೈಃ ಎಂದರೆ ಋತ್ವಿಕ್ಕುಗಳಿಂದ ಎಂದು ಸ್ಕಂದಸ್ವಾಮಿಗಳೂ ವಿವರಿಸಿದ್ದಾರೆ.

ಅಸುರ ಶಬ್ದವು ಪುರಾಣಾದಿಗಳಲ್ಲಿ **ರಾಕ್ಷಸ** ಶಬ್ದದ ಪರ್ಯಾಯವಾಗಿದೆ. ಆದರೆ ಋಕ್ಸಂಹಿತೆಯಲ್ಲಿ ನಾನಾರ್ಥಗಳಲ್ಲಿ ಈ ಶಬ್ದದ ಪ್ರಯೋಗವಿದೆ. ಅಸುವೆಂದರೆ **ಪ್ರಾಣ, ಪ್ರಜ್ಞಾ** ಎನಿಸುವುದು ಇತ್ಯಾದಿ ಅನೇಕ ಅರ್ಥಗಳಿರುವದರಿಂದ **ಅಸುರ** ಶಬ್ದವೂ ಈ ಅರ್ಥಗಳಿಗನುಸಾರವಾಗಿ ಭಿನ್ನಭಿನ್ನವಾಗಿ ಉಪಯೋಗಿಸಲ್ಪಟ್ಟಿದೆ. ಅದನ್ನು ಸಂದರ್ಭಾನುಸಾರವಾಗಿ ಅನ್ವಯಮಾಡಿ ಅರ್ಥಮಾಡಿಕೊಳ್ಳಬೇಕು.

ಬೃಹಚ್ಛ್ರವಾ ಅಸುರೋ ಬರ್ಹಣಾ ಕೃತಃ ಪುರೋ ಹರಿಭ್ಯಾಂ ವೃಷಭೋ ರಥೋ ಹಿ ಷಃ ।
(ಋ. ಸಂ. ೧-೫೪-೩)

ಎಂಬ ಋಕ್ಕಿನಲ್ಲಿ ಅಸುರ ಶಬ್ದವು ಇಂದ್ರನಿಗೆ ವಿಶೇಷಣವಾಗಿದೆ. ಇಲ್ಲಿ **ಅಸುರಃ ಶತ್ರೂಣಾಂ ನಿರಸಿತಾ । ಯದ್ವಾ। ಅಸುಃ ಪ್ರಾಣೋ ಬಲಂ ವಾ ತದ್ವಾನ್ । ರೋ ಮತ್ವರ್ಥೀಯಃ । ಅಥವಾ ಅಸವಃ ಪ್ರಾಣಾಃ ತೇನ ಚ ಆಪೋ ಲಕ್ಷ್ಯಂತೇ । ತಾನ್ ರಾತಿ ದದಾತೀತಿ ಅಸುರಃ ।** ಶತ್ರುಗಳನ್ನು ದೂಡುವವನು ಅಥವಾ **ಅಸು** ಶಬ್ದಕ್ಕೆ ಪ್ರಾಣ, ಬಲ ಎಂಬರ್ಥಗಳಿರುವುದರಿಂದ ಪ್ರಾಣವುಳ್ಳವನು, ಅಥವಾ ಬಲವುಳ್ಳವನು, ಅಥವಾ **ಅಸವಃ** ಎಂದರೆ ಉದಕಗಳು. ಅವುಗಳನ್ನು ಕೊಡುವವನಾದ್ದರಿಂದ **ಅಸುರ** ಎಂದು ಇಂದ್ರನಿಗೆ ಈ ವಿಧವಾದ ನಾನಾಶಕ್ತಿಗಳಿರುವುದರಿಂದ ಈ ಎಲ್ಲಾ ಅರ್ಥಗಳಲ್ಲಿಯೂ ಈ ಶಬ್ದವು ಇಂದ್ರನಿಗೆ ವಿಶೇಷಣವಾಗಬಹುದು. ಇದರಂತೆಯೇ,

**ಕ್ಷಯನ್ನಸ್ಮಭ್ಯಮಸುರ ಪ್ರಚೇತಾ ರಾಜನ್ನೇನಾಂಸಿ ಶಿಶ್ರಥಃ ಕೃತಾನಿ ।**
(ಋ. ಸಂ. ೧-೨೪-೧೪)

ಎಂಬ ಋಕ್ಕಿನಲ್ಲಿ **ಅನಿಷ್ಟಕ್ಷೇಪಣಶೀಲಃ** ಅನಿಷ್ಟವನ್ನು ನಾಶಮಾಡುವವನಾದ್ದರಿಂದ **ವರುಣನಿಗೆ** ಅಸುರನೆಂಬ ವಿಶೇಷಣವೂ, ಹೀಗೆಯೇ ಇದೇ ಅರ್ಥದಲ್ಲಿ,

**ತ್ವಮಗ್ನೇ ರುದ್ರೋ ಅಸುರಃ ಮಹೋ ದಿವಸ್ತ್ವಂ ಶರ್ಧೋ ಮಾರುತಂ ಪೃಕ್ಷ ಈಶಿಷೇ ।**
(ಋ. ಸಂ. ೨-೧-೬)

ಎಂಬಲ್ಲಿ **ಅಗ್ನಿಗೂ** ಇದೇ ರೀತಿಯಲ್ಲಿ ಅನೇಕಕಡೆಗಳಲ್ಲಿ ಇಂದ್ರ, ವರುಣ, ಅಗ್ನಿ ಇತ್ಯಾದಿ ದೇವತೆಗಳಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ-

**ವಿ ಸುಪರ್ಣೋ ಅಂತರಿಕ್ಷಾಣ್ಯಖ್ಯದ್ಗಭೀರವೇಪಾ ಅಸುರಃ ಸುನೀಥಃ ।**
(ಋ. ಸಂ. ೧-೩೫-೭)

ಈ ಋಕ್ಕಿನಲ್ಲಿ **ಅಸುರಃ** ಎಂದರೆ **ಪ್ರಾಣದಾತನಾದ** ಎಂದೂ ಸೂರ್ಯನಿಗೂ,

**ಪೃಷದ್ಯೋನಿಃ ಪಂಚಹೋತಾ ಶೃಣೋತ್ವತೂರ್ತಪಂಥಾ ಅಸುರೋ ಮಯೋಭುಃ ।**
(ಋ. ಸಂ. ೫-೪೨-೧)

ಎಂಬಲ್ಲಿ **ಪ್ರಾಣದಾತನಾದ** ಎಂದು ವಾಯುವಿಗೂ ವಿಶೇಷಣವಾಗಿದೆ.

**ಘೃತಪ್ರಸತ್ತೋ ಅಸುರಃ ಸುಶೇವೋ ರಾಯೋ ಧರ್ತಾ ಧರುಣೋ ವಸ್ವೋ ಅಗ್ನಿಃ ।**
(ಋ. ಸಂ. ೫-೧೫-೧)

**ನ್ಯಗ್ನಿಃ ಸೀದದಸುರೋ ನ ಹೋತಾ ಹುವಾನೋ ಅತ್ರ ಸುಭಗಾಯ ದೇವಾನ್ ।**
(ಋ. ಸಂ. ೭-೩೦-೩)

ಇತ್ಯಾದಿ ಋಕ್ಕುಗಳಲ್ಲಿ **ಬಲವಾನ್** ಎಂದರ್ಥವೂ,

**ಅಸ್ಮೇ ವೀರೋ ಮರುತಃ ಶುಷ್ಮ್ಯಸ್ತು ಜನಾನಾಂ ಯೋ ಅಸುರೋ ವಿಧರ್ತಾ ।**
(ಋ. ಸಂ. ೭-೫೬-೨೪)

ಇತ್ಯಾದಿಗಳಲ್ಲಿ **ಪ್ರಜ್ಞಾವಾನ್** ಎಂದೂ,

ಶತಂ ಕಕ್ಷೀವಾँ ಅಸುರಸ್ಯ ಗೋನಾಂ ದಿವಿ ಶ್ರವೋಽಜರಮಾ ತತಾನ ।
(ಋ. ಸಂ. ೧-೧೨೬-೨)

ಎಂಬ ಋಕ್ಕಿನಲ್ಲಿ ದಾನಶೀಲನೆಂದೂ,

ತ್ರಿರುತ್ತಮಾ ದೂಣಶಾ ರೋಚನಾನಿ ತ್ರಯೋ ರಾಜಂತ್ಯಸುರಸ್ಯ ವೀರಾಃ ।
(ಋ. ಸಂ. ೩-೫೬-೮)

ಎಂಬಲ್ಲಿ ಅಸ್ಯತಿ ಕ್ಷಿಪತಿ ಸರ್ವಮಿತ್ಯಸುರಃ ಕಾಲಾತ್ಮಾ ಸಂವತ್ಸರಃ ಎಂದು ಕಾಲ ಪರ್ಯಾಯವಾಗಿಯೂ

ಯಥಾ ರುದ್ರಸ್ಯ ಸೂನವೋ ದಿವೋ ವಶಂತ್ಯಸುರಸ್ಯ ವೇಧಸಃ ।
(ಋ. ಸಂ. ೮-೨೦-೧೭)

ಇತ್ಯಾದಿ ಸ್ಥಳಗಳಲ್ಲಿ ಮೇಘ ಎಂಬರ್ಥವೂ

ಅನಾಯುಧಾಸೋ ಅಸುರಾ ಅದೇವಾಶ್ಚಕ್ರೇಣ ತಾँ ಅಪ ವಪ ಋಜೀಷಿನ್ ।
(ಋ. ಸಂ. ೮-೯೬-೯)

ಪರೋ ದಿವಾ ಪರ ಏನಾ ಪೃಥಿವ್ಯಾ ಪರೋ ದೇವೇಭಿರಸುರೈರ್ಯದಸ್ತಿ ।
(ಋ. ಸಂ ೧೦-೮೨-೫)

ಇತ್ಯಾದಿ ಋಕ್ಕುಗಳಲ್ಲಿ ಅಸುರರೆಂದರೆ ರಾಕ್ಷಸ ಗುಂಪಿಗೆ ಸೇರಿದ ದೈತ್ಯರೆಂದೂ ಅರ್ಥವಾಗಿ ಪ್ರಕೃತವಾದ ಋಕ್ಕಿನಲ್ಲಿ ಮೇಲೆಯೇ ಹೇಳಿರುವಂತೆ ಋತ್ವಿಕ್ಕುಗಳೆಂದು ಅರ್ಥವಾಗುತ್ತದೆ.

ವಿಹವ್ಯಃ—ವಿಶೇಷೇಣ ಹೋತವ್ಯೋ ಭವತಿ—ಅತಿಶಯವಾಗಿ ಹೋಮಮಾಡಲು ಸಂಸ್ಕೃತವಾದುದೂ ಯೋಗ್ಯವಾದುದೂ ಆಗಿರುತ್ತದೆ.

ಸತ್ಯಾಂ ಶ್ರದ್ಧಾಂ— ಸತ್ಯಾತ್ಮಕವಾದುದೂ, ಶ್ರದ್ಧಾಭಕ್ತಿಗಳಿಂದ ಕೂಡಿದುದೂ ಆದ ಯಜ್ಞಕ್ಕೆ ಪೂರ್ವಭಾವಿಯಾದ ಸಂಕಲ್ಪವನ್ನು ಲಕ್ಷಿಸಿ ಯಜ್ಞದಲ್ಲಿ ಸೋಮರಸದ ಪಾನಕ್ಕೆ ಬರಬೇಕೆಂದು ಇಂದ್ರಾಗ್ನಿಗಳನ್ನು ಪ್ರಾರ್ಥಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

ಅಬ್ರವಮ್—ಬ್ರೂಞ್ ವ್ಯಕ್ತಾಯಾಂ ವಾಚಿ. ಧಾತು. ಲಙ್ ಉತ್ತಮಪುರುಷ ಏಕವಚನದಲ್ಲಿ ಮಿಪ್ ಪ್ರತ್ಯಯ. ಥಸ್ಥಸ್ಥ—(ಪಾ. ಸೂ. ೩-೪-೧೦೧) ಎಂಬುದರಿಂದ ಅದಕ್ಕೆ ಅಮಾದೇಶ. ಅದಿಪ್ರಭೃತಿಭ್ಯಃ ಶಪಃ (ಪಾ. ಸೂ. ೨-೪-೭೨) ಎಂಬುದರಿಂದ ಶಪಿಗೆ ಲುಕ್. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಅವಾದೇಶ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಂಗಕ್ಕೆ ಬಂದಿರುವ ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

ವೃಣಾನಃ—ವೃಙ್ ಸಂಭಕ್ತೌ. ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಕ್ರ್ಯಾದಿಭ್ಯಃ ಶ್ನಾ (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾವಿಕರಣ. ಪ್ರತ್ಯಯಕ್ಕೆ ಙಿತ್ತ್ವಾತಿದೇಶವಿರುವುದರಿಂದ ಶ್ನಾಭ್ಯಸ್ತಯೋರಾತಃ —(ಪಾ. ಸೂ. ೬-೪-೧೧೨) ಎಂಬುದರಿಂದ ವಿಕರಣದ ಆಕಾರಕ್ಕೆ ಲೋಪ. ಪ್ರತ್ಯಯ ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಅಸುರ್ಯೈಃ**—ಅಸು ಕ್ಷೇಪಣೇ. ಧಾತು. **ಅಸೇರುರನ್**—(ಉ. ಸೂ. ೧-೪೨) ಎಂಬುದರಿಂದ ಉರನ್ ಪ್ರತ್ಯಯ. ಅಸುರ ಎಂದು ರೂಪವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾಬಹುವಚನಾಂತರೂಪ.

**ವಿಹವ್ಯಃ**—ಹು ದಾನಾದನಯೋಃ ಧಾತು. **ಅಚೋಯತ್**—(ಪಾ. ಸೂ. ೩-೧-೯೭) ಎಂಬುದರಿಂದ ಇದಕ್ಕೆ ಯತ್‌ಪ್ರತ್ಯಯ. ತನ್ನಿಮಿತ್ತವಾಗಿ **ಸಾರ್ವಧಾತುಕಾರ್ಧ**—(ಪಾ. ಸೂ. ೭-೩-೮೪) ಎಂಬುದರಿಂದ ಧಾತು ವಿನ ಇಕಿಗೆ ಗುಣ. ಯನಿಮಿತ್ತವಾಗಿ ಓಕಾರ ಬಂದಿರುವುದರಿಂದ **ಧಾತೋಸ್ತನ್ನಿಮಿತ್ತಸ್ಯೈವ**—(ಪಾ. ಸೂ. ೬-೧-೮೦) ಎಂಬುದರಿಂದ ಓಕಾರಕ್ಕೆ ಅವಾದೇಶ. ಹವ್ಯ ಎಂದು ರೂಪವಾಗುತ್ತದೆ. **ಯತೋಽನಾವಃ**—(ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ವಿ ಎಂಬ ಗತಿಯೊಡನೆ ಸಮಾಸವಾದಾಗ **ಗತಿಕಾರಕೋಪಪದಾತ್ ಕೃತ್**—(ಪಾ. ಸೂ ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅಥ**—**ನಿಪಾತಸ್ಯ ಚ**—(ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ. ॥೬॥



ಸಂಹಿತಾಪಾಠಃ

ಯದಿಂದ್ರಾಗ್ನೀ ಮದಥಃ ಸ್ವೇ ದುರೋಣೇ ಯದ್ಬ್ರಹ್ಮಣಿ ರಾ-
ಜನಿ ವಾ ಯಜತ್ರಾ ।
ಅತಃ ಪರಿ ವೃಷಣಾವಾ ಹಿ ಯಾತಮಥಾ ಸೋಮಸ್ಯ ಪಿಬತಂ
ಸುತಸ್ಯ ॥ ೭ ॥

ಪದಪಾಠಃ

ಯತ್ । ಇಂದ್ರಾಗ್ನೀ ಇತಿ । ಮದಥಃ । ಸ್ವೇ । ದುರೋಣೇ । ಯತ್ । ಬ್ರಹ್ಮಣಿ ।
ರಾಜನಿ । ವಾ । ಯಜತ್ರಾ ।

ಅತಃ । ಪರಿ । ವೃಷಣೌ । ಆ । ಹಿ । ಯಾತಂ । ಅಥ । ಸೋಮಸ್ಯ । ಪಿಬತಂ ।

ಸುತಸ್ಯ ॥ ೭ ॥

ಸಾಯಣಭಾಷ್ಯಂ

ಯಜತ್ರಾ ಯಷ್ಟವ್ಯೌ ಹೇ ಇಂದ್ರಾಗ್ನೀ ಸ್ವೇ ದುರೋಣೇ ಸ್ವಕೀಯೇ ಗೃಹೇ ನಿವಾಸಸ್ಥಾನೇ ಯದ್ಯದಿ ಮದಥಃ ಹೃಷ್ಯಥಃ । ಯದ್ಯದಿ ವಾ ಬ್ರಹ್ಮಣಿ ಬ್ರಾಹ್ಮಣೇಽನ್ಯಸ್ಮಿನ್ಯಜಮಾನೇ ಹವಿಃಸ್ವೀಕರಣಾಯಾಗತ್ಯ ಹೃಷ್ಯಥಃ । ಯದಿ ವಾ ರಾಜನಿ ಕ್ಷತ್ರಿಯೇ ಯುದ್ಧೇ ಸಹಾಯ್ಯಂ ಕರ್ತುಮಾಗತ್ಯ ಹೃಷ್ಯಥಃ । ಅತಃ ಪರಿ ಪರಿತೋಽಸ್ಮಾತ್ಸರ್ವಸ್ಮಾತ್ಸ್ಥಾನಾತ್ ಹೇ ವೃಷಣೌ ಕಾಮಾನಾಂ ವರ್ಷಿತಾರಾವಿಂದ್ರಾಗ್ನೀ ಆ ಯಾತಂ ಹಿ । ಆಗಚ್ಛತಮೇವ । ಔದಾಸೀನ್ಯಂ ಮಾ ಕಾರ್ಷ್ಟಂ । ಅನ್ಯತ್ಪೂರ್ವವತ್ ॥ ಮದಥಃ । ಮದೀ ಹರ್ಷೇ । ವ್ಯತ್ಯಯೇನ ಶಪ್ । ಯಜತ್ರಾ । ಅಮಿನಕ್ಷೀತ್ಯಾದಿನಾ ಯಜತೇಃ ಕರ್ಮಣ್ಯತ್ರನ್ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ ॥

ಪ್ರತಿಪದಾರ್ಥ

**ಯಜತ್ರಾ**— ಯಜ್ಞಾರ್ಹರಾದ । **ಇಂದ್ರಾಗ್ನೀ**— ಎಲೈ ಇಂದ್ರಾಗ್ನಿಗಳೇ । **ಸ್ವೇ ದುರೋಣೇ**— ನಿಮ್ಮ ಸ್ವಗೃಹದಲ್ಲೇ । **ಯತ್**— ಒಂದು ವೇಳೆ । **ಮದಥಃ**— ಹರ್ಷಗೊಂಡಿದ್ದರೂ ಸರಿ । **ಯತ್ ವಾ**— ಅಥವಾ ಒಂದು ವೇಳೆ । **ಬಹ್ಮಣಿ**— ಇತರ ಬ್ರಾಹ್ಮಣರ ಮನೆಯಲ್ಲಿ (ಹವಿಸ್ಸಿನ ಸ್ವೀಕಾರಕ್ಕಾಗಿ ಹೋಗಿದ್ದರೂ ಸಹ) ಅಥವಾ । **ರಾಜನಿ**— ಕ್ಷತ್ರಿಯನಿಗೆ ಯುದ್ಧದಲ್ಲಿ ಸಹಾಯಕ್ಕಾಗಿ ಬಂದು (ಸಂತೋಷಪಡುತ್ತಿದ್ದರೂ ಸಹ) **ಅತಃ ಪರಿ**— ಈ ಎಲ್ಲಾ ಸ್ಥಳಗಳಿಂದಲೂ । **ವೃಷಣೌ**— ಇಷ್ಟಾರ್ಥಗಳನ್ನು ಸುರಿಸತಕ್ಕ ನೀವುಗಳು । **ಆ ಯಾತಂ ಹಿ**— ಖಂಡಿತವಾಗಿಯೂ (ನಮ್ಮ ಯಜ್ಞಗೃಹಕ್ಕೂ) ಬನ್ನಿರಿ । **ಅಥ**— ಇಲ್ಲಿ ಬಂದು । **ಸುತಸ್ಯ**— ಹಿಂಡಿರತಕ್ಕ । **ಸೋಮಸ್ಯ**— ಸೋಮರಸವನ್ನು । **ಪಿಬತಂ**— ಕುಡಿಯಿರಿ.

॥ ಭಾವಾರ್ಥ ॥

ಯಜ್ಞಾರ್ಹರೂ, ಇಷ್ಟಾರ್ಥವನ್ನು ಸುರಿಸುವವರೂ ಆದ ಎಲೈ ಇಂದ್ರಾಗ್ನಿಗಳೇ, ನೀವು ನಿಮ್ಮ ಸ್ವಗೃಹದಲ್ಲಿಯೇ ಹರ್ಷಪಡುತ್ತಿದ್ದರೂ ಸರಿ, ಅಥವಾ ಇತರ ಬ್ರಾಹ್ಮಣನ ಯಜ್ಞಗೃಹದಲ್ಲಿ ಹವಿಸ್ಸನ್ನು ಸ್ವೀಕರಿಸಲು ಹೋಗಿ ಸಂತೋಷಪಡುತ್ತಿದ್ದರೂ ಸರಿ, ಅಥವಾ ಇತರ ಇತರ ಕ್ಷತ್ರಿಯನ ಸಹಾಯಾರ್ಥವಾಗಿ ಯುದ್ಧದಲ್ಲಿ ಹರ್ಷಪಡುತ್ತಿದ್ದರೂ ಸರಿ, ಇಲ್ಲಿಯೂ ನಮ್ಮ ಯಜ್ಞಗೃಹದಲ್ಲಿ ಬಂದು ನಾವು ಹಿಂಡಿರತಕ್ಕ ಸೋಮರಸವನ್ನು ಕುಡಿಯಿರಿ.

English Translation

If, adorable Indra and Agni, you have ever been delighted ( with libations ) in your own dwelling, in that of a Brahman, or in that of a prince, then, showers of benefits, come hither from wherever you may be, and drink of the effussed libation.

### ವಿಶೇಷವಿಷಯಗಳು

**ದುರೋಣೇ**— ದುರೋಣಶಬ್ದವು ಗೃಹನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) **ದುರೋಣೇ** ಎಂದರೆ ಗೃಹದಲ್ಲಿ ಎಂದರ್ಥ. ಸಾಧಾರಣವಾಗಿ **ಯಜ್ಞಗೃಹದಲ್ಲಿ** ಎಂಬರ್ಥದಲ್ಲಿಯೇ ಉಪಯೋಗಿಸಿದೆ.

**ಸ್ವೇ ದುರೋಣೇ ಮದಥಃ- ಸ್ವಕೀಯೇ ಗೃಹೇ** ಎಂದು ಏಕವಚನವಿರುವುದರಿಂದ ಇಬ್ಬರ ಗೃಹವೂ ಒಂದೇ ಆಗಿರುತ್ತದೆ. ಹಿಂದಿನ ಋಕ್ಕುಗಳಲ್ಲಿ ವಿವರಿಸಿರುವಂತೆ ಪೃಥಿವ್ಯಂತರಿಕ್ಷಗಳಲ್ಲೂ ದ್ಯುಲೋಕದಲ್ಲೂ ಇಂದ್ರಾಗ್ನಿಗಳ ಸಮಾನವಾದ ಮಾತಾಪಿತೃತ್ವವೂ ಸಾಹಚರ್ಯವೂ ಪ್ರಸಿದ್ಧವಾಗಿರುವುದರಿಂದ ಇಬ್ಬರ ವಾಸಸ್ಥಾನವೂ ಒಂದೇ ಎಂದು ಸ್ವೇ ದುರೋಣೇ ಎಂದು ಏಕವಚನವಿದೆ

**ಸಮಾನೋ ವಾಂ ಜನಿತಾ ಭ್ರಾತರಾ ಯುವಂ ಯಮಾವಿಹೇಹಮಾತರಾ ।**
(ಋ. ಸಂ. ೬.೫೯.೨)

ಇತ್ಯಾದಿ ಋಕ್ಕುಗಳಲ್ಲಿಯೂ ಹಿಂದಿನ ಋಕ್ಕುಗಳಲ್ಲಿ ಉದಹರಿಸಿರುವ ಋಕ್ಕುಗಳಲ್ಲಿಯೂ ಸಹ ಇಂದ್ರಾಗ್ನಿಗಳ ಸಮಾನವಾದ ಸ್ಥಾನವು ಸೂಚಿತವಾಗಿದೆ.

**ಯದ್ಬ್ರಹ್ಮಣಿ—ಬ್ರಾಹ್ಮಣೇ ಅನ್ಯಸ್ಮಿನ್ಯಜಮಾನೇ ಹವಿಃಸ್ವೀಕರಣಾಯಾಗತ್ಯ ಹೃಷ್ಯಥಃ ।** ಪ್ರಕೃತವಾದ ಯಜ್ಞಕರ್ತರಲ್ಲದೇ ಇತರ ಯಜಮಾನರ ಯಜ್ಞಗೃಹದಲ್ಲಿಯೂ ಸಹ ಹವಿಃಸ್ವೀಕಾರಕ್ಕಾಗಿ ಹೋಗಿದ್ದರೂ ಸೋಮರಸಪಾನದಿಂದ ಹರ್ಷಚಿತ್ತರಾಗಿ ಇದ್ದರೂ ಸಹ.

ರಾಜನಿ ವಾ— **ಕ್ಷತ್ರಿಯೇ ಯುದ್ಧೇ ಸಾಹಾಯ್ಯಂ ಕರ್ತುಂ** ಇತರ ಕ್ಷತ್ರಿಯನ ಯುದ್ಧದಲ್ಲಿ ಸಹಾಯಕ್ಕಾಗಿ ಹೋಗಿದ್ದರೂ ಮತ್ತು ಆ ಯುದ್ಧದಿಂದ ಹರ್ಷವನ್ನು ಪಡೆಯುತ್ತಿದ್ದರೂ ಸಹ, ಎಂದರೆ ಯುದ್ಧದಲ್ಲಿ ಜಯಿಸಿ ತಾನು ಸ್ವಾತಂತ್ರ್ಯವನ್ನನುಭವಿಸುತ್ತಿರುವಾಗ ದೇವತೆಗಳಾಗಲಿ ಮಾನವರಾಗಲಿ ಆ ಸ್ವಾತಂತ್ರ್ಯಕ್ಕೂ ಸಂತೋಷಕ್ಕೂ ತಡೆಯನ್ನು ಮಾಡುವುದಕ್ಕಾಗುವುದಿಲ್ಲ. (ಋ. ಸಂ. ೮-೭೦.೩) ಇತ್ಯಾದಿ ಋಕ್ಕುಗಳಲ್ಲಿ ಇಂತಹ ಸ್ವಾತಂತ್ರ್ಯದ ಹರ್ಷಿತವು ವರ್ಣಿತವಾಗಿದೆ). ಆದರೂ ಸಹ ನಮ್ಮ ಯುಜ್ಞದಲ್ಲಿ ಭಾಗವಹಿಸಬೇಕೆಂದು ಪ್ರಾರ್ಥಿಸಿದೆ.

### ವ್ಯಾಕರಣಪ್ರಕ್ರಿಯ

**ಮದಥಃ**—ಮದೀ ಹರ್ಷೇ ಧಾತು. ದಿವಾದಿ. ಲಟ್ ಮಧ್ಯಮಪುರುಷ ದ್ವಿವಚನದಲ್ಲಿ ಥಸ್ ಪ್ರತ್ಯಯ· **ವ್ಯತ್ಯಯೋ ಬಹುಲಮ್**—(ಪಾ. ಸೂ ೩-೧-೮೫) ಎಂಬುದರಿಂದ ಶಪ್ ವಿಕರಣ. ಪ್ರತ್ಯಯ ಸಕಾರಕ್ಕೆ ರುತ್ವ ವಿಸರ್ಗ. **ಯದ್ವೃತ್ತಾನ್ನಿತ್ಯಮ್**—(ಪಾ. ಸೂ ೮-೧-೬೬) ಎಂಬುದರಿಂದ ಯದ್ಯೋಗವಿರುವುದರಿಂದ ನಿಘಾತ ಸ್ವರ ಬರುವುದಿಲ್ಲ. ಶಪ್ ಪಿತ್ತಾದುದರಿಂದ ಅನುದಾತ್ತ. ಲಸಾರ್ವಧಾತುಕವು **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುವಿನ ಉದಾತ್ತಸ್ವರ ಉಳಿಯುತ್ತದೆ.

**ಯಜತ್ರಾ**— ಯಜ ದೇವಪೂಜಾಸಂಗತಿಕರಣದಾನೇಷು. ಧಾತು. ಇದಕ್ಕೆ ಕರ್ಮಣಿಯಲ್ಲಿ **ಅಮಿನಕ್ಷಿಯಜವಧಿ**—(ಉ ಸೂ. ೩-೩೮೫) ಎಂಬುದರಿಂದ ಅತ್ರನ್ ಪ್ರತ್ಯಯ ಯಜತ್ರ ಎಂದು ರೂಪವಾಗುತ್ತದೆ. ದ್ವಿವಚನ ಪರವಾದಾಗ— **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. **ಆಮಂತ್ರಿತಸ್ಯ ಚ**—(ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಯಾತಮ್**—ಯಾ ಪ್ರಾಪಣೇ. ಧಾತು ಅದಾದಿ. ಲೋಟ್ ಮಧ್ಯಮಪುರುಷ ದ್ವಿವಚನದಲ್ಲಿ ಲಙ್ವದ್ಭಾವವಿರುವುದರಿಂದ **ತಸ್ಥಸ್ಥ**—(ಪಾ. ಸೂ. ೩-೪-೧೦೧) ಎಂಬುದರಿಂದ ತಮಾದೇಶ. **ಅದಿಪ್ರಭೃತಿಭ್ಯಃ ಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ಶಪಿಗೆ ಲುಕ್. ಹಿ ಎಂಬುದರ ಸಂಬಂಧವಿರುವುದರಿಂದ ಹಿಚ—(ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಪ್ರತಿಷೇಧ ಬರುವುದರಿಂದ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೭ ॥



ಸಂಹಿತಾಪಾಠಃ

ಯದಿ॑ಂದ್ರಾಗ್ನೀ॒ ಯದು॑ಷು ತು॒ರ್ವಶೇ॑ಷು॒ ಯದ್ದ್ರು॒ಹ್ಯುಷ್ವನು॑ಷು
ಪೂ॒ರುಷು॒ ಸ್ಥಃ ।
ಅತಃ॒ ಪರಿ॑ ವೃಷಣಾ॒ವಾ ಹಿ ಯಾ॒ತಮಥಾ॒ ಸೋಮ॑ಸ್ಯ ಪಿಬತಂ
ಸು॒ತಸ್ಯ॑ ॥ ೮ ॥

ಪದಪಾಠಃ

ಯತ್ । ಇ॒ಂದ್ರಾ॒ಗ್ನೀ॒ ಇತಿ॑ । ಯದು॑ಷು । ತು॒ರ್ವಶೇ॑ಷು । ಯತ್ । ದ್ರು॒ಹ್ಯುಷು॑ ।
ಅನು॑ಷು । ಪೂ॒ರುಷು॑ । ಸ್ಥಃ ।
ಅತಃ॑ । ಪರಿ॑ । ವೃ॒ಷ॒ಣೌ॒ । ಆ । ಹಿ । ಯಾ॒ತಂ । ಅಥ॑ । ಸೋಮ॑ಸ್ಯ । ಪಿ॒ಬ॒ತಂ॒ । ಸು॒ತಸ್ಯ॑ ॥

ಸಾಯಣಭಾಷ್ಯಂ

ಅತ್ರ ಯದುಷ್ವಿತ್ಯಾದೀನಿ ಪಂಚ ಮನುಷ್ಯನಾಮಾನಿ । ಹೇ ಇಂದ್ರಾಗ್ನೀ ಯದ್ಯದಿ ಯದುಷು ನಿಯತೇಷು ಪರೇಷಾಮಹಿಂಸಕೇಷು ಮನುಷ್ಯೇಷು ಸ್ಥಃ ಭವಥಃ ವರ್ತೇಥೇ । ಯದಿ ವಾ ತುರ್ವಶೇಷು ಹಿಂಸಕೇಷು ಮನುಷ್ಯೇಷು ವರ್ತೇಥೇ । ಯದ್ಯದಿ ವಾ ದ್ರುಹ್ಯುಷು ದ್ರೋಹಂ ಪರೇಷಾಮುಪ-

ದ್ರವಮಿಚ್ಛತ್ಸು ಮನುಷ್ಯೇಷು ವರ್ತೇಥೇ । ಯದಿ ವಾನುಷು ಪ್ರಾಣತ್ಸು ಸಫಲೈಃ ಪ್ರಾಣೈರ್ಯುಕ್ತೇಷು ಜ್ಞಾತೃಷ್ವನುಷ್ಠಾತೃಷು ಮನುಷ್ಯೇಷು । ಅನ್ಯೇಷಾಂ ಹಿ ಪ್ರಾಣಾ ನಿಷ್ಫಲಾ ಜ್ಞಾನಹೀನತ್ವಾದನುಷ್ಠಾನಾಭಾವಾಚ್ಚ । ತೇಷು ಯದಿ ಭವಥಃ । ತಥಾ ಪೂರುಷು ಕಾಮೈಃ ಪೂರಯಿತವ್ಯೇಷ್ವನ್ಯೇಷು ಸ್ತೋತೃಜನೇಷು ಯದಿ ಭವಥಃ । ಅತಃ ಸರ್ವಸ್ಮಾತ್ಸ್ಥಾನಾತ್ ಹೇ ಕಾಮಾಭಿವರ್ಷಕಾವಿಂದ್ರಾಗ್ನೀ ಆಗಚ್ಛತಂ । ಅನಂತರಮಭಿಷುತಂ ಸೋಮಂ ಪಿಬತಂ ॥ ಯದುಷು । ಯಮು ಉಪರಮೇ । ನಿಯಮ್ಯಂತ ಇಂದ್ರಿಯಾಣ್ಯೇಭಿರಿತಿ ಯದವಃ । ಯಮೋರ್ದುಕ್ ಚೇತಿ ಕುಪ್ರತ್ಯಯೋ ದುಗಾಗಮಶ್ಚ । ಅನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ತುರ್ವಶೇಷು । ತುರ್ವೀ ಹಿಂಸಾರ್ಥಃ । ಔಣಾದಿಕೋಽಶಪ್ರತ್ಯಯಃ । ದ್ರುಹ್ಯುಷು । ದ್ರುಹ ಜಿಘಾಂಸಾಯಾಂ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ದ್ರುಹಂ ಪರೇಷಾಮಿಚ್ಛಂತಿ । ಛಂದಸಿ ಪರೇಚ್ಛಾಯಾಮಪೀತಿ ಕ್ಯಚ್ । ಕ್ಯಾಚ್ಛಂದಸೀತ್ಯುಪ್ರತ್ಯಯಃ । ಅನುಷು । ಅನ ಪ್ರಾಣನೇ । ಅಣಶ್ಚ । ಉ.೧-೮। ಇತಿ ವಿಧೀಯಮಾನ ಉಪ್ರತ್ಯಯೋ ಬಹುಲವಚನಾದಸ್ಮಾದಪಿ ಭವತಿ । ನಿದಿತ್ಯನುವೃತ್ತೇರಾದ್ಯುದಾತ್ತತ್ವಂ । ಪೂರುಷು । ಪೂರೀ ಆಪ್ಯಾಯನೇ । ಪೂರ್ಯಂತ ಇತಿ ಪೂರವಃ । ಔಣಾದಿಕ ಉಪ್ರತ್ಯಯಃ ॥

॥ ಪ್ರತಿಪದಾರ್ಥ ॥

**ಇಂದ್ರಾಗ್ನೀ**—ಎಲೈ ಇಂದ್ರಾಗ್ನಿಗಳೇ, (ನೀವಿಬ್ಬರೂ) । **ಯತ್**—ಒಂದುವೇಳೆ । **ಯದುಷು**—(ಇತರರಿಗೆ) ಅಹಿಂಸಕರಾದ ಮಾನವರ ಗುಂಪಿನಲ್ಲಿ । **ಸ್ಥಃ**—ಇದ್ದರೂ । **ತುರ್ವಶೇಷು**—(ಅಥವಾ) ಹಿಂಸಕರಾದ ಮಾನವರ ಗುಂಪಿನಲ್ಲಿದ್ದರೂ । **ಯತ್**—ಅಥವಾ ಒಂದುವೇಳೆ । **ದ್ರುಹ್ಯುಷು**—(ಇತರರಿಗೆ) ಕೇಡನ್ನು ಬಯಸುವವರ ಗುಂಪಿನಲ್ಲಿ ಇದ್ದರೂ । **ಅನುಷು**—(ಜೀವನವನ್ನು ಸಫಲಗೊಳಿಸುವ ಯಜ್ಞಯಾಗಾದಿ ಕರ್ಮಗಳಿಂದ) ಜೀವಿಸುವ ಯಜಮಾನರ ಗುಂಪಿನಲ್ಲಿದ್ದರೂ । **ಪೂರುಷು** —(ತಮ್ಮ ಕರ್ಮಗಳಿಗನುಗುಣವಾಗಿ) ಇಷ್ಟಾರ್ಥಗಳನ್ನು ಪಡೆಯುವ ಮಾನವರ ಗುಂಪಿನಲ್ಲಿದ್ದರೂ ಸಹ । **ಅತಃ ಪರಿ**—ಆ ಎಲ್ಲಾ ಪ್ರದೇಶಗಳ ನಡುವೆ ಎಲ್ಲಿದ್ದರೆ ಅಲ್ಲಿಂದ । **ವೃಷಣೌ**—ಇಷ್ಟಾರ್ಥ ಪ್ರದರಾದ ಇಂದ್ರಾಗ್ನಿಗಳೇ । **ಆ ಯಾತಂ ಹಿ**—ಖಂಡಿತವಾಗಿಯೂ (ನಮ್ಮ ಯಜ್ಞಭೂಮಿಗೆ) ಬನ್ನಿರಿ । **ಅಥ**—(ಬಂದ) ಅನಂತರ । **ಸುತಸ್ಯ**—ಹಿಂಡಿರುವ । **ಸೋಮಸ್ಯ**—ಸೋಮರಸದ (ಭಾಗವನ್ನು) । **ಪಿಬತಂ**—ಕುಡಿಯಿರಿ.

ಭಾವಾರ್ಥ

ಇಷ್ಟಾರ್ಥಗಳನ್ನು ಸುರಿಸುವ ಎಲೈ ಇಂದ್ರಾಗ್ನಿಗಳೇ, ನೀವಿಬ್ಬರೂ ಸೇರಿಕೊಂಡು ಅಹಿಂಸಕರಾದ ಮಾನವರ ಗುಂಪಿನಲ್ಲಿದ್ದರೂ, ಅಥವಾ ಹಿಂಸಕರಾದವರ ಗುಂಪಿನಲ್ಲಿದ್ದರೂ ಒಂದುವೇಳೆ ಕೇಡನ್ನು ಬಯಸುವವರ ಗುಂಪಿನಲ್ಲಿದ್ದರೂ, ಅಥವಾ ಯಜ್ಞಯಾಗಾದಿ ಕರ್ಮಗಳನ್ನು ಮಾಡಿ ಜೀವನವನ್ನು ಸಫಲಗೊಳಿಸುವ ಯಜಮಾನರ ಗುಂಪಿನಲ್ಲಿದ್ದರೂ ಅಥವಾ ಒಂದುವೇಳೆ ತಮ್ಮ ತಮ್ಮ ಕರ್ಮಗಳಿಗನುಗುಣವಾಗಿ ಇಷ್ಟಾರ್ಥಗಳನ್ನು ಪಡೆಯುವ ಮಾನವರ ಗುಂಪಿನಲ್ಲಿದ್ದರೂ ಸಹ ಆ ಎಲ್ಲಾ ಪ್ರದೇಶಗಳ ನಡುವೆ ಎಲ್ಲಿದ್ದರೆ ಅಲ್ಲಿಂದ ಖಂಡಿತವಾಗಿಯೂ ನಮ್ಮ ಯಜ್ಞಭೂಮಿಗೆ ಬಂದು ನಿಮ್ಮ ಭಾಗದ ಸೋಮರಸವನ್ನು ಕುಡಿಯಿರಿ.

English Translation

If, Indra and Agni, you are amongst men who are inoffensive, malevolent, or tyrannical, or those who live (to fulfil the duties of life), or

those who receive the fruits (of good deeds), then, showerers of benefits, come hither from wherever you may be, and drink of the effused libation.

॥ ವಿಶೇಷವಿಷಯಗಳು ॥

**ಯದುಷು**—ಯದುಷು ಇತ್ಯಾದೀನಿ ಪಂಚಮನುಷ್ಯನಾಮಾನಿ। ಯದು, ತುರ್ವಶ, ದ್ರುಹ್ಯು, ಅನು ಮತ್ತು ಪೂರು ಇವು ಐದೂ ಮನುಷ್ಯನಾಮಗಳು. ಅವುಗಳಲ್ಲಿ **ಯದು**ವೆಂಬ ಗುಂಪಿನವರು ಯಾವಾಗಲೂ ಇತರರಿಗೆ ಅಹಿಂಸಕರಾಗಿದ್ದವರು, **ಯದುಷು ನಿಯತೇಷು ಪರೇಷಾಂ ಅಹಿಂಸಕೇಷು**। ಎಂದು ಸಾಯಣರು ವಿವರಿಸಿದ್ದಾರೆ. ಇದು ಒಂದು ವ್ಯಕ್ತಿಯ ಹೆಸರೂ ಆಗಬಹುದು; ಅಥವಾ ಒಂದು ಗುಂಪಿನ ಹೆಸರೂ ಆಗಬಹುದು. ಯದುವೆಂಬ ರಾಜನ ಹೆಸರು ಪ್ರಸಿದ್ಧವಾಗಿರುವಂತೆಯೇ ಯದುವೆಂಬ ಒಂದು ಗುಂಪಿನ ಹೆಸರೂ ಪ್ರಸಿದ್ಧವಾಗಿದೆ

**ತುರ್ವಶೇಷು**—**ತುರ್ವಶ** ಎಂಬ ಹೆಸರೂ ಸಹ ವ್ಯಕ್ತಿನಾಮವಾಗಿಯೂ ಸಂಘನಾಮವಾಗಿಯೂ ಪ್ರಸಿದ್ಧವಾಗಿದೆ. ಇಲ್ಲಿ ಸಾಯಣರು **ಹಿಂಸಕೇಷು ಮನುಷ್ಯೇಷು** ಹಿಂಸಕರಾದ ಮಾನವರ ಗುಂಪಿನಲ್ಲಿ ಎಂದು **ತುರ್ವಶ**ರ ಸ್ವಭಾವವನ್ನು ಹೇಳಿದ್ದಾರೆ. **ಯದು** ಮತ್ತು **ತುರ್ವಶ** ಎಂಬ ಎರಡು ವ್ಯಕ್ತಿಗಳ ಹೆಸರು ಬರುವ ಕಡೆಗಳಲ್ಲೆಲ್ಲಾ ಅವರಿಬ್ಬರೂ ರಾಜರ್ಷಿಗಳೆಂದೂ ಇಂದ್ರಾಗ್ನಿಗಳ ಅನುಗ್ರಹಕ್ಕೆ ಪಾತ್ರರಾದವರೆಂದೂ ತಿಳಿಯುತ್ತದೆ. **ಯದುಷು, ತುರ್ವಶೇಷು** ಎಂದು ಬಹುವಚನಗಳಲ್ಲಿ ಈ ಎರಡು ಹೆಸರುಗಳೂ ಜೊತೆಯಲ್ಲಿ ಬಂದಿರುವುದು ಋಕ್ಸಂಹಿತೆಯಲ್ಲೆಲ್ಲಾ ಇದೊಂದೇ ಸ್ಥಳದಲ್ಲಿ ಎಂದು ಹೇಳಬಹುದು.

ಅಗ್ನಿನಾ ತುರ್ವಶಂ ಯದುಂ ಪರಾವತ ಉಗ್ರಾದೇವಂ ಹವಾಮಹೇ।
(ಋ. ಸಂ. ೧-೩೬-೧೮)

ತ್ವಮಾವಿಥ ನರ್ಯಂ ತುರ್ವಶಂ ಯದುಂ ತ್ವಂ ತುರ್ವೀತಿಂ ವಯ್ಯಂ ಶತಕ್ರತೋ।
(ಋ. ಸಂ. ೧-೫೪-೬)

ಇತ್ಯಾದಿ ಋಕ್ಕುಗಳಲ್ಲಿ ಇಬ್ಬರು ರಾಜರ್ಷಿಗಳೂ ಅಗ್ನಿಯ ಮತ್ತು ಇಂದ್ರನ ರಕ್ಷಣೆಯನ್ನು ಪಡೆದುದು ಹೇಳಲ್ಪಟ್ಟಿದೆ.

ತುರ್ವಶನ ಮುಖ್ಯವಾದ ಸಾಹಸಕೃತ್ಯವು ಸುದಾಸನೊಂದಿಗೆ ಯುದ್ಧಮಾಡಿದುದು.

ಪುರೋಳಾ ಇತ್ತುರ್ವಶೋ ಯಕ್ಷುರಾಸೀದ್ರಾಯೇ ಮತ್ಸ್ಯಾಸೋ ನಿಶಿತಾ ಅಪೀವ।
ಶ್ರುಷ್ಟಿಂ ಚಕ್ರುರ್ಭೃಗವೋ ದ್ರುಹ್ಯವಶ್ಚ ಸಖಾ ಸಖಾಯಮತರದ್ವಿಷೂಚೋಃ।
(ಋ. ಸಂ. ೭-೧೮-೬)

ಎಂಬ ಋಕ್ಕಿನಲ್ಲಿ **ತುರ್ವಶನ** ಯುದ್ಧವು ವರ್ಣಿತವಾಗಿದೆ. ಆದರೆ ತುರ್ವಶನು ಇಲ್ಲಿ ಇಂದ್ರನಿಂದ ಸಹಾಯವನ್ನು ಪಡೆದನೇ ಅಥವಾ ನಿಗ್ರಹವನ್ನು ಪಡೆದನೇ ಎಂಬುದೇ ವಿಶದವಾಗಿಲ್ಲ. ಸಾಯಣರು ಎರಡು ವಿಧವಾದ ಅರ್ಥವನ್ನೂ ಹೇಳಿದ್ದಾರೆ. ಮೊದಲನೆಯದಾಗಿ ತುರ್ವಶನು ಇಂದ್ರನ ಸಖನಾದ ಸುದಾಸನೊಂದಿಗೆ ಯುದ್ಧಕ್ಕೆ ಹೋದಾಗ ಇಂದ್ರನು ತುರ್ವಶನನ್ನು ನಿಗ್ರಹಿಸಿ ತನ್ನ ಸುಹೃತ್ತನ್ನು ರಕ್ಷಿಸಿದನು ಎಂದೂ, ಎರಡನೆಯದಾಗಿ ತುರ್ವಶನಿಗೂ ಅವನ ವಿರೋಧಿಗಳಿಗೂ ಯುದ್ಧವು ಸಂಭವಿಸಿದ ಕಾಲದಲ್ಲಿ ಇಂದ್ರನು ಸಖನಾದ ತುರ್ವಶನಿಗೆ ಸಹಾಯಮಾಡಿದನೆಂದೂ

ಹೇಳಿದೆ. ಆದ್ದರಿಂದ ಈ ಋಕ್ಕಿನ ತಾತ್ಪರ್ಯವು ವಿಶದವಾಗಿಲ್ಲ. ಇದೇ ರೀತಿ ಯದು ಮತ್ತು ತುರ್ವಶ ಇಬ್ಬರೂ ಸಹ ಇಂದ್ರನಿಂದ ಪರಾಜಯವನ್ನು ಪಡೆದುದಾಗಿ,

**ಪುರಃ ಸದ್ಯ ಇತ್ಥಾಧಿಯೇ ದಿವೋದಾಸಾಯ ಶಂಬರಂ ।**
**ಅಧ ತ್ಯಂ ತುರ್ವಶಂ ಯದುಂ ॥**

(ಋ. ಸಂ. ೯-೬೧-೨)

ಎಂಬ ಋಕ್ಕಿನಲ್ಲಿ ಹೇಳಿದೆ. ಇದರಿಂದ ಇಂದ್ರನು ತನ್ನ ಸಖನಾದ **ದಿವೋದಾಸ**ನಿಗಾಗಿ ಯದುವನ್ನೂ ತುರ್ವಶನನ್ನೂ ನಿಗ್ರಹಿಸಿದುದಾಗಿ ತಿಳಿಯುತ್ತದೆ. ಆದರೆ,

**ಪ್ರಯತ್ಸಮುದ್ರಮತಿ ಶೂರ ಪರ್ಷಿ ಪಾರಯಾ ತುರ್ವಶಂ ಯದುಂ ಸ್ವಸ್ತಿ ।**

(ಋ. ಸಂ. ೧-೧೭೪-೯)

**ಉತ ತ್ಯಾ ತುರ್ವಶಾಯದೂ ಅಸ್ನಾತಾರಾ ಶಚೀಪತಿಃ ।**
**ಇಂದ್ರೋ ವಿದ್ವಾँ ಅಪಾರಯತ್ ।**

(ಋ. ಸಂ. ೪-೩೦-೧೭)

**ತ್ವಮಪೋ ಯದವೇ ತುರ್ವಶಾಯಾರಮಯಃ ಸುದುಘಾಃ ಪಾರ ಇಂದ್ರ ।**

(ಋ. ಸಂ. ೫-೩೧-೮)

**ಮಹತ್ತೇ ವೃಷ್ಣೋ ಅಭಿಚಕ್ಷ್ಯಂ ಕೃತಂ ಪಶ್ಯೇಮ ತುರ್ವಶಂ ಯದುಂ ।**

(ಋ. ಸಂ. ೮-೪-೭)

ಇತ್ಯಾದ್ಯನೇಕಋಕ್ಕುಗಳಲ್ಲಿ **ಯದು** ಮತ್ತು **ತುರ್ವಶ**ರಿಬ್ಬರೂ ಇಂದ್ರನಿಂದ ಸಾಕ್ಷಾತ್ತಾಗಿ ಸಹಾಯವನ್ನು ಪಡೆದ ವಿಷಯವು ಹೇಳಿದೆ.

ಬಹುವಚನದಲ್ಲಿ ಈ ಹೆಸರುಗಳು ಬಂದಾಗೆಲ್ಲಾ ಇವೆರಡೂ ಬೇರೆ ಬೇರೆ ಸಂತತಿಯೆಂದೂ ಮತ್ತು ಎರಡು ಗುಂಪುಗಳಿಗೂ ನಿಕಟವಾದ ಸಂಬಂಧವಿತ್ತೆಂದೂ ತಿಳಿಯುತ್ತದೆ.

**ತ್ರಿಂಶಚ್ಛತಂ ವರ್ಮಿಣ ಇಂದ್ರ ಸಾಕಂ ಯವ್ಯಾವತ್ಯಾಂ ಪುರುಹೂತ ಶ್ರವಸ್ಯಾ ।**
**ವೃಚೀವಂತಃ ಶರವೇ ಪತ್ಯಮಾನಾಃ ಪಾತ್ರಾ ಭಿಂದಾನಾ ನ್ಯರ್ಥಾನ್ಯಾಯನ್ ।**
**ಯಸ್ಯ ಗಾವಾವರುಷಾ ಸೂಯವಸ್ಯೂ ಅಂತರೂ ಷು ಚರತೋ ರೇರಿಹಾಣಾ ।**
**ಸ ಸೃಂಜಯಾಯ ತುರ್ವಶಂ ಪರಾದಾದ್ವೃಚೀವತೋ ದೈವವಾತಾಯ ಶಿಕ್ಷನ್ ।**

(ಋ. ಸಂ. ೬-೨೭-೬, ೭.)

ಎಂಬ ಋಕ್ಕುಗಳಲ್ಲಿ ಕಾಣುವ ಸನ್ನಿವೇಶಗಳಿಂದ ವೃಚೀವತ್ಸಂತತಿಯೂ ತುರ್ವಶಸಂತತಿಯೂ ಸಹ ಒಂದೇ ವಂಶದ ಎರಡು ಹೆಸರುಗಳೆಂದು Zimmer ಎಂಬ ಪಂಡಿತನು ಅಭಿಪ್ರಾಯಪಟ್ಟಿರುತ್ತಾನೆ. ಆದರೆ ಇಲ್ಲಿ ಆ ಎರಡು ಹೆಸರು

ಗಳೂ ಒಂದೇ ವಂಶದ ಹೆಸರುಗಳೆಂದು ತಾದಾತ್ಮ್ಯವನ್ನು ಸೂಚಿಸುವುದಿಲ್ಲ. ಆದುದರಿಂದ ಅವೆರಡೂ ಸಮೀಪಸಂಬಂಧ ವುಳ್ಳ ಬೇರೆ ಬೇರೆ ವಂಶಗಳ ಹೆಸರುಗಳೆಂದು ಹೇಳಬಹುದು. ಮತ್ತು

**ಶೋಣಃ ಸಾತ್ರಾ ಸಹ ಈಜೇ ಪಾಂಚಾಲೋ ರಾಜಾ ತದೇತದ್ಗಾಥಯಾಭಿಗೀತಂ ಸಾತ್ರಾಸಹೇ ಯಜಮಾನೇಽಶ್ವಮೇಧೇನ ತೌರ್ವಶಾಃ ।**

(ಶ. ಬ್ರಾ. ೧೩-೫-೪-೧೬)

ಎಂಬ ಬ್ರಾಹ್ಮಣವಾಕ್ಯದಿಂದ ತುರ್ವಶರು ಪಾಂಚಾಲರ ಸಖರೆಂದೂ ಅವರ ಯಾಗಕಾಲದಲ್ಲಿ ಸಹಾಯವ್ರಾಡಿದ ರೆಂದೂ ತಿಳಿಯುತ್ತದೆ. ತುರ್ವಶರ ಯುದ್ಧವನ್ನು ವರ್ಣಿಸುವಾಗ **ಪರುಷ್ಣೀ** ನದಿಯನ್ನು ದಾಟಿದರೆಂದು (ಋ. ಸಂ. ೭-೧೮) ಸೂಚಿಸಿದೆ. ಆದರೆ ಯಾವ ದಿಕ್ಕಿನಿಂದ ಎನ್ನುವುದು ಸರಿಯಾಗಿ ತಿಳಿಯವುದಿಲ್ಲ. ಇತರ ಆಧಾರಗಳಿಂದ ಪಶ್ಚಿಮದಿಂದ ಪೂರ್ವಾಭಿಮುಖವಾಗಿ ದಾಟಿದರೆಂದು ಹೇಳಬಹುದು. ಯದುಗಳಿಗೂ ಇವರಿಗೂ ಇರತಕ್ಕ ಸಂಬಂಧ ವಾವುದೆಂಬುದನ್ನೂ ಸರಿಯಾಗಿ ಹೇಳಲು ಆಗುವುದಿಲ್ಲ.

**ದ್ರುಹ್ಯುಷು—ದ್ರೋಹಂ ಪರೇಷಾಮುಪದ್ರವಮಿಚ್ಛತ್ಸು ಮನುಷ್ಯೇಷು ।** ಇತರರಿಗೆ ಉಪದ್ರವವನ್ನು ಕೊಡತಕ್ಕ ಒಂದು ಗುಂಪೆಂದು ಸಾಯಣರು ವಿವರಿಸಿದ್ದಾರೆ. ಈ ಸಂತತಿಯ ಹೆಸರೂ ಸಹ ಋಕ್ಸಂಹಿತೆಯಲ್ಲಿ ಅನೇಕಸಲ ಬಂದಿದೆ. ಮೇಲೆ ಉದಹರಿಸಿರುವ ಋ. ಸಂ. ೭-೧೮-೬ನೇ ಋಕ್ಕಿನಲ್ಲಿಯೂ ಇತರ ಕೆಲವು ಕಡೆಗಳಲ್ಲಿಯೂ ಇಂದ್ರನ ನಿಗ್ರಹಕ್ಕೆ ಸಿಕ್ಕಿದ ಗುಂಪೆಂದು ಹೇಳಿದೆ. ಆದರೆ,

**ಯದ್ದ್ರುಹ್ಯವ್ಯನವಿ ತುರ್ವಶೇ ಯದೌ ಹುವೇ ನಾಮಥ ಮಾ ಗತಂ ।**

(ಋ. ಸಂ. ೮-೧೦-೫)

ಎಂಬ ಋಕ್ಕಿನಲ್ಲಿ **ಸ್ತೋತೃ**ಗಳ ಗುಂಪಿನಲ್ಲಿ ಸೇರಿಸಿದೆ.

**ಯದ್ವಾ ತೃಕ್ಷೌ ಮಘವನ್ ದ್ರುಹ್ಯಾವಾ ಜನೇ ಯತ್ಪೂರೌ ಕಚ್ಚ ವೃಷ್ಣ್ಯಂ ।**

(ಋ. ಸಂ. ೬_೪೬-೮)

ಎಂಬ ಋಕ್ಕಿನ ವಿವರಣೆಯಿಂದ ಅತ್ಯಂತ ಬಲಶಾಲಿಯಾದ ಗುಂಪೆಂದು ತಿಳಿಯುತ್ತದೆ. ಇದು ವಾಯವ್ಯದಿಕ್ಕಿನಲ್ಲಿ ವಾಸಮಾಡುತ್ತಿದ್ದ ಒಂದು ಜನಾಂಗವೆಂದು ಆಧುನಿಕ ಐತಿಹಾಸಿಕ ಸಂಶೋಧಕರ ಮತವಾಗಿದೆ. ಕೆಲವು ಪುರಾಣಗಳಲ್ಲಿ ಈ ಸಂತತಿಗೂ ಗಾಂಧಾರ ಸಂತತಿಗೂ ಸಂಬಂಧವನ್ನು ತೋರಿಸಿದೆ.

**ಅನುಷು—ಜ್ಞಾತೃಷ್ವನುಷ್ಠಾತೃಷು ಮನುಷ್ಯೇಷು ।** ಅನುವೆಂಬುದು ಜ್ಞಾನಿಗಳೂ ಯಜ್ಞಾನುಷ್ಠಾನ ವನ್ನು ನೆರವೇರಿಸುವವರೂ ಆದ ಒಂದು ಸಂತತಿಯ ಹೆಸರು, ಎಂದು ಸಾಯಣರ ವಿವರಣೆ. ಆದರೆ,

**ನಿ ಗವ್ಯವೋಽನವೋ ದ್ರುಹ್ಯವಶ್ಚ ಷಷ್ಟಿಃ ಶತಾ ಸುಷುಪುಃ ಷಟ್ ಸಹಸ್ರಾ ।**

(ಋ. ಸಂ. ೭-೧೮-೧೪)

ಎಂಬ ಋಕ್ಕಿನಿಂದ ಅನು ಇಂದ್ರನ ನಿಗ್ರಹಕ್ಕೆ ಸಿಕ್ಕಿದ ರಾಜನೆಂದು ತಿಳಿಯುತ್ತದೆ.

**ಸಿಮಾ ಪುರೂ ನೃಷೂತೋ ಅಸ್ಯಾನವೇಽಸಿ ಪ್ರಶರ್ಧ ತುರ್ವಶೇ ।**
(ಋ. ಸಂ. ೮-೪-೧)

ಎಂಬ ಋಕ್ಕಿನಿಂದ ಇಂದ್ರನ ಭಕ್ತರಗುಂಪಿಗೆ ಸೇರಿದವನೆಂದು ತಿಳಿಯುತ್ತದೆ. ಇನ್ನು ಕೆಲವು ಕಡೆಗಳಲ್ಲಿ **ಅನು, ಆನವ** ಎಂಬ ಪದಗಳಿಗೆ ನಿಷ್ಕೃಷ್ಟವಾದ ಅರ್ಥವನ್ನು ಹೇಳುವುದಕ್ಕಾಗುವುದಿಲ್ಲ. ಉದಾಹರಣೆಗೆ—

**ಅನವಸ್ತೇ ರಥಮಶ್ವಾಯ ತಕ್ಷನ್ ತ್ವಷ್ಟಾ ವಜ್ರಂ ಪುರುಹೂತ ದ್ಯುಮಂತಂ ।**
(ಋ. ಸಂ. ೫-೩೧-೪)

**ಆಗನ್ಮ ವೃತ್ರಹಂತಮಂ ಜ್ಯೇಷ್ಠಮಗ್ನಿಮಾನವಂ ।**
(ಋ. ಸಂ. ೮-೭೪-೪)

ಇತ್ಯಾದಿ ಋಕ್ಕುಗಳಲ್ಲಿ ಕೆಲವು ಪಂಡಿತರು **ಅನವ, ಆನವ** ಎಂಬ ಪದಗಳಿಗೆ **ಅನು**ವೆಂಬ ದೊರೆಗೆ ಸೇರಿದ ಎಂವರ್ಥ ಮಾಡುತ್ತಾರೆ. ಆದರೆ ಸಾಯಣರು ಮಾನವರಿಗೆ ಸಂಬಂಧಪಟ್ಟ ಎಂದು ವಿವರಿಸುತ್ತಾರೆ. **ಅನವಃ** ಎಂಬ ಪದವು **ಮನುಷ್ಯ**ನಾಮಗಳಲ್ಲಿ ಪಠಿತವಾಗುವುದರಿಂದ (ನಿ. ೩-೭) ಈ ಅರ್ಥವೂ ಸರಿಯಾಗಿದೆ. ಆದುದರಿಂದ ಈ ಉದಾಹರಣೆಗಳಿಂದ **ಅನು**ವಿನ ವಿಷಯವು ಸರಿಯಾಗಿ ತಿಳಿಯುವುದಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ಯದುಷು**—ಯಮು ಉಪರಮೇ. ಧಾತು. ನಿಯಮ್ಯಂತೇ ಇಂದ್ರಿಯಾಣಿ ಏಭಿರಿತಿ ಯದವಃ **ಯಮೇರ್ದುಕ್ ಚ**—ಎಂಬುದರಿಂದ ಕುಪ್ರತ್ಯಯ. ಧಾತುವಿಗೆ ದುಕಾಗಮ. **ಅನುದಾತ್ತೋಪದೇಶನ**—(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಅನುನಾಸಿಕ ಮಕಾರಕ್ಕೆ ಲೋಪ. ಸಪ್ತಮೀ ಬಹುವಚನಾಂತರೂಪ.

**ತುರ್ವಶೇಷು**—ತುರ್ವೀ ಹಿಂಸಾಯಾಂ. ಧಾತು. ಇದಕ್ಕೆ ಔಣಾದಿಕ ಅಶಪ್ರತ್ಯಯ. ತುರ್ವಶ ಎಂದು ರೂಪವಾಗುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ. ಸಪ್ತಮೀ ಬಹುವಚನಾಂತರೂಪ.

**ದ್ರುಹ್ಯುಷು**—ದ್ರುಹ ಜಿಘಾಂಸಾಯಾಮ್. ಧಾತು. **ಸಂಪದಾದಿಭ್ಯಃ ಕ್ವಿಪ್**—(ವಾ. ೨೨೩೩) ಎಂಬುದರಿಂದ ಇದಕ್ಕೆ ಭಾವಾರ್ಥದಲ್ಲಿ ಕ್ವಿಪ್‌ಪ್ರತ್ಯಯ. ದ್ರುಹಂ ಪರೇಷಾಮಿಚ್ಛಂತಿ ದ್ರುಹ್ಯಂತಿ. **ಛಂದಸಿ-ಪರೇಚ್ಛಾಯಾಮಪಿ** ಆತ್ಮಸಂಬಂಧಿ ಇಚ್ಛಾದಲ್ಲಿ ಕ್ಯಚ್ ವಿಹಿತವಾದರೂ ಛಂದಸ್ಸಿನಲ್ಲಿ ಪರೇಚ್ಛೆಯಲ್ಲಿಯೂ ಬರುತ್ತದೆ. ಆದುದರಿಂದ ಇಲ್ಲಿ ಹಿಂದೆ ಹೇಳಿದ ವಚನದಿಂದ ಪರೇಚ್ಛೆಯಲ್ಲಿ ಕ್ಯಚ್. **ಕ್ಯಾ ಛಂದಸಿ**—(ಪಾ. ಸೂ. ೩-೨-೧೭೦) ಎಂಬುದರಿಂದ ಕ್ಯಜಂತಧಾತುವಿನ ಮೇಲೆ ಉ ಪ್ರತ್ಯಯ. **ಅತೋಲೋಪಃ**—(ಪಾ. ಸೂ. ೬-೪-೪೮) ಎಂಬುದರಿಂದ ತನ್ನಿಮಿತ್ತವಾಗಿ ಅಕಾರಲೋಪ. ದ್ರುಹ್ಯು ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಸಪ್ತಮೀಬಹುವಚನಾಂತರೂಪ.

**ಅನುಷು**—ಅನ ಪ್ರಾಣನೇ. ಧಾತು. ಉಣಾದಿಯಲ್ಲಿ ಬಹುಲವಚನವಿರುವುದರಿಂದ **ಅಣಶ್ಚ**—(ಉ. ಸೂ. ೧-೮) ಎಂಬುದರಿಂದ ವಿಧಿಸಲ್ಪಡುವ ಉಪ್ರತ್ಯಯವು ಇದಕ್ಕೂ ಬರುತ್ತದೆ. **ನಿತ್**—ಎಂದು ಹಿಂದಿನ

ಸೂತ್ರದಿಂದನುವೃತ್ತವಾಗುವುದರಿಂದ **ಞ್ನಿತ್ಯಾದಿರ್ನಿತ್ಯಮ್**—( ಪಾ. ೬-೧-೧೯೭ ) ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ.

**ಪೂರುಷು**— ಪೂರೀ ಆಪ್ಯಾಯನೇ. ಧಾತು. ಪೂರ್ಯಂತೇ ಇತಿ ಪೂರವಃ। ಔಣಾದಿಕ ಉಪ್ರತ್ಯಯ. ಪೂರು ಶಬ್ದ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಸ್ಥಃ**—ಅಸ ಭುವಿ. ಧಾತು. ಅದಾದಿ. ಲಟ್ ಮಧ್ಯಮಪುರುಷ ದ್ವಿವಚನದಲ್ಲಿ ಥಸ್ ಪ್ರತ್ಯಯ. **ಶ್ನಸೋರಲ್ಲೋಪಃ**—(ಪಾ. ಸೂ. ೬-೪-೧೧೧) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ಯತ್ ಸಂಬಂಧವಿರುವುದರಿಂದ **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಪ್ರತ್ಯಯಸ್ವರದಿಂದ ಉದಾತ್ತವಾಗುತ್ತದೆ. ॥ ೮ ॥

——— :o: ———

ಸಂಹಿತಾಪಾಠಃ

ಯದಿಂದ್ರಾಗ್ನೀ ಅವಮಸ್ಯಾಂ ಪೃಥಿವ್ಯಾಂ ಮಧ್ಯಮಸ್ಯಾಂ ಪರಮಸ್ಯಾಮುತ ಸ್ಥಃ।
ಅತಃ ಪರಿ ವೃಷಣಾವಾ ಹಿ ಯಾತಮಥಾ ಸೋಮಸ್ಯ ಪಿಬತಂ ಸುತಸ್ಯ ॥ ೯ ॥

ಪದಪಾಠಃ

ಯತ್। ಇಂದ್ರಾಗ್ನೀ ಇತಿ। ಅವಮಸ್ಯಾಂ। ಪೃಥಿವ್ಯಾಂ। ಮಧ್ಯಮಸ್ಯಾಂ। ಪರಮಸ್ಯಾಂ। ಉತ। ಸ್ಥಃ।
ಅತಃ। ಪರಿ। ವೃಷಣೌ। ಆ। ಹಿ। ಯಾತಂ। ಅಥ। ಸೋಮಸ್ಯ। ಪಿಬತಂ। ಸುತಸ್ಯ ॥

ಸಾಯಣಭಾಷ್ಯಂ

ಹೇ ಇಂದ್ರಾಗ್ನೀ ಅವಮಸ್ಯಾಂ ಪೃಥಿವ್ಯಾಂ ಸನ್ನಿಕೃಷ್ಟಾಯಾಮಸ್ಯಾಂ ಭೂಮ್ಯಾಂ ಯದ್ಯದಿ ಸ್ಥಃ । ವರ್ತಮಾನೌ ಭವಥಃ । ಯದಿ ವಾ ಮಧ್ಯಮಸ್ಯಾಂ ಪೃಥಿವ್ಯಾಮಂತರಿಕ್ಷಲೋಕೇ । ಅತ್ರ ಪೃಥಿವೀಶಬ್ದಸ್ತ್ರಿಷ್ವಪಿ ಲೋಕೇಷು ವರ್ತತೇ । ಯಥಾ "ಯೋ ದ್ವಿತೀಯಸ್ಯಾಂ ತೃತೀಯಸ್ಯಾಂ ಪೃಥಿವ್ಯಾಮಸ್ಯಾಯುಷಾ ನಾಮ್ನೇ"ತಿ । ಉತಾಪಿ ಚ ಪರಮಸ್ಯಾಮುತ್ಕೃಷ್ಟಾಯಾಂ ದೂರೇ ವರ್ತಮಾನಾಯಾಂ ಪೃಥಿವ್ಯಾಂ ದ್ಯುಲೋಕೇ ಯದಿ ವಾ ವರ್ತೇಥೇ । ಅತಃ ಸರ್ವಸ್ಮಾತ್ಸ್ಥಾನಾತ್ ಹೇ ವೃಷಣಾವಾಗಚ್ಛತಂ। ಆಗಮಾನಂತರಂ ಸುತಂ ಸೋಮಂ ಪಿಬತಂ ॥ ಅವಮಸ್ಯಾಂ । ಅವಮಶಬ್ದಾದುತ್ತರಸ್ಯ ಙೇರ್ವ್ಯತ್ಯಯೇನ ಸ್ಯಾಡಾಗಮಃ । ಏವಮುತ್ತರತ್ರಾಪಿ ॥

ಪ್ರತಿಪದಾರ್ಥ

ಇಂದ್ರಾಗ್ನೀ—ಇಂದ್ರಾಗ್ನಿಗಳೇ । **ಯತ್**—ಒಂದುವೇಳೆ । **ಅವಮಸ್ಯಾಂ**—(ಹತ್ತಿರವಾಗಿ) ಕೆಳಭಾಗದ ಪೃಥ್ವೀಲೋಕದಲ್ಲಿ । **ಸ್ಥಃ**—ಇದ್ದರೂ ಸರಿ (ಅಥವಾ) । **ಮಧ್ಯಮಸ್ಯಾಂ**—ಮಧ್ಯಮಲೋಕವಾದ ಅಂತರಿಕ್ಷದಲ್ಲಿದ್ದರೂ ಸರಿ । **ಉತ**— ಅಲ್ಲದೇ (ಅಥವಾ) । **ಪರಮಸ್ಯಾಂ**— ದೂರದಲ್ಲಿರುವುದೂ ಅತಿಶ್ರೇಷ್ಠವಾದುದೂ ಆದ ದ್ಯುಲೋಕದಲ್ಲಿದ್ದರೂ ಸರಿ । **ಅತಃ ಪರಿ**—ಆ ಎಲ್ಲಾ ಪ್ರದೇಶಗಳ ನಡುವೆ ಅಲ್ಲಿಂದ । **ವೃಷಣೌ**—ಇಷ್ಟಾರ್ಥಪ್ರದರಾದ ಇಂದ್ರಾಗ್ನಿಗಳೇ । **ಆ ಹಿ ಯಾತಂ**—ಖಂಡಿತವಾಗಿ ದಯಮಾಡಿರಿ । **ಅಥ**—ಬಂದನಂತರ । **ಸುತಸ್ಯ**—ಹಿಂಡಿರುವ । **ಸೋಮಸ್ಯ**—ಸೋಮರಸದ (ಭಾಗವನ್ನು) । **ಪಿಬತಂ**—ಕುಡಿಯಿರಿ ॥

ಭಾವಾರ್ಥ

ಇಷ್ಟಾರ್ಥಪ್ರದರಾದ ಎಲೈ ಇಂದ್ರಾಗ್ನಿಗಳೇ, ನೀವು ಒಂದು ವೇಳೆ ಬಹಳ ಹತ್ತಿರವಾದ ಕೆಳಭಾಗದಲ್ಲಿರುವ ಪೃಥ್ವೀಲೋಕದಲ್ಲಿದ್ದರೂ ಅಥವಾ ಮಧ್ಯಮಲೋಕವಾದ ಅಂತರಿಕ್ಷದಲ್ಲಿದ್ದರೂ ಸರಿ, ಅಥವಾ ದೂರದಲ್ಲಿರುವುದೂ ಮತ್ತು ಅತ್ಯಂತ ಶ್ರೇಷ್ಠವಾದುದೂ ಆದ ದ್ಯುಲೋಕದಲ್ಲಿದ್ದರೂ ಸರಿ ಆ ಎಲ್ಲಾ ಪ್ರದೇಶಗಳ ನಡುವೆ ಎಲ್ಲಿದ್ದರೂ ಸಹ ಅಲ್ಲಿಂದ ಖಂಡಿತವಾಗಿಯೂ ನಮ್ಮ ಯಜ್ಞಕ್ಕೆ ದಯಮಾಡಿರಿ. ಬಂದನಂತರ ನಾವು ಹಿಂಡಿರುವ ನಮ್ಮ ಸೋಮರಸದಲ್ಲಿ ನಿಮ್ಮ ಅಂಶವನ್ನು ಕುಡಿಯಿರಿ.

English Translation

Whether, Indra and Agni, you are in the lower, the central, or the upper region of the world, showerers of benefits, come hither from wherever you may be, and drink of the effused libation.

॥ ವಿಶೇಷವಿಷಯಗಳು ॥

**ಅವಮಸ್ಯಾಂ ಪೃಥಿವ್ಯಾಂ—ಸನ್ನಿಕೃಷ್ಟಾಯಾಮಸ್ಯಾಂ** ಭೂಮ್ಯಾಂ । ಸಮೀಪದಲ್ಲಿರುವ ಈ ಪೃಥ್ವಿಯಲ್ಲಾಗಲಿ ಎಂದು **ಅವಮ**ಶಬ್ದಕ್ಕೆ ಸಮೀಪವೆಂದರ್ಥಮಾಡಿದೆ. ಈ ಶಬ್ದವು **ಅಂಕಿತನಾಮ**ಗಳಲ್ಲಿ ಪಠಿತವಾಗಿದೆ. (ನಿ. ೩-೯) ಅವಮ ಶಬ್ದಕ್ಕೆ ಕನಿಷ್ಠ ಅಥವಾ ಕೆಳಮಟ್ಟದ, ಕೆಳ ಅಂತಸ್ತಿನ ಎಂಬರ್ಥವಾದರೂ ಸಹ ಇಲ್ಲಿ

ಹೊಂದಿಕೊಳ್ಳುತ್ತದೆ. ಅತ್ಯಂತ ಸಮೀಪದಲ್ಲಿರುವ ಪೃಥ್ವಿಯಲ್ಲಿಯೂ ಮಧ್ಯಭಾಗದಲ್ಲಿರುವ ಅಂತರಿಕ್ಷದಲ್ಲಿಯೂ ಅತಿ ದೂರದಲ್ಲಿರುವ ದ್ಯುಲೋಕದಲ್ಲಿಯೂ ಸಹ ಇಂದ್ರಾಗ್ನಿಗಳು ಇರುತ್ತಾರೆ.

ವ್ಯಾಕರಣಪ್ರಕ್ರಿಯಾ

**ಅವಮಸ್ಯಾಮ್**—ಅವಮ ಶಬ್ದದ ಪರದಲ್ಲಿರುವ ಸಪ್ತಮೀ ಏಕವಚನ ಙಿ ವಿಭಕ್ತಿಗೆ **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ಸ್ಯಾಟಾಗಮ. **ಙೇರಾಮ್**—(ಪಾ. ಸೂ. ೭-೩-೧೧೬) ಎಂಬುದರಿಂದ ಙಿಗೆ ಆಮಾದೇಶ. ಹೀಗೆಯೇ ಮಧ್ಯಮಸ್ಯಾಮ್, ಪರಮಸ್ಯಾಮ್ ಎಂಬಲ್ಲಿ ಪ್ರಕ್ರಿಯೆ.

**ಪೃಥಿವ್ಯಾಮ್**—ಶಾರ್ಙ್ಗರವಾದಿ ಪಠಿತವಾದುದರಿಂದ ಙೀನಂತವಾದ ಶಬ್ದ. ಸಪ್ತಮಿಯಲ್ಲಿ ಯಣಾದೇಶ ಬಂದಾಗ **ಉದಾತ್ತಯಣೋ ಹಲ್ಪೂರ್ವಾತ್**—(ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೯ ॥



ಸಂಹಿತಾಪಾಠಃ

ಯದಿಂದ್ರಾಗ್ನೀ ಪರಮಸ್ಯಾಂ ಪೃಥಿವ್ಯಾಂ ಮಧ್ಯಮಸ್ಯಾಮವ-
ಮಸ್ಯಾಮುತ ಸ್ಥಃ ।
ಅತಃ ಪರಿ ವೃಷಣಾವಾ ಹಿ ಯಾತಮಥಾ ಸೋಮಸ್ಯ ಪಿಬತಂ
ಸುತಸ್ಯ ॥ ೧೦ ॥

ಪದಪಾಠಃ

ಯತ್ । ಇಂದ್ರಾಗ್ನೀ ಇತಿ । ಪರಮಸ್ಯಾಂ । ಪೃಥಿವ್ಯಾಂ । ಮಧ್ಯಮಸ್ಯಾಂ । ಅವಮಸ್ಯಾಂ । ಉತ । ಸ್ಥಃ ।

ಅತಃ । ಪರಿ । ವೃಷಣೌ । ಆ । ಹಿ । ಯಾತಂ । ಅಥ । ಸೋಮಸ್ಯ । ಪಿಬತಂ ।
ಸುತಸ್ಯ ॥ ೧೦ ॥

॥ ಸಾಯಣಭಾಷ್ಯಂ ॥

ಪೂರ್ವವದ್ವ್ಯಾಖ್ಯೇಯಂ । ಏತಾವಾಂಸ್ತು ವಿಶೇಷಃ । ಪೂರ್ವಂ ಭೂಮ್ಯಾದಿಷು ತ್ರಿಷು ಲೋಕೇಷು ಯಾವಿಂದ್ರಾಗ್ನೀ ತಾವಾಗಚ್ಛತಾಮಿತ್ಯುಕ್ತಂ । ಇದಾನೀಂ ತು ದ್ಯುಪ್ರಭೃತಿಷ್ವವರೋಹ-ಕ್ರಮೇಣ ವರ್ತಮಾನೇಷು ತ್ರಿಷು ಲೋಕೇಷು ಯಾವಿಂದ್ರಾಗ್ನೀ ವರ್ತೇತೇ ತಾವಾಗಚ್ಛತಾಮಿತಿ ಪ್ರಾರ್ಥ್ಯತೇ ॥

॥ ಪ್ರತಿಪದಾರ್ಥ ॥

ಇಂದ್ರಾಗ್ನೀ—ಎಲೈ ಇಂದ್ರಾಗ್ನಿಗಳೇ, (ನೀವಿಬ್ಬರೂ) । **ಯತ್**—ಒಂದು ವೇಳೆ । **ಪರಮಸ್ಯಾಂ**—ಅತ್ಯಂತ ಶ್ರೇಷ್ಠವಾದುದೂ ದೂರವಾಗಿರುವುದೂ ಆದ । **ಪೃಥಿವ್ಯಾಂ**—ದ್ಯುಲೋಕದಲ್ಲಿ । **ಸ್ಥಃ**—ಇದ್ದರೂ ಸರಿ । ಅಥವಾ **ಮಧ್ಯಮಸ್ಯಾಂ**—ಮಧ್ಯಮಲೋಕವಾದ ಅಂತರಿಕ್ಷದಲ್ಲಿದ್ದರೂ ಸರಿ । **ಉತ**—ಅಲ್ಲದೇ, । **ಅವಮಸ್ಯಾಂ**—ಅತಿ ಸಮೀಪದಲ್ಲಿಯೂ ಕೆಳಭಾಗದಲ್ಲಿಯೂ ಇರುವ ಪೃಥ್ವೀಲೋಕದಲ್ಲಿದ್ದರೂ ಸರಿ । **ಅತಃ ಪರಿ**—ಆ ಎಲ್ಲಾ ಪ್ರದೇಶಗಳ ನಡುವೆ ಎಲ್ಲಿದ್ದರೂ ಅಲ್ಲಿಂದ । **ವೃಷಣೌ**—ಇಷ್ಟಾರ್ಥಗಳನ್ನು ಸುರಿಸುವ ಇಂದ್ರಾಗ್ನಿಗಳೇ, । **ಆ ಹಿ-ಯಾತಂ**—ಖಂಡಿತವಾಗಿಯೂ (ನಮ್ಮ ಯಜ್ಞಕ್ಕೆ) ಬನ್ನಿರಿ. । **ಅಥ**—ಬಂದನಂತರ । **ಸುತಸ್ಯ**—ಹಿಂಡಿರುವ । **ಸೋಮಸ್ಯ**—ಸೋಮರಸದ (ನಿಮ್ಮ ಭಾಗವನ್ನು) । **ಪಿಬತಂ**—ಕುಡಿಯಿರಿ. ।

ಭಾವಾರ್ಥ

ಎಲೈ ಇಷ್ಟಾರ್ಥಪ್ರದರಾದ ಇಂದ್ರಾಗ್ನಿಗಳೇ, ನೀವಿಬ್ಬರೂ ಒಂದು ವೇಳೆ ಅತ್ಯಂತ ಶ್ರೇಷ್ಠವಾದುದೂ ಮತ್ತು ಅತಿ ದೂರದಲ್ಲಿರುವುದೂ ಆದ ದ್ಯುಲೋಕದಲ್ಲಿದ್ದರೂ ಸರಿ, ಅಥವಾ ಮಧ್ಯಮಲೋಕವಾದ ಅಂತರಿಕ್ಷದಲ್ಲಿದ್ದರೂ ಸರಿ, ಅಲ್ಲದೇ ಅತಿ ಸಮೀಪದಲ್ಲಿರುವುದೂ, ಕೆಳಭಾಗದಲ್ಲಿರುವುದೂ ಆದ ಪೃಥ್ವೀಲೋಕದಲ್ಲಿದ್ದರೂ ಸರಿ, ಆ ಎಲ್ಲಾ ಪ್ರದೇಶಗಳ ನಡುವೆ ಎಲ್ಲಿದ್ದರೂ ಅಲ್ಲಿಂದ ನಮ್ಮ ಯಜ್ಞಕ್ಕೆ ಖಂಡಿತವಾಗಿಯೂ ಬಂದು ನಿಮ್ಮ ಭಾಗದ ಸೋಮರಸವನ್ನು ಕುಡಿಯಿರಿ.

English Translation

Whether, Indra and Agni, you are in the upper, central, or lower region of the world, come showerers of benefits, hither from wherever you may be, and drink of the effused libation.

ವಿಶೇಷವಿಷಯಗಳು ಮತ್ತು ವ್ಯಾಕರಣಪ್ರಕ್ರಿಯ

ಹಿಂದಿನ ಋಕ್ಕಿನಲ್ಲಿ ಇದರ ಪ್ರಕ್ರಿಯೆ ವ್ಯಾಖ್ಯಾತವಾಗಿದೆ. ॥ ೧೦ ॥

ಸಂಹಿತಾಪಾಠಃ

ಯದಿಂದ್ರಾಗ್ನೀ ದಿವಿ ಷ್ಠೋ ಯತ್ಪೃಥಿವ್ಯಾಂ ಯತ್ಪರ್ವತೇ-
ಷ್ವೋಷಧೀಷ್ವಪ್ಸು।
ಅತಃ ಪರಿ ವೃಷಣಾವಾ ಹಿ ಯಾತಮಥಾ ಸೋಮಸ್ಯ ಪಿಬತಂ
ಸುತಸ್ಯ ॥೧೧॥

ಪದಪಾಠಃ

ಯತ್ । ಇಂದ್ರಾಗ್ನೀ ಇತಿ । ದಿವಿ । ಸ್ಥಃ । ಯತ್ । ಪೃಥಿವ್ಯಾಂ । ಯತ್ । ಪರ್ವತೇಷು । ಓಷಧೀಷು । ಅಪ್ಽಸು ।
ಅತಃ । ಪರಿ । ವೃಷಣೌ । ಆ । ಹಿ । ಯಾತಂ । ಅಥ । ಸೋಮಸ್ಯ । ಪಿಬತಂ । ಸುತಸ್ಯ ॥

ಸಾಯಣಭಾಷ್ಯಂ

ಹೇ ಇಂದ್ರಾಗ್ನೀ ದಿವಿ ದ್ಯುಲೋಕೇ ಯದ್ಯದಿ ಸ್ಥಃ ಭವಥಃ । ಯದಿ ವಾ ಪೃಥಿವ್ಯಾಂ ಭೂಲೋಕೇ ಯದಿ ವಾ ಪರ್ವತೇಷು ಮೇರ್ವಾದಿಷು ಮೇಘೇಷು ವಾ । ತಥಾ ಓಷಧೀಷು ತಿಲಮಾಷವ್ರೀಹ್ಯಾದಿಷ್ವಪ್ಸೂದಕೇಷು ಚಾನುಗ್ರಾಹಕತಯಾ ಯದಿ ವಾ ಸ್ಥಃ । ಹೇ ಕಾಮಾಭಿವರ್ಷಕೌ ಯುವಾಮತಃ ಸರ್ವಸ್ಮಾತ್ಸ್ಥಾನಾದಾಗಚ್ಛತಂ । ಆಗತ್ಯ ಚಾಭಿಷುತಂ ಸೋಮಂ ಪಿಬತಂ ॥ ಪೃಥಿವ್ಯಾಂ । ಉದಾತ್ತಯಣ ಇತಿ ವಿಭಕ್ತೇರುದಾತ್ತತ್ವಂ । ಓಷಧೀಷು । ಓಷಃ ಪಾಕ ಆಸು ಧೀಯತ ಇತಿ ಓಷಧಯಃ । ಕರ್ಮಣ್ಯಧಿಕರಣೇ ಚೇತಿ ಕಿಪ್ರತ್ಯಯಃ । ದಾಸೀಭಾರಾದಿತ್ವಾತ್ಪೂರ್ವಪದಪ್ರಕೃತಿಸ್ವರತ್ವಂ । ತಚ್ಚ ಘಞಂತಮಾದ್ಯುದಾತ್ತಂ । ಓಷಧೇಶ್ಚ ವಿಭಕ್ತಾವಪ್ರಥಮಾಯಾಮಿತಿ ದೀರ್ಘಃ ॥

॥ ಪ್ರತಿಪದಾರ್ಥ ॥

ಇಂದ್ರಾಗ್ನೀ—ಎಲೈ ಇಂದ್ರಾಗ್ನಿಗಳೇ, (ನೀವಿಬ್ಬರೂ) । **ದಿವಿ**—ದ್ಯುಲೋಕದಲ್ಲಿ । **ಯತ್**—ಒಂದು ವೇಳೆ । **ಸ್ಥಃ**—ಇದ್ದರೂ ಸರಿ, । **ಯತ್**—ಒಂದು ವೇಳೆ । **ಪೃಥಿವ್ಯಾಂ**—ಭೂಲೋಕದಲ್ಲಿ (ಇದ್ದರೂ) **ಯತ್**—ಅಥವಾ ಒಂದು ವೇಳೆ । **ಪರ್ವತೇಷು**—ಪರ್ವತಗಳಲ್ಲಾಗಲಿ, (ಮೇಘಗಳಲ್ಲಾಗಲಿ)। **ಓಷಧೀಷು**—ಮೂಲಿಕೆಗಳಲ್ಲಾಗಲಿ, । **ಅಪ್ಸು**—ನೀರುಗಳಲ್ಲಾಗಲಿ, । (ಸ್ಥಃ ಇದ್ದರೂ ಸರಿ) । **ಅತಃ ಪರಿ**—ಈ ಎಲ್ಲಾ ಪ್ರದೇಶಗಳ ನಡುವೆ ಎಲ್ಲಿದ್ದರೆ ಅಲ್ಲಿಂದ । **ವೃಷಣಾ**—ಇಷ್ಟಾರ್ಥಪ್ರದರಾದ ಇಂದ್ರಾಗ್ನಿಗಳೇ, । **ಆ ಹಿ ಯಾತಂ**—ಖಂಡಿತವಾಗಿಯೂ ಇಲ್ಲಿಗೆ ಬನ್ನಿರಿ. । **ಅಥ**—ಬಂದನಂತರ । **ಸುತಸ್ಯ**—ಹಿಂಡಿರುವ । **ಸೋಮಸ್ಯ**—ಸೋಮರಸದ (ನಿಮ್ಮ ಅಂಶವನ್ನು) । **ಪಿಬತಂ** – ಕುಡಿಯಿರಿ ।

॥ ಭಾವಾರ್ಥ ॥

ಇಷ್ಟಾರ್ಥಪ್ರದರಾದ ಎಲೈ ಇಂದ್ರಾಗ್ನಿಗಳೇ, ನೀವಿಬ್ಬರೂ ದ್ಯುಲೋಕದಲ್ಲಿದ್ದರೂ ಅಥವಾ ಭೂಲೋಕದಲ್ಲಿದ್ದರೂ ಅಥವಾ ಒಂದು ವೇಳೆ ಪರ್ವತಗಳಲ್ಲಾಗಲಿ, ಮೂಲಿಕೆಗಳಲ್ಲಾಗಲಿ, ನೀರುಗಳಲ್ಲಾಗಲಿ ಇದ್ದರೂ ಸರಿ, ಈ ಎಲ್ಲಾ ಪ್ರದೇಶಗಳ ನಡುವೆ ಎಲ್ಲಿದ್ದರೆ ಅಲ್ಲಿಂದ ಖಂಡಿತವಾಗಿಯೂ ನಮ್ಮ ಯಜ್ಞಕ್ಕೆ ದಯಮಾಡಿರಿ. ಬಂದು ಇಲ್ಲಿ ನಿಮಗಾಗಿ ಹಿಂಡಿರುವ ಸೋಮರಸದಲ್ಲಿ ನಿಮ್ಮ ಭಾಗವನ್ನು ಕುಡಿಯಿರಿ.

English Translation

Whether, Indra and Agni, you are in heaven or upon earth, in the mountains, in the herbs, or in the waters, showerers of benefits, come hither from wherever you may be, and drink of the effused libation.

ವ್ಯಾಕರಣಪ್ರಕ್ರಿಯಾ

**ದಿವಿ**—**ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪೃಥಿವ್ಯಾಮ್**—**ಉದಾತ್ತಯಣೋಹ**—(ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಓಷಧೀಷು**—ಓಷಃ ಪಾಕಃ ಆಸು ಧೀಯತೇ ಇತಿ ಓಷಧಯಃ ಡುಧಾಞ್ ಧಾರಣಪೋಷಣಯೋಃ ಧಾತು. **ಕರ್ಮಣ್ಯಧಿಕರಣೇ ಚ**—(ಪಾ. ಸೂ. ೩-೩-೯೩) ಎಂಬುದರಿಂದ ಕಿ ಪ್ರತ್ಯಯ. **ಆತೋಲೋಪ ಇಟಿಚ**—(ಪಾ. ಸೂ. ೬-೪-೬೪) ಎಂಬುದರಿಂದ ಪ್ರತ್ಯಯನಿಮಿತ್ತವಾಗಿ ಧಾತುವಿನ ಆಕಾರಕ್ಕೆ ಲೋಪ. ದಾಸೀಭಾರಾದಿಯಲ್ಲಿ ಪಠಿತವಾದುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಓಷಃ ಎಂಬುದು ಘಞಂತವಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ೬-೧-೧೯೭) ಎಂಬುದರಿಂದ ಆದ್ಯುದಾತ್ತವಾಗುತ್ತದೆ. ಸಪ್ತಮೀವಿಭಕ್ತಿ ಸುಪ್ ಪರವಾದಾಗ **ಓಷಧೇಶ್ಚ ವಿಭಕ್ತಾವಪ್ರಥಮಾಯಾಮ್**—ಎಂಬ ವಚನದಿಂದ ದೀರ್ಘ ಬರುತ್ತದೆ.

ಅಪ್ಸು—ಊಡಿದಂಪದಾದಿ—(ಪಾ. ಸೂ. ೬-೧-೧೭೧) ಎಂಬುವದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೧೧ ॥



ಸಂಹಿತಾಪಾಠಃ

ಯದಿಂದ್ರಾಗ್ನೀ ಉದಿತಾ ಸೂರ್ಯಸ್ಯ ಮಧ್ಯೇ ದಿವಃ ಸ್ವಧಯಾ
ಮಾದಯೇಥೇ ।
ಅತಃ ಪರಿ ವೃಷಣಾವಾ ಹಿ ಯಾತಮಥಾ ಸೋಮಸ್ಯ ಪಿಬತಂ
ಸುತಸ್ಯ ॥ ೧೨ ॥

ಪದಪಾಠಃ

ಯತ್ । ಇಂದ್ರಾಗ್ನೀ ಇತಿ । ಉತ್ऽಇತಾ । ಸೂರ್ಯಸ್ಯ । ಮಧ್ಯೇ । ದಿವಃ ।
ಸ್ವಧಯಾ । ಮಾದಯೇಥೇ ಇತಿ ।
ಅತಃ । ಪರಿ । ವೃಷಣೌ । ಆ । ಹಿ । ಯಾತಂ । ಅಥ । ಸೋಮಸ್ಯ । ಪಿಬತಂ ।
ಸುತಸ್ಯ ॥ ೧೨ ॥

ಸಾಯಣಭಾಷ್ಯಂ

ಹೇ ಇಂದ್ರಾಗ್ನೀ ಉದಿತಾ ಉದಿತಸ್ಯೋದಯಂ ಪ್ರಾಪ್ತಸ್ಯ ಸೂರ್ಯಸ್ಯಾದಿತ್ಯಸ್ಯ ಸಂಬಂಧಿನೋ ದಿವೋ ದ್ಯೋತಮಾನಸ್ಯಾಂತರಿಕ್ಷಸ್ಯ ಮಧ್ಯೇ ಮಧ್ಯಭಾಗೇ ಸ್ವಧಯಾತ್ಮೀಯೇನ ತೇಜಸಾ ಹವಿರ್ಲ-

**ಕ್ಷಣೇನಾನ್ಯೇನ ವಾ ಯದ್ಯಸ್ಮಾತ್ಕಾರಣಾನ್ಮಾದಯೇಥೇ ತೃಪ್ತೌ ಭವಥಃ । ತಸ್ಮಾತ್ಕಾರಣಾದತಃ ಸರ್ವಸ್ಮಾದಂತರಿಕ್ಷಭಾಗಾತ್ ಹೇ ಕಾಮಾಭಿವರ್ಷಕಾವಿಂದ್ರಾಗ್ನೀ ಆಗಚ್ಛತಂ । ಆಗಮನಾನಂತರಮಭಿಷುತಂ ಸೋಮಂ ಪಿಬತಂ ॥ ಉದಿತಾ । ಸುಪಾಂ ಸುಲುಗಿತಿ ಷಷ್ಠ್ಯಾ ಡಾದೇಶಃ । ದಿವಃ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ಮಾದಯೇಥೇ । ಮದ ತೃಪ್ತಿಯೋಗೇ । ಚುರಾದಿರಾತ್ಮನೇಪದೀ ॥**

ಪ್ರತಿಪದಾರ್ಥ

**ಇಂದ್ರಾಗ್ನೀ**—ಎಲೈ ಇಂದ್ರಾಗ್ನಿಗಳೇ (ನೀವಿಬ್ಬರೂ) । **ಉದಿತಾ** ಉದಯಿಸಿರುವ । **ಸೂರ್ಯಸ್ಯ**—ಆದಿತ್ಯನ ಸಂಬಂಧವಾದುದೂ । **ದಿವಃ**—ಪ್ರಕಾಶಮಾನವಾದುದೂ ಆದ ಅಂತರಿಕ್ಷದ । **ಮಧ್ಯೇ**—ಮಧ್ಯಭಾಗದಲ್ಲಿ । **ಸ್ವಧಯಾ**—(ನಿಮ್ಮ) ಸ್ವತೇಜಸ್ಸಿನಿಂದ (ಬೆಳಗುತ್ತಾ) । **ಯತ್**—ಒಂದುವೇಳೆ । **ಮಾದಯೇಥೇ**—ತೃಪ್ತರಾಗಿ ಹರ್ಷಿತರಾಗಿದ್ದರೂ ಸಹ । **ಅತಃ ಪರಿ**—ಆ ಸಮಸ್ತವಾದ ಅಂತರಿಕ್ಷಭಾಗದಿಂದಲೂ । **ವೃಷಣೌ**—ಇಷ್ಟಾರ್ಥಪ್ರದರಾದ ಇಂದ್ರಾಗ್ನಿಗಳೇ । **ಆ ಹಿ ಯಾತಂ**—ಖಂಡಿತವಾಗಿಯೂ ದಯಮಾಡಿರಿ । **ಅಥ**—ಬಂದನಂತರ । **ಸುತಸ್ಯ**—ಹಿಂಡಿರುವ । **ಸೋಮಸ್ಯ**—ಸೋಮರಸದ (ನಿಮ್ಮ ಅಂಶವನ್ನು) **ಪಿಬತಂ**—ಕುಡಿಯಿರಿ.

ಭಾವಾರ್ಥ

ಎಲೈ ಇಷ್ಟಾರ್ಥಪ್ರದರಾದ ಇಂದ್ರಾಗ್ನಿಗಳೇ, ನಿವಿಬ್ಬರೂ ಒಟ್ಟಿಗೆ ಉದಯಿಸಿರುವ ಆದಿತ್ಯನ ಸಂಬಂಧವಾದುದೂ, ಪ್ರಕಾಶಮಾನವಾದುದೂ ಆದ ಅಂತರಿಕ್ಷದ ಮಧ್ಯಭಾಗದಲ್ಲಿ ನಿಮ್ಮ ಸ್ವತೇಜಸ್ಸಿನಿಂದ ಬೆಳಗುತ್ತಾ ಒಂದುವೇಳೆ ಹರ್ಷಿತರಾಗಿದ್ದರೂ ಸಹ ಆ ಸಮಸ್ತವಾದ ಅಂತರಿಕ್ಷದ ಭಾಗದಿಂದಲೂ ನಮ್ಮಲ್ಲಿಗೆ ಖಂಡಿತವಾಗಿಯೂ ದಯಮಾಡಿರಿ. ಬಂದನಂತರ ನಿಮಗಾಗಿ ಹಿಂಡಿರುವ ಸೋಮರಸದಲ್ಲಿ ನಿಮ್ಮ ಭಾಗವನ್ನು ಕುಡಿಯಿರಿ.

English Translation

Although, Indra and Agni, in the midst of the sky, on the rising of the sun, you may be exhilarated by your own splendour, yet, showerers of benefits, come hither from wherever you may be, and drink of the effused libation.

ವಿಶೇಷವಿಷಯಗಳು

**ಉದಿತಾ ಸೂರ್ಯಸ್ಯ ದಿವಃ ಮಧ್ಯೇ**—ಎಂಬ ವಾಕ್ಯಕ್ಕೆ ಸಾಯಣರು-**ಉದಯಂ ಪ್ರಾಪ್ತಸ್ಯ ಆದಿತ್ಯಸ್ಯ ಸಂಬಂಧಿನಃ ದ್ಯೋತಮಾನಸ್ಯ ಅಂತರಿಕ್ಷಸ್ಯ ಮಧ್ಯಭಾಗೇ** । ಉದಯಿಸಿರುವ ಆದಿತ್ಯನ ಸಂಬಂಧವಾದುದೂ, ಪ್ರಕಾಶಮಾನವಾದುದೂ ಆದ ಅಂತರಿಕ್ಷದ ಮಧ್ಯಭಾಗದಲ್ಲಿ ಎಂದೂ, ಸ್ಕಂದಸ್ವಾಮಿಗಳು ಈ ವಾಕ್ಯವನ್ನು ಎರಡು ಭಾಗಗಳನ್ನಾಗಿ ಮಾಡಿ, **ಯದಿ ಉದಯೇಽಸ್ಯ ಸೂರ್ಯಸ್ಯ । ಆದಿತ್ಯಸ್ಯ ಉದಯವೇಲಾಯಾಂ** ಸೂರ್ಯನ ಉದಯದಕಾಲದಲ್ಲಾಗಲಿ **ಅಥವಾ ಯದಿ ಮಧ್ಯೇ ದಿವಃ** ಎಂದರೆ ಅಹಸ್ಸಿನ ಮಧ್ಯದಲ್ಲಿ ಅಥವಾ ಮಧ್ಯಾಹ್ನ ಕಾಲದಲ್ಲಿ ಎಂದೂ ಅರ್ಥಮಾಡಿದ್ದಾರೆ. ಅಂತರಿಕ್ಷದ ಮಧ್ಯಭಾಗದಲ್ಲಿ ಹರ್ಷಪಡುತ್ತಿದ್ದರೂ ನಮ್ಮ ಯಜ್ಞದಲ್ಲಿ ಸೋಮರಸವನ್ನು ಕುಡಿಯಲು ಬನ್ನಿರಿ ಎಂದು ಒಂದು ಅರ್ಥವೂ, ಸೂರ್ಯೋದಯ ಕಾಲದಲ್ಲಿ ಸಂತೋಷಪಡುತ್ತಿದ್ದರೂ

ಅಥವಾ ಮಧ್ಯಾಹ್ನ ಕಾಲದಲ್ಲಿ ಹರ್ಷವನ್ನನುಭವಿಸುತ್ತಿದ್ದರೂ ಅಹ ನನ್ನ ಯಜ್ಞದಲ್ಲಿ ಸೋಮರಸವನ್ನು ಕುಡಿಯಲು ಬನ್ನಿರಿ ಎಂದು ಇನ್ನೊಂದರ್ಥವೂ ಆಗುತ್ತದೆ.

ಸ್ವಧಯಾ ಮಾದಯೇಥೇ---ಸ್ವಧೆಯಿಂದ ಹರ್ಷಿತರಾಗಿರುವುದು. ಇಲ್ಲಿ ಸ್ವಧಯಾ ಎನ್ನುವ ಪದಕ್ಕೆ ಆತ್ಮೀಯೇನ ತೇಜಸಾ ಹವಿರ್ಲಕ್ಷಣೇನ ಅನ್ನೇನ ವಾ ಎಂದು ಎರಡು ವಿಧವಾದ ಅರ್ಥವನ್ನು ಮಾಡಿದ್ದಾರೆ ಸ್ವಧಾ ಶಬ್ದವನ್ನು ನಿರುಕ್ತಕಾರರು ಉದಕನಾಮಗಳಲ್ಲಿಯೂ (ನಿ. ೨-೨೩) ಅನ್ನನಾಮಗಳಲ್ಲಿಯೂ (೩-೯) ಸೇರಿ ಸಿರುತ್ತಾರೆ. ಆದರೆ ಅನೇಕ ಸಂದರ್ಭಗಳಲ್ಲಿ ಸ್ವಧಾ ಶಬ್ದಕ್ಕೆ ಸ್ವಮಹಿಮೆ, ಸ್ವತೇಜಸ್ಸು ಅಥವಾ ಸ್ವಾತ್ಮ್ಯ ಎಂಬ ಅರ್ಥಗಳೂ ಆಗುತ್ತವೆ.

ಅಥೋ ವೃಚ್ಯಾದುತ್ತರಾ ಅನು ದ್ಯೂನಜರಾವೃತಾ ಚರತಿ ಸ್ವಧಾಭಿಃ ।

(ಋ. ಸಂ. ೧-೧೧೩-೧೩)

ಎಂಬ ಋಕ್ಕಿನಲ್ಲಿ ಉಷಸ್ಸಿನ ಪರವಾಗಿ ಉಪಯೋಗಿಸಲ್ಪಟ್ಟ ಸ್ವತೇಜೋಭಿಃ ಎಂದರ್ಥವಾಗುತ್ತದೆ. ಇದರಂತೆಯೇ

ಯುದ್ವಾ ಸ್ವಧಾಭಿರಧಿತಿಷ್ಠಥೋ ರಥಮತ ಆ ಯಾತಮಶ್ವಿನಾ ।

(ಋ. ಸಂ. ೮-೧೦-೬)

ಎಂಬಲ್ಲಿ ಆತ್ಮೀಯೈಸ್ತೇಜೋಭಿರ್ಬಲೈರ್ವಾ ಸಾರ್ಧಂ । ನಿಮ್ಮ ಸ್ವತೇಜಸ್ಸುಗಳಿಂದ ಅಥವಾ ಸ್ವಶಕ್ತಿಗಳೊಡನೆ ಎಂದರ್ಥ. ಇದರಂತೆಯೇ,

ಆಸ್ಥಾದ್ರಥಂ ಸ್ವಧಯಾ ಯುಜ್ಯಮಾನಮಾ ಯಮಶ್ವಾಸಃ ಸುಯುಜೋ ವಹಂತಿ ।

(ಋ. ಸಂ. ೭-೭೮-೪)

ಇತ್ಯಾದಿ ಋಕ್ಕುಗಳಲ್ಲೂ ಸಹ ಅಂತಃಸತ್ತ್ವ ಅಥವಾ ಮಹಿಮೆ ಎಂದರ್ಥವಾಗುತ್ತದೆ.

ಸ್ವಧಾಂ ಅನು ; ಅಥವಾ ಅನು ಸ್ವಧಾಂ ಎಂಬ ಪ್ರಯೋಗಗಳಿರುವಾಗ ಸಹಜವಾಗಿ, ಸ್ವಭಾವತಃ, ಪದ್ಧತಿಯಂತೆ ಎಂದಭಿಪ್ರಾಯಗಳಿರುತ್ತವೆ.

ಸ್ವಧಾಮನು ಶ್ರಿಯಂ ನರೋ ಮಹಿ ತ್ವೇಷಾ ಅಮವಂತೋ ವೃಷಪ್ಸವಃ ।

( ಋ. ಸಂ. ೮-೨೦-೭ )

ವಿ ವಿದ್ಯುತೋ ನ ವೃಷ್ಟಿಭೀ ರುಚಾನಾ ಅನು ಸ್ವಧಾಮಾಯುಧೈರ್ಯಚ್ಛಮಾನಾಃ ॥

(ಋ. ಸಂ. ೭-೫೬-೧೩)

ಇತ್ಯಾದಿ ಋಕ್ಕುಗಳಲ್ಲಿ ಸಹಜವಾಗಿ, ಸ್ವಭಾವವಾಗಿ ಎಂದರ್ಥವಾಗುತ್ತದೆ.

ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂ ಚನಾಸ ।

(ಋ. ಸಂ. ೧೦-೧೨೯-೨)

ಎಂಬ ಋಕ್ಕಿನಲ್ಲಿ ಸಾಯಣರು ಸ್ವಸ್ಮಿನ್ ಧೀಯತೇ ಧ್ರಿಯತೇ ಆಶ್ರಿತ್ಯ ವರ್ತತೇ ಇತಿ ಸ್ವಧಾ, ಸ್ವಾಶ್ರಯಾ ಪಹಿಂಬಿಸುಹ ಮಾಯೆಯಿಂದ ಸ್ವಧಾ ಎಂದು ಮಾಯೆಗೆ ನಿರ್ದೇಶವಾಗಿದೆಯೆಂದು ವಿವರಿಸಿದ್ದಾರೆ.

**ಆಚಕ್ರಿಯಾ ಯತ್ಸ್ವಧಯಾ ಸುಪರ್ಣೋ ಹವ್ಯಂ ಭರನ್ಮನವೇ ದೇವಜುಷ್ಟಂ ।**

(ಋ ಸಂ. ೪-೨೬-೪)

ಎಂಬಲ್ಲಿ ರಥೇನ ಎಂತಲೂ

**ಅಪಶ್ಯಂ ಗ್ರಾಮಂ ವಹಮಾನಮಾರಾದಚಕ್ರಯಾ ಸ್ವಧಯಾ ವರ್ತಮಾನಂ ।**

(ಋ. ಸಂ. ೧೦-೨೭-೧೯)

ಎಂಬ ಋಕ್ಕಿನಲ್ಲಿ **ಸ್ವಯಮಾತ್ಮಾನಂ ಧಾರಯಂತ್ಯಾ ಸೇನಯಾ** ಎಂತಲೂ,

**ಯಸ್ಯ ತ್ರೀ ಪೂರ್ಣಾ ಮಧುನಾ ಪದಾನ್ಯಕ್ಷೀಯಮಾಣಾ ಸ್ವಧಯಾ ಮದಂತಿ ।**

(ಋ. ಸಂ. ೧-೧೫೪-೪)

**ಅಜಾತಶತ್ರುಮಜರಾ ಸ್ವರ್ವತ್ಯನು ಸ್ವಧಾಮಿತಾ ದಸ್ಮಮೀಯತೇ ।**

(ಋ ಸಂ ೫-೩೪-೧)

**ಪ್ರಾದಾಃ ಪಿತೃಭ್ಯಃ ಸ್ವಧಯಾ ತೇ ಅಕ್ಷನ್ನದ್ಧಿ ತ್ವಂ ದೇವ ಪ್ರಯತಾ ಹವೀಂಷಿ ।**

(ಋ. ಸಂ. ೧೦-೧೫-೧೨)

ಇತ್ಯಾದಿ ಋಕ್ಕುಗಳಲ್ಲಿ **ಅನ್ನವೆಂದೂ** ಅದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅನ್ನವೆಂದೂ ಅರ್ಥವಾಗಬಹುದು. ಅಥವಾ ತೇಜಸ್ಸುಗಳೊಡನೆ ಎಂದಾದರೂ ಅರ್ಥವಾಗಬಹುದು.

ವ್ಯಾಕರಣಪ್ರಕ್ರಿಯಾ

**ಉದಿತಾ**— ಇಣ್ ಗತೌ ಧಾತು. **ನಿಷ್ಠಾ**—ಸೂತ್ರದಿಂದ ಕ್ತಪ್ರತ್ಯಯ. **ಗತಿರನಂತರಃ**—(ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಉತ್) ಪ್ರಕೃತಿಸ್ವರ ಬರುತ್ತದೆ. ಷಷ್ಠೀ ಏಕವಚನ ಪರವಾದಾಗ **ಸುಪಾಂ-ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಡಾದೇಶ.

**ಸೂರ್ಯಸ್ಯ**—**ಷೂಜ್** ಪ್ರಸವೇ. ಧಾತು. **ರಾಜಸೂಯಸೂರ್ಯ**— (ಪಾ. ಸೂ. ೩-೧-೧೧೪) ಎಂಬುದರಿಂದ ಕ್ಯಬಂತವಾಗಿ ನಿಪಾತಿತವಾಗಿದೆ. ಷಷ್ಠೀಏಕವಚನಾಂತರೂಪ.

**ದಿವಃ**— **ಊಡಿದಂ ಪದಾದಿ**—(ಪಾ. ಸೂ ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಮಾದಯೇಥೇ**—ಮದ ತೃಪ್ತಿಯೋಗೇ. ಧಾತು. ಚುರಾದಿ. ನಿತ್ಯಾತ್ಮನೇಪದೀ. **ಸತ್ಯಾಪಪಾಶ**—(ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್. **ಅತ ಉಪಧಾಯಾಃ**—(ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ. ಲಟ್ ಮಧ್ಯಮಪುರುಷ ದ್ವಿವಚನದಲ್ಲಿ ಆಥಾಮ್ ಪ್ರತ್ಯಯ. **ಆತೋಙಿತಃ**—(ಪಾ. ಸೂ. ೭-೨-೮೧) ಎಂಬುದರಿಂದ ಅದರ ಆಕಾರಕ್ಕೆ ಇಯಾದೇಶ. **ಲೋಪೋವ್ಯೋರ್ವಲಿ**—(ಪಾ. ಸೂ. ೬-೧-೬೬) ಎಂಬುದರಿಂದ ಯಕಾರಲೋಪ. ಶಪ್ ವಿಕರಣ. ತನ್ನಿಮಿತ್ತವಾಗಿ ಣಿಚಿಗೆ ಗುಣ ಅಯಾದೇಶ. ಯುಷ್ಮದ್ಯೋಗವಿರುವುದರಿಂದ **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಸ್ವರ ಪ್ರತಿಷೇಧ

ಬರುವುದರಿಂದ ಣಿಚ್ಸ್ವರ ಉಳಿಯುತ್ತದೆ. ಲಸಾರ್ವಧಾತುಕವು. **ತಾಸ್ಯನುದಾತ್ತೇತ್**— (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುತ್ತದೆ. ॥ ೧೨ ॥



ಸಂಹಿತಾಪಾಠಃ

ಏವೇಂದ್ರಾಗ್ನೀ ಪಪಿವಾಂಸಾ ಸುತಸ್ಯ ವಿಶ್ವಾಸ್ಮಭ್ಯಂ ಸಂ ಜಯ-
ತಂ ಧನಾನಿ ।
ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ
ಪೃಥಿವೀ ಉತ ದ್ಯೌಃ ॥ ೧೩ ॥

। ಪದಪಾಠಃ ।

ಏವ । ಇಂದ್ರಾಗ್ನೀ ಇತಿ । ಪಪಿऽವಾಂಸಾ । ಸುತಸ್ಯ । ವಿಶ್ವಾ । ಅಸ್ಮಭ್ಯಂ ।
ಸಂ । ಜಯತಂ । ಧನಾನಿ ।
ತತ್ । ನಃ । ಮಿತ್ರಃ । ವರುಣಃ । ಮಮಹಂತಾಂ । ಅದಿತಿಃ । ಸಿಂಧುಃ । ಪೃ-
ಥಿವೀ । ಉತ । ದ್ಯೌಃ ॥ ೧೩ ॥

ಸಾಯಣಭಾಷ್ಯಂ

ಹೇ ಇಂದ್ರಾಗ್ನೀ ಸುತಸ್ಯಾಭಿಷುತಂ ಸೋಮಮೇವ್ಯೈವಂ ಪಪಿವಾಂಸಾ ಪೀತವಂತೌ ಯುವಾಮಸ್ಮಭ್ಯಂ ವಿಶ್ವಾ ಸರ್ವಾಣಿ ಧನಾನಿ ಸಂ ಜಯತಂ । ಪ್ರಯಚ್ಛತಂ । ಯದನೇನ ಸೂಕ್ತೇನ ಪ್ರಾರ್ಥಿತಂ ತನ್ಮಿತ್ರಾದಯೋ ಮಮಹಂತಾಂ । ಪೂಜಯಂತು ॥ ಪಪಿವಾಂಸಾ । ಪಾ ಪಾನೇ । ಲಿಟಃ ಕ್ವಸುಃ । ವಸ್ವೇಕಾಜಾದ್ಘಸಾಮಿತೀಡಾಗಮಃ ॥

### ಪ್ರತಿಪದಾರ್ಥ

**ಇಂದ್ರಾಗ್ನೀ**—ಎಲೈ ಇಂದ್ರಾಗ್ನಿಗಳೇ | **ಸುತಸ್ಯ**—ಹಿಂಡಿದ ಸೋಮರಸದ (ನಿಮ್ಮ ಭಾಗವನ್ನು) **ಏವ**—ಈ ಪ್ರಕಾರವಾಗಿ | **ಪಪಿವಾಂಸಾ**—ಕುಡಿದವರಾಗಿ (ನೀವಿಬ್ಬರೂ) **ಅಸ್ಮಭ್ಯಂ**—ನಮಗೆ | **ವಿಶ್ವಾ**—ಸಮಸ್ತವಾದ | **ಧನಾನಿ**—ಧನಗಳನ್ನೂ | **ಸಂಜಯತಂ**—ಒದಗಿಸಿಕೊಡಿರಿ | **ನಃ**—ನಮ್ಮ | **ತತ್**—(ನಮ್ಮಿಂದ ಪ್ರಾರ್ಥಿತವಾದುದೂ ಮತ್ತು ಇಂದ್ರಾಗ್ನಿಗಳಿಂದ ದತ್ತವಾದುದೂ ಆದ) ಧನವನ್ನು | **ಮಿತ್ರಃ**—ಮಿತ್ರನೂ | **ವರುಣಃ**—ವರುಣನೂ | **ಅದಿತಿಃ**—ಅದಿತಿಯೂ | **ಸಿಂಧುಃ**—ಸಾಗರಾಧಿ ದೇವತೆಯೂ | **ಪೃಥಿವೀ**—ಪೃಥಿವಿಯೂ | **ಉತ**—ಮತ್ತು | **ದ್ಯೌಃ**—ದ್ಯುಲೋಕಾಧಿ ದೇವತೆಯೂ | **ಮಮಹಂತಾಂ**—ರಕ್ಷಿಸಲಿ.

### ॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ನಿಮ್ಮ ಭಾಗದ ಸೋಮರಸವನ್ನು ಈರೀತಿ ನಮ್ಮ ಪ್ರಾರ್ಥನೆಯನ್ನಂಗೀಕರಿಸಿ ಕುಡಿದವರಾಗಿ ನೀವಿಬ್ಬರೂ ಸಹ ನಮಗೆ ಸಮಸ್ತವಾದ ಧನಗಳನ್ನೂ ಒದಗಿಸಿಕೊಡಿರಿ. ನಮ್ಮಿಂದ ಪ್ರಾರ್ಥಿತವಾದುದೂ ಮತ್ತು ಇಂದ್ರಾಗ್ನಿಗಳಿಂದ ದತ್ತವಾದುದೂ ಆದ ಧನವನ್ನು ಮಿತ್ರನೂ, ವರುಣನೂ, ಅದಿತಿಯೂ, ಸಾಗರಾಧಿ ದೇವತೆಯೂ, ಪೃಥಿವಿಯೂ ಮತ್ತು ದ್ಯುಲೋಕಾಧಿ ದೇವತೆಯೂ ರಕ್ಷಿಸಲಿ.

### English Translation

Thus Indra and Agni, drinking deep of the libation, grant to us all (kinds of) wealth ; and may Mitra, Varuna, and Aditi,—ocean, earth, and heaven, preserve it to us.

### ವಿಶೇಷವಿಷಯಗಳು

**ಏವ**—ಏವಂ ಈ ಪ್ರಕಾರವಾಗಿ. ಏವಂ ಎನ್ನುವುದಕ್ಕೆ ಏವ ಎಂಬ ಪ್ರಯೋಗವು ಅನೇಕ ಕಡೆಯಲ್ಲಿ ಬಂದಿದೆ.

**ಏವೇದೇತೇ ಪ್ರತಿ ಮಾ ರೋಚಮಾನಾ ಅನೇದ್ಯಃ ಶ್ರವ ಏಷೋ ದಧಾನಾಃ |**
(ಋ. ಸಂ. ೧-೧೬೫-೧೨)

**ಏವಾ ಬಭ್ರೋ ವೃಷಭ ಚೇಕಿತಾನ ಯಥಾ ದೇವ ನ ಹೃಣೀಷೇ ನ ಹಂಸಿ |**
(ಋ. ಸಂ. ೨-೩೩-೧೫)

ಇತ್ಯಾದಿ ಋಕ್ಕುಗಳಲ್ಲಿ ಅನುಸ್ವಾರಲೋಪವಾಗಿ ಏವ ಎಂಬ ಪ್ರಯೋಗವೇ ಇದೆ.

**ಪಪಿವಾಂಸಾ—ಪೀತವಂತೌ** | ಪಾನಮಾಡಿದವರಾಗಿ.

**ಸಂಜಯತಂ—ಪ್ರಯಚ್ಛತಂ** | ಕೊಡಿರಿ.

॥ ವ್ಯಾಕರಣಪ್ರಕ್ರಿಯಾ ॥

**ಪಪಿವಾಂಸಾ**—ಪಾ. ಪಾನೇ. ಧಾತು ಇದಕ್ಕೆ ಲಿಟ್ ವಿವಕ್ಷಿತವಾದಾಗ **ಕ್ವಸುಶ್ಚ**—(ಪಾ. ಸೂ. ೩-೨-೧೦೭) ಎಂಬುದರಿಂದ ಕ್ವಸುಪ್ರತ್ಯಯ. **ವಸ್ವೇಕಾಜಾದ್ಘಸಾಮ್**—(ಪಾ. ಸೂ. ೭-೨-೬೭) ಎಂಬುದರಿಂದ ಏಕಾಚ್ ಧಾತುವಿನ ಪರದಲ್ಲಿ ಬಂದುದರಿಂದ ವಸುವಿಗೆ ಇಡಾಗಮ. ಇದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. **ಆತೋಲೋಪ ಇಟಿ ಚ**—(ಪಾ. ಸೂ. ೬-೪-೬೪) ಎಂಬುದರಿಂದ ಆಕಾರಕ್ಕೆ ಲೋಪ. ಪಪಿವಸ್ ಶಬ್ದವಾಗುತ್ತದೆ. ಪ್ರತ್ಯಯಸ್ವರ ಬರುತ್ತದೆ. ದ್ವಿವಚನ ಪರವಾದಾಗ **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಆಕಾರಾದೇಶ. ಪ್ರತ್ಯಯ ಉಗಿತ್ತಾದುದರಿಂದ **ಉಗಿದಚಾಂ ಸ**—(ಪಾ. ಸೂ. ೭-೧-೭೦) ಎಂಬುದರಿಂದ ನುಮಾಗಮ. **ಅತ್ವಸಂತಸ್ಯ**—ಸೂತ್ರದಿಂದ ಉಪಧಾದೀರ್ಘ. ನಕಾರಕ್ಕೆ ಅನುಸ್ವಾರ.

**ವಿಶ್ವಾ**—ನಪುಂಸಕದಲ್ಲಿ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್**—(ಪಾ. ಸೂ. ೬-೧-೭೦)—ಎಂಬುದರಿಂದ ಶಿಗೆ ಲೋಪ.

**ಜಯತಮ್**—ಜಿ ಜಯೇ. ಧಾತು. ಲೋಟ್ ಮಧ್ಯಮಪುರುಷ ದ್ವಿವಚನದಲ್ಲಿ ಲಙ್ವದ್ಭಾವವಿರುವುದರಿಂದ ತಮಾದೇಶ. ಶಪ್ ವಿಕರಣ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ ಅಯಾದೇಶ ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೩ ॥

ನೂರ ಎಂಟನೆಯ ಸೂಕ್ತವು ಸಮಾಪ್ತಿಯಾದುದು.

——:o:——

# ನೂರ ಒಂಭತ್ತನೆಯ ಸೂಕ್ತವು

**ವಿ ಹೀತ್ಯಷ್ಟರ್ಚಂ ಚತುರ್ಥಂ ಸೂಕ್ತಂ । ಅನುಕ್ರಾಂತಂ ಚ । ವಿ ಹ್ಯಖ್ಯಮಿತಿ । ಋಷ್ಯಾದ್ಯಾಃ ಪೂರ್ವವತ್ । ಸೂಕ್ತವಿನಿಯೋಗೋ ಲೈಂಗಿಕಃ ॥**

ಅನುವಾದವು— ವಿ ಹ್ಯಖ್ಯಂ ಎಂಬ ಈ ಸೂಕ್ತವು ಹದಿನಾರನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು ಅನುಕ್ರಮಣಿಕೆಯಲ್ಲಿ ವಿ ಹ್ಯಖ್ಯಮಿತಿ ಎಂದು ಮೊದಲಾಗಿ ಹೇಳಿರುವುದು. ಋಷಿದೇವತಾ ಛಂದಸ್ಸುಗಳು ಹಿಂದಿನ ಸೂಕ್ತದಂತೆ. ವಿನಿಯೋಗವು ಲೈಂಗಿಕವು.

॥ ಓಂ ॥

## ಸೂಕ್ತ—೧೦೯

ಮಂಡಲ—೧ ॥ ಅನುವಾಕ—೧೬ ॥ ಸೂಕ್ತ— ೧೦೯ ॥

ಅಷ್ಟಕ—೧ ॥ ಅಧ್ಯಾಯ—೭ ॥ ವರ್ಗ— ೨೮, ೨೯ ।

ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥

॥ ಋಷಿಃ—ಕುತ್ಸ ಆಂಗಿರಸಃ ॥

॥ ದೇವತಾ— ಇಂದ್ರಾಗ್ನೀ ॥

॥ ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ವಿ ಹ್ಯಖ್ಯಂ ಮನಸಾ ವಸ್ಯ ಇಚ್ಛನ್ನಿಂದ್ರಾಗ್ನೀ ಜ್ಞಾಸ ಉತ ವಾ
ಸಜಾತಾನ್ ।
ನಾನ್ಯಾ ಯುವತ್ಪ್ರಮತಿರಸ್ತಿ ಮಹ್ಯಂ ಸ ವಾಂ ಧಿಯಂ ವಾಜ-
ಯಂತೀಮತಕ್ಷಂ ॥ ೧ ॥

। ಪದಪಾಠಃ ।

ವಿ । ಹಿ । ಅಖ್ಯಂ । ಮನಸಾ । ವಸ್ಯಃ । ಇಚ್ಛನ್ । ಇಂದ್ರಾಗ್ನೀ ಇತಿ । ಜ್ಞಾಸಃ ।
ಉತ । ವಾ । ಸಽಜಾತಾನ್ ।
ನ । ಅನ್ಯಾ । ಯುವತ್ । ಪ್ರಽಮತಿಃ । ಅಸ್ತಿ । ಮಹ್ಯಂ । ಸಃ । ವಾಂ ।
ಧಿಯಂ । ವಾಜಽಯಂತೀಂ । ಅತಕ್ಷಂ ॥ ೧ ॥

|| ಸಾಯಣಭಾಷ್ಯಂ ||

ಹೇ ಇಂದ್ರಾಗ್ನೀ ವಸ್ಯಃ ಪ್ರಶಸ್ತಂ ಧನಮಿಚ್ಛನ್ ಕಾಮಯಮಾನೋಽಹಂ ಜ್ಞಾಸೋ ಜ್ಞಾತೀನ್ ಉತ ವಾಪಿ ವಾ ಸಜಾತಾನ್ । ಸಮಾನಜನ್ಮಾನೋ ಜ್ಞಾತಿವ್ಯತಿರಿಕ್ತಾ ಬಾಂಧವಾ ತಾಂಶ್ಚ ಮನಸಾ ಬುದ್ಧ್ಯಾ ವಿ ಹ್ಯಖ್ಯಂ । ಯುವಾಮೇವ ಜ್ಞಾತಿರೂಪೇಣ ಬಂಧುರೂಪೇಣ ಚ ವ್ಯಜ್ಞಾಸಿಷಂ । ತೇ ಹಿ ಧನಸ್ಯ ದಾತಾರೋ ಭವಂತಿ । ಅಪಿ ಚ ಯುವದ್ಭ್ಯಾಂ ಯುವಾಭ್ಯಾಮನ್ಯೇನ ಕೇನಚಿನ್ಮಹ್ಯಂ ದತ್ತಾ ಪ್ರಮತಿಃ ಪ್ರಕೃಷ್ಟಾ ಬುದ್ಧಿರ್ನಾಸ್ತಿ । ಮದೀಯಾ ಯೈಷಾ ಪ್ರಕೃಷ್ಟಾ ಬುದ್ಧಿಃ ಸಾ ಯುವಾಭ್ಯಾಮೇವ ದತ್ತಾ । ಸ ತಾದೃಶ್ಯಾ ಬುದ್ಧ್ಯಾ ಯುಕ್ತೋಽಹಂ ವಾಂ ಯುವಯೋಃ ಸಂಬಂಧಿನೀಂ ವಾಜಯಂತೀ-ಮನ್ನಮಸ್ಮಭ್ಯಮಿಚ್ಛಂತೀಂ ಧಿಯಂ ಧ್ಯಾನೇನ ನಿಷ್ಪನ್ನಾಂ ಸ್ತುತಿಮತಕ್ಷಂ । ಅಕಾರ್ಷಂ ॥ ಅಖ್ಯಂ । ಅಸ್ಯತಿವಕ್ತಿಖ್ಯಾತಿಭ್ಯೋಽಙಿತಿ ಚ್ಲೇರಙಾದೇಶಃ । ವಸ್ಯಃ । ವಸುಶಬ್ದಾದೀಯಸುನ್ । ಟೇರಿತಿ ಟಿಲೋಪಃ । ಛಾಂದಸ ಈಕಾರಲೋಪಃ । ಜ್ಞಾಸಃ । ಸುಖದುಃಖಾದಿಕಂ ಸಾಮ್ಯೇನ ಜಾನಂತೀತಿ ಜ್ಞಾಸೋ ಜ್ಞಾತಯಃ । ಜ್ಞಾ ಅವಬೋಧನೇ । ಔಣಾದಿಕೋಽಸುನ್ । ವ್ಯತ್ಯಯೇನ ವಿಭಕ್ತೇರುದಾತ್ತತ್ವಂ । ಯುವತ್ । ಸುಪಾಂ ಸುಲುಗಿತಿ ವಿಭಕ್ತೇರ್ಲುಕ್ । ದ್ವ್ಯರ್ಥಾಭಿಧಾಯಕತ್ವಾದ್ಯುವಾವೌ ದ್ವಿವಚನೇ । ಪಾ. ೭-೨-೯೨ । ಇತಿ ಯುಷ್ಮದೋ ಮಪರ್ಯಂತಸ್ಯ ಯುವಾದೇಶಃ ॥

ಪ್ರತಿಪದಾರ್ಥ

**ಇಂದ್ರಾಗ್ನೀ**—ಎಲೈ ಇಂದ್ರಾಗ್ನಿಗಳೇ । **ವಸ್ಯಃ**—ಪ್ರಶಸ್ತವಾದ ಧನವನ್ನು । **ಇಚ್ಛನ್**—ಅಪೇಕ್ಷಿಸುವವನಾಗಿ (ನಾನು) । **ಜ್ಞಾಸಃ**—(ನನಗೆ ಸೇರಿದ) ಜ್ಞಾತಿಗಳನ್ನೂ । **ಉತ ವಾ**—ಅದೂ ಅಲ್ಲದೆ । **ಸಜಾತಾನ್**—ಇತರ ಬಂಧುಗಳನ್ನೂ । **ಮನಸಾ**—ಮನಃ ಪೂರ್ವಕವಾಗಿ । **ವಿ ಹ್ಯಖ್ಯಂ**—(ನೀವಿಬ್ಬರೇ ಎಂಬುದಾಗಿ) ಚೆನ್ನಾಗಿ ತಿಳಿದೆನು । **ಯುವತ್**—ನಿಮ್ಮಿಬ್ಬರಿಗಿಂತಲೂ । **ಅನ್ಯಾ**—ಬೇರೆ ಯಾರಿಂದಲೂ । **ಮಹ್ಯಂ**—ನನಗೆ (ಅನುಗೃಹೀತವಾದ) । **ಪ್ರಮತಿಃ**—ಶ್ರೇಷ್ಠವಾದ ಬುದ್ಧಿಯು । **ನ ಅಸ್ತಿ**—ಇಲ್ಲವು । **ಸಃ ಅಹಂ**—ಅಂತಹ ಶ್ರೇಷ್ಠವಾದ ಮತಿಯಿಂದ ಕೂಡಿದ ನಾನು । **ವಾಂ**—ನಿಮ್ಮಿಬ್ಬರನ್ನೂ ಉದ್ದೇಶಿಸಿ । **ವಾಜಯಂತೀಂ**—ಅನ್ನವನ್ನು ಇಚ್ಛಿಸಿ ಪ್ರಾರ್ಥಿಸುವುದೂ । **ಧಿಯಂ**—ಧ್ಯಾನದಿಂದ ಕೂಡಿದುದೂ ಆದ ಸ್ತೋತ್ರವನ್ನು । **ಅತಕ್ಷಂ**—ನಿರ್ಮಿಸಿದೆನು ॥

ಭಾವಾರ್ಥ

ಎಲೈ ಇಂದ್ರಾಗ್ನಿಗಳೇ, ನಾನು ಪ್ರಶಸ್ತವಾದ ಧನವನ್ನು ಅಪೇಕ್ಷಿಸುವವನಾಗಿ, ನೀವಿಬ್ಬರೇ ನನಗೆ ನಿಜವಾದ ಜ್ಞಾತಿಗಳು ಮತ್ತು ಬಂಧುಗಳು ಎಂಬುವನ್ನು ಮನಃಪೂರ್ವಕವಾಗಿ (ಅರಿತು) ತಿಳಿದೆನು. ನನ್ನಲ್ಲಿರುವ ಶ್ರೇಷ್ಠವಾದ ಬುದ್ಧಿಯು ಸಂಪೂರ್ಣವಾಗಿಯೂ ನಿಮ್ಮಿಂದಲೇ ಅನುಗೃಹೀತವಾದುದೇ ಹೊರತು ಮತ್ತಿನ್ನಾರಿಂದಲೂ ಅಲ್ಲವು. ಅಂತಹ ಶ್ರೇಷ್ಠವಾದ ಮತಿಯಿಂದ ಕೂಡಿದ ನಾನು ನಿಮ್ಮಿಬ್ಬರನ್ನೂ ಉದ್ದೇಶಿಸಿ ಅನ್ನವನ್ನು ಇಚ್ಛಿಸಿ ಪ್ರಾರ್ಥಿಸುವುದೂ ಮತ್ತು ಧ್ಯಾನದಿಂದ ಕೂಡಿದುದೂ ಆದ ಸ್ತೋತ್ರವನ್ನು ನಿರ್ಮಿಸಿದೆನು.

## English Translation

Indra and Agni, desirous of wealth, I consider you, in my mind as kinsmen and relations ; the clear understanding you have given me, (is

given) by no one else, and, (so gifted), I have composed this hymn to you intimating my wish for sustenance.

॥ ವಿಶೇಷವಿಷಯಗಳು ॥

**ವಸ್ಯಃ—ಪ್ರಶಸ್ತಂ ಧನಂ ।** ಉತ್ಕೃಷ್ಟವಾದ ಧನವನ್ನು ಎಂದು ಧನದಲ್ಲಿ ಒಂದು ಗುಣಾತಿಶಯವನ್ನು ತೋರಿಸಿದೆ. ಇದೇ ಅರ್ಥವು ಇನ್ನೂ ಮುಂದುವರಿದು ಕೆಲವು ಕಡೆಗಳಲ್ಲಿ ಶ್ರೇಯೋರೂಪವಾದ ಧನವೆಂದೂ ಅರ್ಥವಾಗುತ್ತದೆ. ಶ್ಲಾಘ್ಯವಾದ, ದಯೆಯಿಂದ ಕೂಡಿದ ಎಂಬ ತಾತ್ಪರ್ಯವೂ ಕೆಲವು ಸಂದರ್ಭಗಳಲ್ಲಿ ತೋರುತ್ತದೆ.

**ಸ ನೋ ನೇಷನ್ನೇಷತಮೈರಮೂರೋಽಗ್ನಿರ್ವಾಮಂ ಸುವಿತಂ ವಸ್ಯೋ ಅಚ್ಛ ।**
(ಋ. ಸಂ. ೧-೧೪೧-೧೨)

ಎಂಬ ಋಕ್ಕಿನಲ್ಲಿ **ಅಮೂರಃ, ವಸ್ಯಃ** ಎಂದು ಎರಡು ವಿಶೇಷಣಗಳೂ ಜೊತೆಯಲ್ಲಿವೆ. ಅಪ್ರತಿಹತವಾದ ಶಕ್ತಿಯುಳ್ಳವನೆಂದು ಪ್ರಸಿದ್ಧನಾದರೂ **ವಸನೀಯಃ** ಎಂದರೆ **ಸೌಮ್ಯನು** ಎಂದರ್ಥವನ್ನು ಕೊಡುತ್ತದೆ. ಇದರಂತೆಯೇ,

**ಉತ ತ್ವಾ ಸ್ತ್ರೀ ಶಶೀಯಸೀ ಪುಂಸೋ ಭವತಿ ವಸ್ಯಸೀ ।**
(ಋ. ಸಂ. ೫-೬೧-೬)

**ಅತಶ್ಚಿದಾ ನ ಉಪ ವಸ್ಯಸಾ ಹೃದಾ ಯುವಾನ ಆ ವವೃಧ್ವಂ ।**
(ಋ. ಸಂ ೮-೨೦-೧೮)

ಇತ್ಯಾದಿ ಋಕ್ಕುಗಳಲ್ಲಿ **ದಯೆಯಿಂದ** ಕೂಡಿದ ಎಂಬರ್ಥವು ತೋರುತ್ತದೆ.

**ನಹಿ ತ್ವದಿಂದ್ರ ವಸ್ಯೋ ಅನ್ಯದಸ್ತ್ಯಮೇನಾಁಶ್ಚಿಜ್ಜನಿವತಶ್ಚಕರ್ಥ ।**
(ಋ. ಸಂ. ೫-೩೧-೨)

**ನಹಿ ತ್ವದನ್ಯನ್ಮಘವನ್ನ ಆಪ್ಯಂ ವಸ್ಯೋ ಅಸ್ತಿ ಪಿತಾ ಚನ ।**
(ಋ. ಸಂ. ೭-೩೨-೧೯)

ಎಂಬಲ್ಲಿ ವಸ್ಯಃ ಎಂದರೆ **ಪ್ರಶಸ್ಯಃ ।** ಶ್ಲಾಘ್ಯವಾದ ಪಾಲಕನೆಂದರ್ಥವೆಂದು ಭಾಷ್ಯದಲ್ಲಿ ವಿವರಿಸಿದೆ.

**ಉತ ಪ್ರ ಣೇಷ್ಯಭಿ ವಸ್ಯೋ ಅಸ್ಮಾನ್ತ್ಸಂ ನಃ ಸೃಜ ಸುಮತ್ಯಾ ವಾಜವತ್ಯಾ ।**
(ಋ. ಸಂ. ೧-೩೧-೧೮)

**ಅನಾಗಾಸ್ತ್ವೇನ ಹರಿಕೇಶ ಸೂರ್ಯಾಹ್ನಾಹ್ನಾ ನೋ ವಸ್ಯಸಾವಸ್ಯಸೋದಿಹಿ ।**
(ಋ. ಸಂ. ೧೦-೩೭-೯)

ಇತ್ಯಾದಿ ಋಕ್ಕುಗಳಲ್ಲಿ **ಅತ್ಯಂತ ಶ್ರೇಯಸ್ಕರೇಣ** ಅತ್ಯಂತವಾಗಿ ಶ್ರೇಯಸ್ಸನ್ನುಂಟುಮಾಡುವ ಎಂಬ ನೈತಿಕವಾದ ಮತ್ತು ಆಧ್ಯಾತ್ಮಿಕವಾದ ಅರ್ಥದಲ್ಲಿ ಉಪಯೋಗಿಸಿದೆ.

**ಹಸ್ತಾವಿವ ತನ್ವೇ ಶಂಭವಿಷ್ಠಾ ಪಾದೇವ ನೋ ನಯತಂ ವಸ್ಯೋ ಅಚ್ಛ ।**
(ಋ. ಸಂ. ೨-೩೯-೫)

ಯೂಯಮಸ್ಮಾನ್ನಯತ ವಸ್ಯೋ ಅಚ್ಛಾ ನಿರಂಹತಿಭ್ಯೋ ಮರುತೋ ಗೃಣಾನಾಃ ।
(ಋ. ಸಂ. ೫-೫೫-೧೦)

ಎಂಬ ಕಡೆಗಳಲ್ಲಿ ವಸ್ಯಃ ವಸೀಯೋ ಧನಂ ಸ್ವರ್ಗಾದಿಲಕ್ಷಣಂ ಸ್ಥಾನಂ ವಾ । ಶ್ರೇಷ್ಠವಾದ ಧನ ಅಥವಾ ಉತ್ತಮವಾದ ಸ್ವರ್ಗಾದಿಸ್ಥಾನ ಎಂಬರ್ಥವು ತೋರುತ್ತದೆ. ಹೀಗೆ ವಸ್ಯಃ, ವಸ್ಯಸಾ ಎಂದು ವಸುಧಾತುವಿನಿಂದ ನಿಷ್ಪನ್ನಗಳಾದ ಪದಗಳು ಅನೇಕ ಕಡೆಗಳಲ್ಲಿ ಪ್ರಯೋಗಿಸಲ್ಪಟ್ಟ ಸನ್ನಿವೇಶಗಳಿಗನುಗುಣವಾಗಿ ಅರ್ಥಗಳನ್ನು ಕೊಡುತ್ತವೆ. ಪ್ರಕೃತವಾದ ಋಕ್ಕಿನಲ್ಲಿ ಉತ್ಕೃಷ್ಟವಾದ ಧನವೆಂದರ್ಥಮಾಡಿದ್ದಾರೆ.

ಜ್ಞಾಸಃ, ಸಜಾತಾನ್—ಅಯೋನಿಸಂಬಂಧಾ ಯೇ ಜ್ಞಾತಯಃ ತೇ ಇಹ ಜ್ಞಾಸ ಉಚ್ಯಂತೇ । ಯೋನಿಸಂಬಂಧಾಸ್ಸಜಾತಾಃ । ಯೋನಿಸಂಬಂಧವಿಲ್ಲದ ಜ್ಞಾತಿಗಳನ್ನು ಜ್ಞಾಸರೆಂದೂ ಯೋನಿಸಂಬಂಧವುಳ್ಳ ಜ್ಞಾತಿಗಳನ್ನು ಸಜಾತರೆಂದೂ ಕರೆಯುವ ವಾಡಿಕೆಯೆಂದು ಸ್ಕಂದಸ್ವಾಮಿಗಳು ವಿವರಿಸುತ್ತಾರೆ. ಯುವಾಮೇವ ಮಮ ಜ್ಞಾತೀ ಯುವಾಮೇವ ಸಜಾತಾವಿತ್ಯೇವಂ ಪಶ್ಯಾಮೀತ್ಯರ್ಥಃ । ಜ್ಞಾಸರೂ, ಸಜಾತರೂ ಎಲ್ಲರೂ ಇಂದ್ರಾಗ್ನಿಗಳೇ, ಇವರನ್ನು ಬಿಟ್ಟು ಇನ್ನಾರೂ ಇಲ್ಲವು ಎಂದು ತಾತ್ಪರ್ಯ.

ಪರಾ ಯಾಹಿ ಮಘವನ್ನಾ ಚ ಯಾಹೀಂದ್ರ ಭ್ರಾತರುಭಯತ್ರಾ ತೇ ಅರ್ಥಂ ।
(ಋ, ಸಂ. ೩-೫೩-೫)

ಕಿಮಾದಮತ್ರಂ ಸಖ್ಯಂ ಸಖಿಭ್ಯಃ ತದಾ ನು ತೇ ಭ್ರಾತ್ರಂ ಪ್ರ ಬ್ರವಾಮ ।
(ಋ. ಸಂ. ೪-೨೩-೬)

ತ್ರಾತಾ ನೋ ಬೋಧಿ ದದೃಶಾನ ಆಪಿರಭಿಖ್ಯಾತಾ ಮರ್ಡಿತಾ ಸೋಮ್ಯಾನಾಂ ।
ಸಖಾ ಪಿತಾ ಪಿತೃತಮಃ ಪಿತೄಣಾಂ ಕರ್ತೇಮು ಲೋಕಮುಶತೇ ವಯೋಧಾಃ ।
(ಋ. ಸಂ. ೪-೧೭-೧೭)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನೇ ಪಿತನು, ಭ್ರಾತೃವು, ಸಖನು, ಸಕಲವಿಧವಾದ ಪಾಲಕನು, ಇತ್ಯಾದಿಯಾಗಿ ಇಂದ್ರನ ಬಂಧುತ್ವವನ್ನು ಸ್ತುತಿಸಿರುವಂತೆಯೂ,

ಇಳಾಮಕೃಣ್ವನ್ಮನುಷಸ್ಯ ಶಾಸನೀಂ ಪಿತುರ್ಯತ್ಪುತ್ರೋ ಮಮಕಸ್ಯ ಜಾಯತೇ ।
(ಋ. ಸಂ. ೧-೩೧-೧೧)

ಆ ಹಿ ಷ್ಮಾ ಸೂನವೇ ಪಿತಾಪಿರ್ಯಜತ್ಯಾಪಯೇ ।
ಸಖಾ ಸಖ್ಯೇ ವರೇಣ್ಯಃ ।
(ಋ. ಸಂ. ೧-೨೬-೩)

ತ್ವಂ ಜಾಮಿರ್ಜನಾನಾಮಗ್ನೇ ಮಿತ್ರೋ ಅಸಿ ಪ್ರಿಯಃ ।
ಸಖಾ ಸಖಿಭ್ಯ ಈಡ್ಯಃ ।
(ಋ. ಸಂ. ೧-೭೫-೪)

ತ್ವಾಮಗ್ನೇ ಪಿತರಮಿಷ್ಟಿಭಿರ್ನರಸ್ತ್ವಾಂ ಭ್ರಾತ್ರಾಯ ಶಮ್ಯಾ ತನೂರುಚಂ ।
ತ್ವಂ ಪುತ್ರೋ ಭವಸಿ ಯಸ್ತೇಽವಿಧತ್ತ್ವಂ ಸಖಾ ಸುಶೇವಃ ಪಾಸ್ಯಾಧೃಷಃ ।
(ಋ. ಸಂ. ೨-೧-೯)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯೇ ಪಿತೃವು, ಭ್ರಾತೃವು, ಪುತ್ರನು, ಸಖನು ಆತ್ಯುತ್ತಮನಾದ ಬಂಧುವು ಇತ್ಯಾದಿಯಾಗಿ ಅಗ್ನಿಯ ಬಂಧುತ್ವವನ್ನು ಸ್ತುತಿಸಿರುವಂತೆಯೂ ಸಹ ಪ್ರಕೃತವಾದ ಋಕ್ಕಿನಲ್ಲಿ ಇಂದ್ರಾಗ್ನಿಗಳೇ ಉತ್ತಮವಾದ ಜ್ಞಾಸರೂ ಸಜಾತರೂ ಆಗಿರುತ್ತಾರೆಂದು ಹೇಳಿದೆ. **ಸುಖದುಃಖಾದಿಕಂ ಸಾಮ್ಯೇನ ಜಾನಂತೀತಿ ಜ್ಞಾಸೋ ಜ್ಞಾತಯಃ ।** ನಮ್ಮ ಸುಖದುಃಖಗಳನ್ನು ಒಂದೇ ರೀತಿಯಿಂದ ನೋಡಿ ನಮ್ಮಲ್ಲಿ ಸಹಾನುಭೂತಿಯನ್ನು ತೋರಿಸುತ್ತಾರಾದ್ದರಿಂದ ಜ್ಞಾತಿಗಳಿಗೆ **ಜ್ಞಾಸಃ ।** ಎಂಬ ಹೆಸರೆಂದು ಸಾಯಣರು ವಿವರಿಸಿದ್ದಾರೆ.

**ವಿ ಹ್ಯಖ್ಯಂ—ವಿ ಅಖ್ಯಮಿತ್ಯೇತದ್ವಿಚಷ್ಟೇ ಇತ್ಯೇತಸ್ಯ ಪಶ್ಯತಿಕರ್ಮಣೋ ರೂಪಂ । ಯುವಾಮಹಂ ವಿವಿಧಂ ಪಶ್ಯಾಮಿ ಮನಸಾ । ಪಶ್ಯತಿಕರ್ಮ**ನಾಮಗಳಲ್ಲಿ ಸೇರಿರುವ **ವಿಚಷ್ಟೇ** ಎಂಬ ಪದದ ರೂಪಾಂತರವಾಗಿರುವುದರಿಂದ **ವಿ ಹ್ಯಖ್ಯಂ** ಎಂದರೆ ನೋಡುವುದು, ಇಂದ್ರಾಗ್ನಿಗಳ ನಾನಾವಿಧವಾದ ರೂಪಗಳನ್ನು ಧ್ಯಾನರೂಪದಲ್ಲಿ ನೋಡುವುದೆಂದರ್ಥ, ಎಂದು ಸ್ಕಂದಸ್ವಾಮಿಗಳೂ ; **ಯುವಾಮೇವ ಬಂಧುರೂಪೇಣ ವ್ಯಜ್ಞಾಸಿಷಂ** ನಿಮ್ಮಿಬ್ಬರನ್ನೇ ಬಂಧುಗಳನ್ನಾಗಿ **ತಿಳಿದಿರುವೆನು** ಎಂದು ಸಾಯಣರೂ ವಿವರಿಸಿರುವರು.

**ಪ್ರಮತಿಃ—ಪ್ರಕೃಷ್ಟಾ ಬುದ್ಧಿಃ । ಮದೀಯಾ ಯೈಷಾ ಪ್ರಕೃಷ್ಟಾ ಬುದ್ಧಿಃ ಸಾ ಯುವಾಭ್ಯಾಮೇವ ದತ್ತಾ ।** ನನ್ನಲ್ಲಿ ಶ್ರೇಷ್ಠವಾದ ಬುದ್ಧಿಯು ಯಾವುದಿದೆಯೋ ಅದು ನಿಮ್ಮಿಂದಲೇ ಕೊಡಲ್ಪಟ್ಟಿದ್ದು ಎಂದ ಸಾಯಣರೂ ; **ಪ್ರಮತಿರಿತಿ ಮನ್ಯತೇರರ್ಚತಿಕರ್ಮಣೋ ರೂಪಂ । ಕಿಂಚ ನಾನ್ಯಾ ಯುವತ್ ಯುವಾಭ್ಯಾಮಸ್ಯಾ ದೇವತಾ ಪ್ರಮತಿರಸ್ತಿ ಮಹ್ಯಂ । ಮಹ್ಯಮಿತ್ಯಪಿ ಷಷ್ಠ್ಯರ್ಥೇ ಚತುರ್ಥೀ । ಪ್ರಕರ್ಷೇಣ ಸ್ತುತ್ಯಾಸ್ತಿ ಮಮ । ಯುವಾಂ ಮುಕ್ತ್ವಾ ನಾಹ ಮನ್ಯಾ ದೇವತಾಃ ಪ್ರಕರ್ಷೇಣ ಸ್ತೌಮೀತ್ಯರ್ಥಃ । ಮನ್ಯತೇ** ಎಂದ ಪದವು **ಅರ್ಚತಿಕರ್ಮ**ನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೯). **ಪ್ರಮತಿಃ** ಎನ್ನುವ ಪದವು ಮನ್ಯತೇ ಎಂಬುದರ ರೂಪಾಂತರ. **ಮಹ್ಯಂ** ಎಂಬ ಚತುರ್ಥಿಗೆ **ಮಮ** ಎಂಬ ಷಷ್ಠ್ಯರ್ಥವನ್ನು ಹೇಳಬೇಕು. **ನಾನ್ಯಾ ಯುವತ್ಪ್ರಮತಿರಸ್ತಿ ಮಹ್ಯಂ** ಎಂಬುದಕ್ಕೆ ನಿಮ್ಮಿಬ್ಬರನ್ನು ಬಿಟ್ಟು ನನಗೆ ಸ್ತುತ್ಯರಾದ ದೇವತೆಗಳು ಇತರರಾರೂ ಇಲ್ಲ. ನೀವಿಬ್ಬರೇ ನನ್ನ ಆರಾಧ್ಯ ದೇವತೆಗಳು ಎಂದು ತಾತ್ಪರ್ಯವೆಂದು ಸ್ಕಂದಸ್ವಾಮಿಗಳೂ ವಿವರಿಸಿದ್ದಾರೆ. ಸಾಯಣರು ಈ ಪದವು ಬರುವ ಕಡೆಗಳಲ್ಲೆಲ್ಲಾ ಪ್ರಕೃಷ್ಟವಾದ ಬುದ್ಧಿ ಅಥವಾ ಶ್ರೇಷ್ಠವಾದ ಬುದ್ಧಿಯುಳ್ಳವನು ಎಂದು ಬಹುವ್ರೀಹಿಯನ್ನು ಮಾಡಿ ವಿವರಿಸಿದ್ದಾರೆ. ಆದರೆ,

ಅಧಾಹಂ ತ್ವಾ ಮಘವನ್ ಜೋಹವೀಮಿ ತ್ವಂ ನ ಇಂದ್ರಾಸಿ ಪ್ರಮತಿಃ ಪಿತೇವ ।
(ಋ. ಸಂ. ೭-೨೯-೪)

ಎಂಬ ಋಕ್ಕಿನಲ್ಲಿ **ಪ್ರಮತಿಃ** ಎಂಬ ಪದಕ್ಕೆ **ಬಂಧುಃ** ಎಂಬರ್ಥವನ್ನು ಮಾಡಿದ್ದಾರೆ ಇಲ್ಲಿಯೂ ಸಹ **ಅಭಿಮಾನ ಬುದ್ಧಿಯುಳ್ಳ ಬಂಧುವೆಂದಾಗುತ್ತದೆ**

**ಧಿಯಂ—ಧ್ಯಾನೇನ ನಿಷ್ಪನ್ನಾಂ ಸ್ತುತಿಂ ।** ಧ್ಯಾನದೊಡನೆ ಕೂಡಿದ ಸ್ತುತಿ, ಅಥವಾ ಯಾಗರೂಪವಾದ **ಕರ್ಮ** ಎಂದರ್ಥ,

**ಅತಕ್ಷಂ—ಅಕಾರ್ಷಂ ।** ನಿರ್ಮಿಸಿದೆನು.

### ವ್ಯಾಕರಣಪ್ರಕ್ರಿಯಾ

**ಅಖ್ಯಮ್**—ಖ್ಯಾ ಪ್ರಕಥನೇ ಧಾತು. ಅದಾದಿ. ಲುಙ್ ಉತ್ತಮಪುರುಷ ಏಕವಚನದಲ್ಲಿ ಮಿಪಿಗೆ **ತಸ್‌ಥಸ್‌ಥ**—(ಪಾ. ಸೂ. ೩-೪-೧೦೧) ಎಂಬುದರಿಂದ ಅಮಾದೇಶ. ಚ್ಲಿ ಪ್ರಾಪ್ತವಾದಾಗ **ಅಸ್ಯತಿವಕ್ತಿಖ್ಯಾತಿಭ್ಯೋಽಙ್**—(ಪಾ. ಸೂ. ೩-೧-೫೨) ಎಂಬುದರಿಂದ ಅದಕ್ಕೆ ಅಙಾದೇಶ. **ಆತೋಲೋಪ ಇಟಿಚ**—(ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಅಂಗಕ್ಕೆ ಅಡಾಗಮ. **ಹಿಚ**—(ಪಾ. ಸೂ. ೮-೧-೩೪) ಎಂಬುದರಿಂದ ಹಿಯೋಗನಿಮಿತ್ತವಾಗಿ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಆದ್ಯುದಾತ್ತವಾಗುತ್ತದೆ.

**ವಸ್ಯಃ**—ಅತಿಶಯಂ (ಪ್ರಶಸ್ತಂ) ವಸು. ವಸ್ಯಃ. ಅತಿಶಯಾರ್ಥದಲ್ಲಿ **ದ್ವಿವಚನವಿಭಜ್ಯೋಪಪದೇ**—(ಪಾ. ಸೂ. ೫-೩-೫೭) ಎಂಬುದರಿಂದ ಈಯಸುನ್ ಪ್ರತ್ಯಯ. **ಟೇಃ**—(ಪಾ. ಸೂ. ೬-೪-೧೫೫) ಎಂಬುದರಿಂದ ಟಿಗೆ (ಉ) ಲೋಪ. ವಸೀಯಸ್ ಎಂದಿರುವಾಗ ಛಾಂದಸವಾಗಿ ಈಕಾರಲೋಪ ಬರುತ್ತದೆ. ವಸ್ಯಸ್ ಎಂದು ಶಬ್ದವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಇಚ್ಛನ್**—ಇಷು ಇಚ್ಛಾಯಾಮ್. ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಶ ವಿಕರಣ. **ಇಷುಗಮಿಯಮಾಂ**—(ಪಾ. ಸೂ. ೭-೩-೭೭) ಎಂಬುದರಿಂದ ಛಾದೇಶ. ಪರರೂಪ. ವಿಕರಣಸ್ವರ ಬರುತ್ತದೆ.

**ಜ್ಞಾಸಃ**—ಸುಖದುಃಖಾದಿಕಂ ಸಾಮ್ಯೇನ ಜಾನಂತೀತಿ ಜ್ಞಾಸಃ ಜ್ಞಾತಯಃ (ಸುಖದುಃಖವನ್ನು ತಮ್ಮಂತೆ ತಿಳಿಯುವವರು ಬಂಧುಗಳು) ಜ್ಞಾ ಅವಬೋಧನೇ. ಧಾತು. ಸರ್ವಧಾತುನಿಬಂಧನವಾದ ಔಣಾದಿಕ ಅಸುನ್ ಪ್ರತ್ಯಯ. ಜ್ಞಾಸ್ ಶಬ್ದವಾಗುತ್ತದೆ. ಪ್ರಥಮಾ ಬಹುವಚನಾಂತರೂಪ. ವ್ಯತ್ಯಯದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಯುವತ್**—ಯುಷ್ಮದ್ ಶಬ್ದ. ಇದಕ್ಕೆ ಭ್ಯಾಮ್ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲುಕ್. ದ್ವಿತ್ವವಿಶಿಷ್ಟಾರ್ಥಪ್ರತಿಪಾದಕವಾದುದರಿಂದ ಪ್ರಕೃತಿಗೆ **ಯುವಾವೌ ದ್ವಿವಚನೇ**—(ಪಾ. ಸೂ. ೭-೨-೯೨) ಎಂಬುದರಿಂದ ಮಪರ್ಯಂತಕ್ಕೆ ಯುವಾದೇಶ. ವಿಭಕ್ತಿಪರವಾಗದಿರುವುದರಿಂದ ಅದಿಗೆ ಲೋಪ ಬರುವುದಿಲ್ಲ. **ವಾವಸಾನೇ** ಎಂಬುದರಿಂದ ದಕಾರಕ್ಕೆ ಚರ್ತ್ವ.

**ಅತಕ್ಷಮ್**—ತಕ್ಷ ತನೂಕರಣೇ. ಧಾತು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಕೇವಲ ಕರಣಾರ್ಥದಲ್ಲಿ ಪ್ರಯುಕ್ತವಾಗಿದೆ. ಲಙ್ ಉತ್ತಮಪುರುಷ ಏಕವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧ ॥

——— :o: ———

ಸಂಹಿತಾಪಾಠಃ

ಅಶ್ರವಂ ಹಿ ಭೂರಿದಾವತ್ತರಾ ವಾಂ ವಿಜಾಮಾತುರುತ ವಾ
ಘಾ ಸ್ಯಾಲಾತ್ ।
ಅಥಾ ಸೋಮಸ್ಯ ಪ್ರಯತೀ ಯುವಭ್ಯಾಮಿಂದ್ರಾಗ್ನೀ ಸ್ತೋ-
ಮಂ ಜನಯಾಮಿ ನವ್ಯಂ ॥ ೨ ॥

। ಪದಪಾಠಃ ।

ಅಶ್ರವಂ । ಹಿ । ಭೂರಿದಾವತ್ಽತರಾ । ವಾಂ । ವಿಽಜಾಮಾತುಃ । ಉತ ।
ವಾ । ಘ । ಸ್ಯಾಲಾತ್ ।
ಅಥ । ಸೋಮಸ್ಯ । ಪ್ರಽಯತೀ । ಯುವಽಭ್ಯಾಂ । ಇಂದ್ರಾಗ್ನೀ ಇತಿ ।
ಸ್ತೋಮಂ । ಜನಯಾಮಿ । ನವ್ಯಂ ॥ ೨ ॥

ಸಾಯಣಭಾಷ್ಯಂ

ಹೇ ಇಂದ್ರಾಗ್ನೀ ವಾಂ ಯುವಾಂ ಭೂರಿದಾವತ್ತರಾತಿಶಯೇನ ಬಹುಧನಸ್ಯ ದಾತಾರಾವಿತ್ಯಶ್ರವಂ ಹಿ । ಅಶ್ರೌಷಂ ಖಲು । ಕಸ್ಮಾತ್ಪುರುಷಾತ್ । ವಿಜಾಮಾತುಃ । ಶ್ರುತಾಭಿರೂಪ್ಯಾದಿಭಿರ್ಗುಣೈರ್ವಿಹೀನೋ ಜಾಮಾತಾ ಯಥಾ ಕನ್ಯಾವತೇ ಬಹು ಧನಂ ಪ್ರಯಚ್ಛತಿ ಕನ್ಯಾಲಾಭಾರ್ಥಂ ತತೋಽಪ್ಯತಿಶಯೇನ ದಾತಾರಾವಿಂದ್ರಾಗ್ನೀ ಇತ್ಯರ್ಥಃ । ಉತ ವಾಪಿ ಚ ಸ್ಯಾಲಾತ್ । ಸ್ಯಂ ಶೂರ್ಪಂ । ತಸ್ಮಾಲ್ಲಾಜಾನಾವಪತಿ ವಿವಾಹಕಾಲ ಇತಿ ಸ್ಯಾಲಃ ಕನ್ಯಾಭ್ರಾತಾ । ಸ ಯಥಾ ಭಗಿನೀಪ್ರೀತ್ಯರ್ಥಂ ಬಹು ಧನಂ ಪ್ರಯಚ್ಛತಿ ತತೋಽಪ್ಯತಿಶಯೇನ ದಾತಾರಾವಿಂದ್ರಾಗ್ನೀ । ಘೇತಿ ಪಾದಪೂರಣಃ । ತಥಾ ಚ ಸತ್ಯಥಾನಂತರಂ ಹೇ ಇಂದ್ರಾಗ್ನೀ ಯುವಾಭ್ಯಾಂ ಸೋಮಸ್ಯ ಪ್ರಯತೀ ಅಭಿಷುತಸ್ಯ ಸೋಮಸ್ಯ ಪ್ರದಾನೇನ ಸಹ ನವ್ಯಂ ನವತರಂ ಪ್ರತ್ಯಗ್ರಂ ಸ್ತೋಮಂ ಸ್ತೋತ್ರಂ ಜನಯಾಮಿ । ನಿಷ್ಪಾದಯಾಮಿ । ಅತ್ರ ನಿರುಕ್ತಂ । ಅಶ್ರೌಷಂ ಹಿ ಬಹುದಾತೃತರೌ ವಾಂ ವಿಜಾಮಾತುರಸುಸಮಾಪ್ತಾಜ್ಜಾಮಾತುಃ । ವಿಜಾಮಾತೇತಿ ಶಶ್ವದ್ದಾಕ್ಷಿಣಾಜಾಃ ಕ್ರೀತಾಪತಿಮಾಚಕ್ಷತೇಽಸುಸಮಾಪ್ತ ಇವ ವರೋಽಭಿಪ್ರೇತೋ ಜಾಮಾತಾ ಜಾ ಅಪತ್ಯಂ

ತನ್ನಿರ್ಮಾತಾ । ಉತ ವಾ ಘಾ ಸ್ಯಾಲಾದಪಿ ಚ ಸ್ಯಾಲಾತ್ ಸ್ಯಾಲ ಆಸನ್ನಃ ಸಂಯೋಗೇನೇತಿ ನೈದಾನಾಃ । ಸ್ಯಾಲ್ಲಾಜಾನಾವಪತೀತಿ ವಾ । ಲಾಜಾ ಲಾಜತೇಃ ಸ್ಯಂ ಶೂರ್ಪಂ ಸ್ಯತೇಃ । ಶೂರ್ಪಮಶನಪವನಂ ಶೃಣಾತೇಃ ಶಮ್ನಾತೇರ್ವಾ । ಅಥ ಸೋಮಸ್ಯ ಪ್ರದಾನೇನ ಯುವಾಭ್ಯಾಮಿಂದ್ರಾಗ್ನೀ ಸ್ತೋಮಂ ಜನಯಾಮಿ ನವ್ಯಂ ನವತರಂ । ನಿ. ೬-೯ ಇತಿ । ಅಶ್ರವಂ । ಶ್ರು ಶ್ರವಣೇ । ಲಙ್ಯುತ್ತಮಪುರುಷೈಕವಚನೇ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಭೂರಿದಾವತ್ತರಾ । ಡುದಾಞ್ ದಾನೇ । ಆತೋ ಮನಿನ್ನಿತಿ ವನಿಪ್ । ಅತಿಶಯೇನ ಭೂರಿದಾವಾ ಭೂರಿದಾವತ್ತರಃ । ಭೂರಿದಾವ್ನಸ್ತುಡ್ವಕ್ತವ್ಯಃ । ಪಾ. ೮-೨-೧೭-೨ । ಇತಿ ತರಪಸ್ತುಟ್ । ಪದಸಂಜ್ಞಾಯಾಂ ನಲೋಪಃ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಘ । ಋಚಿ ತುನುಘೇತ್ಯಾದಿನಾ ಸಂಹಿತಾಯಾಂ ದೀರ್ಘತ್ವಂ । ಅಥ । ನಿಪಾತಸ್ಯ ಚೇತಿ । ಪ್ರಯಂತೀ । ಯಮು ಉಪರಮೇ । ಕ್ತಿನ್ಯನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ತಾದೌ ಚೇತಿ ಗತೇಃ ಪ್ರಕೃತಿಸ್ವರತ್ವಂ । ಯುವಭ್ಯಾಂ । ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತ ಇತಿ ಯುಷ್ಮದಸ್ಮದೋರನಾದೇಶ ಇತ್ಯಾತ್ವಾಭಾವಃ । ಶೇಷೇ ಲೋಪ ಇತಿ ದಕಾರಲೋಪಃ ॥

ಪ್ರತಿಪದಾರ್ಥ

ಇಂದ್ರಾಗ್ನೀ—ಎಲೈ ಇಂದ್ರಾಗ್ನಿಗಳೇ । ವಾಂ— ನಿಮ್ಮಿಬ್ಬರನ್ನೂ ಸಹ । ವಿಜಾಮಾತುಃ—(ತನಗೆ ಹೇಗಾದರೂ ಕನ್ಯೆಯು ದೊರೆತರೆ ಸಾಕೆಂದು ಕನ್ಯಾಪಿತೃವಿಗೆ ಅತಿ ಪ್ರಭೂತವಾಗಿ ಧನವನ್ನು ಕೊಡತಕ್ಕ) ಅಯೋಗ್ಯನೂ, ಸದ್ಗುಣರಹಿತನೂ ಆದ (ಅಳಿಯನಾಗುವ) ವರನಿಗಿಂತಲೂ । **ಉತ ವಾ**—ಅದೂ ಅಲ್ಲದೇ । **ಸ್ಯಾಲಾತ್**—(ಸಹೋದರಿಯಮೇಲಿನ ಅಭಿಮಾನದಿಂದ ಅತಿಶಯವಾಗಿ ಧನವನ್ನು ಕೊಡುವ) ಮೈದುನನಿಗಿಂತಲೂ । **ಭೂರಿದಾವತ್ತರಾ**—ಅತ್ಯಧಿಕವಾಗಿ ಧನವನ್ನು ದಾನಮಾಡುವವರೆಂಬುದನ್ನಾಗಿ । **ಅಶ್ರವಂ ಹಿ**—(ನಾವು) ಕೇಳಿಯೇ ಇದ್ದೇವೆ । **ಅಥ**— ಅನಂತರ (ಆದ್ದರಿಂದ) । **ಯುವಭ್ಯಾಂ**— ನಿಮ್ಮಿಬ್ಬರಿಗೂ । **ಸೋಮಸ್ಯ**— ಸೋಮರಸದ (ಭಾಗವನ್ನು) । **ಪ್ರಯಂತೀ**—ಅರ್ಪಿಸುತ್ತಾ (ಅದರ ಜೊತೆಗೆ) । **ನವ್ಯಂ**—ನೂತನವಾದ । **ಸ್ತೋಮಂ**—ಸ್ತೋತ್ರವನ್ನು । **ಜನಯಾಮಿ**—ನಿರ್ಮಿಸುತ್ತೇನೆ ॥

ಭಾವಾರ್ಥ

ಎಲೈ ಇಂದ್ರಾಗ್ನಿಗಳೇ, ತನಗೆ ಹೇಗಾದರೂ ಕನ್ಯೆಯು ದೊರೆತರೆ ಸಾಕೆಂದು ಕನ್ಯಾಪಿತೃವಿಗೆ ಅತ್ಯಂತ ಅತಿ ಪ್ರಭೂತವಾಗಿ ಧನವನ್ನು ಕೊಡತಕ್ಕ ಅಯೋಗ್ಯನೂ ಸದ್ಗುಣರಹಿತನೂ ಆದ ವರನಿಗಿಂತಲೂ ಮತ್ತು ಸಹೋದರಿಯ ಮೇಲಿನ ಅಭಿಮಾನದಿಂದ ಅತಿಶಯವಾಗಿ ಧನವನ್ನು ಕೊಡತಕ್ಕ ಮೈದುನನಿಗಿಂತಲೂ ಹೆಚ್ಚಾಗಿ ನೀವಿಬ್ಬರೂ ಧನವನ್ನು ದಾನಮಾಡುವವರೆಂದು ನಾನು ಕೇಳಿಯೇ ಇದ್ದೇನೆ. ಆದ್ದರಿಂದ ನಿಮ್ಮಿಬ್ಬರಿಗೂ ಈ ಸೋಮರಸವನ್ನು ಅರ್ಪಿಸುತ್ತಾ ಅದರ ಜೊತೆಗೆ ನೂತನವಾದ ಸ್ತೋತ್ರವನ್ನೂ ನಿರ್ಮಿಸುತ್ತೇನೆ.

English Translation

I have heard, Indra and Agni, that you are more munificent givers than an unworthy bride-groom, or the brother of a bride ; therefore, as I offer you a libation, I address you, Indra and Agni, with a new hymn.

॥ ವಿಶೇಷವಿಷಯಗಳು ॥

ಇಲ್ಲಿ ಇಂದ್ರಾಗ್ನಿಗಳ ಔದಾರ್ಯವನ್ನು ಸ್ತುತಿಸಿದೆ. ಧನವನ್ನು ದಾನಮಾಡುವಾಗ ಧನದ ಪರಿಮಾಣವನ್ನು ಆಧಿಕ್ಯವನ್ನೂ ತೋರಿಸಲು ಎರಡು ಉಪಮಾನಗಳನ್ನು ಕೊಟ್ಟಿದೆ. ಮೊದಲನೆಯದು **ವಿಜಾಮಾತೃವಿನ** ಉಪಮಾನ. ಜಾಮಾತೃವಿನ ಮುಖ್ಯ ಗುಣಗಳು ಸತ್ಕುಲಪ್ರಸೂತತ್ವವೂ ಸದ್ಗುಣ ಯುಕ್ತತ್ವವೂ ಆಗಿವೆ. ಅವುಗಳಿಂದ ರಹಿತನಾದವನು ವಿಜಾಮಾತೃವು. **ವಿಗತಾ ಜಾಮಾತೃಗುಣಾ ಯಸ್ಯ ಸ ವಿಜಾಮಾತಾ ಕ್ರೀತಾಪತಿರುಚ್ಯತೇ ।** ಎಂದು ಸ್ಕಂದಸ್ವಾಮಿಗಳು **ಕ್ರೀತಾಪತಿಯು** (ಕ್ರೀತಳಾದವಳ ಪತಿ) ವಿಜಾಮಾತೃವೆಂದು ಹೇಳಿರುತ್ತಾರೆ. ಇವನು ಕೇವಲ ಕಾಮುಕನಾಗಿದ್ದು ಪ್ರೀತ್ಯಭಿಮಾನಾದಿ ಸದ್ಗುಣಗಳಿಲ್ಲದೆ ಕನ್ಯೆಯು ದೊರೆತರೆ ಸಾಕೆಂದು ಕನ್ಯಾಪಿತೃವಿಗೆ ಪ್ರಭೂತವಾಗಿ ಧನವನ್ನು ಕೊಟ್ಟು ಕನ್ಯೆಯನ್ನು ಪಡೆಯುತ್ತಾನೆ (ಇದರಿಂದ ಇಂತಹ ಕನ್ಯಾಪಿತೃಗಳ ಗುಣವೂ ವರ್ಣಿತವಾಗಿದೆ). ಹೀಗೆ ಅಯೋಗ್ಯರಿಂದ ಧನವನ್ನು ಪಡೆದು ತಮ್ಮ ಕನ್ಯೆಯನ್ನು ಧನದಾಸೆಗಾಗಿ ಕಾಮುಕನಿಗಾದರೂ ಕೊಡತಕ್ಕ ಪಿತೃಗಳ ಗುಂಪೊಂದು ಕಡೆಯಿದ್ದರೆ, ಇದಕ್ಕೆ ವಿರುದ್ಧವಾಗಿ, ತಮ್ಮ ಸಹೋದರಿಯರ ಮೇಲಿನ ಅಭಿಮಾನದಿಂದ ಉದಾರವಾಗಿ ಧನವನ್ನು ಕೊಟ್ಟು ಸದ್ಗುಣಪೂರಿತನಾದ ವರನಿಗೆ ಕನ್ಯಾದಾನವನ್ನು ಮಾಡತಕ್ಕವರ ಗುಂಪು ಇನ್ನೊಂದು ಕಡೆಯಿರುತ್ತದೆ. ಇಂದ್ರಾಗ್ನಿಗಳ ಔದಾರ್ಯಕ್ಕೆ ಈ ಎರಡು ಉಪಮಾನಗಳನ್ನು ಕೊಡಬೇಕಾದರೆ ಒಂದು ಕಡೆ ಈ ವಿಜಾಮಾತೃಗಳು ಎಷ್ಟು ಧನವ್ಯಯ ಮಾಡುತ್ತಿದ್ದರೆಂದೂ, ಇನ್ನೊಂದುಕಡೆ ಸಹೋದರಿಯರ ಮೇಲೆ ಅಭಿಮಾನದಿಂದ ಕನ್ಯಾಭ್ರಾತೃಗಳು ಎಷ್ಟು ಉದಾರವಾಗಿ ಧನದಾನ ಮಾಡುತ್ತಿದ್ದಾರೆಂದೂ ತಿಳಿಯುತ್ತದೆ. ಇಂದ್ರಾಗ್ನಿಗಳ ಧನದಾನವು ಈ ಎರಡು ಗುಂಪುಗಳ ಜನರ ಔದಾರ್ಯಕ್ಕಿಂತ ಮೀರಿದುದು ಎಂದು ತಾತ್ಪರ್ಯ.

**ವಿಜಾಮಾತುಃ**— ಈ ಪದದ ನಿರ್ವಚನವನ್ನು ತೋರಿಸುವಾಗ ನಿರುಕ್ತಕಾರರು ಈ ಋಕ್ಕನ್ನೇ ಉದಾಹರಣೆಗೆ ತೆಗೆದುಕೊಂಡಿರುತ್ತಾರೆ. ಋಕ್ಕಿಗೆ ಅವರು ಹೇಳಿರತಕ್ಕ ವಿವರಣೆಯು ಈ ರೀತಿಯಿದೆ.

**ಅಶ್ರೌಷಂ ಹಿ ಬಹುದಾತೃತರೌ ವಾಂ ವಿಜಾಮಾತುರಸುಸಮಾಪ್ತಾಜ್ಜಾಮಾತುಃ । ವಿಜಾಮಾತೇತಿ ಶಶ್ವದ್ದಾಕ್ಷಿಣಾಜಾಃ ಕ್ರೀತಾಪತಿಮಾಚಕ್ಷತೇಽಸುಸಮಾಪ್ತ ಇವ ವರೋಽಭಿಪ್ರೇತೋ ಜಾಮಾತಾ ಜಾ ಅಪತ್ಯಂ ತನ್ನಿರ್ಮಾತಾ । ಉತ ವಾ ಘಾ ಸ್ಯಾಲಾದಪಿ ಚ ಸ್ಯಾಲಾತ್ ಸ್ಯಾಲ ಆಸನ್ನಃ ಸಂಯೋಗೇನೇತಿ ನೈದಾನಾಃ । ಸ್ಯಾಲ್ಲಾಜಾನಾವಪತೀತಿ ವಾ । ಲಾಜಾ ಲಂಜತೇಃ ಸ್ಯಂ ಶೂರ್ಪಂ ಸ್ಯತೇಃ । ಅಥ ಸೋಮಸ್ಯ ಪ್ರದಾನೇನ ಯುವಾಭ್ಯಾಮಿಂದ್ರಾಗ್ನೀ ಸ್ತೋಮಂ ಜನಯಾಮಿ ನವ್ಯಂ ನವತರಂ ।** (ನಿ. ೬-೯) ಕ್ರೀತಳಾದ ಕನ್ಯೆಯ ಪತಿಯನ್ನು ದಾಕ್ಷಿಣಾತ್ಯರು ವಿಜಾಮಾತೃವೆಂದು ಕರೆಯುತ್ತಾರೆ. ಈತನ ನಿಜವಾದ ಸಂಬಂಧವು ಪೂರ್ಣವಾಗಿಲ್ಲವೆಂದರ್ಥ. ಅಪತ್ಯವನ್ನು ಉತ್ಪನ್ನಮಾಡುವುದರಿಂದ **ಜಾಮಾತೃವೆಂಬ** ಹೆಸರು ಬಂದಿದೆ. ಎಂದು **ಸ್ಯಾಲ** ಶಬ್ದಾರ್ಥದ ನಿರ್ವಚನವನ್ನು ತೋರಿಸುತ್ತಾ, ಅತ್ಯಂತ ಹತ್ತಿರವಾದ ಸಂಬಂಧವಿರುವುದರಿಂದ ಪತ್ನಿಯ ಭ್ರಾತೃವಿಗೆ ಸ್ಯಾಲನೆಂದು ಪ್ರಾಜ್ಞರು ಹೇಳುತ್ತಾರೆ. ಅಥವಾ ಮೊರದಿಂದ ಲಾಜವನ್ನು (ಅರಳು) ತೆಗೆದು ವಿವಾಹ ಕಾಲದಲ್ಲಿ ಅಗ್ನಿಗೆ ಹಾಕಲು ಸಹಾಯಮಾಡತಕ್ಕವನಾದ್ದರಿಂದ ಸ್ಯಾಲನೆಂದೂ ಹೆಸರು ಬಂದಿದೆ. ಇಂತಹ **ವಿಜಾಮಾತೃವಿಗಿಂತಲೂ** ಮತ್ತು ಸ್ಯಾಲನಿಗಿಂತಲೂ ಹೆಚ್ಚು ಔದಾರ್ಯವುಳ್ಳವರು ಇಂದ್ರಾಗ್ನಿಗಳು. ಎಂದು ತಾತ್ಪರ್ಯ. **ನವ್ಯ**ಶಬ್ದಕ್ಕೆ **ನವತರ** ಅತ್ಯಂತ ನೂತನವಾದುದು ಎಂದರ್ಥ. ಇಂತಹ ನೂತನವಾದುದೂ ಅತಿಶಯವಾದುದೂ ಆದ ಸ್ತೋತ್ರವನ್ನು ನಿರ್ಮಿಸುತ್ತೇನೆ ಎಂದು ಪ್ರಾರ್ಥಿಸಿದೆ.

[1] ವ್ಯಾಕರಣಪ್ರಕ್ರಿಯಾ

**ಅಶ್ರವಮ್**—ಶ್ರು ಶ್ರವಣೇ. ಧಾತು. ಲಙ್ ಉತ್ತಮಪುರುಷ ಏಕವಚನದಲ್ಲಿ ಮಿಪಿಗೆ **ತಸ್‌ಥಸ್‌ಥ**—ಸೂತ್ರದಿಂದ ಅಮಾದೇಶ. **ಬಹುಲಂ ಛಂದಸಿ**—ಎಂಬುದರಿಂದ ವಿಕರಣಕ್ಕೆ ಲುಕ್. ಅಮ್ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಅವಾದೇಶ. ಅಂಗಕ್ಕೆ ಅಡಾಗಮ. ಅಶ್ರವಮ್ ಎಂದು ರೂಪವಾಗುತ್ತದೆ. ಪಾದಾದಿಯಲ್ಲಿ ಬಂದುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಭೂರಿದಾವತ್ತರಾ** — ಡುದಾಞ್ ದಾನೇ. ಧಾತು. **ಆತೋಮನಿನ್** — (ಪಾ. ಸೂ. ೩-೨-೭೪) ಎಂಬುದರಿಂದ ವನಿಪ್ ಪ್ರತ್ಯಯ. ಭೂರಿದಾವನ್ ಶಬ್ದವಾಗುತ್ತದೆ. ಅತಿಶಯೇನ ಭೂರಿದಾವಾ ಭೂರಿದಾವತ್ತರಃ **ದ್ವಿವಚನವಿಭಜ್ಯೋಪ**—(ಪಾ. ಸೂ. ೫-೩-೫೭) ಎಂಬುದರಿಂದ ತರಪ್ ಪ್ರತ್ಯಯ. ಪದಸಂಜ್ಞೆಯಿರುವುದರಿಂದ **ನಲೋಪಃಪ್ರಾ**—(ಪಾ. ಸೂ. ೮-೨-೭) ಎಂಬುದರಿಂದ ನಲೋಪ. **ಭೂರಿದಾವ್ನಸ್ತುಟ್‌ವಕ್ತವ್ಯಃ**—(ಪಾ. ಸೂ. ೮-೨-೧೭) ಎಂಬುದರಿಂದ ತರಪಿಗೆ ತುಡಾಗಮ. ಭೂರಿದಾವತ್ತರ ಎಂದು ರೂಪವಾಗುತ್ತದೆ. ಇದಕ್ಕೆ ದ್ವಿವಚನ ಔ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ.

**ಘ—ಋಚಿತುನುಘ**—(ಪಾ. ಸೂ ೬-೩-೧೩೩) ಎಂಬುದರಿಂದ ಸಂಹಿತಾದಲ್ಲಿ ದೀರ್ಘ.

**ಅಥ—ನಿಪಾತಸ್ಯ ಚ**—(ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಪ್ರಯತೀ** — ಯಮು ಉಪರಮೇ. ಧಾತು. **ಸ್ತ್ರಿಯಾಂ ಕ್ತಿನ್**—ಎಂಬುದರಿಂದ ಕ್ತಿನ್ ಪ್ರತ್ಯಯ ಇದನ್ನು ನಿಮಿತ್ತೀಕರಿಸಿ **ಅನುದಾತ್ತೋಪದೇಶವ**—(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಮಕಾರಕ್ಕೆ ಲೋಪ. **ತಾದೌ ಚ ನಿತಿ**—(ಪಾ. ಸೂ. ೬-೨-೫೦) ಎಂಬುದರಿಂದ ಕ್ತಿನ್ನಂತವಾದುದು ಪರದಲ್ಲಿರುವುದರಿಂದ ಗತಿಗೆ (ಪ್ರ) ಪ್ರಕೃತಿಸ್ವರ ಬರುತ್ತದೆ. ದ್ವಿವಚನಾಂತರೂಪ.

**ಯುವಭ್ಯಾಮ್**—ಯುಷ್ಮದ್ ಶಬ್ದ. ಚತುರ್ಥೀದ್ವಿವಚನ (ಭ್ಯಾಮ್) ಪರವಾದಾಗ—**ಯುವಾವೌ ದ್ವಿವಚನೇ**—(ಪಾ. ಸೂ. ೭-೨-೯೨) ಎಂಬುದರಿಂದ ಮಪರ್ಯಂತಕ್ಕೆ ಯುವಾದೇಶ. **ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ**—ಎಂಬ ವಚನದಿಂದ **ಯುಷ್ಮದಸ್ಮದೋರನಾದೇಶೇ**—(ಪಾ. ಸೂ. ೭-೨-೮೬) ಎಂಬುದರಿಂದ ಆತ್ವ ಬರುವುದಿಲ್ಲ. **ಶೇಷೇ ಲೋಪಃ**—(ಪಾ. ಸೂ ೭-೨-೯೦) ಸೂತ್ರದಿಂದ ದಕಾರಕ್ಕೆ ಲೋಪ. ಯುವಭ್ಯಾಮ್ ಎಂದು ರೂಪವಾಗುತ್ತದೆ.

**ಜನಯಾಮಿ**—ಜನೀ ಪ್ರಾದುರ್ಭಾವೇ. ಧಾತು. **ಹೇತುಮತಿ ಚ**—(ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಉಪಧಾವೃದ್ಧಿ. **ಜನೀಜೄಷ್ಕ್ನಸು**—ಸೂತ್ರದಿಂದ ಮಿತ್ ಸಂಜ್ಞಾ ಬರುವುದರಿಂದ **ಮಿತಾಂಹ್ರಸ್ವಃ**—(ಪಾ. ಸೂ. ೬-೪-೯೨) ಎಂಬುದರಿಂದ ಉಪಧಾಹ್ರಸ್ವ. ಲಟ್ ಉತ್ತಮಪುರುಷ ಏಕವಚನದಲ್ಲಿ ಮಿಪ್ ಪ್ರತ್ಯಯ. ಶಪ್ ವಿಕರಣ. ತನ್ನಿಮಿತ್ತವಾಗಿ ಣಿಚಿಗೆ ಗುಣ. ಅಯಾದೇಶ. ತಿಙಂತನಿಘಾತಸ್ವರ ಬರುತ್ತದೆ. ॥೨॥

——:o:——

ಸಂಹಿತಾಪಾಠಃ

ಮಾ ಛೇದ್ಮ ರಶ್ಮೀಁರಿತಿ ನಾಧಮಾನಾಃ ಪಿತೄಣಾಂ ಶಕ್ತೀರನುಯ-
ಚ್ಛಮಾನಾಃ ।
ಇಂದ್ರಾಗ್ನಿಭ್ಯಾಂ ಕಂ ವೃಷಣೋ ಮದಂತಿ ತಾ ಹ್ಯದ್ರೀ ಧಿಷ-
ಣಾಯಾ ಉಪಸ್ಥೇ ॥ ೩ ॥

ಪದಪಾಠಃ

ಮಾ । ಛೇದ್ಮ । ರಶ್ಮೀನ್ । ಇತಿ । ನಾಧಮಾನಾಃ । ಪಿತೄಣಾಂ । ಶಕ್ತೀಃ । ಅ-
ನುऽಯಚ್ಛಮಾನಾಃ ।
ಇಂದ್ರಾಗ್ನಿಽಭ್ಯಾಂ । ಕಂ । ವೃಷಣಃ । ಮದಂತಿ । ತಾ । ಹಿ । ಅದ್ರೀ ಇತಿ
ಧಿಷಣಾಯಾಃ । ಉಪಽಸ್ಥೇ ॥ ೩ ॥

ಸಾಯಣಭಾಷ್ಯಂ

ರಶ್ಮೀನ್ । ರಶ್ಮಿಶಬ್ದೋ ರಜ್ಜುವಾಚೀ । ಯಥಾ ರಶ್ಮಯೋ ದೀರ್ಘಾ ಅವಿಚ್ಛಿನ್ನಾ ಭವಂತಿ । ಏವಮವಿಚ್ಛಿನ್ನಾನ್ಪುತ್ರಪೌತ್ರಾದೀನ್ ಮಾ ಛೇದ್ಮ ಮಾ ವಿಚ್ಛಿನ್ನಾನ್ಕುರ್ಮೇತಿ ಬುದ್ಧ್ಯಾ ನಾಧಮಾನಾ ಇಂದ್ರಾಗ್ನ್ಯೋಃ ಸಕಾಶಾತ್ತಥಾವಿಧಾನ್ಪುತ್ರಾದೀನ್ಯಾಚಮಾನಾಃ । ತದನಂತರಂ ಪಿತೄಣಾಂ ಶಕ್ತೀಃ ಶಕ್ತ್ಯುತ್ಪಾದಕಾನ್ವೀರ್ಯೋತ್ಪಾದಕಾಂಸ್ತಾನ್ಪುತ್ರಾದೀನನುಯಚ್ಛಮಾನಾ ಅನುಕ್ರಮೇಣ ನಿಯತಾನ್ ಕುರ್ವಂತೋ ವೃಷಣಃ ಸೇಕ್ತಾರಃ ಪುತ್ರೋತ್ಪಾದನಸಮರ್ಥಾಃ । ಸಪತ್ನೀಕಾ ಇತ್ಯರ್ಥಃ । ಏವಂಭೂತಾ ಯಜಮಾನಾ ಇಂದ್ರಾಗ್ನಿಭ್ಯಾಂ ಕಂ ಸುಖಂ ಯಥಾ ಭವತಿ ತಥಾ ಮದಂತಿ । ಸ್ತುವಂತಿ । ಹಿ ಯಸ್ಮಾ-ದದ್ರೀ ಶತ್ರೂನಾದೃಣಂತೌ ಹಿಂಸಂತೌ ವಿದಾರಯಂತೌ ತಾವಿಂದ್ರಾಗ್ನೀ ಧಿಷಣಾಯಾಃ ಸ್ತುತ್ಯಾ ಉಪಸ್ಥ ಉಪಸ್ಥಾನೇ ಸಮೀಪೇ ಭವತಃ । ತಸ್ಮಾತ್ತತ್ಸಾನ್ನಿಧ್ಯಾಯ ಸ್ತುವಂತೀತಿ ಭಾವಃ । ಯದ್ವಾ ನಿಪಾತಾ-ನಾಮನೇಕಾರ್ಥತ್ವಾತ್ ಹಿಶಬ್ದೋ ಯದೇತ್ಯರ್ಥಃ । ಯದಾ ತಾವಿಂದ್ರಾಗ್ನೀ ಉದ್ಧಿಶ್ಯಾದ್ರೀ ಅಭಿಷವ-

ಸಾಧನಭೂತಾ ಗ್ರಾವಾಣೋ ಧಿಷಣಾಯಾ ಉಪಸ್ಥೇ । ಧಿಷಣಾಧಿಷವಣಚರ್ಮ । ತಸ್ಯೋಪರಿಷ್ಟಾದಿಂದ್ರಾಗ್ನ್ಯರ್ಥಂ ಸೋಮಮಭಿಷುಣ್ವಂತಿ । ತದಾ ತದಾ ಯಜಮಾನಾ ಸ್ತುವಂತೀತಿ ಯೋಜನೀಯಂ ॥ ಛೇದ್ಮ। ಛಿದಿರ್ ದ್ವೈಧೀಕರಣೇ । ಲಙಾ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಛಂದಸ್ಯುಭಯಥೇತ್ಯಾರ್ಧಧಾತುಕತ್ವೇನ ಙಿತ್ತ್ವಾಭಾವಾಲ್ಲಘೂಪಧಗುಣಃ । ನ ಮಾಙ್ಯೋಗ ಇತ್ಯಡಭಾವಃ । ರಶ್ಮೀನ್ । ದೀರ್ಘಾದಟಿ ಸಮಾನಪಾದ ಇತಿ ಸಂಹಿತಾಯಾಂ ನಕಾರಸ್ಯ ರುತ್ವಂ । ಅತ್ರಾನುನಾಸಿಕಃ ಪೂರ್ವಸ್ಯ ತು ವೇತೀಕಾರಃ ಸಾನುನಾಸಿಕಃ । ನಾಧಮಾನಾಃ । ಣಾದೃ ಯಾಚ್ಞಾಯಾಂ । ಪಿತ್ರ್ಯಾಣಾಂ । ನಾಮನ್ಯತರಸ್ಯಾಮಿತಿ ನಾಮ ಉದಾತ್ತತ್ವಂ । ಮದಂತಿ । ಮದಿ ಸ್ತುತೌ । ಆಗಮಾನುಶಾಸನಸ್ಯಾನಿತ್ಯತ್ವಾನ್ನುಮಭಾವಃ । ವ್ಯತ್ಯಯೇನ ಪರಸ್ಮೈಪದಂ ॥

### ಪ್ರತಿಪದಾರ್ಥ

ರಶ್ಮೀಁ—ರಜ್ಜುವಿನಂತೆ ಅತಿ ದೀರ್ಘವಾದುದೂ ಮತ್ತು ಅವಿಚ್ಛಿನ್ನವಾದುದೂ ಆದ ನಮ್ಮ ಪುತ್ರಪೌತ್ರಾದಿಗಳ ಸಂತತಿಗಳನ್ನು । **ಮಾ ಚ್ಛೇದ್ಮ**—ನಾವು ತುಂಡುಮಾಡಿ ಅಲ್ಲಿಯೇ ನಿಂತುಹೋಗುವಂತೆ ಮಾಡುವವರಾಗಿ ಆಗದಿರಲಿ ಎಂಬ ಉದ್ದಿಶ್ಯದಿಂದ । **ನಾಧಮಾನಾಃ**—(ಇಂದ್ರಾಗ್ನಿಗಳಿಂದ ಅವಿಚ್ಛಿನ್ನವಾದ ಸಂತತಿಯನ್ನು) ಪ್ರಾರ್ಥಿಸುವವರಾಗಿ (ಅನಂತರ) । **ಪಿತ್ರ್ಯಾಣಾಂ**—ಪಿತೃಗಳ । **ಶಕ್ತೀಃ**—ಶಕ್ತ್ಯುತ್ಪಾದಕರಾದ ಪುತ್ರಪೌತ್ರಾದಿಗಳನ್ನು । **ಅನುಯಚ್ಛಮಾನಾಃ**—ಅವರವರ ಕ್ರಮದಂತೆ ಪಡೆಯುತ್ತಾ । **ವೃಷಣಃ**—ಪುತ್ರೋತ್ಪಾದನ ಸಮರ್ಥರೂ, ಸಪತ್ನೀಕರೂ ಆದ ಯಜಮಾನರು । **ಇಂದ್ರಾಗ್ನಿಭ್ಯಾಂ**—ಇಂದ್ರಾಗ್ನಿಗಳಿಂದ । **ಕಂ**—ಸುಖವು ಲಭಿಸುವಂತೆ । **ಮದಂತಿ**—(ಅವರನ್ನು) ಸ್ತುತಿಸುತ್ತಾರೆ. । **ಹಿ**—ಆದುದರಿಂದಲೇ । **ಅದ್ರೀ**—ಶತ್ರುಗಳನ್ನು ಸೀಳಿಹಾಕಿ ನಾಶಮಾಡುವ ಇಂದ್ರಾಗ್ನಿಗಳು । **ಧಿಷಣಾಯಾಃ**—(ಯಜಮಾನರ) ಸ್ತೋತ್ರದ । **ಉಪಸ್ಥೇ** ಸಮೀಪದಲ್ಲಿಯೇ (ಇರುತ್ತಾರೆ).

### ಭಾವಾರ್ಥ

ರಜ್ಜುವಿನಂತೆ ದೀರ್ಘವಾದುದೂ ಅವಿಚ್ಛಿನ್ನವಾದುದೂ ಆದ ನಮ್ಮ ಪುತ್ರಪೌತ್ರಾದಿಗಳ ಸಂತತಿಗಳನ್ನು ಅಲ್ಲಿಯೇ ನಾವು ವಿಚ್ಛಿನ್ನ ಗಳಾಗುವಂತೆ ಮಾಡುವವರಾಗಬೇಡ "ಎಂಬ ಉದ್ದಿಶ್ಯದಿಂದ ಇಂದ್ರಾಗ್ನಿಗಳಿಂದ ಅವಿಚ್ಛಿನ್ನವಾದ ಸಂತತಿಗಳನ್ನು ಪ್ರಾರ್ಥಿಸಿ, ಅನಂತರ ಪಿತೃಗಳ ಶಕ್ತ್ಯುತ್ಪಾದಕರಾದ ಪುತ್ರಪೌತ್ರಾದಿಗಳನ್ನು ಅವರವರ ಕ್ರಮದಂತೆ ಪಡೆಯುತ್ತಾ ಪುತ್ರೋತ್ಪಾದನ ಸಮರ್ಥರೂ, ಸಪತ್ನೀಕರೂ ಆದ ಯಜಮಾನರು ಇಂದ್ರಾಗ್ನಿಗಳಿಂದ ತಮಗೆ ಸುಖವು ಲಭಿಸುವಂತೆ ಅವರನ್ನು ಸ್ತುತಿಸುತ್ತಾರೆ. ಆದುದರಿಂದ ಈ ಸ್ತೋತ್ರಗಳಿಂದ ತೃಪ್ತರಾಗಿ ಶತ್ರುನಾಶಕರಾದ ಇಂದ್ರಾಗ್ನಿಗಳು ಯಾವಾಗಲೂ ಯಜಮಾನರ ಸ್ತೋತ್ರದ ಸಮೀಪದಲ್ಲಿಯೇ ಇರುತ್ತಾರೆ.

## English Translation

Never may we cut off the long line (of posterity); thus soliciting and asking for descendants endowed with the vigour of their progenitors, the (worshippers), begetting children, praise Indra and Agni for their happiness, and they two, destroyers of foes, are nigh (to hear this adoration).

### ವಿಶೇಷವಿಷಯಗಳು

**ರಶ್ಮೀನ್**—ಕಿರಣ, ಹಗ್ಗ, ಕಡಿವಾಣ ಮುಂತಾದ ಅರ್ಥಗಳಿದ್ದರೂ ಇಲ್ಲಿ **ರಶ್ಮಿ** ಶಬ್ದಕ್ಕೆ ಹಗ್ಗವೆಂದರ್ಥ. ರಜ್ಜುವಿನಂತೆ ದೀರ್ಘವಾದುದೂ ಅವಿಚ್ಛಿನ್ನವಾದುದೂ ಆದ ಪುತ್ರಪೌತ್ರಾದಿ ಸಂತತಿಗಳು **ಮಾ ಛೇದ್ಮ**—ತುಂಡಾಗಿ ನಿಂತುಹೋಗುವಂತೆ ಆಗಬೇಡ ಎಂಬುದಾಗಿ.

**ನಾಧಮಾನಾಃ**—ಪ್ರಾರ್ಥಿಸುವವರಾಗಿ (ನಿ. ೪-೩).

**ಅನುಯಚ್ಛಮಾನಾಃ**—**ಅನುಕ್ರಮೇಣ ನಿಯತಾನ್ ಕುರ್ವಂತಃ** ಎಂದು ಸಾಯಣರೂ, **ಅನುಬಧ್ನಂತಃ ಪ್ರಜೋತ್ಪತ್ತ್ಯಾದಿಕರ್ಮಸಂತಾನಾವಿಚ್ಛೇದಾರ್ಥಮಿತ್ಯರ್ಥಃ** ಎಂದು ಸ್ಕಂದಸ್ವಾಮಿಗಳೂ ವಿವರಿಸಿದ್ದಾರೆ. ಎರಡು ವಿಧವಾದ ವಿವರಣೆಗೂ ಸಹ ಅನುಸ್ಯೂತವಾದ ಸಂತಾನವನ್ನು ಬೆಳೆಸುವವರಾಗಿ ಎಂದೇ ತಾತ್ಪರ್ಯ. ಇದೇ ಪದವು,

**ಋತಸ್ಯ ರಶ್ಮಿಮನುಯಚ್ಛಮಾನಾ ಭದ್ರಂಭದ್ರಂ ಕ್ರತುಮಸ್ಮಾಸು ಧೇಹಿ ।**
(ಋ. ಸಂ. ೧-೧೨೩-೧೩)

ಎಂಬ ಋಕ್ಕಿನಲ್ಲಿ **ಆನುಕೂಲ್ಯೇನ ಪ್ರವರ್ತಮಾನಾ** ಅನುಕೂಲಾತ್ಮಕವಾಗಿ ಪ್ರಸರಿಸುವವಳಾಗಿ ಎಂದು ಉಷಸ್ಸನ್ನು ಸಂಬೋಧಿಸಿದೆ. ಈ ಎರಡು ಕಡೆಗಳಲ್ಲಿಯೂ ಸಹ **ಪ್ರಸರಣ**ವೆಂಬುದೇ ಭಾವವಾಗಿದೆ.

**ಮದಂತಿ**—**ಮದತಿ** ಎಂಬ ಪದವು **ಅರ್ಚತಿಕರ್ಮ**ನಾಮಗಳಲ್ಲಿ ಪಠಿತವಾಗಿದೆ (ನಿ. ೩-೧೪) ಸಾಧಾರಣವಾಗಿ **ಮದಂತಿ** ಎಂಬ ಪದವು **ಹೃಷ್ಯಂತಿ, ಹೃಷ್ಟಾ ಭವಂತಿ** ಎಂಬರ್ಥದಲ್ಲೇ ಅಧಿಕವಾಗಿ ಪ್ರಯೋಗಿಸಲ್ಪಟ್ಟಿದೆ. **ಸ್ತುವಂತಿ** ಎಂಬರ್ಥವು ಅಪರೂಪವಾಗಿದೆ. ಪ್ರಕೃತವಾದ ಋಕ್ಕಿನಲ್ಲಿ **ಸ್ತುವಂತಿ**, ಸ್ತುತಿಸುತ್ತಾರೆ ಎಂದರ್ಥ.

**ಅದ್ರೀ ಧಿಷಣಾಯಾಃ ಉಪಸ್ಥೇ**—ಇಲ್ಲಿ ಎರಡು ವಿಧವಾದ ಅರ್ಥವು ಸಾಧ್ಯವೆಂದು ಸಾಯಣರು ತೋರಿಸಿರುತ್ತಾರೆ. ಮೊದಲನೆಯದಾಗಿ, **ಅದ್ರೀ ಶತ್ರೂನಾದೃಣಂತೌ ಹಿಂಸಂತೌ ವಿದಾರಯಂತೌ ತಾವಿಂದ್ರಾಗ್ನೀ ಧಿಷಣಾಯಾಃ ಸ್ತುತ್ಯಾಃ ಉಪಸ್ಥೇ ಉಪಸ್ಥಾನೇ ಸಮೀಪೇ ಭವತಃ । ತಸ್ಮಾತ್ತತ್ಸಾನ್ನಿಧ್ಯಾಯ ಸ್ತುವಂತೀತಿ ಭಾವಃ ।** ಅದ್ರೀ ಶಬ್ದಕ್ಕೆ ಶತ್ರುಗಳನ್ನು ಸೀಳುವ ಇಂದ್ರಾಗ್ನಿಗಳು ಎಂದೂ, ಧಿಷಣಾ ಶಬ್ದಕ್ಕೆ ಸ್ತುತಿಯೆಂದೂ ಅರ್ಥ ಮಾಡಿ ಶತ್ರುಗಳನ್ನು ಹಿಂಸಿಸುವ ಇಂದ್ರಾಗ್ನಿಗಳು ಸ್ತೋತ್ರದ ಸಮೀಪದಲ್ಲೇ ಇರುತ್ತಾರೆ ಎಂದು ಒಂದು ಅರ್ಥವೂ, ಎರಡನೆಯದಾಗಿ, **ಯದಾ ತಾವಿಂದ್ರಾಗ್ನೀ ಉದ್ದಿಶ್ಯ ಅದ್ರೀ ಅಭಿಷವಸಾಧನಭೂತಾ ಗ್ರಾವಾಣೋ ಧಿಷಣಾಯಾ ಉಪಸ್ಥೇ । ಧಿಷಣಾ ಅಭಿಷವಚರ್ಮ । ತಸ್ಯೋಪರಿಷ್ಟಾದಿಂದ್ರಾಗ್ನ್ಯರ್ಥಂ ಸೋಮಮಭಿಷುಣ್ವಂತಿ । ತದಾ ತದಾ ಯಜಮಾನಾ ಸ್ತುವಂತೀತಿ ಯೋಜನೀಯಂ ।** ಅದ್ರೀ ಶಬ್ದಕ್ಕೆ ಸೋಮರಸವನ್ನು ಹಿಂಡುವ ಸಾಧನವಾದ ಕಲ್ಲುಗಳೆಂದೂ, **ಧಿಷಣಾ** ಶಬ್ದಕ್ಕೆ ಸೋಮರಸವನ್ನು ತುಂಬುವ ಚೀಲವೆಂದೂ, ಇಂದ್ರಾಗ್ನಿಗಳನ್ನು ಉದ್ದೇಶಿಸಿ ಸೋಮರಸವನ್ನು ಹಿಂಡುವಾಗ ಯಜಮಾನರು ಸ್ತುತಿಸುತ್ತಾರೆ ಎಂದು ಇನ್ನೊಂದು ಅರ್ಥವೂ ಸಾಧ್ಯವೆಂದು ತೋರಿಸುತ್ತಾರೆ.

**ಅದ್ರೀ**—ಅದ್ರಿ ಶಬ್ದಕ್ಕೆ ಈ ಋಕ್ಕಿನಲ್ಲಿ ತೋರುವ ಸೀಳುವುದು ಮತ್ತು ರಸವನ್ನು ಹಿಂಡುವ ಕಲ್ಲು ಎಂಬ ಎರಡರ್ಥಗಳಲ್ಲದೇ ಇನ್ನೂ ಇತರ ಅರ್ಥಗಳೂ ಇವೆ.

**ಇಂದ್ರೋ ದೀರ್ಘಾಯ ಚಕ್ಷಸ ಆ ಸೂರ್ಯಂ ರೋಹಯದ್ದಿವಿ ।**

ವಿ ಗೋಭಿರದ್ರಿಮೈರಯತ್ ।

(ಋ. ಸಂ. ೧-೭-೩)

ಪರಾವತಃ ಸುಮತಿಂ ಭಿಕ್ಷಮಾಣಾ ವಿ ಸಿಂಧವಃ ಸಮಯಾ ಸಸ್ರುರದ್ರಿಂ ।

(ಋ. ಸಂ. ೧-೭೩-೬)

ಉತ ಪವ್ಯಾ ರಥಾನಾಮದ್ರಿಂ ಭಿಂದಂತ್ಯೋಜಸಾ ।

(ಋ. ಸಂ. ೫-೫೨-೯)

ಇತ್ಯಾದಿ ಋಕ್ಕುಗಳಲ್ಲಿ ಪರ್ವತವೆಂದೂ.

ಮುಷಾಯದ್ವಿಷ್ಣುಃ ಪಚತಂ ಸಹೀಯಾನ್ವಿಧ್ಯದ್ವರಾಹಂ ತಿರೋ ಅದ್ರಿಮಸ್ತಾ ।

(ಋ. ಸಂ. ೧-೬೧-೭)

ಬ್ರಹ್ಮಾಣಿ ಮೇ ಮತಯಃ ಶಂ ಸುತಾಸಃ ಶುಷ್ಮ ಇಯರ್ತಿ ಪ್ರಭೃತೋ ಮೇ ಅದ್ರಿಃ ।

(ಋ. ಸಂ. ೧-೧೬೫-೪)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ವಜ್ರಾಯುಧವೆಂದೂ,

ಬೃಹಸ್ಪತಿರ್ಭಿನದದ್ರಿಂ ವಿದದ್ಗಾಃ ಸಮುಸ್ರಿಯಾಭಿರ್ವಾವಶಂತ ನರಃ ।

(ಋ. ಸಂ. ೧-೬೨-೩)

ವೀಳು ಚಿದ್ದೃಳ್ಹಾ ಪಿತರೋ ನ ಉಕ್ಥೈರದ್ರಿಂ ರುಜನ್ನಂಗಿರಸೋ ರವೇಣ ।

(ಋ. ಸಂ. ೧-೭೧-೨)

ಇತ್ಯಾದಿ ಕಡೆಗಳಲ್ಲಿ ಅಸುರನೆಂದೂ,

ಪ್ರಯದ್ರಥೇಷು ಪೃಷತೀರಯುಗ್ಧ್ವಂ ವಾಜೇ ಅದ್ರಿಂ ಮರುತೋ ರಂಹಯಂತಃ ।

(ಋ. ಸಂ. ೧-೮೫-೫)

ಇತ್ಯಾದಿ ಋಕ್ಕುಗಳಲ್ಲಿ ಮೇಘವೆಂದೂ,

ಮಹಃ ಸ ರಾ ರಾಯ ಏಷತೇ ಪತಿರ್ದನ್ನಿನ ಇನಸ್ಯ ವಸುನಃ ಪದ ಆ ।
ಉಪ ಧ್ರಜಂತಮದ್ರಯೋ ವಿಧನ್ನಿತ್ ।

(ಋ. ಸಂ. ೧-೧೪೯-೧)

ಇತ್ಯಾದಿ ಋಕ್ಕುಗಳಲ್ಲಿ ಅದ್ರಿಗಳುಳ್ಳ ಎಂದರೆ ರಸವನ್ನು ಹಿಂಡುವ ಕಲ್ಲುಗಳುಳ್ಳ ಯಜಮಾನರೆಂದೂ ಹೀಗೆಯೇ ಅನೇಕ ಅರ್ಥಗಳಾಗುತ್ತವೆ.

ಅದ್ರಿ ಶಬ್ದಕ್ಕೆ ಹೀಗೆ ವಜ್ರಾಯುಧ, ರಾಕ್ಷಸ, ಕಲ್ಲು, ಪರ್ವತ, ಮೇಘ ಇತ್ಯಾದ್ಯರ್ಥಗಳಾಗುವುದಕ್ಕೆ ನಿರುಕ್ತಕಾರರು ನಿರ್ವಚನಗಳನ್ನು ತೋರಿಸಿರುತ್ತಾರೆ.

**ಅದ್ರಿರಾದೃಣಾತ್ಯೇತೇನ । ಅಪಿ ವಾ ಅತ್ತೇಃ ಸ್ಯಾತ್ ।**

(ನಿ. ೪.೪)

**ಸೀಳು** ಎಂದರ್ಥವನ್ನು ಕೊಡತಕ್ಕ ದೃ ಧಾತುವಿನಿಂದಾಗಲಿ **ತಿನ್ನು** ಎಂದರ್ಥವನ್ನು ಕೊಡುವ **ಅದ್** ಧಾತುವಿನಿಂದಾಗಲಿ **ಅದ್ರಿ** ಶಬ್ದವು ನಿಷ್ಪನ್ನವಾಗಿದೆ. ಪರ್ವತಾದಿಗಳನ್ನು ಸೀಳುವುದರಿಂದ ವಜ್ರಾಯುಧಕ್ಕೆ **ಅದ್ರಿ**ಯೆಂದು ಹೆಸರು. ಇದರಂತೆಯೇ **ಭಕ್ಷಕಃ ವಜ್ರಃ** ಎಂದು ೧-೧೬೧-೪ ಇತ್ಯಾದಿ ಋಕ್ಕುಗಳಲ್ಲಿ ಅದ್ರಿ ಶಬ್ದದ ವಿವರಣೆಯಿದೆ. ಮತ್ತು **ಅತ್ತಾರಂ, ಅಸುರಂ, ಭಕ್ಷಕಂ ಪಣಿಂ** ಎಂದೂ ಸಹ ೧-೬೨-೩, ೧-೭೧-೧ ಇತ್ಯಾದಿಋಕ್ಕುಗಳಲ್ಲಿ ವಿವರಿಸಿದೆ. ಈ ವಿವರಣೆಯನ್ನು ಕೊಡುವಾಗ ನಿರುಕ್ತಕಾರರು,

**ಯದಿಂದ್ರ ಚಿತ್ರ ಮೇಹನಾಸ್ತಿ ತ್ವಾದಾತಮದ್ರಿವಃ ।**

(ಋ. ಸಂ. ೫-೩೯.೧)

ಎಂಬ ಋಕ್ಕನ್ನು ಉದಹರಿಸಿ **ಅದ್ರಿವಃ** ಎಂಬುದಕ್ಕೆ **ವಜ್ರವನ್ ಇಂದ್ರ** ಎಂಬ ಅರ್ಥವು ಹೇಗೆ ಸಾಧ್ಯವಾಗುವುದೆಂದು ತೋರಿಸಿದ್ದಾರೆ. ಹೀಗೆಯೇ,

**ಪ್ರೈತೇ ವದಂತು ಪ್ರ ವಯಂ ವದಾಮ ಗ್ರಾವಭ್ಯೋ ವಾಚಂ ವದತಾ ವದದ್ಭ್ಯಃ ।**
**ಯದದ್ರಯಃ ಪರ್ವತಾಃ ಸಾಕಮಾಶವಃ ಶ್ಲೋಕಂ ಘೋಷಂ ಭರಥೇಂದ್ರಾಯ ಸೋಮಿನಃ ।**

(ಋ. ಸಂ. ೧೦ -೯೪.-೧)

ಎಂಬ ಋಕ್ಕನ್ನು ಉದಹರಿಸಿ ಇಲ್ಲಿ **ಅದ್ರಯಃ** ಎಂಬುದಕ್ಕೆ **ಆದರಣೀಯಾಃ** (ನಿ. ೯-೯) **ದೃಢಾಃ**, ಸೀಳಲ್ಪಡದಿರುವುದು; ದೃಢವಾಗಿರುವುದರಿಂದ **ಆದರಾರ್ಹವಾದ** ಪರ್ವತಗಳು ಎಂಬ ಅರ್ಥವನ್ನು ತೋರಿಸಿದ್ದಾರೆ. ಹೀಗೆ **ಅದ್ರಿ** ಶಬ್ದದ ಮೂಲಧಾತುವು ಅಥವಾ ಧಾತುಗಳು ಬೇರೆಬೇರೆ ಅರ್ಥಗಳನ್ನು ಕೊಡುವುದರಿಂದ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಅದ್ರೀ** ಎಂದರೆ ಶತ್ರುಗಳನ್ನು ಸೀಳಿಹಾಕತಕ್ಕ ಇಂದ್ರಾಗ್ನಿಗಳಿಂದಾಗಲಿ, ಅಥವಾ ಸೋಮರಸವನು ಹಿಂಡುವ ಕಲ್ಲುಗಳಿಂದಾಗಲಿ ಅರ್ಥವಾಗಬಹುದು.

**ಧಿಷಣಾಯಾಃ**— ಧಿಷಣಾ ಎಂಬ ಪದವನ್ನು ನಿರುಕ್ತಕಾರರು **ವಾಙ್‌ನಾಮಗಳಲ್ಲೂ** (ನಿ. ೨-೨೩) ಮತು **ದ್ಯಾವಾಪೃಥಿವೀನಾಮಗಳಲ್ಲೂ** (ನಿ. ೩-೨೧) ಸೇರಿಸಿದ್ದಾರೆ. ಅಲ್ಲದೇ ಋ. ಸಂ. ೨-೩೭-೩ನೇ ಋಕ್ಕನ್ನು ಉದಹರಿಸಿ ಅಲ್ಲಿ **ಧಿಷ್ಣ್ಯದ್ಧಿಷ್ಣ್ಯೇ ಧಿಷಣ್ಯೋ ಧಿಷಣಾಭವಃ ಧಿಷಣಾ ವಾಗ್ಧಿಷೇರ್ದಧಾತ್ಯರ್ಥೇ । ಧೀಸಾದಿನೀತಿ ವಾ । ಧೀಸಾನಿನೀತಿ ವಾ ।** (ಅರ್ಥವನ್ನು) ಹಿಡಿದಿರು ಎಂಬರ್ಥವನ್ನು ಕೊಡುವ **ಧಿಷ್** ಧಾತುವಿನಿಂದ ನಿಷ್ಪನ್ನವಾಗಿ **ವಾಕ್** ಎಂದರ್ಥವಾಗಿದೆ. ಅಥವಾ ಬುದ್ಧಿಯನ್ನು ಪ್ರಸರಿಸು ಅಥವಾ ಸಂಪಾದಿಸು ಎಂಬ ತಾತ್ಪರ್ಯವನ್ನು ಕೊಡುತ್ತದೆ. ಆದ್ದರಿಂದ **ಧಿಷಣಾ** ಎಂಬ ಪದಕ್ಕೆ **ವಾಕ್** ಎಂದರ್ಥ ಎಂದು ನಿರ್ವಚನವನ್ನು ತೋರಿಸಿರುತ್ತಾರೆ. ಆದರೆ ಈ ಪದಕ್ಕೆ ಇತರ ಅರ್ಥಗಳೂ ಸಾಧ್ಯವಾಗುತ್ತವೆ.

ಆಪಶ್ಚ ಮಿತ್ರಂ ಧಿಷಣಾ ಚ ಸಾಧನ್ದೇವಾ ಅಗ್ನಿಂ ಧಾರಯನ್ದ್ರವಿಣೋದಾಂ ।

(ಋ. ಸಂ. ೧-೯೬-೧)

ಇಮಾಂ ತೇ ಧಿಯಂ ಪ್ರ ಭರೇ ಮಹೋ ಮಹೀಮಸ್ಯ ಸ್ತೋತ್ರೇ ಧಿಷಣಾ ಯತ್ತ ಆನಜೇ ।

(ಋ. ಸಂ. ೧-೧೦೨-೧)

ಇತ್ಯಾದಿಋಕ್ಕುಗಳಲ್ಲಿ ವಾಕ್ಕು ಅಥವಾ ಬುದ್ಧಿ ಎಂದೂ

ಮಹಸ್ಕರಥೋ ವರಿವೋ ಯಥಾ ನೋಽಸ್ಮೇ ಕ್ಷಯಾಯ ಧಿಷಣೇ ಅನೇಹಃ ।
(ಋ. ಸಂ. ೬-೭೦-೩)

ಸಮೀಚೀನೇ ಧಿಷಣೇ ವಿ ಷ್ಕಭಾಯತಿ ವೃಷ್ಣಃ ಪೀತ್ವಾ ಮದ ಉಕ್ಥಾನಿ ಶಂಸತಿ ।
(ಋ. ಸಂ. ೧೦-೪೪-೮)

ಇತ್ಯಾದಿಋಕ್ಕುಗಳಲ್ಲಿ ದ್ಯಾವಾಪೃಥಿವಿಗಳೆಂದೂ, ಪ್ರಕೃತವಾದ ಋಕ್ಕಿನಲ್ಲಿ **ಸ್ತುತಿ** ಅಥವಾ **ಸೋಮರಸವನ್ನು** ತುಂಬುವ ಚರ್ಮಚೀಲನೆಂದೂ ಅರ್ಥವಾಗುತ್ತದೆ. **ಉಪಸ್ಥೇ** ಎಂಬ ಪದಕ್ಕೆ ಸ್ಕಂದಸ್ವಾಮಿಗಳು **ಉಪಗಮ್ಯ ಬ್ರಾಹ್ಮಣಾ ದೇವಾ ವಾ ಯತ್ರ ತಿಷ್ಠಂತಿ ಸ ಉಪಸ್ಥೋ ಯಜ್ಞಃ।** ದೇವತೆಗಳಾಗಲಿ ಬ್ರಾಹ್ಮಣರಾಗಲಿ ಸಮೀಪಿಸಿ ಬಂದು ನಿಲ್ಲುವುದರಿಂದ **ಉಪಸ್ಥ**ವೆಂದರೆ ಯಜ್ಞವೆಂದರ್ಥವೆಂದು ವಿವರಿಸಿದ್ದಾರೆ.

॥ವ್ಯಾಕರಣಪ್ರಕ್ರಿಯಾ ॥

**ಭೇದ್ಮ**—ಭಿದಿರ್ ದ್ವೈಧೀಕರಣೇ. ಧಾತು. ಲಙ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂ ಙಿತಃ**—(ಪಾ. ಸೂ. ೩-೪-೯೯) ಎಂಬುದರಿಂದ ಸಕಾರಲೋಪ. **ಬಹುಲಂ ಛಂದಸಿ**—(ಪಾ. ಸೂ. ೨-೪-೭೩) ಎಂಬುದರಿಂದ ವಿಕರಣಕ್ಕೆ ಲುಕ್. **ಛಂದಸ್ಯುಭಯಥಾ**—(ಪಾ. ಸೂ. ೩-೪-೧೧೭) ಎಂಬುದರಿಂದ ಮಸಿಗೆ ಆರ್ಧಧಾತುಕಸಂಜ್ಞೆ ಇರುವುದರಿಂದ **ಸಾರ್ವಧಾತುಕಮಪಿತ್**—(ಪಾ. ಸೂ. ೧-೨-೪) ಸೂತ್ರದಿಂದ ಙಿತ್ವ ಬರುವುದಿಲ್ಲ. ಆಗ ತನ್ನಿಮಿತ್ತವಾಗಿ **ಪುಗಂತಲಘೂಪಧಸ್ಯ ಚ**—(ಪಾ. ಸೂ. ೭-೩-೮೬) ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ಮಾಙ್ ಸಂಬಂಧವಿರುವುದರಿಂದ **ನ ಮಾಙ್ಯೋಗೇ**—(ಪಾ ಸೂ. ೬-೪-೭೪) ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ರಶ್ಮೀಁನ್**—ಇದಕ್ಕೆ ಇತಿ ಎಂಬುದು ಪರವಾದುದರಿಂದ **ದೀರ್ಘಾದಟಿ ಸಮಾನಪಾದೇ**— (ಪಾ. ಸೂ ೮-೩-೯) ಎಂಬುದರಿಂದ ನಕಾರಕ್ಕೆ ರುತ್ವ. **ಅತ್ರಾನುನಾಸಿಕಃ ಪೂರ್ವಸ್ಯ ತು ವಾ**—(ಪಾ. ಸೂ. ೮-೩-೨) ಎಂಬುದರಿಂದ ರುತ್ವದ ಪೂರ್ವದಲ್ಲಿರುವ ಈಕಾರಕ್ಕೆ ಅನುನಾಸಿಕತ್ವ ಬರುತ್ತದೆ.

**ನಾಧಮಾನಾಃ**—ನಾಧೃ ಯಾಚ್ಞಾಯಾಮ್. ಧಾತು. ಲಡರ್ಥದಲ್ಲಿ ಇದಕ್ಕೆ ಶಾನಚ್ ಪ್ರತ್ಯಯ. ಶಪ್ ವಿಕರಣ. **ಆನೇ ಮುಕ್**—(ಪಾ. ಸೂ. ೭-೨-೮೨) ಎಂಬುದರಿಂದ ಅಜಂತಾಂಗಕ್ಕೆ ಮುಕಾಗಮ. ಅದುಪದೇಶದ ಪರದಲ್ಲಿ ಲಸಾರ್ವಧಾತುಕವು ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬)ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುವಿನ ಉದಾತ್ತಸ್ವರ ಉಳಿಯುತ್ತದೆ.

**ಪಿತ್ರ್ಯಾಣಾಮ್**—**ನಾಮಿ** (ಪಾ. ಸೂ. ೬-೪-೩) ಸೂತ್ರದಿಂದ ಅಜಂತಾಂಗಕ್ಕೆ ದೀರ್ಘ. **ನಾಮನ್ಯತರಸ್ಯಾಮ್**—(ಪಾ. ಸೂ. ೬-೧-೧೭೭) ಎಂಬುದರಿಂದ ನಾಮಿಗೆ ಉದಾತ್ತಸ್ವರ ಬರುತ್ತದೆ. ಋಕಾರದ ಪರದಲ್ಲಿರುವುದರಿಂದ ನಕಾರಕ್ಕೆ ಣತ್ವ.

ಮದಂತಿ—ಮದಿ ಸ್ತುತೌ ಧಾತು. ಇದಿತ್ತಾದರೂ **ಆಗಮಾನುಶಾಸನಮನಿತ್ಯಮ್**—ಎಂಬ ವಚನದಿಂದ **ಇದಿತೋನುಮ್ ಧಾತೋಃ**—(ಪಾ ಸೂ. ೭-೧-೫೮) ಸೂತ್ರದಿಂದ ನುಮಾಗಮ ಬರುವುದಿಲ್ಲ. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೩ ॥



ಸಂಹಿತಾಪಾಠಃ

ಯುವಾಭ್ಯಾಂ ದೇವೀ ಧಿಷಣಾ ಮದಾಯೇಂದ್ರಾಗ್ನೀ ಸೋಮ-
ಮುಶತೀ ಸುನೋತಿ ।
ತಾವಶ್ವಿನಾ ಭದ್ರಹಸ್ತಾ ಸುಪಾಣೀ ಆ ಧಾವತಂ ಮಧುನಾ
ಪೃಂಕ್ತಮಪ್ಸು ॥ ೪ ॥

। ಪದಪಾಠಃ ।

ಯುವಾಭ್ಯಾಂ । ದೇವೀ । ಧಿಷಣಾ । ಮದಾಯ । ಇಂದ್ರಾಗ್ನೀ ಇತಿ । ಸೋಮಂ । ಉಶತೀ । ಸುನೋತಿ ।
ತೌ । ಅಶ್ವಿನಾ । ಭದ್ರಽಹಸ್ತಾ । ಸುಪಾಣೀ ಇತಿ ಸುಽಪಾಣೀ । ಆ । ಧಾವತಂ । ಮಧುನಾ । ಪೃಂಕ್ತಂ । ಅಪ್ಽಸು ॥ ೪ ॥

ಸಾಯಣಭಾಷ್ಯಂ

ಹೇ ಇಂದ್ರಾಗ್ನೀ ಯುವಾಭ್ಯಾಂ ಮದಾಯ ಯುವಯೋರ್ಹರ್ಷಾಯ ದೇವೀ ದ್ಯೋತಮಾನೋಶತೀ ಯುವಾಂ ಕಾಮಯಮಾನಾ ಧಿಷಣಾ ಮಂತ್ರರೂಪಾ ವಾಕ್ ಸೋಮಮಭಿಷುಣೋತಿ ।

ಯದ್ವಾ । ಧಿಷಣಾಧಿಷವಣಚರ್ಮ । ದ್ಯೋತಮಾನಂ ತದ್ಯುವಯೋರ್ಮದಂ ಕಾಮಯಮಾನಂ ಸತ್ಸೋಮಮಭಿಷುಣೋತಿ । ಗ್ರಾವಭಿಃ ಸ್ವಸ್ಮಿನ್ನಭಿಷವಾತ್ತಸ್ಯಾಭಿಷವಕರ್ತೃತ್ವಂ । ಅಶ್ವಿನಾಶ್ವವಂತೌ ಭದ್ರಹಸ್ತಾ ಶೋಭನದೋರ್ದಂಡೌ ಸುಪಾಣೀ । ಮಣಿಬಂಧಾದೂರ್ಧ್ವಭಾಗಃ ಪಾಣಿಃ । ಶೋಭನಪಾಣೀ ಏವಂಭೂತೌ ಹೇ ಇಂದ್ರಾಗ್ನೀ ತೌ ಯುವಾಮಾ ಧಾವತಂ । ಶೀಘ್ರಮಾಗಚ್ಛತಂ । ಆಗತ್ಯ ಚಾಪ್ಸೂದಕೇಷು ವರ್ತಮಾನೇನ ಮಧುನಾ ಮಾಧುರ್ಯೋಪೇತೇನ ಸಾರಾಂಶೇನ ಪೃಂಕ್ತಂ । ಅಸ್ಮದೀಯಂ ಸೋಮಂ ಸಂಯೋಜಯತಂ । ಯದ್ವಾ । ಅಪ್ಸು ವಸತೀವರೀಷು ಮಧುನಾ ಮಾಧುರ್ಯಂ ಸಂಯೋಜಯತಂ । ವಿಭಕ್ತಿವ್ಯತ್ಯಯಃ ॥ ಯುವಾಭ್ಯಾಂ । ಷಷ್ಠ್ಯರ್ಥೇ ಚತುರ್ಥೀ । ಉಶತೀ । ವಶ ಕಾಂತೌ । ಅದಾದಿತ್ವಾಚ್ಛಪೋ ಲುಕ್ । ಗ್ರಹಿಜ್ಯಾದಿನಾ ಸಂಪ್ರಸಾರಣಂ । ಉಗಿತಶ್ಚೇತಿ ಙೀಪ್ । ಶತುರನುಮ ಇತಿ ನದ್ಯಾ ಉದಾತ್ತತ್ವಂ । ಪೃಂಕ್ತಂ । ಪೃಚೀ ಸಂಪರ್ಕೇ । ರೌಧಾದಿಕಃ । ಲೋಟಿ ಥಸಸ್ತಂ । ಶ್ನಸೋರಲ್ಲೋಪಃ । ಅನುಸ್ವಾರಪರಸವರ್ಣೌ । ನ ಚಾಚಃ ಪರಸ್ಮಿನ್ನಿತ್ಯಲ್ಲೋಪಸ್ಯ ಸ್ಥಾನಿವತ್ತ್ವಂ ನ ಪದಾಂತೇತ್ಯಾದಿನಾ ನಿಷೇಧಾತ್ ॥

ಪ್ರತಿಪದಾರ್ಥ

**ಇಂದ್ರಾಗ್ನೀ**— ಎಲೈ ಇಂದ್ರಾಗ್ನಿಗಳೇ, **ಯುವಾಭ್ಯಾಂ**— ನಿಮ್ಮಿಬ್ಬರ । **ಮದಾಯ** ಹರ್ಷಕ್ಕಾಗಿ । (ಸಂತೋಷಾರ್ಥವಾಗಿ) **ದೇವೀ**—ಪ್ರಕಾಶಮಾನವಾದುದೂ । **ಉಶತೀ**—(ನಿಮ್ಮಸಾನ್ನಿಧ್ಯವನ್ನು) ಅಪೇಕ್ಷಿಸುವುದೂ ಆದ । **ಧಿಷಣಾ**—ಮಂತ್ರರೂಪವಾದ ವಾಕ್ಕು ಅಥವಾ ಸೋಮರಸವನ್ನು ಹಿಂಡುವ ಚರ್ಮ ಪಾತ್ರೆಯು । **ಸೋಮಂ**-ಸೋಮರಸವನ್ನು । **ಸುನೋತಿ**—ಹಿಂಡಿ ಅರ್ಪಿಸುತ್ತದೆ । **ಅಶ್ವಿನಾ**—ಕುದುರೆಗಳನ್ನು ಉಳ್ಳವರೂ । **ಭದ್ರಹಸ್ತಾ**-ಶ್ರೇಷ್ಠವಾದ ತೋಳುಗಳುಳ್ಳವರೂ । **ಸುಪಾಣೀ**—ಮನೋಹರವಾದ ಕೈಗಳುಳ್ಳವರೂ ಆದ ಎಲೈ ಇಂದ್ರಾಗ್ನಿಗಳೇ **ತೌ**—ನೀವಿಬ್ಬರೂ । **ಆ ಧಾವತಂ**—ಶೀಘ್ರವಾಗಿ ಬನ್ನಿರಿ (ಬಂದನಂತರ) । **ಅಪ್ಸು**—(ಸೋಮಯಜ್ಞದ ಹಿಂದಿನ ದಿನ ತಂದು ಶೇಖರಿಸಿರುವ) ನೀರುಗಳಲ್ಲಿರುವ । **ಮಧುನಾ**—ಮಾಧುರ್ಯದೊಂದಿಗೆ । **ಪೃಂಕ್ತಂ**—(ನಮ್ಮ) ಸೋಮರಸವನ್ನು (ಸೇರಿಸಿರಿ).

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ನಿಮ್ಮಿಬ್ಬರಿಗೂ ಸಂತೋಷವನ್ನುಂಟುಮಾಡುವುದಕ್ಕಾಗಿ ಪ್ರಕಾಶಮಾನವಾದುದೂ, ನಿಮ್ಮ ಸಾನ್ನಿಧ್ಯವನ್ನಪೇಕ್ಷಿಸುವುದೂ ಆದ ನಮ್ಮ ಮಂತ್ರರೂಪವಾದ ವಾಕ್ಕು ನಿಮಗೆ ಸೋಮರಸವನ್ನು ಹಿಂಡಿ ಅರ್ಪಿಸುತ್ತದೆ. ಕುದುರೆಗಳೊಂದಿಗೆ ಕೂಡಿರುವವರೂ, ಶ್ರೇಷ್ಠವಾದ ತೋಳುಗಳುಳ್ಳವರೂ, ಮನೋಹರವಾದ ಕೈಗಳುಳ್ಳವರೂ ಆದ ಎಲೈ ಇಂದ್ರಾಗ್ನಿಗಳೇ, ನೀವಿಬ್ಬರೂ ಕೂಡಿಕೊಂಡು ಶೀಘ್ರವಾಗಿ ಬನ್ನಿರಿ. ಅನಂತರ ನಾವು ಸೋಮಯಜ್ಞಕ್ಕಾಗಿ ಶೇಖರಿಸಿರುವ ನೀರುಗಳಲ್ಲಿರುವ ಮಾಧುರ್ಯದೊಂದಿಗೆ ನಮ್ಮ ಸೋಮರಸದ ಮಾಧುರ್ಯವನ್ನು ಸೇರಿಸಿರಿ.

## English Translation

The sacred prayer, desiring your presence, offers to you both, Indra and Agni, for your exhilaration, the Soma libation ; do you two, who have

horses, handsome arms, and graceful hands, come quickly and mix (the libation) with sweetness in the waters.

### ವಿಶೇಷವಿಷಯಗಳು

**ದೇವೀ ಧಿಷಣಾ**—ಹಿಂದಿನ ಋಕ್ಕಿನಂತೆಯೇ ಈ ಋಕ್ಕಿನಲ್ಲಿಯೂ ಸಹ ಧಿಷಣಾ ಶಬ್ದಕ್ಕೆ ಎರಡು ಅರ್ಥಗಳನ್ನು ಹೇಳಿರುತ್ತಾರೆ. **ದ್ಯೋತಮಾನಾ ಮಂತ್ರರೂಪಾ ವಾಕ್** ಎಂದು ಒಂದರ್ಥವೂ, **ದ್ಯೋತಮಾನಂ ಧಿಷಣಚರ್ಮ** ಎಂದು ಇನ್ನೊಂದರ್ಥವೂ ಆಗಬಹುದು.

**ಅಶ್ವಿನಾ—ಅಶ್ವವಂತೌ**—ಶ್ರೇಷ್ಠವಾದ ಕುದುರೆಯುಳ್ಳವರು. ಇಂದ್ರಾಗ್ನಿಗಳ ಅಶ್ವಗಳು ಅತ್ಯಂತ ಆಕರ್ಷಕವಾಗಿಯೂ, ಪ್ರಬಲವಾದ ಶಕ್ತಿಯನ್ನು ಹೊಂದಿದವಾಗಿಯೂ ಇರತಕ್ಕವೆಂದು ಅನೇಕಕಡೆ ಪ್ರಶಂಸಿಸಲ್ಪಟ್ಟಿವೆ. ಇಂದ್ರನ ರಥವನ್ನೂ ಅಶ್ವಗಳನ್ನೂ ವರ್ಣಿಸುವ ಸನ್ನಿವೇಶಗಳು ಇಂದ್ರನ ಪ್ರಭಾವವನ್ನೂ ಜೊತೆಯಲ್ಲಿಯೇ ವರ್ಣಿಸುತ್ತವೆ.

**ಆ ದ್ವಾಭ್ಯಾಂ ಹರಿಭ್ಯಾಮಿಂದ್ರ ಯಾಹ್ಯಾ ಚತುರ್ಭಿರಾ ಷಡ್ಭಿರ್ಹೂಯಮಾನಃ ।**
**ಆಷ್ಟಾಭಿರ್ದಶಭಿಃ ಸೋಮಪೇಯಮಯಂ ಸುತಃ ಸುಮಖ ಮಾ ಮೃಧಸ್ಕಃ ।**

(ಋ. ಸಂ. ೨-೧೮-೪)

**ಆ ವಿಂಶತ್ಯಾ ತ್ರಿಂಶತಾ ಯಾಹ್ಯರ್ವಾಙಾ ಚತ್ವಾರಿಂಶತಾ ಹರಿಭಿರ್ಯುಜಾನಃ ।**
**ಆ ಪಂಚಾಶತಾ ಸುರಥೇಭಿರಿಂದ್ರಾಷಷ್ಟ್ಯಾ ಸಪ್ತತ್ಯಾ ಸೋಮಪೇಯಂ ॥**

(ಋ. ಸಂ. ೧-೧೮-೫)

**ಆಶೀತ್ಯಾ ನವತ್ಯಾ ಯಾಹ್ಯರ್ವಾಙಾ ಶತೇನ ಹರಿಭಿರುಹ್ಯಮಾನಃ ।**

(ಋ. ಸಂ ೨-೧೮-೬)

ಇತ್ಯಾದ್ಯನೇಕ ಋಕ್ಕುಗಳಲ್ಲಿ ಇಂದ್ರನ ಅಶ್ವಗಳ ಸಂಖ್ಯೆಯು ಎರಡರಿಂದ ಸಹಸ್ರ ಸಂಖ್ಯೆಗಳವರೆಗೂ ಇರುವುದು ತಿಳಿಯುತ್ತದೆ. ಹೀಗೆಯೇ ೮-೧-೯ ; ೪-೪೬-೩ ; ೮-೧-೨೪ ಇತ್ಯಾದಿ ಕಡೆಗಳಲ್ಲಿಯೂ ಸಹ ಇವುಗಳ ಸಂಖ್ಯೆಗಳನ್ನು ಸೂಚಿಸಿದೆ. ಈ ಸಂಖ್ಯೆಗಳು ಮಾತ್ರವಲ್ಲದೇ,

**ಆ ಮಂದ್ರೈರಿಂದ್ರ ಹರಿಭಿರ್ಯಾಹಿ ಮಯೂರರೋಮಭಿಃ ।**

(ಋ. ಸಂ. ೩-೪೫-೧)

**ಆ ತ್ವಾ ರಥೇ ಹಿರಣ್ಯಯೇ ಹರೀ ಮಯೂರಶೇಪ್ಯಾ ।**

(ಋ. ಸಂ. ೮-೧-೨೫)

ಇತ್ಯಾದಿ ಋಕ್ಕುಗಳಲ್ಲಿ ಆ ಇಂದ್ರನ ಕುದುರೆಗಳ ರೋಮಗಳೂ ಪುಚ್ಛಗಳೂ ನವಿಲಿನಗರಿಗೆ ಹೋಲಿಸಲ್ಪಟ್ಟು ವರ್ಣಿತವಾಗಿವೆ. ಮತ್ತು ಹೀಗೆಯೇ,

**ಘೃತಪೃಷ್ಠಾ ಮನೋಯುಜೋ ಯೇ ತ್ವಾ ವಹಂತಿ ವಹ್ನಯಃ ।**

(ಋ. ಸಂ. ೧-೧೪-೬)

**ಯದಯುಕ್ಥಾ ಅರುಷಾ ರೋಹಿತಾ ರಥೇ ವಾತಜೂತಾ ವೃಷಭಸ್ಯೇವ ತೇ ರವಃ ।**
(ಋ. ಸಂ ೧-೯೪-೧೦)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯ ಕುದುರೆಗಳೂ, ಅವುಗಳ ಸ್ವರೂಪವೂ ವೇಗವೂ ವರ್ಣಿತವಾಗಿವೆ. ಅದ್ದರಿಂದಲೇ ಇಂದ್ರಾಗ್ನಿಗಳನ್ನು ಒಟ್ಟಿಗೆ ಅಶ್ವಿನಾ ಎಂದು ಸಂಬೋಧಿಸಿದೆ.

**ಭದ್ರಹಸ್ತಾ, ಸುಪಾಣೀ**—ಶ್ರೇಷ್ಠವಾದ ತೋಳುಗಳುಳ್ಳವರು ಮತ್ತು ಉತ್ತಮವಾದ ಅಂಗೈಗಳುಳ್ಳವರು ಎಂದರ್ಥ.

**ಆ ಧೂರ್ಷ್ವಸ್ಮೈ ದಧಾತಾಶ್ವಾನಿಂದ್ರೋ ನ ವಜ್ರೀ ಹಿರಣ್ಯಬಾಹುಃ ।**
(ಋ. ಸಂ. ೭-೩೪-೪)

**ಬೃಹದುಕ್ಥಂ ಹವಾಮಹೇ ಸೃಪ್ರಕರಸ್ನಮೂತಯೇ ।**
(ಋ. ಸಂ. ೮-೩೨-೧೦)

ಎಂಬವೇ ಮುಂತಾದ ಋಕ್ಕುಗಳಲ್ಲಿ ಅವರ ಬಾಹುಗಳ ಮತ್ತು ಹಸ್ತಗಳ ವರ್ಣನೆಗಳು ಬಹುವಾಗಿವೆ. ಆ ಅಂಶಗಳನ್ನು ಇಲ್ಲಿ ಸೂಚಿಸಿದೆ.

**ಪೃಙ್ಕ್ತಮಪ್ಸು—ವಸತೀವರಿಯೆಂದು** ಪ್ರಸಿದ್ಧವಾದ ಹಿಂದಿನ ರಾತ್ರಿಯಲ್ಲಿ ನಾನಾ ತೀರ್ಥಗಳಿಂದ ಸಂಭೃತಗಳಾಗಿ ಶೇಖರಿಸಲ್ಪಟ್ಟ ಉದಕಗಳ ಮಾಧುರ್ಯದೊಡನೆ ಈ ಸೋಮರಸವೂ ಸೇರಿಕೊಂಡು ತನ್ನ ಮಾಧುರ್ಯವನ್ನೂ ಸೌಗಂಧ್ಯವನ್ನೂ ಹೆಚ್ಚಿಸಲಿ ಎಂದು ಅಭಿಪ್ರಾಯವು.

ವ್ಯಾಕರಣಪ್ರಕ್ರಿಯ

**ಯುವಾಭ್ಯಾಮ್**—ಯುಷ್ಮದ್‌ಶಬ್ದ. ಚತುರ್ಥೀದ್ವಿವಚನಾಂತರೂಪ. ಷಷ್ಠ್ಯರ್ಥದಲ್ಲಿ ಚತುರ್ಥೀ ಬಂದಿದೆ.

**ಉಶತೀ**—ವಶ ಕಾಂತೌ ಧಾತು. ಅದಾದಿ. ಲಟರ್ಥದಲ್ಲಿ ಶತೃಪ್ರತ್ಯಯ. **ಅದಿ ಪ್ರಭೃತಿಭ್ಯಃ ಶಪಃ**—(ಪಾ. ಸೂ. ೨-೪-೭೨) ಎಂಬುದರಿಂದ ಶಪಿಗೆ ಲುಕ್. **ಸಾರ್ವಧಾತುಕಮಪಿತ್**—(ಪಾ. ಸೂ. ೧-೨-೪) ಎಂಬುದರಿಂದ ಶತೃಪ್ರತ್ಯಯಕ್ಕೆ ಙಿದ್ವದ್ಭಾವವಿರುವುದರಿಂದ **ಗ್ರಹಿಜ್ಯಾವಯಿ**—(ಪಾ. ಸೂ ೬-೧-೧೬) ಎಂಬುದರಿಂದ ಶತೃನಿಮಿತ್ತವಾಗಿ ಧಾತುವಿಗೆ ಸಂಪ್ರಸಾರಣ. ಪರಕ್ಕೆ ಪೂರ್ವರೂಪ. ಉಶತ್ ಎಂದು ರೂಪವಾದಾಗ ಸ್ತ್ರೀತ್ವವಿವಕ್ಷಾಮಾಡಿದಾಗ **ಉಗಿತಶ್ಚ**—(ಪಾ. ಸೂ. ೪-೧-೬) ಎಂಬುದರಿಂದ ಙೀಪ್. ನುಮ್‌ರಹಿತವಾದ ಶತೃವಿನ ಪರದಲ್ಲಿ ನದೀ ಬಂದುದರಿಂದ (ಈ) **ಶತುರನುಮೋನದ್ಯಜಾದೀ**—(ಪಾ ಸೂ ೬-೧-೧೭೩) ಎಂಬುದರಿಂದ ನದೀಗೆ (ಈಕಾರಕ್ಕೆ) ಉದಾತ್ತಸ್ವರ ಬರುತ್ತದೆ.

**ಸುನೋತಿ**—ಷುಞ್ ಅಭಿಷವೇ. ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ

ಅಶ್ವಿನಾ—ದ್ವಿವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. ಹೀಗೆಯೇ ಮುಂದಿನ ಶಬ್ದದಲ್ಲಿಯೂ ವಿಭಕ್ತಿಗೆ ಆಕಾರಾದೇಶ

**ಧಾವತಮ್**—ಧಾವು ಗತಿಶುದ್ಧ್ಯೋಃ ಧಾತು. ಲೋಟ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಪೃಙ್ಕ್ತಮ್**—ಪೃಚೀ ಸಂಪರ್ಕೇ ಧಾತು. ರುಧಾದಿ. ಲೋಟ್ ಮಧ್ಯಮಪುರುಷ ದ್ವಿವಚನದಲ್ಲಿ ಥಸ್ ಬಂದಾಗ **ಲೋಟೋ ಲಙ್ವತ್**—(ಪಾ. ಸೂ. ೩-೪-೮೫) ಎಂಬುದರಿಂದ ಲಙ್ವದ್ಭಾವ ಬರುವುದರಿಂದ **ತಸ್ಥಸ್ಥ**—(ಪಾ. ಸೂ. ೩-೪-೧೦೧) ಎಂಬುದರಿಂದ ಅದಕ್ಕೆ ತಮಾದೇಶ. **ರುಧಾದಿಭ್ಯಃ ಶ್ನಮ್**—(ಪಾ. ಸೂ. ೩-೧-೭೮) ಎಂಬುದರಿಂದ ಶ್ನಮ್ ವಿಕರಣ. ಪ್ರತ್ಯಯಕ್ಕೆ ಙಿತ್ವಾತಿದೇಶವಿರುವುದರಿಂದ **ಶ್ನಸೋರಲ್ಲೋಪಃ**—(ಪಾ. ಸೂ. ೬-೪-೧೧೧) ಎಂಬುದರಿಂದ ವಿಕರಣದ ಅಕಾರಕ್ಕೆ ಲೋಪ. ಉಳಿದಿರುವ ನಕಾರಕ್ಕೆ **ನಶ್ಚಾಪದಾಂತಸ್ಯಝಲಿ**—ಎಂಬುದರಿಂದ ಅನುಸ್ವಾರ. **ಅನುಸ್ವಾರಸ್ಯಯಯಿ ಪರಸವರ್ಣಃ**—ಎಂಬುದರಿಂದ ಪರಸವರ್ಣ. **ಚೋಃ ಕುಃ**—ಎಂಬುದರಿಂದ ಧಾತುವಿನ ಚಕಾರಕ್ಕೆ ಕುತ್ವ. ಇಲ್ಲಿ **ಅಚಃ ಪರಸ್ಮಿನ್ ಪೂರ್ವವಿಧೌ**—(ಪಾ. ಸೂ. ೧-೧-೫೭) ಎಂಬುದರಿಂದ ಪರನಿಮಿತ್ತವಾಗಿ ವಿಕರಣಾಕಾರಕ್ಕೆ ಲೋಪ ಬಂದುದರಿಂದ ಅದರ ಪೂರ್ವಕ್ಕೆ ಕಾರ್ಯಮಾಡುವುದರಿಂದ ಸ್ಥಾನಿವದ್ಭಾವ ಬರುತ್ತದೆ. ಆದರೆ **ನ ಪದಾಂತ**—(ಪಾ. ಸೂ. ೧-೧-೫೮) ಸೂತ್ರದಲ್ಲಿ ಸವರ್ಣಾನುಸ್ವಾರ ವಿಧಿಗಳಲ್ಲಿ ಸ್ಥಾನಿವದ್ಭಾವ ನಿಷೇಧಮಾಡಿರುವುದರಿಂದ ಅನುಸ್ವಾರ ಬರಲು ದೋಷವಿಲ್ಲ.

**ಅಪ್ಸು**—**ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೪ ॥

———— :o: ————

ಸಂಹಿತಾಪಾಠಃ

ಯುವಾಮಿಂದ್ರಾಗ್ನೀ ವಸುನೋ ವಿಭಾಗೇ ತವಸ್ತಮಾ ಶುಶ್ರವ
ವೃತ್ರಹತ್ಯೇ।
ತಾವಾಸದ್ಯಾ ಬರ್ಹಿಷಿ ಯಜ್ಞೇ ಅಸ್ಮಿನ್ಪ್ರ ಚರ್ಷಣೀ ಮಾದ-
ಯೇಥಾಂ ಸುತಸ್ಯ ॥ ೫ ॥

॥ ಪದಪಾಠಃ ॥

ಯುವಾಂ । ಇಂದ್ರಾಗ್ನೀ ಇತಿ । ವಸುನಃ । ವಿಽಭಾಗೇ । ತವಃಽತಮಾ ।
ಶುಶ್ರವ । ವೃತ್ರಽಹತ್ಯೇ ।
ತೌ । ಆಽಸದ್ಯ । ಬರ್ಹಿಷಿ । ಯಜ್ಞೇ । ಅಸ್ಮಿನ್ । ಪ್ರ । ಚರ್ಷಣೀ ಇತಿ ।
ಮಾದಯೇಥಾಂ । ಸುತಸ್ಯ ॥ ೫ ॥

ಸಾಯಣಭಾಷ್ಯಂ

ಹೇ ಇಂದ್ರಾಗ್ನೀ ವಸುನೋ ಧನಸ್ಯ ವಿಭಾಗೇ ಸ್ತೋತೃಭ್ಯೋ ದಾತುಂ ವಿಭಜನೇ ತಾತ್ಪರ್ಯೇಣ ವರ್ತಮಾನೌ ಯುವಾಂ ವೃತ್ರಹತ್ಯೇ ವೃತ್ರಸ್ಯಾಸುರಸ್ಯ ಹನನೇ ತವಸ್ತಮಾತಿಶಯೇನ ಬಲಿನೌ ಪ್ರವೃದ್ಧತಮೌ ವಾ ಶುಶ್ರವ । ಅಶ್ರೌಷಂ । ಹೇ ಚರ್ಷಣೀ ಸರ್ವಸ್ಯ ದ್ರಷ್ಟಾರಾವಿಂದ್ರಾಗ್ನೀ ತೌ ಯುವಾಮಸ್ಮದೀಯೇಽಸ್ಮಿನ್ಯಜ್ಞೇ ಬರ್ಹಿಷಿ ವೇದ್ಯಾಮಾಸ್ತೀರ್ಣೇ ದರ್ಭ ಆಸದ್ಯೋಪವಿಶ್ಯ ಸುತಸ್ಯಾಭಿಷುತಸ್ಯ ಸೋಮಸ್ಯ ಪಾನೇನ ಪ್ರ ಮಾದಯೇಥಾಂ । ಪ್ರಕರ್ಷೇಣ ತೃಪ್ತೌ ಭವತಂ ॥ ವಿಭಾಗೇ । ಭಜ ಸೇವಾಯಾಂ । ಭಾವೇ ಘಞ್ । ಚಜೋಃ ಕು ಘಿಣ್ಣ್ಯತೋರಿತಿ ಕುತ್ವಂ । ಥಾಥಾದಿನೋತ್ತರಪದಾಂತೋದಾತ್ತತ್ವಂ । ತವಸ್ತಮಾ । ತವ ಇತಿ ಬಲನಾಮ । ಉಪ್ತಮತ್ವರ್ಥೀಯೋದೇತಸ್ಮಾದಾತಿಶಾಯನಿಕಸ್ತಮಪ್ । ಯದ್ವಾ । ತವತಿರ್ವೃದ್ಧ್ಯರ್ಥಃ । ಸೌತ್ರೋ ಧಾತುಃ । ತಸ್ಮಾದೌಣಾದಿಕಃ ಕರ್ತರ್ಯಸಿಪ್ರತ್ಯಯಃ । ಸುಪಾಂ ಸುಲುಗಿತಿ ವಿಭಕ್ತೇಃ ಪೂರ್ವಸವರ್ಣದೀರ್ಘತ್ವಂ । ವೃತ್ರಹತ್ಯೇ । ಹನಸ್ತ ಚೇತಿ ಹಂತೇರ್ಭಾವೇ ಕ್ಯಪ್ । ತತ್ಸನ್ನಿಯೋಗೇನ ತಕಾರಾಂತಾದೇಶಶ್ಚ । ಕೃದುತ್ತರಪದಪ್ರಕೃತಿಸ್ವರತ್ವಂ ॥

ಪ್ರತಿಪದಾರ್ಥ

ಇಂದ್ರಾಗ್ನೀ—ಎಲೈ ಇಂದ್ರಾಗ್ನಿಗಳೇ । **ವಸುನಃ**— ಧನದ । ವಿಭಾಗೇ—(ಸ್ತೋತೃಗಳಿಗೆಲ್ಲಾ) ಹಂಚಿಕೆಗಾಗಿ (ಇರತಕ್ಕ) । **ಯುವಾಂ**—ನೀವಿಬ್ಬರೂ । **ವೃತ್ರಹತ್ಯೇ**—ವೃತ್ರಾಸುರನ ನಾಶಕಾರ್ಯದಲ್ಲಿ ! **ತವಸ್ತಮಾ**—ಅತ್ಯಂತ ಬಲಶಾಲಿಗಳೆಂದು । **ಶುಶ್ರವ**—(ನಾನು) ಕೇಳಿದ್ದೇನೆ । **ಚರ್ಷಣೀ**—ಎಲ್ಲವನ್ನೂ ನೋಡಲು ಶಕ್ತರಾದ ಇಂದ್ರಾಗ್ನಿಗಳೇ । **ತೌ**—ನೀವಿಬ್ಬರೂ । **ಅಸ್ಮಿನ್ ಯಜ್ಞೇ**—ಈ ಯಜ್ಞದಲ್ಲಿ । **ಬರ್ಹಿಷಿ**—ದರ್ಭಾಸನಗಳಲ್ಲಿ । **ಆ ಸದ್ಯ**— ಕುಳಿತುಕೊಂಡು । **ಸುತಸ್ಯ**— ಹಿಂಡಿರುವ ಸೋಮರಸದ (ಪಾನದಿಂದ) । **ಪ್ರಮಾದಯೇಥಾಂ** — ಅತಿಶಯವಾಗಿ ತೃಪ್ತಿಯನ್ನು ಹೊಂದಿರಿ ॥

ಭಾವಾರ್ಥ

ಎಲೈ ಇಂದ್ರಾಗ್ನಿಗಳೇ ಸ್ತೋತೃಗಳಿಗೆಲ್ಲಾ ಧನವನ್ನು ಹಂಚುವಕಾಲದಲ್ಲಿ ನೀವಿಬ್ಬರೂ ಎದುರಿಗೇ ಇದ್ದು ವೃತ್ರಾಸುರನ ನಾಶಕಾರ್ಯದಲ್ಲಿ ಅತ್ಯಂತ ಸಮರ್ಥರೆಂಬುದಾಗಿ ನಾನು ಕೇಳಿದ್ದೇನೆ. ಎಲ್ಲವನ್ನೂ ನೋಡಲು ಶಕ್ತರಾದ

ಎಲೈ ಇಂದ್ರಾಗ್ನಿಗಳೇ, ನೀವಿಬ್ಬರೂ ಈ ಯಜ್ಞಕಾಲದಲ್ಲಿ ದರ್ಭಾಸನಗಳಲ್ಲಿ ಕುಳಿತುಕೊಂಡು ನಾವು ಹಿಂಡಿರುವ ಸೋಮರಸದ ಪಾನದಿಂದ ಅತಿಶಯವಾದ ತೃಪ್ತಿಯನ್ನು ಹೊಂದಿರಿ.

English Translation

I have heard, (when you were present) at the division of the treasure (among the worshippers), that you two, Indra and Agni, were most vigorous in the destruction of Vritra : beholders of all things, seated at this sacrifice upon the sacred grass, be exhilarated, (by drinking of the effused libation).

॥ ವಿಶೇಷವಿಷಯಗಳು ॥

ಇಂದ್ರಾಗ್ನಿಗಳು ಪೃಥಿವೀ ಮತ್ತು ಅಂತರಿಕ್ಷಗಳಲ್ಲಿರತಕ್ಕ (ಸಕಲ ಧನಕ್ಕೂ ನಿಧಿಗಳು.) ತೇಜೋರೂಪವಾದುದೂ, ವೃಷ್ಟಿರೂಪವಾದುದೂ, ಸಸ್ಯರೂಪವಾದುದೂ ಆದ ಸಕಲ ಧನಗಳಿಗೂ ತಡೆಯನ್ನು ಕಟ್ಟಿ ವಿಘ್ನವನ್ನುಂಟು ಮಾಡತಕ್ಕ ಸಕಲ ಅಸುರರನ್ನು ಇಬ್ಬರೂ ಸೇರಿಕೊಂಡು ನಾಶಮಾಡಿ ಎಲ್ಲಾ ವಿಧವಾದ ಸಂಪತ್ತನ್ನೂ ಸ್ತೋತೃಗಳಿಗೆ ಒದಗಿಸುವವರಾದ್ದರಿಂದ ಈ ಪ್ರಾರ್ಥನೆಯಿದೆ.

ಇಂದ್ರಾಗ್ನೀ ಯುವೋರಪಿ ವಸು ದಿವ್ಯಾನಿ ಪಾರ್ಥಿವಾ ।
(ಋ. ಸಂ. ೬-೫೯-೯)

ಎಂದು ಹೇಳಿರುವಂತೆ ಸಕಲ ಸಂಪತ್ತಿಗೂ ಒಡೆಯರಾದ ಇವರು,

ತಾ ಯೋಧಿಷ್ಟಮಭಿ ಗಾ ಇಂದ್ರ ನೂನಮಪಃ ಸ್ವರುಷಸೋ ಅಗ್ನ ಊಳ್ಹಾಃ ।
ದಿಶಃ ಸ್ವರುಷಸ ಇಂದ್ರ ಚಿತ್ರಾ ಅಪೋ ಗಾ ಅಗ್ನೇ ಯುವಸೇ ನಿಯುತ್ವಾನ್ ।
(ಋ. ಸಂ. ೬-೬೦-೨)

ಹತೋ ವೃತ್ರಾಣ್ಯಾರ್ಯಾ ಹತೋ ದಾಸಾನಿ ಸತ್ಪತೀ ।
ಹತೋ ವಿಶ್ವಾ ಅಪ ದ್ವಿಷಃ ॥
(ಋ. ಸಂ. ೬-೬೦-೬)

ಎಂಬಿವೇ ಮುಂತಾದ ಅನೇಕ ಋಕ್ಕುಗಳಲ್ಲಿ ಪ್ರಶಂಸಿಸಿರುವಂತೆ ಸಕಲವಿಧವಾದ ಅಸುರರನ್ನು ನಾಶಮಾಡಿ ಸಂಪತ್ತನ್ನು ಹಂಚಿದರು ಎಂದು ಸ್ತುತಿಸಿದೆ.

**ತವಸ್ತಮಾ**—ಎಲ್ಲಾ ದೇವತೆಗಳಿಗಿಂತಲೂ, ಸಕಲ ಲೋಕಗಳಿಗಿಂತಲೂ ಮೀರಿದ ಶಕ್ತಿಯುಳ್ಳವರು. ಇವರ ಶಕ್ತಿಯಿಂದಲೇ ಸಕಲ ಲೋಕಗಳೂ ಧರಿಸಲ್ಪಟ್ಟಿವೆ.

ಯಸ್ಯ ದ್ವಿಬರ್ಹಸೋ ಬೃಹತ್ಸಹೋ ದಾಧಾರ ರೋದಸೀ ।
ಗಿರೀಁರಜ್ರಾಁ ಅಪಃ ಸ್ವರ್ವೃಷತ್ವನಾ ॥
(ಋ. ಸಂ. ೮-೧೫-೨ )

ಎಂದು ಇಂದ್ರನ ಶಕ್ತಿಯನ್ನೂ

**ದಿವಶ್ಚಿತ್ತೇ ಬೃಹತೋ ಜಾತವೇದೋ ವೈಶ್ವಾನರ ಪ್ರ ರಿರಿಚೇ ಮಹಿತ್ವಂ ।**
( ಋ. ಸಂ. ೧-೫೯-೫ )

ಎಂದು ಅಗ್ನಿಯ ಶಕ್ತಿಯನ್ನೂ ಅನೇಕಕಡೆಗಳಲ್ಲಿ ವರ್ಣಿಸಿರುವಂತೆ ಇಲ್ಲಿಯೂ ಸಹ ಆ ಅಂಶವನ್ನು ಪ್ರಶಂಸಿಸಿದೆ.

**ಚರ್ಷಣೀ—ಸರ್ವಸ್ಯ ದ್ರಷ್ಟಾರೌ ಇಂದ್ರಾಗ್ನೀ ।** ಇಂದ್ರಾಗ್ನಿಗಳು ಸಕಲವನ್ನೂ ನೋಡತಕ್ಕವರು, ನೋಡಲು ಶಕ್ತಿಯುಳ್ಳವರು ಎಂದು ಸಾಯಣರು ವಿವರಿಸಿದ್ದಾರೆ. ಸ್ಕಂದಸ್ವಾಮಿಗಳು ಈ ಅರ್ಥವನ್ನು ಮೊದಲು ಹೇಳಿ ಅನಂತರ **ಮನುಷ್ಯನಾಮ ವಾ ಚರ್ಷಣೀಶಬ್ದಃ** (ನಿ. ೬-೭) **ಮನುಷ್ಯಾಕಾರೌ ವಾ । ದ್ರಷ್ಟಾರೌ ವಾ ಸರ್ವಾರ್ಥಾನಾಂ ।** ಚರ್ಷಣಿಶಬ್ದವು ಮನುಷ್ಯನಾಮಗಳಲ್ಲಿ ಪಠಿತವಾಗಿರುವುದರಿಂದ ಮಾನವಾಕಾರದಲ್ಲಿ ಎಲ್ಲವನ್ನೂ ನೋಡತಕ್ಕವರು ಎಂದಾದರೂ ಆಗಬಹುದೆಂದು ವಿವರಿಸಿದ್ದಾರೆ.

**ತ್ವಂ ವಿಶ್ವಸ್ಯ ಜಗತಶ್ಚಕ್ಷುರಿಂದ್ರಾಸಿ ಚಕ್ಷುಷಃ ।**
( ಋ. ಸಂ. ೧೦-೧೦೨-೧೨ )

ಇತ್ಯಾದಿಯಾಗಿ ಇಂದ್ರನು ಸಕಲ ಲೋಕದ ಚಕ್ಷುಸ್ಸೆಂದೂ,

**ಯೋ ವಿಶ್ವಾಭಿ ವಿಪಶ್ಯತಿ ಭುವನಾ ಸಂ ಚ ಪಶ್ಯತಿ ।**
(ಋ ಸಂ. ೧೦-೧೮೭-೪)

ಇತ್ಯಾದಿಋಕ್ಕುಗಳಲ್ಲಿ ಅಗ್ನಿಯು ವಿಶ್ವವನ್ನೆಲ್ಲಾ ನೋಡಲು ಶಕ್ತಿಯುಳ್ಳವನೆಂದೂ ಹೀಗೆಯೇ ಇಂದ್ರಾಗ್ನಿಗಳು ವೀಕ್ಷಣಕ್ಕೆ ಸಾಧನವಾದ ತೇಜಸ್ಸಿಗೇ ಆಧಾರಗಳಾದ ಸಕಲ ತೇಜೋಮಂಡಲಗಳನ್ನು ಸೃಷ್ಟಿಸಿದರೆಂದೂ ಸ್ತುತಿಸಿರುವುದರಿಂದ ಆ ಶಕ್ತಿಯನ್ನು ಇಲ್ಲಿ ಹೇಳಿದೆ. ಇಂತಹ ಅಸಾಧಾರಣವಾದ ಶಕ್ತಿಯುಳ್ಳ ಇಂದ್ರಾಗ್ನಿಗಳು ಸೋಮರಸದ ಪಾನಕ್ಕಾಗಿ ಬರಬೇಕೆಂದೂ, ದರ್ಭಾಸನಗಳಮೇಲೆ ಕುಳಿತುಕೊಂಡು ಸೋಮರಸವನ್ನು ಪಾನಮಾಡಿ ತೃಪ್ತಿಯನ್ನು ಹೊಂದಬೇಕೆಂದೂ ಪ್ರಾರ್ಥಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

ವಿಭಾಗೇ—ಭಜ ಸೇವಾಯಾಮ್. ಧಾತು. ಭಾವಾರ್ಥದಲ್ಲಿ ಇದಕ್ಕೆ ಘಞ್ ಪ್ರತ್ಯಯ. **ಅತ ಉಪಧಾಯಾಃ**—(ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ. **ಚಜೋಃ ಕು ಘಿಣ್ಯತೋಃ**— ಎಂಬುದರಿಂದ ಘಿತ್ತಾದ ಪ್ರತ್ಯಯ ಪರವಾದುದರಿಂದ ಧಾತುವಿನ ಜಕಾರಕ್ಕೆ ಕುತ್ವ (ಗಕಾರ) ಬರುತ್ತದೆ. ವಿ ಎಂಬುದರೊಡನೆ (ಗತಿ) ಸಮಾಸವಾದಾಗ **ಥಾಥಘಞ್‌ಕ್ತಾ ಚ**—(ಪಾ. ಸೂ. ೬-೨-೧೪೪) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

ತವಸ್ತಮಾ—ತವ ಎಂಬುದು ಬಲದ ಹೆಸರು. ತವಃ ಅಸ್ಯ ಅಸ್ತಿ ಇತಿ ತವಸ್ವೀ. ಛಾಂದಸವಾಗಿ ಮತ್ವರ್ಥೀಯಪ್ರತ್ಯಯಕ್ಕೆ ಲುಕ್ ಬಂದಾಗ ಲುಪ್ತಮತ್ವರ್ಥಕವಾದ ಈ ಶಬ್ದಕ್ಕೆ ಅತಿಶಯಾರ್ಥದಲ್ಲಿ **ಅತಿಶಾಯನೇ-ತಮಬಿಷ್ಠನೌ**—(ಪಾ. ಸೂ. ೫-೩-೫೫) ಎಂಬುದರಿಂದ ತಮಪ್ ಪ್ರತ್ಯಯ. ಅಥವಾ ತವ ಎಂಬುದು ಧಾತು

ಇದು ವೃದ್ಧ್ಯರ್ಥದಲ್ಲಿ ಇದೆ. ಇದು ಸೂತ್ರಮಾತ್ರನಿರ್ದಿಷ್ಟವಾದ ಧಾತು. ಇದಕ್ಕೆ ಕರ್ತರಿಯಲ್ಲಿ ಔಣಾದಿಕವಾದ ಅಸಿಪ್ರತ್ಯಯ. ಇದರ ಮೇಲೆ ತಮಪ್ ಪ್ರತ್ಯಯ. ಔ ಪರವಾದಾಗ **ಸುಪಾಂ ಸುಲುಕ್**–(ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ.

**ಶುಶ್ರವ**—ಶ್ರು ಶ್ರವಣೇ. ಧಾತು. ಲಿಟ್ ಉತ್ತಮಪುರುಷ ಏಕವಚನದಲ್ಲಿ ಣಲಾದೇಶ. **ಣಲುತ್ತಮೋ ವಾ**—(ಪಾ. ಸೂ. ೭-೧-೯೧) ಎಂಬುದರಿಂದ ಇದಕ್ಕೆ ವಿಕಲ್ಪವಾಗಿ ಣಿತ್ವವಿಧಾನಮಾಡಿರುವುದರಿಂದ ಇದನ್ನು, ನಿಮಿತ್ತೀಕರಿಸಿ ಧಾತುವಿನ ಅಚಿಗೆ ವೃದ್ಧಿ ಬರುವುದಿಲ್ಲ. ಗುಣ. ಅವಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ವೃತ್ರಹತ್ಯೇ**—ಹನ ಹಿಂಸಾಗತ್ಯೋಃ ಧಾತು. ಇದಕ್ಕೆ ಭಾವಾರ್ಥದಲ್ಲಿ **ಹನಸ್ತ ಚ**—(ಪಾ. ಸೂ. ೩-೧-೧೦೮) ಎಂಬುದರಿಂದ ಕ್ಯಪ್ ಪ್ರತ್ಯಯ. ತತ್ಸನ್ನಿಯೋಗದಿಂದ ಧಾತುವಿನ ನಕಾರಕ್ಕೆ ತಕಾರಾದೇಶ. ವೃತ್ರಸ್ಯ ಹತ್ಯಂ ವೃತ್ರಹತ್ಯಂ **ಗತಿಕಾರಕೋಪಪದಾತ್ ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ.

**ಆಸದ್ಯ**—ಷದ್ಲೃ ವಿಶರಣಗತ್ಯವಸಾದನೇಷು. ಧಾತು. **ಸಮಾಸೇಽನಞ್ಪೂರ್ವೇ ಕ್ತ್ವೋ ಲ್ಯಪ್** (ಪಾ. ಸೂ. ೭-೧-೩೭) ಎಂಬುದರಿಂದ ಕ್ತ್ವಾಪ್ರತ್ಯಯಕ್ಕೆ ಲ್ಯಬಾದೇಶ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಮಾದಯೇಥಾಮ್**—ಮದ ತೃಪ್ತಿಯೋಗೇ. ಧಾತು. ಚುರಾದಿ. ನಿತ್ಯಾತ್ಮನೇಪದೀ. ಲೋಟ್ ಮಧ್ಯಮಪುರುಷದ್ವಿವಚನದಲ್ಲಿ ಆಥಾಮ್ ಪ್ರತ್ಯಯ. **ಸತ್ಯಾಪಪಾಶ**— (ಪಾ. ಸೂ. ೩-೧-೨೫) ಸೂತ್ರದಿಂದ ಸ್ವಾರ್ಥದಲ್ಲಿ ಣಿಚ್. ಶಪ್‌ನಿಮಿತ್ತವಾಗಿ ಅದಕ್ಕೆ ಗುಣ. ಅಯಾದೇಶ. ತಿಙಂತನಿಘಾತಸ್ವರ ಬರುತ್ತದೆ. ॥ ೫ ॥



ಸಂಹಿತಾಪಾಠಃ

ಪ್ರ ಚ॑ರ್ಷ॒ಣಿಭ್ಯಃ॑ ಪೃತನಾ॒ಹವೇ॑ಷು॒ ಪ್ರ ಪೃ॑ಥಿ॒ವ್ಯಾ ರಿ॑ರಿಚಾಥೇ
ದಿ॒ವಶ್ಚ॑ ।
ಪ್ರ ಸಿಂಧು॑ಭ್ಯಃ॒ ಪ್ರ ಗಿ॒ರಿಭ್ಯೋ॑ ಮಹಿ॒ತ್ವಾ ಪ್ರೇಂದ್ರಾ॑ಗ್ನೀ ವಿಶ್ವಾ॒
ಭುವ॒ನಾತ್ಯ॒ನ್ಯಾ ॥ ೬ ॥

ಪದಪಾಠಃ

ಪ್ರ । ಚರ್ಷಣಿಽಭ್ಯಃ । ಪೃತನಾಽಹವೇಷು । ಪ್ರ । ಪೃಥಿವ್ಯಾಃ । ರಿರಿಚಾಥೇ
ಇತಿ । ದಿವಃ । ಚ ।

ಪ್ರ । ಸಿಂಧುಽಭ್ಯಃ । ಪ್ರ । ಗಿರಿಽಭ್ಯಃ । ಮಹಿಽತ್ವಾ । ಪ್ರ । ಇಂದ್ರಾಗ್ನೀ
ಇತಿ । ವಿಶ್ವಾ । ಭುವನಾ । ಅತಿ । ಅನ್ಯಾ ॥ ೬ ॥

ಸಾಯಣಭಾಷ್ಯಂ

ಐಂದ್ರಾಗ್ನಸ್ಯ ಪಶೋರ್ಹವಿಷಃ ಪ್ರ ಚರ್ಷಣಿಭ್ಯ ಇತ್ಯೇಷಾ ಯಾಜ್ಯಾ । ಪ್ರದಾನಾನಾಮಿತಿ ಖಂಡೇ ಸೂತ್ರಿತಂ । ಪ್ರ ಚರ್ಷಣಿಭ್ಯಃ ಪೃತನಾಹವೇಷ್ವಾ ದೇವೋ ಯಾತು ಸವಿತಾ ಸುರತ್ನಃ । ಆ. ೩-೭ । ಇತಿ ॥

ಪೃತನಾಹವೇಷು ಪೃತನಾಸು ಸಂಗ್ರಾಮೇಷು ರಕ್ಷಣಾರ್ಥಮಾಹ್ವಾನೇಷು ಸತ್ಸು ಹೇ ಇಂದ್ರಾಗ್ನೀ ಆಗತವಂತೌ ಯುವಾಂ ಚರ್ಷಣಿಭ್ಯಃ ಸರ್ವೇಭ್ಯೋಽಪಿ ಮನುಷ್ಯೇಭ್ಯೋ ಮಹಿತ್ವಾ ಮಹತ್ತ್ವೇನ ಪ್ರ ರಿರಿಚಾಥೇ । ಅತಿರಿಚ್ಯೇಥೇ । ಸರ್ವಾಧಿಕೌ ಭವಥ ಇತ್ಯರ್ಥಃ । ಅತ್ರೋಪಸರ್ಗವಶಾದ್ಧಾತುಃ ಸ್ವಾಭಿಧೇಯವಿಪರೀತಮರ್ಥಮಾಚಷ್ಟೇ ಯಥಾ ಪ್ರಸ್ಮರಣಂ ಪ್ರಸ್ಥಾನಮಿತಿ । ತಥಾ ಪೃಥಿವ್ಯಾಃ ಸರ್ವಸ್ಯಾ ಭೂಮೇಶ್ಚ ಪ್ರ ರಿರಿಚಾಥೇ । ಏವಂ ದ್ಯುಪ್ರಭೃತಿಭ್ಯೋಽಪಿ । ಸಿಂಧವಃ ಸಂದ್ಯನಶೀಲಾ ಆಪಃ । ಗಿರಯಃ ಪರ್ವತಾಃ । ಅಪಿ ಚ ಹೇ ಇಂದ್ರಾಗ್ನೀ ವಿಶ್ವಾ ಭುವನಾ ಸರ್ವಾಣಿ ಭೂತಜಾತಾನ್ಯನ್ಯೋಕ್ತವ್ಯತಿರಿಕ್ತಾನಿ ಯಾನಿ ಸಂತಿ ತಾನ್ಯತೀತ್ಯ ಪ್ರ ರಿರಿಚಾಥೇ । ಅಧಿಕೌ ಭವಥಃ ॥ ಪೃತನಾಹವೇಷು । ಪೃತನಾಸು ಹವಃ ಪೃತನಾಹವಃ । ಹ್ವೇಞಃ ಭಾವೇಽನುಪಸರ್ಗಸ್ಯೇತ್ಯಪ್ । ಸಂಪ್ರಸಾರಣಂ ಚ । ವ್ಯತ್ಯಯೇನ ಥಾಥಾದಿಸ್ವರಾಭಾವೇ ಕೃದುತ್ತರಪದಪ್ರಕೃತಿಸ್ವರತ್ವಂ । ರಿರಿಚಾಥೇ । ರಿಚಿರ್ ವಿರೇಚನೇ । ಛಂದಸಿ ಲುಙ್‌ಲಙ್‌ಲಿಟ ಇತಿ ವರ್ತಮಾನೇ ಲಿಟ್ । ಯದ್ವಾ । ಲಟ್ಯೇವ ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ । ಮಹಿತ್ವಾ । ಮಹ ಪೂಜಾಯಾಂ । ಔಣಾದಿಕ ಇನ್ಪ್ರತ್ಯಯಃ । ತಸ್ಯ ಭಾವೋ ಮಹಿತ್ವಂ । ಸುಪಾಂ ಸುಲುಗಿತಿ ತೃತೀಯಾಯಾ ಡಾದೇಶಃ ॥

। ಪ್ರತಿಪದಾರ್ಥ ।

ಇಂದ್ರಾಗ್ನೀ—ಎಲೈ ಇಂದ್ರಾಗ್ನಿಗಳೇ । **ಪೃತನಾಹವೇಷು**— ಯುದ್ಧಕಾಲಗಳಲ್ಲಿ ಸಹಾಯಕ್ಕಾಗಿ ನಿಮಗೆ ಮೊರೆಯಿಡುತ್ತಿರುವಾಗ (ನೀವು ಜೊತೆಯಲ್ಲಿರುತ್ತಾ)। **ಚರ್ಷಣಿಭ್ಯಃ**—(ಸಕಲ) ಮಾನವರಿಗಿಂತಲೂ। **ಮಹಿತ್ವಾ**—(ನಿಮ್ಮ) ಮಾಹಾತ್ಮ್ಯದಿಂದ। **ಪ್ರ ರಿರಿಚಾಥೇ**—ಮೀರಿ ಮೇಲಾಗಿರುತ್ತೀರಿ। **ಪೃಥಿವ್ಯಾಃ**— (ವಿಸ್ತಾರವಾದ ಪೃಥಿವಿಗಿಂತಲೂ। **ಪ್ರ ರಿರಿಚಾಥೇ**)—ಅಧಿಕವಾಗಿ (ಮೇಲಾಗಿರುತ್ತೀರಿ)। **ದಿವಃ ಚ**—ದ್ಯುಲೋಕಕ್ಕಿಂತಲೂ

(ಅಧಿಕರಾಗಿರುತ್ತೀರಿ) | **ಸಿಂಧುಭ್ಯಃ ಪ್ರ**—ಪ್ರವಹಿಸುವ ನದಿಗಳಿಗಿಂತಲೂ ಮೇಲಾಗಿರುತ್ತೀರಿ | **ಗಿರಿಭ್ಯಃ ಪ್ರ**—ಪರ್ವತಗಳನ್ನೂ ಮೀರಿಸಿರುತ್ತೀರಿ | **ವಿಶ್ವಾ ಭುವನಾ ಪ್ರ**—ಸಕಲ ಭೂತಜಾತಗಳಿಗಿಂತಲೂ ಅಧಿಕರಾಗಿರುತ್ತೀರಿ | **ಅನ್ಯಾ**—ಉಳಿದ ಸಕಲ ದೊಡ್ಡವಸ್ತುಗಳಿಗಿಂತಲೂ | **ಅತಿ**—ಹೆಚ್ಚು ಉತ್ಕೃಷ್ಟರಾಗಿರುತ್ತೀರಿ ||

### ಭಾವಾರ್ಥ

ಎಲೈ ಇಂದ್ರಾಗ್ನಿಗಳೇ, ಯುದ್ಧಕಾಲಗಳಲ್ಲಿ ನಿಮ್ಮ ಭಕ್ತರು ನಿಮಗೆ ಸಹಾಯಕ್ಕಾಗಿ ಮೊರೆಯಿಡುವಾಗ ನೀವು ಬಂದು ಅವರ ಜೊತೆಯಲ್ಲಿರುತ್ತೀರಿ. ಆಗ ನೀವು ನಿಮ್ಮ ಮಾಹಾತ್ಮ್ಯದಿಂದ ಸಕಲಮಾನವರಿಗಿಂತಲೂ, ವಿಸ್ತೃತವಾದ ಪೃಥ್ವಿಗಿಂತಲೂ, ದ್ಯುಲೋಕಕ್ಕಿಂತಲೂ, ಪ್ರವಹಿಸುವ ನದಿಗಳಿಗಿಂತಲೂ, ಪರ್ವತಗಳಿಗಿಂತಲೂ, ಸಕಲ ಭೂತಜಾತಗಳಿಗಿಂತಲೂ ಮತ್ತು ಇನ್ನೂ ಉಳಿದ ಸಕಲ ದೊಡ್ಡವಸ್ತುಗಳಿಗಿಂತಲೂ ಅತಿಶಯವಾದ ಪ್ರಭಾವವನ್ನು ತೋರಿಸುತ್ತಾ ಅವೆಲ್ಲವನ್ನೂ ಮೀರಿಸಿ ಎಲ್ಲಕ್ಕೂ ಮೇಲಾಗಿರುತ್ತೀರಿ.

### English Translation

Attending to the summons at the time of battle, you surpass all men (in magnitude) : you are vaster than the earth, than the sky, than the rivers, than the mountains ; you exceed all other existent things.

### || ವಿಶೇಷವಿಷಯಗಳು ||

ಇಂದ್ರಾಗ್ನಿಗಳನ್ನು ಉದ್ದೇಶಿಸಿ ಮಾಡುವ ಪಶುಹೋಮದಲ್ಲಿ ಹವಿಸ್ಸನ್ನು ಹೋಮಮಾಡುವಾಗ **ಪ್ರ ಚರ್ಷಣಿಭ್ಯಃ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಪ್ರದಾನಾನಾಂ** ಎಂಬ ಖಂಡದಲ್ಲಿ **ಪ್ರ ಚರ್ಷಣಿಭ್ಯಃ ಪೃತನಾಹವೇಷ್ವಾ ದೇವೋ ಯಾತು ಸವಿತಾ ಸುರತ್ನಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೩-೭).

**ಚರ್ಷಣಿಭ್ಯಃ—ಚರ್ಷಣಿ** ಶಬ್ದಕ್ಕೆ ಹಿಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ **ದ್ರಷ್ಟಾ** ಎಂಬ ಒಂದು ಅರ್ಥವನ್ನೂ **ಮನುಷ್ಯ** ಎಂಬ ಇನ್ನೊಂದು ಅರ್ಥವನ್ನೂ ಹೇಳಿದೆ. ಸಾಧಾರಣವಾಗಿ **ಮನುಷ್ಯ** ಎಂಬರ್ಥದಲ್ಲಿಯೇ ಈ ಪದಪ್ರಯೋಗವಿದೆ.

**ಆ ಯಾಹಿ ಪೂರ್ವೀರತಿ ಚರ್ಷಣೀರಾँ ಅರ್ಯ ಆಶಿಷ ಉಪ ನೋ ಹರಿಭ್ಯಾಂ |**
(ಋ. ಸಂ. ೩-೪೩-೨

**ವಿಶ್ವಾ ಯಶ್ಚರ್ಷಣೀರಭ್ಯಾ೩ಸಾ ವಾಜೇಷು ಸಾಸಹತ್ |**
( ಶ ಬ್ರಾ. ೫-೨೩.೧ )

ಇತ್ಯಾದಿ ಹತ್ತಾರು ಕಡೆಗಳಲ್ಲಿ ಬರತಕ್ಕ **ಚರ್ಷಣಿ** ಶಬ್ದಕ್ಕೆಲ್ಲಾ ಮನುಷ್ಯರೆಂದೇ ಅರ್ಥಮಾಡಿದ್ದಾರೆ. ಈ ಪದಕ್ಕೆ ವಿವರಣೆಯನ್ನು ಋಗ್ವೇದ ಸಂಹಿತೆಯ 2ನೇ ಭಾಗದ 49ನೇ ಪುಟದಲ್ಲಿ ವಿಶದವಾಗಿ ಕೊಟ್ಟಿದೆ.

**ಸಿಂಧುಭ್ಯಃ**—ಸಿಂಧುಶಬ್ದವು ನದೀನಾಮಗಳಲ್ಲಿ ಪಠಿತವಾಗಿದೆ (ನಿ. ೨-೨೪) **ಸಿಂಧುಃ ಸ್ರವಣಾತ್** (ನಿ. ೫-೨೭) ಪ್ರವಹಿಸುವುದರಿಂದ **ಸಿಂಧು** ಶಬ್ದಕ್ಕೆ ನದಿಯೆಂದು, ಹೆಸರು. ಪ್ರವಾಹರೂಪದಲ್ಲಿರುವುದರಿಂದ ಕೆಲವು ಕಡೆಗಳಲ್ಲಿ ರಶ್ಮಿಗಳೆಂಬ ಅರ್ಥವೂ ಆಗಬಹುದು. ಉದಾಹರಣೆಗೆ ೧-೯೩-೫ನೇ ಋಕ್ಕಿನಲ್ಲಿರುವ **ಸಿಂಧೂನ್** ಎಂಬ ಪದಕ್ಕೆ ಸ್ಕಂದಸ್ವಾಮಿಗಳು **ಸ್ಯಂದನಾತ್ ಸಿಂಧವೋ ರಶ್ಮಯ ಇಹೋಚ್ಯಂತೇ ।** ಪ್ರವಹಿಸು ಅಥವಾ ಪ್ರಸರಿಸುವುದರಿಂದ ರಶ್ಮಿಗಳಿಗೆ ಸಿಂಧುವೆಂಬ ಹೆಸರು ಬಂದಿದೆಯೆಂದು ವಿವರಿಸಿದ್ದಾರೆ. ಆದರೆ ಇಲ್ಲಿ ಮಾತ್ರ ನದಿ ಅಥವಾ **ಸಮುದ್ರ** ಎಂದರ್ಥ. ಯುದ್ಧಕಾಲದಲ್ಲಿ ಭಕ್ತರು ಸಹಾಯಕ್ಕಾಗಿ ಕರೆಯುತ್ತಿರುವಾಗ ಇಂದ್ರಾಗ್ನಿಗಳ ಮಹತ್ತ್ವವು ಪೃಥ್ವೀ, ಅಂತರಿಕ್ಷ, ಸಿಂಧು, ಗಿರಿ ಇತ್ಯಾದಿಗಳೇ ಅಲ್ಲದೇ ಸಕಲ ಭುವನಗಳಿಗಿಂತಲೂ ಮೀರಿಸಿತು ಎಂದು ತಾತ್ಪರ್ಯ,

**ಜಾತ ಆಪೃಣೋ ಭುವನಾನಿ ರೋದಸೀ ಅಗ್ನೇ ತಾ ವಿಶ್ವಾ ಪರಿಭೂರಸಿ ತ್ಮನಾ ।**

(ಋ. ಸಂ. ೩-೩-೧೦)

**ದಿವಶ್ಚಿದಗ್ನೇ ಮಹಿನಾ ಪೃಥಿವ್ಯಾ ವಚ್ಯಂತಾಂ ತೇ ವಹ್ನಯಃ ಸಪ್ತಜಿಹ್ವಾಃ ॥**

(ಋ. ಸಂ. ೩-೬-೨)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯ ಮಹತ್ವವನ್ನೂ

**ಪ್ರ ಮಾತ್ರಾಭೀ ರಿರಿಚೇ ರೋಚಮಾನಃ ಪ್ರ ದೇವೇಭಿರ್ವಿಶ್ವತೋ ಅಪ್ರತೀತಃ ।**
**ಪ್ರ ಮಜ್ಮನಾ ದಿವ ಇಂದ್ರಃ ಪೃಥಿವ್ಯಾಃ ಪ್ರೋರೋರ್ಮಹೋ ಅಂತರಿಕ್ಷಾದೃಜೀಷೀ ॥**

(ಋ. ಸಂ. ೩-೪೬-೩)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನ ಮಹತ್ತ್ವವನ್ನೂ ವರ್ಣಿಸಿರುವಂತೆ ಇಲ್ಲಿಯೂ ಸಹ ಇಂದ್ರಾಗ್ನಿಗಳ ಮಹತ್ವವನ್ನು ಸ್ತುತಿಸಿದೆ.

### ವ್ಯಾಕರಣಪ್ರಕ್ರಿಯಾ

**ಪೃತನಾಹವೇಷು**—ಪೃತನಾಸು ಹವಃ ಪೃತನಾಹವಃ ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಇದಕ್ಕೆ **ಭಾವೇನುಪಸರ್ಗಸ್ಯ** (ಪಾ. ಸೂ. ೩-೩-೭೫) ಎಂಬುದರಿಂದ ಭಾವಾರ್ಥದಲ್ಲಿ ಅಪ್ ಪ್ರತ್ಯಯ. ಧಾತುವಿಗೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ ಬಂದಾಗ ಉಕಾರಕ್ಕೆ ಅಪ್ ನಿಮಿತ್ತವಾಗಿ ಗುಣ ಅವಾದೇಶ. ಹವ ಎಂದು ರೂಪವಾಗುತ್ತದೆ. ವ್ಯತ್ಯಯದಿಂದ **ಥಾಥಘಞ್‌ಕ್ತಾಚ**— (ಪಾ. ಸೂ. ೬-೨-೧೪೪) ಎಂಬುದರಿಂದ ಬರಬೇಕಾದ ಉತ್ತರಪದಾಂತೋದಾತ್ತಸ್ವರವು ಬಾರದಿರುವಾಗ **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೧-೧೭೧) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಅಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರದಿಂದ ಹವ ಎಂಬುದು ಆದ್ಯುದಾತ್ತವಾಗುತ್ತದೆ.

**ಪೃಥಿವ್ಯಾಃ**—ಉದಾತ್ತ ಸ್ಥಾನದಲ್ಲಿ ಯಣ್ ಬಂದು ಅದರ ಉತ್ತರದಲ್ಲಿ ವಿಭಕ್ತಿ ಬಂದುದರಿಂದ **ಉದಾತ್ತಯಣೋ ಹಲ್‌ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ರಿರಿಚಾಥೇ**—ರಿಚಿರ್ ವಿರೇಚನೇ. ಧಾತು. ವರ್ತಮಾನಾರ್ಥತೋರುವಾಗ **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ಲಿಟ್ ಅಥವಾ ಲಟ್ ಬಂದರೂ **ವ್ಯತ್ಯಯೋಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ವಿಕರಣಕ್ಕೆ ಶ್ಲು ಆದೇಶ. ದ್ವಿವಚನದಲ್ಲಿ ಆಥಾಮ್ ಪ್ರತ್ಯಯ **ಟಿತ ಆತ್ಮನೇಪದಾನಾಂ**—(ಪಾ. ಸೂ. ೩-೪-೭೯) ಎಂಬುದರಿಂದ ಟಿಗೆ ಏತ್ವ. ಧಾತುವಿಗೆ ದ್ವಿತ್ವಾದಿ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದಿವಃ—ಊಡಿದಂ ಪದಾದಿ**—( ಪಾ. ಸೂ. ೬-೧-೧೭೧ ) ಎಂಬುದರಿಂದ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ.

**ಸಿಂಧುಭ್ಯಃ**— ಸ್ಯಂದೂ ಪ್ರಸ್ರವಣೇ. ಧಾತು. **ಸ್ಯಂದೇಃ ಸಂಪ್ರಸಾರಣಂ ಧಶ್ಚ** (ಉ. ಸೂ. ೧-೧೧) ಎಂಬುದರಿಂದ ಉಪ್ರತ್ಯಯ. ಧಾತುವಿಗೆ ಸಂಪ್ರಸಾರಣ ಧಕಾರಾಂತಾದೇಶ.

**ವಿಶ್ವಾ—ಭುವನಾ**—ಬಹುವಚನದಲ್ಲಿ ಶಿಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್** (ಪಾ. ಸೂ.೬-೧-೭೦) ಎಂಬುದರಿಂದ ಶಿಗೆ ಲೋಪ. ಅನ್ಯಾ ಎಂಬಲ್ಲಿಯೂ ಇದೇ ಪ್ರಕ್ರಿಯೆ.

**ಮಹಿತ್ವಾ**—ಮಹ ಪೂಜಾಯಾಮ್. ಧಾತು. ಇದಕ್ಕೆ ಔಣಾದಿಕ ಇನ್‌ಪ್ರತ್ಯಯ. ಮಹಿ ಎಂದು ರೂಪವಾಗುತ್ತದೆ. ಮಹೇಃ ಭಾವಃ ಮಹಿತ್ವಮ್. **ತಸ್ಯಭಾವಸ್ತ್ವತಲೌ** (ಪಾ. ಸೂ. ೫-೧-೧೧೯) ಎಂಬುದರಿಂದ ಭಾವಾರ್ಥದಲ್ಲಿ ತ್ವಪ್ರತ್ಯಯ. ತೃತೀಯಾ ವಿಭಕ್ತಿಪರವಾದಾಗ **ಸುಪಾಂ ಸುಲುಕ್**— (ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಡಾದೇಶ. ॥ ೬ ॥

———— :o: ————

**ಸಂಹಿತಾಪಾಠಃ**

ಆ ಭರತಂ ಶಿಕ್ಷತಂ ವಜ್ರಬಾಹೂ ಅಸ್ಮಾಁ ಇಂದ್ರಾಗ್ನೀ ಅವತಂ ಶಚೀಭಿಃ ।
ಇಮೇ ನು ತೇ ರಶ್ಮಯಃ ಸೂರ್ಯಸ್ಯ ಯೇಭಿಃ ಸಪಿತ್ವಂ ಪಿತರೋ ನ ಆಸನ್ ॥ ೭ ॥

ಪದಪಾಠಃ

ಆ । ಭರತಂ । ಶಿಕ್ಷತಂ । ವಜ್ರಬಾಹೂ ಇತಿ ವಜ್ರಽಬಾಹೂ । ಅಸ್ಮಾನ್ ।
ಇಂದ್ರಾಗ್ನೀ ಇತಿ । ಅವತಂ । ಶಚೀಭಿಃ ।
ಇಮೇ । ನು । ತೇ । ರಶ್ಮಯಃ । ಸೂರ್ಯಸ್ಯ । ಯೇಭಿಃ । ಸಽಪಿತ್ವಂ । ಪಿತ-
ರಃ । ನಃ । ಆಸನ್ ॥ ೭ ॥

ಸಾಯಣಭಾಷ್ಯಂ

ಪೂರ್ವೋಕ್ತ ಏವ ಪಶಾವಾ ಭರತಮಿತ್ಯೇಷಾ ಪುರೋಡಾಶಸ್ಯಾನುವಾಕ್ಯಾ । ಸೂತ್ರಿತಂ ಚ । ಆ ಭರತಂ ಶಿಕ್ಷತಂ ವಜ್ರಬಾಹೂ ಉಭಾ ವಾಮಿಂದ್ರಾಗ್ನೀ ಆಹುವಧ್ಯೈ ॥ ಆ. ೩-೭ । ಇತಿ ॥

ಹೇ ವಜ್ರಬಾಹೂ ವಜ್ರಹಸ್ತಾವಿಂದ್ರಾಗ್ನೀ ಆ ಭರತಂ । ಅಸ್ಮದರ್ಥಂ ಧನಮಾಹರತಂ । ಆಹೃತ್ಯ ಚ ಶಿಕ್ಷತಂ । ಅಸ್ಮಭ್ಯಂ ದತ್ತಂ । ಶಿಕ್ಷತಿರ್ದಾನಕರ್ಮಾ । ಅಪಿ ಚಾಸ್ಮಾನನುಷ್ಠಾತೄನ್ ಶಚೀಭಿಃ । ಕರ್ಮನಾಮೈತತ್ । ಆತ್ಮೀಯೈಃ ಕರ್ಮಭಿರವತಂ । ರಕ್ಷತಂ । ಕಿಂ ಚ ಸೂರ್ಯಾತ್ಮನ ಇಂದ್ರಸ್ಯ ಯೇಭೀ ರಶ್ಮಿಭಿರ್ಯೈರರ್ಚಿಭಿರ್ನೋಽಸ್ಮಾಕಂ ಪಿತರಃ ಪೂರ್ವಪುರುಷಾಃ ಸಪಿತ್ವಂ ಸಹಪ್ರಾಪ್ತವ್ಯಂ ಸ್ಥಾನಮಾಸನ್ ಬ್ರಹ್ಮಲೋಕಮಗಚ್ಛನ್ । ಅರ್ಚಿರಾದಿಮಾರ್ಗೇಣ ಹಿ ಬ್ರಹ್ಮಲೋಕಮುಪಾಸಕಾ ಗಚ್ಛಂತಿ । ತಥಾ ಚ ಶ್ರೂಯತೇ । ತೇಽರ್ಚಿಷಮಭಿಸಂಭವಂತ್ಯರ್ಚಿಷೋಽಹರಿತಿ । ಯದ್ವಾ । ಯೇಭೀ ರಶ್ಮಿಭಿಃ ಸಪಿತ್ವಂ ಸಮವೇತತ್ವಮಭ್ಯಗಚ್ಛನ್ । ತೇ ರಶ್ಮಯ ಇಮೇ ನು ಇದಾನೀಮಸ್ಮಾಭಿರ್ದೃಶ್ಯಮಾನಾ ಏತ ಏವ ಖಲು। ಸೂರ್ಯಾತ್ಮನ ಇಂದ್ರಸ್ಯ ಯೇ ರಶ್ಮಯಸ್ತ ಏವಾಗ್ನೇರಪಿ । ತಥಾ ಚ ಶ್ರೂಯತೇ । ಅಗ್ನಿಂ ವಾವಾದಿತ್ಯಃ ಸಾಯಂ ಪ್ರವಿಶತಿ ತಸ್ಮಾದಗ್ನಿರ್ದೂರಾನ್ನಕ್ತಂ ದದೃಶೇ । ತೈ. ಬ್ರಾ. ೨-೧-೨-೯ । ಇತಿ । ತಸ್ಮಾತ್ಸೂರ್ಯಸ್ಯ ರಶ್ಮೀನಾಂ ಸ್ತವನೇನೇಂದ್ರಾಗ್ನ್ಯೋರುಭಯೋರಪಿ ಸ್ತುತಿಃ ಸಿದ್ಧಾ ॥ ಭರತಂ । ಹೃಗ್ರಹೋರ್ಭ ಇತಿ ಭತ್ವಂ । ಶಿಕ್ಷತಂ । ಶಿಕ್ಷ ವಿದ್ಯೋಪಾದಾನೇ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಶಪಃ ಪಿತ್ತ್ವಾದ- ನುದಾತ್ತತ್ವಂ । ಧಾತುಸ್ವರಃ ಶಿಷ್ಯತೇ । ತಿಙಃ ಪರತ್ವಾನ್ನಿಘಾತಾಭಾವಃ । ಸಪಿತ್ವಂ । ಆಪ್ಲೃ ವ್ಯಾಪ್ತೌ । ಅಸ್ಮಾತ್ಸಶಬ್ದೋಪಪದಾತ್ಕ್ರತ್ವಾರ್ಥೇ ತವೈಕೇನಿತಿ ತ್ವನ್ಪ್ರತ್ಯಯಃ । ಪೃಷೋದರಾದಿತ್ವಾ- ದ್ಧಾತೋಃ ಪಿಭಾವಃ । ಯದ್ವಾ । ಷಪ ಸಮವಾಯೇ । ಇನ್ಸರ್ವಧಾತುಭ್ಯ ಇತೀನ್ । ಸಪೇರ್ಭಾವಃ ಸಪಿತ್ವಂ । ಆಸನ್ । ಅಸ ಗತಿದೀಪ್ತ್ಯಾದಾನೇಷು । ಲಙ್ಯಾಡಾಗಮ ಉದಾತ್ತಃ । ಯದ್ವೃತ್ತಾನ್ನಿತ್ಯಮಿತಿ ನಿಘಾತಾಭಾವಃ ॥

### ಪ್ರತಿಪದಾರ್ಥ

**ವಜ್ರಬಾಹೂ**—ಕೈಗಳಲ್ಲಿ ವಜ್ರಾಯುಧವನ್ನು ಹಿಡಿದಿರುವ । **ಇಂದ್ರಾಗ್ನೀ**— ಎಲೈ ಇಂದ್ರಾಗ್ನಿಗಳೇ । **ಆ ಭರತಂ**—(ನಮಗಾಗಿ) ಧನವನ್ನು ತೆಗೆದುಕೊಂಡು ಬನ್ನಿರಿ । **ಶಿಕ್ಷತಂ**—( ಅದನ್ನು ) ನಮಗೆ ಕೊಡಿರಿ । **ಅಸ್ಮಾನ್**— ಯಜ್ಞಾನುಷ್ಠಾನವನ್ನು ಮಾಡುವ ನಮ್ಮನ್ನು । **ಶಚೀಭಿಃ**—(ನಿಮ್ಮ ವೀರ್ಯವಾದ) ಕರ್ಮಗಳಿಂದ । **ಅವತಂ**—ರಕ್ಷಿಸಿರಿ । (ಮತ್ತು) **ಯೇಭಿಃ**—ಸೂರ್ಯರೂಪದ ಇಂದ್ರನ । **ಸೂರ್ಯಸ್ಯ**--ಯಾವಕಿರಣಗಳಿಂದ । **ನಃ**—ನಮ್ಮ । **ಪಿತರಃ**—ಪಿತೃಪಿತಾಮಹಾದಿಗಳು । **ಸಪಿತ್ವಂ ಆಸನ್**—ಬ್ರಹ್ಮಲೋಕವನ್ನು ಒಟ್ಟಿಗೆ ಸೇರಿಕೊಂಡರೋ ಅಥವಾ ಎಲ್ಲರೂ ಒಂದಾಗಿ ಒಟ್ಟಿಗೆ ಸೇರಿಕೊಂಡರೋ । **ತೇ ರಶ್ಮಯಃ**—ಆ ಕಿರಣಗಳು । **ಇಮೇ ನು**—ನಮ್ಮ ಕಣ್ಣಿಗೂ ಗೋಚರವಾಗತಕ್ಕ ಈ ಕಿರಣಗಳೇ ಅಲ್ಲವೇ ? ॥

### ॥ ಭಾವಾರ್ಥ ॥

ಕೈಯಲ್ಲಿ ವಜ್ರಾಯುಧವನ್ನು ಹಿಡಿದಿರುವ ಎಲೈ ಇಂದ್ರಾಗ್ನಿಗಳೇ. ನಮಗಾಗಿ ಧನವನ್ನು ತೆಗೆದುಕೊಂಡು ಬಂದು ನಮಗೆ ಕೊಡಿರಿ. ಯಜ್ಞಾನುಷ್ಠಾನವನ್ನು ಮಾಡುವ ನಮ್ಮನ್ನು ನಿಮ್ಮ ವೀರ್ಯಕರ್ಮಗಳಿಂದ ರಕ್ಷಿಸಿರಿ. ಸೂರ್ಯರೂಪದ ಇಂದ್ರನ ಯಾವ ಕಿರಣಗಳಿಂದ ನಮ್ಮ ಪಿತೃಪಿತಾಮಹಾದಿಗಳು ಒಟ್ಟಿಗೆ ಬ್ರಹ್ಮಲೋಕವನ್ನು ಸೇರಿಕೊಂಡರೋ, ನಮ್ಮ ಕಣ್ಣಿಗೆ ಕಾಣುವ ಈ ಅದೇ ಕಿರಣಗಳು ನಮ್ಮನ್ನೂ ಅನುಗ್ರಹಿಸಲಿ.

### English Translation

Bring wealth, thunderers, and give it to us ; protect us, Indra and Agni, by your deeds ; may those rays of the sun, by which our forefathers have attained together a heavenly region, shine also upon us.

### ವಿಶೇಷವಿಷಯಗಳು

ಹಿಂದಿನ ಋಕ್ಕಿನಲ್ಲಿ ಹೇಳಿದಂತೆ ಇಂದ್ರಾಗ್ನಿಗಳನ್ನು ಉದ್ದೇಶಮಾಡಿ ಮಾಡುವ ಪಶುಹೋಮದಲ್ಲಿ ಪುರೋಡಾಶಹೋಮ ಮಾಡುವಾಗ **ಆ ಭರತಂ ಶಿಕ್ಷತಂ** ಎಂಬ ಈ ಋಕ್ಕನ್ನು ಪುರೋನುವಾಕ್ಯಾ ಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಆ ಭರತಂ ಶಿಕ್ಷತಂ ವಜ್ರಬಾಹೂ ಉಭಾ ವಾಮಿಂದ್ರಾಗ್ನೀ ಆಹುವಧ್ಯೈ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೩-೭)

**ಶಿಕ್ಷತಂ**—**ಶಿಕ್ಷತಿ** ಪದವು ದಾನಕರ್ಮನಾಮಗಳಲ್ಲಿ ಪಠಿತವಾಗಿದೆ. ನಮಗೆ ಧನವನ್ನು ಕೊಡಿ ಎಂದರ್ಥ. ಲೌಕಿಕವಾದ ಭಾಷೆಯಲ್ಲಿ **ಶಿಕ್ಷ** ಧಾತುವಿಗೆ ಸಾಧಾರಣವಾಗಿ ಕಲಿಸು ಅಥವಾ ಅಭ್ಯಾಸಮಾಡು ಎಂದರ್ಥವಾಗುತ್ತದೆ. ಇಲ್ಲಿಯೂ ಷಪ **ಶಿಕ್ಷ**—**ವಿದ್ಯೋಪಾದಾನೇ** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ಭಾಷ್ಯಕಾರರು ತೋರಿಸಿರುತ್ತಾರೆ ಆದರೆ ಕೆಲವೆಡೆಗಳಲ್ಲಿ ಕೊಡು, ದಾನಮಾಡು ಎಂದು ತಾತ್ಪರ್ಯವಾಗುತ್ತದೆ. ಗ್ರಹಿಸು, ಅಭ್ಯಾಸಮಾಡು ಎಂಬರ್ಥದಲ್ಲಿಯೂ ಸಹ ಈ ಪದದ ಪ್ರಯೋಗವಿದೆ. ಉದಾಹರಣೆಗೆ—

**ತ್ರಿರ್ವರ್ತಿರ್ಯಾತಂ ತ್ರಿರನುವ್ರತೇ ಜನೇ ತ್ರಿಃ ಸುಪ್ರಾವ್ಯೇ ತ್ರೇಧೇವ ಶಿಕ್ಷತಂ ।**

(ಋ. ಸಂ ೧-೩೪-೪)

ಎಂಬ ಋಕ್ಕಿನಲ್ಲಿ ಶಿಕ್ಷತಂ ಎಂದರೆ **ಉಪದೇಷ್ಟವ್ಯಂ** ಎಂದೂ,

**ಯತ್ರ ನಾರ್ಯಪಚ್ಯವಮುಪಚ್ಯವಂ ಚ ಶಿಕ್ಷತೇ ।**

(ಋ. ಸಂ. ೧-೨೮-೩)

ಎಂಬಲ್ಲಿ ಅಭ್ಯಾಸಂ ಕರೋತಿ ಎಂದೂ, ಅರ್ಥವಾಗುತ್ತದೆ. ಉಳಿದೆಡೆಗಳಲ್ಲಿ ಎಂದರೆ,

ಇಂದ್ರೋ ಯಜ್ವನೇ ಪೃಣತೇ ಚ ಶಿಕ್ಷತ್ಯುಪೇದ್ದದಾತಿ ನ ಸ್ವಂ ಮುಷಾಯತಿ ।

(ಋ. ಸಂ. ೬-೨೮-೨)

ಪ್ರ ಸ ಮಿತ್ರ ಮರ್ತೋ ಅಸ್ತು ಪ್ರಯಸ್ವಾನ್ಯಸ್ತ ಆದಿತ್ಯ ಶಿಕ್ಷತಿ ವ್ರತೇನ ।

(ಋ. ಸಂ. ೩-೫೯-೨)

**ಯುವಾದತ್ತಸ್ಯ ಧಿಷ್ಣ್ಯಾ ಯುವಾನೀತಸ್ಯ ಸೂರಿಭಿಃ ।**
**ಅಹರಹರ್ವೃಷಣಾ ಮಹ್ಯಂ ಶಿಕ್ಷತಂ ।**

(ಋ. ಸಂ: ೮-೨೬-೧೨)

ಇತ್ಯಾದಿ ಋಕ್ಕುಗಳಲ್ಲೆಲ್ಲಾ **ದದಾತಿ, ಪ್ರಯಚ್ಛತಂ** ಎಂಬರ್ಥವೇ ಆಗುತ್ತದೆ. ಅದರಂತೆ ಇಲ್ಲಿಯೂ ಸಹ **ದತ್ತಂ** ಕೊಡಿರಿ ಎಂದು ತಾತ್ಪರ್ಯ.

**ಸಪಿತ್ವಂ**—ಆಪ್ಲೃ ವ್ಯಾಪ್ತೌ ಎಂಬ ಧಾತುವಿನಿಂದ ನಿಷ್ಪನ್ನವಾಗಿ **ಸಹ ಪ್ರಾಪ್ತವ್ಯಂ ಸ್ಥಾನಂ ।** ಎಲ್ಲರೂ ಒಟ್ಟಿಗಿ ಹೋಗಿ ಸೇರಬೇಕಾದ ಸ್ಥಾನವೆಂದು ಸಾಯಣರೂ, **ಸಹ ಪಾನಂ** ಒಟ್ಟಿಗೆ ಪಾನಮಾಡತಕ್ಕ ಸ್ಥಾನವೆಂದು ಸ್ಕಂದಸ್ವಾಮಿಗಳೂ ವಿವರಿಸಿದ್ದಾರೆ. ಮೊದಲನೆಯ ವಿವರಣೆಯಂತೆ **ಆಸನ್** ಎಂಬುದಕ್ಕೆ ಗತ್ಯರ್ಥವಾಗಿ **ಸಪಿತ್ವವನ್ನು ಹೋಗಿ ಸೇರಿದರೆಂದೂ,** ಎರಡನೆಯ ವಿವರಣೆಯಂತೆ, **ಆಸನ್** ಎಂದರೆ ಪ್ರಾಪ್ತ್ಯರ್ಥವಾಗಿ **ಸಪಿತ್ವವನ್ನು ಹೊಂದಿದರೆಂದೂ** ತಾತ್ಪರ್ಯವಾಗುತ್ತದೆ. ಇಲ್ಲಿ ಮೊದಲನೆಯ ಅರ್ಥವು ಹೆಚ್ಚು ಹೊಂದಿಕೊಳ್ಳುತ್ತದೆ. ಏತಕ್ಕೆಂದರೆ, ಅರ್ಚಿರಾದಿಮಾರ್ಗದಿಂದ ಉಪಾಸಕರು ಬ್ರಹ್ಮಲೋಕವನ್ನು ಹೋಗಿ ಸೇರುವುದು ಪ್ರಸಿದ್ಧವಾಗಿದೆ.

**ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾಂತಿ ।**

(ಮು. ಉ. ೨-೧೧)

ಇತ್ಯಾದಿ ವಾಕ್ಯಗಳಲ್ಲಿ ವರ್ಣಿತವಾಗಿರುವಂತೆಯೂ ಋ ಸಂ. ೧-೧೦೫-೧೬ನೇ ಋಕ್ಕಿನ ವಿಶೇಷವಿಷಯಗಳಲ್ಲಿ ಈ ಅಂಶವನ್ನು ವಿವರಿಸಿದೆ) ಮತ್ತು

ತೇಽರ್ಚಿಷಮಭಿಸಂಭವಂತ್ಯರ್ಚಿಷೋಽಹಃ

(ಛಾ. ಉ. ೫-೧೦-೧)

ಎಂದು ಸಾಯಣರು ಉದಹರಿಸಿ ವಿವರಿಸುವಂತೆಯೂ ಉಪಾಸಕರಾದ ಪೂರ್ವಪಿತೃಗಳು ಅರ್ಚಿರಾದಿಮಾರ್ಗದಿಂದ ಬ್ರಹ್ಮಲೋಕವನ್ನು ಸೇರಿದರು ಎಂದು ಹೇಳುವುದೇ ಇಲ್ಲಿ ಸರಿಯಾಗಿದೆ. ಅಥವಾ **ಯೇಭೀ ರಶ್ಮಿಭಿಃ ಸಪಿತ್ವಂ** ಸಮವೇತತ್ವಮಧ್ಯಗಚ್ಛನ್ ತೇ ರಶ್ಮಯಃ ಇಮೇ ನು ಇದಾನೀಂ ಅಸ್ಮಾಭಿರ್ದೃಶ್ಯಮಾನಾ ಏತೇ ಏವ ಖಲು

**ಸೂರ್ಯಾತ್ಮನ ಇಂದ್ರಸ್ಯ ಯೇ ರಶ್ಮಯಸ್ತ ಏವಾಗ್ನೇರಪಿ ।** **ಸಪಿತ್ವಂ** ಎಂದರೆ **ಸಮುವೇತತ್ವಂ** ಸೇರಿಕೊಂಡು ಒಂದಾಗುವುದು ಎಂದರ್ಥವಾಗಿ ಸೂರ್ಯನಿಗೂ ಇಂದ್ರನಿಗೂ ತಾದಾತ್ಮ್ಯವಿರುವುದರಿಂದಲೂ, ಸೂರ್ಯಕಿರಣಗಳೂ ಅಗ್ನಿ ಕಿರಣಗಳೂ ಒಂದೇ ಆದುದರಿಂದಲೂ ಇಂದ್ರಾಗ್ನಿಗಳ ರಶ್ಮಿಗಳು ಸೂರ್ಯ ರಶ್ಮಿಗಳೊಂದಿಗೆ ಒಂದಾದವು ಎಂದೂ ತಾತ್ಪರ್ಯವಾಗಬಹುದೆಂದು ಸಾಯಣರು ಹೇಳಿ

**ಅಗ್ನಿಂ ವಾವಾದಿತ್ಯಃ ಸಾಯಂ ಪ್ರವಿಶತಿ ತಸ್ಮಾದಗ್ನಿರ್ದೂರಾನ್ನಕ್ತಂ ದೃಶೇ ।**

(ತೈ. ಬ್ರಾ. ೨-೧.೨.೯)

ಎಂಬ ಬ್ರಾಹ್ಮಣ ವಾಕ್ಯವನ್ನು ಉದಹರಿಸಿ ಎರಡನೆಯ ಅರ್ಥವನ್ನು ಹೇಳಿರುತ್ತಾರೆ.

### ವ್ಯಾಕರಣಪ್ರಕ್ರಿಯಾ

**ಭರತಮ್**—ಹೃಞ್ ಹರಣೇ ಧಾತು ಲೋಟ್‌ಮಧ್ಯಮಪುರುಷ ದ್ವಿವಚನದಲ್ಲಿ **ತಸ್‌ಥಸ್‌ಥ**—(ಪಾ. ಸೂ. ೩-೪-೧೦೧) ಎಂಬುದರಿಂದ ತಮಾದೇಶ. ಶಪ್ ವಿಕರಣ. **ಸಾರ್ವಧಾತುಕಾರ್ಧ**—(ಪಾ. ಸೂ. ೭-೩-೮೪) ಎಂಬುದರಿಂದ ಧಾತುವಿನ ಇಕಿಗೆ ಗುಣ. **ಉರಣ್ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ. ಹರತಮ್ ಎಂದು ರೂಪವಾಗುತ್ತದೆ. **ಹೃಗ್ರಹೋರ್ಭಶ್ಛಂದಸಿ** ಎಂಬುದರಿಂದ ಹಕಾರಕ್ಕೆ ಭಕಾರಾದೇಶ. ಅತಿಙಂತದ ಪರದಲ್ಲಿರುವು ದರಿಂದ ನಿಘಾತಸ್ವರ ಬರುತ್ತದೆ.

**ಶಿಕ್ಷತಮ್**—ಶಿಕ್ಷ ವಿದ್ಯೋಪಾದಾನೇ. ಧಾತು. ಹಿಂದಿನಂತೆ ಲೋಟ್ ಮಧ್ಯಮಪುರುಷ ದ್ವಿವಚನಾಂತ ರೂಪ **ಅತಿಙಃ** ಎಂದು ಪರ್ಯುದಾಸಮಾಡಿರುವುದರಿಂದ ಇಲ್ಲಿ ಹಿಂದೆ ತಿಙಂತವಿರುವುದರಿಂದ ನಿಘಾತಸ್ವರ ಬರು ವುದಿಲ್ಲ. ಅದುಪದೇಶದ ಪರದಲ್ಲಿ ಲಸಾರ್ವಧಾತುಕವು ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ ೬-೧-೧೮೬) ಎಂಬುದರಿಂದ ಅನುದಾತ್ತವಾಗುತ್ತದೆ. ಶಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಆಗ ಧಾತುಸ್ವರ ಉಳಿಯುತ್ತದೆ.

**ಅವತಮ್**—ಅವ ರಕ್ಷಣೇ. ಧಾತು. ಲೋಟ್ ಮಧ್ಯಮಪುರುಷದ್ವಿವಚನಾಂತರೂಪ. ತಿಙಂತನಿಘಾತ ಸ್ವರ ಬರುತ್ತದೆ.

**ಯೇಭಿಃ**—ಯದ್ ಶಬ್ದ. ತೃತೀಯಾ ಬಹುವಚನದಲ್ಲಿ **ಬಹುಲಂ ಛಂದಸಿ** (ಪಾ. ಸೂ. ೭-೧-೧೦) ಎಂಬುದರಿಂದ ಭಿಸಿಗೆ ಐಸ್ ಬರುವುದಿಲ್ಲ. ಏತ್ವ ಬಂದು ಯೇಭಿಃ ಎಂದು ರೂಪವಾಗಿದೆ.

**ಸಪಿತ್ವಮ್**—ಆಪ್ಲೃ ವ್ಯಾಪ್ತೌ ಧಾತು. ಸಶಬ್ದ ಉಪಪದವಾಗಿರುವಾಗ ಇದಕ್ಕೆ **ಕೃತ್ಯಾರ್ಥೇ ತವೈ-ಕೇನ್**—(ಪಾ. ಸೂ. ೩-೪-೧೪) ಎಂಬುದರಿಂದ ತ್ವನ್ ಪ್ರತ್ಯಯ. **ಪೃಷೋದರಾದೀನಿ ಯಥೋಪದಿಷ್ಟಮ್** (ಪಾ. ಸೂ. ೬-೩-೧೦೯) ಎಂಬುದರಿಂದ ಇದು ಪೃಷೋದರಾದಿಯಲ್ಲಿ ಸೇರಿರುವುದರಿಂದ ಧಾತುವಿಗೆ ಪಿಭಾವ ಬರುತ್ತದೆ. ಅಥವಾ ಷಪ ಸಮವಾಯೇ ಧಾತು. **ಧಾತ್ವಾದೇಃ ಷಃ ಸಃ** (ಪಾ. ಸೂ. ೬-೧-೬೪) ಎಂಬುದರಿಂದ ಆದಿಗೆ ಸತ್ವ. **ಸರ್ವಧಾತುಭ್ಯ ಇನ್.** (ಉ. ಸೂ. ೪-೫೫-೭) ಎಂಬುದರಿಂದ ಇದಕ್ಕೆ ಇತ್ ಪ್ರತ್ಯಯ. ಸಪಿ ಎಂದು ರೂಪ ವಾಗುತ್ತದೆ. ಸಪೇರ್ಭಾವಃ ಸಪಿತ್ವಮ್ **ತಸ್ಯಭಾವಸ್ತ್ವತಲೌ** (ಪಾ. ಸೂ. ೫-೧-೧೧೯) ಎಂಬುದರಿಂದ ತ್ವಪ್ರತ್ಯಯ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಆಸನ್**—ಅಸ ಗತಿ ದೀಪ್ತಿ ಆದಾನೇಷು. ಧಾತು ಲಙ್ ಪ್ರಥಮಪುರುಷ ಬಹುವಚನದಲ್ಲಿ ಝಿಪ್ರತ್ಯಯ. **ಝೋಽಂತಃ** ಎಂಬುದರಿಂದ ಅಂತಾದೇಶ. **ಇತಶ್ಚ** ಎಂಬುದರಿಂದ ಇಕಾರಲೋಪ. ಶಪ್ ವಿಕರಣ. **ಅತೋಗುಣೇ** ಎಂಬುದರಿಂದ ಪರರೂಪ. **ಆಡಜಾದೀನಾಮ್** ( ಪಾ. ಸೂ. ೬-೪-೭೨ ) ಎಂಬುದರಿಂದ ಅಂಗಕ್ಕೆ ಆಡಾಗಮ. ಸಂಯೋಗಾಂತಲೋಪದಿಂದ ಪ್ರತ್ಯಯದ ಅಂತ್ಯ ತಕಾರಕ್ಕೆ ಲೋಪ. ಆಸನ್ ಎಂದು ರೂಪವಾಗುತ್ತದೆ. ಯೇಭಿಃ ಎಂದು ಹಿಂದೆ ಯಚ್ಛಬ್ದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ನಿಷೇಧ ಬರುವುದರಿಂದ ಆಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ. ॥ ೭ ॥

———— :o: ————

ಸಂಹಿತಾಪಾಠಃ

ಪುರಂದರಾ ಶಿಕ್ಷತಂ ವಜ್ರಹಸ್ತಾಸ್ಮಾँ ಇಂದ್ರಾಗ್ನೀ ಅವತಂ
ಭರೇಷು ।
ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ
ಪೃಥಿವೀ ಉತ ದ್ಯೌಃ ॥ ೮ ॥

। ಪದಪಾಠಃ ।

ಪುರಂಽದರಾ । ಶಿಕ್ಷತಂ । ವಜ್ರಽಹಸ್ತಾ । ಅಸ್ಮಾನ್ । ಇಂದ್ರಾಗ್ನೀ ಇತಿ ।
ಅವತಂ । ಭರೇಷು ।
ತತ್ । ನಃ । ಮಿತ್ರಃ । ವರುಣಃ । ಮಮಹಂತಾಂ । ಅದಿತಿಃ । ಸಿಂಧುಃ ।
ಪೃಥಿವೀ । ಉತ । ದ್ಯೌಃ ॥ ೮ ॥

ಹೇ ವಜ್ರಹಸ್ತಾ ಹಸ್ತೇನ ಗೃಹೀತವಜ್ರಾ । ಪುರಂದರಾಸುರಪುರಾಣಾಂ ದಾರಯಿತಾರಾ-ವಿಂದ್ರಾಗ್ನೀ ಶಿಕ್ಷತಂ । ಅಸ್ಮದಪೇಕ್ಷಿತಂ ಧನಂ ಪ್ರಯಚ್ಛತಂ । ಅಪಿ ಚ ಭರೇಷು ಸಂಗ್ರಾಮೇಷ್ವಸ್ಮಾನ-ವತಂ । ರಕ್ಷತಂ । ಯದನೇನ ಸೂಕ್ತೇನ ಪ್ರಾರ್ಥಿತಂ ತದಸ್ಮದೀಯಂ ಮಿತ್ರಾದಯೋ ಮಮಹಂತಾಂ । ಪೂಜಯಂತಾಂ ॥ ಪುರಂದರಾ । ಪೂಃಸರ್ವಯೋರ್ದಾರಿಸಹೋಃ । ಪಾ. ೩-೨-೪೧ । ಇತಿ ಖಚ್ । ವಾಚಂಯಮಪುರಂದರೌ ಚ । ಪಾ. ೬-೩-೬೯ । ಇತಿ ನಿಪಾತನಾದಮ್ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ ॥

॥ ಪ್ರತಿಪದಾರ್ಥ ॥

**ವಜ್ರಹಸ್ತಾ**—ಕೈಯಿನಲ್ಲಿ ವಜ್ರಾಯುಧವನ್ನು ಹಿಡಿದಿರುವವರೂ । **ಪುರಂದರಾ**—(ಶತ್ರುಗಳ) ಪಟ್ಟಣಗಳನ್ನು ಧ್ವಂಸಮಾಡುವವರೂ ಆದ । **ಇಂದ್ರಾಗ್ನೀ**—ಎಲೈ ಇಂದ್ರಾಗ್ನಿಗಳೇ । **ಶಿಕ್ಷತಂ**—(ನಮಗೆ ಅಪೇಕ್ಷಿತವಾದ ಧನವನ್ನು) ಕೊಡಿರಿ । **ಭರೇಷು**—ಯುದ್ಧಗಳಲ್ಲಿ । **ಅಸ್ಮಾನ್**—ನಮ್ಮನ್ನು । **ಅವತಂ**—ರಕ್ಷಿಸಿರಿ । **ನಃ**—ನಮ್ಮ । **ತತ್**—ಈ ಪ್ರಾರ್ಥನೆಯನ್ನು । **ಮಿತ್ರಃ**—ಮಿತ್ರನೂ । **ವರುಣಃ**—ವರುಣನೂ । **ಅದಿತಿಃ**—ಅದಿತಿಯೂ । **ಸಿಂಧುಃ**—ಸಾಗರಾಧಿದೇವತೆಯೂ । **ಪೃಥಿವೀ**—ಪೃಥ್ವಿಯೂ । **ಉತ**—ಮತ್ತು । **ದ್ಯೌಃ**—ದ್ಯುಲೋಕಾಧಿದೇವತೆಯೂ । **ಮಮಹಂತಾಂ**—ಶ್ರೇಷ್ಠವಾದುದನ್ನಾಗಿ ಮಾಡಲಿ.

ಭಾವಾರ್ಥ

ಕೈಯಿನಲ್ಲಿ ವಜ್ರಾಯುಧವನ್ನು ಹಿಡಿದಿರುವವರೂ, ಶತ್ರುಗಳ ಪಟ್ಟಣಗಳನ್ನು ಧ್ವಂಸಮಾಡುವವರೂ ಆದ ಎಲೈ ಇಂದ್ರಾಗ್ನಿಗಳೇ, ನಮಗೆ ಅಪೇಕ್ಷಿತವಾದ ಧನವನ್ನು ಕೊಡಿರಿ. ಯುದ್ಧಗಳಲ್ಲಿ ನಮ್ಮನ್ನು ರಕ್ಷಿಸಿರಿ. ನಮ್ಮ ಈ ಪ್ರಾರ್ಥನೆಯನ್ನು ಮಿತ್ರನೂ ವರುಣನೂ ಅದಿತಿಯೂ ಸಾಗರಾಧಿದೇವತೆಯೂ ಪೃಥ್ವಿಯೂ ಮತ್ತು ದ್ಯುಲೋಕಾಧಿದೇವತೆಯೂ ಶ್ರೇಷ್ಠವಾದುದನ್ನಾಗಿಮಾಡಿ ರಕ್ಷಿಸಲಿ.

## English Translation

Indra and Agni, wielders of the thunderbolt, overturners of cities grant us wealth, defend us in battles ; and may Mitra, Varuna, Aditi—ocean, earth, and heaven, be propitious to this (our prayer).

ವಿಶೇಷವಿಷಯಗಳು

ಪುರಂದರಾ— ಅಸುರಪುರಾಣಾಂ ದಾರಯಿತಾರೌ । ಶತ್ರುಪಟ್ಟಣವನ್ನು ನಾಶಮಾಡುವವರು.

ಇಂದ್ರಾಗ್ನೀ ನವತಿಂ ಪುರೋ ದಾಸಪತ್ನೀರಧೂನುತಂ । ಸಾಕಮೇಕೇನ ಕರ್ಮಣಾ ।

(ಋ. ಸಂ. ೩-೧೨-೬)

ಪುರಂದರಸ್ಯ ಗೀರ್ಭಿರಾ ವಿವಾಸೇಽಗ್ನೇರ್ವ್ರತಾನಿ ಪೂರ್ವ್ಯಾ ಮಹಾನಿ।

( ಋ. ಸಂ. ೭-೬-೨ )

ಇತ್ಯಾದಿಋಕ್ಕುಗಳಲ್ಲಿ ವರ್ಣಿತವಾಗಿರುವಂತೆ ಇಲ್ಲಿಯೂ ಸಹ ಶತ್ರುಪಟ್ಟಣಗಳನ್ನು ನಾಶಮಾಡಿದರೆಂದು ಸಂಬೋಧಿಸಿದೆ.

**ಭರೇಷು**—ಸಂಗ್ರಾಮನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯). ಯುದ್ಧಗಳಲ್ಲಿ ಎಂದರ್ಥ.

**ಶಿಕ್ಷತಂ**—ಎಂಬ ಪದಕ್ಕೆ ಇಲ್ಲಿಯೂ ಸಹ ಪ್ರಯಚ್ಛತಂ ಕೊಡಿರಿ ಎಂದರ್ಥ. ಈ ಶಬ್ದವು ಗ್ರಹಿಸು, ಅಭ್ಯಸಿಸು ಎಂಬರ್ಥದಲ್ಲಿಯೂ ಉಪಯೋಗಿಸಲ್ಪಟ್ಟಿದೆಯೆಂಬ ವಿಷಯವನ್ನು ಹಿಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ.

॥ ವ್ಯಾಕರಣಪ್ರಕ್ರಿಯಾ

**ಪುರಂದರಾ**—ಪುರಂ ದಾರಯತಃ ಇತಿ ಪುರಂದರೌ. ದೄ ವಿದಾರಣೇ ಧಾತು. **ಪೂಃ ಸರ್ವಯೋ-ರ್ದಾರಿಸಹೋಃ** (ಪಾ. ಸೂ. ೩-೨-೪೧) ಎಂಬುದರಿಂದ ಈ ಧಾತುವಿಗೆ ಪುರ್‌ಶಬ್ದ ಉಪಪದವಾಗಿರುವಾಗ ಖಚ್ ಪ್ರತ್ಯಯ ಬರುತ್ತದೆ. ತನ್ನಿಮಿತ್ತವಾಗಿ ಧಾತುವಿಗೆ ಗುಣ. **ಉರಣ್ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ. ವಾಚಂಯಮ ಪುರಂದರೌ ಚ (ಪಾ. ಸೂ. ೬-೩-೬೯) ಎಂಬಲ್ಲಿ ನಿಪಾತಮಾಡಿರುವುದರಿಂದ ಪೂರ್ವಪದಕ್ಕೆ ಅಮಾಗಮ. ಪುರಂದರ ಶಬ್ದಕ್ಕೆ ಪ್ರಥಮಾ ದ್ವಿವಚನ ಔ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧.೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ.

**ಶಿಕ್ಷತಮ್** — ಶಿಕ್ಷ ವಿದ್ಯೋಪಾದಾನೇ. ಧಾತು. ಲೋಟ್‌ಮಧ್ಯಮಪುರುಷದ್ವಿವಚನಾಂತರೂಪ. **ಆಮಂತ್ರಿತಂ ಪೂರ್ವಮವಿದ್ಯಮಾನವತ್** ( ಪಾ. ಸೂ. ೧-೭-೭೨ ) ಎಂಬುದರಿಂದ ಪೂರ್ವದಲ್ಲಿ ಅತಿಙಂತವು ಇದ್ದರೂ ಅದಕ್ಕೆ ಅವಿದ್ಯಮಾನವದ್ಭಾವ (ಇಲ್ಲದಿರುವಿಕೆ) ವಿರುವುದರಿಂದ ಇದು ಪಾದಾದಿಯಲ್ಲಿ ಬಂದಂತಾಗುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ವಜ್ರಹಸ್ತಾ**—ಔಕಾರವಿಭಕ್ತಿಗೆ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಆಕಾರಾದೇಶ. **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ. ಉಳಿದಶಬ್ದಗಳು ಹಿಂದೆ ವ್ಯಾಖ್ಯಾತಗಳಾಗಿವೆ. ॥ ೮ ॥



# ನೂರ ಹತ್ತನೆಯ ಸೂಕ್ತವು

---

**ತತಂ ಮ ಇತಿ ನವರ್ಚಂ ಪಂಚಮಂ ಸೂಕ್ತಂ ಕುತ್ಸಸ್ಯಾರ್ಷಂ ಋಭುದೇವತಾಕಂ । ಪಂಚಮೀನವಮ್ಯೌ ತ್ರಿಷ್ಟುಭೌ । ಶಿಷ್ಟಾಃ ಸಪ್ತ ಜಗತ್ಯಃ । ತಥಾ ಚಾನುಕ್ರಾಂತಂ । ತತಂ ನವಾರ್ಭವಂ ತು ಪಂಚಮ್ಯಂತೇ ತ್ರಿಷ್ಟುಭಾವಿತಿ ॥ ಅಭಿಪ್ಲವಷಡಹಸ್ಯ ಚತುರ್ಥೇಽಹನಿ ವೈಶ್ವದೇವಶಸ್ತ್ರ ಇದಮಾರ್ಭವಂ ನಿವಿದ್ಧಾನಂ । ಸೂತ್ರಿತಂ ಚ ತೃತೀಯಸ್ಯೇತಿ ಖಂಡೇ । ತತಂ ಮೇ ಅಪ ಇತಿ ವೈಶ್ವದೇವಂ । ಆ. ೭-೭ । ಇತಿ॥**

ಅನುವಾದವು—**ತತಂ ಮೇ ಅಪ** ಎಂಬ ಈ ಸೂಕ್ತವು ಹದಿನಾರನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕುತ್ಸನು ಋಷಿಯು. ಋಭುಗಳು ದೇವತೆಯು. ಈ ಸೂಕ್ತದ ಐದು ಮತ್ತು ಒಂಭತ್ತನೆಯ ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು; ಉಳಿದ ಏಳು ಋಕ್ಕುಗಳು ಜಗತೀ ಛಂದಸ್ಸಿನವು. ಅನುಕ್ರಮಣಿಕೆಯಲ್ಲಿ—**ತತಂ ನವಾರ್ಭವಂ ತು ಪಂಚಮ್ಯಂತೇ ತಿಷ್ಟುಭಾವಿತಿ** ಎಂದು ಹೇಳಿರುವುದು. ಅಭಿಪ್ಲವಷಡಹವೆಂಬ ಯಾಗದ ನಾಲ್ಕನೆಯ ದಿನದಲ್ಲಿ ವೈಶ್ವದೇವಶಸ್ತ್ರಮಂತ್ರಪಠನಮಾಡುವಾಗ ಋಭುದೇವತಾಕವಾದ ನಿವಿದ್ಧಾನಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತ್ರಸೂತ್ರದ **ತೃತೀಯಸ್ಯ** ಎಂಬ ಖಂಡದಲ್ಲಿ **ತತಂ ಮೇ ಅಪ ಇತಿ** ವೈಶ್ವದೇವಂ ಎಂಬ ಸೂತ್ರದಿಂದ ವಿಸ್ತೃತವಾಗಿರುವುದು (ಆ. ೭-೭).

---

॥ ಓಂ ॥

## ಸೂಕ್ತ—೧೧೦

ಮಂಡಲ—೧ ॥ ಅನುವಾಕ—೧೬ ॥ ಸೂಕ್ತ— ೧೧೦॥

ಅಷ್ಟಕ—೧ ॥ ಅಧ್ಯಾಯ—೭ ॥ ವರ್ಗ—೩೦, ೩೧॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥

॥ ಋಷಿಃ—ಕುತ್ಸ ಆಂಗಿರಸಃ ॥

॥ ದೇವತಾ— ಋಭವಃ ॥

॥ ಛಂದಃ—೧-೪, ೬-೮, ಜಗತೀ । ೫, ೯. ತ್ರಿಷ್ಟುಬ್ ॥

ಸಂಹಿತಾಪಾಠಃ

ತತಂ ಮೇ ಅಪಸ್ತದು ತಾಯತೇ ಪುನಃ ಸ್ವಾದಿಷ್ಠಾ ಧೀತಿರುಚಥಾಯ ಶಸ್ಯತೇ ।

ಅಯಂ ಸಮುದ್ರ ಇಹ ವಿಶ್ವದೇವ್ಯಃ ಸ್ವಾಹಾಕೃತಸ್ಯ ಸಮು
ತೃಪ್ಣುತ ಋಭವಃ ॥೧॥

। ಪದಪಾಠಃ ।

ತತಂ । ಮೇ । ಅಪಃ । ತತ್ । ಊಂ ಇತಿ । ತಾಯತೇ । ಪುನರಿತಿ । ಸ್ವಾದಿಷ್ಠಾ ।
ಧೀತಿಃ । ಉಚಥಾಯ । ಶಸ್ಯತೇ ।

ಅಯಂ । ಸಮುದ್ರಃ । ಇಹ । ವಿಶ್ವಽದೇವ್ಯಃ । ಸ್ವಾಹಾಽಕೃತಸ್ಯ । ಸಂ ।
ಊಂ ಇತಿ । ತೃಪ್ಣುತ । ಋಭವಃ ॥೧॥

ಸಾಯಣಭಾಷ್ಯಂ

ಹೇ ಋಭವೋ ಮೇ ಮದೀಯಮಪೋಽಗ್ನಿಷ್ಟೋಮಾದಿರೂಪಂ ಕರ್ಮ ತತಂ। ವಿಸ್ತಾರಿತಂ। ಬಹುಶಃ ಪೂರ್ವಮನುಷ್ಠಿತಂ । ತದು ತದೇವ ಪುನಸ್ತಾಯತೇ । ವಿಸ್ತಾರ್ಯತೇ ಅನುಷ್ಠೀಯತ ಇತ್ಯರ್ಥಃ । ತತ್ರ ಸ್ವಾದಿಷ್ಠಾ ಸ್ವಾದುತಮಾತಿಶಯೇನ ಪ್ರೀತಿಕರೀ ಧೀತಿಃ ಸ್ತುತಿಶ್ಚೋಚಥಾಯ ಸ್ತುತ್ಯಾಯ ಶಸ್ಯತೇ । ಪಠ್ಯತೇ । ಅಪಿ ಚೇಹಾಸ್ಮಿನ್ಯಾಗೇ ಸಮುದ್ರಃ ಸಮುಂದನಶೀಲೋಽಯಂ ಸೋಮರಸೋ ವಿಶ್ವದೇವ್ಯಃ ಸರ್ವೇಭ್ಯೋ ದೇವೇಭ್ಯಃ ಪರ್ಯಾಪ್ತೋ ಯಥಾ ಭವತಿ ತಥಾ ಸಂಪಾದಿತಃ । ತಸ್ಯ ಸ್ವಾಹಾಕೃತಸ್ಯ ಸ್ವಾಹಾಕಾರೇಣಾಗ್ನೌ ಪ್ರಕ್ಷಿಪ್ತಸ್ಯ ಸೋಮಸ್ಯ ಪಾನೇನ ಸಮು ತೃಪ್ಣುತ । ಸಮ್ಯಗೇವ ತೃಪ್ತಾ ಭವತ ॥
ತತಂ । ತನು ವಿಸ್ತಾರೇ । ನಿಷ್ಠಾಯಾಂ ಯಸ್ಯ ವಿಭಾಷೇತೀಟ್ಪ್ರತಿಷೇಧಃ । ಅನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ಅಪಃ । ಆಪ್ಲೃ ವ್ಯಾಪ್ತೌ । ಆಪಃ ಕರ್ಮಾಖ್ಯಾಯಾಂ ಹ್ರಸ್ವೋ ನುಟ್ಚ ವಾ । ಉ. ೪-೨೦೮ । ಇತ್ಯಸುನ್ ಧಾತೋರ್ಹ್ರಸ್ವಶ್ಚ । ತಾಯತೇ । ತನೋತೇರ್ಯಕಿ । ಪಾ. ೬-೪-೪೪ । ಇತ್ಯಾತ್ವಂ । ಸ್ವಾದಿಷ್ಠಾ । ಸ್ವಾದುಶಬ್ದಾದಾತಿಶಾಯನಿಕ ಇಷ್ಠನ್ । ಟೇರಿತಿ ಟಿಲೋಪಃ । ಉಚಥಾಯ । ವಚ ಪರಿಭಾಷಣೇ । ಔಣಾದಿಕೋಽಥಕ್ಪ್ರತ್ಯಯಃ । ವಚಿಸ್ವಪೀತ್ಯಾದಿನಾ ಸಂಪ್ರಸಾರಣಂ । ಸಮುದ್ರಃ । ಉಂದೀ ಕ್ಲೇದನೇ । ಸ್ಫಾಯಿತಂಚೀತ್ಯಾದಿನಾ ರಕ್ । ಅನಿದಿತಾಮಿತಿ ನಲೋಪಃ । ವಿಶ್ವದೇವ್ಯಃ । ದೇವಾರ್ಹೋ ಭಾಗೋ ದೇವ್ಯಃ । ಛಂದಸಿ ಚೇತಿ ಯಪ್ರತ್ಯಯಃ । ವಿಶ್ವೇ ಸರ್ವೇ ದೇವ್ಯಾ ಯಸ್ಮಿನ್ಸೋಮೇ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ವ್ಯತ್ಯಯೇನಾಸಂಜ್ಞಾಯಾಮಪಿ ಪೂರ್ವಪದಾಂತೋದಾತ್ತತ್ವಂ । ಸ್ವಾಹಕೃತಸ್ಯ । ಸ್ವಾಹಾಶಬ್ದಸ್ಯ ಊರ್ಯಾದಿತ್ವೇನ ಗತಿತ್ವಾತ್ । ಪಾ. ೧-೪-೬೧ । ಗತಿರನಂತರ ಇತಿ ಪೂರ್ವಪದಪ್ರಕೃತಿಸ್ವರತ್ವಂ । ತೃಪ್ಣುತ । ತೃಪ ಪ್ರೀಣನೇ । ಸ್ವಾದಿಭ್ಯಃ ಶ್ನುಃ । ಋಭವ ಇತ್ಯನೇನ ಸಂಹಿತಾಯಾಮೃತ್ಯಕ ಇತಿ ಪ್ರಕೃತಿಭಾವಃ ॥

ಪ್ರತಿಪದಾರ್ಥ

**ಋಭವಃ**—ಎಲೈ ಋಭುಗಳೇ | **ಮೇ**—ನನ್ನಿಂದ | **ಅಪಃ**—ಅಗ್ನಿಷ್ಟೋಮಾದಿ ಕರ್ಮವು | **ತತಂ**—(ಹಿಂದೆ) ವಿಸ್ತಾರವಾಗಿ ನೆರವೇರಿಸಲ್ಪಟ್ಟಿದೆ | **ತದು**—ಅದೇ ಕರ್ಮವೇ | **ಪುನಃ**—ತಿರುಗಿಯೂ | **ತಾಯತೇ**—ವಿಸ್ತರಿಸಿ ನೆರವೇರಿಸಲ್ಪಡುತ್ತದೆ | **ಸ್ವಾದಿಷ್ಠಾ**—ಅತ್ಯಂತ ಪ್ರೀತಿಕರವಾದ | **ಧೀತಿಃ**—ಸ್ತೋತ್ರವೂ ಕೂಡ | **ಉಚಥಾಯ**—ಕೀರ್ತನೆಗಾಗಿ | **ಶಸ್ಯತೇ**—ಪಠಿತವಾಗುತ್ತದೆ | **ಇಹ**—ಈ ಯಾಗದಲ್ಲಿ | **ಸಮುದ್ರಃ**—ಸ್ರವಿಸತಕ್ಕ **ಅಯಂ**—ಈ ಸೋಮರಸವು | **ವಿಶ್ವದೇವ್ಯಃ**—ಸಕಲ ದೇವತೆಗಳಿಗೂ ಪರ್ಯಾಪ್ತವಾಗು(ಸಾಕಾಗು)ವಷ್ಟು ಸಂಪಾದಿತವಾಗಿದೆ | **ಸ್ವಾಹಾಕೃತಸ್ಯ**—'ಸ್ವಾಹಾ' ಕಾರಪೂರ್ವಕವಾಗಿ ಅಗ್ನಿಯಲ್ಲಿ ಅರ್ಪಿತವಾದ ಈ ಸೋಮರಸದ(ಪಾನದಿಂದ) | **ಸಮು ತೃಪ್ಣುತ**—ಸಂಪೂರ್ಣವಾದ ತೃಪ್ತಿಯನ್ನು ಪಡೆಯಿರಿ.

ಭಾವಾರ್ಥ

ಎಲೈ ಋಭುಗಳೇ, ನಾನು ಅಗ್ನಿಷ್ಟೋಮಾದಿ ಕರ್ಮವನ್ನು ಹಿಂದೆ ವಿಸ್ತಾರವಾಗಿ ನೆರವೇರಿಸಿದ್ದೇನೆ. ಈಗಲೂ ಅದನ್ನೇ ತಿರುಗಿಯೂ ವಿಸ್ತಾರವಾಗಿ ನೆರವೇರಿಸುತ್ತೇನೆ. ಅದರ ಜೊತೆಯಲ್ಲಿ ಅತ್ಯಂತ ಪ್ರೀತಿಕರವಾದ ಸ್ತೋತ್ರವನ್ನೂ ಸಹ ಕೀರ್ತನೆಗಾಗಿ ಪಠಿಸುತ್ತೇನೆ. ಸ್ರವಿಸತಕ್ಕ ಸೋಮರಸವು ಈ ಯಾಗದಲ್ಲಿ ಸಕಲದೇವತೆಗಳಿಗೂ ಪರ್ಯಾಪ್ತವಾಗುವಷ್ಟು ಸಂಪಾದಿತವಾಗಿದೆ. "ಸ್ವಾಹಾ" ಕಾರಪೂರ್ವಕವಾಗಿ ಅಗ್ನಿಯಲ್ಲಿ ಅರ್ಪಿತವಾದ ಈ ಸೋಮರಸಪಾನದಿಂದ ಸಂಪೂರ್ಣವಾದ ತೃಪ್ತಿಯನ್ನು ಪಡೆಯಿರಿ.

English Translation

Ribhus, the rite formerly celebarated by me is again repeated, and the melodious hymn is recited in your praise ; in this ceremony, the Soma juice is sufficient for all the gods ; drink of it to your utmost content when offered on the fire

ವಿಶೇಷವಿಷಯಗಳು

**ಋಭವಃ—ಋಭುರ್ವಿಭ್ವಾ ವಾಜ ಇತಿ ಸುಧನ್ವನ ಆಂಗಿರಸಸ್ಯ ತ್ರಯಃ ಪುತ್ರಾ ಬಭೂವುಃ (ನಿ. ೧೧-೧೬) ತೇ ಅತಿಶಯವದ್ಭಿಃ ಕರ್ಮಭಿರ್ದೇವತ್ವಮೀಯುಃ | ತೇಽತ್ರ ಸಾಹಚರ್ಯಾದನ್ಯತಮವಚನೇನಾಪ್ಯೃಭುಶಬ್ದೇನ ಸರ್ವೇ ಪ್ರತಿಪಾದ್ಯಂತೇ | ತದ್ದೇವತ್ಯೇ ದ್ವೇ ಏತೇ ಸೂಕ್ತೇ** | ಋಭು, ವಿಭು, ವಾಜ ಎಂಬ ಹೆಸರಿನಿಂದ ಸುಧನ್ವ ಆಂಗಿರಸನಿಗೆ ಮೂವರು ಪುತ್ರರಿದ್ದರು. ಇವರು ಅತಿಶಯವಾಗಿ ಸತ್ಕರ್ಮಾಚರಣೆಯನ್ನು ಮಾಡಿ ದೇವತ್ವವನ್ನು ಪಡೆದರು. ಇಲ್ಲಿ ಸಾಹಚರ್ಯದಿಂದ ಹಿರಿಯವನ ಹೆಸರಿನಿಂದಲೇ ಈ ಮೂವರನ್ನೂ ಒಟ್ಟಿಗೆ ಸಂಬೋಧಿಸಿದೆ. ಇದು ಮತ್ತು ಮುಂದಿನ ಸೂಕ್ತ ಈ ಎರಡು ಸೂಕ್ತಗಳೂ ಈ ದೇವತೆಗಳನ್ನು ಉದ್ದೇಶಿಸಿದೆಯೆಂದು ಸ್ಕಂದಸ್ವಾಮಿಗಳು ತಮ್ಮ ಭಾಷ್ಯದ ಪೀಠಿಕೆಯಲ್ಲಿ ತಿಳಿಸಿದ್ದಾರೆ. (ಇವರ ವಿಷಯವಾಗಿ ವಿವರವನ್ನು ಮುಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ನೋಡಬಹುದು).

**ಅಪಃ**—**ಅಗ್ನಿಷ್ಟೋಮಾದಿರೂಪಂ ಕರ್ಮ** । ಅಪಃ ಎಂಬ ಶಬ್ದವು ಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧) ಅಗ್ನಿಷ್ಟೋಮಾದಿರೂಪವಾದ ಕರ್ಮವೆಂದರ್ಥ.

**ಪುನಃ ತಾಂಯುತೇ**—ಹಿಂದೆ ಅನೇಕಸಲ ನೆರವೇರಿಸಿದ ಆ ಕರ್ಮಗಳೇ ಪುನಃ ಈಗಲೂ ಸಹ ವಿಸ್ತರಿಸಿ ನೆರವೇರಿಸಲ್ಪಡುತ್ತವೆ.

**ಉಚಥಾಯ**—**ಸ್ತುತ್ಯಾಯ** । ಸ್ತುತಿಗಾಗಿ.

**ಸಮುದ್ರಃ**—**ಸಮುಂದನಶೀಲಃ ಅಯಂ** । ಸ್ರವಿಸತಕ್ಕ ಸ್ವಭಾವವುಳ್ಳ ಸೋಮರಸವೆಂದು ಸಾಯಣರೂ **ಸಮುದ್ರಸದೃಶಃ ಅತ್ಯಂತ ಪ್ರಭೂತಃ ಸೋಮಃ** ಅತ್ಯಂತ ಪ್ರಭೂತವಾಗಿಯೂ ಆದುದರಿಂದಲೇ ಸಮುದ್ರಸದೃಶವಾಗಿಯೂ ಇರತಕ್ಕ ಸೋಮರಸವೆಂದು ಸ್ಕಂದಸ್ವಾಮಿಗಳೂ ಸಮುದ್ರ ಶಬ್ದಕ್ಕೆ ಅರ್ಥಮಾಡಿದ್ದಾರೆ. **ಸಮುದ್ರ** ಶಬ್ದವು ಋಕ್ಸಂಹಿತೆಯಲ್ಲಿ ಬೇರೆ ಬೇರೆ ಅರ್ಥಗಳಲ್ಲಿ ಪ್ರಯೋಗಿಸಲ್ಪಟ್ಟಿರುವುದರಿಂದ ನಿರುಕ್ತಕಾರರು **ಸಮುದ್ರ** ಶಬ್ದವನ್ನು ಅಂತರಿಕ್ಷ ನಾಮಗಳಲ್ಲಿ ಸೇರಿಸಿರುವರು (ನಿ. ೨-೧೦). ಅನಂತರ ಪಾರ್ಥಿವವಾದ **ಸಮುದ್ರಕ್ಕೂ** ಅಂತರಿಕ್ಷಪರ್ಯಾಯವಾದ **ಸಮುದ್ರಕ್ಕೂ** ವ್ಯತ್ಯಾಸವನ್ನು ತೋರಿಸಿದ್ದಾರೆ. ಇವೆರಡಕ್ಕೂ ವ್ಯತ್ಯಾಸವನ್ನು ತಿಳಿಯದೇ ಸಂದೇಹಕ್ಕವಕಾಶವನ್ನು ಕೊಡುವಂತೆ ಅರ್ಥಮಾಡುವವರನ್ನು ಕುರಿತು,

**ತತ್ರ ಸಮುದ್ರ ಇತ್ಯೇತತ್ಪಾರ್ಥಿವೇನ ಸಮುದ್ರೇಣ ಸಂದಿಹ್ಯತೇ** । ಅಂತರಿಕ್ಷ ಪರ್ಯಾಯವಾದ ಸಮುದ್ರವನ್ನು ಅನೇಕರು ಪಾರ್ಥಿವಸಮುದ್ರವೆಂದು ಭ್ರಮಿಸಿ ಅರ್ಥಮಾಡುತ್ತಾರೆ. (ಅದು ಸರಿಯಲ್ಲ) ಎಂದು ಸಮುದ್ರ ಶಬ್ದಕ್ಕೆ ನಿರ್ವಚನವನ್ನು ತೋರಿಸಿದ್ದಾರೆ.

**ಸಮುದ್ರಃ ಕಸ್ಮಾತ್ಸಮುದ್ದ್ರವಂತ್ಯಸ್ಮಾದಾಪಃ ಸಮಭಿದ್ರವಂತ್ಯೇನಮಾಪಃ ಸಂಮೋದಂತೇಽಸ್ಮಿನ್ ಭೂತಾನಿ ಸಮುದಕೋ ಭವತಿ ಸಮುನತ್ತೀತಿ ವಾ । (ನಿ. ೨-೧೦)**

ಮೊದಲನೆಯದಾಗಿ ಚಲಿಸು ಎಂದರ್ಥವನ್ನು ಕೊಡುವ **ದ್ರು** ಧಾತುವಿನೊಡನೆ **ಸಮ್**, **ಉದ್** ಎರಡು ಉಪಸರ್ಗಗಳೂ ಸೇರಿಕೊಂಡು ಮೇಲಕ್ಕೆ ಉಕ್ಕಿ ಹರಿಯುತ್ತವೆ ಎಂದು ತಾತ್ಪರ್ಯವನ್ನು ಕೊಡುತ್ತವೆಯಾದ್ದರಿಂದಲೂ, ಅಥವಾ ಎರಡನೆಯದಾಗಿ ಅದೇ **ದ್ರು** ಧಾತುವಿನೊಡನೆ **ಸಮ್**, **ಅಭಿ** ಎಂಬ ಉಪಸರ್ಗಗಳು ಸೇರಿಕೊಂಡು (ನದಿಯ) ನೀರುಗಳು ಇದರಕಡೆಗೆ ಹರಿದುಬರುತ್ತವೆಯೆಂಬ ಅರ್ಥವನ್ನು ಕೊಡುವುದರಿಂದಲಾಗಲಿ, ಅಥವಾ **ಸಂತೋಷಪಡು** ಎಂದರ್ಥವನ್ನು ಕೊಡುವ **ಮುದ್** ಧಾತುವಿನೊಡನೆ **ಸಮ್** ಎಂಬ ಉಪಸರ್ಗವು ಸೇರಿ ಜಲಚರ ಪ್ರಾಣಿಗಳು ಇದರಲ್ಲಿ ಹರ್ಷವನ್ನನುಭವಿಸುತ್ತವೆ ಎಂಬರ್ಥವನ್ನು ಕೊಡುವುದರಿಂದಲಾಗಲಿ, ಅಥವಾ ಉದಕಕ್ಕೆ ನಿಧಿಯಾಗಿರುವುದರಿಂದಲಾಗಲಿ ಅಥವಾ **ತೇವಮಾಡು** ಎಂದರ್ಥವನ್ನು ಕೊಡುವ **ಉದ್** ಧಾತುವಿನೊಡನೆ **ಸಮ್** ಉಪಸರ್ಗವು ಸೇರಿ ನೆನೆಯಿಸು ಎಂದು ತಾತ್ಪರ್ಯವನ್ನು ಕೊಡುವುದರಿಂದಲಾಗಲಿ, **ಸಮುದ್ರ**ವೆಂಬ ಪದವು ನಿಷ್ಪನ್ನವಾಗಿದೆಯೆಂದು ಆ ಪದದ ನಿರ್ವಚನವನ್ನು ತೋರಿಸಿದ್ದಾರೆ (ನಿ. ೨-೧೦). ಈ ಸಂದರ್ಭದಲ್ಲಿ ಅಂತರಿಕ್ಷ ಪರ್ಯಾಯವಾದ ಸಮುದ್ರ ಶಬ್ದಕ್ಕೂ ಪಾರ್ಥಿವವಾದ ಸಮುದ್ರಕ್ಕೂ ವ್ಯತ್ಯಾಸವನ್ನು ತೋರಿಸುವುದಕ್ಕೆ ಒಂದು ಇತಿಹಾಸವನ್ನು ಉದಹರಿಸಿದ್ದಾರೆ.

ತಯೋರ್ವಿಭಾಗಸ್ತತ್ರೇತಿಹಾಸಮಾಚಕ್ಷತೇ । ದೇವಾಪಿಶ್ಚಾರ್ಷ್ಟಿಷೇಣಃ ಶಂತನುಶ್ಚ ಕೌರವ್ಯೌ ಭ್ರಾತರೌ ಬಭೂವತುಃ । ಸ ಶಂತನುಃ ಕನೀಯಾನಭಿಷೇಚಯಾಂಚಕ್ರೇ । ದೇವಾಪಿಸ್ತಪಃ ಪ್ರತಿಪೇದೇ । ತತಃ ಶಂತನೋ ರಾಜ್ಯೇ ದ್ವಾದಶ ವರ್ಷಾಣಿ ದೇವೋ ನ ವವರ್ಷ । ತಮೂಚುರ್ಬ್ರಾಹ್ಮಣಾ ಅಧರ್ಮಸ್ತ್ವಯಾ ಚರಿತೋ ಜ್ಯೇಷ್ಠಂ ಭ್ರಾತರಮಂತರಿತ್ಯಾಭಿಷೇಚಿತಂ ತಸ್ಮಾತ್ತೇ ದೇವೋ ನ ವರ್ಷತೀತಿ । ಸ ಶಂತನುರ್ದೇವಾಪಿಂ ಶಿಶಿಕ್ಷ ರಾಜ್ಯೇನ । ತಮುವಾಚ ದೇವಾಪಿಃ ಪುರೋಹಿತಸ್ತೇಽಸಾನಿ ಯಾಜಯಾನಿ ಚ ತ್ವೇತಿ ತಸ್ಯೈತದ್ವರ್ಷಕಾಮಸೂಕ್ತಂ ತಸ್ಯೈಷಾ ಭವತಿ ॥

ಕುರುವಂಶಸ್ಥರೂ, ಋಷ್ಟಿಷೇಣ ಪುತ್ರರೂ ಆದ **ದೇವಾಪಿ** ಮತ್ತು **ಶಂತನು** ಎಂಬಿಬ್ಬರಲ್ಲಿ ಚಿಕ್ಕವನಾದ ಶಂತನುವು ತಾನೇ ಪಟ್ಟಾಭಿಷಿಕ್ತನಾಗಿ ಆ ರಾಜ್ಯಕ್ಕೆ ದೊರೆಯಾದನು. ದೇವಾಪಿಯು ತಪಶ್ಚರಣೆಗಾಗಿ ಕಾಡಿಗೆ ಹೊರಟು ಹೋದನು. ಅಲ್ಲಿಂದ ಮೊದಲು ಹನ್ನೆರಡು ವರ್ಷಗಳಕಾಲ ಶಂತನುವಿನ ರಾಜ್ಯದಲ್ಲಿ ಮಳೆಯಾಗಲಿಲ್ಲ. ಆಗ ಬ್ರಾಹ್ಮಣರು ಶಂತನುವನ್ನು ಕುರಿತು, ನೀನು ದೊಡ್ಡವನಾದ ನಿಮ್ಮಣ್ಣನನ್ನು ಕಾಡಿಗೆ ಕಳುಹಿಸಿ ನೀನೇ ದೊರೆಯಾಗಿರುವುದರಿಂದ ನೀನು ಪಾಪಕೃತ್ಯವನ್ನು ಮಾಡಿದಂತಾಯಿತು. ಆದುದರಿಂದ ವೃಷ್ಟಿದೇವನು ನಿನ್ನ ರಾಜ್ಯದಲ್ಲಿ ಮಳೆಯನ್ನು ಸುರಿಸಿಲ್ಲ ಎಂದರು. ಆಗ ಶಂತನುವು ದೇವಾಪಿಯನ್ನು ರಾಜ್ಯಾಭಿಷಿಕ್ತನನ್ನಾಗಿಮಾಡಲು ಪ್ರಯತ್ನಿಸಿದಾಗ ದೇವಾಪಿಯು ನಾನು ನಿನಗೆ ಪುರೋಹಿತನಾಗಿದ್ದುಕೊಂಡು ನಿನಗಾಗಿ ಯಜ್ಞವನ್ನು ನೆರವೇರಿಸುತ್ತೇನೆ ಎಂದು ವೃಷ್ಟ್ಯರ್ಥವಾಗಿ ಯಜ್ಞವನ್ನು ಮಾಡಿಸಿದನು. ಅನಂತರ ಊರ್ಧ್ವಭಾಗದಲ್ಲಿರುವ **ಸಮುದ್ರದಿಂದ** ಅಧೋಭಾಗದಲ್ಲಿರುವ **ಸಮುದ್ರಕ್ಕೆ** ಮಳೆಯು ಸುರಿಯಿತು ಎಂದು ಎರಡು ಸಮುದ್ರಗಳಿಗೂ ವ್ಯತ್ಯಾಸವನ್ನು ತೋರಿಸುವ,

**ಆರ್ಷ್ಟಿಷೇಣೋ ಹೋತ್ರಮೃಷಿರ್ನಿಷೀದನ್ ದೇವಾಪಿರ್ದೇವಸುಮತಿಂ ಚಿಕಿತ್ವಾನ್ ।**
**ಸ ಉತ್ತರಸ್ಮಾದಧರಂ ಸಮುದ್ರಮಪೋ ದಿವ್ಯಾ ಅಸೃಜದ್ವರ್ಷ್ಯಾ ಅಭಿ ।**
(ಋ. ಸಂ. ೧೦-೯೮-೫)

ಈ ಋಕ್ಕನ್ನು ಉದಹರಿಸಿ ಇಲ್ಲಿರುವ **ಉತ್ತರಸಮುದ್ರಕ್ಕೂ** **ಅಧರಸಮುದ್ರಕ್ಕೂ** ವ್ಯತ್ಯಾಸವನ್ನು ತೋರಿಸಿದ್ದಾರೆ. ಇಲ್ಲಿ **ಉತ್ತರಸಮುದ್ರ**ವೆಂದರೆ ಅಂತರಿಕ್ಷವೆಂದೂ, **ಅಧರಸಮುದ್ರ**ವೆಂದರೆ ಪ್ರಾರ್ಥಿವಸಮುದ್ರವೆಂದೂ ಅರ್ಥ. ಋಕ್ಸಂಹಿತೆಯಲ್ಲಿ **ಸಮುದ್ರ**ಶಬ್ದಕ್ಕೆ ಕೆಲವೆಡೆಗಳಲ್ಲಿ ನಿಷ್ಕರ್ಷವಾಗಿ ಪಾರ್ಥಿವಸಮುದ್ರವೆಂದೇ ಹೇಳಬಹುದು. ಆದರೆ,

**ಯಥಾ ವಾತೋ ಯಥಾ ವನಂ ಯಥಾ ಸಮುದ್ರ ಏಜತಿ ।**
(ಋ. ಸಂ. ೫-೭೮-೮)

ಇತ್ಯಾದಿ ಋಕ್ಕುಗಳಲ್ಲಿ **ಅಂತರಿಕ್ಷ** ಪರ್ಯಾಯವೇ ಅಥವಾ **ಪಾರ್ಥಿವ** ಸಮುದ್ರವೇ ಎಂದು ಹೇಳಲು ಕಷ್ಟವಾಗುವುದು.

**ಅಗ್ನಿಂ ವಿಶ್ವಾ ಅಭಿ ಪೃಕ್ಷಃ ಸಚಂತೇ ಸಮುದ್ರಂ ನ ಸ್ರವತಃ ಸಪ್ತ ಯಹ್ವೀಃ ।**
(ಋ. ಸಂ. ೧-೭೧-೭)

**ಸಂ ಯಂ ಸ್ತುಭೋಽವನಯೋ ನ ಯಂತಿ ಸಮುದ್ರಂ ನ ಸ್ರವತೋ ರೋಧಚಕ್ರಾಃ ।**
(ಋ. ಸಂ. ೧-೧೯೦-೭)

**ಯಾ ಆಪೋ ದಿವ್ಯಾ ಉತ ವಾ ಸ್ರವಂತಿ ಖನಿತ್ರಿಮಾ ಉತ ವಾ ಯಾಃ ಸ್ವಯಂಜಾಃ ।**
**ಸಮುದ್ರಾರ್ಥಾ ಯಾಃ ಶುಚಯಃ ಪಾವಕಾಸ್ತಾ ಆಪೋ ದೇವೀರಿಹ ಮಾಮವಂತು ।**

(ಋ. ಸಂ. ೭-೪೯-೨)

ಇತ್ಯಾದಿ ನಾನಾ ಋಕ್ಕುಗಳಲ್ಲಿ ಪಾರ್ಥಿವಸಮುದ್ರವೆಂದು ನಿಸ್ಸಂಶಯವಾಗಿ ಹೇಳಬಹುದು. ಕೆಲವು ಕಡೆಗಳಲ್ಲಿ ಈ ಪದವು ವಿಶೇಷಣವಾಗಿ ಉಪಯೋಗಿಸಲ್ಪಟ್ಟು **ಸ್ರವಿಸತಕ್ಕ** ಎಂಬರ್ಥವನ್ನು ಕೊಡುತ್ತದೆ.

**ಅದ್ಭಿರ್ಯಾತಿ ವರುಣಃ ಸಮುದ್ರೈರ್ಯುಷ್ಮಾँ ಇಚ್ಛಂತಃ ಶವಸೋ ನಪಾತಃ ।**

(ಋ. ಸಂ. ೧-೧೬೧-೧೪)

ಎಂಬ ಋಕ್ಕಿನಲ್ಲಿ **ಸಮುದ್ರೈಃ ಸಮುಂದನಸ್ವಭಾವೈಃ ಅದ್ಭಿಃ** ಸ್ರವಿಸತಕ್ಕ ಸ್ವಭಾವವುಳ್ಳ ಉದಕಗಳೊಡನೆ ಎಂದರ್ಥ. ಹೀಗೆಯೇ ಸಂದರ್ಭಾನುಸಾರವಾಗಿ ಅರ್ಥಮಾಡಬೇಕು. ಪ್ರಕೃತವಾದ ಋಕ್ಕಿನಲ್ಲಿ **ಸಮುಂದನಶೀಲಃ ಸೋಮಃ** ಎಂದಾದರೂ ಆಗಬಹುದು. ಅಥವಾ ಸ್ಕಂದಸ್ವಾಮಿಗಳು ಹೇಳುವಂತೆ **ಸಮುದ್ರಸದೃಶಃ ಅತ್ಯಂತ ಪ್ರಭೂತಃ ಸೋಮಃ** ಎಂದಾದರೂ ಅರ್ಥವಾಗಬಹುದು.

**ಧೀತಿಃ--ಧೀಕರ್ಮತ್ವಾತ್ ಸ್ತುತಿರತ್ರ ಧೀತಿರುಚ್ಯತೇ ।** ಬುದ್ಧಿ ನಿರ್ಮಿತವಾದ್ದರಿಂದ ಸ್ತುತಿಯೆಂದರ್ಥವೆಂದು ಸ್ಕಂದಸ್ವಾಮಿಗಳು ವಿವರಿಸಿದ್ದಾರೆ

ವ್ಯಾಕರಣಪ್ರಕ್ರಿಯಾ

**ತತಮ್**—ತನು ವಿಸ್ತಾರೇ. ಧಾತು. ಇದಕ್ಕೆ **ನಿಷ್ಠಾ**—(ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. **ಯಸ್ಯ ವಿಭಾಷಾ**—(೭-೨-೧೫) ಎಂಬುದರಿಂದ ಇಡಾಗಮ ನಿಷೇಧ. **ಅನುದಾತ್ತೋಪದೇಶವನತಿ**—(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಅನುನಾಸಿಕವಾದ ನಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಪಃ**—ಆಪ್ಲೃ ವ್ಯಾಪ್ತೌ. ಧಾತು. **ಆಪಃ ಕರ್ಮಾಖ್ಯಾಯಾಂ ಹ್ರಸ್ವೋ ನುಟ್ ಚ ವಾ** (ಉ. ಸೂ. ೪-೬೪೭) ಎಂಬುದರಿಂದ ಅಸುನ್ ಪ್ರತ್ಯಯ. ತತ್ಸನ್ನಿಯೋಗದಿಂದ ಧಾತುವಿಗೆ ಹ್ರಸ್ವ. **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ತಾಯತೇ**—ತನು ವಿಸ್ತಾರೇ. ಧಾತು. ಕರ್ಮಣಿ ಲಟ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. ಟಿಗೆ ಏತ್ವ. **ಸಾರ್ವಧಾತುಕೇಯಕ್**—(ಪಾ. ಸೂ. ೩-೧-೬೭) ಎಂಬುದರಿಂದ ಯಕ್. ಯಕ್ ಪರವಾದಾಗ **ತನೋತೇರ್ಯಕಿ**—(ಪಾ. ಸೂ. ೬-೪-೪೪) ಎಂಬುದರಿಂದ ಧಾತುವಿಗೆ ಆತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸ್ವಾದಿಷ್ಠಾ**—ಸ್ವಾದು ಶಬ್ದದ ಮೇಲೆ ಅತಿಶಯಾರ್ಥದಲ್ಲಿ **ಅತಿಶಾಯನೇ ತಮಬಿಷ್ಠನೌ**--(ಪಾ. ಸೂ. ೫-೩-೫೫) ಎಂಬುದರಿಂದ ಇಷ್ಠನ್ ಪ್ರತ್ಯಯ. ಇದು ಪರವಾದಾಗ ಟೇಃ—ಎಂಬುದರಿಂದ ಪ್ರಾತಿಪದಿಕದ (ಉ)

ಟಿಗೆ ಲೋಪ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ಅಜಾದ್ಯತಷ್ಟಾಪ್** — ಎಂಬುದರಿಂದ ಟಾಪ್.

**ಉಚಥಾಯ**— ವಚ ಪರಿಭಾಷಣೇ. ಧಾತು. ಇದಕ್ಕೆ ಔಣಾದಿಕವಾದ ಅಥಕ್ ಪ್ರತ್ಯಯ. ಕಿತ್ತಾದುದರಿಂದ ಇದನ್ನು ನಿಮಿತ್ತೀಕರಿಸಿ **ವಚಿಸ್ವಪಿಯಜಾದೀನಾಂ**—(ಪಾ. ಸೂ. ೬-೧-೧೫) ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಪೂರ್ವರೂಪ. ಚತುರ್ಥೀ ಏಕವಚನಾಂತರೂಪ.

**ಸಮುದ್ರಃ**— ಉನ್ದೀ ಕ್ಲೇದನೇ ಧಾತು. **ಸ್ಫಾಯಿತಞ್ಚಿವಂಚಿಶಕಿ**—(ಉ. ಸೂ. ೨-೧೭೦) ಎಂಬುದರಿಂದ ಇದಕ್ಕೆ ರಕ್ ಪ್ರತ್ಯಯ. ಕಿತ್ತಾದುದರಿಂದ ಇದನ್ನು ನಿಮಿತ್ತೀಕರಿಸಿ **ಅನಿದಿತಾಂ ಹಲ**—(ಪಾ. ಸೂ. ೬-೪-೨೪) ಎಂಬುದರಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. ಸಮ್ ಉಪಸರ್ಗ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ವಿಶ್ವದೇವ್ಯಃ**— ದೇವಾಹರ್ೋ ಭಾಗಃ ದೇವ್ಯಃ. **ಛಂದಸಿ ಚ**—(ಪಾ. ಸೂ. ೫-೧-೬೭) ಎಂಬುದರಿಂದ ಅರ್ಹಾರ್ಥದಲ್ಲಿ ಯ ಪ್ರತ್ಯಯ. ವಿಶ್ವೇ ಸರ್ವೇ ದೇವ್ಯಾ ದೇವಾರ್ಹಭಾಗಾ ಯಸ್ಮಿನ್ ಸೋಮೇ ವಿಶ್ವದೇವ್ಯಃ **ಬಹುವ್ರೀಹೌ ವಿಶ್ವಂ ಸಂಜ್ಞಾಯಾಮ್**—(ಪಾ. ಸೂ. ೬-೨-೧೦೬) ಎಂಬುದರಿಂದ ಇಲ್ಲಿ ಸಂಜ್ಞಾ ತೋರದಿದ್ದರೂ ವ್ಯತ್ಯಯದಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ.

**ಸ್ವಾಹಾಕೃತಸ್ಯ**— ಸ್ವಾಹಾಕಾರೇಣ ಪ್ರಕ್ಷಿಪ್ತಃ ಸ್ವಾಹಾಕೃತಃ ತಸ್ಯ. ಸ್ವಾಹಾಶಬ್ದವು ಊರ್ಯಾದಿಯಲ್ಲಿ ಪಠಿತವಾದುದರಿಂದ **ಊರ್ಯಾದಿಚ್ವಿಡಾಚಶ್ಚ**—(ಪಾ. ಸೂ. ೧-೪-೬೧) ಎಂಬುದರಿಂದ ಗತಿಸಂಜ್ಞೆಯನ್ನು ಹೊಂದುತ್ತದೆ. ಆಗ ಅದರೊಡನೆ ಸಮಾಸಮಾಡಿದಾಗ **ಗತಿರನಂತರಃ**—(ಪಾ. ಸೂ. ೬-೨-೪೯) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ತೃಪ್ಣುತ**— ತೃಪ ಪ್ರೀಣನೇ. ಧಾತು. ಸ್ವಾದಿ. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ಲಜ್ವದ್ಭಾವವಿರುವುದರಿಂದ ಥಪ್ರತ್ಯಯಕ್ಕೆ ತಾದೇಶ. **ಸ್ವಾದಿಭ್ಯಃ ಶ್ನುಃ**—(ಪಾ. ಸೂ. ೩-೧-೭೩) ಎಂಬುದರಿಂದ ಶ್ನು ವಿಕರಣ. **ಸಾರ್ವಧಾತುಕಮಪಿತ್**— ಸೂತ್ರದಿಂದ ಅದಕ್ಕೆ ಙಿತ್ವಾತಿದೇಶ ಬರುವುದರಿಂದ ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಋಕಾರನಿಮಿತ್ತವಿರುವುದರಿಂದ ಣತ್ವ. ಅತಿಙಂತದ ಪರದಲ್ಲಿ ಬಂದುದರಿಂದ ತಿಙಂತನಿಘಾತಸ್ವರ ಬರುತ್ತದೆ. ತೃಪ್ಣುತ+ಋಭವಃ ಎಂದಿರುವಾಗ **ಋತ್ಯಕಃ**—(ಪಾ. ಸೂ ೬-೧-೧೨೮) ಎಂಬ ಸೂತ್ರದಿಂದ ಪ್ರಕೃತಿಭಾವ ಬರುತ್ತದೆ. ॥ ೧ ॥

——— :0: ———

। ಸಂಹಿತಾಪಾಠಃ ।

ಆಭೋಗಯಂ ಪ್ರ ಯದಿಚ್ಛಂತ ಐತನಾಪಾಕಾಃ ಪ್ರಾಂಚೋ ಮಮ ಕೇ ಚಿದಾಪಯಃ ।
ಸೌಧನ್ವನಾಸಶ್ಚರಿತಸ್ಯ ಭೂಮನಾಗಚ್ಛತ ಸವಿತುರ್ದಾಶುಷೋ ಗೃಹಂ ॥ ೨ ॥

ಪದಪಾಠಃ

ಆಽಭೋಗಯಂ । ಪ್ರ । ಯತ್ । ಇಚ್ಛಂತಃ । ಐತನ । ಅಪಾಕಾಃ । ಪ್ರಾಂಚಃ । ಮಮ । ಕೇ । ಚಿತ್ । ಆಪಯಃ ।
ಸೌಧನ್ವನಾಸಃ । ಚರಿತಸ್ಯ । ಭೂಮನಾ । ಅಗಚ್ಛತ । ಸವಿತುಃ । ದಾಶುಷಃ । ಗೃಹಂ ॥ ೨ ॥

ಸಾಯಣಭಾಷ್ಯಂ

ಹೇ ಋಭವೋಽಪಾಕಾಃ ಪರಿಪಕ್ವಜ್ಞಾನಾಃ ಪ್ರಾಂಚಃ ಪೂರ್ವಕಾಲೀನಾ ಮಮಾಪಯಃ ಪ್ರಾಪಯಿತಾರೋ ಮದೀಯಾ ಜ್ಞಾತಯಃ ಕೇ ಚಿತ್ ಏವಂಭೂತಾ ಯೇ ಕೇಚನ ಯೂಯಮಾಭೋಗಯಮುಪಭೋಗ್ಯಂ ಸೋಮಮಿಚ್ಛಂತೋ ಯದ್ಯದಾ ಪ್ರೈತನ ತಪಶ್ಚರಿತುಮರಣ್ಯಂ ಗತವಂತಃ । ಋಭವೋ ಹಿ ಸುಧನ್ವನ ಆಂಗಿರಸಸ್ಯ ಪುತ್ರಾಃ । ತದುಕ್ತಂ ಯಾಸ್ಕೇನ । ಋಭುರ್ವಿಭ್ವಾ ವಾಜ ಇತಿ ಸುಧನ್ವನ ಆಂಗಿರಸಸ್ಯ ತ್ರಯಃ ಪುತ್ರಾ ಬಭೂವುಃ । ನಿ. ೧೧-೧೬ । ಇತಿ । ಕುತ್ಸೋಽಪ್ಯಾಂಗಿರಸಃ । ಅತಸ್ತೇನ ಮದೀಯಾ ಜ್ಞಾತಯ ಇತ್ಯುಕ್ತಂ । ಹೇ ಸೌಧನ್ವನಾಸಃ ಸುಧನ್ವನಃ ಪುತ್ರಾಃ । ತದಾನೀಂ ಚರಿತಸ್ಯ ಸಮುಪಾರ್ಜಿತಸ್ಯ ತಪಸೋ ಭೂಮನಾ ಭೂಮ್ನಾ ಬಹುತ್ವೇನ ದಾಶುಷೋ ಹವೀಂಷಿ ದತ್ತವತಃ ಸವಿತುಃ ಸೋಮಾಭಿಷವಂ ಕುರ್ವತೋ ಯಜಮಾನಸ್ಯ ಸಂಬಂಧಿ ಯಜ್ಞಗೃಹಮಗಚ್ಛತ । ತಪಸಾ ಲಬ್ಧಸೋಮಾಃ ಸಂತಃ ಕೃತಪಾನಾ ಯೂಯಂ ಗತವಂತಃ । ಯದ್ವಾ । ದಾಶುಷಃ ಪ್ರಾತಃಸವನಾದಿಷ್ವಗ್ನ್ಯಾದಿಭಿರಪಾನಿತೇಭ್ಯ ಋಭುಭ್ಯಃ ಸೋಮಪಾನಂ ದತ್ತವತಃ ಸವಿತುರ್ಗೃಹಂ ನಿವಾಸಸ್ಥಾನಂ ತೃತೀಯ

ಸವನಾಖ್ಯಮುಗಚ್ಛತ । ಪ್ರಾಪ್ತಾಃ । ಏತತ್ಸರ್ವಮಾರ್ಭವಂ ಶಂಸತೀತ್ಯಾದೌ ಐ. ಬ್ರಾ. ೩-೩೦ ವಿಸ್ಪಷ್ಟ-ಮಾಮ್ನಾತಂ ॥ ಆಭೋಗಯಂ । ಆ ಸಮಂತಾದ್ಭೋಗ ಆಭೋಗಃ । ತದರ್ಹ ಆಭೋಗಯಃ । ಛಂದಸಿ ಚೇತಿ ಯಃ । ಯಸ್ಯೇತಿ ಲೋಪಾಭಾವಶ್ಛಾಂದಸಃ । ವ್ಯತ್ಯಯೇನ ಪ್ರತ್ಯಯಾತ್ಪೂರ್ವಸ್ಯೋ-ದಾತ್ತತ್ವಂ । ಯದ್ವಾ । ಅಜ್ಪೂರ್ವಾದ್ಭುಜೇರೌಣಾದಿಕಃ ಕರ್ಮಣಿ ಇಪ್ರತ್ಯಯಃ ಕುತ್ವಂ ಚ । ಅಮಿ ವ್ಯತ್ಯಯೇನ ಗುಣಃ । ಐತನ । ಇಣ್ ಗತೌ । ಲಙಿ ಮಧ್ಯಮಬಹುವಚನಸ್ಯ ಥಸ್ಯ ತಾದೇಶಃ । ತಪ್ತನ-ಪ್ತನಥನಾಶ್ಚೇತಿ ತಸ್ಯ ತನಬಾದೇಶಃ । ಆಡಾಗಮೋ ವೃದ್ಧಿಶ್ಚ । ಆಪಯಃ । ಆಪ್ನೋತೇರೌಣಾದಿಕ ಇಪ್ರತ್ಯಯಃ । ಭೂಮನಾ । ಬಹುಶಬ್ದಾತ್ಪೃಥ್ವಾದಿಲಕ್ಷಣ ಇಮನಿಚ್ । ಬಹೋರ್ಲೋಪೋ ಭೂ ಚ ಬಹೋರಿತೀಕಾರಲೋಪೋ ಬಹೋರ್ಭೂಭಾವಶ್ಚ । ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದಲೋಪಾ-ಭಾವಃ ॥

॥ ಪ್ರತಿಪದಾರ್ಥ ॥

( ಎಲೈ ಋಭುಗಳೇ ) **ಅಪಾಕಾಃ**— ಪರಿಪಕ್ವವಾದ ಜ್ಞಾನವುಳ್ಳವರೂ ! **ಪ್ರಾಂಚಃ**— ಪ್ರಾಚೀನರೂ । **ಮಮ**—ನನ್ನ । **ಆಪಯಃ**—ಜ್ಞಾತಿಗಳೂ ಆದ । **ಕೇಚಿತ್**—ನೀವು ಕೆಲವರು । **ಆಭೋಗ್ಯಂ**—ಉಪಭೋಗಕ್ಕೆ ಯೋಗ್ಯವಾದ (ಸೋಮರಸವನ್ನು) **ಇಚ್ಛಂತಃ**—ಅಪೇಕ್ಷಿಸಿ । **ಯತ್**— ಯಾವಾಗ । **ಪ್ರಐತನ**—(ತಪಶ್ಚರಣೆಗಾಗಿ) ಅರಣ್ಯಕ್ಕೆ ಹೋದಿರೋ (ಆಗ) ।**ಸೌಧನ್ವನಾಸಃ**—ಎಲೈ ಸುಧನ್ವನ ಪುತ್ರರಾದ ಋಭುಗಳೇ । **ಚರಿತಸ್ಯ**—(ನೀವು) ಆಚರಿಸಿದ ತಪಸ್ಸಿನ । **ಭೂಮನಾ**—ಆಧಿಕ್ಯದಿಂದ । **ದಾಶುಷಃ**—ಹವಿಸ್ಸನ್ನು ಅರ್ಪಿಸುವವನೂ, (ಮತ್ತು) । **ಸವಿತುಃ**—ಸೋಮರಸವನ್ನು ಹಿಂಡುವವನೂ ಆದ । **ಗೃಹಂ**—(ಯಜಮಾನನ)ಯಜ್ಞಗೃಹಕ್ಕೆ **ಅಗಚ್ಛತ**—ಹೋದಿರಿ (ಮತ್ತು ನಿಮ್ಮ ತಪಸ್ಸಿನ ಪ್ರಭಾವದಿಂದ ಸೋಮರಸವನ್ನು ಪಾನಮಾಡಿದಿರಿ) [ **ಅಥವಾ ದಾಶುಷಃ**—(ಪ್ರಾತಸ್ಸವನಾದಿಗಳಲ್ಲಿ ಅಗ್ನ್ಯಾದಿಗಳಿಂದ ದೂರವಾಗಿ ತಳ್ಳಲ್ಪಟ್ಟ ಋಭುಗಳಿಗೆ) ಸೋಮರಸವನ್ನು ಅರ್ಪಿಸಿದ । **ಸವಿತುಃ**—ಸವಿತೃವಿನ । **ಗೃಹಂ**—(ತೃತೀಯಸವನವೆಂಬ) ಯಜ್ಞಗೃಹಕ್ಕೆ (ನಿವಾಸಸ್ಥಾನಕ್ಕೆ) । **ಅಗಚ್ಛತ**—ಹೋದಿರಿ (ಮತ್ತು ಸೋಮವನ್ನು ಪಾನಮಾಡಿದಿರಿ). ]

॥ ಭಾವಾರ್ಥ ॥

ಸುಧನ್ವನ ಪುತ್ರರಾದ ಎಲೈ ಋಭುಗಳೇ, ಪ್ರಾಚೀನರೂ, ನನ್ನ ಜ್ಞಾತಿಗಳ ಗುಂಪಿಗೆ ಸೇರಿದವರೂ ಆದ ನೀವು ನಿಮಗೆ ಪರಿಪಕ್ವವಾದ ಜ್ಞಾನವಿರುವ ಕಾಲದಲ್ಲಿ ಉಪಭೋಗಕ್ಕೆ ಯೋಗ್ಯವಾದ ಸೋಮರಸವನ್ನು ಅಪೇಕ್ಷಿಸಿ ತಪಶ್ಚರಣೆಗಾಗಿ ಅರಣ್ಯಕ್ಕೆ ಹೋದಿರಿ. ಅಲ್ಲಿ ನೀವು ಆಚರಿಸಿದ ತಪಃಪ್ರಭಾವದಿಂದ ಭಕ್ತನಾದ ಸವಿತೃವಿನ ಯಜ್ಞಗೃಹಕ್ಕೆ ಬಂದು ಸೋಮರಸದ ಪಾನವನ್ನು ಮಾಡಿದಿರಿ.

English Translation

When Ribhus, you who were amongst my ancestors, yet immature (in wisdom), but desirous of enjoying (the Soma libations) retired to the forest to perform (penance), then, sons of Sudhanwan, through the plenitude of your completed (devotion), you came to the (sacrificial) hall of the worshipper Savitri.

ವಿಶೇಷವಿಷಯಗಳು

ಇಲ್ಲಿ ಸವಿತುರ್ದಾಶುಷೋ ಗೃಹಂ ಅಗಚ್ಛತ—ಯಜ್ಞದಲ್ಲಿ ಹವಿಸ್ಸನ್ನು ಅರ್ಪಿಸಿದ ಅಥವಾ ಆತಿಥ್ಯವನ್ನು ನೀಡಿದ ಸವಿತೃವಿನ ಮನೆಗೆ ಹೋದಿರಿ ಎಂದು ಪೂರ್ವದ ಇತಿಹಾಸದ ಸಂದರ್ಭವು ಸೂಚಿಸಿದೆ. ಈ ಇತಿಹಾಸವನ್ನು ಸ್ಕಂದಸ್ವಾಮಿಗಳು ಒಂದು ವಿಧವಾಗಿಯೂ, ಸಾಯಣರು ಇನ್ನೊಂದು ವಿಧವಾಗಿಯೂ ವಿವರಿಸಿದ್ದಾರೆ. ಈ ಸಂದರ್ಭದಲ್ಲಿ,

ಅತ್ರೇತಿಹಾಸಮಾಚಕ್ಷತೇ । ಋಭವೋ ಯಜ್ಞಿಯತ್ವಂ ಪ್ರಾರ್ಥಯಮಾನಾಃ ಪ್ರಜಾಪತೇಃ ಸಕಾಶಮುಗಮನ್ । ಅಥ ಪ್ರಜಾಪತಿಃ ಸವಿತಾರಮಾಹೂಯಾವೋಚತ್ । ಏತೇಽಪಿ ಯಜ್ಞಿಯಾ ಭವಂತ್ವಿತಿ । ತಥೇತಿ ಸವಿತಾ ಪ್ರತಿಪದ್ಯ ತಾನ್ ಸ್ವಗೃಹಂ ನೀತ್ವಾ ದ್ವಾದಶ ದಿನಾನ್ಯಾತಿಥ್ಯಮೇಷಾಮಕಾರ್ಷೀದಿತಿ । ತದೇತದ್ವಾಮದೇವೋ ವಕ್ಷ್ಯತಿ ।

ಋಭುಗಳು ಯಜ್ಞದಲ್ಲಿ ಭಾಗವಹಿಸಿ ಹವಿಸ್ಸನ್ನು ಸ್ವೀಕರಿಸಲು ಅರ್ಹತೆಯನ್ನು ಪಡೆಯಬೇಕೆಂದು ಇಚ್ಛಿಸಿ ಪ್ರಜಾಪತಿಯ ಸಮೀಪಕ್ಕೆ ಹೋದರು. ಆಗ ಪ್ರಜಾಪತಿಯು ಸವಿತೃವನ್ನು ಕರೆದು ಇವರೂ ಸಹ ಯಜ್ಞಾರ್ಹರಾಗಲಿ (ಅದಕ್ಕೆ ಸಹಾಯಮಾಡು) ಎಂದು ಹೇಳಿದನಂತರ ಸವಿತೃವು ಹಾಗೇ ಆಗಲೆಂದು ಒಪ್ಪಿಕೊಂಡು ತನ್ನ ಮನೆಗೆ ಕರೆದುಕೊಂಡು ಹೋಗಿ ಹನ್ನೆರಡು ದಿನಗಳು ಅವರಿಗೆ ಆತಿಥಿಸತ್ಕಾರವನ್ನು ನೆರವೇರಿಸಿದನು ಎಂದು ಸ್ಕಂದಸ್ವಾಮಿಗಳು ಕಥೆಯನ್ನು ಸಂಕ್ಷೇಪವಾಗಿ ಹೇಳಿ, ಈ ಕಥಾಸಂದರ್ಭವನ್ನು ಸೂಚಿಸತಕ್ಕ,

ದ್ವಾದಶ ದ್ಯೂನ್ಯದಗೋಹ್ಯಸ್ಯಾತಿಥ್ಯೇ ರಣನ್ನೃಭವಃ ಸಸಂತಃ ।
ಸುಕ್ಷೇತ್ರಾಕೃಣ್ವನ್ನನಯಂತ ಸಿಂಧೂನ್ಧನ್ವಾತಿಷ್ಠನ್ನೋಷಧೀರ್ನಿಮ್ನಮಾಪಃ ॥
(ಋ. ಸಂ. ೪-೩೩-೭)

ಈ ಋಕ್ಕನ್ನು ಉದಹರಿಸಿದ್ದಾರೆ. ಇದೇ ಸಂದರ್ಭದಲ್ಲಿ ಸಾಯಣರು ಋಭುಗಳು ಸವಿತೃವಿನ ಮನೆಗೆ ಹೋಗಲು ಒದಗಿದ ಕಾರಣವನ್ನು ತಿಳಿಸತಕ್ಕ ಅಂಶವನ್ನು ಸೂಚಿಸಿದ್ದಾರೆ.

ದಾಶುಷಃ ಪ್ರಾತಃಸವನಾದಿಷ್ವಗ್ನ್ಯಾದಿಭಿರಪಸಾರಿತೇಭ್ಯಃ ಋಭುಭ್ಯಃ ಸೋಮಪಾನಂ ದತ್ತವತಃ ಸವಿತುಃ ಗೃಹಂ ನಿವಾಸಸ್ಥಾನಂ ತೃತೀಯಸವನಾಖ್ಯಮಗಚ್ಛತ ಪ್ರಾಪ್ತಾಃ ।

ಪ್ರಾತಃಸವನಾದಿಗಳಲ್ಲಿ ಅಗ್ನ್ಯಾದಿದೇವತೆಗಳಿಂದ ತಿರಸ್ಕರಿಸಲ್ಪಟ್ಟು ಹೊರಕ್ಕೆ ಕಳುಹಿಲ್ಪಟ್ಟ ಋಭುಗಳಾದ ನಿಮಗೆ ಸೋಮಪಾನವನ್ನು ಅರ್ಪಿಸಿದ ಸವಿತೃವಿನ ತೃತೀಯಸವನರೂಪವಾದ ಯಜ್ಞಗೃಹವನ್ನು ಪ್ರವೇಶಿಸಿದಿರಿ ಎಂದು ಅಗ್ನ್ಯಾದಿಗಳಿಂದ ಸಂಭವಿಸಿದ ತಿರಸ್ಕಾರದ ವಿಷಯವನ್ನೂ ಹೇಳಿದ್ದಾರೆ. ಈ ವಿಷಯವು ಐತರೇಯ ಬ್ರಾಹ್ಮಣದಲ್ಲಿ ವಿಶದವಾಗಿ ಉಕ್ತವಾಗಿದೆ.

ಋಭವೋ ವೈ ದೇವೇಷು ತಪಸಾ ಸೋಮಪೀಥಮಭ್ಯಜಯಂಸ್ತೇಭ್ಯಃ ಪ್ರಾತಃಸವನೇ ವಾಚಿ ಕಲ್ಪಯಿಷಂಸ್ತಾನಗ್ನಿರ್ವಸುಭಿಃ ಪ್ರಾತಃಸವನಾದನುದತ ತೇಭ್ಯೋ ಮಾಧ್ಯಂದಿನೇ ಸವನೇ ವಾಚಿ ಕಲ್ಪಯಿಷಂಸ್ತಾನಿಂದ್ರೋ ರುದ್ರೈರ್ಮಾಧ್ಯಂದಿನಾತ್ಸವನಾದನುದತ ತೇಭ್ಯಸ್ತೃತೀಯ.

ಸವನೇ ವಾಚಿ ಕಲ್ಪಯಿಷಂಸ್ತಾನ್ವಿಶ್ವೇ ದೇವಾ ಅನೋನುದ್ಯಂತ ನೇಹ ಪಾಸ್ಯಂತಿ ನೇಹೇತಿ ಸ ಪ್ರಜಾಪತಿರಬ್ರವೀತ್ಸವಿತಾರಂ ತವ ವಾ ಇಮೇಽಂತೇವಾಸಾಸ್ತ್ವಮೇವೈಭಿಃ ಸಂಪಿಬಸ್ವೇತಿ ಸ ತಥೇತ್ಯಬ್ರವೀತ್ಸವಿತಾ ತಾನ್ವೈ ತ್ವಮುಭಯತಃ ಪರಿಪಿಬೇತಿ ತಾನ್ಪ್ರಜಾಪತಿರುಭಯತಃ ಪರ್ಯಪಿಬತ್ । ಇತಿ ।

(ಐ. ಬ್ರಾ. ೩-೩೦)

ಋಭುಗಳು ತಮ್ಮ ತಪಃಸಾಧನೆಯಿಂದಲೂ ಉತ್ಕಟವಾದ ಇಚ್ಛೆಯಿಂದಲೂ ದೇವತೆಗಳ ನಡುವೆ ಸೋಮ ಪಾನವನ್ನು ಸಂಪಾದಿಸಿದರು. ಮೊದಲು ಪ್ರಾತಃಸವನದಲ್ಲಿ ಅದನ್ನು ಹೊಂದಲು ಇಚ್ಛಿಸಿದಾಗ ಅಗ್ನಿಯು ವಸುಗ ಳೊಂದಿಗೆ ಸೇರಿಕೊಂಡು ಅವರನ್ನು ತಿರಸ್ಕರಿಸಿ ಅಟ್ಟಿಬಿಟ್ಟನು. ಆಗ ಮಾಧ್ಯಂದಿನ ಸವನದಲ್ಲಿ ಅದನ್ನು ಪಡೆಯಲಿಚ್ಛಿಸಿ ದಾಗ ಇಂದ್ರನು ರುದ್ರರೊಂದಿಗೆ ಸೇರಿಕೊಂಡು ಅವರನ್ನು ಅಟ್ಟಿಬಿಟ್ಟನು. ಪುನಃ ತೃತೀಯಸವನದಲ್ಲಿ ಅದನ್ನು ಪಡೆಯಲಿಚ್ಛಿಸಿದಾಗ ವಿಶ್ವೇದೇವರು 'ನೀವು ಇಲ್ಲಿ ಖಂಡಿತ ಸೋಮಪಾನಮಾಡಲರ್ಹರಲ್ಲ, ನೀವು ಮಾಡಕೂಡದು' ಎಂದು ಕಠಿಣವಾದ ಮಾತಿನಿಂದ ಅಲ್ಲಿಯೂ ತಿರಸ್ಕರಿಸಿದರು. ಆಗ ಪ್ರಜಾಪತಿಯು ಸವಿತೃವನ್ನು ಕುರಿತು 'ಈ ಋಭುಗಳು ನಿನ್ನ ಶಿಷ್ಯರು. ನೀನು ಇವರೊಂದಿಗೆ ಸೋಮಪಾನವನ್ನು ಮಾಡು' ಎಂದರು. ಅನಂತರ ಸವಿತೃವು ಒಪ್ಪಿಕೊಂಡನು. ಪ್ರಜಾಪತಿಯೂ ಸಹ ಅವರ ಅಕ್ಕಪಕ್ಕದಲ್ಲೇ ಸೋಮರಸವನ್ನು ಪಾನಮಾಡಿದನು, ಎಂಬುದಾಗಿ ಐತರೇಯ ಬ್ರಾಹ್ಮಣದಲ್ಲಿ ವಿಸ್ತಾರವಾಗಿ ಹೇಳಿರುವ ಸನ್ನಿವೇಶವನ್ನು ಸಾಯಣರು ಸೂಕ್ಷ್ಮವಾಗಿ ಹೇಳಿದ್ದಾರೆ.

**ಅಪಾಕಾಃ—ಅಪಕ್ತವ್ಯಪ್ರಜ್ಞಾಃ । ಅತ್ಯಂತಪರಿಪಕ್ವಪ್ರಜ್ಞಾ ಇತ್ಯರ್ಥಃ ।** ಇನ್ನು ಮುಂದೆ ಪರಿಪಕ್ವ ವಾಗಬೇಕಾಗಿಲ್ಲದೇ ಆಗಲೇ ಪೂರ್ಣವಾಗಿ ಪರಿಪಕ್ವವಾಗಿರುವ ಜ್ಞಾನವುಳ್ಳ ಎಂದರ್ಥ.

**ಪ್ರಾಂಚಃ—ಪೂರ್ವಕಾಲೀನಾಃ ; ಆಪಯಃ—ಜ್ಞಾತಯಃ ; ಕುತ್ಸೋ ಹ್ಯಾಂಗಿರಸಃ । ಋಭ- ವೋಽಪಿ ಸುಧನ್ವನ ಆಂಗಿರಸಸ್ಯ ಪುತ್ರಾಃ । ಅತ ಆಂಗಿರಸತ್ವಾತ್ ಕುತ್ಸಸ್ಯ ಭವಂತ್ಯೃಭವಃ ಕೇಚಿತ್ ಜ್ಞಾತಯಃ ।** ಕುತ್ಸನೂ ಅಂಗಿರಾ ಋಷಿಯ ವಂಶದಲ್ಲಿ ಉತ್ಪನ್ನನಾಗಿರುವುದರಿಂದಲೂ ಹಿಂದೆ ಇದ್ದ ಋಭುಗಳೂ ಅದೇ ವಂಶೋತ್ಪನ್ನರಾದುದರಿಂದಲೂ ಋಭುಗಳು ಕುತ್ಸನಿಗೆ ಪ್ರಾಚೀನರಾದ ಬಂಧುಗಳೆಂದು ತಾತ್ಪರ್ಯ. ಇದೇ ಋಕ್ಕಿ ನಲ್ಲಿ **ಸೌಧನ್ವನಾಸಃ—ಸುಧನ್ವನಃ ಪುತ್ರಾಃ** ಎಂಬ ಸಂಬೋಧನೆಯು ಋಭುಗಳು ಅಂಗಿರಸ್ಸಿನ ವಂಶದಲ್ಲಿ ಹುಟ್ಟಿದ ಸುಧನ್ವನ ಮಕ್ಕಳೆಂದು ತಿಳಿಯುತ್ತದೆ. ಈ ವಿಷಯವು ಋಕ್ಸಂಹಿತೆಯಲ್ಲಿ ಅನೇಕಕಡೆಗಳಲ್ಲಿ ಉಕ್ತವಾಗಿದೆ. ಉದಾಹರಣೆಗೆ—

**ಇಂದ್ರಸ್ಯ ಸಖ್ಯಮೃಭವಃ ಸಮಾನಶುರ್ಮನೋರ್ನಪಾತೋ ಅಪಸೋ ದಧನ್ವಿರೇ ।**
**ಸೌಧನ್ವನಾಸೋ ಅಮೃತತ್ವಮೇರಿರೇ ವಿಷ್ಟ್ವೀ ಶಮೀಭಿಃ ಸುಕೃತಃ ಸುಕೃತ್ಯಯಾ ।**

(ಋ. ಸಂ. ೩-೬೦-೩)

ಎಂಬ ಋಕ್ಕಿನಲ್ಲಿ ಗಾಥಿಪುತ್ರನಾದ ವಿಶ್ವಾಮಿತ್ರನೂ ಹೀಗೆಯೇ ೪-೩೩-೫ ಇತ್ಯಾದಿ ಋಕ್ಕುಗಳಲ್ಲಿ ವಾಮ ದೇವಋಷಿಗಳೂ ಮೇಲಿನ ವಿಷಯವನ್ನು ಸಮರ್ಥಿಸಿರುತ್ತಾರೆ. ಅಂಗಿರಸ್ಸಿನ ವಂಶದಲ್ಲಿ ಹುಟ್ಟಿದ ಈ ಸುಧನ್ವನ ವಿಷಯವು ಬೃಹದಾರಣ್ಯಕೋಪನಿಷತ್ತಿನಲ್ಲಿ ಪ್ರಸ್ತಾಪಿಸಿದೆ.

**ಅಥ ಹೈನಂ ಭುಜ್ಯುರ್ಲಾಹ್ಯಾಯನಿಃ ಪಪ್ರಚ್ಛ ಯಾಜ್ಞವಲ್ಕ್ಯೇತಿ ಹೋವಾಚ । ಮದ್ರೇಷು ಚರಕಾಃ ಪರ್ಯವ್ರಜಾಮ ತೇ. ಪತಂಚಲಸ್ಯ ಕಾಪ್ಯಸ್ಯ ಗೃಹಾನೈಮ ತಸ್ಯಾಸೀದ್ದುಹಿತಾ ಗಂಧರ್ವಗೃಹೀತಾ ತಮಪೃಚ್ಛಾಮ ಕೋಽಸೀತಿ ಸೋಽಬ್ರವೀತ್ಸುಧನ್ವಾಂಗಿರಸ ಇತಿ ।**
(ಬೃ. ಉ. ೩-೩-೧)

ಮದ್ರದೇಶದ ಪತಂಚಲಕಾಪ್ಯನ ಮಗಳು ಗಂಧರ್ವಗೃಹೀತಳಾದ ಕಾಲದಲ್ಲಿ ಆ ಗಂಧರ್ವನನ್ನು ಕುರಿತು ನೀನು ಯಾರೆಂದು ಕೇಳಲು ಅವನು ಸುಧನ್ವಾಂಗಿರಸನೆಂದು ಉತ್ತರಕೊಟ್ಟ ವಿಷಯವನ್ನು ಭುಜ್ಯು ಲಾಹ್ಯಾಯನಿಯು ಜನಕನ ಸಭೆಯಲ್ಲಿ ಯಾಜ್ಞವಲ್ಕ್ಯನಿಗೆ ಹೇಳಿದ ವಿಷಯವು ಬೃಹದಾರಣ್ಯಕದಲ್ಲಿ ಸೂಚಿತವಾಗಿದೆ. ಇದೇ ಕಥೆಯು ಮಹಾಭಾರತಾದಿಗಳಲ್ಲಿಯೂ ಪ್ರಸಿದ್ಧವಾಗಿದೆ. ಹೀಗೆ ಸುಧನ್ವನೂ ಸುಧನ್ವಪುತ್ರರಾದ ಋಭುಗಳೂ, ಈ ಸೂಕ್ತದ ದ್ರಷ್ಟೃವಾದ ಕುತ್ಸಋಷಿಯೂ ಎಲ್ಲರೂ ಅಂಗಿರಾಋಷಿಯ ವಂಶೋತ್ಪನ್ನರಾದುದರಿಂದ ಪ್ರಕೃತವಾದ ಋಕ್ಕಿನಲ್ಲಿ ಕುತ್ಸನು ಋಭುಗಳನ್ನು ಉದ್ದೇಶಿಸಿ **ಪ್ರಾಂಚಃ ಆಪಯಃ** ಹಿಂದಿನ ಜ್ಞಾತಿಗಳು ಎಂದು ಸಂಬೋಧಿಸಿದ್ದಾನೆ.

**ಆಪಯಃ**—ಜ್ಞಾತಿಗಳು ಅಥವಾ ಇತರ ಬಂಧುಗಳು. **ಆಪ್ಯಾ ಆಪ್ನೋತೇಃ** (ನಿ. ೬-೧೪) ಆಪ್ ಧಾತುವಿನಿಂದ ನಿಷ್ಪನ್ನವಾಗಿ ಅತ್ಯಂತ ಹಿತಕರವಾದ ಬಾಂಧವ್ಯವನ್ನು ಸೂಚಿಸುತ್ತದೆ.

**ಚರಿತಸ್ಯ ಭೂಮನಾ**—ತಪಶ್ಚರ್ಯದ ಆಧಿಕ್ಯದಿಂದ, ಅಥವಾ ಮಹಿಮೆಯಿಂದ ಕೂಡಿದ ತಮ್ಮ ಅಸಾಧಾರಣವಾದ ಕಾರ್ಯಗಳಿಂದ ಎಂದರ್ಥ. ಈ ಅಸಾಧಾರಣವಾದ ಕಾರ್ಯಗಳಾವುವು, ಇವುಗಳಿಂದ ತಮ್ಮ ಪ್ರಭಾವವನ್ನು ಹೇಗೆ ಪ್ರಕಾಶಪಡಿಸಿದರು ಎಂಬ ವಿಷಯಗಳನ್ನು ಇದೇ ಸೂಕ್ತದ ಮುಂದಿನ ಋಕ್ಕುಗಳಲ್ಲಿ ಹೇಳಿದೆ.

॥ ವ್ಯಾಕರಣಪ್ರಕ್ರಿಯಾ ।

**ಆಭೋಗಯಮ್**—ಆ ಸಮಂತಾತ್ ಭೋಗಃ ಆಭೋಗಃ ಭುಜಪಾಲನಾಭ್ಯವಹಾರಯೋಃ ಧಾತು ಘಞ್ ಪ್ರತ್ಯಯಮಾಡಿದಾಗ ಧಾತುವಿನ ಲಘೂಪಧೆಗೆ ಗುಣ. **ಚಜೋಃ ಕುಘಿಣ್ಣ್ಯತೋಃ**—(ಪಾ. ಸೂ. ೭-೩-೫೨) ಎಂಬುದರಿಂದ ಕುತ್ವ. ತದಹಃ ಆಭೋಗಯಃ **ಛಂದಸಿ ಚ**—(ಪಾ ಸೂ. ೫-೧-೬೭) ಯ ಪ್ರತ್ಯಯ. ಭಸಂಜ್ಞಾ ಇದ್ದರೂ **ಯಸ್ಯೇತಿ ಚ**—ಎಂಬುದರಿಂದ ಲೋಪವು ಛಾಂದಸವಾಗಿ ಇಲ್ಲಿ ಬರುವುದಿಲ್ಲ. **ವ್ಯತ್ಯಯೋ ಬಹುಲಮ್**—ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಆಙಿನೊಡನೆ ಸಮಾಸವಾದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಅಥವಾ ಆಙ್ ಪೂರ್ವಕವಾದ ಭುಜ ಧಾತುವಿಗೆ ಔಣಾದಿಕವಾದ ಇ ಪ್ರತ್ಯಯವು ಕರ್ಮಣಿಯಲ್ಲಿ ಬರುತ್ತದೆ. ತತ್ಸನ್ನಿಯೋಗದಿಂದ ಧಾತುವಿನ ಜಕಾರಕ್ಕೆ ಕುತ್ವ. ಆಭೋಗಿ ಎಂದು ರೂಪವಾಗುತ್ತದೆ. ಅಮ್ ಪರವಾದಾಗ ನಿಮಿತ್ತವಿಲ್ಲದಿದ್ದರೂ ವ್ಯತ್ಯಯದಿಂದ ಪೂರ್ವಕ್ಕೆ ಗುಣ ಬರುತ್ತದೆ. ಆಗ ಪ್ರತ್ಯಯಸ್ವರದಿಂದ ಗಕಾರೋತ್ತರಾಕಾರ ಉದಾತ್ತವಾಗುತ್ತದೆ.

ಇಚ್ಛಂತಃ—ಇಷು ಇಚ್ಛಾಯಾಮ್. ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. **ತುದಾದಿಭ್ಯಃ ಶಃ**—ಎಂಬುದರಿಂದ ಶವಿಕರಣ. **ಇಷುಗಮಿಯಮಾಂ ಛಃ** (ಪಾ. ಸೂ. ೭-೩-೭೭) ಎಂಬುದರಿಂದ ಧಾತುವಿಗೆ ಛಾಂತಾದೇಶ. ವಿಕರಣಸ್ವರ ಉಳಿಯುತ್ತದೆ

ಐತನ—ಇಣ್ ಗತೌ. ಧಾತು ಲುಙ್ ಮಧ್ಯಮಪುರುಷ ಬಹುವಚನದಲ್ಲಿ ಥ ಪ್ರತ್ಯಯಕ್ಕೆ **ತಸ್‌ಥಸ್‌ಥ**—(ಪಾ. ಸೂ. ೩-೪-೧೦೧) ಎಂಬುದರಿಂದ ತಾದೇಶ. **ತಪ್ತನಪ್ತನಥನಾಶ್ಚ**—(ಪಾ. ಸೂ. ೭-೧-೪೫) ಎಂಬುದ

ರಿಂದ ತನಾದೇಶ. **ಆಡಜಾದೀನಾಮ್**—(ಪಾ. ಸೂ. ೬-೪-೭೨) ಎಂಬುದರಿಂದ ಆಡಾಗಮ. **ಆಟಶ್ಚ**—(ಪಾ. ಸೂ. ೬-೧-೯೦) ಎಂಬುದರಿಂದ ವೃದ್ಧಿ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಆಪಯಃ**—ಆಪ್ಲೃ ವ್ಯಾಪ್ತೌ ಧಾತು. ಔಣಾದಿಕ ಇಪ್ರತ್ಯಯ. ಆಪಿ ಎಂದು ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಥಮಾ ಜಸ್ ಪರವಾದಾಗ **ಜಸಿ ಚ** ಎಂಬುದರಿಂದ ಗುಣ ಅಯಾದೇಶ.

**ಭೂಮನಾ**—ಬಹು ಶಬ್ದವು ಪೃಥ್ವಾದಿಯಲ್ಲಿ ಸೇರಿರುವುದರಿಂದ ಭಾವಾರ್ಥದಲ್ಲಿ **ಪೃಥ್ವಾದಿಭ್ಯ ಇಮನಿಜ್ವಾ**, (ಪಾ. ಸೂ. ೫-೧-೧೨೨) ಎಂಬುದರಿಂದ ಇಮನಿಚ್ ಪ್ರತ್ಯಯ. **ಬಹೋರ್ಲೋಪೋ ಭೂ ಚ ಬಹೋಃ** (ಪಾ. ಸೂ. ೬-೪-೧೫೮) ಎಂಬುದರಿಂದ ಬಹುವಿನ ಪರದಲ್ಲಿರುವ ಇಮನಿಚಿಗೆ ಲೋಪ. ಬಹು ಎಂಬುದಕ್ಕೆ ಭೂಭಾವ. **ಆದೇಃಪರಸ್ಯ** (ಪಾ. ಸೂ. ೧-೧-೫೪) ಎಂಬುದರಿಂದ ಪರದಲ್ಲಿರುವ ಇಮನಿಚಿಗೆ ಎಂದುದರಿಂದ ಅದರ ಆದಿ ಇಕಾರಕ್ಕೆ ಲೋಪ. ಭೂಮನ್ ಶಬ್ದವಾಗುತ್ತದೆ. **ಚಿತಃ** (ಪಾ. ಸೂ. ೬-೧-೧೬೩) ಅಂತೋದಾತ್ತಸ್ವರ ಬರುತ್ತದೆ. ಇದಕ್ಕೆ ತೃತೀಯಾ ಟಾ ಪರವಾದಾಗ ಭ ಸಂಜ್ಞಾನಿಮಿತ್ತವಾಗಿ **ಅಲ್ಲೋಪೋಽನಃ** ಎಂಬುದರಿಂದ ಅಕಾರಲೋಪ ಪ್ರಾಪ್ತವಾದರೂ **ಸಂಜ್ಞಾಪೂರ್ವಕೋ ವಿಧಿರನಿತ್ಯಃ** ಎಂಬ ವಚನದಿಂದ ಇಲ್ಲಿ ಅನಿನ ಅಕಾರಕ್ಕೆ ಲೋಪಬರುವುದಿಲ್ಲ.

**ಅಗಚ್ಛತ**—ಗಮ್ಲೃ ಗತೌ ಧಾತು. ಲಙ್ ಮಧ್ಯಮಪುರುಷ ಬಹುವಚನದಲ್ಲಿ ಥಪ್ರತ್ಯಯಕ್ಕೆ ತಾದೇಶ. ಶಪ್ ವಿಕರಣ. **ಇಷುಗಮಿಯಮಾಂ ಛಃ** ಎಂಬುದರಿಂದ ಧಾತುವಿನ ಅಂತ್ಯಕ್ಕೆ ಛಾದೇಶ. ಅಂಗಕ್ಕೆ ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ದಾಶುಷಃ**—**ದಾಶ್ವಾನ್ ಸಾಹ್ವಾನ್**—(ಪಾ. ಸೂ. ೬-೧-೧೨) ಎಂಬುದರಿಂದ ಕ್ವಸುಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಷಷ್ಠಿಯಲ್ಲಿ ಭ ಸಂಜ್ಞಾ ಇರುವುದರಿಂದ **ವಸೋಃ ಸಂಪ್ರಸಾರಣಮ್** ಎಂಬುದರಿಂದ ಸಂಪ್ರಸಾರಣ, ಪೂರ್ವರೂಪ. **ಶಾಸಿವಸಿಘಸೀನಾಂ ಚ** (ಪಾ. ಸೂ. ೮-೩-೬೦) ಎಂಬುದರಿಂದ ಷತ್ವ. ॥ ೨ ॥



## ತತ್ಸವಿತಾ ವೋಽಮೃತತ್ವಮಾಸುವದಗೋಹ್ಯಂ ಯಚ್ಛ್ರವ-
## ಯಂತ ಐತನ ।
## ತ್ಯಂ ಚಿಚ್ಚಮಸಮಸುರಸ್ಯ ಭಕ್ಷಣಮೇಕಂ ಸಂತಮಕೃಣುತಾ
## ಚತುರ್ವಯಂ ॥ ೩ ॥

ಪದಪಾಠಃ

ತತ್ । ಸವಿತಾ । ವಃ । ಅಮೃತಽತ್ವಂ । ಆ । ಅಸುವತ್ । ಅಗೋಹ್ಯಂ ।
ಯತ್ । ಶ್ರವಯಂತಃ । ಐತನ ।
ತ್ಯಂ । ಚಿತ್ । ಚಮಸಂ । ಅಸುರಸ್ಯ । ಭಕ್ಷಣಂ । ಏಕಂ । ಸಂತಂ । ಅಕೃ-
ಣುತ । ಚತುಃಽವಯಂ ॥ ೩ ॥

ಸಾಯಣಭಾಷ್ಯಂ

ಹೇ ಋಭವಸ್ತತ್ತದಾನೀಂ ಸವಿತಾ ಸರ್ವಸ್ಯ ಪ್ರೇರಕೋ ದೇವೋ ವೋ ಯುಷ್ಮಾಕಮಮೃತತ್ವಂ ದೇವತ್ವಮಾಸುವತ್ । ಆಭಿಮುಖ್ಯೇನ ಪ್ರೇರಿತವಾನ್ । ದತ್ತವಾನಿತ್ಯರ್ಥಃ । ಯದ್ಯದಾ ಯೂಯಮಗೋಹ್ಯಂ ಗೂಹಿತುಮಶಕ್ಯಂ ಸರ್ವೈರ್ದೃಶ್ಯಮಾನಂ ಸವಿತಾರಂ ಶ್ರವಯಂತೋಽಪೇಕ್ಷಿತಂ ಸೋಮಪಾನಂ ವಿಜ್ಞಾಪಯಂತಃ ಸಂತ ಐತನ ಆಗಚ್ಛತ । ತದಾನೀಮಿತಿ ಪೂರ್ವೇಣಾನ್ವಯಃ । ಯಸ್ಮಾದ್ಯೂಯಂ ದೇವೈರಾಜ್ಞಾಪಿತಾಃ ಸಂತೋಽಸುರಸ್ಯ ತ್ವಷ್ಟುಃ ಸಂಬಂಧಿನಂ । ತೇನ ನಿರ್ಮಿತಮಿತ್ಯರ್ಥಃ । ಭಕ್ಷಣಂ ಸೋಮಪಾನಸಾಧನಂ ತ್ಯಂ ತಂ ಚಮಸಮೇಕಂ ಚಿತ್ ಅಸಹಾಯಮೇವ ಸಂತಂ ಚತುರ್ವಯಂ ಚತುರ್ವ್ಯೂಹಮಕೃಣುತ । ಕೃತವಂತಃ । ಸೃಷ್ಟ್ಯಾದೌ ತ್ವಷ್ಟ್ರಾ ಕೃತಂ ಚಮಸಂ ಹೋತ್ರಚಮಸಾದಿ ಮುಖ್ಯಚಮಸ ಚತುಷ್ಟಯರೂಪೇಣ ಋಭವಃ ಕೃತವಂತ ಇತ್ಯರ್ಥಃ ॥ ಅಸುವತ್ । ಷೂ ಪ್ರೇರಣೇ । ತೌದಾದಿಕಃ । ಶ್ರವಯಂತಃ । ಶ್ರು ಶ್ರವಣೇ । ಛಾಂದಸೋ ವೃದ್ಧ್ಯಭಾವಃ । ಐತನ । ಲಙಃ ಮಧ್ಯಮಬಹುವಚನಸ್ಯ ತಾದೇಶೇ ತಪ್ತನಪ್ತನಥನಾಶ್ಚೇತಿ ತನಬಾದೇಶಃ । ಭಕ್ಷಣಂ । ಕರಣೇ ಲ್ಯುಟ್ । ಅಕೃಣುತ । ಕೃವಿ ಹಿಂಸಾಕರಣಯೋಶ್ಚ । ಲಙಃ ಮಧ್ಯಮಬಹುವಚನೇ ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ ಚತುರ್ವಯಂ । ವಯಾ ಅವಯವಾಃ । ಚತ್ವಾರೋಽವಯವಾ ಯಸ್ಯ ಸ ತಥೋಕ್ತಃ ॥

ಪ್ರತಿಪದಾರ್ಥ

(ಎಲೈ ಋಭುಗಳೇ) ಯತ್—ಯಾವಾಗ (ನೀವುಗಳು) । ಅಗೋಹ್ಯಂ—ಮುಚ್ಚಲು ಸಾಧ್ಯವಿಲ್ಲದ ಮತ್ತು ಎಲ್ಲರಿಗೂ ಸುಲಭವಾಗಿ ಗೋಚರನಾಗುವ ಸವಿತೃವನ್ನು । ಶ್ರವಯಂತಃ—( ಸೋಮರಸಪಾನಕ್ಕಾಗಿ ) ವಿಜ್ಞಾಪಿಸಿಕೊಂಡವರಾಗಿ । ಐತನ—ಬಂದಿರೋ । ತತ್—ಆಗ । ಸವಿತಾ—ಸವಿತೃದೇವನು । ವಃ—ನಿಮಗೆ । ಅಮೃತತ್ವಂ—ಮರಣರಹಿತವಾದ ದೇವತ್ವವನ್ನು । ಆಸುವತ್—ಸಂಪೂರ್ಣವಾಗಿ ಅನುಗ್ರಹಿಸಿಕೊಟ್ಟನು (ಅದ್ದರಿಂದ) । ಅಸುರಸ್ಯ—ತ್ವಷ್ಟೃವಿನಿಂದ ನಿರ್ಮಿತವಾದುದೂ । ಭಕ್ಷಣಂ—ಸೋಮರಸದ ಪಾನಕ್ಕೆ ಸಾಧನವಾದುದೂ । ತ್ಯಂ—ಪ್ರಸಿದ್ಧವಾದುದೂ । ಏಕಂ ಚಿತ್ ಸಂತಂ—(ಅದರ ಸೃಷ್ಟಿಕಾಲದಲ್ಲಿ) ಒಂದೇಒಂದಾಗಿ ಇದ್ದುದೂ ಆದ । ಚಮಸಂ—ಚಮಸ ಪಾತ್ರೆಯನ್ನು । ಚತುರ್ವಯಂ—ನಾಲ್ಕುರೆಷ್ಟನ್ನಾಗಿ । ಅಕೃಣುತ—ಮಾಡಿದ್ದೀರಿ.

### ಭಾವಾರ್ಥ

ಎಲೈ ಋಭುಗಳೇ, ಎಲ್ಲರಿಗೂ ಸುಲಭವಾಗಿ ಗೋಚರವಾಗಿ ಯಾರಿಂದಲೂ ಮರೆಮಾಡಲು ಸಾಧ್ಯವಿಲ್ಲದ ಸವಿತೃವನ್ನು ನೀವು ಸಮೀಪಿಸಿ ಸೋಮರಸದ ಪಾನದಲ್ಲಿ ನೀವೂ ಭಾಗವಹಿಸಬೇಕೆಂದು ವಿಜ್ಞಾಪಿಸಿಕೊಂಡಾಗ ಸವಿತೃದೇವನು ನಿಮಗೆ ಮರಣರಹಿತವಾದ ದೇವತ್ವವನ್ನು ಸಂಪೂರ್ಣವಾಗಿ ಅನುಗ್ರಹಿಸಿಕೊಟ್ಟನು. ಅದ್ದರಿಂದ ತ್ವಷ್ಟೃವಿನಿಂದ ನಿರ್ಮಿತವಾದುದೂ, ಸೋಮರಸಪಾನಕ್ಕೆ ಸಾಧನವಾದುದೂ, ಪ್ರಸಿದ್ಧವಾದುದೂ, ಅದರ ಸೃಷ್ಟಿ ಕಾಲದಲ್ಲಿ ಒಂದೇ ಒಂದಾಗಿ ಸೃಷ್ಟವಾದುದೂ ಆದ ಚಮಸ ಪಾತ್ರೆಯನ್ನು ನಾಲ್ಕು ಆಗುವಂತೆ ಮಾಡಿದ್ದೀರಿ.

### English Translation

Then Savitri bestowed upon you immortality, when you came to him who is not to be concealed, and represented (your desire) to partake of the libations; and that ladle for the sacrificial viands which the Asura had formed single, you made fourfold.

### ॥ ವಿಶೇಷವಿಷಯಗಳು ॥

**ಅಸುರಸ್ಯ ಏಕಂ ಚಿತ್ ಸಂತಂ ಚಮಸಂ ಚತುರ್ವಯಂ ಅಕೃಣುತ**—ತ್ವಷ್ಟೃವಿನಿಂದ ನಿರ್ಮಿತವಾದಾಗ ಒಂದೇ ಆಗಿ ಇದ್ದ ಚಮಸಪಾತ್ರೆಯನ್ನು ನಾಲ್ಕರಷ್ಟನ್ನಾಗಿ ಮಾಡಿದಿರಿ ಎಂದು ಋಭುಗಳ ಕಲಾಕೌಶಲ್ಯವನು ಶ್ಲಾಘಿಸಿದೆ.

**ಉತ ತ್ಯಂ ಚಮಸಂ ನವಂ ತ್ವಷ್ಟುರ್ದೇವಸ್ಯ ನಿಷ್ಕೃತಂ ।**
**ಅಕರ್ತ ಚತುರಃ ಪುನಃ ।**

(ಋ. ಸಂ. ೧-೨೦-೬)

ಎಂಬ ಋಕ್ಕಿನಲ್ಲಿ ಹೇಳಿರುವಂತೆಯೂ ಮತ್ತು ಇದೇ ವಿವರವನ್ನು ಮುಂದೆಯೂ

**ಜ್ಯೇಷ್ಠ ಆಹ ಚಮಸಾ ದ್ವಾ ಕರೇತಿ ಕನೀಯಾನ್ತ್ರೀನ್ಕೃಣವಾಮೇತ್ಯಾಹ ।**
**ಕನಿಷ್ಠ ಆಹ ಚತುರಸ್ಕರೇತಿ ತ್ವಷ್ಟ ಋಭವಸ್ತತ್ಪನಯದ್ವಚೋ ವಃ ॥**

(ಋ. ಸಂ. ೪-೩೩-೫)

ಇತ್ಯಾದಿ ಋಕ್ಕುಗಳಲ್ಲಿ ಹೇಳುವಂತೆಯೂ ಸಹ ಒಂದಾದ ಪಾತ್ರೆಯನ್ನು ತಮ್ಮ ಕಲಾಕೌಶಲ್ಯದಿಂದ ನಾಲ್ಕನ್ನಾಗಿ ಮಾಡಿದ ವಿಷಯವು ಪ್ರಸಿದ್ಧವಾಗಿದೆ. ಈ ಕಾರ್ಯದಲ್ಲೂ ಸಹ ತ್ವಷ್ಟೃವಿನ ಶಿಕ್ಷಣದಿಂದ ಇವರಿಗೆ ಈ ಶಕ್ತಿಯು ಬಂದಿತೆಂದೂ, ಇವರು ತ್ವಷ್ಟೃವಿನ ಶಿಷ್ಯರಾಗಿದ್ದರೆಂಬುದೂ ಬೃಹದ್ದೇವತೆಯಲ್ಲಿ ಉಕ್ತವಾಗಿದೆ.

**ಸುಧನ್ವನ ಆಂಗಿರಸಸ್ಯಾಸನ್ಪುತ್ರಾಸ್ತ್ರಯಃ ಪುರಾ ।**
**ಋಭುರ್ವಿಭ್ವಾ ಚ ವಾಜಶ್ಚ ಶಿಷ್ಯಾಸ್ತ್ವಷ್ಟುಶ್ಚ ತೇಽಭವನ್ ॥**
**ಶಿಕ್ಷಯಾಮಾಸ ತಾಂಸ್ತ್ವಷ್ಟಾ ತ್ವಾಷ್ಟ್ರಂ ಯತ್ಕರ್ಮ ಕಿಂಚನ ।**
**ಪರಿನಿಷ್ಠಿತಕರ್ಮಾಣೋ ವಿಶ್ವೇದೇವಾ ಉಪಾಹ್ವಯನ್ ॥**

ವಿಶ್ವೇಷಾಂ ತೇ ತತಶ್ಚಕ್ರುರ್ವಾಹನಾನ್ಯಾಯುಧಾನಿ ತು ।
ಧೇನುಂ ಸಬರ್ದುಘಾಂ ಚಕ್ರುರಮೃತಂ ಸಬರುಚ್ಯತೇ ॥
ಬೃಹಸ್ಪತೇರಥಾಶ್ವಿಭ್ಯಾಂ ರಥಂ ದಿವ್ಯಂ ತ್ರಿವಂಧುರಂ ।
ಇಂದ್ರಾಯ ಚ ಹರೀ ದೇವಪ್ರಹಿತೇನಾಗ್ನಿನಾಪಿ ಯತ್ ॥
ಏಕಂ ಚಮಸಮಿತ್ಯುಕ್ತೇ ಜ್ಯೇಷ್ಠ ಆಹೇತ್ಯಥೋ ದಿವಿ ।
ಉಕ್ತ್ವಾ ತತಶ್ಚತುಶ್ಚಮಸಾನ್ ಯಥೋಕ್ತಂ ತೇನ ಹರ್ಷಿತಾಃ ॥
ತ್ವಷ್ಟಾ ಚ ಸವಿತಾ ಚೈವ ದೇವದೇವಃ ಪ್ರಜಾಪತಿಃ ॥
ಸರ್ವಾನ್ದೇವಾನ್ ಸಮಾಮಂತ್ರ್ಯ ಅಮೃತತ್ವಂ ದದುಶ್ಚ ತೇ ॥
ತೇಷಾಮಾದ್ಯಾಂತ್ಯಯೋರ್ನಾಮ್ನಾ ದೃಶ್ಯತೇ ಬಹುವತ್ ಸ್ತವಃ ।
ತೃತೀಯಸವನೇ ತೇಷಾಂ ತೈಸ್ತು ಭಾಗಃ ಪ್ರಕಲ್ಪಿತಃ ॥
ಅಪಿಬತ್ಸೋಮಮಿಂದ್ರಶ್ಚ ತೈಸ್ತತ್ರ ಸವನೇ ಸಹ ।

( ಬೃ. ದೇ. ೩-೮೩ರಿಂದ ೮೯)

ಪೂರ್ವದಲ್ಲಿ ಸುಧನ್ವಪುತ್ರರಾದ ಋಭು, ವಿಭ್ವ, ವಾಜ ಎಂಬ ಮೂವರೂ ಸಹ ತ್ವಷ್ಟೃವಿನ ಶಿಷ್ಯರಾದರು. ಸಕಲಕಲಾಕುಶಲನಾದ ತ್ವಷ್ಟೃವು ಅವರಿಗೂ ಸಹ ಎಲ್ಲಾ ಕಲೆಗಳನ್ನೂ ಕಲಿಸಿದನು. ಆಗ ಕಲೆಗಳಲ್ಲಿ ನಿಪುಣರಾದ ವಿಶ್ವೇದೇವರು ಅವರನ್ನು ಪ್ರತಿಭಟನಾವೃತ್ತಿಯಿಂದ ಎದುರಿಸಿದರು. ಆಗ ಇವರು ಸಕಲದೇವತೆಗಳಿಗೂ ಸಹ ಆಯುಧಗಳನ್ನೂ ವಾಹನಗಳನ್ನೂ ನಿರ್ಮಿಸಿದರು. ಅನಂತರ ಅಮೃತದಾಯಿಯಾದ ಧೇನುವನ್ನು ಸೃಷ್ಟಿಸಿದರು. ಬೃಹಸ್ಪತಿ ಮತ್ತು ಅಶ್ವಿನೀದೇವತೆಗಳಿಗೆ, ಆಸನತ್ರಯಗಳುಳ್ಳ ರಥಗಳನ್ನೂ ಇಂದ್ರನಿಗೆ ಅಶ್ವಗಳನ್ನೂ ಮತ್ತು ದೇವತೆಗಳಿಂದ ದೂತನಾಗಿ ಕಳುಹಲ್ಪಟ್ಟ ಅಗ್ನಿಗೆ ಯಥೋಕ್ತವಾದುದನ್ನೂ, ಎಂದರೆ,

ಕಿಮು ಶ್ರೇಷ್ಠಃ ಕಿಂ ಯವಿಷ್ಠೋ ನ ಆಜಗನ್ಕಿಮೀಯತೇ ದೂತ್ಯಂ ೧ ಕದ್ಯದೂಚಿಮ ।
ನ ನಿಂದಿಮ ಚಮಸಂ ಯೋ ಮಹಾಕುಲೋಽಗ್ನೇ ಭ್ರಾತರ್ದ್ರುಣ ಇದ್ಭೂತಿಮೂದಿಮ ॥
ಏಕಂ ಚಮಸಂ ಚತುರಃ ಕೃಣೋತನ ತದ್ವೋ ದೇವಾ ಅಬ್ರುವನ್ತದ್ವ ಆಗಮಂ ।
ಸೌಧನ್ವನಾ ಯದ್ಯೇವಾ ಕರಿಷ್ಯಥ ಸಾಕಂ ದೇವೈರ್ಯಜ್ಞಿಯಾಸೋ ಭವಿಷ್ಯಥ ॥
ಅಗ್ನಿಂ ದೂತಂ ಪ್ರತಿ ಯದಬ್ರವೀತನಾಶ್ವಃ ಕರ್ತ್ವೋ ರಥ ಉತೇಹ ಕರ್ತ್ವಃ ।
ಧೇನುಃ ಕರ್ತ್ವಾ ಯುವಶಾ ಕರ್ತ್ವಾ ದ್ವಾ ತಾನಿ ಭ್ರಾತರನು ವಃ ಕೃತ್ವ್ಯೇಮಸಿ ॥

(ಋ. ಸಂ. ೧-೧೬೧-೧ ರಿಂದ ೩)

ಎಂಬ ಋಕ್ಕುಗಳಲ್ಲಿ ವರ್ಣಿಸಿರುವಂತೆ ಅಗ್ನಿಯು ದೇವದೂತನಾಗಿ ಸುಧನ್ವಪುತ್ರರಲ್ಲಿಗೆ ಹೋಗಿ ಒಂದೇ ಆಗಿರುವ ಚಮಸ ಪಾತ್ರೆಯನ್ನು ನಾಲ್ಕನ್ನಾಗಿ ಮಾಡಿ ದೇವತೆಗಳಿಗೆ ಸಹಾಯವಾದಿರಿ ಆಗ ಅವರ ಜೊತೆಯಲ್ಲಿ ಸೋಮರಸ ಪಾನಕ್ಕೆ ಅರ್ಹತೆಯನ್ನು ಅವರು ಪಡೆಯುವರೆಂದು ಹೇಳಿದಾಗ ಅವರು ನಿಮಗೆ ಇದೊಂದು ಕೆಲಸಮಾತ್ರವಲ್ಲದೇ ಅಶ್ವನಿರ್ಮಾಣವಾಗಲಿ, ರಥನಿರ್ಮಾಣವಾಗಲಿ ಅಥವಾ ಧೇನುನಿರ್ಮಾಣವಾಗಲಿ, ಅಥವಾ ವೃದ್ಧರಾದ ಮಾತಾಪಿತೃಗಳನ್ನು ಯುವಕರನ್ನಾಗಿ ಮಾಡುವುದಾಗಲಿ ಇವೆಲ್ಲಾ ನಮ್ಮಿಂದ ಸಾಧ್ಯವಾಗಿದ್ದು, ಅದರಂತೆಯೇ ಈಗಲೂ ಸಹ

ನಿಮಗೆ ಅಪೇಕ್ಷಿತವಾದುದನ್ನೆಲ್ಲಾ ಮಾಡಿಕೊಡುವೆವು ಎಂದು ಅದನ್ನು ಮಾಡಿಕೊಟ್ಟರು ಎಂಬ ವಿಷಯವನ್ನು ಇಲ್ಲಿ ಸೂಚಿಸಿದೆಯಾದ್ದರಿಂದ ಅಂತಹ ಕುಶಲಕಾರ್ಯದಿಂದ ಅಗ್ನಿಗೆ ಸಹಾಯವನ್ನು ಮಾಡಿದರು. ಆಗ ತ್ವಷ್ಟೃವೂ ಸವಿತೃವೂ, ದೇವದೇವನಾದ ಪ್ರಜಾಪತಿಯೂ ಸಕಲದೇವತೆಗಳನ್ನೂ ಕರೆದು ಋಭುಗಳಿಗೆ ಅಮೃತತ್ವವು ಲಭಿಸುವಂತೆ ಅನುಗ್ರಹಿಸಿದರು. ಆಗ (ಅವರನ್ನು ಮೊದಲು ತಿರಸ್ಕರಿಸಿದ್ದ) ಇಂದ್ರನೂ ಸಹ ಅವರೊಂದಿಗೆ ಸೋಮರಸವನ್ನು ಪಾನಮಾಡಿದನು ಎಂಬ ಕಥೆಯು ಬೃಹದ್ದೇವತೆಯಲ್ಲಿ ಉಕ್ತವಾಗಿದೆ.

**ಅಗೋಹ್ಯಂ— ಅತ್ಯಂತತೇಜಸ್ವಿತ್ವಾತ್ ಗೂಹಿತುಮಶಕ್ಯಂ ಸವಿತಾರಂ।** ಅತ್ಯಂತ ತೇಜಸ್ವಿಯಾದುದರಿಂದ ಎಲ್ಲರಿಗೂ ಸುಲಭವಾಗಿ ಗೋಚರನಾಗುವ ಎಂದು ತಾತ್ಪರ್ಯ. ಈ ವಿಶೇಷಣವು ಸಾಧಾರಣವಾಗಿ ಸವಿತೃಪರವಾಗಿಯೇ ಇದೆ. ಆದರೆ ಕೆಲವೆಡೆಗಳಲ್ಲಿ ಎಂದರೆ; ಋ. ಸಂ. ೮-೯೮-೪ನೇ ಋಕ್ಕಿನಲ್ಲಿ ಇಂದ್ರನಿಗೂ, ೧೦-೭೪-೭ರಲ್ಲಿ ಅಗ್ನಿಗೂ ವಿಶೇಷಣವಾಗಿದೆ.

**ಸವಿತಾ ಅಮೃತತ್ವಂ ಅಸುವತ್**—ಸವಿತೃವು ಅಮೃತತ್ವವನ್ನು ಅನುಗ್ರಹಿಸಿ ಕೊಟ್ಟನು. ಈ ಸನ್ನಿವೇಶವನ್ನು ಹಿಂದಿನ ಋಕ್ಕಿನ ವಿಶೇಷವಿಷಯದಲ್ಲಿ ತಿಳಿಸಿದೆ.

ವ್ಯಾಕರಣಪ್ರಕ್ರಿಯ

**ಸವಿತಾ**—ಷೂ ಪ್ರೇರಣೇ. ಧಾತು. ಕರ್ತರಿಯಲ್ಲಿ ತೃಚ್‌ಪ್ರತ್ಯಯ. ಇಡಾಗಮ. ತನ್ನಿಮಿತ್ತವಾಗಿ ಧಾತುವಿಗೆ ಗುಣ, ಅವಾದೇಶ. ಚಿತ್ತ್ವಾದುದರಿಂದ ಅಂತೋದಾತ್ತವಾಗುತ್ತದೆ. ಪ್ರಥಮಾ ಏಕವಚನಾಂತರೂಪ.

**ಅಸುವತ್**—ಷೂ ಪ್ರೇರಣೇ ಧಾತು. ತುದಾದಿ. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. **ತುದಾದಿಭ್ಯಃ ಶಃ** (ಪಾ. ಸೂ. ೩-೧-೭೭) ಎಂಬುದರಿಂದ ಶವಿಕರಣ. **ಸಾರ್ವಧಾತುಕಮಪಿತ್** (ಪಾ. ಸೂ. ೧-೨-೪) ಸೂತ್ರದಿಂದ ಅದಕ್ಕೆ ಙಿದ್ವದ್ಭಾವ ಬರುವುದರಿಂದ ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ ಬರುವುದಿಲ್ಲ. **ಅಚಿಶ್ನುಧಾತುಭ್ರುವಾಮ್**—ಎಂಬುದರಿಂದ ಉವಙಾದೇಶ. ಅಂಗಕ್ಕೆ ಅಡಾಗಮ. ಅತಿಙಂತದ-ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ.

**ಶ್ರವಯನ್ತಃ**—ಶ್ರು ಶ್ರವಣೇ. ಧಾತು. ಪ್ರೇರಣಾರ್ಥತೋರುವುದರಿಂದ **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಛಾಂದಸವಾಗಿ **ಅಚೋಞ್ಣಿತಿ** ಸೂತ್ರದಿಂದ ವೃದ್ಧಿ ಬರುವುದಿಲ್ಲ. ಗುಣ, ಅವಾದೇಶ. ಲಡರ್ಥದಲ್ಲಿ ಶತೃ ಪ್ರತ್ಯಯ. ಶಪ್ ವಿಕರಣ. ತನ್ನಿಮಿತ್ತವಾಗಿ ಣಿಚಿಗೆ ಗುಣ, ಅಯಾದೇಶ. ಶ್ರವಯತ್ ಶಬ್ದವಾಗುತ್ತದೆ. ಪ್ರಥಮಾ ಬಹುವಚನಾಂತರೂಪ. ಶಪ್, ಲಸಾರ್ವಧಾತುಕವು, ಅನುದಾತ್ತವಾಗುವುದರಿಂದ ಣಿಚ್‌ಸ್ವರ ಉಳಿಯುತ್ತದೆ.

ಐತನ—ಇಣ್ ಗತೌ ಧಾತು. ಲಙ್ ಮಧ್ಯಮಪುರುಷ ಬಹುವಚನದಲ್ಲಿ ಥಪ್ರತ್ಯಯಕ್ಕೆ ತಾದೇಶ. **ತಪ್ತನಪ್ತನಥನಾಶ್ಚ** (ಪಾ. ಸೂ. ೭-೧-೪೫) ಎಂಬುದರಿಂದ ಅದಕ್ಕೆ ತನಾದೇಶ. ಶಪಿಗೆ ಲುಕ್. ಅಂಗಕ್ಕೆ ಆಡಾಗಮ. **ಆಟಶ್ಚ** ಎಂಬುದರಿಂದ ವೃದ್ಧಿ. ಐತನ ಎಂದು ರೂಪವಾಗುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆದ್ಯುದಾತ್ತವಾಗುತ್ತದೆ.

**ಅಸುರಸ್ಯ**—ಅಸು ಕ್ಷೇಪಣೇ. ಧಾತು. **ಅಸೇರುರನ್** ( ಉ. ಸೂ. ೧-೪೩ ) ಎಂಬುದರಿಂದ ಉರನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ

**ಭಕ್ಷಣಮ್**—ಭಕ್ಷ ಅದನೇ. ಧಾತು. ಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** ಎಂಬುದರಿಂದ ಅನಾದೇಶ. ಷಕಾರನಿಮಿತ್ತವಿರುವುದರಿಂದ ನಕಾರಕ್ಕೆ ಣತ್ವ ಬರುತ್ತದೆ.

**ಅಕೃಣುತ**—ಕೃವಿ ಹಿಂಸಾಕರಣಯೋಶ್ಚ. ಧಾತು. ಲಙ್ ಮಧ್ಯಮಪುರುಷ ಬಹುವಚನದಲ್ಲಿ **ತಸ್-ಥಸ್-ಥ**—ಸೂತ್ರದಿಂದ ತಾದೇಶ. **ಇದಿತೋನುಮ್ ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ಧಾತುವಿಗೆ ನುಮಾಗಮ **ಧಿನ್ವಿಕೃಣ್ವ್ಯೋರಚ** (ಪಾ. ಸೂ. ೩-೧-೮೦) ಎಂಬುದರಿಂದ ಧಾತುವಿಗೆ ಅಕಾರಾಂತಾದೇಶ. ಉವಿಕರಣ. ಉನಿಮಿತ್ತವಾಗಿ **ಅತೋಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಅಕಾರಕ್ಕೆ ಲೋಪ. **ಅಚಃ ಪರಸ್ಮಿ**—ಸೂತ್ರದಿಂದ ಅಕಾರಲೋಪಕ್ಕೆ ಸ್ಥಾನಿವದ್ಭಾವವಿರುವುದರಿಂದ ಉ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಋಕಾರದ ಪರದಲ್ಲಿ ನಕಾರ ಬಂದುದರಿಂದ ಣತ್ವ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಚತುರ್ವಯಮ್**—ವಯವೆಂದರೆ ಅವಯವ. ಚತ್ವಾರೋ ಅವಯವಾ ಯಸ್ಯ ಸಃ ಚತುರ್ವಯಃ ತಮ್. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ( ಪಾ. ಸೂ. ೬-೨-೧ ) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ॥ ೩ ॥

———— :o: ————

ಸಂಹಿತಾಪಾಠಃ

ವಿಷ್ಟ್ವೀ ಶಮೀ ತರಣಿತ್ವೇನ ವಾಘತೋ ಮರ್ತಾಸಃ ಸಂತೋ
ಅಮೃತತ್ವಮಾನಶುಃ ।
ಸೌಧನ್ವನಾ ಋಭವಃ ಸೂರಚಕ್ಷಸಃ ಸಂವತ್ಸರೇ ಸಮಪೃಚ್ಯಂತ
ಧೀತಿಭಿಃ ॥ ೪ ॥

। ಪದಪಾಠಃ ।

ವಿಷ್ಟ್ವೀ । ಶಮೀ । ತರಣಿऽತ್ವೇನ । ವಾಘತಃ । ಮರ್ತಾಸಃ । ಸಂತಃ । ಅ-
ಮೃತಽತ್ವಂ । ಆನಶುಃ ।

ಸೌಧನ್ವನಾಃ । ಋಭವಃ । ಸೂರऽಚಕ್ಷಸಃ । ಸಂವತ್ಸರೇ । ಸಂ । ಅಪೃಚ್ಯಂತ ।
ಧೀತಿऽಭಿಃ ॥ ೪ ॥

॥ ಸಾಯಣಭಾಷ್ಯಂ ॥

ವಾಘತಃ । ಋತ್ವಿಜ್ನಾಮೈತತ್ । ಅತ್ರ ಚ ಸಾಮರ್ಥ್ಯಾತ್ತದ್ವಂತೋ ಲಕ್ಷ್ಯಂತೇ । ಋತ್ವಿಗ್ಭಿ-ರುಪೇತಾ ಋಭವಃ ಶಮೀ । ಕರ್ಮನಾಮೈತತ್ । ಯೋಗದಾನಾದೀನಿ ಕರ್ಮಾಣ್ಯನ್ಯಾನ್ಯಪ್ಯೇಕಂ ಚಮಸಂ ಚತುರಸ್ಕೃಣೋತನ । ಋ. ೧-೧೬೧-೨ । ಇತ್ಯಾದಿನಾ ದೇವೈರುಕ್ತಾನಿ ಕರ್ಮಾಣಿ ತರಣಿತ್ವೇನ। ತರಣಿರಿತಿ ಕ್ಷಿಪ್ರನಾಮ । ಕ್ಷಿಪ್ರತ್ವೇನ ಶೈಘ್ರ್ಯೇಣ ವಿಷ್ಟ್ವೀ । ಯದ್ಯಪ್ಯೇತತ್ಕರ್ಮನಾಮ ತಥಾಪ್ಯತ್ರ ಕ್ರಿಯಾಪರಂ ವ್ಯಾಪ್ಯ ಕೃತ್ವೇತ್ಯರ್ಥಃ। ಏವಂ ಕರ್ಮಾಣಿ ಕೃತ್ವಾ ಮರ್ತಾಸೋ ಮನುಷ್ಯಾ ಅಪಿ ಸಂತೋಽ-ಮೃತತ್ವಂ ದೇವತ್ವಮಾನಶುಃ । ಆನಶಿರೇ । ಕೃತೈಃ ಕರ್ಮಭಿರ್ಲೇಭಿರೇ। ದೇವತ್ವಂ ಪ್ರಾಪ್ಯ ಚ ಸೌಧನ್ವನಾಃ ಸುಧನ್ವನಃ ಪುತ್ರಾಃ ಸೂರಚಕ್ಷಸಃ ಸೂರ್ಯಸಮಾನಪ್ರಕಾಶಾಃ ಸೂರ್ಯಸದೃಶಜ್ಞಾನಾ ವಾ ತೇ ಋಭವಃ ಸಂವತ್ಸರೇ ಸಂವತ್ಸರಾವಯವಭೂತೇ ವಸಂತಾದಿಕಾಲೇಽನುಷ್ಠೇಯೈರ್ಧೀತಿಭಿರಗ್ನಿಷ್ಟೋಮಾದಿಕರ್ಮಭಿಃ ಸಮಪೃಚ್ಯಂತ । ಸಂಯುಕ್ತಾ ಅಭವನ್ । ಹವಿರ್ಭಾಗಾರ್ಹಾ ಬಭೂವುರಿತ್ಯರ್ಥಃ । ಅತ್ರ ನಿರುಕ್ತಂ । ಕೃತ್ವಾ ಕರ್ಮಾಣಿ ಕ್ಷಿಪ್ರತ್ವೇನ ವೋಢಾರೋ ಮೇಧಾವಿನೋ ವಾ ಮರ್ತಾಸಃ ಸಂತೋಽಮೃತತ್ವಮಾನ-ಶಿರೇ ಸೌಧನ್ವನಾ ಋಭವಃ ಸೂರಖ್ಯಾನಾ ವಾ ಸೂರಪ್ರಜ್ಞಾ ವಾ ಸಂವತ್ಸರೇ ಸಮಪೃಚ್ಯಂತ ಧೀತಿಭಿಃ ಕರ್ಮಭಿರ್ಋಭುರ್ವಿಭ್ವಾ ವಾಜ ಇತಿ ಸುಧನ್ವನ ಆಂಗಿರಸಸ್ಯ ತ್ರಯಃ ಪುತ್ರಾ ಬಭೂವುಃ । ನಿ. ೧೧-೧೬ । ಇತಿ ॥ ವಿಷ್ಟ್ವೀ । ವಿಷ್ಲೃ ವ್ಯಾಪ್ತೌ । ಸ್ನಾತ್ವ್ಯಾದಯಶ್ಚ । ಪಾ. ೭-೧-೪೯ । ಕ್ತ್ವಾಪ್ರತ್ಯಯಸ್ಯ ಈಕಾ-ರಾಂತಾದೇಶಃ । ಶಮೀ । ಸುಪಾಂ ಸುಲುಗಿತಿ ಶಸೋ ಲುಕ್ । ಆನಶುಃ । ಅಶೂ ವ್ಯಾಪ್ತೌ । ವ್ಯತ್ಯಯೇನ ಪರಸ್ಮೈಪದಂ । ಅಶ್ನೋತೇಶ್ಚೇತ್ಯಭ್ಯಾಸಾದುತ್ತರಸ್ಯ ನುಡಾಗಮಃ । ಅಪೃಚ್ಯಂತ । ಪೃಚೀ ಸಂಪರ್ಕೇ । ಕರ್ಮಣಿ ಲಙ್ ॥

ಪ್ರತಿಪದಾರ್ಥ

ವಾಘತಃ—ಋತ್ವಿಕ್ಕುಗಳೊಡಗೂಡಿದ ಋಭುಗಳು । ಶಮೀ—ಯಾಗಾದಿ ಕರ್ಮಗಳನ್ನು । ತರಣಿ-ತ್ವೇನ—ಅತಿಶೀಘ್ರವಾಗಿ । ವಿಷ್ಟ್ವೀ—ನೆರವೇರಿಸಿ । ಮರ್ತಾಸಃ—(ಮರ್ತ್ಯರಾದ) ಮನುಷ್ಯರಾಗಿ । ಸಂತಃ—

ಇದ್ದರೂ ಕೂಡ । **ಅಮೃತತ್ವಂ**—ಮರಣರಹಿತವಾದ ದೇವತ್ವವನ್ನು । **ಆನಶುಃ**—(ತಮ್ಮ ಕರ್ಮಗಳಿಂದ) ಪಡೆದರು (ಅನಂತರ) । **ಸೌಧನ್ವನಾಃ**—ಸುಧನ್ವಪುತ್ರರೂ । **ಸೂರಚಕ್ಷಸಃ**—ಸೂರ್ಯನಿಗೆ ಸಮಾನವಾದ ಪ್ರಕಾಶವುಳ್ಳವರೂ ಅಥವಾ ಜ್ಞಾನವುಳ್ಳವರೂ ಆದ । **ಋಭವಃ**— ಆ ಋಭುಗಳು । **ಸಂವತ್ಸರೇ**— ಸಂವತ್ಸರದ ಅವಯವಗಳಾದ ವಸಂತಾದಿ ಋತುಕಾಲಗಳಲ್ಲಿ (ಅನುಷ್ಠಿಸಬೇಕಾದ) । **ಧೀತಿಭಿಃ**—ಅಗ್ನಿಷ್ಟೋಮಾದಿ ಕರ್ಮಗಳೊಡನೆ) । **ಸಮಪೃಚ್ಯಂತೆ**—ಒಂದಾಗಿ ಸೇರಿಕೊಂಡರು. (ಹವಿಸ್ಸನ್ನು ಸ್ವೀಕಾರಮಾಡಲು ಯೋಗ್ಯರಾದರು) ॥

ಭಾವಾರ್ಥ

ಋತ್ವಿಕ್ಕುಗಳೊಡಗೂಡಿಕೊಂಡು ಋಭುಗಳು ಯಾಗಾದಿಕರ್ಮಗಳನ್ನು ಅತಿಶೀಘ್ರವಾಗಿ ನೆರವೇರಿಸಿ ಮಾನವರಾಗಿದ್ದರೂ ಸಹ ಮರಣರಹಿತವಾದ ದೇವತ್ವವನ್ನು ತಮ್ಮ ಕರ್ಮಗಳಿಂದ ಪಡೆದರು. ಅನಂತರ ಸುಧನ್ವ ಪುತ್ರರೂ, ಸೂರ್ಯನಿಗೆ ಸಮಾನವಾದ ಪ್ರಕಾಶವುಳ್ಳವರೂ ಆದ ಆ ಋಭುಗಳು ಸಂವತ್ಸರದ ಅವಯವಗಳಾದ ವಸಂತಾದಿಋತುಕಾಲಗಳಲ್ಲಿ ಅನುಷ್ಠಿಸಬೇಕಾದ ಅಗ್ನಿಷ್ಟೋಮಾದಿಕರ್ಮಗಳೊಡನೆ ಒಂದಾಗಿ ಸೇರಿಕೊಂಡು ಹವಿಸ್ಸನ್ನು ಸ್ವೀಕಾರಮಾಡಲು ಅರ್ಹರಾದರು.

English Translation

Associated with the priests, and quickly performing the holy rites, they, being yet mortals, acquired immortality, and the sons of Sudhanwan, the Ribhus, brilliant as the sun, became connected with the ceremonies (appropriated to the different seasons) of the year.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ನಿರುಕ್ತವು ಈ ರೀತಿಯಿದೆ.

> **ಕೃತ್ವಾ ಕರ್ಮಾಣಿ ಕ್ಷಿಪ್ರತ್ವೇನ ವೋಢಾರೋ ಮೇಧಾವಿನೋ ವಾ ಮರ್ತಾಸಃ ಸಂತೋ ಅಮೃತತ್ವಮಾನಶಿರೇ ಸೌಧನ್ವನಾ ಋಭವಃ ಸೂರಖ್ಯಾನಾ ಸೂರಪ್ರಜ್ಞಾ ವಾ ಸಂವತ್ಸರೇ ಸಮಪೃಚ್ಯಂತ ಧೀತಿಭಿಃ ಕರ್ಮಭಿಃ । (ನಿ ೧೧-೧೬) .**

ಸೂರ್ಯನಂತೆ ಪ್ರಕಾಶಮಾನರೂ ಅಥವಾ ಸೂರ್ಯನಂತೆ ಪ್ರಜ್ಞೆಯುಳ್ಳವರೂ ಆದ ಋಭುಗಳು ತಮ್ಮ ತಪಃಕರ್ಮಗಳಿಂದಲೂ ಇತರ ಅಸಾಧಾರಣವಾದ ಕಾರ್ಯಗಳಿಂದಲೂ ಸಹ ಮಾನವರಾದರೂ ಅಮೃತತ್ವವನ್ನು ಪಡೆದರು. ಮತ್ತು ಸಂವತ್ಸರದ ಅವಯವಗಳಾದ ವಸಂತಾದಿ ಋತುಕಾಲಗಳಲ್ಲಿ ಅನುಷ್ಠಿಸಬೇಕಾದ ಅಗ್ನಿಷ್ಟೋಮಾದಿ ಕರ್ಮಗಳೊಂದಿಗೆ ಒಂದಾದರು ಎಂದರೆ ಸಕಲ ಯಜ್ಞಗಳಲ್ಲಿಯೂ ಹವಿಸ್ಸ್ವೀಕಾರಕ್ಕೆ ಅರ್ಹತೆಯನ್ನು ಪಡೆದರು ಎಂದಿದೆ.

ವಾಘತಃ - ಈ ಶಬ್ದವು ಋತ್ವಿಙ್ನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೮) ಸಾಯಣರು ಋತ್ವಿಙ್ನಾಮೈತತ್ ಅತ್ರ ತು ಸಾಮರ್ಥ್ಯಾತ್ ತದ್ವಂತೋ ಲಕ್ಷ್ಯಂತೇ । ಋತ್ವಿಗ್ಭಿರುಪೇತಾ ಋಭವಃ । ಋತ್ವಿಙ್ನಾಮಗಳಲ್ಲಿ ಪಠಿತವಾಗಿರುವ ಈ ಶಬ್ದಕ್ಕೆ ಈ ಸಂದರ್ಭದಲ್ಲಿ ಋತ್ವಿಕ್ಕುಗಳೊಡನೆ ಕೂಡಿರುವ ಋಭುಗಳು ಎಂದರ್ಥವೆಂದು

ಹೇಳಿದ್ದಾರೆ. ಆದರೆ ನಿರುಕ್ತದಲ್ಲಿ **ವೋಢಾರೋ ಮೇಧಾವಿನೋ ವಾ** ಎಂದಿದೆ. **ವೋಢಾರಃ** ಎಂಬುದಕ್ಕೆ ದುರ್ಗಾಚಾರ್ಯರು **ಯಜ್ಞಸ್ಯಾನುಷ್ಠಾತಾರಃ** ಯಜ್ಞಾನುಷ್ಠಾನವನ್ನು ಮಾಡುವವರು ಅಥವಾ **ಮೇಧಾವಿನಃ ನ ಹ್ಯಮೇಧಾವಿನಃ ಸಂವತ್ಸರೇಣ ಸಕಲಂ ಕರ್ಮ ಸಮಾಪಯಿತುಂ ಶಕ್ತಾಃ ।** ಒಂದು ಸಂವತ್ಸರದಲ್ಲಿಯೇ ಸಕಲ ಕರ್ಮಗಳನ್ನೂ ನೆರವೇರಿಸಲು ಶಕ್ತಿಯುಳ್ಳವರು ಎಂದರ್ಥವೆಂದು ವಿವರಿಸಿದ್ದಾರೆ.

ವಿಷ್ಟ್ವೀ—ಈ ಶಬ್ದವು ೨೬ ಕರ್ಮನಾಮಗಳಲ್ಲಿ ಪಠಿತವಾಗಿದೆ (ನಿ. ೩-೧). ಆದರೆ, **ವಿಷ್ಟ್ವೀತಿ ನ ಕರ್ಮನಾಮ । ಶಮೀತ್ಯನೇನ ಪೌನರುಕ್ತ್ಯಪ್ರಸಂಗಾತ್ । ಕಿಂ ತರ್ಹಿ । ವಿಷೇರ್ವ್ಯಾಪ್ತ್ಯರ್ಥಸ್ಯ ಕ್ರಿಯಾಶಬ್ದೋಽಯಂ ವಿಷ್ಟ್ವೀತಿ । ವಿಷ್ಟ್ವಾ ವ್ಯಾಪ್ತ್ವಾ । ಕೃತ್ವಾ ಇತ್ಯರ್ಥಃ ।** ಕರ್ಮನಾಮಗಳಲ್ಲಿ ಪಠಿತವಾಗಿದ್ದರೂ ಸಹ ಇಲ್ಲಿ ಪುನಃ ಕರ್ಮವಾಚಕವಾದ **ಶಮೀ** ಎಂಬ ಪುನರುಕ್ತಿಯಿರುವುದರಿಂದ ವ್ಯಾಪ್ತ್ಯರ್ಥವುಳ್ಳ **ವಿಷ್** ಧಾತುವಿನಿಂದ ನಿಷ್ಪನ್ನವಾದ ಈ ಪದಕ್ಕೆ ನೆರವೇರಿಸಿ ಎಂದರ್ಥವೆಂದು ಭಾಷ್ಯಗಳಲ್ಲಿ ವಿವರಿಸಿದೆ.

ಶಮೀ—ಈ ಪದವೂ ಕರ್ಮನಾಮಗಳಲ್ಲಿ ಪಠಿತವಾಗಿದೆ (ನಿ. ೩-೧) **ಯಾಗದಾನಾದೀನಿ ಕರ್ಮಾಣಿ । ಅನ್ಯಾನ್ಯಪಿ " ಏಕಂ ಚಮಸಂ ಚತುರಃ ಕೃಣೋತನ " (ಋ. ಸಂ. ೧–೧೬೧–೨) ಇತ್ಯಾದಿನಾ ದೇವೈರುಕ್ತಾನಿ ಕರ್ಮಾಣಿ ।** ಇಲ್ಲಿ ಕರ್ಮವೆಂದರೆ ಯಾಗಾದಿ ಕರ್ಮಗಳು ಮತ್ತು " ಒಂದು ಚಮಸವನ್ನು ನಾಲ್ಕಾಗಿ ಮಾಡಿ " ಎಂದಿವೇ ಮುಂತಾದ ದೇವತೆಗಳಿಂದ ಪ್ರಾರ್ಥಿತವಾದ ಕರ್ಮಗಳೆಂದರ್ಥ.

**ಸೂರಚಕ್ಷಸಃ—ಸೂರ್ಯಸಮಾನಪ್ರಕಾಶಾಃ ಸೂರ್ಯಸದೃಶಜ್ಞಾನಾ ವಾ ।** ಸೂರ್ಯನಿಗೆ ಸಮಾನವಾದ ಪ್ರಕಾಶವುಳ್ಳವರು ಅಥವಾ ಸೂರ್ಯನಿಗೆ ಸಮಾನವಾದ ಜ್ಞಾನವುಳ್ಳವರು ಎಂದರ್ಥ. **ಋಭು** ಶಬ್ದಕ್ಕೆ **ಉರು ಭಾಸಮಾನೋ ಮೇಧಾವೀ ವಾ ।** ಅತ್ಯಂತ ಪ್ರಕಾಶಮಾನನು ಅಥವಾ ಮೇಧಾವಿಯೆಂದರ್ಥವುಂಟು. ಉದಾಹರಣೆಗೆ—

**ತ್ವಮಗ್ನ ಋಭುರಾಕೇ ನಮಸ್ಯ೧ ಸ್ತ್ವಂ ವಾಜಸ್ಯ ಕ್ಷುಮತೋ ರಾಯ ಈಶಿಷೇ ।**
(ಋ. ಸಂ ೨-೧-೧೦)

ಎಂಬ ಋಕ್ಕಿನಲ್ಲಿ **ಅಗ್ನಿ**ಗೆ **ಋಭು** ಶಬ್ದವು ವಿಶೇಷಣವಾಗಿ ಮೇಲಿನ ಅರ್ಥವನ್ನು ಕೊಡುತ್ತದೆ. ಪ್ರಕೃತವಾದ ಋಕ್ಕಿನಲ್ಲಿ **ಸೂರಚಕ್ಷಸಃ** ಎಂಬ ವಿಶೇಷಣವು ಋಭುಗಳ ಈ ವಿಶೇಷಗುಣವನ್ನು ತಿಳಿಸುತ್ತದೆ.

**ಧೀತಿಭಿಃ—ಅಗ್ನಿಷ್ಟೋಮಾದಿಕರ್ಮಭಿಃ ।** ಅಗ್ನಿಷ್ಟೋಮಾದಿ ಕರ್ಮಗಳೊಡನೆ ಎಂದು ಇಲ್ಲಿ ಅರ್ಥವಾಗುತ್ತದೆ. ಧೀತಿಶಬ್ದಕ್ಕೆ **ಕರ್ಮ, ಪ್ರಜ್ಞಾ** ಎಂಬ ಎರಡು ಅರ್ಥವೂ ಉಂಟು. ನಿರುಕ್ತದಲ್ಲಿ **ಅಂಗುಳಿನಾಮ**ಗಳಲ್ಲೂ ಪಠಿತವಾಗಿದೆ (ನಿ. ೩-೮) ನಿರುಕ್ತಕಾರರು ಕರ್ಮ, ಪ್ರಜ್ಞೆ ಎಂಬೆರಡರ್ಥಗಳೂ ಇರತಕ್ಕ ಎರಡು ಋಕ್ಕುಗಳನ್ನು ಉದಹರಿಸಿದ್ದಾರೆ.

**ಪಾರಾವತಘ್ನೀಮವಸೇ ಸುವೃಕ್ತಿಭಿಃ ಸರಸ್ವತೀಮಾ ವಿವಾಸೇಮ ಧೀತಿಭಿಃ ।**
(ಋ. ಸಂ. ೬-೬೧-೨)

ಎಂಬ ಋಕ್ಕಿನಲ್ಲಿ **ಧೀತಿಭಿಃ** ಎಂದರೆ **ಕರ್ಮಭಿಃ** ಎಂದೂ,

**ಋತಸ್ಯ ಹಿ ಶುರುಧಃ ಸಂತಿ ಪೂರ್ವೀರ್ ಋತಸ್ಯ ಧೀತಿರ್ವೃಜಿನಾನಿ ಹಂತಿ ।**
(ಋ. ಸಂ. ೪-೨೩-೮)

ಎಂಬ ಋಕ್ಕಿನಲ್ಲಿ ಪ್ರಜ್ಞಾ ಎಂದೂ ನಿರುಕ್ತಕಾರರು ಅರ್ಥವನ್ನು ಹೇಳಿರುತ್ತಾರೆ. ಸ್ತುತಿಯೆಂಬ ಅರ್ಥದಲ್ಲೂ ಕೆಲ ವೆಡೆಗಳಲ್ಲಿ ಈ ಶಬ್ದದ ಪ್ರಯೋಗವಿದೆ.

**ಸಮಪೃಚ್ಯಂತ—ಸಂಯುಕ್ತಾ ಅಭವನ್ । ಹವಿರ್ಭಾಗಾರ್ಹಾ ಬಭೂವುಃ ।** ಕರ್ಮಗಳೊಂದಿಗೆ ಐಕ್ಯತೆಯನ್ನು ಪಡೆದರು ಎಂದರೆ ಹವಿಸ್ಸ್ವೀಕಾರಕ್ಕೆ ಅರ್ಹತೆಯನ್ನು ಪಡೆದರು ಎಂದರ್ಥ.

॥ ವ್ಯಾಕರಣಪ್ರಕ್ರಿಯಾ

**ವಿಷ್ಟ್ವೀ**—ವಿಷ್ಲೃ ವ್ಯಾಪ್ತೌ ಧಾತು. **ಸಮಾನಕರ್ತೃಕಯೋಃ ಪೂರ್ವ**—(ಪಾ. ಸೂ. ೩-೨-೨೧) ಎಂಬುದರಿಂದ ಕ್ತ್ವಾ ಪ್ರತ್ಯಯ. ಇದಕ್ಕೆ **ಸ್ನಾತ್ವ್ಯಾದಯಶ್ಚ**—(ಪಾ. ಸೂ. ೭-೧-೪೯) ಎಂಬುದರಿಂದ ಈಕಾರ ಅಂತಾದೇಶ. ಷ್ಟುತ್ವದಿಂದ ಪ್ರತ್ಯಯ ತಕಾರಕ್ಕೆ ಟಕಾರಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಮರ್ತಾಸಃ**—ಜಸ್ ಪರವಾದಾಗ **ಆಜ್ಜಸೇರಸುಕ್**—(ಪಾ. ಸೂ. ೭-೧-೫೦), ಎಂಬುದರಿಂದ ಅದಕ್ಕೆ ಅಸುಕಾಗಮ.

**ಶಮೀ**—ಇದಕ್ಕೆ ಶಸ್ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲುಕ್.

**ಆನಶುಃ**—ಅಶೂ ವ್ಯಾಪ್ತೌ ಧಾತು. **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ಪರಸ್ಮೈಪದಿಯಾಗುತ್ತದೆ. ಲಿಟ್ ಪ್ರಥಮಪುರುಷ ಬಹುವಚನದಲ್ಲಿ **ಪರಸ್ಮೈಪದಾನಾಂ**—(ಪಾ. ಸೂ. ೩-೪-೮೨) ಎಂಬುದರಿಂದ ಉಸಾದೇಶ. ಧಾತುವಿಗೆ ದ್ವಿತ್ವ. ಆದಿಶೇಷ. **ಅಶ್ನೋತೇಶ್ಚ**—(ಪಾ. ಸೂ. ೭-೪-೭೨) ಎಂಬುದರಿಂದ ಅಭ್ಯಾಸದ ಪರದಲ್ಲಿರುವ ಧಾತುವಿನ ಅಚಿಗೆ ನುಡಾಗಮ. **ಅತ ಆದೇಃ** (ಪಾ. ಸೂ. ೭-೪-೭೦) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ಆನಶುಃ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಪೃಚ್ಯಂತ**—ಪೃಚೀ ಸಂಪರ್ಕೇ. ಧಾತು. ಕರ್ಮಣಿಯಲ್ಲಿ ಲಙ್. ಪ್ರಥಮಪುರುಷ ಬಹುವಚನದಲ್ಲಿ **ಭಾವಕರ್ಮಣೋಃ**—(ಪಾ. ಸೂ. ೧-೩-೧೩) ಎಂಬುದರಿಂದ ಆತ್ಮನೇಪದವನ್ನು ವಿಧಾನಮಾಡಿರುವುದರಿಂದ ಝ ಪ್ರತ್ಯಯ. **ಝೋಽಂತಃ**—ಎಂಬುದರಿಂದ ಅಂತಾದೇಶ **ಸಾರ್ವಧಾತುಕೇ ಯಕ್**—(ಪಾ. ಸೂ. ೩-೧-೬೭) ಎಂಬುದರಿಂದ ಧಾತುವಿಗೆ ಯಕ್. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. **ಅತೋಗುಣೇ**—ಸೂತ್ರದಿಂದ ಪರರೂಪ ಏಕಾದೇಶ. ಅಂಗಕ್ಕೆ ಅಡಾಗಮ. ಅಪೃಚ್ಯಂತ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿ ಬಂದುದರಿಂದ **ತಿಙ್ಙತಿಙಃ**—ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೪ ॥

ಸಂಹಿತಾಪಾಠಃ

ಕ್ಷೇತ್ರಮಿವ ವಿ ಮಮುಸ್ತೇಜನೇನ ಏಕಂ ಪಾತ್ರಮೃಭವೋ
ಜೇಹಮಾನಂ।
ಉಪಸ್ತುತಾ ಉಪಮಂ ನಾಧಮಾನಾ ಅಮರ್ತ್ಯೇಷು ಶ್ರವ
ಇಚ್ಛಮಾನಾಃ ॥ ೫ ॥

ಪದಪಾಠಃ

ಕ್ಷೇತ್ರಂಽಇವ । ವಿ । ಮಮುಃ । ತೇಜನೇನ । ಏಕಂ । ಪಾತ್ರಂ । ಋಭವಃ ।
ಜೇಹಮಾನಂ ।
ಉಪಽಸ್ತುತಾಃ । ಉಪಽಮಂ । ನಾಧಮಾನಾಃ । ಅಮರ್ತ್ಯೇಷು । ಶ್ರವಃ ।
ಇಚ್ಛಮಾನಾಃ । ॥ ೫ ॥

॥ ಸಾಯಣಭಾಷ್ಯಂ ॥

ಉಪಸ್ತುತಾಃ ಸಮೀಪಸ್ಥೈರೃಷಿಭಿಃ ಸ್ತುತಾ ಋಭವೋ ಜೇಹಮಾನಂ ಹೋಮಕ್ರಿಯಾಂ ಪ್ರತಿ ಪ್ರಯತಮಾನಮೇಕಮಸಹಾಯಂ ಪಾತ್ರಂ ಪಾನಸಾಧನಂ ತ್ವಷ್ಟ್ರಾ ನಿರ್ಮಿತಂ ಚಮಸಂ ಮಾನದಂಡೇನ ಕ್ಷೇತ್ರಮಿವ ಭೂಮಿಮಿವ ತೇಜನೇನ ತೀಕ್ಷ್ಣೇನ ಶಸ್ತ್ರೇಣ ಚಮಸಚತುಷ್ಟಯರೂಪೇಣ ಕರ್ತುಂ ವಿ ಮಮುಃ । ವಿಶೇಷೇಣ ಮಾನಂ ಕೃತವಂತಃ । ಕಿಮಿಚ್ಛಂತಃ । ಉಪಮಂ ಸರ್ವೇಷಾಮುಪಮಾನಭೂತಂ ಪ್ರಶಸ್ತಂ ಸೋಮಲಕ್ಷಣಮನ್ನಂ ನಾಧಮಾನಾ ಯಾಚಮಾನಾಃ । ಏತದೇವ ವಿವೃಣೋತಿ । ಅಮರ್ತ್ಯೇಷು ಮರಣರಹಿತೇಷು ದೇವೇಷು ಮಧ್ಯೇ ಶ್ರವೋ ಹವಿರ್ಲಕ್ಷಣಮನ್ನಮಿಚ್ಛಮಾನಾ ಇಚ್ಛಂತಃ । ದೇವೈಃ ಸಹ ಸೋಮಪಾನಂ ಕಾಮಯಮಾನಾಸ್ತಲ್ಲಾಭಾಯ ಚತುರಶ್ಚಮಸಾನಕಾರ್ಷುರಿತ್ಯರ್ಥಃ ॥ ಮಮುಃ । ಮಾಙ್ ಮಾನೇ ಶಬ್ದೇ ಚ । ವ್ಯತ್ಯಯೇನ ಪರಸ್ಮೈಪದಂ । ತೇಜನೇನ । ಅಣೋಽಪ್ರಗೃಹ್ಯಸ್ಯಾನುನಾಸಿಕಃ । ಪಾ ೮-೪-೫೭ । ಇತ್ಯವಸಾನೇ ವ್ಯತ್ಯಯೇನಾಕಾರಸ್ಯಾನುನಾಸಿಕ್ಯಂ । ಈಷಾ ಅಕ್ಷಾದಿತ್ವಾತ್ಪ್ರಕೃತಿಭಾವಃ । ಜೇಹಮಾನಂ । ವೇಹೃ ಜೇಹೃ ವಾಹೃ ಪ್ರಯತ್ನೇ । ಭೌವಾದಿಕಃ । ಅನುದಾತ್ತೇತ್ತ್ವಾದಾತ್ಮನೇಪದಂ । ಉಪಸ್ತುತಾಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಉಪಮಂ । ಮಾಙ್ ಮಾನೇ । ಆತಶ್ಚೋಪಸರ್ಗ ಇತಿ ಕಪ್ರತ್ಯಯಃ । ಇಚ್ಛಮಾನಾಃ । ವ್ಯತ್ಯಯೇನಾತ್ಮನೇಪದಂ ॥

।ಪ್ರತಿಪದಾರ್ಥ।

**ಉಪಮಂ** (ಎಲ್ಲಕ್ಕೂ) ಮಾದರಿಯಾಗಿ ಪ್ರಶಸ್ತವಾದ ಮತ್ತು ಸೋಮರಸರೂಪವಾದ ಅನ್ನವನ್ನು । **ನಾಧಮಾನಾಃ**—ಪ್ರಾರ್ಥಿಸುವವರಾಗಿಯೂ । **ಅಮರ್ತ್ಯೇಷು**—ಮರಣರಹಿತರಾದ ದೇವತೆಗಳ ನಡುವೆ । **ಶ್ರವಃ**—ಹವಿಸ್ಸಿನರೂಪದ ಅನ್ನವನ್ನು । **ಇಚ್ಛಮಾನಾಃ**—ಅಪೇಕ್ಷಿಸುವವರಾಗಿಯೂ ಆಗಿ । **ಉಪಸ್ತುತಾಃ**—(ಸಮೀಪದಲ್ಲಿದ್ದ ಋಷಿಗಳಿಂದ) ಹೊಗಳಲ್ಪಟ್ಟ । **ಋಭವಃ**—ಋಭುಗಳು । **ಜೇಹಮಾನಂ**—(ಹೋಮಕರ್ಮದಲ್ಲಿ) ಉದ್ಯುಕ್ತವಾದುದೂ । **ಏಕಂ**—ಒಂದೇ ಒಂದಾಗಿ ಇರುವುದೂ । **ಪಾತ್ರಂ**—(ತ್ವಷ್ಟೃನಿರ್ಮಿತವಾದುದೂ ಆದ) ಚಮಸಪಾತ್ರೆಯನ್ನು । **ಕ್ಷೇತ್ರಮಿವ**—(ಅಳೆಯುವ ಕೋಲಿನಿಂದ) ಭೂಮಿಯನ್ನು ಅಳತೆಮಾಡಿ ಹಂಚಿಕೊಳ್ಳುವಂತೆ । **ತೇಜನೇನ**—ತೀಕ್ಷ್ಣವಾದ ಶಸ್ತ್ರದಿಂದ । **ವಿ ಮಮುಃ**—ವಿಶೇಷವಾಗಿ ಅಳತೆಯನ್ನು ಮಾಡಿ ಹಂಚಿಕೊಂಡರು.

॥ ಭಾವಾರ್ಥ ॥

ಎಲ್ಲಕ್ಕೂ ಮಾದರಿಯಾಗಿ ಪ್ರಶಸ್ತವಾದುದೂ ಮತ್ತು ಸೋಮರಸರೂಪವಾದುದೂ ಆದ ಅನ್ನವನ್ನು ಪ್ರಾರ್ಥಿಸುವವರಾಗಿಯೂ, ಮರಣರಹಿತರಾದದೇವತೆಗಳ ನಡುವೆ ಹವಿಸ್ಸಿನರೂಪದ ಅನ್ನವನ್ನು ಅಪೇಕ್ಷಿಸುವವರಾಗಿಯೂ ಆಗಿ ಸಮೀಪದಲ್ಲಿದ್ದ ಋಷಿಗಳಿಂದ ಹೊಗಳಲ್ಪಟ್ಟ ಋಭುಗಳು ಹೋಮಕರ್ಮದಲ್ಲಿ ಉದ್ಯುಕ್ತವಾದುದೂ, ಒಂದೇ ಒಂದಾಗಿ ಇರುವುದೂ, ತ್ವಷ್ಟೃನಿರ್ಮಿತವಾದುದೂ ಆದ ಚಮಸಪಾತ್ರೆಯನ್ನು ಅಳೆಯುವಕೋಲಿನಿಂದ ಭೂಮಿಯನ್ನು ಅಳತೆಮಾಡಿಹಂಚಿಕೊಳ್ಳುವಂತೆ ತೀಕ್ಷ್ಣವಾದ ಶಸ್ತ್ರದಿಂದ ವಿಶೇಷವಾಗಿ ಅಳತೆಯನ್ನು ಮಾಡಿ ಹಂಚಿಕೊಂಡರು. (ನಾಲ್ಕು ಪಾತ್ರೆಗಳನ್ನಾಗಿ ಮಾಡಿದರು)

## English Translation

Lauded by the bystanders, the Ribhus, with a sharp weapon, meted out the single sacrificial ladle like a field (measured by a rod), soliciting the best (libations), and desiring (to participate of) sacrificial food amongst the gods.

ವಿಶೇಷವಿಷಯಗಳು

**ಜೇಹಮಾನಂ**—ಜೇಹತೇ ಎಂಬ ಪದವು ೧೨೨ ಗತಿಕರ್ಮನಾಮಗಳಲ್ಲಿ ಪಠಿತವಾಗಿದೆ. (ನಿ. ೨-೯) ಪ್ರಯುಕ್ತಪದು, ಉದ್ಯಮಿಸು ಎಂಬರ್ಥವನ್ನು ಕೊಡುವ ಜೇಹೃ ಧಾತುವಿನಿಂದ ನಿಷ್ಪನ್ನವಾಗಿದೆ. ಮತ್ತು ಸಂದರ್ಭಾನುಸಾರವಾಗಿ ಅರ್ಥವಾಗುತ್ತದೆ. ಉದಾಹರಣೆಗೆ—

ತಿರೋ ಅಪಶ್ಯಂ ಪಥಿಭಿಃ ಸುಗೇಭಿರರೇಣುಭಿರ್ಜೇಹಮಾನಂ ಪತತ್ರಿ ।

(ಋ. ಸಂ. ೧-೧೬೩-೬)

ಎಂಬ ಋಕ್ಕಿನಲ್ಲಿ ವ್ಯಾಪಿಸು ಎಂಬರ್ಥವೂ,

ಅಸ್ಯ ಶುಷ್ಮಾಸೋ ದದೃಶಾನಪವೇರ್ಜೇಹಮಾನಸ್ಯ ಸ್ವನಯನ್ನಿಯುದ್ಭಿಃ ।

(ಋ. ಸಂ. ೧೦-೩-೬)

ಎಂಬಲ್ಲಿ ಕೇವಲ ಗಮನಾರ್ಥದಲ್ಲೂ, ಎಂದರೆ **ದೇವಾನ್ ಪ್ರತಿ ಗಚ್ಛತಃ** ಎಂದೂ,

**ಯೇ ತಾತೃಷುರ್ದೇವತ್ರಾ ಜೇಹಮಾನಾ ಹೋತ್ರಾವಿದಃ ಸ್ತೋಮತಷ್ಟಾಸೋ ಅರ್ಕೈಃ ।**
(ಋ. ಸಂ. ೧೦-೧೫-೯)

ಈ ಸ್ಥಳದಲ್ಲಿ **ಪ್ರಾಪ್ತಾಃ** ಎಂಬರ್ಥವೂ ಆಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಅತ್ಯುತ್ಕಟವಾದ ಇಚ್ಛೆಯನ್ನು ಸೂಚಿಸುತ್ತದೆ. ಆದುದರಿಂದ ಸತತವಾಗಿ ಹೋಮಕ್ರಿಯೆಯಲ್ಲಿ ಉದ್ಯುಕ್ತವಾದುದು ಎಂದು ಚಮಸಕ್ಕೆ ವಿಶೇಷಣವಾಗಿದೆ.

**ಉಪಮಂ ನಾಥಮಾನಾಃ—ಉಪಮಂ ಸರ್ವೇಷಾಮುಪಮಾನಭೂತಂ ಪ್ರಶಸ್ತಂ ಸೋಮಲಕ್ಷಣಮನ್ನಂ ಯಾಚಮಾನಾಃ ।** ಅನ್ನಗಳಿಗೆಲ್ಲಾ ಮಾದರಿಯಾದುದೂ, ಸೋಮರೂಪವಾದುದೂ ಆದ ಅನ್ನವನ್ನು ಎಂದು **ಉಪಮ** ಶಬ್ದಕ್ಕೆ **ಮಾದರಿ** ಯೆಂದರ್ಥವನ್ನು ಸಾಯಣರು ಮಾಡಿದ್ದಾರೆ. ಸ್ಕಂದಸ್ವಾಮಿಗಳು **ಉಪಮ ಇತ್ಯಂತಿಕನಾಮ । ನಾಥಿರ್ಯಾಚ್ಞಾರ್ಥಃ । ಸನ್ನಿಕೃಷ್ಟತ್ವಂ ಪ್ರಾರ್ಥಯಮಾನಾಃ । ದೇವೇಷ್ವಂತರ್ಗತಿಮಿಚ್ಛಂತ ಇತ್ಯರ್ಥಃ ।** ಉಪಮಶಬ್ದವು ಅಂತಿಕನಾಮಗಳಲ್ಲಿ ಪಠಿತವಾಗಿರುವುದರಿಂದ ದೇವತೆಗಳ ಸಾಮೀಪ್ಯವನ್ನು ಯಾಚಿಸುವವರಾಗಿ ಅಥವಾ ದೇವತೆಗಳಲ್ಲಿ ಅಂತರ್ಗತರಾಗಲು ಯಾಚಿಸುವವರಾಗಿ ಎಂದು **ಉಪಮ** ಶಬ್ದಕ್ಕೆ ಸಾಮೀಪ್ಯವೆಂಬರ್ಥವನ್ನು ಮಾಡಿದ್ದಾರೆ.

**ತೇಜನೇನ—ತೀಕ್ಷ್ಣೇನ ಶಸ್ತ್ರೇಣ ಚಮಸಚತುಷ್ಟಯರೂಪೇಣ** ಎಂದು **ತೇಜನೇನ** ಎಂಬ ಪದವನ್ನು ಸಾಯಣರು ಚಮಸಚತುಷ್ಟಯರೂಪವಾದ ಶಸ್ತ್ರಕ್ಕೆ ವಿಶೇಷಣವನ್ನಾಗಿ ಮಾಡಿದ್ದಾರೆ. ಸ್ಕಂದಸ್ವಾಮಿಗಳೂ ಸಹ ಮೊದಲು ಇದೇ ಅರ್ಥವನ್ನು ಮಾಡಿದ್ದಾರೆ. **ತೇಜನೇನ । ತಿಜ ನಿಶಾನೇ । ನಿಶಿತೇನ ವ್ಯಥನೇನ ।** ತೀಕ್ಷ್ಣವಾದ ಶಸ್ತ್ರದಿಂದ ಎಂದು ಮೊದಲು ಹೇಳಿ ಅನಂತರ **ತೇಜನಶಬ್ದಃ ತೇಜಃ ಪರ್ಯಾಯಃ । ಸ್ವೇನ ತೇಜಸಾ।** ತೇಜನ ಶಬ್ದವು ತೇಜಸ್ಸಿಗೆ ಪರ್ಯಾಯಪದವಾಗಿರುವುದರಿಂದ ತಮ್ಮ ಸ್ವತೇಜಸ್ಸಿನಿಂದ ಎಂದು ಎರಡನೆಯ ಅರ್ಥವನ್ನೂ ಹೇಳಿದ್ದಾರೆ.

॥ವ್ಯಾಕರಣಪ್ರಕ್ರಿಯಾ ॥

**ಮಮುಃ**—ಮಾಙ್ ಮಾನೇ ಶಬ್ದೇ ಚ. ಧಾತು. ಙಿತ್ತ್ವಾದರೂ **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫)—ಎಂಬುದರಿಂದ ಪರಸ್ಮೈಪದಪ್ರತ್ಯಯ ಬರುತ್ತದೆ. **ಪರಸ್ಮೈಪದಾನಾಂ**—ಎಂಬುದರಿಂದ ಝಿಗೆ ಉಸಾದೇಶ. ಧಾತುವಿಗೆ ದ್ವಿತ್ವ. **ಅತೋ ಲೋಪ ಇಟಿ ಚ**—(ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. **ಹ್ರಸ್ವಃ**—(ಪಾ. ಸೂ. ೭-೪-೫೯) ಸೂತ್ರದಿಂದ ಅಭ್ಯಾಸದ ಆಕಾರಕ್ಕೆ ಹ್ರಸ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ತೇಜನೇನ**—ತಿಜ ನಿಶಾನೇ. ಧಾತು. ನಿಶಾನವೆಂದರೆ ತೀಕ್ಷ್ಣೀಕರಣವು. ಲ್ಯುಟ್ ಪ್ರತ್ಯಯ. **ಯುವೋರನಾಕೌ**—(ಪಾ. ಸೂ. ೭-೧-೧) ಎಂಬುದರಿಂದ ಅನಾದೇಶ. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. **ಲಿತಿ**—(ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ. ವ್ಯತ್ಯಯದಿಂದ **ಅಣೋಽಪ್ರಗೃಹ್ಯಸ್ಯಾನುನಾಸಿಕಃ**—(ಪಾ. ಸೂ. ೮-೪-೫೭)

ಎಂಬುದರಿಂದ ಅವಸಾನದಲ್ಲಿ (ಅಂತ್ಯದಲ್ಲಿ) ಆಕಾರಕ್ಕೆ ಅನುನಾಸಿಕತ್ವ. ಈಷಾ ಅಕ್ಷಾದಿಯಲ್ಲಿ ಸೇರಿರುವುದರಿಂದ ಪ್ರಕೃತಿಭಾವ ಬರುತ್ತದೆ.

**ಜೇಹಮಾನಮ್**—ವೇಹೃ ಜೇಹೃ ಬಾಹೃ ಪ್ರಯತ್ನೇ ಧಾತು. ಭ್ವಾದಿ. ಅನುದಾತ್ತೇತ್ತಾದುದರಿಂದ **ಅನುದಾತ್ತಙಿತ ಆತ್ಮನೇಪದಮ್**—ಸೂತ್ರದಿಂದ ಆತ್ಮನೇಪದಿಯಾಗುತ್ತದೆ. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶಪ್ವಿಕರಣ. **ಆನೇ ಮುಕ್**—(ಪಾ. ಸೂ. ೭-೨-೮೨) ಎಂಬುದರಿಂದ ಅಂಗಕ್ಕೆ ಮುಕಾಗಮ. ಶಪ್ ಪಿತ್ತಾದುದರಿಂದ ಅನುದಾತ್ತ. ಲಸಾರ್ವಧಾತುಕವು ಅನುಪದೇಶದ ಪರದಲ್ಲಿರುವುದರಿಂದ **ತಾಸ್ಯನುದಾತ್ತೇತ**—(ಪಾ. ಸೂ ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಉಪಸ್ತುತಾಃ**—ಷ್ಟುಞ್ ಸ್ತುತೌ. ಧಾತು. **ನಿಷ್ಠಾ**—(ಪಾ. ಸೂ. ೩-೨-೧೦೨)— ಎಂಬುದರಿಂದ ಕ್ತಪ್ರತ್ಯಯ. ಗತಿರನಂತರಃ (ಪಾ. ಸೂ ೬-೨-೪೯) ಎಂಬುದರಿಂದ ಗತಿಗೆ (ಉಪ) ಪ್ರಕೃತಿಸ್ವರ ಬರುತ್ತದೆ.

**ಉಪಮಮ್**—ಮಾಙ್ ಮಾನೇ. ಧಾತು. **ಆತಶ್ಚೋಪಸರ್ಗೇ**—(ಪಾ. ಸೂ. ೩-೩-೧೦೬) ಎಂಬುದರಿಂದ ಕಪ್ರತ್ಯಯ ಕಿತ್ತಾದುದರಿಂದ **ಆತೋ ಲೋಪ ಇಟಿ ಚ**—(ಪಾ ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಪ್ರತ್ಯಯಸ್ವರ ಬರುತ್ತದೆ. **ಗತಿಕಾರಕೋಪಪದಾತ್ಕೃತ್**--(ಪಾ. ಸೂ. ೬-೩-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ನಾಧಮಾನಾಃ**—ನಾಧೃ ಯಾಞ್ಚಾಯಾಮ್. ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಅಂಗಕೆ ಮುಕಾಗಮ. ಧಾತುಸ್ವರ ಉಳಿಯುತ್ತದೆ.

**ಅಮರ್ತ್ಯೇಷು**—ನ ಮರ್ತ್ಯಾಃ ಅಮರ್ತ್ಯಾಃ ತೇಷು. **ತತ್ಪುರುಷೇತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಇಚ್ಛಮಾನಾಃ** — ಇಷು ಇಚ್ಛಾಯಾಮ್ ಧಾತು. **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇಪದಿಯಾಗುವುದರಿಂದ ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ತುದಾದಿಭ್ಯಃ ಶಃ**—(ಪಾ. ಸೂ. ೩-೧-೭೭) ಎಂಬುದರಿಂದ ಶವಿಕರಣ. **ಇಷುಗಮಿಯಮಾಂ ಛಃ**—(ಪಾ. ಸೂ. ೭-೩-೭೭) ಎಂಬುದರಿಂದ ಧಾತುವಿಗೆ ಛಾದೇಶ. ವಿಕರಣಸ್ವರ ಉಳಿಯುತ್ತದೆ.

—————:೦:—————

ಸಂಹಿತಾಪಾಠಃ

ಆ ಮನೀಷಾಮಂತರಿಕ್ಷಸ್ಯ ನೃಭ್ಯಃ ಸ್ರುಚೇವ ಘೃತಂ ಜುಹ-
ವಾಮ ವಿದ್ಮನಾ ।
ತರಣಿತ್ವಾ ಯೇ ಪಿತುರಸ್ಯ ಸಶ್ಚಿರ ಋಭವೋ ವಾಜಮರುಹ-
ನ್ದಿವೋ ರಜಃ ॥ ೬ ॥

ಪದಪಾಠಃ

ಆ । ಮನೀಷಾಂ । ಅಂತರಿಕ್ಷಸ್ಯ । ನೃಽಭ್ಯಃ । ಸ್ರುಚಾಽಇವ । ಘೃತಂ ।
ಜುಹವಾಮ । ವಿದ್ಮನಾ ।
ತರಣಿಽತ್ವಾ । ಯೇ । ಪಿತುಃ । ಅಸ್ಯ । ಸಶ್ಚಿರೇ । ಋಭವಃ । ವಾಜಂ ।
ಅರುಹನ್ । ದಿವಃ । ರಜಃ ॥ ೬ ॥

ಸಾಯಣಭಾಷ್ಯಂ

ಅಂತರಿಕ್ಷಸ್ಯಾಂತರಿಕ್ಷಲೋಕಸ್ಯ ಮಧ್ಯಮಸ್ಥಾನಸ್ಯ ಸಂಬಂಧಿಭ್ಯೋ ನೃಭ್ಯೋ ಯಜ್ಞಸ್ಯ ನೇತೃಭ್ಯ ಋಭುಭ್ಯಃ । ಋಭವೋ ಹಿ ಯಜ್ಞಸ್ಯ ನೇತಾರಃ । ತೇನ ಹಿ ದೇವತ್ವಂ ಪ್ರಾಪ್ತಾಃ । ಯದ್ವಾ । ಅಂತ-ರಿಕ್ಷಸ್ಯ ಲೋಕಸ್ಯ ನೇತೃಭ್ಯಃ । ಮಧ್ಯಮೇ ಸ್ಥಾನೇ ಹ್ಯೇತೇ ಪಠ್ಯಂತೇ । ತಾದೃಶೇಭ್ಯಃ ಸ್ರುಚೇವ ಯಥಾ ಸ್ರುಚಾ ಜುಹ್ವಾ ಘೃತಂ ಕ್ಷರಣಶೀಲಾಜ್ಯೋಪೇತಂ ಹವಿರಾ ಜುಹವಾಮ । ಮರ್ಯಾದಾಯಾಮಾಕಾರಃ । ಯಥಾಶಾಸ್ತ್ರಂ ಪ್ರಯಚ್ಛಾಮ । ಏವಮೇವ ಮನೀಷಾಂ ಸ್ತುತಿಂ ವಿದ್ಮನಾ ವೇದನೇನ ಜ್ಞಾನೇನ ಕುರ್ಮ ಇತಿ ಶೇಷಃ । ಅಪಿ ಚ ಯೇ ಋಭವಃ ಪಿತುಃ ಸರ್ವಸ್ಯ ಜಗತಃ ಪಾಲಕಸ್ಯಾಸ್ಯ ಸೂರ್ಯಸ್ಯ ತರಣಿತ್ವಾ ತರಣಿತ್ವಾನಿ ತರಣಕೌಶಲಾನಿ ಸಶ್ಚಿರೇ ಸೂರ್ಯರಶ್ಮಿಭೂತಾಃ ಸಂತಃ ಪ್ರಾಪುಃ । ತದುಕ್ತಂ । ಆದಿತ್ಯರಶ್ಮ-ಯೋಽಪ್ಯೃಭವ ಉಚ್ಯಂತ ಇತಿ । ತೇ ಋಭವೋ ದಿವೋ ರಜಃ । ರಜಃಶಬ್ದೋ ಲೋಕವಾಚೀ । ದ್ಯೋತಮಾನಸ್ಯ ಸ್ವರ್ಗಾಖ್ಯಸ್ಯ ಲೋಕಸ್ಯ ಸಂಬಂಧಿನಂ ವಾಜಂ ಸೋಮಲಕ್ಷಣಮನ್ನಮರುಹನ್ । ಯಾಗದಾನಾದಿಭಿಃ ಕರ್ಮಭಿರನ್ಯೈಶ್ಚ ದೇವೋಕ್ತೈಶ್ಚಮಸಚತುಷ್ಟಯಕರಣಾದಿಕೈಃ ಪ್ರಾಪ್ನುವನ್ ॥ ಸ್ರುಚೇವ । ಸಾಮೇಕಾಚ ಇತಿ ವಿಭಕ್ತೇರುದಾತ್ತತ್ವಂ । ಜುಹವಾಮ । ಹು ದಾನಾದನಯೋಃ । ಲೋಟ್ಯಾ-ಡುತ್ತಮಸ್ಯ ಪಿಚ್ಚೇತ್ಯಾಡಾಗಮಃ । ವಿದ್ಮನಾ । ವಿದ ಜ್ಞಾನೇ । ಔಣಾದಿಕೋ ಮನಿಃ । ನ ಸಂಯೋಗಾ-

ದ್ವನುಂತಾದಿತ್ಯಲ್ಲೋಽಪಾಭಾವಃ। ತರಣಿತ್ವಾ। ತೄ ಪ್ಲವನತರಣಯೋಃ। ಅರ್ತಿಸೃಧೃಧಮ್ಯಶ್ಯವಿತೃಭ್ಯೋಽನಿರಿತಿ ಕರ್ತರ್ಯನಿಪ್ರತ್ಯಯಃ। ತಸ್ಯ ಭಾವಸ್ತರಣಿತ್ವಂ। ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ। ಸಶ್ಚಿರೇ। ಗ್ಲುನ್ಚ ಷಸ್ಜ ಗತಾವಿತ್ಯತ್ರ ಸಶ್ಚಿಮಪ್ಯೇಕೇ ಪಠಂತಿ। ವ್ಯತ್ಯಯೇನಾತ್ಮನೇಪದಂ। ದ್ವಿರ್ವಚನಪ್ರಕರಣೇ ಛಂದಸಿ ವೇತಿ ವಕ್ತವ್ಯಮಿತಿ ವಚನಾದ್ದ್ವಿರ್ವಚನಾಭಾವಃ। ಇರೇಚಶ್ಚಿತ್ತ್ವಾದಂತೋದಾತ್ತತ್ವಂ। ಯದ್ವೃತ್ತಾನ್ನಿತ್ಯಮಿತಿ ನಿಘಾತಪ್ರತಿಷೇಧಃ। ಆರುಹನ್। ರುಹ ಬೀಜಜನ್ಮನಿ ಪ್ರಾದುರ್ಭಾವೇ ಚ। ಲುಙ್ ಕೃಮೃದೃರುಹಿಭ್ಯಶ್ಛಂದಸೀತಿ ಚ್ಲೇರಙಾದೇಶಃ। ದಿವಃ। ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ। ರಜಃ। ರಂಜ ರಾಗೇ। ರಜಂತ್ಯಸ್ಮಿನ್ನಿತಿ ರಜೋ ಲೋಕಃ। ತದುಕ್ತಂ। ಲೋಕಾ ರಜಾಂಸ್ಯುಚ್ಯಂತೇ। ನಿ. ೪-೧೯। ಇತಿ। ಔಣಾದಿಕೋಽಧಿಕರಣೇಽಸುನ್। ರಜಕರಜನರಜಸ್ಸೂಪಸಂಖ್ಯಾನಮಿತಿ ನಲೋಪಃ। ಸುಪಾಂ ಸುಲುಗಿತಿ ಷಷ್ಠ್ಯಾ ಲುಕ್ ॥

ಪ್ರತಿಪದಾರ್ಥ

**ಅಂತರಿಕ್ಷಸ್ಯ**—ಅಂತರಿಕ್ಷ ಲೋಕಕ್ಕೆ ಸೇರಿದವರೂ। **ನೃಭ್ಯಃ**—ಯಜ್ಞಕ್ಕೆ ನೇತೃಗಳೂ ಆದ ಋಭುಗಳಿಗೆ ಅಥವಾ ಅಂತರಿಕ್ಷ ಲೋಕಕ್ಕೆ ನೇತೃಗಳಾದ ಋಭುಗಳಿಗೆ। **ಸ್ರುಚೇವ**—ಸೌಟುಗಳಲ್ಲಿ ಅರ್ಪಿಸುವಂತೆಯೇ। **ಘೃತಂ**—ಸ್ರವಿಸುವ ಆಜ್ಯದೊಂದಿಗೆ ಕೂಡಿದ ಹವಿಸ್ಸನ್ನು। **ಆ ಜುಹವಾಮ**—ಶಾಸ್ತ್ರೋಕ್ತವಾಗಿ ಅರ್ಪಿಸುವೆವು (ಅದರಂತೆಯೇ)। **ಮನೀಷಾಂ**—ಸ್ತುತಿಯನ್ನೂ ಸಹ। **ವಿದ್ಮನಾ**—ಜ್ಞಾನದೊಡನೆ ಸೇರಿಸಿ (ಅರ್ಪಿಸುವೆವು)। **ಯೇ ಋಭವಃ**—ಯಾವ ಋಭುಗಳು। **ಪಿತುಃ** ಸಕಲಜಗತ್ತಿಗೂ ಪಾಲಕನಾದ। **ಅಸ್ಯ**—ಈ ಸೂರ್ಯನ। **ತರಣಿತ್ವಾ**—ವೇಗಸಾಮರ್ಥ್ಯವನ್ನು। **ಸಶ್ಚಿರೇ**—(ಸೂರ್ಯ ರಶ್ಮಿಗಳ ರೂಪದಲ್ಲಿದ್ದುಕೊಂಡು) ಹೊಂದಿದರೋ (ಆ ಋಭುಗಳು)। **ದಿವಃ ರಜಃ**—ಪ್ರಕಾಶಮಾನವಾದ ಅಂತರಿಕ್ಷಲೋಕಕ್ಕೆ ಸೇರಿದ। **ವಾಜಂ**—ಸೋಮರೂಪವಾದ ಅನ್ನವನ್ನು। **ಅರುಹನ್**—(ಯಜ್ಞಾದಿ ನಾನಾಕರ್ಮಗಳಿಂದ) ಪಡೆದರು.

ಭಾವಾರ್ಥ

ಅಂತರಿಕ್ಷಕ್ಕೆ ಸೇರಿದವರೂ, ಯಜ್ಞಕ್ಕೆ ನೇತೃಗಳೂ ಆದ ಋಭುಗಳಿಗೆ ಸೌಟುಗಳಲ್ಲಿ ಅರ್ಪಿಸುವಂತೆಯೇ ಸ್ರವಿಸುವ ಆಜ್ಯದೊಂದಿಗೆ ಕೂಡಿದ ಹವಿಸ್ಸನ್ನು ಶಾಸ್ತ್ರೋಕ್ತವಾಗಿ ಅರ್ಪಿಸುವೆವು. ಅದರಂತೆಯೇ ಜ್ಞಾನದೊಂದಿಗೆ ಕೂಡಿದ ಸ್ತುತಿಯನ್ನೂ ಅರ್ಪಿಸುವೆವು. ಯಾವ ಋಭುಗಳು ಸೂರ್ಯರಶ್ಮಿಗಳ ರೂಪದಲ್ಲಿದ್ದುಕೊಂಡು ಸಕಲಜಗತ್ತಿಗೂ ಪಾಲಕನಾದ ಈ ಸೂರ್ಯನ ವೇಗ ಸಾಮರ್ಥ್ಯವನ್ನು ಹೊಂದಿದರೋ ಆ ಋಭುಗಳು ಪ್ರಕಾಶಮಾನವಾದ ಅಂತರಿಕ್ಷ ಲೋಕಕ್ಕೆ ಸೇರಿದ ಸೋಮರೂಪವಾದ ಅನ್ನವನ್ನು ಯಜ್ಞಾದಿನಾನಾಕರ್ಮಗಳಿಂದ ಪಡೆದರು.

## English Translation

To the leaders (of the sacrifice), dwelling in the firmament, we present, as with a ladle, the appointed clarified butter, and praise with knowledge those Ribhus, who, having equalled the velocity of the protector (of the univers, the sun), ascended to the region of heaven, through (the offerings) of sacrificial food.

॥ ವಿಶೇಷವಿಷಯಗಳು ॥

**ಅಂತರಿಕ್ಷಸ್ಯ—ಅಂತರಿಕ್ಷಲೋಕಸ್ಯ ಮಧ್ಯಮಸ್ಥಾನಸ್ಯ ಸಂಬಂಧಿಭ್ಯಃ ನೃಭ್ಯಃ ಯಜ್ಞಸ್ಯ ನೇತೃಭ್ಯಃ ಋಭುಭ್ಯಃ ।** ಮಧ್ಯಮಲೋಕವಾದ ಅಂತರಿಕ್ಷಕ್ಕೆ ಸಂಬಂಧಿಸಿದ ಋಭುಗಳನ್ನು ಉದ್ದೇಶಿಸಿ ಅಥವಾ **ಅಂತರಿಕ್ಷಸ್ಯ ಲೋಕಸ್ಯ ನೇತೃಭ್ಯಃ । ಮಧ್ಯಮೇ ಸ್ಥಾನೇ ಹ್ಯೇತೇ ಹಿ ಪಠ್ಯಂತೇ ।** ಮಧ್ಯಮಲೋಕದಲ್ಲಿ ಸೇರಿದವರೆಂದು ಇವರನ್ನು ಸ್ತುತಿಸುವುದರಿಂದ ಋಭುಗಳು ಅಂತರಿಕ್ಷ ಲೋಕಕ್ಕೆ ನೇತೃಗಳು, ಅಂತಹ ಋಭುಗಳನ್ನು ಉದ್ದೇಶಿಸಿ **ಘೃತಂ ಆಜುಹವಾಮ** ಆಜ್ಯದೊಂದಿಗೆ ಕೂಡಿದ ಹವಿಸ್ಸನ್ನು ಅರ್ಪಿಸುವೆವು ಎಂದೂ ಮತ್ತು **ಮನೀಷಾಂ ವಿದ್ಮನಾ** (ಕುರ್ಮಃ) ಸ್ತುತಿಯನ್ನೂ ಸಹ ಜ್ಞಾನದೊಡನೆ ಸೇರಿಸಿ ಎಂದರೆ ಪ್ರಜ್ಞಾಯುಕ್ತವಾದ ಸ್ತುತಿಯನ್ನೂ ಅರ್ಪಿಸುವೆವು ಎಂದೂ ಸಹ ಸಾಯಣರು ಒಂದು ವಿಧವಾದ ಅನ್ವಯವನ್ನು ಮಾಡಿದ್ದಾರೆ. ಆದರೆ ಸ್ಕಂದಸ್ವಾಮಿಗಳ ಅನ್ವಯವು ಬೇರೆ ವಿಧವಾಗಿದೆ. ಅವರು **ಮನೀಷಾಂ ಸ್ತುತಿಮಂತರಿಕ್ಷಸ್ಯ । ಷಷ್ಠೀಶ್ರುತೇರತ್ರ ಯೋಗ್ಯಾಂ ಸದೃಶೀಂ ವೇತ್ಯಧ್ಯಾಹರ್ತವ್ಯಂ । ಅತಿಮಹತೋಽಂತರಿಕ್ಷಸ್ಯಾಪಿ ಯೋಗ್ಯಾಂ ಸದೃಶೀಂ ವಾ । ಅತ್ಯಂತಮಹತೀಮಿತ್ಯರ್ಥಃ । ನೃಭ್ಯಃ ಮನುಷ್ಯಾಣಾಂ ಋಭೂಣಾಮರ್ಥಾಯ । ಮನುಷ್ಯಾನೃಭೂನ್ ಸ್ತೋತುಮಿತ್ಯರ್ಥಃ । ಸ್ರುಚೇವ ಘೃತಮಾಜುಹವಾಮ। ಯಥಾ ಕಶ್ಚಿದಾಹವನೀಯಾದೌ ಸ್ರುಚಾ ಘೃತಂ ಮರ್ಯಾದಯಾ ಪ್ರಕ್ಷಿಪೇತ್ ಏವಂ ಪ್ರಕ್ಷಿಪಾಮಃ । ಉಚ್ಚಾರಯಾಮೇತ್ಯೇತದಾಶಾಸ್ಮಹೇ** ಎಂಬ ಈ ಅನ್ವಯದಲ್ಲಿ ಸ್ತುತಿಗೂ ಅಂತರಿಕ್ಷಕ್ಕೂ ಸಂಬಂಧವನ್ನು ತೋರಿಸಿದೆ. ಅಂತರಿಕ್ಷ ಶಬ್ದದ ಷಷ್ಠೀ ವಿಭಕ್ತಿಯಿಂದ ಅಂತರಿಕ್ಷಯೋಗ್ಯವಾದ ಅಥವಾ ಅಂತರಿಕ್ಷ ಸದೃಶವಾದ ಎಂದರೆ ಅತ್ಯಂತ ಮಹತ್ತಾದ ಸ್ತುತಿಯೆಂದು ಸ್ತುತಿಯ ಮಹತ್ತ್ವವು ತೋರುತ್ತದೆ. ಆಹವನೀಯಾದಿಗಳಲ್ಲಿ ಯಜಮಾನನು ಘೃತವನ್ನ ಅರ್ಪಿಸುವಂತೆ ನೇತೃಗಳಾದ ಋಭುಗಳನ್ನು ಉದ್ದೇಶಿಸಿ ಮಹತ್ತಾದ ಸ್ತೋತ್ರವನ್ನು ಅರ್ಪಿಸುತ್ತೇವೆ ಎಂದು ತಾತ್ಪರ್ಯ. ಇಷ್ಟೇ ಅಲ್ಲದೆ ಈ ಅನ್ವಯದಲ್ಲಿ ಸಾಯಣರ ವಿವರಣೆಯಲ್ಲಿರುವಂತೆ **ವಿದ್ಮನಾ** ಎಂಬ ಪದಕ್ಕೂ **ಮನೀಷಾಂ ।** ಎಂಬ ಪದಕ್ಕೂ ಸಂಬಂಧವನ್ನು ತೋರಿಸಿಲ್ಲ. **ವಿದ್ಮನಾ ಸ್ವೇನ ಜ್ಞಾನೇನ ಋಭವಃ ..................... ಸಶ್ಚಿರೇ ।** ತಮ್ಮ ಸ್ವಂತ ಪ್ರಜ್ಞೆಯಿಂದ ಸಕಲ ಜಗತ್ತಿಗೂ ಪಾಲಕನಾದ ಸೂರ್ಯನ ವೇಗಸಾಮರ್ಥ್ಯವನ್ನು ಹೊಂದಿದರು ಎಂದು ಅರ್ಥವಾಗುತ್ತದೆ.

**ಸಶ್ಚಿರೇ—ಸಶ್ಚತಿರ್ಗತಿಕರ್ಮಾ । ಅಧಿಗತವಂತಃ । ಲಬ್ಧವಂತ ಇತ್ಯರ್ಥಃ । ಗತಿಕರ್ಮ**ಗಳಲ್ಲಿ **ಸಶ್ಚತಿ** ಶಬ್ದವು ಪಠಿತವಾಗಿರುವುದರಿಂದ ಇಲ್ಲಿ **ಸಶ್ಚಿರೇ** ಎಂದರೆ ಹೊಂದಿದರು **ಪಡೆದರು** ಎಂದರ್ಥ. ಋಭುಗಳು ಸೂರ್ಯರಶ್ಮಿಗಳಲ್ಲಿ ತಾದಾತ್ಮ್ಯವನ್ನು ಪಡೆದರು ಎಂದು ತಾತ್ಪರ್ಯ ನಿರುಕ್ತಕಾರರು ಈ ಅಂಶವನ್ನು ವಿವರಿಸುತ್ತಾ ಋಭುಗಳಿಗೂ ಸೂರ್ಯರಶ್ಮಿಗಳಿಗೂ ಇರುವ ತಾದಾತ್ಮ್ಯವನ್ನು ವಿವರಿಸುವ ಶ್ರುತಿವಾಕ್ಯವನ್ನು ಉದಹರಿಸಿದ್ದಾರೆ.

**ಆದಿತ್ಯರಶ್ಮಯೋಽಪ್ಯೃಭವ ಉಚ್ಯಂತೇ ।** (ನಿ. ೧೧-೧೬) ಆದಿತ್ಯರಶ್ಮಿಗಳಿಗೂ ಋಭುಗಳೆಂಬ ಹೆಸರು ಪ್ರಸಿದ್ಧವಾಗಿದೆ. ಉದಾಹರಣೆಗೆ—

**ಉದ್ವತ್ಸ್ವಸ್ಮಾ ಅಕೃಣೋತನಾ ತೃಣಂ ನಿವತ್ಸ್ವಪಃ ಸ್ವಪಸ್ಯಯಾ ನರಃ ।**
**ಅಗೋಹ್ಯಸ್ಯ ಯದಸಸ್ತನಾ ಗೃಹೇ ತದದ್ಯೇದಮೃಭವೋ ನಾನು ಗಚ್ಛಥ ।**
(ಋ. ಸಂ. ೧-೧೬೧-೧೧)

ಎಂಬ ಋಕ್ಕಿನಲ್ಲಿ ಅಗೋಹ್ಯನಾದ ಸೂರ್ಯನ ನಿವಾಸಸ್ಥಾನದಲ್ಲಿ ಋಭುಗಳು ಇದ್ದುಕೊಂಡು ಪೈರುಪಚ್ಚೆಗಳನ್ನು ಬೆಳೆಯುವಂತೆ ಮಾಡುವುದೂ ಉದಕಗಳನ್ನು ಪ್ರವಹಿಸುವಂತೆ ಮಾಡುವುದೂ ಇವೇ ಮುಂತಾದ ಲೋಕೋಪಕಾರಕ

ಗಳಾದ ಕೆಲಸಗಳನ್ನು ನಿರ್ವಹಿಸುವುದರಿಂದ ಕೃತಜ್ಞತಾ ಪೂರ್ವಕವಾದ ಸ್ತುತಿಯನ್ನು ಅರ್ಪಿಸಿದೆ. ಈ ಋಕ್ಕನ್ನು ನಿರುಕ್ತಕಾರರು ಉದಹರಿಸಿ ಋಭುಗಳಿಗೂ ಸೂರ್ಯರಶ್ಮಿಗಳಿಗೂ ಇರುವ ತಾದಾತ್ಮ್ಯವನ್ನು ವಿವರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಇದೇ ಅಂಶವನ್ನು ಹೇಳಿ ಇಂತಹ ಉತ್ತಮವಾದ ಕರ್ಮಗಳಿಂದ ಉತ್ತಮವಾದ ಸ್ಥಾನವನ್ನು ಪಡೆದಿರುವುದರಿಂದ ಅಂತರಿಕ್ಷಲೋಕಕ್ಕೆ ಸೇರಿದ ಸೋಮರೂಪವಾದ ಅನ್ನವನ್ನು ಯಜ್ಞಾದಿಕರ್ಮಗಳಿಂದ ಪಡೆದರು ಎಂದು ಅವರ ಮಹಿಮೆಯನ್ನು ಸ್ತುತಿಸಿದೆ.

ವ್ಯಾಕರಣಪ್ರಕ್ರಿಯಾ

**ಸ್ರುಚೇವ**—ಸ್ರುಕ್ ಶಬ್ದ ಏಕಾಚಾದುದರಿಂದ **ಸಾವೇಕಾಚಸ್ತೃತೀಯಾದಿಃ**—(ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ (ಟಾ) ಉದಾತ್ತಸ್ವರ ಬರುತ್ತದೆ.

**ಜುಹವಾಮ**—ಹು ದಾನಾದನಯೋಃ ಧಾತು. ಲೋಟ್ ಉತ್ತಮ. ಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. ಲಙ್ವದ್ಭಾವವಿರುವುದರಿಂದ **ನಿತ್ಯಂಙಿತಃ**—ಎಂಬುದರಿಂದ ಸಕಾರಲೋಪ. **ಆಡುತ್ತಮಸ್ಯಪಿಚ್ಚ**—(ಪಾ. ಸೂ. ೩-೪-೯೨) ಎಂಬುದರಿಂದ ಅದಕ್ಕೆ ಆಡಾಗಮ. ಪಿತ್ತಾದುದರಿಂದ ಅದನ್ನು ನಿಮಿತ್ತೀಕರಿಸಿ, ಶ್ಲು ನಿಮಿತ್ತವಾಗಿ ದ್ವಿತ್ವವನ್ನು ಹೊಂದಿದ ಧಾತುವಿನ ಉಕಾರಕ್ಕೆ ಗುಣ, ಅವಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಿದ್ಮನಾ**—ವಿದ ಜ್ಞಾನೇ. ಧಾತು. ಇದಕ್ಕೆ ಔಣಾದಿಕವಾದ ಮನಿ ಪ್ರತ್ಯಯ. ವಿದ್ಮನ್ ಶಬ್ದವಾಗುತ್ತದೆ. ತೃತೀಯಾವಿಭಕ್ತಿಯಲ್ಲಿ ಭಸಂಜ್ಞಾವಿದ್ದರೂ ವಾಂತಸಂಯೋಗವಿರುವುದರಿಂದ **ನಸಂಯೋಗಾದ್ವಮಂತಾತ್** (ಪಾ. ಸೂ. ೬-೪-೧೩೭) ಎಂಬುದರಿಂದ ಅನಿನ ಅಕಾರಕ್ಕೆ ಲೋಪ ಬರುವುದಿಲ್ಲ. ಪ್ರತ್ಯಯಸ್ವರ ಬರುತ್ತದೆ.

**ತರಣಿತ್ವಾ**—ತೄ ಪ್ಲವನತರಣಯೋಃ ಧಾತು. **ಅರ್ತಿಸೃಧೃಧೃದಮ್ಯಶ್ಯವಿತೃಭ್ಯೋಽನಿಃ**—(ಉ. ಸೂ. ೨-೫೯) ಎಂಬುದರಿಂದ ಅನಿಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. **ಉರಣ್ರಪರಃ**—ಎಂಬುದರಿಂದ ರಪರವಾಗಿ ಬರುತ್ತದೆ. ರೇಫ ನಿಮಿತ್ತವಿರುವುದರಿಂದ ಪ್ರತ್ಯಯ ನಕಾರಕ್ಕೆ ಣತ್ವ. ತರಣಿ ಶಬ್ದವಾಗುತ್ತದೆ. ತರಣೇಃ ಭಾವಃ ತರಣಿತ್ವಮ್. **ತಸ್ಯಭಾವಸ್ತ್ವತಲೌ** (ಪಾ. ಸೂ. ೫-೧-೧೧೯) ಎಂಬುದರಿಂದ ಭಾವಾರ್ಥದಲ್ಲಿ ತ್ವಪ್ರತ್ಯಯ. ಬಹುವಚನದಲ್ಲಿ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್**—(ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ಸಶ್ಚಿರೇ**—ಗ್ಲು ಞ್ಚು ಷಸ್ಜ ಗತೌ. ಧಾತು. ಇಲ್ಲಿ ಕೆಲವರು ಸಶ್ಚ ಎಂಬುದನ್ನು ಸೇರಿಸಿ ಪಾಠ ಮಾಡುತ್ತಾರೆ. **ವ್ಯತ್ಯಯೋ ಬಹುಲಮ್**—ಎಂಬುದರಿಂದ ಆತ್ಮನೇಪದಿಯಾಗುತ್ತದೆ. **ದ್ವಿರ್ವಚನಪ್ರಕರಣೇ ಛಂದಸಿ ವೇತಿವಕ್ತವ್ಯಮ್**- ಎಂಬ ವಚನದಿಂದ ಲಿಟನ್ನಲ್ಲಿ ಧಾತುವಿಗೆ ದ್ವಿತ್ವ ಬರುವುದಿಲ್ಲ. ಬಹುವಚನದಲ್ಲಿ **ಲಿಟಸ್ತಝಯೋರೇಶಿರೇಚ್**—(ಪಾ. ಸೂ ೩-೪-೮೧) ಎಂಬುದರಿಂದ ಇರೇಚ್ ಆದೇಶ. ಇದು ಚಿತ್ತಾದುದರಿಂದ ಚಿತಃ—(ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಯೇ ಎಂದು ಹಿಂದೆ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್**—(ಪಾ. ಸೂ ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ.

**ಅರುಹನ್**—ರುಹ ಬೀಜಜನ್ಮನಿ ಪ್ರಾದುರ್ಭಾವೇ ಚ. ಧಾತು. ಲುಙ್ ಪ್ರಥಮಪುರುಷ ಬಹುವಚನದಲ್ಲಿ **ಝೋಂತಃ**—ಎಂಬುದರಿಂದ ಅಂತಾದೇಶ. **ಇತಶ್ಚ**—ಸೂತ್ರದಿಂದ ಇಕಾರಲೋಪ. ಚ್ಲಿ ಪ್ರಾಪ್ತವಾದಾಗ **ಕೃಸೃದೃರುಹಿಭ್ಯಶ್ಛಂದಸಿ**—(ಪಾ. ಸೂ. ೩-೧-೫೨-೧) ಎಂಬುದರಿಂದ ಅದಕ್ಕೆ ಅಙಾದೇಶ. ಙಿತ್ತಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದಿವಃ**—**ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ರಜಃ**—ರಞ್ಜ ರಾಗೇ. ಧಾತು. ರಜಂತಿ ಅಸ್ಮಿನ್ ಇತಿ ರಜೋಲೋಕಃ ಇದೇ ರೀತಿಯಾಗಿ ಯಾಸ್ಕರೂ ಹೇಳಿರುತ್ತಾರೆ. **ಲೋಕಾ ರಜಾಂಸ್ಯುಚ್ಯಂತೇ**—(ನಿರು. ೪-೧೯) ಅಧಿಕರಣಾರ್ಥದಲ್ಲಿ ಔಣಾದಿಕವಾದ ಅಸುನ್ ಪ್ರತ್ಯಯ. **ರಜಕರಜನರಜಃ ಸೂಪಸಂಖ್ಯಾನಮ್**—ಎಂಬ ವಚನದಿಂದ ಧಾತುವಿನ ಉಪಧಾ ನಕಾರಕ್ಕೆ ಲೋಪ. ರಜಸ್ ಶಬ್ದವಾಗುತ್ತದೆ. ಷಷ್ಠೀವಿಭಕ್ತಿಪರವಾದಾಗ **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲೋಪ. ॥ ೬ ॥

—— :o: ——

ಸಂಹಿತಾಪಾಠಃ

ಋಭುರ್ನ ಇಂದ್ರಃ ಶವಸಾ ನವೀಯಾನೃಭುರ್ವಾಜೇಭಿರ್ವಸು-
ಭಿರ್ವಸುರ್ದದಿಃ ।
ಯುಷ್ಮಾಕಂ ದೇವಾ ಅವಸಾಹನಿ ಪ್ರಿಯೇ೩ಭಿ ತಿಷ್ಠೇಮ ಪೃ-
ತ್ಸುತೀರಸುನ್ವತಾಂ ॥ ೭ ॥

ಪದಪಾಠಃ

ಋಭುಃ । ನಃ । ಇಂದ್ರಃ । ಶವಸಾ । ನವೀಯಾನ್ । ಋಭುಃ । ವಾಜೇಭಿಃ ।
ವಸುಽಭಿಃ । ವಸುಃ । ದದಿಃ ।

ಯುಷ್ಮಾಕಂ । ದೇವಾಃ । ಅವಸಾ । ಅಹನಿ । ಪ್ರಿಯೇ । ಅಭಿ । ತಿಷ್ಠೇಮ ।

ಪೃತ್ಸುತೀಃ । ಅಸುನ್ವತಾಂ ॥ ೭ ॥

ಸಾಯಣಭಾಷ್ಯಂ

ಋಭುರ್ವಿಭ್ವಾ ವಾಜ ಇತಿ ತ್ರಯಃ ಸುಧನ್ವನಃ ಪುತ್ರಾಃ । ತತ್ರ ಶವಸಾ ಬಲೇನ ನವೀಯಾನ್ ನವತರಃ ಪಶಸ್ತತರ ಋಭುರ್ನೋಽಸ್ಮಾಕಮಿಂದ್ರಃ ಪರಮೇಶ್ವರಃ । ಅಸ್ಮಾಕಂ ರಕ್ಷಕ ಇತ್ಯರ್ಥಃ । ಯದ್ವಾ । ಇಂದ್ರ ಏವ ಪ್ರಸಂಗಾದುರು ಭಾತೀತಿ ನೈರುಕ್ತವ್ಯುತ್ಪತ್ತ್ಯಾ ಋಭುರಿತಿ ಸ್ತೂಯತೇ । ಅಪಿ ಚ । ವಾಜೇಭಿರ್ವಾಜೈರಸ್ಮಭ್ಯಂ ದಾತವ್ಯೈರನ್ನೈರ್ವಸುಭಿರ್ನಿವಾಸಹೇತುಭಿರ್ಧನೈಶ್ಚ ಋಭುರ್ವಸುರಸ್ಮಾಕಂ ನಿವಾಸಯಿತಾ । ಅತ ಏವ ದದಿಸ್ತೇಷಾಮನ್ನಾನಾಂ ಧನಾನಾಂ ಚ ದಾತಾ ಭವತು । ಪರೋಽರ್ಧರ್ಚಃ ಪ್ರತ್ಯಕ್ಷಕೃತಃ । ಹೇ ದೇವಾ ದಾನಾದಿಗುಣಯುಕ್ತಾ ಋಭುಪ್ರಭೃತಯೋ ಯುಷ್ಮಾಕಂ ಸಂಬಂಧಿನಾವಸಾ ರಕ್ಷಣೇನ ಯುಕ್ತೇ ಪ್ರಿಯೇಽಸ್ಮಾಕಮನುಕೂಲೇಽಹನಿ ದಿವಸೇ ವರ್ತಮಾನಾ ವಯಮಸುನ್ವತಾಂ ಸುನ್ವದ್ಯಜಮಾನವಿರೋಧಿನಾಂ ಶತ್ರೂಣಾಂ ಪೃತ್ಸುತೀಃ ಸೇನಾ ಅಭಿತಿಷ್ಠೇಮ॥ ನವೀಯಾನ್। ನವಶಬ್ದಾ-ದಾತಿಶಾಯನಿಕ ಈಯಸುನ್ । ವಾಜೇಭಿಃ । ಬಹುಲಂ ಛಂದಸೀತಿ ಭಿಸ ಐಸಭಾವಃ ವಸುಃ । ವಸ ನಿವಾಸೇ । ಅಸ್ಮಾದಂತರ್ಭಾವಿತಣ್ಯರ್ಥಾತ್ ಶೃಸ್ವೃಸ್ನಿಹೀತ್ಯಾದಿನೋಪ್ರತ್ಯಯಃ । ನಿದಿತ್ಯನುವೃತ್ತೇರಾ-ದ್ಯುದಾತ್ತತ್ವಂ । ದದಿಃ । ಡುದಾಞ್ ದಾನೇ । ಆದೃಗಮಹನ ಇತಿ ಕಿಪ್ರತ್ಯಯಃ । ಲಿಡ್ವದ್ಭಾವಾದ್ದ್ವಿ-ರ್ಭಾವಾದಿ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ ॥

ಪ್ರತಿಪದಾರ್ಥ

**ಶವಸಾ**—ಬಲದಿಂದ । **ನವೀಯಾನ್**—ಅತ್ಯಂತ । ಶ್ರೇಷ್ಠನಾದವನೂ । **ಋಭುಃ**—(ಸುಧನ್ವಪುತ್ರರಲ್ಲಿ ಒಬ್ಬನೂ ಆದ) ಋಭುವು । **ನಃ**—ನಮಗೆ । **ಇಂದ್ರಃ**—ರಕ್ಷಕನಾದ ಪ್ರಭುವಾಗಿದ್ದಾನೆ **ಅಥವಾ** ಅತ್ಯಂತ ಪ್ರಕಾಶಮಾನನಾದುದರಿಂದ ಇಂದ್ರನೇ ಋಭುವೆಂದು ಪ್ರತೀತನಾಗಿದ್ದಾನೆ । **ವಾಜೇಭಿಃ**—(ನಮ್ಮಿಂದ ಅರ್ಪಿತವಾಗುವ) ಅನ್ನಗಳಿಂದಲೂ । **ವಸುಭಿಃ**—ಧನಗಳಿಂದಲೂ । **ಋಭುಃ**—ಋಭುವು । **ವಸುಃ**—(ನಮಗೆ) ನೆಲೆಯನ್ನು ಕೊಡುವ ಆಶ್ರಯನಾಗಿದ್ದಾನೆ । **ದದಿಃ**—(ಆ ಅನ್ನಗಳಿಗೂ ಧನಗಳಿಗೂ) ದಾತನಾಗಿ ಆಗಲಿ । **ದೇವಾಃ**— ದಾನಾದಿಗುಣಯುಕ್ತರಾದ ಋಭುಪ್ರಭೃತಿಗಳೇ । **ಯುಷ್ಮಾಕಂ**—ನಿಮ್ಮ । **ಅವಸಾ**—ರಕ್ಷಣೆಯಿಂದ (ಕೂಡಿದುದೂ) । **ಪ್ರಿಯೇ**—(ನಮಗೆ) ಅನುಕೂಲವಾದುದೂ ಆದ । **ಅಹನಿ**—ದಿವಸದಲ್ಲಿದ್ದುಕೊಂಡು (ನಾವು) । **ಅಸುನ್ವತಾಂ**—ಯಜ್ಞವಿರೋಧಿಗಳಾದ (ರಾಕ್ಷಸರ) ಶತ್ರುಗಳ । **ಪೃತ್ಸುತೀಃ**—ಸೇನೆಗಳನ್ನು । **ಅಭಿತಿಷ್ಠೇಮ**—ಜಯಿಸುವಂತೆ ಆಗಲಿ.

ಭಾವಾರ್ಥ

ಬಲದಿಂದ ಅತ್ಯಂತ ಶ್ರೇಷ್ಠನಾದ ಇಂದ್ರನೇ, ಸುಧನ್ವಪುತ್ರರಲ್ಲಿ ಒಬ್ಬನಾದ ಋಭುವು ನಮಗೆ ರಕ್ಷಕನಾದ ಪ್ರಭುವಾಗಿದ್ದಾನೆ. ನಮ್ಮಿಂದ ಅರ್ಪಿತವಾಗುವ ಅನ್ನಗಳಿಂದಲೂ, ಧನಗಳಿಂದಲೂ ಋಭುವು ನಮಗೆ

ನೆಲೆಯನ್ನು ಕೊಡುವ ಆಶ್ರಯನಾಗಿದ್ದಾನೆ. ಮತ್ತು ಆ ಅನ್ನಗಳಿಗೂ ಧನಗಳಿಗೂ ಅವನೇ ದಾತನಾಗಿ ಆಗಲಿ. ದಾನಾದಿ ಗುಣಯುಕ್ತರಾದ ಎಲೈ ಋಭುಪ್ರಭೃತಿಗಳೇ, ನಿಮ್ಮ ರಕ್ಷಣೆಯಿಂದ ಕೂಡಿದುದೂ, ನಮಗೆ ಅನುಕೂಲವಾದುದೂ ಆದ ದಿನದಲ್ಲಿದ್ದುಕೊಂಡು ನಾವು ಯಜ್ಞವಿರೋಧಿಗಳಾದ ನಮ್ಮ ಶತ್ರುಗಳ ಸೇನೆಗಳನ್ನು ನಾಶಮಾಡುವವರಾಗಿ ಆಗುವಂತೆ ಆಗಲಿ.

## English Translation

The most excellent Ribhu is in strength our defender ; Ribhu, through gifts of food and of wealth is our asylum ; may he bestow them upon us, Gods, through your protection ; may we, upon a favourable occasion overcome the hosts of those who offer no libations.

॥ ವಿಶೇಷವಿಷಯಗಳು ॥

**ಋಭುರ್ನ ಇಂದ್ರಃ ಶವಸಾ ನವೀಯಾನ್**—ಇಲ್ಲಿ ಎರಡು ವಿಧವಾದ ಅನ್ವಯವು ಸಾಧ್ಯವಾಗುತ್ತದೆ. ಮೊದಲನೆಯದಾಗಿ, **ಶವಸಾ—ಬಲೇನ ; ನವೀಯಾನ್ನವತರಃ ಪ್ರಶಸ್ತತರಃ ; ಋಭುಃ ; ನಃ—ಅಸ್ಮಾಕಂ; ಇಂದ್ರಃ—ಪರಮೇಶ್ವರಃ ; ರಕ್ಷಕ ಇತ್ಯರ್ಥಃ ।** ಬಲದಿಂದ ಶ್ರೇಷ್ಠನಾದ ಋಭುವು ನಮಗೆ ರಕ್ಷಕನಾದ ಪ್ರಭುವೆಂದು ಒಂದು ಅರ್ಥವೂ, ಎರಡನೆಯದಾಗಿ, **ಇಂದ್ರ ಏವ ಪ್ರಸಂಗಾತ್ ಉರು ಭಾತೀತಿ ನೈರುಕ್ತವ್ಯುತ್ಪತ್ತ್ಯಾ ಋಭುರಿತಿ ಸ್ತೂಯತೇ ।** ಅತ್ಯಂತ ಪ್ರಕಾಶಮಾನನಾದುದರಿಂದ ಇಂದ್ರನೇ ಋಭುವೆಂದು ಪ್ರಸಿದ್ಧನಾಗಿದ್ದಾನೆ. ನಿರುಕ್ತದಲ್ಲಿ ಹೇಳಿರುವ ನಿರ್ವಚನವು ಈ ಅರ್ಥವನ್ನು ಸಮರ್ಥಿಸುತ್ತದೆಯಾದ್ದರಿಂದ ಇಂದ್ರನೇ ಋಭುವೆಂದು ಎರಡನೆಯ ಅರ್ಥವೂ ಸಾಧ್ಯವೆಂದು ಸಾಯಣರು ವಿವರಿಸಿದ್ದಾರೆ. ಇದನ್ನೇ ಕೊಂಚ ವ್ಯತ್ಯಾಸಮಾಡಿ ಸ್ಕಂದಸ್ವಾಮಿಗಳು— **ಅಥವಾ ಇಂದ್ರ ಇತಿ ಋಭೋರ್ವಿಶೇಷಣಂ । ಇಂದ್ರಸದೃಶಃ ಅತ್ಯಂತೇಶ್ವರೋ ವಾ ।** ಇಂದ್ರ ಶಬ್ದವು ಋಭುವಿಗೆ ವಿಶೇಷಣವಾಗಿ ನಮಗೆ ಅತ್ಯಂತ ಶ್ರೇಷ್ಠನಾದವನೂ ಇಂದ್ರಸದೃಶನೂ ಆದ ಪ್ರಭುವು ಎಂದು ತಾತ್ಪರ್ಯವೆಂದು ವಿವರಿಸಿದ್ದಾರೆ.

**ಇಂದ್ರ ಋಭುಭಿರ್ವಾಜವದ್ಭಿಃ ಸಮುಕ್ಷಿತಂ ।**

(ಐ. ಬ್ರಾ. ೨೮-೪)

ಇತ್ಯಾದಿ ವಾಕ್ಯಗಳಿಂದ ಇಂದ್ರ ಮತ್ತು ಋಭುಗಳ ಅತ್ಯಂತ ನಿಕಟವಾದ ಸಾಹಚರ್ಯವೂ ಸಂಬಂಧವೂ ತೋರುವುದರಿಂದ ಇಲ್ಲಿ ಇಂದ್ರ ಶಬ್ದಕ್ಕೆ ಸಮಯೋಚಿತವಾಗಿ ಯಾವ ಅರ್ಥವನ್ನು ಬೇಕಾದರೂ ಹೇಳಬಹುದು.

**ವಾಜೇಭಿರ್ವಸುಭಿರ್ವಸುರ್ದದಿಃ—ವಾಜೇಭಿಃ** ಎಂಬ ಪದಕ್ಕೆ ಸಾಯಣರು **ಅಸ್ಮಭ್ಯಂ ದಾತವ್ಯೈರನ್ನೈಃ ।** ನಮಗೆ ಕೊಡಬೇಕಾದ ಅನ್ನದೊಂದಿಗೆ ಎಂದರ್ಥಮಾಡಿರುವರು. ಸ್ಕಂದಸ್ವಾಮಿಗಳು **ಅನ್ಯತರವಚನೇನಾಪಿ ವಾಜಶಬ್ದೇನಾತ್ರ ಸಾಹಚರ್ಯಾದ್ವಾಜೋ ವಿಭ್ವಾ ಚೋಚ್ಯತೇ । ವ್ಯತ್ಯಯೇನ ಚ ದ್ವಿವಚನಸ್ಯ ಸ್ಥಾನೇ ಬಹುವಚನಂ । ವಾಜವಿಭ್ವಾಭ್ಯಾಂ । ವಾಜೇಭಿಃ** ಎಂದರೆ ವಾಜ ವಿಭ್ವ ಎಂಬಿಬ್ಬರೊಡನೆ ಎಂದರ್ಥ. ದ್ವಿವಚನಕ್ಕೆ ಬದಲಾಗಿ ಬಹುವಚನ ಪ್ರಯೋಗವಿದೆ ಅದು ಛಾಂದಸ. ವಾಜ ಮತ್ತು ವಿಭ್ವ ಎಂಬುವರೊಡನೆ ವಸು ದದಿಃ- ಧನಂ ದಾತಾ ನಮಗೆ ಧನವನ್ನು ಕೊಡುವವನಾಗು ಎಂದು ತಾತ್ಪರ್ಯವೆಂದು ಹೇಳಿದ್ದಾರೆ. ವಸು

ಶಬ್ದಕ್ಕೆ ಸಾಯಣರು **ಅಸ್ಮಾಕಂ ನಿವಾಸಯಿತಾ** ನಮಗೆ ವಾಸಸ್ಥಾನವನ್ನು ಕಲ್ಪಿಸುವವನು ಎಂದು ಅರ್ಥಮಾಡಿ **ಅತ ಏವ ತೇಷಾಮನ್ನಾನಾಂ ಧನಾನಾಂ ಚ ದಾತಾ ಭವತು** । ಆದ್ದರಿಂದಲೇ ನಮಗೆ ಅನ್ನಗಳಿಗೂ ಧನಗಳಿಗೂ ದಾತನಾಗಿರಲಿ ಎಂದು ತಾತ್ಪರ್ಯವೆಂದು ವಿವರಿಸಿದ್ದಾರೆ.

**ಅಸುನ್ವತಾಂ—ಸೋಮಾಭಿಷವಮಕುರ್ವತಾಂ** । ಸೋಮರಸವನ್ನು ಹಿಂಡದೆಯೂ ಎಂದರೆ ಯಜ್ಞಯಾಗಾದಿಗಳನ್ನು ಮಾಡದೆಯೂ ಮತ್ತು ಯಜ್ಞಕರ್ತರನ್ನು ದ್ವೇಷಿಸುವವರಾಗಿಯೂ ಇರುವ ಶತ್ರುಗಳ ಎಂದರ್ಥ.

**ಅಭಿತಿಷ್ಠೇಮ—ಅಭಿತಿಷ್ಠತಿರತ್ರ ಜಯಾರ್ಥಃ** । ಅಭಿತಿಷ್ಠತಿ ಎಂದರೆ ಜಯಿಸೋಣರ್ಥ. **ಅಭಿತಿಷ್ಠೇಮ** ಎಂದರೆ ನಾವು ಜಯಿಸೋಣ ಎಂದು ತಾತ್ಪರ್ಯ.

**ಪೃತ್ಸುತೀಃ—ಪೃತ್ಸು** ಶಬ್ದವು ಸಂಗ್ರಾಮನಾಮಗಳಲ್ಲಿ ಪಠಿತವಾಗಿದೆ (ನಿ. ೨-೯). **ಪೃತ್ಸು ತಾಯಂತೇ ವಿಸ್ತೀರ್ಯಂತೇ ಇತಿ ಪೃತ್ಸುತಯಃ ಸೇನಾಃ** । ಯುದ್ಧಗಳಲ್ಲಿ ಪ್ರಸರಿಸುತ್ತವೆಯಾದ್ದರಿಂದ ಸೇನೆಗಳಿಗೆ **ಪೃತ್ಸುತೀಃ** ಎಂದು ಹೆಸರು. **ಪೃತ್ಸುತೀಃ** ಎಂದರೆ ಸೇನೆಗಳನ್ನು ಎಂದರ್ಥ. ಶತ್ರು ಸೇನೆಗಳನ್ನು ನಾವು ಜಯಿಸುವಂತಾಗಲಿ ಎಂದು ಪ್ರಾರ್ಥಿಸಿದೆ.

॥ ವ್ಯಾಕರಣಪ್ರಕ್ರಿಯಾ

**ನವೀಯಾನ್**—ಅತಿಶಯೇನ ನವಃ ನವೀಯಾನ್. **ಅತಿಶಾಯನೇ ತಮಬಿಷ್ಠನೌ**—ಎಂದು ಅನುವೃತ್ತವಾಗುವಾಗ **ದ್ವಿವಚನವಿಭಜ್ಯೋ**—(ಪಾ. ಸೂ. ೫-೩-೫೭) ಎಂಬುದರಿಂದ ಅತಿಶಯಾರ್ಥದಲ್ಲಿ ಈಯಸುನ್ ಪ್ರತ್ಯಯ. ಪ್ರಾತಿಪದಿಕದ ಅಕಾರಕ್ಕೆ ಲೋಪ. ನವೀಯಸ್ ಶಬ್ದ. ಪ್ರಥಮಾ ಸುಪರವಾದಾಗ **ಅತ್ವಸಂತಸ್ಯ**—ಸೂತ್ರದಿಂದ ಉಪಧಾದೀರ್ಘ. ಉಗಿತ್ತಾದುದರಿಂದ ನುಮಾಗಮ ಸುಲೋಪ. ಅಂತ್ಯ ಸಕಾರಲೋಪ

**ವಾಜೇಭಿಃ**—ವಾಜ ಮನ್ನಂ. ಇದಕ್ಕೆ ಭಿಸ್ ಪರವಾದಾಗ **ಬಹುಲಂ ಛಂದಸಿ**—(ಪಾ. ಸೂ. ೭-೧-೧೦) ಎಂಬುದರಿಂದ ಭಿಸಿಗೆ ಐಸ್ ಬರುವುದಿಲ್ಲ. **ಬಹುವಚನೇ ಝಲ್ಯೇತ್**—ಸೂತ್ರದಿಂದ ಏತ್ವ.

**ವಸುಃ**—ವಸ ನಿವಾಸೇ. ಧಾತು. ಪ್ರೇರಣಾ ತೋರುವುದರಿಂದ ಅಂತರ್ಭಾವಿತಣ್ಯರ್ಥಕಧಾತು. ಇದಕ್ಕೆ **ಶೃಸ್ವೃಸ್ನಿಹಿ**—(ಉ. ಸೂ. ೧-೧೦) ಎಂಬುದರಿಂದ ಉ ಪ್ರತ್ಯಯ. ನಿತ್ ಎಂದು ಹಿಂದಿನ ಸೂತ್ರದಿಂದ ಅನುವೃತ್ತವಾಗುವುದರಿಂದ **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ದದಿಃ—ಡುದಾಞ್ ದಾನೇ. ಧಾತು. ಆದಂತವಾದುದರಿಂದ **ಆದೃಗಮಹನ**—(ಪಾ. ಸೂ. ೩-೨-೧೭೧) ಎಂಬುದರಿಂದ ಕಿಪ್ರತ್ಯಯ. ಲಿಟ್ಟ ಎಂಬುದರಿಂದ ಲಿಡ್ವದ್ಭಾವವಿರುವುದರಿಂದ ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. **ಹ್ರಸ್ವಃ**—ಎಂಬುದರಿಂದ ಧಾತುವಿನ ಅಭ್ಯಾಸಕ್ಕೆ ಹ್ರಸ್ವ. ಪ್ರತ್ಯಯಕಿತ್ತಾದುದರಿಂದ ಅದನ್ನು ನಿಮಿತ್ತೀಕರಿಸಿ **ಆತೋ ಲೋಪ ಇಟಿ ಚ**—(ಪಾ.ಸೂ.೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ತಿಷ್ಠೇಮ—ಷ್ಠಾ ಗತಿನಿವೃತ್ತೌ. ಧಾತು. ಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. ನಿತ್ಯಂ ಙಿತಃ—ಎಂಬುದರಿಂದ ಸಕಾರಲೋಪ. ಲಿಙಿಗೆ ಯಾಸುಟಾಗಮ. **ಪಾಘ್ರಾಧ್ಮಾ**—(ಪಾ. ಸೂ.

೭-೩-೭೮) ಎಂಬುವದರಿಂದ ಶಪ್‌ನಿಮಿತ್ತವಾಗಿ ಧಾತುವಿಗೆ ತಿಷ್ಠ ಎಂಬ ಆದೇಶ. ಯಾಸುಟಿಗೆ ಇಯಾದೇಶ. ಯಲೋಪ. ಗುಣ. ತಿಙಂತನಿಘಾತಸ್ವರ ಬರುತ್ತದೆ.

**ಅಸುನ್ವತಾಮ್**—ಷುಞ್ ಅಭಿಷವೆ. ಲಡರ್ಥದಲ್ಲಿ ಶತೃಪ್ರತ್ಯಯ. ಶ್ನುವಿಕರಣ. ನ ಸುನ್ವಂತಃ ಅಸುನ್ವಂತಃ ತೇಷಾಂ. ನಞ್ ಸಮಾಸ. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಷಷ್ಠೀಬಹುವಚನಾಂತರೂಪ. ॥ ೭ ॥

———— :O: ————

ಸಂಹಿತಾಪಾಠಃ

ನಿಶ್ಚರ್ಮಣ ಋಭವೋ ಗಾಮಪಿಂಶತ ಸಂ ವತ್ಸೇನಾಸೃಜತಾ
ಮಾತರಂ ಪುನಃ ।
ಸೌಧನ್ವನಾಸಃ ಸ್ವಪಸ್ಯಯಾ ನರೋ ಜಿವ್ರೀ ಯುವಾನಾ ಪಿತ-
ರಾಕೃಣೋತನ ॥ ೮ ॥

ಪದಪಾಠಃ

ನಿಃ । ಚರ್ಮಣಃ । ಋಭವಃ । ಗಾಂ । ಅಪಿಂಶತ । ಸಂ । ವತ್ಸೇನ । ಅಸೃಜತ ।
ಮಾತರಂ । ಪುನರಿತಿ ।
ಸೌಧನ್ವನಾಸಃ । ಸುಽಅಪಸ್ಯಯಾ । ನರಃ । ಜಿವ್ರೀ ಇತಿ। ಯುವಾನಾ। ಪಿತರಾ ।
ಅಕೃಣೋತನ ॥ ೮ ॥

॥ ಸಾಯಣಭಾಷ್ಯಂ ॥

ಪುರಾ ಕಸ್ಯಚಿದೃಷೇರ್ಧೇನುರ್ಮೃತಾ । ಸ ಋಷಿಸ್ತಸ್ಯಾ ಧೇನೋರ್ವತ್ಸಂ ದೃಷ್ಟ್ವಾ ಋಭೂಂ ತುಷ್ಟಾವ । ಋಭವಸ್ತತ್ಸದೃಶೀಮನ್ಯಾಂ ಧೇನುಂ ಕೃತ್ವಾ ತದೀಯೇನ ಚರ್ಮಣಾ ಸಂವೀಯ ತೇನ ವತ್ಸೇನ ಸಮಯೋಜಯನ್ನಿತಿ । ಅಯಮರ್ಥಃ ಪೂರ್ವಾರ್ಧೇ ಪ್ರತಿಪಾದ್ಯತೇ । ಹೇ ಋಭವೋ

ಯೂಯಂ ಚರ್ಮಣಶ್ಚರ್ಮಣಾ ತ್ವಚಾ । ತೃತೀಯಾರ್ಥೇ ಷಷ್ಠೀ । ಗಾಂ ಧೇನುಂ ನಿರಪಿಂಶತ। ನಿಶ್ಶೇಷೇಣಾಶ್ಲಿಷ್ಟಾಂ ಸಂಯುಕ್ತಾಮಕುರುತ । ತದನಂತರಂ ಮಾತರಂ ತಾಂ ಗಾಂ ಪುನರ್ವತ್ಸೇನ ಸಮಸೃಜತ । ಸಂಸೃಷ್ಟಾಮಕುರುತ । ಸಮಗಮಯತೇತಿ ಯಾವತ್। ಅಪಿ ಚ ಹೇ ಸೌಧನ್ವನಾಸಃ ಸುಧನ್ವನ ಆಂಗಿರಸಸ್ಯ ಪುತ್ರಾ ನರೋ ಯಜ್ಞಸ್ಯ ನೇತಾರ ಋಭವಃ ಸ್ವಪಸ್ಯಯಾ ಶೋಭನಕರ್ಮೇಚ್ಛಯಾ । ಯಾಗದಾನಾದ್ಯಾಚರಣೇನೇತಿ ಯಾವತ್ । ಜಿವ್ರೀ ಜೀರ್ಣೌ ವೃದ್ಧೌ ಪಿತರಾ ಮಾತಾಪಿತರೌ ಯುವಾನಾ ಪುನರ್ಯೌವನೋಪೇತಾವಕೃಣೋತನ । ಯೂಯಮಕೃಧ್ವಂ ॥ ಅಪಿಂಶತ । ಪಿಶ ಅವಯವೇ । ತೌದಾದಿಕಃ । ಶೇ ಮುಚಾದೀನಾಮಿತಿ ನುಮ್ । ಸೌಧನ್ವನಾಸಃ । ಸುಧನ್ವನಃ ಪುತ್ರಾಃ ಸೌಧನ್ವನಾಃ । ಅಸ್ । ಪಾ. ೬-೪-೧೬೭ । ಇತಿ ಪ್ರಕೃತಿಭಾವಃ। ಆಜ್ಜಸೇರಸುಕ್। ಆಮಂತ್ರಿತಸ್ಯ ಚೇತ್ಯಾದ್ಯುದಾತ್ತತ್ವಂ । ಸ್ವಪಸ್ಯಯಾ । ಶೋಭನಮಪಃ ಸ್ವಪಃ । ತದಿಚ್ಛಾ ಸ್ವಪಸ್ಯಾ । ಸುಪ ಆತ್ಮನಃ ಕ್ಯಚ್ । ಅ ಪ್ರತ್ಯಯಾದಿತಿ ಭಾವೇಽಕಾರಪ್ರತ್ಯಯಃ । ಜಿವ್ರೀ । ಜ್ಯಾ ಷ್ ವಯೋಹಾನೌ । ಜ್ಯಾಶ್ಯಾಸ್ತ್ರಾಜಾಗೃಭ್ಯಃ ಕ್ವಿನ್ । ಉ. ೪-೫೪ । ಋತ ಇದ್ಧಾತೋರಿತೀತ್ವಂ । ರೇಫವಕಾರಯೋಃ ಸ್ಥಾನವಿಪರ್ಯಯಃ । ಬಹುಲವಚನಾದ್ಭಲಿ ಚೇತಿ ದೀರ್ಘಾಭಾವಃ । ನಿತ್ತ್ವಾದಾದ್ಯುದಾತ್ತತ್ವಂ । ಯುವಾನಾ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಪಿತರಾ । ಪಿತಾ ಚ ಮಾತಾ ಚ ಪಿತರೌ । ಪಿತಾ ಮಾತ್ರಾ । ಪಾ. ೧-೨-೭೦ । ಇತಿ ಪಿತಾ ಶಿಷ್ಯತೇ । ಪೂರ್ವವದ್ವಿಭಕ್ತೇರಾಕಾರಃ । ಅಕೃಣೋತನ । ಕೃವಿ ಹಿಂಸಾಕರಣಯೋಶ್ಚ । ಇದಿತ್ತ್ವಾನ್ನುಮ್ । ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ ತತ್ಸನ್ನಿಯೋಗೇನ ವಕಾರಸ್ಯ ಚಾಕಾರಃ। ಅತೋ ಲೋಪೇ ಸತಿ ತಸ್ಯ ಸ್ಥಾನಿವದ್ಭಾವಾಲ್ಲಘೂಪಧಗುಣಾಭಾವಃ । ಲಙ್ಮಧ್ಯಮಬಹುವಚನಸ್ಯ ತಶಬ್ದಸ್ಯ ತಪ್ತನಪ್ತನಥನಾಶ್ಚೇತಿ ತನಬಾದೇಶಃ । ತಸ್ಯ ಪಿತ್ತ್ವೇನ ಙಿತ್ತ್ವಾಭಾವಾದ್ಗುಣಃ ॥

## ಪ್ರತಿಪದಾರ್ಥ

**ಋಭವಃ**–ಎಲೈ ಋಭುಗಳೇ । **ಚರ್ಮಣಃ**—(ಮೃತನಾದ ಹಸುವಿನ) ಚರ್ಮದಿಂದ । **ಗಾಂ**—ಬೇರೆ ಗೋವನ್ನು (ಸೃಷ್ಟಿಸಿ) । **ನಿಃ ಅಪಿಂಶತ**—ಸಂಪೂರ್ಣವಾಗಿ ಹೊದ್ದಿಸಿದಿರಿ (ಅನಂತರ) । **ಮಾತರಂ**—(ತನ್ನ) ಮಾತೃಚರ್ಮದೊಂದಿಗಿದ್ದ । **ತಾಂ**—ಆ ಗೋವನ್ನು । **ಪುನಃ**—ತಿರುಗಿಯೂ । **ವತ್ಸೇನ**—(ತವಕಿಸುತ್ತಿದ್ದ) ಕರುವಿನೊಡನೆ । **ಸಂ ಅಸೃಜತ** (ಅದರ ತಾಯಿಯೇ ಎಂಬ ಭಾವನೆಯು ಬರುವಂತೆ) ಒಟ್ಟಿಗೆ ಸೇರಿಸಿದಿರಿ । **ಸೌಧನ್ವನಾಸಃ**—ಎಲೈ ಸುಧನ್ವ ಪುತ್ರರೂ । **ನರಃ**—(ಯಜ್ಞಕ್ಕೆ) ನೇತೃಗಳೂ ಆದ ಋಭುಗಳೇ । **ಸ್ವಪಸ್ಯಯಾ**—ಯಾಗದಾನಾದಿ ಶ್ರೇಷ್ಠವಾದ ಕರ್ಮಗಳಿಂದ । **ಜಿವ್ರೀ**—ಮುದುಕರಾದ । **ಪಿತರಾ**—ಮಾತಾಪಿತೃಗಳನ್ನು । **ಯುವಾನಾ**—ಪುನಃ ಯೌವನದೊಡನೆ ಕೂಡಿದವರನ್ನಾಗಿ । **ಅಕೃಣೋತನ**—ಮಾಡಿದಿರಿ.

## ಭಾವಾರ್ಥ

ಎಲೈ ಋಭುಗಳೇ, ನಿಮ್ಮ ಭಕ್ತನಾದ ಋಷಿಯ ಹಸುವು ಮೃತಪಟ್ಟಮೇಲೆ ಬೇರೆ ಗೋವನ್ನು ಸೃಷ್ಟಿಸಿ ಅದಕ್ಕೆ ಮೃತಗೋವಿನ ಚರ್ಮವನ್ನು ಹೊದ್ದಿಸಿದಿರಿ. ಮತ್ತು ತವಕಿಸುತ್ತಿದ್ದ ಕರುವಿನೊಡನೆ ಅದರ ತಾಯಿಯೇ ಎಂಬ ಭಾವನೆಯು ಬರುವಂತೆ ಜೊತೆಮಾಡಿ ಸೇರಿಸಿದಿರಿ. ಸುಧನ್ವಪುತ್ರರೂ, ಯಜ್ಞಕ್ಕೆ ನೇತೃಗಳೂ ಆದ ಎಲೈ ಋಭುಗಳೇ, ಯಾಗ ಮತ್ತು ದಾನ ಮುಂತಾದ ಶ್ರೇಷ್ಠವಾದ ಕರ್ಮಗಳ ಆಚರಣೆಯಿಂದ ಮುದುಕರಾದ ಮಾತಾಪಿತೃಗಳನ್ನು ಪುನಃ ಯೌವನದೊಂದಿಗೆ ಸೇರಿಕೊಂಡವರನ್ನಾಗಿ ಮಾಡಿದಿರಿ.

## English Translation

Ribbus, you covered the cow with a hide, and reunited the mother with the calf; sons of Sudhanwan, leaders ( of sacrifice ), through your good works you rendered your aged parents young.

### ವಿಶೇಷವಿಷಯಗಳು

**ನಿಶ್ಚರ್ಮಣ ಋಭವೋ ಗಾಮಪಿಂಶತ ।** ಈ ವಾಕ್ಯಕ್ಕೆ ಸಾಯಣರ ವಿವರಣೆಯು ಸ್ಕಂದಸ್ವಾಮಿಗಳ ವಿವರಣೆಗಿಂತ ಕೊಂಚ ವ್ಯತ್ಯಾಸವಾಗಿದೆ ಸಾಯಣಭಾಷ್ಯದಲ್ಲಿ ಹೇಳಿರುವ ಕಥೆಯು ಈ ರೀತಿಯಿದೆ. **ಪುರಾ ಕಸ್ಯಚಿದೃಷೇರ್ಧೇನುರ್ಮೃತಾ । ಸ ಋಷಿಸ್ತಸ್ಯಾ ಧೇನೋರ್ವತ್ಸಂ ದೃಷ್ಟ್ವಾ ಋಭೂಂ ತುಷ್ಟಾವ । ಋಭವಸ್ತತ್ಸದೃಶೀ ಮನ್ಯಾಂ ಧೇನುಂ ಕೃತ್ವಾ ತದೀಯೇನ ಚರ್ಮಣಾ ಸಂವೀಯ ತೇನ ವತ್ಸೇನ ಸಮಯೋಜಯನ್ನಿತಿ ।** ಹಿಂದೆ ಒಬ್ಬ ಋಷಿಯ ಧೇನುವು ಮೃತವಾದಾಗ ಅದರ ಸಣ್ಣ ಕರುವಿನ ಮೇಲಿನ ಕನಿಕರದಿಂದ ಅದಕ್ಕೆ ಸಹಾಯಮಾಡಬೇಕೆಂದು ಋಭುಗಳನ್ನು ಕುರಿತು ಪ್ರಾರ್ಥಿಸಿದನು. ಆಗ ಋಭುಗಳು ಬೇರೆ ಹಸುವನ್ನು ಸೃಷ್ಟಿಸಿ ಅದಕ್ಕೆ ಸತ್ತ ಹಸುವಿನ ಚರ್ಮವನ್ನು ಹೊದ್ದಿಸಿ ಆ ಕರುವಿನೊಂದಿಗೆ ಸೇರುವಂತೆ ಮಾಡಿದರು. ಇದು ಇವರ ಮಹಿಮೆ. ಸ್ಕಂದಸ್ವಾಮಿಗಳ ವಿವರಣೆಯಂತೆ,

> **ಅತ್ರೇತಿಹಾಸಮಾಚಕ್ಷತೇ । ಋಷೇಃ ಕಸ್ಯಚಿದಗ್ನಿಹೋತ್ರಧೇನುಸ್ತರುಣವತ್ಸಾ ಮಮಾರ । ತಸ್ಯಾಂ ವಿಕರ್ತಿತಾಯಾಂ ಆರುದತಾ ವತ್ಸೇನ ಉದ್ವೇಜಿತಃ ಋಭೂನ್ ಸ್ವಪಿತರೌ ವೃದ್ಧೌ ಪುನರ್ಯುವಾನೌ ಕುರ್ವತೋ ದದರ್ಶ । ತಾನುವಾಚ । ಮಮಾಪ್ಯಗ್ನಿಹೋತ್ರಧೇನುಂ ಮೃತಾಂ ಪುನರ್ಜೀವಯತೇತಿ । ತಸ್ಯ ಸ್ವಮಾಹಾತ್ಮ್ಯೇನ ತಸ್ಮಾಚ್ಚರ್ಮಣಃ ತಾಮೇವ ಗಾಂ ಅಶೇಷಾವಯವೋಪೇತಾಂ ಚಕ್ರುಃ ಇತಿ । ತದೇತದಿಹೋಚ್ಯತೇ ನಿಶ್ಚರ್ಮಣ ಇತಿ ।**

ಒಬ್ಬ ಋಷಿಯ ಅಗ್ನಿಹೋತ್ರಧೇನುವು ತನ್ನ ಎಳೆಯ ಕರುವನ್ನು ಬಿಟ್ಟು ಸತ್ತುಹೋಯಿತು. ಅದನ್ನು ಕುಯ್ಯುವಾಗ ಆ ಎಳೆಯ ಕರುವಿನ ಆರ್ತನಾದವನ್ನು ಕೇಳಿ ಕನಿಕರದಿಂದ ಋಷಿಯು ಋಭುಗಳನ್ನು ಜ್ಞಾಪಿಸಿಕೊಂಡನು. ಅವರು ತಮ್ಮ ವೃದ್ಧರಾದ ಮಾತಾಪಿತೃಗಳನ್ನು ಪುನಃ ವಯಸ್ಕರನ್ನಾಗಿ ಮಾಡುತ್ತಿದ್ದರು. ಅವರ ಆ ಶಕ್ತಿಯನ್ನು ನೋಡಿ ಮೃತವಾದ ತನ್ನ ಅಗ್ನಿಹೋತ್ರಧೇನುವನ್ನೂ ಬದುಕಿಸಬೇಕೆಂದು ಕೇಳಿಕೊಂಡನು. ಅವರು ಸತ್ತುಹೋಗಿದ್ದ ಆ ಹಸುವನ್ನು ಅದೇ ವಿಕರ್ತಿತವಾದ ಚರ್ಮದ ಹೊದ್ದಿಕೆಯಿಂದ ಪೂರ್ಣವಾದ ಅವಯವಗಳುಳ್ಳದ್ದನ್ನಾಗಿ ಮಾಡಿ ಆ ಹಸುವನ್ನು ಬದುಕಿಸಿದರು ಎಂದು ಹೇಳಿದೆ. ಸಾಯಣರು ಹೇಳುವುದಕ್ಕೂ ಇದಕ್ಕೂ ಇರುವ ಮುಖ್ಯವ್ಯತ್ಯಾಸವು ಏನೆಂದರೆ, ಅವರು **ಅನ್ಯಾಂ ಧೇನುಂ ಕೃತ್ವಾ** ಎಂದಿದ್ದಾರೆ. ಸ್ಕಂದಸ್ವಾಮಿಯು **ತಾಮೇವ ಗಾಂ ಅಶೇಷಾವಯವೋ ಪೇತಾಂ ಚಕ್ರುಃ** ಎಂದು ಹೇಳಿದ್ದಾರೆ.

**ಅಪಿಂಶತ**—ರೂಪವನ್ನು ಕೊಡು, ಆಕೃತಿಯನ್ನು ಕೊಡು, ರಚಿಸು ಎಂಬ ಅರ್ಥವನ್ನು ಕೊಡುವ **ಪಿಶ್** ಧಾತುವಿನಿಂದ ಈ ಪದವು ನಿಷ್ಪನ್ನವಾಗಿದೆ. ಬೇರೆ ಬೇರೆಯಾಗಿರುವ ಅವಯವಗಳನ್ನು ಒಟ್ಟಿಗೆ ಸೇರಿಸಿ ಒಂದು ರೂಪವನ್ನು ಕೊಡು ಎನ್ನುವ ಅರ್ಥದಲ್ಲೂ ಮತ್ತು ಒಂದೇ ಅದುದನ್ನು ಬಿಡಿಸಿ ಬೇರೆ ಬೇರೆ ಅವಯವಗಳುಳ್ಳದ್ದನ್ನಾಗಿ ಮಾಡು ಎನ್ನುವ ಅರ್ಥದಲ್ಲೂ ಸಹ ಈ ಪದದ ಪ್ರಯೋಗವಿದೆ. ಉದಾಹರಣೆಗೆ

**ವರ್ಧಯಂತೀಂ ಬಹುಭ್ಯಃ ಪ್ರೈಕೋ ಅಬ್ರವೀದೃತಾ ವದಂತಶ್ಚಮಸಾँ ಅಪಿಂಶತ ।**
(ಋ. ಸಂ. ೦-೧೬೧-೯)

**ಯಾಭಿಃ ಶಚೀಭಿಶ್ಚಮಸಾँ ಅಪಿಂಶತ ಯಯಾ ಧಿಯಾ ಗಾಮರಿಣೀತ ಚರ್ಮಣಃ ।**
(ಋ. ಸಂ. ೩-೬೯-೨)

ಎಂಬ ಋಕ್ಕುಗಳಲ್ಲಿ ಅಪಿಂಶತ ಎನ್ನುವ ಪದಕ್ಕೆ ಅವಯವಿನೋऽಕುರುತ ಚತುರ್ಧಾ ಪೃಥಜತ ನಾಲ್ಕು ಭಾಗ ಗಳನ್ನಾಗಿ ವಿಭಾಗಿಸಿದರು ಎಂದರ್ಥವಾಗಿರುತ್ತದೆ.

**ಅಭಿ ಶ್ಯಾವಂ ನ ಕೃಶನೇಭಿರಶ್ವಂ ನಕ್ಷತ್ರೇಭಿಃ ಪಿತರೋ ದ್ಯಾಮಪಿಂಶನ್ ।**
(ಋ. ಸಂ. ೧೦-೬೮-೧೧)

ಎಂಬಲ್ಲಿ **ಅಭಿತೋऽದೀಪಯನ್ । ಅಯಂ ದೀಪನಾರ್ಯಾಂ ವರ್ತತೇ ।** ಪ್ರಕಾಶಮಾನವಾದುದನ್ನಾಗಿ ಮಾಡಿ ದರು ಎಂದರೆ ರೂಪವನ್ನು ಕೊಟ್ಟು ಬೆಳಸುವಂತೆ ಮಾಡಿದ್ದರು ಎಂದರ್ಥ.

**ಯ ಇಮೇ ದ್ಯಾವಾಪೃಥಿವೀ ಜನಿತ್ರೀ ರೂಪೈರಪಿಂಶದ್ಭುವನಾನಿ ವಿಶ್ವಾ ।**
(ಋ. ಸಂ. ೧೦-೧೧೦-೯)

ಎಂಬ ಋಕ್ಕಿನಲ್ಲಿ ಬೇರೆ ಬೇರೆ ರೂಪಗಳುಳ್ಳದ್ದನ್ನಾಗಿ ಮಾಡಿದನು ಎಂದರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ **ಅಶೇಷಾವಯವೋಪೇತಾಂ ಚಕ್ರುಃ । ನಿಶ್ಶೇಷೇಣಾಶ್ಲಿಷ್ಟಾಂ ಸಂಯುಕ್ತಾಮಕುರುತ ।** ಬಿಡಿಸಿದ್ದ ಬೇರೆಬೇರೆ ಅವಯವಗಳನ್ನು ಒಂದಾಗುವಂತೆ ಮಾಡಿ ಧೇನುವಿಗೆ ಒಂದು ರೂಪವನ್ನು ಕೊಟ್ಟರು ಎಂದರ್ಥ.

**ಜಿವ್ರೀ—ಜೀರ್ಣೌ ।** ವೃದ್ಧರಾದ ಎಂದರ್ಥ. ಒಂದುಕಡೆ ಮಾತ್ರ ಎಂದರೆ,

**ಆ ವಾಂ ದಾನಾಯ ವವೃತೀಯ ದಸ್ರಾ ಗೋರೋಹೇಣ ತೌಗ್ರ್ಯೋ ನ ಜಿವ್ರಿಃ ।**
(ಋ. ಸಂ. ೧-೧೮೦-೫)

ಎಂಬ ಋಕ್ಕಿನಲ್ಲಿ **ಜೀರ್ಣ** ಅಥವಾ **ಜಯಶೀಲ** ಎಂದು ಎರಡು ಅರ್ಥಗಳೂ ಆಗಬಹುದೆಂದು ಸಾಯಣರು ಭಾಷ್ಯ ದಲ್ಲಿ ತಿಳಿಸಿರುತ್ತಾರೆ. ಆದರೆ ನಿರುಕ್ತದಲ್ಲಿ ಉದಹರಿಸಿರುವ (೩-೨೧).

**ಆ ತ್ವಾ ರಂಭಂ ನ ಜಿವ್ರಯೋ ರರಂಭಾ ಶವಸಸ್ಪತೇ ।**
(ಋ. ಸಂ. ೮-೪೫-೨೦)

**ವಿನಾ ಪತ್ನ್ಯಾ ತನ್ವಂ ೧ ಸಂ ಸೃಜಸ್ವಾಧಾ ಜಿವ್ರೀ ವಿದಥಮಾ ವದಾಥಃ ।**
(ಋ- ಸಂ. ೧೦-೮೫-೨೭)

ಇತ್ಯಾದಿ ಋಕ್ಕುಗಳಲ್ಲೆಲ್ಲಾ **ಜೀರ್ಣ, ವೃದ್ಧ** ಎಂದೇ ಅರ್ಥ. ಅದರಂತೆ ಇಲ್ಲಿಯೂ ಪರವೃದ್ಧರಾದ ಮಾತಾಪಿತೃ ಗಳೆಂದರ್ಥ. ಅವರನ್ನು ಋಭುಗಳು ಪುನಃ ಯುವಕರನ್ನಾಗಿ ಮಾಡಿದರು.

**ಸ್ವಪಸ್ಯಯಾ—ಶೋಭನಕರ್ಮೇಚ್ಛಯಾ । ಯಾಗದಾನಾದ್ಯಾಚರಣೇನ** ಯಾಗದಾನಾದಿ ಶ್ರೇಷ್ಠ ವಾದ ಕರ್ಮಗಳ ಆಚರಣೆಯಿಂದ ಎಂದರ್ಥ.

ವ್ಯಾಕರಣಪ್ರಕ್ರಿಯಾ

**ಅಪಿಂಶತ**—ಪಿಶ ಅವಯವೇ. ಧಾತು. ತುದಾದಿ ಮುಚಾದಿಯಲ್ಲಿ ಸೇರಿದೆ ಲಙ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ತುದಾದಿಭ್ಯಃ ಶಃ**—(ಪಾ. ಸೂ. ೩-೧-೭೭) ಎಂಬುದರಿಂದ ಶವಿಕರಣ. **ಶೇಮುಚಾದೀನಾಮ್**—(ಪಾ. ಸೂ. ೭-೧-೫೯) ಎಂಬುದರಿಂದ ಧಾತುವಿಗೆ ನುಮಾಗಮ. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ಅಸೃಜತ**—ಸೃಜ ವಿಸರ್ಗೇ. ಧಾತು. ಹಿಂದಿನಂತೆ ಲಙ್ ಪ್ರಥಮಪುರುಷ ಏಕವಚನಾಂತರೂಪ ತಿಙಂತನಿಘಾತಸ್ವರ ಬರುತ್ತದೆ.

**ಸೌಧನ್ವನಾಸಃ**—ಸುಧನ್ವನಃ ಅಪತ್ಯಂ ಪುಮಾಂಸಃ ಸೌಧನ್ವನಾಸಃ **ತಸ್ಯಾಪತ್ಯಮ್**—ಎಂಬುದರಿಂದ ಅಣ್ ಪ್ರತ್ಯಯ. **ನಸ್ತದ್ಧಿತೇ**—ಸೂತ್ರದಿಂದ ಟಿಲೋಪಪ್ರಾಪ್ತವಾದರೆ **ಅನ್**—(ಪಾ. ಸೂ. ೬-೪-೧೬೭) ಎಂಬುದರಿಂದ ಪ್ರಕೃತಿಭಾವ ಬರುತ್ತದೆ. **ತದ್ಧಿತೇಷ್ವಚಾಮಾದೇಃ**—ಎಂಬುದರಿಂದ ಆದಿವೃದ್ಧಿ. ಸಂಬೋಧನಾ ಜಸ್ ಪರವಾದಾಗ **ಆಜ್ಜಸೇರಸುಕ್**—(ಪಾ. ಸೂ. ೭-೧-೫೦) ಎಂಬುದರಿಂದ ಅಸುಕಾಗಮ. ಅಂತ್ಯಸಕಾರಕ್ಕೆ ರುತ್ವವಿಸರ್ಗ. ಪಾದಾದಿಯಲ್ಲಿರುವುದರಿಂದ ಅಷ್ಟಮಿಕ ನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ**—(ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸ್ವಪಸ್ಯಯಾ**—ಶೋಭನಂ ಅಪಃ ಸ್ವಪಃ. ಸ್ವಪಃ ಇಚ್ಛತಿ ಆತ್ಮನಃ ಇತಿ ಸ್ವಪಸ್ಯಾ. **ಸುಪ ಆತ್ಮನಃ ಕ್ಯಚ್**—(ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. **ಸನಾದ್ಯಂತಾ ಧಾತವಃ**—(ಪಾ. ಸೂ ೩-೧-೩೨) ಎಂಬುದರಿಂದ ಸ್ವಪಸ್ಯ ಎಂಬುದು ಧಾತುಸಂಜ್ಞೆಯನ್ನು ಹೊಂದುತ್ತದೆ. ಇದರಮೇಲೆ **ಅಪ್ರತ್ಯಯಾತ್**—(ಪಾ. ಸೂ. ೩-೩-೧೦೨) ಎಂಬುದರಿಂದ ಅಕಾರಪ್ರತ್ಯಯ. ಇದು ಭಾವಾರ್ಥದಲ್ಲಿ ಬರುತ್ತದೆ. **ಅತೋಲೋಪಃ**—(ಪಾ. ಸೂ ೬-೪-೪೮) ಎಂಬುದರಿಂದ ಕ್ಯಚಿನ ಅಕಾರಕ್ಕೆ ಲೋಪ **ಸ್ತ್ರಿಯಾಂ**—ಎಂಬ ಅಧಿಕಾರದಲ್ಲಿ ವಿಹಿತವಾದುದರಿಂದ ಸ್ತ್ರೀತ್ವದಲ್ಲಿ ಟಾಪ್ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ಜಿವ್ರೀ**—ಜ್ಯ್ರಾ ವಯೋ ಹಾನೌ ಧಾತು. **ಜ್ಯಾಶಸ್ತ್ರೃಜಾಗೃಭ್ಯಃ ಕ್ವಿನ್**—(ಉ. ಸೂ ೪-೫೪) ಎಂಬುದರಿಂದ ಇದಕ್ಕೆ ಕ್ವಿನ್‌ಪ್ರತ್ಯಯ. **ಋತ ಇದ್ಧಾತೋಃ**—(ಪಾ. ಸೂ. ೭-೧-೧೦೦) ಎಂಬುದರಿಂದ ಧಾತುವಿನ ಋಕಾರಕ್ಕೆ ಇತ್ವ. ರಪರವಾಗಿ ಬರುತ್ತದೆ. ಛಾಂದಸವಾಗಿ ರೇಫವಕಾರಗಳಿಗೆ ವ್ಯತ್ಯಯ ಬರುತ್ತದೆ. ಛಂದಸ್ಸಿನಲ್ಲಿ ಬಹುಲವಚನವಿರುವುದರಿಂದ **ಹಲಿ ಚ**—ಎಂಬುದರಿಂದ ಉಪಧಾದೀರ್ಘ ಬರುವುದಿಲ್ಲ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿವಚನಾಂತರೂಪ.

**ಯುವಾನಾ**--ದ್ವಿವಚನ ಔವಿಭಕ್ತಿ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ.

**ಪಿತರಾ**—ಪಿತಾ ಚ ಮಾತಾ ಚ ಪಿತರೌ. **ಪಿತಾಮಾತ್ರಾ**—(ಪಾ. ಸೂ. ೧-೨-೭೦) ಎಂಬುದರಿಂದ ಪಿತೃ ಶಬ್ದಕ್ಕೆ ಏಕಶೇಷ. ಹಿಂದಿನಂತೆ ದ್ವಿವಚನಕ್ಕೆ ಆಕಾರಾದೇಶ.

**ಅಕೃಣೋತನ**—ಕೃವಿ ಹಿಂಸಾಕರಣಯೋಶ್ಚ ಧಾತು. **ಇದಿತೋ ನುಮ್ ಧಾತೋಃ**—(ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. ಲಙ್ಮಧ್ಯಮಪುರುಷಬಹುವಚನದಲ್ಲಿ **ತಸ್ಥಸ್ಥ**—(ಪಾ. ಸೂ. ೩-೪-೧೦೧) ಎಂಬುದರಿಂದ ತಾದೇಶ. **ಧಿನ್ವಿಕೃಣ್ವ್ಯೋರಚ**—(ಪಾ. ಸೂ. ೩-೧-೮೦) ಎಂಬುದರಿಂದ ಉ ಪ್ರತ್ಯಯ. ತತ್ಸನ್ನಿಯೋಗದಿಂದ ಧಾತುವಿಗೆ ಅಕಾರಾಂತಾದೇಶ. ವಕಾರದ ಸ್ಥಾನಕ್ಕೆ ಆದೇಶ ಬಂದಾಗ **ಅತೋ ಲೋಪಃ**—(ಪಾ. ಸೂ, ೬-೪-೪೮) ಎಂಬುದರಿಂದ ಅದಕ್ಕೆ ಲೋಪ. **ಅಚಃ ಪರಸ್ಮಿನ್ ಪೂರ್ವವಿಧೌ**—ಸೂತ್ರದಿಂದ ಅದಕ್ಕೆ ಸ್ಥಾನಿವದ್ಭಾವ ಬರುವುದರಿಂದ ಉ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಉ ಪ್ರತ್ಯಯಕ್ಕೆ ತನ್ನಿಮಿತ್ತವಾಗಿ ಗುಣ. ಅಂಗಕ್ಕೆ ಅಡಾಗಮ. **ತಪ್ತನಪ್ತನಥನಾಶ್ಚ**—(ಪಾ. ಸೂ. ೭-೧-೪೫) ಎಂಬುದರಿಂದ ತಪ್ರತ್ಯಯಕ್ಕೆ ತನಪಾದೇಶ. ಇದು ಪಿತ್ತಾದುದರಿಂದಲೇ ಗುಣ ನಿಷೇಧ ಬರುವುದಿಲ್ಲ. ಅತಿಙಂತದ ಪದದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೮ ॥

---:o:---

ಸಂಹಿತಾಪಾಠಃ

ವಾಜೇಭಿರ್ನೋ ವಾಜಸಾತಾವವಿಡ್ಢ್ಯೃಭುಮಾಁ ಇಂದ್ರ ಚಿತ್ರಮಾ ದರ್ಷಿ ರಾಧಃ ।
ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ ಪೃಥಿವೀ ಉತ ದ್ಯೌಃ ॥ ೯ ॥

। ಪದಪಾಠಃ ।

ವಾಜೇಭಿಃ । ನಃ । ವಾಜಽಸಾತೌ । ಅವಿಡ್ಢಿ । ಋಭುಽಮಾನ್ । ಇಂದ್ರ । ಚಿತ್ರಂ । ಆ । ದರ್ಷಿ । ರಾಧಃ ।
ತತ್ । ನಃ । ಮಿತ್ರಃ । ವರುಣಃ । ಮಮಹಂತಾಂ । ಅದಿತಿಃ । ಸಿಂಧುಃ । ಪೃಥಿವೀ । ಉತ । ದ್ಯೌಃ ॥ ೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಋಭುಮಾನ್ । ಋಭುರ್ವಿಭ್ವಾ ವಾಜ ಇತಿ ತ್ರಯೋಽಪ್ಯೃಭುಶಬ್ದೇನೋಪಚಾರಾದತ್ರೋಚ್ಯಂತೇ । ತೈರ್ಯುಕ್ತಸ್ತ್ವಂ ವಾಜಸಾತೌ ವಾಜಸ್ಯಾನ್ನಸ್ಯ ಸಂಭಜನೇ ನಿಮಿತ್ತಭೂತೇ ಸತಿ ವಾಜೇಭಿರನ್ನೈರವಿಡ್ಢಿ । ಅಸ್ಮಾನ್ಸ್ವ್ಯಾಪ್ನುಹಿ । ಯದ್ವಾ । ವಾಜಸಾತಿರಿತಿ ಸಂಗ್ರಾಮನಾಮ । ವಾಜಸಾತೌ ಸಂಗ್ರಾಮೇ ವಾಜೇಭಿರ್ವೇಜನಯುಕ್ತೈರಶ್ವೈರವಿಡ್ಢಿ । ಅಸ್ಮಾನ್ ರಕ್ಷ । ಅಪಿ ಚ ಚಿತ್ರಂ ಚಾಯನೀಯಂ ರಾಧೋ ಧನಮಾ ದರ್ಷಿ । ಅಸ್ಮಭ್ಯಂ ದಾತುಮಾದ್ರಿಯಸ್ವ । ತೃತೀಯಸವನೇ ಋಭುಭಿಃ ಸಹೇಂದ್ರಸ್ಯಾವಸ್ಥಾನಾತ್ ಪ್ರಸಂಗಾದತ್ರೇಂದ್ರಸ್ತುತಿಃ । ಯದೇತದಸ್ಮಾಭಿಃ ಪ್ರಾರ್ಥಿತಮಸ್ಮದೀಯಂ ತನ್ಮಿತ್ರಾದಯೋ ಮಮಹಂತಾಂ ಪೂಜಯಂತಾಂ ॥ ವಾಜಸಾತೌ । ವನ ಷಣ ಸಂಭಕ್ತೌ । ಭಾವೇ ಕ್ತಿನ್ । ಜನಸನಖನಾಂ ಸನ್‌ಝಲೋರಿತ್ಯಾತ್ವಂ । ವಾಜಾನಾಂ ಸಾತಿರ್ಯಸ್ಮಿನ್ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಅವಿಡ್ಢಿ । ವಿಷ್ಲೃ ವ್ಯಾಪ್ತೌ । ಲೋಟೋ ಹಿಃ । ಬಹುಲಂ ಛಂದಸೀತಿ ಶಪೋ ಲುಕ್ । ಹುಝಲ್ಭ್ಯೋ ಹೇರ್ಧಿಃ । ಷ್ಟುತ್ವಜಶ್ತ್ವೇ । ಛಂದಸ್ಯಪಿ ದೃಶ್ಯತೇ । ಪಾ-೬-೪-೭೩ । ಇತಿ ದೃಶಿಗ್ರಹಣಾಲ್ಲೋಟ್ಯಡಾಗಮಃ । ಯದ್ವಾ । ಅವತೇರ್ಲೋಟಿ ಸಿಬ್ಬಹುಲಂ ಲೇಟೀತಿ ಬಹುಲವಚನಾದ್ವಿಕರಣಃ ಸಿಪ್ । ತಸ್ಯಾರ್ಧಧಾತುಕತ್ವಾದಿಟ್ । ಆದೇಶಪ್ರತ್ಯಯಯೋರಿತಿ ಷತ್ವಂ । ಧಿತ್ವಾದಿ ಪೂರ್ವವತ್ । ಋಭುಮಾನ್ । ಹ್ರಸ್ವನುಡ್ಭ್ಯಾಂ ಮತುಬಿತಿ ಮತುಪ ಉದಾತ್ತತ್ವಂ । ದರ್ಷಿ । ದೃಙ್ ಆದರೇ । ಲೋಟಿ ವ್ಯತ್ಯಯೇನ ಪರಸ್ಮೈಪದಂ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ಋಭುಮಾನ್**—(ಅಣ್ಣ ತಮ್ಮಂದಿರಾದ) ಋಭುಗಳೊಡನೆ ಸೇರಿಕೊಂಡು । **ವಾಜಸಾತೌ**—ಅನ್ನದ ವಿಭಾಗವನ್ನು ಮಾಡುವ ನಿಮಿತ್ತವೊದಗಿದಾಗ । **ವಾಜೇಭಿಃ**—ಅನ್ನಗಳೊಂದಿಗೆ । **ಅವಿಡ್ಢಿ**—(ನಮ್ಮನ್ನೂ) ಸೇರಿಸು. (ನಮಗೂ ಒದಗಿಸಿಕೊಡು) । **ಅಥವಾ ವಾಜಸಾತೌ**—ಯುದ್ಧದಲ್ಲಿ । **ವಾಜೇಭಿಃ**—ಕುದುರೆಗಳೊಂದಿಗೆ । **ಅವಿಡ್ಢಿ**—(ನಮ್ಮನ್ನು) ರಕ್ಷಿಸು । **ಚಿತ್ರಂ**—ಮನೋಹರವಾದ ಅಥವಾ ಆಶ್ಚರ್ಯಕರವಾದ । **ರಾಧಃ**—ಧನವನ್ನು । **ಆದರ್ಷಿ**—(ನಮಗೆ) ಕೊಡಲು ಮನಸ್ಸುಮಾಡು । **ನಃ**—ನಮ್ಮ । **ತತ್**—ಆ ಪ್ರಾರ್ಥನೆಯನ್ನು । **ಮಿತ್ರಃ**—ಮಿತ್ರನೂ । **ವರುಣಃ**—ವರುಣನೂ । **ಅದಿತಿಃ**-ಅದಿತಿಯೂ । **ಸಿಂಧುಃ**—ಸಾಗರಾಧಿದೇವತೆಯೂ । **ಪೃಥಿವೀ**—ಪೃಥ್ವಿಯೂ । **ಉತ**—ಮತ್ತು । **ದ್ಯೌಃ**—ದ್ಯುಲೋಕಾಧಿ ದೇವತೆಯೂ । **ಮಮಹಂತಾಂ**—ರಕ್ಷಿಸಲಿ.

ಭಾವಾರ್ಥ

ಎಲೈ ಇಂದ್ರನೇ, ಅಣ್ಣತಮ್ಮಂದಿರಾದ ಋಭುಗಳೊಡನೆ ಸೇರಿಕೊಂಡು ಅನ್ನದ ವಿಭಾಗವನ್ನು ಮಾಡುವ ನಿಮಿತ್ತವೊದಗಿದಾಗ ನಮಗೂ ಅನ್ನವನ್ನು ಒದಗಿಸು. ಮತ್ತು ಮನೋಹರವಾದ ಧನವನ್ನು ಕೊಡಲು ಮನಸ್ಸು ಮಾಡು. ನಮ್ಮ ಈ ಪ್ರಾರ್ಥನೆಯನ್ನು ಮಿತ್ರನೂ, ವರುಣನೂ, ಅದಿತಿಯೂ, ಸಾಗರಾಧಿದೇವತೆಯೂ, ಪೃಥ್ವಿಯೂ ಮತ್ತು ದ್ಯುಲೋಕಾಧಿದೇವತೆಯೂ ರಕ್ಷಿಸಲಿ.

English Translation

Indra, associated with the Ribhus, supply us, in the distribution of viands with food, and consent to bestow upon us wonderful riches ; and may Mitra, Varuna, Aditi—ocean, earth, and heaven, preserve them for us.

॥ ವಿಶೇಷವಿಷಯಗಳು ॥

ಇಲ್ಲಿ ಸಾಯಣರ ಅನ್ವಯಕ್ಕೂ ಸ್ಕಂದಸ್ವಾಮಿಯು ಮಾಡುವ ಅನ್ವಯಕ್ಕೂ ವ್ಯತ್ಯಾಸವಿದೆ. ಸಾಯಣರು **ಋಭುಮಾನ್ ಇಂದ್ರಃ**—ಋಭು, ವಿಭ್ವ, ವಾಜ ಎಂಬ ಮೂವರು ಸಹೋದರರೊಡನೆ ಕೂಡಿರುವ ಇಂದ್ರನು, **ವಾಜೇಭಿಃ** ಅನ್ನಗಳಿಂದ ಅಥವಾ ಅಶ್ವಗಳಿಂದ, **ಅವಿಡ್ಢಿ**—ನಮ್ಮನ್ನು ರಕ್ಷಿಸಲಿ ಎಂದು ವಿವರಿಸಿದ್ದಾರೆ. ಸ್ಕಂದಸ್ವಾಮಿಗಳು **ವಾಜೇಭಿಃ ಇಂದ್ರ, ಅವಿಡ್ಢಿ** ಎಂದು ಒಂದು ವಾಕ್ಯವನ್ನೂ, **ಋಭುಮಾನ್ ಇಂದ್ರ ಆದರ್ಷಿ** ಎಂದು ಇನ್ನೊಂದು ವಾಕ್ಯವನ್ನೂ ಮಾಡಿ, **ವಾಜೇಭಿಃ, ಋಭುಮಾನ್** ಎಂಬ ಎರಡು ಪದಗಳನ್ನೂ ಸಹ ಇಂದ್ರಪರವಾಗಿ ಅರ್ಥಮಾಡಿದ್ದಾರೆ. **ವಾಜೇಭಿಃ** ಎಂದರೆ ವಾಜಪ್ರಭೃತಿ ಸಹೋದರರೊಡನೆ ಕೂಡಿದ ಎಂದೂ, **ಋಭುಮಾನ್** ಎಂದರೂ ಸಹ **ಋಭು** ಪ್ರಭೃತಿ ಸಹೋದರರೊಡನೆ ಕೂಡಿದ ಇಂದ್ರ ಎಂದೂ ಅರ್ಥವಾಗುತ್ತದೆ. ಸಾಯಣರು **ವಾಜಸಾತೌ** ಎನ್ನುವ ಪದಕ್ಕೆ ಅನ್ನದ ವಿಭಾಗದ ಕಾಲದಲ್ಲಿ ಎಂದು ಒಂದು ಅರ್ಥವನ್ನೂ, ಸಂಗ್ರಾಮವೆಂದು ಇನ್ನೊಂದು ಅರ್ಥವನ್ನೂ ಮಾಡಿದ್ದಾರೆ. ಸ್ಕಂದಸ್ವಾಮಿಗಳು ಸಂಗ್ರಾಮವೆಂದು ಒಂದು ಅರ್ಥವನ್ನು ಮಾತ್ರ ಮಾಡಿದ್ದಾರೆ. ಸಾಯಣರ ಮೊದಲನೆಯ ಅರ್ಥದಲ್ಲಿ ವಾಜಸಾತೌ—ಅನ್ನದ ವಿಭಾಗವನ್ನು ಮಾಡುವಾಗ, ವಾಜೇಭಿಃ—ಅನ್ನಗಳೊಂದಿಗೆ, ಅವಿಡ್ಢಿ—ನಮ್ಮನ್ನೂ ಸೇರಿಸು ಎಂದರೆ ನಮಗೂ ಒದಗಿಸಿಕೊಡು ಎಂದೂ, ಎರಡನೆಯ ಅರ್ಥದಲ್ಲಿ ವಾಜಸಾತೌ—ಯುದ್ಧದಲ್ಲಿ, ವಾಜೇಭಿಃ—ಕುದುರೆಗಳೊಂದಿಗೆ, ಅವಿಡ್ಢಿ—ನಮ್ಮನ್ನು ರಕ್ಷಿಸು ಎಂದೂ ಆಗುತ್ತದೆ. **ವಾಜಸಾತೌ** ಎನ್ನುವ ಪದಕ್ಕೆ ಎರಡು ಅರ್ಥಗಳೂ ಇರುವುದರಿಂದ ಸಾಯಣರ ಎರಡುಅರ್ಥಗಳೂ ಹೊಂದಿಕೊಳ್ಳುತ್ತವೆ. ನಿರುಕ್ತಕಾರರು **ವಾಜಸಾತೌ** ಎಂಬ ಶಬ್ದವನ್ನು **ಸಂಗ್ರಾಮ** ನಾಮಗಳಲ್ಲಿ ಸೇರಿಸಿದ್ದರೂ ಸಹ (ನಿ. ೩-೬) ಕೊನೆಯಲ್ಲಿ,

**ದೇವಾನಾಂ ಪತ್ನೀರುಶತೀರವಂತು ನಃ ಪ್ರಾವಂತು ನಸ್ತುಜಯೇ ವಾಜಸಾತಯೇ ।**

(ಋ. ಸಂ. ೫-೪೬-೭)

ಎಂಬ ಋಕ್ಕಿನಲ್ಲಿ ವಾಜಸಾತಯೇ ಎನ್ನುವುದಕ್ಕೆ **ಅನ್ನಸಂಸನನಾಯ** ಅನ್ನಲಾಭಕ್ಕಾಗಿ ಎಂದರ್ಥಮಾಡಿದ್ದಾರೆ (ನಿ. ೧೨-೪೫) ಹೀಗೆಯೇ,

**ಪುತ್ರಾಸೋ ನ ಪಿತರಂ ವಾಜಸಾತಯೇ ಮಂಹಿಷ್ಠಂ ವಾಜಸಾತಯೇ ।**

(ಋ. ಸಂ. ೧-೧೩೦-೧)

**ಅನು ನು ಸ್ಥಾತ್ಯವೃಕಾಭಿರೂತಿಭೀ ರಥಂ ಮಹೇ ಸನಯೇ ವಾಜಸಾತಯೇ ।**

(ಋ. ಸಂ. ೨-೩೧-೩)

ಇತ್ಯಾದಿ ಋಕ್ಕುಗಳಲ್ಲೆಲ್ಲಾ **ಅನ್ನಸಂಸನನಾಯ ಅಥವಾ ಅನ್ನಸ್ಯ ಸಂಭಜನಾರ್ಥಂ** ಎಂದೇ ಅರ್ಥವಾಗುತ್ತದೆ. ಆಗ **ಅವಿಡ್ಢಿ** ಎಂಬ ಕ್ರಿಯಾಪದವು ವ್ಯಾಪ್ತ್ಯರ್ಥಕವಾದ ವಿಷ್ಲೃ ಧಾತುವಿನಿಂದ ನಿಷ್ಪನ್ನವಾಗಿರುತ್ತದೆ. ಅಥವಾ ವಾಜಸಾತೌ ಎಂಬ ಪದಕ್ಕೆ ಸಂಗ್ರಾಮದಲ್ಲಿ ಎಂದರ್ಥಮಾಡಿದರೆ ಆಗ **ಅವಿಡ್ಢಿ** ಎನ್ನುವ ಕ್ರಿಯಾಪದವು ರಕ್ಷಣಾರ್ಥಕವಾದ ಅವ ಧಾತುವಿನಿಂದ ನಿಷ್ಪನ್ನವಾಗಿರುತ್ತದೆ. ವಾಜಸಾತಿ ಶಬ್ದವು ಸಂಗ್ರಾಮವೆಂಬ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿರುವುದೇ ಅಧಿಕವೆಂದು ಹೇಳಬಹುದು.

**ಉಗ್ರಂ ಪೂರ್ವೀಷು ಪೂರ್ವ್ಯಂ ಹವಂತೇ ವಾಜಸಾತಯೇ ।**

(ಋ ಸಂ. ೫-೩೫-೬)

ಇತ್ಯಾದಿ ಋಕ್ಕುಗಳಲ್ಲಿ ಸಂಗ್ರಾಮವೆಂದರ್ಥ.

**ಉರು ಣೋ ವಾಜಸಾತಯೇ ಕೃತಂ ರಾಯೇ ಸ್ವಸ್ತಯೇ ।**

(ಋ. ಸಂ. ೫-೬೪-೬)

ಇತ್ಯಾದಿ ಋಕ್ಕುಗಳಲ್ಲಿ **ಯಜ್ಞಾಯ** ಎಂದೂ ಅರ್ಥಮಾಡಬಹುದು. ಆದುದರಿಂದ ಸಾಯಣರ ಎರಡು ಅರ್ಥಗಳೂ ಹೊಂದಿಕೊಳ್ಳುತ್ತವೆ.

ಇಲ್ಲಿ **ಋಭುಮಾನ್ ಇಂದ್ರ** ಎಂದು ಇಂದ್ರನನ್ನು ಸಂಬೋಧಿಸಿರುವುದರಿಂದ **ಆರ್ಭವಸೂಕ್ತ**ದಲ್ಲಿ ಇಂದ್ರನಿಗೆ ಸಂಬೋಧನೆಯಿರಲು ಕಾರಣವೇನೆಂದು ಆಕ್ಷೇಪವನ್ನು ಶಂಕಿಸಿ ಭಾಷ್ಯಕಾರರಿಬ್ಬರೂ ಇದಕ್ಕೆ ಸಮಾಧಾನ ವನ್ನು ಹೇಳಿರುತ್ತಾರೆ. **ತೃತೀಯಸವನೇ ಋಭುಭಿಃ ಸಹೇಂದ್ರಸ್ಯ ಅವಸ್ಥಾನಾತ್ ಪ್ರಸಂಗಾದತ್ರೇಂದ್ರ-ಸ್ತುತಿಃ । ತೃತೀಯಸವನದಲ್ಲಿ** ಋಭುಗಳೊಂದಿಗೆ ಇಂದ್ರನ ಸಾಹಚರ್ಯವು ನಿಯತವಾಗಿರುವುದರಿಂದ ಇಲ್ಲಿ ಪ್ರಾಸಂಗಿಕವಾಗಿ ಇಂದ್ರನ ಸ್ತುತಿಯೆಂದು ಸಾಯಣರೂ, **ಆರ್ಭವತ್ವಾಚ್ಚ ಸೂಕ್ತಸ್ಯ ಉಪಸರ್ಜನತಯಾಪಿ ನಿರ್ದಿಷ್ಟಾನಾಮೃಭೂಣಾಮೇವಾತ್ರ ಪ್ರಾಧಾನ್ಯಂ ದ್ರಷ್ಟವ್ಯಂ ।** ಆರ್ಭವಸೂಕ್ತವಾದುದರಿಂದ ಗೌಣವಾಗಿ ನಿರ್ದೇಶಮಾಡಿದ್ದರೂ ಸಹ ಇಲ್ಲಿ **ಋಭುಗಳಿಗೇ** ಪ್ರಾಧಾನ್ಯವೆಂದು ಸ್ಕಂದಸ್ವಾಮಿಗಳೂ ಹೇಳಿದ್ದಾರೆ. ಇದೇ ವಿಧ ವಾದ ಆಕ್ಷೇಪವನ್ನೂ ಜೊತೆಯಲ್ಲಿಯೇ ಸಮಾಧಾನವನ್ನೂ ಸಹ ಐತರೇಯ ಬ್ರಾಹ್ಮಣದಲ್ಲೂ (೨೮-೪) ನೋಡ ಬಹುದು. (ಆದರೆ ಅಲ್ಲಿಯ ಸನ್ನಿವೇಶವು ಬೇರೆಯಾದುದು. ಇಲ್ಲಿ ಆ ಉದಾಹರಣೆಯನ್ನು ತೆಗೆದುಕೊಂಡಿರುವುದು. ತೃತೀಯಸವನದಲ್ಲಿ ಋಭುಗಳಿಗಿರುವ ಪ್ರಾಧಾನ್ಯವನ್ನೂ, ಮತ್ತು ಇಂದ್ರನಿಗೂ ಋಭುಗಳಿಗೂ ಇರುವ ನಿಯತವಾದ ಸಾಹಚರ್ಯವನ್ನೂ ಹೇಳುವುದಕ್ಕಾಗಿ ಮಾತ್ರ ಎಂದು ತಿಳಿಯಬೇಕು.)

**ಇಹೋಪ ಯಾತ ಶವಸೋ ನಪಾತ ಇತಿ ತೃತೀಯಸವನ ಉನ್ನೀಯಮಾನೇಭ್ಯೋಽನ್ವಾಹ ವೃಷಣ್ವತೀಃ ಪೀತವತೀಃ ಸುತವತೀರ್ಮದ್ವತೀ ರೂಪಸಮೃದ್ಧಾ ಏತಾ ಐಂದ್ರಾರ್ಭವ್ಯೋ ಭವಂತಿ ।**

(ಐ. ಬ್ರಾ. ೨೮-೪)

**ಇಹೋಪ ಯಾತ ಶವಸೋ ನಪಾತಃ ಸೌಧನ್ವನಾ ಋಭವೋ ಮಾಪ ಭೂತ ।**
**ಅಸ್ಮಿನ್ಹಿ ವಃ ಸವನೇ ರತ್ನಧೇಯಂ ಗಮನ್ತ್ವಿಂದ್ರಮನು ವೋ ಮದಾಸಃ ।**

(ಋ. ಸಂ. ೪-೩೫-೧)

ಎಂಬ ಋಕ್ಕಿನಿಂದ ಪ್ರಾರಂಭವಾಗುವುದೂ ಮತ್ತು ಇಲ್ಲಿ ಹೇಳಿರುವ **ವೃಷಣ್ವತೀಃ, ಪೀತವತೀಃ** ಇತ್ಯಾದಿ ವಿಜ್ಞಾಪನೆ ಗಳಿಂದ ಕೂಡಿಕೊಂಡಿರುವುದೂ ಆದ ಸೂಕ್ತವನ್ನು ತೃತೀಯಸವನಕಾಲದಲ್ಲಿ ಪಠಿಸುವ ವಾಡಿಕೆ. ಇದು **ಇಂದ್ರ ಋಭುಗಳನ್ನೂ** ಒಟ್ಟಿಗೆ ನಿರ್ದೇಶಿಸಿ ಪಠಿತವಾಗಿದೆ. ಆದರೆ,

**ತದಾಹುರ್ಯನ್ನಾರ್ಭವೀಷು ಸ್ತುವತೇಽಥ ಕಸ್ಮಾದಾರ್ಭವಃ ಪವಮಾನ ಇತ್ಯಾಚಕ್ಷತ ಇತಿ ।**

ಇಲ್ಲಿ ಋಭುಗಳನ್ನು ಉದ್ದೇಶಿಸಿ ಋಕ್ಕುಗಳನ್ನು ಪಠಿಸಬೇಕಾಗಿಲ್ಲವಾದುದರಿಂದ ಇವನ್ನು ಆರ್ಭವಪವಮಾನವೆಂದು ಏತಕ್ಕೆ ಹೇಳಬೇಕೆಂದು ಆಕ್ಷೇಪ ಬಂದಾಗ ಅದಕ್ಕೆ ಉತ್ತರವಾಗಿ,

**ಪ್ರಜಾಪತಿರ್ವೈ ಏತ ಋಭೂನ್ಮರ್ತ್ಯಾನ್ಸತೋಽಮರ್ತ್ಯಾನ್ಕೃತ್ವಾ ತೃತೀಯಸವನ ಆಭಜತ್ತ್ರಸ್ಮಾನ್ನಾರ್ಭವೀಷು ಸ್ತುವತೇಽಥಾರ್ಭವಃ ಪವಮಾನ ಇತ್ಯಾಚಕ್ಷತೇ । ಇತಿ ।**
ಸರ್ವಪಿತನಾದ ಪ್ರಜಾಪತಿಯು ಮಾನವರಾದ ಋಭುಗಳನ್ನು ಅಮೃತರನ್ನಾಗಿಮಾಡಿ ತೃತೀಯಸವನದಲ್ಲಿ ಅವರಿಗೆ ಭಾಗವನ್ನು ಕೊಟ್ಟುದುದರಿಂದ ಇದಕ್ಕೆ **ಆರ್ಭವಪವಮಾನ**ವೆಂಬ ಹೆಸರು ಪ್ರಸಿದ್ಧವಾಗಿದೆ. ಮತ್ತು **ಇಂದ್ರಮೇವೈತತ್ಸವನೇಽನ್ವಾಭಜತೀತಿ ।** ಇಂದ್ರನಿಗೂ ಸಹ ಋಭುಗಳೊಂದಿಗೆ ಭಾಗವಿದೆಯೆಂಬ ಈ ವಿವರಣೆಯಿಂದ ತೃತೀಯಸವನದಲ್ಲಿ ಋಭುಗಳಿಗಿರುವ ಪ್ರಾಶಸ್ತ್ಯವನ್ನೂ ಇಂದ್ರನ ನಿಯತವಾದ ಸಾಹಚರ್ಯವನ್ನೂ ತಿಳಿಯಬಹುದು. ಪ್ರಕೃತವಾದ ಈ ಋಕ್ಕಿನ ವಿವರಣೆಯಲ್ಲಿಯೂ ಸಹ ಭಾಷ್ಯಕಾರರಿಬ್ಬರೂ ತಮ್ಮ ಆಶಂಕಾಸಮಾಧಾನಗಳಲ್ಲಿ ಈ ಅಂಶಗಳನ್ನು ತೋರಿಸಿರುವರು.

**ಆ ದರ್ಷಿ—ಅಸ್ಮಭ್ಯಂ ದಾತುಮಾದ್ರಿಯಸ್ವ.** ಅಭಿಮಾನದಿಂದ ನಮಗೆ ಕೊಡುವ ಅನುಗ್ರಹವನ್ನು ಮಾಡು ಎಂದರ್ಥ.

ವ್ಯಾಕರಣಪ್ರಕ್ರಿಯಾ

ವಾಜೇಭಿಃ **ಬಹುಲಂ ಛಂದಸಿ**—(ಪಾ. ಸೂ. ೭.೧-೧೦) ಎಂಬುದರಿಂದ ಭಿಸಿಗೆ ಐಸ್ ಬರುವುದಿಲ್ಲ. **ಬಹುವಚನೇ ಝಲ್ಯೇತ್**—ಎಂಬುದರಿಂದ ಏತ್ವ.

**ವಾಜಸಾತೌ**—ವನ ಷಣ ಸಂಭಕ್ತೌ. ಧಾತು. **ಸ್ತ್ರಿಯಾಂ ಕ್ತಿನ್**—(ಪಾ. ಸೂ. ೩-೩-೯೪) ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. **ಜನಸನಖನಾಂ ಸನ್‌ಝಲೋಃ**—(ಪಾ. ಸೂ. ೬-೪-೪೨) ಎಂಬುದರಿಂದ ಧಾತುವಿಗೆ ಆತ್ವ. ವಾಜಾನಾಂ ಸಾತಿಃ ಯಸ್ಮಿನ್ ಸಃ ವಾಜಸಾತಿಃ. ತಸ್ಮಿನ್. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—(ಪಾ. ಸೂ ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಅವಿಡ್ಢಿ**—ವಿಷ್ಲೃ ವ್ಯಾಪ್ತೌ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಸೇರ್ಹ್ಯಪಿಚ್ಚ**—ಸೂತ್ರದಿಂದ ಅದಕ್ಕೆ ಹಿ ಆದೇಶ. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಲುಕ್. ಝಲಂತದ ಪರದಲ್ಲಿ ಹಿ ಬಂದುದರಿಂದ **ಹುಝಲ್ಭ್ಯೋ ಹೇರ್ಧಿಃ**—(ಪಾ. ಸೂ. ೬-೪-೧೦೧) ಎಂಬುದರಿಂದ ಹಿಗೆ ಧಿ ಆದೇಶ. ಷಕಾರದ ಪರದಲ್ಲಿ ಧಕಾರ ಬಂದುದರಿಂದ **ಷ್ಟುನಾ ಷ್ಟುಃ**—ಸೂತ್ರದಿಂದ ಧಕಾರಕ್ಕೆ ಢತ್ವ. **ಝಲಾಂ ಜಶ್ ಝಶಿ**—ಸೂತ್ರದಿಂದ ಷಕಾರಕ್ಕೆ ಡತ್ವ. **ಛಂದಸ್ಯಪಿ ದೃಶ್ಯತೇ**—(ಪಾ. ಸೂ. ೬-೪-೭೩) ಎಂಬುದರಿಂದ ದೃಶಿಗ್ರಹಣ ಸಾಮರ್ಥ್ಯದಿಂದ ಲೋಟಿನಲ್ಲಿಯೂ ಅಂಗಕ್ಕೆ ಅಡಾಗಮ. ಅವಿಡ್ಢಿ ಎಂದು ರೂಪವಾಗುತ್ತದೆ. ಅವರಕ್ಷಣೇ. ಧಾತು. ಹಿಂದಿನಂತೆ ಲೋಟ್. **ಸಿಬ್ಬಹುಲಂ ಲೇಟಿ**—(ಪಾ ಸೂ. ೩-೧-೩೪)—ಸೂತ್ರದಲ್ಲಿ ಬಹುಲಗ್ರಹಣ ಸಾಮರ್ಥ್ಯದಿಂದ ಇಲ್ಲಿ ವಿಕರಣಸ್ಥಾನದಲ್ಲಿ ಸಿಪ್. ತಿಙ್‌ಶಿತ್‌ವ್ಯತಿರಿಕ್ತವಾದುದರಿಂದ ಅದಕ್ಕೆ ಆರ್ಧಧಾತುಕಸಂಜ್ಞೆ ಬರುತ್ತದೆ. **ಆರ್ಧಧಾತುಕಸ್ಯೇಡ್ವಲಾದೇಃ**—ಸೂತ್ರದಿಂದ ಅದಕ್ಕೆ ಇಡಾಗಮ. ಇಣಿನ ಪರದಲ್ಲಿ ಸಕಾರ ಬಂದುದರಿಂದ **ಆದೇಶಪ್ರತ್ಯಯಯೋಃ**—ಸೂತ್ರದಿಂದ ಅದಕ್ಕೆ ಷತ್ವ. ಆಗ ಝಲಿನ ಪರದಲ್ಲಿ ಹಿ ಬಂದುದರಿಂದ ಹಿಂದಿನಂತೆ ಧತ್ವ. ಷ್ಟುತ್ವ. ಜಶ್ತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಋಭುಮಾನ್**—ಋಭು. ಅಸ್ಯ ಅಸ್ತಿ ಇತಿ ಋಭುಮಾನ್ **ತದಸ್ಯಾಸ್ತಿ**—ಸೂತ್ರದಿಂದ ಮತುಪ್ ಪ್ರತ್ಯಯ. **ಹ್ರಸ್ವನುಡ್ಭ್ಯಾಂ ಮತುಪ್**—(ಪಾ. ಸೂ. ೬-೧-೧೭೬) ಎಂಬುದರಿಂದ ಮತುಪಿಗೆ ಉದಾತ್ತಸ್ವರ ಬರುತ್ತದೆ. ಪ್ರಥಮಾಏಕವಚನಾಂತರೂಪ.

ದರ್ಷಿ—ದೃಙ್ ಆದರೆ. ಧಾತು. **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ಪರಸ್ಮೈಪದಿಯಾಗುತ್ತದೆ. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಬಹುಲಂ ಛಂದಸಿ**—ಎಂಬುದರಿಂದ ವಿಕರಣಕ್ಕೆ ಲುಕ್. ವ್ಯತ್ಯಯದಿಂದ ಸಿಪ್‌ಗೆ ಹಿ ಆದೇಶ ಬರುವುದಿಲ್ಲ. ಸಿಪ್ ನಿಮಿತ್ತವಾಗಿ **ಸಾರ್ವಧಾತುಕಾರ್ಧಧಾತುಕಯೋಃ**—(ಪಾ. ಸೂ. ೭-೩-೮೪) ಎಂಬುದರಿಂದ ಧಾತುವಿನ ಇಕಿಗೆ ಗುಣ. **ಉರಣ್ರಪರಃ**—ಪರಿಭಾಷೆಯಿಂದ ರಪರವಾಗಿ ಬರುತ್ತದೆ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ರಾಧಃ—ರಾಧ ಸಂಸಿದ್ಧೌ. ಧಾತು. **ಸರ್ವಧಾತುಭ್ಯ ಅಸುನ್**—ಎಂಬುದರಿಂದ ಅಸುನ್ ಪ್ರತ್ಯಯ. ರಾಧಸ್ ಶಬ್ದವಾಗುತ್ತದೆ. ನಿತ್‌ಪ್ರತ್ಯಯಾಂತವಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ. ‖ ೯ ‖

ನೂರ ಹತ್ತನೇ ಸೂಕ್ತವು ಮುಗಿದುದು.



# ನೂರ ಹನ್ನೊಂದನೆಯ ಸೂಕ್ತವು

---

**ತಕ್ಷನ್ನಿತಿ ಪಂಚರ್ಚಂ ಷಷ್ಠಂ ಸೂಕ್ತಂ ಕುತ್ಸಸ್ಯಾರ್ಷಮಾರ್ಭವಂ । ಪಂಚಮೀ ತ್ರಿಷ್ಟುಪ್ । ಶಿಷ್ಟಾಶ್ಚತಸ್ರೋ ಜಗತ್ಯಃ । ತಥಾ ಚಾನುಕ್ರಾಂತಂ । ತಕ್ಷನ್ ಪಂಚಾಂತ್ಯಾ ತ್ರಿಷ್ಟುಬಿತಿ ಅಗ್ನಿಷ್ಟೋಮೇ ವೈಶ್ವದೇವಶಸ್ತ್ರ ಇದಂ ಸೂಕ್ತಮಾರ್ಭವಂ ನಿವಿದ್ಧಾನಂ । ಸೂತ್ರಿತಂ ಚ । ತಕ್ಷನ್ರಥಮಯಂ ವೇನಶ್ಚೋದಯತ್ಪೃಶ್ನಿಗರ್ಭಾ । ಆ ೫-೧೮ । ಇತಿ ॥**

ಅನುವಾದವು— **ತಕ್ಷನ್** ಎಂಬ ಸೂಕ್ತವು ಹದಿನಾರನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕುತ್ಸನು ಋಷಿಯು. ಋಭುಗಳು ದೇವತೆಯು. ಈ ಸೂಕ್ತದ ಐದನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು. ಉಳಿದ ನಾಲ್ಕು ಋಕ್ಕುಗಳು ಜಗತೀ ಛಂದಸ್ಕಿನವು. ಅನುಕ್ರಮಣಿಕೆಯಲ್ಲಿ **ತಕ್ಷನ್ ಪಂಚಾಂತ್ಯಾ ತ್ರಿಷ್ಟುಪ್** ಎಂದು ಮೊದಲಾಗಿ ಹೇಳಿರುವುದು. ಅಗ್ನಿಷ್ಟೋಮಯಾಗದಲ್ಲಿ ವೈಶ್ವದೇವ ಶಸ್ತ್ರಮಂತ್ರಪಠನಕಾಲದಲ್ಲಿ ಋಭುದೇವತಾ ಸಂಬಂಧವಾದ ನಿವಿದ್ಧಾನ ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದು. ಈ ವಿಷಯವು ಆಶ್ವಲಾಯನ ಶ್ರೌತಸೂತ್ರದ **ತಕ್ಷನ್ರಥಮಯಂ ವೇನಶ್ಚೋದಯತ್ಪೃಶ್ನಿಗರ್ಭಾ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೫-೧೮)

———:೦:———

॥ ಓಂ ॥

## ಸೂಕ್ತ—೧೧೧

ಮಂಡಲ—೧ ॥ ಅನುವಾಕ—೧೬ ॥ ಸೂಕ್ತ— ೧೧೧॥

ಅಷ್ಟಕ—೧ ॥ ಅಧ್ಯಾಯ—೭ ॥ ವರ್ಗ—೩೨, ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

॥ ಋಷಿಃ—ಕುತ್ಸ ಆಂಗಿರಸಃ ॥

॥ ದೇವತಾ— ಋಭವಃ ॥

॥ ಛಂದಃ—೧-೪, ಜಗತೀ ೫. ತ್ರಿಷ್ಟುಪ್ ॥

ಸಂಹಿತಾಪಾಠಃ

ತಕ್ಷನ್ರಥಂ ಸುವೃತಂ ವಿದ್ಮನಾಪಸಸ್ತಕ್ಷನ್ಹರೀ ಇಂದ್ರವಾಹಾ
ವೃಷಣ್ವಸೂ ।
ತಕ್ಷನ್ಪಿತೃಭ್ಯಾಮೃಭವೋ ಯುವದ್ವಯಸ್ತಕ್ಷನ್ವತ್ಸಾಯ ಮಾತ-
ರಂ ಸಚಾಭುವಂ ॥ ೧ ॥

ಪದಪಾಠಃ

ತಕ್ಷನ್ । ರಥಂ । ಸುಽವೃತಂ । ವಿದ್ಮನಾಽಅಪಸಃ । ತಕ್ಷನ್ । ಹರೀ ಇತಿ ।
ಇಂದ್ರಽವಾಹಾ । ವೃಷಣ್ವಸೂ ಇತಿ ವೃಷಣ್ಽವಸೂ ।
ತಕ್ಷನ್ । ಪಿತೃಽಭ್ಯಾಂ । ಋಭವಃ । ಯುವತ್ । ವಯಃ । ತಕ್ಷನ್ । ವತ್ಸಾಯ ।
ಮಾತರಂ । ಸಚಾಽಭುವಂ ॥ ೧ ॥

ಸಾಯಣಭಾಷ್ಯಂ

ವಿದ್ಮನಾಪಸಃ ಉತ್ಕೃಷ್ಟೇನ ಜ್ಞಾನೇನ ನಿಷ್ಪಾದ್ಯಕರ್ಮಾಣೋ ಲಾಭವತ್ಕರ್ಮಾಣೋ ವಾ ಋಭವೋ ರಥಮಶ್ವಿನೋರಾರೋಹಣಾರ್ಥಂ ಸುವೃತಂ ಶೋಭನವರ್ತನಂ ಸುಚಕ್ರಂ ವಾ ತಕ್ಷನ್ । ಅಕುರ್ವನ್ । ತಥೇಂದ್ರವಾಹಾ ಇಂದ್ರಸ್ಯ ವಾಹನಭೂತೌ ಹರೀ ಹರಣಶೀಲಾವೇತತ್ಸಂಜ್ಞಕಾವಶ್ವೌ ತಕ್ಷನ್ । ಕೃತವಂತಃ । ಕೀದೃಶೌ । ವೃಷಣ್ವಸೂ । ಸೇಚನಸಮರ್ಥೇನ ದೃಢತರೇಣ ಧನೇನ ಬಲೇನ ವಾ ಯುಕ್ತೌ । ಅಪಿ ಚ ಪಿತೃಭ್ಯಾಂ ಸ್ವಕೀಯಾಭ್ಯಾಂ ಮಾತಾಪಿತೃಭ್ಯಾಂ ವೃದ್ಧಾಭ್ಯಾಂ ಯುವದ್ಯೌವನೋಪೇತಂ ವಯ ಆಯುರ್ಋಭವಸ್ತಕ್ಷನ್ । ಕೃತವಂತಃ । ತಥಾ ವತ್ಸಾಯ ಮಾತರಂ ಗಾಂ ಸಚಾಭುವಂ ಸಹಭುವಂ ಸಹ ವರ್ತಮಾನಾಂ ತಕ್ಷನ್ । ಅಕುರ್ವನ್ । ತಕ್ಷನ್ ॥ ತಕ್ಷೂ ತ್ವಕ್ಷೂ ತನೂಕರಣೇ । ಲಙ್' ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಸುವೃತಂ । ಶೋಭನಂ ವರ್ತತ ಇತಿ ಸುವೃತ್ । ವೃತು ವರ್ತನೇ । ಕ್ವಿಪ್ಚೇತಿ ಕ್ವಿಪ್ । ವಿದ್ಮನಾಪಸಃ । ವಿದ ಜ್ಞಾನೇ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ದೃಶಿಗ್ರಹಣಾದ್ಭಾವೇ ಮನಿನ್ । ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದ್ಗುಣಾಭಾವಃ । ಬಹುಲವಚನಾದ ಲುಕ್ । ಯದ್ವಾ । ವಿದ್ಲೃ ಲಾಭೇ । ಔಣಾದಿಕೋ ಭಾವೇ ಮಕ್ । ತತಃ ಪಾಮಾದಿಲಕ್ಷಣೋ ನಪ್ರತ್ಯಯಃ । ವಿದ್ಮನಂ ಲಾಭವದಪಃ ಕರ್ಮ ಯೇಷಾಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಛಾಂದಸಃ ಪೂರ್ವಸವರ್ಣದೀರ್ಘಃ । ಇಂದ್ರವಾಹಾ । ಇಂದ್ರಂ ವಹತ ಇತೀಂದ್ರವಾಹೌ । ವಹಶ್ಚೇತಿ ಣ್ವಿಪ್ರತ್ಯಯಃ । ಅತ ಉಪಧಾಯಾ ಇತಿ ವೃದ್ಧಿಃ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ವೃಷಣ್ವಸೂ । ವೃಷ ಸೇಚನೇ । ಕನಿನ್ಯುವೃಷಿತಕ್ಷೀತ್ಯಾದಿನಾ ಕನಿನ್ । ನಿತ್ತ್ವಾದಾದ್ಯುದಾತ್ತತ್ವಂ । ವೃಷಣ್ವಸ್ವಶ್ವಯೋರುಪಸಂಖ್ಯಾನಂ । ಪಾ. ೧-೪-೧೮-೪ । ಇತಿ ವಸುಶಬ್ದ ಉತ್ತರಪದೇ ವೃಷಣ್‌ಭಾವಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಯುವತ್ । ಅತ್ರ ಯುವಞ್ಶಬ್ದಃ ಸಾಮರ್ಥ್ಯಾತ್ಪ್ರವೃತ್ತಿನಿಮಿತ್ತಂ ಯುವತ್ವಮಾತ್ರಮಾಚಷ್ಟೇ । ತದಸ್ಮಿನ್ನಸ್ತೀತಿ ಯುವತ್ । ಛಾಂದಸೋ ವರ್ಣಲೋಪಃ ॥

ಪ್ರತಿಪದಾರ್ಥ

**ವಿದ್ಮನಾಪಸಃ**—ಉತ್ಕೃಷ್ಟವಾದ ನೈಪುಣ್ಯದಿಂದ ಕೂಡಿದ ಕರ್ಮವುಳ್ಳ ಅಥವಾ ಲಾಭಯುಕ್ತವಾದ ಕರ್ಮವುಳ್ಳ ಋಭುಗಳು । **ರಥಂ**—(ಅಶ್ವಿನೀದೇವತೆಗಳ ವಾಹನಕ್ಕಾಗಿ) ರಥವನ್ನು । **ಸುವೃತಂ**—ಉತ್ತಮವಾದ ರಚನೆಯುಳ್ಳದ್ದನ್ನಾಗಿ ಅಥವಾ ಸುಲಭವಾದ ಸಂಚಾರಕ್ಕೆ ಅನುಕೂಲವಾದ ಚಕ್ರವುಳ್ಳದ್ದನ್ನಾಗಿ । **ತಕ್ಷನ್**—ನಿರ್ಮಿಸಿದರು । **ವೃಷಣ್ವಸೂ**—ದೃಢವಾದ ಬಲದಿಂದ ಅಥವಾ ಧನದಿಂದ ಕೂಡಿದವೂ । **ಇಂದ್ರವಾಹಾ**—ಇಂದ್ರನ ವಾಹನಗಳೂ । **ಹರೀ**—ಹರಿಯೆಂಬ ಹೆಸರುಳ್ಳವೂ ಆದ ಕುದುರೆಗಳನ್ನು । **ತಕ್ಷನ್**—ಸೃಷ್ಟಿಸಿದರು । **ಪಿತೃಭ್ಯಾಂ**—(ವೃದ್ಧರಾದ ತಮ್ಮ) ಮಾತಾಪಿತೃಗಳಿಗೆ । **ಯುವತ್**—ಯೌವನದಿಂದ ತುಂಬಿದ । **ವಯಃ**—ವಯಸ್ಸನ್ನು । **ಋಭವಃ**—ಋಭುಗಳು । **ತಕ್ಷನ್** — ಸಂಪಾದಿಸಿಕೊಟ್ಟರು । **ವತ್ಸಾಯ** — (ತಾಯಿಯನ್ನು ಕಳೆದುಕೊಂಡ) ಕರುವಿಗೆ । **ಮಾತರಂ**—ತಾಯಿಯಾದ ಗೋವನ್ನು । **ಸಚಾಭುವಂ**—(ಪುನಃ) ಜೊತೆಗೂಡಿಕೊಂಡು ಇರುವಂತೆ । **ತಕ್ಷನ್**—ಮಾಡಿದರು.

ಭಾವಾರ್ಥ

ಉತ್ಕೃಷ್ಟವಾದ ನೈಪುಣ್ಯದಿಂದ ಕೂಡಿದ ಕರ್ಮವುಳ್ಳ ಋಭುಗಳು ಅಶ್ವಿನೀ ದೇವತೆಗಳ ವಾಹನಕ್ಕಾಗಿ ಉತ್ತಮವಾದ ರಚನೆಯುಳ್ಳ ರಥವನ್ನು ನಿರ್ಮಿಸಿದರು. ದೇಹದಾರ್ಢ್ಯದಿಂದ ಕೂಡಿದವೂ ಇಂದ್ರನವಾಹನಗಳೂ ಆದ

ಹರಿಯೆಂಬ ಕುದುರೆಗಳನ್ನು ಸೃಷ್ಟಿಸಿದರು. ವೃದ್ಧರಾದ ಮಾತಾಪಿತೃಗಳಿಗೆ ಯೌವನವಯಸ್ಸನ್ನು ಸಂಪಾದಿಸಿ ಕೊಟ್ಟರು. ತಾಯಿಯನ್ನು ಕಳೆದುಕೊಂಡ ಕರುವಿಗೆ ಪುನಃ ತಾಯಿಯಾದ ಗೋವನ್ನು ಒದಗಿಸಿ ಅದರ ಜೊತೆಯಲ್ಲಿಯೇ ಇರುವಂತೆ ಮಾಡಿದರು.

## English Translation

The Ribhus, possessed of skill in their work, constructed (for the Aswins) a well-built car ; they framed the vigorous horses bearing Indra ; they gave youthful existence to their parents ; they gave to the calf its accompanying mother.

॥ ವಿಶೇಷವಿಷಯಗಳು ॥

ಇಲ್ಲಿ ಋಭುಗಳ ಕಲಾಕೌಶಲ್ಯವನ್ನೂ, ಅವರ ಪಿತೃಭಕ್ತಿಯನ್ನೂ, ವಿವೇಕವನ್ನೂ ವರ್ಣಿಸಿದೆ. ಈ ವಿಧವಾದ ಗುಣಗಳಿಂದ ಋಭುಗಳು ಅತ್ಯಂತ ಪ್ರಸಿದ್ಧರಾದುದರಿಂದ ವಿಶ್ವಾಮಿತ್ರ ವಾಮದೇವ ಇತ್ಯಾದಿ ಋಷಿಗಳಿಂದ ದೃಷ್ಟವಾದ ಸೂಕ್ತಗಳಲ್ಲೆಲ್ಲಾ ಈ ವಿಧವಾದ ವರ್ಣನೆಯು ಇರುವುದು.

**ಯೇ ಅಶ್ವಿನಾ ಯೇ ಪಿತರಾ ಯ ಊತೀ ಧೇನುಂ ತತಕ್ಷುರೃಭವೋ ಯೇ ಅಶ್ವಾ ।**
**ಯೇ ಅಂಸತ್ರಾ ಯ ಋಧಗ್ರೋದಸೀ ಯೇ ವಿಭ್ವೋ ನರಃ ಸ್ವಪತ್ಯಾನಿ ಚಕ್ರುಃ ।**
(ಋ. ಸಂ. ೪-೩೪-೯)

ಇತ್ಯಾದಿ ಕಡೆಗಳಲ್ಲೆಲ್ಲಾ ವರ್ಣಿತವಾಗಿರುವ ಗುಣಗಳನ್ನು ಇಲ್ಲಿಯೂ ವಿವರಿಸಿದೆ.

**ವಿದ್ಮನಾಪಸಃ—ಉತ್ಕೃಷ್ಟೇನ ಜ್ಞಾನೇನ ನಿಷ್ಪಾದ್ಯಮಾನ ಕರ್ಮಾಣೋ ಲಾಭವತ್ಕರ್ಮಾಣಃ ವಾ ಋಭವಃ ।** ಉತ್ಕೃಷ್ಟವಾದ ಜ್ಞಾನದಿಂದ ಕೂಡಿ ನೆರವೇರಿಸತಕ್ಕ ಕರ್ಮಗಳುಳ್ಳ ಅಥವಾ ಲಾಭಯುಕ್ತವಾದ ಕರ್ಮಗಳುಳ್ಳ ಋಭುಗಳು ಎಂದರ್ಥ.

**ತಕ್ಷನ್—ತಕ್ಷತಿಃ ಕರೋತಿಕರ್ಮಾ ।** (ನಿ. ೪-೧೯) **ಕೃತವಂತೋ ರಥಂ** ಅಶ್ವಿನೀದೇವತೆಗಳಿಗೆ ರಥವನ್ನು ನಿರ್ಮಿಸಿದರು.

**ತಕ್ಷನ್ನಾಸತ್ಯಾಭ್ಯಾಂ ಪರಿಜ್ಮಾನಂ ಸುಖಂ ರಥಂ ।**
(ಋ. ಸಂ. ೧-೨೦-೩)

ಎಂಬ ಋಕ್ಕಿನಲ್ಲಿ ಹೇಳಿರುವಂತೆ ಇಲ್ಲಿಯೂ ಸಹ ಋಭುಗಳು ಅಶ್ವಿನೀದೇವತೆಗಳಿಗೆ ರಥವನ್ನು ನಿರ್ಮಿಸಿದ ವಿಷಯವನ್ನು ಹೇಳಿ ಅನಂತರ ಆ ರಥದ ಸ್ವರೂಪವನ್ನು ವಿವರಿಸಿದೆ.

**ಸುವೃತಂ—ಶೋಭನವರ್ತನಂ ಸುಚಕ್ರಂ ವಾ ।** ಉತ್ತಮವಾದ ರಚನೆಯುಳ್ಳನ್ನು ಅಥವಾ ಸುಗಮವಾದ ಸಂಚಾರಕ್ಕೆ ಅನುಕೂಲವಾದದ್ದು ಎಂದರ್ಥ.

**ಬೃಹಸ್ಪತೇರಥಾಶ್ವಿಭ್ಯಾಂ ರಥಂ ದಿವ್ಯಂ ತ್ರಿವಂಧುರಂ ।**
**ಇಂದ್ರಾಯ ಚ ಹರೀ ದೇವಪ್ರಹಿತೇನಾಗ್ನಿನಾಪಿ ಯತ್ ॥**
(ಬೃ. ದೇ. ೩-೮೬)

ಎಂದು ಋಭುಗಳ ಅಸಾಧಾರಣವಾದ ಕರ್ಮಗಳು ಅನೇಕಕಡೆ ಹೇಳಿರುವಂತೆಯೇ ಇಲ್ಲಿಯೂ ಸಹ ಪುನಃ ಪಠಿತವಾಗಿವೆ. ಆದರೆ **ಕುತ್ಸನೂ** ಮತ್ತು ಋಭುಗಳೂ ಒಂದೇ ವಂಶದವರಾದ್ದರಿಂದ ಇವನ ವರ್ಣನೆಯಲ್ಲಿ ವಾಮದೇವಾದಿಗಳ ಸೂಕ್ತಗಳಲ್ಲಿರುವ ವರ್ಣನೆಗಿಂತ ಒಂದು ಅತಿಶಯವಾದ ಅಭಿಮಾನವು ಕಂಡುಬರುವುದು.

ವ್ಯಾಕರಣಪ್ರಕ್ರಿಯಾ ।

**ತಕ್ಷನ್** ತಕ್ಷೂ ತ್ವಕ್ಷೂ ತನೂಕರಣೇ. ಧಾತು. ಲಙ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. **ಝೋಽಂತಃ**—ಎಂಬುದರಿಂದ ಅಂತಾದೇಶ. **ಇತಶ್ಚ**—ಸೂತ್ರದಿಂದ ಅಂತ್ಯ ಇಕಾರಲೋಪ. ಶಪ್ ವಿಕರಣ. **ಅತೋ ಗುಣೇ**—ಸೂತ್ರದಿಂದ ಪರರೂಪ. **ಬಹುಲಂ ಛಂದಸ್ಯಮಾಙ್ಯೋಗೇಽಪಿ**—(ಪಾ. ಸೂ. (ಪಾ. ಸೂ. ೬-೪-೭೫) ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ಸುವೃತಮ್**—ಶೋಭನಂ ವರ್ತತೇ ಇತಿ ಸುವೃತ್. ವೃತು ವರ್ತನೇ. ಧಾತು. ಇದಕ್ಕೆ **ಕ್ವಿಪ್ ಚ**—(ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಸುವೃತ್ ಶಬ್ದವಾಗುತ್ತದೆ. **ಗತಿಕಾರಕೋಪಪದಾತ್-ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ವಿದ್ಮನಾಪಸಃ**—ವಿದ ಜ್ಞಾನೇ. ಧಾತು **ಅನ್ಯೇಭ್ಯೋಽಪಿ ದೃಶ್ಯಂತೇ**—(ಪಾ ಸೂ. ೩-೨-೭೫) ಎಂಬಲ್ಲಿ ದೃಶಿಗ್ರಹಣ ಸಾಮರ್ಥ್ಯದಿಂದ ಭಾವಾರ್ಥದಲ್ಲಿ ಮನಿನ್ ಪ್ರತ್ಯಯ **ಸಂಜ್ಞಾಪೂರ್ವಕೋ ವಿಧಿರನಿತ್ಯಃ**—ಎಂಬುದರಿಂದ ಮನಿನ್ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ವಿದ್ಮನಾ ಅಪಃ (ಕರ್ಮ) ಯೇಷಾಂ ತೇ ವಿದ್ಮನಾಪಸಃ. ಬಹುಲವಚನದಿಂದ (ತತ್ಪುರುಷೇ ಕೃತಿ ಬಹುಲಮ್) ಸಮಾಸವಾದಾಗ ವಿಭಕ್ತಿಗೆ ಲುಕ್ ಬರುವುದಿಲ್ಲ. ಅಥವಾ ವಿದ್ಲೃ ಲಾಭೇ. ಧಾತು. ಇದಕ್ಕೆ ಔಣಾದಿಕವಾದ ಮಕ್ ಪ್ರತ್ಯಯವು ಭಾವಾರ್ಥದಲ್ಲಿ ಬರುತ್ತದೆ. ಕಿತ್ತಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ. ಆ ಮೇಲೆ ಪಾಮಾದಿಯಲ್ಲಿ ಸೇರಿರುವುದರಿಂದ ನಪ್ರತ್ಯಯ. ವಿದ್ಮನಂ ಎಂದರೆ ಲಾಭವುಳ್ಳದ್ದು ಎಂದರ್ಥ. ವಿದ್ಮನಂ ಲಾಭವತ್ ಅಪಃ ಕರ್ಮ ಯೇಷಾಮ್ । **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—(ಪಾ. ಸೂ ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. (ಛಾಂದಸವಾಗಿ ಪೂರ್ವಸವರ್ಣದೀರ್ಘ ಬರುತ್ತದೆ.)

**ಇಂದ್ರವಾಹಾ** ಇಂದ್ರಂ ವಹತಃ ಇತಿ ಇಂದ್ರವಾಹೌ. ವಹ ಪ್ರಾಪಣೇ. ಧಾತು. **ವಹಶ್ಚ**—(ಪಾ. ಸೂ. ೩-೨-೬೪) ಎಂಬುದರಿಂದ ಛಂದಸ್ಸಿನಲ್ಲಿ ಣ್ವಿಪ್ರತ್ಯಯ. **ಅತ ಉಪಧಾಯಾಃ**—(ಪಾ. ಸೂ. ೧-೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಣ್ವಿಯಲ್ಲಿ ಸರ್ವವೂ ಲೋಪವಾಗುತ್ತದೆ. ಇಂದ್ರವಾಹ್ ಶಬ್ದ ವಾಗುತ್ತದೆ. ದ್ವಿತೀಯಾದ್ವಿವಚನ ಔ ವಿಭಕ್ತಿಪರವಾದಾಗ—**ಸುಪಾಂ ಸುಲುಕ್**—(ಪಾ. ಸೂ. ೭-೧-೩೯)ಎಂಬುದರಿಂದ ಅದಕ್ಕೆ ಆಕಾರಾದೇಶ. **ಗತಿಕಾರಕೋಪಪದಾತ್ಕೃತ್**—ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ವೃಷಣ್ವಸೂ**—ವೃಷ ಸೇಚನೇ. ಧಾತು. **ಕನಿನ್ಯುವೃಷಿತಕ್ಷಿ**—(ಉ. ಸೂ. ೧-೧೫೪) ಎಂಬುದರಿಂದ ಇದಕ್ಕೆ ಕನಿನ್ ಪ್ರತ್ಯಯ. ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತಸ್ವರ

ಬರುತ್ತದೆ. **ವೃಷಣ್ವಸ್ವಶ್ವಯೋರುಪಸಂಖ್ಯಾನಮ್**—(ಪಾ ಸೂ. ೧-೪-೧೮-೪) ಎಂಬ ವಚನದಿಂದ ವಸು ಶಬ್ದವು ಉತ್ತರಪದವಾಗಿರುವಾಗ ವೃಷನ್‌ಭಾವ ಬರುತ್ತದೆ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ದ್ವಿವಚನಾಂತರೂಪ.

**ಯುವತ್**—ಯು ಮಿಶ್ರಣಾಮಿಶ್ರಣಯೋಃ ಧಾತು. **ಕನಿನ್‌ಯುವೃಷಿ**—(ಉ. ಸೂ. ೧-೧೫೬) ಎಂಬುದರಿಂದ ಕನಿನ್ ಪ್ರತ್ಯಯ. ಇಲ್ಲಿ ಯುವನ್ ಶಬ್ದವು ಸಾಮರ್ಥ್ಯದಿಂದ ಶಬ್ದಕ್ಕೆ ಪ್ರವೃತ್ತಿನಿಮಿತ್ತವಾದ ಯುವತ್ವ (ಧರ್ಮ) ವನ್ನು ಬೋಧಿಸುತ್ತದೆ. ಇದಕ್ಕೆ ಭಾವಪ್ರಧಾನನಿರ್ದೇಶವೆಂದು ಹೆಸರು. ಇದರ ಮೇಲೆ ತದಸ್ಯಾಸ್ತಿ ಅಸ್ಮಿನ್ ಎಂಬರ್ಥದಲ್ಲಿ ಮತುಪ್ ಪ್ರತ್ಯಯ. ಛಾಂದಸವಾಗಿ ಮಧ್ಯೆ ವರ್ಣಲೋಪ ಬರುತ್ತದೆ. ಮತುಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. ದ್ವಿತೀಯಾ ಏಕವಚನದಲ್ಲಿ **ಸ್ವಮೋರ್ನಪುಂಸಕಾತ್**—ಎಂಬುದರಿಂದ ಅಮಿಗೆ ಲುಕ್. ‖ ೧ ‖



ಸಂಹಿತಾಪಾಠಃ

ಆ ನೋ ಯಜ್ಞಾಯ ತಕ್ಷತ ಋಭುಮದ್ವಯಃ ಕ್ರತ್ವೇ ದಕ್ಷಾ-
ಯ ಸುಪ್ರಜಾವತೀಮಿಷಂ ।
ಯಥಾ ಕ್ಷಯಾಮ ಸರ್ವವೀರಯಾ ವಿಶಾ ತನ್ನಃ ಶರ್ಧಾಯ
ಧಾಸಥಾ ಸ್ವಿಂದ್ರಿಯಂ ‖ ೨ ‖

ಪದಪಾಠಃ

ಆ । ನಃ । ಯಜ್ಞಾಯ । ತಕ್ಷತ । ಋಭುಽಮತ್ । ವಯಃ । ಕ್ರತ್ವೇ । ದಕ್ಷಾ-
ಯ । ಸುಽಪ್ರಜಾವತೀಂ । ಇಷಂ ।
ಯಥಾ । ಕ್ಷಯಾಮ । ಸರ್ವಽವೀರಯಾ । ವಿಶಾ । ತತ್ । ನಃ । ಶರ್ಧಾಯ ।
ಧಾಸಥ । ಸು । ಇಂದ್ರಿಯಂ ‖ ೨ ‖

॥ ಸಾಯಣಭಾಷ್ಯಂ ॥

ಹೇ ಋಭವೋ ನೋಽಸ್ಮಾಕಂ ಯಜ್ಞಾಯ ಯಜ್ಞಾರ್ಥಂ ಋಭುಮದುರುಭಾಸನಯುಕ್ತಂ ವಯೋ ಹವಿರ್ಲಕ್ಷಣಮನ್ನಮಾ ತಕ್ಷತ । ಆ ಸಮಂತಾದುತ್ಪಾದಯತ । ಏತದೇವ ವಿವ್ರಿಯತೇ । ಕ್ರತ್ವೇ ಕ್ರತವೇಽಸ್ಮದೀಯಾಯ ಕರ್ಮಣೇ ದಕ್ಷಾಯ ಬಲಾಯ ಚ । ತಾದರ್ಥ್ಯೇ ಚತುರ್ಥೀ । ಏತದುಭಯಾರ್ಥಂ ಸುಪ್ರಜಾವತೀಂ ಶೋಭನಾಭಿಃ ಪುತ್ರಪೌತ್ರಾದಿಲಕ್ಷಣಾಭಿಃ ಪ್ರಜಾಭಿರ್ಯುಕ್ತಾಮಿಷಮನ್ನಮಾ ತಕ್ಷತೇತಿ ಶೇಷಃ । ಅಪಿ ಚ ಸರ್ವವೀರಯಾ ಸರ್ವೈರ್ವೀರೈಃ ಪುತ್ರಾದಿಭಿರುಪೇತಯಾ ವಿಶಾ ಪ್ರಜಯಾ ಸಹ ಯಥಾ ಯೇನ ಪ್ರಕಾರೇಣ ಕ್ಷಯಾಮ ಸುಖೇನ ನಿವಸಾಮ ತತ್ತಾದೃಶಮಿಂದ್ರಿಯಂ । ಧನನಾಮೈತತ್ । ಧನಂ ನೋಽಸ್ಮಭ್ಯಂ ಶರ್ಧಾಯ ಬಲಾರ್ಥಂ ಸು ಧಾಸಥ । ಸುಷ್ಠು ಧತ್ತ । ಪ್ರಯಚ್ಛತೇತ್ಯರ್ಥಃ ॥ ಋಭುಮತ್ । ಉರು ಭಾತೀತಿ ನೈರುಕ್ತವ್ಯುತ್ಪತ್ತ್ಯಾ ಋಭುಶಬ್ದಃ ಪ್ರಕಾಶಮಾತ್ರವಾಚೀ । ಹ್ರಸ್ವನುಡ್ಭ್ಯಾಂ ಮತುಬಿತಿ ಮತುಪ ಉದಾತ್ತತ್ವಂ । ಕ್ರತ್ವೇ । ಜಸಾದಿಷು ಛಂದಸಿ ವಾ ವಚನಮಿತಿ ಘೇರ್ಙಿತೀತಿ ಗುಣಾಭಾವೇ ಯಣಾದೇಶಃ । ಕ್ಷಯಾಮ । ಕ್ಷಿ ನಿವಾಸಗತ್ಯೋಃ । ವ್ಯತ್ಯಯೇನ ಶಪ್ । ಧಾಸಥಾ । ಧಾಞೋ ಲೇಟ್ಯಡಾಗಮಃ । ಸಿಬ್ಬಹುಲಂ ಲೇಟೀತಿ ಸಿಪ್ । ಅನ್ಯೇಷಾಮಪಿ ದೃಶ್ಯತ ಇತಿ ಸಂಹಿತಾಯಾಂ ದೀರ್ಘತ್ವಂ ॥

ಪ್ರತಿಪದಾರ್ಥ

**ಋಭವಃ**—ಎಲೈ ಋಭುಗಳೇ । **ನಃ**—ನಮ್ಮ । **ಯಜ್ಞಾಯ**—ಯಜ್ಞಾರ್ಥವಾಗಿ । **ಋಭುಮತ್**—ಅತ್ಯಂತ ಪ್ರಕಾಶಮಾನವಾದ । **ವಯಃ**—ಹವಿಸ್ಸಿನ ರೂಪದ ಅನ್ನವನ್ನು । **ಆ ತಕ್ಷತ**—ಸಂಪೂರ್ಣವಾಗಿ ಸಿದ್ಧಪಡಿಸಿರಿ । **ಕ್ರತ್ವೇ**—(ನಮ್ಮ) ಕರ್ಮಾರ್ಥವಾಗಿಯೂ । **ದಕ್ಷಾಯ**—ಬಲಕ್ಕಾಗಿಯೂ । **ಸುಪ್ರಜಾವತೀಂ**—ಶ್ರೇಷ್ಠವಾದ ಪುತ್ರಪೌತ್ರಾದಿ ಸಂತಾನದಿಂದ ಕೂಡಿದ । **ಇಷಂ**—ಅನ್ನವನ್ನು (ಸಿದ್ಧಪಡಿಸಿರಿ) । (ಮತ್ತು) **ಸರ್ವವೀರಯಾ**—ಸಕಲವೀರ ಪುತ್ರರೊಡಗೂಡಿದ । **ವಿಶಾ**—ಸಂತಾನದೊಂದಿಗೆ । **ಯಥಾ**—ಯಾವ ರೀತಿಯಲ್ಲಿ (ಯಾವ ಧನದಿಂದ) । **ಕ್ಷಯಾಮ**—(ಸುಖವಾಗಿ) ವಾಸಮಾಡಬಲ್ಲೆವೋ । **ತತ್**—ಅಂತಹ । **ಇಂದ್ರಿಯಂ**—ಧನವನ್ನು । **ನಃ**—ನಮಗೆ । **ಶರ್ಧಾಯ**—ಶಕ್ತ್ಯರ್ಥವಾಗಿ । **ಸು ದಾಸಥ**—ಅತಿಶಯವಾಗಿ ಕೊಡಿರಿ.

ಭಾವಾರ್ಥ

ಎಲೈ ಋಭುಗಳೇ, ನಮ್ಮ ಯಜ್ಞಾರ್ಥವಾಗಿ ಅತ್ಯಂತ ಪ್ರಕಾಶಮಾನವಾದ ಹವಿಸ್ಸಿನರೂಪದ ಅನ್ನವನ್ನು ಸಿದ್ಧಮಾಡಿಕೊಡಿರಿ. ನಮ್ಮ ಕರ್ಮಾರ್ಥವಾಗಿಯೂ ಬಲಕ್ಕಾಗಿಯೂ ಶ್ರೇಷ್ಠವಾದ ಪುತ್ರಪೌತ್ರಾದಿ ಸಂತಾನದಿಂದ ಕೂಡಿದ ಅನ್ನವನ್ನು ಸಿದ್ಧಪಡಿಸಿಕೊಡಿರಿ. ಮತ್ತು ನಾವು ಸಕಲ ವೀರಪುತ್ರರೊಡಗೂಡಿದ ಸಂತಾನದೊಂದಿಗೆ ಯಾವ ಧನದಿಂದ ಸುಖವಾಗಿ ವಾಸಮಾಡಬಲ್ಲೆವೋ ಅಂತಹ ಧನವನ್ನು ನಮಗೆ ಶಕ್ತ್ಯರ್ಥವಾಗಿ ತುಂಬಿಸಿಕೊಡಿರಿ.

## English Translation

Prepare fully for our sacrifice resplendent sacrificial food, and, for our rite and for our strength, such nutriment as may be the cause of excellent

progeny, so that we may live (surrounded) by vigorous descendants ; such wealth do you confer upon us for our benefit.

### ವಿಶೇಷವಿಷಯಗಳು

**ಋಭುಮತ್ ವಯಃ—ಋಭವಃ । ಉರು ಭಾಂತೀತಿ ವಾ** (ನಿ. ೧೧-೧೫) ಎಂಬ ನಿರುಕ್ತವಾಕ್ಯದ ಆಧಾರದಮೇಲೆ, **ಉರು ಭಾಸಮಾನಂ ಹವಿರ್ಲಕ್ಷಣಮನ್ನಂ ।** ಅತ್ಯಂತ ಪ್ರಕಾಶಮಾನವಾದ ಹವಿಸ್ಸಿನರೂಪದ ಅನ್ನವೆಂದು ಸಾಯಣರೂ, **ಋಭವೋ ಯುಷ್ಮನ್ಯತ್ವೇನ ಸಂಬಂಧಿನೋ ಯಸ್ಯ ಸಂತಿ ತದೃಭುಮತ್ । ಯುಷ್ಮಾಕಮೇವ ಋಭೂಣಾಂ ಯೋಗ್ಯಮಿತ್ಯರ್ಥಃ ।** ಯಜ್ಞಾರ್ಹರಾಗಿಯೂ, ಈ ಹವಿಸ್ಸಿನ ರೂಪದ ಅನ್ನಕ್ಕೆ ಭಾಗಿಗಳಾಗಿಯೂ ಇರುವ ಋಭುಗಳನ್ನೇ ಉದ್ದೇಶಿಸಿದ ಅನ್ನವೆಂದು ಸ್ಕಂದಸ್ವಾಮಿಗಳೂ ವಿವರಿಸಿದ್ದಾರೆ.

**ಇಂದ್ರಿಯಂ—**ಇಂದ್ರಿಯ ಶಬ್ದಕ್ಕೆ ಇಲ್ಲಿ ಧನವೆಂದಾಗಲಿ ಅಥವಾ ವೀರ್ಯವೆಂದಾಗಲಿ ಅರ್ಥವಾಗಬಹುದು.

**ಶರ್ಧಾಯ—ಉತ್ಸಾಹಾಯ ಬಲಾಯ ವಾ ।** ನಮ್ಮ ಉತ್ಸಾಹಕ್ಕಾಗಲಿ ಅಥವಾ ಬಲಕ್ಕಾಗಲಿ ಎಂದರ್ಥ. **ಶರ್ಧ** ಶಬ್ದವು ಬಲ ನಾಮಗಳಲ್ಲಿ ಪಠಿತವಾಗಿದೆ. **ಶರ್ಧ** ಶಬ್ದದ ಪ್ರಯೋಗಗಳನ್ನೂ ಸನ್ನಿವೇಶಗಳಿಗೆ ಅನುಸಾರವಾಗಿ ಅರ್ಥಗಳನ್ನು ಋ. ಸಂ. ೧-೧೦೬-೧ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ.

### ವ್ಯಾಕರಣಪ್ರಕ್ರಿಯಾ

**ಯಜ್ಞಾಯ—**ಯಜ ದೇವಪೂಜಾಸಂಗತಿಕರಣದಾನೇಷು. ಧಾತು. **ಯಜಯಾಚಯತ—**(ಪಾ. ಸೂ. ೩-೩-೯೦) ಎಂಬುದರಿಂದ ನಙ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಚತುರ್ಥೀ ಏಕವಚನಾಂತರೂಪ.

**ತಕ್ಷತ—**ತಕ್ಷೂ ತನೂಕರಣೇ. ಧಾತು ಲೋಟ್ ಮಧ್ಯಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಋಭುಮತ್—**ಋಭುಶಬ್ದಕ್ಕೆ ಉರುಭಾತಿ ಇತಿ ಋಭು ಎಂದು ನಿರುಕ್ತದಲ್ಲಿ—(ನಿರು. ೧೧-೧೫) ವ್ಯುತ್ಪತ್ತಿಯನ್ನು ತೋರಿಸಿರುವುದರಿಂದ ಕೇವಲ ಪ್ರಕಾಶಮಾತ್ರವಾಚಿಯಾಗಿರುತ್ತದೆ. ಋಭು ಅಸ್ಯ ಅಸ್ತಿ ಇತಿ ಋಭುಮತ್. **ತದಸ್ಯಾಸ್ತ್ಯ—**ಸೂತ್ರದಿಂದ ಮತುಪ್ ಪ್ರತ್ಯಯ **ಹ್ರಸ್ವನುಡ್ಭ್ಯಾಂ ಮತುಪ್—**(ಪಾ. ಸೂ. ೬-೧-೧೭೬) ಎಂಬುದರಿಂದ ಮತುಪಿಗೆ ಉದಾತ್ತಸ್ವರ ಬರುತ್ತದೆ.

**ಕ್ರತ್ವೇ—**ಕ್ರತು ಶಬ್ದ. ಇದಕ್ಕೆ ಚತುರ್ಥೀವಿಭಕ್ತಿಪರವಾದಾಗ **ಜಸಾದಿಷು ಛಂದಸಿ ವಾ ವಚನಮ್**—ಎಂಬುದರಿಂದ **ಘೇರ್ಙಿತಿ—**(ಪಾ. ಸೂ. ೭-೩-೧೧೧) ಎಂಬುದರಿಂದ ಗುಣ ಬರುವುದಿಲ್ಲ. ಆಗ ಯಣಾದೇಶ

**ಯಥಾ—ನಿಪಾತಸ್ಯ ಚ—**(ಪಾ. ಸೂ. ೬-೩-೧೩೬) ಎಂಬುದರಿಂದ ಛಂದಸ್ಸಿನಲ್ಲಿ ದೀರ್ಘ ಬರುತ್ತದೆ.

**ಕ್ಷಯಾಮ—**ಕ್ಷಿ ನಿವಾಸಗತ್ಯೋಃ ಧಾತು. ಲೋಟ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. ಟಿದ್ವ್ಯವಹಿಸುವುದರಿಂದ **ನಿತ್ಯಂಙಿತಃ—**(ಪಾ. ಸೂ. ೩-೪-೯೯) ಎಂಬುದರಿಂದ ಸಕಾರಲೋಪ. **ವ್ಯತ್ಯಯೋ ಬಹುಲಮ್—**(ಪಾ. ಸೂ. ೩-೧-೮೫) ಎಂಬುದರಿಂದ ಶಪ್ ವಿಕರಣ ಬರುತ್ತದೆ. ಅದನ್ನು ನಿಮಿತ್ತೀ.

ಕರಿಸಿ ಧಾತುವಿನ ಇಕಿಗೆ ಗುಣ, ಅಯಾದೇಶ. **ಆಡುತ್ತಮಸ್ಯ ಪಿಚ್ಚ**—(ಪಾ. ಸೂ. ೩-೪-೯೨) ಎಂಬುದರಿಂದ ಆಡಾಗಮ. ಯಥಾ ಎಂಬುದು ಹಿಂದೆ ಇರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ಸರ್ವವೀರಯಾ**—ಸರ್ವೇ ವೀರಾಃ ಯಸ್ಯಾಃ ಸಾ. ಸರ್ವವೀರಾ. ತಯಾ. ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ವಿಶಾ—ಸಾವೇಕಾಚಸ್ತೃತೀಯಾದಿಃ**—(ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ.

**ಧಾಸಥ**—ಡುಧಾಞ್ ಧಾರಣಪೋಷಣಯೋಃ ಧಾತು. ಲೇಟ್ ಮಧ್ಯಮಪುರುಷ ಬಹುವಚನದಲ್ಲಿ ಥ ಪ್ರತ್ಯಯ. **ಲೇಟೋಽಡಾಟೌ**—(ಪಾ. ಸೂ. ೩-೪-೯೪)—ಎಂಬುದರಿಂದ ಅದಕ್ಕೆ ಅಡಾಗಮ. **ಸಿಬ್ಬಹುಲಂ ಲೇಟಿ**—(ಪಾ ಸೂ. ೩-೧-೩೪) ಎಂಬುದರಿಂದ ಸಿಪ್ ವಿಕರಣ. ಧಾಸಥ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. **ಅನ್ಯೇಷಾಮಪಿ ದೃಶ್ಯತೇ**—(ಪಾ. ಸೂ. ೬-೩-೧೩೭) ಎಂಬುದರಿಂದ ಸಂಹಿತಾದಲ್ಲಿ ಇದಕ್ಕೆ ದೀರ್ಘ ಬರುತ್ತದೆ.

**ಇಂದ್ರಿಯಮ್**—ಇಂದ್ರಸ್ಯ ಬಲಮ್ ಇಂದ್ರಿಯಮ್. **ಇಂದ್ರಿಯಮಿಂದ್ರಲಿಂಗಮಿಂದ್ರ**—(ಪಾ. ಸೂ. ೫-೨-೯೩) ಎಂಬುದರಿಂದ ಘಚ್‌ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಚಿತ್ತ್ವಾದುದರಿಂದ ಪ್ರತ್ಯಯಕ್ಕೆ ಇಯಾದೇಶ ಬಂದಾಗ **ಚಿತಃ**—(೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ॥ ೨ ॥

———:o:———

ಸಂಹಿತಾಪಾಠಃ

ಆ ತ॑ಕ್ಷತ ಸಾ॒ತಿಮ॒ಸ್ಮಭ್ಯ॑ಮೃಭವಃ ಸಾ॒ತಿಂ ರಥಾ॑ಯ ಸಾ॒ತಿಮ-
ರ್ವ॑ತೇ ನರಃ।
ಸಾ॒ತಿಂ ನೋ॒ ಜೈತ್ರೀ॑ಂ ಸಂ ಮ॑ಹೇತ ವಿ॒ಶ್ವಹಾ॑ ಜಾ॒ಮಿಮಜಾ॑ಮಿಂ
ಪೃತ॑ನಾಸು ಸ॒ಕ್ಷಣಿ॑ಂ ॥ ೩ ॥

। ಪದಪಾಠಃ ।

ಆ । ತ॒ಕ್ಷ॒ತ॒ । ಸಾ॒ತಿಂ । ಅ॒ಸ್ಮಭ್ಯ॑ಂ । ಋ॒ಭ॒ವ॒ಃ । ಸಾ॒ತಿಂ । ರಥಾ॑ಯ । ಸಾ॒ತಿಂ ।
ಅರ್ವ॑ತೇ । ನ॒ರ॒ಃ ।

ಸಾ॒ತಿಂ । ನಃ॒ । ಜೈತ್ರೀ॑ಂ । ಸಂ । ಮ॒ಹೇ॒ತ॒ । ವಿ॒ಶ್ವಹಾ॑ । ಜಾ॒ಮಿಂ । ಅಜಾ॑ಮಿಂ ।
ಪೃತ॑ನಾಸು । ಸ॒ಕ್ಷ॑ಣಿಂ ॥ ೩ ॥

ಸಾಯಣಭಾಷ್ಯಂ

ಹೇ ನರೋ ಯಜ್ಞಸ್ಯ ನೇತಾರ ಋಭವಃ ಅಸ್ಮಭ್ಯಮನುಷ್ಠಾತೃಭ್ಯಃ ಸಾತಿಂ ಸಂಭಜನೀಯಮನ್ನಂ ಧನಂ ವಾ ತಕ್ಷತ । ಆ ಸಮಂತಾತ್ಕುರುತ । ತಥಾಸ್ಮದೀಯಾಯ ರಥಾಯ ರಂಹಣಶೀಲಾಯ ಪುತ್ರಾದಯೇ ರಥಾಯೈವ ವಾ ಸಾತಿಂ ಸಂಭಜನೀಯಂ ಧನಮಾ ತಕ್ಷತ । ತಥಾರ್ವತೇಽಶ್ವಾಯ ಸಾತಿಂ ಸಂಭಜನೀಯಮನ್ನಂ ಧನಂ ವಾಶ್ವಯೋಗ್ಯಮಾ ತಕ್ಷತೇತ್ಯೇವ । ಕಿಂಚ ವಿಶ್ವಹಾ ಸರ್ವೇಷ್ವಹಸ್ಸು ನೋಽಸ್ಮಾಕಂ ಜೈತ್ರೀಂ ಜಯಶೀಲಾಮಪರಿಮಿತತ್ವೇನ ಸರ್ವಾಧಿಕಾಂ ಸಾತಿಂ ಸಂಭಜನೀಯಂ ಧನಂ ಸಂ ಮಹೇತ । ಸರ್ವೋ ಜನಃ ಸಮ್ಯಕ್ ಪೂಜಯತು। ವಯಂ ಚ ಪೃತನಾಸು ಸಂಗ್ರಾಮೇಷು ಜಾಮಿಂ ಸಹಜಾತಮಜಾಮಿಂ ಸಹಾನುತ್ಪನ್ನಂ ಶತ್ರುಂ ವಾ ಸಕ್ಷಣಿಮಸ್ಮಾನಭಿಭವಂತಂ ಯುಷ್ಮತ್ಪ್ರಸಾದಾದಭಿಭವೇಮೇತಿ ಶೇಷಃ ॥ ಸಾತಿಂ । ಊತಿಯೂತಿಜೂತಿಸಾತೀತ್ಯಾದಿನಾ ಕ್ತಿನ ಉದಾತ್ತತ್ವಂ । ಮಹೇತ । ಮಹ ಪೂಜಾಯಾಂ । ಸಕ್ಷಣಿಂ । ಷಹ ಅಭಿಭವೇ । ಔಣಾದಿಕಃ ಸನಿಪ್ರತ್ಯಯಃ । ಧತ್ವಕತ್ವಷತ್ವಾನಿ ॥

॥ ಪ್ರತಿಪದಾರ್ಥ ।

ನರಃ—(ಯಜ್ಞಕ್ಕೆ) ನೇತೃಗಳಾದ । ಋಭವಃ—ಎಲೈ ಋಭುಗಳೇ । ಅಸ್ಮಭ್ಯಂ—(ಯಜ್ಞಾನುಷ್ಠಾತೃಗಳಾದ) ನಮಗೆ । ಸಾತಿಂ—ಜೀವನಾಧಾರವಾದ ಅನ್ನವನ್ನು (ಅಥವಾ ಧನವನ್ನು) ಆ ತಕ್ಷತ—(ಎಲ್ಲರಿಗೂ ಸಾಕಾಗುವಷ್ಟು) ತುಂಬಿಸಿಕೊಡಿರಿ । ರಥಾಯ—(ನಮ್ಮ) ಪುತ್ರಾದಿಗಳಿಗೆ ಅಥವಾ ರಥಕ್ಕೆ । ಸಾತಿಂ—ಆಧಾರಭೂತವಾದ ಧನವನ್ನು (ಕೊಡಿರಿ) । ಅರ್ವತೇ—ನಮ್ಮ ಕುದುರೆಗೆ । ಸಾತಿಂ—ಪುಷ್ಕಲವಾದ ಅನ್ನವನ್ನು ಅಥವಾ ಧನವನ್ನು (ಕೊಡಿರಿ) । ವಿಶ್ವಹಾ—ಪ್ರತಿದಿನವೂ । ನಃ—ನಮ್ಮ । ಜೈತ್ರೀಂ—ಜಯಶೀಲವಾದ (ಅಥವಾ ಅತ್ಯಂತ ಪ್ರಭೂತವಾಗಿರುವುದರಿಂದ ಎಲ್ಲರ ಧನಕ್ಕಿಂತಲೂ ಹೆಚ್ಚಾಗಿರುವ) । ಸಾತಿಂ—ಧನವನ್ನು । ಸಂ ಮಹೇತ—(ಸಕಲರೂ) ಗೌರವಿಸುವಂತಾಗಲಿ । (ನಾವೂ ಕೂಡ) । ಪೃತನಾಸು—ಯುದ್ಧಗಳಲ್ಲಿ । ಜಾಮಿಂ—ನಮ್ಮ ಬಂಧುವಾಗಲೀ । ಅಜಾಮಿಂ—ಬಂಧುವಲ್ಲದಿರಲಿ । ಸಕ್ಷಣಿಂ—ನಮ್ಮ ಮೇಲೆ ಬೀಳುವ ಶತ್ರುವನ್ನು (ಜಯಿಸುವಂತೆ ಅನುಗ್ರಹಿಸಿರಿ).

ಭಾವಾರ್ಥ

ಯಜ್ಞಕ್ಕೆ ನೇತೃಗಳಾದ ಎಲೈ ಋಭುಗಳೇ, ಯಜ್ಞಾನುಷ್ಠಾತೃಗಳಾದ ನಮಗೆ ಜೀವನಾಧಾರವಾದ ಅನ್ನವನ್ನು ಪುಷ್ಕಲವಾಗಿ ಕೊಡಿರಿ. ನಮ್ಮ ಪುತ್ರಾದಿಗಳಿಗೂ, ನಮ್ಮ ರಥದ ನಿರ್ವಹಣಕ್ಕೂ, ಅಶ್ವಗಳ ಪೋಷಣೆಗೂ ಬೇಕಾಗುವ ಧನವನ್ನು ಪ್ರಭೂತವಾಗಿ ಕೊಡಿರಿ. ಮತ್ತು ಅತ್ಯಂತ ಪ್ರಭೂತವಾದುದೂ ಆದ ನಮ್ಮ ಧನವನ್ನು ಪ್ರತಿದಿನವೂ ಎಲ್ಲರೂ ಗೌರವಿಸುವಂತಾಗಲಿ. ನಾವೂ ಕೂಡ ಯುದ್ಧದಲ್ಲಿ ನಮ್ಮ ಬಂಧುವಾಗಲಿ ಅಥವಾ ನಮ್ಮ ಬಂಧುವಲ್ಲದಿರಲಿ, ನಮ್ಮಮೇಲೆ ಬೀಳುವ ಶತ್ರುವನ್ನು ಜಯಿಸುವಂತೆ ಅನುಗ್ರಹಿಸಿರಿ.

## English Translation

Ribhus, conductors (of sacrifice), bestow ample sustenance upon us, upon our chariots, upon our horses; let every one daily acknowledge our victorious wealth, and may we triumph in battle over our foes, weather strangers or kinsmen.

ವಿಶೇಷವಿಷಯಗಳು

**ತಕ್ಷತ—ತಕ್ಷತಿಃ ಕರೋತಿಕರ್ಮಾ ।** (ನಿ೪-೧೯) ಮಾಡಿಕೊಡಿರಿ.

**ರಥಾಯ—ರಂಹಣಶೀಲಾಯ ಪುತ್ರಾದಯೇ ಅಥವಾ ರಥಾಯೈವ ವಾ ರಥಃ ರಂಹತೇರ್ಗತಿ ಕರ್ಮಣಃ । ಸ್ಥಿರತೇರ್ವಾ ಸ್ಯಾದ್ವಿಪರೀತಸ್ಯ । ರಮಮಾಣೋಽಸ್ಮಿಂಸ್ತಿಷ್ಠತೀತಿ ವಾ । ರಪತೇರ್ವಾ ರಸತೇರ್ವಾ ।** (ನಿ. ೯-೧೧). ಗತಿ ಅಥವಾ ವೇಗವೆಂದು ಅರ್ಥವನ್ನು ಕೊಡುವ **ರಂಹ್** ಧಾತುವಿನಿಂದಾಗಲಿ, ಅಥವಾ ವರ್ಣ ವ್ಯತ್ಯಯವಾಗಿ ಸ್ಥಿರ ಎಂಬುವರಿಂದಾಗಲಿ, ಇದರಲ್ಲಿ ಕುಳಿತು ಹರ್ಷಪಡು ಎಂದರ್ಥವನ್ನು ಕೊಡುವ **ರಮ್** ಧಾತುವಿನಿಂದಾಗಲಿ, ಅಥವಾ ಶಬ್ದಮಾಡು ಎಂದರ್ಥವುಳ್ಳ **ರಪ್** ಅಥವಾ ರಸ್ ಧಾತುವಿನಿಂದಾಗಲಿ ನಿಷ್ಪನ್ನ ವಾಗಿದೆಯೆಂದು ನಿರುಕ್ತಕಾರರು,

**ವನಸ್ಪತೇ ವೀಡ್ವಂಗೋ ಹಿ ಭೂಯಾ ಅಸ್ಮತ್ಸಖಾ ಪ್ರತರಣಃ ಸುವೀರಃ ।**
**ಗೋಭಿಃ ಸಂನದ್ಧೋ ಅಸಿ ವೀಳಯಸ್ವಾಸ್ಥಾತಾ ತೇ ಜಯತು ಜೇತ್ವಾನಿ ।**
(ಋ. ಸಂ. ೬-೪೭-೨೬)

ಎಂಬ ಋಕ್ಕನ್ನು ಉದಹರಿಸಿ ರಥದ ಸ್ವರೂಪವನ್ನು ತೋರಿಸಿದ್ದಾರೆ. ಇಲ್ಲಿ ಸಾಯಣರು **ಗತ್ಯರ್ಥಕವಾದ ರಂಹ್** ಧಾತುವಿನಿಂದ ರಥಶಬ್ದವು ನಿಷ್ಪನ್ನವಾಗಿರುವುದರಿಂದ ಓಡಾಡತಕ್ಕ ಪುತ್ರಾದಿಗಳಿಗಾಗಲಿ ಅಥವಾ ಸಂಚರಿಸತಕ್ಕ ರಥಕ್ಕಾಗಲಿ ಎಂದು ಎರಡು ವಿಧವಾದ ಅರ್ಥವನ್ನು ಮಾಡಿರುತ್ತಾರೆ. ಸ್ಕಂದಸ್ವಾಮಿಗಳು **ಷಷ್ಠ್ಯರ್ಥೇ ಚತುರ್ಥ್ಯೇಷಾ, ಬಹುವಚನಸ್ಯ ಸ್ಥಾನೇ ಏಕವಚನಂ । ರಥಾನಾಂ ಸಾತಿಂ ।** ಷಷ್ಠೀ ಪ್ರಯೋಗಕ್ಕೆ ಬದಲಾಗಿ ಚತುರ್ಥಿ, ಬಹುವಚನಕ್ಕೆ ಬದಲಾಗಿ ಏಕವಚನವೂ ಉಪಯೋಗಿಸಲ್ಪಟ್ಟಿವೆ. **ರಥಾಯ** ಎನ್ನುವುದಕ್ಕೆ ಸರಿಯಾದ ಅರ್ಥ **ರಥಾನಾಂ** ರಥಗಳ, **ಸಾತಿಂ—ದಾನವನ್ನು** ಎಂದಾಗುತ್ತದೆ ಎಂದು ವಿವರಿಸಿದ್ದಾರೆ.

**ಅರ್ವತೇ—ಅಶ್ವಾಯ ।** ಕುದುರೆಗಳಿಗಾಗಿ ಎಂದರ್ಥ. **ಅರ್ವತ್, ಅರ್ವನ್** ಎಂದು ತಕಾರಾಂತ ಮತ್ತು ನಕಾರಾಂತ ಶಬ್ದಗಳು **ಅಶ್ವ** ಪರ್ಯಾಯವಾದ ಪದಗಳಾಗಿವೆ. ಆದರೆ ಕೆಲವೆಡೆಗಳಲ್ಲಿ ಅರ್ಥವೈವಿಧ್ಯವನ್ನು ಹೊಂದಿರುತ್ತವೆ. ನಿರುಕ್ತಕಾರರು **ಅತ್ಯಃ, ಹಯಃ, ಅರ್ವಾ ।** (ನಿ. ೨-೨೭) ಎಂದು ಅಶ್ವನಾಮಗಳಲ್ಲೇ ಈ ಶಬ್ದವನ್ನು ಸೇರಿಸಿರುತ್ತಾರೆ. ಆದರೆ, ಋಕ್ಸಂಹಿತೆಯಲ್ಲಿ **ಅರ್ವತ್** ಮತ್ತು **ಅರ್ವನ್** ಎಂಬ ಎರಡು ಶಬ್ದಗಳ ಪ್ರಯೋಗಗಳೂ ಗಮನಾರ್ಹಗಳು. ಈ ಎರಡು ಪದಗಳೂ ಶತ್ರುಪರ್ಯಾಯಗಳಾಗಿಯೂ ಪ್ರಯೋಗಿಸಲ್ಪಟ್ಟಿವೆ.

**ಕ್ರೀಳಂ ವಃ ಶರ್ಧೋ ಮಾರುತಮನರ್ವಾಣಂ ರಥೇ ಶುಭಂ ।**
(ಋ. ಸಂ. ೧.೩೭-೧)

ಯಸ್ಮೈ ತ್ವಮಾಯಜಸೇ ಸ ಸಾಧತ್ಯನರ್ವಾ ಕ್ಷೇತಿ ದಧತೇ ಸುವೀರ್ಯಂ ।
(ಋ. ಸಂ. ೧-೯೪-೨)

ಇತ್ಯಾದಿ ಋಕ್ಕುಗಳಲ್ಲಿ ಅರ್ವನ್ ಶಬ್ದಕ್ಕೆ ಶತ್ರುವೆಂದರ್ಥ. ಈ ಅರ್ಥವನ್ನು ಸಮರ್ಥಿಸುವುದಕ್ಕೆ ಸಾಯಣರು,

ಅನರ್ವಾ ಪ್ರೇಹೀತ್ಯಾಹ ಭ್ರಾತೃವ್ಯೋ ವಾ ಅರ್ವಾ ಭ್ರಾತೃವ್ಯಾಪನುತ್ತ್ಯೈ ।
(ಋ. ಸಂ. ೬-೩-೮-೨)

ಎಂಬ ಸಂಹಿತಾವಾಕ್ಯವನ್ನುದಹರಿಸಿ ಅರ್ವನ್ ಶಬ್ದಕ್ಕೆ ಭ್ರಾತೃವ್ಯ ಎಂದರೆ ಶತ್ರುವೆಂದು ಅರ್ಥವಾಗಿರುವುದನ್ನು ತೋರಿಸಿ ಇಲ್ಲಿ ಉದಹರಿಸಿರುವ ಋಕ್ಸಂಹಿತಾವಾಕ್ಯಗಳಲ್ಲೂ ಸಹ ಅದೇ ಅರ್ಥವೆಂದು ಸಮರ್ಥಿಸಿರುತ್ತಾರೆ. ಇದರಂತೆಯೇ,

ಅಭಿ ನೋ ವೀರೋ ಅರ್ವತಿ ಕ್ಷಮೇತ ಪ್ರ ಜಾಯೇಮಹಿ ರುದ್ರ ಪ್ರಜಾಭಿಃ ।
(ಋ. ಸಂ ೨-೩೩-೧)

ಅಗ್ನಿಂ ಧೀಷು ಪ್ರಥಮಮಗ್ನಿಮರ್ವತ್ಯಗ್ನಿಂ ಕ್ಷೈತ್ರಾಯ ಸಾಧಸೇ ।
(ಋ. ಸಂ. ೮-೭೧-೧೨)

ಇತ್ಯಾದಿ ಋಕ್ಕುಗಳಲ್ಲೂ ಸಹ ಅರ್ವತ್ ಶಬ್ದಕ್ಕೆ ಶತ್ರುವೆಂದರ್ಥ. ಹೀಗೆಯೇ ಋಂ. ಸಂ. ೫-೫೧-೧೧, ೧೦-೯೨-೧೪ ಇತ್ಯಾದಿ ಋಕ್ಕುಗಳಲ್ಲಿ ಶತ್ರುಪರ್ಯಾಯವಾಗಿದೆ. ಈ ಶಬ್ದವ್ಯುತ್ಪತ್ತಿಯ ವಿಷಯದಲ್ಲಿ Wilson ಮತ್ತು Max-Miller ಎಂಬ ಪಂಡಿತರ ಭಿನ್ನಾಭಿಪ್ರಾಯವನ್ನು ತಿಳಿಸುವುದು ಅನುಚಿತವಾಗಲಾರದು. ಮೇಲೆ ಉದಹರಿಸಿರುವ ಋ. ಸಂ ೧-೩೭-೧ ನೇ ಋಕ್ಕಿನಲ್ಲಿರುವ ಅರ್ವನ್ ಶಬ್ದಕ್ಕೆ ಋಕ್ಸಂಹಿತೆಯನ್ನು ಆಂಗ್ಲಭಾಷೆಗೆ ಪರಿವರ್ತನಮಾಡಿದ wilson ಎಂಬ ಪಂಡಿತನು ಸಾಯಣರ ಭಾಷ್ಯದ ಮೇಲೆ ಟೀಕೆಮಾಡುತ್ತಾ ಹೀಗೆ ಹೇಳಿರುತ್ತಾನೆ.—

The phrase is ಅನರ್ವಾಣಂ which the scholiast explains ಭ್ರಾತೃವ್ಯರಹಿತಂ । literally, without a brother's son, which would be a very unintelligible epithet. Arvan is, in its usual acceptation a horse ; and being without horses would not be inapplicable to the Maruts, whose chariot is drawn by deer. ಭ್ರಾತೃವ್ಯ may mean an enemy, but it is doubtful if ಅರ್ವತ್ can admit of such an interpretalation;

(Rig-Veda Translation Vol. I. 2nd edn. P. 258)

ಇದರ ತಾತ್ಪರ್ಯವು, ಮರುತ್ತುಗಳ ವಾಹನಗಳು ಜಿಂಕೆಗಳಾದುದರಿಂದ ಇಲ್ಲಿ ಕುದುರೆಗಳಿಲ್ಲದ ಎಂದರ್ಥ ಮಾಡುವುದು ಅನುಚಿತವಾಗಲಾರದು ಎಂದು ಈ ಪಂಡಿತನು ಅಭಿಪ್ರಾಯಪಡುತ್ತಾನೆ. ಆದರೆ ಇದಕ್ಕೆ ವಿರುದ್ಧವಾಗಿ Max Muller ಎಂಬ ಪಂಡಿತನು ಇದೇ ಸೂಕ್ತವನ್ನು ಪರಿವರ್ತಿಸಿರುವಾಗ ಈ ಪದಕ್ಕೆ ಅಶ್ವವೆಂದು ಅರ್ಥ ಮಾಡಿರುವುದು ಸರಿಯಲ್ಲವೆಂದು Wilson ಹೇಳಿರುವುದನ್ನು ಟೀಕಿಸಿರುತ್ತಾನೆ. ಇದು ಈ ರೀತಿಯಿದೆ

Wilson translates ಅನರ್ವಾಣಂ by without horses, though the commentator distinctly explains the word by without an enemy, Wilson considers it doubtful whether ಅರ್ವನ್ can ever mean enemy. The fact is, that in the Rig-Veda an-arvan never means without horses, but always without hurt or free from enemies , and the commentator is perfectly right, as far as the sense is concerned, in rendering the word by without an enemy or unopposed, (ಅಪ್ರತ್ಯೃತ)

(Sacred Books of the East Vol. 32. P. 65)

ಹೀಗೆ ಅಶ್ವನಾಮಗಳಲ್ಲಿ ಪಠಿತವಾಗಿದ್ದರೂ ಸಹ ಅರ್ವನ್ ಶಬ್ದದ ಪ್ರಯೋಗಗಳು ಈ ರೀತಿ ಇವೆ. ಆದರೆ ಅಶ್ವವೆಂಬ ಅರ್ಥದಲ್ಲಿಯೇ ಪ್ರಯೋಗಗಳೇ ಹೆಚ್ಚು. ಪ್ರಕೃತವಾದ ಋಕ್ಕಿನಲ್ಲಿ ಅಶ್ವಕ್ಕೆ ಎಂದೇ ಅರ್ಥ.

**ಸಕ್ಷಣಿಂ — ಅಸ್ಮಾನಭಿಭವಂತಂ** । ನಮ್ಮನ್ನು ಪ್ರತಿಭಟಿಸುವ ಮತ್ತು ಶಕ್ತಿಯುತನಾದ (ಶತ್ರು) ಎಂದರ್ಥ **ಷಹ-ಅಭಿಭವೇ** ಎಂಬ ಧಾತುವಿನಿಂದ ನಿಷ್ಪನ್ನವಾಗಿ ಶತ್ರುಗಳನ್ನು ಸೋಲಿಸುವ ಶಕ್ತಿಯುಳ್ಳವನು ಎಂದರ್ಥವಾಗುತ್ತದೆ. ಇಂತಹ ಶಕ್ತಿಯುಳ್ಳವರೂ ಯಜ್ಞಕರ್ತರನ್ನು ಪ್ರತಿಭಟಿಸುವವರೂ ಆದ ಶತ್ರುಪರ್ಯಾಯವಾಗಿ ಇಲ್ಲಿ ಪ್ರಯೋಗಿಸಲ್ಪಟ್ಟಿದೆ. **ಷಚ-ಸೇವನೇ ಸೇಚನೇ ಚ** ಎಂಬ ಧಾತುವಿನಿಂದಲೂ ಸಹ **ಸಕ್ಷಣಿ** ಶಬ್ದವು ನಿಷ್ಪನ್ನವಾಗಿ **ಸೇವ್ಯ** ಎಂದೂ, **ಸೇಚನಶೀಲ** ಎಂದೂ ಅರ್ಥವಾಗುತ್ತದೆ. ಉದಾಹರಣೆಗೆ

**ಉತ ಸ್ಯ ದೇವೋ ಭುವನಸ್ಯ ಸಕ್ಷಣಿಸ್ತ್ವಷ್ಟಾ ಗ್ನಾಭಿಃ ಸಜೋಷಾ ಜೂಜುವದ್ರಥಂ ।**
(ಋ. ಸಂ. ೨-೩೧-೪)

**ಪ್ರ ಸು ಗ್ಮಂತಾ ಧಿಯಸಾನಸ್ಯ ಸಕ್ಷಣಿ ವರೇಭಿರ್ವರಾँ ಅಭಿ ಷು ಪ್ರಸೀದತಃ ।**
(ಋ. ಸಂ. ೧೦-೩೨-೧)

ಇತ್ಯಾದಿ ಋಕ್ಕುಗಳಲ್ಲಿ **ಸೇವ್ಯ** ಎಂಬರ್ಥವೂ,

**ಸಮುದ್ರಿಯಾ ಅಪ್ಸರಸೋ ಮನೀಷಿಣಮಾಸೀನಾ ಅಂತರಭಿ ಸೋಮಮಕ್ಷರನ್ ।**
(ಋ. ಸಂ. ೯-೭೮-೩)

ಇತ್ಯಾದಿ ಋಕ್ಕುಗಳಲ್ಲಿ **ಸೇಚಮಾನ** ಎಂದೂ ಅರ್ಥವಾಗುತ್ತದೆ. ಮತ್ತು,

**ತಮು ತ್ವಾ ನೂನಮೀಮಹೇ ನವ್ಯಂ ದಂಸಿಷ್ಠ ಸನ್ಯಸೇ ।**
**ಸ ತ್ವಂ ನೋ ವಿಶ್ವಾ ಅಭಿಮಾತೀಃ ಸಕ್ಷಣಿಃ ॥**
(ಋ. ಸಂ. ೮-೨೪-೨೬)

**ಪರಿ ದ್ಯುಕ್ಷಂ ಸಹಸಃ ಪರ್ವತಾವೃಧಂ ಮಧ್ವಃ ಸಿಂಚಂತಿ ಹರ್ಮ್ಯಸ್ಯ ಸಕ್ಷಣಿಂ ।**
(ಋಂ. ಸಂ. ೯-೭೧-೪)

ಇತ್ಯಾದಿ ಋಕ್ಕುಗಳಲ್ಲಿ **ಅಭಿಭವಿತಾರಂ ಇಂದ್ರಂ** ಶತ್ರುಗಳನ್ನು ಸೋಲಿಸಲು ಸಾಮರ್ಥ್ಯವುಳ್ಳ ಇಂದ್ರನನ್ನು ಎಂದು **ಸಹನಾರ್ಥ**ದಲ್ಲಿ ಉಪಯೋಗಿಸಲ್ಪಟ್ಟಿದೆ. ಪ್ರಕೃತವಾದ ಋಕ್ಕಿನಲ್ಲಿ ಇದೇ ಪದವು ಶತ್ರುಶಕ್ತಿಯನ್ನು ಹೇಳುವುದಾಗಿದೆ. **ಅಸ್ಮಾನಭಿಭವಂತಂ ಯುಷ್ಮತ್ಪ್ರಸಾದಾದಭಿಭವೇಮೇತಿ ಶೇಷಃ** ನಮ್ಮನ್ನು ಸೋಲಿಸುವ ಸಾಮರ್ಥ್ಯವನ್ನು ನಾವು ಪಡೆಯುವಂತೆ ಅನುಗ್ರಹಿಸು ಎಂದು ತಾತ್ಪರ್ಯ.

॥ ವ್ಯಾಕರಣಪ್ರಕ್ರಿಯಾ ॥

**ಸಾತಿಃ — ಊತಿಯೂತಿಜೂತಿಸಾತಿಹೇತಿಕೀರ್ತಯಶ್ಚ** — (ಪಾ. ಸೂ. ೩-೩-೯೭) ಎಂಬುದರಿಂದ ಉದಾತ್ತಸ್ವರವಿಶಿಷ್ಟವಾದ ಕ್ತಿನ್ನಂತವಾಗಿ ನಿಪಾತಿತವಾಗಿದೆ.

**ಋಭವಃ — ಆಮಂತ್ರಿತಸ್ಯ ಚ** — (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅರ್ವತೇ** — ಋ ಗತೌ ಧಾತು. **ಅನ್ಯೇಭ್ಯೋಽಪಿ ದೃಶ್ಯತೇ** — (ಪಾ. ಸೂ ೩-೨-೭೫) ಎಂಬುದರಿಂದ ವನಿಪ್ ಪ್ರತ್ಯಯ. ತಸ್ಯ ಪಿತ್ತ್ವಾಗಿ ಧಾತುವಿಗೆ ಗುಣ. ರಪರವಾಗಿ ಬರುತ್ತದೆ. ಅರ್ವನ್ ಶಬ್ದವಾಗುತ್ತದೆ. ಚತುರ್ಥೀ ಏಕವಚನ ಪರವಾದಾಗ **ಅರ್ವಣಸ್ತ್ರಸಾವನಞಃ** — (ಪಾ. ಸೂ. ೬-೪-೧೨೭) ಎಂಬುದರಿಂದ ತೃ ಅಂತಾದೇಶವಾಗಿ ಬರುತ್ತದೆ. ತಾಂತವಾಗುತ್ತದೆ. ವನಿಪ್ ಪಿತ್ತ್ವಾದುದರಿಂದ ಧಾತುಸ್ವರ ಉಳಿಯುತ್ತದೆ.

**ಮಹೇತ**—ಮಹ ಪೂಜಾಯಾಮ್. ಧಾತು. ವಿಧಿಲಿಙ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಲಿಙಃಸೀಯುಟ್**—(ಪಾ. ಸೂ. ೩-೪-೧೦೨) ಎಂಬುದರಿಂದ ಅದಕ್ಕೆ ಸೀಯುಟಾಗಮ. **ಸುಟ್ ತಿಥೋಃ**—(ಪಾ. ಸೂ. ೩-೪-೧೦೭) ಸೂತ್ರದಿಂದ ಸುಟ್. **ಲಿಙಃ ಸಲೋಪೋಽನಂತ್ಯಸ್ಯ**—(ಪಾ. ಸೂ. ೭-೨-೭೯)— ಸೂತ್ರದಿಂದ ಎರಡು ಸಕಾರಗಳಿಗೂ ಲೋಪ. ವಿಕರಣದೊಡನೆ ಇಕಾರಕ್ಕೆ ಗುಣ. ಮಹೇತ ಎಂದು ರೂಪ ವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಕ್ಷಣಿಮ್**—ಷಹ ಅಭಿಭವೇ. ಧಾತು. ಇದಕ್ಕೆ ಔಣಾದಿಕ ಸನಿ ಪ್ರತ್ಯಯ. ಇದು ಪರವಾದಾಗ **ಹೋಢಃ**—(ಪಾ. ಸೂ. ೮-೨-೩೧) ಎಂಬುದರಿಂದ ಧಾತುವಿನ ಹಕಾರಕ್ಕೆ ಢತ್ವ. ಸಕಾರ ಪರವಾದುದರಿಂದ ಢಕಾರಕ್ಕೆ **ಷಢೋಃ ಕಃ ಸಿ**—(ಪಾ. ಸೂ. ೮-೨-೪೧) ಎಂಬುದರಿಂದ ಕತ್ವ. ಕಕಾರದ ಪರದಲ್ಲಿ ಸಕಾರ ಬಂದುದ ರಿಂದ ಅದಕ್ಕೆ **ಆದೇಶಪ್ರತ್ಯಯಯೋಃ**—(ಪಾ. ಸೂ. ೮-೩-೫೯) ಎಂಬುದರಿಂದ ಷತ್ವ. ಕಕಾರಷಕಾರಯೋಗ ದಿಂದ ಕ್ಷಕಾರ. ಪ್ರತ್ಯಯಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ಋಭುಕ್ಷಣಮಿಂದ್ರಮಾ ಹುವ ಊತಯ ಋಭೂನ್ವಾಜಾನ್ಮ-
ರುತಃ ಸೋಮಽಪೀತಯೇ ।
ಉಭಾ ಮಿತ್ರಾವರುಣಾ ನೂನಮಶ್ವಿನಾ ತೇ ನೋ ಹಿನ್ವಂತು
ಸಾತಯೇ ಧಿಯೇ ಜಿಷೇ ॥ ೪ ॥

ಪದಪಾಠಃ

ಋಭುಕ್ಷಣಂ । ಇಂದ್ರಂ । ಆ । ಹುವೇ । ಊತಯೇ । ಋಭೂನ್ । ವಾಜಾನ್ ।
ಮರುತಃ । ಸೋಮಽಪೀತಯೇ ।

ಉಭಾ । ಮಿತ್ರಾವರುಣಾ । ನೂನಂ । ಅಶ್ವಿನಾ । ತೇ । ನಃ । ಹಿನ್ವಂತು । ಸಾತಯೇ ।
ಧಿಯೇ । ಜಿಷೇ ॥ ೪ ॥

ಸಾಯಣಭಾಷ್ಯಂ

ಋಭುಕ್ಷಣಂ । ಮಹನ್ನಾಮೈತತ್ । ಮಹಾಂತಮಿಂದ್ರಮಾ ಹುವೇ । ಆಹ್ವಯಾಮಿ । ಕಿಮರ್ಥಂ । ಊತಯೇ ರಕ್ಷಣಾರ್ಥಂ । ತಥಾ ಋಭೂನ್ವಾಜಾನ್ । ಋಭುರ್ವಿಭ್ವಾ ವಾಜ ಇತಿ ತ್ರಯಃ ಸುಧನ್ವನಃ ಪುತ್ರಾಃ । ತತ್ರ ಪ್ರಥಮೋತ್ತಮವಾಚಕಶಬ್ದಾಭ್ಯಾಂ ಮಧ್ಯಮೋಽಪಿ ಲಕ್ಷ್ಯತೇ । ಅತಃ ಶಬ್ದದ್ವಯೇನ ತ್ರಯೋಽಪ್ಯುಚ್ಯಂತೇ । ತದುಕ್ತಂ ಯಾಸ್ಕೇನ । ಪ್ರಥಮೋತ್ತಮಾಭ್ಯಾಂ ಬಹುವನ್ನಿಗಮಾ ಭವಂತಿ ನ ಮಧ್ಯಮೇನ । ನಿ. ೧೧-೧೬ । ಇತಿ । ಏವಂವಿಧಾನೃಭೂನ್ಮರುತಶ್ಚ ಸೋಮಪೀತಯೇ ಸೋಮಪಾನಾಯಾಹ್ವಯಾಮಿ । ತಥೋಭಾ ಯುಗಲರೂಪೇಣ ಸಂಹತ್ಯ ವರ್ತಮಾನೌ ದ್ವೌ ಮಿತ್ರಾವರುಣಾವಶ್ವಿನೌ ಚ ನೂನಮವಶ್ಯಂ ಸೋಮಪಾನಾಯಾಹ್ವಯಾಮೀತಿ ಶೇಷಃ । ಅಪಿ ಚಾಹೂತಾಸ್ತೇಂದ್ರಾದಯೋ ನೋಽಸ್ಮಾನ್ ಹಿನ್ವಂತು । ಪ್ರೇರಯಂತು । ಗಮಯಂತ್ವಿತ್ಯರ್ಥಃ । ಕಿಮರ್ಥಂ । ಸಾತಯೇ । ಸಂಭಜನೀಯಾಯ ಧನಾಯ ಧಿಯೇ ಧನಸಾಧ್ಯಾಯ ಕರ್ಮಣೇ ಜಿಷೇ ಜೇತುಂ ಶತ್ರೂಣಾಂ ಜಯಾರ್ಥಂ ಚ ॥ ಋಭುಕ್ಷಣಂ । ಉರು ಭಾಸಮಾನೇ ಸ್ಥಾನೇ ಕ್ಷಿಯತಿ ನಿವಸತೀತ್ಯೃಭುಕ್ಷಾಃ । ಉರುಪೂರ್ವಾದ್ಭಾತೇರ್ಮೃಗಯ್ವಾದಯಶ್ಚ । ಉ. ೧-೩೭ । ಇತಿ ಕುಪ್ರತ್ಯಯಃ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ ಪೂರ್ವಪದಸ್ಯ ಋಭಾವಶ್ಚ । ಋಭುಶಬ್ದೋಪಪದಾತ್ಕ್ಷಿ ನಿವಾಸಗತ್ಯೋರಿತ್ಯಸ್ಮಾತ್ಸ್ಪತೇಶ್ಚ ಚೇತಿ ವಿಧೀಯಮಾನ ಇನಿಪ್ರತ್ಯಯೋ ಬಹುಲವಚನಾದ್ಭವತಿ । ಟಿಲೋಪಃ । ಇತೋಽತ್ಸರ್ವನಾಮಸ್ಥಾನೇ । ಪಾ. ೭-೧-೮೬ । ಇತ್ಯತ್ವಮಿಕಾರಸ್ಯ । ವಾ ಷಪೂರ್ವಸ್ಯ ನಿಗಮ ಇತಿ ವಿಕಲ್ಪನಾದುಪಧಾದೀರ್ಘಾಭಾವಃ । ಯದ್ವಾ । ಅರ್ತೇರ್ಭುಕ್ಸಿನಕ್ । ಕಿತ್ತ್ವಾದ್ಗುಣಾಭಾವಃ । ಅತ ಏವ ನಾವಗೃಹ್ಯತೇ । ಸೋಮಪೀತಯೇ । ಪಾ ಪಾನೇ । ಸ್ಥಾಗಾಪಾಪಚೋ ಭಾವ ಇತಿ ಭಾವೇ ಕ್ತಿನ್ । ಘುಮಾಸ್ಥೇತೀತ್ವಂ । ದಾಸೀಭಾರಾದಿತ್ವಾತ್ಪೂರ್ವಪದಪ್ರಕೃತಿಸ್ವರತ್ವಂ । ಹಿನ್ವಂತು । ಹಿ ಗತೌ ವೃದ್ಧೌ ಚ । ಅಸ್ಮಾದಂತರ್ಭಾವಿತಣ್ಯರ್ಥಾಲ್ಲೋಟಿ ಸ್ವಾದಿತ್ವಾತ್ ಶ್ನುಃ । ಜಿಷೇ । ಜಿ ಜಯೇ । ತುಮರ್ಥೇ ಸೇಸೇನಿತಿ ಕ್ಸೇಪ್ರತ್ಯಯಃ ॥

ಪ್ರತಿಪದಾರ್ಥ

ಋಭುಕ್ಷಣಂ—ಪ್ರಭಾವಶಾಲಿಯಾದ । ಇಂದ್ರಂ—ಇಂದ್ರನನ್ನು । ಊತಯೇ—ರಕ್ಷಣಾರ್ಥವಾಗಿ । ಆ ಹುವೇ—ಕರೆಯುತ್ತೇನೆ । ಋಭೂನ್ ವಾಜಾನ್—(ಸುಧನ್ವ ಪುತ್ರರಾದ) ಋಭು, ವಿಭ್ವ ಮತ್ತು ವಾಜ ಎಂಬ ಮೂವರನ್ನೂ । ಮರುತಃ—ಮರುತ್ತುಗಳನ್ನೂ । ಸೋಮಪೀತಯೇ—ಸೋಮರಸದ ಪಾನಕ್ಕಾಗಿ (ಕರೆಯುತ್ತೇನೆ. ಹಾಗೆಯೇ) । ಉಭಾ—ಜೊತೆಯಲ್ಲಿ ಕೂಡಿಕೊಂಡಿರುವ । ಮಿತ್ರಾವರುಣಾ—ಮಿತ್ರಾವರುಣರನ್ನೂ । ಅಶ್ವಿನಾ—ಅಶ್ವಿನೀ ದೇವತೆಗಳನ್ನೂ । ನೂನಂ—ಖಂಡಿತವಾಗಿಯೂ (ಸೋಮರಸದ ಪಾನಕ್ಕಾಗಿ ಕರೆಯುತ್ತೇನೆ) । ತೇ—ಅವರೆಲ್ಲರೂ । ನಃ—ನಮ್ಮನ್ನು । ಸಾತಯೇ—ಧನ ಸಂಪಾದನೆಗಾಗಿಯೂ । ಧಿಯೇ (ಧನಾರ್ಜನೆಯ

ಸಾಧನವಾದ) ಕರ್ಮಾನುಷ್ಠಾನಕ್ಕಾಗಿಯೂ । **ಜಿಷೇ**—ಜಯಕ್ಕಾಗಿಯೂ । **ಹಿನ್ವಂತು**—ಪ್ರೇರಿಸಲಿ (ಮಾರ್ಗ ದರ್ಶಕರಾಗಲಿ).

ಭಾವಾರ್ಥ

ಪ್ರಭಾವಶಾಲಿಯಾದ ಇಂದ್ರನನ್ನು ನಾನು ರಕ್ಷಣಾರ್ಥವಾಗಿ ಪ್ರಾರ್ಥಿಸಿ ಕರೆಯುತ್ತೇನೆ. ಋಭು, ವಿಭ್ವ ಮತ್ತು ವಾಜ ಎಂಬ ಸುಧನ್ವಪುತ್ರರನ್ನೂ, ಹಾಗೆಯೇ ಯಾವಾಗಲೂ ಜೊತೆಯಲ್ಲಿ ಕೂಡಿಕೊಂಡಿರುವ ಮಿತ್ರಾವರುಣರನ್ನೂ ಮತ್ತು ಅಶ್ವಿನೀದೇವತೆಗಳನ್ನೂ, ಮರುತ್ತುಗಳನ್ನೂ ಖಂಡಿತವಾಗಿಯೂ ಸೋಮರಸಪಾನಕ್ಕಾಗಿ ಕರೆಯುತ್ತೇನೆ. ಅವರೆಲ್ಲರೂ ಸಹ ನಮ್ಮನ್ನು ಧನಸಂಪಾದನೆಗಾಗಿಯೂ, ಧನಾರ್ಜನೆಯ ಸಾಧನವಾದ ಕರ್ಮಾನುಷ್ಠಾನಕ್ಕಾಗಿಯೂ ಮತ್ತು ಜಯಸಂಪಾದನೆಗಾಗಿಯೂ ಪ್ರೇರಿಸಲಿ. ಮತ್ತು ನಮಗೆ ಮಾರ್ಗ ದರ್ಶಕರಾಗಲಿ.

English Translation

I invoke the mighty Indra for protection, and the Ribhus, Vajas, and Maruts to drink the Soma juice ; also both Mitra, Varuna, and the Aswins, and may they direct us to opulence, to holy rites, and to victory.

ವಿಶೇಷವಿಷಯಗಳು

**ಋಭುಕ್ಷಣಂ—ಮಹನ್ನಾಮೈತತ್** (ನಿ. ೩-೧೩) **ಮಹಾಂತಂ ಇಂದ್ರಂ ।** ಮಹತ್ತಿನಿಂದ ಕೂಡಿದ ಇಂದ್ರನನ್ನು ಎಂದು ಸಾಯಣರೂ, **ಋಭುಭಿಃ ಸಹ ಕ್ಷಿಣೋತಿ ಹಿನಸ್ತಿ ಶತ್ರೂನಿತಿ ಋಭುಕ್ಷಾ।** ಋಭುಗಳೊಂದಿಗೆ ಸೇರಿಕೊಂಡು ಶತ್ರುಗಳನ್ನು ಹಿಂಸಿಸಿ ನಾಶಮಾಡುತ್ತಾನೆ ಆದುದರಿಂದ **ಋಭುಕ್ಷಾ** ಎಂಬ ಹೆಸರು ಪ್ರಸಿದ್ಧವಾಗಿದೆ ಎಂದು ಸ್ಕಂದಸ್ವಾಮಿಗಳೂ ವಿವರಿಸಿದ್ದಾರೆ. ಈ ವಿಶೇಷಣವು ಮರುತ್ತುಗಳ ಪರವಾಗಿಯೂ ಮತ್ತು ಇಂದ್ರನ ಪರವಾಗಿಯೂ ಸಾಧಾರಣವಾಗಿ ಉಪಯೋಗಿಸಲ್ಪಟ್ಟಿದೆ.

**ತ್ವಂ ಸತ್ಯ ಇಂದ್ರ ಧೃಷ್ಣುರೇತಾನ್ತ್ವಮೃಭುಕ್ಷಾ ನರ್ಯಸ್ತ್ವಂ ಷಾಟ್ ।**
(ಋ. ಸಂ. ೧-೬೩-೩)

**ಇಂದ್ರ ಇಷೇ ದದಾತು ನ ಋಭುಕ್ಷಣಮೃಭುಂ ರಯಿಂ ।**
(ಋ. ಸಂ. ೮-೯೩-೩೪)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನಿಗೆ ವಿಶೇಷಣವಾಗಿಯೂ,

**ಯೂಯಂ ಹಿ ಷ್ಠಾ ಸುದಾನವೋ ರುದ್ರಾ ಋಭುಕ್ಷಣೋ ದಮೇ ।**
(ಋ. ಸಂ. ೮-೭-೧೨)

ಇತ್ಯಾದಿ ಋಕ್ಕುಗಳಲ್ಲಿ ಮರುತ್ತುಗಳಿಗೆ ವಿಶೇಷಣವಾಗಿಯೂ ಇದೆ. ಮತ್ತು ನಿರುಕ್ತಕಾರರು ಉದಹರಿಸಿರುವ,

**ಮಾ ನೋ ಮಿತ್ರೋ ವರುಣೋ ಅರ್ಯಮಾಯುರಿಂದ್ರ ಋಭುಕ್ಷಾ ಮರುತಃ ಪರಿ ಖ್ಯನ್ ।**
(ಋ. ಸಂ. ೧-೧೬೨-೧

ಎಂಬ ಋಕ್ಕಿನಲ್ಲಿ **ಋಭೂಣಾಂ ರಾಜಾ** ಎಂದು ನಿರುಕ್ತಕಾರರು ಅರ್ಥ ಮಾಡಿದ್ದಾರೆ. (೯-೩) ಸಾಯಣರು ದೇವಾನಾಂ ನಿವಾಸಭೂತಃ ಪ್ರಜಾಪತಿಃ ಎಂದು ಒಂದು ಅರ್ಥವನ್ನೂ ಏತನ್ಮಹನ್ನಾಮ ಇಂದ್ರವಿಶೇಷಣಂ) ಎಂದು ಇನ್ನೊಂದು ಅರ್ಥವನ್ನೂ ಮಾಡಿದ್ದಾರೆ. ಯಾರಿಗೆ ವಿಶೇಷಣವಾದರೂ ಸಹ ಆ ದೇವತೆಯ ಮಹತ್ವವನ್ನು ತೋರಿಸುತ್ತದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಮಹಾಂತಂ ಇಂದ್ರಂ ಎಂದೇ ತಾತ್ಪರ್ಯ. ಉರುಭಾಸ

ಮಾನೇ ಸ್ಥಾನೇ ಕ್ಷಿಯತಿ ನಿವಸತೀತಿ ಋಭುಕ್ಷಾಃ । ಅತ್ಯಂತ ಪ್ರಕಾಶಮಾನವಾದ ಸ್ಥಾನದಲ್ಲಿ ವಾಸಮಾಡುವುದರಿಂದ ಈ ವಿಶೇಷಣವೆಂದು ಸಾಯಣರು ವಿವರಿಸಿದ್ದಾರೆ.

**ಋಭೂನ್ವಾಜಾನ್**—**ಅತ್ರ ಪ್ರಥಮೋತ್ತಮವಾಚಕಶಬ್ದಾಭ್ಯಾಂ ಮಧ್ಯಮೋಽಪಿ ಲಕ್ಷ್ಯತೇ । ಅತಃ ಶಬ್ದದ್ವಯೇನ ತ್ರಯೋಽಪ್ಯುಚ್ಯಂತೇ । ಪ್ರಥಮೋತ್ತಮಾಭ್ಯಾಂ ಬಹುವನ್ನಿಗಮಾ ಭವಂತಿ ನ ಮಧ್ಯಮೇನ** । (ನಿ. ೧೧-೧೬) ಇವುಗಳಲ್ಲಿ ಪ್ರಥಮವಾದ **ಋಭು** ಎಂಬ ಪದವನ್ನೂ ಕೊನೆಯದಾದ **ವಾಜ** ಎಂಬ ಹೆಸರನ್ನೂ ಬಹುವಚನದಲ್ಲಿ ಪ್ರಯೋಗಿಸುವುದೂ ಮತ್ತು ಮಧ್ಯಮವಾದ ವಿಭ್ವ ಎಂಬ ಹೆಸರನ್ನು ಬಿಟ್ಟುಬಿಡುವುದೂ ಸಂಹಿತೆಯಲ್ಲಿ ವಾಡಿಕೆಯಾಗಿದೆ. ಆದರೆ **ಋಭೂನ್—ವಾಜಾನ್** ಎಂದು ಇರುವ ಕಡೆಗಳಲ್ಲೆಲ್ಲಾ ಮೂವರನ್ನೂ ಒಟ್ಟಿಗೆ ಸೇರಿಸಿದೆಯೆಂದು ತಿಳಿಯಬೇಕೆಂದು ಹೇಳಿರುವ ನಿರುಕ್ತಕಾರರ ಅಭಿಪ್ರಾಯವನ್ನು ಸಾಯಣರು ವಿವರಿಸಿದ್ದಾರೆ.

**ಹಿನ್ವಂತು—ಹಿನು ಗತೌ । ಪ್ರವೃದ್ಧಾ ಚ ಅಸ್ಮಾನ್ ಪ್ರತಿಗಚ್ಛಂತು । ಅಸ್ಮಾನ್ ವರ್ಧಯಂತು ।** ನಮ್ಮನ್ನು ವೃದ್ಧಿಯಾಗುನಂತೆ ಮಾಡಲಿ ಅಥವಾ ಧನಲಾಭಕ್ಕಾಗಿಯೂ ಮತ್ತು ಶತ್ರುಜಯಕ್ಕಾಗಿಯೂ ನಮ್ಮನ್ನು ಪ್ರೇರಿಸಲಿ ಎಂದರ್ಥ.

ವ್ಯಾಕರಣಪ್ರಕ್ರಿಯಾ

**ಋಭುಕ್ಷಣಮ್**—ಉರು ಭಾಸಮಾನೇ ಸ್ಥಾನೇ ಕ್ಷಿಯತಿ—ನಿವಸತಿ ಇತಿ ಋಭುಕ್ಷಾಃ ಉರುಪೂರ್ವವಾಗಿರುವಾಗ ಭಾ ದೀಪ್ತೌ ಧಾತುವಿಗೆ **ಮೃಗಯ್ವಾದಯಶ್ಚ**—(ಉ. ಸೂ. ೧-೩೭) ಎಂಬುದರಿಂದ ಕುಪ್ರತ್ಯಯ. ಕಿತ್ತಾಗುದರಿಂದ **ಆತೋಲೋಪ ಇಟಿ ಚ**—(ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಪೂರ್ವಪದಕ್ಕೆ (ಉರು) ಋ ಎಂಬ ಆದೇಶ. ಋಭುಶಬ್ದವು ಉಪಪದವಾಗಿರುವಾಗ ಕ್ಷಿ ನಿವಾಸಗತ್ಯೋಃ ಈ ಧಾತುವಿಗೆ **ಪತೇಸ್ಥ ಚ**—(ಉ. ಸೂ. ೪-೪೫೨) ಎಂಬುದರಿಂದ ವಿಧಿಸಲ್ಪಡುವ ಇನಿಪ್ರತ್ಯಯವು ಉಣಾದಿಯಲ್ಲಿ ಬಹುಲವಚನವಿರುವುದರಿಂದ (ಇದಕ್ಕೂ) ಬರುತ್ತದೆ. ಇದರಿಂದಲೇ ಇನಿ ಪರವಾದಾಗ ಧಾತುವಿನ ಟಿಗೆ ಲೋಪ. ಋಭುಕ್ಷಿನ್ ಶಬ್ದವಾಗುತ್ತದೆ. ಇದಕ್ಕೆ ದ್ವಿತೀಯೈಕವಚನ ಅಮ್ ಪರವಾದಾಗ **ಇತೋತ್ ಸರ್ವನಾಮಸ್ಥಾನೇ**—(ಪಾ. ಸೂ. ೭-೧-೮೬) ಎಂಬುದರಿಂದ ಇಕಾರಕ್ಕೆ ಅತ್ವ. ಋಭುಕ್ಷನ್+ಅಮ್ ಎಂದಿರುವಾಗ **ವಾ ಷಪೂರ್ವಸ್ಯ ನಿಗಮೇ**—(ಪಾ. ಸೂ. ೬-೪-೯) ಎಂಬುದರಿಂದ ಛಂದಸ್ಸಿನಲ್ಲಿ ಉಪಧಾದೀರ್ಘವಿಕಲ್ಪವಾದುದರಿಂದ ಇಲ್ಲಿ ಬರುವುದಿಲ್ಲ. ಷಕಾರನಿಮಿತ್ತವಿರುವುದರಿಂದ ನಕಾರಕ್ಕೆ ಣತ್ವ. ಪ್ರತ್ಯಯಸ್ವರದಿಂದ ಕ್ಷಕಾರೋತ್ತರಾಕಾರ ಉದಾತ್ತವಾಗುತ್ತದೆ. ಅಥವಾ ಋಗತೌ ಧಾತು. ಇದಕ್ಕೆ ಔಣಾದಿಕ ಭುಕ್ಷಿನಕ್ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಆದುದರಿಂದ ಪದಕಾಲದಲ್ಲಿ ಅವಗ್ರಹಮಾಡಲಿಲ್ಲ.

**ಹುವೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಲಡುತ್ತಮಪುರುಷ ಏಕವಚನದಲ್ಲಿ ಇಟ್ ಪ್ರತ್ಯಯ ಬಂದಾಗ ಅದಕ್ಕೆ **ಟಿತ ಆತ್ಮನೇಪದಾನಾಂ**—ಎಂಬುದರಿಂದ ಏತ್ವ. **ಬಹುಲಂ ಛಂದಸಿ**—ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಛಾಂದಸವಾಗಿ ಶಪಿಗೆ ಲುಕ್. ಉವಜಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಊತಯೇ**—ಊತಿಯೂತಿಜೂತಿ (ಪಾ. ಸೂ. ೩-೩-೯೭) ಎಂಬುದರಿಂದ ಕ್ತಿನ್ನಿಗೆ ಉದಾತ್ತಸ್ವರ ನಿಪಾತಿತವಾಗಿದೆ.

ದಲ್ಲಿ ಕ್ತಿನ್ ಪ್ರತ್ಯಯ. ಕಿತ್ತಾದುದರಿಂದ **ಘುಮಾಸ್ಥಾಗಾ**—(ಪಾ. ಸೂ. ೬-೪-೬೬) ಎಂಬುದರಿಂದ ಧಾತುವಿಗೆ ಈತ್ವ. ಸೋಮಸ್ಯ ಪೀತಿಃ ಸೋಮಪೀತಿಃ. ದಾಸೀಭಾರಾದಿಯಲ್ಲಿ ಸೇರಿರುವುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

ಉಭಾ—ಇದೇ ಮೊದಲಾದ ಮೂರು ಶಬ್ದಗಳಲ್ಲಿಯೂ ಔಕಾರ ವಿಭಕ್ತಿಗೆ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಆಕಾರಾದೇಶ ಬರುತ್ತದೆ.

**ಹಿನ್ವಂತು**--ಹಿ ಗತೌ ವೃದ್ಧೌ ಚ. ಧಾತು. ಪ್ರೇರಣಾರ್ಥ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಲೋಟ್ ಪ್ರಥಮಪುರುಷ ಬಹುವಚನದಲ್ಲಿ ಝಪ್ರತ್ಯಯ. **ಝೋಽಂತಃ**—ಎಂಬುದರಿಂದ ಅಂತಾದೇಶ. **ಏರುಃ**—(ಪಾ. ಸೂ. ೩-೪-೮೬) ಎಂಬುದರಿಂದ ಇಕಾರಕ್ಕೆ ಉತ್ವ. ಸ್ವಾದಿಯಲ್ಲಿ ಸೇರಿರುವುದರಿಂದ **ಸ್ವಾದಿಭ್ಯಃ ಶ್ನುಃ**—(ಪಾ. ಸೂ. ೩-೧-೭೩) ಎಂಬುದರಿಂದ ಶ್ನುವಿಕರಣ. ಉವಙಾದೇಶವನ್ನು ಬಾಧಿಸಿ **ಹುಶ್ನುವೋಃ ಸಾರ್ವಧಾತುಕೇ**—(ಪಾ. ಸೂ. ೬-೪-೮೭) ಎಂಬುದರಿಂದ ಯಣಾದೇಶ. ಹಿನ್ವಂತು ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಧಿಯೇ—ಸಾವೇಕಾಚಸ್ತೃತೀಯಾದಿಃ**—(ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಜಿಷೇ**—ಜಿ ಜಯೇ. ಧಾತು. ತುಮುನರ್ಥ ತೋರುವಾಗ **ತುಮರ್ಥೇ ಸೇಸೇನಸೇ**—(ಪಾ. ಸೂ. ೩-೪-೯) ಎಂಬುದರಿಂದ ಕ್ಸೇ ಪ್ರತ್ಯಯ. ಕಿತ್ತಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ. **ಆದೇಶಪ್ರತ್ಯಯಯೋಃ** ಎಂಬುದರಿಂದ ಪ್ರತ್ಯಯಕ್ಕೆ ಷತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೪ ॥

———:o:———

ಸಂಹಿತಾಪಾಠಃ

ಋಭುರ್ಭರಾಯ ಸಂ ಶಿಶಾತು ಸಾತಿಂ ಸಮರ್ಯಜಿದ್ವಾಜೋ
ಅಸ್ಮಾँ ಅವಿಷ್ಟು ।
ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ
ಪೃಥಿವೀ ಉತ ದ್ಯೌಃ ॥ ೫ ॥

ಪದಪಾಠಃ

ಋಭುಃ । ಭರಾಯ । ಸಂ । ಶಿಶಾತು । ಸಾತಿಂ । ಸಮರ್ಯ್ಯಽಜಿತ್ । ವಾಜಃ ।
ಅಸ್ಮಾನ್ । ಅವಿಷ್ಟು ।
ತತ್ । ನಃ । ಮಿತ್ರಃ । ವರುಣಃ । ಮಮಹಂತಾಂ । ಅದಿತಿಃ ।ಸಿಂಧುಃ। ಪೃಥಿವೀ ।
ಉತ । ದ್ಯೌಃ ॥ ೫ ॥

ಸಾಯಣಭಾಷ್ಯಂ

ಋಭುಃ ಪ್ರಥಮೋಽಸ್ಮಾಕಂ ಸಾತಿಂ ಸಂಭಜನೀಯಂ ಧನಂ ಭರಾಯ ಸಂಗ್ರಾಮಾರ್ಥಂ ಸಂ ಶಿ-ಶಾತು । ಸಮ್ಯಕ್ ತಿಕ್ಷ್ಣೀಕರೋತು । ಸಂಗ್ರಾಮೋಚಿತಂ ಧನಮಸ್ಮಭ್ಯಂ ಪ್ರಯಚ್ಛತ್ವಿತ್ಯರ್ಥಃ । ತಥಾ ಸಮರ್ಯಜಿತ್ । ಮರ್ಯಾ ಮನುಷ್ಯಾಃ । ತೈಃ ಸಹ ವರ್ತತ ಇತಿ ಸಮರ್ಯಃ ಸಂಗ್ರಾಮಃ । ತತ್ರ ಶತ್ರೂಣಾಂ ಜೇತಾ ವಾಜ ಏತತ್ಸಂಜ್ಞಸ್ತೃತೀಯಶ್ಚಾಸ್ಮಾನ್ ಸ್ತೋತೄನವಿಷ್ಟು । ಅವತು । ಸಂಗ್ರಾಮಾ-ದ್ರಕ್ಷತ್ವಿತ್ಯರ್ಥಃ । ಯದನೇನ ಸೂಕ್ತೇನ ಪ್ರಾರ್ಥಿತಮಸ್ಮದೀಯಂ ತನ್ಮಿತ್ರಾದಯೋ ಮಮಹಂತಾಂ । ಪೂಜಯಂತು ॥ ಶಿಶಾತು । ಶೋ ತನೂಕರಣೇ । ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ । ಆದೇಚ ಇತ್ಯಾತ್ವಂ । ದ್ವಿರ್ಭಾವಃ । ಹ್ರಸ್ವತ್ವೇ ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ಅವಿಷ್ಟು । ಅವತೇ-ರ್ಲೋಟಿ ಸಿಬ್ಬಹುಲಂ ಲೇಟೀತಿ ಬಹುಲಗ್ರಹಣಾತ್ಸಿಪ್ । ಇಡಾಗಮಃ । ಷತ್ವಷ್ಟುತ್ವೇ ॥

ಪ್ರತಿಪದಾರ್ಥ

**ಋಭುಃ**—ಋಭುವು । **ಸಾತಿಂ**—ಧನವನ್ನು । **ಭರಾಯ**—(ನಮ್ಮ) ಯುದ್ಧದ ನಿರ್ವಹಣಕ್ಕಾಗಿ । **ಸಂ ಶಿಶಾತು**—(ಹುರುಪನ್ನು ಹುಟ್ಟಿಸುವಂತೆ) ದಾನಮಾಡಲಿ । **ಸಮರ್ಯಜಿತ್**—ಯುದ್ಧದಲ್ಲಿ ಶತ್ರುವನ್ನು ಜಯಿಸತಕ್ಕ । **ವಾಜಃ**—ವಾಜನು । **ಅಸ್ಮಾನ್**—ಭಕ್ತರಾದ ನಮ್ಮನ್ನು । **ಅವಿಷ್ಟು**—ರಕ್ಷಿಸಲಿ । **ನಃ**—ನಮ್ಮ । **ತತ್**—ಈ ಪ್ರಾರ್ಥನೆಯನ್ನು । **ಮಿತ್ರಃ**— ಮಿತ್ರನೂ । **ವರುಣಃ**—ವರುಣನೂ । **ಅದಿತಿಃ**—ಅದಿತಿಯೂ । **ಸಿಂಧುಃ**—ಸಾಗರಾಧಿದೇವತೆಯೂ । **ಪೃಥಿವೀ**— ಪೃಥಿವಿಯೂ । **ಉತ** — ಮತ್ತು । **ದ್ಯೌಃ**— ದ್ಯುಲೋಕಾಧಿದೇವತೆಯೂ **ಮಮಹಂತಾಂ**— ಪೂಜ್ಯವಾದುದನ್ನಾಗಿ ಮಾಡಲಿ ।

॥ ಭಾವಾರ್ಥ ॥

ಸುಧನ್ವ ಪುತ್ರರಲ್ಲಿ ಮೊದಲನೆಯವನಾದ ಋಭುವು ನಮ್ಮ ಯುದ್ಧನಿರ್ವಹಣಕ್ಕಾಗಿ ಧನವನ್ನು ಒದಗಿಸಿ ಕೊಡಲಿ. ಮತ್ತು ಸುಧನ್ವ ಪುತ್ರರಲ್ಲಿ ಮೂರನೆಯವನೂ ಮತ್ತು ಶತ್ರುವನ್ನು ಯುದ್ಧದಲ್ಲಿ ಜಯಿಸುವವನೂ ಆದ ವಾಜನು ಭಕ್ತರಾದ ನಮ್ಮನ್ನು ರಕ್ಷಿಸಲಿ. ನಮ್ಮ ಈ ಪ್ರಾರ್ಥನೆಯನ್ನು ಮಿತ್ರನೂ, ವರುಣನೂ, ಅದಿತಿಯೂ, ಸಾಗರಾಧಿದೇವತೆಯೂ, ಪೃಥಿವಿಯೂ ಮತ್ತು ದ್ಯುಲೋಕಾಧಿದೇವತೆಯೂ ಸಹ ಪೂಜ್ಯವಾದುದನ್ನಾಗಿ ಮಾಡಿ ರಕ್ಷಿಸಲಿ.

## English Transnlation

May Ribhu supply us with wealth for war; may Vaja, victorious in battle, protect us, and may Mitra, Varuna and Aditi,— ocean, earth, and heaven, be propitious to this our prayer.

॥ ವಿಶೇಷವಿಷಯಗಳು ॥

**ಸಮರ್ಯ ಜಿತ್**— ಸಮರ್ಯ ಶಬ್ದವು ಸಂಗ್ರಾಮನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೯) ಯುದ್ಧವೆಂದರ್ಥ. **ಮರ್ಯಾಃ ಮನುಷ್ಯಾಃ । ತೈಃ ಸಹ ವರ್ತತೆ ಇತಿ ಸಮರ್ಯಃ ಸಂಗ್ರಾಮಃ** ಯಾವಾಗಲೂ ಯುದ್ಧದಲ್ಲಿ ಮಾನವರು ಗುಂಪುಕಟ್ಟಿಕೊಂಡು ಕೂಡಿರುವುದರಿಂದ **ಸಮರ್ಯ** ಎಂದಾಗಿದೆ **ಸಮರ್ಯಜಿತ್** ಎಂಬ ಜಯಾರ್ಥಕವಾದ ಶಬ್ದದೊಡನೆ ಸೇರಿರುವುದರಿಂದ ಸಮರ್ಯ ಶಬ್ದಕ್ಕೆ ಸಂಗ್ರಾಮವೆಂದರ್ಥ. ಆದರೆ ಕೇವಲ **ಸಮರ್ಯ** ಶಬ್ದವಿರುವಾಗ **ಯುದ್ಧ**ವೆಂಬ ಅರ್ಥವೇ ನಿಯತವಾಗಿರಬೇಕಾಗಿಲ್ಲ. **ಮರ್ಯ**ರೊಂದಿಗೆ (ಮನುಷ್ಯರೊಂದಿಗೆ) ಯುದ್ಧಮಾತ್ರವಲ್ಲ, ಕೂಡಿರುವುದು ಯಜ್ಞವೂ ಆಗಬಹುದು. ಉದಾಹರಣೆಗೆ—

**ಯೋ ವಾಂ ಯಜ್ಞೋ ನಾಸತ್ಯಾ ಹವಿಷ್ಮಾನ್ಕೃತಬ್ರಹ್ಮಾ ಸಮರ್ಯೋ ೩ ಭವಾತಿ ।**
(ಋ. ಸಂ. ೭-೭೦-೬)

ಎಂಬ ಋಕ್ಕಿನಲ್ಲಿ **ಋತ್ವಿಗ್ರೂಪೈರ್ಮರ್ತ್ಯೈಃ ಸಹಿತಃ ಯಜ್ಞಕರ್ತಾ ಯಜಮಾನಃ** ಎಂದು ಅರ್ಥ. ಆದರೆ ರೂಢಿಯಲ್ಲಿ **ಸಮರ್ಯ**ಶಬ್ದವು ಸಂಗ್ರಾಮಪರ್ಯಾಯವಾಗಿಯೇ ಉಪಯೋಗದಲ್ಲಿದೆ.

**ಸಂ ಶಿಶಾತು— ಅತ್ಯರ್ಥಂ ಸಂಸ್ಕರೋತು । ಸಮ್ಯಕ್ ತೀಕ್ಷ್ಣೀಕರೋತು ।** ನಮಗೆ ಚೈತನ್ಯವನ್ನು ಉತ್ಪಾದನೆಮಾಡಲಿ ಎಂದು ತಾತ್ಪರ್ಯ. **ತೀಕ್ಷ್ಣ, ಹರಿತ** ಎಂಬರ್ಥವನ್ನು ಕೊಡುವ ಸಂದರ್ಭದಲ್ಲಿ ಈ ಪದವನ್ನು ಪ್ರಯೋಗಿಸಿದೆ. ನಿರುಕ್ತಕಾರರು **ಮನ್ಯು** ಪದವನ್ನು ವಿವರಿಸುವಾಗ ಆ ಸಂದರ್ಭಕ್ಕುಚಿತವಾದ,

**ತ್ವಯಾ ಮನ್ಯೋ ಸರಥಮಾರುಜಂತೋ ಹರ್ಷಮಾಣಾಸೋ ಧೃಷಿತಾ ಮರುತ್ವಃ ।**
**ತಿಗ್ಮೇಷವ ಆಯುಧಾ ಸಂಶಿಶಾನಾ ಅಭಿ ಪ್ರ ಯಂತು ನರೋ ಅಗ್ನಿರೂಪಾಃ ।**
(ಋ. ಸಂ. ೧೦-೮೪-೧)

ಎಂಬ ಋಕ್ಕನ್ನು ಉದಹರಿಸಿ ಇಲ್ಲಿ **ಸಂಶಿಶಾನಾ** ಎಂಬ ಪದಕ್ಕೆ ತೀಕ್ಷ್ಣ, ಹರಿತ ಎಂಬರ್ಥವನ್ನು ತೋರಿಸಿದ್ದಾರೆ ಪ್ರಕೃತವಾದ ಋಕ್ಕಿನಲ್ಲಿ ಚೈತನ್ಯ, ಹುರುಪು, ಉತ್ಸಾಹ ಎಂಬರ್ಥವಾಗಿ ನಮಗೆ ಸಂಗ್ರಾಮಕ್ಕೆ ಸಹಾಯಕವಾದುದೂ ಉತ್ಸಾಹವನ್ನುಂಟುಮಾಡತಕ್ಕದ್ದೂ ಆದ ಧನಾದಿಗಳನ್ನು ಕೊಡಲಿ ಎಂದು ತಾತ್ಪರ್ಯ.

॥ ವ್ಯಾಕರಣಪ್ರಕ್ರಿಯಾ ॥

**ಋಭುಃ**— ಉರು ಭಾತಿ ಇತಿ ಋಭುಃ । ಭಾ ದೀಪ್ತೌ. ಧಾತು ಔಣಾದಿಕ ಕು ಪ್ರತ್ಯಯ. ಆತೋ ಲೋಪ ಇಟಿ ಚ— (ಪಾ. ಸೂ. ೬-೪-೬೪) ಎಂಬುದರಿಂದ ಆಕಾರಲೋಪ. ಉರು ಎಂಬುದಕ್ಕೆ ಋಭಾವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಶಿಶಾತು**—ಶೋ ತನೂಕರಣೇ. ಧಾತು. ಲೋಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ರತ್ಯಯ. **ಏರುಃ**—ಎಂಬುದರಿಂದ ಇಕಾರಕ್ಕೆ ಉತ್ವ. **ಬಹುಲಂ ಛಂದಸಿ**—ಎಂಬುದರಿಂದ ವಿಕರಣಕ್ಕೆ ಶ್ಲು ಆದೇಶ. **ಆದೇಚ ಉಪದೇಶೇಶಿತಿ**—(ಪಾ. ಸೂ. ೬-೧-೪೫) ಎಂಬುದರಿಂದ ಧಾತುವಿನ ಏಚಿಗೆ ಆತ್ವ. **ಶ್ಲೌ**—ಎಂಬುದರಿಂದ ಧಾತುವಿಗೆ ದ್ವಿತ್ವ. **ಹ್ರಸ್ವಃ**—(ಪಾ. ಸೂ. ೭-೪-೫೯) ಎಂಬುದರಿಂದ ಅಭ್ಯಾಸಕ್ಕೆ ಹ್ರಸ್ವ ಬಂದಾಗ—**ಬಹುಲಂ ಛಂದಸಿ**—(ಪಾ. ಸೂ. ೭-೪-೭೮) ಎಂಬುದರಿಂದ ಅದಕ್ಕೆ ಇತ್ವ. ಶಿಶಾತು ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಮರ್ಯಜಿತ್**—ಜಿ ಜಯೇ. ಧಾತು. **ಕ್ವಿಪ್ ಚ**—(ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ **ಹ್ರಸ್ವಸ್ಯ ಪಿತಿ ಕೃತಿ ತುಕ್**—(ಪಾ. ಸೂ. ೬-೧-೭೧) ಎಂಬುದರಿಂದ ಧಾತುವಿಗೆ ತುಕಾಗಮ. **ಗತಿಕಾರಕೋಪಪದಾತ್ ಕೃತ್**—(ಪಾ. ಸೂ- ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅವಿಷ್ಟು**—ಅವ ರಕ್ಷಣೇ. ಧಾತು. ಲೋಟ್ ಪ್ರಥಮಪುರುಷ ಏಕವಚನದಲ್ಲಿ ತಿಗೆ ತು ಆದೇಶ. **ಸಿಬ್ಬಹುಲಂ ಲೇಟಿ**—(ಪಾ. ಸೂ. ೩-೧-೩೪) ಎಂಬಲ್ಲಿ ಬಹುಲಗ್ರಹಣವಿರುವುದರಿಂದ ಲೋಟಿನಲ್ಲಿಯೂ ಸಿಪ್ ಬರುತ್ತದೆ. **ಆರ್ಧಧಾತುಕಸ್ಯೇಡ್ವಲಾದೇಃ**—ಸೂತ್ರದಿಂದ ಅದಕ್ಕೆ ಇಡಾಗಮ. ಇಣಿನ ಪರದಲ್ಲಿ ಬಂದುದರಿಂದ **ಆದೇಶಪ್ರತ್ಯಯಯೋಃ**—ಸೂತ್ರದಿಂದ ಸಕಾರಕ್ಕೆ ಷತ್ವ. ಷಕಾರವನ್ನು ನಿಮಿತ್ತೀಕರಿಸಿ ಪ್ರತ್ಯಯತಕಾರಕ್ಕೆ ಷ್ಟುತ್ವದಿಂದ ಟಕಾರಾದೇಶ. ತಿಙಂತನಿಘಾತಸ್ವರ ಬರುತ್ತದೆ. ‖ ೫ ‖

ನೂರ ಹನ್ನೊಂದನೆಯ ಸೂಕ್ತವು ಮುಗಿದುದು.

---

# ನೂರ ಹನ್ನೆರಡನೆಯ ಸೂಕ್ತವು

---

**ಈಳೆ ಇತಿ ಪಂಚವಿಂಶತ್ಯೃಚಂ ಸಪ್ತಮಂ ಸೂಕ್ತಂ । ಆಂಗಿರಸಸ್ಯ ಕುತ್ಸಸ್ಯಾರ್ಷಂ । ಚತುರ್ವಿಂಶೀಪಂಚವಿಂಶ್ಯೌ ತ್ರಿಷ್ಟುಭೌ ಶಿಷ್ಟಾಸ್ತ್ರಯೋವಿಂಶತಿರ್ಜಗತ್ಯಃ । ಆದ್ಯಃ ಪಾದೋ ದ್ಯಾವಾಪೃಥಿವ್ಯಃ । ದ್ವಿತೀಯ ಆಗ್ನೇಯಃ । ಶಿಷ್ಟಂ ಸೂಕ್ತಮಾಶ್ವಿನಂ । ತಥಾ ಚಾನುಕ್ರಾಂತಂ । ಈಳೇ ಪಂಚಾಧಿಕಾಶ್ವಿನಮಾದ್ಯೌ ಪಾದೌ ಲಿಂಗೋಕ್ತದೇವತಾವಂತ್ಯೇ ತ್ರಿಷ್ಟುಭಾವಿತಿ॥ ಪ್ರವರ್ಗ್ಯೇಽಭಿಷ್ಟವೇಽಪ್ಯೇತತ್ಸೂಕ್ತಂ । ಸೂತ್ರಿತಂ ಚ । ಗ್ರಾವಾಣೇವೇಳೇ ದ್ಯಾವಾಪೃಥಿವೀ ಇತಿ । ಆ. ೪-೬ । ಇತಿ ॥ ಪ್ರಾತರನುವಾಕೇ ಚಾಶ್ವಿನೇ ಕ್ರತೌ ಜಾಗತೇ ಛಂದಸ್ಯೇತತ್ಸೂಕ್ತಂ । ಸೂತ್ರಿತಂ ಚ। ಅಗನ್ಮ ಮಹಾತಾರಿಷ್ಮೇಳೇ ದ್ಯಾವಾಪೃಥಿವೀ ಇತಿ ಜಾಗತಂ । ಆ. ೪-೧೫ । ಇತಿ ॥ ಆಶ್ವಿನಶಸ್ತ್ರೇಽಪ್ಯೇತತ್ ಪ್ರಾತರನುವಾಕನ್ಯಾಯೇನ । ಆ. ೬-೫ । ಇತ್ಯತಿದೇಶಾತ್ । ತಥಾಪ್ತೋರ್ಯಾಮೇ ಸಂತಿ ಚತ್ವಾರ್ಯತಿರಿಕ್ತೋಕ್ಥಾನಿ । ತತ್ರಾಚ್ಛಾವಾಕಾತಿರಿಕ್ತೋಕ್ಥ**

**ಏತತ್ಸೂಕ್ತಂ ಯಸ್ಯ ಪಶವ ಇತಿ ಖಂಡೇ ಸೂತ್ರಿತಂ । ಈಳೇ ದ್ಯಾವಾಪೃಥಿವೀ ಉಭಾ ಉ ನೂನಂ ।** ಆ. ೯-೧೧ । ಇತಿ ॥

ಅನುವಾದವು—**ಈಳೇ ದ್ಯಾವಾ ಪೃಥಿವೀ** ಎಂಬ ಈ ಸೂಕ್ತವು ಹದಿನಾರನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಇಪ್ಪತ್ತೈದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಕುತ್ಸ ಆಂಗಿರಸನೆಂಬುವನು ಋಷಿಯು. ಈ ಸೂಕ್ತದ ಇಪ್ಪತ್ತನಾಲ್ಕು ಮತ್ತು ಇಪ್ಪತ್ತೈದನೆಯ ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು. ಉಳಿದ ಇಪ್ಪತ್ತು ಮೂರು ಋಕ್ಕುಗಳೂ ಜಗತೀಛಂದಸ್ಸಿನವು. ಮೊದಲನೆಯ ಋಕ್ಕಿನಲ್ಲಿ ಮೊದಲನೆಯ ಪಾದವು ದ್ಯಾವಾಪೃಥಿವೀ ದೇವತಾಕವು; ಎರಡನೆಯ ಪಾದವು ಅಗ್ನಿದೇವತಾಕವು. ಉಳಿದ ಸೂಕ್ತಭಾಗವೆಲ್ಲಾ ಅಶ್ವಿನೀದೇವತಾಕವು ಅನುಕ್ರಮಣಿಕೆಯಲ್ಲಿ—**ಈಳೇ ಪಂಚಾಧಿಕಾಶ್ವಿನಮಾದ್ಯೌ ಪಾದೌ ಲಿಂಗೋಕ್ತದೇವತಾವಂತ್ಯೇ ತ್ರಿಷ್ಟುಭಾವಿತಿ ।** ಎಂದು ಹೇಳಿರುವುದು. ಪ್ರವರ್ಗ್ಯವೆಂಬ ಯಾಗದಲ್ಲಿ ಅಭಿಷ್ಟವಸೂಕ್ತಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಗ್ರಾವಾಣೇವೇಳೇ ದ್ಯಾವಾಪೃಥಿವೀ ಇತಿ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೬) ಮತ್ತು ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಕ್ರತುಸಂಬಂಧವಾದ ಜಗತೀ ಛಂದಸ್ಸಿನ ಋಕ್ಕುಗಳ ಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಅಗನ್ಮ ಮಹಾತಾರಿಷ್ಮೇಳೇ ದ್ಯಾವಾಪೃಥಿವೀ ಇತಿ ಜಾಗತಂ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೧೫) ಮತ್ತು ಪ್ರಾತರನುವಾಕಮಂತ್ರಗಳಲ್ಲಿ ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತವನ್ನು ಉಪಯೋಗಿಸಬಹುದೆಂದು ಆಶ್ವಲಾಯನಶ್ರೌತಸೂತ್ರದಲ್ಲಿಯೇ (ಆ. ೬-೫) ಹೇಳಿರುವುದು. ಇವಲ್ಲದೆ ಅಪ್ತೋರ್ಯಾಮವೆಂಬ ಯಾಗದಲ್ಲಿ ನಾಲ್ಕು ಅತಿರಿಕ್ತೋಕ್ಥಗಳೆಂಬ ನಾಲ್ಕು ಸೂಕ್ತಗಳ ಪಠನವನ್ನು ಮಾಡುವರು. ಅವುಗಳಲ್ಲಿ ಈ ಸೂಕ್ತವನ್ನು ಅಚ್ಛಾವಾಕನೆಂಬ ಋತ್ವಿಜನು ಪಠಿಸಬೇಕಾಗಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಯಸ್ಯ ಪಶವ** ಎಂಬ ಖಂಡದಲ್ಲಿ **ಈಳೇ ದ್ಯಾವಾಪೃಥಿವೀ ಉಭಾ ಉ ನೂನಂ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೯-೧೧)

---

॥ ಓಂ ॥

## ಸೂಕ್ತ—೧೧೨

ಮಂಡಲ—೧ ॥ ಅನುವಾಕ—೧೬ ॥ ಸೂಕ್ತ— ೧೧೨ ॥

ಅಷ್ಟಕ—೧ ॥ ಅಧ್ಯಾಯ— ೭ ॥ ವರ್ಗ—೩೩, ೩೪, ೩೫, ೩೬, ೩೭ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ— ೨೫ ॥

॥ ಋಷಿಃ—ಕುತ್ಸ ಆಂಗಿರಸಃ ॥

॥ ದೇವತಾ— ೧ ನೇಋಕ್ಕಿನಲ್ಲಿ ೧ ಪಾದಕ್ಕೆ ದ್ಯಾವಾಪೃಥಿವ್ಯೌ। ಎರಡನೆಯಪಾದಕ್ಕೆ ಅಗ್ನಿಃ । ಮೂರು ಮತ್ತು ನಾಲ್ಕನೆಯಪಾದಗಳಿಗೆ ಅಶ್ವಿನೌ ॥ ೨-೨೫ ಅಶ್ವಿನೌ

॥ ಛಂದಃ—೧-೨೩ ಜಗತೀ । ೨೪ ೨೫ ತ್ರಿಷ್ಟುಪ್ ॥

ಸಂಹಿತಾಪಾಠಃ

ಈಳೇ ದ್ಯಾವಾಪೃಥಿವೀ ಪೂರ್ವಚಿತ್ತಯೇಽಗ್ನಿಂ ಘರ್ಮಂ ಸುರು-
ಚಂ ಯಾಮನ್ನಿಷ್ಟಯೇ ।
ಯಾಭಿರ್ಭರೇ ಕಾರಮಂಶಾಯ ಜಿನ್ವಥಸ್ತಾಭಿರೂ ಷು ಊತಿ-
ಭಿರಶ್ವಿನಾ ಗತಂ ॥ ೧ ॥

ಪದಪಾಠಃ

ಈಳೇ । ದ್ಯಾವಾಪೃಥಿವೀ ಇತಿ । ಪೂರ್ವಽಚಿತ್ತಯೇ । ಅಗ್ನಿಂ । ಘರ್ಮಂ ।
ಸುಽರುಚಂ । ಯಾಮನ್ । ಇಷ್ಟಯೇ ।
ಯಾಭಿಃ । ಭರೇ । ಕಾರಂ । ಅಂಶಾಯ । ಜಿನ್ವಥಃ । ತಾಭಿಃ । ಊಂ ಇತಿ । ಸು ।
ಊತಿಽಭಿಃ । ಅಶ್ವಿನಾ । ಆ । ಗತಂ ॥ ೧ ॥

ಸಾಯಣಭಾಷ್ಯಂ

ಅಹಂ ದ್ಯಾವಾಪೃಥಿವೀ ದ್ಯಾವಾಪೃಥಿವ್ಯಾವೀಳೇ । ಸ್ತೌಮಿ । ಕಿಮರ್ಥಂ । ಪೂರ್ವಚಿತ್ತಯೇ । ಪೂರ್ವಮೇವಾಶ್ವಿನೋಃ ಪ್ರಜ್ಞಾಪನಾಯ । ತೇ ಹ್ಯಶ್ವಿನೌ ಪ್ರತ್ಯಾಸನ್ನೇ । ಯದ್ವಾ । ದ್ಯಾವಾಪೃಥಿವೀ ಅಶ್ವಿನೌ ಸ್ತೌಮಿ ಪೂರ್ವಚಿತ್ತಯೇಽನ್ಯದೀಯಾತ್ಸ್ತೋತ್ರಾತ್ಪೂರ್ವಮೇವಾಸ್ಮದೀಯಸ್ಯ ಸ್ತೋತ್ರಸ್ಯ ಪ್ರಬೋಧನಾಯ । ತಥಾ ಚೋಕ್ತಂ । ತತ್ಕಾವಶ್ವಿನೌ ದ್ಯಾವಾಪೃಥಿವ್ಯಾವಿತ್ಯೇಕೇ । ನಿ. ೧೨-೧ । ಇತಿ । ಅಪಿ ಚ । ಯಾಮನ್ ಯಾಮನ್ಯಶ್ವಿನೋರಾಗಮನೇ ಸತೀಷ್ಟಯೇ ತದೀಯಯಾಗಾರ್ಥಮಾಹವನೀಯರೂಪೇಣ ಸ್ಥಾಪಿತಮಗ್ನಿಂ ಸ್ತೌಮೀತಿ ಶೇಷಃ । ಕೀದೃಶಮಗ್ನಿಂ । ಘರ್ಮಂ ಪ್ರವೃಂಜನೇನ ದೀಪ್ತಂ ಸುರುಚಂ ಅತ ಏವ ಶೋಭನಕಾಂತಿಯುಕ್ತಂ । ಹೇ ಅಶ್ವಿನೌ ಭರೇ । ಸಂಗ್ರಾಮನಾಮೈತತ್ । ಸಂಗ್ರಾಮೇಽಂಶಾಯ ಯುಷ್ಮದೀಯಭಾಗಾಯ ಜಯಪ್ರಾಪ್ತ್ಯರ್ಥಂ ಯಾಭಿರೂತಿಭಿಃ ಪಾಲನೈಃ ಸಹಾಗತ್ಯ ಕಾರಂ । ಕಾರಶಬ್ದಃ ಶಂಖವಾಚೀತ್ಯಭಿಯುಕ್ತಾಃ ಸಂಗಿರಂತೇ । ತೇನ ಹ್ಯಭಿಯುಕ್ತಾಃ ಸಂಗಿರಂತೇ । ಕಾರಂ ಶಬ್ದಕಾರಿಣಂ ಶಂಖಂ ಜಿನ್ವಥಃ ಮುಖೇನಾಪೂರಯಥಃ । ತಾಭಿಸ್ತಾದೃಶೈರೂತಿಭಿಃ ಪಾಲನೈಃ ಸಹ । ಉ

ಇತಿ ಸಮುಚ್ಚಯೇ । ಅಸ್ಮಾನಪಿ ಸುಷ್ಠು ಗತಂ। ಆಗಚ್ಛತಂ॥ ಈಳೇ। ಈಡ ಸ್ತುತೌ। ಉತ್ತಮೈಕವಚನಮಿಟ್ । ಅದಾದಿತ್ವಾಚ್ಛಪೋ ಲುಕ್ । ಅನುದಾತ್ತೇತ್ತ್ವಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ದ್ಯಾವಾಪೃಥಿವೀ। ದ್ಯೌಶ್ಚ ಪೃಥಿವೀ ಚ। ದಿವೋ ದ್ಯಾವೇತಿ ದ್ಯಾವಾದೇಶ ಆದ್ಯುದಾತ್ತೋ ನಿಪಾತಿತಃ। ಪೃಥಿವೀಶಬ್ದೋ ಙೀಷಂತೋಽನ್ತೋದಾತ್ತಃ । ದೇವತಾದ್ವಂದ್ವೇ ಚೇತ್ಯುಭಯಪದಪ್ರಕೃತಿಸ್ವರತ್ವಂ । ಅಪೃಥಿವೀತಿ ಪರ್ಯುದಾಸಾನ್ನೋತ್ತರಪದೇಽನುದಾತ್ತಾದಾವಿತಿ ನಿಷೇಧಾಭಾವಃ । ವಾ ಛಂದಸೀತಿ ಪೂರ್ವಸವರ್ಣದೀರ್ಘತ್ವಂ । ಪೂರ್ವಚಿತ್ತಯೇ । ಚಿತೀ ಸಂಜ್ಞಾನೇ । ಅಸ್ಮಾದಂತರ್ಭಾವಿತಣ್ಯರ್ಥಾದ್ಭಾವೇ ಕ್ತಿನ್ । ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ । ಸುರುಚಂ । ರುಚ ದೀಪ್ತಾವಭಿಪ್ರೀತೌ ಚ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಶೋಭನಾ ರುಗ್ಯಸ್ಯ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಯಾಮನ್ । ಯಾ ಪ್ರಾಪಣೇ । ಆತೋ ಮನಿನ್ನಿತಿ ಕೃತ್ಯಲ್ಯುಟೋ ಬಹುಲಮಿತಿ ಬಹುಲವಚನಾದ್ಭಾವೇ ಮನಿನ್ । ಕಾರಂ । ಕ್ರಿಯತೇಽನೇನೇತಿ ಕಾರಃ । ಕರಣೇ ಘಞ್ । ಕರ್ಷಾತ್ವತ ಇತ್ಯಂತೋದಾತ್ತತ್ವಂ । ಜಿನ್ವಥಃ । ಜಿವಿ ಪ್ರೀಣನಾರ್ಥಃ । ಅತ್ರ ಪ್ರೀಣನಹೇತುಭೂತಮಾಪೂರಣಂ ಲಕ್ಷ್ಯತೇ । ಧನೇನಾಪೂರಿತೋ ಹಿ ಪುರುಷಃ ಪ್ರೀತೋ ಭವತಿ । ಇದಿತ್ತ್ವಾನ್ನುಮ್ । ಭೌವಾದಿಕಃ । ಶಪಃ ಪಿತ್ತ್ವಾದನುದಾತ್ತತ್ವಂ । ತಿಙೋಽದುಪದೇಶಾಲ್ಲಸಾರ್ವಧಾತುಕಸ್ವರೇಣ ಧಾತುಸ್ವರಃ ಶಿಷ್ಯತೇ । ಯದ್ವೃತ್ತಾನ್ನಿತ್ಯಮಿತಿ ನಿಘಾತಪ್ರತಿಷೇಧಃ । ತತ್ರ ಹಿ ವ್ಯವಹಿತೇಽಪಿ ಕಾರ್ಯಮಿಷ್ಯತ ಇತ್ಯುಕ್ತಂ । ಕಾ. ೮-೧-೬೬ । ಊ ಷು । ಇಕಃ ಸುಞೀತಿ ದೀರ್ಘತ್ವಂ । ಸುಞಃ ಇತಿ ಷತ್ವಂ । ಈಷಾಅಕ್ಷಾದಿತ್ವಾತ್ಸುಞಃ ಉಕಾರಸ್ಯ ಪ್ರಕೃತಿಭಾವಃ । ಊತಿಭಿಃ । ಅವತೇರ್ಭಾವೇ ಕ್ತಿನ್ । ಜ್ವರತ್ವರೇತ್ಯಾದಿನಾ ವಕಾರಸ್ಯೋಪಧಾಯಾಶ್ಚ ಊಠ್ । ಊತಿಯೂತೀತ್ಯಾದಿನಾ ನಿಪಾತನಾತ್ ಕ್ತಿನ ಉದಾತ್ತತ್ವಂ । ಗತಂ । ಗಮೇರ್ಲೋಟಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಅನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ ॥

ಪ್ರತಿಪದಾರ್ಥ

**ಪೂರ್ವಚಿತ್ತಯೇ**—(ಅಶ್ವಿನೀ ದೇವತೆಗಳ ಆಗಮನಕ್ಕೆ) ಪೂರ್ವಭಾವಿಯಾದ ತಿಳಿವಳಿಕೆಯನ್ನು ಕೊಡುವುದಕ್ಕಾಗಿ । **ದ್ಯಾವಾಪೃಥಿವೀ**—(ಅವರ ಸಮೀಪದಲ್ಲಿರುವ) ದ್ಯಾವಾಪೃಥಿವಿಗಳನ್ನು । **ಈಳೇ**—ಸ್ತುತಿಸುತ್ತೇನೆ । [**ಅಥವಾ ಪೂರ್ವಚಿತ್ತಯೇ**—(ಇತರ ಸ್ತೋತ್ರಗಳಿಗಿಂತಲೂ) ಮೊದಲೇ ನನ್ನ ಸ್ತೋತ್ರವು ಅವಗಾಹನೆಗೆ ಬರಲೆಂದು । **ದ್ಯಾವಾಪೃಥಿವೀ**—ಅಶ್ವಿನೀ ದೇವತೆಗಳನ್ನು । **ಈಳೇ**—ಸ್ತುತಿಸುತ್ತೇನೆ] **ಯಾಮರ್ನ**—(ಅವರ) ಆಗಮನ ಕಾಲದಲ್ಲಿ । **ಇಷ್ಟಯೇ**—(ಅವರನ್ನು ಉದ್ದೇಶಿಸಿದ) ಯಾಗಾರ್ಥವಾಗಿ । **ಘರ್ಮಂ**—(ಪ್ರವರ್ಗ್ಯಕಾಲದಲ್ಲಿ) ದೀಪ್ತನಾದವನೂ । **ಸುರುಚಂ**—(ಆದುದರಿಂದಲೇ) ಮನೋಹರವಾದ ಕಾಂತಿಯುಕ್ತನಾದವನೂ ಆದ । **ಅಗ್ನಿಂ**—ಅಗ್ನಿಯನ್ನು (ಸ್ತುತಿಸುತ್ತೇನೆ) । **ಅಶ್ವಿನಾ**—ಎಲೈ ಅಶ್ವಿನೀ ದೇವತೆಗಳೇ । **ಭರೇ**—ಯುದ್ಧದಲ್ಲಿ । **ಅಂಶಾಯ**—ನಿಮ್ಮ ಭಾಗದ ಜಯಲಾಭಕ್ಕಾಗಿ । **ಯಾಭಿಃ**—ಯಾವ ರಕ್ಷಣೆಗಳಿಂದ (ಬಂದು) । **ಕಾರಂ**—ಶಬ್ದಮಾಡತಕ್ಕ ಶಂಖವನ್ನು । **ಜಿನ್ವಥಃ**—ಊದಿ ಶಬ್ದಮಾಡುತ್ತೀರೋ । **ತಾಭಿಃ**—ಅಂತಹ । **ಊತಿಭಿಃ ಉ**—ರಕ್ಷಣೆಗಳೊಂದಿಗೆಲ್ಲಾ ಕೂಡಿಕೊಂಡು । **ಸು ಆಗತಂ**—(ನಮ್ಮಲ್ಲಿಗೂ) ಆದರದಿಂದ ಅತಿಶಯವಾಗಿ ಬನ್ನಿರಿ.

॥ ಭಾವಾರ್ಥ ॥

ಅಶ್ವಿನೀ ದೇವತೆಗಳ ಆಗಮನಕ್ಕೆ ಪೂರ್ವಭಾವಿಯಾದ ತಿಳಿವಳಿಕೆಯನ್ನು ಅವರಿಗೆ ಕೊಡುವುದಕ್ಕಾಗಿ ಅವರ ಸಮೀಪದಲ್ಲಿರುವ ದ್ಯಾವಾಪೃಥಿವಿಗಳನ್ನು ಸ್ತುತಿಸುತ್ತೇನೆ. ಅವರ ಆಗಮನಕಾಲದಲ್ಲಿ ಅವರನ್ನು ಉದ್ದೇಶಿಸಿದ ಯಾಗಾ

ರ್ಥವಾಗಿ ದೀಪ್ತವಾದುದೂ, ಮನೋಹರವಾದ ಕಾಂತಿಯಿಂದ ಕೂಡಿದುದೂ ಆದ ಅಗ್ನಿಯನ್ನು ಸ್ತುತಿಸುತ್ತೇನೆ. ಎಲೈ ಅಶ್ವಿನೀ ದೇವತೆಗಳೇ, ಯಾವ ರಕ್ಷಣೆಗಳಿಂದ ಕೂಡಿಕೊಂಡು ಬಂದು ಯುದ್ಧದಲ್ಲಿ ನಿಮ್ಮ ಭಾಗದ ಜಯಕ್ಕಾಗಿ ಶಂಖವನ್ನು ಊದಿ ಶಬ್ದಮಾಡುತ್ತೀರೋ ಅಂತಹ ರಕ್ಷಣೆಗಳೊಂದಿಗೆಲ್ಲಾ ಕೂಡಿಕೊಂಡು ನಮ್ಮಲ್ಲಿಗೂ ಆದರದಿಂದ ಬನ್ನಿರಿ.

## English Translation

I praise Heaven and Earth for preliminary meditation, (prior to the coming of the Aswins); I praise the hot and shining Agni upon their approach, (as perparatory) to their worship : with those appliances with which you sound the conch shell in battle for your share (in the booty), with those aids, Aswins, come willingly hither·

### ವಿಶೇಷವಿಷಯಗಳು

**ಈಳೇ ದ್ಯಾವಾಪೃಥಿವೀ ಪೂರ್ವಚಿತ್ತಯೇ**— ಈ ವಾಕ್ಯಕ್ಕೆ ಸಾಯಣರು ಎರಡು ವಿಧವಾದ ಅರ್ಥವನ್ನು ಮಾಡಿರುತ್ತಾರೆ. ಮೊದಲನೆಯದಾಗಿ, **ಪೂರ್ವಚಿತ್ತಯೇ**— ಅಶ್ವಿನೀ ದೇವತೆಗಳ ಪೂರ್ವಭಾವಿಯಾದ ತಿಳಿವಳಿಕೆಯನ್ನು ಕೊಡುವುದಕ್ಕಾಗಿ **ಧ್ಯಾವಾಪೃಥಿವೀ ಈಳೇ** ದ್ಯಾವಾಪೃಥಿವಿಗಳನ್ನು ಸ್ತುತಿಸುತ್ತೇನೆ ಎಂದೂ, ಎರಡನೆಯದಾಗಿ ; **ಪೂರ್ವಚಿತ್ತಯೇ** ಇತರ ಸ್ತೋತ್ರಗಳಿಗಿಂತಲೂ ಮೊದಲೇ ನನ್ನ ಸ್ತೋತ್ರವು ಅವಗಾಹನೆಗೆ ಬರಲೆಂದು **ದ್ಯಾವಾಪೃಥಿವೀ**—ಅಶ್ವಿನೀದೇವತೆಗಳನ್ನು. **ಈಳೇ**—ಸ್ತುತಿಸುತ್ತೇನೆ ಎಂದೂ ಅರ್ಥಮಾಡಿರುವಾಗ ಎರಡನೆಯ ಅರ್ಥದಲ್ಲಿ ಅಶ್ವಿನೀದೇವತೆಗಳಿಗೂ ದ್ಯಾವಾಪೃಥಿವಿಗಳಿಗೂ ತಾದಾತ್ಮ್ಯವನ್ನು ತೋರಿಸಿದ್ದಾರೆ. ಇದು ನಿರುಕ್ತಕಾರರು ಅಶ್ವಿನೀದೇವತೆಗಳ ವಿಷಯದಲ್ಲಿ ಹೇಳಿರುವ ಮತಗಳಲ್ಲಿ ಒಂದಾಗಿದೆ, **ತತ್ಕಾವಶ್ವಿನೌ ದ್ಯಾವಾಪೃಥಿವ್ಯಾವಿತ್ಯೇಕೇ ।** (ನಿ. ೧೨-೧) ಎಂದು ಹೇಳಿರುವ ಮತವನ್ನು ಈ ಎರಡನೇ ಅರ್ಥವು ಸಮರ್ಥಿಸುತ್ತದೆ. ಇದಕ್ಕೆ ಶ್ರುತ್ಯಂತರದ ಆಧಾರವೂ ಸಹಾಯಕವಾಗಿದೆ. ಉದಾಹರಣೆಗೆ ಶತಪಥ ಬ್ರಾಹ್ಮಣದಲ್ಲಿ—

**ದ್ಯಾವಾಪೃಥಿವೀ ಪ್ರತ್ಯಕ್ಷಮಶ್ವಿನಾವಿಮೇ ಹೀದಂ ಸರ್ವಮಾಶ್ನುವಾತಾಂ ।**
(ಶ. ಬ್ರಾ. ೪-೧-೫-೧೬)

ಎಂದು ಹೇಳಿರುವಂತೆ, ಸಕಲವನ್ನೂ ವ್ಯಾಪಿಸಿರುವುದರಿಂದ ದ್ಯಾವಾಪೃಥಿವಿಗಳೆರಡೂ ಸಹ ಪ್ರತ್ಯಕ್ಷವಾದ ಅಶ್ವಿನೀ ದೇವತೆಗಳು ಎನ್ನುವ ತಾದಾತ್ಮ್ಯಬೋಧಕವಾದ ವಾಕ್ಯವು ಈ ಮತವನ್ನು ಸಾಧಿಸುತ್ತದೆ. ಈ ವಿಧವಾದ ವ್ಯಾಪಕವಾದ ಧರ್ಮವನ್ನೇ ನಿರುಕ್ತಕಾರರೂ ಸಹ **ಅಶ್ವಿನೌ ಯದ್ವ್ಯಶ್ನುವಾತೇ ಸರ್ವಂ ರಸೇನಾನ್ಯೋ ಜ್ಯೋತಿಷಾನ್ಯಃ ।** ರಸದಿಂದಲೂ ತೇಜಸ್ಸಿನಿಂದಲೂ ವ್ಯಾಪಿಸುವ ಧರ್ಮವುಳ್ಳವರು ಎಂಬ ವಾಕ್ಯದಿಂದ ವಿವರಿಸಿದ್ದಾರೆ. ಆದುದರಿಂದ ಸಾಯಣರು ಹೇಳಿರುವ ಎರಡನೇ ಅರ್ಥವೂ ಸಹ ಸಮಂಜಸವಾಗಿರುತ್ತದೆ.

**ಯಾಮನ್— ಅಶ್ವಿನೋರಾಗಮನೇ ಸತಿ ।** ಅಶ್ವಿನೀದೇವತೆಗಳ ಆಗಮನನಿಮಿತ್ತವಾಗಿ ಅಥವಾ ಆ ಕಾಲದಲ್ಲಿ ಎಂದು ಸಾಯಣರೂ, **ಯಾಂತ್ಯಸ್ಮಿನ್ದೇವತಾ ದ್ವಿಜಾತಯಶ್ಚ ಇತಿ ಯಾಮೋ ಯಜ್ಞಃ ।** ದೇವತೆಗಳೂ ದ್ವಿಜಾತಿಮಾನವರೂ ಇಲ್ಲಿ ಬಂದು ಸೇರುತ್ತಾರಾದ್ದರಿಂದ ಯಾಮ ಶಬ್ದಕ್ಕೆ ಯಜ್ಞವೆಂದರ್ಥವೆಂಬುದಾಗಿ ಸ್ಕಂದ

ಸ್ವಾಮಿಗಳೂ ವಿವರಿಸಿದ್ದಾರೆ. **ಯೂ-ಪ್ರಾಪಣೇ** ಎಂಬ ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ **ಯಾಮನ್** ಶಬ್ದಕ್ಕೆ ಸನ್ನಿವೇಶಕ್ಕೆ ಅನುಗುಣವಾದ ಅರ್ಥವಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಭಾಷ್ಯಕಾರರ ಪ್ರವೃತ್ತಿಗನುಗುಣವಾಗಿ ಅರ್ಥಭೇದವೂ ಸಾಧ್ಯವಾಗುತ್ತದೆ. ಉದಾಹರಣೆಗೆ

ಅಜೋಹವೀನ್ನಾಸತ್ಯಾ ಕರಾ ವಾಂ ಮಹೇ ಯಾಮನ್ಪುರುಭುಜಾ ಪುರಂಧಿಃ ।

(ಋ. ಸಂ. ೧-೧೧೬-೧೩)

ಎಂಬ ಋಕ್ಕಿನಲ್ಲಿರುವ **ಯಾಮನ್** ಶಬ್ದಕ್ಕೆ ಸಾಯಣರು **ಯಾತಿ ಗಚ್ಛತೀತಿ ಯಾಮಾ ಸ್ತೋತ್ರಂ** ಎಂದೂ; ಸ್ಕಂದರು **ಯಾಂತಿ ಯೋದ್ಧಾರೋ ಯಸ್ಮಿನ್ ಸ ಯಾಮಾಃ ಸಂಗ್ರಾಮ ಇಹಾಭಿಪ್ರೇತಃ ।** ಇಲ್ಲಿ ಯುದ್ಧವೆಂದಭಿಪ್ರಾಯವೆಂದೂ; ಮತ್ತು

ಇಂದ್ರಂ ನಮಸ್ಯನ್ನುಪಮೇಭಿರರ್ಕೈರ್ಯಃ ಸ್ತೋತೃಭ್ಯೋ ಹವ್ಯೋ ಅಸ್ತಿ ಯಾಮನ್ ।

(ಋ. ಸಂ. ೧-೩೩-೨)

ಎಂಬ ಋಕ್ಕಿನಲ್ಲಿರುವ **ಯಾಮನ್** ಶಬ್ದಕ್ಕೆ ಸಾಯಣರು **ಸಂಗ್ರಾಮ**ವೆಂದೂ, ಸ್ಕಂದಸ್ವಾಮಿಗಳು **ಯಜ್ಞ**ವೆಂದೂ ಅರ್ಥಮಾಡಿರುವರು. ಇದರಂತೆಯೇ ಈ ಪದಕ್ಕೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅರ್ಥಭೇದವಿರುತ್ತದೆ.

**ಯಾಭಿರ್ಭರೇ .... .... .... .... .... ತಾಭಿರೂತಿಭಿಃ**— ನೀವು ಯಾವ ನಿಮ್ಮ ಶಂಖಧ್ವನಿಯಿಂದಲೂ ರಕ್ಷಣೆಗಳೊಡನೆಯೂ ಕೂಡಿಕೊಂಡು ಬಂದು ಹಿಂದೆ ಸಹಾಯಮಾಡಿದಿರೋ ಈಗಲೂ ಸಹ ಅಂತಹ ರಕ್ಷಣಾಯುತವಾಗಿ ನಮ್ಮಲ್ಲಿಗೂ ಬನ್ನಿರಿ ಎಂದು ಹಿಂದೆ ಅವರು ಭಕ್ತರಿಗೆ ಸಹಾಯಮಾಡಿದ ಸನ್ನಿವೇಶವನ್ನು ಸೂಚಿಸಿದೆ. ಸ್ಕಂದಸ್ವಾಮಿಗಳು ಆ ಸನ್ನಿವೇಶದ ವೃತ್ತಾಂತವನ್ನು ವಿವರಿಸಿದ್ದಾರೆ. **ಅತ್ರೇತಿಹಾಸಮಾಚಕ್ಷತೇ । ಅಂಶನಾಮಾನಮಾದಿತ್ಯಾನಾಮನ್ಯತಮಂ ಪರ್ಯಟಂತಮಸುರಾ ಜಗೃಹುಃ। ಸೋಽಶ್ವಿನಾವಾಜುಹಾವ । ತಮಶ್ವಿನೌ ಶಂಖಮಾಪೂರಯಂತಾವಾಜಗ್ಮತುಃ । ತಸ್ಮಾಚ್ಛಂಖಶಬ್ದಾದೇವ ಬಿಭ್ಯತೋಽಸುರಾ ನೇಶುರಿತಿ । ತದೇತದಿಹೋಚ್ಯತೇ ।** ಹಿಂದೆ ಆದಿತ್ಯರಲ್ಲಿ ಒಬ್ಬನಾದ **ಅಂಶನು** ಸಂಚಾರಮಾಡುತ್ತಿರುವಾಗ ಅವನನ್ನು ಅಸುರರು ಹಿಡಿದುಕೊಂಡರು. ಆಗ ಅವನು ಸಹಾಯಕ್ಕಾಗಿ ಅಶ್ವಿನೀದೇವತೆಗಳನ್ನು ಕರೆದನು. ಅವರು ತಮ್ಮ ಶಂಖವನ್ನೂದುತ್ತಲೂ ಅದರಿಂದ ಅಸುರರಿಗೆ ಭೀತಿಯನ್ನುಂಟುಮಾಡುವ ಶಬ್ದವನ್ನು ಮಾಡುತ್ತಲೂ ಬಂದಾಗ ಆ ಶಬ್ದದಿಂದಲೇ ಭೀತರಾದ ಅಸುರರೆಲ್ಲಾ ನಾಶವಾದರು. ಆ ಸನ್ನಿವೇಶವನ್ನಿಲ್ಲಿ ಸೂಚಿಸಿದೆಯೆಂದಿದ್ದಾರೆ. ಸಾಯಣರು **ಅಂಶ** ಶಬ್ದಕ್ಕೆ ಭಾಗವೆಂದರ್ಥಮಾಡಿ ಯುದ್ಧಕಾಲಗಳಲ್ಲಿ ನಿಮ್ಮ ಭಾಗಕ್ಕೆ ಸೇರಬೇಕಾದ ಜಯಲಾಭಕ್ಕಾಗಿ ಯಾವ ಶಂಖಧ್ವನಿಗಳಿಂದಲೂ ರಕ್ಷಣೆಗಳಿಂದಲೂ ಬರುತ್ತೀರೋ ಅದೇ ರಕ್ಷಣೆಗಳೊಡನೆ ನಮ್ಮಲ್ಲಿಗೂ ಬನ್ನಿ ಎಂದು ಪ್ರಾರ್ಥಿಸಿದೆಯೆಂದು ವಿವರಿಸಿದ್ದಾರೆ.

**ಕಾರಂ—ಕಾರಶಬ್ದಃ ಶಂಖನಾದೇತ್ಯಭಿಯುಕ್ತಾಃ ಸಂಗಿರಂತೇ । ಕಾರಂ ಶಬ್ದಕಾರಿಣಂ ಶಂಖಂ ।** ಕಾರಶಬ್ದವು ಶಂಖನಾದವೆಂದು ಕೆಲವರು ಹೇಳುತ್ತಾರೆ. ಅದ್ದರಿಂದ ಶಬ್ದವನ್ನುಂಟುಮಾಡತಕ್ಕ ಶಂಖವೆಂದರ್ಥ. ಈ ಅರ್ಥವನ್ನೇ ಸಮರ್ಥಿಸಲು ಸ್ಕಂದಸ್ವಾಮಿಗಳು—

ಅಗಸ್ತ್ಯೋ ನರಾಂ ನೃಷು ಪ್ರಶಸ್ತಃ ಕಾರಾಧುನೀವ ಚಿತಯತ್ಸಹಸ್ರೈಃ ।

(ಋ. ಸಂ. [illegible])

ಎಂಬ ಋಕ್ಕನ್ನು ಉದಹರಿಸಿ ಅಲ್ಲಿ **ಕಾರ** ಶಬ್ದಕ್ಕೆ **ಶಂಖ**ವೆಂಬರ್ಥವಾಗುವಂತೆಯೇ ಇಲ್ಲಿಯೂ ಸಹ ಅದೇ ಅರ್ಥವೆಂದು ತಿಳಿಸಿದ್ದಾರೆ. ಆದರೆ **ಕಾರಂ** ಎಂಬ ಪದವು ಇರುವೆಡೆಗಳಲ್ಲೆಲ್ಲಾ **ಶಂಖ**ವಾಚಿಯಾಗುವುದಿಲ್ಲ. ಈ ಪದವು **ಕೃ** ಧಾತುವಿನಿಂದ ನಿಷ್ಪನ್ನವಾಗಿ **ಶಬ್ದವನ್ನುಂಟುಮಾಡುವ ಸಾಧನ**ವೆಂದು ಒಟ್ಟಿನಲ್ಲಿ ಅರ್ಥ. ಕೆಲವೆಡೆಗಳಲ್ಲಿ **ಶಂಖ**ವಾಚಿಯಾಗಬಹುದು, ಉಳಿದೆಡೆಗಳಲ್ಲಿ ಬೇರೆ ಅರ್ಥವನ್ನು ಕೊಡಬಹುದು. ಉದಾಹರಣೆಗೆ—

**ಚಕರ್ಥ ಕಾರಮೇಭ್ಯಃ ಪೃತನಾಸು ಪ್ರವಂತವೇ ।**
(ಋ. ಸಂ. ೧-೧೩೧-೫)

ಎಂಬ ಋಕ್ಕಿನಲ್ಲಿ **ಕಾರಂ** ಎಂಬ ಪದಕ್ಕೆ ಕೇವಲ **ಸಿಂಹನಾದಲಕ್ಷಣಂ ಶಬ್ದಂ** ಸಿಂಹನಾದರೂಪವಾದ ಶಬ್ದವೆಂದರ್ಥವಾಗುತ್ತದೆ. ಹೀಗೆ ನಿಯತವಾಗಿ **ಶಂಖವಾಚಿಯಲ್ಲ**ವೆಂದು ತೋರಿಸುವುದಕ್ಕೆ ಸ್ಕಂದಸ್ವಾಮಿಗಳೂ ಸಹ **ಅಥವಾ ಕ್ರಿಯತ ಇತಿ ಕಾರಶಬ್ದ ಇಹೋಚ್ಯತೇ ।** **ಕಾರ** ಶಬ್ದವು ಇಲ್ಲಿ ಕೇವಲ **ಮಾಡುವುದು** ಎಂದರ್ಥವನ್ನು ಮಾತ್ರ ಕೊಡುತ್ತದೆ । **ಸಾಮರ್ಥ್ಯಾತ್ ಶಂಖಶಬ್ದ**ವೆಂದು ಅರ್ಥವೆಂದೂ ಸಹ ವಿವರಿಸಿದ್ದಾರೆ,

**ಪಶ್ಯಂತಾಸೋ ಅಭಿ ಕಾರಮರ್ಚನ್ವಿದಂತ ಜ್ಯೋತಿಶ್ಚಕೃಪಂತ ಧೀಭಿಃ ।**
(ಋ. ಸಂ. ೪-೧-೧೪)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಕೇವಲ **ಕರ್ತಾರಂ** ಎಂದರ್ಥ. ಪ್ರಕೃತವಾದ ಋಕ್ಕಿನಲ್ಲಿ ಸನ್ನಿವೇಶಕ್ಕನುಗುಣವಾಗಿ ಶಬ್ದಕಾರಿಯಾದ ಶಂಖವಾಚಿಯಾಗುತ್ತದೆ.

**ಜಿನ್ವಥಃ—ಪ್ರೀಣಿತವಂತೌ ಆಪೂರಿತವಂತೌ ಸ್ಥಃ ।** ಶಬ್ದದಿಂದ ತುಂಬಿದಿರೋ, ಎಂದರೆ ಶಬ್ದವನ್ನುಂಟುಮಾಡಿದಿರೋ ಎಂದರ್ಥ. ಅಥವಾ **ಜಿನ್ವತಿ** ಶಬ್ದವು **ಗತಿಕರ್ಮ** ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೯) ಇಲ್ಲಿಯೂ ಸಹ, **ಯೈರ್ಗಮನೈರಂಶಂ ಪ್ರತಿ ಗಂತವಂತೌ ಸ್ಥಃ ತಾಭಿಃ** ..........ಯಾವ ರೀತಿ ಅಂಶನ ಸಹಾಯಾರ್ಥವಾಗಿ ಹೋದಿರೋ ಅದೇ ರೀತಿ ಎಂದು **ಜಿನ್ವತಿ** ಶಬ್ದಕ್ಕೆ ಸ್ಕಂದಸ್ವಾಮಿಗಳು ಗಮನಾರ್ಥವನ್ನೂ ಹೇಳಿದ್ದಾರೆ. ಎರಡರಲ್ಲಿ ಯಾವ ಅರ್ಥವನ್ನು ಮಾಡಿದರೂ ಸಹ **ಜಿನ್ವತಿ**ಯೆಂಬ ಪದವು ಮಾಡುವ ಕೆಲಸದಲ್ಲಿ ಪ್ರೀತ್ಯತಿಶಯವನ್ನು ತೋರಿಸುತ್ತದೆ. **ಜಿನ್ವತಿಃ ಪ್ರೀತಿಕರ್ಮಾ,** (ನಿ. ೬-೨೨) ಎಂದು ನಿರುಕ್ತಕಾರರು ಈ ಪದದಿಂದ ಸೂಚಿತವಾಗುವ ಪ್ರೀತ್ಯತಿಶಯವನ್ನು ತೋರಿಸಲು,

**ಭೂಮಿಂ ಪರ್ಜನ್ಯಾ ಜಿನ್ವಂತಿ ದಿವಂ ಜಿನ್ವಂತ್ಯಗ್ನಯಃ ।**
(ಋ. ಸಂ. ೧-೧೬೪-೫೧)

ಎಂಬ ಋಕ್ಕನ್ನು ಉದಹರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಶಂಖಶಬ್ದವನ್ನುಂಟುಮಾಡುವುದರಿಂದಾಗಲಿ ಅಥವಾ ತಮ್ಮ ಗಮನದಿಂದಾಗಲಿ ತಮ್ಮ ಪ್ರೀತಿಯನ್ನು ತೋರಿಸಿ ಭಕ್ತರಿಗೆ ಚೈತನ್ಯದಾಯಿಗಳಾದರೆಂದು ತಾತ್ಪರ್ಯ. ಹಿಂದೆ ಮಾಡಿದಂತೆ ಈಗಲೂ ಸಹ ಅದೇ ರಕ್ಷಣೆಗಳೊಡನೆ ನಮ್ಮಲ್ಲಿಗೂ ಬರಬೇಕೆಂದು ಪ್ರಾರ್ಥಿಸಿದೆ.

**ಘರ್ಮಂ**—ಪ್ರಕಾಶಮಾನನಾದ ಅಥವಾ ಜ್ವಲಿತನಾದ ಅಗ್ನಿಯನ್ನು ಎಂದು ಇಲ್ಲಿ ಅರ್ಥಮಾಡಿದೆ. **ಘರ್ಮ**ಶಬ್ದವು **ಅಹರ್ನಾಮ**ಗಳಲ್ಲಿಯೂ (ನಿ. ೨-೨೦) : **ಯಜ್ಞ**ನಾಮಗಳಲ್ಲಿಯೂ (ನಿ. ೩-೧೯) ಪಠಿತವಾಗಿದೆ. ಇಲ್ಲಿ ಪ್ರವರ್ಗ್ಯಕಾಲದಲ್ಲಿ ದೀಪ್ತನಾದ ಎಂದು ಅಗ್ನಿಗೆ ವಿಶೇಷಣವಾಗಿದೆ.

## ವ್ಯಾಕರಣಪ್ರಕ್ರಿಯಾ

**ಈಳೇ**—ಈಡ ಸ್ತುತೌ. ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ ಇಟ್ ಪ್ರತ್ಯಯ. **ಟಿತ ಆತ್ಮನೇಪದಾನಾಂ**—(ಪಾ. ಸೂ. ೩-೪-೭೯) ಎಂಬುದರಿಂದ ಅದಕ್ಕೆ ಏತ್ವ. **ಅದಿಪ್ರಭೃತಿಭ್ಯಃ ಶಪಃ**—(ಪಾ. ಸೂ. ೨-೪-೭೨) ಎಂಬುದರಿಂದ ಪ್ರಾಪ್ತವಾದ ಶಪಿಗೆ ಲುಕ್. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುವು ಅನುದಾತ್ತೇತ್ತಾದುದರಿಂದ **ತಾಸ್ಯನುದಾತ್ತೇತ್**—(ಪಾ ಸೂ. ೬-೧-೧೮೬) ಎಂಬುದ ರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ದ್ಯಾವಾಪೃಥಿವೀ**—ದ್ಯೌಶ್ಚ ಪೃಥಿವೀ ಚ ದ್ಯಾವಾಪೃಥಿವೀ. ಸಮಾಸದಲ್ಲಿ **ದಿವೋ ದ್ಯಾವಾ**—(ಪಾ. ಸೂ. ೬-೩-೨೯) ಎಂಬುದರಿಂದ ದ್ಯಾವಾದೇಶವು ಆದ್ಯುದಾತ್ತವಾಗಿ ನಿಪಾತಿತವಾಗಿದೆ. ಪೃಥಿವೀ ಶಬ್ದವು ಶಾರ್ಙ್ಗರವಾದಿ ಯಲ್ಲಿ ಸೇರಿರುವುದರಿಂದ ಙೀಷಂತವಾಗಿ ಅಂತೋದಾತ್ತವಾಗುತ್ತದೆ. **ದೇವತಾದ್ವಂದ್ವೇ ಚ**—(ಪಾ. ಸೂ. ೬-೨-೧೪೧) ಎಂಬುದರಿಂದ ಸಮಾಸದಲ್ಲಿ ಉಭಯಪದಪ್ರಕೃತಿಸ್ವರ ಬರುತ್ತದೆ. **ನೋದಾತ್ತೇ**—ಸೂತ್ರದಲ್ಲಿ ಅಪೃಥಿವೀ ಎಂದು ಪರ್ಯುದಾಸಮಾಡಿರುವುದರಿಂದ ಅದರಿಂದ ಪ್ರತಿಷೇಧ ಬರುವುದಿಲ್ಲ. ದ್ವಿವಚನ ಔ ಪರವಾದಾಗ **ವಾ ಛಂದಸಿ**—ಎಂಬುದರಿಂದ ಪೂರ್ವಸವರ್ಣದೀರ್ಘ ಬರುತ್ತದೆ.

**ಪೂರ್ವಚಿತ್ತಯೇ**—ಚಿತೀ ಸಂಜ್ಞಾನೇ. ಧಾತು. ಅಂತರ್ಭಾವಿತಣ್ಯರ್ಥಕವಾದ ಧಾತು. **ಸ್ತ್ರಿಯಾಂ ಕ್ತಿನ್**-(ಪಾ ಸೂ. ೩-೩-೯೪) ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. **ಮರುದ್ವೃಧಾನೀಂ ಛಂದಸ್ಯುಪಸಂಖ್ಯಾನಮ್**-(ಪಾ. ಸೂ. ೬-೨-೧೦೬-೨) ಎಂಬಲ್ಲಿ ಸೇರಿರುವುದರಿಂದ ಕೃದುತ್ತರಪದಪ್ರಕೃತಿಸ್ವರ ಬಾಧಿತ ವಾಗಿ ಪೂರ್ವಪದಾಂತೋದಾತ್ತಸ್ವರ ಬರುತ್ತದೆ.

**ಸುರುಚಮ್**—ರುಚ ದೀಪ್ತಾವಭಿಪ್ರೀತ್ಯಾಂ ಚ ಧಾತು. **ಸಂಪದಾದಿಭ್ಯಃ ಕ್ವಿಪ್**—(ವಾ. ೨-೩೩) ಎಂಬುದರಿಂದ ಭಾವಾರ್ಥದಲ್ಲಿ ಕ್ವಿಪ್. ಶೋಭನಾ ರುಕ್ ಯಸ್ಯ ಸುರುಕ್. **ನಞ್ಸುಭ್ಯಾಮ್**-(ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಯಾಮನ್**—ಯಾ ಪ್ರಾಪಣೇ. ಧಾತು. **ಆತೋ ಮನಿನ್**-(ಪಾ ಸೂ. ೩-೨-೭೪) ಎಂಬುದರಿಂದ ಮನಿನ್ ಪ್ರತ್ಯಯವು **ಕೃತ್ಯಲ್ಯುಟೋ ಬಹುಲಮ್**-(ಪಾ ಸೂ. ೩-೩-೧೧೩) ಎಂಬಲ್ಲಿ ಬಹುಲಗ್ರಹಣಸಾಮರ್ಥ್ಯ ದಿಂದ ಭಾವಾರ್ಥದಲ್ಲಿ ಬರುತ್ತದೆ. ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**-ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಕಾರಮ್**—ಕ್ರಿಯತೇ ಅನೇನ ಇತಿ ಕಾರಃ ಕರಣಾರ್ಥದಲ್ಲಿ ಕೃಞ್ ಧಾತುವಿಗೆ ಘಞ್ ಪ್ರತ್ಯಯ. **ಅಚೋಞ್ಣಿತಿ**—ಎಂಬುದರಿಂದ ಧಾತುವಿನ ಅಚಿಗೆ ವೃದ್ಧಿ. **ಕರ್ಷಾತ್ವತಃ**—(ಪಾ. ಸೂ. ೬-೧-೧೫೯) ಸೂತ್ರ ದಿಂದ ಅಂತೋದಾತ್ತಸ್ವರ ಬರುತ್ತದೆ.

**ಜಿನ್ವಥಃ**—ಜಿವಿ ಪ್ರೀಣನೇ. ಧಾತು. ಇಲ್ಲಿ ಪ್ರೀತಿಗೆ ಹೇತುವಾದ ಆಪೂರಣವು (ತುಂಬಿಸುವಿಕೆ) ಲಕ್ಷಣಾದಿಂದ ಬೋಧಿತವಾಗುತ್ತದೆ. ಧನದಿಂದ ತುಂಬಿಸಲ್ಪಟ್ಟ ಮನುಷ್ಯನು ಲೋಕದಲ್ಲಿ ಪ್ರೀತನಾಗುತ್ತಾನೆ. **ಇದಿತೋ ನುಮ್ ಧಾತೋಃ**—ಎಂಬುದರಿಂದ ನುಮಾಗಮ. ಲಟ್ ಮಧ್ಯಮಪುರುಷದ್ವಿವಚನದಲ್ಲಿ ಥಸ್

ಪ್ರತ್ಯಯ. ಶಪ್ ವಿಕರಣ. ಜಿನ್ವಥಃ ಎಂದು ರೂಪವಾಗುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಪಿತ್ತಾದುದರಿಂದ ಅನುದಾತ್ತ. ಅದುಪದೇಶದ ಪರದಲ್ಲಿ ಲಸಾರ್ವಧಾತುಕವು ಬಂದುದರಿಂದ (ಥಸ್) **ತಾಸ್ಯನುದಾತ್ತೇತ್**–(ಪಾ. ಸೂ. ೬–೧–೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಯದ್ಯಪಿ ಯದ್ಯೋಗವೆಂಬುದು ಅನ್ವಯಧಾನದಿಂದಿದ್ದರೆ ನಿಷೇಧ ಬರುವುದು. ಆದರೂ ಆ ಸೂತ್ರದಲ್ಲಿ–(ಪಾ. ಸೂ. ೮–೧-೬೬) ವ್ಯವಹಿತವಾದರೂ ನಿಷೇಧ ಬರುವುದೆಂದು ಪ್ರತಿಪಾದಿಸಿರುವುದರಿಂದ ಇಲ್ಲಿ ನಿಷೇಧ ಬರುತ್ತದೆ.

**ಊಷು**—**ಇಕಃ ಸುಞಿ**—(ಪಾ. ಸೂ. ೬-೩-೧೩೪) ಎಂಬುದರಿಂದ ಉಞಿಗೆ ದೀರ್ಘ ಬರುತ್ತದೆ **ಸುಞಃ**-(ಪಾ. ಸೂ. ೮-೩-೧೦೭) ಎಂಬುದರಿಂದ ಸುವಿಗೆ ಷತ್ವ. ಸು+ಊತಿ ಎಂದಿರುವಾಗ ಈಷಾ ಅಕ್ಷಾದಿಯಲ್ಲಿ ಸೇರಿರುವುದರಿಂದ ಸಂಧಿ ಬರುವುದಿಲ್ಲ. (ಪ್ರಕೃತಿಭಾವ ಬರುತ್ತದೆ)

**ಊತಿಭಿಃ**—ಅವ ರಕ್ಷಣೇ. ಧಾತು. ಭಾವಾರ್ಥದಲ್ಲಿ **ಸ್ತ್ರಿಯಾಂ ಕ್ತಿನ್**-(ಪಾ. ಸೂ. ೩-೩-೯೪) ಎಂಬುದರಿಂದ ಕ್ತಿನ್ ಪ್ರತ್ಯಯ. **ಜ್ವರತ್ವರಸ್ರಿವ್ಯವಿ**–(ಪಾ. ಸೂ. ೬-೪-೨೦) ಎಂಬುದರಿಂದ ಉಪಧಾಕ್ಕೂ (ಅಕಾರ) ವಕಾರಕ್ಕೂ ಊಠಾದೇಶ ಊತಿ ಎಂದು ರೂಪವಾಗುತ್ತದೆ. **ಊತಿಯೂತಿ**—(ಪಾ. ಸೂ. ೩–೩–೩೭) ಎಂಬುದರಿಂದ ನಿಪಾತನಮಾಡಿರುವುದರಿಂದ ಕ್ತಿನಿಗೆ ಉದಾತ್ತಸ್ವರ ಬರುತ್ತದೆ.

**ಗತಮ್**—ಗಮ್ಲೃ ಗತೌ ಧಾತು. ಲೋಟ್ ಮಧ್ಯಮಪುರುಷದ್ವಿವಚನದಲ್ಲಿ ಲಜ್ವದ್ಭಾವವಿರುವುದರಿಂದ **ತಸ್ಥಸ್ಥ**—(ಪಾ. ಸೂ. ೩-೪-೧೦೧) ಎಂಬುದರಿಂದ ತಮಾದೇಶ. **ಬಹುಲಂ ಛಂದಸಿ**–ಎಂಬುದರಿಂದ ವಿಕರಣಕ್ಕೆ ಲುಕ್. ಪ್ರತ್ಯಯಕ್ಕೆ **ಸಾರ್ವಧಾತುಕಮಪಿತ್**- ಎಂಬುದರಿಂದ ಙಿದ್ವದ್ಭಾವವಿರುವುದರಿಂದ **ಅನುದಾತ್ತೋಪದೇಶವನತಿತನೋ**—(ಪಾ. ಸೂ. ೬-೪-೩೭); ಎಂಬುದರಿಂದ ಧಾತುವಿನ ಅನುನಾಸಿಕವಾದ ಮಕಾರಕ್ಕೆ ಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧ ॥

ಸಂಹಿತಾಪಾಠಃ

ಯುವೋರ್ದಾನಾಯ ಸುಭರಾ ಅಸಶ್ಚತೋ ರಥಮಾ ತಸ್ಥುರ್ವ-

ಚಸಂ ನ ಮಂತವೇ ।

ಯಾಭಿರ್ಧಿಯೋಽವಥಃ ಕರ್ಮನ್ನಿಷ್ಟಯೇ ತಾಭಿರೂ ಷು

ಊತಿಭಿರಶ್ವಿನಾ ಗತಂ ॥ ೨ ॥

ಪದಪಾಠಃ

ಯುವೋಃ । ದಾನಾಯ । ಸುಽಭರಾಃ । ಅಸಶ್ಚತಃ । ರಥಂ । ಆ । ತಸ್ಥುಃ ।
ವಚಸಂ । ನ । ಮಂತವೇ ।
ಯಾಭಿಃ । ಧಿಯಃ । ಅವಥಃ । ಕರ್ಮನ್ । ಇಷ್ಟಯೇ । ತಾಭಿಃ । ಊಂ ಇತಿ ।
ಸು । ಊತಿಽಭಿಃ । ಅಶ್ವಿನಾ । ಆ । ಗತಂ ॥ ೨ ॥

॥ ಸಾಯಣಭಾಷ್ಯಂ ॥

ಸುಭರಾಃ ಶೋಭನಸ್ತೋತ್ರಭರಣಾ ಅಸಶ್ಚತೋಽನ್ಯತ್ರಾನಾಸಕ್ತಾಃ ಸ್ತೋತಾರೋ ಹೇ ಅಶ್ವಿನೌ ಯುವೋರ್ಯುವಯೋ ರಥಮಾ ತಸ್ಥುಃ । ಆತಿಷ್ಠಂತಿ । ಪ್ರಾಪ್ನುವಂತಿ । ಕಿಮರ್ಥಂ । ದಾನಾಯ ಯುಷ್ಮತ್ಕರ್ತೃಕದಾನಾರ್ಥಂ । ಧನಲಾಭಾಯೇತ್ಯರ್ಥಃ । ತತ್ರ ದೃಷ್ಟಾಂತಃ । ವಚಸಂ ನ । ಯಥಾ ನ್ಯಾಯೋಪೇತೇನ ವಚಸಾ ವಾಕ್ಯೇನ ಯುಕ್ತಂ ವಿಪಶ್ಚಿತಂ ಮಂತವೇ ಬುಭುತ್ಸಿತಾರ್ಥಪ್ರತಿಪತ್ತಯೇ ಸ್ತೋತಾರಃ ಪ್ರಾಪ್ನುವಂತಿ ತದ್ವತ್ । ಅಪಿ ಚ । ಕರ್ಮನ್ ಕರ್ಮಣೀಷ್ಟಯೇ ಯಾಗಾರ್ಥಂ ಪ್ರವೃತ್ತಾನ್ಧಿಯೋ ಧ್ಯಾತೄನ್ವಿಶಿಷ್ಟಜ್ಞಾನೋಪೇತಾನ್ಯಾಭಿರೂತಿಭಿಃ ಪಾಲನೈರವಥಃ ಯುವಾಂ ರಕ್ಷಥಃ । ತಾಭಿರಿತ್ಯಾದಿ ಪೂರ್ವವತ್ ॥ ವಚಸಂ । ಅರ್ಶಆದಿತ್ವಾನ್ಮತ್ವರ್ಥೀಯೋಽಚ್ । ಮಂತವೇ । ಮನ ಜ್ಞಾನೇ । ಕಮಿಮನಿಜನೀತ್ಯಾದಿನಾ ತುಪ್ರತ್ಯಯಃ । ಧಿಯಃ । ಧ್ಯಾಯಂತೀತಿ ಧಿಯಃ ಸ್ತೋತಾರಃ । ಧ್ಯೈ ಚಿಂತಾಯಾಂ । ಕ್ವಿಪ್ವಚೀತಿ ಕ್ವಿಪ್ । ಚಶಬ್ದೇನ ದೃಶಿಗ್ರಹಣಾನುಕರ್ಷಣಾತ್ಸಂಪ್ರಸಾರಣಂ । ಕರ್ಮನ್ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ । ನ ಙಿಸಂಬುದ್ಧ್ಯೋರಿತಿ ನಲೋಪಪ್ರತಿಷೇಧಃ ॥

ಪ್ರತಿಪದಾರ್ಥ

(ಎಲೈ ಅಶ್ವಿನಿ ದೇವತೆಗಳಿರ) ಮಂತವೇ—ತಮಗೆ ಬೇಕಾದ ವಿಷಯದಲ್ಲಿ ತಿಳುವಳಿಕೆಯನ್ನು ಹೊಂದುವದಕ್ಕಾಗಿ । ವಚಸಂ ನ—ವಿವೇಕಪೂರಿತವಾದ ಬೋಧನಾ ವಾಕ್ಯದಿಂದ ಕೂಡಿದ ಪ್ರಾಜ್ಞನನ್ನು ಶಿಷ್ಯರು ಸುತ್ತುವರಿದು ನಿಲ್ಲುವಂತೆ । ಸುಭರಾಃ—ಶ್ರೇಷ್ಠವಾದ ಸ್ತೋತ್ರಗಳುಳ್ಳವರೂ । ಅಸಶ್ಚತಃ—ಬೇರೆಕಡೆಯ ಗಮನವಿಲ್ಲದೆ ನಿಮ್ಮಲ್ಲೇ ಶ್ರದ್ಧೆಯನ್ನು ಇಟ್ಟಿರುವವರೂ ಆದ ಭಕ್ತರು । ಯುವೋಃ -- ನಿಮ್ಮ । ರಥಂ — ರಥವನ್ನು । ದಾನಾಯ—ನೀವು ಅನುಗ್ರಹಿಸುವ ಧನವನ್ನು ಪಡೆಯುವುದಕ್ಕಾಗಿ । ಆ ತಸ್ಥುಃ—ಸುತ್ತುವರಿದು ನಿಂತಿದ್ದಾರೆ । ಅಶ್ವಿನಾ—ಎಲೈ ಅಶ್ವಿನೀ ದೇವತೆಗಳೇ। ಕರ್ಮನ್—ಯಜ್ಞಕರ್ಮದಲ್ಲಿ । ಇಷ್ಟಯೇ—ಯಾಗಾರ್ಥವಾಗಿ (ಪ್ರವೃತ್ತರಾದವರೂ) । ಧಿಯಃ—ವಿಶಿಷ್ಟಜ್ಞಾನದಿಂದ ಕೂಡಿದವರೂ ಆದ ಭಕ್ತರನ್ನು । ಯಾಭಿಃ ಊತಿಭಿಃ—ಯಾವ ರಕ್ಷಣೆಗಳಿಂದ। ಅವಥಃ—ರಕ್ಷಿಸುತ್ತೀರೋ । ತಾಭಿಃ ಊತಿಭಿಃ ಉ—ಆ ರಕ್ಷಣೆಗಳೊಡನೆಯೇ ಕೂಡಿ ।—(ನಮ್ಮ ಬಳಿಗೆ) । ಸು ಆಗತಂ—ಆದರದಿಂದ ಬನ್ನಿರಿ

### ಭಾವಾರ್ಥ

ಎಲೈ ಅಶ್ವಿನೀ ದೇವತೆಗಳೇ, ತಮಗೆ ಬೇಕಾದ ವಿಷಯದಲ್ಲಿ ತಿಳುವಳಿಕೆಯನ್ನು ಹೊಂದುವುದಕ್ಕಾಗಿ ವಿವೇಕ ಪೂರಿತವಾದ ಬೋಧನಾ ವಾಕ್ಯದಿಂದ ಕೂಡಿದ ಪ್ರಾಜ್ಞನನ್ನು ಶಿಷ್ಯರು ಸುತ್ತುವರಿದು ನಿಲ್ಲುವಂತೆ ಶ್ರೇಷ್ಠವಾದ ಸ್ತೋತ್ರಗಳುಳ್ಳವರೂ, ಬೇರೆಕಡೆಯ ಗಮನವಿಲ್ಲದೇ ನಿಮ್ಮಲ್ಲೇ ಶ್ರದ್ಧೆಯನ್ನು ಇಟ್ಟಿರುವವರೂ ಆದ ನಿಮ್ಮ ಭಕ್ತರು ನೀವು ಅನುಗ್ರಹಿಸುವ ಧನವನ್ನು ಪಡೆಯುವುದಕ್ಕಾಗಿ ನಿಮ್ಮ ರಥವನ್ನು ಸುತ್ತುವರಿದು ನಿಂತಿದ್ದಾರೆ. ಯಜ್ಞ ಕರ್ಮದಲ್ಲಿ ಯಾಗಾರ್ಥವಾಗಿ ಪ್ರವೃತ್ತರಾದವರೂ, ವಿಶಿಷ್ಟಜ್ಞಾನದಿಂದ ಕೂಡಿದವರೂ ಆದ ಭಕ್ತರನ್ನು ಯಾವ ಯಾವ ರಕ್ಷಣೆಗಳಿಂದ ನೀವು ರಕ್ಷಿಸುತ್ತೀರೋ ಆ ರಕ್ಷಣೆಗಳೊಂದಿಗೆಲ್ಲಾ ಕೂಡಿಕೊಂಡು ನಮ್ಮಲ್ಲಿಗೂ ಆದರದಿಂದ ಬನ್ನಿರಿ.

### English Translation

Earnest and exclusive adorers stand, Aswins, round your car, (to benefit) by your bounty, as (disciples listen) to the words (of a teacher) for instruction: with those aids with which you defend the pious who are engaged in acts of worship, come Aswins willingly hither.

### ॥ ವಿಶೇಷವಿಷಯಗಳು

**ಅಸಶ್ಚತಃ ಆ ತಸ್ಥುಃ**— **ಅನ್ಯತ್ರಾನಾಸಕ್ತಾಃ ಸ್ತೋತಾರಃ ಆತಿಷ್ಠಂತಿ ಪ್ರಾಪ್ನುವಂತಿ** । ಬೇರೆಕಡೆ ಗಮನವಿಲ್ಲದೇ ನಿಮ್ಮಲ್ಲೇ ಶ್ರದ್ಧೆಯನ್ನಿಟ್ಟಿರುವ ಭಕ್ತರು ನಿಮ್ಮ ರಥವನ್ನು ಸಮೀಪಿಸಿ ಸುತ್ತುವರಿದು ನಿಂತಿದ್ದಾರೆ ಎಂದು ಸಾಯಣರೂ, **ಅಸಂಗಚ್ಛಮಾನಾಃ ಅಸಂಯುಕ್ತಾಃ ಸ್ತುತಯಃ ರಥಂ ಆತಿಷ್ಠಂತಿ** । ನಿಮ್ಮನ್ನು ಉದ್ದೇಶಿಸಿದ ಸ್ತುತಿಗಳು (ಬೇರೆಬೇರೆಯಾಗಿ) ಸರ್ವದಾ ನಿಮ್ಮ ರಥವನ್ನು ಸುತ್ತುವರಿದು ನಿಂತಿವೆಯೆಂದು ಸ್ಕಂದಸ್ವಾಮಿಗಳೂ ವಿವರಿಸಿದ್ದಾರೆ. ಈ ಎರಡು ವಿಧವಾದ ಅರ್ಥಗಳಿಗೂ ಬಹಳ ವ್ಯತ್ಯಾಸವಿದೆ. ಮೊದಲನೆಯ ಅರ್ಥದಂತೆ, **ಸುಭರಾಃ ಅಸಶ್ಚತಃ**—ಶ್ರೇಷ್ಠವಾದ ಸ್ತೋತ್ರಗಳನ್ನು ನಿರ್ಮಿಸಿ ನಿಮ್ಮನ್ನು ಸ್ತುತಿಸಲು ಸಿದ್ಧವಾಗಿರುವ ಭಕ್ತರು ಎಂದೂ, ಎರಡನೆಯ ಅರ್ಥದಂತೆ **ಸುಭರಾಃ**—**ಯುಷ್ಮದ್ಗುಣೈಃ ಸಂಪೂರ್ಣಾಃ** ನಿಮ್ಮ ಕಲ್ಯಾಣಗುಣಗಳಿಂದ ಪೂರ್ಣವಾದವೂ ಮತ್ತು ನಿಮ್ಮನ್ನುದ್ದೇಶಿಸಿದವೂ ಆದ ಸ್ತುತಿಗಳು ಎಂದೂ **ಸುಭರಾಃ** ಎಂಬ ವಿಶೇಷಣದ ಅರ್ಥ. ಇಷ್ಟೇ ಅಲ್ಲದೆ **ವಚಸಂ ನ** ಎಂಬ ಉಪಮಾಬೋಧಕವಾದ ಪದಕ್ಕೂ ಸಹ ಅರ್ಥವ್ಯತ್ಯಾಸವಿದೆ. ಸಾಯಣರ ವಿವರಣೆಯಂತೆ, **ವಚಸಂ ನ ಯಥಾ ನ್ಯಾಯೋಪೇತೇನ ವಚಸಾ ವಾಕ್ಯೇನ ಯುಕ್ತಂ ವಿಪಶ್ಚಿತಂ, ಮಂತವೇ**— **ಬುಬುತ್ಸಿತಾರ್ಥಪ್ರತಿಪತ್ತಯೇ ಸ್ತೋತಾರಃ ಪ್ರಾಪ್ನುವಂತಿ ತದ್ವತ್ ಯುವೋಃ ಸ್ತೋತಾರಃ ರಥಂ ಆತಸ್ಥುಃ** । ವಿವೇಕ ಪೂರಿತವಾದ ಬೋಧನವಾಕ್ಯದಿಂದ ಕೂಡಿದ ಪ್ರಾಜ್ಞನನ್ನು ಶಿಷ್ಯರು ತಮಗೆ ಬೇಕಾದ ವಿಷಯದಲ್ಲಿ ತಿಳುವಳಿಕೆಯನ್ನು ಹೊಂದುವುದಕ್ಕಾಗಿ ಸುತ್ತುವರಿದು ನಿಲ್ಲುವಂತೆ ನಿಮ್ಮ ಸ್ತೋತೃಗಳು ನಿಮ್ಮ ರಥವನ್ನು ಸುತ್ತುವರಿದು ನಿಂತಿದ್ದಾರೆ ಎಂದಿದೆ. ವಚಸಂ ನ ಎನ್ನುವುದಕ್ಕೆ ಸ್ಕಂದಸ್ವಾಮಿಗಳು **ವಾಚ್ಯಮಿವಾರ್ಥಂ ಶಬ್ದಃ । ಮಂತವೇ ಯುವಾಂ ಸ್ತೋತುಂ ಯಥಾ ವಾಚ್ಯಮರ್ಥಂ ಶಬ್ದಃ ಸರ್ವ ಆತಿಷ್ಠತಿ ಏವಂ ಯುಷ್ಮತ್ಸ್ತುತಯಃ** ಶಬ್ದಾರ್ಥಗಳಿಗೆ ಅವಿನಾಭಾವವಾದ ಸಂಬಂಧವಿದ್ದು ವಾಚ್ಯಾರ್ಥವನ್ನು ಯಾವಾಗಲೂ ಶಬ್ದವು ಅನವರತವಾಗಿಯೂ ಮತ್ತು ನಿಯತವಾಗಿಯೂ ಸುತ್ತುವರಿದು ನಿಂತಿರುವೋ ಅದರಂತೆ ಎಂದು ವಿವರಿಸಿದ್ದಾರೆ.

**ಮಂತವೇ** ಎನ್ನುವ **ತುಮರ್ಥಬೋಧಕವಾದ** ಪದವನ್ನು ಸಾಯಣರು ಪ್ರಾಜ್ಞನ ಶಿಷ್ಯರಪರವಾಗಿ ಅನ್ವಯಿಸಿ **ಬುಭುತ್ಸಿತಾರ್ಥಪ್ರತಿಪತ್ತಯೇ** | ಇಷ್ಟಾರ್ಥದ ತಿಳಿವಳಿಕೆಯನ್ನು ಹೊಂದಲು ಎಂದೂ, ಸ್ಕಂದ ಸ್ವಾಮಿಗಳು **ಅಶ್ವಿನೀ ದೇವತೆಗಳ** ಪರವಾಗಿ ಅನ್ವಯಿಸಿ **ಯುವಾಂ ಸ್ತೋತುಂ** | ನಿಮ್ಮನ್ನು ಸ್ತುತಿಸುವುದಕ್ಕೆ ಎಂದೂ ಅರ್ಥಮಾಡಿದ್ದಾರೆ. ಒಟ್ಟಿನಲ್ಲಿ ಸ್ಕಂದರ ವಿವರಣೆಯಂತೆ ಶಬ್ದಾರ್ಥಗಳಿಗೆ ಶಾಶ್ವತವಾದ ಸಂಬಂಧವಿರು ವಂತೆ ನಿಮ್ಮ ಸ್ತೋತೃಗಳ ಸ್ತುತಿಗಳಿಗೂ ನಿಮ್ಮ ರಥಕ್ಕೂ ಶಾಶ್ವತವಾದ ಸಂಬಂಧವಿದೆಯೆಂದರ್ಥ ಎಂದರೆ ನಿಮ್ಮ ರಥವನ್ನು ಸುತ್ತುವರಿದು ನಿಮ್ಮ ಸ್ತೋತೃಗಳು ನಿಮ್ಮನ್ನು ಸರ್ವದಾ ಸ್ತುತಿಸುತ್ತಾರೆಂದು ತಾತ್ಪರ್ಯ.

**ರಥಂ**—ಅಶ್ವಿನೀ ದೇವತೆಗಳ ರಥವು ಅಲೌಕಿಕವಾದ ರಚನೆಯಿಂದಲೂ ಸೌಂದರ್ಯದಿಂದಲೂ ಕೂಡಿರು ವುದಾಗಿ ಅನೇಕಕಡೆ ವರ್ಣಿತವಾಗಿದೆ.

**ಆ ನೋ ಯಾತಂ ದಿವೋ ಅಚ್ಛಾ ಪೃಥಿವ್ಯಾ ಹಿರಣ್ಯಯೇನ ಸುವೃತಾ ರಥೇನ |**
(ಋ. ಸಂ. ೪-೪೪-೫)

**ಸಹಸ್ರಕೇತುಂ ವನಿನಂ ಶತದ್ವಸುಂ ಶ್ರುಷ್ಟೀವಾನಂ ವರಿವೋಧಾಮಭಿ ಪ್ರಯಃ |**
(ಋ. ಸಂ. ೧-೧೧೯-೧)

**ತ್ರಿವಂಧುರೇಣ ತ್ರಿವೃತಾ ರಥೇನ ತ್ರಿಚಕ್ರೇಣ ಸುವೃತಾ ಯಾತಮರ್ವಾಕ್ |**
(ಋ. ಸಂ. ೧-೧೧೮-೨)

ಇತ್ಯಾದ್ಯನೇಕ ಋಕ್ಕುಗಳಲ್ಲಿ, ಹಿರಣ್ಯನಿರ್ಮಿತವಾದುದೂ, ಸಹಸ್ರಕೇತುವುಳ್ಳದ್ದೂ, ತ್ರಿವಂಧುರದಿಂದಲೂ ತ್ರಿಚಕ್ರ ದಿಂದಲೂ ಅಲಂಕೃತವಾದುದೂ, ಇನ್ನೂ ನಾನಾ ವಿಧವಾದ ವೈಶಿಷ್ಟ್ಯದಿಂದಲೂ ಕೂಡಿದ ರಥವನ್ನು ಹೊಂದಿರುವುದ ರಿಂದ ಅಶ್ವಿನೀ ದೇವತೆಗಳ ಆಕರ್ಷಕವಾದ ರಥವನ್ನು ಸುತ್ತುವರಿದು ಸ್ತೋತೃಗಳು ಅವರನ್ನು ಸ್ತುತಿಸುತ್ತಾರೆಂದು ಭಾವವು.

**ಧಿಯಃ ಅವಥಃ**—**ಧ್ಯಾಯಂತಿ ಇತಿ ಧಿಯಃ ಸ್ತೋತಾರಃ ತಾನ್ | ವಿಶಿಷ್ಟಜ್ಞಾನೋಪೇತಾನ್ ಧ್ಯಾತೄನ್ ರಕ್ಷಥಃ** ವಿಶಿಷ್ಟಜ್ಞಾನದಿಂದ ಕೂಡಿದವರೂ ಧ್ಯಾನಾಸಕ್ತರೂ ಆದ ಭಕ್ತರನ್ನು ರಕ್ಷಿಸುವಂತೆ ಎಂದು ಸಾಯಣರೂ, **ಅನ್ಯೇಷಾಂ ಯಜಮಾನಾನಾಂ ಸ್ವಭೂತಾನಿ ಯಾಗಲಕ್ಷಣಾನಿ ಕರ್ಮಾಣಿ | ಅವಥಃ | ಅವತಿ ರ್ಗತ್ಯರ್ಥಃ | ಯುವಾಂ ಗಚ್ಛಥಃ |** ಯಾಗಕರ್ತರಾದ ಇತರರ ಕರ್ಮಗಳನ್ನು ಲಕ್ಷ್ಯವಿಟ್ಟು ನೀವು ಅಲ್ಲಿಗೆ ಹೋಗುವಂತೆ ಎಂದು ಸ್ಕಂದಸ್ವಾಮಿಗಳೂ ವಿವರಿಸಿದ್ದಾರೆ. ಇತರ ಭಕ್ತರನ್ನು ರಕ್ಷಿಸುವಂತೆ ನಮ್ಮನ್ನೂ ರಕ್ಷಿಸಿ ಎಂದು ಮೊದಲನೆಯ ಅರ್ಥವೂ, ಈತರ ಭಕ್ತರ ಕರ್ಮಗಳಿಗೆ ಹೋಗುವಂತೆ ನಮ್ಮ ಕರ್ಮಗಳಿಗೂ ಬನ್ನಿರಿ ಎಂದು ಎರಡನೆಯ ಅರ್ಥವೂ ಆಗಿರುತ್ತದೆ. **ಧೀ** ಶಬ್ದವು **ಕರ್ಮನಾಮಗಳಲ್ಲಿಯೂ** (ನಿ. ೨-೧) ಮತ್ತು **ಪ್ರಜ್ಞಾನಾಮ** ಗಳಲ್ಲಿಯೂ (ನಿ. ೩-೯) ಪಠಿತವಾಗಿರುವುದರಿಂದ ಎರಡು ಅರ್ಥಗಳೂ ಸಾಧ್ಯವಾಗುತ್ತವೆ.

### ವ್ಯಾಕರಣಪ್ರಕ್ರಿಯಾ

**ತಸ್ಥುಃ**—ಷ್ಠಾ ಗತಿನಿವೃತ್ತೌ. ಧಾತು. **ಛಂದಸಿ ಲುಙ್ಲಙ್ಲಿಟಃ**— (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷ ಬಹುವಚನದಲ್ಲಿ ಝಿಗೆ ಉಸಾದೇಶ. ಧಾತುವಿಗೆ ದ್ವಿತ್ವಾದಿ. ತಿಙಂತನಿಘಾತಸ್ವರ ಬರುತ್ತದೆ.

**ವಚಸಮ್**—ವಚ ಪರಿಭಾಷಣೇ. ಧಾತು. ಸರ್ವಧಾತುನಿಬಂಧನವಾದ ಅಸುನ್ ಪ್ರತ್ಯಯ. ವಚಃ ಅಸ್ಯ ಅಸ್ತಿ ಇತಿ ವಚಸಃ ತಮ್. ವಚಸಮ್. **ಅರ್ಶ ಆದಿಭ್ಯೋ ಅಚ್**—(ಪಾ. ಸೂ. ೫-೨-೧೨೭) ಎಂಬುದ ರಿಂದ ಅಚ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಮಂತವೇ**—ಮನ ಜ್ಞಾನೇ. ಧಾತು. **ಕಮಿಮನಿಜನಿ**—(ಉ. ಸೂ. ೧-೭೩) ಎಂಬುದರಿಂದ ತು ಪ್ರತ್ಯಯ. ಧಾತುವಿನ ನಕಾರಕ್ಕೆ ಅನುಸ್ವಾರ ಪರಸವರ್ಣ. ನಿತ್ತಾಗಿರುವುದರಿಂದ ಆದ್ಯುದಾತ್ತವಾಗುತ್ತದೆ. ಚತುರ್ಥೀ ಏಕವಚನಾಂತರೂಪ.

**ಧಿಯಃ**—ಧ್ಯಾಯಂತಿ ಇತಿ ಧಿಯಃ. ಸ್ತೋತಾರಃ (ಸ್ತುತಿಸುವವರು) ಧ್ಯೈ ಚಿಂತಾಯಾಂ ಧಾತು **ಕ್ವಿಪ್ ಚ**—(ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಚಕಾರದಿಂದ ಈ ಸೂತ್ರದಲ್ಲಿ ದೃಶಿಗ್ರಹಣವು ಅನುವೃತ್ತವಾಗುವುದರಿಂದ ಧಾತುವಿಗೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ**—ಎಂಬುದರಿಂದ ಪೂರ್ವರೂಪ. ಪ್ರಥಮಾಬಹುವಚನಾಂತರೂಪ.

**ಕರ್ಮನ್**—ಕರ್ಮನ್ ಶಬ್ದಕ್ಕೆ ಸಪ್ತಮೀ ಏಕವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲುಕ್. **ನಙಿ ಸಂಬುದ್ಧ್ಯೋಃ**—(ಪಾ. ಸೂ. ೮-೨-೮) ಎಂಬುದರಿಂದ ಪದಸಂಜ್ಞಾ ಇದ್ದರೂ ನಲೋಪನಿಷೇಧ ಬರುತ್ತದೆ.

**ಇಷ್ಟಯೇ**—**ಕ್ತಿಚ್ಕ್ತೌ ಚ ಸಂಜ್ಞಾಯಾಮ್**—(ಪಾ. ಸೂ. ೩-೩-೧೭೪) ಎಂಬುದರಿಂದ ಕ್ತಿಚ್ ಪ್ರತ್ಯಯ. ಚಿತ್ತಾದುದರಿಂದ ಅಂತೋದಾತ್ತವಾಗುತ್ತದೆ. ಚತುರ್ಥೀ ಏಕವಚನಾಂತರೂಪ. ॥ ೨ ॥

:o:

ಸಂಹಿತಾಪಾಠಃ

ಯುವಂ ತಾಸಾಂ ದಿವ್ಯಸ್ಯ ಪ್ರಶಾಸನೇ ವಿಶಾಂ ಕ್ಷಯಥೋ ಅ-
ಮೃತಸ್ಯ ಮಜ್ಮನಾ ।
ಯಾಭಿರ್ಧೇನುಮಸ್ವಂ೧ ಪಿನ್ವಥೋ ನರಾ ತಾಭಿರೂ ಷು
ಊತಿಭಿರಶ್ವಿನಾ ಗತಂ ॥ ೩ ॥

ಪದಪಾಠಃ

ಯುವಂ । ತಾಸಾಂ । ದಿವ್ಯಸ್ಯ । ಪ್ರಽಶಾಸನೇ । ವಿಶಾಂ । ಕ್ಷಯಥಃ । ಅಮೃತಸ್ಯ ।
ಮಜ್ಮನಾ ।

ಯಾಭಿಃ । ಧೇನುಂ । ಅಸ್ವಂ । ಪಿನ್ವಥಃ । ನರಾ । ತಾಭಿಃ । ಊಂ ಇತಿ । ಸು ।
ಊತಿಽಭಿಃ । ಅಶ್ವಿನಾ । ಆ । ಗತಂ ॥ ೩ ॥

ಸಾಯಣಭಾಷ್ಯಂ

ಹೇ ನರಾ ನೇತಾರಾವಶ್ವಿನೌ ದಿವ್ಯಸ್ಯ ದಿವಿ ಭವಸ್ಯ ಸ್ವರ್ಗಸಮುತ್ಪನ್ನಸ್ಯಾಮೃತಸ್ಯ ಸೋಮಸ್ಯ ಪಾನೇನೋತ್ಪನ್ನೇನ ಮಜ್ಮನಾ ಬಲೇನ ಯುಕ್ತೌ ಯುವಂ ಯುವಾಂ ತಾಸಾಂ ಯಾಸ್ತ್ರಿಷು ಲೋಕೇಷು ವರ್ತಂತೇ ತಾಸಾಂ ಸರ್ವಾಸಾಂ ವಿಶಾಂ ಪ್ರಜಾನಾಂ ಪ್ರಶಾಸನೇ ಪ್ರಕೃಷ್ಟಾನುಶಾಸನೇ ಶಿಕ್ಷಣೇ ಕ್ಷಯಥಃ । ಐಶ್ವರ್ಯಕರ್ಮಾಯಂ । ಈಶಾಥೇ । ಸಮರ್ಥೌ ಭವಥಃ । ಯದ್ವಾ । ಮಜ್ಮನಾನ್ಯೇಷಾಮಸಾಧಾರಣೇನ ಬಲೇನ ವಿಶಾಂ ಪ್ರಜಾನಾಂ ದಿವಿಭವಸ್ಯಾಮೃತಸ್ಯ ವೃಷ್ಟ್ಯುದಕಸ್ಯ ಪ್ರಶಾಸನೇ ಪ್ರದಾನೇ ಕ್ಷಯಥಃ। ಈಶ್ವರೌ ಭವಥಃ । ಅಪಿ ಚ ಯಾಭಿರೂತಿಭೀ ರಕ್ಷಾಭಿರಸ್ವಂ ಪ್ರಸವಾಸಮರ್ಥಾಂ ಧೇನುಂ ಗಾಂ ಶಯುನಾಮ್ನ ಋಷಯೇ ಪಿನ್ವಥಃ ಸಿಂಚಥಃ । ಪಯಸಾ ಪೂರಿತವಂತಾವಿತ್ಯರ್ಥಃ । ತಾಭಿರೂತಿಭಿರಿತ್ಯಾದಿ ಪೂರ್ವವತ್ ॥ ಅಸ್ವಂ । ಷೂಙ್ ಪ್ರಾಣಿಗರ್ಭವಿಮೋಚನೇ । ಸವನಂ ಸೂಃ । ಸಂಪದಾದಿಲಕ್ಷಣೋ ಭಾವೇ ಕ್ವಿಪ್। ನಾಸ್ತಿ ಸೂರ್ಯಸ್ಯಾಮಿತ್ಯಸೂಃ। ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ। ಅಮಿ ಓಃ ಸುಪೀತಿ ಯಣಾದೇಶಃ। ಉದಾತ್ತಸ್ವರಿತಯೋರ್ಯಣ ಇತಿ ಪರಸ್ಯಾನುದಾತ್ತಸ್ಯ ಸ್ವರಿತತ್ವಂ । ಪಿನ್ವಥಃ । ಪಿವಿ ಸೇಚನೇ । ಇದಿತ್ತ್ವಾನ್ನುಮ್ । ಭೌವಾದಿಕಃ ॥

॥ ಪ್ರತಿಪದಾರ್ಥ ॥

ನರಾ— ನೇತೃಗಳಾದ ಎಲೈ ಅಶ್ವಿನೀದೇವತೆಗಳೇ । [ದಿವ್ಯಸ್ಯ— ದೇವಲೋಕದಲ್ಲಿರುವ । ಅಮೃತಸ್ಯ— ಅಮೃತಪಾನದಿಂದ ಉತ್ಪನ್ನವಾದ । ಮಜ್ಮನಾ— ಬಲದಿಂದ (ಕೂಡಿದವರಾಗಿ) । ಯುವಂ—ನೀವಿಬ್ಬರೂ । ತಾಸಾಂ—ಮೂರು ಲೋಕಗಳಲ್ಲೂ ಇರುವ । ವಿಶಾಂ—ಪ್ರಜೆಗಳೆಲ್ಲರಿಗೂ । ಪ್ರಶಾಸನೇ—ಆಳುವ ಪ್ರಭುಗಳಾಗಿರಲು । ಕ್ಷಯಥಃ—ಸಮರ್ಥರಾಗಿದ್ದೀರಿ] ॥ ಅಥವಾ [ಮಜ್ಮನಾ—(ಇತರರಲ್ಲಿ ಇಲ್ಲದೇ ಇರುವ) ಅಸಾಧಾರಣವಾದ ಬಲದಿಂದ । ತಾಸಾಂ—ಮೂರು ಲೋಕಗಳಲ್ಲಿರುವ । ವಿಶಾಂ—ಪ್ರಜೆಗಳೆಲ್ಲರಿಗೂ । ದಿವಿ ಭವಸ್ಯ—ದೇವಲೋಕದಲ್ಲಿರುವ । ಅಮೃತಸ್ಯ—ವೃಷ್ಟ್ಯುದಕದ । ಪ್ರಶಾಸನೇ—ಹಂಚುವಿಕೆಯಲ್ಲಿ । ಕ್ಷಯಥಃ— ಸಮರ್ಥರಾಗಿದ್ದೀರಿ] । (ಮತ್ತು ಎಲೈ) ಅಶ್ವಿನಾ-ಅಶ್ವಿನೀದೇವತೆಗಳೇ, ಯಾಭಿಃ—ಯಾವ ರಕ್ಷಣೆಗಳಿಂದ। ಅಸ್ವಂ—ಬಂಜೆಯಾದ । ಧೇನುಂ —ಧೇನುವನ್ನು । ಪಿನ್ವಥಃ—ಹಾಲಿನಿಂದ ತುಂಬಿಸಿದಿರೋ । ತಾಭಿಃ ಊತಿಭಿಃ ಉ—ಆ ರಕ್ಷಣೆಗಳಿಂದ ಕೂಡಿ ನಮ್ಮಲ್ಲಿಗೂ । ಸು ಆಗತಂ—ಆದರದಿಂದ ಬನ್ನಿರಿ ॥

॥ ಭಾವಾರ್ಥ ॥

ನೇತೃಗಳಾದ ಎಲೈ ಅಶ್ವಿನೀದೇವತೆಗಳೇ, ದೇವಲೋಕದ ಅಮೃತಪಾನದಿಂದ ಉತ್ಪನ್ನವಾದ ಬಲದಿಂದ ಕೂಡಿ ನೀವಿಬ್ಬರೂ ಮೂರು ಲೋಕದ ಪ್ರಜೆಗಳೆಲ್ಲರಿಗೂ ಆಳುವ ಪ್ರಭುಗಳಾಗಿರಲು ಸಮರ್ಥರಾಗಿದ್ದೀರಿ. ಎಲೈ ಅಶ್ವಿನೀ ದೇವತೆಗಳೇ ಯಾವ ರಕ್ಷಣೆಗಳಿಂದ ಕೂಡಿ ನೀವು ಶಯುವೆಂಬ ಋಷಿಯ ಬಂಜೆಯಾದ ಧೇನುವನ್ನು ಹಾಲಿನಿಂದ ತುಂಬಿದಿರೋ ಆ ರಕ್ಷಣೆಗಳಿಂದ ಕೂಡಿಕೊಂಡು ನಮ್ಮಲ್ಲಿಗೂ ಆದರದಿಂದ ದಯಮಾಡಿರಿ.

English Translation

By the vigour infused from celestial nectar, you are able, leader (of sacrifice), to rule over those beings (who people the three worlds): with those aids by which you gave (milk) to the barren cow, come, Aswinss willingly hither.

ವಿಶೇಷವಿಷಯಗಳು

**ದಿವ್ಯಸ್ಯ ಅಮೃತಸ್ಯ ಮಜ್ಮನಾ**—ಸಾಯಣರು ಇಲ್ಲಿ ಎರಡುವಿಧವಾದ ಅರ್ಥವನ್ನು ಮಾಡಿದ್ದಾರೆ. ಮೊದಲನೆಯದಾಗಿ, ದಿವ್ಯಸ್ಯ-ದೇವಲೋಕದಲ್ಲಿರುವ; ಅಮೃತಸ್ಯ—ಅಮೃತಪಾನದಿಂದ ಉತ್ಪನ್ನವಾದ; ಮಜ್ಮನಾ—ಬಲದಿಂದ ಎಂದೂ; ಎರಡನೆಯದಾಗಿ, ಮಜ್ಮನಾ—ತಮ್ಮ ಅಸಾಧಾರಣವಾದ ಬಲದಿಂದ ದಿವ್ಯಸ್ಯ—ದೇವಲೋಕೋತ್ಪನ್ನವಾದ; ಅಮೃತಸ್ಯ ವೃಷ್ಟ್ಯುದಕದ ಎಂದೂ ಅರ್ಥಮಾಡಿರುವಾಗ ಮೊದಲನೆಯ ಅರ್ಥಕ್ಕನುಸಾರವಾಗಿ **ಪ್ರಶಾಸನೇ** ಎಂಬ ಪದವು **ವಿಶಾಂ** ಎಂಬ ಪದದ ಜೊತೆಯಲ್ಲಿಯೂ, ಎರಡನೆಯ ಅರ್ಥಕ್ಕನುಸಾರವಾಗಿ **ಅಮೃತಸ್ಯ** ಎಂಬುದರ ಜೊತೆಯಲ್ಲಿಯೂ ಅನ್ವಿತವಾಗಿರುತ್ತದೆ. ಎಂದರೆ, ಅಮೃತವನ್ನು ಪಾನಮಾಡುವುದರಿಂದ ಉಂಟಾದ ಶಕ್ತಿಯಿಂದ ಮೂರುಲೋಕಗಳ ಪ್ರಜೆಗಳಿಗೂ ಪ್ರಭುಗಳಾಗಿರಲು (ಕ್ಷಯಥಃ) ಸಮರ್ಥರಾಗಿದ್ದೀರಿ ಎಂದು ಒಂದು ವಿಧವಾಗಿಯೂ; ನಿಮ್ಮ ಅಸಾಧಾರಣವಾದ ಶಕ್ತಿಯಿಂದ ದಿವ್ಯಲೋಕದಲ್ಲಿ ಉತ್ಪನ್ನವಾದ ವೃಷ್ಟ್ಯುದಕವನ್ನು ಎಲ್ಲರಿಗೂ ಹಂಚುವುದರಲ್ಲಿ (ಪ್ರಶಾಸನೇ) ಸಮರ್ಥರಾಗಿದ್ದೀರಿ ಎಂದು ಇನ್ನೊಂದು ವಿಧವಾಗಿಯೂ ವಿವರಿಸಿದೆ. ಈ ಎರಡು ವಿಧವಾದ ಅರ್ಥಗಳಿಗಿಂತಲೂ ಬೇರೆಯಾಗಿ ಈ ಪೂರ್ವಾರ್ಥವನ್ನು ಸ್ಕಂದಸ್ವಾಮಿಗಳು ಇನ್ನೊಂದು ರೀತಿಯಲ್ಲಿ ವಿವರಿಸಿದ್ದಾರೆ. ಅದರಂತೆ; **ದಿವ್ಯಸ್ಯ ಅಮೃತಸ್ಯ ಮಜ್ಮನಾ ದಿವ್ಯಶಬ್ದೋಽತ್ರಾತ್ಯಂತೋತ್ಕೃಷ್ಟವಚನಃ। ಅಮೃತಶಬ್ದೋಽಪ್ಯಂತರೇಣಾಪಿ ಭಾವಪ್ರತ್ಯಯಮಮೃತತ್ವವಚನಃ। ಮಜ್ಮನೇತ್ಯಪಿ ಬಲನಾಮ। ಅತ್ಯಂತೋತ್ಕೃಷ್ಟಸ್ಯ ದೇವತ್ವಸ್ಯ ಬಲೇನೇತ್ಯರ್ಥಃ**— ದಿವ್ಯಶಬ್ದಕ್ಕೆ ಅತ್ಯಂತ ಉತ್ಕೃಷ್ಟವಾದುದೆಂದು ತಾತ್ಪರ್ಯ. **ಅಮೃತ** ಶಬ್ದಕ್ಕೆ **ಅಮೃತತ್ವರೂಪವಾದುದೂ ದೇವಸಂಬಂಧ** ವಾದುದೂ ಎಂದರ್ಥ. ಇಂತಹ ಉತ್ಕೃಷ್ಟವಾದುದೂ; ಅದ ಶಕ್ತಿಯಿಂದ ಕೂಡಿದವರಾಗಿ ಅಶ್ವಿನೀದೇವತೆಗಳು **ವಿಶಾಂ ಪ್ರಶಾಸನೇ ಕ್ಷಯಥಃ— ಯಾಃ ಸ್ತೋತುಂ ಯಷ್ಟುಂ ಚೇಚ್ಛಂತಿ ಯುವಾಂ ತಾಸಾಂ ವಿಶಾಂ ಮನುಷ್ಯಾಣಾಂ ಪ್ರಶಾಸನೇ ಅನುಶಾಸನೇ ವಚನೇ ನಿವಸಥಃ। ತಾ ವಿಶಃ ಯತ್ರ ಬ್ರುವಂತಿ ಇಹ ಯುವಾಭ್ಯಾಂ ವ್ಯವಸ್ಥಾತವ್ಯಮಿತಿ ತತ್ರೈವ ವ್ಯವತಿಷ್ಠೇಥೇ।** ಯಾವ ಪ್ರಜೆಗಳು ನಿಮ್ಮನ್ನು ಉದ್ದೇಶಿಸಿ ಸ್ತುತಿಸಲೂ ಮತ್ತು ಯಾಗಮಾಡಲೂ ಇಚ್ಛಿಸಿ ನಿಮ್ಮನ್ನು ಅವರ ಅಪೇಕ್ಷೆಗನುಗುಣವಾದ ಸ್ಥಾನದಲ್ಲಿ ಸ್ಥಿತರಾಗಬೇಕೆಂದು ಪ್ರಾರ್ಥಿಸಿದಾಗ ನೀವು ಅವರ ಪ್ರಾರ್ಥನೆಗೆ ಮನ್ನಣೆಯಿತ್ತು ಅದೇ ಸ್ಥಾನದಲ್ಲಿ ಕುಳಿತುಕೊಳ್ಳುತ್ತೀರಿ ಎಂದರ್ಥವಾಗುತ್ತದೆ. ಸ್ಕಂದಸ್ವಾಮಿಗಳೂ ಸಹ ದಿವ್ಯಸ್ಯ

ಅಮೃತಸ್ಯ ಮಜ್ಮನಾ ಎಂಬುದಕ್ಕೆ ಶ್ರುತ್ಯಂತರವನ್ನು ಉದಹರಿಸಿ ಅದರಂತೆ ಇಲ್ಲಿಯೂ ಅರ್ಥಮಾಡಿಕೊಳ್ಳಬೇಕೆಂದು ಎರಡನೆಯ ಅರ್ಥವನ್ನೂ ಹೇಳಿದ್ದಾರೆ—ಈ ಸಂದರ್ಭದಲ್ಲಿ,

ದಧ್ಯಙ್ ಹ ಯನ್ಮಧ್ವಾಥರ್ವಣೋ ವಾಮಶ್ವಸ್ಯ ಶೀರ್ಷ್ಣಾ ಪ್ರ ಯದೀಮುವಾಚ ।
(ಋ. ಸಂ. ೧.೧೧೬-೧೨)

ಆಥರ್ವಣಾಯಾಶ್ವಿನಾ ದಧೀಚೇಽಶ್ವ್ಯಂ ಶಿರಃ ಪ್ರತ್ಯೈರಯತಂ ।
(ಋ ಸಂ. ೧-೧೧೭-೨೨)

ಎಂಬ ಎರಡು ಋಕ್ಕುಗಳನ್ನೂ ಉದಹರಿಸಿ ಇತಿ ಮಂತ್ರಾಂತರದೃಷ್ಟಜ್ಞಾನಮತ್ರಾಮೃತಸಾದೃಶ್ಯಾದಮೃತಮಿತ್ಯುಚ್ಯತೇ । ಅತ್ಯಂತೋತ್ಕೃಷ್ಟಸ್ಯ ಅಮೃತಸದೃಶಸ್ಯ ಜ್ಞಾನಸ್ಯ ಬಲೇನೇತ್ಯರ್ಥಃ । ಆ ಸನ್ನಿವೇಶಗಳಲ್ಲಿ ಅರ್ಥವಾಗುವಂತೆಯೇ ಇಲ್ಲಿಯೂ ಸಹ ಜ್ಞಾನವು ಅಮೃತಸದೃಶವಾದುದರಿಂದ ಅಮೃತವೆಂಬ ಹೆಸರಿನಿಂದ ಉಕ್ತವಾಗಿದೆ. ಅತ್ಯಂತ ಉತ್ಕೃಷ್ಟವಾದ ಜ್ಞಾನದ ಶಕ್ತಿಯಿಂದ ನೀವು ಪ್ರಕಾಶನದಲ್ಲಿದ್ದೀರಿ ಎಂದು ತಾತ್ಪರ್ಯವೆಂದು ವಿವರಿಸಿದ್ದಾರೆ.

ಯಾಭಿಃ ಅಸ್ವಂ ಧೇನುಂ ಪಿನ್ವಥಃ - ನಿಮ್ಮ ಯಾವ ಸಹಾಯಕವಾದ ಅನುಗ್ರಹದಿಂದ ಬಸ್ಸಾದ ಗೋವನ್ನು ಕರುವಿನೊಡಗೂಡಿದ ಧೇನುವಾಗುವಂತೆ ಮಾಡಿದಿರೋ ಆ ರಕ್ಷಣೆಗಳಿಂದ ಎಂದು ಹಿಂದಿನ ಸನ್ನಿವೇಶವನ್ನು ಸೂಚಿಸಿದೆ. ಇಲ್ಲಿ ಸ್ಕಂದಸ್ವಾಮಿಗಳು ಆ ಸನ್ನಿವೇಶವನ್ನು ವಿವರಿಸಿದ್ದಾರೆ. ಅತ್ರೇತಿಹಾಸಮಾಚಕ್ಷತೇ । ಶಯುರ್ನಾಮ ರಾಜರ್ಷಿಃ । ಸೋಽಶ್ವಿನೌ ಪರಿಚರ್ಯಯಾ ತುಷ್ಟಾವುವಾಚ । ಮಮ ಗೌರಧೇನುರ್ನಿವೃತ್ತಪ್ರಸವಾ ವೃದ್ಧಾ ಚ । ತಾಂ ಮೇ ಧೇನುಂ ಕುರುತಮಿತಿ । ತಾವಸ್ಮೈ ಅಶ್ವಿನೌ ಧೇನುಂ ಚಕ್ರತುರಿತಿ । ಶಯುವೆಂಬ ರಾಜರ್ಷಿಯು ಅಶ್ವಿನೀ ದೇವತೆಗಳನ್ನು ಪೂಜಿಸಿದಾಗ ಆ ಪೂಜೆಯಿಂದ ಅವರು ತುಷ್ಟರಾದರು- ಆಗ ರಾಜರ್ಷಿಯು ಅವರನ್ನು ಕುರಿತು ನನ್ನ ಗೋವು ಬಂಜೆಯಾಗಿದೆ. ಅದು ಕರುವನ್ನು ಹಾಕುವಂತೆಯೂ ಹಾಲನ್ನು ಕೊಡುವಂತೆಯೂ ಮಾಡಿ ಅದನ್ನು ಧೇನುವನ್ನಾಗಿ ಪರಿವರ್ತಿಸಿ ಎಂದು ಪ್ರಾರ್ಥಿಸಿಕೊಂಡನು. ಮುದಿಯಾದ ಆ ಗೋವನ್ನು ಅವರು ಆ ಪ್ರಾರ್ಥನೆಯಮೇಲೆ ಧೇನುವಾಗಿ ಆಗುವಂತೆ ಪರಿವರ್ತಿಸಿದರು ಎಂದು ಆ ಕಥೆಯನ್ನು ಹೇಳಿ ಇದೇ ಸನ್ನಿವೇಶವನ್ನು ವಿವರಿಸಿರುವ,

ಅಧೇನುಂ ದಸ್ರಾ ಸ್ತರ್ಯಂ೧ ವಿಷಕ್ತಾಮಪಿನ್ವತಂ ಶಯವೇ ಅಶ್ವಿನಾ ಗಾಂ ।
(ಋ.ಸಂ. ೧-೧೧೭-೨೦)

ಯುವಂ ಧೇನುಂ ಶಯವೇ ನಾಧಿತಾಯಾಪಿನ್ವತಮಶ್ವಿನಾ ಪೂರ್ವ್ಯಾಯ ।
(ಋ. ಸಂ. ೧-೧೧೮-೮)

ಎಂಬ ಎರಡು ಋಕ್ಕುಗಳನ್ನು ಉದಹರಿಸಿ ಅಶ್ವಿನೀದೇವತೆಗಳು ಶಯುವಿಗೆ ಮಾಡಿದ ಉಪಕಾರವನ್ನು ಅಲ್ಲಿ ಹೇಳಿರುವಂತೆ ಈ ಋಕ್ಕಿನಲ್ಲಿಯೂ ಹೇಳಿದೆಯೆಂದು ತಿಳಿಸುತ್ತಾರೆ ಇದರಂತೆಯೇ—

ದಶಸ್ಯಂತಾ ಶಯವೇ ಪಿಪ್ಯಥುರ್ಗಾಮಿತಿ ಚ್ಯವಾನಾ ಸುಮತಿಂ ಭುರಣ್ಯೂ ।
(ಋ. ಸಂ. ೬-೬೨-೭)

**ವೃಕಾಯ ಚಿಜ್ಜಸಮಾನಾಯ ಶಕ್ತಮುತ ಶ್ರುತಂ ಶಯವೇ ಹೂಯಮಾನಾ ।**
(ಋ. ಸಂ. ೭-೬೮-೮)

**ತಾ ವರ್ತಿರ್ಯಾತಂ ಜಯುಷಾ ವಿ ಪರ್ವತಮಪಿನ್ವತಂ ಶಯವೇ ಧೇನುಮಶ್ವಿನಾ ।**
(ಋ. ಸ. ೧೦-೩೯-೧೩)

ಇತ್ಯಾದಿಋಕ್ಕುಗಳಲ್ಲೂ ಸಹ ಇದೇ ರೀತಿ ಅಶ್ವಿನೀದೇವತೆಗಳು ಶಯುವಿನ ಬಂಜೆಯಾದ ಗೋವನ್ನು ಧೇನುವನ್ನಾಗಿ ಪರಿವರ್ತಿಸಿದ ಸನ್ನಿವೇಶವು ಹೇಳಲ್ಪಟ್ಟಿದೆ. ಮತ್ತು ಹೀಗೆಯೇ ಅಗ್ನಿಯೂ ಸಹ ಶಯುವಿಗೆ ಇದೇ ಸಹಾಯವನ್ನು ಮಾಡಿದುದಾಗಿ

**ಸ ದ್ವಿಬಂಧುರ್ವೈತರಣೋ ಯಷ್ಟಾ ಸಬರ್ಧುಂ ಧೇನುಮಸ್ವಂ ದುಹಧ್ಯೈ ।**
(ಋ ಸಂ. ೧೦-೬೧-೧೭)

ಎಂಬ ಋಕ್ಕಿನಿಂದ ತಿಳಿಯುತ್ತದೆ. ಇಲ್ಲಿ **ಶಯುವೆಂಬ** ರಾಜನ ಹಸುವನ್ನು ಎಂದು ಋಕ್ಕಿನಲ್ಲಿ ಹೇಳಿಲ್ಲ. ಸಾಯಣರು **ನಿವೃತ್ತಪ್ರಸವಾಂ ಶಯವೇ ದೋಹಾಯಾಕರೋತ್** ಎಂದು ವಿವರಿಸಿದ್ದಾರೆ.

**ಅಸ್ವಂ—ಪ್ರಸವಾಸಮರ್ಥಾಂ** । ಪ್ರಸವಿಸಲು ಅಸಮರ್ಥವಾದ ಎಂದರೆ ಬಂಜೆಯಾದ ಎಂದರ್ಥ.

**ಪಿನ್ವಥಃ—ಸಿಂಚಥಃ । ಪಯಸಾ ಪೂರಿತವಂತಾವಿತ್ಯಾರ್ಥಃ** । ಹಾಲಿನಿಂದ ತುಂಬಿದರು । ಎಂದರೆ ಕರುವನ್ನು ಹಾಕಿ ಕ್ಷೀರವನ್ನು ಕೊಡುವಂತೆ ಮಾಡಿದರು ಎಂದರ್ಥ.

ವ್ಯಾಕರಣಪ್ರಕ್ರಿಯಾ

**ಯುವಮ್ - ಪ್ರಥಮಾಯಾಶ್ಚ ದ್ವಿವಚನೇ ಭಾಷಾಯಾಮ್**—(ಪಾ. ಸೂ. ೭-೨-೮೮) ಎಂಬುದರಿಂದ ಲೋಕದಲ್ಲಿ ಮಾತ್ರ ಆತ್ವವಿಧಾನಮಾಡಿರುವುದರಿಂದ ವೇದದಲ್ಲಿ ಬರುವುದಿಲ್ಲ.

**ದಿವ್ಯಸ್ಯ**—ದಿವಿ ಭವಮ್. ದಿವ್ಯಮ್. **ಭವೇ ಛಂದಸಿ**—(ಪಾ. ಸೂ ೪-೪-೧೧೦) ಎಂಬುದರಿಂದ ಯಪ್ರತ್ಯಯ. ಷಷ್ಠೀ ಏಕವಚನಾಂತರೂಪ.

**ವಿಶಾಮ್—ಸಾವೇಕಾಚಸ್ತೃತೀಯಾದಿಃ**—(ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಕ್ಷಯಥಃ**—ಕ್ಷಿ ಧಾತುವು ಐಶ್ವರ್ಯಕರ್ಮಾರ್ಥದಲ್ಲಿ ಪ್ರಯುಕ್ತವಾಗಿದೆ. ಲಟ್ ಮಧ್ಯಮಪುರುಷ ದ್ವಿವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಸ್ವಮ್**—ಷೂಙ್ ಪ್ರಾಣಿಗರ್ಭವಿಮೋಚನೇ. ಧಾತು. ಸವನಂ ಸೂಃ **ಸಂಪದಾದಿಭ್ಯಃ ಕ್ವಿಪ್**—(ವಾ. ೨-೩೩೩) ಎಂಬುದರಿಂದ ಭಾವಾರ್ಥದಲ್ಲಿ ಕ್ವಿಪ್ ಪ್ರತ್ಯಯ. **ಧಾತ್ವಾದೇಃ ಷಃ ಸಃ**—(ಪಾ. ಸೂ. ೬-೧-೬೪) ಎಂಬುದರಿಂದ ಧಾತುವಿನ ಆದಿಗೆ ಸತ್ವ. ನಾಸ್ತಿ ಸೂಃ ಸವನಂ ಯಸ್ಯಾಂ ಸಾ ಅಸೂಃ **ನಞ್ಸುಭ್ಯಾಮ್**—(ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ದ್ವಿತೀಯಾಏಕವಚನ ಅಮ್ ಪರವಾದಾಗ **ಓಃ ಸುಪಿ**—(ಪಾ. ಸೂ. ೬-೪-೮೩) ಎಂಬುದರಿಂದ ಯಣಾದೇಶ. ಉದಾತ್ತಸ್ಥಾನದಲ್ಲಿ ಯಣಾದೇಶ

ಬಂದು ಅದರ ಪರದಲ್ಲಿ ಅನುದಾತ್ತ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ ಸ್ವರಿತೋನುದಾತ್ತಸ್ಯ**— ಎಂಬುದರಿಂದ ಪರಕ್ಕೆ ಸ್ವರಿತಸ್ವರ ಬರುತ್ತದೆ.

**ಪಿನ್ವಥಃ** — ಪಿವಿ ಸೇಚನೇ. ಧಾತು. **ಇದಿತೋನುಮ್‌ಧಾತೋಃ**— ( ಪಾ. ಸೂ. ೭-೧-೫೮ ) ಎಂಬುದರಿಂದ ನುಮಾಗಮ. ಕರ್ತ್ರರ್ಥದಲ್ಲಿ ಶಪ್ ವಿಕರಣ. ಲಟ್ ಮಧ್ಯಮಪುರುಷ ದ್ವಿವಚನಾಂತರೂಪ **ಯದ್ವೃತ್ತಾನ್ನಿತ್ಯಮ್**—(ಪಾ. ಸೂ. ೮-೧-೬೬) ಎಂಬುದರಿಂದ ಹಿಂದೆ ಯಾಭಿಃ ಎಂದಿರುವುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಶಪ್ ಲಸಾರ್ವಧಾತಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ನರಾ**—ಪ್ರಥಮಾ (ಸಂಬೋಧನ) ದ್ವಿವಚನದಲ್ಲಿ ಔವಿಭಕ್ತಿ ಬಂದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಆಕಾರಾದೇಶ. ಆಮಂತ್ರಿತನಿಘಾತಸ್ವರ ಬರುತ್ತದೆ. ॥ ೩ ॥



ಸಂಹಿತಾಪಾಠಃ

ಯಾಭಿಃ ಪರಿಜ್ಮಾ ತನಯಸ್ಯ ಮಜ್ಮನಾ ದ್ವಿಮಾತಾ ತೂರ್ಷು ತರಣಿರ್ವಿಭೂಷತಿ ।
ಯಾಭಿಸ್ತ್ರಿಮಂತುರಭವದ್ವಿಚಕ್ಷಣಸ್ತಾಭಿರೂ ಷು ಊತಿಭಿರಶ್ವಿನಾ ಗತಂ ॥ ೪ ॥

। ಪದಪಾಠಃ ।

ಯಾಭಿಃ । ಪರಿಽಜ್ಮಾ । ತನಯಸ್ಯ । ಮಜ್ಮನಾ । ದ್ವಿಽಮಾತಾ । ತೂರ್ಷು । ತರಣಿಃ । ವಿಽಭೂಷತಿ ।
ಯಾಭಿಃ । ತ್ರಿಽಮಂತುಃ । ಅಭವತ್ । ವಿಽಚಕ್ಷಣಃ । ತಾಭಿಃ । ಊಂ ಇತಿ । ಸು । ಊತಿಽಭಿಃ । ಅಶ್ವಿನಾ । ಆ । ಗತಂ ॥ ೪ ॥

॥ ಸಾಯಣಭಾಷ್ಯಂ ॥

ಪರಿಜ್ಮಾ ಪರಿತೋ ಗಂತಾ ವಾಯುಸ್ತನಯಸ್ಯಾತ್ಮೀಯಸ್ಯ ಪುತ್ರಸ್ಯಾಗ್ನೇಃ । ಅಗ್ನಿರ್ಹಿ ವ್ಯಾನ-ವೃತ್ತ್ಯಾತ್ಮನಾ ವರ್ತಮಾನೇನ ವಾಯುನಾ ಮಥ್ಯಮಾನಃ ಸನ್ ಜಾಯತೇ । ತಥಾ ಚ ಶ್ರೂಯತೇ । ಅಥ ಯಃ ಪ್ರಾಣಾಪಾನಯೋಃ ಸಂಧಿಃ ಸ ವ್ಯಾನಃ । ಅತೋ ಯಾನ್ಯನ್ಯಾನಿ ವೀರ್ಯವಂತಿ ಕರ್ಮಾಣಿ ಯಥಾಗ್ನೇರ್ಮಂಥನಮಾಜೇಃ ಸರಣಂ ದೃಢಸ್ಯ ಧನುಷ ಆಯಮನಮಪ್ರಾಣನ್ನನಪಾನಂಸ್ತಾನಿ ಕರೋ-ತೀತಿ । ಛಾ. ಉ. ೧-೩-೩, ೪, ೫, । ಯದ್ವಾ । ಸೃಷ್ಟ್ಯಾದೌ ವಾಯುಸಕಾಶಾದುತ್ಪನ್ನತ್ವಾದಗ್ನೇಃ ಪುತ್ರತ್ವಂ । ಆಮ್ನಾಯತೇ ಚ । ವಾಯೋರಗ್ನಿರಿತಿ । ಏವಂ ಸ್ವಪುತ್ರಸ್ಯಾಗ್ನೇರ್ಮಜ್ಮನಾ ಬಲೇನ ಯುಕ್ತಃ ಸನ್ ದ್ವಿಮಾತಾ ದ್ವಯೋರ್ಲೋಕಯೋರ್ನಿರ್ಮಾತಾ । ಅಗ್ನಿಃ ಪೃಥಿವೀಸ್ಥಾನೋ ವಾಯು-ರಂತರಿಕ್ಷಸ್ಥಾನಃ । ಉಭಯೋರ್ಮಿಲಿತಯೋರುಭಯನಿರ್ಮಾತೃತ್ವಮುಪಪನ್ನಂ । ಯದ್ವಾ । ದ್ವಿಮಾತೇತಿ ತನಯಸ್ಯ ವಿಶೇಷಣಂ । ಸುಪಾಂ ಸುಲುಗಿತಿ ಷಷ್ಠ್ಯಾಃ ಸುಃ । ದ್ವಿಮಾತೃಕಸ್ಯ ದ್ವಾಭ್ಯಾಮರಣಿಭ್ಯಾಂ ಜಾತಸ್ಯ । ಏವಂ ಭೂತೋ ವಾಯುರ್ಹೇ ಅಶ್ವಿನೌ ಯಾಭಿರೂತಿಭಿರ್ಹೇತುಭೂತಾಭಿಃ ಪಾಲನೈಸ್ತೂತುರ್ಷು ತರೀತೃಷು ಧಾವತ್ಸು ಮಧ್ಯೇ ತರಣಿರತಿಶಯೇನ ತರೀತಾ ಶೀಘ್ರಗಾಮೀ ವಿಭೂಷತಿ ವ್ಯಾಪ್ತೋ ಭವತಿ । ಯದ್ವಾ । ವಿಭಾವತಿ ವಿಶೇಷೇಣ ಸರ್ವಮಲಂಕರೋತಿ । ಅಪಿ ಚ । ತ್ರಿಮಂತುಸ್ತ್ರಯಾಣಾಂ ಮಂತಾ ತ್ರಿವಿಧೇಷು ಪಾಕಯಜ್ಞಹವಿರ್ಯಜ್ಞಸೋಮಯಜ್ಞೇಷ್ವಾಸಾದಿತಜ್ಞಾನಃ ಕಕ್ಷೀವಾನ್ ಯಾಭಿರ್ಯುಷ್ಮ-ದೀಯಾಭಿರೂತಿಭಿರ್ವಿಚಕ್ಷಣೋ ವಿಶಿಷ್ಟಜ್ಞಾನಯುಕ್ತೋಽಭವತ್ । ತಾಭಿಃ ಸರ್ವಾಭಿರೂತಿಭಿರಸ್ಮಾನಾ-ಗಚ್ಛತಂ ॥ ಪರಿಜ್ಮಾ । ಪರಿಪೂರ್ವಾದಜ ಗತಿಕ್ಷೇಪಣಯೋರಿತ್ಯಸ್ಮಾತ್ ಶ್ವನ್ನುಕ್ಷನ್ನಿತ್ಯಾದೌ ನಿಪಾತ್ಯತೇ । ತೂರ್ಷು । ತೄ ಪ್ಲವನತರಣಯೋಃ । ಬಹುಲಂ ಛಂದಸೀತ್ಯುತ್ವಂ । ಹಲಿ ಚೇತಿ ದೀರ್ಘಃ । ಯದ್ವಾ । ತರತೇಃ ಕ್ವಿಪ್ । ಜ್ವರತ್ವರೇತ್ಯಾದಿನಾ ವಕಾರೋಪಧಯೋರೂಟ್ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ವಿಭೂಷತಿ । ಭವತೇರ್ಲೇಟ್ಯಡಾಗಮಃ । ಸಿಬ್ಬಹುಲಂ ಲೇಟೀತಿ ಸಿಪ್ । ಯದ್ವಾ । ಭೂಷ ಅಲಂಕಾರೇ । ಭೌವಾದಿಕಃ । ವಿಚಕ್ಷಣಃ । ಅನುದಾತ್ತೇತಶ್ಚ ಹಲಾದೇರಿತಿ ಯುಚ್ ॥

ಪ್ರತಿಪದಾರ್ಥ

**ಪರಿಜ್ಮಾ**—ಸುತ್ತಲೂ ಸಂಚರಿಸುವವನೂ (ಮತ್ತು) । [**ತನಯಸ್ಯ**—(ತನ್ನ) ಪುತ್ರನಾದ ಅಗ್ನಿಯ **ಮಜ್ಮನಾ**—ಶಕ್ತಿಯೊಡನೆ ಕೂಡಿಕೊಂಡು । **ದ್ವಿಮಾತಾ**—ಎರಡು ಲೋಕಗಳನ್ನೂ ಆಳಿಯುವವನೂ] ॥ **ಅಥವಾ** [**ದ್ವಿಮಾತಾ**—ಅರಣಿರೂಪದ ಎರಡು ಮಾತೃಗಳನ್ನುಳ್ಳ । **ತನಯಸ್ಯ**—ತನ್ನ ಪುತ್ರನಾದ ಅಗ್ನಿಯ । **ಮಜ್ಮನಾ**—ಶಕ್ತಿಯಿಂದ ಕೂಡಿದವನೂ ಆದ ವಾಯುವು] ॥ **ಯಾಭಿಃ**—( ನಿಮ್ಮ ) ಯಾವ ಒತ್ತಾಸೆಗಳಿಂದ । **ತೂರ್ಷು**—ವೇಗಗಾಮಿಗಳ ನಡುವೆ । **ತರಣಿಃ**—ಅತ್ಯಂತ ವೇಗಗಾಮಿಯಾಗಿ । **ವಿಭೂಷತಿ**—ಎಲ್ಲವನ್ನೂ ಅತಿಶಯವಾಗಿ ಅಲಂಕರಿಸುತ್ತಾನೆಯೋ, ಅಥವಾ ಎಲ್ಲವನ್ನೂ ವ್ಯಾಪಿಸುತ್ತಾನೆಯೋ ; (ಅಲ್ಲದೇ) । **ತ್ರಿಮಂತುಃ**—(ಪಾಕಯಜ್ಞ, ಹವಿರ್ಯಜ್ಞ ಮತ್ತು ಸೋಮಯಜ್ಞ) ಈ ಮೂರು ಯಜ್ಞಗಳ ವಿಷಯದಲ್ಲೂ ಜ್ಞಾನವನ್ನು ಪಡೆದ ಕಕ್ಷೀವಂತನು । **ಯಾಭಿಃ**—ಯಾವ ನಿಮ್ಮ ಒತ್ತಾಸೆಗಳಿಂದ । **ವಿಚಕ್ಷಣಃ**—ವಿಶಿಷ್ಟ ಜ್ಞಾನಯುಕ್ತನಾಗಿ । **ಅಭವತ್**—ಆದನೋ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ತಾಭಿಃ ಊತಿಭಿಃ ಉ**—ಆ ಎಲ್ಲಾ ಒತ್ತಾಸೆಗಳೊಡನೆಯೂ ಕೂಡಿಕೊಂಡು ನಮ್ಮಲ್ಲಿಗೂ ಸಹ) । **ಸು ಆ ಗತಂ**—ಆದರದಿಂದ ಬನ್ನಿರಿ ॥

### ಭಾವಾರ್ಥ

ಸುತ್ತಲೂ ಸಂಚರಿಸುವವನೂ ಮತ್ತು ತನ್ನ ಪುತ್ರನಾದ ಅಗ್ನಿಯೊಡನೆ ಕೂಡಿಕೊಂಡು ಎರಡು ಲೋಕಗಳನ್ನು ಆಳೆಯುವವನೂ ಆದ ವಾಯುವು ಯಾವ ನಿಮ್ಮ ರಕ್ಷಣೆಗಳ ಸಹಾಯದಿಂದ ವೇಗಗಾಮಿಗಳ ನಡುವೆ ಅತ್ಯಂತ ವೇಗಗಾಮಿಯಾಗಿ ಎಲ್ಲವನ್ನೂ ಅಲಂಕರಿಸುತ್ತಾನೆಯೋ, ಅಲ್ಲದೆ, ಯಜ್ಞತ್ರಯದ ವಿಷಯದಲ್ಲೂ ವಿಶಿಷ್ಟಜ್ಞಾನವನ್ನು ಪಡೆದ ಕಕ್ಷೀವಂತನು ಯಾವ ನಿಮ್ಮ ರಕ್ಷಣೆಗಳಿಂದ ಆ ಜ್ಞಾನವನ್ನು ಪಡೆದನೋ. ಎಲೈ ಅಶ್ವಿನೀದೇವತೆಗಳೇ, ಆ ನಿಮ್ಮ ಸಕಲ ರಕ್ಷಣೆಗಳಿಂದಲೂ ಕೂಡಿಕೊಂಡು ನಮ್ಮಲ್ಲಿಗೂ ಆದರದಿಂದ ಬನ್ನಿರಿ ॥

## English Translation

With those aids by which the circumambient (wind,) endowed with the vigour of his son, the measurer of the two worlds (of heaven and earth), and swiftest of the swift, beautifies (all things), and by which (Kakshivat) became learned in the three kinds of sacrifice; with them come, Aswins, willingly hither.

### ॥ ವಿಶೇಷವಿಷಯಗಳು ॥

**ಪರಿಜ್ಮಾ—ಪರಿತಃ ಗಂತಾ**—ಸರ್ವತ್ರ ಸಂಚರಿಸತಕ್ಕ ವಾಯುವು. ಸರ್ವತ್ರ ವ್ಯಾಪಿಸತಕ್ಕ ಎಂದೂ ಅರ್ಥವಾಗುತ್ತದೆ. ಇಂದ್ರಾದಿ ದೇವತೆಗಳಿಗೂ ಅನೇಕಕಡೆ ವಿಶೇಷಣವಾಗಿ ಪದವು ಈ ಉಪಯೋಗಿಸಲ್ಪಡುತ್ತದೆ. ಅವರ ಸರ್ವವ್ಯಾಪಕತ್ವವನ್ನು ತೋರಿಸುತ್ತದೆ. ಅದರಲ್ಲೂ ವಾಯುವಿಗೆ ಅತ್ಯಂತ ಉಚಿತವಾದ ವಿಶೇಷಣವಾಗಿದೆ

**ತನಯಸ್ಯ ಮಜ್ಮನಾ ದ್ವಿಮಾತಾ**—ಇದಕ್ಕೆ ಸಾಯಣರು ಎರಡು ವಿಧವಾಗಿಯೂ ಸ್ಕಂದಸ್ವಾಮಿಗಳು ಒಂದು ವಿಧವಾಗಿಯೂ ಅರ್ಥಮಾಡಿರುವರು. ಸಾಯಣರ ಮೊದಲನೆಯ ವಿವರಣೆಯಂತೆ ತನಯಸ್ಯ—ತನ್ನ ಪುತ್ರನಾದ ಅಗ್ನಿಯ ; ಮಜ್ಮನಾ—ಶಕ್ತಿಯೊಡನೆ ಕೂಡಿಕೊಂಡು, **ದ್ವಿಮಾತಾ**—ಎರಡು ಲೋಕಗಳನ್ನು ಆಳೆಯತಕ್ಕ ವಾಯುವು (ವಿಭೂಷತಿ) ಎಂದೂ, ಎರಡನೆಯ ವಿವರಣೆಯಂತೆ, **ದ್ವಿಮಾತಾ**—ಅರಣಿರೂಪದ ಎರಡು ಮಾತೃಗಳುಳ್ಳ, ತನಯಸ್ಯ—ತನ್ನ ಪುತ್ರನಾದ ಅಗ್ನಿಯ, ಮಜ್ಮನಾ—ಶಕ್ತಿಯಿಂದೊಡಗೂಡಿದ ವಾಯುವು (ವಿಭೂಷತಿ) ಎಂದೂ ಅರ್ಥವಾಗುತ್ತದೆ. ಸ್ಕಂದಸ್ವಾಮಿಗಳ ವಿವರಣೆಯಂತೆ—**ಯಾಭಿಃ ಅತ್ಯಂತಶೀಘ್ರಾಭಿಃ ಊತಿಭಿಃ ಪರಿಜ್ಮಾ ಸರ್ವತೋಗಾಮೀ ವಾಯುಃ**—ಅತ್ಯಂತ ಶೀಘ್ರವಾದ ಎಂದರೆ ಶೀಘ್ರವಾಗಿ ಪ್ರಯೋಜನಕಾರಿಯಾದ ರಕ್ಷಣೆಗಳೊಡಗೂಡಿದವನೂ ಸರ್ವತೋಗಾಮಿಯಾದವನೂ ಆದ ವಾಯುವು **ತನಯಸ್ಯ—ಅಪತ್ಯಭೂತಸ್ಯ ಪ್ರಾಣಿಜಾತಸ್ಯ ಅರ್ಥಾಯ**—ತನ್ನ ಪುತ್ರರೂಪರಾದ ಪ್ರಾಣಿಜಾತಗಳಿಗಾಗಿ ; **ಮಜ್ಮನಾ**—ತನ್ನ ಸ್ವಶಕ್ತಿಯಿಂದ ; ದ್ವಿಮಾತಾ—ದ್ವಯೋಃ **ಪ್ರಾಣಿಜಾತಯೋಃ ನಿರ್ಮಾತಾ** । ಎರಡುವಿಧವಾದ ಪ್ರಾಣಿಜಾತಗಳ ಸೃಷ್ಟಿಕರ್ತನೂ ಆದವನಾಗಿ **ಅಥವಾ ಉತ್ಪಾದಿಕೇ ಪ್ರಕೃತೀ ಮಾತರಾವಿಹೋಚ್ಯೇತೇ । ತೇ ದ್ವೇ ಯಸ್ಯ ಏಕಾ ಬ್ರಾಹ್ಮ್ಯಾಂ ಸೃಷ್ಟೌ ಅನ್ಯಾ ದೇವಸೃಷ್ಟೌ ಸ ದ್ವಿಮಾತಾ** । ಅಥವಾ ಬ್ರಾಹ್ಮೀ ಸೃಷ್ಟಿಗೆ ಮೂಲವಾದ ಮೂಲಪ್ರಕೃತಿಯೂ ಮತ್ತು ದೇವ ಸೃಷ್ಟಿಗೆ ಮೂಲವಾದ ವ್ಯಾವಹಾರಿಕಪ್ರಕೃತಿಯೂ ಎಂದರೆ ಪ್ರಕೃತಿಯ ಈ ಎರಡು ಅಂಶಗಳನ್ನೂ ತಾಯಿಯಾಗಿ

ಉಳ್ಳವನೂ, **ತೂರ್ಷು ತರಣಿಃ** ವೇಗಗಾಮಿಗಳಲ್ಲೆಲ್ಲಾ ಅತ್ಯಂತ ವೇಗವಾಗಿ ಸಂಚರಿಸತಕ್ಕವನೂ ಆದ ವಾಯುವು ವಿಭೂಷತಿ—ವಿವಿಧಂ ಪ್ರಾಪ್ನೋತಿ । ಎಲ್ಲವನ್ನೂ ವಿಧವಿಧವಾಗಿ ವ್ಯಾಪಿಸುತ್ತಾನೆ ಎಂದರ್ಥವಾಗುತ್ತದೆ.

**ದ್ವಿಮಾತಾ**—ಈ ವಿಶೇಷಣವು ಸಾಧಾರಣವಾಗಿ **ಅಗ್ನಿ**ಪರವಾಗಿಯೇ ಇದೆ. ಅಗ್ನಿಪರವಾದಾಗ **ಅರಣಿ**-**ರೂಪ**ಗಳಾದ ಎರಡು ಜನನಿಯರಿಂದ ಉತ್ಪನ್ನನಾದವನು ಎಂದಾಗಲಿ ಅಥವಾ **ದ್ಯಾವಾಪೃಥಿವೀ**ರೂಪರಾದ ಎರಡು ಜನನಿಯರನ್ನುಳ್ಳವನೆಂದಾಗಲಿ ಅಥವಾ **ದ್ವಯೋರ್ಲೋಕಯೋರ್ನಿರ್ಮಾತಾ** ಎಂದಾಗಲಿ ಅರ್ಥವಾಗುತ್ತದೆ. ಋಕ್ಸಂಹಿತೆಯಲ್ಲಿ **ದ್ವಿಮಾತಾ** ಎಂಬ ವಿಶೇಷಣವು ಇರುವ ಕಡೆಗಳಲ್ಲೆಲ್ಲಾ **ಅಗ್ನಿ**ಪರವಾಗಿಯೇ ಇದೆ. ಉದಾಹರಣೆಗೆ

**ವಿಭುರ್ವಿಶ್ವಸ್ಮೈ ಭುವನಾಯ ಮೇಧಿರೋ ದ್ವಿಮಾತಾ ಶಯುಃ ಕತಿಧಾ ಚಿದಾಯವೇ ।**

(ಋ. ಸಂ. ೧-೩೧-೨)

**ದ್ವಿಮಾತಾ ಹೋತಾ ವಿದಥೇಷು ಸಮ್ರಾಳನ್ವಗ್ರಂ ಚರತಿ ಕ್ಷೇತಿ ಬುಧ್ನಃ ।**

(ಋ. ಸಂ. ೩-೫೫-೭)

ಎಂಬ ಋಕ್ಕುಗಳಲ್ಲಿ **ದ್ವಿಮಾತಾ** ಎಂಬ ಪದವು ಅಗ್ನಿಗೇ ವಿಶೇಷಣವಾಗಿ **ದ್ಯಾವಾಪೃಥಿವ್ಯೌ ಅರಣೀ ವಾ ಮಾತೃ-ಸ್ಥಾನೀಯೇ ಯಸ್ಯ ಸ ದ್ವಿಮಾತಾ ಅಥವಾ ದ್ವಯೋರ್ಲೋಕಯೋರ್ನಿರ್ಮಾತಾ ।** ಎಂದರ್ಥವಾಗುತ್ತದೆ. ಇದೇ ಅರ್ಥದಲ್ಲಿ ಅಗ್ನಿಗೆ **ದ್ವಿಬಂಧುಃ** ಎಂಬ ವಿಶೇಷಣವೂ ಇದೆ. ಉದಾಹರಣೆಗೆ—

**ಸ ದ್ವಿಬಂಧುರ್ವೈತರಣೋ ಯಷ್ಟಾ ಸಬರ್ಧುಂ ಧೇನುಮಸ್ವಂ ದುಹಧ್ಯೈ ।**

(ಋ. ಸಂ. ೧೦-೬೧-೧೭)

ಎಂಬಲ್ಲಿ (ದ್ವಿಮಾತಾ ಎಂಬ ವಿಶೇಷಣದಂತೆ) **ದ್ವಿಬಂಧುಃ** ಎಂಬ ವಿಶೇಷಣವನ್ನೂ ಉಪಯೋಗಿಸಿದೆ. ಆದುದರಿಂದ ಮೇಲಿನ ವಿವರಣೆಯಲ್ಲಿ ಈ ಪದವನ್ನು ಅಗ್ನಿಪರವಾಗಿ ಅನ್ವಯಿಸಿ ಅರ್ಥಮಾಡಿದರೆ ಹೊಂದಿಕೊಳ್ಳುತ್ತದೆ ಯಾದ್ದರಿಂದ ಸಾಯಣರು ಹೇಳಿರುವ ಎರಡನೇ ಅರ್ಥವು ಹೆಚ್ಚು ಸಮಂಜಸವಾಗಿರುವಂತೆ ತೋರುವುದು.

**ತೂರ್ಷು ತರಣಿಃ—ತರೀತೃಷು ಧಾವತ್ಸು ಮಧ್ಯೇ ಅತಿಶಯೇನ ತರಿತಾ ಶೀಘ್ರಗಾಮೀ** ವೇಗಗಾಮಿಗಳ ನಡುವೆ ಅತ್ಯಂತ ವೇಗಗಾಮಿಯಾದ ಎಂದು **ವಾಯುವಿಗೆ** ವಿಶೇಷಣವಾಗಿದೆ. ಸಕಲ ದೇವತೆಗಳ ವೇಗ ವಾಯುವಿನ ವೇಗವು ಅಧಿಕವಾದುದು ಎಂಬ ವರ್ಣನೆಯು ಸಂಹಿತೆಗಳಲ್ಲಿಯೂ ಬ್ರಾಹ್ಮಣಗಳಲ್ಲಿಯೂ ಕಥಾ ರೂಪದಲ್ಲಿದೆ.

**ದೇವಾ ವೈ ಸೋಮಸ್ಯ ರಾಜ್ಞೋಽಗ್ರಪೇಯೇ ನ ಸಮಪಾದಯನ್ನಹಂ ಪ್ರಥಮಃ ಪಿಬೇಯ-ಮಹಂ ಪ್ರಥಮಃ ಪಿಬೇಯಮಿತ್ಯೇವಾಕಾಮಯಂತ ತೇ ಸಂಪಾದಯಂತೋಽಬ್ರುವನ್ ಹಂತಾಜಿಮಯಾಮ ಸ ಯೋ ನ ಉಜ್ಜೇಷ್ಯತಿ ಸ ಪ್ರಥಮಃ ಸೋಮಸ್ಯ ಪಾಸ್ಯತೀತಿ ತಥೇತಿ ತ ಆಜಿಮಯುಸ್ತೇಷಾಮಾಜಿಂ ಯತಾಮಭಿಸೃಷ್ಟಾನಾಂ ವಾಯುರ್ಮುಖಂ ಪ್ರಥಮಃ ಪ್ರತ್ಯಪದ್ಯತಾಥೇಂದ್ರೋಽಥ ಮಿತ್ರಾವರುಣಾವಥಾಶ್ವಿನೌ ಇತಿ ।**

(ಐ. ಬ್ರಾ. ೨-೨೫)

ಹಿಂದೆ ಸೋಮಪಾನವನ್ನು ಮಾಡುವ ಕಾಲದಲ್ಲಿ ಯಾರು ಮೊದಲು ಸೋಮರಸವನ್ನು ಪಾನಮಾಡಬೇಕೆಂಬ ವಿಷಯದಲ್ಲಿ ವಿಪ್ರತಿಪತ್ತಿಯುಂಟಾಗಿ ನಾನು ಮೊದಲು ತಾನು ಮೊದಲು ಎಂದು ಪ್ರತಿಯೊಬ್ಬರೂ ಅಪೇಕ್ಷಿಸಿದರು

ಆಗ ಅವರೆಲ್ಲರೂ ಒಟ್ಟಿಗೆ ಓಡುವ ಸಂಧ್ಯ ವನ್ನಿಟ್ಟು ಅವರಲ್ಲಿ ಯಾರು ಗೆಲ್ಲುವರೋ ಅವರು ಮೊದಲು ಸೋಮರಸ ವನ್ನು ಪಾನಮಾಡತಕ್ಕದ್ದು ಎಂಬ ಒಂದು ಒಪ್ಪಂದಕ್ಕೆ ಬಂದು ಎಲ್ಲರೂ ಓಡಲುಪಕ್ರಮಿಸಿದಾಗ ವಾಯುವು ಅವರೆಲ್ಲಿಲ್ಲಾ ಪ್ರಥಮಸ್ಥಾನವನ್ನು ಪಡೆದನು ಎಂಬ ಕಥೆಯಲ್ಲಿ ವಾಯುವು **ತೂರ್ಷು ತರಣಿಃ** ಎಂಬುದರ ಸತ್ಯಾಂಶ ವನ್ನು ವಿವರಿಸಿದೆ. ಇದರಂತೆಯೇ ಶತಪಥಬ್ರಾಹ್ಮಣದಲ್ಲಿಯೂ ಸಹ,

**ವಾಯವೇ ತ್ವಾ ಜುಷ್ಟಂ ಪ್ರೋಕ್ಷಾಮೀತಿ । ವಾಯುರ್ವೈ ದೇವಾನಾಮಾಶಿಷ್ಠೋ ಜವಮೇವಾಸ್ಮಿನ್ ದಧಾತಿ ।**

(ಶ. ಬ್ರಾ. ೧೩-೧-೨-೭)

ಎಂಬ ವಾಕ್ಯದಲ್ಲಿ ಹೇಳುವಂತೆ ವಾಯುವೇ ಸಕಲದೇವತೆಗಳಲ್ಲಿಯೂ ಹೆಚ್ಚು ವೇಗವುಳ್ಳವನು ಎಂದು ಹೇಳಿದೆ. ಈ ಅಂಶವನ್ನೇ ಪ್ರಕೃತವಾದ ಋಕ್ಕಿನಲ್ಲಿಯೂ ಹೇಳಿದೆ.

**ತ್ರಿಮಂತುಃ ಯಾಭಿಃ ವಿಚಕ್ಷಣಃ ಅಭವತ್**— ಮೂರು ಯಜ್ಞಗಳ ವಿಷಯದಲ್ಲಿ ಜ್ಞಾನವನ್ನು ಪಡೆದ ಕಕ್ಷೀವಂತನು ಯಾವ ನಿಮ್ಮ ಒತ್ತಾಸೆಗಳಿಂದ ವಿಶಿಷ್ಟಜ್ಞಾನಯುಕ್ತನಾಗಿ ಆದನೋ (ತಾಭಿಃ ಊತಿಭಿಃ), ಎಂದು ಅಶ್ವಿನೀದೇವತೆಗಳು **ಕಕ್ಷೀವಾನ್** ಎಂಬುವನಿಗೆ ಮಾಡಿದ ಸಹಾಯವನ್ನು ಸೂಚಿಸಿದೆ. **ತ್ರಿಮಂತುಃ** ಎಂಬ ಪದಕ್ಕೆ ಸಾಯಣರು **ತ್ರಯಾಣಾಂ ಮಂತಾ ತ್ರಿವಿಧೇಷು ಪಾಕಯಜ್ಞಹವಿರ್ಯಜ್ಞಸೋಮಯಜ್ಞೇಷ್ವಾಸಾದಿತಜ್ಞಾನಃ ಕಕ್ಷೀವಾನ್ ।** ಪಾಕಯಜ್ಞ, ಹವಿರ್ಯಜ್ಞ ಮತ್ತು ಸೋಮಯಜ್ಞ ಎಂಬ ಈ ಮೂರು ಯಜ್ಞಗಳ ವಿಷಯದಲ್ಲಿ ಜ್ಞಾನವನ್ನು ಪಡೆದ ಕಕ್ಷೀವಂತನೆಂದು ಅರ್ಥಮಾಡಿದ್ದಾರೆ. ಸ್ಕಂದಸ್ವಾಮಿಗಳ **ಅತ್ರೇತಿಹಾಸಮಾಚಕ್ಷತೇ । ಕಕ್ಷೀವಾನ್ನಾಮರ್ಷಿರತ್ಯಂತಮೂಢೋ ಬಭೂವ । ಸೋಽತೀತಾನಾಗತವರ್ತಮಾನೇಷು ತ್ರಿಷ್ವಪ್ಯಪ್ರಹತಂ ಜ್ಞಾನಮರ್ಥಯಮಾನಃ ಅಶ್ವಿನಾವಿಯಾಜ ತುಷ್ಟಾವ ಚ । ತಸ್ಮೈ ಅಶ್ವಿನೌ ತ್ರಿಕಾಲವಿಷಯಂ ಜ್ಞಾನಂ ಸರ್ವಾರ್ಥವಿಷಯಂ ಚ ದದತುರಿತಿ । ತದೇತತ್ಕಕ್ಷೀವಾನೇವ ವಕ್ಷ್ಯತಿ ।** ಕಕ್ಷೀವಂತನೆಂಬ ಒಬ್ಬ ಋಷಿಯು ಅತ್ಯಂತ ಮೂಢನಾಗಿದ್ದು ಅವನಿಗೆ ಭೂತಭವಿಷ್ಯದ್ವರ್ತಮಾನ ಕಾಲಗಳ ವ್ಯವಹಾರಗಳ ವಿಷಯಗಳಲ್ಲೆಲ್ಲಾ ಅಪ್ರತಿಹತವಾದ ಜ್ಞಾನವನ್ನು ಸಂಪಾದಿಸಬೇಕೆಂಬ ಉತ್ಕಟವಾದ ಇಚ್ಛೆಯುಂಟಾಗಿ ಅವನು ಅಶ್ವಿನೀದೇವತೆಗಳನ್ನು ಉದ್ದೇಶಿಸಿ ಯಜ್ಞಮಾಡಿದನು ಮತ್ತು ಅವರನ್ನು ಅತ್ಯಂತವಾಗಿ ಸ್ತುತಿಸಿ ಸಂತೋಷಪಡಿಸಿದನು. ಅದರಿಂದ ಸಂತುಷ್ಟರಾದ ಅಶ್ವಿನೀದೇವತೆಗಳು ಅವನಿಗೆ ತ್ರಿಕಾಲವಿಷಯಕವಾದುದೂ ಸರ್ವಾರ್ಥವಿಷಯಕವಾದುದೂ ಆದ ಜ್ಞಾನವನ್ನು ಅನುಗ್ರಹಿಸಿದರು ಎಂಬ ಕಥೆಯನ್ನು ಹೇಳಿ ಮುಂದೆ ಕಕ್ಷೀವಂತನೇ ಹೇಳತಕ್ಕ

**ಯುವಂ ನರಾ ಸ್ತುವತೇ ಪಜ್ರಿಯಾಯ ಕಕ್ಷೀವತೇ ಅರದತಂ ಪುರಂಧಿಂ ।**

(ಋ. ಸಂ. ೧-೧೧೬-೭)

ಎಂಬ ಋಕ್ಕನ್ನು ಉದಹರಿಸಿದ್ದಾರೆ. ಆದುದರಿಂದ **ತ್ರಿಮಂತುಃ** ಎಂಬ ಪದಕ್ಕೆ **ತ್ರಯಾಣಾಮತೀತಾನಾಗತವರ್ತಮಾನಾನಾಂ ಪ್ರಜ್ಞಾ ।** ಭೂತಭವಿಷ್ಯದ್ವರ್ತಮಾನಕಾಲಗಳ ವ್ಯವಹಾರಗಳನ್ನು ತಿಳಿದವನು ಎಂದೂ ; **ವಿಚಕ್ಷಣಃ**—ಎನ್ನುವುದಕ್ಕೆ **ವಿದ್ರಷ್ಟಾ । ಸರ್ವಾರ್ಥಾನಾಂ ಚ ಜ್ಞಾತಾ । ಪಂಡಿತವಚನೋ ವಾ ವಿಚಕ್ಷಣಶಬ್ದಃ । ಪಂಡಿತಶ್ಚಾಭವತ್ ।** ಸರ್ವಾರ್ಥಗಳನ್ನು ತಿಳಿದವನು ಎಂದರೆ ಪಂಡಿತನು ಎಂದರ್ಥ. ಯಾವ ನಿಮ್ಮ ಸಹಾಯಗಳಿಂದ

ಕಕ್ಷೀವಂತನನ್ನು ಪಂಡಿತನನ್ನಾಗಿ ಮಾಡಿದಿರೋ ಅದೇ ರಕ್ಷಣಾಸಹಾಯುಗಳಿಂದ ನಮ್ಮನ್ನೂ ಮಾಡಿರಿ ಎಂದು ಪ್ರಾರ್ಥಿಸಿದೆ.

ವ್ಯಾಕರಣಪ್ರಕ್ರಿಯಾ

**ಪರಿಜ್ಮಾ**—ಅಜ ಗತಿಕ್ಷೇಪಣಯೋಃ ಧಾತು. ಪರಿಪೂರ್ವವಾಗಿರುವಾಗ **ಶ್ವನ್ನುಕ್ಷನ್**—(ಉ. ಸೂ. ೧-೧೫೭) ಎಂಬುದರಿಂದ ಕನಿನ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಏಕವಚನಾಂತರೂಪ.

**ತೂರ್ಷು**—ತ್ವಾ ಪ್ಲವನತರಣಯೋಃ ಧಾತು. **ಬಹುಲಂ ಛಂದಸಿ** ಎಂಬುದರಿಂದ ಉತ್ವ. **ಉರಣ್ರ-ಪರಃ**—ಎಂಬುದರಿಂದ ರಪರವಾಗಿ ಬರುತ್ತದೆ. **ಹಲಿಚ**—(ಪಾ. ಸೂ.೮-೨-೭೭) ಎಂಬುದರಿಂದ ಉಪಧಾದೀರ್ಘ. ಅಥವಾ ತ್ವರ ಧಾತುವಿಗೆ **ಕ್ವಿಪ್ ಚ**— (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. **ಜ್ವರತ್ವರ ಸ್ರಿವ್ಯ**—(ಪಾ. ಸೂ. ೬-೪-೨೦) ಎಂಬುದರಿಂದ ಉಪಧಾಕ್ಕೂ (ಅಕಾರ) ವಕಾರಕ್ಕೂ ಊಠಾದೇಶ. ತೂರ್ ಶಬ್ದವಾಗುತ್ತದೆ. ಏಕಾಚಾದುದರಿಂದ **ಸಾವೇಕಾಚಸ್ತೃತೀಯಾದಿಃ**— (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವಿಭೂಷತಿ**—ವಿ ಉಪಸರ್ಗ. ಭೂ ಸತ್ತಾಯಾಂ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ **ಲೇಟೋಽಡಾಟೌ**—(ಪಾ, ಸೂ ೩-೪-೯೪) ಎಂಬುದರಿಂದ ಅಡಾಗಮ. **ಸಿಬ್ಬಹುಲಂ ಲೇಟಿ**—(ಪಾ. ಸೂ. ೩-೧-೩೪) ಎಂಬುದರಿಂದ ಸಿಪ್ ವಿಕರಣ. ಭೂಷತಿ ಎಂದು ರೂಪವಾಗುತ್ತದೆ. ಅಥವಾ ಭೂಷ ಅಲಂಕಾರೇ. ಧಾತು. ಭ್ವಾದಿ. ಲಟ್ ಪ್ರಥಮಪುರುಷ ಏಕವಚನಾಂತರೂಪ. ಯಾಭಿಃ ಎಂದು ಯದ್ಯೋಗವಿರುವುದರಿಂದ **ಯದ್ವೃತ್ತಾನ್ನಿತ್ಯಮ್**—(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಶಪ್ ತಿಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. **ತಿಙಿಚೋದಾತ್ತವತಿ**—(ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ವಿ) ನಿಘಾತಸ್ವರ ಬರುತ್ತದೆ.

**ಅಭವತ್**—ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ವಿಚಕ್ಷಣಃ**—ಚಕ್ಷಿಙ್ ವ್ಯಕ್ತಾಯಾಂ ವಾಚಿ. ಧಾತು. ಅನುದಾತ್ತೇತ್. **ಅನುದಾತ್ತೇತಶ್ಚ ಹಲಾದೇಃ** (ಪಾ. ಸೂ. ೩-೨-೧೪೯) ಎಂಬುದರಿಂದ ಯುಚ್ ಪ್ರತ್ಯಯ. **ಯುವೋರನಾಕೌ**—(ಪಾ ಸೂ. ೭-೨-೧) ಎಂಬುದರಿಂದ ಅನಕ್ಕೆ ಅನಾದೇಶ. **ಚಿತಃ**—(ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ॥ ೪ ॥

———:o:———

ಸಂಹಿತಾಪಾಠಃ

ಯಾಭೀ ರೇಭಂ ನಿವೃತಂ ಸಿತಮದ್ಭ್ಯ ಉದ್ವಂದನಮೈರಯತಂ
ಸ್ವರ್ದೃಶೇ ।
ಯಾಭಿಃ ಕಣ್ವಂ ಪ್ರ ಸಿಷಾಸಂತಮಾವತಂ ತಾಭಿರೂ ಷು ಊ-
ತಿಭಿರಶ್ವಿನಾ ಗತಂ ॥ ೫ ॥

ಪದಪಾಠಃ

ಯಾಭಿಃ । ರೇಭಂ । ನಿಽವೃತಂ । ಸಿತಂ । ಅತ್ಽಭ್ಯಃ । ಉತ್ । ವಂದನಂ ।
ಐರಯತಂ । ಸ್ವಃ । ದೃಶೇ ।
ಯಾಭಿಃ । ಕಣ್ವಂ । ಪ್ರ । ಸಿಸಾಸಂತಂ । ಆವತಂ । ತಾಭಿಃ । ಊಂ ಇತಿ । ಸು ।
ಊತಿಽಭಿಃ । ಅಶ್ವಿನಾ । ಆ । ಗತಂ ॥ ೫ ॥

ಸಾಯಣಭಾಷ್ಯಂ

ಹೇ ಅಶ್ವಿನೌ ಯಾಭಿರೂತಿಭೀ ರೇಭಮೇತತ್ಸಂಜ್ಞಮೃಷಿಂ ನಿವೃತಮಸುರೈಃ ಕೂಪೇಽವಕ್ಷಿಪ್ಯ ನಿವಾರಿತಂ ಸಿತಂ ತದೀಯೈಃ ಪಾಶೈರ್ಬದ್ಧಮೇವಂಭೂತಮೃಷಿಮದ್ಭ್ಯಃ ಸಕಾಶಾದುದೈರಯತಂ ಉದಗಮಯತಂ । ತಥಾ ವಂದನಮೇತತ್ಸಂಜ್ಞಮೃಷಿಂ ಚ ತಥಾಭೂತಮುದೈರಯತಂ । ಕಿಮರ್ಥಂ । ಸ್ವರಾದಿತ್ಯಂ ದೃಶೇ ದ್ರಷ್ಟುಂ । ಅಪಿ ಚ ಕಣ್ವಮಸುರೈರಂಧಕಾರೇ ಪ್ರಕ್ಷಿಪ್ತಂ ಸಿಷಾಸಂತಮಾಲೋಕಂ ಸಂಭಕ್ತುಮಿಚ್ಛಂತಂ ಯಾಭಿರೂತಿಭಿಃ ಪ್ರಾವತಂ ಪ್ರಕರ್ಷೇಣಾರಕ್ಷತಂ। ತಾಭಿರಿತ್ಯಾದಿ ಸಮಾನಂ॥ ರೇಭಂ । ರೇಭೃ ಶಬ್ದೇ । ರೇಭತೇ ಸ್ತೌತೀತಿ ರೇಭಃ । ಪಚಾದ್ಯಚ್ । ನಿವೃತಂ । ವೃಞ್ ವರಣೇ । ಅಸ್ಮಾದಂತರ್ಭಾವಿತಣ್ಯರ್ಥಾತ್ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಸಿತಂ । ಷಿಞ್ ಬಂಧನೇ । ಅದ್ಭ್ಯಃ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ವಂದನಂ । ವದಿ ಅಭಿವಾದನಸ್ತುತ್ಯೋಃ । ವಂದತೇ ಸ್ತೌತೀತಿ ವಂದನಃ । ನಂದ್ಯಾದಿಲಕ್ಷಣೋ ಲ್ಯುಃ । ಲಿತ್ಸ್ವರೇಣ ಪ್ರತ್ಯಯಾತ್ಪೂ-

ರ್ವಸ್ಯೋದಾತ್ತತ್ವಂ । ಸ್ವರಿತ್ಯೇತದ್ವಿವಸ್ವಾದಿತ್ಯಸ್ಯ ಚ ಸಾಧಾರಣನಾಮಧೇಯಂ । ತದುಕ್ತಂ ಯಾಸ್ಕೇನ । ಸ್ವರಾದಿತ್ಯೋ ಭವತಿ ಸು ಅರಣಃ ಸು ಈರಣಃ । ದಿ. ೨-೧೪ । ಇತಿ । ಸ್ವರಾದಿನಿಪಾತಂ । ಪಾ. ೧-೧-೩೭ । ಇತ್ಯವ್ಯಯತ್ವಾತ್ಸುಪೋ ಲುಕ್ । ದೃಶೇ । ದೃಶೇ ವಿಖ್ಯೇ ಚೇತಿ ದೃಶೇಸ್ತುಮರ್ಥೇ ಕೇಪ್ರತ್ಯ-ಯಾಂತೋ ನಿಪಾತ್ಯತೇ । ಸಿಷಾಸಂತಂ । ವನ ಷಣ ಸಂಭಕ್ತೌ । ಸನಿ ಸನೀವಂತರ್ಧೇತ್ಯಾದಿನಾ ವಿಕಲ್ಪನಾ-ದಿಡಭಾವಃ। ಜನಸನಖನಾಂ ಸನ್ಝಲೋರಿತ್ಯಾತ್ವಂ । ದ್ವಿರ್ಭಾವೇಽಭ್ಯಾಸಸ್ಯ ಹ್ರಸ್ವತ್ವಂ। ಸನ್ಯತ ಇತೀತ್ವಂ ॥

ಪ್ರತಿಪದಾರ್ಥ

**ಅಶ್ವಿನಾ**-- ಎಲೈ ಅಶ್ವಿನೀ ದೇವತೆಗಳೇ । **ಯಾಭಿಃ**-- ಯಾವ (ನಿಮ್ಮ) ರಕ್ಷಣೆಗಳಿಂದ । **ನಿವೃತಂ**-- (ರಾಕ್ಷಸರಿಂದ ಬಾವಿಯಲ್ಲಿ) ತಳ್ಳಲ್ಪಟ್ಟವನೂ । **ಸಿತಂ**-- ಬಂಧಿತನಾದನೂ ಆದ । **ರೇಭಂ**-- ರೇಭನೆಂಬ ಋಷಿಯನ್ನು । **ಅದ್ಭ್ಯಃ**-- ನೀರಿನಿಂದ । **ಉತ್ ಐರಯತಂ**-- ಮೇಲಕ್ಕೆತ್ತಿದಿರೋ ( ಹಾಗೆಯೇ) । **ವಂದನಂ**— (ಅದೇ ಕಷ್ಟಕ್ಕೆಸಿಕ್ಕಿದ್ದ) ವಂದನನನ್ನು । **ಸ್ವಃ ದೃಶೇ**-- ಆದಿತ್ಯನ ದರ್ಶನಕ್ಕಾಗಿ ಮತ್ತು (ಭಾವಿಯಿಂದ ಮೇಲಕ್ಕೆತ್ತಿದಿರೋ) । **ಸಿಷಾಸಂತಂ**—(ಅಸುರರು ಅಂಧಕಾರಕ್ಕೆ ತಳ್ಳಿದಾಗ) ಬೆಳಕನ್ನು ನೋಡಬೇಕೆಂದು ಆಸೆ ಪಟ್ಟ । **ಕಣ್ವಂ**— ಕಣ್ವನೆಂಬ ಋಷಿಯನ್ನು । **ಯಾಭಿಃ**-- ಯಾವ ನಿಮ್ಮ ರಕ್ಷಣೆಗಳಿಂದ । **ಪ್ರ ಆವತಂ**— ಸಂಪೂರ್ಣವಾಗಿ ರಕ್ಷಿಸಿದರೋ, । **ತಾಭಿಃ ಊತಿಭಿಃ ಉ**— ಆ ಎಲ್ಲಾ ರಕ್ಷಣೆಗಳೊಡನೆಯೂ ಕೂಡಿಕೊಂಡು (ನಮ್ಮಲ್ಲಿಗೂ) । **ಸು ಆ ಗತಂ**— ಆದರದಿಂದ ಬನ್ನಿರಿ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ರಾಕ್ಷಸರು ಬಂಧಿಸಿ ಬಾವಿಯಲ್ಲಿ ತಳ್ಳಿದಾಗ ರೇಭನೆಂಬಋಷಿಯನ್ನೂ ಮತ್ತು ವಂದನನೆಂಬ ಋಷಿಯನ್ನೂ ಅಂತರಿಕ್ಷದಲ್ಲಿ ಆದಿತ್ಯನ ದರ್ಶನಕ್ಕಾಗಿ ಯಾವ ನಿಮ್ಮ ರಕ್ಷಣೆಗಳಿಂದ ಮೇಲಕ್ಕೆತ್ತಿದಿರೋ, ಮತ್ತು ಅಸರರು ಅಂಧಕಾರಕ್ಕೆ ತಳ್ಳಿದಾಗ ಬೆಳಕನ್ನು ನೋಡಬೇಕೆಂದು ಆಸೆಪಟ್ಟ ಕಣ್ವನೆಂಬ ಋಷಿಯನ್ನೂ ಯಾವ ನಿಮ್ಮ ರಕ್ಷಣೆಗಳಿಂದ ಕಾಪಾಡಿದಿರೋ, ಆ ನಿಮ್ಮ ಎಲ್ಲಾ ರಕ್ಷಣೆಗಳೊಡನೆಯೂ ಕೂಡಿಕೊಂಡು ನಮ್ಮಲ್ಲಿಗೂ ಆದರ, ದಿಂದ ಬನ್ನಿರಿ.

English Tranlation

With those aids by which you raised up from the water, Rebha, who had been cast bound (into a well), and also Vandana (similarly circumstanced) to behold the sky ; by which you protected Kanwa, when longing to see the light ; with them, Aswins, come willingly hither.

ವಿಶೇಷವಿಷಯಗಳು

**ನಿವೃತಂ ಸಿತಂ ರೇಭಂ ಅದ್ಭ್ಯಃ ಉದೈರಯತಂ** -- ಅಸುರರಿಂದ ಬಾವಿಯಲ್ಲಿ ತಳ್ಳಲ್ಪಟ್ಟವನೂ, ಪಾಶಗಳಿಂದ ಕಟ್ಟಲ್ಪಟ್ಟವನೂ ಆದ ರೇಭನನ್ನು ನೀರಿನಿಂದ ಮೇಲಕ್ಕೆತ್ತಿದಿರಿ, ಎಂದು ಇತಿಹಾಸವನ್ನು ಹೇಳಿದೆ. ಈ ಇತಿಹಾಸವನ್ನು ವಿವರಿಸುತ್ತಾ ಸ್ಕಂದಸ್ವಾಮಿಗಳು. ಅತ್ರೇತಿಹಾಸಮಾಚಕ್ಷತೇ। ಸಂಧ್ಯಾಕಾಲೇ ಸ್ನಾತ್ವಾ ಹ್ರದಾದುತ್ತೀರ್ಣಂರೇಭಮೃಷಿಂ ಅಗ್ನಿಹೋತ್ರಂ ಹೋತುಂ ಸ್ವಾಶ್ರಮಂ ಗಚ್ಛಂತಮಸುರಾ ದದೃಶುಃ । ತೇ ದೇವಾನಾ

ಮುಯಂ ಯಷ್ಟಾ ಸ್ತೋತಾ ಚೇತಿ ಜ್ಞಾತ್ವಾ ಸಂಕ್ರುದ್ಧಾಃ ತಂ ತಾಡಯಿತ್ವಾ ಬದ್ಧ್ವಾ ಚ ತಸ್ಮಿನ್ ಪ್ರದೇ ಪ್ರಕ್ಷಿಪ್ಯ ದಶರಾತ್ರಂ ಧಾರಯಾಂಚಕ್ರುರಿತಿ। ತದಪಿ ಕಕ್ಷೀವಾನೇವ ವಕ್ಷ್ಯತಿ। ಸಂಧ್ಯಾಕಾಲದಲ್ಲಿ ಸ್ನಾನಮಾಡಿ ಅಗ್ನಿ ಹೋತ್ರಾದಿ ಕಾರ್ಯಗಳನ್ನು ನೆರವೇರಿಸಲು ತನ್ನ ಆಶ್ರಮಕ್ಕೆ ಹೊರಟಿದ್ದ ರೇಭನೆಂಬ ಋಷಿಯನ್ನು ಅಸುರರು ನೋಡಿ ಈತನು ದೇವತೆಗಳನ್ನು ದ್ವೇಷಿಸಿ ಯಜ್ಞವನ್ನು ಮಾಡುತ್ತಾನೆ, ಅವರನ್ನು ಸ್ತೋತ್ರಮಾಡತಕ್ಕ ಭಕ್ತನು ಎಂದು ತಿಳಿದು ಕೋಪಗೊಂಡು ಅವನನ್ನು ಹೊಡೆದು, ಪಾಶಗಳಿಂದ ಅವನನ್ನು ಬಂಧಿಸಿ ಅದೇ ಕೊಳದಲ್ಲಿ ಅವನನ್ನು ತಳ್ಳಿ ಹತ್ತು ರಾತ್ರಿಗಳಕಾಲ ಅವನನ್ನು ಅಲ್ಲೇ ಬಂಧಿಸಿಟ್ಟರು ಎಂದು ಕಥೆಯನ್ನು ಹೇಳಿ ಈ ಸನ್ನಿವೇಶವನ್ನು ಕಕ್ಷೀವಂತನೂ ಸಹ ಹೇಳಿದ್ದಾನೆಂದು ಅವನಿಂದ ದೃಷ್ಟವಾದ ಋಕ್ಕುಗಳನ್ನು ಉದಹರಿಸಿದ್ದಾರೆ.

ದಶ ರಾತ್ರೀರಶಿವೇನಾ ನವ ದ್ಯೂನವನದ್ಧಂ ಶ್ನಥಿತಮಪ್ಸ್ವ೧ನ್ತಃ।
ವಿಪ್ರುತಂ ರೇಭಮುದನಿ ಪ್ರವೃಕ್ತಮುನ್ನಿನ್ಯಥುಃ ಸೋಮಮಿವ ಸ್ರುವೇಣ।
(ಋ. ಸಂ. ೧-೧೧೬-೨೪)

ಅಶ್ವಂ ನ ಗೂಳ್ಹಮಶ್ವಿನಾ ದುರೇವೈರೃಷಿಂ ನರಾ ವೃಷಣಾ ರೇಭಮಪ್ಸು।
ಸಂ ತಂ ರಿಣೀಥೋ ವಿಪ್ರುತಂ ದಂಸೋಭಿರ್ನ ವಾಂ ಜೂರ್ಯಂತಿ ಪೂರ್ವ್ಯಾ ಕೃತಾನಿ।
(ಋ. ಸಂ. ೧-೧೧೭-೪)

ಇತ್ಯಾದಿ ಋಕ್ಕುಗಳಲ್ಲಿ ಕಕ್ಷೀವಾನ್ ಎಂಬ ಋಷಿಯೂ ಸಹ ಅಶ್ವಿನೀದೇವತೆಗಳನ್ನು ಸ್ತುತಿಸುವಾಗ ಅವರು ರೇಭನಿಗೆ ಮಾಡಿದ ಸಹಾಯವನ್ನೂ, ಅವನನ್ನು ಬಾವಿಯಿಂದ ಮೇಲಕ್ಕೆತ್ತಿ ಗಾಯಗೊಂಡ ಅವನನ್ನು ತಮ್ಮ ಚಿಕಿತ್ಸೆ ಗಳಿಂದ ಗುಣಪಡಿಸಿದುದನ್ನೂ ಪ್ರಶಂಸಿಸಿ ಇಂತಹ ಉಪಕಾರಕಗಳಾದ ಕಾರ್ಯಗಳನ್ನು ಯಾರೂ ಎಂದೂ ಮರೆಯಲಾಗು ವುದಿಲ್ಲವೆಂದು ಹೇಳಿದ್ದಾನೆ. ಕಕ್ಷೀವಂತನ ಮಗಳಾದ ಘೋಷಾ ಎಂಬ ಹೆಸರಿನ ಬ್ರಹ್ಮವಾದಿನಿಯೂ ಸಹ ಇದೇ ಇತಿಹಾಸವನ್ನು

ಯುವಂ ಹ ರೇಭಂ ವೃಷಣಾ ಗುಹಾ ಹಿತಮುದೈರಯತಂ ಮಮೃವಾಂಸಮಶ್ವಿನಾ।
(ಋ. ಸಂ. ೧೦-೩೯-೯)

ಎಂಬ ಋಕ್ಕಿನಲ್ಲಿ ಹೇಳಿ ಅಶ್ವಿನೀ ದೇವತೆಗಳನ್ನು ಸ್ತುತಿಸಿದ್ದಾಳೆ.

ವಂದನಂ ಸ್ವಃ ದೃಶೇ—ಅದೇ ಕಷ್ಟಕ್ಕೆ ಸಿಕ್ಕಿದ್ದ ವಂದನನ್ನೂ ಸಹ ಆದಿತ್ಯನ ದರ್ಶನಕ್ಕಾಗಿ ಮೇಲಕ್ಕೆತ್ತಿ ದಿರಿ ಎಂದು ಇತಿಹಾಸವಿದೆ. ಇದನ್ನೂ ಸಹ ಸ್ಕಂದಸ್ವಾಮಿಗಳು ವಿವರಿಸುತ್ತಾ ತಥಾಪರಮಿತಿಹಾಸಮಾಚಕ್ಷತೇ। ವಂದನಋಷಿರ್ಜರಯಾ ಪರೀತಃ ಕೂಪಸಮೀಪೇ ಗಚ್ಛನ್ ಕೂಪೇ ಪಪಾತ। ಸ ತತ್ರಸ್ಥೋಽಶ್ವಿನೌ ತುಷ್ಟಾವ। ತಮಶ್ವಿನಾವಾಗತ್ಯೋತ್ತಾರಯಾಂಚಕ್ರುರಿತಿ। ವಾರ್ಧಕ್ಯದಿಂದ ತುಂಬಿದ ವಂದನನೆಂಬ ಋಷಿಯು ಕೂಪಸಮೀಪದಲ್ಲಿ ಹೋಗುತ್ತಿದ್ದಾಗ ಕೂಪದಲ್ಲಿ ಬಿದ್ದುಬಿಟ್ಟನು. ಅಲ್ಲಿಂದಲೇ ಅವನು ಅಶ್ವಿನೀದೇವತೆಗಳನ್ನು ಸ್ತುತಿಸಿದಾಗ ಅವರು ಅವನನ್ನು ಬಾವಿಯಿಂದ ಮೇಲಕ್ಕೆತ್ತಿದರು ಎಂದು ಕಥೆಯನ್ನು ಹೇಳಿ ಇದೇ ಸನ್ನಿವೇಶವನ್ನು ಕಕ್ಷೀವಂತನೂ ಮತ್ತು ಅವನ ಪುತ್ರಿಯಾದ ಘೋಷಾ ಎಂಬ ಬ್ರಹ್ಮವಾದಿನಿಯೂ ಹೇಳಿರುತ್ತಾರೆಂದೂ ಸಹ ಅವರಿಂದ ಪಠಿತಗಳಾದ ಋಕ್ಕುಗಳನ್ನೂ ಉದಹರಿಸಿದ್ದಾರೆ.

ತದ್ವಾಂ ನರಾ ಶಂಸ್ಯಂ ರಾಧ್ಯಂ ಚಾಭಿಷ್ಟಿಮನ್ನಾಸತ್ಯಾ ವರೂಥಂ।
ಯದ್ವಿದ್ವಾಂಸಾ ನಿಧಿಮಿವಾಪಗೂಳ್ಹಮುದ್ದರ್ಶತಾದೂಪಥುರ್ವಂದನಾಯ।
(ಋ. ಸಂ. ೧-೧೧೬-೧೧)

ಇತ್ಯಾದಿ ಋಕ್ಕುಗಳಲ್ಲಿ ಅವನನ್ನು ಬಾವಿಯಿಂದ ಮೇಲಕ್ಕೆತ್ತಿರುವನ್ನೂ,

**ಯುವಂ ವಂದನಂ ನಿರ್ಋತಂ ಜರಣ್ಯಯಾ ರಥಂ ನ ದಸ್ರಾ ಕರಣಾ ಸಮಿನ್ವಥಃ ।**

(ಋ. ಸಂ. ೧-೧೧೯-೭)

ಇತ್ಯಾದಿ ಋಕ್ಕುಗಳಲ್ಲಿ ವೃದ್ಧನಾದ ವಂದನನ್ನು ಪುನಃ ಯುವಕನನ್ನಾಗಿ ಮಾಡಿ ದೀರ್ಘಾಯುವನ್ನು ಕೊಟ್ಟಿದ್ದನ್ನೂ ಹೇಳಿದೆ.

**ಸಿಷಾಸಂತಂ ಕಣ್ವಂ ಪ್ರ ಆವತಂ**—ಅಸುರರು ಅಂಧಕಾರಕ್ಕೆ ತಳ್ಳಿದಾಗ ಬೆಳಕನ್ನು ನೋಡಬೇಕೆಂದು ಆಸೆಪಟ್ಟ ಕಣ್ವನನ್ನೂ ಸಹ ನಿಮ್ಮ ಸಹಾಯಗಳಿಂದ ರಕ್ಷಿಸಿದಿರಿ ಎಂದು ಇನ್ನೊಂದು ಇತಿಹಾಸವಿದೆ. **ಅತ್ರಾಪೀತಿಹಾಸಮಾಚಕ್ಷತೇ । ಕಣ್ವಋಷಿರಂಧೋ ಬಭೂವ । ಸ ಚಕ್ಷುಷ್ಕಾಮೋಽಶ್ವಿನೌ ತುಷ್ಟಾವ । ತಸ್ಮೈ ಅಶ್ವಿನೌ ಚಕ್ಷುರ್ದದತುರಿತಿ।** ಕಣ್ವಋಷಿಯು ಅಂಧನಾದಾಗ ಅಶ್ವಿನೀ ದೇವತೆಗಳನ್ನು ಸ್ತುತಿಸಲು ಅವರು ಅವನಿಗೆ ಕಣ್ಣನ್ನು ಕೊಟ್ಟು ಅಂಧತ್ವವನ್ನು ತಪ್ಪಿಸಿದರು ಎಂಬ ಕಥೆಯು ಪ್ರಸಿದ್ಧವಾಗಿದೆ.

ಕಣ್ವನ ಹೆಸರೂ ಕಣ್ವಸಂತತಿಯ ಹೆಸರೂ ಸಹ ಅತ್ಯಂತ ಪ್ರಾಚೀನವೂ ಪ್ರಸಿದ್ಧವೂ ಆಗಿವೆ. ಕಣ್ವನ ಮಹಿಮೆಯನ್ನೂ ಅವನ ದಿವ್ಯವಾದ ಕೃತಿಗಳನ್ನೂ ಋಕ್ಸಂಹಿತೆಯಲ್ಲಿ ಅನೇಕಕಡೆಗಳಲ್ಲಿ ಪ್ರಶಂಸಿಸಿದೆ.

**ಯಮಗ್ನಿಂ ಮೇಧ್ಯಾತಿಥಿಃ ಕಣ್ವ ಈಧ ಋತಾದಧಿ ।**

(ಋ. ಸಂ. ೧-೩೬-೧೧)

**ಅಗ್ನಿರ್ವವ್ನೇ ಸುವೀರ್ಯಮಗ್ನಿಃ ಕಣ್ವಾಯ ಸೌಭಗಂ ।**

(ಋ. ಸಂ. ೧-೩೬-೧೭)

ಇತ್ಯಾದಿ ಋಕ್ಕುಗಳಲ್ಲಿ ಕಣ್ವನು ಅಗ್ನಿಯನ್ನು ಆರಾಧಿಸಿ ಅಗ್ನಿಯಿಂದ ಅನುಗ್ರಹವನ್ನು ಪಡೆದುದನ್ನೂ,

**ಯಾಭಿಃ ಕಣ್ವಮಭಿಷ್ಟಿಭಿಃ ಪ್ರಾವತಂ ಯುವಮಶ್ವಿನಾ ।**

(ಋ. ಸಂ. ೧-೪೭-೫)

**ಯುವಂ ಕಣ್ವಾಯಾಪಿರಿಪ್ತಾಯ ಚಕ್ಷುಃ ಪ್ರತ್ಯಧತ್ತಂ ಸುಷ್ಟುತಿಂ ಜುಜುಷಾಣಾ ।**

(ಋ. ಸಂ. ೧-೧೧೮-೭)

ಇತ್ಯಾದಿ ಅನೇಕ ಋಕ್ಕುಗಳಲ್ಲೂ (ಋ. ಸಂ. ೮-೫-೨೩, ೮-೫-೨೫) ಸಹ ಕಣ್ವನು ಅಶ್ವಿನೀ ದೇವತೆಗಳಿಂದ ರಕ್ಷಣೆಯನ್ನು ಪಡೆದುದನ್ನೂ, ಇದೇ ರೀತಿ ತಿಳಿಸಿದೆ. ಕಣ್ವಪುತ್ರರೂ ಅವನ ಸಂತತಿಯವರೂ ಸಹ ಋಕ್ಸಂಹಿತೆಯ ಅನೇಕ ಸೂಕ್ತಗಳ ದ್ರಷ್ಟೃಗಳೆಂದು ಪ್ರಸಿದ್ಧರಾಗಿದ್ದಾರೆ. ಎಂಟನೆಯ ಮಂಡಲದಲ್ಲಿ ಕೆಲವು ಸೂಕ್ತಗಳನ್ನುಳಿದು ಉಳಿದ ಭಾಗವೆಲ್ಲಾ ಕಾಣ್ವಸಂತತಿಯವರದು ಎಂದೇ ತಿಳಿದುಬಂದಿದೆ. ಆಶ್ವಲಾಯನರು ಈ ಮಂಡಲಕಾರರನ್ನು ಪ್ರಗಾಥರೆಂದು ಕರೆಯುತ್ತಾರೆ. ಪ್ರಗಾಥರೇ ಕಾಣ್ವವಂಶದವರೂ ಪ್ರಥಮಸೂಕ್ತದ ಕರ್ತರೂ ಆಗಿರುವುದರಿಂದ ಆಶ್ವಲಾಯನರು ಎಲ್ಲರನ್ನೂ ಒಟ್ಟಿಗೆ ಪ್ರಗಾಥರೆಂದು ಕರೆದಿರುವುದು ಸಹಜವಾಗಿದೆ. ಅಲ್ಲದೆ ಕಣ್ವನೂ ಮತ್ತು ಪ್ರಗಾಥನೂ ಸಹೋದರರೆಂದೂ, ಕಣ್ವಸಹೋದರನಾದ ಪ್ರಗಾಥನು ತನ್ನ ಮಹಿಮೆಯಿಂದಲೂ ಆತ್ಮಶುದ್ಧಿಯಿಂದಲೂ ಸಹ ಸೂಕ್ತನಿರ್ಮಾತೃವಾಗಲು ಶಕ್ತಿಯನ್ನು ಪಡೆದನೆಂದೂ ಸಹ ಬೃಹದ್ದೇವತೆಯಲ್ಲಿ ಕಥೆಯಿದೆ.

ಕಣ್ವಶ್ಚೈವ ಪ್ರಗಾಥಶ್ಚ ಘೋರಪುತ್ರೌ ಬಭೂವತುಃ ।
ಗುರುಣಾ ತಾವನುಜ್ಞಾತಾವೂಷತುಃ ಸಹಿತೌ ವನೇ ॥
ವಸತೋಸ್ತು ತಯೋಸ್ತತ್ರ ಕಣ್ವಪತ್ನ್ಯಾಃ ಶಿರಃ ಸ್ವಪನ್ ।
ಕೃತ್ವಾ ಕನೀಯಾನ್ಕಣ್ವಸ್ಯ ಉತ್ಸಂಗೇ ನಾನ್ವಬುಧ್ಯತ ॥
ಶಪ್ತುಕಾಮಸ್ತು ತಂ ಕಣ್ವಃ ಕ್ರುದ್ಧಃ ಪಾಪಾಭಿಶಂಕಯಾ ।
ಬೋಧಯಾಮಾಸ ಪಾದೇನ ದಿಧಕ್ಷನ್ನಿವ ತೇಜಸಾ ॥
ವಿದಿತ್ವಾ ತಸ್ಯ ತಂ ಭಾವಂ ಪ್ರಗಾಥಃ ಪ್ರಾಂಜಲಿಃಸ್ಥಿತಃ ।
ಮಾತೃತ್ವೇ ಚ ಪಿತೃತ್ವೇ ಚ ವರಯಾಮಾಸ ತಾವುಭೌ ॥
ಸ ಘೌರೋ ವಾಥ ಕಾಣ್ವೋ ವಾ ವಂಶಜೈರ್ಬಹುಭಿಃ ಸಹ ।
ದದರ್ಶಾನ್ಯೈಶ್ಚ ಸಹಿತ ಋಷಿರ್ಮಂಡಲಮಷ್ಟಮಂ ।

(ಬೃ. ದೇ, ೬-೩೫ ರಿಂದ ೩೯)

ಕಣ್ವ ಮತ್ತು ಪ್ರಗಾಥರಿಬ್ಬರೂ ಸಹ ಘೋರನ ಪುತ್ರರು. ಅವರಿಬ್ಬರೂ ಗುರುವಿನ ಅನುಜ್ಞೆಯಿಂದ ಕಾಡಿನಲ್ಲಿ ವಾಸಮಾಡುತ್ತಿದ್ದರು. ಹೀಗಿರುವಾಗ ಒಂದುಸಲ ತಮ್ಮನಾದ ಪ್ರಗಾಥನು ಕಣ್ವನ ಪತ್ನಿಯ ತೊಡೆಯಮೇಲೆ ತಲೆಯನ್ನಿಟ್ಟು ಮಲಗಿ ನಿದ್ರೆಮಾಡುತ್ತಾ ಎಚ್ಚರಗೊಳ್ಳಲೇ ಇಲ್ಲ. ಕಣ್ವನು ಇದನ್ನು ನೋಡಿ ಅನುಮಾನಪಟ್ಟು ಅವನನ್ನು ಶಪಿಸುವ ಉದ್ದೇಶದಿಂದ ಅವನನ್ನು ಕಾಲಿನಲ್ಲಿ ಮೆಟ್ಟಿ ಎಬ್ಬಿಸಿ ತನ್ನ ಕ್ರೋಧಾಗ್ನಿಯಿಂದ ದಹಿಸಿಬಿಡುವಂತೆ ನೋಡಿದನು. ಪ್ರಗಾಥನು ಅಣ್ಣನ ಉದ್ದಿಶ್ಯವನ್ನು ತಿಳಿದು ಕೈಜೋಡಿಸಿ ಅವರನ್ನು ತಾನು ಮಾತಾಪಿತೃಗಳೆಂದು ತಿಳಿದಿರುವನೆಂದೂ ಅವರಂತೆಯೇ ತನ್ನನ್ನು ಪುತ್ರನಂತೆ ಕಾಣಬೇಕೆಂದೂ ವಿನಯದಿಂದ ಬೇಡಿಕೊಂಡನು. ಈ ವಿಧವಾದ ಆತ್ಮಶುದ್ಧಿಯಿಂದ ಎಂಟನೆಯ ಮಂಡಲದ ಸೂಕ್ತಗಳ ದರ್ಶನವನ್ನು ಪಡೆದು ಕಾಣ್ವಸಂತತಿಯ ಇತರ ಋಷಿಗಳೊಂದಿಗೆ ಎಂಟನೆಯ ಮಂಡಲದ ನಿರ್ಮಾತೃವಾದನೆಂದು ಕಥೆಯು ಉಕ್ತವಾಗಿದೆ. ಇದು ಕಣ್ವನ ಮತ್ತು ಕಾಣ್ವಸಂತತಿಯ ಪ್ರಭಾವದ ವರ್ಣನೆಯಾಗಿದೆ. ಕಣ್ವನ ಮಹಿಮೆಯ ಆಧಿಕ್ಯವನ್ನು

ಸ ಇದಗ್ನಿಃ ಕಣ್ವತಮಃ ಕಣ್ವಸಖಾರ್ಯಃ ಪರಸ್ಯಾಂತರಸ್ಯ ತರುಷಃ ।

(ಋ. ಸಂ. ೧೦-೧೧೫-೫)

ಇತ್ಯಾದಿ ಋಕ್ಕುಗಳಲ್ಲಿ ಕಣ್ವನು ಅಗ್ನ್ಯಾದಿ ದೇವತೆಗಳ ಸಖನೆಂದು ವರ್ಣಿಸಿರುವುದರಿಂದ ತಿಳಿಯಬಹುದು. ಇದೇ ರೀತಿ ವಾಜಸನೇಯ ಸಂಹಿತೆಯಲ್ಲಿಯೂ, (೧೭-೭೪), ಪಂಚವಿಂಶಬ್ರಾಹ್ಮಣದಲ್ಲೂ (೮-೨೭), ಕೌಷೀತಕೀ ಬ್ರಾಹ್ಮಣದಲ್ಲೂ (೨೮-೮) ಸಹ ಕಣ್ವನ ಮಹಿಮೆಯು ವರ್ಣಿತವಾಗಿದೆ. ಶತಪಥಬ್ರಾಹ್ಮಣದಲ್ಲೂ ಸಹ,

ಚಿತ್ರಾಮಾಹಂ ವೃಣೇ ಸುಮತಿಂ ವಿಶ್ವಜನ್ಯಾಂ ಯಾಮಸ್ಯ ಕಣ್ವೋ ಅದುಹತ್ಪ್ರಪೀನಾಂ ಸಹಸ್ರಧಾರಾಂ ಪಯಸಾ ಮಹೀಂ ಗಾಮಿತಿ ಕಣ್ವೋ ಹ್ಯೆನಾಂ ದದರ್ಶ ಸಾ ಹಾಸ್ಮೈ ಸಹಸ್ರಧಾರಾ ಸರ್ವಾನ್ಕಾಮಾನ್ದುದುಹೇ ।

(ಶ. ಬ್ರಾ. ೯-೨-೩-೩೮)

ಸಹಸ್ರಧಾರೆಗಳುಳ್ಳದ್ದೂ ಸಕಲರಿಗೂ ವರ್ಷದಾಯಕವಾದದ್ದೂ, ಪೂಜ್ಯವಾದದ್ದೂ ಆದ ಗೋವನ್ನು ಕಣ್ವನು ದರ್ಶನಮಾಡಿದನು, ಅದನ್ನು ಕರೆದಾಗ ಇವನ ಇಷ್ಟಾರ್ಥಗಳನ್ನೆಲ್ಲಾ ಕರೆಯಿತು ಎಂದು ಸಹ ವಾಜಸನೇಯ ಸಂಹಿತೆ

ಯಲ್ಲಿ ಉಕ್ತವಾಗಿರುವುದನ್ನು ಉದಹರಿಸಿದೆ. ಇಂತಹ ಪ್ರಭಾವವುಳ್ಳ **ಕಣ್ವನಿಗೆ** ಅಶ್ವಿನೀದೇವತೆಗಳು ಸಹಾಯ ಮಾಡಿರುವನ್ನು ಇಲ್ಲಿ ಹೇಳಿ ಅಂತಹ ರಕ್ಷಣೆಯು ತಮಗೂ ದೊರಕಬೇಕೆಂದು ಪ್ರಾರ್ಥಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ರೇಭಮ್**—ರೇಭೃ ಶಬ್ದೇ. ಧಾತು. ರೇಭತೇ ಸ್ತೌತಿ ಇತಿ ರೇಭಃ ಪಚಾದಿಯಲ್ಲಿ ಸೇರಿರುವುದರಿಂದ **ನಂದಿಗ್ರಹಪ**—(ಪಾ. ಸೂ. ೩-೧-೧೩೪) ಸೂತ್ರದಿಂದ ಅಚ್ ಪ್ರತ್ಯಯ. ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ನಿವೃತಮ್**—ವೃಞ್ ವರಣೇ ಧಾತು. ಅಂತರ್ಭಾವಿತಣ್ಯರ್ಥಕವಾದ ಧಾತು. ಇದಕ್ಕೆ ಕರ್ಮಣಿಯಲ್ಲಿ **ನಿಷ್ಠಾ**—(ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. **ಗತಿರನಂತರಃ**—(ಪಾ. ಸೂ ೬-೨-೪೯) ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ.

**ಸಿತಮ್**—ಷಿಞ್ ಬಂಧನೇ ಧಾತು. **ನಿಷ್ಠಾ**—ಸೂತ್ರದಿಂದ ಕ್ತಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ

**ಅದ್ಭ್ಯಃ**—ಅಪ್ ಶಬ್ದ. ಭ್ಯಸ್ ಪರವಾದಾಗ **ಅಪೋಭಿ**—(ಪಾ. ಸೂ. ೭-೪-೪೮) ಎಂಬುದರಿಂದ ಪಕಾರಕ್ಕೆ ತಕಾರಾದೇಶ. **ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವಂದನಮ್**—ವದಿ ಅಭಿವಾದನಸ್ತುತ್ಯೋಃ ಧಾತು. ವಂದತೇ ಸ್ತೌತಿ ಇತಿ ವಂದನಃ. ನಂದ್ಯಾದಿಯಲ್ಲಿ ಸೇರಿರುವುದರಿಂದ **ನಂದಿಗ್ರಹಪಚಾದಿಭ್ಯಃ**—(ಪಾ. ಸೂ. ೩-೧-೧೩೪) ಎಂಬುದರಿಂದ ಕರ್ತರಿಯಲ್ಲಿ ಲ್ಯುಪ್ರತ್ಯಯ. **ಯುವೋರನಾಕೌ**—(ಪಾ. ಸೂ. ೭-೧-೧) ಎಂಬುದರಿಂದ ಅನಾದೇಶ. ಪ್ರತ್ಯಯ ಲಿತ್ತಾದುದರಿಂದ **ಲಿತಿ**—(ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಸ್ವಃ**—ಸ್ವರ್ ಎಂಬುದು ಆಕಾಶಕ್ಕೂ ಆದಿತ್ಯನಿಗೂ (ಸೂರ್ಯ) ಸಾಧಾರಣವಾದ ಹೆಸರು. ಇದನ್ನು ಯಾಸ್ಕರೂ ಹೇಳಿರುತ್ತಾರೆ. ಸ್ವರಾದಿತ್ಯೋ ಭವತಿ ಸು ಅರಣಃ ಸು ಈರಣಃ (ನಿರು ೨-೧೪) ಇತಿ. **ಸ್ವರಾದಿನಿಪಾತಮವ್ಯಯಮ್**—(ಪಾ. ಸೂ. ೧-೧-೩೭) ಎಂಬುದರಿಂದ ಅವ್ಯಯಸಂಜ್ಞಾ ಬರುವುದರಿಂದ **ಅವ್ಯಯಾದಾಪ್ಸುಪಃ**—ಎಂಬುದರಿಂದ ಸುಪಿಗೆ ಲುಕ್. **ನ್ಯಙ್ಸ್ವರೌ ಸ್ವರಿತೌ**—(ಫಿ. ಸೂ. ೭೪) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ದೃಶೇ**—ದೃಶಿರ್ ಪ್ರೇಕ್ಷಣೇ. ಧಾತು. **ದೃಶೇ ವಿಖ್ಯೇಚ**—(ಪಾ. ಸೂ. ೩-೪-೧೧) ಎಂಬುದರಿಂದ ತುಮುನರ್ಥದಲ್ಲಿ ಕೇ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. **ಕೃನ್ಮೇಜಂತಃ**—ಸೂತ್ರದಿಂದ ಏಜಂತವಾದುದರಿಂದ ಅವ್ಯಯಸಂಜ್ಞಾ ಬರುತ್ತದೆ.

**ಸಿಷಾಸಂತಮ್**—ಷಣ ಷಣ ಸಂಭಕ್ತೌ. ಧಾತು. ಇಚ್ಛಾರ್ಥದಲ್ಲಿ **ಧಾತೋಃ ಕರ್ಮಣಃ ಸಮಾನ**— (ಪಾ. ಸೂ. ೩-೧-೭) ಎಂಬುದರಿಂದ ಸನ್ ಪ್ರತ್ಯಯ. **ಸನೀವಂತರ್ಧ**—(ಪಾ. ಸೂ. ೭-೨-೪೯) ಎಂಬಲ್ಲಿ ವಿಕಲ್ಪ ವಿಧಾನಮಾಡಿರುವುದರಿಂದ ಇಡಾಗಮ ಇಲ್ಲಿ ಬರುವುದಿಲ್ಲ. **ಜನಸನಖನಾಂ ಸಞ್ಝಲೋಃ**—(ಪಾ. ಸೂ. ೬-೪-೪೨) ಎಂಬುದರಿಂದ ಧಾತುವಿಗೆ ಆತ್ವ ಅಂತಾದೇಶವಾಗಿ ಬರುತ್ತದೆ. **ಸನ್ಯಙೋಃ**—(ಪಾ. ಸೂ. ೬-೧-೯) ಎಂಬುದರಿಂದ ಧಾತುವಿಗೆ ದ್ವಿತ್ವ. **ಹ್ರಸ್ವ**—ಸೂತ್ರದಿಂದ ಅಭ್ಯಾಸಕ್ಕೆ ಹ್ರಸ್ವ. **ಸನ್ಯತಃ**—(ಪಾ. ಸೂ. ೭-೪-೭೯) ಎಂಬುದರಿಂದ ಅದಕ್ಕೆ ಇತ್ವ. ಸನ್ನಂತದ ಮೇಲೆ ಶತೃಪ್ರತ್ಯಯ. **ಅಭ್ಯಸ್ತಾನಾಮಾದಿಃ**--(ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಆವತಮ್**—ಅವ ರಕ್ಷಣೇ. ಧಾತು. ಲಙ್ ಮಧ್ಯಮಪುರುಷ ದ್ವಿವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ. ॥ ೫ ॥

———:o:———

ಸಂಹಿತಾಪಾಠಃ

ಯಾಭಿರಂತಕಂ ಜಸಮಾನಮಾರಣೇ ಭುಜ್ಯುಂ ಯಾಭಿರವ್ಯಥಿಭಿ-
ರ್ಜಿಜಿನ್ವಥುಃ ।
ಯಾಭಿಃ ಕರ್ಕಂಧುಂ ವಯ್ಯಂ ಚ ಜಿನ್ವಥಸ್ತಾಭಿರೂ ಷು
ಊತಿಭಿರಶ್ವಿನಾ ಗತಂ ॥ ೬ ॥

ಪದಪಾಠಃ

ಯಾಭಿಃ । ಅಂತಕಂ । ಜಸಮಾನಂ । ಆಽಅರಣೇ । ಭುಜ್ಯುಂ । ಯಾಭಿಃ । ಅವ್ಯ-
ಥಿಽಭಿಃ । ಜಿಜಿನ್ವಥುಃ ।
ಯಾಭಿಃ । ಕರ್ಕಂಧುಂ । ವಯ್ಯಂ । ಚ । ಜಿನ್ವಥಃ । ತಾಭಿಃ । ಊಂ ಇತಿ । ಸು ।
ಊತಿಽಭಿಃ । ಅಶ್ವಿನಾ । ಆ । ಗತಂ ॥ ೬ ॥

॥ ಸಾಯಣಭಾಷ್ಯಂ ॥

**ಆರಣಮಗಾಧಂ ಕೂಪಾದಿ । ತತ್ರಾಸುರೈಃ ಪ್ರಕ್ಷಿಪ್ತಂ ಜಸಮಾನಂ ತೈರ್ಹಿಂಸ್ಯಮಾನಮಂತಕಂ ಶತ್ರೂಣಾಮಂತಕರಮೇತತ್ಸಂಜ್ಞಂ ರಾಜರ್ಷಿಂ ಹೇ ಅಶ್ವಿನಾ ಯಾಭಿರೂತಿಭಿರವಥಃ ರಕ್ಷಥಃ । ತಥಾ ಭುಜ್ಯುಂ ಸರ್ವಸ್ಯ ಪಾಲಕಮೇತತ್ಸಂಜ್ಞಂ ಸಮುದ್ರಮಧ್ಯೇ ನಿಮಗ್ನಂ ತುಗ್ರ್ಯಂ ತುಗ್ರಸ್ಯ ಪುತ್ರಂ ರಾಜರ್ಷಿಂ ಯಾಭಿರೂತಿಭೀ ರಕ್ಷಣಹೇತುಭೂತಾಭಿರವ್ಯಥಿಭಿರ್ವ್ಯಥಾರಹಿತಾಭಿರ್ನೌಭಿರ್ಜಿಜಿನ್ವಥುಃ । ಯುವಾಮುತರ್ಪಯತಂ । ಏತಚ್ಚ ಮಂತ್ರಾಂತರೇ ತುಗ್ರೋ ಹ ಭುಜ್ಯುಮಶ್ವಿನೋದಮೇಘೇ । ಋ. ೧-೧೧೬-೩ । ಇತ್ಯಾದಿಕೇ ವಿಸ್ಪಷ್ಟಯಿಷ್ಯತೇ । ಅಪಿ ಚ ಕರ್ಕಂಧುಂ ವಯ್ಯಂ ಚೈತತ್ಸಂಜ್ಞಕೌ ಚಾಸುರೈಃ ಪೀಡ್ಯಮಾನೌ ಯಾಭಿರೂತಿಭಿರ್ಜಿನ್ವಥಃ ಪ್ರೀಣಯಥಃ । ಗತಮನ್ಯತ್ ॥ ಜಸಮಾನಂ । ಜಸ ಹಿಂಸಾಯಾಂ । ಯಕಿ ಪ್ರಾಪ್ತೇ ವ್ಯತ್ಯಯೇನ ಶಪ್ । ಆರಣೇ । ಆಙ್ಪೂರ್ವಾದರ್ತೇರ್ಲ್ಯುಟ್ । ಜಿಜಿನ್ವಥುಃ । ಜಿವಿಃ ಪ್ರೀಣನಾರ್ಥಃ । ಲಿಟ್ಯಥುಸಿ ರೂಪಂ ॥**

ಪ್ರತಿಪದಾರ್ಥ

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ, । **ಆರಣೇ**—ಅಗಾಧವಾದ ಬಾವಿಯಲ್ಲಿ (ಎಸೆಯಲ್ಪಟ್ಟು) । **ಜಸಮಾನಂ**—(ಅಸುರರಿಂದ) ಹಿಂಸಿತನಾಗುತ್ತಿದ್ದ । **ಅಂತಕಂ**—ಅಂತಕನೆಂಬ ರಾಜರ್ಷಿಯನ್ನು । **ಯಾಭಿಃ**—ಯಾವ ರಕ್ಷಣೆಗಳಿಂದ (ರಕ್ಷಿಸಿದಿರೋ) । **ಭುಜ್ಯುಂ**—ಭುಜ್ಯುವೆಂಬ ರಾಜರ್ಷಿಯನ್ನು । **ಅವ್ಯಥಿಭಿಃ**—ತೊಂದರೆ ಕೊಡದಿರುವ । **ಯಾಭಿಃ**—ಯಾವ ರಕ್ಷಣೆಗಳಿಂದ (ನೌಕೆಗಳಿಂದ) । **ಜಿಜಿನ್ವಥುಃ**— ರಕ್ಷಿಸಿದಿರೋ । (ಮತ್ತು) **ಕರ್ಕಂಧುಂ**—ಕರ್ಕಂಧುವನ್ನೂ । **ವಯ್ಯಂ ಚ**—ವಯ್ಯನನ್ನೂ । **ಯಾಭಿಃ**—ಯಾವ ರಕ್ಷಣೆಗಳಿಂದ । **ಜಿನ್ವಥಃ**—(ಅಸುರ ಪೀಡೆಯಿಂದ) ರಕ್ಷಿಸಿದಿರೋ । **ತಾಭಿಃ ಊತಿಭಿಃ ಉ**—ಆ ಎಲ್ಲಾ ರಕ್ಷಣೆಗಳಿಂದಲೂ ಕೂಡಿಕೊಂಡು (ನಮ್ಮಲ್ಲಿಗೂ) । **ಸು ಆ ಗತಂ**—ಆದರದಿಂದ ಬನ್ನಿರಿ. ।

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಅಗಾಧವಾದ ಬಾವಿಯಲ್ಲಿ ಎಸೆಯಲ್ಪಟ್ಟು ಅಸುರರಿಂದ ಹಿಂಸಿತನಾಗುತ್ತಿದ್ದ ಅಂತಕನೆಂಬ ರಾಜರ್ಷಿಯನ್ನು ಯಾವ ರಕ್ಷಣೆಗಳಿಂದ ರಕ್ಷಿಸಿದಿರೋ ; ಭುಜ್ಯುವೆಂಬ ರಾಜರ್ಷಿಯನ್ನು ಅಹಿಂಸಕಗಳಾದ ಯಾವ ರಕ್ಷಣಾನೌಕೆಗಳಿಂದ ರಕ್ಷಿಸಿದಿರೋ, ಮತ್ತು ಕರ್ಕಂಧುವನ್ನೂ ವಯ್ಯನನ್ನೂ ಯಾವ ರಕ್ಷಣೆಗಳಿಂದ ಅಸುರ ಪೀಡೆಯಿಂದ ರಕ್ಷಿಸಿದಿರೋ ಆ ಎಲ್ಲಾ ರಕ್ಷಣೆಗಳಿಂದಲೂ ಕೂಡಿಕೊಂಡು ನಮ್ಮಲ್ಲಿಗೂ ಆದರದಿಂದ ಬನ್ನಿರಿ.

## English Translation

With those aids by which you rescued Antaka, (when cast into) a deep (pool), and about to be destroyed ; by which, inflicting no distress, you preserved Bhujyu, and by which you relieved Karkandhu and Vayya ; with them, Aswins, come, willingly hither.

ವಿಶೇಷವಿಷಯಗಳು

**ಯಾಭಿಃ ಜಸಮಾನಂ ಅಂತಕಂ (ಅವಥಃ)**--ಯಾವ ನಿಮ್ಮ ರಕ್ಷಣೆಗಳಿಂದ ಅಂತಕನೆಂಬ ರಾಜರ್ಷಿಯನ್ನು ರಕ್ಷಿಸಿದಿರೋ ಎಂದು ಅಂತಕನನ್ನು ರಕ್ಷಿಸಿದ ಸನ್ನಿವೇಶವನ್ನು ತಿಳಿಸಿದೆ. ಈ ಸಂದರ್ಭವನ್ನು ಸಾಯಣರು ಒಂದು ವಿಧವಾಗಿಯೂ ಸ್ಕಂದಸ್ವಾಮಿಗಳು ಇನ್ನೊಂದು ವಿಧವಾಗಿಯೂ ವಿವರಿಸಿದ್ದಾರೆ. ಸಾಯಣಭಾಷ್ಯದಲ್ಲಿ- **ಅರಣಂ ಅಗಾಧಂ ಕೂಪಾದಿ। ತತ್ರಾಸುರೈಃ ಪ್ರಕ್ಷಿಪ್ತಂ। ಜಸಮಾನಂ ತೈರ್ಹಿಂಸ್ಯಮಾನಂ। ಅಂತಕಂ ಶತ್ರೂಣಾಮಂತಕರಂ ಏತತ್ಸಂಜ್ಞಂ ರಾಜರ್ಷಿಂ ಅವಥಃ।** ಅಗಾಧವಾದ ಬಾವಿಯಲ್ಲಿ ತಳ್ಳಲ್ಪಟ್ಟವನೂ ಶತ್ರುಗಳಿಂದ ಹಿಂಸಿತನಾದವನೂ ಆದ ಅಂತಕನೆಂಬ ರಾಜರ್ಷಿಯನ್ನು ರಕ್ಷಿಸಿದಿರೆಂದಿದೆ. ಸ್ಕಂದಸ್ವಾಮಿಗಳ ಭಾಷ್ಯದಲ್ಲಿ **ಅಂತಕೋ ನಾಮ ರಾಜಾ ನದ್ಯಾಃ ಸ್ರೋತಸಿ ತಪಶ್ಚಚಾರ। ವೃಷ್ಟ್ಯಾ ಪ್ರವೃದ್ಧಜಲಾ ನದ್ಯುವಾಹ। ಸ ಉಹ್ಯಮಾನಸ್ತಪಃಕ್ಷಾಮತಯಾ ಬಾಹುಭ್ಯಾಂ ತಾಂ ನದೀಂ ತರಿತುಮಶಕ್ನುವನ್ ಮೃತಕಲ್ಪೋಽಶ್ವಿನೌ ದಧ್ಯೌ। ತಂ ಧ್ಯಾತಮಾತ್ರಾವೇವಾಶ್ವಿನೌ ಅದ್ಭ್ಯ ಉತ್ತಾರಯಾಂಚಕ್ರತುರಿತಿ।** ಅಂತಕನೆಂಬ ರಾಜನು ನದಿಯ ಪ್ರವಾಹದ ಮಧ್ಯೆ ನಿಂತು ತಪಸ್ಸನ್ನು ಮಾಡುತ್ತಿದ್ದನು. ಆಗ ಮಳೆಯು ಬಂದು ಪ್ರವಾಹವು ವೃದ್ಧಿಯಾಗಿ ಇವನನ್ನು ಕೊಚ್ಚಿಕೊಂಡುಹೋಯಿತು. ತಪಶ್ಚರಣೆಯಿಂದ ದೇಹವು ಕೃಶವಾಗಿದ್ದುದರಿಂದ ಇವನು ನದಿಯ ವೇಗವಾದ ಪ್ರವಾಹವನ್ನು ದಾಟಲಸಮರ್ಥನಾದನು। ಆಗ ಶ್ರಮದಿಂದ ಮೃತಕಲ್ಪನಾಗಿ ಅಶ್ವಿನೀದೇವತೆಗಳನ್ನು ಧ್ಯಾನಿಸಿದನು. ಒಡನೆಯೇ ಅವರು ಬಂದು ಇವನನ್ನು ನದಿಯಿಂದ ಮೇಲಕ್ಕೆತ್ತಿದರು ಎಂದಿದೆ.

**ಜಸಮಾನಂ**—ಹಿಂಸಾರ್ಥಕವಾದ **ಜಸು** ಧಾತುವಿನಿಂದ ನಿಷ್ಪನ್ನವಾಗಿ **ಹಿಂಸಿಸಲ್ಪಟ್ಟ** ಎಂದರ್ಥವಾಗುತ್ತೆಂದು ಸಾಯಣರೂ, **ಜಸು ಮೋಕ್ಷಣೇಽನ್ಯತ್ರ। ಇಹ ತು ಸಾಮರ್ಥ್ಯಾತ್ ನಿಮಜ್ಜನಾರ್ಥಃ। ನಿಮಜ್ಜಂತಂ।** **ಜಸ್** ಧಾತುವಿಗೆ ಇತರ ಕಡೆಗಳಲ್ಲಿ ಮೋಕ್ಷವೆಂದರ್ಥವಾದರೂ ಇಲ್ಲಿ **ನಿಮಜ್ಜನ** ಎಂದರೆ ಮುಳುಗುವುದು ಎಂದರ್ಥ. ನೀರಿನಲ್ಲಿ ಮುಳುಗಿದ್ದ ಅಥವಾ ಮುಳುಗಿಹೋಗುತ್ತಿದ್ದ ಎಂದರ್ಥವೆಂದು ಸ್ಕಂದಸ್ವಾಮಿಗಳೂ ಹೇಳಿದ್ದಾರೆ. **ಜಸು, ತಾಡನೇ; ಜಸು-ಮೋಕ್ಷಣೇ** ಎಂಬ ಎರಡು ಧಾತುಗಳೂ ಇರುವುದಾದರೂ ಸಹ ಇಲ್ಲಿ **ನಿಮಜ್ಜನವೆಂಬುದು** ಪರಂಪರೆಯಾದ ಅರ್ಥವಾಗುತ್ತದೆ. **ಹಿಂಸೆಯೆಂಬುದು** ಸಾಕ್ಷಾತ್ತಾಗಿಯೇ ಆಗುತ್ತದೆ. ಆದುದರಿಂದ ಪರಿತಾಪ ಹಿಂಸೆ ಎಂಬ ಅರ್ಥವು ಹೊಂದಿಕೊಳ್ಳುವುದು. ಅದೂ ಅಲ್ಲದೆ ಕ್ಷಯಿಸು, ಆಯಾಸಪಡು, ಹಸಿವಿನಿಂದ ಹಿಂಸೆಪಡು ಇತ್ಯಾದ್ಯರ್ಥಗಳಲ್ಲೇ **ಜಸ್** ಧಾತುವಿನಿಂದ ನಿಷ್ಪನ್ನವಾದ ಪದಗಳು ಋಕ್ಸಂಹಿತೆಯಲ್ಲಿ ಉಪಯೋಗವಲ್ಲಿವೆ ಉದಾಹರಣೆಗೆ—

**ಶಯವೇ ಚಿನ್ನಾಸತ್ಯಾ ಶಚೀಭಿರ್ಜಸುರಯೇ ಸ್ತರ್ಯಂ ಪಿಪ್ಯಥುರ್ಗಾಂ।**

(ಋ. ಸಂ. ೧-೧೧೬-೨೨)

**ವೃಕಾಯ ಚಿಜ್ಜಸಮಾನಾಯ ಶಕ್ತಮುತ ಶ್ರುತಂ ಶಯವೇ ಹೂಯಮಾನಾ।**

(ಋ. ಸಂ. ೭-೬೮-೮)

ಇತ್ಯಾದಿ ಋಕ್ಕುಗಳಲ್ಲಿ **ಶ್ರಾಂತಾಯ, ಉಪಕ್ಷೀಣಮಾಣಾಯ** ಎಂದರೆ ಬಳಲಿದ, ಆಯಾಸಗೊಂಡ, ಹಿಂಸಿತನಾದ ಎಂದರ್ಥವಾಗುತ್ತದೆ. ಅದರಂತೆ ಇಲ್ಲಿಯೂ ಸಹ ಹಿಂಸಿತನಾದ ಎಂದರ್ಥವಾಗುತ್ತದೆ.

**ಆರಣೇ**—**ಆರಣಶಬ್ದೋಽತ್ರ ಅಗಾಧವಚನಃ।** ಅತ್ಯಂತ ಆಳವಾದ ಎಂದರ್ಥವೆಂದು ಸ್ಕಂದಸ್ವಾಮಿಗಳು ಇದೇ ಅರ್ಥವನ್ನು ಕೊಡುವಂತೆ ಆರಣಶಬ್ದವನ್ನುಪಯೋಗಿಸಿರುವ,

**ಯೋ ಗಾಧೇಷು ಯ ಆರಣೇಷು ಹವ್ಯೋ ವಾಜೇಷ್ವಸ್ತಿ ಹವ್ಯಃ ।**

(ಋ. ಸಂ. ೮-೭೦-೮)

ಎಂಬ ಋಕ್ಕನ್ನು ಉದಹರಿಸಿ ಅದರಂತೆಯೇ ಇಲ್ಲಿಯೂ ಅಗಾಧವೆಂದರ್ಥವೆಂದು ಹೇಳಿದ್ದಾರೆ. ಅಗಾಧವಾದ ಪ್ರವಾಹದಲ್ಲಿ ಸಿಕ್ಕಿಬಿದ್ದ ಅಂತಕನೆಂದು ಸ್ಕಂದರೂ, ಅಗಾಧವಾದ ಕೂಪದಲ್ಲಿ ಬಿದ್ದಿದ್ದವನನ್ನು ಎಂದು ಸಾಯಣರೂ ಅರ್ಥಮಾಡಿ, ಅಂತಹ ಕಷ್ಟಕ್ಕೆ ಸಿಕ್ಕಿಬಿದ್ದ ಅಂತಕನನ್ನು ರಕ್ಷಿಸಿದಂತೆ ನಮ್ಮನ್ನೂ ರಕ್ಷಿಸಿ ಎಂದರ್ಥವೆಂದಿದ್ದಾರೆ.

**ಭುಜ್ಯುಂ ಯಾಭಿಃ ಜಿಜಿನ್ವಥುಃ**—ಭುಜ್ಯುವೆಂಬುವನೂ ಒಬ್ಬ ರಾಜನು. ಅವನ ಕಥೆಯನ್ನು ಸ್ಕಂದ ಸ್ವಾಮಿಗಳು ಈರೀತಿ ಹೇಳಿದ್ದಾರೆ. ತತ್ರಾಪರಮಿತಿಹಾಸಮಾಚಕ್ಷತೇ । ಭುಜ್ಯುಂ ನಾಮ ರಾಜಾನಂ ಸಮುದ್ರಮಧ್ಯೇ ವಿಪನ್ನನಾವಂ ಸಖಾಯಃ ತತ್ಯಜುರಿತಿ । ತದೇತದ್ವಸಿಷ್ಠೋ ವಕ್ಷ್ಯತಿ ।

**ಉತ ತ್ಯಂ ಭುಜ್ಯುಮಶ್ವಿನಾ ಸಖಾಯೋ ಮಧ್ಯೇ ಜಹುರ್ದುರೇವಾಸಃ ಸಮುದ್ರೇ ।**

(ಋ. ಸಂ. ೭-೬೮-೭)

**ಇತಿ ಸ ಸಖಿಭಿಃ ತ್ಯಕ್ತೋಽಶ್ವಿನೌ ತುಷ್ಟಾವ । ತಮಶ್ವಿನಾವಾಗತ್ಯ ನೌಭೀ ರಥೈರಶ್ವೈರುತ್ತಾರಿತವಂತಾವಿತಿ ತದೇತತ್ಕಕ್ಷೀವಾನ್ ವಕ್ಷ್ಯತಿ ।** ಭುಜ್ಯುವೆಂಬ ಒಬ್ಬ ದೊರೆಯು ಸಮುದ್ರದ ಮೇಲೆ ಸಂಚರಿಸುತ್ತಿದ್ದಾಗ ಅರ್ಧ ದಾರಿಯಲ್ಲಿ ಅವನ ನಾವೆಯು ಕೆಟ್ಟುಹೋಯಿತು. ಆಗ ಅವನ ಸ್ನೇಹಿತರು ಅವನಿಗೆ ಸಹಾಯಮಾಡದೇ ಕೈಬಿಟ್ಟರು ಸಖಿಗಳಿಂದ ತ್ಯಕ್ತನಾದ ಭುಜ್ಯುವು ಅಶ್ವಿನೀದೇವತೆಗಳನ್ನು ಕುರಿತು ಪ್ರಾರ್ಥಿಸಿದನು. ಅವರು ಬಂದು ನೌಕಾ ಸಹಾಯದಿಂದಲೂ, ರಥ ಮತ್ತು ಕುದುರೆಗಳ ಸಹಾಯದಿಂದಲೂ ಅವನನ್ನು ಮೇಲಕ್ಕೆತ್ತಿದರು ಎಂದು ಕಥೆಯನ್ನು ಹೇಳಿ ವಸಿಷ್ಠ ಮತ್ತು ಕಕ್ಷೀವಂತ ಇವರು ಈ ಕಥೆಯನ್ನು ಸೂಚಿಸಿರುವ ಋಕ್ಕುಗಳನ್ನು ಉದಹರಿಸಿದ್ದಾರೆ. ಇದರಲ್ಲಿ ಕಕ್ಷೀವಂತನು ಹೇಳಿರುವ ಪ್ರಕಾರ,

**ತುಗ್ರೋ ಹ ಭುಜ್ಯುಮಶ್ವಿನೋದಮೇಘೇ ರಯಿಂ ನ ಕಶ್ಚಿನ್ಮಮೃವಾँ ಅವಾಹಾಃ ।**
**ತಮೂಹಥುರ್ನೌಭಿರಾತ್ಮನ್ವತೀಭಿರಂತರಿಕ್ಷಪ್ರುದ್ಭಿರಪೋದಕಾಭಿಃ ॥**
**ತಿಸ್ರಃ ಕ್ಷಪಸ್ತ್ರಿರಹಾತಿವ್ರಜದ್ಭಿರ್ನಾಸತ್ಯಾ ಭುಜ್ಯುಮೂಹಥುಃ ಪತಂಗೈಃ ।**
**ಸಮುದ್ರಸ್ಯ ಧನ್ವನ್ನಾರ್ದ್ರಸ್ಯ ಪಾರೇ ತ್ರಿಭೀ ರಥೈಃ ಶತಪದ್ಭಿಃ ಷಳಶ್ವೈಃ ॥**

(ಋ. ಸಂ. ೧-೧೧೬-೩ ರಿಂದ ೪)

ಅಶ್ವಿನೀದೇವತೆಗಳಿಗೆ ಪ್ರಿಯನಾದ **ತುಗ್ರ**ನೆಂಬ ರಾಜರ್ಷಿಯು ತನ್ನ ಮಗನಾದ ಭುಜ್ಯುವನ್ನು ದ್ವೀಪಾಂತರಗಳಿಂದ ತೊಂದರೆಯನ್ನು ಕೊಡುತ್ತಿದ್ದ ತನ್ನ ಶತ್ರುಗಳನ್ನು ಜಯಿಸುವುದಕ್ಕಾಗಿ ಕಳುಹಿಸಿದನು. ಆಗ ಆ ನೌಕೆಯು ಸಮುದ್ರ ಮಧ್ಯದಲ್ಲಿ ಮುರಿಯಿತು ಎಂದೂ ಆ ಸಂದರ್ಭದಲ್ಲಿ ಅಶ್ವಿನೀದೇವತೆಗಳು ಮಾಡಿದ ಸಹಾಯವನ್ನೂ ಹೇಳಿದೆ. ಇದೇ ರೀತಿಯಲ್ಲಿ ಋ. ಸಂ. ೧-೧೮೨-೫ ರಿಂದ ೭ ; ೧-೧೧೮-೬ ; ೧-೧೧೯-೪ ; ೧-೧೫೮-೩ ; ೬-೬೨-೬ ; ೭-೬೯-೭ ಇತ್ಯಾದಿ ಅನೇಕ ಋಕ್ಕುಗಳಲ್ಲಿ ಭುಜ್ಯುವಿನ ವಿಷಯವನ್ನು ಹೇಳಿ ಅಂತಹ ಕಷ್ಟಕಾಲದಲ್ಲಿ ಸಹಾಯಮಾಡಿದ ಅಶ್ವಿನೀ ದೇವತೆಗಳನ್ನು ಸ್ತುತಿಸಿದೆ. (ಯಾಜ್ಞವಲ್ಕ್ಯನ ಸಮಕಾಲೀನನೂ ಲಾಹ್ಯಾಯನ ವಂಶೋತ್ಪನ್ನನಾದವನೂ ಆದ ಭುಜ್ಯುವೆಂಬ ಗುರುವಿನ ಹೆಸರೂ ಸಹ ಬೃಹದಾರಣ್ಯಕದಲ್ಲಿ ಉಕ್ತನಾಗಿದೆ. ಇವನು ಬೇರೆ ವ್ಯಕ್ತಿಯಾಗಿರಬೇಕು.)

ಕರ್ಕಂಧುಂ ವಯ್ಯಂ ಚ—ಕರ್ಕಂಧುಃ ವಯ್ಯಶ್ಚ ರಾಜರ್ಷೀ ಅತಿಕ್ಷಾತ್ರೌ ತಪಸ್ತಪ್ಯಮಾನೌ ಯದೃಚ್ಛಯಾ ಪರ್ಯಟಂತಾವಶ್ವಿನೌ ದದೃಶತುಃ । ದೃಷ್ಟ್ವಾ ಚ ತಾವಮೃತೇನಾಪ್ಯಾಯಯಾಂಚಕ್ರತುರಿತಿ । ತದೇತದಿಹೋಚ್ಯತೇ । ಯಾಭಿಶ್ಶ್ಚೋತಿಭಿರ್ಗತ್ವಾ ಕರ್ಕಂಧುಂ ವಯ್ಯಂ ಚ ಜಿನ್ವಥಃ ಅಮೃತೇನ ತರ್ಪಿತವಂತೌ ಸ್ಥಃ ಅಸ್ಮಾನಪಿ ಪ್ರತಿ ತಾಭಿಃ । ರಾಜರ್ಷಿಗಳಾದ ಕರ್ಕಂಧು ಮತ್ತು ವಯ್ಯ ಇವರಿಬ್ಬರೂ ಸಹ ಅತ್ಯಂತ ಕಾರ್ಶ್ಯವನ್ನುಂಟುಮಾಡತಕ್ಕ ತಪಸ್ಸನ್ನು ಆಚರಿಸುತ್ತಾ ಕಾಡಿನಲ್ಲಿ ಸಂಚರಿಸುತ್ತಿದ್ದಾಗ ಅವರನ್ನು ಅಶ್ವಿನೀ ದೇವತೆಗಳು ಆಕಸ್ಮಿಕವಾಗಿ ನೋಡಿದರು. ಅನಂತರ ಅವರಿಗೆ ಅಮೃತದಾನದಿಂದ ತೃಪ್ತಿಯನ್ನುಂಟುಮಾಡಿದರು ಎಂದು ಹೇಳಿದೆ. ಕರ್ಕಂಧುವಿನ ವಿಷಯವು ಈ ಸುಕ್ತದಲ್ಲಲ್ಲದೇ ಋಕ್ಸಂಹಿತೆಯಲ್ಲಿ ಇನ್ನೆಲ್ಲೂ ಹೇಳಲ್ಪಟ್ಟಿಲ್ಲ. ಆದರೆ ವಯ್ಯನು ಅಶ್ವಿನೀ ದೇವತೆಗಳಿಂದ ಮಾತ್ರವಲ್ಲದೇ ಇಂದ್ರಾದಿದೇವತೆಗಳಿಂದಲೂ ಸಹ ಸಹಾಯವನ್ನು ಪಡೆದ ಅಂಶವನ್ನು ಇತರಕಡೆಗಳಲ್ಲೂ ಸೂಚಿಸಿದೆ.

ತ್ವಮಾವಿಥ ನರ್ಯಂ ತುರ್ವಶಂ ಯದುಂ ತ್ವಂ ತುರ್ವೀತಿಂ ವಯ್ಯಂ ಶತಕ್ರತೋ ।
(ಋ. ಸಂ. ೧-೫೪-೬)

ಅರಮಯಃ ಸರಪಸಸ್ತರಾಯ ಕಂ ತುರ್ವೀತಯೇ ಚ ವಯ್ಯಾಯ ಚ ಸ್ರುತಿಂ ।
(ಋ. ಸಂ. ೨-೧೩-೧೨)

ತ್ವಂ ಮಹೀಮವನಿಂ ವಿಶ್ವಧೇನಾಂ ತುರ್ವೀತಯೇ ವಯ್ಯಾಯ ಕ್ಷರಂತೀಂ ।
(ಋ. ಸಂ. ೪-೧೯-೬)

ಇತ್ಯಾದಿಸುಕ್ತಗಳಲ್ಲಿ ವಯ್ಯನ ವಿಷಯವು ಹೇಳಲ್ಪಟ್ಟಿದೆ. ಋ. ಸಂ ೧-೫೪-೬ ನೇ ಋಕ್ಕಿನಲ್ಲಿ ಹೇಳಿರುವ ವಯ್ಯಂ ಎಂಬ ಪದಕ್ಕೆ ಸಾಯಣರು ವಯ್ಯಕುಲಜಂ ತುರ್ವೀತಿನಾಮಾನಂ ರಾಜಾನಂ । ವಯ್ಯಕುಲೋತ್ಪನ್ನನಾದ ತುರ್ವೀತಿಯೆಂಬ ದೊರೆಯನ್ನು ಎಂದು ವಿವರಿಸಿದ್ದಾರೆ. ಎಂದರೆ ವಯ್ಯನೂ ಅವನ ವಂಶದಲ್ಲಿ ಹುಟ್ಟಿದ ಇತರ ರಾಜರ್ಷಿಗಳೂ ಪ್ರಸಿದ್ಧರೆಂದು ತಿಳಿಯುತ್ತದೆ.

ವ್ಯಾಕರಣಪ್ರಕ್ರಿಯಾ

**ಜಸಮಾನಮ್**— ಜಸು ಹಿಂಸಾಯಾಮ್. ಧಾತು. ಕರ್ಮಣಿಯಲ್ಲಿ ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶ್ಯನ್ ಪ್ರಾಪ್ತವಾದರೆ **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ಶಪ್ ಬರುತ್ತದೆ. **ಆನೇಮುಕ್**— (ಪಾ. ಸೂ. ೭-೨-೮೨) ಎಂಬುದರಿಂದ ಮುಕಾಗಮ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು **ತಾಸ್ಯನುದಾ**—(ಪಾ. ಸೂ. ೬-೧-೧೮೬) ಸೂತ್ರದಿಂದ ಅನುದಾತ್ತವಾಗುತ್ತದೆ. ಶಪ್ ಪಿತ್ತಾದುದರಿಂದ ಅನುದಾತ್ತ. ಆಗ ಧಾತುಸ್ವರ ಉಳಿಯುತ್ತದೆ.

**ಅರಣೇ**—ಋ ಗತೌ ಧಾತು. ಆಙ್ ಪೂರ್ವವಾಗಿರುವಾಗ ಇದಕ್ಕೆ ಲ್ಯುಟ್ ಪ್ರತ್ಯಯ. **ಯುವೋರನಾಕೌ**—(ಪಾ. ಸೂ. ೭-೨-೧) ಎಂಬುದರಿಂದ ಅನಾದೇಶ. ಪ್ರತ್ಯಯನಿಮಿತ್ತವಾಗಿ ಧಾತುವಿಗೆ ಗುಣ. ರಪರವಾಗಿ ಬರುತ್ತದೆ. ರೇಫವಿರುವುದರಿಂದ ನಕಾರಕ್ಕೆ ಣತ್ವ. **ಲಿತಿ**— (ಪಾ ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ.

**ಭುಜ್ಯುಮ್**--ಭುಜ ಪಾಲನಾಭ್ಯವಹಾರಯೋಃ ಧಾತು. ಇದಕ್ಕೆ ಔಣಾದಿಕಕ್ಯುಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತಿಯಾ ಏಕವಚನಾಂತರೂಪ.

**ಜಿಜಿನ್ವಥುಃ**—ಜಿವಿ ಪ್ರೀಣನೇ ಧಾತು. **ಇದಿತೋನುಮ್ ಧಾತೋಃ** ಎಂಬುದರಿಂದ ನುಮಾಗಮ ಲಿಟ್ ಮಧ್ಯಮಪುರುಷ ದ್ವಿವಚನದಲ್ಲಿ **ಪರಸ್ಮೈಪದಾನಾಂ**— (ಪಾ. ಸೂ. ೩-೪-೮೨) ಎಂಬುದರಿಂದ ಅಥುಸಾದೇಶ. ಲಿಣ್ಣಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಪ್ರತಿಷೇಧ ಬರುವುದರಿಂದ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ



ಸಂಹಿತಾಪಾಠಃ

ಯಾಭಿಃ ಶುಚಂತಿಂ ಧನಸಾಂ ಸುಷಂಸದಂ ತಪ್ತಂ ಘರ್ಮಮೋ-
ಮ್ಯಾವಂತಮತ್ರಯೇ।
ಯಾಭಿಃ ಪೃಶ್ನಿಗುಂ ಪುರುಕುತ್ಸಮಾವತಂ ತಾಭಿರೂ ಷು ಊ-
ತಿಭಿರಶ್ವಿನಾ ಗತಂ ॥ ೭ ॥

ಪದಪಾಠಃ

ಯಾಭಿಃ । ಶುಚಂತಿಂ । ಧನಽಸಾಂ । ಸುಽಸಂಸದಂ । ತಪ್ತಂ । ಘರ್ಮಂ ।
ಓಮ್ಯಾಽವಂತಂ । ಅತ್ರಯೇ ।
ಯಾಭಿಃ । ಪೃಶ್ನಿಽಗುಂ । ಪುರುಽಕುತ್ಸಂ । ಆವತಂ । ತಾಭಿಃ। ಊಂ ಇತಿ ।
ಸು । ಊತಿಽಭಿಃ। ಅಶ್ವಿನಾ । ಆ । ಗತಂ ॥ ೭ ॥

ಸಾಯಣಭಾಷ್ಯಂ

ಹೇ ಅಶ್ವಿನೌ ಧನಸಾಂ ಧನಸ್ಯ ಸಂಭಕ್ತಾರಂ ಶುಚಂತಿನಾಮಕಂ ಮಾನಂ ಸುಷಂಸದಂ । ಸಂಸೀದಂತ್ಯಸ್ಮಿನ್ನಿತಿ ಸಂಸದ್ಗೃಹಂ। ಶೋಭನಸಂಸದಂ ಯಾಭಿರೂತಿಭಿರಕುರುತಂ । ತಥಾತ್ರಯೇ ಯಾಭಿ-

ಶ್ಯೋತಿಭಿಸ್ತಪ್ತಂ ಪ್ರವ್ಯಂಜನೇನ ಸಂತಪ್ತಂ ಘರ್ಮಂ ಮಹಾವೀರಮೋಮ್ಯಾವಂತಂ ಸುಖಯುಕ್ತಂ ಸುಖೇನ ಸ್ಪ್ರಷ್ಟುಂ ಶಕ್ಯಮಕುರುತಂ । ಯದ್ವಾ । ಶತದ್ವಾರೇ ಯಂತ್ರಗೃಹೇಽಸುರೈಃ ಪೀಡ್ಯಮಾನಾಯ ಘರ್ಮಂ ದೀಪ್ತಂ ಪೀಡಾಸಾಧನಮಗ್ನಿಂ ತಪ್ತಂ ತಾಪಕಾರಿಣಮೋಮ್ಯಾವಂತಂ ಸುಖವಂತಮಕುರುತಂ । ಯಥಾಸ್ಮೈ ಸುಖಂ ಭವತಿ ತಥಾ ಹಿಮೇನೋದಕೇನ ತಮಗ್ನಿಮವಾರಯೇಥಾಂ । ಯಾಸ್ಮಪಕ್ಷೇ ತ್ವತ್ರಯೇ ಹವಿಷಾಮತ್ರೇಽಗ್ನಯೇ ಹವಿರುತ್ಪತ್ತ್ಯರ್ಥಂ ಸೂರ್ಯಕಿರಣಸಂತಪ್ತಂ ಘರ್ಮಂ ಸ್ವೇದಾಪ-ಮಹರೋಮ್ಯಾವಂತಂ ತೃಪ್ತಿಹೇತುವೃಷ್ಟ್ಯುದಕೋಪೇತಂ ಕೃತವಂತಾವಿತಿ ಯೋಜ್ಯಂ । ಅಪಿ ಚ ಯಾಭಿರೂತಿಭಿಃ ಪೃಶ್ನಿಗುಂ ಪುರುಕುತ್ಸಂ ಚಾವತಂ ಅರಕ್ಷತಂ । ತಾಭಿಃ ಸರ್ವಾಭಿರೂತಿಭಿರಸ್ಮಾನಾಗ-ಚ್ಛತಂ ॥ ಶುಚಂತಿಂ । ಶುಚ ದೀಪ್ತೌ । ಔಣಾದಿಕೋ ಝಿಚ್ । ಧನಸಾಂ । ಜನಸನಖನಕ್ರಮಗಮೋ ವಿಟ್ । ವಿಡ್ವನೋರನುನಾಸಿಕಸ್ಯಾದಿತ್ಯಾತ್ವಂ । ಸುಷಂಸದಂ । ಶೋಭನಾ ಸಂಸದ್ಯಸ್ಯ । ನಞ್‌ಸುಭ್ಯಾ-ಮಿತ್ಯುತ್ತರಪದಾಂತೋದಾತ್ತತ್ವಂ । ಓಮ್ಯಾವಂತಂ । ಅವತೇರನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ । ಜ್ವರತ್ವರೇತ್ಯಾದಿನಾ ವಕಾರಸ್ಯೋಪಧಾಯಾಶ್ಚ ಊಟ್ । ಗುಣಃ । ಛಂದಸಿ ಚೇತ್ಯರ್ಹಾರ್ಥೇ ಯಪ್ರತ್ಯಯಃ । ನಸ್ತದ್ಧಿತ ಇತಿ ಟಿಲೋಪಃ । ಯೇ ಚಾಭಾವಕರ್ಮಣೋರಿತಿ ಪ್ರಕೃತಿಭಾವಸ್ತು ವ್ಯತ್ಯ-ಯೇನ ನ ಪ್ರವರ್ತತೇ । ಪೃಶ್ನಿಗುಂ । ಪೃಶ್ನಯೋ ನಾನಾವರ್ಣಾ ಗಾವೋ ಯಸ್ಯ ಸ ತಥೋಕ್ತಃ । ಗೋಸ್ತ್ರಿಯೋರುಪಸರ್ಜನಸ್ಯ । ಪಾ. ೧-೨.೪೮ । ಇತಿ ಗೋಶಬ್ದಸ್ಯ ಹ್ರಸ್ವತ್ವಂ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಶುಚಂತಿಂ**— ಶುಚಂತಿಯನ್ನು । **ಧನಸಾಂ**—ಧನಪೂರಿತನನ್ನಾಗಿಯೂ । **ಸುಷಂಸದಂ**— ಶ್ರೇಷ್ಠವಾದ ವಾಸಸ್ಥಾನವುಳ್ಳವನನ್ನಾಗಿಯೂ । **ಯಾಭಿಃ**— ಯಾವ ರಕ್ಷಣೆಗಳಿಂದ (ಮಾಡಿದಿರೋ ಮತ್ತು ಯಾವ ರಕ್ಷಣೆಗಳಿಂದ) । **ಅತ್ರಯೇ**— ಅತ್ರಿಗೆ । **ತಪ್ತಂ**— ಸಂತಪ್ತವಾದುದೂ । **ಘರ್ಮಂ**—ತೀವ್ರವಾದುದೂ ಆದ ಪ್ರವರ್ಗ್ಯಯಾಗದ ಅಗ್ನಿಯನ್ನು । **ಓಮ್ಯಾವಂತಂ**— ಸುಖಮಯವಾಗುವಂತೆ (ಮಾಡಿದಿರೋ) ಅಥವಾ ಪೀಡಾಯಂತ್ರಗೃಹದಲ್ಲಿ ಅಸುರರು ಅತ್ರಿಯ ಹಿಂಸೆಗಾಗಿ ಉರಿಸಿದ ತೀವ್ರವಾದ ಅಗ್ನಿಯನ್ನು ಅತ್ರಿಗೆ ಸುಖಮಯವಾಗುವಂತೆ ಮಾಡಿದಿರೋ, (ಅಲ್ಲದೇ) । **ಯಾಭಿಃ**—ಯಾವ ರಕ್ಷಣೆಗಳಿಂದ । **ಪೃಶ್ನಿಗುಂ**—ಪೃಶ್ನಿಗುವನ್ನು । **ಪುರುಕುತ್ಸಂ** - ಪುರುಕುತ್ಸನನ್ನೂ । **ಆವತಂ**—ರಕ್ಷಿಸಿದಿರೋ । **ತಾಭಿಃ ಊತಿಭಿಃ ಉ**—ಆ ಎಲ್ಲಾ ರಕ್ಷಣೆಗಳಿಂದಲೂ ಕೂಡಿಕೊಂಡು (ನಮ್ಮಲ್ಲಿಗೂ) । **ಸು ಆ ಗತಂ**—ಆದರದಿಂದ ಬನ್ನಿರಿ ॥

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಯಾವ ನಿಮ್ಮ ರಕ್ಷಣೆಗಳಿಂದ ಶುಚಂತಿಯನ್ನು ಧನಪೂರಿತನನ್ನಾಗಿಯೂ, ಶ್ರೇಷ್ಠವಾದ ವಾಸಸ್ಥಾನವುಳ್ಳವನನ್ನಾಗಿಯೂ ಮಾಡಿದಿರೋ ಮತ್ತು ಯಾವ ರಕ್ಷಣೆಗಳಿಂದ ತೀವ್ರವಾದುದೂ ಮತ್ತು ಸಂತಪ್ತವಾದುದೂ ಆದ ಅಗ್ನಿಯನ್ನು ಅತ್ರಿಗೆ ಸುಖಮಯವಾಗುವಂತೆ ಮಾಡಿದಿರೋ ಅಲ್ಲದೇ ಯಾವ ರಕ್ಷಣೆಗಳಿಂದ ಪೃಶ್ನಿಗುವನ್ನು ಪುರುಕುತ್ಸನನ್ನೂ ರಕ್ಷಿಸಿದಿರೋ ಆ ಎಲ್ಲಾ ರಕ್ಷಣೆಗಳಿಂದಲೂ ಕೂಡಿಕೊಂಡು ನಮ್ಮಲ್ಲಿಗೂ ಆದರದಿಂದ ಬನ್ನಿರಿ.

## English Translation

With those aids by which you enriched Suchanti and gave him a handsome habitation, and rendered the scorching heat pleasurable to Atri, and by which you preserved Prisnigu and Purukutsa, ; with them, Aswins, come willingly hither.

### ವಿಶೇಷವಿಷಯಗಳು

**ಶುಚಂತಿಂ— ಅತ್ರಾಪೀತಿಹಾಸಮಾಚಕ್ಷತೇ । ಶುಚಂತಿರ್ನಾಮ ರಾಜಾ ರಾಜಯಕ್ಷ್ಮಣಾ ಗೃಹೀತಸ್ತದ್ವ್ಯಾವೃತ್ತಯೇ ಸರ್ವಸ್ವಂ ಬ್ರಾಹ್ಮಣೇಭ್ಯೋ ದದೌ । ಅಶ್ವಿನೌ ಚ ತುಷ್ಟಾವ । ತಮಶ್ವಿನಾವಾಗತ್ಯ ಸ್ವೈರ್ಭೇಷಜೈರ್ನೀರುಜಂ ಚಕ್ರತುರಿತಿ । ಶುಚಂತಿ**ಯೆಂಬ ರಾಜನು **ರಾಜಯಕ್ಷ್ಮ**ವೆಂಬ ವ್ಯಾಧಿಗ್ರಸ್ತನಾದಾಗ ಆ ರೋಗದ ಉಪಶಮನಾರ್ಥವಾಗಿ ತನ್ನಲ್ಲಿದ್ದ ಸಮಸ್ತವನ್ನೂ ಬ್ರಾಹ್ಮಣರಿಗೆ ದಾನಮಾಡಿ ಅನಂತರ ಅಶ್ವಿನೀದೇವತೆಗಳನ್ನು ಸ್ತುತಿಸಿ ಅವರನ್ನು ಒಲಿಸಿಕೊಂಡನು. ಅವರು ತಮ್ಮ ಔಷಧಗಳ ಪ್ರಯೋಗದಿಂದ ಅವನ ರೋಗವನ್ನು ನಾಶಮಾಡಿದರು ಎಂಬ ಕಥೆಯನ್ನು ಸ್ಕಂದಸ್ವಾಮಿಗಳು ವಿವರಿಸಿದ್ದಾರೆ. ಸಾಯಣರ ವಿವರಣೆಯಂತೆ **ಶುಚಂತಿಯು** ರಾಜನೆಂದು ಕಂಡುಬರುವುದಿಲ್ಲ. ವಿತರ್ಕವೆಂದರೆ **ಸುಷಂಸದಂ** ಎಂಬ ಪದಕ್ಕೆ ಸಾಯಣರು **ಸಂಸೀದಂತ್ಯಸ್ಮಿನ್ನಿತಿ ಸಂಸತ್ ಗೃಹಂ । ಶೋಭನಸಂಸದಂ ಅಕುರುತಂ ।** ಶ್ರೇಷ್ಠವಾದ ವಾಸಸ್ಥಾನವುಳ್ಳವನನ್ನಾಗಿ ಮಾಡಿದರು ಎಂದರ್ಥಮಾಡಿದ್ದಾರೆ. **ಶುಚಂತಿಯು** ದೊರೆಯಾಗಿದ್ದರೆ ಈ ಅರ್ಥಕ್ಕೆ ಅವಕಾಶವಿಲ್ಲ. ಸ್ಕಂದಸ್ವಾಮಿಗಳು **ಸಂಸತ್ ಸಭೋಚ್ಯತೇ । ಶೋಭನಸಭಂ ।** ಶ್ರೇಷ್ಠವಾದ ಸಭೆಯುಳ್ಳವನು ಎಂದು ವಿವರಿಸಿರುವುದರಿಂದ ದೊರೆಯೆಂಬ ಅರ್ಥಕ್ಕೆ ಅನುಗುಣವಾಗಿದೆ.

**ಅತ್ರಿಂ— ಅತ್ರಿರ್ನಾಮರ್ಷಿಃ । ತಮಸುರಾ ಅಗ್ನಿಕೂಟೇ ಪ್ರಚಿಕ್ಷಿಪುಃ । ಸೋಽಶ್ವಿನೌ ತುಷ್ಟಾವ ತಮಶ್ವಿನಾವಾಗತ್ಯ ವೃಷ್ಟ್ಯಾ ನಿಶಮಯ್ಯಾಗ್ನಿಂ ತತ ಉಜ್ಜಹ್ರತುಃ । ಬಲಂ ಚಾಸುರಪ್ರತಿಬಂಧಸಮರ್ಥಮಸ್ಮೈ ಸಹಾನ್ನೇನ ದದತುರಿತಿ ।** ಅತ್ರಿಯೆಂಬ ಋಷಿಯನ್ನು ಅಸುರರು ಅಗ್ನಿಕೂಟದಲ್ಲಿ ತಳ್ಳಿಬಿಟ್ಟರು. ಅವನು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದನು. ಅವರು ಬಂದು ವೃಷ್ಟ್ಯುದಕದಿಂದ ಅಗ್ನಿಶಮನವನ್ನು ಮಾಡಿ ಅವನನ್ನು ಮೇಲಕ್ಕೆತ್ತಿದರು. ಅನಂತರ ಅಸುರರನ್ನು ತಡೆಗಟ್ಟಲು ಶಕ್ತಿಯನ್ನೂ ಅನ್ನವನ್ನೂ ಕೊಟ್ಟರು ಎಂದು ಕಥೆಯಿದೆ.

**ತಪ್ತಂ ಘರ್ಮಮೋಮ್ಯಾವಂತಮತ್ರಯೇ—** ಇಲ್ಲಿ ಸಾಯಣರು ಎರಡು ವಿಧವಾದ ಅರ್ಥವನ್ನು ಮಾಡಿದ್ದಾರೆ. ಮೊದಲನೆಯದಾಗಿ, ಸಂತಪ್ತವಾದುದೂ, ಘರ್ಮಂ— ತೀವ್ರವಾದುದೂ ಆದ ಅಗ್ನಿಯನ್ನು **ಓಮ್ಯಾವಂತಂ**— ಸುಖಮಯವಾಗುವಂತೆ ಮಾಡಿದರು ಎಂದೂ, ಎರಡನೆಯದಾಗಿ, **ತಪ್ತಂ ಘರ್ಮಂ**— ಯಂತ್ರಗೃಹದಲ್ಲಿ ಅಸುರರು ಅತ್ರಿಯ ಹಿಂಸೆಗಾಗಿ ಉರಿಸಿದ ತೀವ್ರವಾದ ಅಗ್ನಿಯನ್ನು, **ಓಮ್ಯಾವಂತಂ**— ಅತ್ರಿಗೆ ಸುಖಮಯವಾಗವಂತೆ ಮಾಡಿದರು ಎಂದೂ ವಿವರಿಸಿದೆ. ಇದಲ್ಲದೆ **ಯಾಸ್ಕ** ಮತವನ್ನೂ ಉದಹರಿಸಿ **ಯಾಸ್ಕಪಕ್ಷೇ ತು ಅತ್ರಯೇ ಹವಿಷಾಮತ್ತ್ರೇಽಗ್ನಯೇ ಹವಿರುತ್ಪತ್ತ್ಯರ್ಥಂ ಸೂರ್ಯಕಿರಣಸಂತಪ್ತಂ ಘರ್ಮಂ ನೈದಾಘಂ ಅಹಃ ಓಮ್ಯಾವಂತಂ ತೃಪ್ತಿಹೇತುವೃಷ್ಟ್ಯುದಕೋಪೇತಂ ಕೃತವಂತೌ ಇತಿ ಯೋಜ್ಯಂ ।** ಯಾಸ್ಕಮತದಲ್ಲಿ ಅತ್ರಿ ಶಬ್ದಕ್ಕೆ ಹವಿಸ್ಸನ್ನು ಭಕ್ಷಿಸತಕ್ಕ ಅಗ್ನಿಯೆಂದೂ, ಅಂತಹ ಅಗ್ನಿಗೆ ಸೂರ್ಯಕಿರಣಸಂತಪ್ತವಾದುದೂ, ನಿದಾಘ

ಪಾಲಿಕವಾದುದೂ ಆದ ಅಹಸ್ಸನ್ನು ತೃಪ್ತಿಕರವಾದ ವೃಷ್ಟ್ಯುದಕದಿಂದ ಕೂಡಿದುದನ್ನಾಗಿ ಮಾಡಿದರು ಎಂದರ್ಥವಾಗುತ್ತದೆಂಬುದಾಗಿಯೂ ಸಹ ವಿವರಿಸಿದ್ದಾರೆ. ಇದೇ ವಿಧವಾಗಿ,

**ಹಿಮೇನಾಗ್ನಿಂ ಘ್ರಂಸಮವಾರಯೇಥಾಂ ಪಿತುಮತೀಮೂರ್ಜಮಸ್ಮಾ ಅಧತ್ತಂ ।**
**ಋಬೀಸೇ ಅತ್ರಿಮಶ್ವಿನಾವನೀತಮುನ್ನಿನ್ಯಥುಃ ಸರ್ವಗಣಂ ಸ್ವಸ್ತಿ ॥**
(ಋ. ಸಂ. ೧-೧೧೬-೮)

**ಯುವಮತ್ರಯೇಽವನೀತಾಯ ತಪ್ತಮೂರ್ಜಮೋಮಾನಮಶ್ವಿನಾವಧತ್ತಂ ।**
(ಋ. ಸಂ. ೧-೧೧೮-೭)

ಇತ್ಯಾದಿ ಋಕ್ಕುಗಳಲ್ಲಿ ಕಕ್ಷೀವಂತನೇ ಮುಂತಾದ ಇತರ ಋಷಿಗಳೂ ಸಹ ಅಶ್ವಿನೀದೇವತೆಗಳ ಈ ಉಪಕಾರಕವಾದ ಅನುಗ್ರಹವನ್ನು ಸ್ಮರಿಸಿರುವರು. ಆದರೆ,

**ಅಗ್ನಿರತ್ರಿಂ ಘರ್ಮ ಉರುಷ್ಯದಂತರಗ್ನಿರ್ನೃಮೇಧಂ ಪ್ರಜಯಾಸೃಜತ್ಸಂ ।**
(ಋ. ಸಂ. ೧೦-೮೦-೩)

ಎಂಬ ಋಕ್ಕಿನಲ್ಲಿ ಅಗ್ನಿಯು ಅತ್ರಿಯನ್ನು ಈ ಹಿಂಸೆಯಿಂದ ಬಿಡಿಸಿದುದಾಗಿ ಹೇಳಿದೆ.

**ಓಮ್ಯಾವಂತಂ—ಸುಖಯುಕ್ತಂ ।** ಸುಖಕರವಾದುದನ್ನಾಗಿ ಎಂದು ಸಾಯಣರೂ ; **ಅವತೇಃ ಪಾಲನಾರ್ಥಸ್ಯ ಇದಂ ರೂಪಂ । ಪಾಲಯಂತಂ ಯುಷ್ಮತ್ಪ್ರಸಾದಾತ್ ಶೀತೀಭೂತಂ । ಅದಾಹಕಂ ।** ಪಾಲನಾರ್ಥಕವಾದ **ಅವ** ಧಾತುವಿನ ರೂಪವು ಈ ರೀತಿಯಾಗಿದೆ. ಅದಾಹಕವಾದುದು, ಆದುದರಿಂದ ಪಾಲಕವಾದುದು ಎಂದರ್ಥವೆಂದು ಸ್ಕಂದಸ್ವಾಮಿಗಳೂ ವಿವರಿಸಿದ್ದಾರೆ.

**ಪುರುಕುತ್ಸಂ—ಅತ್ರಾಪೀತಿಹಾಸಮಾಚಕ್ಷತೇ । ಪುರುಕುತ್ಸಃ ಪುತ್ರಕಾಮೋ ಮಹತ್ತಪಶ್ಚಚಾರಾಶ್ವಿನೌ ತುಷ್ಟಾವ ಚ । ತಸ್ಮೈ ಅಶ್ವಿನೌ ಪುತ್ರಂ ದದತುರಿತಿ ।** ಅಪುತ್ರನಾದುದರಿಂದ ಪುರುಕುತ್ಸನು ಪುತ್ರೇಚ್ಛೆಯಿಂದ ತಪಸ್ಸನ್ನಾಚರಿಸಿ ಅಶ್ವಿನೀದೇವತೆಗಳನ್ನು ತೃಪ್ತಿಪಡಿಸಿದನು. ಅವರು ಇವನಿಗೆ ಪುತ್ರರೂಪವಾದ ವರವನ್ನು ಅನುಗ್ರಹಿಸಿದರು ಎಂಬ ವಿಷಯವನ್ನು ಹೇಳಿದೆ.

**ಪೃಶ್ನಿಗುಂ—ಪೃಶ್ನಿಗುವೆಂಬ** ಒಬ್ಬ ಭಕ್ತನೆಂದು ಸಾಯಣರು ಅರ್ಥಮಾಡಿದ್ದಾರೆ. ಆದರೆ ಸ್ಕಂದಸ್ವಾಮಿಗಳು ಈ ಪದವನ್ನು **ಪುರುಕುತ್ಸನಿಗೆ** ವಿಶೇಷಣವನ್ನಾಗಿ ಮಾಡಿ, **ಪೃಶ್ನಿಶಬ್ದೋ ವ್ಯಾಘ್ರಸರೂಪವರ್ಣವಚನಃ । ಪೃಶ್ನಯೋ ಗಾವೋ ಯಸ್ಯ ಸ ಪೃಶ್ನಿಗುಃ । ತಂ ಪೃಶ್ನಿಗುಂ ಪುರುಕುತ್ಸಂ ।** ವ್ಯಾಘ್ರದ ಬಣ್ಣದಂತೆ ರೂಪವುಳ್ಳ ಗೋವುಗಳನ್ನು ಹೊಂದಿರುವುದರಿಂದ ಪುರುಕುತ್ಸನಿಗೆ **ಪೃಶ್ನಿಗುವೆಂಬ** ವಿಶೇಷಣವಿದೆಯೆಂದು ವಿವರಿಸಿದ್ದಾರೆ. ಪುರುಕುತ್ಸನೆಂಬ ರಾಜನು **ಐಕ್ಷ್ವಾಕ** ವಂಶದವನೆಂದು ಶತಪಥಬ್ರಾಹ್ಮಣದಿಂದ ತಿಳಿಯಬರುತ್ತದೆ.

**ಪುರುಕುತ್ಸೋ ದೌರ್ಗಹೇಣೇಜ ಐಕ್ಷ್ವಾಕೋ ರಾಜಾ ।**
(ಶ. ಬ್ರಾ. ೧೩-೫-೪-೫)

ಎಂಬ ವಾಕ್ಯವು ಐಕ್ಷ್ವಾಕವಂಶದಲ್ಲಿ ಹುಟ್ಟಿದ ಪುರುಕುತ್ಸನೆಂಬ ರಾಜನು **ದೌರ್ಗಹ** ರೂಪವಾದ ಅಶ್ವಮೇಧವನ್ನು ಮಾಡಿದನೆಂದು ಹೇಳಿದೆ. ಇದೇ ವಿಷಯವು,

**ಅಸ್ಮಾಕಮತ್ರ ಪಿತರಸ್ತ ಆಸನ್ತ್ಸಪ್ತ ಋಷಯೋ ದೌರ್ಗಹೇ ಬಧ್ಯಮಾನೇ ।**
(ಋ. ಸಂ. ೪-೪೨-೮)

ಎಂಬ ಋಕ್ಕಿನಲ್ಲಿ ಸೂಚಿತವಾಗಿದೆ. ಆದರೆ ಇಲ್ಲಿ ಸಾಯಣರು ದೌರ್ಗಹ ಎಂಬ ಪದವನ್ನು ಅಂಕಿತನಾಮವಾಗಿ ಅರ್ಥಮಾಡಿ ದುರ್ಗಹಸ್ಯ ಪುತ್ರೇ ಪುರುಕುತ್ಸೇ ಎಂದು ಅರ್ಥಮಾಡಿದ್ದಾರೆ.

**ತ್ವಂ ಹ ತ್ಯದಿಂದ್ರ ಸಪ್ತ ಯುಧ್ಯನ್ಪುರೋ ವಜ್ರಿನ್ಪುರುಕುತ್ಸಾಯ ದರ್ದಃ ।**
**ಬರ್ಹಿರ್ನ ಯತ್ಸುದಾಸೇ ವೃಥಾ ವರ್ಗಂಹೋ ರಾಜನ್ವರಿವಃ ಪೂರವೇ ಕಃ ॥**
(ಋ. ಸಂ. ೧-೬೩-೭)

ಎಂಬ ಋಕ್ಕಿನ ಆಧಾರದಿಂದ ಇವನು ಸುದಾಸನೆಂಬ ರಾಜನ ಸಮಕಾಲೀನನೆಂದು ತಿಳಿಯುತ್ತದೆ.

**ಸನೇಮ ತೇಽವಸಾ ನವ್ಯ ಇಂದ್ರ ಪ್ರ ಪೂರವಃ ಸ್ತವಂತ ಏನಾ ಯಜ್ಞೈಃ ।**
**ಸಪ್ತ ಯತ್ಪುರಃ ಶರ್ಮ ಶಾರದೀರ್ದರ್ದ್ಧನ್ ದಾಸೀಃ ಪುರುಕುತ್ಸಾಯ ಶಿಕ್ಷನ್ ॥**
(ಋ.ಸಂ. ೬-೨೦-೧೦)

ಎಂಬ ಋಕ್ಕಿನಲ್ಲಿ ಪುರುಕುತ್ಸನು **ಪೂರು**ವೆಂಬ ಜನಾಂಗದ ರಾಜನೆಂದೂ ಹೇಳಿದೆ. ದಾಸರನ್ನೆಲ್ಲಾ ಜಯಿಸಿದವನೆಂದೂ ಹೇಳಿದೆ. ಇವನಿಗೆ ತ್ರಸದಸ್ಯುವೆಂಬ ಪುತ್ರನಿದ್ದನೆಂದೂ ತಿಳಿಯುತ್ತದೆ. ಆದರೆ ಆ ಪುತ್ರನು ಪುರುಕುತ್ಸನ ಮರಣಾನಂತರ ಹುಟ್ಟಿರಬಹುದೆಂಬ ಶಂಕೆಗೂ ಆಧಾರವಿದೆ.

**ಪುರುಕುತ್ಸಾನೀ ಹಿ ವಾಮದಾಶದ್ಧವ್ಯೇಭಿರಿಂದ್ರಾವರುಣಾ ನಮೋಭಿಃ ।**
**ಅಥಾ ರಾಜಾನಂ ತ್ರಸದಸ್ಯುಮಸ್ಯಾ ವೃತ್ರಹಣಂ ದದಥುರರ್ಧದೇವಂ ।**
(ಋ. ಸಂ. ೪-೪೨-೯)

ಎಂಬಲ್ಲಿ ಪುರುಕುತ್ಸನ ಪತ್ನಿಯು ಇಂದ್ರಾವರುಣರನ್ನು ಹವಿಸ್ಸುಗಳಿಂದಲೂ ಸ್ತುತಿಗಳಿಂದಲೂ ತೃಪ್ತಿಪಡಿಸಿದಾಗ **ತ್ರಸದಸ್ಯು**ವೆಂಬ ಪುತ್ರನನ್ನು ಹಡೆಯುವಂತೆ ಅನುಗ್ರಹಿಸಿದರೆಂದಿದೆ. ಈ ಆಧಾರದಮೇಲೆ ಪುರುಕುತ್ಸನು ಯುದ್ಧದಲ್ಲಿ ಮೃತನಾದನಂತರ ಅವನ ಪತ್ನಿಯು ಇಂದ್ರಾವರುಣರನ್ನು ಪ್ರಾರ್ಥಿಸಿ ತ್ರಿಸದಸ್ಯುವೆಂಬ ಮಗನನ್ನು ಹಡೆದಳೆಂದ ಕಥೆಯಿದೆ.

¹ ವ್ಯಾಕರಣಪ್ರಕ್ರಿಯಾ

**ಶುಚಂತಿಮ್**—ಶುಚ ದೀಪ್ತೌ. ಧಾತು. ಇದಕ್ಕೆ ಔಣಾದಿಕವಾದ ಝಿಚ್ ಪ್ರತ್ಯಯ. **ಝೋಽಂತಃ** (ಪಾ. ಸೂ. ೭-೧-೩) ಎಂಬುದರಿಂದ ಝಕಾರಕ್ಕೆ ಅಂತಾದೇಶ. ಪ್ರತ್ಯಯ ಚಿತ್ತಾದುದರಿಂದ **ಚಿತಃ**—(ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಧನಸಾಮ್**—ಷಣ ಸಂಭಕ್ತೌ. **ಜನಸನಖನಕ್ರಮಗಮೋ ವಿಟ್**—(ಪಾ. ಸೂ. ೩-೨-೬೭) ಎಂಬುದರಿಂದ ವಿಟ್. ಇದು ಪರವಾದಾಗ **ವಿಡ್ವನೋರನುನಾಸಿಕಸ್ಯಾತ್**—(ಪಾ. ಸೂ. ೬-೪-೪೧) ಎಂಬುದರಿಂದ ಧಾತುವಿಗೆ ಆತ್ವ. ಕಾರಕಪೂರ್ವಪದವಾಗಿರುವುದರಿಂದ **ಗತಿಕಾರಕೋಪಪದಾತ್ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

**ಸುಷಂಸದಮ್**— ಶೋಭನಾ ಸಂಸತ್ ಯಸ್ಯ ಸುಷಂಸದ್. **ನಞ್ಸುಭ್ಯಾಮ್**—(ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ತಪ್ತಮ್**—ತಪ ಸಂತಾಪೇ. ಧಾತು. **ನಿಷ್ಠಾ**—ಎಂಬುದರಿಂದ ಕ್ತಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾಏಕವಚನಾಂತರೂಪ.

**ಓಮ್ಯಾವಂತಮ್**—ಅವ ರಕ್ಷಣೇ. ಧಾತು. **ಅನ್ಯೇಭ್ಯೋಽಪಿದೃಶ್ಯಂತೇ**—(ಪಾ. ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ. **ಜ್ವರತ್ವರಸ್ರಿವಿ**—(ಪಾ. ಸೂ. ೬-೪-೨೦) ಎಂಬುದರಿಂದ ಉಪಧಾವಕಾರಗಳಿಗೆ ಊಠಾದೇಶ. ಮನಿನ್ ನಿಮಿತ್ತವಾಗಿ ಅದಕ್ಕೆ ಗುಣ. ಓಮನ್ ಶಬ್ದವಾಗುತ್ತದೆ. ಇದಕ್ಕೆ ಅರ್ಹಾರ್ಥದಲ್ಲಿ **ಛಂದಸಿ ಚ**—(ಪಾ. ಸೂ. ೫-೧-೬೭) ಎಂಬುದರಿಂದ ಯಪ್ರತ್ಯಯ. **ನಸ್ತದ್ಧಿತೇ**—(ಪಾ. ಸೂ. ೬-೪-೧೪೪) ಎಂಬುದರಿಂದ ಟಿಗೆ (ಅನ್) ಲೋಪ. ಯದ್ಯಪಿ ಯಾದಿ ಪ್ರತ್ಯಯ ಪರವಾದುದರಿಂದ **ಯೇಚಾಭಾವಕರ್ಮಣೋಃ**—(ಪಾ. ಸೂ. ೬-೪-೧೬೮) ಎಂಬುದರಿಂದ ಪ್ರಕೃತಿಭಾವ ಪ್ರಾಪ್ತವಾಗುತ್ತದೆ. ಆದರೆ ವ್ಯತ್ಯಯದಿಂದ ಇಲ್ಲಿ ಬರುವುದಿಲ್ಲವೆನ್ನಬೇಕು. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಓಮ್ಯಮಸ್ಯಾಸ್ತೀತಿ ಓಮ್ಯಾವಾನ್ **ತದಸ್ಯಾಸ್ತಿ**—(ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ. **ಮಾದುಪಧಾಯಾಶ್ಚ**—(ಪಾ. ಸೂ. ೮-೨-೯) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಪೃಶ್ನಿಗುಮ್**—ಪೃಶ್ನಿ ಎಂದರೆ ನಾನಾವರ್ಣಗಳು. ಪ್ರಶ್ನಯಃ ನಾನಾವರ್ಣಾಃ ಗಾವೋ ಯಸ್ಯ ಸಃ ಪೃಶ್ನಿಗುಃ ತಂ. ಪೃಶ್ನಿಗುಮ್. **ಗೋಸ್ತ್ರಿಯೋರುಪಸರ್ಜನಸ್ಯ** — (ಪಾ. ಸೂ. ೧-೨-೪೮) ಎಂಬುದರಿಂದ ಗೋಶಬ್ದಾರ್ಥಕ್ಕೆ ಅಪ್ರಾಧಾನ್ಯವಿರುವುದರಿಂದ ಅದಕ್ಕೆ ಹ್ರಸ್ವ ಬರುತ್ತದೆ. **ಏಚಇಕ್ಹ್ರಸ್ವಾದೇಶೇ**—(ಪಾ. ಸೂ. ೧-೧-೪೮) ಎಂದು ನಿಯಮಮಾಡಿರುವುದರಿಂದ ಉಕಾರವೇ ಬರುತ್ತದೆ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ॥ ೭ ॥



। ಸಂಹಿತಾಪಾಠಃ ।

ಯಾಭಿಃ ಶಚೀಭಿರ್ವೃಷಣಾ ಪರಾವೃಜಂ ಪ್ರಾಂಧಂ ಶ್ರೋಣಂ
ಚಕ್ಷಸ ಏತವೇ ಕೃಥಃ ।

ಯಾಭಿರ್ವರ್ತಿಕಾಂ ಗ್ರಸಿತಾಮಮುಂಚತಂ ತಾಭಿರೂ ಷು ಊ-
ತಿಭಿರಶ್ವಿನಾ ಗತಂ ॥೮॥

ಪದಪಾಠಃ

ಯಾಭಿಃ । ಶಚೀಭಿಃ । ವೃಷಣಾ । ಪರಾಽವೃಜಂ । ಪ್ರ । ಅಂಧಂ । ಶ್ರೋಣಂ ।
ಚಕ್ಷಸೇ । ಏತವೇ । ಕೃಥಃ ।

ಯಾಭಿಃ । ವರ್ತಿಕಾಂ । ಗ್ರಸಿತಾಂ । ಅಮುಂಚತಂ । ತಾಭಿಃ । ಊಂ ಇತಿ । ಸು ।
ಊತಿಭಿಃ । ಅಶ್ವಿನಾ । ಆ । ಗತಂ ॥ ೮ ॥

ಸಾಯಣಭಾಷ್ಯಂ

ಹೇ ವೃಷಣಾ ಕಾಮಾನಾಂ ವರ್ಷಿತಾರಾವಶ್ವಿನೌ ಯಾಭಿಃ ಶಚೀಭಿಃ ಕರ್ಮಭಿಃ ಪ್ರಜ್ಞಾಭಿರ್ವಾ ಪರಾವೃಜಮೇತನ್ನಾಮಕಮೃಷಿಂ ಪಂಗುಂ ಸಂತಮಪಂಗುಮಕುರುತಂ । ತಥಾಂಧಂ ದೃಷ್ಟಿರಹಿತಂ ಸಂತಮೃಜ್ರಾಶ್ವಮೃಷಿಂ ಚಕ್ಷಸೇ ಪ್ರಕಾಶಾಯ ಸಮ್ಯಕ್ ಚಕ್ಷುಷಾ ದರ್ಶನಾಯ ಯಾಭಿರೂತಿಭಿಃ ಪ್ರ ಕೃಥಃ ಪ್ರಕರ್ಷೇಣ ಕುರುಥಃ । ಯಾಭಿಶ್ಚ ಶ್ರೋಣಂ ವಿಗುಣಜಾನುಕಮೇವ ಸಂತಮೃಷಿಮೇತವೇ ಗಂತುಂ ಪ್ರ ಕೃಥಃ । ಪ್ರಕರ್ಷೇಣ ಕೃತವಂತೌ । ಅಪಿ ಚ ಯಾಭಿರೂತಿಭಿರ್ವರ್ತಿಕಾಂ ಚಟಕಸದೃಶಸ್ಯ ಪಕ್ಷಿಣಃ ಸ್ತ್ರಿಯಂ ಗ್ರಸಿತಾಂ ವೃಕೇಣ ಗ್ರಸ್ತಾಮಮುಂಚತಂ । ವೃಕಾಸ್ಯಾನ್ನಿರ್ಮುಕ್ತಾಮಕುರುತಂ । ಯಾಸ್ಕಪಕ್ಷೇ ತು ವೃಕೇಣ ವಿವೃತಜ್ಯೋತಿಷ್ಕೇಣ ಸೂರ್ಯೇಣ ಯಾಭಿರ್ಗ್ರಸ್ತಾಂ ವರ್ತಿಕಾಂ ಪ್ರತ್ಯಹಮಾವರ್ತಮಾನಾಮುಷಸಂ ತಸ್ಮಾದಮೋಚಯತಮಿತಿ ಯೋಜ್ಯಂ । ತಾಭಿಃ ಸರ್ವಾಭಿರೂತಿಭಿರಸ್ಮಾನಪ್ಯಾಗಚ್ಛತಂ॥ ವೃಷಣಾ । ವೃಷ ಸೇಚನೇ । ಕನಿನ್ಯುವೃಷೀತ್ಯಾದಿನಾ ಕನಿನ್ । ಪರಾವೃಜಂ । ವೃಜೀ ವರ್ಜನೇ । ಪರಾವೃಣಕ್ತಿ ತಪಸಾ ಪಾಪಂ ವಿನಾಶಯತೀತಿ ಪರಾವೃಕ್ । ಕ್ವಿಪ್ಚೇತಿ ಕ್ವಿಪ್ । ಕೃದುತ್ತರಪದಪ್ರಕೃತಿಸ್ವರತ್ವಂ । ಏತವೇ । ತುಮರ್ಥೇ ಸೇಸೇನಿತ್ಯೇತೇಸ್ತವೇನ್ಪ್ರತ್ಯಯಃ । ಕೃಥಃ । ಡುಕೃಞ್ ಕರಣೇ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ ॥

ಪ್ರತಿಪದಾರ್ಥ

ವೃಷಣಾ—ಇಷ್ಟಾರ್ಥಗಳನ್ನು ಸುರಿಸಿಕೊಡುವ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಯಾಭಿಃ ಶಚೀಭಿಃ—ಯಾವ ಸಹಾಯಕರ್ಮಗಳಿಂದ ಅಥವಾ ಜ್ಞಾನಗಳಿಂದ । ಪರಾವೃಜಂ—(ಕುಂಟನಾಗಿದ್ದ) ಪರಾವೃಜ

ನೆಂಬ ಋಷಿಯನ್ನು (ನೇರವಾಗಿ ನಡೆಯುವಂತೆ ಮಾಡಿದಿರೋ) । **ಅಂಧಂ**—ಕುರುಡನಾಗಿದ್ದ (ಋಜ್ರಾಶ್ವನನ್ನು) । **ಚಕ್ಷಸೇ**—ಕಣ್ತೆರೆದು ನೋಡುವಂತೆ । **ಪ್ರಕೃಥಃ**—ಚೆನ್ನಾಗಿ ಮಾಡಿದಿರೋ, (ಮತ್ತು) । **ಶ್ರೋಣಂ**—(ಮಂಡಿ ಮುರಿದ) ಶ್ರೋಣನನ್ನು । **ಏತವೇ**—ಚೆನ್ನಾಗಿ ನಡೆಯುವಂತೆ (ಮಾಡಿದಿರೋ) ಅಲ್ಲದೆ । **ಯಾಭಿಃ**—ಯಾವ ರಕ್ಷಣಾ ಸಹಾಯಗಳಿಂದ । **ಗ್ರಸಿತಾಂ**—(ತೋಳನಿಂದ) ಕಚ್ಚಿ ಹಿಡಿಯಲ್ಪಟ್ಟ । **ವರ್ತಿಕಾಂ**—ವರ್ತಿಕೆಯೆಂಬ ಹೆಣ್ಣು ಪಕ್ಷಿಯನ್ನು । **ಅಮುಂಚತಂ**—(ತೋಳನ ಬಾಯಿಂದ) ಬಿಡಿಸಿದಿರೋ । **ತಾಭಿಃ ಊತಿಭಿಃ ಉ**—ಆ ಎಲ್ಲಾ ವಿಧವಾದ ಸಹಾಯ ಕರ್ಮಗಳೊಡನೆ (ನಮ್ಮಲ್ಲಿಗೂ) । **ಸು ಆ ಗತಂ**—ಆದರದಿಂದ ಬನ್ನಿರಿ.

### ಭಾವಾರ್ಥ

ಇಷ್ಟಾರ್ಥಗಳನ್ನು ಸುರಿಸಿಕೊಡುವ ಎಲೈ ಅಶ್ವಿನೀದೇವತೆಗಳೇ, ಯಾವ ಸಹಾಯಕರ್ಮಗಳಿಂದ ಕುಂಟನಾಗಿದ್ದ ಪರಾವೃಜನೆಂಬ ಋಷಿಯನ್ನು ನೇರವಾಗಿ ನಡೆಯುವಂತೆ ಮಾಡಿದಿರೋ, ಕುರುಡನಾಗಿದ್ದ ಋಜ್ರಾಶ್ವನನ್ನು ಕಣ್ತೆರೆದು ನೋಡುವಂತೆ ಮಾಡಿದಿರೋ ಮತ್ತು ಮಂಡಿಮುರಿದ ಶ್ರೋಣನನ್ನು ಚೆನ್ನಾಗಿ ನಡೆಯುವಂತೆ ಮಾಡಿದಿರೋ ಹಾಗೆಯೇ ತೋಳನು ಕಚ್ಚಿಕೊಂಡಿದ್ದ ವರ್ತಿಕಾ ಪಕ್ಷಿಯನ್ನು ಅದರ ಬಾಯಿನಿಂದ ಬಿಡಿಸಿದಿರೋ ಆ ಎಲ್ಲಾ ನಿಮ್ಮ ಸಹಾಯ ಕರ್ಮಗಳೊಡನೆಯೂ ಸಹ ನಮ್ಮಲ್ಲಿಗೂ ಆದರದಿಂದ ಬನ್ನಿರಿ.

### English Translation

Showerers (of benefits) with those aids by which you enabled (the lame) Paravrij (to walk), the blind (Rijraswa) to see, and (the cripple) Srona to go, and by which you set free the quail when seized (by a wolf) ; with those aids Aswins, come willingly hither.

### ವಿಶೇಷವಿಷಯಗಳು

**ಪರಾವೃಜಂ, ಅಂಧಂ, ಶ್ರೋಣಂ—ಪರಾವೃಜಂ ಏತನ್ನಾಮಕಮೃಷಿಂ ಪಂಗುಂ ಸಂತಮಪಂಗುಮಕುರುತಂ । ತಥಾ ಅಂಧಂ ದೃಷ್ಟಿರಹಿತಂ ಸಂತಮೃಜ್ರಾಶ್ವಮೃಷಿಂ ಚಕ್ಷಸೇ ಚಕ್ಷುಷಾ ದರ್ಶನಾಯ ಕೃತವಂತೌ । ಶ್ರೋಣಂ—ವಿಗುಣಜಾನುಕಂ ಋಷಿಂ ಏತವೇ ಗಂತುಂ ಕೃಥಃ ।** ಇದು ಸಾಯಣರ ವಿವರಣೆ. ಈ ವಿವರಣೆಯಂತೆ **ಪರಾವೃಜ** ಎಂಬ ಪದವು ಅಂಕಿತನಾಮವೆಂದೂ, ಒಬ್ಬ ಋಷಿಯ ಹೆಸರೆಂದೂ ತಿಳಿಯುತ್ತದೆ. ಆದರೆ ಸ್ಕಂದಸ್ವಾಮಿಗಳು ಈ ಪದವನ್ನು ಅಂಕಿತನಾಮವೆಂದು ಹೇಳಿಲ್ಲ. **ಪರಾವೃಜಂ—ಪರಾವರ್ಜಿತಂ** ಎಂದು ಅರ್ಥಮಾಡಿದ್ದಾರೆ. ಈ ಅರ್ಥವನ್ನೇ ಆಂಗ್ಲವ್ಯಾಖ್ಯಾಕಾರರೂ ಅನುಸರಿಸಿರುತ್ತಾರೆ. ಮತ್ತು ಸಾಯಣರು ಮಾಡಿರುವ ಅರ್ಥವನ್ನು ತಿರಸ್ಕರಿಸಿಯೂ ಇದ್ದಾರೆ. Vedic Index ಎಂಬ ಪುಸ್ತಕದಲ್ಲಿ ಈ ಪದವನ್ನು ವಿವರಿಸುವಾಗ ಮಾಡಿರುವ ವಿಮರ್ಶೆಯು ಗಮನಾರ್ಹವಾದುದು. Paravrij is a term found in four passages of the Rig-Veda (I-112-8 ; II 13-12 ; II-15-7 ; X-61-8) in all of which it refers to a person in a forlorn condition, while one of them also speaks of him as going south. Sayana's view that the word is a proper name is most unlikely, while grassmann's expla-

nation of it as cripple' is still less probable. Roth's Interpretation of it as 'exile' seems clearly right in the passage.

(Vedic Index of names and subjects by Macdonell and keith Vol. I P. 492-493)

ಸಾಯಣರು ಪರಾವೃಜ, ಋಜ್ರಾಶ್ವ, ಶ್ರೋಣ ಎಂಬ ಮೂರು ಅಂಕಿತನಾಮಗಳೂ ಮೂವರು ಋಷಿಗಳ ಹೆಸರುಗಳೆಂದು ವಿವರಿಸಿದ್ದಾರೆ.

ಅನ್ವಯಕ್ರಮದಲ್ಲೂ ಅರ್ಥವಿವರಣೆಯಲ್ಲಿಯೂ ಸಹ ಸಾಯಣರಿಗೂ, ಸ್ಕಂದಸ್ವಾಮಿಗಳಿಗೂ ಬಹಳ ವ್ಯತ್ಯಾಸವಿದೆ. ಸ್ಕಂದಸ್ವಾಮಿಗಳವಿವರಣೆಯಂತೆ, ಮೊದಲನೆಯದಾಗಿ; **ಅತ್ರೇತಿಹಾಸಮಾಚಕ್ಷತೇ। ಘೋರೋ ನಾಮಾಗ್ನೇಃ ಪುತ್ರಃ। ತಸ್ಯ ಜ್ಯೇಷ್ಠಃ ಪುತ್ರಃ ಕುಷ್ಠೀ ಶ್ಯಾವವರ್ಣಃ ಗಮನಾಸಮರ್ಥೋ ಬಭೂವ। ಸೋಽಶ್ವಿನೌ ತುಷ್ಟಾವ। ತಮಶ್ವಿನೌ ವಿಕೃತ್ಯ ಜಂಘಯೋರ್ಮಧ್ಯೇ ಶಿರಸಿ ಛಿತ್ವಾ ಪುನಶ್ಚ ಸಂಧಾಯ ಗಮನಸಮರ್ಥಂ ಹಿರಣ್ಯತ್ವಚಂ ಚ ಪುನರುಜ್ಜೀವಯಾಂಚಕ್ರತುರಿತಿ।** ಅಗ್ನಿಪುತ್ರನಾದ ಘೋರನೆಂಬುವನ ಜ್ಯೇಷ್ಠಪುತ್ರನು ಕುಷ್ಠರೋಗಗ್ರಸ್ತನಾಗಿ ಕುಂಟನಾದುದರಿಂದ ನಡೆಯಲ ಸಮರ್ಥನಾದನು. ಆಗ ಅವನು ಅಶ್ವಿನೀದೇವತೆಗಳನ್ನು ಸ್ತುತಿಸಿದನು. ಆಗ ಅಶ್ವಿನೀದೇವತೆಗಳು ಅವನ ತೊಡೆಯನ್ನು ಸೀಳಿ ಮೇಲ್ಭಾಗದಲ್ಲಿ ಕತ್ತರಿಸಿ ಪುನಃ ಸೇರಿಸಿದರು. ಆಗ ಅವನಿಗೆ ಹಿರಣ್ಯರೂಪವಾದ ಚರ್ಮವುಂಟಾಗಿ ನಡೆಯಲು ಸಮರ್ಥನಾದನು ಎಂಬ ಕಥೆಯಿದೆಯೆಂದು ಹೇಳಿ, ಋ. ಸಂ. ೧-೧೧೭-೮ ಮತ್ತು ೧-೧೧೭-೧೭ನೇ ಋಕ್ಕುಗಳಲ್ಲಿಯೂ ಸಹ ಈ ವಿಷಯವನ್ನು ಹೇಳಿದೆಯೆಂದು ಆ ಋಕ್ಕುಗಳನ್ನೂ ಉದಹರಿಸಿದ್ದಾರೆ. ಎರಡನೆಯದಾಗಿ **ತಥಾಪರಮಿತಿಹಾಸಮಾಚಕ್ಷತೇ। ವಾರ್ಷಾಗಿರಃ ಋಜ್ರಾಶ್ವೋ ನಾಮ ರಾಜಾ। ತಮಶ್ವಿನೋಃ ಸ್ವಭೂತಾ ಕಶಾ ವೃಕೀ ಭೂತ್ವಾ ಉಪತಸ್ಥೌ। ಸಃ ತಾಂ ದಿವ್ಯೇನ ಚಕ್ಷುಷಾ ಜ್ಞಾತ್ವಾ ಅಹನ್ಯಹನಿ ವಿಶಸ್ಯ ಮೇಷಶತಂ ತಸ್ಯೈ ಆಹಾರಂ ಕಲ್ಪಯಾಂಚಕಾರ। ತತ್ ಜ್ಞಾತ್ವಾ ತಸ್ಮೈ ಪಿತಾ ಚುಕೋಪ। ಸ ತಂ ಶಾಪೇನಾಂಧಂ ಚಕಾರ। ಅಥ ಮೃತೇ ವೃಷಾಗಿರಿ ಋಜ್ರಾಶ್ವಮಂಧಂ ಜ್ಞಾತ್ವಾ ತಚ್ಛತ್ರವಃ ತತ್ಪುರಮುಪರುರುಧುಃ। ತಾನ್ನಿಷ್ಕ್ರಮ್ಯ ಸಾ ವೃಕೀ ಬಭಂಜೇ। ಭಗ್ನೇಷು ಶತ್ರುಷು ಪುನರಪ್ಯುಪರೋಧಮಾಶಂಕಮಾನ ಋಜ್ರಾಶ್ವೋಽಶ್ವಿನೌ ತುಷ್ಟಾವ। ತಸ್ಮೈ ಆಶ್ವಾಗತ್ಯಾಶ್ವಿನೌ ಅಕ್ಷಿಣೀ ದದತುರಿತಿ।** ವೃಷಾಗಿರನ ಪುತ್ರನಾದ ಋಜ್ರಾಶ್ವನೆಂಬ ದೊರೆಯಿದ್ದನು. ಅಶ್ವಿನೀ ದೇವತೆಗಳ ಕಶೆಯು ತೋಳನರೂಪದಲ್ಲಿ ಬಂದು ಅವನನ್ನು ಆಶ್ರಯಿಸಿಕೊಂಡು ಬಂದಿತು. ಆಗ ಅವನು ಅದರ ಸುಳಿವನ್ನು ತಿಳಿದು ಪ್ರತಿದಿನವೂ ಅದಕ್ಕೆ ನೂರು ಕುರಿಗಳನ್ನು ಆಹಾರವನ್ನಾಗಿ ಕೊಡುತ್ತಿದ್ದನು. ಈ ವಿಷಯವನ್ನು ಅವನ ತಂದೆಯು ತಿಳಿದು ಕೋಪಗೊಂಡು ಅವನನ್ನು ಕುರುಡನಾಗುವಂತೆ ಶಪಿಸಿದನು. ವೃಷಾಗಿರನ ಮರಣಾನಂತರ ಅವನ ಶತ್ರುಗಳು ಋಜ್ರಾಶ್ವನನ್ನು ಕುರುಡನೆಂದು ತಿಳಿದು ಅವನ ನಗರವನ್ನು ಮುತ್ತಿ ಅವನನ್ನು ಹಿಂಸಿಸಿದರು. ಆಗ ಆ ತೋಳನು ಅವರನ್ನು ಪಟ್ಟಣದಿಂದ ಓಡಿಸಿ ನಾಶವಾಯಿತು. ಆದರೂ ಸಹ ಋಜ್ರಾಶ್ವನು ಪುನಃ ಶತ್ರುಗಳಿಂದ ಮುತ್ತಿಗೆಯಾಗಬಹುದೆಂಬ ಭಯದಿಂದ ಅಶ್ವಿನೀ ದೇವತೆಗಳನ್ನು ಕುರಿತು ಮೊರೆಯಿಟ್ಟನು. ಆಗ ಅವರು ವೇಗವಾಗಿ ಬಂದು ಅವನಿಗೆ ಕಣ್ಣನ್ನು ಕೊಟ್ಟರು ಎಂದು ಕಥೆಯಿದೆ.

ಋಜ್ರಾಶ್ವನು ಇಂದ್ರನ ಅನುಗ್ರಹಕ್ಕೂ ಪಾತ್ರನಾದನು ಎಂಬ ವಿಷಯವನ್ನು ಇದೇ ಭಾಗದ ೧೦೦ನೇ ಸೂಕ್ತದ ೧೭ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. ಮೂರನೆಯದಾಗಿ, **ತಥಾಪರಮಿತಿಹಾಸಮಾಚಕ್ಷತೇ। ನಾರ್ಷದಋಷಿರ್ಬಧಿರೋ ಬಭೂವ। ಸೋಽಶ್ವಿನೌ ತುಷ್ಟಾವ। ತಸ್ಮೈ ಅಶ್ವಿನೌ ಶ್ರೋತ್ರಂ ದದತುರಿತಿ।** ನಾರ್ಷದನೆಂಬ ಋಷಿಯು ಕಿವುಡನಾದಾಗ ಅಶ್ವಿನೀ ದೇವತೆಗಳನ್ನು ಸ್ತುತಿಸಿದನು. ಆಗ ಅವರು ಅವನಿಗೆ ಕಿವಿ ಕೇಳುವಂತೆ ಮಾಡಿದರು ಎಂಬ ಕಥೆಯು ಉಕ್ತವಾಗಿದೆ. ಈ ವಿಧವಾಗಿ ಮೂರು ಕಥೆಗಳಿಗನುಗುಣವಾಗಿ ಈ ಋಕ್ಕಿನ ಪೂರ್ವಾರ್ಧದ ಪದಗಳನ್ನು ಮೂರು ವಿಧವಾಗಿ ವಿಂಗಡಿಸಿದ್ದಾರೆ. **ಪರಾವೃಜಂ— ಅವಯವೈಃ ಪರಾವರ್ಜಿತಂ। ಮೃತಂ ಛಿನ್ನಜಂಘಂ ವಾ ಸಂತಂ ಘೋರಸ್ಯ ಜ್ಯೇಷ್ಠಂ ಪುತ್ರಂ ಅಂಧಂ ಚ ಋಜ್ರಾಶ್ವಂ। ಶ್ರೋಣಂ ಬಧಿರಂ ಚ ನಾರ್ಷದಂ। ಚಕ್ಷಸೇ- ದರ್ಶನಾಯ, ಏತವೇ ಗಮನಾಯ ಚ। ಸಾಕಾಂಕ್ಷತ್ವಾತ್ ಶ್ರವಣಾಯ ಚ ಇತಿ ವಾಕ್ಯಶೇಷಃ ಪೂರ್ವೈಶ್ಚ ಸಹ ಯೋಗ್ಯತಯಾ ಏಷಾಂ ಸಂಬಂಧಃ। ಚಕ್ಷಸೇ ಅಂಧಮೃಜ್ರಾಶ್ವಂ ಏತವೇ ಪರಾವೃಜಂ ಶ್ರವಣಾಯ ನಾರ್ಷದಂ।** ಅಂಧನಾದ ಋಜ್ರಾಶ್ವನನ್ನು ದೃಷ್ಟಿಶಕ್ತಿಯುಳ್ಳವನನ್ನಾಗಿಯೂ, ಕುಂಟನಾದ ಘೋರಪುತ್ರನನ್ನು ನಡೆಯಲು ಸಮರ್ಥನಾಗುವಂತೆಯೂ, ಕಿವುಡನಾದ ನಾರ್ಷದನನ್ನು ಕಿವಿಕೇಳುವ ಯೋಗ್ಯತೆಯುಳ್ಳವನನ್ನಾಗಿಯೂ ಮಾಡಿದರೆಂದರ್ಥ.

**ಯಾಭಿರ್ವರ್ತಿಕಾಂ ಗ್ರಸಿತಾಮಮುಂಚತಂ**— ತೋಳನಿಂದ ಹಿಡಿಯಲ್ಪಟ್ಟ ವರ್ತಿಕೆಯೆಂಬ ಪಕ್ಷಿಯನ್ನು ತೋಳನ ಬಾಯಿಯಿಂದ ಬಿಡಿಸಿದರು ಎಂಬ ಇನ್ನೊಂದು ಕಥೆಯನ್ನು ಸೂಚಿಸಿದೆ. ಇದನ್ನು ವಿವರಿಸುತ್ತಾ ಸ್ಕಂದಸ್ವಾಮಿಗಳು **ಅತ್ರಾಪೀತಿಹಾಸಮಾಚಕ್ಷತೇ। ವರ್ತಿಕಾನಾಮ ಚಟಕಜಾತಿಃ ಶೀಘ್ರಗತಿಃ ಶ್ರಮವರ್ಜಿತಾ ಚ। ಚವದ್ಯ ಇತ್ಯೇವ ಯಾ ಲೋಕೇ ಪ್ರಸಿದ್ಧಾ। ಅಸ್ಯಾ ಗಚ್ಛಂತ್ಯಾಃ ಸಮುದ್ರಮಧ್ಯೇಽಪಿ ಶಬ್ದಃ ಶ್ರೂಯತೇ ಇತಿ ನಾವಿಕಾ ಆಚಕ್ಷತೇ। ತಾಂ ಶೀಘ್ರಗತಿತ್ವಾದೃಷಯಃ ಪ್ರೇಷಯಾಮಾಸುಃ। ತಾಂ ಗಚ್ಛಂತೀಂ ವೃಕೀ ಜಗ್ರಾಹ। ಸಾಶ್ವಿನಾವಾಜುಹಾವ। ತಾಮಶ್ವಿನೌ ಮೋಚಯಾಂಚಕ್ರತುರಿತಿ।** ಗುಬ್ಬಚ್ಚಿ ಜಾತಿಗೆ ಸೇರಿದ **ವರ್ತಿಕೆ**ಯೆಂಬ ಪಕ್ಷಿಯು ಅತ್ಯಂತ ವೇಗಗಾಮಿಯಾದುದು ಮತ್ತು ಶ್ರಮರಹಿತವಾದ ಸಂಚಾರವುಳ್ಳದ್ದು. ಅದು ಸಮುದ್ರಮಧ್ಯದಲ್ಲಿ ಹಾರುತ್ತಿರುವಾಗಲೂ ಅದರ ಶಬ್ದವು ಕೇಳಿಸುತ್ತದೆಯೆಂದು ನಾವಿಕರು ಹೇಳುವರು. ಅದು ಅಷ್ಟು ಶೀಘ್ರಗಾಮಿಯಾದುದರಿಂದ ಋಷಿಗಳು ಅದನ್ನು ಒಂದುಸಲ ಕಾರ್ಯಾರ್ಥವಾಗಿ ಕಳುಹಿದರು. ದಾರಿಯಲ್ಲಿ ಹೋಗುತ್ತಿರುವಾಗ ಅದನ್ನು ಒಂದು ಹೆಣ್ಣುತೋಳವು ಹಿಡಿದುಕೊಂಡಿತು. ಆಗ ಅದು ಅಶ್ವಿನೀ ದೇವತೆಗಳನ್ನು ಸಹಾಯಕ್ಕೆ ಕರೆದಾಗ ಅವರು ಬಂದು ಅದನ್ನು ತೋಳನ ಬಾಯಿಯಿಂದ ಬಿಡಿಸಿದರು. ಇದೇ ಕಥೆಯನ್ನು,

**ಅಜೋಹವೀದಶ್ವಿನಾ ವರ್ತಿಕಾ ವಾಮಾಸ್ನೋ ಯತ್ಸೀಮಮುಂಚತಂ ವೃಕಸ್ಯ।**
(ಋ. ಸಂ. ೧-೧೧೬-೧೪)

**ಅಮುಂಚತಂ ವರ್ತಿಕಾಮಂಹಸೋ ನಿಃಪ್ರತಿ ಜಂಘಾಂ ವಿಶ್ಪಲಾಯಾ ಅಧತ್ತಂ।**
(ಋ. ಸಂ. ೧-೧೧೮-೮)

**ವೃಕಸ್ಯ ಚಿದ್ವರ್ತಿಕಾಮಂತರಾಸ್ಯಾದ್ಯುವಂ ಶಚೀಭಿರ್ಗ್ರಸಿತಾಮಮುಂಚತಂ।**
(ಋ. ಸಂ. ೧೦-೩೯-೧೩)

ಎಂಬ ಋಕ್ಕುಗಳಲ್ಲೂ ಸಹ ಸೂಚಿಸಿದೆ.

### ವ್ಯಾಕರಣಪ್ರಕ್ರಿಯಾ

**ವೃಷಣಾ**—ವೃಷ ಸೇಚನೇ. ಧಾತು. **ಕನಿನ್ಯುವೃಷಿ**—(ಉ. ಸೂ. ೧-೧೫೪) ಎಂಬುದರಿಂದ ಕನಿನ್ ಪ್ರತ್ಯಯ. ಸಂಬೋಧನಪ್ರಥಮಾ ದ್ವಿವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಪರಾವೃಜಮ್**—ವೃಜೀ ವರ್ಜನೇ. ಧಾತು. ಪರಾವೃಣಕ್ತಿ ತಪಸಾ ಪಾಪಂ ವಿನಾಶಯತೀತಿ ಪರಾವೃಕ್. (ತಪಸ್ಸಿನಿಂದ ಪಾಪವನ್ನು ನಾಶಮಾಡುವುದು) **ಕ್ವಿಪ್ ಚ**—(ಪಾ. ಸೂ. ೩-೨-೭೬) ಎಂಬುದರಿಂದ ಇದಕ್ಕೆ ಕ್ವಿಪ್ ಪ್ರತ್ಯಯ. ಕ್ವಿಪಿನಲ್ಲಿ ಸರ್ವಲೋಪ. **ಗತಿಕಾರಕೋಪಪದಾತ್ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

**ಚಕ್ಷಸೇ**—ಚಕ್ಷಿಙ್ ವ್ಯಕ್ತಾಯಾಂ ವಾಚಿ. ಧಾತು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಪ್ರಕಾಶನಾರ್ಥದಲ್ಲಿ ಪ್ರಯುಕ್ತವಾಗಿದೆ. ಔಣಾದಿಕ ಅಸುನ್ ಪ್ರತ್ಯಯ. ಚಕ್ಷಸ್ ಶಬ್ದವಾಗುತ್ತದೆ. ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತವಾಗುತ್ತದೆ. ಚತುರ್ಥೀಏಕವಚನಾಂತರೂಪ.

**ಏತವೇ**—ಇಣ್ ಗತೌ ಧಾತು. ತುಮರ್ಥ ತೋರುವಾಗ ಇದಕ್ಕೆ **ತುಮರ್ಥೇ ಸೇಸೇನಸೇ**—(ಪಾ. ಸೂ. ೩-೪-೯) ಎಂಬುದರಿಂದ ತವೇನ್ ಪ್ರತ್ಯಯ. ಪ್ರತ್ಯಯ ನಿಮಿತ್ತವಾಗಿ ಧಾತುವಿಗೆ ಗುಣ. ತವೇನ್ ನಿತ್ತಾದುದರಿಂದ ಪೂರ್ವೋಕ್ತ ಸೂತ್ರದಿಂದ ಆದ್ಯುದಾತ್ತಸ್ವರ ಬರುತ್ತದೆ. **ಕೃನ್ಮೇಜಂತಃ**—ಎಂಬುದರಿಂದ ಏಜಂತವಾದುದರಿಂದ ಅವ್ಯಯ ಸಂಜ್ಞಾ ಬರುತ್ತದೆ.

**ಕೃಥಃ**—ಡುಕೃಞ್ ಕರಣೇ. ಧಾತು. ಲಟ್ ಮಧ್ಯಮಪುರುಷ ದ್ವಿವಚನದಲ್ಲಿ ಥಸ್ ಪ್ರತ್ಯಯ. **ಬಹುಲಂ ಛಂದಸಿ**—ಎಂಬುದರಿಂದ ವಿಕರಣಕ್ಕೆ (ಉ) ಲುಕ್ ಪ್ರತ್ಯಯಕ್ಕೆ **ಸಾರ್ವಧಾತುಕಮಪಿತ್**—ಸೂತ್ರದಿಂದ ಙಿದ್ವದ್ಭಾವವಿರುವುದರಿಂದ ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ ಬರುವುದಿಲ್ಲ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಮುಂಚತಮ್**—ಮುಚ್ಲೃ ಮೋಕ್ಷಣೇ ಧಾತು ತುದಾದಿ. ಲಙ್ ಮಧ್ಯಮಪುರುಷ ದ್ವಿವಚನದಲ್ಲಿ **ತಸ್ಥಸ್ಥ**—(ಪಾ. ಸೂ. ೩-೪-೧೦೧) ಎಂಬುದರಿಂದ ತಮಾದೇಶ. **ತುದಾದಿಭ್ಯಃ ಶಃ**—(ಪಾ. ಸೂ. ೩-೧-೭೭) ಎಂಬುದರಿಂದ ಶವಿಕರಣ. **ಶೇಮುಚಾದೀನಾಮ್**—(ಪಾ. ಸೂ. ೭-೧-೫೯) ಸೂತ್ರದಿಂದ ಧಾತುವಿಗೆ ನುಮಾಗಮ. ಅದಕ್ಕೆ ಅನುಸ್ವಾರ ಪರಸವರ್ಣ. ಅಂಗಕ್ಕೆ ಅಡಾಗಮ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ. ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಗ್ರಸಿತಾಮ್**—ಗ್ರಸು ಅದನೇ. ಧಾತು. ಕ್ತಪ್ರತ್ಯಯ. ಇಡಾಗಮ. ಸ್ತ್ರೀತ್ವದಲ್ಲಿ ಟಾಪ್.



ಸಂಹಿತಾಪಾಠಃ

ಯಾಭಿಃ ಸಿಂಧುಂ ಮಧುಮಂತಮಸಶ್ಚತಂ ವಸಿಷ್ಠಂ ಯಾಭಿರಜ-
ರಾವಜಿನ್ವತಂ ।
ಯಾಭಿಃ ಕುತ್ಸಂ ಶ್ರುತರ್ಯಂ ನರ್ಯಮಾವತಂ ತಾಭಿರೂ ಷು
ಊತಿರಶ್ವಿಭಿನಾ ಗತಂ ॥ ೯ ॥

। ಪದಪಾಠಃ ।

ಯಾಭಿಃ । ಸಿಂಧುಂ । ಮಧುಽಮಂತಂ । ಅಸಶ್ಚತಂ । ವಸಿಷ್ಠಂ । ಯಾಭಿಃ ।
ಅಜರೌ । ಅಜಿನ್ವತಂ ।
ಯಾಭಿ । ಕುತ್ಸಂ । ಶ್ರುತರ್ಯಂ । ನರ್ಯಂ । ಆವತಂ । ತಾಭಿಃ । ಊಂ ಇತಿ ।
ಸು । ಊತಿಽಭಿಃ । ಅಶ್ವಿನಾ । ಆ । ಗತಂ ॥ ೯ ॥

ಸಾಯಣಭಾಷ್ಯಂ

ಹೇ ಅಶ್ವಿನೌ ಸಿಂಧುಂ ಸ್ಯಂದನಶೀಲಾಂ ನದೀಂ ಮಧುಮಂತಂ ಮಧುಸದೃಶೇನೋದಕೇನ ಪೂರ್ಣಾಂ ಯಾಭಿರೂತಿಭಿರಸಶ್ಚತಂ ಅಗಮಯತಂ । ಪ್ರಾವಾಹಯತಮಿತ್ಯರ್ಥಃ । ಹೇ ಅಜರೌ ಜರಾರಹಿತಾವಶ್ವಿನೌ ವಸಿಷ್ಠಮೃಷಿಂ ಯಾಭಿರೂತಿಭಿರಜಿನ್ವತಂ । ಅಪ್ರೀಣಯತಂ । ಯಾಭಿಶ್ಚ ಕುತ್ಸಾದೀಂ-ಸ್ತ್ರೀನೃಷೀನಾವತಂ । ಅರಕ್ಷತಂ । ತಾಭಿಃ ಸರ್ವಾಭಿರೂತಿಭಿರಸ್ಮಾನಪಿ ಸುಷ್ಠ್ವಾಗಚ್ಛತಂ ॥ ಮಧುಮಂತಂ । ಮಧುಶಬ್ದಾದ್ಭೂಮ್ನಿ ಮತುಪ್ । ಲಿಂಗವ್ಯತ್ಯಯಃ । ಅಸಶ್ಚತಂ । ಸಶ್ಚತಿರ್ಗತಿಕರ್ಮಾ । ಅಸ್ಮಾದಂತ-ರ್ಭಾವಿತ ಣ್ಯರ್ಥಾಲ್ಲುಙ್ ॥

ಪ್ರತಿಪದಾರ್ಥ

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಮಧುಮಂತಂ—ಮಧುವಿಗೆ ಸಮಾನವಾಗಿ ಮಾಧುರ್ಯವುಳ್ಳ ಉದಕದಿಂದ ಪೂರ್ಣವಾದ । ಸಿಂಧುಂ—ನದಿಯನ್ನು । ಯಾಭಿಃ—ಯಾವ ರಕ್ಷಣೆಗಳಿಂದ । ಅಸಶ್ಚತಂ—ಪ್ರವಹಿಸುವಂತೆ ಮಾಡಿದಿರೋ । ಅಜರೌ—ಜರಾರಹಿತರಾದ ಎಲೈ ಅಶ್ವಿನಿಗಳೇ ।। ವಸಿಷ್ಠಂ—ವಸಿಷ್ಠನೆಂಬ ಋಷಿಯನ್ನು ।

**ಯಾಭಿಃ**—ಯಾವ ರಕ್ಷಣೆಗಳಿಂದ । **ಅಜಿನ್ವತಂ**—ಸಂತೃಪ್ತಿಗೊಳಿಸಿದಿರೋ (ಮತ್ತು) । **ಯಾಭಿಃ**—ಯಾವ ರಕ್ಷಣೆಗಳಿಂದ । **ಕುತ್ಸಂ**—ಕುತ್ಸನನ್ನೂ । **ಶ್ರುತರ್ಯಂ**—ಶ್ರುತರ್ಯನನ್ನೂ । **ನರ್ಯಂ**—ನರ್ಯನನ್ನೂ ; **ಆವತಂ**—ರಕ್ಷಿಸಿದಿರೋ । **ತಾಭಿಃ ಊತಿಭಿಃ ಉ**—ಆ ಎಲ್ಲಾ ರಕ್ಷಣೆಗಳೊಂದಿಗೆ ಕೂಡಿಕೊಂಡು ನಮ್ಮಲ್ಲಿಗೂ । **ಸು ಆ ಗತಂ**—ಅಭಿಮಾನದಿಂದ ಬನ್ನಿರಿ.

ಭಾವಾರ್ಥ

ಜರಾರಹಿತರಾದ ಎಲೈ ಅಶ್ವಿನೀ ದೇವತೆಗಳೇ, ಮಧುವಿನಂತೆ ಮಾಧುರ್ಯವುಳ್ಳ ಉದಕದಿಂದ ಪೂರ್ಣವಾದ ನದಿಯನ್ನು ಯಾವ ನಿಮ್ಮ ಸಹಾಯಗಳಿಂದ ಪ್ರವಹಿಸುವಂತೆ ಮಾಡಿದಿರೋ, ಯಾವ ರಕ್ಷಣೆಗಳಿಂದ ವಸಿಷ್ಠನನ್ನು ತೃಪ್ತಿಗೊಳಿಸಿದಿರೋ ಮತ್ತು ಯಾವ ರಕ್ಷಣೆಗಳಿಂದ ಕುತ್ಸನನ್ನೂ ಶ್ರುತರ್ಯನನ್ನೂ ನರ್ಯನನ್ನೂ ರಕ್ಷಿಸಿದಿರೋ, ಆ ಎಲ್ಲಾ ರಕ್ಷಣೆಗಳೊಂದಿಗೂ ಕೂಡಿಕೊಂಡು ನಮ್ಮಲ್ಲಿಗೂ ಅಭಿಮಾನದಿಂದ ಬನ್ನಿರಿ.

## English Translation

With those aids by which you caused the sweet stream to flow, by which you, who are exempt from decay, gratified Vasishtha, and by which you protected Kusta, Srutarya, and Naraya; with them, Aswins, come willngly hither.

॥ ವಿಶೇಷವಿಷಯಗಳು ॥

**ಮಧುಮಂತಂ ಸಿಂಧುಂ ಯಾಭಿಃ ಅಸಶ್ಚತಂ**—ನದಿಯನ್ನು ಮಧುವಿಗೆ ಸಮಾನವಾದ ಮಾಧುರ್ಯವುಳ್ಳ ಉದಕದಿಂದ ಪೂರ್ಣವಾಗಿ ಹರಿಯುವಂತೆ ಮಾಡಿದಿರಿ ಎಂಬ ಸಂದರ್ಭವನ್ನು ವಿವರಿಸುತ್ತಾ ಸ್ಕಂದಸ್ವಾಮಿಗಳು ಹಿಂದಿನ ಕಥೆಯನ್ನು ಹೇಳಿದ್ದಾರೆ. **ಅತ್ರೇತಿಹಾಸಮಾಚಕ್ಷತೇ । ವಿಶ್ವಾಮಿತ್ರೋ ವಸಿಷ್ಠಂ ಜಿಘಾಂಸುಃ ಸರಸ್ವತೀಮಾಹೂಯೋವಾಚ। ಮತ್ಸಮೀಪಂ ವಸಿಷ್ಠಂ ಶೀಘ್ರಮಾನಯ ಇತಿ । ಸಾ ತಚ್ಛ್ರುತ್ವಾ ವಿಶ್ವಾಮಿತ್ರಾದಪಿ ವಸಿಷ್ಠಾದಪಿ ಶಾಪಾತ್ ಬಿಭ್ಯತೀ ಕಿಂಚಿದಪ್ಯಪ್ರತಿಪದ್ಯಮಾನಾ ಚಿಂತಾಕೃಶಾ ವಿವರ್ಣಾ ಬಭೂವ । ಅಥೈನಾಮೇವಂರೂಪಾಂ ಜ್ಞಾತ್ವಾ ಕೃಪಾಶೀಲತಯಾ ವಸಿಷ್ಠ ಉವಾಚ ।**

**ರಕ್ಷಾತ್ಮಾನಂ ಸರಿಚ್ಛ್ರೇಷ್ಠೇ ವಹ ಮಾಂ ಶೀಘ್ರಗಾಮಿನಿ ।**
**ವಿಶ್ವಾಮಿತ್ರಃ ಶಪೇದ್ಧಿ ತ್ವಾ ಮಾಕೃಥಾಸ್ತ್ವಂ ವಿಚಾರಣಾಂ ॥**

**ಇತಿ ।**

ಒಂದು ಸಲ ವಿಶ್ವಾಮಿತ್ರನು ವಸಿಷ್ಠನನ್ನು ಕೊಲ್ಲಬೇಕೆಂದಿಚ್ಛಿಸಿ **ಸರಸ್ವತೀನದಿಯನ್ನು**ದ್ದೇಶಿಸಿ ಅವನನ್ನು ಶೀಘ್ರವಾಗಿ ತನ್ನಲ್ಲಿಗೆ ಕರೆದುಕೊಂಡು ಬರಬೇಕೆಂದು ಆಜ್ಞೆಮಾಡಿದನು. ಆಗ **ಸರಸ್ವತಿಯು** ಆಜ್ಞೋಲ್ಲಂಘನೆ ಮಾಡುವುದರಿಂದ ವಿಶ್ವಾಮಿತ್ರನು ಶಾಪಕೊಡುವನೆಂದೂ, ತನ್ನ ಹಿಂಸೆಗೆ ಕಾರಣವಾಗುವುದರಿಂದ ವಸಿಷ್ಠನು ಶಾಪ ಕೊಡುವನೆಂದೂ ಇಬ್ಬರ ಶಾಪಕ್ಕೂ ಹೆದರಿ ಏನೂ ತಿಳಿಯದೆ ಯೋಚನೆಯಿಂದ ವಿವರ್ಣಳಾದಳು. ಆಗ ಅವಳ ಅಭಿಪ್ರಾಯವನ್ನರಿತು ದಯಾಶಾಲಿಯಾದ ವಸಿಷ್ಠನು ಅವಳನ್ನು ಕುರಿತು ಎಲೈ ನದಿಗಳಲ್ಲಿ ಉತ್ತಮಳಾದ ಸರಸ್ವತಿಯೇ, ನನ್ನನ್ನು ಶೀಘ್ರವಾಗಿ ವಿಶ್ವಾಮಿತ್ರನಲ್ಲಿಗೆ ಕರೆದುಕೊಂಡು ಹೋಗು ಇಲ್ಲದಿದ್ದರೆ ಅವನು ಶಪಿಸಿಯಾನು ಎಂದು. ಆಗ–

ಅಥ ತಂ ಸ್ವಕೂಲೇ ಜಪಂತಂ ಸರಸ್ವತೀ ಮಹತಾ ಜಲೌಘೇನ ವಿಶ್ವಾಮಿತ್ರಾಶ್ರಮಂ ಪ್ರತ್ಯು-
ವಾಹ। ಊಢ್ವಾ ಚ ವಿಶ್ವಾಮಿತ್ರಾಯ ನಿವೇದಯಾಮಾಸ। ನಿವೇದ್ಯ ಚ ಪ್ರಹರಣಾ-
ನ್ವೇಷಣವ್ಯಾಕುಲೇ ವಿಶ್ವಾಮಿತ್ರೇ ಕೃತಂ ಮಯಾ ಸ್ವಕಾರ್ಯಮಿತಿ ಮನ್ಯಮಾನಾ ಬ್ರಹ್ಮ-
ಹತ್ಯಾಭಯಾತ್ ಸರಸ್ವತೀ ವಸಿಷ್ಠಂ ತತೋ ದೂರಮಪೋವಾಹ। ಅಥ ತತ್ ಜ್ಞಾತ್ವಾ
ವಿಶ್ವಾಮಿತ್ರಃ ಕ್ರುದ್ಧಃ ಸರಸ್ವತೀಂ ಶಶಾಪ ಶೋಣಿತಂ ವಹೇತಿ। ಸಾ ಶೋಣಿತಮುವಾಹ।

ಆಗ ಸರಸ್ವತಿಯು ತನ್ನ ದಡದಲ್ಲಿ ಜಪವನ್ನು ಮಾಡುತ್ತಿದ್ದ ವಸಿಷ್ಠನನ್ನು ವಿಶ್ವಾಮಿತ್ರನಲ್ಲಿಗೆ ಕರೆದುಕೊಂಡು ಹೋಗಿ ಆ ವಿಷಯವನ್ನು ವಿಶ್ವಾಮಿತ್ರನಿಗೆ ತಿಳಿಸಿದಳು. ಆಗ ಅವನು ವಸಿಷ್ಠನನ್ನು ಹೊಡೆಯುವ ಪ್ರಯತ್ನ ಮಾಡುತ್ತಿರುವಾಗಲೇ ಸರಸ್ವತಿಯು ತಾನು ಬ್ರಹ್ಮಹತ್ಯೆಗೆ ಕಾರಣಳಾಗುವಳೆಂದು ಬೆದರಿ ವಸಿಷ್ಠನನ್ನು ಅಲ್ಲಿಂದ ಬಹುದೂರಕ್ಕೆ ಎತ್ತಿಕೊಂಡು ಹೊರಟುಹೋದಳು. ಆಗ ಕ್ರುದ್ಧನಾದ ವಿಶ್ವಾಮಿತ್ರನು ಸರಸ್ವತಿಯ ಪ್ರವಾಹವೆಲ್ಲವೂ ರಕ್ತಮಯವಾಗಲಿ ಎಂದು ಶಾಪಕೊಟ್ಟನು. ಆಗ ರಕ್ತದ ಪ್ರವಾಹವು ಹರಿಯಲು ಆರಂಭವಾಯಿತು.

ಅಥರ್ಷಯಶ್ಚ ದೇವಾಶ್ಚ ಗಂಧರ್ವಾಪ್ಸರಸಸ್ತಥಾ।
ಸರಸ್ವತೀಂ ತದಾ ದೃಷ್ಟ್ವಾ ಬಭೂವುರ್ದುಃಖಿತಾ ಭೃಶಂ॥
ಜ್ಞಾತ್ವಾ ತದಶ್ವಿನೌ ತಸ್ಯಾಸ್ತಂ ಶಾಪಮಪನಿನ್ಯತುಃ।

ತತಃ ಸರಸ್ವತೀ ಜಾತಾ ಪ್ರಸನ್ನಸಲಿಲಾ ಶಿವಾ॥

ಭಾರತೇ ತು ಋಷಯಃ ಶಾಪಾತ್ಸರಸ್ವತೀಂ ಮೋಚಯಾಮಾಸು ರಿತ್ಯಾಖ್ಯಾನಂ। ತದಶ್ವಿನೋಃ
ಪ್ರಸಾದೇನೇತೀ ವರ್ಣಯಿತವ್ಯಂ।

ಆಗ ಋಷಿಗಳೂ ದೇವತೆಗಳೂ ಗಂಧರ್ವರೂ ಅಪ್ಸರಸ್ಸುಗಳೂ ಅಂತಹ ರಕ್ತದ ಹೊಳೆಯುಳ್ಳ ಸರಸ್ವತಿಯನ್ನು ನೋಡಿ ದುಃಖಿತರಾದರು. ಅದನ್ನು ಅಶ್ವಿನೀದೇವತೆಗಳು ನೋಡಿ ಅವಳ ಶಾಪವಿಮೋಚನೆಯನ್ನು ಮಾಡಿದರು. ಆಗ ಸರಸ್ವತಿಯ ಪ್ರವಾಹವು ಶುದ್ಧವಾದುದೂ ಪವಿತ್ರವಾದುದೂ ಆದ ನೀರಿನಿಂದ ತುಂಬಿದುದಾಯಿತು ಈ ಸಂದರ್ಭವನ್ನು ಇಲ್ಲಿ ನಿರ್ದೇಶಿಸಿದೆ. (ಭಾರತದಲ್ಲಿ ಋಷಿಗಳು ಸರಸ್ವತಿಯನ್ನು ಶಾಪಮುಕ್ತಳನ್ನಾಗಿ ಮಾಡಿದರೆಂದು ಹೇಳಿರುವ ಅಂಶವನ್ನು ಇಲ್ಲಿ ಅಶ್ವಿನೀದೇವತೆಗಳು ಅನುಗ್ರಹಿಸಿ ಮಾಡಿದರು ಎಂದು ತಿಳಿಯಬೇಕೆಂದು ಸ್ಕಂದಸ್ವಾಮಿಗಳು ಸೂಚಿಸಿದ್ದಾರೆ).

ವಸಿಷ್ಠಂ ಯಾಭಿಃ ಅಜಿನ್ವತಂ—ಅಶ್ವಿನೀದೇವತೆಗಳು ವಸಿಷ್ಠನನ್ನು ತಮ್ಮ ಸಹಾಯಗಳಿಂದ ತೃಪ್ತಿಗೊಳಿಸಿದ ವಿಷಯ-ಅಥಾಪರಮಿತಿಹಾಸಮಾಚಕ್ಷತೇ। ವಸಿಷ್ಠೋ ಹತಪುತ್ರಃ ಪುತ್ರಾರ್ಥೀ ಅಶ್ವಿನಾವಿಯಾಜ। ತಸ್ಮೈ ಅಶ್ವಿನೌ ಪುತ್ರಂ ದದತುರಿತಿ। ಹತಪುತ್ರನಾದ ವಸಿಷ್ಠನು ಪುತ್ರೇಷ್ಟಿಯಿಂದ ಅಶ್ವಿನೀದೇವತೆಗಳನ್ನು ಪ್ರೀತಿಸಿ ಯಾಗಮಾಡಿದಾಗ ಅವರು ತುಷ್ಟರಾಗಿ ಅವನಿಗೆ ಪುತ್ರನನ್ನು ಕೊಟ್ಟರು ಎಂಬ ವಿಷಯವನ್ನು ವಸಿಷ್ಠಸೂಕ್ತದಲ್ಲಿಯೇ

ಅವಿಷ್ಟಂ ಧೀಷ್ವಶ್ವಿನಾ ನ ಆಸು ಪ್ರಜಾವದ್ರೇತೋ ಅಹ್ರಯಂ ನೋ ಅಸ್ತು।
(ಋ. ಸಂ. ೭-೬೭.೬)

ಎಂಬ ಋಕ್ಕಿನಲ್ಲಿ ಹೇಳಿದೆಯೆಂದು ಅದನ್ನು ಉದಹರಿಸಿದೆ

ವ್ಯಾಕರಣಪ್ರಕ್ರಿಯಾ

**ಸಿಂಧುಮ್**—ಸ್ಯಂದೂ ಪ್ರಸ್ರವಣೇ. ಧಾತು. **ಸ್ಯಂದೇಃ ಸಂಪ್ರಸಾರಣಂ ಧಶ್ಚ**—(ಉ. ಸೂ. ೧-೧೧) ಎಂಬುದರಿಂದ ಧಾತುವಿಗೆ ಸಂಪ್ರಸಾರಣ, ದಕಾರಕ್ಕೆ ಧಕಾರಪೂರ್ವಕವಾಗಿ ಉಪ್ರತ್ಯಯ.

**ಮಧುಮಂತಮ್**— ಭೂಮನಿಂದಾ ಪ್ರಶಂಸಾಸು ನಿತ್ಯಯೋಗೇತಿಶಾಯನೇ । ಸಂಸರ್ಗೇಽಸ್ತಿ ವಿವಕ್ಷಾಯಾಂ ಭವಂತಿ ಮತುಪಾದಯಃ ॥ ಎಂದು **ತದಸ್ಯಾಸ್ತ್ಯ**—(ಪಾ. ಸೂ. ೫-೨-೯೪) ಎಂಬ ಸೂತ್ರದಲ್ಲಿ ಹೇಳಿರುವುದರಿಂದ ಇಲ್ಲಿ ಮಧು ಶಬ್ದದ ಮೇಲೆ ಭೂಮಾರ್ಥದಲ್ಲಿ (ಬಹುತ್ವದಲ್ಲಿ) ಬರುತ್ತದೆ. ಮತುಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಅಸಶ್ಚತಮ್**— ಸಶ್ಚ ಧಾತುವು ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಇಲ್ಲಿ ಪ್ರೇರಣಾತೋರುವುದರಿಂದ ಅಂತರ್ಭಾವಿತಣ್ಯರ್ಥಕವೆಂದು ಸ್ವೀಕರಿಸಬೇಕು. ಲುಙ್ ಮಧ್ಯಮಪುರುಷ ದ್ವಿವಚನಾಂತರೂಪ. **ಯದ್ವೃತ್ತಾನ್ನಿತ್ಯಮ್**—(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಅಜರೌ**—ನ ವಿದ್ಯತೇ ಜರಾ ಯಯೋಽಸ್ತೌ ಅಜರೌ. **ಆಮಂತ್ರಿತಸ್ಯ ಚ**—(ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅಜಿನ್ವತಮ್**—ಜಿವಿ ಪ್ರೀಣನೇ ಧಾತು. ಇದಿತ್ತಾದುದರಿಂದ ನುಮಾಗಮ. ಲಙ್‌ಮಧ್ಯಮಪುರುಷ ದ್ವಿವಚನರೂಪ. ಯಾಭಿಃ ಎಂದು ಹಿಂದೆ ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆದುದಾತ್ತಸ್ವರ ಬರುತ್ತದೆ.

**ಆವತಮ್**—ಅವ ರಕ್ಷಣೇ. ಧಾತು. ಲಙ್ ಮಧ್ಯಮಪುರುಷದ್ವಿವಚನರೂಪ. ಹಿಂದಿನಂತೆ ಅಡಾಗಮದ ಉದಾತ್ತಸ್ವರದಿಂದ ಆದ್ಯುದಾತ್ತವಾಗುತ್ತದೆ. ॥ ೯ ॥

———:o:———

ಸಂಹಿತಾಪಾಠಃ

ಯಾಭಿರ್ವಿಶ್ಪಲಾಂ ಧನಸಾಮಥರ್ವ್ಯಂ ಸಹಸ್ರಮೀಳ್ಹ ಆಜಾವಜಿನ್ವತಂ ।

ಯಾಭಿರ್ವಶಮಶ್ವ್ಯಂ ಪ್ರೇಣಿಮಾವತಂ ತಾಭಿರೂ ಷು ಊತಿ-
ಭಿರಶ್ವಿನಾ ಗತಂ ॥ ೧೦ ॥

ಪದಪಾಠಃ

ಯಾಭಿಃ । ವಿಶ್ಪಲಾಂ । ಧನಽಸಾಂ । ಅಥರ್ವ್ಯಂ । ಸಹಸ್ರಽಮೀಳ್ಹೇ । ಆಜೌ ।
ಅಜಿನ್ವತಂ ।
ಯಾಭಿಃ । ವಶಂ । ಅಶ್ವ್ಯಂ । ಪ್ರೇಣಿಂ । ಆವತಂ । ತಾಭಿಃ । ಊಂ ಇತಿ । ಸು ।
ಊತಿಽಭಿಃ । ಅಶ್ವಿನಾ । ಆ । ಗತಂ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಧನಸಾಂ ಧನಂ ಸಂಭಜಮಾನಾಮಥರ್ವ್ಯಮಗಚ್ಛಂತೀಂ ಭಿನ್ನಜಂಘಾತ್ವೇನ ಗಂತುಮಸಮರ್ಥಾಂ । ಥರ್ವತಿರ್ಗತಿಕರ್ಮಾ । ವಿಶ್ಪಲಾಮೇತತ್ಸಂಜ್ಞಾಮಗಸ್ತ್ಯಪುರೋಹಿತಸ್ಯ ಖೇಲಸ್ಯ ಸಂಬಂಧಿನೀಂ । ಸಹಸ್ರಮೀಳ್ಹೇ । ಮೀಳ್ಹಮಿತಿ ಧನನಾಮ । ಬಹುಧನೋಪೇತ ಆಜೌ ಸಂಗ್ರಾಮೇ ಯಾಭಿರೂತಿಭಿರಜಿನ್ವತಂ । ಗಂತುಂ ಸಮರ್ಥಾಮಕುರುತಂ । ಏತಚ್ಚ ಚರಿತ್ರಂ ಹಿ ವೇರಿವಾಚ್ಛೇದಿ ಪರ್ಣಂ । ಋ. ೧-೧೧೬-೧೫ । ಇತ್ಯತ್ರ ವಿಸ್ಪಷ್ಟಯಿಷ್ಯತೇ । ಯಾಭಿಶ್ಚಾಶ್ವ್ಯಮಶ್ವಾಖ್ಯಸ್ಯ ಪುತ್ರಂ ಪ್ರೇಣಿಂ ಸ್ತುತೇಃ ಪ್ರೇರಯಿತಾರಂ ವಶಮೇತತ್ಸಂಜ್ಞಮೃಷಿಮಾವತಂ । ಅರಕ್ಷತಂ । ತಾಭಿಃ ಸರ್ವಾಭಿರೂತಿಭಿಃ ಸಹಾಸ್ಮಾನಸ್ಯಾಗಚ್ಛತಂ ॥ ಪ್ರೇಣಿಂ । ಪ್ರೇಣೃ ಗತಿಪ್ರೇರಣಶ್ಲೇಷಣೇಷು । ಔಣಾದಿಕ ಇಪ್ರತ್ಯಯಃ ।

ಪ್ರತಿಪದಾರ್ಥ

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಧನಸಾಂ—ಧನಾರ್ಥಿನಿಯೂ । ಅಥರ್ವ್ಯಂ—(ಅವಳ) ಕಾಲು ಮುರಿದಿರುವುದರಿಂದ ನಡೆಯಲಸಮರ್ಥಳೂ ಆದ । ವಿಶ್ಪಲಾಂ— (ಖೇಲನ ಪತ್ನಿಯಾದ) ವಿಶ್ಪಲೆಯನ್ನು । ಸಹಸ್ರಮೀಳ್ಹೇ— ಪ್ರಭೂತವಾದ ಧನದಿಂದ ತುಂಬಿದ । ಆಜೌ— ಯುದ್ಧದಲ್ಲಿ । ಯಾಭಿಃ— ಯಾವ ರಕ್ಷಣೆಗಳಿಂದ । ಅಜಿನ್ವತಂ—ನಡೆಯಲು ಸಮರ್ಥಳಾಗುವಂತೆಮಾಡಿದಿರೋ (ಮತ್ತು) । ಯಾಭಿಃ—ಯಾವ ನಿಮ್ಮ ಸಹಾಯಗಳಿಂದ । ಅಶ್ವ್ಯಂ— ಅಶ್ವನ ಪುತ್ರನೂ । ಪ್ರೇಣಿಂ— ಕೀರ್ತನಕಾರನೂ ಆದ । ವಶಂ— ವಶನೆಂಬ ಋಷಿಯನ್ನು । ಆವತಂ—ರಕ್ಷಿಸಿದಿರೋ । ತಾಭಿಃ ಊತಿಭಿಃ ಉ— ಆ ಎಲ್ಲಾ ರಕ್ಷಣೆಗಳೊಡನೆಯೂ (ನಮ್ಮಲ್ಲಿಗೂ) । ಸು ಆ ಗತಂ—ಅಭಿಮಾನದಿಂದ ಬನ್ನಿರಿ ॥

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಧನಾರ್ಥಿನಿಯೂ ಆದರೆ ಕಾಲುಮುರಿದಿರುವುದರಿಂದ ನಡೆಯಲಸಮರ್ಥಳೂ ಆದ ಖೇಲನಪತ್ನಿಯಾದ ವಿಶ್ಪಲೆಯನ್ನು ಪ್ರಭೂತವಾದ ಧನದಿಂದ ತುಂಬಿದ ಯುದ್ಧದಲ್ಲಿ ಯಾವ ರಕ್ಷಣೆಗಳಿಂದ ನಡೆಯಲು ಸಮರ್ಥಳಾಗುವಂತೆ ಮಾಡಿದಿರೋ, ಮತ್ತು ಯಾವ ನಿಮ್ಮ ಸಹಾಯಗಳಿಂದ ಅಶ್ವನ ಪುತ್ರನೂ, ಕೀರ್ತನಕಾರನೂ ಆದ ವಶನೆಂಬ ಋಷಿಯನ್ನು ರಕ್ಷಿಸಿದಿರೋ ಆ ಎಲ್ಲಾ ರಕ್ಷಣೆಗಳೊಡನೆಯೂ ಸಹ ನಮ್ಮಲ್ಲಿಗೂ ಅಭಿಮಾನದಿಂದ ಬನ್ನಿರಿ

## English Translation

With those aids by which you enabled the opulent Vispala, when she was unable to move, to go to the battle rich in a thousand spoils, and by which you protected the devout Vasa, the son of Aswa ; with them, Aswins, come willingly hither.

॥ ವಿಶೇಷವಿಷಯಗಳು ॥

**ವಿಶ್ಪಲಾಂ ಅಜಿನ್ವತಂ— ಅತ್ರೇತಿಹಾಸಮಾಚಕ್ಷತೇ । ಅಗಸ್ತ್ಯಪುರೋಹಿತಃ ಖೇಲೋ ನಾಮ ರಾಜಾ ಬಭೂವ । ತಸ್ಯ ಸೇನಾಯಾಂ ಯೋಧ್ರೀ ವಿಶ್ಪಲಾ ನಾಮ ಸ್ತ್ರೀ । ತಸ್ಯಾ ಅನ್ನಾರ್ಥಂ ಧನಾರ್ಥಂ ಚ ಯುಧ್ಯಮಾನಾಯಾಃ ಶತ್ರವೋ ಜಂಘಾನ್ ಚಿಚ್ಛಿದುಃ । ತಸ್ಯಾಶ್ಛಿನ್ನಾಂ ಜಂಘಾಂ ಜ್ಞಾತ್ವಾ ಪುರೋಹಿತೋಽಗಸ್ತ್ಯೋಽಶ್ವಿನೌ ತುಷ್ಟಾವ । ತೌ ವಿಶ್ಪಲಾಂ ಪ್ರತಿ ಜಗ್ಮತುಃ । ಆಗತ್ಯ ಚ ಸದ್ಯೋ ಲೋಹಮಯೀಂ ಜಂಘಾಂ ವಿಶ್ಪಲಾಯಾಶ್ಚಕ್ರತುಃ । ತದೇವೇಹಾಪ್ಯುಚ್ಯತೇ ।** ಖೇಳನೆಂಬ ದೊರೆಯ ಸೈನ್ಯದಲ್ಲಿ ವಿಶ್ಪಲೆಯೆಂಬ ಒಬ್ಬ ಸ್ತ್ರೀಯೋಧಿನಿಯಿದ್ದಳು. ಅನ್ನಕ್ಕಾಗಿಯೂ, ಧನಕ್ಕಾಗಿಯೂ ಯುದ್ಧಮಾಡುತ್ತಿದ್ದ ಅವಳ ಮೊಣಕಾಲನ್ನು ಶತ್ರುಗಳ ಮುರಿದರು. ಅದನ್ನು ತಿಳಿದು ರಾಜಪುರೋಹಿತನಾದ ಅಗಸ್ತ್ಯನು ಅಶ್ವಿನೀದೇವತೆಗಳನ್ನು ಸ್ತುತಿಸಿದನು । ಅವರು ಒಡನೆಯೇ ಬಂದು ಉಕ್ಕಿನ ಜಂಘವನ್ನು ಮಾಡಿಕೊಟ್ಟು ವಿಶ್ಪಲೆಯನ್ನು ನಡೆಯುವಂತೆ ಮಾಡಿದರು ಎಂಬುದು ಪೂರ್ವಕಥೆ, ಈ ಕಥೆಯು ಕಕ್ಷೀವತ್ಕೃತವಾದ ಸೂಕ್ತದಲ್ಲಿಯೂ ಹೇಳಲ್ಪಟ್ಟಿದೆ.

**ಚರಿತ್ರಂ ಹಿ ವೇರಿವಾಚ್ಛೇದಿ ಪರ್ಣಮಾಜಾ ಖೇಲಸ್ಯ ಪರಿತಕ್ಮ್ಯಾಯಾಂ ।**
**ಸದ್ಯೋ ಜಂಘಾಮಾಯಸೀಂ ವಿಶ್ಪಲಾಯೈ ಧನೇ ಹಿತೇ ಸರ್ತವೇ ಪ್ರತ್ಯಧತ್ತಂ ।**

(ಋ. ಸಂ. ೧-೧೧೬-೧೫)

ಎಂಬ ಋಕ್ಕಿನಲ್ಲಿಯೂ ಈ ಅಂಶವನ್ನು ಹೇಳಿದೆಯೆಂದು ಇವನ್ನೂ ಸ್ಕಂದಸ್ವಾಮಿಗಳು ಉಪಪರಿಸಿದ್ದಾರೆ.

**ಅಥರ್ವ್ಯಂ— ಥರ್ವತಿರ್ಗತಿಕರ್ಮಾ । ಭಿನ್ನಜಂಘತ್ವಾದ್ಗಂತುಮಸಮರ್ಥಾಂ । ಥರ್ವತಿಯೆಂಬ** ಪದವು ಗತಿಕರ್ಮನಾಮಗಳಲ್ಲಿ ಸೇರಿದೆ. ವಿಶ್ಪಲೆಗೆ ಮೊಳಕಾಲು ಮುರಿದುದರಿಂದ ನಡೆಯಲಾರದವಳಾದವಳು ಎಂದರ್ಥ.

ಸಹಸ್ರಮೀಳ್ಹೇ—ಸಹಸ್ರಮಿತಿ ಬಹುನಾಮ । ಬಹೂನಿ ಧನಾನಿ ನಿಮಿತ್ತಭೂತಾನಿ ಯಸ್ಯ ಸ ಸಹಸ್ರಮೀಳ್ಹಃ ಸಂಗ್ರಾಮಃ । ಪ್ರಭೂತವಾದ ಧನವನ್ನುದ್ದೇಶಿಸಿ ಮಾಡತಕ್ಕದ್ದಾದ್ದರಿಂದ ಸಹಸ್ರಮೀಳ್ಹವೆಂಬ ಪದವು ಸಂಗ್ರಾಮಕ್ಕೆ ವಿಶೇಷಣವಾಗಿದೆ.

ಯಾಭಿರ್ವಶಂ—ಅತ್ರಾಪೀತಿಹಾಸಮಾಚಕ್ಷತೇ । ವಶೋನಾಮ ರಾಜಾ ಅಶ್ವಪ್ರಾಯಬಲಃ । ಸ ಹಸ್ತಿಬಲೈಃ ಶತ್ರುಭಿಃ ಪರಾಜೀಯಮಾನಃ ಸಾಹಾಯ್ಯಂ ಕರ್ತುಮಶ್ವಿನೌ ಸ್ತುತ್ವಾಜುಹಾವ । ತಂ ಪ್ರತಿ ತಸ್ಮಿನ್ನೇವಾಹನಿ ಅಶ್ವಿನಾವಾಜಗ್ಮತುರಿತಿ । ಅಶ್ವಶಕ್ತಿಯುಳ್ಳ ವಶನೆಂಬ ರಾಜನು ಆನೆಯಬಲವುಳ್ಳ ಶತ್ರುಗಳಿಂದ ಪರಾಜಿತನಾದಾಗ ಅಶ್ವಿನೀದೇವತೆಗಳನ್ನು ಸಹಾಯಕ್ಕಾಗಿ ಸ್ತುತಿಸಿ ಕರೆದನು. ಆಗ ಒಡನೆಯೇ ಅಶ್ವಿನೀದೇವತೆಗಳು ಬಂದು ಇವನಿಗೆ ಸಹಾಯಮಾಡಿದರು ಎಂದು ಕಥೆಯನ್ನು ಹೇಳಿ ಸ್ಕಂದಸ್ವಾಮಿಗಳು ಇದೇ ವಿಷಯವನ್ನು ಹೇಳಿರುವ,

ಶಿಕ್ಷಾ ವಸ್ತೋರಾವತಂ ರಣಾಯ ವಶಮಶ್ವಿನಾ ಸನಯೇ ಸಹಸ್ರಾ ।

(ಋ. ಸಂ. ೧-೧೧೬-೨೧)

ಎಂಬ ಋಕ್ಕನ್ನೂ ಉದಹರಿಸಿದ್ದಾರೆ.

ಅಶ್ವ್ಯಂ—ಅಶ್ವಾಖ್ಯಸ್ಯ ಪುತ್ರಂ । ಅಶ್ವನೆಂಬುವನ ಮಗನನ್ನು ಎಂದು ಸಾಯಣರೂ, ಅಶ್ವಸಮೂಹವಂತಂ—ಅಶ್ವಸಮೂಹವುಳ್ಳ ಎಂದರೆ ಅಶ್ವಸೈನ್ಯವುಳ್ಳ ವಶನನ್ನು ಎಂದು ಸ್ಕಂದಸ್ವಾಮಿಗಳೂ ವಿವರಿಸಿದ್ದಾರೆ. ವಶನು ಅಶ್ವನೆಂಬುವನ ಪುತ್ರನೆಂಬುದನ್ನು ಅನೇಕಕಡೆಗಳಲ್ಲಿ ಹೇಳಿದೆ. ಋ.ಸಂ. ೮-೪೬ನೇ ಸೂಕ್ತದ ದ್ರಷ್ಟೃವು ಅಶ್ವಪುತ್ರನಾದ ವಶನೆಂಬುದನ್ನು ಆ ಸೂಕ್ತದ ಭಾಷ್ಯದ ಪೀಠಿಕೆಯಲ್ಲಿಯೂ, ಇದೇ ಸೂಕ್ತವನ್ನು ಪಠಿಸಿರುವ ಶತಪಥಬ್ರಾಹ್ಮಣದಲ್ಲಿಯೂ ಸಹ (೮-೬-೨-೩) ಹೇಳಿದೆ. ಬೃಹದ್ದೇವತೆಯಲ್ಲಿಯೂ ಸಹ

ವಶಾಯಾಶ್ವ್ಯಾಯ ಯತ್ಪ್ರಾದಾತ್ ಕಾನೀತಸ್ತು ಪೃಥುಶ್ರವಾಃ ।

(ಬೃ. ದೇ. ೬-೭೯)

ಎಂದು ಅಶ್ವಪುತ್ರನಾದ ವಶನೆಂದು ಹೇಳಿದೆ. ಇಲ್ಲಿ ಭಾಷ್ಯಕಾರರಿಬ್ಬರ ಅರ್ಥವನ್ನೂ ಸೇರಿಸಿಕೊಂಡು ಅಶ್ವಶಕ್ತಿಯನ್ನು ಹೊಂದಿದ್ದವನೂ ಅಶ್ವಪುತ್ರನೂ ಆದ ವಶನೆಂದು ಹೇಳಿದರೂ ತಪ್ಪಾಗಲಾರದು.

ಪ್ರೈಣಂ—ಪ್ರೀಞ್ ತರ್ಪಣೇ । ತರ್ಪಯಿತಾರಂ ಚ ಸ್ತುತಿಭಿಃ ಹವಿರ್ಭಿಶ್ಚ ದೇವಾನಾಂ । ಸ್ತುತಿಗಳಿಂದಲೂ ಹವಿಸ್ಸುಗಳಿಂದಲೂ ದೇವತೆಗಳನ್ನು ತೃಪ್ತಿಪಡಿಸುವವನು ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

ಧನಸಾಮ್ ಧನಂ ಸನೋತಿ ಇತಿ ಧನಸಾ. ತಾಂ ಷಣ ಸಂಭಕ್ತೌ. ಧಾತು. ಜನಸನಖನ— (ಪಾ. ಸೂ. ೩-೨-೬೭) ಎಂಬುದರಿಂದ ವಿಟ್ ಪ್ರತ್ಯಯ. ಇದು ಪರವಾದಾಗ ವಿಡ್ವನೋರನುನಾಸಿಕಸ್ಯಾತ್— (ಪಾ. ಸೂ. ೬-೪-೪೧) ಎಂಬುದರಿಂದ ಆಕಾರಾಂತಾದೇಶ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಅಶ್ವ್ಯಮ್**—ಅಶ್ವಸ್ಯ ಅಪತ್ಯಂ. ಅಶ್ವ್ಯಮ್. **ಛಂಧಸಿಚ**—ಎಂಬುದರಿಂದ ಯಪ್ರತ್ಯಯ. **ಯಸ್ಯೇತಿಚ**—ಎಂಬುದರಿಂದ ಅಕಾರಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಪ್ರೇಣಿಮ್**—ಪ್ರೀಣ್ಬ್ರ. ಗತಿಪ್ರೇರಣಶ್ಲೇಷಣೇಷು. ಧಾತು. ಇದಕ್ಕೆ ಔಣಾದಿಕವಾದ ಇಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ. ॥ ೧೦ ॥

———— :೦: ————

ಸಂಹಿತಾಪಾಠಃ

ಯಾಭಿಃ ಸುದಾನೂ ಔಶಿಜಾಯ ವಣಿಜೇ ದೀರ್ಘಶ್ರವಸೇ ಮಧು ಕೋಶೋ ಅಕ್ಷರತ್।
ಕಕ್ಷೀವಂತಂ ಸ್ತೋತಾರಂ ಯಾಭಿರಾವತಂ ತಾಭಿರೂ ಷು ಊತಿಭಿರಶ್ವಿನಾ ಗತಂ ॥ ೧೧ ॥

ಪದಪಾಠಃ

ಯಾಭಿಃ । ಸುದಾನೂ ಇತಿ ಸುಽದಾನೂ । ಔಶಿಜಾಯ । ವಣಿಜೇ । ದೀರ್ಘಽಶ್ರವಸೇ । ಮಧು । ಕೋಶಃ । ಅಕ್ಷರತ್ ।
ಕಕ್ಷೀವಂತಂ । ಸ್ತೋತಾರಂ । ಯಾಭಿಃ । ಆವತಂ । ತಾಭಿಃ । ಊಂ ಇತಿ । ಸು । ಊತಿಽಭಿಃ । ಅಶ್ವಿನಾ । ಆ । ಗತಂ ॥ ೧೧ ॥

### ಸಾಯಣಭಾಷ್ಯಂ

ಉಶಿಕ್‌ಸಂಜ್ಞಾ ದೀರ್ಘತಮಸಃ ಪತ್ನೀ । ತಸ್ಯಾಃ ಪುತ್ರೋ ದೀರ್ಘಶ್ರವಾ ನಾಮ ಕಶ್ಚಿದೃಷಿರನಾವೃಷ್ಟ್ಯಾಂ ಜೀವನಾರ್ಥಮಕರೋದ್ವಾಣಿಜ್ಯಂ । ಸ ಚ ವರ್ಷಣಾರ್ಥಮಶ್ವಿನೌ ತುಷ್ಟಾವ। ತೌ ಚಾಶ್ವಿನೌ ಮೇಘಂ ಪ್ರೇರಿತವಂತೌ। ಅಯಮರ್ಥಃ ಪೂರ್ವಾರ್ಧೇ ಪ್ರತಿಪಾದ್ಯತೇ । ಹೇ ಸುದಾನೂ ಶೋಭನದಾನಾವಶ್ವಿನೌ । ಔಶಿಜಾಯೋಶಿಕ್‌ಪುತ್ರಾಯ ವಣಿಜೇ ವಾಣಿಜ್ಯಂ ಕುರ್ವತೇ ದೀರ್ಘಶ್ರವಸ ಏತತ್ಸಂಜ್ಞಾಯ ಋಷಯೇ ಯಾಭಿರ್ಯುಷ್ಮದೀಯಾಭಿರೂತಿಭಿರ್ಹೇತುಭೂತಾಭಿಃ ಕೋಶೋ ಮೇಘೋ ಮಧು ಮಾಧುರ್ಯೋಪೇತಂ ವೃಷ್ಟಿಜಲಮಕ್ಷರತ್ ಅಸಿಂಚತ್ । ಯುಷ್ಮತ್ಪ್ರಸಾದಾದಪೇಕ್ಷಿತಾ ವೃಷ್ಟಿರ್ಜಾತೇತ್ಯರ್ಥಃ । ಅಪಿ ಚೌಶಿಜಃ ಪುತ್ರಂ ಸ್ತೋತಾರಂ ಕಕ್ಷೀವಂತಮೇತತ್ಸಂಜ್ಞಮೃಷಿಂ ಯಾಭಿರೂತಿಭಿರಾವತಂ ; ಅಕ್ಷರತಂ ತಾಭಿಃ ಸರ್ವಾಭಿರೂತಿಭಿಃ ಸಹಾಸ್ಮಾನಪ್ಯಾಗಚ್ಛತಂ ॥ ಕಕ್ಷೀವಂತಂ । ಕಕ್ಷ್ಯಾ ರಜ್ಜುರಶ್ವಸ್ಯ ತಯಾ ಯುಕ್ತಃ ಕಕ್ಷೀವಾನ್ । ಆಸಂದೀವದಷ್ಠೀವಚ್ಚಕ್ರೀವತ್ಕಕ್ಷೀವದಿತಿ ನಿಪಾತನಾನ್ಮತುಪೋ ವತ್ವಂ । ಸಂಪ್ರಸಾರಣಂ ॥

### ಪ್ರತಿಪದಾರ್ಥ

**ಸುದಾನೂ**—ಉದಾರವಾದ ದಾನಿಗಳಾದ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಔಶಿಜಾಯ**—ಉಶಿಕ್ ಎಂಬುವಳ ಪುತ್ರನೂ । **ವಣಿಜೇ**—ವ್ಯಾಪಾರವನ್ನು ಮಾಡುವವನೂ ಆದ । **ದೀರ್ಘಶ್ರವಸೇ**—ದೀರ್ಘಶ್ರವಸ್ ಎಂಬ ಋಷಿಗೆ । **ಯಾಭಿಃ**—ಯಾವ ನಿಮ್ಮ ಸಹಾಯಗಳ ಕಾರಣದಿಂದ । **ಕೋಶಃ**—ಮೇಘವು । **ಮಧು**—ಮಾಧುರ್ಯದಿಂದ ಕೂಡಿದ ವೃಷ್ಟಿಯನ್ನು । **ಅಕ್ಷರತ್**—ಸುರಿಸಿತೋ । **ಯಾಭಿಃ**—ಯಾವ ನಿಮ್ಮ ರಕ್ಷಣೆಗಳಿಂದ । **ಸ್ತೋತಾರಂ**—ಕೀರ್ತನಕಾರನಾದ । **ಕಕ್ಷೀವಂತಂ**—ಕಕ್ಷೀವಂತನೆಂಬ ಋಷಿಯನ್ನು । **ಆವತಂ**—ರಕ್ಷಿಸಿದಿರೋ । **ತಾಭಿಃ ಊತಿಭಿಃ ಉ**—ಆ ಎಲ್ಲಾ ರಕ್ಷಣಾಸಹಾಯಗಳೊಡನೆಯೂ (ನಮ್ಮಲ್ಲಿಗೂ)! **ಸು ಆ ಗತಂ**—ಆದರದಿಂದ ಬನ್ನಿರಿ.

### ಭಾವಾರ್ಥ

ಉದಾರವಾದ ದಾನಿಗಳಾದ ಎಲೈ ಅಶ್ವಿನೀ ದೇವತೆಗಳೇ, ಉಶಿಕ್ ಎಂಬುವಳ ಪುತ್ರನೂ, ವ್ಯಾಪಾರವನ್ನು ಮಾಡುವವನೂ ಆದ ದೀರ್ಘಶ್ರವಸ್ ಎಂಬ ಋಷಿಗೆ ಯಾವ ನಿಮ್ಮ ಸಹಾಯಗಳ ಕಾರಣದಿಂದ ಮೇಘವು ಮಾಧುರ್ಯದಿಂದಕೂಡಿದ ವೃಷ್ಟಿಯನ್ನು ಸುರಿಸಿತೋ, ಯಾವ ನಿಮ್ಮ ರಕ್ಷಣೆಗಳಿಂದ ಕೀರ್ತನಕಾರನಾದ ಕಕ್ಷೀವಂತನೆಂಬ ಋಷಿಯನ್ನು ರಕ್ಷಿಸಿದಿರೋ ಆ ಎಲ್ಲಾ ರಕ್ಷಣಾ ಸಹಾಯಗಳೊಡನೆಯೂ ನಮ್ಮಲ್ಲಿಗೂ ಆದರದಿಂದ ಬನ್ನಿರಿ.

### Englih Tranlation

With those aids by which, beauteous donors, the cloud (was made to) shed its sweet (water), for the sake of the merchant Dirghasravas, the son of Usij, and by which you protected the devout Kakshivat; with them, Aswins, come willingly hither.

ವಿಶೇಷವಿಷಯಗಳು

**ಔಶಿಜಾಯ ದೀರ್ಘಶ್ರವಸೇ ಮಧು ಕೋಶೋ ಅಕ್ಷರತ್—ಉಶಿಕ್ ಸಂಜ್ಞಾ ದೀರ್ಘತಮಸಃ ಪತ್ನೀ । ತಸ್ಯಾಃ ಪುತ್ರೋ ದೀರ್ಘಶ್ರವಾ ನಾಮ ಕಶ್ಚಿದೃಷಿರನಾವೃಷ್ಟ್ಯಾಂ ಜೀವನಾರ್ಥಮಕರೋ ದ್ವಾಣಿಜ್ಯಂ । ಸ ಚ ವರ್ಷಣಾರ್ಥಮಶ್ವಿನೌ ತುಷ್ಟಾವ । ಉಶಿಕ್** ಎಂಬ ಹೆಸರಿನ ದೀರ್ಘತಮಸ್ಸಿನ ಪತ್ನಿಗೆ ದೀರ್ಘಶ್ರವಸ್ ಎಂಬ ಮಗನಿದ್ದನು. ಅವನು ವೃತ್ತಿಯಲ್ಲಿ ಋಷಿಯಾಗಿದ್ದರೂ ಸಹ ಒಂದುಸಲ ಅನಾವೃಷ್ಟಿಯ ಬೇಸೆಯಿಂದ ಜೀವನಕ್ಕೆ ಶ್ರಮವಾಗಿ ವ್ಯಾಪಾರ ಮಾಡತೊಡಗಿದನು. ಆಗ ವೃಷ್ಟ್ಯರ್ಥವಾಗಿ ಅಶ್ವಿನೀ ದೇವತೆಗಳನ್ನು ಸ್ತುತಿಸಲು ಅವರು ಮೇಘದಿಂದ ಮಧುರವಾದ ನೀರನ್ನು ಸುರಿಸಿದರು ಎಂದು ಹಿಂದಿನ ಸಂದರ್ಭವನ್ನು ಹೇಳಿದೆ.

**ಕೋಶಃ**—ಮೇಘನಾಮಗಳಲ್ಲಿ ಪಠಿತವಾಗಿದೆ (೨-೨೧).

**ಕಕ್ಷೀವಂತಂ—ಯೋಭಿಸ್ತ್ರಿಮಂತುಃ** ಎಂದು ಇದೇ ಸೂಕ್ತದ ನಾಲ್ಕನೇ ಋಕ್ಕಿನ ವಿಶೇಷವಿಷಯಗಳಲ್ಲಿ ಕಕ್ಷೀವಂತನ ವಿಷಯವನ್ನು ಸೂಕ್ಷ್ಮವಾಗಿ ಹೇಳಿದೆ.
ಈ ಋಕ್ಕಿನ ಮತ್ತು

**ಸೋಮಾನಂ ಸ್ವರಣಂ ಕೃಣುಹಿ ಬ್ರಹ್ಮಣಸ್ಪತೇ । ಕಕ್ಷೀವಂತಂ ಯ ಔಶಿಜಃ ।**

(ಋ. ಸಂ. ೧-೧೮-೧)

ಎಂಬ ಋಕ್ಕಿನ ಆಧಾರದ ಮೇಲೆ ಕಕ್ಷೀವಂತನು **ಉಶಿಕ್** ಎಂಬುವಳ ಮಗನೆಂದು ತಿಳಿಯುತ್ತದೆ. ಇವನು ದೀರ್ಘತಮಸ್ಸೆಂಬ ಋಷಿಯಿಂದ **ಉಶಿಕ್** ಎಂಬುವಳಲ್ಲಿ ಉತ್ಪನ್ನನಾದನು ಎಂದು ಬೃಹದ್ದೇವತೆಯ ಆಧಾರದಿಂದ ತಿಳಿಯುತ್ತದೆ.

**ಅಂಗರಾಜಗೃಹೇ ಯುಕ್ತಾಂ ಉಶಿಜಂ ಪುತ್ರಕಾಮಯಾ ।**
**ರಾಜ್ಞಾ ಚ ಪ್ರಹಿತಾಂ ದಾಸೀಂ ಭಕ್ತ್ಯಾಂ ಮತ್ವಾ ಮಹಾತಪಾಃ ।**
**ಜನಯಾಮಾಸ ಚೋತ್ಥಾಯ ಕಕ್ಷೀವತ್ಪ್ರಮುಖಾನೃಷೀನ್ ॥**

(ಬೃ. ದೇ. ೪-೨೪, ೨೫)

ಅಂಗರಾಜನ ಮನೆಯಲ್ಲಿ ಕೆಲಸಕ್ಕೆ ಇದ್ದ **ಉಶಿಕ್**—ಎಂಬುವಳನ್ನು ದೊರೆಯು (ರಾಣಿಯು ?) ಪುತ್ರೇಚ್ಛೆಯಿಂದ **ದೀರ್ಘತಮಸ್** ಎಂಬ ಋಷಿಯ ಸಮೀಪಕ್ಕೆ ಕಳುಹಿಸಿದನು. ಇವಳು ಬಹಳ ಭಕ್ತಿಯುತಳಾಗಿ ಅವನಿಗೆ ಸೇವೆಯನ್ನು ಸಲ್ಲಿಸುತ್ತಿದ್ದುದರಿಂದ ಅವನು ತುಷ್ಟನಾಗಿ ಇವಳಲ್ಲಿ **ಕಕ್ಷೀವತ್ಪ್ರಮುಖರಾದ** ಋಷಿಗಳನ್ನು ಉತ್ಪನ್ನಮಾಡಿದನು ಎಂದು ಕಥೆಯು ಉಕ್ತವಾಗಿದೆ.

**ಯುವಂ ನರಾ ಸ್ತುವತೇ ಪಜ್ರಿಯಾಯ ಕಕ್ಷೀವತೇ ಅರದತಂ ಪುರಂಧಿಂ ।**

(ಋ. ಸಂ. ೧-೧೧೬-೭)

ತದ್ವಾಂ ನರಾ ಶಂಸ್ಯಂ ಪಜ್ರಿಯೇಣ ಕಕ್ಷೀವತಾ ನಾಸತ್ಯಾ ಪರಿಜ್ಮನ್ ।

(ಋ. ಸಂ. ೧-೧೧೭-೬)

ಎಂಬ ಋಕ್ಕುಗಳಿಂದ ಇವನು ಪಜ್ರ ಸಂತತಿಯವನೆಂದು ತಿಳಿಯುತ್ತದೆ.

ಮದಚ್ಯುತಃ ಕೃಶನಾವತೋ ಅತ್ಯಾನ್ಕಕ್ಷೀವಂತ ಉದಮೃಕ್ಷಂತ ಪಜ್ರಾಃ ।

(ಋ. ಸಂ. ೧-೧೨೬-೪)

ಎಂಬ ಋಕ್ಕಿನಲ್ಲಿ ಇವನ ವಂಶದಲ್ಲಿ ಉತ್ಪನ್ನರಾದವರೂ ಪಜ್ರರೆಂದೇ ಕರೆಯಲ್ಪಡುವುದಾಗಿ ತಿಳಿಯುತ್ತದೆ. ಇದೇ ಸೂಕ್ತದಲ್ಲಿ ಸಿಂಧೂ ನದಿಯ ದಡದಲ್ಲಿದ್ದ ಭಾವಯವ್ಯನ ಮಗನಾದ ಸ್ವನಯನು ತನಗೆ ಅತಿಪ್ರಭೂತವಾದ ಕೊಟ್ಟು ದಾಗಿ ದಾನವನ್ನು ಪ್ರಶಂಸಿಸಿದ್ದಾನೆ. ಈ ದಾನವನ್ನು ಕೊಡಬೇಕಾದ ಸಂದರ್ಭವೂ, ಇವರಿಬ್ಬರಿಗೂ ಉಂಟಾದ ನಿಕಟವಾದ ಸಂಬಂಧವೂ ಬೃಹದ್ದೇವತೆಯಲ್ಲಿ ಉಕ್ತವಾಗಿರುವ ಕಥೆಯಿಂದ ತಿಳಿಯುತ್ತದೆ.

ಅಧಿಗಮ್ಯ ಗುರೋರ್ವಿದ್ಯಾಂ ಗಚ್ಛನ್ ಸ್ವನಿಲಯಂ ಕಿಲ ।
ಕಕ್ಷೀವಾನಧ್ವನಿ ಶ್ರಾಂತಃ ಸುಷ್ವಾಪಾರಣ್ಯಗೋಚರಃ ॥
ತಂ ರಾಜಾ ಸ್ವನಯೋ ನಾಮ ಭಾವಯವ್ಯಸುತೋ ವ್ರಜನ್ ।
ಕ್ರೀಡಾರ್ಥಂ ಸಾನುಗೋಽಪಶ್ಯತ್ ಸಭಾರ್ಯಃ ಸಪುರೋಹಿತಃ ॥
ಅಥೈನಂ ರೂಪಸಂಪನ್ನಂ ದೃಷ್ಟ್ವಾ ದೇವಸುತೋಪಮಂ ।
ಕನ್ಯಾದಾನೇ ಮತಿಂ ಚಕ್ರೇ ವರ್ಣಗೋತ್ರಾವಿರೋಧತಃ ॥
ಸಂಬೋಧ್ಯೈನಂ ಸ ಪಪ್ರಚ್ಛ ವರ್ಣಗೋತ್ರಾದಿಕಂ ತತಃ ।
ರಾಜನ್ನಾಂಗಿರಸೋಽಸ್ಮೀತಿ ಕುಮಾರಃ ಪ್ರತ್ಯುವಾಚ ತಂ ॥
ಪುತ್ರೋಽಹಂ ದೀರ್ಘತಮಸ ಔಚಥ್ಯಸ್ಯ ಋಷೇರ್ನೃಪ ।
ಅಥಾಸ್ಮೈ ಸ ದದೌ ಕನ್ಯಾ ದಶಾಭರಣಭೂಷಿತಾಃ ॥
ತಾವತಶ್ಚ ರಥಾಞ್ಛ್ಯಾವಾನ್ನೀಡ್ವಂಗಾನ್ಸ್ವೈ ಚತುರ್ಯುಜಃ ।
ವಧೂನಾಂ ವಾಹನಾರ್ಥಾಯ ಧನಕುಪ್ಯಮಜಾವಿಕಂ ॥
ನಿಷ್ಕಾಣಾಂ ವೃಷಭಾಣಾಂ ಚ ಶತಂ ಶತಮುದಾತ್ಮನಃ ।
ಏತದುತ್ತರಸೂಕ್ತೇನ ಶತಮಿತ್ಯಾದಿನೋದಿತಂ ॥
ಶತಮಶ್ವಾಞ್ಛತಂ ನಿಷ್ಕಾನ್ ರಥಾನ್ ದಶ ವಧೂಮತಃ ।
ಚತುರ್ಯುಜೋ ಗವಾಂ ಚೈವ ಸಹಸ್ರಂ ಷಷ್ಟ್ಯೈಪಾಧಿಕಂ ॥
ಸ್ವನಯಾದ್ಭಾವಯವ್ಯಾದ್ಯಃ ಕಕ್ಷೀವಾನ್ಪ್ರತ್ಯಪದ್ಯತ ।
ಪ್ರತಿಗೃಹ್ಯ ಚ ತುಷ್ಟಾವ ಪ್ರಾತಃ ಪಿತ್ರೇ ಶಶಂಸ ಚ ॥

(ಬೃ. ದೇ. ೩-೧೪೨-೧೫೦)

ಗುರುವಿನ ಮನೆಯಲ್ಲಿ ವಿದ್ಯಾಭ್ಯಾಸವಾದ ಮೇಲೆ ಕಕ್ಷೀವಂತನು ಮನೆಗೆ ಹಿಂತಿರುಗುತ್ತಿದ್ದಾಗ ದಾರಿಯಲ್ಲಿ ಶ್ರಾಂತನಾಗಿ ಕಾಡಿನಲ್ಲಿ ಮಲಗಿ ನಿದ್ರೆಹೋದನು. ಆಗ ಭಾವಯವ್ಯ ಪುತ್ರನಾದ ಸ್ವನಯನೆಂಬ ರಾಜನು ತನ್ನ ಪತ್ನೀಭೃತ್ಯಾದಿಪರಿವಾರಗಳೊಡನೆ ಕ್ರೀಡಾರ್ಥವಾಗಿ ಅಲ್ಲಿಗೆ ಬಂದಾಗ ಅವನನ್ನು ನೋಡಿದನು.

ಅವನ ಸೌಂದರ್ಯವನ್ನು ನೋಡಿ ಸಂತೋಷಗೊಂಡು ವರ್ಣ ಮತ್ತು ಗೋತ್ರಗಳ ದೃಷ್ಟಿಯಿಂದ ಏನೂ ವಿರೋಧವಿಲ್ಲ ದಿದ್ದರೆ ಅವನಿಗೆ ತನ್ನ ಮಗಳನ್ನು ಕೊಟ್ಟು ವಿವಾಹವನ್ನು ನೆರವೇರಿಸಬೇಕೆಂದು ಇಚ್ಛಿಸಿ ಅವನನ್ನು ಎಬ್ಬಿಸಿ ಅವನ ವಂಶಾದಿಗಳ ವಿಷಯವನ್ನು ಕೇಳಿದನು. ಆಗ ಕಕ್ಷೀವಂತನು ತಾನು ಅಂಗಿರಸ್ಸಿನ ವಂಶದವನೆಂದೂ ಉಚಥ್ಯಪುತ್ರ ನಾದ ದೀರ್ಘತಮಸ್ಸೆಂಬ ಋಷಿಯ ಮಗನೆಂದೂ ಹೇಳಿದೊಡನೆಯೇ **ಸ್ವನಯನು** ಅವನಿಗೆ ಅಲಂಕೃತರಾದ **ಹತ್ತು** ಕನ್ಯೆಯರನ್ನು ದಾನಮಾಡಿದನು. ಜೊತೆಯಲ್ಲಿಯೇ ಅಶ್ವಗಳನ್ನೂ ರಥಗಳನ್ನೂ ಧನವನ್ನೂ ಅಜಾದಿ ಸಂಪತ್ತು ಗಳನ್ನೂ ಪ್ರಭೂತವಾಗಿ ದಾನಮಾಡಿದನು. ಈ ವಿಷಯವು ಋಕ್ಸಂಹಿತೆಯ

**ಅಮಂದಾನ್ತ್ಸೋಮಾನ್ಪ್ರ ಭರೇ ಮನೀಷಾ ಸಿಂಧಾವಧಿ ಕ್ಷಿಯತೋ ಭಾವ್ಯಸ್ಯ ।**
**ಯೋ ಮೇ ಸಹಸ್ರಮಮಿಮೀತ ಸವಾನತೂರ್ತೋ ರಾಜಾ ಶ್ರವ ಇಚ್ಛಮಾನಃ ॥**
**ಶತಂ ರಾಜ್ಞೋ ನಾಧಮಾನಸ್ಯ ನಿಷ್ಕಾಞ್ಛತಮಶ್ವಾನ್ಪ್ರಯತಾನ್ತ್ಸದ್ಯ ಆದಂ ।**
**ಶತಂ ಕಕ್ಷೀವಾँ ಅಸುರಸ್ಯ ಗೋನಾಂ ದಿವಿ ಶ್ರವೋಽಜರಸಾ ತತಾನ ।**
(ಋ. ಸಂ. ೧-೧೨೬-೧,೨)

ಇತ್ಯಾದಿ ಋಕ್ಕುಗಳಲ್ಲಿ ಹೇಳಲ್ಪಟ್ಟಿದೆ. ಋಕ್ಸಂಹಿತೆಯಲ್ಲಿಯೂ ಬ್ರಾಹ್ಮಣಾದಿಗಳಲ್ಲಿಯೂ ಸಹ ಇವನು ಪ್ರಾಜ್ಞನೂ, ಪೂಜ್ಯನೂ ಆದ ಋಷಿಯೆಂದು ಇವನನ್ನು ಪ್ರಶಂಸಿಸಿದೆ.

**ಅಹಂ ಮನುರಭವಂ ಸೂರ್ಯಶ್ಚಾಹಂ ಕಕ್ಷೀವಾँ ಋಷಿರಸ್ಮಿ ವಿಪ್ರಃ ।**
(ಋ. ಸಂ. ೪-೨೬-೧)

**ಅಯಂ ಕಕ್ಷೀವತೋ ಮಹೋ ವಿ ವೋ ಮದೇ ಮತಿಂ ವಿಪ್ರಸ್ಯ ವರ್ಧಯದ್ವಿವಕ್ಷಸೇ ।**
(ಋ. ಸಂ. ೧೦-೨೫-೧೦)

ಇತ್ಯಾದಿ ಋಕ್ಕುಗಳಲ್ಲಿಯೂ,

**ಏತಾಭಿರ್ಹಾಶ್ವಿನೋಃ ಕಕ್ಷೀವಾನ್ಪ್ರಿಯಂ ಧಾಮೋಪಾಗಚ್ಛತ್ಸ ಪರಮಂ ಲೋಕಮಜಯತ್ ।**
(ಐ. ಬ್ರಾ. ೧-೨೧)

ಋ. ಸಂ. ೧-೧೨೦-೧ ರಿಂದ ೯ ವರೆಗಿನ ಈ ಋಕ್ಕುಗಳನ್ನು ಪಠಿಸಿಕೊಂಡು ಕಕ್ಷೀವಂತನು ಅಶ್ವಿನೀ ದೇವತೆಗಳ ನಿವಾಸಕ್ಕೆ ಹೋಗಿ ಸೇರಿ ಅವರಿಂದ ಅನುಗೃಹೀತನಾಗಿ ಇನ್ನೂ ಉತ್ತಮವಾದ ಲೋಕವನ್ನು ಸೇರಿದನು ಎಂದು ಐತರೇಯ ಬ್ರಾಹ್ಮಣದಲ್ಲಿಯೂ,

**ಕಕ್ಷೀವಂತಂ ಯ ಔಶಿಜಃ । ಯೋ ದೇವಾನ್ಯೋಽಮೀವಹಾ ವಸುವಿತ್ಪುಷ್ಟಿವರ್ಧನಃ । ಸ ನಃ ಸಿಷಕ್ತು ಯಸ್ತುರಃ ।** (ಋ. ಸಂ. ೧-೧೮-೧,೨ ಮತ್ತು ಶ. ಬ್ರಾ. ೨-೩-೪-೩೫)

ಪುಷ್ಟಿಮಂತನೂ, ಶತ್ರುನಾಶಕನೂ, ಧನದಾತನೂ, ಸಂಪದ್ವರ್ಧಕನೂ **ಉಶಿಜೆಯ** ಪುತ್ರನೂ ಆದ **ಕಕ್ಷೀ-ವಂತನು** ನಮ್ಮೊಂದಿಗಿರಲಿ ಎಂದು ಶತಪಥಬ್ರಾಹ್ಮಣ ವಾಕ್ಯಗಳಲ್ಲಿಯೂ ಸಹ **ಕಕ್ಷೀವಂತನು** ಶ್ರೇಷ್ಠವಾದ ವ್ಯಕ್ತಿಯೆಂದು ಸ್ತುತಿಸಿದೆ. ಕೆಲವು ಆಂಗ್ಲವಿಮರ್ಶಕಾರರು ಇವನನ್ನು ಕ್ಷತ್ರಿಯನೆಂದೂ ಬ್ರಾಹ್ಮಣನಲ್ಲನೆಂದೂ ತಮಗೆ ತೋರಿದ ಆಧಾರಗಳಮೇಲೆ ಹೇಳಿರುವರು.

ವ್ಯಾಕರಣಪ್ರಕ್ರಿಯಾ

**ಸುದಾನೂ**—ಶೋಭನಂ ದಾನು ದಾನಂ ಯಯೋಸ್ತೌ ಸುದಾನೂ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಔಶಿಜಾಯ**— ಉಶಿಜಃ ಅಪತ್ಯಂ ಪುಮಾನ್ ಔಶಿಜಃ | **ತಸ್ಯಾಪತ್ಯಮ್**—(ಪಾ. ಸೂ. ೪-೧-೯೨) ಎಂಬುದರಿಂದ ಅಣ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ**—(ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಚತುರ್ಥೀಏಕವಚನಾಂತರೂಪ

**ಅಕ್ಷರತ್**—ಕ್ಷರ ಸಂಚಲನೇ ಧಾತು. ಲಙ್ ಪ್ರಥಮಪುರುಷಏಕವಚನರೂಪ. **ಯದ್ವೃತ್ತಾನ್ನಿತ್ಯಮ್**—(ಪಾ. ಸೂ. ೮-೧-೬೬) ಎಂಬುದರಿಂದ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಕಕ್ಷೀವಂತಮ್**—ಕಕ್ಷ್ಯಾ ರಜ್ಜುರಶ್ವಸ್ಯ (ಅಶ್ವದ ಹಗ್ಗ=ಕಡಿವಾಣ) ತದಸ್ಯ ಅಸ್ತಿ ಎಂಬರ್ಥದಲ್ಲಿ ಮತುಪ್ ಪ್ರತ್ಯಯ. ತಯಾ ಯುಕ್ತಃ ಕಕ್ಷೀವಾನ್. **ಆಸಂದೀವದಷ್ಠೀವಚ್ಚಕ್ರೀವತ್‌ಕಕ್ಷೀವತ್**—(ಪಾ. ಸೂ. ೮-೨-೧೨) ಎಂದು ನಿಪಾತಮಾಡಿರುವುದರಿಂದ ಮತುಪಿಗೆ ವತ್ವ. ಸಂಪ್ರಸಾರಣ. ಕಕ್ಷೀವತ್ ಶಬ್ದ. ಮತುಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ದ್ವಿತೀಯಾಏಕವಚನಾಂತರೂಪ.

**ಸ್ತೋತಾರಮ್**—ಷ್ಟುಞ್ ಸ್ತುತೌ. ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಚಿತ್ತಾದುದರಿಂದ ಅಂತೋದಾತ್ತವಾಗುತ್ತದೆ ಪ್ರತ್ಯಯನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ದ್ವಿತೀಯಾ ಅಮ್ ಪರವಾದಾಗ **ಅಪ್‌ತೃನ್‌ತೃಚ್**—ಸೂತ್ರದಿಂದ ಉಪಧಾದೀರ್ಘ. ಮೊದಲು **ಋತೋಙಿಸ**—ಸೂತ್ರದಿಂದ ಗುಣ ಬಂದಿರುತ್ತದೆ. ॥ ೧೧ ॥

———:o:———

ಸಂಹಿತಾಪಾಠಃ

ಯಾಭೀ ರಸಾಂ ಕ್ಷೋದಸೋದ್ನಃ ಪಿಪಿನ್ವಥುರನಶ್ವಂ ಯಾಭೀ ರಥಮಾವತಂ ಜಿಷೇ |

ಯಾಭಿಸ್ತ್ರಿಶೋಕ ಉಸ್ರಿಯಾ ಉದಾಜತ ತಾಭಿರೂ ಷು ಊತಿಭಿರಶ್ವಿನಾ ಗತಂ ॥ ೧೨ ॥

ಪದಪಾಠಃ

ಯಾಭಿಃ । ರಸಾಂ । ಕ್ಷೋದಸಾ । ಉದ್ನಃ । ಪಿಪಿನ್ವಥುಃ । ಅನಶ್ವಂ । ಯಾಭಿಃ ।
ರಥಂ । ಆವತಂ । ಜಿಷೇ ।
ಯಾಭಿಃ । ತ್ರಿऽಶೋಕಃ । ಉಸ್ರಿಯಾಃ । ಉತ್ऽಆಜತ । ತಾಭಿಃ । ಊಂ ಇತಿ ।
ಸು । ಊತಿऽಭಿಃ । ಅಶ್ವಿನಾ । ಆ । ಗತಂ ॥ ೧೨ ॥

ಸಾಯಣಭಾಷ್ಯಂ

ರಸಾ ನದೀ ಭವತಿ ರಸತೇಃ ಶಬ್ದಕರ್ಮಣ ಇತಿ ಯಾಸ್ಕಃ । ನಿ. ೧೧-೨೫ । ಹೇ ಅಶ್ವಿನೌ ಯಾಭಿರೂತಿಭಿರ್ಹೇತುಭೂತಾಭೀ ರಸಾಂ ನದೀಮನಾವೃಷ್ಟ್ಯಾ ಜಲರಹಿತಾಂ ಕ್ಷೋದಸಾ ಕೂಲಾನಿ ಸಂಪಿಂಷತೋದ್ನ ಉದಕೇನ ಪಿಪಿನ್ವಥುಃ ಯುವಾಂ ಪೂರಿತವಂತೌ । ತಥಾನಶ್ವಮಶ್ವೈರ್ವಿಯುಕ್ತಮಾತ್ಮೀಯಂ ರಥಂ ಜಿಷೇ ಜೇತುಂ ಯಾಭಿರೂತಿಭಿರಾವತಂ ಅಗಮಯತಂ । ಅಪಿ ಚ ಯಾಭಿರೂತಿಭಿಃ ಕಣ್ವಪುತ್ರಸ್ತ್ರಿಶೋಕ ಋಷಿರುಸ್ರಿಯಾ ಅಪಹೃತಾ ಗಾ ಉದಾಜತ ಉದಗಮಯತ್ ಅಸುರಸಕಾಶಾಲ್ಲೇಭೇ । ತಾಭಿಃ ಸರ್ವಾಭಿರೂತಿಭಿಃ ಸಹಾಸ್ಮಾನಸ್ಯಾಗಚ್ಛತಂ ॥ ಕ್ಷೋದಸಾ । ಕ್ಷುದಿರ್ ಸಂಪೇಷಣೇ । ಔಣಾದಿಕೋಽಸುನ್ । ಉದ್ನಃ । ತೃತೀಯೈಕವಚನಸ್ಯ ಸುಪಾಂ ಸುಪೋ ಭವಂತೀತಿ ಶಸಾದೇಶಃ । ಪದ್ದನ್ನಿತ್ಯಾದಿನೋದಕಶಬ್ದಸ್ಯೋದನ್ ಭಾವಃ । ಭಸಂಜ್ಞಾಯಾಮಲ್ಲೋಪೋಽನ ಇತ್ಯಕಾರಲೋಪಃ । ಪಿಪಿನ್ವಥುಃ । ಪಿವಿ ಸೇಚನೇ । ಇದಿತ್ತ್ವಾನ್ನುಮ್ । ಜಿಷೇ । ಜಿ ಜಯೇ । ತುಮರ್ಥೇ ಸೇಸೇನಿತಿ ಕ್ಸೇಪ್ರತ್ಯಯಃ । ಉದಾಜತ । ಅಜ ಗತಿಕ್ಷೇಪಣಯೋಃ ॥

। ಪ್ರತಿಪದಾರ್ಥ ।

**ಅಶ್ವಿನಾ**— ಎಲೈ ಅಶ್ವಿನೀದೇವತೆಗಳೇ । **ಯಾಭಿಃ** — ಯಾವ ನಿಮ್ಮ ರಕ್ಷಣೆಗಳಿಂದ । **ರಸಾಂ**—(ಅನಾವೃಷ್ಟಿಯಿಂದ ಜಲರಹಿತವಾದ) ನದಿಯನ್ನು । **ಕ್ಷೋದಸಾ**— ದಡಗಳಿಗೆ ಬಡಿಯುತಕ್ಕ (ದಡಗಳನ್ನು ಕೊರೆಯುತಕ್ಕ) । **ಉದ್ನಃ**— ನೀರಿನಿಂದ । **ಪಿಪಿನ್ವಥುಃ**— ತುಂಬಿದಿರೋ (ಹಾಗೆಯೇ) । **ಅನಶ್ವಂ**— ಕುದುರೆಯಿಲ್ಲದಿರುವುದಾದರೂ **ರಥಂ**— ರಥವನ್ನು । **ಜಿಷೇ**— ಜಯಕ್ಕಾಗಿ । **ಯಾಭಿಃ**— ಯಾವ ರಕ್ಷಣಾಸಹಾಯಗಳಿಂದ । **ಆವತಂ**— ಓಡುವಂತೆಮಾಡಿದಿರೋ ಮತ್ತು । **ಯಾಭಿಃ**— ಯಾವರಕ್ಷಣೆಗಳಿಂದ । **ತ್ರಿಶೋಕಃ**— ತ್ರಿಶೋಕನೆಂಬ ಋಷಿಯು । **ಉಸ್ರಿಯಾಃ**— (ಅಸುರರಿಂದ) ಅಪಹೃತಗಳಾದ ಗೋವುಗಳನ್ನು । **ಉದಾಜತ**— (ಅಸುರರಿಂದ) ಪುನಃ ಹಿಂತಿರುಗಿ ಪಡೆದನೋ । **ತಾಭಿಃ ಊತಿಭಿಃ ಉ**— ಆ ಎಲ್ಲಾ ರಕ್ಷಣೆಗಳೊಡನೆಯೂ (ನಮ್ಮಲ್ಲಿಗೂ) । **ಸು ಆ ಗತಂ**— ಆದರದಿಂದ ಬನ್ನಿರಿ ।

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಯಾವ ನಿಮ್ಮ ರಕ್ಷಣೆಗಳಿಂದ ಅನಾವೃಷ್ಟಿಯಿಂದ ಜಲರಹಿತವಾದ ನದಿಯನ್ನು ದಡಗಳನ್ನು ಕೊರೆಯುತಕ್ಕ ನೀರಿನಿಂದ ತುಂಬಿದಿರೋ, ಹಾಗೆಯೇ ಕುದುರೆಯಿಲ್ಲದಿರುವುದಾದರೂ ನಹ ರಥವನ್ನು ಯಾವ ನಿಮ್ಮ ರಕ್ಷಣಾಸಹಾಯಗಳಿಂದ ಜಯಲಾಭಕ್ಕಾಗಿ ಓಡುವಂತೆ ಮಾಡಿದಿರೋ ಮತ್ತು ಯಾವ ನಿಮ್ಮ ರಕ್ಷಣೆಗಳಿಂದ ತ್ರಿಶೋಕನೆಂಬ ಋಷಿಯು ಅಸುರರಿಂದ ಅಪಹೃತವಾದ ತನ್ನ ಗೋವುಗಳನ್ನು ಅವರಿಂದ ಪುನಃ ಹಿಂತಿರುಗಿ ಪಡೆದನೋ, ಆ ಎಲ್ಲಾ ರಕ್ಷಣೆಗಳೊಡನೆಯೂ ನಮ್ಮಲ್ಲಿಗೂ ಆದರದಿಂದ ಬನ್ನಿರಿ.

## English Translation

With those aids by which you filled the (dry) river-bed with water, by which you drove the chariot without horses, to victory, and by which Trisoka recovered his (stolen) cattle ; with them, Aswins, come willingly hither.

### ವಿಶೇಷವಿಷಯಗಳು

**ಯಾಭಿಃ ರಸಾಂ ಕ್ಷೋದಸೋದ್ನಃ ಪಿಪಿನ್ವಥುಃ**—ಜಲರಹಿತವಾದ ದೇವನದಿಯನ್ನು ನೀರಿನಿಂದ ತುಂಬಿದಿರೆಂದು ಒಂದು ಕಥೆ. **ಅತ್ರೇತಿಹಾಸಮಾಚಕ್ಷತೇ । ಪಣಿಭಿರಸುರೈರಪಹ್ರಿಯಮಾಣಾ ಗಾ ಅನುಗಚ್ಛಂತಃ ದೇವಗೋಪಾಲಾ ರಸಾಂ ನಾಮಾಂತರಿಕ್ಷನದೀಮಗಾಧೋದಕಾಂ ನೋತ್ತರಿತುಂ ಶೇಕುಃ । ತದ್ ಜ್ಞಾತ್ವಾ ದೇವಾಃ ಸಂಕ್ರುದ್ಧಾಃ ರಸಾಂ ಶೇಪುಃ ನಿರುದಕಾ ಭವೇತಿ । ಸಾ ಪ್ರತ್ಯಾನೀತಾಸು ಗೋಷು ಅಶ್ವಿನೌ ಪರಿಚಚಾರ । ತಾವಶ್ವಿನೌ ಗತ್ವಾ ಪುನರಗಾಧೋದಕಾಂ ಚಕ್ರತುರಿತಿ ।** ಪಣಿಯೆಂಬ ರಾಕ್ಷಸರ ಗುಂಪು ಗೋವುಗಳನ್ನು ಅಪಹರಿಸಿಕೊಂಡು ಹೋದಾಗ ದೇವಗೋಪಾಲಕರು ಆ ಮಾರ್ಗವನ್ನನುಸರಿಸಿ ಅಸುರರನ್ನು ಅಟ್ಟಿಸಿಕೊಂಡು ಹೋದಾಗ ಅಗಾಧವಾದ ನೀರುಳ್ಳ ರಸಾಯೆಂಬ ಅಂತರಿಕ್ಷಸ್ಥವಾದ ನದಿಯು ಅಡ್ಡಲಾಗಿದ್ದುದರಿಂದ ಅವರಿಗೆ ಅದನ್ನು ದಾಟಲಾಗಲಿಲ್ಲ. ಆಗ ಅವರು ಅದನ್ನು ಒಣಗಿಹೋಗಲೆಂದು ಶಪಿಸಿದರು. ಒಡನೆಯೇ ನೀರೆಲ್ಲಾ ಇಂಗಿಹೋಯಿತು. ಪುನಃ ಗೋವುಗಳನ್ನು ಹಿಂದಕ್ಕಟ್ಟಿಕೊಂಡು ಹೋದನಂತರ **ರಸೆಯು** ಅಶ್ವಿನೀ ದೇವತೆಗಳನ್ನು ಆರಾಧಿಸಲು ಅವರು ಸುಪ್ರೀತರಾಗಿ ನೀರನ್ನು ತುಂಬಿದರು ಎಂದು ಕಥೆಯನ್ನು ಸ್ಕಂದಸ್ವಾಮಿಗಳು ಉದಹರಿಸಿದ್ದಾರೆ. ಸಾಯಣರ ವಿವರಣೆಯು ಕೊಂಚ ವ್ಯತ್ಯಾಸವಾಗಿದೆ. **ರಸಾ ನದೀ ಭವತಿ ರಸತೇಃ ಶಬ್ದಕರ್ಮಣಃ** (ನಿ. ೧೧-೨೫) ಶಬ್ದವನ್ನುಂಟುಮಾಡು ಎಂಬರ್ಥವನ್ನು ಕೊಡುವ **ರಸ್** ಧಾತುವಿನಿಂದ ನಿಷ್ಪನ್ನವಾಗಿ **ರಸಾ** ಎಂದಾಗಿದೆಯೆಂದು ನಿರುಕ್ತಕಾರರ ನಿರ್ವಚನವನ್ನುದಹರಿಸಿ **ರಸಾಂ ಅನಾವೃಷ್ಟ್ಯಾ ಜಲರಹಿತಾಂ** ಅನಾವೃಷ್ಟಿಯಿಂದ ಇಂಗಿಹೋದ ನೀರುಳ್ಳ ಎಂದು ಜಲರಾಹಿತ್ಯಕ್ಕೆ ಬೇರೆ ಕಾರಣವನ್ನು ತೋರಿಸಿದ್ದಾರೆ. ಸ್ಕಂದಸ್ವಾಮಿಗಳು ಉದಹರಿಸಿರುವ ಕಥೆಯನ್ನು ಇಲ್ಲಿ ಸೂಚಿಸಿಲ್ಲ.

ರಸಾಂ—ರಸಾ ಎಂಬುದು ನದಿಯ ಹೆಸರೆಂದು ತಿಳಿದುಬರುತ್ತದೆ. ಕೆಲವೆಡೆಗಳಲ್ಲಿ ಎಂದರೆ,

ಸಿಂಧುರ್ಹ ವಾಂ ರಸಯಾ ಸಿಂಚದಶ್ವಾನ್ ಘೃಣಾ ವಯೋಽರುಷಾಸಃ ಪರಿ ಗ್ಮನ್ .

(ಋ. ಸಂ. ೪-೪೩-೬)

ಇತ್ಯಾದಿ ಋಕ್ಕುಗಳಲ್ಲಿ ಕೇವಲ **ರಸವೆಂದೇ** ಅರ್ಥವಾಗಿ **ರಸವುಳ್ಳ** ನದಿಯೆಂದರ್ಥವಾಗುತ್ತದೆ. ಅಪರೆ—

**ಕಾಸ್ಮೇಹಿತಿಃ ಕಾ ಪರಿತಕ್ಮ್ಯಾಸೀತ್ಕಥಂ ರಸಾಯಾ ಅತರಃ ಪಯಾಂಸಿ ।**

(ಋ. ಸಂ. ೧೦-೧೦೮-೧)

**ತೃಷ್ಟಾಮಯಾ ಪ್ರಥಮಂ ಯಾತವೇ ಸಜೂಃ ಸುಸರ್ತ್ವಾ ರಸಯಾ ಶ್ವೇತ್ಯಾ ತ್ಯಾ ।**

(ಋ. ಸಂ. ೧೦-೭೫-೬)

ಇತ್ಯಾದಿ ಋಕ್ಕುಗಳಲ್ಲಿ **ಅಂಕಿತನಾಮವೆಂದು** ತಿಳಿಯುತ್ತದೆ. ವಾಯವ್ಯದಿಕ್ಕಿನಲ್ಲಿ ಪ್ರವಹಿಸುತ್ತಿದ್ದ ನದಿಯೆಂದು ವಿಮರ್ಶನಕಾರರು ಅಭಿಪ್ರಾಯಪಟ್ಟಿದ್ದಾರೆ. (cf, J. A. O. S. XIX 100 Seq.).

**ಕ್ಷೋದಸಾ**—ಕೂಲಾನಿ ಸಂಪಿಷತಾ; ಉದ್ನಃ—ಉದಕೇನ ಎಂದರೆ ದಡಗಳನ್ನು ಕೊರೆಯತಕ್ಕ ನೀರಿನಿಂದ ಎಂದು ಸಾಯಣರೂ ; **ಕ್ಷೋದ ಇತ್ಯುದಕನಾಮ । ತೃತೀಯಾನಿರ್ದೇಶಾಚ್ಚ ರಹಿತಾಮಿತಿ ವಾಕ್ಯಶೇಷಃ । ಕ್ಷೋದ** ಶಬ್ದವು ಉದಕನಾಮಗಳಲ್ಲಿ ಪಠಿತವಾಗಿದೆ. ಇಲ್ಲಿ ತೃತೀಯಾ ವಿಭಕ್ತ್ಯಂತವಾಗಿರುವುದರಿಂದ **ಉದಕದಿಂದ ರಹಿತವಾದ** ಎಂದರೆ ಇಂಗಿಹೋದ ನೀರುಳ್ಳ ಎಂದರ್ಥವೆಂದು ಸ್ಕಂದಸ್ವಾಮಿಗಳೂ ವಿವರಿಸಿದ್ದಾರೆ.

**ಅನಶ್ವಂ ರಥಂ ಜಿಷೇ ಅವತಂ**—ಅಶ್ವರಹಿತವಾದ ತಮ್ಮ ರಥಗಳಲ್ಲಿ ಶತ್ರುಗಳಿಗಭಿಮುಖವಾಗಿ ಓಡಿಸಿದರು ಎಂದು ಅವರ **ಚಮತ್ಕಾರವನ್ನು** ವರ್ಣಿಸಿದೆ.

**ಅಶ್ವಿನೋರಸನಂ ರಥಮನಶ್ವಂ ವಾಜಿನೀವತೋಃ । ತೇನಾಹಂ ಭೂರಿ ಚಾಕನ ॥**

(ಋ. ಸಂ. ೧-೧೨೦-೧೦)

ಇತ್ಯಾದಿ ಋಕ್ಕುಗಳಲ್ಲಿ ಅಶ್ವಿನಿದೇವತೆಗಳ ರಥವು ಅಶ್ವರಹಿತವಾದುದೆಂದು ತೋರಿರುವುದು. ಇಲ್ಲಿ ಅಂತಹ ರಥವನ್ನು ಓಡಿಸಿದಿರೆಂದು ಅವರನ್ನು ಶ್ಲಾಘಿಸಿದೆ.

**ಯಾಭಿಃ ತ್ರಿಶೋಕಃ**—**ಅತ್ರಾಪೀತಿಹಾಸಮಾಚಕ್ಷತೇ । ತ್ರಿಶೋಕೋ ನಾಮ ರಾಜರ್ಷಿಃ ಆತ್ಮೀಯಾಭಿಃ ಗೋಭಿಸ್ಸಹ ಸ್ವರ್ಗಂ ಗಚ್ಛೇಯಮಿತಿ ಕಾಮಯಮಾನೋಽಶ್ವಿನೌ ತುಷ್ಟಾವ । ತಸ್ಯಾಗತ್ಯಾಶ್ವಿನೌ ಸ್ವರ್ಗಂ ಗಾಃ ನಿನ್ಯತುರಿತಿ ।** ತ್ರಿಶೋಕನೆಂಬ ರಾಜರ್ಷಿಯು ತನ್ನ ಗೋವುಗಳೊಡನೆಲ್ಲಾ ಸ್ವರ್ಗಕ್ಕೆ ಹೋಗಬೇಕೆಂದಿಚ್ಛಿಸಿ ತನಗೆ ಸಹಾಯಮಾಡಬೇಕೆಂದು ಅಶ್ವಿನೀ ದೇವತೆಗಳನ್ನು ಪ್ರಾರ್ಥಿಸಿದಾಗ ಅವರು ಇವನಿಗೆ ಸಹಾಯಮಾಡಿದರೆಂಬ ಕಥೆಯನ್ನು ಸ್ಕಂದಸ್ವಾಮಿಗಳು ಹೇಳಿದ್ದಾರೆ. **ಕಣ್ವಪುತ್ರಃ ತ್ರಿಶೋಕಃ ಅಪಹೃತಾಃ ಗಾಃ ಅಸುರಸಕಾಶಾತ್ ಲೇಭೇ ।** ಅಸುರರು ಅಪಹರಿಸಿದ ಗೋವುಗಳನ್ನು ಪುನಃ ತ್ರಿಶೋಕನಿಗೆ ಸೇರುವಂತೆ ಸಹಾಯಮಾಡಿದರೆಂದು ಸಾಯಣರು ವಿವರಿಸಿದ್ದಾರೆ. ಇವನು **ಕಾಣ್ವಗೋತ್ರದವನೆಂದೂ** ಎಂಟನೆಯ ಮಂಡಲದ ನಲವತ್ತೈದನೆಯ ಸೂಕ್ತದ ದ್ರಷ್ಟೃವೆಂದೂ ಗೊತ್ತಾಗುತ್ತದೆ. ಈ ಸೂಕ್ತದ—

**ಯಃ ಕೃಂತದಿದ್ವಿ ಯೋನ್ಯಂ ತ್ರಿಶೋಕಾಯ ಗಿರಿಂ ಪೃಥುಂ । ಗೋಭ್ಯೋ ಗಾತುಂ ನಿರೇತವೇ ॥**

(ಋ.ಸಂ. ೮-೪೫-೩೦)

ಎಂಬ ಋಕ್ಕಿನಿಂದ ತ್ರಿಶೋಕನು ಇಂದ್ರನ ಸಹಾಯದಿಂದ ಅನೇಕ ಅನುಕೂಲಗಳನ್ನು ಪಡೆದನೆಂದು ಹೇಳಿದೆ. ಇದೇ ಅಂಶವನ್ನು ಬೃಹದ್ದೇವತೆಯಲ್ಲಿಯೂ ಸಹ

**ದ್ವಿಚತ್ವಾರಿಂಶಕಾಶ್ವಿಪ್ರೀತಸ್ತ್ರಿಶೋಕಾಯ ಪುರಂದರಃ ॥**
**ಗಿರಿಂ ನಿಕೃತ್ಯ ವಜ್ರೇಣ ಗಾ ದದಾವಾಸುರೈರ್ಹೃತಾಃ ॥**

(ಬೃ. ದೇ. ೬-೪೧-೪೨)

ಈ ಋಷಿನಿರ್ಮಿತವಾದ ನಲವತ್ತೆರಡು ಋಕ್ಕುಗಳಿಂದ ಹೃಷ್ಟನಾದ ಇಂದ್ರನು ಅಸುರರಿಂದ ಅಪಹೃತಗಳಾದ ಗೋವು ಗಳನ್ನು ಹಿಂದಕ್ಕೆ ಬರಮಾಡಿಕೊಟ್ಟನೆಂದು ಹೇಳಿದೆ.

ವ್ಯಾಕರಣಪ್ರಕ್ರಿಯಾ

**ಕ್ಷೋದಸಾ**—ಕ್ಷುದಿರ್ ಸಂಪೇಷಣೇ. ಧಾತು. ಸರ್ವಧಾತು ನಿಬಂಧನವಾದ ಅಸುನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಕ್ಷೋದಸ್ ಶಬ್ದವಾಗುತ್ತದೆ. ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**— ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾಏಕವಚನಾಂತರೂಪ.

**ಉದ್ನಃ**—ಉದಕ ಶಬ್ದ. ಇದಕ್ಕೆ ತೃತೀಯಾ ಏಕವಚನ (ಟಾ) ಪರವಾದಾಗ **ಸುಪಾಂ ಸುಪೋ ಭವಂತಿ** ಎಂಬ ವಚನದಿಂದ ಅದಕ್ಕೆ ಶಸಾದೇಶ. **ಪದ್ದನ್ನೋಮಾಸ್**—(ಪಾ. ಸೂ. ೬-೧-೬೩) ಎಂಬುದರಿಂದ ಉದಕ ಶಬ್ದಕ್ಕೆ ಉದನ್ ಆದೇಶ. ಭಸಂಜ್ಞಾ ಇರುವುದರಿಂದ **ಅಲ್ಲೋಪೋಽನಃ**—(ಪಾ. ಸೂ. ೬-೪-೧೩೪) ಎಂಬುದರಿಂದ ಅನಿನ ಅಕಾರಕ್ಕೆ ಲೋಪ. **ಅನುದಾತ್ತಸ್ಯಚ ಯತ್ರೋದಾತ್ತಲೋಪಃ**—(ಪಾ. ಸೂ ೬-೧-೧೬೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪಿಪಿನ್ವಥುಃ**—ಪಿವಿ ಸೇಚನೇ. ಧಾತು. **ಇದಿತೋನುಮ್‌ಧಾತೋಃ**—(ಪಾ. ಸೂ. ೭-೧-೫೮) ಎಂಬುದರಿಂದ ಧಾತುವಿಗೆ ನುಮಾಗಮ. ಲಿಟ್‌ಮಧ್ಯಮಪುರುಷದ್ವಿವಚನದಲ್ಲಿ **ಪರಸ್ಮೈಪದಾನಾಂ**—(ಪಾ. ಸೂ. ೩-೪-೮೨) ಎಂಬುದರಿಂದ ಅಥುಸಾದೇಶ. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್‌ಶೇಷ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಅಕಾರ ಉದಾತ್ತ ನಾಗುತ್ತದೆ.

**ಅನಶ್ವಮ್**—ನ ವಿದ್ಯತೇ ಅಶ್ವಃ ಯಸ್ಮಿನ್ ಸಃ ಅನಶ್ವಃ. **ನಞ್‌ಸುಭ್ಯಾಮ್**—(ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಜಿಷೇ**—ಜಿ ಜಯೇ. ಧಾತು. ತುಮನರ್ಥ ತೋರುವಾಗ **ತುಮರ್ಥೇ ಸೇಸೇನಸೇ**—(ಪಾ. ಸೂ. ೩-೪-೯) ಎಂಬುದರಿಂದ ಕ್ಸೇ ಪ್ರತ್ಯಯ. ಕಿತ್ತಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ. **ಆದೇಶಪ್ರತ್ಯಯಯೋಃ**—(ಪಾ. ಸೂ. ೮-೩-೫೯) ಎಂಬುದರಿಂದ ಪ್ರತ್ಯಯಸಕಾರಕ್ಕೆ ಷತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಉದಾಜತ**—ಅಜ ಗತಿಕ್ಷೇಪಣಯೋಃ ಧಾತು. ಲಙ್ ಪ್ರಥಮಪುರುಷ ಏಕವಚನರೂಪ. ಯದ್ಯೋಗ ವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ. ॥ ೧೨ ॥

———:o:———

ಸಂಹಿತಾಪಾಠಃ

ಯಾಭಿಃ ಸೂರ್ಯಂ ಪರಿಯಾಥಃ ಪರಾವತಿ ಮಂಧಾತಾರಂ
ಕ್ಷೈತ್ರಪತ್ಯೇಷ್ವಾವತಂ ।
ಯಾಭಿರ್ವಿಪ್ರಂ ಪ್ರ ಭರದ್ವಾಜಮಾವತಂ ತಾಭಿರೂ ಷು ಊ-
ತಿಭಿರಶ್ವಿನಾ ಗತಂ ॥ ೧೩ ॥

। ಪದಪಾಠಃ ।

ಯಾಭಿಃ । ಸೂರ್ಯಂ । ಪರಿಽ ಯಾಥಃ । ಪರಾಽ ವತಿ । ಮಂಧಾತಾರಂ । ಕ್ಷೈ-
ತ್ರಽ ಪತ್ಯೇಷು । ಆವತಂ ।
ಯಾಭಿಃ । ವಿಪ್ರಂ । ಪ್ರ । ಭರತ್ ಽ ವಾಜಂ । ಆವತಂ । ತಾಭಿಃ । ಊಂ ಇತಿ ।
ಸು । ಊತಿ ಽ ಭಿಃ । ಅಶ್ವಿನಾ । ಆ । ಗತಂ ॥ ೧೩ ॥

ಸಾಯಣಭಾಷ್ಯಂ

ಹೇ ಅಶ್ವಿನೌ ಪರಾವತಿ ದೂರದೇಶೇ ಸ್ಥಿತಂ ಸೂರ್ಯಂ ತಮೋರೂಪೇಣ ಸ್ವರ್ಭಾನುನಾವೃತಮಾದಿತ್ಯಂ ತಸ್ಮಾತ್ತಮಸೋ ನೋಚಯಿತುಂ ಯಾಭಿರೂತಿಭಿಃ ಪರಿಯಾಥಃ ಯುವಾಂ ಪರಿತೋ ಗಚ್ಛಥಃ । ತಥಾ ಮಂಧಾತಾರಮೃಷಿಂ ಕ್ಷೈತ್ರಪತ್ಯೇಷು । ಕ್ಷೇತ್ರಾಣಾಂ ಪತಿರಧಿಪತಿಃ ಕ್ಷೇತ್ರಪತಿಃ । ತತ್ಸಂಬಂಧಿಷು ಕರ್ಮಸ್ವಾವತಂ ಅರಕ್ಷತಂ । ಅಪಿ ಚ ಯಾಭಿರೂತಿಭಿರ್ವಿಪ್ರಂ ಮೇಧಾವಿನಂ ಭರದ್ವಾಜಮೃಷಿಮನ್ನಪ್ರದಾನೇನ ಪ್ರಾವತಂ ಪ್ರಕರ್ಷೇಣಾರಕ್ಷತಂ । ತಾಭಿಃ ಸರ್ವಾಭಿರೂತಿಭಿಃ ಸಹ ರಕ್ಷಣಾರ್ಥಮಸ್ಮಾನಸ್ಮಾಗಚ್ಛತಂ ॥ ಕ್ಷೈತ್ರಪತ್ಯೇಷು । ಬ್ರಾಹ್ಮಣಾದೇರಾಕೃತಿಗಣತ್ವಾತ್ಕರ್ಮಣ್ಯರ್ಥೇ ಷ್ಯಞ್ ॥

ಪ್ರತಿಪದಾರ್ಥ

ಅಶ್ವಿನಾ—ಎಲೈ ಅಶ್ವಿನೀ ದೇವತೆಗಳೇ । ಪರಾವತಿ—ದೂರದೇಶದಲ್ಲಿ ಇರತಕ್ಕ । ಸೂರ್ಯಂ—(ತಮೋರೂಪನ ರಾಹುವಿನಿಂದ ಆವೃತನಾದ) ಸೂರ್ಯನನ್ನು । ಯಾಭಿಃ—ಯಾವ ರಕ್ಷಣೆಗಳಿಂದ । ಪರಿಯಾಥಃ-(ಆ ಗ್ರಹಣ

ದಿಂದ ಬಿಡಿಸಲು) ಸುತ್ತುವರಿದು ಹೋದಿರೋ (ಮತ್ತು) | **ಮಂಧಾತಾರಂ**—ಮಂಧಾತೃ ಋಷಿಯನ್ನು | **ಕ್ಷೈತ್ರಪತ್ಯೇಷು**—ತನ್ನ ಪ್ರಭುತ್ವದ ಕರ್ತವ್ಯ ನಿರ್ವಹಣೆಯಲ್ಲಿ | **ಆವತಂ**—(ಯಾವ ರಕ್ಷಣೆಗಳಿಂದ) ರಕ್ಷಿಸಿದಿರೋ, (ಅಲ್ಲದೆ) | **ಯಾಭಿಃ**—ಯಾವ ರಕ್ಷಣೆಗಳಿಂದ | **ವಿಪ್ರಂ**—ಮೇಧಾವಿಯಾದ | **ಭರದ್ವಾಜಂ**—ಭರದ್ವಾಜ ಋಷಿಯನ್ನು | **ಪ್ರ ಆವತಂ**—(ಅನ್ನಪ್ರದಾನದಿಂದ) ಚೆನ್ನಾಗಿ ರಕ್ಷಿಸಿದಿರೋ | **ತಾಭಿಃ ಊತಿಭಿಃ ಉ**—ಆ ಎಲ್ಲಾ ರಕ್ಷಣೆಗಳಿಂದಲೂ (ನಮ್ಮಲ್ಲಿಗೂ) | **ಸು ಆ ಗತಂ**—ಆದರದಿಂದ ಬನ್ನಿರಿ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ತಮೋರೂಪದ ರಾಹುವಿನಿಂದ ಆವೃತನಾದ ದೂರದೇಶದಲ್ಲಿರತಕ್ಕ ಸೂರ್ಯನನ್ನು ಯಾವ ರಕ್ಷಣೆಗಳಿಂದ ಗ್ರಹಣದಿಂದ ಬಿಡಿಸಲು ಸುತ್ತುವರಿದು ಹೋದಿರೋ, ಮತ್ತು ಮಾಂಧಾತೃ ಋಷಿಯನ್ನು ತನ್ನ ಪ್ರಭುತ್ವದ ಕರ್ತವ್ಯನಿರ್ವಹಣೆಗಳಲ್ಲಿ ಯಾವ ಸಹಾಯಗಳಿಂದ ರಕ್ಷಿಸಿದಿರೋ ಅಲ್ಲದೇ ಯಾವ ರಕ್ಷಣೆಗಳಿಂದ ಮೇಧಾವಿಯಾದ ಭರದ್ವಾಜ ಋಷಿಯನ್ನು ಅನ್ನಪ್ರದಾನದಿಂದ ಚೆನ್ನಾಗಿ ರಕ್ಷಿಸಿದಿರೋ ಆ ಎಲ್ಲಾ ರಕ್ಷಣೆಗಳಿಂದಲೂ ನಮ್ಮಲ್ಲಿಗೂ ಆದರದಿಂದ ಬನ್ನಿರಿ

## English Translation

With those aids by which you encompassed the sun, when afar off, (to extricate him from eclipse); by which you defended Mandhatri (in the discharge of) his sovereign functions, and by which you protected the sage Bharadwaja ; with them, Aswins, come willingly hither.

॥ ವಿಶೇಷವಿಷಯಗಳು ॥

**ಮಂಧಾತಾರಂ ಕ್ಷೈತ್ರಪತ್ಯೇಷ್ವಾವತಂ—ಮಂಧಾತಾರಂ ಋಷಿಂ | ಕ್ಷೇತ್ರಾಣಾಂ ಪತಿರಧಿಪತಿಃ ಕ್ಷೇತ್ರಪತಿಃ | ತತ್ಸಂಬಂಧಿಷು ಕರ್ಮಸು |** ಮಂಧಾತೃವೆಂಬ ಋಷಿಯನ್ನು ಭೂಪತಿಯು ಎಂದರೆ ರಾಜ್ಯರಕ್ಷಣೆಯ ಕರ್ತವ್ಯಗಳಲ್ಲಿ ಶತ್ರುಗಳ ಹಿಂಸೆಯಿಲ್ಲದಂತೆಮಾಡಿ ಅವನು ನಿಶ್ಚಿಂತೆಯಿಂದ ರಾಜ್ಯಪರಿಪಾಲನವನ್ನು ಮಾಡುವಂತೆ ಮಾಡಿದಿರಿ ಎಂಬ ಸಂದರ್ಭವನ್ನು ಸೂಚಿಸಿದೆ. ಇಲ್ಲಿ ಸ್ಕಂದಸ್ವಾಮಿಗಳು ಕಥೆಯನ್ನು ವಿವರಿಸುತ್ತಾ, **ಅತ್ರೇತಿಹಾಸಮಾಚಕ್ಷತೇ | ಮಂಧಾತುರ್ವಿಷಯಭೂಮಿಮನಂತರೋ ರಾಜಾ ಆಚಕ್ರಾಮ | ಸ ತಂ ಸ್ವಬಲೇನ ನಿಗ್ರಹೀತುಮಶಕ್ನುವನ್ ಅಶ್ವಿನೌ ತುಷ್ಟಾವ | ಆಗತ್ಯ ಚ ತಸ್ಯಾಶ್ವಿನೌ ಶತ್ರೂನ್ ನಿಗೃಹ್ಯ ವಿಷಯಂ ಪ್ರತ್ಯರ್ಪಯಾಂಚಕ್ರತುರಿತಿ |** ಮಾಂಧಾತೃವಿನ ರಾಜ್ಯವನ್ನು ನೆರೆಯ ರಾಜನು ಮುತ್ತಿದಾಗ ಅವನನ್ನು ತಡೆಯಲು ಶಕ್ತಿಯಿಲ್ಲದ ಮಂಧಾತೃವು ಅಶ್ವಿನೀ ದೇವತೆಗಳನ್ನು ಪ್ರಾರ್ಥಿಸಲು ಅವರು ಬಂದು ಇವನಿಗೆ ಸಹಾಯಮಾಡಿ ರಾಜ್ಯವನ್ನು ಪುನಃ ಕೊಡಿಸಿಕೊಟ್ಟರೆಂಬ ಕಥೆಯನ್ನು ಹೇಳಿದ್ದಾರೆ. ಮಂಧಾತೃವು ಯುವನಾಶ್ವನೆಂಬುವನ ಪುತ್ರನೆಂದೂ ಹತ್ತನೇ ಮಂಡಲದ ೧೩೪ನೇ ಸೂಕ್ತದ ದ್ರಷ್ಟೃವೆಂದೂ ಹೇಳಿದೆ. ಇದೇ ಇಲ್ಲದೇ ಇವನ ಶ್ರೇಷ್ಠವಾದ ಗುಣಗಳನ್ನೂ (ಅವುಗಳಿಂದ) ಇವನು ಪಡೆದಿರುವ ಪದವಿಯನ್ನೂ ಋಕ್ಸಂಹಿತೆಯ ಕೆಲವು ಋಕ್ಕುಗಳಲ್ಲಿ ಸ್ತುತಿಸಿದೆ. ಉದಾಹರಣೆಗೆ—

**ತಮಾಗನ್ಮ ತ್ರಿಪಸ್ತ್ಯಂ ಮಂಧಾತುರ್ದಸ್ಯುಹಂತಮಮಗ್ನಿಂ ಯಜ್ಞೇಷು ಪೂರ್ವ್ಯಂ ನಭಂತಾಮನ್ಯಕೇ ಸಮೇ ।**

(ಋ. ಸಂ. ೮-೩೯-೮)

**ಏಭಿರಿಂದ್ರಾಗ್ನಿಭ್ಯಾಂ ಪಿತೃವನ್ನವೀಯೋ ಮಂಧಾತೃವದಂಗಿರಸ್ವದವಾಚಿ ।**

(ಋ. ಸಂ. ೮-೪೦-೧೨)

**ವೇಷಿ ಹೋತ್ರಮುತ ಪೋತ್ರಂ ಜನಾನಾಂ ಮಂಧಾತಾಸಿ ದ್ರವಿಣೋದಾ ಋತಾವಾ ।**

(ಋ. ಸಂ. ೧೦-೨-೨)

ಎಂಬ ಋಕ್ಕುಗಳಿಂದ ಆವನು ಎಂತಹ ಪೂಜ್ಯಸ್ಥಾನವನ್ನು ಹೊಂದಿದ್ದನೆಂಬುದು ತಿಳಿಯುತ್ತದೆ.

**ಯಾಭಿಃ ಭರದ್ವಾಜಂ—ಭರದ್ವಾಜಋಷಿರ್ಧನಕಾಮೋಽಶ್ವಿನೌ ತುಷ್ಟಾವ । ತಸ್ಯ ಸ್ವರಥೇನಾನೀಯೌಶ್ವಿನೌ ಪ್ರಭೂತಂ ಧನಂ ದದತುರಿತಿ ।** ಧನವನ್ನು ಅಪೇಕ್ಷಿಸಿದ ಭರದ್ವಾಜನನ್ನು ಅಶ್ವಿನೀದೇವತೆಗಳು ತಮ್ಮ ರಥದಲ್ಲಿಯೇ ಕುಳ್ಳಿರಿಸಿಕೊಂಡು ಬಂದು ಅವನಿಗೆ ಪ್ರಭೂತವಾಗಿ ಧನವನ್ನು ಕೊಟ್ಟರೆಂದು ಕಥೆಯಿದೆ. ಭರದ್ವಾಜನು ಋಕ್ಸಂಹಿತೆಯಲ್ಲಿ ಆರನೆಯ ಮಂಡಲದ ದ್ರಷ್ಟೃವೆಂದು ಪ್ರಸಿದ್ಧನಾಗಿದ್ದಾನೆ.

**ಯೋಽಂಗಿರೇಭ್ಯ ಋಷಿರ್ಜಜ್ಞೇ ತಸ್ಯ ಪುತ್ರೋ ಬೃಹಸ್ಪತಿಃ ।**
**ಬೃಹಸ್ಪತೇರ್ಭರದ್ವಾಜೋ ವಿದಥೀತಿ ಯ ಉಚ್ಯತೇ ॥**
**ಮರುತ್ಸ್ವಾಸೀದ್ಗುರುರ್ಯಶ್ಚ ಸ ಏವಾಂಗಿರಸೋ ನಪಾತ್ ।**
**ಸಪುತ್ರಸ್ಯ ತು ತಸ್ಯೈತನ್ಮಂಡಲಂ ಷಷ್ಠಮುಚ್ಯತೇ ॥**

(ಬೃ. ದೇ. ೫-೧೦೨,೧೦೩)

ವಿದಥಿಯೆಂದು ಪ್ರಸಿದ್ಧನಾದ ಭರದ್ವಾಜನು ಅಂಗಿರಸ್ಸಿನ ವಂಶದಲ್ಲಿ ಉತ್ಪನ್ನನಾದ ಬೃಹಸ್ಪತಿಯ ಪುತ್ರನು. ಮರುತ್ತುಗಳಲ್ಲಿ ಗುರುವಾಗಿದ್ದನು. ಋಕ್ಸಂಹಿತೆಯ ಆರನೆಯ ಮಂಡಲವು ಅಂಗಿರಸ್ಸಿನ ಪೌತ್ರನಾದ ಭರದ್ವಾಜನ ಮತ್ತು ಅವನ ಪುತ್ರರ ಕೃತಿಗಳು ಎಂದು ಬೃಹದ್ದೇವತೆಯಲ್ಲಿ ಹೇಳಿದೆ. ಭರದ್ವಾಜನು ದಿವೋದಾಸನ ಪುರೋಹಿತನೆಂದು ಪಂಚವಿಂಶಬ್ರಾಹ್ಮಣದಲ್ಲಿಯೂ (೧೫-೩-೭) ಮತ್ತು ಅದೇ ವಂಶದ ಪ್ರತರ್ದನನೆಂಬವನಿಗೆ ಇವನು ರಾಜ್ಯವನ್ನು ಕೊಟ್ಟುದಾಗಿ ಕಾಠಕಸಂಹಿತೆಯಲ್ಲಿಯೂ (೨೧-೧೦) ಹೇಳಿದೆ.

### ವ್ಯಾಕರಣಪ್ರಕ್ರಿಯಾ

**ಸೂರ್ಯಮ್**—ಷೃ ಗತೌ. ಧಾತು. **ರಾಜಸೂಯಸೂರ್ಯ**—(ಪಾ. ೩-೧-೧೧೪) ಎಂಬುದರಿಂದ ಕ್ಯಬಂತವಾಗಿ ನಿಪಾತಿತವಾಗಿದೆ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ಪರಿಯಾಥಃ**—ಯಾ ಪ್ರಾಪಣೇ. ಧಾತು. ಲಟ್ ಮಧ್ಯಮಪುರುಷದ್ವಿವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ **ತಿಙಿ ಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಪರಿ) ನಿಘಾತಸ್ವರ ಬರುತ್ತದೆ.

**ಕ್ಷೈತ್ರಪತ್ಯೇಷು**—ಬ್ರಾಹ್ಮಣಾದಿಯು ಆಕೃತಿಗಣವಾದುದರಿಂದ ಅದರಲ್ಲಿ ಇದು ಸೇರಿದೆಯೆಂದು **ಗುಣವಚನಬ್ರಾಹ್ಮಣಾದಿಭ್ಯಃ ಷ್ಯಞ್**—(ಪಾ. ಸೂ. ೫-೧-೧೨೪) ಎಂಬುದರಿಂದ ಕರ್ಮಣ್ಯರ್ಥದಲ್ಲಿ ಷ್ಯಞ್ ಪ್ರತ್ಯಯ.

(ಕ್ಷೇತ್ರ ಪತಿ ಸಂಬಂಧವಾದ ಕಾರ್ಯ) ಎಂಬರ್ಥದಿಂದ **ತದ್ಧಿತೇಷ್ವಚಾಮಾದೇಃ**—(ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ. **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೧೩ ॥

ಸಂಹಿತಾಪಾಠಃ

ಯಾಭಿರ್ಮಹಾಮತಿಥಿಗ್ವಂ ಕಶೋಜುವಂ ದಿವೋದಾಸಂ ಶಂ-
ಬರಹತ್ಯ ಆವತಂ।
ಯಾಭಿಃ ಪೂರ್ಭಿದ್ಯೇ ತ್ರಸದಸ್ಯುಮಾವತಂ ತಾಭಿರೂ ಷು ಊ-
ತಿಭಿರಶ್ವಿನಾ ಗತಂ ॥ ೧೪ ॥

ಪದಪಾಠಃ

ಯಾಭಿಃ । ಮಹಾಂ । ಅತಿಥಿಽಗ್ವಂ । ಕಶಃಽಜುವಂ । ದಿವಃಽದಾಸಂ । ಶಂಬ-
ರಽಹತ್ಯೇ । ಆವತಂ ।
ಯಾಭಿಃ । ಪೂಃಽಭಿದ್ಯೇ । ತ್ರಸದಸ್ಯುಂ । ಆವತಂ । ತಾಭಿಃ । ಊಂ ಇತಿ । ಸು ।
ಊತಿಽಭಿಃ । ಅಶ್ವಿನಾ । ಆ । ಗತಂ ॥ ೧೪ ॥

ಸಾಯಣಭಾಷ್ಯಂ

ಹೇ ಅಶ್ವಿನೌ ಮಹಾಂ ಮಹಾಂತಮತಿಥಿಗ್ವಮತಿಥಿಭಿರ್ಗಂತವ್ಯಂ ಕಶೋಜುವಮಸುರಭೀತ್ಯೋದಕಂ ಪ್ರವೇಷ್ಟುಂ ಗಂತಾರಂ ಏವಂಭೂತಂ ದಿವೋದಾಸಮೇತತ್ಸಂಜ್ಞಕಂ ರಾಜರ್ಷಿಂ ಶಂಬರಹತ್ಯೇ । ಶಂಬ ಆಯುಧಂ । ತದ್ಯುಕ್ತಃ ಶಂಬರೋಽಸುರಃ । ತಸ್ಯ ಹನನೇ ವಿಷಯಭೂತೇ ಸತಿ ಯಾಭಿರೂತಿಭಿ-

ರಾವತಂ ಅರಕ್ಷತಂ । ಅಪಿ ಚ ಯಾಭಿರೂತಿಭಿಃ ಪೂರ್ಭಿದ್ಯೇ । ಪುರಾಣಿ ನಗರಾಣಿ ಭಿದ್ಯಂತೇಽಸ್ಮಿನ್ನಿತಿ ಪೂರ್ಭಿದ್ಯಃ ಸಂಗ್ರಾಮಃ । ತಸ್ಮಿನ್ ತ್ರಸದಸ್ಯುಮೇತತ್ಸಂಜ್ಞಕಮೃಷಿಂ ಪುರುಕುತ್ಸಪುತ್ರಮಾವತಂ ಅರಕ್ಷತಂ । ತಾಭಿರಿತ್ಯಾದಿಪೂರ್ವವತ್ ॥ ಮಹಾಂ । ಮಹಾಂತಮಿತ್ಯಸ್ಯ ಛಾಂದಸೋ ವರ್ಣಲೋಪಃ। ಕಶೋಜುವಂ । ಕಶ ಇತ್ಯುದಕನಾಮ । ಕಶ ಗತಿಶಾತನಯೋಃ । ಅಸುನ್ । ಕಶಾಂಸ್ಯುದಕಾನಿ ಜವತೀತಿ ಕಶೋಜೂಃ । ಜು ಇತಿ ಸೌತ್ರೋ ಧಾತುರ್ಗತ್ಯರ್ಥಃ । ಕ್ವಿಬ್ವಚೀತ್ಯಾದಿನಾ । ಉ. ೨-೫೭ । ಕ್ವಿಬ್ದೀರ್ಘೌ । ದಿವೋದಾಸಂ। ದಿವಶ್ಚ ದಾಸೇ ಷಷ್ಠ್ಯಾ ಅಲುಗ್ವಕ್ತವ್ಯಃ । ಕಾ. ೬-೩-೨೧-೫ । ಇತ್ಯಲುಕ್ । ದಿವೋ-ದಾಸಾದೀನಾಂ ಛಂದಸ್ಯುಪಸಂಖ್ಯಾನಂ । ಪಾ. ೬-೨-೯೧-೧ । ಇತಿ ಪೂರ್ವಪದಾದ್ಯುದಾತ್ತತ್ವಂ । ಶಂಬರ-ಹತ್ಯೇ । ಹನಸ್ತ ಚೇತಿ ಹಂತೇರ್ಭಾವೇ ಕ್ಯಪ್ । ತತ್ಸನ್ನಿಯೋಗೇನ ತಕಾರಾಂತಾದೇಶಶ್ಚ। ಕೃದುತ್ತರಪದ-ಪ್ರಕೃತಿಸ್ವರತ್ವಂ ॥

ಪ್ರತಿಪದಾರ್ಥ

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಮಹಾಂ**—ಪ್ರಭಾವಶಾಲಿಯಾದವನೂ । **ಅತಿಥಿಗ್ವಂ**—(ತನ್ನ ಸತ್ಕಾರದಿಂದ) ಅತಿಥಿಗಳನ್ನು ಆಕರ್ಷಿಸುವವನೂ । **ಕಶೋಜುವಂ** - (ಅಸುರಭೀತಿಯಿಂದ) ನೀರನ್ನು ಪ್ರವೇಶಿಸಲು ಹೋದವನೂ ಆದ । **ದಿವೋದಾಸಂ**—ದಿವೋದಾಸನೆಂಬ ರಾಜರ್ಷಿಯನ್ನು । **ಶಂಬರಹತ್ಯೇ**— ಶಂಬರಾಸುರನ ವಧದ ಕಾಲದಲ್ಲಿ । **ಯಾಭಿಃ**—ಯಾವ ರಕ್ಷಣೆಗಳಿಂದ । **ಆವತಂ**—ರಕ್ಷಿಸಿದಿರೋ, (ಮತ್ತು) । **ಯಾಭಿಃ**—ಯಾವ ರಕ್ಷಣೆಗಳಿಂದ । **ಪೂರ್ಭಿದ್ಯೇ**— ಯುದ್ಧಕಾಲದಲ್ಲಿ । **ತ್ರಸದಸ್ಯುಂ**— ತ್ರಸದಸ್ಯುವೆಂಬ ಋಷಿಯನ್ನು । **ಆವತಂ**— ರಕ್ಷಿಸಿದಿರೋ । **ತಾಭಿಃ ಊತಿಭಿಃ ಉ**— ಆ ಎಲ್ಲಾ ರಕ್ಷಣೆಗಳೊಡನೆಯೂ (ನಮ್ಮಲ್ಲಿಗೂ) । **ಸು ಆ ಗತಂ**—ಅಭಿಮಾನದಿಂದ ಬನ್ನಿರಿ ॥

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಪ್ರಭಾವಶಾಲಿಯಾದವನೂ, ತನ್ನ ಸತ್ಕಾರದಿಂದ ಅತಿಥಿಗಳನ್ನು ಆಕರ್ಷಿಸುವವನೂ, ಅಸುರಭೀತಿಯಿಂದ ನೀರನ್ನು ಪ್ರವೇಶಿಸಲು ಹೋದವನೂ ಆದ ದಿವೋದಾಸನೆಂಬ ರಾಜರ್ಷಿಯನ್ನು ಶಂಬರಾಸುರನವಧದ ಕಾಲದಲ್ಲಿ ಯಾವ ರಕ್ಷಣೆಗಳಿಂದ ರಕ್ಷಿಸಿದಿರೋ ಮತ್ತು ಯಾವ ರಕ್ಷಣೆಗಳಿಂದ ಯುದ್ಧಕಾಲದಲ್ಲಿ ತ್ರಸದಸ್ಯುವೆಂಬ ಋಷಿಯನ್ನು ರಕ್ಷಿಸಿದಿರೋ ಆ ಎಲ್ಲಾ ರಕ್ಷಣೆಗಳೊಡನೆಯೂ ಸಹ ನಮ್ಮಲ್ಲಿಗೂ ಅಭಿಮಾನದಿಂದ ಬನ್ನಿರಿ.

English Translation

With those aids by which you defended the mighty and hospitable Divodasa, (when, having undertaken) the death of Sambara, he hid himself in the water, (through fear of the Asuras) ; by which you protected Trasadasyu in war ; with them, Aswins, come willingly hither.

ವಿಶೇಷವಿಷಯಗಳು

ಅತಿಥಿಗ್ವಂ ದಿವೋದಾಸಂ—ಅತ್ರೇತಿಹಾಸಮಾಚಕ್ಷತೇ । ದಿವೋದಾಸೋ ನಾಮ ರಾಜಾ ಶಂಬರ-ನಾಮ್ನಾ ಅಸುರೇಣ ಯುಯುತ್ಸಮಾನಃ ಅಶ್ವಿನೌ ಸ್ತುತ್ವಾ ಸಹಾಯೌ ಆಜುಹಾವ । ತಸ್ಯಾಗತ್ಯಾಶ್ವಿನೌ

ಸಹಾಯೌ ಬಭೂವತುರಿತಿ । ಶಂಬರನೆಂಬ ಅಸುರನೊಡನೆ ಯುದ್ಧಮಾಡುವ ಸಂದರ್ಭದಲ್ಲಿ ದಿವೋದಾಸನೆಂಬ ರಾಜನು ಅಶ್ವಿನೀದೇವತೆಗಳ ಸಹಾಯವನ್ನಪೇಕ್ಷಿಸಿದಾಗ ಅವರು ಇವನಿಗೆ ಸಹಾಯಮಾಡಿದುದನ್ನು ಇಲ್ಲಿ ಹೇಳಿದೆ

ಇಯಮದದಾದ್ರಭಸಮೃಣಚ್ಯುತಂ ದಿವೋದಾಸಂ ವಧ್ರ್ಯಶ್ವಾಯ ದಾಶುಷೇ ।
(ಋ. ಸಂ. ೬-೬೧-೧)

ಎಂಬ ಋಕ್ಕಿನಿಂದ ದಿವೋದಾಸನು ವಧ್ರ್ಯಶ್ವನ ಪುತ್ರನೆಂದು ಗೊತ್ತಾಗುತ್ತದೆ. ಭರತವಂಶಕ್ಕೆ ಸೇರಿದ ತೃತ್ಸು ಸಂತತಿಯ ಸುದಾಸನ ಪಿತಾಮಹನೆಂದೂ ಹೇಳಬಹುದು. **ತುರ್ವಶ, ಯದು** ಇತ್ಯಾದಿ ರಾಜರು ಇವನ ಶತ್ರುಗಳೆಂದು ತಿಳಿದರೂ ಗುಡ್ಡನಾಡಿನ ಜನರಿಗೆಲ್ಲಾ ಒಡೆಯನಾದ **ಶಂಬರನು** ಇವನ ಶತ್ರುಗಳಲ್ಲೆಲ್ಲಾ ಪ್ರಬಲನೆಂದೂ ಅವನನ್ನು ದಿವೋದಾಸನು ಅನೇಕ ಸಲ ಸೋಲಿಸಿದನೆಂದೂ ಹೇಳಿದೆ. ಈ ಕಾರ್ಯದಲ್ಲಿ ಇಂದ್ರಾದಿಗಳೂ ಇವನಿಗೆ ಸಹಾಯ ಮಾಡಿದುದನ್ನು

ಭಿನತ್ಪುರೋ ನವತಿಮಿಂದ್ರ ಪೂರವೇ ದಿವೋದಾಸಾಯ ಮಹಿ ದಾಶುಷೇ ನೃತೋ ವಜ್ರೇಣ ದಾಶುಷೇ ನೃತೋ ।
ಅತಿಥಿಗ್ವಾಯ ಶಂಬರಂ ಗಿರೇರುಗ್ರೋ ಅವಾಭರತ್ ।
(ಋ. ಸಂ. ೧-೧೩೦-೭)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿಸಿದೆ, ಆದರೆ
ತ್ವಮಸ್ಮೈ ಕುತ್ಸಮತಿಥಿಗ್ವಮಾಯುಂ ಮಹೇ ರಾಜ್ಞೇ ಯೂನೇ ಅರಂಧನಾಯಃ ।
(ಋ. ಸಂ. ೧-೫೩-೧೦)

ಇತ್ಯಾದ್ಯನೇಕ ಋಕ್ಕುಗಳಿಂದ ಇಂದ್ರನು ಇವನನ್ನು ಇತರ ರಾಜರಿಗಾಗಿ ಸೋಲಿಸಿದನೆಂದೂ ತಿಳಿಯುತ್ತದೆ. ಇವನು ಮುಖ್ಯವಾಗಿ ಅಗ್ನಿಯ ಉಪಾಸಕನು. ಇವನ ಉಪಾಸನೆಯ ಮಹತ್ತ್ವದಿಂದ ಅಗ್ನಿಯೂ ಕೂಡ ಒಂದು ಋಕ್ಕಿನಲ್ಲಿ **ದೈವೋದಾಸನೆಂಬ** ಹೆಸರಿನಿಂದಲೇ ಕರೆಯಲ್ಪಟ್ಟಿದ್ದಾನೆ.

ಪ್ರ ದೈವೋದಾಸೋ ಅಗ್ನಿರ್ದೇವಾँ ಅಚ್ಛಾ ನ ಮಜ್ಮನಾ ।
(ಋ. ಸಂ. ೮-೧೦೩-೨)

ಎಂದು ಇವನು ಶ್ರದ್ಧಾಪೂರ್ವಕವಾದ ಆರಾಧನೆಯನ್ನು ಸೂಚಿಸಲು ಇವನ ನಾಮಧೇಯದಿಂದಲೇ ಅಗ್ನಿಯು ಸ್ತುತನಾಗಿದ್ದಾನೆ. ಇವನ ವಿಷಯದಲ್ಲಿ ಕೆಲವು ಆಂಗ್ಲವಿಮರ್ಶನಕಾರರು ಹೇಳಿರುವ ಅಭಿಪ್ರಾಯಗಳನ್ನು Macdonell ಎಂಬವರು ಕೆಳಗೆ ಕಂಡಂತೆ ಚರ್ಚಿಸಿದ್ದಾರೆ—

From one passage (R. V. VI 61-1), where Divodasa is said to have fought against the Pani's, the Paravatas and Brisaya, Hillebrandt has inferred that he was engaged in conflict[3] with tribes of Arachoria and interpreting the name as the heavenly Dasa conjectures that he was himself a Dasa. This conclusion is not probable, for the Saraswathi on which the battle in question took place and which can hardly be the Haraqnaiti of Arachosia, would naturally designate the later Saraswathi, while the Paravatas are mentioned in the

Pancha-Vimsa Brahmana (IX. 4-11) as in the east, about the Yamuna. Bergaigne's opinion that Divodasa and Athithigwa were different people cannct be supported in view of the complete parallelism in the acts of the two persons.

ಅತಿಥಿಗ್ವನೂ ದಿವೋದಾಸನೂ ಬೇರೆಬೇರೆ ವ್ಯಕ್ತಿಗಳೆಂದು ಹೇಳುವ ಅಭಿಪ್ರಾಯಗಳೂ ತಪ್ಪೆಂದೂ ಸಹ ಈ ವಿಮರ್ಶೆಯಲ್ಲಿ ಹೇಳಿದೆ.

( Vedic Index of Names and Subjects Mac-donell & Keith, Vol. I P. 393-4)

**ಅತಿಥಿಗ್ವ**—ಎಂಬ ಪದವನ್ನು **ದಿವೋದಾಸನಿಗೆ** ವಿಶೇಷಣವನ್ನಾಗಿ ಮಾಡಿ ಭಾಷ್ಯಕಾರರಿಬ್ಬರೂ ವಿವರಿಸಿದ್ದಾರೆ. ಅವರೆ ಸಾಯಣಭಾಷ್ಯದಲ್ಲಿ, **ಅತಿಥಿಭಿಃ ಗಂತವ್ಯಂ** ಅತಿಥಿಗಳೇ ಇವನಲ್ಲಿಗೆ ಹೋಗುವವರೆಂದೂ; ಸ್ಕಂದರ ಭಾಷ್ಯದಲ್ಲಿ **ಅತಿಥೀನ್ ಪ್ರತಿ ಪರಿಚಾರಕತಯಾ ಗಚ್ಛತಿ ಇತ್ಯತಿಥಿಗ್ವಃ ತಂ |** ಅತಿಥಿಗಳನ್ನು ಉಪಚರಿಸಲು ತಾನೇ ಹೋಗತಕ್ಕವನು ಎಂದೂ ವ್ಯುತ್ಪತ್ತಿಯನ್ನು ಹೇಳಿದೆ. ಎರಡು ವಿವರಣೆಗಳ ತಾತ್ಪರ್ಯವೂ ಒಂದೇ ಆಗುತ್ತದೆ.

**ಕಶೋಜುವಂ— ಅಸುರಭೀತ್ಯಾ ಉದಕಂ ಪ್ರವೇಷ್ಟುಂ ಗಂತಾರಂ|** ಅಸುರರ ಭಯದಿಂದ ಉದಕವನ್ನು ಪ್ರವೇಶಿಸಲು ಹೋದ ಎಂದು ಸಾಯಣರೂ **ಕಶೇತಿ ವಾಙ್ನಾಮ| ಜವತಿರ್ಗತ್ಯರ್ಥಃ | ಸ್ತುತಿಲಕ್ಷಣಯಾ ವಾಚಾ ಯುವಾಂ ಪ್ರತಿ ಗಂತಾರಂ | ಯುವಯೋರೇವ ಸ್ತೋತಾರಮಿತ್ಯರ್ಥಃ | ಕಶಾಶಬ್ದವು ವಾಙ್** ನಾಮಗಳಲ್ಲಿ ಪಠಿತವಾಗಿರುವುದರಿಂದಲೂ, **ಜವತಿ**ಶಬ್ದವು ಗತ್ಯರ್ಥಕವಾಗಿರುವುದರಿಂದಲೂ, ಸ್ತುತಿರೂಪವಾದ ವಾಕ್ಕಿನಿಂದ ಅಶ್ವಿನೀದೇವತೆಗಳನ್ನು ಸಮೀಪಿಸುವವನು ಎಂದರೆ ಅವರನ್ನು ಸ್ತುತಿಸುವವನು ಎಂದರ್ಥವೆಂದು ಸ್ಕಂದರೂ ವಿವರಿಸಿದ್ದಾರೆ.

**ಶಂಬರಹತ್ಯೇ—ಶಂಬರನಾಮ್ನಃ ಅಸುರಸ್ಯ ವಧೇ |** ಶಂಬರನೆಂಬ ಅಸುರನ ವಧಕಾಲದಲ್ಲಿ; **ಶಂಬರನು** ಇಂದ್ರನಿಗೆ ಪ್ರಬಲವಾದ ಶತ್ರುವೆಂದು ಹಿಂದೆಲ್ಲಾ ಅನೇಕ ಕಡೆಗಳಲ್ಲಿ ತಿಳಿಸಿದೆ. **ಶುಷ್ಣ, ಪಿಪ್ರು, ವರ್ಚಿನ್** ಇವರ ಜೊತೆಯಲ್ಲಿ ಇವರ ಹೆಸರು ಬರುವುದು ವಾಡಿಕೆಯಾಗಿದೆ. ದಿವೋದಾಸಾದಿ ಭಕ್ತರ ಸಹಾಯಕನಾಗಿಯೂ, ಅಥವಾ ಅನೇಕವೇಳೆ ತಾನೇ ಸಾಕ್ಷಾತ್ತಾಗಿಯೂ ಇಂದ್ರನು ಈ ಅಸುರರನ್ನು ಸೋಲಿಸಿದುದು ಪ್ರಸಿದ್ಧವಾಗಿದೆ.

**ತ್ರಸದಸ್ಯುಮಾವತಂ— ಅತ್ರೇತಿಹಾಸಮಾಚಕ್ಷತೇ | ತ್ರಸದಸ್ಯೋಃ ರಾಜ್ಞಃ ಪುರಮುಪರುಧ್ಯ ಬಲಾತ್ ಶತ್ರವೋ ಗೃಹೀತುಮಾರೇಭಿರೇ | ಸೋಽಶ್ವಿನೌ ತುಷ್ಟಾವ | ತಸ್ಯಾಗತ್ಯಾಶ್ವಿನೌ ಶತ್ರೂನ್** ಬಭಂಜತುರಿತಿ | ತ್ರಸದಸ್ಯುವೆಂಬ ರಾಜನ ಪಟ್ಟಣವನ್ನು ಶತ್ರುಗಳು ಮುತ್ತಿದಾಗ ಅವನು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿ ಅವರ ಸಹಾಯವನ್ನು ಪಡೆದನೆಂಬ ಕಥೆ ಇದೆ.

ಉತ ತ್ಯೇ ಮಾ ಪೌರುಕುತ್ಸ್ಯಸ್ಯ ಸೂರೇಸ್ತ್ರಸದಸ್ಯೋರ್ಹಿರಣಿನೋ ರರಾಣಾಃ |

(ಋ. ಸಂ. ೫-೩೩-೮)

ಇತ್ಯಾದ್ಯನೇಕಋಕ್ಕುಗಳಲ್ಲಿ ತ್ರಸದಸ್ಯುವು ಪುರುಕುತ್ಸನ ಪುತ್ರನೆಂದು ಹೇಳಿದೆ.

ಅಸ್ಮಾಕಮತ್ರ ಪಿತರಸ್ತ ಆಸನ್ತ್ಸಪ್ತ ಋಷಯೋ ದೌರ್ಗಹೇ ಬಧ್ಯಮಾನೇ |
ತ ಆಯಜಂತ ತ್ರಸದಸ್ಯುಮಸ್ಯಾ ಇಂದ್ರಂ ನ ವೃತ್ರತುರಮರ್ಧದೇವಂ |

(ಋ. ಸಂ. ೪-೪೨-೮)

ಪುರುಕುತ್ಸನು ಶತ್ರುಗಳಿಂದ ಬಂಧಿತನಾಗಿ ಅತ್ಯಂತ ಆಪತ್ಕಾಲದಲ್ಲಿದ್ದಾಗ (ಅಥವಾ ಮೃತಿಯನ್ನು ಹೊಂದಿದಾಗ) ಪುರುಕುತ್ಸಾನಿಯಲ್ಲಿ ಇವನು ಜನಿಸಿದನೆಂದು ಇವನ ಜನನಕಾಲದ ಸ್ಥಿತಿಯನ್ನೆಲ್ಲಾ ಆ ಕಾಲದಲ್ಲಿ ಒದಗಿದ ದೈವಸಹಾಯವನ್ನೂ ವರ್ಣಿಸಿದೆ. ಪುರುಕುತ್ಸನು **ದುರ್ಗಹವಂಶದಲ್ಲಿ** ಹುಟ್ಟಿದವನೆಂದು ಹಿಂದೆಯೇ ತಿಳಿಸಿದೆ. (ಋ. ಸಂ. ೧-೧೧೨-೭) ಈ ವಂಶಾವಳಿಯನ್ನು ಗಿರಿಕ್ಷಿತ್ (ಋ. ಸಂ. ೪-೪೨-೮) ದುರ್ಗಹ, ಪುರುಕುತ್ಸ, ತ್ರಸದಸ್ಯು ಎಂಬ ಕ್ರಮದಲ್ಲಿ ಹೇಳಬಹುದು. ತ್ರಸದಸ್ಯುವು ಉತ್ಸಾಹಪೂರಿತನೂ ಶಕ್ತಿಯುತನೂ ಆದ ರಾಜನಾಗಿದ್ದನೆಂದು ತಿಳಿಯುತ್ತದೆ. ಈತನು ಋ. ಸಂ. ೪-೪೨ ನೇ ಸೂಕ್ತದ ದ್ರಷ್ಟೃವೆಂದೂ ಯಜ್ಞಯಾಗಾದಿಗಳನ್ನು ನೆರವೇರಿಸಿ ದೇಶದ ಸಂಪತ್ತಿಗೂ ತನ್ನ ಪ್ರಜೆಗಳ ಸುಖಕ್ಕೂ ಕಾರಣನಾದನೆಂದು ಅನೇಕ ಕಡೆ ಸ್ತುತಿಸಿದೆ.

### ವ್ಯಾಕರಣಪ್ರಕ್ರಿಯಾ

**ಮಹಾಮ್**—ಮಹಾಂತಮ್ ಎಂದು ಮಹತ್‌ಶಬ್ದಕ್ಕೆ ದ್ವಿತೀಯಾಏಕವಚನದಲ್ಲಿ ರೂಪವಾದಾಗ ಛಾಂದಸವಾಗಿ ತಕಾರಲೋಪ ಬರುತ್ತದೆ.

**ಕಶೋಜುವಮ್**—ಕಶಃ ಎಂಬುದು ನೀರಿನ ಹೆಸರು. ಕಶ-ಗತಿಶಾಸನಯೋಃ ಧಾತು. ಇದಕ್ಕೆ ಔಣಾದಿಕವಾದ ಅಸುನ್ ಪ್ರತ್ಯಯ. ಕಶಾಂಸಿ ಉದಕಾನಿ ಜವತಿ ಇತಿ ಕಶೋಜೂಃ. ಜು ಎಂಬುದು ಸೂತ್ರ ನಿರ್ದಿಷ್ಟವಾದ ಧಾತು ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. **ಕ್ವಿಬ್ವಚಿಪ್ರಚ್ಛಾ**—(ಉ. ಸೂ. ೨-೫೭) ಎಂಬುದರಿಂದ ಕ್ವಿಪ್. ತತ್ಸನ್ನಿಯೋಗದಿಂದ ಧಾತುವಿಗೆ ದೀರ್ಘ. **ಗತಿಕಾರಕೋಪಪದಾತ್‌ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಅಮ್ ಪರವಾದಾಗ **ಅಚಿಶ್ನುಧಾತು**—ಸೂತ್ರದಿಂದ ಉವಙಾದೇಶ.

**ದಿವೋದಾಸಮ್—ದಿವಶ್ಚ ದಾಸೇ ಷಷ್ಠ್ಯಾ ಅಲುಗ್ವಕ್ತವ್ಯಃ**—(ಕಾ. ೬-೩-೨೧-೪) ಎಂಬ ವಚನದಿಂದ ಷಷ್ಠಿಗೆ ಸಮಾಸದಲ್ಲಿ ದಾಸಶಬ್ದ ಪರದಲ್ಲಿರುವುದರಿಂದ ಅಲುಕ್. **ದಿವೋದಾಸಾದೀನಾಂ ಛಂದಸ್ಯುಪಸಂಖ್ಯಾನಮ್**—(ಪಾ. ಸೂ. ೬-೨-೯೧-೧) ಎಂಬ ವಚನದಿಂದ ಪೂರ್ವಪದಾದ್ಯುದಾತ್ತಸ್ವರ ಬರುತ್ತದೆ

**ಶಂಬರಹತ್ಯೇ**—ಹನ ಹಿಂಸಾಗತ್ಯೋಃ ಧಾತು. **ಹನಸ್ತ ಚ**—(ಪಾ. ಸೂ. ೩-೧-೧೦೮) ಎಂಬುದರಿಂದ ಕ್ಯಪ್ ಪ್ರತ್ಯಯ. ತತ್ಸನ್ನಿಯೋಗದಿಂದ ಧಾತುವಿನ ನಕಾರಕ್ಕೆ ತಕಾರಾಂತಾದೇಶ. ಕಾರಕಪೂರ್ವಪದವಾಗಿರುವುದರಿಂದ **ಗತಿಕಾರಕೋಪಪದಾತ್ ಕೃತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಸಪ್ತಮೀಏಕವಚನಾಂತರೂಪ.

**ಪೂರ್ಭಿದ್ಯೇ**—ಪುರಾಣಿ ನಗರಾಣಿ ಭಿದ್ಯಂತೇ ಅಸ್ಮಿನ್ ಇತಿ ಪೂರ್ಭಿದ್ಯಮ್. (ಯುದ್ಧ) ಭಿದಿರ್ ವಿದಾರಣೇ. ಧಾತು. ಕ್ಯಪ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ || ೧೪ ||



ಸಂಹಿತಾಪಾಠಃ

ಯಾಭಿರ್ವಮ್ರಂ ವಿಪಿಪಾನಮುಪಸ್ತುತಂ ಕಲಿಂ ಯಾಭಿರ್ವಿತ್ತಜಾನಿಂ ದುವಸ್ಯಥಃ ।
ಯಾಭಿರ್ವ್ಯಶ್ವಮುತ ಪೃಥಿಮಾವತಂ ತಾಭಿರೂ ಷು ಊತಿಭಿರಶ್ವಿನಾ ಗತಂ ॥ ೧೫ ॥

ಪದಪಾಠಃ

ಯಾಭಿಃ । ವಮ್ರಂ । ವಿಽಪಿಪಾನಂ । ಉಪಽಸ್ತುತಂ । ಕಲಿಂ । ಯಾಭಿಃ । ವಿತ್ತಽಜಾನಿಂ । ದುವಸ್ಯಥಃ ।
ಯಾಭಿಃ । ವಿಽಅಶ್ವಂ । ಉತ । ಪೃಥಿಂ । ಆವತಂ । ತಾಭಿಃ । ಊಂ ಇತಿ । ಸು । ಊತಿಽಭಿಃ । ಅಶ್ವಿನಾ । ಆ । ಗತಂ ॥ ೧೫ ॥

ಸಾಯಣಭಾಷ್ಯಂ

ಹೇ ಅಶ್ವಿನೌ ವಮ್ರಂ ವಿಖನಸಃ ಪುತ್ರಮೇತತ್ಸಂಜ್ಞಮೃಷಿಂ ವಿಪಿಪಾನಂ ವಿಶೇಷೇಣ ಪಾರ್ಥಿವಂ ರಸಂ ಪಿಬಂತಂ ಯಾಭಿರೂತಿಭಿರರಕ್ಷತಂ । ಕೀದೃಶಂ । ಉಪಸ್ತುತಂ ಸಮೀಪಸ್ಥೈಃ ಸಮ್ಯಕ್ ಸ್ತುತಮಿತಿ ಸ್ತೂಯಮಾನಂ । ತಥಾ ವಿತ್ತಜಾನಿಂ ಲಬ್ಧಭಾರ್ಯಂ ಕಲಿಮೇತತ್ಸಂಜ್ಞಮೃಷಿಂ ಯಾಭಿರೂತಿಭಿರ್ದುವಸ್ಯಥಃ ರಕ್ಷಥಃ । ಉತಾಪಿ ಚ ವ್ಯಶ್ವಂ ವಿಗತಾಶ್ವಂ ಪೃಥಿಮೇತತ್ಸಂಜ್ಞಂ ವೈನಂ ರಾಜರ್ಷಿಂ ಯಾಭಿರೂತಿಭಿರಾವತಂ ಅರಕ್ಷತಂ । ಅನ್ಯತ್ಪೂರ್ವವತ್ ॥ ವಿಪಿಪಾನಂ । ಪಾ ಪಾನೇ । ತಾಚ್ಛೀಲಿಕಶ್ಚಾನಶ್ । ಬಹುಲಂ ಛಂದಸೀತಿ ಶಪಃ ಶ್ಲುಃ । ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ಉಪಸ್ತುತಂ । ಸ್ತೌತೇಃ ಕರ್ಮಣಿ ನಿಷ್ಠಾ । ಪ್ರವೃದ್ಧಾದಿತ್ವಾದುತ್ತರಪದಾಂತೋದಾತ್ತತ್ವಂ । ಪಾ. ೬-೨-೧೪೭ । ವಿತ್ತಜಾನಿಂ । ವಿತ್ತಾ ಲಬ್ಧಾ ಜಾಯಾ ಯೇನ ಸ ತಥೋಕ್ತಃ । ಜಾಯಾಯಾ ನಿಙ್ । ಪಾ. ೫-೪-೧೩೪ । ಇತಿ ಸಮಾಸಾಂತೋ ನಿಙಾದೇಶಃ । ಲೋಪೋ ವ್ಯೋರ್ವಲೀತಿ ವಲಿ ಲೋಪಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ವ್ಯಶ್ವಂ । ವಿಗತೋಽಶ್ವೋ ಯಸ್ಮಾತ್ಸ ತಥೋಕ್ತಃ । ಬಹುವ್ರೀಹಿಸ್ವರೇಣ ಪೂರ್ವಪದಸ್ಯೋದಾತ್ತತ್ವೇ ಉದಾತ್ತಸ್ವರಿತಯೋರ್ಯಣ ಇತಿ ಪರಸ್ಯಾನುದಾತ್ತಸ್ಯ ಸ್ವರಿತತ್ವಂ ॥

ಪ್ರತಿಪದಾರ್ಥ

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಉಪಸ್ತುತಂ—ಪಕ್ಕದಲ್ಲಿದ್ದವರಿಂದೆಲ್ಲಾ ಹೊಗಳಲ್ಪಟ್ಟವನೂ । ವಿಪಿಪಾನಂ—(ನೆಲದಮೇಲಿನ ಮಂಜು ನೀರನ್ನು) ಕುಡಿಯುತ್ತಿದ್ದವನೂ ಆದ । ವಮ್ರಂ—ವಮ್ರನೆಂಬ ಋಷಿಯನ್ನು । ಯಾಭಿಃ—ಯಾವ ರಕ್ಷಣೆಗಳಿಂದ ರಕ್ಷಿಸಿದಿರೋ, (ಹಾಗೆಯೇ) । ವಿತ್ತಜಾನಿಂ—ಪತ್ನಿಯನ್ನು ಪಡೆದ । ಕಲಿಂ—ಕಲಿಯೆಂಬ ಋಷಿಯನ್ನೂ । ಯಾಭಿಃ—ಯಾವ ರಕ್ಷಣೆಗಳಿಂದ । ದುವಸ್ಯಥಃ—ಕಾಪಾಡಿದಿರೋ । ಉತ—ಅದೂ ಅಲ್ಲದೇ । ವ್ಯಶ್ವಂ—ಕುದುರೆಯನ್ನು ಕಳೆದುಕೊಂಡ । ಪೃಥಿಂ—ಪೃಥಿಯೆಂಬ ಋಷಿಯನ್ನು । ಯಾಭಿಃ—ಯಾವ ಸಹಾಯಗಳಿಂದ । ಆವತಂ—ರಕ್ಷಿಸಿದಿರೋ । ತಾಭಿಃ ಊತಿಭಿಃ ಉ—ಆ ಎಲ್ಲಾ ರಕ್ಷಣೆಗಳೊಡನೆಯೂ ಕೂಡಿಕೊಂಡು (ನಮ್ಮಲ್ಲಿಗೂ) । ಸು ಆ ಗತಂ—ಆದರದಿಂದ ದಯಮಾಡಿರಿ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಪಕ್ಕದಲ್ಲಿದ್ದವರಿಂದೆಲ್ಲಾ ಹೊಗಳಲ್ಪಟ್ಟವನೂ ನೆಲದಮೇಲಿನ ಮಂಜು ನೀರನ್ನೂ ಕುಡಿಯುತ್ತಿದ್ದವನೂ ಆದ ವಮ್ರನೆಂಬ ಋಷಿಯನ್ನು ಯಾವ ರಕ್ಷಣೆಗಳಿಂದ ಕಾಪಾಡಿದಿರೋ, ಹಾಗೆಯೇ ಪತ್ನಿಯನ್ನು ಪಡೆದ ಕಲಿಯೆಂಬ ಋಷಿಯನ್ನು ಯಾವ ರಕ್ಷಣೆಗಳಿಂದ ಕಾಪಾಡಿದಿರೋ, ಅಲ್ಲದೇ, ಕುದುರೆಯನ್ನು ಕಳೆದುಕೊಂಡ ಪೃಥಿಯೆಂಬ ಋಷಿಯನ್ನು ಯಾವ ಸಹಾಯಗಳಿಂದ ರಕ್ಷಿಸಿದಿರೋ, ಆ ಎಲ್ಲಾ ರಕ್ಷಣೆಗಳೊಡನೆಯೂ ಸಹ ಕೂಡಿಕೊಂಡು ನಮ್ಮಲ್ಲಿಗೂ ಬನ್ನಿರಿ.

English Tranlation

With those aids by which you preserved Vamra, praised by all around him, when drinking (the dews of the earth); by which you protected Kali when he had taken a wife, and Prithi, when he had lost his horse ; with them, Aswins, come willingly hither.

। ವಿಶೇಷವಿಷಯಗಳು ॥

ಯಾಭಿಃ ವಮ್ರಂ—ವಮ್ರಋಷಿರ್ಗ್ರೀಷ್ಮೇ ತಪಸ್ಯನ್ ಅತ್ಯಂತತೃಷಿತೋ ಬಭೂವ । ಸ ಉದಕಾರ್ಥೀ ಅಶ್ವಿನೌ ತುಷ್ಟಾವ । ತಸ್ಮೈ ಆಗತ್ಯಾಶ್ವಿನಾವನಭ್ರೇ ನಭಸಿ ವೃಷ್ಟಿಂ ಚಕ್ರತುರಿತಿ । ವಮ್ರನೆಂಬ ಋಷಿಯು ಬೇಸಿಗೆಯಲ್ಲಿ ತಪಸ್ಸನ್ನು ಮಾಡುತ್ತಿರುವಾಗ ಬಹಳ ಬಾಯಾರಿದವನಾಗಿ ಉದಕಾರ್ಥವಾಗಿ ಅಶ್ವಿನೀದೇವತೆಗಳನ್ನು ಸ್ತುತಿಸಿದನು. ಆಗ ಅಶ್ವಿನೀದೇವತೆಗಳು ಅಂತರಿಕ್ಷದಲ್ಲಿ ಮೇಘವಿಲ್ಲದಿದ್ದರೂ ಸಹ ಮಳೆಯನ್ನು ಸುರಿಸಿ ಸಹಾಯಮಾಡಿದರೆಂಬ ಕಥೆಯಿದೆ. ಅದನ್ನು ಇಲ್ಲಿ ಹೇಳಿದೆ.

ವಮ್ರನೆಂಬ ಋಷಿಯು ೧೦ನೇ ಮಂಡಲದ ೯೯ನೇ ಸೂಕ್ತದ ದ್ರಷ್ಟೃವೆಂದು ಪ್ರಸಿದ್ಧನಾಗಿದ್ದಾನೆ. 'ಕಂ ನಃ' ಇತಿ ದ್ವಾದಶರ್ಚಂ ನವಮಂ ಸೂಕ್ತಂ ವೈಖಾನಸಸ್ಯ ವಮ್ರಸ್ಯಾರ್ಷಂ ತ್ರೈಷ್ಟುಭಮೈಂದ್ರಂ । (ಸಾ. ಭಾ. ೬೧೬೩. ೧೦-೯೯). ಇದೇ ಸೂಕ್ತದಲ್ಲಿ ಸೂಕ್ತದ್ರಷ್ಟೃವಾದ ಋಷಿಯು ತನ್ನ ಹೆಸರನ್ನೇ ಕೆಲವೆಡೆಗಳಲ್ಲಿ ಪ್ರಥಮಪುರುಷದಲ್ಲಿ ಹೇಳಿಕೊಂಡಿದ್ದಾನೆ.

**ವಮ್ರಸ್ಯ ಮನ್ಯೇ ಮಿಥುನಾ ವಿವವ್ರೀ ಅನ್ನಮಭೀತ್ಯಾರೋದಯನ್ಮುಷಾಯನ್ ।**
(ಋ. ಸಂ. ೧೦-೯೯-೫)

**ಏವಾ ಮಹೋ ಅಸುರ ವಕ್ಷಥಾಯ ವಮ್ರಕಃ ಪಡ್ಭಿರುಪ ಸರ್ಪದಿಂದ್ರಂ ।**
(ಋ. ಸಂ. ೧೦-೯೯-೧೨)

ಎಂಬ ಋಕ್ಕುಗಳಲ್ಲಿ ತಾನು ಇಂದ್ರಭಕ್ತನೆಂದೂ ಇಂದ್ರಸ್ತುತಿಯಲ್ಲಿ ಸಮರ್ಥನೆಂದೂ ಹೇಳಿಕೊಂಡಿದ್ದಾನೆ. (ಋ. ಸಂ. ೧-೫೧-೯ನೇ ಋಕ್ಕಿನಲ್ಲಿ) **ವಮ್ರ** ಶಬ್ದಕ್ಕೆ ವ್ಯುತ್ಪತ್ತಿಯನ್ನು ತೋರಿಸುವಾಗ ಸಾಯಣರು **ಸ್ತುತ್ಯುದ್ಗಿರಣಶೀಲಃ ಏತತ್ಸಂಜ್ಞಕಃ ಋಷಿಃ ।** ತಡೆಯಿಲ್ಲದೇ ಸ್ತುತಿಯನ್ನು ಪಠಿಸುವವನು ಎಂದರ್ಥಮಾಡಿದ್ದಾರೆ.

**ಕಲಿಂ—ಕಲಿರ್ನಾಮ ಋಷಿರ್ಜರಯಾ ತರೀತಸ್ತರುಣೀಂ ಭಾರ್ಯಾಂ ಲೇಭೇ । ಸ ತತ್ಪ್ರೀತ್ಯೈ ಪುನರ್ಯೌವನಮಾತ್ಮನ ಇಚ್ಛನ್ ಅಶ್ವಿನೌ ತುಷ್ಟಾವ । ತಮಾಗತ್ಯಾಶ್ವಿನೌ ಪುನರ್ಯೌವನಂ ಚಕ್ರತುರಿತಿ ।** ಕಲಿಯೆಂಬ ಋಷಿಯು ವೃದ್ಧನಾದಮೇಲೆ ತರುಣಿಯಾದ ಕನ್ಯೆಯನ್ನು ಮದುವೆಯಾದನು. ಅವಳನ್ನು ಒಲಿಸಿಕೊಳ್ಳುವುದಕ್ಕಾಗಿ ಪುನಃ ಯೌವನವನ್ನು ಪಡೆಯಬೇಕೆಂದಪೇಕ್ಷಿಸಿ ಅಶ್ವಿನೀದೇವತೆಗಳನ್ನು ಸ್ತುತಿಸಿದಾಗ ಅವರು ಇವನಿಗೆ ಪುನಃ ಯೌವನವು ಬರುವಂತೆ ಮಾಡಿದರು ಎಂಬ ಕಥೆಯಿದೆ. ಇದೇ ವಿಷಯವನ್ನು—

**ಯುವಂ ವಿಪ್ರಸ್ಯ ಜರಣಾಮುಪೇಯುಷಃ ಪುನಃ ಕಲೇರಕೃಣುತಂ ಯುವದ್ವಯಃ ।**
(ಋ. ಸಂ. ೧೦-೩೯-೮)

ಎಂಬ ಋಕ್ಕಿನಲ್ಲಿ ಬ್ರಹ್ಮವಾದಿನಿಯಾದ **ಘೋಷೆಯು** ಉದಹರಿಸಿದ್ದಾಳೆ.

**ಸೋಮ ಇದ್ವಃ ಸುತೋ ಅಸ್ತು ಕಲಯೋ ಮಾ ಬಿಭೀತನ ।**
(ಋ. ಸಂ. ೮-೬೬-೧೫)

ಎಂಬ ಋಕ್ಕಿನಲ್ಲಿ ಇವನ ಸಂತತಿಯಲ್ಲಿ ಹುಟ್ಟಿದವರನ್ನೂ ಮತ್ತು ಇತರ ಜ್ಞಾತಿಗಳನ್ನೂ **ಕಲಯಃ** ಎಂದು ಕರೆದಿದೆ.

**ಉಪಸ್ತುತಂ—ಉಪಸ್ತೋತಾರಂ ।** ಸ್ತುತಿಮಾಡತಕ್ಕ ಎಂದು ಸ್ಕಂದಸ್ವಾಮಿಗಳೂ, **ಸಮೀಪಸ್ಥೈಃ ಸಮ್ಯಕ್ ಸ್ತುತಮಿತಿ ಸ್ತೂಯಮಾನಂ** ಪಕ್ಕದಲ್ಲಿದ್ದವರಿಂದೆಲ್ಲಾ ಸ್ತುತನಾದ ಎಂದು ಸಾಯಣರೂ ಅರ್ಥ ಮಾಡಿದ್ದಾರೆ.

ಪೃಥಿಂ—**ಅತ್ರಾಪೀತಿಹಾಸಮಾಚಕ್ಷತೇ । ಋಷಯಃ ಕ್ವಚಿತ್ಸಮೇತಾಃ ಕೋಽಸ್ಮಾಸು ಅಶ್ವಿನೌ ಸಮ್ಯಗ್ಯಜತ ಇತಿ ಜಿಜ್ಞಾಸಮಾನಾ ಊಚುಃ । ಸರ್ವೇಽಶ್ವಿನೌ ಸ್ವಯಜ್ಞೇಷು ಸಹಾಹ್ವಯಾಮಃ । ತವ್ಯಸ್ಯ ನಃ ಆಹೂತಾವಶ್ವಿನೌ ಸ್ವರೂಪೇಣಾಗಮಿಷ್ಯತಃ ಸ ಸಮ್ಯಗ್ಯಜತ ಇತಿ । ತತ್ರ ಅಶ್ವಿನಾವಾಹೂತೌ ಕಕ್ಷೀವತೋ ವ್ಯಶ್ವಸ್ಯ ದೀರ್ಘತಮಸಃ ಪೃಥೇಶ್ಚ ಯಜ್ಞೇ ಸ್ವರೂಪೇಣಾಜಗ್ಮತುರಿತಿ ।** ಒಂದುಸಲ ಋಷಿಗಳೆಲ್ಲರೂ ಸೇರಿ ಸಭೆಮಾಡಿದಾಗ ನಮ್ಮಲ್ಲೆಲ್ಲಾ ಯಾರು ಉತ್ತಮವಾಗಿ ಯಜ್ಞಮಾಡುವವರು ಎಂದು ಜಿಜ್ಞಾಸೆ ಬಂದಾಗ ಅವರು ಒಟ್ಟಿಗೆ ಸೇರಿ ಎಲ್ಲರೂ ಯಜ್ಞಮಾಡಬೇಕೆಂದೂ, ಆಗ ಅಶ್ವಿನೀದೇವತೆಗಳು ಯಾರ ಯಜ್ಞಕ್ಕೆ ಸಾಕ್ಷಾತ್ತಾಗಿ ಬರುವರೋ ಅವರದೇ ಉತ್ತಮವಾದ ಕ್ರಿಯೆ ಎಂದು ಹೇಳಿ ಎಲ್ಲರೂ ಯಜ್ಞಮಾಡಿದಾಗ **ಕಕ್ಷೀವಾನ್ ವ್ಯಶ್ವ, ದೀರ್ಘತಮಸ್ ಮತ್ತು ಪೃಥಿ ಇವರ ಯಜ್ಞಕ್ಕೆ ಮಾತ್ರ** ಅಶ್ವಿನೀದೇವತೆಗಳು ಬಂದರು ಎಂದು ಪೃಥಿಯ ಯಜ್ಞಕ್ರಿಯೆಯ ವೈಶಿಷ್ಟ್ಯವನ್ನು ಹೇಳಿದೆ. ಇದೇ ವಿಷಯವನ್ನು

ಯದ್ವಾಂ ಕಕ್ಷೀವಾँ ಉತ ಯದ್ವ್ಯಶ್ವ ಋಷಿರ್ಯದ್ವಾಂ ದೀರ್ಘತಮಾ ಜುಹಾವ ।
ಪೃಥೀ ಯದ್ವಾಂ ವೈನ್ಯಃ ಸಾದನೇಷ್ವೇವೇದತೋ ಅಶ್ವಿನಾ ಚೇತಯೇಥಾಂ ।
(ಋ. ಸಂ. ೮-೯-೧೦)

ಎಂಬ ಋಕ್ಕಿನಲ್ಲಿ **ಶಶಕರ್ಣ**ನೆಂಬ ಮಂತ್ರದ್ರಷ್ಟೃವೂ ಹೇಳಿದ್ದಾನೆ.

**ವ್ಯಶ್ವಂ**—ಈ ಪದವು ಅಂಕಿತನಾಮವೆಂದೂ ವ್ಯಶ್ವನೆಂಬ ಋಷಿಯೆಂದು ಸ್ಕಂದಸ್ವಾಮಿಗಳೂ, ವಿಗತಾಶ್ವಂ ಕುದುರೆಯನ್ನು ಕಳೆದುಕೊಂಡ ಎಂದು ಸಾಯಣರೂ ವಿವರಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ನಿಪಿಪಾನಮ್**—ಪಾ ಪಾನೇ. ಧಾತು. **ತಾಚ್ಛೀಲ್ಯವಯೋವಚನೇಷು ಚಾನಶ್**—(ಪಾ. ಸೂ. ೩-೨-೧೨೯) ಎಂಬುದರಿಂದ ಚಾನಶ್ ಪ್ರತ್ಯಯ. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ**—ಸೂತ್ರದಿಂದ ಧಾತುವಿಗೆ ದ್ವಿತ್ವ. **ಹ್ರಸ್ವಃ**—ಎಂಬುದರಿಂದ ಅಭ್ಯಾಸಕ್ಕೆ ಹ್ರಸ್ವ ಬಂದಾಗ **ಬಹುಲಂ ಛಂದಸಿ**—(ಪಾ. ಸೂ. ೭-೪-೭೮) ಎಂಬುದರಿಂದ ಅದಕ್ಕೆ ಇತ್ವ. **ಚಿತಃ**—(ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಗತಿಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಉಪಸ್ತುತಮ್**—ಷ್ಟುಞ್ ಸ್ತುತೌ. ಧಾತು. ಕರ್ಮಣಿಯಲ್ಲಿ **ನಿಷ್ಠಾ**—(ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ ಪ್ರವೃದ್ಧಾದಿಯಲ್ಲಿ ಸೇರಿರುವುದರಿಂದ (ಪಾ. ಸೂ. ೬-೨-೧೪೭) ಸಮಾಸದಲ್ಲಿ ಉತ್ತರ ಪದಾಂತೋದಾತ್ತಸ್ವರ ಬರುತ್ತದೆ.

**ವಿತ್ತಜಾನಿಮ್**—ವಿತ್ತಾ ಲಬ್ಧಾ ಜಾಯಾ ಯೇನ ಸಃ ವಿತ್ತಜಾನಿಃ **ಜಾಯಾಯಾ ನಿಙ್**—(ಪಾ. ಸೂ ೫-೪-೧೩೪) ಎಂಬುದರಿಂದ ಸಮಾಸಾಂತವಾಗಿ ನಿಙಾದೇಶ. **ಲೋಪೋವ್ಯೋರ್ವಲಿ**—(ಪಾ. ಸೂ. ೬-೧-೬೬. ಎಂಬುದರಿಂದ ನಿಙ್ ನಿಮಿತ್ತವಾಗಿ ಯಕಾರಲೋಪ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ವ್ಯಶ್ವಮ್**—ವಿಗತೋ ಅಶ್ವೋ ಯಸ್ಮಾತ್ ಸಃ ವ್ಯಶ್ವಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬಂದಾಗ ಅದಕ್ಕೆ ಯಣಾದೇಶ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ ಸ್ವರಿತೋನುದಾತ್ತಸ್ಯ**—(ಪಾ. ಸೂ. ೮-೨-೪) ಎಂಬುದರಿಂದ ಪರದ ಅನುದಾತ್ತಕ್ಕೆ ಸ್ವರಿತಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ. ॥ ೧೫ ॥

———— :o: ————

ಸಂಹಿತಾಪಾಠಃ

ಯಾಭಿರ್ನರಾ ಶಯವೇ ಯಾಭಿರತ್ರ್ಯಯೇ ಯಾಭಿಃ ಪುರಾ ಮನವೇ
ಗಾತುಮೀಷಥುಃ ।
ಯಾಭಿಃ ಶಾರೀರಾಜತಂ ಸ್ಯೂಮರಶ್ಮಯೇ ತಾಭಿರೂ ಷು ಊ-
ತಿಭಿರಶ್ವಿನಾ ಗತಂ ॥ ೧೬ ॥

ಪದಪಾಠಃ

ಯಾಭಿಃ । ನರಾ । ಶಯವೇ । ಯಾಭಿಃ । ಅತ್ರ್ಯಯೇ । ಯಾಭಿಃ । ಪುರಾ । ಮನ-
ವೇ । ಗಾತುಂ । ಈಷಥುಃ ।
ಯಾಭಿಃ । ಶಾರೀಃ । ಆಜತಂ । ಸ್ಯೂಮಽರಶ್ಮಯೇ । ತಾಭಿಃ । ಊಂ ಇತಿ। ಸು।
ಊತಿಭಿ । ಅಶ್ವಿನಾ । ಆ । ಗತಂ ॥ ೧೬ ॥

ಸಾಯಣಭಾಷ್ಯಂ

ಹೇ ನರಾ ನೇತಾರಾವಶ್ವಿನೌ ಪುರಾ ಪೂರ್ವಸ್ಮಿನ್ಕಾಲೇ ಶಯವ ಏತತ್ಸಂಜ್ಞಕಾಯ ಋಷಯೇ ಗಾತುಂ ದುಃಖಾನ್ನಿರ್ಗಮನಲಕ್ಷಣಂ ಮಾರ್ಗಂ ಯಾಭಿರೂತಿಭಿರೀಷಥುಃ ಯುವಾಂ ವಾಂಛಿತವಂತೌ । ಕೃತವಂತಾವಿತ್ಯರ್ಥಃ । ಕಿಂ ತತ್ । ಸಾಮರ್ಥ್ಯಾತ್ ಶಯವೇ ಚಿನ್ವಾಸತ್ಯಾ ಶಚೀಭಿಃ । ಋ. ೧-೧೧೬-೨೨ । ಇತ್ಯಸ್ಯಾಮೃಚಿ ಪ್ರತಿಪಾದಿತಂ । ತಥಾತ್ರಯೇ ಋಷಯೇ ಶತದ್ವಾರೇ ಯಂತ್ರಗೃಹೇಽಸುರೈಃ ಪೀಡ್ಯಮಾನಾಯ ಸಂತಾಪಕಾರಿಣೋಽಗ್ನೇಃ ಶೀತೇನೋದಕೇನ ಶೀತಕರಣಲಕ್ಷಣಂ ಗಾತುಂ ದುಃಖನಿರ್ಗಮನಹೇತುಭೂತಂ ಮಾರ್ಗಂ ಯಾಭಿರೂತಿಭಿರ್ಯುವಾಮಿಷ್ಟವಂತೌ । ಏತಚ್ಚ ಹಿಮೇನಾಗ್ನಿಂ ಘ್ರಂಸಮವಾರಯೇಥಾಂ । ಋ. ೧-೧೧೬-೮ । ಇತ್ಯಾದೌ ಪ್ರಸಿದ್ಧಂ । ತಥಾ ಮನವ ಏತನ್ನಾಮ್ನೇ ರಾಜರ್ಷಯೇ ಯಾಭಿರೂತಿಭಿರ್ಯವಾದಿಧಾನ್ಯವಾಪನಾದಿರೂಪಂ ಗಾತುಂ ದಾರಿದ್ರ್ಯನಿರ್ಗಮನಹೇತುಂ ಮಾರ್ಗಂ ಯುವಾಂ ಕೃತವಂತೌ । ತಥಾ ಚ ಮಂತ್ರಾಂತರಂ । ಯವಂ ವೃಕೇಣಾಶ್ವಿನಾ ವಪಂತಾ । ಋ. ೧-೧೧೭-೨೧ ಇತಿ । ಅಪಿ ಚ ಸ್ಯೂಮರಶ್ಮಯೇ ಸ್ಯೂತಾಃ ಸಂಬದ್ಧಾ ರಶ್ಮಿರ್ದೀಪ್ತಿರ್ಯಸ್ಯ ತಸ್ಮೈ ಏತತ್ಸಂಜ್ಞಕಾಯ

ಸ್ಯೂಮರಶ್ಮಯೇ ಯಾಭಿರೂತಿಭಿಃ ಶಾರೀಃ । ಶರೋ ನಾಮ ವೇಣುವಿಶೇಷಃ । ತದ್ವಿಕಾರಭೂತಾ ಇಷೂರಾಜತಂ ಶತ್ರೂನ್ಪ್ರತಿ ಪ್ರೇರಯತಂ । ತಾಭಿರೂತಿಭಿರಿತ್ಯಾದಿ ಪೂರ್ವವತ್ ॥ ನರಾ । ನೄ ನಯೇ ಋದೋರಪ್ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಶಯವೇ । ಶೀಙ್ ಸ್ವಪ್ನೇ । ಭೃಮೃಶೀತೃ ಚರೀತ್ಯಾದಿನಾ । ಉ. ೧-೭ । ಉಪ್ರತ್ಯಯಃ । ಈಷಥುಃ । ಇಷು ಇಚ್ಛಾಯಾಂ । ಲಿಟ್ಯಭ್ಯಾಸಸ್ಯ ಸವರ್ಣ ಇತಿ ಸಂಪ್ರಸಾರಣಾತ್ । ಪಾ. ೬-೧-೧೭ । ಅಭ್ಯಾಸಸ್ಯೋಪಜಾದೇಶಾಭಾವೇ ಸವರ್ಣದೀರ್ಘಃ । ಶಾರೀಃ । ವಿಕಾರಾರ್ಥೇ ಶರಶಬ್ದಾದನುದಾತ್ತಾದೇಶ್ಚೇತ್ಯಞ್ । ಟಿಡ್ಢಾಣಞಿತಿ ಙೀಪ್ । ಸ್ಯೂಮರಶ್ಮಯೇ । ಷಿವು ತಂತುಸಂತಾನೇ । ಸಿವೇರೌಣಾದಿಕೋ ಮನ್ಪ್ರತ್ಯಯಃ । ಛ್ವೋಃ ಶೂಡಿತ್ಯೂಠ್ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥

ಪ್ರತಿಪದಾರ್ಥ

ನರಾ—ನೇತೃಗಳಾದ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ, । ಪುರಾ—ಹಿಂದೆ । ಶಯವೇ—ಶಯುವೆಂಬ ಋಷಿಗೆ । ಗಾತುಂ—(ದುಃಖದಿಂದ) ತಪ್ಪಿಸಿಕೊಂಡುಹೋಗುವ ಮಾರ್ಗವನ್ನು । ಯಾಭಿಃ—ಯಾವ ಉತ್ಸಾಹಗಳಿಂದ । ಈಷಥುಃ—ಮಾಡಿಕೊಟ್ಟಿರೋ, (ಹಾಗೆಯೇ) । ಅತ್ರಯೇ—(ಯಂತ್ರಗೃಹದಲ್ಲಿ ಅಸುರರು ಹಾಕಿದ ಅಗ್ನಿಯಿಂದ ತಪ್ತನಾಗುತ್ತಿದ್ದ) ಅತ್ರಿಋಷಿಗೆ । ಯಾಭಿಃ—ಯಾವ ನೆರವುಗಳೊಡನೆ (ಶೀತೋದಕವನ್ನು ಸುರಿದು ಅಗ್ನಿತಾಪದಿಂದ ಬಿಡುಗಡೆಯನ್ನು ಮಾಡಿದಿರೋ ಮತ್ತು) । ಮನವೇ—ಮನುವೆಂಬ ರಾಜರ್ಷಿಗೆ । ಯಾಭಿಃ—ಯಾವ ನಿಮ್ಮ ರಕ್ಷಣೆಗಳೊಡನೆ (ಧಾನ್ಯಗಳನ್ನು ದಾನಮಾಡಿ ದಾರಿದ್ರ್ಯದುಃಖವನ್ನು ತಪ್ಪಿಸಿದಿರೋ (ಅಲ್ಲದೇ) । ಸ್ಯೂಮರಶ್ಮಯೇ—ಸ್ಯೂಮರಶ್ಮಿಯೆಂಬ ಋಷಿಗೋಸ್ಕರ । ಯಾಭಿಃ—ಯಾವ ನಿಮ್ಮ ಬೆಂಬಲಗಳೊಡನೆ । ಶಾರೀಃ—ಬಾಣಗಳನ್ನು । ಆಜತಂ—(ಶತ್ರುಗಳ ಮೇಲೆ) ಎಸೆದಿರೋ । ತಾಭಿಃ ಊತಿಭಿಃ ಉ—ಆ ಎಲ್ಲಾ ಬೆಂಬಲಗಳೊಡನೆಯೂ ಕೂಡಿಗೊಂಡು ನಮ್ಮಲ್ಲಿಗೂ । ಸು ಆ ಗತಂ—ಅಭಿಮಾನದಿಂದ ಬನ್ನಿರಿ. ।

॥ ಭಾವಾರ್ಥ ॥

ನೇತೃಗಳಾದ ಎಲೈ ಅಶ್ವಿನೀದೇವತೆಗಳೇ, ಹಿಂದೆ ಯಾವ ನಿಮ್ಮ ಉತ್ಸಾಹಗಳಿಂದ ಶಯುವೆಂಬ ಋಷಿಗೆ ದುಃಖದಿಂದ ತಪ್ಪಿಸಿಕೊಂಡುಹೋಗುವ ಮಾರ್ಗವನ್ನು ಮಾಡಿಕೊಟ್ಟಿರೋ, ಹಾಗೆಯೇ, ಯಂತ್ರಗೃಹದಲ್ಲಿ ಅಸುರರು ಹಾಕಿದ ಅಗ್ನಿಯಿಂದ ತಪ್ತನಾಗುತ್ತಿದ್ದ ಅತ್ರಿಋಷಿಗೆ ಯಾವ ನಿಮ್ಮ ಸಹಾಯಗಳೊಡನೆ ಶೀತೋದಕವನ್ನು ಸುರಿದು ಅಗ್ನಿತಾಪದಿಂದ ಬಿಡುಗಡೆಯನ್ನುಂಟುಮಾಡಿದಿರೋ, ಮತ್ತು ಯಾವ ನಿಮ್ಮ ರಕ್ಷಣೆಗಳೊಡನೆ ಧಾನ್ಯಗಳನ್ನು ದಾನಮಾಡಿ ಮನುವೆಂಬ ರಾಜರ್ಷಿಗೆ ದಾರಿದ್ರ್ಯದುಃಖವನ್ನು ತಪ್ಪಿಸಿದಿರೋ, ಅಲ್ಲದೇ ಸ್ಯೂಮರಶ್ಮಿಯೆಂಬ ಋಷಿಗೋಸ್ಕರವಾಗಿ ಯಾವ ನಿಮ್ಮ ಬೆಂಬಲಗಳೊಡನೆ ಶತ್ರುವಿನ ಮೇಲೆ ಬಾಣಗಳನ್ನು ಎಸೆದಿರೋ ಆ ನಿಮ್ಮ ಎಲ್ಲಾ ಬೆಂಬಲಗಳೊಡನೆಯೂ ಕೂಡಿಕೊಂಡು ನಮ್ಮಲ್ಲಿಗೂ ಬನ್ನಿರಿ.

English Translation

With those aids, leaders (of sacrifices), which you afforded to Sayu, to Atri, and formerly to Manu, anxious (to show them) the way (to escape from evil); with those by which you shot arrows (upon the foes) of Syumarasmi; with them, Aswins, come willingly hither.

ಶಯವೇ ಅತ್ರಯೇ—ಬಂಜೆಯಾದ ಗೋವನ್ನು ಕರುಹಾಕುವಂತೆಯೂ ಕ್ಷೀರಸಂಪತ್ತನ್ನು ಹೊಂದುವಂತೆಯೂ ಮಾಡಿ ಶಯುವಿಗೆ ಸಹಾಯಮಾಡಿದುದನ್ನು ಇದೇ ಸೂಕ್ತದ ೩ನೇ ಋಕ್ಕಿನಲ್ಲಿಯೂ, ಅಸುರರಿಂದ ಅಗ್ನಿಕುಂಡಕ್ಕೆ ಹಾಕಲ್ಪಟ್ಟ ಅತ್ರಿಗೆ ಸಹಾಯಮಾಡಿದುದನ್ನು ೨ನೇ ಋಕ್ಕಿನಲ್ಲಿಯೂ ಹಿಂದೆ ಹೇಳಿರುವ ವಿಷಯವು ಪುನರುಕ್ತವಾಗಿದೆ.

ಮನವೇ— **ಅತ್ರೇತಿಹಾಸಮಾಚಕ್ಷತೇ । ಮನುರ್ನಾಮ ರಾಜಾ । ಸ ಮಹತ್ಯಾಮನಾವೃಷ್ಟ್ಯಾ ವ್ಯತೀತಾಯಾಂ ಅನ್ನಕ್ಷಯಾತ್ ಪ್ರಜಾಸು ಕರ್ಷಿತುಮಶಕ್ನುವಂತೀಷು ಅನ್ನಕ್ಷಯೇಣ ಚ ಬಾಧ್ಯಮಾನಾಸು ಅನ್ನಕಾಮೋಽಶ್ವಿನೌ ತುಷ್ಟಾವ । ತಸ್ಮೈ ಆಗತ್ಯಾಶ್ವಿನೌ ಹಲೇನ ಕರ್ಷಯಿತ್ವಾ ಯವಾನ್ನಂ ದದತುರಿತಿ ।** ಮನುವೆಂಬ ರಾಜನು ಆಳುತ್ತಿದ್ದಾಗ ಒಂದು ಸಲ ಅನಾವೃಷ್ಟಿಯಿಂದ ದಾರಿದ್ರ್ಯವುಂಟಾಗಿ ಅನ್ನಕ್ಷಾಮವು ಒದಗಿ ಜನಗಳೆಲ್ಲಾ ಪೀಡಿತರಾದಾಗ ಅಶ್ವಿನೀದೇವತೆಗಳನ್ನು ಆರಾಧಿಸಿ ತೃಪ್ತಿಪಡಿಸಿದನು. ಆಗ ಅಶ್ವಿನೀದೇವತೆಗಳು ಸ್ವತಃ ಬಂದು ನೇಗಿಲಿನಿಂದ ಕ್ಷೇತ್ರಗಳನ್ನು ಉತ್ತು ಯವಾನ್ನವನ್ನು ಬೆಳೆದು ಎಲ್ಲರಿಗೂ ಅನ್ನವನ್ನು ಒದಗಿಸಿದರು. ಇದೇ ವಿಷಯವನ್ನು ಕಕ್ಷೀವಂತನು,

**ಯವಂ ವೃಕೇಣಾಶ್ವಿನಾ ವಪಂತೇಷಂ ದುಹಂತಾ ಮನುಷಾಯ ದಸ್ರಾ ।**

(ಋ. ಸಂ. ೧-೧೧೭-೨೧

ಎಂಬ ಋಕ್ಕಿನಲ್ಲಿಯೂ, ಸೌಭರಿಯು

**ದಶಸ್ಯಂತಾ ಮನವೇ ಪೂರ್ವ್ಯಂ ದಿವಿ ಯವಂ ವೃಕೇಣ ಕರ್ಷಥಃ ।**

(ಋ. ಸಂ. ೮-೨೨-೬)

ಎಂಬ ಋಕ್ಕಿನಲ್ಲಿಯೂ ಹೇಳಿರುವಂತೆ ಕುತ್ಸನು ಪ್ರಕೃತವಾದ ಋಕ್ಕಿನಲ್ಲಿ ಹೇಳಿದ್ದಾನೆ.

**ಸ್ಯೂಮರಶ್ಮಯೇ**—ಮರ್ಕಟಗಳ ಬಾಯಿಗೆ ಸಿಕ್ಕಿಬಿದ್ದಿದ್ದ ಸ್ಯೂಮರಶ್ಮಿಯೆಂಬ ಋಷಿಯನ್ನು ರಕ್ಷಿಸಿದ ಸನ್ನಿವೇಶವನ್ನು ವರ್ಣಿಸಿದೆ. ಆ ಕಥಾ ಸಂದರ್ಭವು ಈರೀತಿಯಿದೆ. **ಇಂದ್ರೋ ಯತೀನ್ ಸಾಲಾ ವೃಕೇಭ್ಯಃ ಪ್ರಾಯಚ್ಛತ್ । ಸಾಲಾವೃಕಾ ಮರ್ಕಟಾ ಉಚ್ಯಂತೇ । ತೇಷಾಮದ್ಯಮಾನಾನಾಂ ಸ್ಯೂಮರಶ್ಮಿರ್ಋಷಿರಶ್ವಿನೌ ತುಷ್ಟಾವ । ತಂ ಪ್ರತ್ಯಾಗತ್ಯಾಶ್ವಿನೌ ಇಷುಭಿಃ ಸಾಲಾವೃಕಾನ್ ನಿರುರುಧಥುಃ ಇತಿ ।** ಒಂದು ಸಲ ಇಂದ್ರನುರುಷ್ಟನಾಗಿ ಯತಿಗಳನ್ನೆಲ್ಲಾ (ತೋಳನಂತೆ ಕ್ರೂರಿಗಳಾದ) ಮರ್ಕಟಗಳಿಗೆ ಸಿಕ್ಕಿಸಿದನು. ಅವು ಇವರನ್ನೆಲ್ಲಾ ತಿನ್ನುವಷ್ಟರೊಳಗೆ ಸ್ಯೂಮರಶ್ಮಿಯೆಂಬ ಋಷಿಯು ಅಶ್ವಿನೀದೇವತೆಗಳನ್ನು ಸ್ತುತಿಸಿ ಆರಾಧಿಸಿದನು. ಅವರು ಒಡನೆಯೇ ಬಂದು ಆ ಮರ್ಕಟಗಳನ್ನು ತಮ್ಮ ಬಾಣಗಳಿಂದ ಹೊಡೆದುಹಾಕಿದರು. ಸ್ಯೂಮರಶ್ಮಿಯು ಕಾಪಾಡಲ್ಪಟ್ಟನು ಎಂಬ ಕಥೆಯು ಇಲ್ಲಿ ಸಂದರ್ಭವನ್ನು ಸೂಚಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

ನರಾ—ನೃ ನಯೇ. ಧಾತು. **ಋದೋರಪ್**—(ಪಾ ಸೂ. ೩-೩-೫೭) ಎಂಬುದರಿಂದ ಅಪ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ನರ ಶಬ್ದಕ್ಕೆ ದ್ವಿವಚನಪರವಾದಾಗ **ಸುಪಾಂ ಸುಲುಕ್**—(ಪಾ. ಸೂ ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

ಶಯವೇ—ಶೀಙ್ ಸ್ವಪ್ನೇ. ಧಾತು. **ಭೃಮೃಶೀತೃಚರಿ**—(ಉ. ಸೂ. ೧-೭) ಎಂಬುದರಿಂದ ಉ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಅಯಾದೇಶ. ಶಯು ಎಂದು ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಚತುರ್ಥೀ ಏಕವಚನಾಂತರೂಪ.

**ಈಷಥುಃ**—ಇಷು ಇಚ್ಛಾಯಾಮ್. ಧಾತು. ಲಿಟ್‌ಮಧ್ಯಮಪುರುಷ ದ್ವಿವಚನದಲ್ಲಿ ಅಥುಸಾದೇಶ. ಧಾತುವಿಗೆ ಲಿಣ್ನಿಮಿತ್ತವಾಗಿ ದ್ವಿತ್ವ. **ಅಭ್ಯಾಸಸ್ಯಾಸವರ್ಣೇ**—(ಪಾ. ಸೂ. ೬-೪-೭೮) ಸೂತ್ರದಲ್ಲಿ ಅಸವರ್ಣೇ ಎಂದು ಪರ್ಯುದಾಸಮಾಡಿರುವುದರಿಂದ ಅಭ್ಯಾಸಕ್ಕೆ ಇಯಙಾದೇಶ ಬರುವುದಿಲ್ಲ. ಸವರ್ಣದೀರ್ಘ. **ಯದ್ವೃತ್ತಾನ್ನಿತ್ಯಮ್**—(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತನಿಷೇಧ ಬರುವುದರಿಂದ ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ

**ಶಾರೀಃ**—ವಿಕಾರಾರ್ಥದಲ್ಲಿ ಶರಶಬ್ದಕ್ಕೆ **ಅನುದಾತ್ತೇತಶ್ಚಹಲಾದೇಃ**—(ಪಾ. ಸೂ. ೪-೩-೧೪೦) ಎಂಬುದರಿಂದ ಅಞ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ**—(ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ. ಸ್ತ್ರೀತ್ವವಿವಕ್ಷಾಮಾಡಿದಾಗ **ಟಿಡ್ಢಾಣಞ್**—ಎಂಬುದರಿಂದ ಙೀಪ್ ಪ್ರತ್ಯಯ.

**ಸ್ಯೂಮರಶ್ಮಯೇ**—ಷಿವು ತಂತುಸಂತಾನೇ. ಧಾತು. **ಧಾತ್ವಾದೇಃ ಷಃ ಸಃ**—(ಪಾ. ಸೂ. ೬-೧-೬೪) ಎಂಬುದರಿಂದ ಆದಿಗೆ ಸತ್ವ. ಇದಕ್ಕೆ ಔಣಾದಿಕ ಮನ್ ಪ್ರತ್ಯಯ. **ಚ್ಛ್ವೋಃ ಶೂಠನುನಾಸಿಕೇ ಚ**—ಎಂಬುದರಿಂದ ಧಾತುವಿನ ವಕಾರಕ್ಕೆ ಊಠಾದೇಶ. ಬಹುವ್ರೀಹಿಸಮಾಸ. **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ॥ ೧೬ ॥



॥ ಸಂಹಿತಾಪಾಠಃ ॥

ಯಾಭಿಃ ಪಠರ್ವಾ ಜಠರಸ್ಯ ಮಜ್ಮನಾಗ್ನಿರ್ನಾದೀದೇಚ್ಚಿತ ಇದ್ಧೋ ಅಜ್ಮನ್ನಾ ।
ಯಾಭಿಃ ಶರ್ಯಾತಮವಥೋ ಮಹಾಧನೇ ತಾಭಿರೂ ಷು ಊತಿಭಿರಶ್ವಿನಾ ಗತಂ ॥ ೧೭ ॥

॥ ಪದಪಾಠಃ ॥

ಯಾಭಿಃ । ಪಠರ್ವಾ । ಜಠರಸ್ಯ । ಮಜ್ಮನಾ । ಅಗ್ನಿಃ । ನ । ಅದೀದೇತ್ । ಚಿತಃ । ಇದ್ಧಃ । ಅಜ್ಮನ್ । ಆ ।

ಯಾಭಿಃ । ಶರ್ಯಾತಂ । ಅವಥಃ । ಮಹಾಽಧನೇ । ತಾಭಿಃ । ಊಂ ಇತಿ ।

ಸು । ಊತಿಽಭಿಃ । ಅಶ್ವಿನಾ । ಆ । ಗತಂ ॥ ೧೭ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಜಠರಸ್ಯ। ಜಠರಮುದರಂ ಭವತಿ ಜಗ್ಧಮಸ್ಮಿನ್ಧ್ರಿಯತ ಇತಿ ಯಾಸ್ಕಃ। ನಿ. ೪-೭। ಜಠರೋಪಲಕ್ಷಿತಸ್ಯ ಶರೀರಸ್ಯ ಮಜ್ಮನಾ ಬಲೇನ ಯುಕ್ತಃ ಸನ್ ಪಠರ್ವೈತತ್ಸಂಜ್ಞೋ ರಾಜರ್ಷಿರಜ್ಮನ್। ಸಂಗ್ರಾಮನಾಮೈತತ್ । ಅಜ್ಮನಿ ಸಂಗ್ರಾಮೇ ಯುಷ್ಮದೀಯಾಭಿರ್ಯಾಭಿರೂತಿಭಿರಾ ಸಮಂತಾದದೀದೇತ್ ಅದೀಪ್ಯತ। ತತ್ರ ದೃಷ್ಟಾಂತಃ। ಚಿತಃ ಕಾಷ್ಠೈರಭಿಚಿತ ಇದ್ಧೋ ಯಜ್ಞಗೃಹ ಋತ್ವಿಗ್ಭಿಃ ಪ್ರಜ್ವಾಲಿತೋಽಗ್ನಿರ್ನ । ಯಥಾಗ್ನಿಃ ಪ್ರಕಾಶತೇ ತದ್ವದಿತ್ಯರ್ಥಃ । ಅಪಿ ಚ ಶರ್ಯಾತಂ ಮಾನವಮಿಂದ್ರೇಣ ಸಹ ಸ್ಪರ್ಧಮಾನಂ ಮಹಾಧನೇ । ಸಂಗ್ರಾಮನಾಮೈತತ್ । ಮಹತಾ ಧನೇನೋಪೇತೇ ಸಂಗ್ರಾಮೇ ಯಾಭಿರೂತಿಭಿರವಥಃ ರಕ್ಷಥಃ ತಾಭಿರಿತ್ಯಾದಿ ಗತಂ॥ ಅದೀದೇತ್। ದೀದೇತಿಶ್ಛಾಂದಸೋ ದೀಪ್ತಿಕರ್ಮಾ । ಅಜ್ಮನ್ । ಅಜ ಗತಿಕ್ಷೇಪಣಯೋಃ । ಅಜಂತಿ ಕ್ಷಿಪಂತ್ಯಸ್ಮಿನ್ಬಾಣಾನಿತ್ಯಧಿಕರಣ ಔಣಾದಿಕೋ ಮನಿನ್ । ವಲಾದಾವಾರ್ಧಧಾತುಕೇ ವಿಕಲ್ಪ ಇಷ್ಯತೇ । ಕಾ. ೨-೪-೫೬-೨ । ಇತಿ ವಚನಾದ್ವೀಭಾವಾಭಾವಃ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ । ಮಹಾಧನೇ । ಆನ್ಮಹತ ಇತ್ಯಾತ್ವಂ ॥

ಪ್ರತಿಪದಾರ್ಥ

**ಜಠರಸ್ಯ**—(ತನ್ನ) ಶರೀರದ। **ಮಜ್ಮನಾ**—ಬಲದೊಡನೆ ಕೂಡಿಕೊಂಡು । **ಪಠರ್ವಾ**—ಪಠರ್ವನೆಂಬ ರಾಜರ್ಷಿಯು । **ಅಜ್ಮನ್**—ಯುದ್ಧದಲ್ಲಿ। **ಯಾಭಿಃ**—ಯಾವ ನಿಮ್ಮ ನೆರವುಗಳೊಡನೆ। **ಚಿತಃ**—ಕಾಷ್ಠಗಳಿಂದ ತುಂಬಿದುದೂ। **ಇದ್ಧಃ**—(ಯಜ್ಞಗೃಹದಲ್ಲಿ ಋತ್ವಿಕ್ಕುಗಳಿಂದ) ಪ್ರಜ್ವಲಿತವಾದುದೂ ಆದ। **ಅಗ್ನಿರ್ನ**—ಅಗ್ನಿಯು ಪ್ರಕಾಶಿಸುವಂತೆ। **ಆ ಸಮಂತಾತ್**– ಸುತ್ತಲೂ। **ಅದೀದೇತ್**—ಪ್ರಕಾಶಿಸಿದನೋ, (ಅಲ್ಲದೇ)। **ಶರ್ಯಾತಂ**—(ಇಂದ್ರನ ಜೊತೆಯಲ್ಲಿ ಹೋರಾಡುತ್ತಿದ್ದ) ಶರ್ಯಾತನೆಂಬವನನ್ನು। **ಮಹಾಧನೇ**—ಸಂಗ್ರಾಮದಲ್ಲಿ। **ಯಾಭಿಃ**—ಯಾವ ರಕ್ಷಣೆಗಳೊಡನೆ। **ಅವಥಃ**—ಕಾಪಾಡಿದಿರೋ, । **ತಾಭಿಃ ಊತಿಭಿಃ ಉ**—ಎಲ್ಲಾ ರಕ್ಷಣೆಗಳೊಡನೆಯೂ ಕೂಡಿಕೊಂಡು (ನಮ್ಮಲ್ಲಿಗೂ)। **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ, । **ಸು ಆ ಗತಂ**–ಅಭಿಮಾನದಿಂದ ಬನ್ನಿರಿ. ।

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಸ್ವಶರೀರದ ಬಲದೊಡನೆ ಕೂಡಿಕೊಂಡು ಯಾವ ನಿಮ್ಮ ಒತ್ತಾಸೆಗಳೊಡನೆ ಪಠರ್ವನೆಂಬ ರಾಜರ್ಷಿಯು ಯುದ್ಧದಲ್ಲಿ ಕಾಷ್ಠಗಳಿಂದ ತುಂಬಿದುದೂ ಯಜ್ಞಗೃಹದಲ್ಲಿ ಋತ್ವಿಕ್ಕುಗಳಿಂದ ಪ್ರಜ್ವಲಿತವಾದುದೂ ಆದ ಅಗ್ನಿಯು ಪ್ರಕಾಶಿಸುವಂತೆ ಸುತ್ತಲೂ ಪ್ರಕಾಶಿಸಿದನೋ ಅಲ್ಲದೆ ಇಂದ್ರನ ಜೊತೆಯಲ್ಲಿ ಹೋರಾಡುತ್ತಿದ್ದ ಶರ್ಯಾತನೆಂಬುವನನ್ನು ಸಂಗ್ರಾಮದಲ್ಲಿ ಯಾವ ನಿಮ್ಮ ರಕ್ಷಣೆಗಳೊಡನೆ ಕಾಪಾಡಿದಿರೋ, ಆ ಎಲ್ಲಾ ರಕ್ಷಣೆಗಳೊಡನೆಯೂ ಸಹ ಕೂಡಿಕೊಂಡು ನಮ್ಮಲ್ಲಿಗೂ ಅಭಿಮಾನದಿಂದ ಬನ್ನಿರಿ.

## English Translation

With those aids by which Patharvan shone with strength of form in battle, like a blazing fire piled up (with fuel); by which you defended Saryata in war; with them, Aswins, come willingly hither.

### ವಿಶೇಷವಿಷಯಗಳು

**ಪಠರ್ವಾ ಅದೀದೇತ್—ಪಠರ್ವಾ ನಾಮ ಋಷಿರಾಮಯಾವೀ ಕೃಶೋ ವಿವರ್ಣೋ ಬಭೂವ। ತಮಶ್ವಿನೌ ದೀಪ್ತಾಗ್ನಿಮಿವ ಬಲವಂತಮತಿತೇಜಸ್ವಿನಂ ಚಕ್ರತುರಿತಿ।** ಪಠರ್ವನೆಂಬ ಋಷಿಯು ರೋಗಗ್ರಸ್ತನಾಗಿ ಕೃಶನಾದನು. ದೇಹದ ಸ್ವಾಭಾವಿಕವಾದ ವರ್ಣವೇ ವ್ಯತ್ಯಾಸವಾಗಿ ಕಂಗೆಟ್ಟುಹೋದನು. ಆಗ ಅಶ್ವಿನೀದೇವತೆಗಳು ಅವನನ್ನು ಪ್ರಜ್ವಲಿಸುವ ಅಗ್ನಿಯಂತೆ ಶಕ್ತಿಯುತನನ್ನಾಗಿ, ಮಾಡಿದರು ಎಂಬ ಕಥೆ.

**ಅಜ್ಮನ್—ಅಜ್ಮ ಇತಿ ಗೃಹನಾಮ। ಯಜ್ಞಗೃಹೇ ಇತ್ಯರ್ಥಃ।** ಅಜ್ಮಶಬ್ದವು ಗೃಹನಾಮವಾದುದರಿಂದ ಇಲ್ಲಿ ಯಜ್ಞಗೃಹವೆಂಬರ್ಥವೆಂದು ಸ್ಕಂದರೂ, **ಸಂಗ್ರಾಮನಾಮೈತತ್ ಅಜ್ಮನಿ ಸಂಗ್ರಾಮೇ।** ಇದು ಸಂಗ್ರಾಮನಾಮವಾದುದರಿಂದ ಯುದ್ಧದಲ್ಲಿ ಎಂದರ್ಥವೆಂದು ಸಾಯಣರೂ ಅರ್ಥಮಾಡಿದ್ದಾರೆ.

**ಮಜ್ಮನಾ—ಮಜ್ಮ ಇತಿ ಬಲನಾಮ।** ಶಕ್ತಿಯೊಡನೆ ಕೂಡಿಕೊಂಡು ಎಂದರ್ಥ.

**ಯಾಭಿಶ್ಶರ್ಯಾತಂ—ಅತ್ರಾಪೀತಿಹಾಸಮಾಚಕ್ಷತೇ। ಶರ್ಯಾತೋ ನಾಮ ರಾಜಾ ಸಂಗ್ರಾಮೇ ಭಗ್ನಬಲೋ ನಶ್ಯನ್ ಶತ್ರುಭಿರನವಗಮ್ಯಮಾನೋಽಶ್ವಿನೌ ತುಷ್ಟಾವ। ತಸ್ಯಾಗತ್ಯಾಶ್ವಿನೌ ಶತ್ರೂನ್ ಪ್ರತಿ ಬಭಂಜತುರಿತಿ।** ಶರ್ಯಾತನೆಂಬ ರಾಜನು ಒಂದು ಸಲ ಯುದ್ಧದಲ್ಲಿ ತನ್ನ ಶಕ್ತಿಯನ್ನು ಕಳೆದುಕೊಂಡು ಶತ್ರುಗಳಿಂದ ಬಿಡಿಸಿಕೊಳ್ಳಲಾರದವನಾಗಿ ಅವರಿಗೆ ತಿಳಿಯದಹಾಗೆ ಅಶ್ವಿನೀದೇವತೆಗಳನ್ನು ಸ್ತುತಿಸಿದನು. ಆಗ ಅವರು ಬಂದು ಶತ್ರುಗಳನ್ನು ನಾಶಮಾಡಿದರೆಂದು ಕಥೆ। ಶರ್ಯಾತನ ವಿಷಯವಾಗಿ ಶತಪಥಬ್ರಾಹ್ಮಣದಲ್ಲಿ ಇನ್ನೊಂದು ಕಥೆಯಿದೆ.

> **.... .. .... .... ಯತ್ರ ವೈ ಭೃಗವೋ ವಾಂಗಿರಸೋ ವಾ ಸ್ವರ್ಗಂ ಲೋಕಂ ಸಮಾಶ್ನುವತ। ತಚ್ಚ್ಯವನೋ ವಾ ಭಾರ್ಗವಶ್ಚ್ಯವನೋ ವಾಂಗಿರಸಸ್ತದೇವ ಜೀರ್ಣಿಃ ಕೃತ್ಯಾರೂಪೋ ಜಹೇ। ಶರ್ಯಾತೋ ಹ ವಾ ಇದಂ ಮಾನವೋ ಗ್ರಾಮೇಣ ಚಚಾರ। ಸ ತದೇವ ಪ್ರತಿವೇಶೋ ನಿವಿವಿಶೇ ತಸ್ಯ ಕುಮಾರಾಃ ಕ್ರೀಡಂತ ಇಮಂ ಜೀರ್ಣಿಂ ಕೃತ್ಯಾರೂಪಮನರ್ಥ್ಯಂ ಮನ್ಯಮಾನಾ ಲೋಷ್ಟೈರ್ವಿಪಿಪಿಷುಃ। ಸ ಶರ್ಯಾತೇಭ್ಯಶ್ಚುಕ್ರೋಧ। ತೇಭ್ಯೋಽಸಂಜ್ಞಾಂ ಚಕಾರ ಪಿತೈವ ಪುತ್ರೇಣ ಯುಯುಧೇ ಭ್ರಾತಾ ಭ್ರಾತ್ರಾ। ಶರ್ಯಾತೋ ಹ ವಾ ಈಕ್ಷಾಂಚಕ್ರೇ। ಯತ್ಕಿಮಕರಂ ತಸ್ಮಾದಿದಮಾಪದೀತಿ ಸ ಗೋಪಾಲಾಂಶ್ಚಾವಿಪಾಲಾಂಶ್ಚ ಸಂಹ್ವಯಿತವಾ ಉವಾಚ। ಸ ಹೋವಾಚ। ಕೋ ವೋಽದ್ಯೇಹ ಕಿಂಚಿದದ್ರಾಕ್ಷೀದಿತಿ ತೇ ಹೋಚುಃ ಪುರುಷ ಏವಾಯಂ ಜೀರ್ಣಿಃ ಕೃತ್ಯಾರೂಪಃ ಶೇತೇ ತಮನರ್ಥ್ಯಂ ಮನ್ಯಮಾನಾಃ ಕುಮಾರಾ ಲೋಷ್ಟೈರ್ವ್ಯಪಿಕ್ಷನ್ನಿತಿ ಸ ವಿದಾಂಚಕಾರ ಸ ವೈ ಚ್ಯವನ ಇತಿ। ಸ ರಥಂ ಯುಕ್ತ್ವಾ। ಸುಕನ್ಯಾಂ ಶಾರ್ಯಾತೀಮುಪಾಧಾಯ ಪ್ರಸಿಷ್ಯಂದ ಸ ಆಜಗಾಮ**

**ಯತ್ರರ್ಷಿರಾಸ ತತ್ । ಸ ಹೋವಾಚ । ಋಷೇ ನಮಸ್ತೇ ಯನ್ನಾವೇದಿಷಂ ತೇನಾಹಿಂಸಿಷಮಿಯಂ ಸುಕನ್ಯಾ ತಯಾ ತೇಽಪಹ್ನುವೇ ಸಂಜಾನೀತಾಂ ಮೇ ಗ್ರಾಮ ಇತಿ ತಸ್ಯ ಹ ತತ ಏವ ಗ್ರಾಮಃ ಸಂಜಜ್ಞೇ ಸ ಹ ತತ ಏವ ಶರ್ಯಾತೋ ಮಾನವ ಉದ್ಯುಯುಜೇ ನೇದಪರಂ ಹಿನಸಾನೀತಿ ॥**

(ಶ. ಬ್ರಾ ೪-೧-೫ ರಲ್ಲಿ ೧—೭)

ಭೃಗುಗಳೂ (ಅಥವಾ ಅಂಗಿರಸ್ಸುಗಳೂ ಸ್ವರ್ಗವನ್ನು ಸೇರುತ್ತಿರುವ ಕಾಲದಲ್ಲಿ ಭೃಗುವಂಶೋತ್ಪನ್ನನಾದ ಅಥವಾ ಅಂಗಿರವಂಶೋತ್ಪನ್ನನಾದ ಚ್ಯವನನು ಜರ್ಝರಿತವಾದುದೂ ಭೂತಾಕಾರವುಳ್ಳದ್ದೂ ಆದ ದೇಹವನ್ನು ಹೊಂದಿದ್ದುದರಿಂದ ಭೂಲೋಕದಲ್ಲಿಯೇ ಬಿಡಲ್ಪಟ್ಟನು. ಇದೇ ಸಮಯದಲ್ಲಿ ಶರ್ಯಾತನೆಂಬುವನು ತನ್ನ ಸಕಲ ಪರಿವಾರಗಳೊಡನೆ ಚ್ಯವನನು ಇದ್ದ ಪ್ರದೇಶದ ಸಮೀಪದಲ್ಲಿಯೇ ಬಂದಿಳಿದನು. ಆಗ ಅವನ ಪರಿವಾರದಲ್ಲಿದ್ದ ತರುಣ ವಯಸ್ಸಿನ ಬಾಲಕರೆಲ್ಲಾ ಇವನು ನಿರ್ಜೀವಿಯಾದ ಪದಾರ್ಥವೆಂದರಿತು ಚ್ಯವನನ ಮೇಲೆ ಕಲ್ಲುಗಳನ್ನೆಸೆಯುತ್ತಾ ಆಟವಾಡುತ್ತಿದ್ದರು. ಆಗ ಚ್ಯವನನಿಗೆ ಕೋಪಬಂದು ಇವರನ್ನು ಶಪಿಸಲು ಇವರಲ್ಲಿದ್ದ ಪರಸ್ಪರ ಸೌಹಾರ್ದವು ನಾಶವಾಗಿ ಸಕಲರೂ ಒಬ್ಬರೊಡನೊಬ್ಬರು ಜಗಳವಾಡುತ್ತಾ ಅಣ್ಣ ತಮ್ಮಂದರಿಗೂ ತಂದೆಮಕ್ಕಳುಗಳಿಗೂ ದ್ವೇಷವು ಬೆಳೆಯಿತು. ಆಗ ಶರ್ಯಾತನು ಈ ವಿಧವಾದ ಅನರ್ಥವು ತನ್ನ ಯಾವುದೋ ದುಷ್ಕೃತ್ಯದ ಫಲವೆಂದರಿತು ಗೋಪಾಲಕರನ್ನು ಕರೆದು ನಿಮ್ಮಲ್ಲಿ ಯಾರಾದರೂ ಈ ಪ್ರದೇಶದಲ್ಲಿ ಏನಾದರೂ ಹೊಸವಸ್ತುವನ್ನು ಕಂಡಿರಾ ಎಂದು ಪ್ರಶ್ನಿಸಿದನು. ಆಗ ಅವರು ಪಕ್ಕದಲ್ಲೇ ಭೂತಾಕಾರನಾದ ಒಬ್ಬ ವ್ಯಕ್ತಿಯಿರುವನೆಂದೂ, ಅವನು ನಿರ್ಜೀವಿಯೆಂದರಿತು ಹುಡುಗರೆಲ್ಲರೂ ಕಲ್ಲುಗಳನ್ನೆಸೆದರೆಂದೂ ಹೇಳಲು ಆಗ ಶರ್ಯಾತನು ಆ ವ್ಯಕ್ತಿಯು ಚ್ಯವನನೆಂದರಿತನು. ಒಡನೆಯೇ ತನ್ನ ರಥದಲ್ಲಿ ಸುಕನ್ಯೆಯೆಂಬ ತನ್ನ ಮಗಳನ್ನು ಕುಳ್ಳಿರಿಸಿಕೊಂಡು ಚ್ಯವನನಲ್ಲಿಗೆ ಹೋಗಿ ತನ್ನ ಪರಿವಾರದವರು ಮಾಡಿದುದು ತಪ್ಪಾಯಿತೆಂದೂ, ಸುಕನ್ಯೆಯ ಗ್ರಹಣದಿಂದ ತೃಪ್ತನಾಗಿ ತನ್ನವರೆಲ್ಲರೂ ಪರಸ್ಪರ ಸೌಹಾರ್ದದಿಂದಲೂ ಶಾಂತಿಯಿಂದಲೂ ಇರುವಂತೆ ಅನುಗ್ರಹಿಸಬೇಕೆಂತಲೂ ಕೇಳಿದಾಗ ಚ್ಯವನನು ತೃಪ್ತನಾದುದರಿಂದ ಅವರೆಲ್ಲರೂ ಶಾಪದಿಂದ ಬಿಡುಗಡೆ ಹೊಂದಿ ಶಾಂತಿಸಮಾಧಾನಗಳನ್ನು ಹೊಂದಿದರು. ಆಗ ಶರ್ಯಾತನು ತಾನು ಇನ್ನೂ ಅಲ್ಲೇ ಇದ್ದರೆ ತನ್ನವರು ಪುನಃ ಅಂತಹ ಅಕೃತ್ಯವನ್ನು ಮಾಡಬಹುದೆಂಬ ಭಯದಿಂದ ಆ ಸ್ಥಳವನ್ನು ಬಿಟ್ಟುಹೊರಟನು.

ಇದೇ ವಂಶೋತ್ಪನ್ನನಾದ ಶರ್ಯಾತನು ಋ. ಸಂ. ೧೦ನೇ ಮಂಡಲದ ೯೨ನೇ ಸೂಕ್ತದ ದ್ರಷ್ಟೃವೆಂದೂ, ಶ್ರೇಷ್ಠನಾದ ರಾಜರ್ಷಿಯೆಂದೂ ಪ್ರಸಿದ್ಧನಾಗಿದ್ದಾನೆ.

**ಅದೀದೇತ್**—ದೀದ್ಯಿ ಧಾತುವು ಛಾಂದಸವಾದುದು. ದೀಪ್ತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ**—ಎಂಬುದರಿಂದ ಇಕಾರಲೋಪ. ಶಪಿಗೆ ಲುಕ್. ಅಂಗಕ್ಕೆ ಅಡಾಗಮ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

ಇದ್ಧಃ—ಞಿಇನ್ಧೀ ದೀಪ್ತೌ. ಧಾತು. ಕ್ತಪ್ರತ್ಯಯ. **ಅನಿದಿತಾಂ ಹಲ ಉ**— ಎಂಬುದರಿಂದ ಉಪಧಾ ನಕಾರಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಜ್ಮನ್**—ಅಜ ಗತಿಕ್ಷೇಪಣಯೋಃ ಧಾತು. ಅಜಂತಿ ಕ್ಷಿಪಂತಿ ಅಸ್ಮಿನ್ ಬಾಣಾನಿತಿ ಅಜ್ಮನ್. ಅಧಿಕರಣಾರ್ಥದಲ್ಲಿ ಔಣಾದಿಕವಾದ ಮನಿನ್ ಪ್ರತ್ಯಯ. **ಅಜೇರ್ವ್ಯಘಞಪೋಃ** ಎಂಬುದರಿಂದ ವೀಭಾವವು ಪ್ರಾಪ್ತವಾದರೂ **ವಲಾದಾವಾರ್ಧಧಾತುಕೇ ವಿಕಲ್ಪ ಇಷ್ಯತೇ**—(ಪಾ. ಸೂ. ೨-೪-೫೬-೨) ಎಂಬ ವಚನದಿಂದ ವೀಭಾವ ಬರುವುದಿಲ್ಲ. ಸಪ್ತಮೀ ಙಿ ಪರವಾದಾಗ ಅದಕ್ಕೆ **ಸುಪಾಂ ಸುಲುಕ್**—( ಪಾ. ಸೂ. ೭-೧-೩೯ ) ಎಂಬುದರಿಂದ ಲುಕ್.

**ಅವಥಃ**—ಅವ ರಕ್ಷಣೇ. ಧಾತು. ಲಟ್ ಮಧ್ಯಮಪುರುಷ ದ್ವಿವಚನದಲ್ಲಿ ಥಸ್ ಪ್ರತ್ಯಯ. ಶಪ್ ವಿಕರಣ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ ಶಪ್ ಪಿತ್ತಾದುದರಿಂದ ಅನುದಾತ್ತ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಮಹಾಧನೇ**—ಮಹತ್ ಶಬ್ದಕ್ಕೆ ಧನ ಶಬ್ದ ಪರವಾದಾಗ **ಆನ್ಮಹತಃ ಸಮಾ**—(ಪಾ. ಸೂ. ೬-೩-೪೬) ಎಂಬುದರಿಂದ ಮಹಚ್ಛಬ್ದಕ್ಕೆ ಆಕಾರಾಂತಾದೇಶ. ಸಮಾಸಸ್ವರದಿಂದ ಅಂತೋದಾತ್ತವಾಗುತ್ತದೆ. ಸಪ್ತಮೀ ಏಕವಚನಾಂತರೂಪ. ॥ ೧೭ ॥

---:o:---

ಸಂಹಿತಾಪಾಠಃ

ಯಾಭಿರಂಗಿರೋ ಮನಸಾ ನಿರಣ್ಯಥೋಽಗ್ರಂ ಗಚ್ಛಥೋ ವಿವರೇ ಗೋಅರ್ಣಸಃ ।
ಯಾಭಿರ್ಮನುಂ ಶೂರಮಿಷಾ ಸಮಾವತಂ ತಾಭಿರೂ ಷು ಊತಿಭಿರಶ್ವಿನಾ ಗತಂ ॥ ೧೮ ॥

ಪದಪಾಠಃ

ಯಾಭಿಃ । ಅಂಗಿರಃ । ಮನಸಾ । ನಿಃಽರಣ್ಯಥಃ । ಅಗ್ರಂ । ಗಚ್ಛಥಃ । ವಿಽವರೇ । ಗೋಽಅರ್ಣಸಃ ।

ಯಾಭಿಃ । ಮನುಂ । ಶೂರಂ । ಇಷಾ । ಸಂಽಆವತಂ । ತಾಭಿಃ । ಊಂ ಇತಿ ।

ಸು । ಊತಿಽಭಿಃ । ಅಶ್ವಿನಾ । ಆ । ಗತಂ ॥ ೧೮ ॥

ಸಾಯಣಭಾಷ್ಯಂ

ಅಂಗಿರ ಇತ್ಯೇತದಾಮಂತ್ರಿತಂ ವಾಕ್ಯಾದ್ಬಹಿರ್ಭೂತಂ । ತೇನ ಚಾತ್ಮಾನಂ ಸಂಬೋಧ್ಯ ಸ್ತುತಾವೃಷಿಂ ಪ್ರೇರಯತಿ । ಹೇ ಅಂಗಿರೋಽಅಂಗಿರಸಾಂ ಗೋತ್ರಜ ತ್ವಮಶ್ವಿನೌ ಸ್ತುಹಿ । ಹೇ ಅಶ್ವಿನೌ ಮನಸಾ ಮನನೀಯೇನ ಸ್ತೋತ್ರೇಣ ಪ್ರೀತೌ ಸಂತೌ ಯುವಾಂ ಯಾಭಿರೂತಿಭಿರ್ನಿರಣ್ಯಥಃ। ಸ್ತೋತ್ರೇನ್ ನಿತರಾಂ ರಮಯಥಃ । ಯದ್ವಾ । ಮನಸೈವ ಕರಣಭೂತೇನ ರಮಯಥಃ । ತಥಾ ಗೋಅರ್ಣಸೋ ಗೋರೂಪಸ್ಯಾರಣೀಯಸ್ಯ ಧನಸ್ಯ ಪಣಿಭಿರ್ಗುಹಾಯಾಂ ನಿಹಿತಸ್ಯ ವಿವರೇ ವಿವರಣೇ ಗುಹಾದ್ವಾರಸ್ಯೋದ್ಘಾಟನೇನ ಪ್ರಕಾಶನೇ ವಿಷಯಭೂತೇ ಸತಿ ಯಾಭಿರೂತಿಭಿಃ ಸಹ ಯುವಾಮಗ್ರಂ ಸರ್ವೇಭ್ಯೋ ದೇವೇಭ್ಯಃ ಪುರಸ್ತಾದ್ಗಚ್ಛಥಃ। ಅಪಿ ಚ ಶೂರಂ ವೀರ್ಯವಂತಂ ಮನುಮಿಷಾ ಪೃಥಿವ್ಯಾಮುಪ್ತೇನ ಯವಾದಿಧಾನ್ಯರೂಪೇಣಾನ್ನೇನ ಯಾಭಿರೂತಿಭಿಃ ಸಮಾವತಂ । ಸಮ್ಯಗರಕ್ಷತಂ ತಾಭಿಃ ಸರ್ವಾಭಿರೂತಿಭಿಃ ಸಹಾಸ್ಮಾನಪ್ಯಾಗಚ್ಛತಂ ॥ ನಿರಣ್ಯಥಃ । ನಿರಮಯಥ ಇತ್ಯಸ್ಯ ವರ್ಣವ್ಯಾಪತ್ತ್ಯೈತದ್ರೂಪಂ । ವಿವರೇ । ಗ್ರಹವೃದೃನಿಶ್ಚಿಗಮಶ್ಚೇತಿ ಭಾವೇಽಪ್ । ಥಾಥಾದಿನೋತ್ತರಪದಾಂತೋದಾತ್ತತ್ವಂ ॥

। ಪತಿಪದಾರ್ಥ ।

**ಅಂಗಿರಃ**—ಎಲೈ ಅಂಗಿರಸ್ಸೇ, (ಅಶ್ವಿನೀ ದೇವತೆಗಳನ್ನು ಸ್ತೋತ್ರಮಾಡು) । **ಅಶ್ವಿನಾ**—ಎಲೈ ಅಶ್ವಿನೀ ದೇವತೆಗಳೇ । **ಮನಸಾ**—ಮನಸ್ಸಿಗೆ ತೃಪ್ತಿಯನ್ನು ಕೊಡುವ ಸ್ತೋತ್ರದಿಂದ ತೃಪ್ತರಾಗುವ ನೀವು । **ಯಾಭಿಃ**—ಯಾವ ನಿಮ್ಮ ಒತ್ತಾಸೆಗಳಿಂದ । **ನಿರಣ್ಯಥಃ**—(ನಿಮ್ಮ ಸ್ತೋತೃಗಳನ್ನು) ಸಂತೋಷಗೊಳಿಸುತ್ತೀರೋ (ಅಥವಾ) [ **ಮನಸಾ**—ನಿಮ್ಮ ತೃಪ್ತವಾದ ಮನಸ್ಸಿನಿಂದ ।**ಯಾಭಿಃ**—ಯಾವ ನಿಮ್ಮ ಒತ್ತಾಸೆಗಳೊಡನೆ । **ನಿರಣ್ಯಥಃ**—ಪರ್ವಗೊಳ್ಳುತ್ತೀರೋ ] (ಹಾಗೆಯೇ)। **ಗೋಅರ್ಣಸಃ**-(ಪಣಿಗಳಿಂದ ಗುಹೆಗಳಲ್ಲಿ ಇಡಲ್ಪಟ್ಟ)ಗೋರೂಪದ ಧನದ। **ವಿವರೇ**—ಪ್ರಕಾಶನದಲ್ಲಿ । (**ಯಾಭಿಃ**—ಯಾವ ನಿಮ್ಮ ಒತ್ತಾಸೆಗಳೊಡನೆ) । **ಅಗ್ರಂ**—(ಸಕಲ ದೇವತೆಗಳಿಗೂ) ಮುಂದಾಗಿ । **ಗಚ್ಛಥಃ**—ಹೋದಿರೋ (ಮತ್ತು) । **ಶೂರಂ**—ಪರಾಕ್ರಮಿಯಾದ । **ಮನುಂ**—ಮನುವನ್ನು । **ಇಷಾ**—ಧಾನ್ಯರೂಪವಾದ ಅನ್ನದಿಂದ । **ಯಾಭಿಃ**—ಯಾವ ಸಹಾಯಗಳೊಡನೆ । **ಸಮಾವತಂ**—ಸಂಪೂರ್ಣವಾಗಿ ರಕ್ಷಿಸಿದಿರೋ । **ತಾಭಿಃ ಊತಿಭಿಃ ಉ**—ಆ ಸಕಲಬೆಂಬಲಗಳೊಡನೆಯೂ ಕೂಡಿಕೊಂಡು (ನಮ್ಮ ಬಳಿ) । **ಸು ಆ ಗತಂ**—ಆದರದಿಂದ ಬನ್ನಿರಿ.

ಭಾವಾರ್ಥ

ಎಲೈ ಅಂಗಿರಸ್ಸೇ, ಅಶ್ವಿನೀ ದೇವತೆಗಳನ್ನು ಸ್ತುತಿಸು. ಎಲೈ ಅಶ್ವಿನೀ ದೇವತೆಗಳೇ, ಯಾವ ನಿಮ್ಮ ನೆರವುಗಳೊಡನೆ ನಿಮ್ಮನ್ನು ಸ್ತುತಿಸುವ ಕೀರ್ತನಕಾರನನ್ನು ಸಂತೋಷಗೊಳಿಸುತ್ತೀರೋ, ಮತ್ತು ಪಣಿಗಳು ಗೋ

ರೂಪವಾದ ಧನವನ್ನು ಗುಹೆಯಲ್ಲಿ ಬಚ್ಚಿಟ್ಟಿದ್ದಾಗ ಇತರ ದೇವತೆಗಳಿಗಿಂತಲೂ ಮುಂದಾಗಿಯೇ ಯಾವ ನಿಮ್ಮ ಸಹಾಯಗಳೊಡನೆ ಗುಹಾದ್ವಾರಕ್ಕೆ ಪ್ರವೇಶಿಸಿ ಅಪಹೃತವಾದ ಧನವನ್ನು ಪ್ರಕಾಶಪಡಿಸಲು ಸಹಾಯಮಾಡಿದಿರೋ, ಮತ್ತು ಯಾವ ನಿಮ್ಮ ರಕ್ಷಣೆಗಳೊಡನೆ ಪರಾಕ್ರಮಿಯಾದ ಮನುವನ್ನು ಧಾನ್ಯರೂಪವಾದ ಅನ್ನದಾನದಿಂದ ಸಂಪೂರ್ಣವಾಗಿ ರಕ್ಷಿಸಿದಿರೋ, ಆ ನಿಮ್ಮ ಎಲ್ಲಾ ರಕ್ಷಣೆಗಳೊಂದಿಗೂ ಕೂಡಿಕೊಂಡು ನಮ್ಮಲ್ಲಿಗೂ ಅಭಿಮಾನದಿಂದ ದಯಮಾಡಿರಿ.

## English Translation

Angiras, (praise the Aswins,); Aswins, with those aids by witch (gratified) minds, you delight (in praise), and thence preceded the gods to the cavern to recover the stolen cattle ; by which you sustained the heroic Manu with food ; with them, Aswins, come willingly hither.

॥ ವಿಶೇಷವಿಷಯಗಳು ॥

**ಅಂಗಿರಃ—ಅಂಗಿರಸಾಂ ಗೋತ್ರಜ ತ್ವಮಶ್ವಿನೌ ಸ್ತುಹಿ ।** ಅಂಗಿರಸ್ಸುಗಳ ವಂಶೋತ್ಪನ್ನನಾದ ಋಷಿಯೇ, ಅಶ್ವಿನೀ ದೇವತೆಗಳನ್ನು ಸ್ತುತಿಸು ಎಂದು ಸೂಕ್ತದ್ರಷ್ಟೃವಾದ ಋಷಿಯು ತನ್ನನ್ನೇ ಉದ್ದೇಶಿಸಿ ಹೇಳುತ್ತಾನೆಂದು ಸಾಯಣರೂ, **ಸೋಽಯಮಿತ್ಯಭಿಸಂಬಂಧಾದಂಗಿರಶ್ಶಬ್ದೇನಾತ್ರಾಂಗಿರಃ ಸಂಬದ್ಧಾವಶ್ವಿನಾವುಚ್ಯೇತೇ । ವ್ಯತ್ಯಯೇನ ಚ ದ್ವಿವಚನಸ್ಯ ಸ್ಥಾನೇ ಏಕವಚನಂ ।** ಅವನೇ ಇವನು ಎಂದು ನಿಕಟವಾದ ಸಂಬಂಧವಿರುವ ಸನ್ನಿವೇಶದಲ್ಲಿ ಹೇಳುವಂತೆ ಇಲ್ಲಿಯೂ ಸಹ **ಸ್ತೋತೃಸ್ತುತ್ಯ**ಸಂಬಂಧವು ಅಂಗಿರಸ್ಸುಗಳಿಗೂ ಅಶ್ವಿನೀ ದೇವತೆಗಳಿಗೂ ಇರುವುದರಿಂದ ಅಶ್ವಿನೀದೇವತೆಗಳಿಗೆ **ಅಂಗಿರಃ** ಎಂಬ ಪ್ರಯೋಗವಿದೆ. ದ್ವಿವಚನಕ್ಕೆ ಏಕವಚನವಿರುವುದು ಛಾಂದಸ ಎಂದು ಸ್ಕಂದಸ್ವಾಮಿಗಳೂ ವಿಶದೀಕರಿಸಿದ್ದಾರೆ.

**ಗೋಅರ್ಣಸಃ—ಗೋರೂಪಸ್ಯ ಅರಣೀಯಸ್ಯ ಧನಸ್ಯ ಪಣಿಭಿರ್ಗುಹಾಯಾಂ ನಿಹಿತಸ್ಯ ।** ಪಣಿಗಳು ಗುಹೆಗಳಲ್ಲಿ ಮುಚ್ಚಿಟ್ಟಿರುವುದೂ ಗೋರೂಪವಾದುದೂ ಆದ ಧನದ ಎಂದು ಸಾಯಣರೂ, **ಗೋಶಬ್ದೋಽತ್ರ ಗಮೇಃ ಕ್ರಿಯಾಶಬ್ದಃ ಗಮನಾರ್ಹವಚನಃ । ಅರ್ಣ ಇತ್ಯುದಕನಾಮ ಪ್ರಾಭೂತ್ಯಾತ್ ಸಸ್ಯಸಂಪತ್ತಿಕರತ್ವಾಚ್ಚ ಗಮನಾರ್ಹಮುದಕಂ ಯಸ್ಯ ಸ ಗೋಅರ್ಣಾ ಮೇಘಃ ತಸ್ಯ ।** ಅರ್ಣ ಶಬ್ದವು ಉದಕ ನಾಮಗಳಲ್ಲಿ ಪಠಿತವಾಗಿದೆ. ಪ್ರಭೂತವೂ ಸಸ್ಯಸಂಪತ್ತನ್ನುಂಟುಮಾಡುವುದೂ ಆದುದರಿಂದ ಉದಕವು ಗಮ್ಯವಾದುದು. ಇಂತಹ ಗಮ್ಯವಾದ ಉದಕವನ್ನು ಹೊಂದಿರುವುದರಿಂದ **ಮೇಘಕ್ಕೆ** ಗೋಽಅರ್ಣವೆಂದು ಹೆಸರು. ಆದುದರಿಂದ ಇಲ್ಲಿ ಗೋಽಅರ್ಣಸಃ ಎಂದರೆ **ಮೇಘದ** ಎಂದರ್ಥವೆಂದು ಸ್ಕಂದಸ್ವಾಮಿಗಳೂ ಅರ್ಥಮಾಡಿರುತ್ತಾರೆ.

**ನಿರಣ್ಯಥಃ—ನಿರಮಯಥ ।** ಹರ್ಷವನ್ನು ಪಡೆದಿರಿ, ಸಂತೃಪ್ತರಾದಿರಿ ಎಂದರ್ಥ. ನಿರುಕ್ತಕಾರರು ರಮ್ ಧಾತುವಿಗೆ ಛಾಂದಸವಾದ **ಣತ್ವವು** ಪ್ರಾಪ್ತವಾಗಿ **ರಾರಣತ್, ರಾರಣ** ಇತ್ಯಾದಿ ರೂಪಗಳು ನಿಷ್ಪನ್ನವಾಗಿವೆಯೆಂದು ತೋರಿಸಲು ನಿರುಕ್ತಕಾರರು,

**ನಾಹಮಿಂದ್ರಾಣಿ ರಾರಣ ಸಖ್ಯುರ್ವೃಷಾಕಪೇರ್ಋತೇ ।**

(ಋ. ಸಂ. ೧೦-೮೬-೧೨)

ಎಂಬ ಋಕ್ಕನ್ನು ಉದಹರಿಸಿ(ನಿ. ೧೧-೩೯) **ರಾರಣ** ಶಬ್ದಕ್ಕೆ **ರಮೇ** ಎಂದರ್ಥವಾಗುತ್ತದೆಂದು ವ್ಯಾಖ್ಯಾನವನ್ನು ಮಾಡಿದ್ದಾರೆ. ಅದರಂತೆ ಇಲ್ಲಿಯೂ ಸಹ **ಅಶ್ವಿನೀ** ದೇವತೆಗಳು ಹರ್ಷಗೊಂಡರು, ರಮಿಸಿದರು ಎಂದಭಿಪ್ರಾಯ.

**ಯಾಭಿಃ ಮನುಂ**—ಅನ್ನಕ್ಷಾಮದಿಂದ ಪೀಡಿತರಾದ ಪ್ರಜೆಗಳಿಗೆ ಅನ್ನವನ್ನೊದಗಿಸಲು **ಮನುವೆಂಬ** ರಾಜನು ಅಶ್ವಿನೀ ದೇವತೆಗಳನ್ನು ಸ್ತುತಿಸಿದುದನ್ನೂ ಅವರು ಬಂದು ಇವನ ಕ್ಷೇತ್ರವನ್ನುತ್ತು ಅನ್ನವನ್ನು ಒದಗಿಸಿ ದುದನ್ನೂ ಇದೇ ಸೂಕ್ತದ ೧೬ನೇ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಿದೆ

ವ್ಯಾಕರಣಪ್ರಕ್ರಿಯಾ

**ಅಂಗಿರಃ—ಆಮಂತ್ರಿತಸ್ಯ ಚ**—(ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ

**ನಿರಣ್ಯಥಃ**—ನಿ ಉಪಸರ್ಗ. ನಿರಮುಯಥ ಎಂದು ರೂಪವಾಗುತ್ತದೆ. ಇದಕ್ಕೆ ವರ್ಣವ್ಯತ್ಯಯದಿಂದ ಛಂದಸ್ಸಿನಲ್ಲಿ ಈ ರೂಪವಾಗುತ್ತದೆ.

**ಗಚ್ಛಥಃ**—ಗಮ್ಲೃ ಗತೌ ಧಾತು. ಲಟ್ ಮಧ್ಯಮಪುರುಷ ದ್ವಿವಚನದಲ್ಲಿ ಥಸ್ ಪ್ರತ್ಯಯ. ಶಪ್ ವಿಕರಣ ಪರವಾದಾಗ **ಇಷುಗಮಿಯಮಾಂ ಛಃ**—(ಪಾ. ಸೂ. ೭-೩-೭೭) ಎಂಬುದರಿಂದ ಛಾದೇಶ. ಯದ್ವೋ ದಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ವಿವರೇ**—ವೃಞ್ ಸಂಭಕ್ತೌ. ಧಾತು. **ಗ್ರಹವೃದೃನಿಶ್ಚಿಗಮಶ್ಚ**—(ಪಾ. ಸೂ. ೩-೩-೫೮) ಎಂಬುದ ರಿಂದ ಭಾವಾರ್ಥದಲ್ಲಿ ಅಪ್‌ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ಕೃದುತ್ತರಪದಸ್ವರಕ್ಕೆ ಅಪವಾದವಾಗಿ **ಥಾಥಘಞ್**—(ಪಾ. ಸೂ. ೬-೨-೧೪೪) ಎಂಬುದರಿಂದ ಉತ್ತರಪದಾಂತೋ ದಾತ್ತಸ್ವರ ಬರುತ್ತದೆ. ಸಪ್ತಮೀಏಕವಚನಾಂತರೂಪ.

**ಇಷಾ—ಸಾವೇಕಾಚಸ್ತೃ**—( ಪಾ. ಸೂ. ೬-೧-೧೬೮ ) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸಮಾವತಮ್**—ಅವ ರಕ್ಷಣೇ. ಧಾತು. ಲಙ್ ಮಧ್ಯಮಪುರುಷದ್ವಿವಚನಾಂತರೂಪ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ. ॥ ೧೮ ॥



ಸಂಹಿತಾಪಾಠಃ

ಯಾಭಿಃ ಪತ್ನೀರ್ವಿಮದಾಯ ನ್ಯೂಹಥುರಾ ಘ ವಾ ಯಾಭಿ-
ರರುಣೀರಶಿಕ್ಷತಂ ।

ಯಾಭಿಃ ಸುದಾಸ ಊಹಥುಃ ಸುದೇವ್ಯಂ ೧ ತಾಭಿರೂ ಷು
ಊತಿಭಿರಶ್ವಿನಾ ಗತಂ ॥ ೧೯ ॥

ಪದಪಾಠಃ

ಯಾಭಿಃ । ಪತ್ನೀಃ । ವಿಽಮದಾಯ । ನಿಽಊಹಥುಃ । ಆ । ಘ । ವಾ ।
ಯಾಭಿಃ । ಅರುಣೀಃ । ಅಶಿಕ್ಷತಂ ।
ಯಾಭಿಃ । ಸುಽದಾಸೇ । ಊಹಥುಃ । ಸುಽದೇವ್ಯಂ । ತಾಭಿಃ । ಊಂ ಇತಿ ।
ಸು । ಊತಿಽಭಿಃ । ಅಶ್ವಿನಾ । ಆ । ಗತಂ ॥ ೧೯ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ವಿಮದಾಯೈತನ್ನಾಮ್ನೇ ಋಷಯೇ ಯಾಭಿರ್ಯುಷ್ಮದೀಯಾಭಿರೂತಿಭಿಃ ಪತ್ನೀರ್ಭಾರ್ಯಾಃ ಪುರುಮಿತ್ರಸ್ಯ ದುಹಿತರಂ ನ್ಯೂಹಥುಃ । ನಿತರಾಂ ಯುವಾಂ ಪ್ರಾಪಿತವಂತೌ । ಘೇತಿ ಪಾದಪೂರಣಃ । ತಥಾ ಯಾಭಿರೂತಿಭಿರರುಣೀರರುಣವರ್ಣಾ ಆರೋಚಮಾನಾ ಗಾ ಆಭಿಮುಖ್ಯೇನಾಶಿಕ್ಷತಂ । ಅದತ್ತಂ । ತಥಾ ಪಿಜವನಪುತ್ರಾಯ ಸುದಾಸೇ ಕಲ್ಯಾಣದಾನಾಯ ರಾಜ್ಞೇ ಸುದೇವ್ಯಂ ಪ್ರಶಸ್ತಂ ಧನಂ ಯಾಭಿರೂತಿಭಿರೂಹಥುಃ ಪ್ರಾಪಿತವಂತೌ । ತಾಭಿರಿತ್ಯಾದಿ ಗತಂ ॥ ಪತ್ನೀಃ । ಅಮೋ ವ್ಯತ್ಯಯೇನ ಶಸಾದೇಶಃ । ನ್ಯೂಹಥುಃ । ವಹ ಪ್ರಾಪಣೇ । ಅಥುಸಿ ಯಜಾದಿತ್ವಾತ್ಸಂಪ್ರಸಾರಣಂ । ದ್ವಿರ್ವಚನಾದಿ । ಸುದಾಸೇ । ಶೋಭನಂ ದದಾತೀತಿ ಸುದಾಃ । ಅಸುನ್ । ಸುದೇವ್ಯಂ । ದಿಗಾದಿತ್ವಾದ್ಯತ್ । ಪಾ. ೪-೩-೫೪ । ತಿತ್ಸ್ವರಿತ ಇತಿ ಸ್ವರಿತತ್ವಂ ॥

ಪ್ರತಿಪದಾರ್ಥ

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ, । ವಿಮದಾಯ—ವಿಮದನೆಂಬ ಋಷಿಗೆ । ಯಾಭಿಃ—ಯಾವ ನಿಮ್ಮ ಬತ್ತಾಸೆಗಳೊಡನೆ । ಪತ್ನೀಃ—ಹೆಂಡತಿಯನ್ನು । ನ್ಯೂಹಥುಃ—ಒದಗಿಸಿಕೊಟ್ಟಿರೋ, । ಯಾಭಿಃ—ಯಾವ ಬೆಂಬಲಗಳೊಡನೆ । ಅರುಣೀಃ—ಮನೋಹರವಾದ ಹೊಂಬಣ್ಣದ ಗೋವುಗಳನ್ನು । ಆ ಅಶಿಕ್ಷತಂ—ಪತ್ರಲಿಗೆ ಕೃಪೆ ಹೊಂದಿಸಿದಿರೋ, (ಹಾಗೆಯೇ) । ಸುದಾಸೇ—ಸುದಾಸನೆಂಬ ರಾಜನಿಗೆ । ಸುದೇವ್ಯಂ—ಪ್ರಶಸ್ತವಾದ ಧನವನ್ನು । ಯಾಭಿಃ—ಯಾವ ರಕ್ಷಣೆಗಳೊಂದಿಗೆ । ಊಹಥುಃ—ಹೊಂದಿಸಿದಿರೋ । ತಾಭಿಃ

**ಊತಿಭಿಃ ಉ**—ಆ ನಿಮ್ಮ ಎಲ್ಲಾ ರಕ್ಷಣೆಗಳಿಂದಲೂ ಕೂಡಿಕೊಂಡು (ನಮ್ಮಲ್ಲಿಗೂ) । **ಸು ಆ ಗತಂ**—ಅಭಿಮಾನದಿಂದ ದಯಮಾಡಿರಿ ।

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಯಾವ ನಿಮ್ಮ ಒತ್ತಾಸೆಗಳೊಡನೆ ವಿಮದನೆಂಬ ಋಷಿಗೆ ಹೆಂಡತಿಯನ್ನು ಒದಗಿಸಿಕೊಟ್ಟಿರೋ, ಯಾವ ನಿಮ್ಮ ಸಹಾಯಗಳೊಡನೆ ಮನೋಹರವಾದ ಹೊಂಬಣ್ಣದ ಗೋವುಗಳನ್ನು ಹೊಂದಿಸಿದಿರೋ ಮತ್ತು ಯಾವ ನಿಮ್ಮ ರಕ್ಷಣೆಗಳೊಡನೆ ಸುದಾಸನೆಂಬ ರಾಜನಿಗೆ ಪ್ರಶಸ್ತವಾದ ಧನವನ್ನು ಹೊಂದಿಸಿದಿರೋ ಆ ನಿಮ್ಮ ಎಲ್ಲಾ ರಕ್ಷಣೆಗಳಿಂದಲೂ ಕೂಡಿಕೊಂಡು ನಮ್ಮಲ್ಲಿಗೂ ಅಭಿಮಾನದಿಂದ ದಯಮಾಡಿರಿ.

## Englih Translation

With those aids by which you gave a wife to Vimada, by which you recovered the ruddy cows by which you conferred excellent wealth upon Sudasa; with them, Aswins, come willingly hither.

### ವಿಶೇಷವಿಷಯಗಳು

**ವಿಮದಾಯ**—ವಿಮದಋಷಿಃ ಪರಿಣೀಯ ಮಹತ್ಯಾ ವಿಭೂತ್ಯಾ ಭಾರ್ಯಾಂ ಸ್ವಗೃಹಂ ನಿನೀಷನ್ ಅಶ್ವಿನೌ ತುಷ್ಟಾವ । ತಸ್ಯಾಗತ್ಯಾಶ್ವಿನೌ ಭಾರ್ಯಾಂ ಸ್ವಸೇನಾಪರಿವೃತೇನ ರಥೇನ ನಿನ್ಯತುಃ । ಗಾಶ್ಚಾಸ್ಮೈ ಪ್ರಭೂತಾ ದದತುರಿತಿ । ವಿಮದಋಷಿಯು ವಿವಾಹವನ್ನು ಮಾಡಿಕೊಂಡನಂತರ ತನ್ನ ಭಾರ್ಯೆಯನ್ನು ಅತ್ಯಂತ ವೈಭವದಿಂದ ತನ್ನ ಮನೆಗೆ ಕರೆದುಕೊಂಡುಹೋಗಬೇಕೆಂದಿಚ್ಛಿಸಿ ಅಶ್ವಿನೀದೇವತೆಗಳನ್ನು ಸ್ತುತಿಸಿದನು. ಅವರು ಬಂದು ತಮ್ಮ ರಥದಲ್ಲಿ ಅವನ ಭಾರ್ಯೆಯನ್ನು ಕುಳ್ಳಿರಿಸಿ ವೈಭವದಿಂದ ಅವನ ಮನೆಗೆ ಕರೆದುಕೊಂಡು ಹೋಗಿ ಬಿಟ್ಟರು ಮತ್ತು ಪ್ರಭೂತವಾಗಿ ಗೋವುಗಳನ್ನೂ ಕೊಟ್ಟರು ಎಂಬುದು ಕಥೆ. ಇದೇ ವಿಷಯವನ್ನು

**ಯಾವರ್ಭಗಾಯ ವಿಮದಾಯ ಜಾಯಾಂ ಸೇನಾಜುವಾ ನ್ಯೂಹತೂ ರಥೇನ ।**

(ಋ. ಸಂ. ೧-೧೧೬-೧)

ಎಂಬ ಋಕ್ಕಿನಲ್ಲಿ ಕಕ್ಷೀವಂತನೂ, ಮತ್ತು

**ಯುವಂ ರಥೇನ ವಿಮದಾಯ ಶುಂಧ್ಯುವಂ ನ್ಯೂಹಥುಃ ಪುರುಮಿತ್ರಸ್ಯ ಯೋಷಣಾಂ ।**

(ಋ. ಸಂ. ೧೦-೩೯-೭)

ಎಂಬ ಋಕ್ಕಿನಲ್ಲಿ ಬ್ರಹ್ಮವಾದಿನಿಯಾದ **ಘೋಷೆಯೂ** ಹೇಳಿರುವರು.

**ವಿಮದನು** ೧೦ನೇ ಮಂಡಲದ ೨೦ನೇ ಸೂಕ್ತದಿಂದ ೨೬ನೇ ಸೂಕ್ತದವರೆಗೆ ೭ ಸೂಕ್ತಗಳ ದ್ರಷ್ಟೃವೆಂದು ಅನುಕ್ರಮಣಿಯಿಂದ ಗೊತ್ತಾಗುತ್ತದೆ. ಈ ಅಭಿಪ್ರಾಯಕ್ಕೆ ಋಕ್ಸಂಹಿತೆಯಲ್ಲಿಯೇ ಸಮರ್ಥನೆಯು ದೊರೆಯುತ್ತದೆ.

ವಿನಾ ತೇ ಅಗ್ನೇ ವಿಮದೋ ಮನೀಷಾಮೂರ್ಜೋ ನಪಾದಮೃತೇಭಿಃ ಸಜೋಷಾಃ ।
(ಋ. ಸಂ. ೧೦-೨೦-೧೦)

ಮಾಕಿರ್ನ ಏನಾ ಸಖ್ಯಾ ವಿ ಯೌಷುಸ್ತವ ಚೇಂದ್ರ ವಿಮದಸ್ಯ ಚ ಋಷೇಃ ।
(ಋ. ಸಂ. ೧೦-೨೩-೭)

ಎಂಬ ಋಕ್ಕುಗಳಲ್ಲಿ ವಿಮದಸ್ಯ ಋಷೇಃ ಮನು ಚ ಎಂದು ಸೂಕ್ತದ್ರಷ್ಟೃವು ತನ್ನನ್ನು ಋಷೇ ನಿರ್ದೇಶಿಸಿದ್ದಾನೆ.

ಐತರೇಯಬ್ರಾಹ್ಮಣದಲ್ಲಿ **ಕುಹ ಶ್ರುತ ಇಂದ್ರಃ ಕಸ್ಮಿನ್ನದ್ಯೇತಿ ಸೂಕ್ತಂ** (ಋ. ಸಂ. ೧೦-೨೨) **ವೈಮದಂ । ಕುಹ ಶ್ರುತ** ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವು ವಿಮದಋಷಿಯಿಂದ ದೃಷ್ಟವಾದದ್ದು ಎಂದು ಅದರ ವಿನಿಯೋಗಕ್ರಮವನ್ನು ಹೇಳಿದೆ. (ಐ. ಬ್ರಾ. ೨೧-೪).

**ನ್ಯೂಹಥುಃ – ನಿತರಾಂ ಊಢವಂತೌ ।** ಅತಿಶಯವಾಗಿಯೂ ವೈಭವದಿಂದಲೂ ಕರೆದುಕೊಂಡು ಹೋದಿರಿ ಎಂದರ್ಥ.

**ಸುದಾಸೇ— ಅತ್ರಾಪೀತಿಹಾಸಮಾಚಕ್ಷತೇ । ಸುದಾಸನಾಮಾ ಪೈಜವನೋ ರಾಜಾ ಯಸ್ಯ ವಿಶ್ವಾಮಿತ್ರಃ ಪುರೋಹಿತೋ ಬಭೂವ ಸ ಯಷ್ಟುಕಾಮಃ ಸಾರವತ್ ಪ್ರಭೂತಂ ಧನಮಶ್ವಿನೌ ಯಯಾಚೇ । ತಸ್ಮೈ ರಥೇನಾನೀಯಾಶ್ವಿನೌ ದದತುರಿತಿ ।** ಪಿಜವನಪುತ್ರನಾದ **ಸುದಾಸ**ನೆಂಬ ರಾಜನು ತನ್ನ ಪುರೋಹಿತನಾದ ವಿಶ್ವಾಮಿತ್ರನ ಸಹಾಯದಿಂದ ಯಾಗಮಾಡಲಿಷ್ಟಪಟ್ಟನು. ಅದಕ್ಕಾಗಿ ಪ್ರಭೂತವಾದ ಧನವನ್ನೊದಗಿಸಬೇಕೆಂದು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದನು. ಅವರು ತಮ್ಮ ರಥದ ತುಂಬ ಧನವನ್ನು ತಂದು ಇವನಿಗೆ ಒದಗಿಸಿದರು ಎಂಬ ಕಥೆ. ಇದನ್ನೇ—

**ಸುದಾಸೇ ದಸ್ರಾ ವಸು ಬಿಭ್ರತಾ ರಥೇ ಪೃಕ್ಷೋ ವಹತಮಶ್ವಿನಾ ।**
(ಋ. ಸಂ. ೧-೪೭-೬)

ಎಂಬ ಋಕ್ಕಿನಲ್ಲಿ **ಪ್ರಸ್ಕಣ್ವ**ನೆಂಬ ಋಷಿಯು ಹೇಳಿರುವನು. ನಿರುಕ್ತಕಾರರು ಇವನ ವಿಷಯವಾಗಿ ಸೂಕ್ಷ್ಮವಾಗಿ ಹೇಳಿದ್ದಾರೆ. **ವಿಶ್ವಾಮಿತ್ರ ಋಷಿಃ ಸುದಾಸಃ ಪೈಜವನಸ್ಯ ಪುರೋಹಿತೋ ಬಭೂವ । ಪೈಜವನಃ ಪಿಜವನಸ್ಯ ಪುತ್ರಃ ।** ಪಿಜವನ ಪುತ್ರನಾದ ಸುದಾಸನಿಗೆ ವಿಶ್ವಾಮಿತ್ರನು ಪುರೋಹಿತನಾಗಿದ್ದನೆಂದೂ ಅವನಿಂದ ಸುದಾಸನಿಗೆ ಸಹಾಯವಾಯಿತೆಂದೂ (ನಿ. ೨-೨೪) ನಿರುಕ್ತವಾಕ್ಯದಿಂದ ತಿಳಿಯುತ್ತದೆ. ಈ ನಿರ್ವಚನದಿಂದ ದಿವೋದಾಸನು ಸುದಾಸನ ಪಿತಾಮಹನೆಂದೂ ಹೇಳಬಹುದು.

ಅರ್ಣಾಂಸಿ ಚಿತ್ರಪ್ರಥಾನಾ ಸುದಾಸ ಇಂದ್ರೋ ಗಾಧ್ಯಾನ್ಯಕೃಣೋತ್ಸುಪಾರಾ ।
(ಋ. ಸಂ. ೭-೧೮-೫)

**ಕರ್ತಾ ಸುದಾಸೇ ಅಹ ವಾ ಉ ಲೋಕಂ ದಾತಾ ವಸು ಮುಹುರಾ ದಾಶುಷೇ ಭೂತ್ ।**
(ಋ. ಸಂ. ೭-೨೦-೨)

ಇತ್ಯಾದಿ ಋಕ್ಕುಗಳಿಂದ ಇಂದ್ರಾದಿದೇವತೆಗಳ ಸಹಾಯದಿಂದ **ಸುದಾಸನು** ಪಕ್ತನಾದಿ ರಾಜರುಗಳನ್ನು ಗೆದ್ದು ಮೆರೆದನೆಂದು ತಿಳಿಯುತ್ತದೆ.

**ಮಹಾಁ ಋಷಿರ್ದೇವಜಾ ದೇವಜೂತೋಽಸ್ತಭ್ನಾತ್ಸಿಂಧುಮರ್ಣವಂ ನೃಚಕ್ಷಾಃ ।**
**ವಿಶ್ವಾಮಿತ್ರೋ ಯದವಹತ್ಸುದಾಸಮಪ್ರಿಯಾಯತ ಕುಶಿಕೇಭಿರಿಂದ್ರಃ ।**
(ಋ. ಸಂ. ೩-೫೩-೯)

ಎಂಬ ಋಕ್ಕಿನಲ್ಲಿ **ಸುದಾಸನು** ಪುರೋಹಿತನಾದ ವಿಶ್ವಾಮಿತ್ರನೊಡನೆ ವಿಪಾಟ್ ಮತ್ತು ಶುತುದ್ರಿ ನದಿಗಳ ದಡದ ಮೇಲೆ ತನ್ನ ದಂಡಯಾತ್ರೆಯನ್ನು ಮಾಡಿದುದು ವರ್ಣಿತವಾಗಿದೆ.

**ತ್ವಂ ಧೃಷ್ಣೋ ಧೃಷತಾ ವೀತಹವ್ಯಂ ಪ್ರಾವೋ ವಿಶ್ವಾಭಿರೂತಿಭಿಃ ಸುದಾಸಂ ।**
**ಪ್ರ ಪೌರುಕುತ್ಸಿಂ ತ್ರಸದಸ್ಯುಮಾವಃ ಕ್ಷೇತ್ರಸಾತಾ ವೃತ್ರಹತ್ಯೇಷು ಪೂರುಂ ।**
(ಋ. ಸಂ. ೭-೧೯-೩)

ಎಂಬ ಋಕ್ಕಿನಲ್ಲಿ ಪುರುಕುತ್ಸುವಿನ ಪುತ್ರನಾದ ತ್ರಸದಸ್ಯುವಿನೊಡನೆ **ಸುದಾಸನ** ಹೆಸರೂ ಹೇಳಲ್ಪಟ್ಟಿದೆ. ಇಬ್ಬರೂ ಇಂದ್ರಾದಿಗಳ ರಕ್ಷಣೆಗೆ ಅರ್ಹರೆಂದೂ, ಆದುದರಿಂದ ದೇವತೆಗಳ ರಕ್ಷಣೆಗಳನ್ನು ಪಡೆದವರೆಂದೂ ಅವರನ್ನು ಸ್ತುತಿಸಿದೆ. ಐತರೇಯಬ್ರಾಹ್ಮಣದಲ್ಲಿ—

.... .... .... .... **ಪ್ರೋವಾಚ ವಸಿಷ್ಠಃ ಸುದಾಸೇ ಪೈಜವನಾಯ ತೇ ಹ ತೇ ಸರ್ವ ಏವ ಮಹಜ್ಜಗ್ಮುಃ ।**
(ಐ. ಬ್ರಾ. ೩೫-೮)

ಎಂಬ ವಾಕ್ಯದಿಂದ ವಸಿಷ್ಠನು ಸುದಾಸನ ಪುರೋಹಿತನೆಂದೂ, ಋಷಿಗಳಲ್ಲಿ ಅತ್ಯಂತ ಶ್ರೇಷ್ಠನಾದ ವಸಿಷ್ಠನಿಂದಲೂ **ಸುದಾಸನು** ಗೌರವಿಸಲ್ಪಟ್ಟನೆಂದೂ, ಮಹತ್ಪದವಿಯನ್ನು ಹೊಂದಿದನೆಂದೂ ತಿಳಿಯುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಪತ್ನೀಃ — ಪತ್ಯುರ್ನೋಯಜ್ಞಸಂಯೋಗೇ**—( ಪಾ. ಸೂ. ೪-೧-೩೩ ) ಎಂಬುದರಿಂದ ಙೀಪ್ ಪ್ರತ್ಯಯ. ಪ್ರಕೃತಿಗೆ ನುಕಾಗಮ. ದ್ವಿತೀಯಾಏಕವಚನದಲ್ಲಿ ವ್ಯತ್ಯಯದಿಂದ ಶಸಾದೇಶ. ಪೂರ್ವಸವರ್ಣದೀರ್ಘ

**ನ್ಯೂಹಥುಃ**—ನಿ ಉಪಸರ್ಗ. ವಹ ಪ್ರಾಪಣೇ. ಧಾತು. ಲಿಟ್ ಮಧ್ಯಮಪುರುಷ ದ್ವಿವಚನದಲ್ಲಿ **ಪರಸ್ಮೈಪದಾನಾಂ** — ಎಂಬುದರಿಂದ ಅಥುಸಾದೇಶ. **ಅಸಂಯೋಗಾಲ್ಲಿಟ್‌ಕಿತ್**—(ಪಾ. ಸೂ. ೧-೨-೫) ಎಂಬುದರಿಂದ ಪ್ರತ್ಯಯಕ್ಕೆ ಕಿತ್ತ್ವವಿರುವುದರಿಂದ ಇದನ್ನು ನಿಮಿತ್ತೀಕರಿಸಿ **ವಚಿ ಸ್ವಪಿ ಯಜಾದೀನಾಂ ಕಿತಿ**—(ಪಾ. ಸೂ. ೬-೧-೧೫) ಎಂಬುದರಿಂದ ಸಂಪ್ರಸಾರಣ. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಹಕಾರೋತ್ತರಾಕಾರ ಉದಾತ್ತವಾಗುತ್ತದೆ.

**ಅಶಿಕ್ಷತಮ್**—ಶಿಕ್ಷ ವಿದ್ಯೋಪಾದಾನೇ. ಧಾತು. ಲಙ್ ಮಧ್ಯಮಪುರುಷ ದ್ವಿವಚನದ ರೂಪ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಸುದಾಸೇ**— ಶೋಭನಂ ದದಾತೀತಿ ಸುದಾಃ. ಸರ್ವಧಾತುಭ್ಯೋಽಸುನ್—(ಉ. ಸೂ. ೪-೬೨೮) ಅಸುನ್ ಪ್ರತ್ಯಯ. ನಿತ್ತ್ವದಿಂದ ದಾಸ್ ಶಬ್ದ ಆದ್ಯುದಾತ್ತವಾದಾಗ ಗತಿಸಮಾಸವಾದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ.

**ಸುದೇವ್ಯಮ್**— ದಿಗಾದಿಯಲ್ಲಿ ಸೇರಿರುವುದರಿಂದ **ದಿಗಾದಿಭ್ಯೋ ಯತ್**—(ಪಾ. ಸೂ. ೪-೩-೫೪) ಎಂಬುದರಿಂದ ಯತ್ ಪ್ರತ್ಯಯ. **ಯಸ್ಯೇತಿ ಚ**—(ಪಾ. ಸೂ. ೬-೪-೧೪೮) ಎಂಬುದರಿಂದ ಯತ್ ನಿಮಿತ್ತವಾಗಿ ಅಕಾರಲೋಪ. ಯತ್ ತಿತ್ತಾದುದರಿಂದ **ತಿತ್ಸ್ವರಿತಮ್**-(ಪಾ. ಸೂ. ೬-೧-೧೮೫) ಎಂಬುದರಿಂದ ಉದಾತ್ತ ಸ್ವರ ಬಾಧಿತವಾಗಿ ಸ್ವರಿತಸ್ವರ ಬರುತ್ತದೆ. ಸಮಾಸವಾದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೧೯ ॥



ಸಂಹಿತಾಪಾಠಃ

ಯಾಭಿಃ ಶಂತಾತೀ ಭವಥೋ ದದಾಶುಷೇ ಭುಜ್ಯುಂ ಯಾಭಿರ-
ವಥೋ ಯಾಭಿರಧ್ರಿಗುಂ ।
ಓಮ್ಯಾವತೀಂ ಸುಭರಾಮೃತಸ್ತುಭಂ ತಾಭಿರೂ ಷು ಊತಿಭಿರ-
ಶ್ವಿನಾ ಗತಂ ॥ ೨೦ ॥

॥ ಪದಪಾಠಃ ॥

ಯಾಭಿಃ । ಶಂತಾತೀ ಇತಿ ಶಂಽತಾತೀ । ಭವಥಃ । ದದಾಶುಷೇ । ಭುಜ್ಯುಂ ।
ಯಾಭಿಃ । ಅವಥಃ । ಯಾಭಿಃ । ಅಧ್ರಿಽಗುಂ ।
ಓಮ್ಯಾಽವತೀಂ । ಸುಽಭರಾಂ । ಋತಽಸ್ತುಭಂ । ತಾಭಿಃ । ಊಂ ಇತಿ ।
ಸು । ಊತಿಽಭಿಃ । ಅಶ್ವಿನಾ । ಆ । ಗತಂ ॥ ೨೦ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ದದಾಶುಷೇ ಹವೀಂಷಿ ದತ್ತವತೇ ಯಜಮಾನಾಯ ಯಾಭಿರೂತಿಭಿಃ ಶಂತಾತೀ ಸುಖಸ್ಯ ಕರ್ತಾರೌ ಭವಥಃ । ಯಾಭಿಶ್ಚೋತಿಭಿರ್ಭುಜ್ಯುಂ ತುಗ್ರಸ್ಯ ಪುತ್ರಮವಥಃ । ಯಾಭಿಶ್ಚಾಧ್ರಿಗುಂ । ಅಧ್ರಿಗುರ್ದೇವಾನಾಂ ಶಮಿತಾ। ಅಧ್ರಿಗುಶ್ಚಾಪಾಪಶ್ಚ ಉಭೌ ದೇವಾನಾಂ ಶಮಿತಾರೌ। ತೈ. ಬ್ರಾ. ೩-೬-೬-೪।

**ಇತಿ ಶ್ರುತೇಃ । ಅಪಿ ಚ ಋತಸ್ತುಭಂ । ಋತಂ ಸತ್ಯಂ ಸ್ತೋಭತ್ಯುಚ್ಚಾರಯತೀತ್ಯೃತಸ್ತುಪ್ । ಏತತ್ಸಂಜ್ಞಮೃಷಿಂ ಓಮ್ಯಾವತೀಂ । ಓಮ್ಯೇತಿ ಸುಖನಾಮ । ತದ್ಯುಕ್ತಾಂ ಸುಭರಾಂ ಸುಖೇನ ಭರಣೀಯಾಮಿಷಂ ಯಾಭಿರೂತಿಭಿಃ ಪ್ರಾಪಯಥಃ । ತಾಭಿಃ ಸರ್ವಾಭಿರೂತಿಭಿಃ ಸಹಾಸ್ಮಾನಸ್ಯಾಗಚ್ಛತಂ ॥ ಶಂತಾತೀ । ಶಿವಶಮರಿಷ್ಟಸ್ಯ ಕರೇ । ಪಾ. ೪-೪-೧೪೩ । ಇತಿ ತಾತಿಲ್‌ಪ್ರತ್ಯಯಃ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ದದಾಶುಷೇ । ದಾಶೃ ದಾನೇ ಲಿಟಃ ಕ್ವಸುಃ । ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ । ಶಾಸಿವಸಿಘಸೀನಾಂ ಚೇತಿ ಷತ್ವಂ ॥**

ಪ್ರತಿಪದಾರ್ಥ

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ದದಾಶುಷೇ**—ಹವಿಸ್ಸನ್ನು ಅರ್ಪಿಸಿದ ಯಜಮಾನನಿಗೆ । **ಯಾಭಿಃ**—ಯಾವ ರಕ್ಷಣೆಗಳಿಂದ । **ಶಂತಾತೀ** ಸುಖಕಾರಿಗಳಾಗಿ । **ಭವಥಃ**—ಆಗಿರುತ್ತೀರೋ । **ಯಾಭಿಃ**—ಯಾವ ಬೆಂಬಲಗಳಿಂದ । **ಭುಜ್ಯುಂ**—ಭುಜ್ಯುವನ್ನು । **ಅವಥಃ**—ರಕ್ಷಿಸಿದ್ದೀರೋ । **ಯಾಭಿಃ**—ಯಾವುವುಗಳಿಂದ । **ಅಧ್ರಿಗುಂ**—ಅಧ್ರಿಗುವನ್ನೂ (ಅಧ್ರಿಗುವಿಗೂ) । **ಋತಸ್ತುಭಂ**--ಋತಸ್ತುಭನೆಂಬಋಷಿಯನ್ನೂ (ಋಷಿಗೂ) । **ಓಮ್ಯಾವತೀಂ**—ಸುಖದಿಂದ ಕೂಡಿದುದೂ । **ಸುಭರಾಂ**—ಪೋಷಕವಾದುದೂ ಆದ । **ಇಷಂ**—ಅನ್ನವನ್ನು । (**ಯಾಭಿಃ**—ಯಾವ ನಿಮ್ಮ ರಕ್ಷಣೆಗಳೊಂದಿಗೆ ಹೊಂದಿಸಿದಿರೋ) । **ತಾಭಿಃ ಊತಿಭಿಃ ಉ**—ಆ ನಿಮ್ಮ ರಕ್ಷಣೆಗಳೊಡನೆಯೂ (ನಮ್ಮಲ್ಲಿಗೂ) । **ಸು ಆ ಗತಂ**—ಅಭಿಮಾನದಿಂದ ಬನ್ನಿರಿ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಯಾವ ನಿಮ್ಮ ರಕ್ಷಣೆಗಳಿಂದ ನೀವು ಹವಿರ್ದಾತನಾದ ಯಜಮಾನನಿಗೆ ಸುಖವನ್ನುಂಟುಮಾಡುವವರಾಗಿ ಆಗಿರುತ್ತೀರೋ, ಯಾವ ನಿಮ್ಮ ಬೆಂಬಲಗಳಿಂದ ಭುಜ್ಯುವನ್ನು ರಕ್ಷಿಸಿ. ಅಧ್ರಿಗುವಿಗೂ ಮತ್ತು ಋತಸ್ತುಭನೆಂಬ ಋಷಿಗೂ ಸುಖದಿಂದ ಕೂಡಿದುದೂ ಮತ್ತು ಪೋಷಕವಾದುದೂ ಆದ ಅನ್ನವನ್ನು ಹೊಂದಿಸಿದಿರೋ ಆ ನಿಮ್ಮ ಸಕಲ ಬೆಂಬಲಗಳೊಂದಿಗೆ ನಮ್ಮಲ್ಲಿಗೂ ಆದರದಿಂದ ದಯಮಾಡಿರಿ.

English Translation

With those aids by which you are bestowers of happiness upon the donor (of oblations), by which you have protected Bhujyu and Adhrigu, and by which you have granted delighting and nourshing (food) to Ritastubha; with them, Aswins, come willingly hither.

ವಿಶೇಷವಿಷಯಗಳು

**ಭುಜ್ಯುಂ**—ಸಮುದ್ರದಲ್ಲಿ ತೊಂದರೆಗೊಳಗಾದವನೂ, ಜೊತೆಗಾರರಿಂದ ತ್ಯಜಿಸಲ್ಪಟ್ಟವನೂ ಆದ ಭುಜ್ಯುವಿಗೆ ಅಶ್ವಿನೀ ದೇವತೆಗಳು ಸಹಾಯಮಾಡಿದುದನ್ನು ಇದೇ ಸೂಕ್ತದ ಆರನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ.

ಅಧ್ರಿಗುಂ— ಅತ್ರೇತಿಹಾಸಮಾಚಕ್ಷತೇ । ನಮುಚೌ ಹತೇ ಸುರಮುರ್ಣೀಯಂ ಮಧು ಅಶ್ವಿಭ್ಯಾಂ ಸಹ ಪಿಬಂತಮಿಂದ್ರಂ ಪ್ರಮತ್ತ ಇತಿ ಜ್ಞಾತ್ವಾಸುರಾ ಹಂತುಮಿಯೇಷುಃ । ತಮಶ್ವಿನಾವಜಾನಂತಮೇನಂ ಪಾಲಯಾಂಚಕ್ರತುಃ । ನಮುಚಿಹನನವಾದಮೇಲೆ ಮಧುರವಾದ ಮಧುವನ್ನು ಅಶ್ವಿನೀ ದೇವತೆಗಳ ಜೊತೆಯಲ್ಲಿ ಇಂದ್ರನು ಕುಡಿಯುತ್ತಿರುವಾಗ ಅಸುರರು ಇಂದ್ರನು ಮಧುಪಾನದಿಂದ ಪ್ರಮತ್ತನಾಗುವುದನ್ನೇ ಕಾಯುತ್ತಿದ್ದು ಅವನಿಗೆ ತಿಳಿಯದಂತೆ ಅವನನ್ನು ಕೊಲ್ಲಲು ಬಂದರು. ಆಗ ಈ ತಂತ್ರವನ್ನು ಅರಿಯದ ಇಂದ್ರನನ್ನು ಅಶ್ವಿನೀ ದೇವತೆಗಳು ರಕ್ಷಿಸಿದರು ಎಂಬ ಕಥೆ. **ಅಧ್ರಿಗು** ಶಬ್ದವು ಇಂದ್ರಪರ್ಯಾಯವಾಗಿ ಉಪಯೋಗಿಸಲ್ಪಟ್ಟಿದೆಯೆಂದು ತೋರಿಸಲು ನಿರುಕ್ತಕಾರರು,

**ಶುಚೀಷಮಾಯಾಧ್ರಿಗವ ಓಹಮಿಂದ್ರಾಯ ಬ್ರಹ್ಮಾಣಿ ರಾತತಮಾ ।**
(ಋ. ಸಂ. ೧-೬೧-೧)

ಎಂಬ ಋಕ್ಕನ್ನು ಉದಹರಿಸಿದ್ದಾರೆ. ಇಲ್ಲಿ **ಅಧ್ರಿಗು** ಶಬ್ದಕ್ಕೆ **ಅಧೃತಗಮನಃ, ಅಪ್ರತಿಹತಗಮನಃ** ಎಂದರ್ಥ. **ಅಗ್ನಿರಪ್ಯಧ್ರಿಗುರುಚ್ಯತೇ** (೫-೧೧) **ಅಗ್ನಿಗೂ** ಅಧ್ರಿಗುವೆಂಬ ವಿಶೇಷಣವಿರುತ್ತದೆಯೆಂದು ತೋರಿಸಲು,

**ತುಭ್ಯಂ ಶ್ಚೋತಂತ್ಯಧ್ರಿಗೋ ಶಚೀವಃ ಸ್ತೋಕಾಸೋ ಅಗ್ನೇ ಮೇದಸೋ ಘೃತಸ್ಯ ।**
(ಋ. ಸಂ. ೩-೨೧-೪)

ಎಂಬ ಋಕ್ಕನ್ನು ಉದಹರಿಸಿದ್ದಾರೆ. ಇವೆರಡರ್ಥಗಳಲ್ಲದೆ, **ಅಧ್ರಿಗುರ್ಮಂತ್ರೋ ಭವತಿ ಗವ್ಯಧಿಕೃತತ್ವಾದಪಿ ವಾ ಪ್ರಶಾಸನಮೇವಾಭಿಪ್ರೇತಂ ಸ್ಯಾತ್ತಚ್ಛಬ್ದವತ್ತ್ವಾದಧ್ರಿಗೋ ಶಮೀಧ್ವಂ ಸುಶಮಿ ಶಮೀಧ್ವಂ ಶಮೀಧ್ವಮಧ್ರಿಗವಿತಿ ।** (ನಿ. ೫-೧೧). ಮಂತ್ರಕ್ಕೆ **ಅಧ್ರಿಗು** ಎಂಬುದು ಪರ್ಯಾಯಪದವಾಗಿದೆ. **ಗೋವಿಗೆ** ಪ್ರಧಾನವಾಗಿರುವುದರಿಂದ ಈ ಹೆಸರು ಅಥವಾ **ಅಧ್ರಿಗೋ ಶಮೀಧ್ವಂ** ಎಂದು ವಿಧಿಯನ್ನು ಹೇಳುವ ಮಂತ್ರವಾದುದರಿಂದ ಅದಕ್ಕೂ **ಅಧ್ರಿಗು**ವೆಂಬ ಹೆಸರು ಎಂದು ನಿರುಕ್ತಕಾರರು ಈ ಶಬ್ದದ ನಿರ್ವಚನವನ್ನು ಮಾಡಿ ಐತರೇಯಬ್ರಾಹ್ಮಣದಲ್ಲಿ ಉಕ್ತವಾಗಿರುವ ಮಂತ್ರವನ್ನು (೨-೭) ಉದಹರಿಸಿದ್ದಾರೆ. ಶತಪಥಬ್ರಾಹ್ಮಣದಲ್ಲಿಯೂ ಸಹ (೧೩-೫-೧-೧೮) ಈ ಮಂತ್ರದ ಸ್ವರೂಪವನ್ನೂ ವಿನಿಯೋಗಗಳನ್ನೂ ವಿಸ್ತಾರವಾಗಿ ಹೇಳಿದೆ. ಪ್ರಕೃತವಾದ ಋಕ್ಕಿನಲ್ಲಿ **ಅಧ್ರಿಗು** ಶಬ್ದಕ್ಕೆ ಸ್ಕಂದಸ್ವಾಮಿಗಳು **ಇಂದ್ರ**ನೆಂದೂ ಸಾಯಣರು **ಅಧ್ರಿಗು**ವೆಂಬ ಒಂದು ವ್ಯಕ್ತಿಯೆಂದೂ ಅರ್ಥಮಾಡಿದ್ದಾರೆ. ಇದು ಅಂಕಿತನಾಮವೆಂದು ತೋರಿಸಲು ಸಾಯಣರು,

**ಅಧ್ರಿಗುಶ್ಚಾಪಾಪಶ್ಚ ಉಭೌ ದೇವಾನಾಂ ಶಮಿತಾರೌ ।**
(ತೈ. ಬ್ರಾ ೩-೬-೬-೪)

ಎಂಬ ಮಂತ್ರವನ್ನು ಉದಹರಿಸಿ ಅಲ್ಲಿರುವಂತೆಯೇ ಇಲ್ಲಿಯೂ ಸಹ ಅಶ್ವಿನೀದೇವತೆಗಳ ಭಕ್ತನಾದ ಒಬ್ಬ ವ್ಯಕ್ತಿಯ ಹೆಸರೆಂದು ತೋರಿಸಿದ್ದಾರೆ. ಸ್ಕಂದರು,

**ಯುವಂ ಸುರಾಮಮಶ್ವಿನಾ ನಮುಚಾವಾಸುರೇ ಸಚಾ ।**
**ವಿಪಿಪಾನಾ ಶುಭಸ್ಪತೀ ಇಂದ್ರಂ ಕರ್ಮಸ್ವಾವತಂ ॥**
(ಋ. ಸಂ ೧೦-೧೩೧-೪)

ಎಂಬ ಋಕ್ಕಿನಲ್ಲಿ ವರ್ಣಿತವಾಗಿರುವ ಸನ್ನಿವೇಶವನ್ನು ವಿವರಿಸಿ ಅದೇ ಸಂದರ್ಭದಲ್ಲಿ ಅಶ್ವಿನೀ ದೇವತೆಗಳು ಇಂದ್ರನನ್ನು ರಕ್ಷಿಸಿದ ವಿಷಯವನ್ನು ಇಲ್ಲಿಯೂ ಹೇಳಿದೆಯೆಂದು ತೋರಿಸಿದ್ದಾರೆ. ಅದರ ಇಂದ್ರನಿಗೆ ಅಧ್ರಿಗುವೆಂಬ ಹೆಸರು ಏತಕ್ಕೆ ಬಂದಿತು ಎಂಬ ಸನ್ನಿವೇಶವನ್ನು ವಿವರಿಸುತ್ತಾ,

ದೇವಾಸ್ಸರ್ವೇ ಇಂದ್ರಂ ಬ್ರಹ್ಮಾಣಂ ವವ್ರುಃ । ಸೋಽಬ್ರವೀತ್ । ಅವ್ರತೋಽಹಂ ಗವ ಇತಿ । ಅನೂಬಂಧ್ಯಾದಿ ಗೋಯಾಗವರ್ಜಮಹಂ ಬ್ರಹ್ಮತ್ವಂ ಕರೋಮೀತಿ । ಗೋಯಾಗೇ ತ್ವಹಮವ್ರತ ಇತಿ । **ತಸ್ಮಾದ್ಗವೇ ಅಧೃತತ್ವಾದುಪಪನ್ನಂ ಇಂದ್ರಸ್ಯಾಧ್ರಿಗುತ್ವಂ** । ದೇವತೆಗಳೆಲ್ಲರೂ ಇಂದ್ರನನ್ನು ಬ್ರಹ್ಮ ಸ್ಥಾನದಲ್ಲಿರಬೇಕೆಂದು ಪ್ರಾರ್ಥಿಸಿದಾಗ ಅವನು **ಅನುಬಂಧ್ಯಾದಿ** ಗೋಯಾಗಗಳನ್ನು ಬಿಟ್ಟು ಉಳಿದ ವ್ರತಗಳಲ್ಲಿ ಬ್ರಹ್ಮತ್ವ ಸ್ಥಾನದಲ್ಲಿರುವೆನೆಂದು ಹೇಳಿದನು. ಅವನು ಆ ಸ್ಥಾನದಲ್ಲಿದ್ದು ನೆರವೇರಿಸಿದ ವ್ರತಗಳಲ್ಲಿ **ಗೋವುಗಳು** ಅಧೃತ=ವಾದುದರಿಂದ ಅವನಿಗೆ **ಅಧ್ರಿಗು**ವೆಂಬ ಹೆಸರು ಬಂದಿತೆಂದು ಹಿಂದಿನ ಸನ್ನಿವೇಶವನ್ನು ಸೂಚಿಸಿದ್ದಾರೆ.

**ಋತಸ್ತುಭಂ—ಋತಂ ಸತ್ಯಾಂ ಸ್ತೋಭತ್ಯುಚ್ಚಾರಯತೀತಿ ಋತಸ್ತುಪ್ । ಏತತ್ಸಂಜ್ಞಂ ಋಷಿಂ** । ಸತ್ಯಾತ್ಮಕವಾದ ಸ್ತುತಿಯನ್ನು ಪಠಿಸುವುದರಿಂದ **ಋತಸ್ತುಭ**ವೆಂಬ ಒಬ್ಬ ಋಷಿಯ ಹೆಸರೆಂದು ಸಾಯಣರೂ **ಋತಮಿತಿ ಸತ್ಯನಾಮ । ಸ್ತೋಭತಿರರ್ಚತಿಕರ್ಮಾ । ಸತ್ಯಸ್ತುತಿಂ** ಸತ್ಯಾತ್ಮಕವಾದ ಸ್ತುತಿಯೆಂದು ಸ್ಕಂದರೂ ವಿವರಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಶಂತಾತೀ—ಶಿವಶಮರಿಷ್ಟಸ್ಯಕರೇ**-(ಪಾ. ಸೂ ೪-೪-೧೪೩) ಎಂಬುದರಿಂದ ತಾತಿಲ್ ಪ್ರತ್ಯಯ. ಪ್ರತ್ಯಯ ಲಿತ್ತಾದುದರಿಂದ **ಲಿತಿ**-(ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಭವಥಃ**—ಭೂ ಸತ್ತಾಯಾಂ. ಧಾತು. ಲಟ್ ಮಧ್ಯಮಪುರುಷ ಏಕವಚನರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ದದಾಶುಷೇ**—ಡುದಾಶೃ ದಾನೇ. ಧಾತು. ಲಿಟ್ ಬಂದಾಗ ಅದಕ್ಕೆ **ಕ್ವಸುಶ್ಚ**-(ಪಾ. ಸೂ ೩-೨-೧೦೭) ಎಂಬುದರಿಂದ ಕ್ವಸು ಪ್ರತ್ಯಯ. ಧಾತುವಿಗೆ ದ್ವಿತ್ವ. ದದಾಶ್ವಸ್ ಶಬ್ದವಾಗುತ್ತದೆ. ಚತುರ್ಥೀಏಕವಚನಪರವಾದಾಗ **ವಸೋಃ ಸಂಪ್ರಸಾರಣಮ್**-(ಪಾ. ಸೂ. ೬-೪-೧೩೧) ಎಂಬುದರಿಂದ ಸಂಪ್ರಸಾರಣ ಪೂರ್ವರೂಪ. **ಶಾಸಿವಸಿಘಸೀನಾಂಚ**-(ಪಾ. ಸೂ. ೮-೩-೬೦) ಎಂಬುದರಿಂದ ಷತ್ವ. ಪ್ರತ್ಯಯಸ್ವರದಿಂದ ಉಕಾರ ಉದಾತ್ತವಾಗುತ್ತದೆ.

**ಋತಸ್ತುಭಮ್**—ಋತಂ ಸ್ತೋಭತಿ ಇತಿ ಋತಸ್ತುಪ್. ಕ್ವಿಪ್‌ಪ್ರತ್ಯಯ ಋತಸ್ತುಭ್ ಶಬ್ದವಾಗುತ್ತದೆ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ. ॥ ೨೦ ॥

———— :o: ————

ಸಂಹಿತಾಪಾಠಃ

ಯಾಭಿಃ ಕೃಶಾನುಮಸನೇ ದುವಸ್ಯಥೋ ಜವೇ ಯಾಭಿ-
ರ್ಯೂನೋ ಅರ್ವಂತಮಾವತಂ।
ಮಧು ಪ್ರಿಯಂ ಭರಥೋ ಯತ್ಸರಡ್ಭ್ಯಸ್ತಾಭಿರೂ ಷು ಊ-
ತಿಭಿರಶ್ವಿನಾ ಗತಂ ॥ ೨೧ ॥

ಪದಪಾಠಃ

ಯಾಭಿಃ । ಕೃಶಾನುಂ । ಅಸನೇ । ದುವಸ್ಯಥಃ । ಜವೇ । ಯಾಭಿಃ । ಯೂನಃ ।
ಅರ್ವಂತಂ । ಆವತಂ ।
ಮಧು । ಪ್ರಿಯಂ । ಭರಥಃ। ಯತ್। ಸರಟ್ಽಭ್ಯಃ । ತಾಭಿಃ । ಊಂ ಇತಿ ।
ಸು । ಊತಿಽಭಿಃ । ಅಶ್ವಿನಾ । ಆ । ಗತಂ ॥ ೨೧ ॥

ಸಾಯಣಭಾಷ್ಯಂ

ಸ್ವಾನಾದಿಷು ಸೋಮಪಾಲೇಷು ಮಧ್ಯೇ ಕೃಶಾನುರೇಕಃ ಸೋಮಪಾಲಃ । ತಥಾ ಚ ತೈತ್ತಿರೀಯಕಂ। ಹಸ್ತ ಸುಹಸ್ತ ಕೃಶಾನವೇತೇ ವಃ ಸೋಮಕ್ರಯಣಾಃ। ತೈ. ಸಂ. ೧-೨-೭ । ಇತಿ । ತಂ ಕೃಶಾನುಮಸನೇ। ಇಷವೋಽಸ್ಯಂತೇಽಸ್ಮಿನ್ನಿತ್ಯಸನಃ ಸಂಗ್ರಾಮಃ । ತಸ್ಮಿನ್ಸಂಗ್ರಾಮೇ ಹೇ ಅಶ್ವಿನೌ ಯಾಭಿರೂತಿಭಿರ್ದುವಸ್ಯಥಃ। ರಕ್ಷಥಃ। ತಥಾ ಯಾಭಿಶ್ಚ ಜವೇ ವೇಗೇ ಪ್ರವೃತ್ತಂ ಯೂನಸ್ತರುಣಸ್ಯ ಪುರುಕುತ್ಸಸ್ಯಾರ್ವಂತಮಶ್ವಮಾವತಂ ಅರಕ್ಷತಂ। ಅಪಿ ಚ ಯನ್ಮಧು ಕ್ಷೌದ್ರಂ ಪ್ರಿಯಂ ಸರ್ವೇಷಾಮನುಕೂಲವೇದ್ಯಂ ತತ್ಸರಡ್ಭ್ಯೋ ಮಧುಮಕ್ಷಿಕಾಭ್ಯೋ ಯಾಭಿಶ್ಚೋತಿಭಿರ್ಭರಥಃ। ಸಂಪಾದಯಥಃ। ತಾಭಿಃ ಸರ್ವಾಭಿರೂತಿಭಿಃ ಸಹಾಸ್ಮಾನಸ್ಮ್ಯಾಗಚ್ಛತಂ ॥ ಅಸನೇ। ಅಸು ಕ್ಷೇಪಣೇ । ಕರಣಾಧಿಕರಣಯೋಶ್ಚೇತ್ಯಧಿಕರಣೇ ಲ್ಯುಟ್ । ಸರಡ್ಭ್ಯಃ । ಸೃ ಗತೌ । ಸರ್ತೇರಟಿಃ ॥

ಪ್ರತಿಪದಾರ್ಥ

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ, । ಯಾಭಿಃ—ಯಾವ ನಿಮ್ಮ ರಕ್ಷಣೆಗಳಿಂದ । ಕೃಶಾನುಂ—ಕೃಶಾನುವನ್ನು । ಅಸನೇ—ಯುದ್ಧದಲ್ಲಿ । ದುವಸ್ಯಥಃ—ರಕ್ಷಿಸಿದ್ದೀರೋ । ಯಾಭಿಃ—ಯಾವ ರಕ್ಷಣೆ

ಗಳಿಂದ | **ಜವೇ**—ವೇಗದಲ್ಲಿ ಉದ್ಯುಕ್ತನಾದ | **ಯೂನಃ**—ತರುಣನಾದ ಪುರುಕುತ್ಸನ | **ಅರ್ವಂತಂ**—ಕುದುರೆಯನ್ನು | **ಆವತಂ**—ರಕ್ಷಿಸಿದಿರೋ | (ಮತ್ತು) **ಯತ್ ಮಧು**—ಯಾವ ಮಧುವು | **ಪ್ರಿಯಂ**—ಸಕಲರಿಗೂ) ಹಿತಕರವಾಗಿದೆಯೋ (ಅದನ್ನು) | **ಸರಡ್ಭ್ಯಃ**—ಜೇನುನೊಣಗಳಿಗೆ (ಯಾವ ನಿಮ್ಮ ಸಹಾಯಗಳೊಡನೆ) | **ಭರಥಃ**—ಒದಗಿಸಿಕೊಡುತ್ತೀರೋ | **ತಾಭಿಃ ಊತಿಭಿಃ ಉ**—ಆ ಎಲ್ಲಾ ರಕ್ಷಣೆಗಳೊಡನೆಯೂ ಕೂಡಿಕೊಂಡು (ನಮ್ಮಲ್ಲಿಗೂ) | **ಸು ಆ ಗತಂ**—ಅಭಿಮಾನದಿಂದ ದಯಮಾಡಿರಿ |

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಯಾವ ನಿಮ್ಮ ರಕ್ಷಣೆಗಳಿಂದ ಕೃಶಾನುವನ್ನು ಯುದ್ಧದಲ್ಲಿ ರಕ್ಷಿಸಿದ್ದೀರೋ, ಯಾವ ರಕ್ಷಣೆಗಳಿಂದ ವೇಗದಲ್ಲಿ ಉದ್ಯುಕ್ತನಾದ ಪುರುಕುತ್ಸನ ಕುದುರೆಯನ್ನು ರಕ್ಷಿಸಿದಿರೋ ಮತ್ತು ಸಕಲರಿಗೂ ಹಿತಕರವಾಗಿರುವ ಮಧುವನ್ನು ಯಾವ ನಿಮ್ಮ ರಕ್ಷಣೆಗಳಿಂದ ಜೇನುನೊಣಗಳಿಗೆ ಒದಗಿಸಿಕೊಡುತ್ತೀರೋ ನಿಮ್ಮ ಆ ಎಲ್ಲಾ ರಕ್ಷಣೆಗಳೊಡನೆಯೂ ಸಹ ನಮ್ಮಲ್ಲಿಗೂ ಅಭಿಮಾನದಿಂದ ದಯಮಾಡಿರಿ.

English Translation

With those aids by which you defended Krisanu in battle, with which you succoured the horse of the young Purukutsa in speed, and by which you deliver the pleasant honey to the bees ; with them, Aswins, come willingly hither.

॥ ವಿಶೇಷವಿಷಯಗಳು ॥

**ಕೃಶಾನುಂ—ಕೃಶಾನುರ್ನಾಮ ಸೋಮಪಾಲಃ । ತಂ ಸೋಮಮಪಜಿಹೀರ್ಷಂತೋಽಸುರಾಃ ಅಭಿದುದ್ರುವುಃ । ಸ ತಾನ್ಸ್ವಂತುಮಿಷೂಂಶ್ಚಿಕ್ಷೇಪ । ತಸ್ಮೈ ಇಷೂಂಶ್ಚಿಕ್ಷಿಪ್ಸತೇಽಶ್ವಿನಾವಮೋಘಾನಿಷೂನ್ ದದತುರಿತಿ ।** ಸೋಮಪಾಲನಾದ ಕೃಶಾನುವನ್ನು ಹೊಡೆದು ಸೋಮವನ್ನು ಅಪಹರಿಸಬೇಕೆಂದು ಅವನನ್ನು ಅಟ್ಟಿಸಿಕೊಂಡು ಬಂದ ರಾಕ್ಷಸರನ್ನು ತಡೆದು ಅಶ್ವಿನೀದೇವತೆಗಳು ಕೃಶಾನುವಿಗೆ ಪ್ರಬಲವಾದ ಶಕ್ತಿಯುಳ್ಳ ಬಾಣಗಳನ್ನು ಕೊಟ್ಟರು ಎಂಬ ಕಥೆ. ಇದೇ ವಿಷಯವನ್ನು ವಾಮದೇವನು—

**ಸೃಜದ್ಯದಸ್ಮಾ ಅವ ಹ ಕ್ಷಿಪಜ್ಜ್ಯಾಂ ಕೃಶಾನುರಸ್ತಾ ಮನಸಾ ಭುರಣ್ಯನ್ ।**
(ಋ. ಸಂ. ೪-೨೭-೩).

ಎಂಬ ಸೂಕ್ತದಲ್ಲಿ ತಿಳಿಸಿದ್ದಾನೆ. ಐತರೇಯ ಬ್ರಾಹ್ಮಣದಲ್ಲಿ ಇದೇ ಕಥೆಯನ್ನು ಕೊಂಚ ವ್ಯತ್ಯಾಸಮಾಡಿ ಹೇಳಿದೆ.

**ತೇ ದೇವಾ ಅಬ್ರುವನ್ಗಾಯತ್ರೀಂ ತ್ವಂ ನ ಇಮಂ ಸೋಮಂ ರಾಜಾನಮಾಹರೇತಿ ಸಾ ತಥೇತ್ಯಬ್ರವೀತ್ತಾಂ ವೈ ಮಾ ಸರ್ವೇಣ ಸ್ವಸ್ತ್ಯಯನೇನ ಅನುಮಂತ್ರಯಧ್ವಮಿತಿ .... .... .... .... ಸಾ ಪತಿತ್ವಾ ಸೋಮಪಾಲಾನ್ಭೀಷಯಿತ್ವಾ ಪದ್ಭ್ಯಾಂ ಚ ಮುಖೇನ ಚ ಸೋಮಂ ರಾಜಾನಂ ಸಮಗೃಭ್ಣಾದ್ಯಾನಿ ಚೇತರೇ ಛಂದಸೀ ಅಕ್ಷರಾಣ್ಯಜಹಿತಾಂ ತಾನಿ ಚೋಪಸಮಗೃಭ್ಣಾತ್ । ತಸ್ಯಾ ಅನು ವಿಸೃಜ್ಯ ಕೃಶಾನುಃ ಸೋಮಪಾಲಃ ಸವ್ಯಸ್ಯ ಪದೋ ನಖಮಚ್ಛಿದತ್ತಚ್ಛಲ್ಯಕೋಽಭವತ್ತಸ್ಮಾತ್ಸ ನಖಮಿವ ಯದ್ವಶಮಸ್ರವತ್......॥**
(ಐ. ಬ್ರಾ. ೩-೨೬)

ಒಂದು ಸಲ ದೇವತೆಗಳು **ಗಾಯತ್ರಿಯನ್ನು** ಕರೆದು ಸ್ವರ್ಗದಲ್ಲಿದ್ದ ಸೋಮರಾಜನನ್ನು ಹೇಗಾದರೂ ಪಡೆದು ಕೊಟ್ಟುಕೊಂಡು ಬರಬೇಕೆಂದು ಕೇಳಲಾಗಿ **ಗಾಯತ್ರಿಯು** ಹಾಗೇ ಆಗಲೆಂದು ಶ್ಯೇನಪಕ್ಷಿರೂಪದಲ್ಲಿ ದೇವತೆಗಳೊಡನೆ ಹಾರಿ ಅಲ್ಲಿನ ಸೋಮಪಾಲಕರನ್ನೆಲ್ಲಾ ಬೆದರಿಸಿ ಸೋಮರಾಜನನ್ನು ತನ್ನ ಕಾಲಿನಿಂದಲೂ ಕೊಕ್ಕಿನಿಂದಲೂ ಕಚ್ಚಿಕೊಂಡು ಓಡಿಬರುತ್ತಿರುವಾಗ **ಕೃಶಾನುವು** ಶ್ಯೇನರೂಪದಲ್ಲಿರುವ ಗಾಯತ್ರಿಯನ್ನು ಹೊಡೆದು ಅದರ ಎಡಗಾಲಿನ ನಖವನ್ನು ಕತ್ತರಿಸಿದನು ಎಂದು ಐತರೇಯ ಬ್ರಾಹ್ಮಣದಲ್ಲಿ ವಿವರಿಸಿದೆ.

**ಅಸನೇ—ಅಸುರಾನ್ ಹಂತುಮಿಷೂಣಾಂ ಕ್ಷೇಪಣಕಾಲೇ** । ಅಸುರರಮೇಲೆ ಬಾಣವನ್ನು ಎಸೆಯುವ ಕಾಲದಲ್ಲಿ ಎಂದರೆ ಯುದ್ಧಕಾಲದಲ್ಲಿ ಎಂದರ್ಥ.

**ದುವಸ್ಯಥಃ—ದುವಸ್ಯತಿಃ ಪರಿಚರಣಕರ್ಮಾ । ಪಪರಿಚರಿತವಂತೌ ಅಮೋಘಾನಾಂ ಇಷೂಣಾಂ ಪ್ರದಾನೇನ** ಅಮೋಘವಾದ ಇಷುಗಳ ಪ್ರದಾನದಿಂದ ಅವರಿಗೆ ಸಹಾಯಮಾಡಿದಿರಿ ಎಂದರ್ಥ.

**ಸರಡ್ಭ್ಯಃ—ಸರಡಾ ನಾಮ ಮಧುಕರ್ಯಃ ಮಕ್ಷಿಕಾಃ । ತಾಃ ಕಸ್ಯಾಂಚಿದನಾವೃಷ್ಟ್ಯಾಂ ಶುಷ್ಕಾಸು ಸರ್ವಪುಷ್ಪಜಾತಿಷು ಕ್ಷುಧಾ ಬಾಧ್ಯಮಾನಾ ಮಧ್ವರ್ಥಿನ್ಯೋಽಶ್ವಿನಾವಾಜುಹುವುಃ । ತಾಭ್ಯ ಉಪಗಮ್ಯಾಶ್ವಿನೌ ಮಧು ದದತುಃ** । ಒಂದು ಸಲ ಅನಾವೃಷ್ಟಿಯಿಂದ ನೀರಿಲ್ಲದೆ ಸಕಲವಾದ ಪುಷ್ಪಗಳೂ ಒಣಗಿ ರಸರಹಿತವಾದಾಗ ಮಧುಕರಿಗಳಾದ ಜೇನುನೊಣಗಳು ತೃಷೆಯಿಂದ ಬಳಲಿ ಮಧುವನ್ನು ಅರಸುತ್ತಾ ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದವು. ಆಗ ಅಶ್ವಿನೀದೇವತೆಗಳು ಅವುಗಳಿಗೆ ಮಧುವು ಸಿಕ್ಕುವಂತೆ ಮಾಡಿದರು ಎಂದು ಕಥೆ. ಇದೇ ಸನ್ನಿವೇಶವನ್ನು—

ಉತ ಸ್ಯಾ ವಾಂ ಮಧುಮನ್ಮಕ್ಷಿಕಾರಪನ್ಮದೇ ಸೋಮಸ್ಯೌಶಿಜೋ ಹುವನ್ಯತಿ ।
(ಋ. ಸಂ. ೧-೧೧೯-೯)

ಎಂಬ ಋಕ್ಕಿನಲ್ಲಿ ಕಕ್ಷೀವಂತನೂ,

**ಯುವೋರ್ಹ ಮಕ್ಷಾ ಪರ್ಯಶ್ವಿನಾ ಮಧ್ವಾಸಾ ಭರತ ನಿಷ್ಕೃತಂ ನ ಯೋಷಣಾ ।**
(ಋ. ಸಂ. ೧೦-೪೦-೬)

ಎಂಬ ಋಕ್ಕಿನಲ್ಲಿ ಬ್ರಹ್ಮವಾದಿನಿಯಾದ ಘೋಷೆಯೂ ಹೇಳಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಅಸನೇ**—ಅಸು ಕ್ಷೇಪಣೇ. ಧಾತು. **ಕರಣಾಧಿಕರಣಯೋಶ್ಚ**-(ಪಾ. ಸೂ. ೩-೩-೧೧೭) ಎಂಬುದರಿಂದ ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ**—(ಪಾ. ಸೂ. ೭-೧-೧) ಎಂಬುದರಿಂದ ಅನಾದೇಶ. **ಲಿತಿ**-(ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ.

**ಅರ್ವಂತಮ್**—ಋಗತೌ. ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ**-ಎಂಬುದರಿಂದ ವನಿಪ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. ದ್ವಿತೀಯಾಏಕವಚನ ಪರವಾದಾಗ **ಅರ್ವಣಸ್ತ್ರಸಾವನಞಃ**-(ಪಾ. ಸೂ. ೬-೪-೧೨೭) ಎಂಬುದರಿಂದ ತೃ ಅಂತಾದೇಶ. ಉಗಿತ್ತಾದುದರಿಂದ ನುಮಾಗಮ. ಅದಕ್ಕೆ ಅನುಸ್ವಾರ ಪರಸವರ್ಣ.

ಭರಥಃ—ಭೃಞ್ ಭರಣೇ. ಧಾತು. ಲಟ್ ಮಧ್ಯಮಪುರುಷ ದ್ವಿವಚನರೂಪ. ಅತಿಙಂತದ ಪರದಲ್ಲಿರುವುದರಿಂದ ತಿಙ್ಙತಿಙಃ-(ಪಾ. ಸೂ ೮-೧-೨೮) ಎಂಬುದರಿಂದ ನಿಘಾತಸ್ವರ ಬರುತ್ತದೆ.

ಸರಡ್ಭ್ಯಃ— ಸೃಗತೌ. ಧಾತು. ಇದಕ್ಕೆ ಔಣಾದಿಕವಾದ ಅಟಿ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಉರಣ್ರಪರಃ—ಎಂಬುದರಿಂದ ರಪರವಾಗಿ ಬರುತ್ತದೆ ಪ್ರತ್ಯಯದ ಆದ್ಯುದಾತ್ತ ಸ್ವರದಿಂದ ರೇಫೋತ್ತರಾಕಾರ ಉದಾತ್ತವಾಗುತ್ತದೆ. ॥ ೨೧ ॥



। ಸಂಹಿತಾಪಾಠಃ ।

ಯಾಭಿರ್ನರಂ ಗೋಷುಯುಧಂ ನೃಷಾಹ್ಯೇ ಕ್ಷೇತ್ರಸ್ಯ ಸಾತಾ
ತನಯಸ್ಯ ಜಿನ್ವಥಃ ।
ಯಾಭೀ ರಥಾಁ ಅವಥೋಯಾಭಿರರ್ವತಸ್ತಾಭಿರೂ ಷು ಊತಿ-
ಭಿರಶ್ವಿನಾ ಗತಂ ॥ ೨೨ ॥

। ಪದಪಾಠಃ ।

ಯಾಭಿಃ । ನರಂ । ಗೋಷುಽಯುಧಂ । ನೃಽಸಹ್ಯೇ । ಕ್ಷೇತ್ರಸ್ಯ । ಸಾತಾ। ತನ-
ಯಸ್ಯ । ಜಿನ್ವಥಃ ।
ಯಾಭಿಃ । ರಥಾನ್ । ಅವಥಃ । ಯಾಭಿಃ । ಅರ್ವತಃ । ತಾಭಿಃ। ಊಂ ಇತಿ ।
ಸು । ಊತಿಽಭಿಃ । ಅಶ್ವಿನಾ । ಆ । ಗತಂ ॥ ೨೨ ॥

ಸಾಯಣಭಾಷ್ಯಂ

ಹೇ ಅಶ್ವಿನೌ ಗೋಷು ಯುಧಂ ಗೋವಿಷಯಂ ಯುದ್ಧಂ ಕುರ್ವಂತಂ ನರಂ ಯಜ್ಞಸ್ಯ ನೇತಾರಂ ಯಜಮಾನಂ ಯಾಭಿರೂತಿಭಿರ್ನೃಷಾಹ್ಯೇ ನೃಭಿಃ ಸೋಢವ್ಯೇ ಸಂಗ್ರಾಮೇ ಜಿನ್ವಥಃ ಪ್ರೀಣಯಥಃ ।

ರಕ್ಷಥ ಇತ್ಯರ್ಥಃ । ತಥಾ ಕ್ಷೇತ್ರಸ್ಯ ಗೃಹಾದಿರೂಪಸ್ಯ । ತನಯಶಬ್ದೋ ಧನವಾಚೀ । ತನಯಸ್ಯ ಧನಸ್ಯ ಚ ಸಾತಾ ಸಾತಯೇ ಸಂಭಜನಾರ್ಥಂ ಯಾಭಿರೂತಿಭಿರ್ಯಜಮಾನಂ ರಕ್ಷಥ । ಯಾಭಿಶ್ಚ ಯಜಮಾನಾನಾಂ ರಥಾನ್ರಕ್ಷಥ । ತದೀಯಾನರ್ವತೋಽಶ್ವಾಂಶ್ಚ ಯಾಭಿರವಥಃ । ತಾಭಿಃ ಸರ್ವಾಭಿರೂತಿಭಿಃ ಸಹಾಸ್ಮಾನ-ಸ್ಮ್ಯಾಗಚ್ಛತಂ ॥ ಗೋಷು ಯುಧಂ । ಯುಧ ಸಂಪ್ರಹಾರೇ । ಗೋಷು ಯುಧ್ಯತ ಇತಿ ಗೋಷುಯುತ್ । ತತ್ಪುರುಷೇ ಕೃತಿ ಬಹುಲಮಿತ್ಯಲುಕ್ । ನೃಷಾಹ್ಯೇ । ಷಹ ಮರ್ಷಣೇ । ಶಕಿಸಹೋಶ್ಚೇತಿ ಯತ್ । ಅನ್ಯೇಷಾಮಪಿ ದೃಶ್ಯತ ಇತಿ ಸಾಂಹಿತಿಕೋ ದೀರ್ಘಃ । ಕೃದುತ್ತರಪದಪ್ರಕೃತಿಸ್ವರತ್ವಂ । ಸಾತಾ । ವನ ಷಣ ಸಂಭಕ್ತೌ । ಭಾವೇ ಕ್ತಿನ್ । ಜನಸನಖನಾಂ ಸಞ್ ಝಲೋರಿತ್ಯಾತ್ವಂ । ಊತಿಯೂತೀತ್ಯಾದಿನಾ ಕ್ತಿನ ಉದಾತ್ತತ್ವಂ ನಿಪಾತಿತಂ । ಸುಪಾಂ ಸುಲುಗಿತಿ ಚತುರ್ಥ್ಯಾ ಡಾದೇಶಃ । ಜಿನ್ವಥಃ । ಜಿವಿ ಪ್ರೀಣ-ನಾರ್ಥಃ । ಭೌವಾದಿಕಃ । ಇದಿತ್ವಾನ್ನುಮ್ । ರಥಾನ್ । ದೀರ್ಘಾದಟಿ ಸಮಾನಪಾದ ಇತಿ ನಕಾರಸ್ಯ ರುತ್ವಂ । ಆತೋಽಟಿ ನಿತ್ಯಮಿತಿ ಸಾನುನಾಸಿಕ ಆಕಾರಃ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀ ದೇವತೆಗಳೇ । **ಗೋಷುಯುಧಂ**—ಗೋವುಗಳಿಗಾಗಿ ಯುದ್ಧಮಾಡುತ್ತಿದ್ದ । **ನರಂ**—ಯಜ್ಞಕ್ಕೆ ನೇತೃವಾದ ಯಜಮಾನನನ್ನು । **ಯಾಭಿಃ**—ಯಾವ ನಿಮ್ಮ ರಕ್ಷಣೆಗಳಿಂದ । **ನೃಷಾಹ್ಯೇ**—ಯುದ್ಧದಲ್ಲಿ । **ಜಿನ್ವಥಃ**—ರಕ್ಷಿಸಿದಿರೋ, (ಹಾಗೆಯೇ) । **ಕ್ಷೇತ್ರಸ್ಯ**—ವಸತಿಯ (ಮತ್ತು) । **ತನಯಸ್ಯ**—ಧನದ । **ಸಾತಾ**—ಪ್ರಾಪ್ತಿಗಾಗಿ (ಆ ಯಜಮಾನನಿಗೆ) **ಯಾಭಿಃ**—ಯಾವ ನಿಮ್ಮ ರಕ್ಷಣೆಗಳಿಂದ (ಸಹಾಯಮಾಡಿದಿರೋ) । **ಯಾಭಿಃ**—ಯಾವ ಸಹಾಯಗಳಿಂದ । **ರಥಾನ್**—ರಥಗಳನ್ನೂ । **ಯಾಭಿಃ**—ಯಾವ ಬೆಂಬಲಗಳಿಂದ **ಅರ್ವತಃ**—ಕುದುರೆಗಳನ್ನೂ । **ಅವಥಃ**—ರಕ್ಷಿಸಿದಿರೋ । **ತಾಭಿಃ ಊತಿಭಿಃ ಉ**—ಆ ಎಲ್ಲಾ ರಕ್ಷಣೆಗಳೊಡನೆಯೂ ಕೂಡಿಕೊಂಡು (ನಮ್ಮಲ್ಲಿಗೂ) । **ಸು ಆಗತಂ**—ದಯಮಾಡಿ ಬನ್ನಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀ ದೇವತೆಗಳೇ, ಗೋವುಗಳಿಗಾಗಿ ಯುದ್ಧಮಾಡುತ್ತಿದ್ದ ಯಜಮಾನನನ್ನು ಯಾವ ನಿಮ್ಮ ರಕ್ಷಣೆಗಳಿಂದ ಯುದ್ಧದಲ್ಲಿ ರಕ್ಷಿಸಿದಿರೋ, ಹಾಗೆಯೇ, ವಸತಿಯ ಮತ್ತು ಧನದ ಪ್ರಾಪ್ತಿಗಾಗಿ ಆ ಯಜಮಾನನಿಗೆ ಯಾವ ನಿಮ್ಮ ರಕ್ಷಣೆಗಳಿಂದ ಸಹಾಯಮಾಡಿದಿರೋ, ಮತ್ತು ಯಾವ ಸಹಾಯಗಳಿಂದ ಅವನ ರಥಗಳನ್ನೂ ಕುದುರೆಗಳನ್ನೂ ರಕ್ಷಿಸಿದಿರೋ ಅವುಗಳೊಂದಿಗೆಲ್ಲಾ ಕೂಡಿಕೊಂಡು ನಮ್ಮಲ್ಲಿಗೂ ಬನ್ನಿರಿ.

## English Translation

With those aids by which you succoured the worshipper contending in war for cattle, by which you assist him in the acquisition of houses and wealth, by which you preserve his chariots and horses ; with them, Aswins, come willingly hither.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಅಶ್ವಿನೀ ದೇವತೆಗಳ ನಾನಾವಿಧವಾದ ರಕ್ಷಣೆಗಳನ್ನೂ ಸಹಾಯವನ್ನೂ ವಿವರಿಸಿದೆ.

**ಸಾತಾ— ಸಾತಯೇ ಸಂಭಜನಾರ್ಥಂ ।** ಲಾಭಕ್ಕಾಗಿ. ಪಡೆಯುವುದಕ್ಕಾಗಿ ಎಂದರ್ಥ.

**ಗೋಷುಯುಧಂ— ಗೋಷ್ವಪಹ್ರಿಯಮಾಣಾಸು । ತದ್ರಕ್ಷಾರ್ಥಂ ಯೋ ಯುಧ್ಯತೇ ಸ ಗೋಷುಯುತ್ ತಂ ।** ಗೋವುಗಳು ಅಪಹೃತಗಳಾಗುವಾಗ ಯಾರು ಯುದ್ಧಮಾಡುತ್ತಾರೋ ಅವರು **ಗೋಷು** ಯುಧರು.

### ವ್ಯಾಕರಣಪ್ರಕ್ರಿಯಾ

**ನರಮ್**—ನೃ ನಯೇ. ಧಾತು. **ಋದೋರಪ್**-(ಪಾ. ಸೂ. ೩-೩-೫೭) ಎಂಬುದರಿಂದ ಅಪ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಅಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ಗೋಷುಯುಧಮ್**—ಯುಧ ಸಂಪ್ರಹಾರೇ. ಧಾತು. ಗೋಷು ಯುಧ್ಯತೇ ಇತಿ ಗೋಷುಯುತ್. **ಕ್ವಿಪ್ ಚ**-ಎಂಬುದರಿಂದ ಕ್ವಿಪ್ ಪ್ರತ್ಯಯ. **ಗತಿಕಾರಕೋಪಪದಾತ್ ಕೃತ್**-(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ. **ತತ್ಪುರುಷೇಕೃತಿ ಬಹುಲಮ್** (ಪಾ. ಸೂ. ೬-೩-೧೪) ಎಂಬುದರಿಂದ ಸಮಾಸದಲ್ಲಿ ಸಪ್ತಮಿಗೆ ಅಲುಕ್ ಬರುತ್ತದೆ.

**ನೃಷಾಹ್ಯೇ**—ಷಹ ಮರ್ಷಣೇ. ಧಾತು. **ಧಾತ್ವಾದೇಃ ಷಃ ಸಃ**—(ಪಾ. ಸೂ. ೬-೧-೬೪) ಎಂಬುದರಿಂದ ಆದಿಗೆ ಸತ್ವ. **ಶಕಿ ಸಹೋಶ್ಚ**—(ಪಾ. ಸೂ. ೩-೧-೯೯) ಎಂಬುದರಿಂದ ಯತ್ ಪ್ರತ್ಯಯ. **ಅನ್ಯೇಷಾಮಪಿ ದೃಶ್ಯತೇ**—(ಪಾ. ಸೂ. ೬-೩-೧೩೭) ಎಂಬುದರಿಂದ ಸಂಹಿತಾದಲ್ಲಿ ಧಾತುವಿನ ಅಕಾರಕ್ಕೆ ದೀರ್ಘ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಸಾತಾ**—ಷನ **ಷಣ** ಸಂಭಕ್ತೌ. ಧಾತು. ಭಾವಾರ್ಥದಲ್ಲಿ **ಸ್ತ್ರಿಯಾಂ ಕ್ತಿನ್**—(ಪಾ. ಸೂ. ೩-೩-೯೪) ಎಂಬುದರಿಂದ ಕ್ತಿನ್‌ಪ್ರತ್ಯಯ. **ಜನಸನಖನಾಂ ಸನ್‌ಝಲೋಃ**—(ಪಾ. ಸೂ. ೬-೪-೪೨) ಎಂಬುದರಿಂದ ಧಾತುವಿಗೆ ಆತ್ವ. **ಊತಿಯೂತಿ**—(ಪಾ. ಸೂ. ೩-೩-೯೭) ಎಂಬುದರಿಂದ ಕ್ತಿನ್ ಉದಾತ್ತವಾಗಿ ನಿಪಾತಿತವಾಗಿದೆ. ಚತುರ್ಥೀವಿಭಕ್ತಿಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಸೂತ್ರದಿಂದ ಅದಕ್ಕೆ ಡಾದೇಶ. ಡಿತ್ತಾದುದರಿಂದ ಟಿಗೆ (ಇ) ಲೋಪ.

**ಜಿನ್ವಥಃ**—ಜಿವಿ. ಪ್ರೀಣನೇ. ಧಾತು. **ಇದಿತೋ ನುಮ್ ಧಾತೋಃ**—(ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. ಶಪ್ ವಿಕರಣ. ಲಟ್ ಮಧ್ಯಮಪುರುಷದ್ವಿವಚನರೂಪ. ಯದ್ಯೋಗವಿರುವುದರಿಂದ ನಿಘಾತಸ್ವರಪ್ರತಿಷೇಧ ಬರುತ್ತದೆ. ಶಪ್. ಲಸಾರ್ವಧಾತುಕವು ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

ರಥಾನ್—ದೀರ್ಘಾದಟಿ ಸಮಾನಪಾದೇ—(ಪಾ. ಸೂ. ೮-೩-೯) ಎಂಬುದರಿಂದ ನಕಾರಕ್ಕೆ ರುತ್ವ. ಆತೋಽಟಿ ನಿತ್ಯಮ್—(ಪಾ. ಸೂ. ೮-೩-೩) ಎಂಬುದರಿಂದ ಪೂರ್ವಕ್ಕೆ ಅನುನಾಸಿಕವಾದ ಆಕಾರ ಬರುತ್ತದೆ.

———:o:———

ಸಂಹಿತಾಪಾಠಃ

ಯಾಭಿಃ ಕುತ್ಸಮಾರ್ಜುನೇಯಂ ಶತಕ್ರತೂ ಪ್ರ ತುರ್ವೀತಿಂ
ಪ್ರ ಚ ದಭೀತಿಮಾವತಂ ।
ಯಾಭಿರ್ಧ್ವಸಂತಿಂ ಪುರುಷಂತಿಮಾವತಂ ತಾಭಿರೂ ಷು ಊತಿ-
ಭಿರಶ್ವಿನಾ ಗತಂ ॥ ೨೩ ॥

ಪದಪಾಠಃ

ಯಾಭಿಃ । ಕುತ್ಸಂ । ಆರ್ಜುನೇಯಂ । ಶತಕ್ರತೂ ಇತಿ ಶತಽಕ್ರತೂ । ಪ್ರ ।
ತುರ್ವೀತಿಂ । ಪ್ರ । ಚ । ದಭೀತಿಂ । ಆವತಂ ।
ಯಾಭಿಃ । ಧ್ವಸಂತಿಂ । ಪುರುಽಸಂತಿಂ । ಆವತಂ । ತಾಭಿಃ । ಊಂ ಇತಿ ।
ಸು । ಊತಿಽಭಿಃ । ಅಶ್ವಿನಾ । ಆ । ಗತಂ ॥ ೨೩ ॥

ಸಾಯಣಭಾಷ್ಯಂ

ಹೇ ಶತಕ್ರತೂ ಬಹುವಿಧಕರ್ಮಾಣಾವಶ್ವಿನೌ । ಆರ್ಜುನೇಯಂ ಅರ್ಜುನ ಇತೀಂದ್ರಸ್ಯ ನಾಮ । ತಥಾ ಚ ವಾಜಸನೇಯಕಂ । ಏತದ್ವಾ ಇಂದ್ರಸ್ಯ ಗುಹ್ಯಂ ನಾಮ ಯದರ್ಜುನ ಇತಿ । ತಸ್ಯ ಪುತ್ರಂ ಕುತ್ಸಂ ಯಾಭಿರೂತಿಭಿಃ ಪ್ರಾವತಂ । ಪ್ರಕರ್ಷೇಣಾರಕ್ಷತಂ । ತಥಾ ತುರ್ವೀತಿಂ ದಭೀತಿಂ ಚ ಯಾಭಿರೂತಿಭಿಃ ಪ್ರಾವತಂ । ಅಪಿ ಚ । ಯಾಭಿರ್ಧ್ವಸಂತಿಮೇತತ್ಸಂಜ್ಞಂ ಪುರುಷಂತಿಮೇತನ್ನಾಮಾನಂ ಚ

ಋಷಿಮಾವತಂ । ಅರಕ್ಷತಂ । ತಾಭಿಃ ಸರ್ವಾಭಿರೂತಿಭಿಃ ಸಹಾಸ್ಮಾನಪಿ ಸುಷ್ಠ್ವಾಗಚ್ಛತಂ ॥ ಆರ್ಜುನೇಯಂ । ಶುಭ್ರಾದಿಭ್ಯಶ್ಚ । ಪಾ. ೪-೧-೧೨೩ । ಇತಿ ಚಕಾರೋಽನುಕ್ತಸಮುಚ್ಚಯಾರ್ಥ ಇತ್ಯುಕ್ತತ್ವಾತ್ ಢಕ್ । ತುರ್ವೀತಿಂ । ತುರ್ವೀ ಹಿಂಸಾರ್ಥಃ। ಶತ್ರೂಂಸ್ತುರ್ವತೀತಿ ತುರ್ವೀತಿಃ । ಔಣಾದಿಕ ಈತಿಪ್ರತ್ಯಯಃ। ದಭೀತಿಂ। ದಮ್ಭು ದಂಭೇ ಔಣಾದಿಕಃ ಕೀತಿಪ್ರತ್ಯಯಃ। ಧ್ವಸಂತಿಂ। ಧ್ವಂಸು ಗತೌ ಚ । ಔಣಾದಿಕೋ ಝಿಚ್‌ಪ್ರತ್ಯಯಃ । ಅನಿದಿತಾಮಿತಿ ನಲೋಪಃ । ಝೋಽಂತಃ । ಪುರುಷಂತಿಂ । ಪುರು ಸನೋತಿ ದದಾತೀತಿ ಪುರುಷಂತಿಃ । ಕ್ತಿಚ್‌ಕ್ತೌ ಚ ಸಂಜ್ಞಾಯಾಮಿತಿ ಕ್ತಿಚ್ । ನ ಕ್ತಿಚಿ ದೀರ್ಘಶ್ಚೇತ್ಯನುನಾಸಿಕಲೋಪೋಪಧಾದೀರ್ಘಯೋರ್ನಿಷೇಧಃ ॥

ಪ್ರತಿಪದಾರ್ಥ

**ಶತಕ್ರತೂ**— ಬಹುವಿಧವಾದ ಕರ್ಮಗಳುಳ್ಳ । **ಅಶ್ವಿನಾ**— ಎಲೈ ಅಶ್ವಿನೀದೇವತೆಗಳೇ, । **ಆರ್ಜುನೇಯಂ**—ಅರ್ಜುನನ ಪುತ್ರನಾದ । **ಕುತ್ಸಂ**--ಕುತ್ಸನನ್ನು । **ಯಾಭಿಃ**—ಯಾವ ನಿಮ್ಮ ರಕ್ಷಣೆಗಳಿಂದ । **ಪ್ರ ಆವತಂ**—ಚೆನ್ನಾಗಿ ರಕ್ಷಿಸಿದಿರೋ, (ಹಾಗೆಯೇ) । **ತುರ್ವೀತಿಂ**—ತುರ್ವೀತಿಯನ್ನೂ । **ಚ**—ಮತ್ತು । **ದಭೀತಿಂ**—ದಭೀತಿಯನ್ನೂ । **ಪ್ರ**—(ಯಾವ ರಕ್ಷಣೆಗಳಿಂದ) ಕಾಪಾಡಿದಿರೋ, (ಮತ್ತು) । **ಯಾಭಿಃ**-ಯಾವ ರಕ್ಷಣೆಗಳಿಂದ । **ಧ್ವಸಂತಿಂ**—ಧ್ವಸಂತಿಯನ್ನೂ । **ಪುರುಷಂತಿಂ**—ಪುರುಷಂತಿಯನ್ನೂ । **ಆವತಂ**-ರಕ್ಷಿಸಿದಿರೋ । **ತಾಭಿಃ ಊತಿಭಿಃ ಉ**—ಆ ಎಲ್ಲಾ ರಕ್ಷಣೆಗಳೊಡನೆಯೂ ಕೂಡಿಕೊಂಡು (ನಮ್ಮಲ್ಲಿಗೂ) । **ಸು ಆ ಗತಂ**—ದಯಮಾಡಿ ಬನ್ನಿರಿ. ।

ಭಾವಾರ್ಥ

ನಾನಾವಿಧವಾದ ಕರ್ಮಗಳುಳ್ಳ ಎಲೈ ಅಶ್ವಿನೀದೇವತೆಗಳೇ, ಯಾವ ನಿಮ್ಮ ರಕ್ಷಣೆಗಳಿಂದ ಅರ್ಜುನನ ಪುತ್ರನಾದ ಕುತ್ಸನನ್ನು ಚೆನ್ನಾಗಿ ರಕ್ಷಿಸಿದಿರೋ ಹಾಗೆಯೇ ತುರ್ವೀತಿಯನ್ನೂ, ದಭೀತಿಯನ್ನೂ, ಧ್ವಸಂತಿಯನ್ನೂ, ಪುರುಷಂತಿಯನ್ನೂ ಯಾವ ರಕ್ಷಣೆಗಳಿಂದ ಕಾಪಾಡಿದಿರೋ, ಆ ಎಲ್ಲಾ ರಕ್ಷಣೆಗಳೊಡನೆಯೂ ಸಹ ನಮ್ಮಲ್ಲಿಗೂ ದಯಮಾಡಿರಿ.

English Translation

With those aids by which you, who are worshipped in many rites, protected Kutsa, the son of Arjuna, as well as Turviti, Dhabhiti, Dhwasanti, and Purushanti ; with them, Aswins, come willingly hither.

ವಿಶೇಷವಿಷಯಗಳು

**ಆರ್ಜುನೇಯಂ ಕುತ್ಸಂ—ಅರ್ಜುನೀ ನಾಮ ಕುತ್ಸಸ್ಯ ಮಾತಾ । ತಸ್ಯಾಃ ಪುತ್ರಂ । ಅರ್ಜುನಿಯೆಂಬುವಳ** ಮಗನಾದ ಕುತ್ಸನನ್ನು ಎಂದು ಸ್ಕಂದಸ್ವಾಮಿಗಳೂ, **ಅರ್ಜುನ ಇತೀಂದ್ರಸ್ಯ ನಾಮ। ತಸ್ಯ ಪುತ್ರಂ** ಇಂದ್ರನಿಗೆ ಅರ್ಜುನನೆಂದು ಹೆಸರು. ತತ್ಪುತ್ರನನ್ನು ಎಂದು ಸಾಯಣರೂ ಅರ್ಥಮಾಡಿ, ಇಂದ್ರನಿಗೆ ಅರ್ಜುನನೆಂಬ ಹೆಸರುಂಟು ಎಂಬುದನ್ನು ಸಮರ್ಥಿಸಲು.—

**ಏತದ್ವಾ ಇಂದ್ರಸ್ಯ ಗುಹ್ಯಂ ನಾಮ ಯದರ್ಜುನಃ ।**

ಎಂಬ ವಾಜಸನೇಯ ಸಂಹಿತಾಮಂತ್ರವನ್ನುದಹರಿಸಿದ್ದಾರೆ. ಆದರೆ,

ಅಹಂ ಕುತ್ಸಮಾರ್ಜುನೇಯಂ ನ್ಯೃಂಜೇऽಹಂ ಕವಿರುಶನಾ ಪಶ್ಯತಾಮಾ ।

(ಋ. ಸಂ. ೪-೨೬-೧)

ದಾಸಂ ಯಚ್ಛುಷ್ಣಂ ಕುಯವಂ ನ್ಯಸ್ಮಾ ಅರಂಧಯ ಆರ್ಜುನೇಯಾಯ ಶಿಕ್ಷನ್ ।

(ಋ. ಸಂ. ೭-೧೯-೨)

ವಹತ್ಕುತ್ಸಮಾರ್ಜುನೇಯಂ ಶತಕ್ರತುಃ ತ್ಸರದ್ಗಂಧರ್ವಮಸ್ತೃತಂ ।

(ಋ. ಸಂ. ೮-೧-೧೧)

ಎಂಬ ಋಕ್ಕುಗಳಲ್ಲಿ ಬರತಕ್ಕ ಆರ್ಜುನೇಯ ಪದಗಳಿಗೆಲ್ಲಾ ಸಾಯಣರೂ ಸಹ **ಅರ್ಜುನ್ಯಾಃ ಪುತ್ರಂ ಕುತ್ಸಂ** ಅರ್ಜುನೀ ಎಂಬ ಹೆಂಗಸಿನ ಪುತ್ರನಾದ ಕುತ್ಸನೆಂದೇ ಅರ್ಥಮಾಡಿದ್ದಾರೆ. ಅರ್ಜುನ, ಅರ್ಜುನೀ ಎಂಬ ಪದಗಳೂ, ಇಂದ್ರಸಂಬಂಧವಾದವು ಎಂದು ಶ್ರುತ್ಯಂತರಗಳಲ್ಲಿ ಹೇಳಿರುವುದರಿಂದ ಮೇಲಿನ ಎರಡುವಿಧವಾದ ವಿವರಣೆಗಳೂ ಒಂದೇ ಅರ್ಥವನ್ನು ಕೊಡುವುವು ಎಂದು ಹೇಳಬಹುದು. ಉದಾಹರಣೆಗೆ—

ಫಲ್ಗುನೀಷ್ವಗ್ನೀ ಆದಧೀತ । ಏತಾ ವಾ ಇಂದ್ರನಕ್ಷತ್ರಂ ಯತ್ಫಲ್ಗುನ್ಯೋऽಪ್ಯಸ್ಯ ಪ್ರತಿನಾಮ್ನ್ಯೋऽರ್ಜುನೋ ಹ ವೈ ನಾಮೇಂದ್ರೋ ಯದಸ್ಯ ಗುಹ್ಯಂ ನಾಮಾರ್ಜುನ್ಯೋ ವೈ ನಾಮೈತಾಸ್ತಾ ಏತತ್ಪರೋಕ್ಷಮಾಚಕ್ಷತೇ ಫಲ್ಗುನ್ಯ ಇತಿ ಕೋ ಹ್ಯೇತಸ್ಯಾರ್ಹತಿ ಗುಹ್ಯಂ ನಾಮ............ ।

(ಶ. ಬ್ರಾ. ೨-೧-೨-೧೧)

ಇಂದ್ರೋ ಭವತಿ ಯಚ್ಚ ಕ್ಷತ್ರಿಯೋ ಯದು ಚ ಯಜಮಾನಸ್ತಸ್ಮಾದಾಹಾರ್ಜುನ್ಯೋऽರ್ಜುನ ಇತಿ ।

(ಶ. ಬ್ರಾ. ೫-೪-೩-೭)

ಫಲ್ಗುನಿಗಳು ಇಂದ್ರನಕ್ಷತ್ರಗಳು. ಹೆಸರಿನಲ್ಲಿಯೂ ಹೋಲಿಕೆಯಿದೆ. ಇಂದ್ರನಿಗೂ ಅರ್ಜುನನೆಂಬ ಹೆಸರು. **ಫಲ್ಗುನೀಗಳಿಗೂ ಅರ್ಜುನಿಗಳೆಂಬ** ಹೆಸರು, ಎಂಬುದಾಗಿ ಶತಪಥ ಬ್ರಾಹ್ಮಣದಲ್ಲಿಯೂ ಇತರ ಕಡೆಗಳಲ್ಲಿಯೂ ಹೇಳಿರುವುದರಿಂದ ಕುತ್ಸನನ್ನು ಇಂದ್ರಪುತ್ರ, ಅರ್ಜುನೀಪುತ್ರ ಎಂದು ಎರಡು ವಿಧವಾಗಿಯೂ ಕರೆಯಬಹುದೆಂದು ಹೇಳಬಹುದು. ಋಕ್ಸಂಹಿತೆಯಲ್ಲಿ ಅನೇಕಕಡೆಗಳಲ್ಲಿ **ಕುತ್ಸನು** ಇಂದ್ರನ ಸಹಾಯದಿಂದಲೇ ತನ್ನ ಶತ್ರುಗಳನ್ನು ಜಯಿಸುತ್ತಾನೆಂದು ಇಂದ್ರಕುತ್ಸರ ಸಂಬಂಧವನ್ನು ತೋರಿಸಿದೆ.

ತ್ವಂ ಶುಷ್ಣಂ ವೃಜನೇ ಪೃಕ್ಷ ಆಣೌ ಯೂನೇ ಕುತ್ಸಾಯ ದ್ಯುಮತೇ ಸಚಾಹನ್ ।

(ಋ. ಸಂ. ೧-೬೩-೩)

ಕುತ್ಸಾಯ ಯತ್ರ ಪುರುಹೂತ ವನ್ವಞ್ಛುಷ್ಣಮನಂತೈಃ ಪರಿಯಾಸಿ ವಧೈಃ ।

(ಋ. ಸಂ. ೧-೧೨೧-೯)

ಎಂಬ ಋಕ್ಕುಗಳಲ್ಲೂ ಹೀಗೆಯೇ ೧-೧೭೪-೫ ; ೧-೧೭೫-೪ ; ಇತ್ಯಾದಿ ಋಕ್ಕುಗಳಲ್ಲಿಯೂ ಸಹ ಇಂದ್ರನು ಕುತ್ಸನಿಗೆ ಸಹಾಯಮಾಡುತ್ತಾ ಶುಷ್ಣನನ್ನು ಕೊಂದನು ಎಂದು ಹೇಳಿದೆ. ಮತ್ತು

ಅಹಂ ಪಿತೇವ ವೇತಸೂँರಭಿಷ್ಟಯೇ ತುಗ್ರಂ ಕುತ್ಸಾಯ ಸ್ಮದಿಭಂ ಚ ರಂಧಯಂ ।

(ಋ. ಸಂ. ೧೦-೪೯-೪)

ಕುತ್ಸನಿಗಾಗಿ ನಾನು ವೇತಸು, ತುಗ್ರ ಮತ್ತು ಸ್ಮದಿಭ ಇವರನ್ನೂ ಸಹ ಸೋಲಿಸಿದೆನು ಎಂದು ಇಂದ್ರನೇ ಹೇಳಿಕೊಂಡಿದ್ದಾನೆ. ಆದರೆ,

ತ್ವಮಸ್ಮೈ ಕುತ್ಸಮತಿಥಿಗ್ವಮಾಯುಂ ಮಹೇ ರಾಜ್ಞೇ ಯೂನೇ ಅರಂಧನಾಯಃ ।
(ಋ. ಸಂ. ೧-೫೩-೧೦)

ಯ ಆಯುಂ ಕುತ್ಸಮತಿಥಿಗ್ವಮರ್ದಯೋ ವಾವೃಧಾನೋ ದಿವೇದಿವೇ ।
(ಋ. ಸಂ. ೮-೫೩-೨)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನು ಕುತ್ಸಾದಿಗಳನ್ನು ಸೋಲಿಸಿದುದಾಗಿಯೂ ವರ್ಣಿತವಾಗಿದೆ.

**ತುರ್ವೀತಿಃ**—ತುರ್ವೀತಿ, ವಯ್ಯ ಎಂಬ ಎರಡು ಹೆಸರುಗಳೂ ಸಾಧಾರಣವಾಗಿ ಒಟ್ಟಿಗೇ ಪ್ರಯೋಗಿಸಲ್ಪಟ್ಟಿವೆ. ಕೆಲವೆಡೆಗಳಲ್ಲಿ ಮಾತ್ರ ತುರ್ವೀತಿಯೊಬ್ಬನ ಹೆಸರೇ ಕಾಣುತ್ತದೆ

ಈಶಾನಕೃದ್ದಾಶುಷೇ ದಶಸ್ಯನ್ತುರ್ವೀತಯೇ ಗಾಧಂ ತುರ್ವಣಿಃ ಕಃ ।
(ಋ. ಸಂ. ೧-೬೧-೧೧)

ಅರಮಯಸ್ಸರಪಸಸ್ತರಾಯ ಕಂ ತುರ್ವೀತಯೇ ಚ ವಯ್ಯಾಯ ಚ ಸ್ರುತಿಂ ।
(ಋ. ಸಂ. ೨-೧೩-೧೨)

ಎಂಬ ಋಕ್ಕುಗಳಲ್ಲಿ ನದೀಪ್ರವಾಹಗಳನ್ನು ದಾಟಲು ಇಂದ್ರನು ತುರ್ವೀತಿಗೆ ಸಹಾಯಮಾಡಿದ ವಿಷಯವು ಹೇಳಿದೆ

**ದಭೀತಿಃ**—ದಭೀತಿಯು ಯೋಧನೆಂದು ಕೆಲವು ಕಡೆಯೂ ಋಷಿಯೆಂದು ಕೆಲವೆಡೆಯೂ ಹೇಳಿದೆ.

ಇಂದ್ರೋ ಧುನಿಂ ಚ ಚುಮುರಿಂ ಚ ದಂಭಯಞ್ಛ್ರದ್ಧಾಮನಸ್ಯಾ ಶೃಣುತೇ ದಭೀತಯೇ ।
(ಋ. ಸಂ. ೧೦-೧೧೩-೯)

ಸ್ವಪ್ನೇನಾಭ್ಯುಪ್ಯಾ ಚುಮುರಿಂ ಧುನಿಂ ಚ ಜಘಂಥ ದಸ್ಯುಂ ಪ್ರ ದಭೀತಿಮಾವಃ ।
(ಋ. ಸಂ. ೨-೧೫-೯)

ಎಂಬ ಋಕ್ಕುಗಳಲ್ಲಿ ದಭೀತಿಯನ್ನು ರಾಜರ್ಷಿಯೆಂದೂ ಅವನಿಗಾಗಿ ಇಂದ್ರನು ಚುಮುರಿ ಮತ್ತು ಧುನಿಗಳನ್ನು ಜಯಿಸಿದುದಾಗಿಯೂ ಹೇಳಿದೆ. ಅವನು ಇಂದ್ರನಿಗೆ ಸೋಮರಸವನ್ನು ಹಿಂಡಿ ಅರ್ಪಿಸಿದುದಕ್ಕೆ ಇಂದ್ರನ ಅನುಗ್ರಹವನ್ನು ಪಡೆದನೆಂದು ಗೊತ್ತಾಗುತ್ತದೆ.

ಅಸ್ವಾಪಯದ್ದಭೀತಯೇ ಸಹಸ್ರಾ ತ್ರಿಂಶತಂ ಹಥೈಃ । ದಾಸಾನಾಮಿಂದ್ರೋ ಮಾಯಯಾ ।
(ಋ. ಸಂ. ೪-೩೦-೨೧)

ಅರಜ್ಞೌ ದಸ್ಯೂನ್ತ್ಸಮುನಬ್ದಭೀತಯೇ ಸುಪ್ರಾವ್ಯೋ ಅಭವಃ ಸಾಸ್ಯುಕ್ಥ್ಯಃ ।
(ಋ. ಸಂ. ೨-೧೩-೯)

ಎಂಬ ಋಕ್ಕುಗಳಿಂದ ಇಂದ್ರನು **ದಭೀತಿಗಾಗಿ** ಮೂವತ್ತುಸಹಸ್ರ ದಾಸರುಗಳನ್ನು ನಿದ್ರಾವಶರನ್ನಾಗಿ ಮಾಡಿದುದೂ, ದಸ್ಯುಗಳನ್ನೆಲ್ಲಾ ಹಗ್ಗವಿಲ್ಲದೇ ಬಂಧಿಸಿದುದೂ ವರ್ಣಿತವಾಗಿದೆ.

**ಧ್ವಸಂತಿಂ, ಪುರುಷಂತಿಂ-ಧ್ವಸಂತಿರ್ನಾಮ ವೇಶ್ಯಾ ಪುರುಷಂತಿಃ ತಥಾ। ಉಪಹಾಸಕುಶಲೇ ಇತಿ ಶ್ರುತ್ವಾ ಅಶ್ವಿನೌ ಸಂಭೋಗಾರ್ಥಮುಪಾಜಗ್ಮತುರಿತಿ ।** ಧ್ವಸಂತಿ ಮತ್ತು ಪುರುಷಂತಿ ಎಂಬ ಇಬ್ಬರೂ ವೇಶ್ಯಾಸ್ತ್ರೀಯರು ಇವರಿಬ್ಬರೂ ಕಲಾಕುಶಲಿನಿಯರೆಂದೂ, ಪರಿಹಾಸಚತುರೆಯರೆಂದೂ ಅಶ್ವಿನೀ ದೇವತೆಗಳು ತಿಳಿದು ಇವರಲ್ಲಿ ಸಂಭೋಗಕ್ಕಾಗಿ ಬಂದು ಇವರನ್ನು ಅನುಗ್ರಹಿಸಿದರು ಎಂಬ ಕಥೆ ಇದೆ.

ಸಾಯಣರು ಈ ಎರಡು ಹೆಸರುಗಳೂ ಪುಲ್ಲಿಂಗ ಸೂಚಕವಾದ ಶಬ್ದವೆಂದೂ ಎರಡು ಋಷಿಗಳ ಹೆಸರೆಂದೂ ಅರ್ಥಮಾಡಿದ್ದಾರೆ. **ಧ್ವಸ್ರ** ಮತ್ತು **ಧ್ವಸಂತಿ** ಎಂಬ ಎರಡು ಪದಗಳೂ ಒಂದೇ ವ್ಯಕ್ತಿಯ ಹೆಸರೆಂದೂ ತಿಳಿಯುತ್ತದೆ

**ಧ್ವಸ್ರಯೋಃ ಪುರುಷಂತ್ಯೋರಾ ಸಹಸ್ರಾಣಿ ದದ್ಮಹೇ ।**
(ಋ. ಸಂ. ೯-೫೮-೩)

ಎಂಬ ಋಕ್ಕಿನಲ್ಲಿ ಎರಡು ಹೆಸರುಗಳೂ ಜೊತೆಯಲ್ಲಿವೆ. ಅಲ್ಲೂ ಸಹ ಸಾಯಣರು **ಧ್ವಸ್ರಃ ಕಶ್ಚಿದ್ರಾಜಾ ಪುರುಷಂತಿಃ ಕಶ್ಚಿತ್** ಎಂದು ಅರ್ಥಮಾಡಿದ್ದಾರೆ.

**ಶತಕ್ರತೂ—ಬಹುಕರ್ಮಾಣೌ ಬಹುಪ್ರಜ್ಞೌ ವಾ ।** ಅನೇಕ ವಿಧವಾದ ಕರ್ಮವುಳ್ಳವರು ಅಥವಾ ನಾನಾವಿಧವಾದ ಪ್ರಜ್ಞೆಯುಳ್ಳವರು ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಆರ್ಜುನೇಯಮ್—ಶುಭ್ರಾದಿಭ್ಯಶ್ಚ**— (ಪಾ. ಸೂ. ೪-೧-೧೨೩) ಎಂಬಲ್ಲಿ ಚಕಾರವು ಅನುಕ್ತವಾದವುಗಳಿಗೆ ಸಮುಚ್ಚಾಯಕವಾದುದರಿಂದ ಇದಕ್ಕೂ ಢಕ್ ಪ್ರತ್ಯಯ. ಅರ್ಜುನಸ್ಯ ಅಪತ್ಯಂ ಪುಮಾನ್. **ಆಯನೇಯೀ**—(ಪಾ. ಸೂ. ೭-೧-೨)—ಎಂಬುದರಿಂದ ಢಕಾರಕ್ಕೆ ಏಯಾದೇಶ. **ಯಸ್ಯೇತಿ ಚ**—ಎಂಬುದರಿಂದ ಅಕಾರಕ್ಕೆ ಲೋಪ. ಕಿತ್ತಾದುದರಿಂದ ಆದಿವೃದ್ಧಿ ಬರುತ್ತದೆ.

**ತುರ್ವೀತಿಮ್**—ತುರ್ವಿ ಹಿಂಸಾರ್ಥಃ. ಧಾತು. ಶತ್ರೂನ್ ತುರ್ವತಿ ಇತಿ ತುರ್ವೀತಿಃ. ಇದಕ್ಕೆ ಔಣಾದಿಕವಾದ ಈತಿಪ್ರತ್ಯಯ. ಪ್ರತ್ಯಯಸ್ವರದಿಂದ ಈಕಾರ ಉದಾತ್ತ.

**ದಭೀತಿಮ್**—ದಂಭು ದಂಭೇ. ಧಾತು. ಇದಕ್ಕೆ ಔಣಾದಿಕಕೀತಿಪ್ರತ್ಯಯ. ಕಿತ್ತಾದುದರಿಂದ **ಅನಿದಿತಾಂ ಹಲ**-ಎಂಬುದರಿಂದ ಉಪಧಾ ನಕಾರಲೋಪ. ಪ್ರತ್ಯಯಸ್ವರದಿಂದ ಈಕಾರ ಉದಾತ್ತವಾಗುತ್ತದೆ.

**ಧ್ವಸಂತಿಮ್**—ಧ್ವಂಸು ಗತೌ. ಧಾತು. ಔಣಾದಿಕ ಝಚ್ ಪ್ರತ್ಯಯ ಬರುತ್ತದೆ. **ಝೋಽಂತಃ** (ಪಾ. ಸೂ. ೭-೧-೩) ಎಂಬುದರಿಂದ ಇದಕ್ಕೆ ಅಂತಾದೇಶ. ಙಿತ್ತಾದುದರಿಂದ **ಅನಿದಿತಾಂ ಹಲ**—ಸೂತ್ರದಿಂದ ಉಪಧಾನಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ಪುರುಷಂತಿಮ್**—ಪುರು ಸನೋತಿ ದದಾತಿ ಇತಿ ಪುರುಷಂತಿಃ ದಾನಾರ್ಥಕ ಷಣು ಧಾತುವಿಗೆ **ಕ್ತಿಚ್ ಕ್ತೌ ಚ ಸಂಜ್ಞಾಯಾಮ್**—(ಪಾ. ಸೂ. ೩-೩-೧೭೪) ಎಂಬುದರಿಂದ ಸಂಜ್ಞಾ ತೋರುವಾಗ ಕ್ತಿಚ್ ಪ್ರತ್ಯಯ.

ಅನುದಾತ್ತೋಪದೇಶ—(ಪಾ. ಸೂ. ೬-೪-೩೭) ಎಂಬುದರಿಂದ ಅನುನಾಸಿಕಲೋಪವು ಪ್ರಾಪ್ತವಾದರೆ, ನಕ್ತಿಚಿ ದೀರ್ಘಶ್ಚ—(ಪಾ. ಸೂ. ೬-೪-೩೯) ಎಂಬುದರಿಂದ ಅನುನಾಸಿಕಲೋಪ, ಉಪಧಾದೀರ್ಘಗಳಿಗೆ ಪ್ರತಿಷೇಧ ಬರುತ್ತದೆ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ॥ ೨೩ ॥

———— :O: ————

ಸಂಹಿತಾಪಾಠಃ

ಅಪ್ನಸ್ವತೀಮಶ್ವಿನಾ ವಾಚಮಸ್ಮೇ ಕೃತಂ ನೋ ದಸ್ರಾ ವೃಷ-
ಣಾ ಮನೀಷಾಂ।
ಅದ್ಯೂತ್ಯೇಽವಸೇ ನಿ ಹ್ವಯೇ ವಾಂ ವೃಧೇ ಚ ನೋ ಭವತಂ
ವಾಜಸಾತೌ ॥ ೨೪ ॥

ಪದಪಾಠಃ

ಅಪ್ನಸ್ವತೀಂ । ಅಶ್ವಿನಾ । ವಾಚಂ । ಅಸ್ಮೇ ಇತಿ । ಕೃತಂ । ನಃ । ದಸ್ರಾ । ವೃಷ-
ಣಾ । ಮನೀಷಾಂ ।
ಅದ್ಯೂತ್ಯೇ । ಅವಸೇ । ನಿ । ಹ್ವಯೇ । ವಾಂ । ವೃಧೇ । ಚ । ನಃ । ಭವತಂ ।
ವಾಜಽಸಾತೌ ॥ ೨೪ ॥

ಸಾಯಣಭಾಷ್ಯಂ

ಹೇ ಅಶ್ವಿನೌ । ಅಸ್ಮೇ ಅಸ್ಮಾಕಂ ವಾಚಮಪ್ನಸ್ವತೀಂ । ಅಪ್ನ ಇತಿ ಕರ್ಮನಾಮ । ನಿಹಿತೈಃ ಕರ್ಮಭಿಃ ಸಂಯುಕ್ತಾಂ ಕೃತಂ । ಕುರುತಂ । ತಥಾ ನೋಽಸ್ಮಾಕಂ ಮನೀಷಾಂ ಬುದ್ಧಿಂ ಹೇ ವೃಷಣಾ ಕಾಮಾನಾಂ ವರ್ಷಕೌ ದಸ್ರಾ ಶತ್ರೂಣಾಮುಪಕ್ಷಪಯಿತಾರಾವಶ್ವಿನೌ ವೇದಾರ್ಥಜ್ಞಾನಸಮರ್ಥಾಂ ಕುರುತಂ । ಅಪಿ ಚ ಯಸ್ಮಾದ್ಯುವಾಮೇವಂಗುಣವಿಶಿಷ್ಟೌ ತಸ್ಮಾದ್ವಾಂ ಯುವಾಮವಸೇ ರಕ್ಷಣಾಯ

ನಿ ಹ್ವಯೇ । ನಿತರಾಮಾಹ್ವಯೇ । ಕದಾ । ಅದ್ಯೂತ್ಯೇ ದ್ಯೋತೇನರಹಿತೇ ಪ್ರಕಾಶನರಹಿತೇ ರಾತ್ರೇಃ ಪಶ್ಚಿಮೇ ಯಾಮೇ । ತಸ್ಮಿನ್ಕಾಲೇ ಹಿ ಪ್ರಾತರನುವಾಕಾಶ್ವಿನಶಸ್ತ್ರಯೋರಿದಂ ಸೂಕ್ತಂ ಪಠ್ಯತೇ । ಅಹೂತೌ ಚ ಯುವಾಂ ವಾಜಸಾತೌ ವಾಜಸ್ಯಾನ್ನಸ್ಯ ಸಂಭಜನೇ । ಯದ್ವಾ । ಸಂಗ್ರಾಮನಾಮೈತತ್ । ಸಂಗ್ರಾಮೇ ನೋಽಸ್ಮಾಕಂ ವೃಧೇ ವರ್ಧನಾಯ ಭವತಂ ॥ ಅಪ್ನಸ್ವತೀಂ । ಅಪಃ ಕರ್ಮಾಖ್ಯಾಯಾಂ ಹ್ರಸ್ವೋ ನುಟ್ಚ । ವೇತ್ಯಸುನ್ ನುಡಾಗಮಶ್ಚ । ತದಸ್ಯಾಸ್ತೀತಿ ಮತುಪ್ । ಮಾದುಪಧಾಯಾ ಇತಿ ಮತುಪೋ ವತ್ವಂ । ತಸೌ ಮತ್ವರ್ಥ ಇತಿ ಭತ್ವೇನ ಪದತ್ವಾಭಾವಾದ್ರುತ್ವಾದ್ಯಭಾವಃ । ಅಸ್ಮೇ । ಸುಪಾಂ ಸುಲುಗಿತಿ ಷಷ್ಠ್ಯಾಃ ಶೇಆದೇಶಃ । ಕೃತಂ । ಕರೋತೇರ್ಲೋಟಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಅದ್ಯೂತ್ಯೇ । ದ್ಯುತ ದೀಪ್ತೌ । ಋಹಲೋರ್ಣ್ಯದಿತಿ ಭಾವೇ ಣ್ಯತ್ । ವರ್ಣವ್ಯಾಪತ್ತ್ಯಾ ಊಕಾರಃ । ದ್ಯೂತ್ಯಂ ಪ್ರಕಾಶನಮಸ್ಮಿನ್ನಾಸ್ತೀತಿ ಬಹುವ್ರೀಹೌ ವ್ಯತ್ಯಯೇನಾಂತಸ್ವರಿತತ್ವಂ । ನಿ ಹ್ವಯೇ । ನಿಸಮುಪವಿಭ್ಯೋ ಹ್ವ ಇತ್ಯಾತ್ಮನೇಪದಂ । ವೃಧೇ । ವೃಧು ವೃದ್ಧೌ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ ॥

ಪ್ರತಿಪದಾರ್ಥ

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ, । **ಅಸ್ಮೇ**—ನಮ್ಮ । **ವಾಚಂ**—ವಾಕ್ಕನ್ನು । **ಅಪ್ನಸ್ವತೀಂ**—ಕರ್ಮಗಳಿಂದ ಕೂಡಿದವನ್ನಾಗಿ । **ಕೃತಂ**—ಮಾಡಿರಿ । **ವೃಷಣಾ**—ಇಷ್ಟಾರ್ಥಗಳನ್ನು ಸುರಿಸುವವರೂ । **ದಸ್ರಾ**—ಶತ್ರುನಾಶಕರೂ ಆದ ಅಶ್ವಿನೀದೇವತೆಗಳೇ. । **ನಃ**—ನಮ್ಮ । **ಮನೀಷಾಂ**—ಬುದ್ಧಿಯನ್ನು (ವೇದಾರ್ಥವನ್ನು ತಿಳಿದುಕೊಳ್ಳುವಂತೆ ಶಕ್ತಿಯುತವನ್ನಾಗಿ ಮಾಡಿರಿ) । **ಅದ್ಯೂತ್ಯೇ**—ಪ್ರಕಾಶರಹಿತವಾದ ರಾತ್ರಿಯ ಕೊನೆಯ ಯಾಮದಲ್ಲಿ । **ವಾಂ**—ನಿಮ್ಮನ್ನು । **ಅವಸೇ**—ರಕ್ಷಣಾರ್ಥವಾಗಿ । **ನಿಹ್ವಯೇ**—ಬಹಳವಾಗಿ ಕರೆಯುತ್ತೇನೆ. । **ಚ**—ಆ ನೀವಿಬ್ಬರೂ ಕೂಡ । **ವಾಜಸಾತೌ**—ಅನ್ನ ಪ್ರಾಪ್ತಿಗಾಗಿ ಅಥವಾ ಯುದ್ಧದಲ್ಲಿ । **ನಃ**—ನಮ್ಮ । **ವೃಧೇ**—ಬೆಳವಣಿಗೆಗಾಗಿ । **ಭವತಂ**—ಸಹಾಯಕರಾಗಿರಿ ।

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ನಮ್ಮ ವಾಕ್ಕನ್ನು ಕರ್ಮಯುಕ್ತವನ್ನಾಗಿ ಮಾಡಿರಿ. ಇಷ್ಟಾರ್ಥಗಳನ್ನು ಸುರಿಸುವವರೂ, ಶತ್ರುನಾಶಕರೂ ಆದ ಅಶ್ವಿನೀದೇವತೆಗಳೇ, ನಮ್ಮ ಬುದ್ಧಿಯನ್ನು ವೇದಾರ್ಥಗಳನ್ನು ತಿಳಿದುಕೊಳ್ಳುವ ಶಕ್ತಿಯುಳ್ಳದ್ದನ್ನಾಗಿ ಮಾಡಿರಿ. ಪ್ರಕಾಶರಹಿತವಾದ ರಾತ್ರಿಯ ಕೊನೆಯ ಯಾಮದಲ್ಲಿ ನಾವು ನಿಮ್ಮನ್ನು ರಕ್ಷಣಾರ್ಥವಾಗಿ ಕರೆಯುತ್ತೇವೆ. ಆ ನೀವಿಬ್ಬರೂ ನಮ್ಮ ಕರೆಯನ್ನು ಮನ್ನಿಸಿ ಬನ್ನಿರಿ ಮತ್ತು ನಮಗೆ ಅನ್ನವನ್ನು ಒದಗಿಸಿ ನಮ್ಮ ಬೆಳವಣಿಗೆಗೆ ಸಹಾಯಕರಾಗಿರಿ.

## English Translation

Aswins, sanctify our words with works; showerers (of benefits), subduers of foes, (invigorate) our understanding (for the sacred study); we invoke you both, in the last watch of the night, for our preservation; be to us for increase in the provision of food.

ವಿಶೇಷ ವಿಷಯಗಳು

**ಅಪ್ನಸ್ವತೀಂ—ಅಪ್ನ ಇತಿ ಕರ್ಮನಾಮ-ವಿಹಿತೈಃ ಕರ್ಮಭಿಃ ಸಂಯುಕ್ತಾಂ।** ಅಪ್ನವೆಂಬಪದವು ಕರ್ಮನಾಮಗಳಲ್ಲಿ ಪಠಿತವಾಗಿದೆ. ಶಾಸ್ತ್ರವಿಹಿತವಾದ ಕರ್ಮಯುಕ್ತವಾದುದನ್ನಾಗಿ ಎಂದರ್ಥ.

**ಅದ್ಯೂತ್ಯೇ—ದ್ಯೋತನರಹಿತೇ ರಾತ್ರೇಃ ಪಶ್ಚಿಮೇ ಯಾಮೇ ತಸ್ಮಿನ್ಕಾಲೇ ಹಿ ಪ್ರಾತರನು-ವಾಕಾಶ್ವಿನಶಸ್ತ್ರಯೋರಿದಂ ಸೂಕ್ತಂ ಪಠ್ಯತೇ।** ಪ್ರಕಾಶರಹಿತವಾದುದೂ, ರಾತ್ರಿಯ ಅಪರಯಾಮವೂ ಆದ ಕಾಲದಲ್ಲಿ ಎಂದರೆ ಪ್ರಾತರನುವಾಕಮಂತ್ರಪಠನ ಕಾಲದಲ್ಲಿ ಅಶ್ವಿನೀದೇವತೆಗಳ ಶಸ್ತ್ರಗಳಲ್ಲಿ ಒಂದಾದ ಈ ಸೂಕ್ತವು ಪಠಿತವಾಗುತ್ತದೆ ಯಾದ್ದರಿಂದ ಆ ಕಾಲದ ಸೂಚಕವಾಗಿದೆ.

ಇಲ್ಲಿ ಪ್ರಾತರನುವಾಕವೆಂದರೇನೆಂಬುದನ್ನು ವಿವರಿಸುವುದು ಅವಶ್ಯಕವಾಗಿದೆ. ಅಗ್ನಿಷ್ಟೋಮಯಾಗ ಮಾಡುವಾಗ ಸೋಮರಸವನ್ನು (ಕಲ್ಲಿನಿಂದ ಜಜ್ಜಿ) ಹಿಂಡಿ ತೆಗೆಯುವ ದಿನಕ್ಕೆ ಸುತ್ಯಾದಿನ ಅಥವಾ ಸುತ್ಯಾದಿನ ವೆಂದು ಹೆಸರು. ಈದಿನ ಪ್ರಾತಃಕಾಲದಲ್ಲಿ ಸೂರ್ಯ ಹುಟ್ಟುವುದಕ್ಕಿಂತ ಮುಂಚಿತವಾಗಿ (ಹಿಂದಿನ ದಿನದ ಅರ್ಧ ರಾತ್ರಿ ಕಳೆದ ಮೇಲೆ ಸೂರ್ಯೋದಯವಾಗುವುದರೊಳಗಾಗಿ) ಅಧ್ವರ್ಯುವು **ದೇವೇಭ್ಯಃ ಪ್ರಾತರ್ಯಾವಭ್ಯೋ ಹೋತರನುಬ್ರೂಹಿ** ಎಂದು ಪ್ರೈಷಮಂತ್ರವನ್ನು ಹೇಳಿದ ಕೂಡಲೆ ಹೋತೃವು ಕೆಲವು ಮಂತ್ರಗಳನ್ನು ಪಠಿಸುವನು. ಇವುಗಳಿಗೆ ಪ್ರಾತರನುವಾಕ ಮಂತ್ರಗಳೆಂದು ಹೆಸರು. ಹೋತೃವು ಈ ಪ್ರಾತರನುವಾಕಮಂತ್ರಗಳನ್ನು ಪಠಿಸಬೇಕು. ಇದನ್ನು—**ದೇವೇಭ್ಯಃ ಪ್ರಾತರ್ಯಾವಭ್ಯೋ ಹೋತರನುಬ್ರೂಹೀತ್ಯಾಹಾಧ್ವರ್ಯುಃ** (ಐ. ಬ್ರಾ. ೨-೧೫) ಎಂದು ಐತರೇಯಬ್ರಾಹ್ಮಣದಲ್ಲಿಯೇ ಹೇಳಿದೆ.

ಪ್ರಾತರನುವಾಕಮಂತ್ರಗಳನ್ನು ಪಠಿಸುವಾಗ ಹೋತೃವು ಅನುಸರಿಸುವ ಕ್ರಮವನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸುವೆವು. ಯಜ್ಞದಲ್ಲಿ ಪ್ರಧಾನ ಋತ್ವಿಕ್ ಪಾತ್ರವನ್ನು ವಹಿಸಿರುವ ಅಧ್ವರ್ಯುವು ಇತರ ಋತ್ವಿಜರನ್ನು ದ್ದೇಶಿಸಿ ಇಂತಹ ಕಾರ್ಯವನ್ನು ನೀನು ಮಾಡಬೇಕು ಎಂದು ಮುಂತಾಗಿ ಆಗಾಗ ಹೇಳಬೇಕಾಗುವುದು. ಇಂತಹ ವಾಕ್ಯಗಳಿಗೆ ಪ್ರೈಷಗಳೆಂದು ಹೆಸರು. ಪ್ರಕೃತಸಂದರ್ಭದಲ್ಲಿ ಅಧ್ವರ್ಯುವು ಹೋತೃವನ್ನುದ್ದೇಶಿಸಿ—**ದೇವೇಭ್ಯಃ ಪ್ರಾತರ್ಯಾವಭ್ಯೋ ಹೋತರನುಬ್ರೂಹಿ**—ಎಲೈ ಹೋತೃವೇ, ದೇವತೆಗಳನ್ನುದ್ದೇಶಿಸಿ ಪ್ರಾತರನುವಾಕಮಂತ್ರ ಗಳನ್ನು ಹೇಳು ಎಂದು ಹೇಳುವನು. ಆಗ ಹೋತೃವು ಆಗ್ನೀಧ್ರವೆಂಬ ಅಗ್ನಿಕುಂಡದ ಸಮೀಪಕ್ಕೆ ಹೋಗಿ ಅಲ್ಲಿ ವಾಕ್ಶುದ್ಧಿಗಾಗಿ ಒಂದು ಆಜ್ಯಾಹುತಿಯನ್ನೂ, ಆಹವನೀಯಾಗ್ನಿಯಲ್ಲಿ ಎರಡು ಆಜ್ಯಾಹುತಿಗಳನ್ನೂ ವಿಧ್ಯುಕ್ತ ಮಂತ್ರಗಳಿಂದ ಹೋಮ ಮಾಡುವನು. ಬಳಿಕ ಹವಿರ್ಧಾನವೆಂಬ (ಸೋಮದ ಗಾಡಿಯನ್ನು ಇಡುವ ಸ್ಥಳ) ಶಾಲೆ ಯನ್ನು ಪೂರ್ವದ್ವಾರದಿಂದ ಪ್ರವೇಶಿಸಿ ಅಲ್ಲಿರುವ ಗಾಡಿಗಳ ನೊಗದ ಸಮೀಪದಲ್ಲಿ ಕುಳಿತು ಮೊದಲು ಈ ಮಂತ್ರ ವನ್ನು ಪಠಿಸುವನು—

**ಆಪೋ ರೇವತೀಃ ಕ್ಷಯಥಾ ಹಿ ವಸ್ವಃ ಕ್ರತುಂ ಚ ಭದ್ರಂ ಬಿಭೃಥಾಮೃತಂ ಚ।**
**ರಾಯಶ್ಚ ಸ್ಥ ಸ್ವಪತ್ಯಸ್ಯ ಪತ್ನೀಃ ಸರಸ್ವತೀ ತದ್ಗೃಣತೇ ವಯೋ ಧಾತ್॥**

(ಋ. ಸಂ. ೧೦-೩೦-೧೨)

ಬಳಿಕ ಅಗ್ನಿ, ಉಷಸ್ಸು, ಅಶ್ವಿನೀದೇವತೆಗಳು ಇವರನ್ನುದ್ದೇಶಿಸಿ ಪ್ರಾತರನುವಾಕಮಂತ್ರಗಳನ್ನು ಪಠಿಸುವನು. ಇವು ಮೂರು ಭಾಗಗಳಾಗಿದೆ. ಅಗ್ನಿಯನ್ನುದ್ದೇಶಿಸಿ ಹೇಳುವ ಮಂತ್ರಗಳಿಗೆ ಆಗ್ನೇಯಕ್ರತುವೆಂದೂ, ಉಷಸ್ಸ

ಸ್ಯುದ್ದೇಶಿಸಿ ಪಠಿಸುವ ಮಂತ್ರಗಳಿಗೆ ಉಷಸ್ಯಕ್ರತುವೆಂದೂ ಅಶ್ವಿನೀದೇವತೆಗಳನ್ನುದ್ದೇಶಿಸಿ ಹೇಳುವ ಮಂತ್ರಗಳಿಗೆ ಆಶ್ವಿನಕ್ರತುವೆಂದೂ ಹೆಸರು. ಈ ಪ್ರತಿಯೊಂದು ಕ್ರತುವಿನಲ್ಲಿಯೂ ಗಾಯತ್ರೀ, ಅನುಷ್ಟುಪ್, ತ್ರಿಷ್ಟುಪ್, ಬೃಹತೀ, ಉಷ್ಣಿಕ್, ಜಗತೀ, ಪಂಕ್ತಿ ಎಂಬ ಏಳು ಛಂದಸ್ಸುಗಳಿಂದ ಕೂಡಿದ ಏಳು ಪ್ರತ್ಯೇಕ ವಿಭಾಗಗಳಿರುವುವು. ಈ ಮಂತ್ರಗಳು ನೂರಕ್ಕೆ ಕಮ್ಮಿ ಇಲ್ಲದಂತೆ ಮಧ್ಯರಾತ್ರಿಯಾದ ಬಳಿಕ ಬೆಳಗಾಗುವವರೆಗೂ ಪಠಿಸುತ್ತಿರಬೇಕು. ಈ ಮಂತ್ರಗಳನ್ನು ಪಠಿಸುವಾಗ ಸಂದರ್ಭಾನುಸಾರವಾಗಿ (ವಿಸ್ತಾರವಾಗುವುದೆಂದು ಅವುಗಳ ವಿವರಣೆಯನ್ನು ಇಲ್ಲಿ ಕೊಟ್ಟಿಲ್ಲ) ಉಪಾಂಶುಸ್ವರ, ಮಂದ್ರಸ್ವರ ಮುಂತಾದ ಸಪ್ತಸ್ವರಗಳಲ್ಲಿ ಪಠಿಸಬೇಕು.

ವ್ಯಾಕರಣಪ್ರಕ್ರಿಯಾ

**ಅಪ್ನಸ್ವತೀಮ್**—**ಆಪಃ ಕರ್ಮಾಖ್ಯಾಯಾಂ ಹ್ರಸ್ವೋ ನುಟ್ ಚ ವಾ**—(ಉ. ಸೂ. ೪-೬೪೭) ಆಪ್ ಶಬ್ದಕ್ಕೆ ಕರ್ಮಾರ್ಥತೋರುವಾಗ ಹ್ರಸ್ವವೂ, ನುಡಾಗಮವೂ ಅಸುನ್ ಪ್ರತ್ಯಯವೂ ಬರುತ್ತವೆ. ಅಪ್ನಃ ಅಸ್ಯ ಅಸ್ತಿ ಎಂದು ಅರ್ಥ. ವಿವಕ್ಷಾಮಾಡಿದಾಗ **ತದಸ್ಯಾಸ್ತಿ**—(ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ. ಅಮುಪಧೆಯು ಪರವಾಗಿ ಬಂದುದರಿಂದ **ಮಾದುಪಧಾಯಾಶ್ಚ**—(ಪಾ. ಸೂ. ೮-೨-೯) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. **ತಸೌ ಮತ್ವರ್ಥೇ**—(ಪಾ. ಸೂ. ೧-೪-೧೯) ಎಂಬುದರಿಂದ ಭಸಂಜ್ಞಾ ಇರುವುದರಿಂದ ಪದಸಂಜ್ಞೆ ಇಲ್ಲದಿರುವುದರಿಂದ ರುತ್ವ ಬರುವುದಿಲ್ಲ. ಸ್ತ್ರೀತ್ವವಿವಕ್ಷಾಮಾಡಿದಾಗ **ಉಗಿತಶ್ಚ**—(ಪಾ. ಸೂ. ೪-೧-೬ ಎಂಬುದರಿಂದ ಙೀಪ್.

**ಅಶ್ವಿನಾ**—ಸಂಬೋಧನಾ ದ್ವಿವಚನ ಔ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ.

**ಅಸ್ಮೇ**—ಅಸ್ಮದ್ ಶಬ್ದ. **ಸುಪಾಂ ಸುಲುಕ್**—ಎಂಬುದರಿಂದ ಷಷ್ಠಿಗೆ ಶೇ ಆದೇಶ. **ಶೇಷೇ-ಲೋಪಃ**—ಎಂಬುದರಿಂದ ದಕಾರಕ್ಕೆ ಲೋಪ.

**ಕೃತಮ್**—ಡುಕೃಞ್ ಕರಣೇ. ಧಾತು. ಲೋಟ್ ಮಧ್ಯಮಪುರುಷ ದ್ವಿವಚನದಲ್ಲಿ ಲಙ್ವದ್ಭಾವವಿರುವುದರಿಂದ ತಮಾದೇಶ. **ಬಹುಲಂ ಛಂದಸಿ**—ಎಂಬುದರಿಂದ ವಿಕರಣಕ್ಕೆ ಲುಕ್. ಕೃತಮ್ ಎಂದು ರೂಪವಾಗುತ್ತದೆ.

**ಅದ್ಯೂತ್ಯೇ**—ದ್ಯುತ ದೀಪ್ತೌ ಧಾತು. ಹಲಂತಧಾತುವಾದುದರಿಂದ **ಋಹಲೋರ್ಣ್ಯತ್**—(ಪಾ. ಸೂ. ೩-೧-೧೨೪) ಎಂಬುದರಿಂದ ಭಾವಾರ್ಥದಲ್ಲಿ ಣ್ಯತ್ ಪ್ರತ್ಯಯ. ಛಂದಸ್ಸಿನಲ್ಲಿ ವರ್ಣವ್ಯತ್ಯಯದಿಂದ ಉಕಾರಕ್ಕೆ ಊಕಾರ ಬರುತ್ತದೆ. ದ್ಯೂತ್ಯಂ ಪ್ರಕಾಶನಮಸ್ಮಿನ್ನಾಸ್ತೀತಿ ಅದ್ಯೂತ್ಯಮ್. ಬಹುವ್ರೀಹಿಯಲ್ಲಿ ವ್ಯತ್ಯಯದಿಂದ ಅಂತೋದಾತ್ತವಾಗುತ್ತದೆ. ಸಪ್ತಮೀ ಏಕವಚನಾಂತರೂಪ.

ನಿಹ್ವಯೇ - ನಿ ಉಪಸರ್ಗ. **ನಿಸಮುಪವಿಭ್ಯೋ ಹ್ವಃ**—(ಪಾ. ಸೂ. ೧-೩-೩೦) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲಟ್ ಉತ್ತಮಪುರುಷ ಏಕವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವೃಧೇ**—ವೃಧು ವೃದ್ಧೌ. ಧಾತು. **ಸಂಪದಾದಿಭ್ಯಃ ಕ್ವಿಪ್**— (ವಾ. ೨೨೩೩) ಎಂಬುದರಿಂದ ಭಾವಾರ್ಥದಲ್ಲಿ ಕ್ವಿಪ್. ಚತುರ್ಥೀಏಕವಚನಾಂತರೂಪ. ಏಕಾಚಾದುದರಿಂದ **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಭವತಮ್**—ಭೂ ಸತ್ತಾಯಾಂ. ಧಾತು. ಲೋಟ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ. ॥ ೨೪ ॥

ಸಂಹಿತಾಪಾಠಃ

ದ್ಯುಭಿ॑ರ॒ಕ್ತುಭಿಃ॒ ಪರಿ॑ ಪಾತಮ॒ಸ್ಮಾನರಿ॑ಷ್ಟೇಭಿರಶ್ವಿನಾ॒ ಸೌಭ॑ಗೇಭಿಃ ।
ತನ್ನೋ॑ ಮಿ॒ತ್ರೋ ವರು॑ಣೋ ಮಾಮಹಂತಾ॒ಮದಿ॑ತಿಃ॒ ಸಿಂಧುಃ॑
ಪೃಥಿ॒ವೀ ಉ॒ತ ದ್ಯೌಃ ॥ ೨೫ ॥

ಪದಪಾಠಃ

ದ್ಯುಽಭಿಃ॑ । ಅ॒ಕ್ತುಽಭಿಃ॑ । ಪರಿ॑ । ಪಾ॒ತ॒ಮ್ । ಅ॒ಸ್ಮಾನ್ । ಅರಿ॑ಷ್ಟೇಭಿಃ । ಅ॒ಶ್ವಿ॒ನಾ॒ । ಸೌಭ॑ಗೇಭಿಃ ।
ತತ್ । ನ॒ಃ । ಮಿ॒ತ್ರಃ । ವರು॑ಣಃ । ಮ॒ಮ॒ಹ॒ನ್ತಾ॒ಮ್ । ಅದಿ॑ತಿಃ । ಸಿಂಧುಃ॑ । ಪೃ॒ಥಿ॒ವೀ । ಉ॒ತ । ದ್ಯೌಃ ॥ ೨೫ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ದ್ಯುಭಿರ್ದಿವಸೈರಕ್ತುಭೀ ರಾತ್ರಿಭಿಶ್ಚಾಸ್ಮಾನ್ ಸ್ತೋತೄನ್ಪರಿ ಪಾತಂ । ಪರಿತೋ ರಕ್ಷತಂ । ಸರ್ವದಾಸ್ಮಾನ್ ರಕ್ಷತಮಿತ್ಯರ್ಥಃ । ತಥಾರಿಷ್ಟೇಭಿರಹಿಂಸಿತೈಃ ಸೌಭಗೇಭಿಃ ಸುಭಗತ್ವೈಃ ಸುಭಗತ್ವಾಪಾದಕೈರ್ಧನೈರಸ್ಮಾನ್ರಕ್ಷತಂ । ಯದಸ್ಮಾಭಿಃ ಪ್ರಾರ್ಥಿತಂ ನೋಽಸ್ಮದೀಯಂ ತನ್ಮಿತ್ರಾದಯಃ ಷಡ್ದೇವತಾಃ ಮಮಹಂತಾಂ । ಪೂಜಯಂತು । ಉತಶಬ್ದಃ ಸಮುಚ್ಚಯೇ ॥ ದ್ಯುಭಿಃ । ದಿವ ಉದಿತ್ಯುತ್ವಂ । ದಿವೋ ಝಲ್ । ಪಾ ೬-೧-೧೮೩ । ಇತಿ ಸಾವೇಕಾಚ ಇತಿ ಪ್ರಾಪ್ತಸ್ಯ ವಿಭಕ್ತ್ಯು-ದಾತ್ತತ್ವಸ್ಯ ಪ್ರತಿಷೇಧಃ । ಅರಿಷ್ಟೇಭಿಃ । ರಿಷ ಹಿಂಸಾಯಾಂ । ನಿಷ್ಠೇತಿ ಕ್ತಃ । ನಞ್ಸಮಾಸೇಽವ್ಯಯಪೂರ್ವ-

ಪದಪ್ರಕೃತಿಸ್ವರತ್ವಂ । ಬಹುಲಂ ಛಂದಸೀತಿ ಭಿಸ ಐಸಭಾವಃ । ಅಶ್ವಿನಾ । ಸುಪಾಂ ಸುಲುಗಿತಿ ವಿಭಕ್ತೇ-ರಾಕಾರಃ । ಆಮಂತ್ರಿತಸ್ಯ ಚೇತಿ ಸರ್ವಾನುದಾತ್ತತ್ವಂ । ಸೌಭಗೇಭಿಃ । ಶೋಭನೋ ಭಗಃ ಶ್ರೀರ್ಯಸ್ಯಾಸೌ ಸುಭಗಃ । ತಸ್ಯ ಭಾವಃ ಸೌಭಗಂ । ಸುಭಗಾನ್ಮಂತ್ರ ಇತ್ಯುದ್ಗಾತ್ರಾದಿಷು ಪಾಠಾದಞ್ಪ್ರತ್ಯಯಃ । ಹೃದ್ಭಗಸಿಂಧ್ವಂತೇ ಪೂರ್ವಪದಸ್ಯ ಚೇತ್ಯುಭಯಪದವೃದ್ಧಿರ್ನ ಭವತಿ ತಸ್ಯ ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತ ಇತಿ ವಿಕಲ್ಪಿತತ್ವಾತ್ । ಪೂರ್ವವದೈಸಭಾವಃ । ಞ್ನಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

ಅಶ್ವಿನಾ—ಎಲೈ ಅಶ್ವಿನೀ ದೇವತೆಗಳೇ । ದ್ಯುಭಿಃ—ಹಗಲು ಕಾಲಗಳಲ್ಲೂ । ಅಕ್ತುಭಿಃ—ರಾತ್ರಿಕಾಲಗಳಲ್ಲೂ । ಅಸ್ಮಾನ್—ಭಕ್ತರಾದ ನಮ್ಮನ್ನು । ಅರಿಷ್ಟೇಭಿಃ—ಅಹಿಂಸಿತವಾದವೂ । ಸೌಭಗೇಭಿಃ—ಮಂಗಳಾತ್ಮಕವಾದವೂ ಆದ ಧನಗಳಿಂದ । ಪರಿ ಪಾತಂ—ಪ್ರೀತಿಯಿಂದ ಚೆನ್ನಾಗಿ ಪಾಲಿಸಿರಿ । ನಃ — ನಮ್ಮ । ತತ್—ಈ ಪ್ರಾರ್ಥನೆಯನ್ನು । ಮಿತ್ರಃ—ಮಿತ್ರನೂ । ವರುಣಃ—ವರುಣನೂ । ಅದಿತಿಃ—ಅದಿತಿಯೂ । ಸಿಂಧುಃ—ಸಾಗರಾಧಿದೇವತೆಯೂ । ಪೃಥಿವೀ—ಪೃಥಿವಿಯೂ । ಉತ—ಮತ್ತು । ದ್ಯೌಃ—ದ್ಯುಲೋಕಾಧಿದೇವತೆಯೂ । ಮಮಹಂತಾಂ—ಪೂಜ್ಯವಾದುದನ್ನಾಗಿಮಾಡಿ ರಕ್ಷಿಸಲಿ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಹಗಲುಕಾಲಗಳಲ್ಲೂ ಮತ್ತು ರಾತ್ರಿಕಾಲಗಳಲ್ಲೂ ಭಕ್ತರಾದ ನಮ್ಮನ್ನು ಮಂಗಳಾತ್ಮಕವಾದವೂ ಅಹಿಂಸಿತವಾದವೂ ಆದ ಧನಗಳ ದಾನದಿಂದಲೂ ಅನುಗ್ರಹದಿಂದಲೂ ಚೆನ್ನಾಗಿ ಪಾಲಿಸಿರಿ. ನಮ್ಮ ಈ ಪ್ರಾರ್ಥನೆಯನ್ನು ಮಿತ್ರನೂ, ವರುಣನೂ, ಅದಿತಿಯೂ, ಸಾಗರಾಧಿದೇವತೆಯೂ, ಪೃಥಿವಿಯೂ ಮತ್ತು ದ್ಯುಲೋಕಾಧಿದೇವತೆಯೂ ಸಹ ಪೂಜ್ಯವಾದುದನ್ನಾಗಿಮಾಡಿ ರಕ್ಷಿಸಲಿ.

## Englih Translation

Cherish us, Aswins, always, by night or day, with undiminished blessings ; and may Mitra, Varuna, Aditi,—ocean, earth, and heaven, be favourable to this our (prayer).

ವಿಶೇಷವಿಷಯಗಳು

ಅಕ್ತುಭಿಃ—ಶ್ಯಾವೀ, ಕ್ಷಪಾ, ಶರ್ವರೀ, ಅಕ್ತುಃ ಇತ್ಯಾದಿ ೨೩ ರಾತ್ರಿನಾಮಗಳಲ್ಲಿ ಪಠಿತವಾಗಿದೆ. (ನಿ. ೧–೭) ಅನೇಕ ಕಡೆಗಳಲ್ಲಿ ಅಕ್ತುಶಬ್ದಕ್ಕೆ ಪ್ರಕೃತವಾದ ಋಕ್ಕಿನಲ್ಲಾಗುವಂತೆ ರಾತ್ರಿಯೆಂದೇ ಅರ್ಥ. ಅದರಿಲ್ಲದ ಸಂದರ್ಭಗಳಲ್ಲಿ ಕಿರಣ, ಆಯುಧ, ಕತ್ತಲು ಇತ್ಯಾದಿ ಅರ್ಥಗಳಲ್ಲೂ ಈ ಶಬ್ದದ ಪ್ರಯೋಗವಿದೆ. ಅಂಜ್ ಧಾತುವಿಗೆ ಅವಲಿಸು, ಮುಚ್ಚು, ಬಳಿ ಇತ್ಯಾದ್ಯರ್ಥಗಳಿರುವುದರಿಂದ ಛಾಯೆಯಿಂದ ಮುಚ್ಚುವ ಕತ್ತಲೆಯೆಂದೂ, ಸುತ್ತಲೂ ಹರಡುವ ಕಿರಣವೆಂತಲೂ, ಕತ್ತಲೆಯಿಂದ ಮುಚ್ಚುವ ರಾತ್ರಿಯೆಂದೂ ದೇಹವನ್ನು ಆವರಿಸುವ ಆಯುಧ ಮೊದಲಾದ ಅರ್ಥಗಳು ಬರುತ್ತವೆ. ಉದಾಹರಣೆಗೆ—

**ಯೋ ಮರ್ತ್ಯಃ ಶಿಶೀತೇ ಅತ್ಯಕ್ತುಭಿರ್ಮಾ ನಃ ಸ ರಿಪುರೀಶತ ।**

(ಋ. ಸಂ. ೧-೩೬-೧೬)

ಎಂಬ ಋಕ್ಕಿನಲ್ಲಿ ಆಯುಧವೆಂದೂ,

**ಶಿರಿಣಾಯಾಂ ಚಿದಕ್ತುನಾ ಮಹೋಭಿರಪರೀವೃತೋ ವಸತಿ ಪ್ರಚೇತಾಃ ।**

(ಋ. ಸಂ. ೨-೧೦-೩)

ಎಂಬ ಋಕ್ಕಿನಲ್ಲಿ **ತಮಸ್ಸೆಂದೂ** ಅರ್ಥಮಾಡಿದ್ದಾರೆ. ಆದರೆ ಈ ಪದವು ರಾತ್ರಿಪರ್ಯಾಯವಾಗಿ ಉಪಯೋಗಿಸಲ್ಪಟ್ಟಿರುವುದೇ ಅಧಿಕವಾಗಿದೆ.

**ಅರಿಷ್ಟೇಭಿಃ--ಅಹಿಂಸಿತೈಃ ।** ಹಿಂಸಾರಹಿತವಾದುದೂ ಸುರಕ್ಷಿತವಾದುದೂ ಎಂದರ್ಥ.

**ತನ್ನೋ ಮಿತ್ರೋ ವರುಣೋ ಮಾಮಹಂತಾಂ—ಮಿತ್ರಾದಯಃ ಷಡ್ದೇವತಾಃ ಅಸ್ಮಾಭಿಃ ಪ್ರಾರ್ಥಿತಂ ಪೂಜಯಂತು ಇತಿ।** ಈ ವಾಕ್ಯದ ಅರ್ಥವನ್ನು ಹಿಂದಿನ ಸೂಕ್ತದಲ್ಲಿ ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

**ದ್ಯುಭಿಃ**—ದಿವ್ ಶಬ್ದ. ಇದಕ್ಕೆ ತೃತೀಯಾಬಹುವಚನ ಪರವಾದಾಗ **ದಿವ ಉತ್**—(ಪಾ. ಸೂ. ೭-೧-೧೩೧) ಎಂಬುದರಿಂದ ವಕಾರಕ್ಕೆ ಉತ್ವ. ಯಣಾದೇಶ. **ಸಾವೇಕಾಚಸ್ತೃತೀಯಾದಿಃ**—(ಪಾ. ಸೂ. ೬–೧–೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಪ್ರಾಪ್ತವಾದರೆ **ದಿವೋಝಲ್**—(ಪಾ. ಸೂ. ೬–೧-೧೮೩) ಎಂಬುದರಿಂದ ಪ್ರತಿಷೇಧ ಬರುತ್ತದೆ.

**ಅರಿಷ್ಟೇಭಿಃ**—ರಿಷ ಹಿಂಸಾಯಾಂ. ಧಾತು. **ನಿಷ್ಠಾ**—(ಪಾ. ಸೂ. ೩-೨-೧೦೨) ಸೂತ್ರದಿಂದ **ಕ್ತ** ಪ್ರತ್ಯಯ. ಕಿತ್ತಾದುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಷ್ಟುತ್ವದಿಂದ ಪ್ರತ್ಯಯತಕಾರಕ್ಕೆ ಟತ್ವ. ನರಿಷ್ಟಃ ಅರಿಷ್ಟಃ ನಞ್‌ತತ್ಪುರುಷಸಮಾಸದಲ್ಲಿ **ತತ್ಪುರುಷೇ ತುಲ್ಯಾ**—(ಪಾ. ಸೂ.. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ. ಇದಕ್ಕೆ ಭಿಸ್ ಪರವಾದಾಗ **ಬಹುಲಂ ಛಂದಸಿ**—ಎಂಬುದರಿಂದ ಭಿಸಿಗೆ ಐಸ್ ಬರುವುದಿಲ್ಲ. **ಬಹುವಚನೇ ಝಲ್ಯೇತ್**—(ಪಾ. ಸೂ. ೭-೩-೧೦೩) ಎಂಬುದರಿಂದ ಏತ್ವ. ಪ್ರತ್ಯಯಸಕಾರಕ್ಕೆ ರುತ್ವವಿಸರ್ಗ.

**ಅಶ್ವಿನಾ**—ದ್ವಿವಚನ ಔ ಪರವಾದಾಗ ಅದಕ್ಕೆ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಆಕಾರಾದೇಶ. **ಆಮಂತ್ರಿತಸ್ಯ ಚ**—(ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ

**ಸೌಭಗೇಭಿಃ**—ಶೋಭನೋ ಭಗಃ ಶ್ರೀಃ ಯಸ್ಯ ಅಸೌ ಸುಭಗಃ ತಸ್ಯ ಭಾವಃ ಸೌಭಗಮ್. **ಸುಭಗಾಮಂತ್ರೇ**—ಎಂದು ಉದ್ಗಾತ್ರಾದಿಗಣದಲ್ಲಿ ಪಠಿತವಾದುದರಿಂದ ಭಾವಾರ್ಥದಲ್ಲಿ ಅಞ್ ಪ್ರತ್ಯಯ. **ಹೃದ್‌ಭಗಸಿಂಧ್ವಂತೇ ಪೂರ್ವಪದಸ್ಯ ಚ**—(ಪಾ. ಸೂ. ೭-೩-೧೯) ಎಂಬುದರಿಂದ ಉಭಯಪದವೃದ್ಧಿಯು ಪ್ರಾಪ್ತವಾದರೆ **ಸರ್ವೇವಿಧಯಃ ಛಂದಸಿ ವಿಕಲ್ಪ್ಯಂತೇ** ಎಂಬ ವಚನದಿಂದ ವಿಕಲ್ಪಿತವಾದುದರಿಂದ ಇಲ್ಲಿ ಬರುವುದಿಲ್ಲ. ಹಿಂದಿನಂತೆ ಭಿಸಿನಲ್ಲಿ ಐಸಾದೇಶ ಬರುವುದಿಲ್ಲ ಅಞ್ ಞಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಪಾತಮ್—ಪಾ ರಕ್ಷಣೇ. ಧಾತು. ಅದಾದಿ. ಲೋಟ್ ಮಧ್ಯಮಪುರುಷದ್ವಿವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ಉಳಿದ ಶಬ್ದಗಳು ಹಿಂದೆ ವ್ಯಾಖ್ಯಾತಗಳಾಗಿವೆ. ॥ ೨೫ ॥

ನೂರ ಹನ್ನೆರಡನೆಯ ಸೂಕ್ತವು ಮುಗಿದುದು.

**ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥**

**ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕಶ್ರೀವೀರಬುಕ್ಕಮಹೀಪಾಲಸಾಮ್ರಾಜ್ಯ-ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಪ್ರಥಮಾಷ್ಟಕೇ ಸಪ್ತಮೋಽಧ್ಯಾಯಃ ಸಮಾಪ್ತಃ**

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಪ್ರಥಮಾಷ್ಟಕದಲ್ಲಿ
ಏಳನೆಯ ಅಧ್ಯಾಯವು ಸಮಾಪ್ತವಾದುದು.

—:o:—

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥

ಕೆ. ವೆಂಕಟಸುಬ್ಬಯ್ಯ, ಪ್ರಿಂಟರ್, ಶ್ರೀ ವಿನಾಯಕ್ ಪ್ರಿಂಟಿಂಗ್ ವರ್ಕ್ಸ್, ಮೈಸೂರು